# ಬಿ.ಎಚ್. ಶ್ರೀಧರ
# ಸಮಗ್ರ ಸಾಹಿತ್ಯ

ಸಂಪುಟ–೩

## ವಿಚಾರ



ಸಂಪಾದಕರು

ರಾಜಶೇಖರ ಹೆಬ್ಬಾರ




ತೇಜು ಪಬ್ಲಿಕೇಷನ್ಸ್

ಬಿ.ಎಚ್. ಶ್ರೀಧರ ಸಮಗ್ರ ಸಾಹಿತ್ಯ

ಸಂಪುಟ – ೩

# ವಿಚಾರ

ಪ್ರಧಾನ ಸಂಪಾದಕರು
ರಾಜಶೇಖರ ಹೆಬ್ಬಾರ



**ತೇಜು ಪಬ್ಲಿಕೇಷನ್ಸ್**
ನಂ. 233, 7ನೇ 'ಎ' ಅಡ್ಡರಸ್ತೆ
ಶಾಸ್ತ್ರಿನಗರ, ಬೆಂಗಳೂರು – 560 028.

B.H. Shridhar's Complete Works
Volume - 3
**VICHARA**

Edited by
**Rajashekhar Hebbar**

Published by
V. Padmavathi, on behalf of **Teju Publications**
# 233, 7th 'A' Cross, Shastrinagar,
Bangalore - 560 028. Mob : 9900195626



First Edition : 2014

Pages : 1044 (Box Binding)

Price : Rs. 680 ಬೆಲೆ : ರೂ. ೬೮೦

No. of Copies : 1000

70 GSM N.S. Maplitho – 1/8 Demy

***ಸಲಹೆ ಸಹಕಾರ***
ಪ್ರೊ.ಎಚ್.ಆರ್.ಅಮರನಾಥ, ಡಾ.ಎಮ್.ಜಿ.ಹೆಗಡೆ, ಶ್ರೀ ಸಿ.ಆರ್.ಶಾನಭಾಗ,
ಡಾ. ಸುಮಿತ್ರ ಮೋತಿಲಾಲ ಹಲವಾಯಿ, ಶ್ರೀಮತಿ ರಾಜೇಶ್ವರಿ ಲೋಕರೆ, ಶ್ರೀಕೃಷ್ಣ ಲೋಕರೆ,
ಶ್ರೀಮತಿ ಭುವನೇಶ್ವರಿ ಹೆಗಡೆ

***Cover Design :*** **Bagur Markandaya**

***Typeset at :*** **Page Designers**
Bangalore - 560 004. Ph : 41691270 E-mail : bsmadhu75@gmail.com

***Printed at :*** **Jagruthi Printers**
56/1-6, Narasimhaiah Garden, Kottigepalya, Magadi Main Road,
Bangalore - 560 091. Phone : 23583850

# ಅರ್ಪಣೆ

ನೋವು ನುಂಗಿ ನಕ್ಕ ಶ್ರೀಧರರ ಧರ್ಮಪತ್ನಿ
**ಶ್ರೀಮತಿ ರಮಾದೇವಿಯವರಿಗೆ**



## ಚಂದ್ರಲೋಕದ ತಾಯಿ

ತುಸುವೆ ನೋಡಿದೆವು ಎನ್ನುವಂತಿಲ್ಲ
ಅರೆಗಳಿಗೆ ಕಂಡರೂ ಅದು ಪೂರ್ಣವೇ
ಕಂಡದ್ದಲ್ಲ, ಕಣ್ಣ ತುಂಬಿತು ನೋಟ
ಕಣ್ಣುತುಂಬಿದ ಮೇಲೆ ಮನ ಬಾಕಿಯೇ?

ಹಲವೊಮ್ಮೆ ನೋಡಿದ್ದಕ್ಕೆ ಹೆಚ್ಚಾಗಲಿಲ್ಲ
ಹೊಟ್ಟೆಯಲಿ ಹುಟ್ಟಿದ್ದಕ್ಕೇ ಮಕ್ಕಳೆನಿಸಿದ್ದಲ್ಲ
ದೂರ ನಿಂತವರೂ ತಮ್ಮ ಹತ್ತಿರದ ಬಂಧುಗಳೇ
ಅರಿಯದಿದ್ದವರೂ ತಮ್ಮ ಸ್ವಂತದವರೇ!

ಹುಲ್ಲು ಸಸಿ ಕಲ್ಲುಗಳೆಲ್ಲವನೂ ಹಾದು
ಹೊಳೆಸುತ್ತ ಹರಿಸುತ್ತ ಮತ್ತೆ ಹಡೆದಿರಿ ತಾವು
ಭೂಮಿಯೆಂದೆನಲಾರೆ ಚಂದ್ರನಂಥವರನ್ನು
ಮಣ್ಣಾಗಬಹುದೇ ಬೆಳದಿಂಗಳು?

**–ಎಸ್.ಮಂಜುನಾಥ್**
(ಖ್ಯಾತ ಕವಿ)

# ಕವಿ ಕಾವ್ಯ ವಿಚಾರ

ಕವಿ, ಚಿಂತಕ, ವಿಮರ್ಶಕ, ವಾಗ್ಮಿ, ಬಹುಶ್ರುತ ವಿದ್ವಾಂಸ ಪ್ರೊ.ಬಿ.ಎಚ್.ಶ್ರೀಧರರ ಜನನ ೧೯೧೮, ಏಪ್ರಿಲ್ ೨೪ ರಂದು ಬಿಜೂರಿನ (ದ.ಕನ್ನಡ) ಬವಲಾಡಿಯಲ್ಲಿ. ತಂದೆ ಸೀತಾರಾಮ ಹೆಬ್ಬಾರ, ತಾಯಿ ನಾಗಮ್ಮ. ಲಕ್ಷ್ಮಿಯದಿಲ್ಲದಿದ್ದರೂ ಸರಸ್ವತಿಯ ಕೃಪಾಕಟಾಕ್ಷ ಧಾರಾಳವಾಗಿ ಇದ್ದ ಆಶುಕವಿಗಳ, ಪಂಡಿತರ, ಸತ್ಯವ್ರತರ ಕುಟುಂಬ. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಜ್ಞಾನನಿಧಿಗಳೂ, ಗುಣನಿಧಿಗಳೂ ಆದ ಶಿಕ್ಷಕರಿಂದ ಬೋಧನೆ, ಸಂಸ್ಕೃತ ಎಮ್.ಎ. ಪೂರೈಕೆ (೧೯೪೨). ರಮಾದೇವಿಯವರೊಡನೆ ೧೯೪೬ರಲ್ಲಿ ವಿವಾಹ. ನಾಲ್ಕು ಹೆಣ್ಣು, ಒಂದು ಗಂಡು ಮಕ್ಕಳ ತಂದೆ. ೧೯೪೨ರಲ್ಲಿ ಮಿಲಿಟರಿ ಅಕೌಂಟ್ಸ್ ಆಫೀಸಿನಲ್ಲಿ ಗುಮಾಸ್ತಗಿರಿಯಿಂದ ಆರಂಭವಾದ ಉದ್ಯೋಗಪರ್ವ ಶಿಕ್ಷಕವೃತ್ತಿ, ಪತ್ರಿಕೋದ್ಯಮ ಪ್ರಾಚಾರ್ಯಗಿರಿಯವರೆಗೆ ಹಬ್ಬಿದೆ. ಈ ಎಲ್ಲ ಕಾಲಘಟ್ಟಗಳಲ್ಲೂ (೧೯೪೫ರಿಂದಲೇ) ವಿವಿಧ ಸಾಹಿತ್ಯಪ್ರಕಾರಗಳಲ್ಲಿ ಅವಿರತವಾಗಿ ಬರಹ, ಬರಹ–ದೇಹ ಸಂಪೂರ್ಣವಾಗಿ ಸೋಲುವ (ನಿಧನ ೧೯೯೦ ಏಪ್ರಿಲ್ ೨೪) ತುಸು ಮುಂಚಿನವರೆಗೂ. ಶಿಶುಸಾಹಿತ್ಯದಿಂದ ಹಿಡಿದು ವಿಮರ್ಶೆ, ಇತಿಹಾಸ, ದರ್ಶನಗಳವರೆಗೂ ಶ್ರೀಧರರ ಆಸಕ್ತಿ, ಅಭ್ಯಾಸ, ಕೊಡುಗೆ. ಕಾವ್ಯಸೂತ್ರ, ಜ್ಞಾನಸೂತ್ರ, ರಾಷ್ಟ್ರಸೂತ್ರಗಳು ಸೂತ್ರತ್ರಯಗಳೆನಿಸಿಕೊಂಡವುಗಳು, ಬಹು–ಬಹುಮಾನಿತವಾದವುಗಳು. ಜೀವನದ ಮತ್ತು ಸಾಹಿತ್ಯ ಶ್ರೇಷ್ಠತೆಯ ನಿಕಷದ ಅನ್ವೇಷಣೆಯಲ್ಲಿ ಪಾಶ್ಚಾತ್ಯ–ಪೌರಾತ್ಯ ಇತಿಹಾಸ, ಸಾಹಿತ್ಯ, ದರ್ಶನಗಳನ್ನು ಅಭ್ಯಸಿಸಿ ಅರಗಿಸಿಕೊಂಡು ನಿಖರ ನಿಲುವಿಗೆ ಬಂದು ಅದನ್ನು ತಮ್ಮ ಐವತ್ತಕ್ಕೂ ಹೆಚ್ಚಿನ ಕೃತಿಗಳಲ್ಲಿ, ಅಸಂಖ್ಯಾತ ಲೇಖನಗಳಲ್ಲಿ ಸ್ಪಷ್ಟವಾಗಿ ("ಧರ್ಮಾದರ್ಥಶ್ಚ ಕಾಮಶ್ಚ" ಎಂದ ವ್ಯಾಸನಷ್ಟೇ ಖಚಿತವಾಗಿ) ಅಭಿವ್ಯಕ್ತಿಸಿದ ವಿಶಿಷ್ಟ ಲೇಖಕ.

# ಸಂಪಾದಕೀಯ

ಯಾವುದೇ ಲೇಖಕನ ಕೃತಿಯೊಂದು ಇಂದಿಗೂ, ಎಂದಿಗೂ ಪ್ರಸ್ತುತವೆನಿಸುವದು ಅದು ಸಾರ್ವಕಾಲಿಕ ಮೌಲ್ಯವನ್ನು ಪ್ರತಿಪಾದಿಸುತ್ತಿದ್ದರೆ ಮಾತ್ರ. ಶತಕ–ದಶಕಗಳ ಹಿಂದಿನ ಶ್ರೇಷ್ಠ ಕೃತಿಗಳು ಇಂದಿಗೂ ಪ್ರಸ್ತುತವೆನಿಸುವದು ಇದೇ ಕಾರಣಕ್ಕೆ ಮತ್ತು ಬದಲಾದ ಕಾಲ–ದೇಶಗಳ ಆವರಣದಲ್ಲಿ ಅವುಗಳ ಪುನರಧ್ಯಯನ ಹೊಸ ಕಾಣ್ಕೆಗೂ, ಜಾಗರಕ್ಕೂ ಕಾರಣವಾಗುತ್ತದೆ. ಏಕೆಂದರೆ ಕಾಲ–ದೇಶಗಳು ಬದಲಾದರೂ ಸಮಾಜವನ್ನು ಕಟ್ಟಿ ನಿಲ್ಲಿಸುವ ಶಕ್ತಿ ಇಂದಿಗೂ ಬದಲಾಗಿಲ್ಲ ಮತ್ತು ಅದರ ಸ್ವರೂಪ ನೈತಿಕವಾದುದೆಂಬುದನ್ನು ಮಾನವಕುಲದ ಚರಿತ್ರೆಯನ್ನು ಅಭ್ಯಸಿಸಿ ಅರ್ಥೈಸಿಕೊಂಡ ಪೂರ್ವಗ್ರಹರಹಿತ ವಿವೇಕಿಗಳೆಲ್ಲರೂ ಒಪ್ಪುತ್ತಾರೆ.

ಪ್ರೊ.ಬಿ.ಎಚ್.ಶ್ರೀಧರರ ಎಲ್ಲ ಕೃತಿಗಳಲ್ಲೂ ಸಮಾಜದ ಸುದೃಢತೆಗೆ ಅನಿವಾರ್ಯವಾದ ಮತ್ತು ಅತ್ಯವಶ್ಯವಾದ ಈ ನೈತಿಕತೆಯ ಅಂತಃಸೂತ್ರದ ಅಭಿವ್ಯಕ್ತಿ ಖಚಿತವಾಗಿ ಮತ್ತು ಪ್ರಬಲವಾಗಿ ಪಡಿಮೂಡಿದೆ. ಹೀಗಾಗಿ ಅವು ಅಂದಿಗೂ, ಇಂದಿಗೂ ಸಲ್ಲುವಂಥವುಗಳೆಂಬ ವಿಚಾರವೇ ಅವುಗಳ ಪುನರ್ಮುದ್ರಣಕ್ಕೆ ಪ್ರೇರಣೆ. ಅವರ ಐವತ್ತಕ್ಕೂ ಹೆಚ್ಚಿನ ಕೃತಿಗಳಲ್ಲಿ ಹಲವಾರು ಪ್ರಾತಿನಿಧಿಕ ಕೃತಿಗಳ ಪ್ರತಿಗಳು ಮುಗಿದುಹೋಗಿ ವಾಚಕವರ್ಗಕ್ಕೆ ಲಭ್ಯವಾಗದ ಪರಿಸ್ಥಿತಿ ಇತ್ತು. ಈಗ ಶ್ರೀಧರರು ಕಾಲವಾದ ೨೨–೨೩ ವರ್ಷಗಳ ಬಳಿಕ ಅವೆಲ್ಲ ಮತ್ತೆ ಬೆಳಕು ಕಾಣುವ, ಬೆಳಕು ಬೀರುವ ಸುಯೋಗ ಬಂದೊದಗಿದೆ.

೧೯೪೫ರಲ್ಲಿ ಪ್ರಕಟವಾದ "ಮೇಘನಾದ" ಕವನಸಂಕಲನದೊಂದಿಗೆ ಆರಂಭವಾದ ಅವರ ಸಾಹಿತ್ಯಕೃಷಿ ೧೯೮೮ರಲ್ಲಿ ಬಂದ "ಭಾರತೀಯ ಮೂರ್ತಿಶಿಲ್ಪ" ಗ್ರಂಥದವರೆಗೂ ಅವಿರತವಾಗಿ ನಡೆಯಿತು. ಕಾವ್ಯ, ವಿಮರ್ಶೆ, ವೈಚಾರಿಕ ಪ್ರಬಂಧಗಳು, ವಿಡಂಬನೆ, ಇತಿಹಾಸ, ನಾಟಕ, ಯಕ್ಷಗಾನ, ಅನುವಾದ ಇತ್ಯಾದಿ ಸಾಹಿತ್ಯದ ಬಹುತೇಕ ಎಲ್ಲ ಪ್ರಕಾರಗಳಲ್ಲೂ ಅವರ ಕೊಡುಗೆ ಇದೆ. ಆದರೆ ಪ್ರಮಾಣದಿಂದಾಗಿ ಅಲ್ಲ, ಅವುಗಳೆಲ್ಲವೂ 'ಸಮ್ಯಗ್' ಜೀವನಕ್ಕೆ ಪೋಷಕವಾದ ಮೌಲ್ಯಗಳನ್ನು ಪ್ರತಿಪಾದಿಸುವುದರಿಂದ ಮಹತ್ವದ್ದೆನಿಸಿವೆ. ಶ್ರೀಧರರ ಪ್ರಕಾರ "ಸಾಹಿತ್ಯವು ಉತ್ತಮ ಜೀವನದಿಂದ ಸಂಪೂರ್ಣ ಪ್ರತ್ಯೇಕವೂ, ಸ್ವತಂತ್ರವೂ ಆದ ಅಸ್ತಿತ್ವ ಉಳ್ಳದ್ದಲ್ಲ. ಸತ್ಯವೂ, ಶಿವವೂ ಆದದ್ದಷ್ಟೇ ನಿಜಸೌಂದರ್ಯ ಉಳ್ಳದ್ದು"–(ಕಾವ್ಯಸೂತ್ರ). ಶುಚಿ, ಸದಭಿರುಚಿ ಬದುಕು–ಬರಹಗಳಲ್ಲಿ ಅವರ ಅಪೇಕ್ಷೆಯಾಗಿತ್ತು, ಆಗ್ರಹವಾಗಿತ್ತು. ಅದಿಲ್ಲದುದು, ಅದಲ್ಲದುದು ವರ್ಜ್ಯ ಎಂಬುದವರ ಧೀರೋದಾತ್ತ

ನಿಲುವು. ಶ್ರೇಷ್ಠ ಕಾವ್ಯಗಳಾದ ರಾಮಾಯಣ–ಮಹಾಭಾರತಗಳನ್ನು ಪೂಜಿಸಿದಷ್ಟೇ ಭಕ್ತಿಯಿಂದ ವಾಲ್ಮೀಕಿ–ವ್ಯಾಸರನ್ನೂ ಪೂಜಿಸುವ ಭಾರತೀಯ ಮನೋಭಾವ ಬದುಕು–ಬರಹಗಳಿಗೆ ಸಮಾನ ಮಹತ್ವ ನೀಡುತ್ತದೆ. ಶ್ರೀಧರರ ಈ ನಿಲುವು ಅವರ ಕೌಟುಂಬಿಕ, ಶೈಕ್ಷಣಿಕ ಹಾಗೂ ಅಂದಿನ ಸಾಮಾಜಿಕ ಪರಿಸರದಿಂದ ರೂಪಿತವಾಗಿದ್ದಿರಬಹುದು ಎಂದಿಟ್ಟುಕೊಂಡರೂ ಪಾಶ್ಚಾತ್ಯ ಕಾವ್ಯ, ವಿಮರ್ಶೆ, ದರ್ಶನಗಳನ್ನು ಓದಿದ ಬಳಿಕವೂ ಅವರ ಮೂಲಭೂತ ನಿಲುವು ಬದಲಾಗಲಿಲ್ಲ ಅಥವಾ ಇನ್ನಷ್ಟು ಗಟ್ಟಿಗೊಂಡಿತು – ಪಾಶ್ಚಾತ್ಯ ವಿಚಾರಧಾರೆಯ ದೋಷ, ಮಿತಿಗಳನ್ನು ಕಂಡುಕೊಂಡದ್ದರಿಂದ ಎಂಬುದು ಗಮನಾರ್ಹ. ಹೀಗಾಗಿ ಅವರ ಕೃತಿಗಳು, ಅವುಗಳಲ್ಲಿಯ ಖಚಿತ ನಿಗಮನಗಳು ಇಂದಿನ ಸಂದರ್ಭದಲ್ಲೂ ಚರ್ಚೆಗೆ ಯೋಗ್ಯವಾಗಿವೆ ಮತ್ತು ಸಮಕಾಲೀನತೆಯನ್ನು ಪಡೆದುಕೊಂಡಿವೆ. ತೆರೆದ ಮನಸ್ಸಿನ, ಪಾಶ್ಚಾತ್ಯ–ಪೌರಾತ್ಯ ಚಿಂತನೆಗಳನ್ನು ಅಭ್ಯಸಿಸಿ ಅರಗಿಸಿಕೊಂಡ, ಸಮಷ್ಟಿಕಲ್ಯಾಣದ ಕಳಕಳಿಯುಳ್ಳ ವಿದ್ವಾಂಸವೃಂದ ಶ್ರೀಧರರ ನಿಗಮನಗಳನ್ನು ಮರುಪರಿಶೀಲಿಸಬೇಕಿದೆ, ಸಮಾಜಸೌಧದ ಸುದೃಢತೆಗೆ. ಶ್ರೀಧರರ ಕೃತಿಗಳನ್ನೋದಿ ಅವರ ನಿಲುವನ್ನು ನಿಖರವಾಗಿ ಅರಿತು ಅರ್ಥೈಸಿಕೊಂಡ ಅವರ ಕುಟುಂಬಮಿತ್ರ ಮತ್ತು ಶ್ರೀಧರರ ಪುತ್ರ ಸಮಾನ ಪ್ರೊ.ಎಚ್.ಆರ್.ಅಮರನಾಥರು ತಮ್ಮ "ಪ್ರವೇಶ"ದಲ್ಲಿ ಈ ಕುರಿತು ಸವಿವರವಾಗಿ ಚರ್ಚಿಸಿದ್ದಾರೆ.

ಐದು ಸಂಪುಟಗಳಲ್ಲಿ ಶ್ರೀಧರರ ಎಲ್ಲಾ ಕೃತಿಗಳು ಆಯಾ ಪ್ರಕಾರಗಳಿಗೆ ಅನುಗುಣವಾಗಿ ಬರುತ್ತಿವೆ – ಕಾವ್ಯ, ವಿಮರ್ಶೆ, ವಿಚಾರ, ಸಂಕೀರ್ಣ, ಅನುವಾದ ಎಂಬುದಾಗಿ. ಶ್ರೀಧರರು ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಕೃತಿರಚನೆ ಮಾಡಿದ್ದರೂ ಅವರದು ಮೂಲಭೂತವಾಗಿ ಸವಿಸತ್ವ. ಸಾಹಿತ್ಯಲೋಕಕ್ಕೆ ಅವರ ಪದಾರ್ಪಣವಾಗಿದ್ದೇ ಕವಿತೆಯಿಂದ. ಹೀಗಾಗಿ ಕವನಸಂಕಲವನ್ನೇ ಪ್ರಥಮ ಸಂಪುಟವಾಗಿ ತರುತ್ತಿದ್ದೇವೆ.

'ಕಾವ್ಯ' ಎಂಬ ಈ ಸಂಪುಟದಲ್ಲಿ ಈ ಮೊದಲು ಪ್ರಕಟಿತವಾದ ಕವನ ಸಂಕಲನಗಳಾದ ಮೇಘನಾದ, ಕಿನ್ನರಗೀತ, ಅಮೃತಬಿಂದು, ರಸಯಜ್ಞ, ಮುತ್ತುರತ್ನ, ನೌಕಾಗೀತ, ಕದಂಬವೈಭವ, ಕಂಟಕಾರಿ ಮಹಾಕಾವ್ಯಂ ಮತ್ತು ಜಾತವೇದ ಎಂಬ ಒಂಬತ್ತು ಕವನಸಂಕಲನಗಳ ಕವನಗಳು ಅಡಕವಾಗಿವೆ. ಪ್ರೊಫೆಸರ್ ಎಚ್.ಆರ್. ಅಮರನಾಥರ "ಪರಂಪರೆಯ ಕಾವಲುಗಾರ" ಎಂಬ ಲೇಖನ ಶ್ರೀಧರರ ಕಾವ್ಯದ ಮೂಲ ನಿಲುವನ್ನು, ಒಲವನ್ನು ಗುರುತಿಸಿ ಓದುಗರಿಗೆ ಸಮರ್ಪಕವಾಗಿ ಪರಿಚಯಿಸುತ್ತದೆ.

ಶ್ರೀಧರರ ಸಮಗ್ರಸಾಹಿತ್ಯದ ಪುನರ್ಮುದ್ರಣವೆಂಬ ಸುವಿಚಾರದ ಬೀಜವನ್ನು ನಮ್ಮೊಳಗೆ ಬಿತ್ತಿ, ಈ ಧನ್ಯ ಕಾರ್ಯಕ್ಕೆ ನಮ್ಮನ್ನು ಪ್ರೇರೇಪಿಸಿದ ಶ್ರೇಯಸ್ಸು ಶ್ರೀಧರರ ಶಿಷ್ಯೆ ಶ್ರೀಮತಿ ಡಾ, ಸುಮಿತ್ರ ಮೋತಿಲಾಲ ಹಲವಾಯಿ ಅವರಿಗೆ ಸಲ್ಲಬೇಕು. ಅವರಿಗೆ ನಮ್ಮ ಮೊದಲ ಕೃತಜ್ಞತೆಗಳು. ಇನ್ನು ಈ ಬೃಹತ್ (ಸುಮಾರು ೬೦೦೦ ಪುಟಗಳು) ಹಾಗೂ ಮಹತ್ತಾದ

ಕಾರ್ಯ ಒಬ್ಬಿಬ್ಬರಿಂದ ಸಾಧ್ಯವಿಲ್ಲವೆಂಬುದು ಸುವಿದಿತ. ಇದರ ಹಿಂದೆ ಹಲವು ಹಿರಿಯರ, ಸ್ನೇಹಿತರ, ಶ್ರೀಧರರ ಶಿಷ್ಯರ, ಕುಟುಂಬ ಬಂಧುಗಳ ಸಲಹೆ, ಸಹಕಾರ, ಹಾರೈಕೆಗಳಿವೆ. ಅವರೆಲ್ಲರಿಗೂ ಹೃತ್ಪೂರ್ವಕ ನಮನಗಳು.

ಸಂಪುಟಗಳ ಪ್ರಕಟಣೆಯ ಕಾರ್ಯಭಾರವನ್ನು ಪ್ರೀತಿಯಿಂದ ಮತ್ತು ನಿಜ–ಆಸಕ್ತಿಯಿಂದ (ಇದು ಔಪಚಾರಿಕ ಮಾತಲ್ಲ) ವಹಿಸಿಕೊಂಡು ಶುದ್ಧವಾಗಿ ಮತ್ತು ಮನೋಹರವಾಗಿ ಪ್ರಕಟಿಸಿಕೊಟ್ಟ ತೇಜು ಪ್ರಕಾಶನ, ಬೆಂಗಳೂರು ಅವರಿಗೆ ತುಂಬುಹೃದಯದ ವಂದನೆಗಳು. ಅವರನ್ನು ಪರಿಚಯಿಸಿದ ಖ್ಯಾತ ಹಾಸ್ಯ ಲೇಖಕಿ, ಶ್ರೀಮತಿ ಭುವನೇಶ್ವರಿ ಹೆಗಡೆಯವರಿಗೆ ಹಾರ್ದಿಕ ನಮನಗಳು.

ಈ ಎಲ್ಲಾ ಸಂಪುಟಗಳನ್ನು ಶ್ರೀಧರರ 'ಜೀವಯಾನ'ದ ಜತೆಗಾತಿ, ಜೀವಸಖಿ ಶ್ರೀಮತಿ ರಮಾದೇವಿಯವರಿಗೆ ಅರ್ಪಿಸುತ್ತಿದ್ದೇವೆ. ೨೦೦೭, ಏಪ್ರಿಲ್ ೨೪ರಂದು ರಮಾದೇವಿಯವರ ಹಸ್ತದಿಂದಲೇ ಬಿ.ಎಚ್.ಶ್ರೀಧರ ಪ್ರಶಸ್ತಿಯನ್ನು ಖ್ಯಾತ ಕವಿ ಶ್ರೀ ಎಸ್. ಮಂಜುನಾಥರು ಸ್ವೀಕರಿಸಿದ್ದರು. ಮುಂದೆ ಮೂರೇ ತಿಂಗಳಲ್ಲಿ (ಜುಲೈ ೨೦, ೨೦೦೭) ರಮಾದೇವಿಯವರು ದೈವಾಧೀನರಾದಾಗ ಸುದ್ದಿ ತಿಳಿದು ನೊಂದ ಮಂಜುನಾಥರು ಬರೆದು ಕಳುಹಿಸಿದ್ದ ರಮಾದೇವಿಯವರ ಒಳ–ಹೊರಗನ್ನು ತದ್ವತ್ ಕಟ್ಟಿಕೊಟ್ಟ ಕವನವನ್ನೇ ಅರ್ಪಣೆಯಲ್ಲಿ ಬಳಸಿಕೊಂಡಿದ್ದೇವೆ. ಅವರಿಗೆ ನಮ್ಮ ವಿಶೇಷ ಪ್ರಣಾಮಗಳು. ಹಾಗೆಯೇ ಸಂಪುಟದ ಬೆನ್ನುಡಿಗೆ ಶ್ರೀ ಎಚ್.ಆರ್. ಅಮರನಾಥರ ಕವನವನ್ನು (ಶ್ರೀಧರರ ನಿಧನದ ನೋವು ಹಸಿಯಾಗಿದ್ದಾಗ ಬರೆದದ್ದು) ಮತ್ತು ಶ್ರೀ ಸತೀಶ್ ಎಲ್ಲಾಪುರ ಅವರ ಕಾರ್ಟೂನನ್ನು ಉಪಯೋಗಿಸಿಕೊಂಡಿದ್ದೇವೆ. ಕವಿಗೂ, ಕಲಾವಿದನಿಗೂ ಕೃತಜ್ಞತೆಗಳು.

ನಂಬಿದಂತೆ ನಡೆದ, ನುಡಿದ, ಬರೆದ ಬಿ.ಎಚ್. ಶ್ರೀಧರರ ಕೃತಿ ನಿಮ್ಮ ಮುಂದಿದೆ. ಇವುಗಳ ವಾಚನ, ಮನನ ಬುದ್ಧಿಯ ಔನ್ನತ್ಯಕ್ಕೂ, ಹೃದಯ ಸಂಸ್ಕಾರಕ್ಕೂ ಕಾರಣವಾಗಲೆಂಬುದೇ ಆಶಯ. ಶ್ರೀಧರರು ಕಾಯೇನ–ವಾಚಾ–ಮನಸಾ ನಂಬಿದ್ದ ಶ್ರೀರಮಣರ ಅನುಗ್ರಹವೇ ಎಲ್ಲ ಕಾರ್ಯಕ್ಕೂ ಕಾರಣವೆಂಬ ಸತ್ಯದ ಅರಿವು ನಮ್ಮೊಳಗೆ ಇದ್ದೇ ಇದೆ. ಅವರಲ್ಲಿ ತುಡಿಯುತ್ತಿದ್ದ ಸಮಷ್ಟಿಯ ಒಳಿತಿನ ಬಯಕೆ ಶ್ರೀಗುರುವಿಗೆ ತಲುಪಲೆಂಬುದೇ ಹರಕೆ.

**– ರಾಜಶೇಖರ ಹೆಬ್ಬಾರ**

# ಪ್ರವೇಶ

ಪ್ರೊ.ಬಿ.ಎಚ್.ಶ್ರೀಧರರು ನನ್ನ ತಂದೆ ವಿದ್ವಾನ್ ರಾ.ಭ. ಹಾಸಣಗಿಯವರ ಮಿತ್ರರು, ಆಪ್ತರು, ನನಗೆ ತಂದೆ ಸಮಾನರು. ಇಬ್ಬರೂ ಕವಿ ದ.ರಾ.ಬೇಂದ್ರೆಯವರೊಂದಿಗೆ ಒಡನಾಟ, ವಿಶ್ವಾಸ ಹೊಂದಿವರು. ಈ ತ್ರಿಮೂರ್ತಿಗಳು ನನ್ನ ಚಾರಿತ್ರ್ಯವನ್ನು ರೂಪಿಸಿದ ಶಿಲ್ಪಿಗಳು. ಇವರಲ್ಲಿ ಶ್ರೀಧರರದು ವಿಷ್ಣುಸ್ಥಾನ. ಮೂರ್ತಿಪೂಜೆಯೇ ಕಂದಾಚಾರವಾಗಿ, ರಾಜಕೀಯವಾಗಿ, ಮೂರ್ತಿಭಂಜನೆಯೇ ಮೌಲ್ಯವಾಗಿ ಕಂಡುಬರುವ ಕಾಲದಲ್ಲಿ ಬರೆಯುತ್ತಿದ್ದೇನೆ. ಈ ಮೂವರಲ್ಲಿ ನನ್ನ ತಂದೆಯವರಿಗೆ ಇಂಗ್ಲೀಷ್ ಬರುತ್ತಿರಲಿಲ್ಲ. ಮೂವರಿಗೂ ಸಂಸ್ಕೃತ–ಕನ್ನಡ, ಮಾರ್ಗ–ದೇಸಿಗಳ ಹಾಸುಹೊಕ್ಕಿನ ಸೂಕ್ಷ್ಮ ಜ್ಞಾನವಿತ್ತು. ನಾನು ಇವರಿಂದ ಕಲಿತದ್ದು ತರಗತಿಯಲ್ಲಿ ಅಲ್ಲ, ಅಂತೇವಾಸದ (one-to-one) ಸಂಬಂಧದಲ್ಲಿ. ಇಂದಿಗೂ ನಾನು ಅವರೊಂದಿಗೆ ಮನೋಸಂವಾದದಲ್ಲಿ ತೊಡಗಿರುತ್ತೇನೆ. ಅವರ ಗ್ರಂಥಗಳಲ್ಲಿ ಏನನ್ನೋ ಹುಡುಕುತ್ತಿರುತ್ತೇನೆ. ಅವರನ್ನೂ ನನ್ನನ್ನೂ ಅರ್ಥೈಸಿಕೊಳ್ಳಲು ಯತ್ನಿಸುತ್ತೇನೆ. ಅವರ ನಿರೀಕ್ಷೆಯಂತೆ ನಾನು ಬೆಳೆದಿದ್ದೇನೆಯೇ ಎಂಬುದು ನನಗೆ ಗೊತ್ತಿಲ್ಲ. ಆದರೂ ಶ್ರೀಧರರ ಮಕ್ಕಳ ಅಪೇಕ್ಷೆಯಂತೆ ಅವರ ಸಮಗ್ರ ಸಾಹಿತ್ಯ ಸಂಪುಟಕ್ಕೆ ಒಂದು ಪ್ರಸ್ತಾವನೆ ಬರೆಯಲು ಅಳುಕುತ್ತಲೇ ಒಪ್ಪಿಕೊಂಡಿದ್ದೇನೆ. ಅವರ ಸಾವಿರಾರು ಪುಟಗಳ, ಹಲವು ಜ್ಞಾನ ಕ್ಷೇತ್ರಗಳ ಶಾಸ್ತ್ರ ಸಾಹಿತ್ಯವನ್ನೂ, ಸೃಜನಶೀಲ ಸಾಹಿತ್ಯ–ವಿಮರ್ಶೆಗಳನ್ನೂ ಹಿಂಡಿ ಭಟ್ಟಿ ಇಳಿಸಿ ಐದಾರು ಪುಟಗಳಲ್ಲಿ ಸಾರಾಂಶ ಕೊಡುವ ಅಸಾಧ್ಯ ಪ್ರಯತ್ನಕ್ಕೆ ಕೈ ಹಾಕುವುದಿಲ್ಲ. ಅವರ ಬರಹಗಳನ್ನು ಗಮನಿಸಬೇಕಾದ, ಅವು ನಮಗೆ ಪ್ರಸ್ತುತವಾಗುವ ಒಂದು ದಿಕ್ಸೂಚಿಯನ್ನು ಮಾತ್ರ ನೀಡಬಯಸುತ್ತೇನೆ.

ಶ್ರೀಧರರ ಬರಹಗಳಲ್ಲಿ ಎದ್ದು ಕಾಣುವ ಒಂದು ಮುಖ್ಯ ಅಂಶವೆಂದರೆ ಭಾರತೀಯತೆಯಲ್ಲಿ ಅಚಲ ವಿಶ್ವಾಸ ಮತ್ತು ಅದರ ಅಧಿಕಾರಯುತ ಪ್ರತಿಪಾದನೆ. ಮೂಲಭೂತವಾದ ಮತ್ತು ಪಾಶ್ಚಾತ್ಯೀಕರಣದ ಅತಿರೇಕಗಳ ನಡುವೆ ಅವರು ಒಂದು ಮಧ್ಯಮ ಮಾರ್ಗ ಕಂಡುಕೊಂಡಿದ್ದರು. ಭಾರತವೆಂಬುದು ಅವರಿಗೆ ಕೇವಲ ಭೌಗೋಳಿಕ/ರಾಜಕೀಯ ನಕಾಶೆ ಆಗಿರಲಿಲ್ಲ, ಒಂದು ಜೀವನ ದರ್ಶನವಾಗಿತ್ತು. ಅವರ ಸೂತ್ರತ್ರಯಗಳಲ್ಲಿ (ಜ್ಞಾನಸೂತ್ರ, ಕಾವ್ಯಸೂತ್ರ, ರಾಷ್ಟ್ರಸೂತ್ರ) ಇದು ಮಂಡಿಸಲ್ಪಟ್ಟಿದೆ. ಇದರ ಹಿನ್ನೆಲೆಯಲ್ಲಿ ಪ್ರಾಚೀನ ಭಾರತದ ಮೂವರು ಸೂತ್ರಕಾರರಿದ್ದಾರೆ– ಪಾಣಿನಿ, ಭರತ ಮತ್ತು ವ್ಯಾಸ. ಇವರ ಸಾರ್ವಕಾಲಿಕ ಶ್ರೇಷ್ಠತೆ, ಪ್ರಸ್ತುತತೆಗಳ ಬಗ್ಗೆ ಅವರಿಗೆ ಯಾವುದೇ ಅನುಮಾನವಿರಲಿಲ್ಲ. ಪಾಣಿನಿಯನ್ನು ಸ್ಮರಿಸದ ಧ್ವನಿಶಾಸ್ತ್ರ, ಭಾಷಾಶಾಸ್ತ್ರ; ಭರತನನ್ನು ಮೆಚ್ಚದ ಸಾಹಿತ್ಯ ಸಿದ್ಧಾಂತ, ವಿಮರ್ಶೆ; ವ್ಯಾಸರ ಶಾಂತಿಪರ್ವಕ್ಕೆ ಮನ್ನಣೆ ನೀಡದ ರಾಜ್ಯಶಾಸ್ತ್ರ – ಇವು ಅವರಿಗೆ ದ್ರೋಹವಾಗಿ, ವಿದ್ರೋಹವಾಗಿ ಕಾಣುತ್ತಿದ್ದವು. ವ್ಯಾಸರ ಬ್ರಹ್ಮಸೂತ್ರಕ್ಕೆ ಶಾಂಕರ ಭಾಷ್ಯದ

ಬಗ್ಗೆ ಅವರಿಗೆ ವಿಶೇಷ ಒಲವಿದ್ದಿತಾದರೂ ಅದ್ವೈತ–ದ್ವೈತ–ವಿಶಿಷ್ಟಾದ್ವೈತಗಳ ಅಂತಃಕಲಹದಲ್ಲಿ ಅವರು ಪಾಲ್ಗೊಂಡಿದ್ದು ನನಗಂತೂ ಕಂಡುಬಂದಿಲ್ಲ. ಭರತನ ನಾಟ್ಯಶಾಸ್ತ್ರ, ರಸಸಿದ್ಧಾಂತಗಳಲ್ಲಿ ನಾಟಕ–ಕಾವ್ಯ–ಸಾಹಿತ್ಯ–ಕಲಾ ಸಾಧಕರು ಮಾತ್ರವಲ್ಲ, ಮನೋವಿಜ್ಞಾನಿಗಳೂ ಆಸಕ್ತರಾಗಬೇಕು ಎಂಬುದು ಅವರ ಅಪೇಕ್ಷೆಯಾಗಿತ್ತು. ಅವರು ಮೆಚ್ಚಿದ ಚಾಣಕ್ಯ ಗದ್ದುಗೆಯ ಗುರಿಯಾಗಿ ಏನನ್ನೂ ಮಾಡುವ ದಾರಿ ಸರಿ ಎನ್ನುವ ಮೆಕೆವಿಲಿ ಆಗಿರಲಿಲ್ಲ; ಚಂದ್ರಗುಪ್ತನ ಸತ್ವವನ್ನು ಬೀಜರೂಪದಲ್ಲಿ ಗುರುತಿಸುವ, ಅಮಾತ್ಯ ರಾಕ್ಷಸನನ್ನು ಆಳದಲ್ಲಿ ಗೌರವಿಸುವ, ಅಂತರಂಗದಲ್ಲಿ ಸನ್ಯಾಸಿಯಾಗಿರುವ ಚಾಣಕ್ಯನ ನೀತಿ ಬೇಕೆನ್ನುತ್ತಿದ್ದರು. ನೀತಿಪ್ರಧಾನ ಸಮಾಜ, ಸರ್ವಧರ್ಮ ಸಾಮರಸ್ಯ, ಭ್ರಷ್ಟಾಚಾರರಹಿತ ಆಡಳಿತ ವ್ಯವಸ್ಥೆ ಅವರ ಕಾಳಜಿಯ ವಿಷಯಗಳಾಗಿದ್ದವು. ಆತ್ಮಪೌರುಷವಿಲ್ಲದ ನಾಡು ಪರಕೀಯರ ಪಾಲಾಗುವುದು ಎಲ್ಲ ರಾಷ್ಟ್ರಗಳ ಹಣೆಬರಹವೆಂದು ಇತಿಹಾಸ ಸಾರಿಸಾರಿ ಹೇಳುತ್ತದೆ. ಮನೆಮುರುಕರನ್ನು ಹೊರ ಹಾಕಬೇಕಾಗುತ್ತದೆ, ಸಮಯಸಾಧಕರ ಬಗ್ಗೆ ಎಚ್ಚರಿಕೆ ವಹಿಸಬೇಕಾಗುತ್ತದೆ. ನಮ್ಮೊಳಗೆ ಜಗಳವಾದರೆ ನಾವು (ಪಾಂಡವರು) ಐದು ಜನ, ಅವರು (ಕೌರವರು) ನೂರು ಜನ; ಹೊರಗಿನವರೊಂದಿಗೆ ಜಗಳ ಬಂದರೆ ನಾವು ನೂರೈದು ಜನ ಎಂಬ ಧರ್ಮರಾಯನ ಭ್ರಾತೃತ್ವದ ರಾಜನೀತಿ ಶ್ರೀಧರರಿಗೆ ಮಾನ್ಯವಿತ್ತು.

ಇಪ್ಪತ್ತನೆಯ ಶತಮಾನದ ಪಾಶ್ಚಾತ್ಯ ಚಿಂತಕರಲ್ಲಿ ಶ್ರೀಧರರ ಹೃದಯ ಗೆದ್ದವರು ಇಬ್ಬರು: ವಿಜ್ಞಾನಿಗಳಲ್ಲಿ ಐನ್‌ಸ್ಟೀನ್ ಮತ್ತು ಸಾಹಿತಿಗಳಲ್ಲಿ ಟಿ.ಎಸ್.ಎಲಿಯಟ್. ಅವರ ವಿಶೇಷ ಆಗ್ರಹವಿರುವುದು ಮಾರ್ಕ್ಸ್ ಮತ್ತು ಫ್ರಾಯ್ಡ್ ಕುರಿತು. ಮಾರ್ಕ್ಸ್‌ನದು ಅರ್ಥಮೂಲದ ದೃಷ್ಟಿ, ಫ್ರಾಯ್ಡನದು ಕಾಮಮೂಲದ ದೃಷ್ಟಿ. ಇವೆರಡೂ ವ್ಯಕ್ತಿಯ ಮತ್ತು ಸಮಾಜದ ಸ್ವಾಸ್ಥ್ಯಕ್ಕೆ ಪೂರಕವಲ್ಲ ಎಂಬುದು ಶ್ರೀಧರರ ಖಚಿತ ನಿಲುವು. ಪಂಪನ ಆದಿಪುರಾಣದಲ್ಲಿ ಭರತನ ಸ್ವಗತವಾಗಿ ಬರುವ ಒಂದು ಪದ್ಯದೆಡೆ ಓದುಗರ ಗಮನ ಸೆಳೆಯಬಯಸುತ್ತೇನೆ.

**ಧರ್ಮಂ ಪ್ರಧಾನಂ, ಅರ್ಥಂ**

**ಧರ್ಮಾಂಘ್ರಿಪ ಫಲಂ, ಅದರ್ಕೆ ರಸಮದು ಕಾಮಂ. (೧೦–೫೦)**

ಧರ್ಮವು ಮೂಲ, ಅರ್ಥವು ಧರ್ಮವೃಕ್ಷದ ಹಣ್ಣು, ಅದರ ರಸವೇ ಕಾಮ. ಇದು ಜೀವನ ಮೌಲ್ಯಗಳ ಆದ್ಯತಾ ಮಾರ್ಗಸೂಚಿ. ಈ ಬಗ್ಗೆ ಯಾವುದೇ ಭರತರ ಅಥವಾ ಬಾಹುಬಲಿಗಳ ಆಕ್ಷೇಪವಿರಲಾರದು ಎಂದು ಭಾವಿಸುತ್ತೇನೆ.

ಶ್ರೀಧರರು ಬರೆಯಲಾರಂಭಿಸಿದಾಗ ನವ್ಯಪಂಥ ಚಿಗುರೊಡೆಯುತ್ತಿತ್ತು. ಅಡಿಗರು ಶ್ರೀಧರರ ಸಮವಯಸ್ಕರು, ಸಂಬಂಧಿಗಳೂ ಕೂಡ. ಶ್ರೀಧರರು ನವ್ಯ ಪಂಥದೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲಿಲ್ಲ. ಅವರು ಸಂಸ್ಕೃತ ಪ್ರಾಧ್ಯಾಪಕರಾಗಿದ್ದು, ಹೆಚ್ಚಿನ ನವ್ಯರು ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದುದು ಗಮನಾರ್ಹ ಸಂಗತಿ. (ಯುಗಧರ್ಮ, ವಯೋಧರ್ಮ, ಮನೋಧರ್ಮ ಮತ್ತು ವೃತ್ತಿಧರ್ಮಗಳ ಸಂಬಂಧವನ್ನು ಬಿಡಿಸಿ ವಿವರಿಸಿ ಹೇಳುವುದು

ನನಗೆ ಸದ್ಯಕ್ಕಂತೂ ಸಾಧ್ಯವಿಲ್ಲ.) ವಿ.ಕೃ.ಗೋಕಾಕರ ನವ್ಯಕ್ಕೆ ಶ್ರೀಧರರ ಆಕ್ಷೇಪವಿರಲಿಲ್ಲ. ಉಳಿದವರ ಸಾಹಿತ್ಯ ಕೇವಲ 'ಸಂಕರ', 'ಸಂಸೃಷ್ಟಿ' ಅಲಂಕಾರಗಳ ಉದಾಹರಣೆ ಎಂದು ಒಂದೇ ವಾಕ್ಯದಲ್ಲಿ ನಿರ್ಣಯ ಹೇಳುತ್ತಿದ್ದರು. ದೇವರನ್ನು ತಲೆಹಿಡುಕನನ್ನಾಗಿ ಗ್ರಹಿಸಿ ಇಂತಿಂಥ ಹೆಣ್ಣುಗಳ ತನ್ನ ಬಳಿ ಕಳಿಸು ಎಂದು ಬೇಡುವ ಅಡಿಗರ 'ಪ್ರಾರ್ಥನೆ'ಯಂತೂ ವಿಕೃತಿಯ ಪರಮಾವಧಿ ಎನ್ನುತ್ತಿದ್ದರು. ಶಿಲ್ಪಶಾಸ್ತ್ರದಿಂದ ಹಿಡಿದು ಮಕ್ಕಳ ಸಾಹಿತ್ಯದವರೆಗಿನ ಅವರ ಆಸಕ್ತಿ ಮತ್ತು ಕೃಷಿ ನವ್ಯ ಪಾಳೆಯದಲ್ಲಿ ಕಂಡುಬರುವುದಿಲ್ಲ. ನವ್ಯರದೇನಿದ್ದರೂ ಬರಿ ಕಾವ್ಯಶಿಲ್ಪದ ಕಾಳಜಿ. ನವ್ಯರಲ್ಲಿ ಕಾಣದ ವಾತ್ಸಲ್ಯ ಭಾವ ಮತ್ತು ಹಾಸ್ಯ ಪ್ರಜ್ಞೆ ಶ್ರೀಧರರ ಕಾವ್ಯದಲ್ಲಿವೆ. ಹಲವು ಬಗೆಯ ಛಂದಸ್ಸುಗಳಲ್ಲಿ ಅವರ ಪ್ರಭುತ್ವ ಯಕ್ಷಗಾನ ಪ್ರಸಂಗಗಳ ದೇಸಿ ಮತ್ತು ಪಂಪಾದಿ ಮಾರ್ಗಕಾವ್ಯಗಳಿಂದ ಹೀರಿಕೊಂಡದ್ದಾಗಿದೆ. ಯಕ್ಷಗಾನದ ವೇಷ ಕಟ್ಟಿ ನಿಲ್ಲಿಸಿದರೆ ತಾನು ಕುಣಿಯಲಾರೆನಾದರೂ ಅರ್ಥ ಹೇಳಬಲ್ಲೆ ಎಂದು ಅವರು ಹೇಳಿದ್ದು ನನಗೆ ನೆನಪಿದೆ.

ಕನ್ನಡವು ನನ್ನ ತಾಯಿನುಡಿ, ಸಂಸ್ಕೃತವು ತಂದೆನುಡಿ ಎಂದು ಘೋಷಿಸಿದ ಶ್ರೀಧರರು ಕನ್ನಡ–ಸಂಸ್ಕೃತಗಳಿಗೆ ಬಾಂಧವ್ಯವಿದೆ, ದಾಯಾದಿತನವಿಲ್ಲ ಎಂದು ಸಾಧಿಸಿದ್ದಾರೆ. ತಾಯಿ–ತಂದೆಯರ ನಡುವೆ ವಿರಸವಾದಾಗ ಮಕ್ಕಳೇನು ಮಾಡಬೇಕೆಂಬುದು ಯಕ್ಷಪ್ರಶ್ನೆ. ವಾಗರ್ಥ ದಾಂಪತ್ಯದ ತಾಯಿತಂದೆ ಎಲ್ಲರಿಗೂ ಸಿಗುವುದಿಲ್ಲ. ತಾಯಿತಂದೆಯರನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಯಾವ ಮಕ್ಕಳಿಗೂ ಇರುವುದಿಲ್ಲ. ಹೆಚ್ಚೆಂದರೆ ರಾಮ–ಸೀತೆಯರ ಬಿಂಬವನ್ನು ಹೃದಯದಲ್ಲಿರಿಸಿಕೊಂಡು ಅವರು ಒಂದಾಗಲು ಶ್ರಮಿಸುವ ಹನುಮರಾಗಬಹುದು. ಸಂಸ್ಕೃತ=ಬ್ರಾಹ್ಮಣಿಕೆ=ಪುರೋಹಿತಶಾಹಿ=ಶೋಷಣೆ ಎಂಬ ಅತಾರ್ಕಿಕ ಸಮೀಕರಣವನ್ನಿಟ್ಟುಕೊಂಡು ಇಂಗ್ಲೀಷ್=ಉದ್ಧಾರ ಎಂಬ ನಿರ್ಣಯಕ್ಕೆ ಜಿಗಿಯುವವರ ಬಗ್ಗೆ ಶ್ರೀಧರರಿಗೆ ಯಾವ ಗೌರವವೂ ಇರಲಿಲ್ಲ. ಆಯಾ ಪ್ರಾಧ್ಯಾಪಕರು ತಮ್ಮದು ಅಂತರರಾಷ್ಟ್ರೀಯ ಮಟ್ಟ, ರಾಷ್ಟ್ರಮಟ್ಟ, ಪ್ರಾದೇಶಿಕ ಮಟ್ಟ ಎಂದು ಮೇಲರಿಮೆಯನ್ನೋ, ಕೀಳರಿಮೆಯನ್ನೋ ಬೆಳೆಸಿಕೊಳ್ಳುವುದು ಆರೋಗ್ಯದ ಲಕ್ಷಣವಲ್ಲ. ಎಂಥ ವಿಶ್ವಮಾನವನಾದರೂ ನಿಂತಷ್ಟು ನೆಲ ಪ್ರಾದೇಶಿಕವಾಗಿರುತ್ತದೆ ಎಂಬ ಅರಿವು ಕುವೆಂಪು ಅವರಿಗೂ ಇತ್ತು. "ಕನ್ನಡದ ಮನೆಯಲ್ಲಿ ಕನ್ನಡಿತಿ ಯಜಮಾನಿತಿ/ಮಿಕ್ಕ ಹೆಂಗಸರೆಲ್ಲ ಒಕ್ಕಲಷ್ಟೇ" ಎಂಬುದು ಶ್ರೀಧರರ ಒಂದು ಕವಿತೆಯ ಸಾಲು.

ಅವರ ಕನ್ನಡ ಪ್ರೀತಿ ಉಕ್ಕಿ ಹರಿಯುವುದು ಕದಂಬರ, ಅದರಲ್ಲೂ ಮಯೂರಶರ್ಮನ ಬಗ್ಗೆ ಬರೆಯುವಾಗ. ಬನವಾಸಿಯ ಕದಂಬರು (ಇತಿಹಾಸ ಸಂಶೋಧನೆ), ನೌಕಾಗೀತ (ಖಂಡಕಾವ್ಯ), ಕದಂಬ ವೈಭವ ('ರಘುವಂಶ' ಮಾದರಿಯ ಕಥನಕಾವ್ಯ), ಮಯೂರಶರ್ಮ (ಚಾರಿತ್ರಿಕ ನಾಟಕ)– ಎಲ್ಲದರ ಆಶಯ ಒಂದೇ: ರಾಷ್ಟ್ರ ಕಟ್ಟುವ ಕನಸು. ಸಮೃದ್ಧ, ಸ್ಥಿರ, ಸಮರ್ಥ ರಾಜ್ಯ ವ್ಯವಸ್ಥೆಯಲ್ಲಿ ವೇದಮಂತ್ರಗಳಿಂದ ಸ್ಫೂರ್ತಿ ಪಡೆದು ಬೇಡರು, ಬೆಸ್ತರವರೆಗೆ ಎಲ್ಲರ ಸಹಕಾರದೊಂದಿಗೆ ನಿರ್ಮಿಸಿದ ಸಕಾರಾತ್ಮಕ ಮಾದರಿಯ ಚಿತ್ರಣವಿದೆ. ಮಯೂರಶರ್ಮನ ವ್ಯಕ್ತಿತ್ವಕ್ಕೆ ಪರಶುರಾಮನ ಪುರಾಣಕಥೆಯ ಪ್ರೇರಣೆ ಇದೆಯಾದರೂ

ಶ್ರೀಧರರಿಗೆ ಪುರಾಣ–ಇತಿಹಾಸಗಳ ವ್ಯತ್ಯಾಸದ ಸ್ಪಷ್ಟತೆ ಇದೆ. ಧರ್ಮ, ವಾಣಿಜ್ಯ, ವಿಜ್ಞಾನಗಳ ಸ್ಥಾನದ ಬಗ್ಗೆಯೂ ಕಾಳಜಿಯದೆ.

ಪರಶುರಾಮನ ಬಗ್ಗೆ ಸ್ವಲ್ಪ ಹೆಚ್ಚು ಬರೆಯಬೇಕೆನಿಸುತ್ತದೆ. ಸಂಪ್ರದಾಯ ಇವನನ್ನು ಚಿರಂಜೀವಿ ಎಂದೂ, ವಿಷ್ಣುವಿನ ಅವತಾರವೆಂದೂ ಪರಿಗಣಿಸುತ್ತದೆ. ಇವನ ತಂದೆ ಜಮದಗ್ನಿಯನ್ನು ಒಬ್ಬ ಗೋತ್ರ ಪ್ರವರ್ತಕನೆಂದು ವೈದಿಕ ಸಂಸ್ಕೃತಿ ಒಪ್ಪಿಕೊಳ್ಳುತ್ತದೆ. ಇವನ ತಾಯಿ ರೇಣುಕೆ=ಎಲ್ಲಮ್ಮ ಎಂಬ ನಂಬಿಕೆ ಕೆಲವು ತಳಸಮುದಾಯಗಳ ಜಾನಪದ ಆಚರಣೆಗಳಲ್ಲಿ ಕಂಡುಬರುತ್ತದೆ. (ಇದು ಬೆತ್ತಲೆ ಸೇವೆಯ ಸಮರ್ಥನೆಯಲ್ಲ). 'ರೇಣುಕಾ ಮಹಾತ್ಮೆ' ಜನಪ್ರಿಯ ಯಕ್ಷಗಾನ ಪ್ರಸಂಗವೂ ಹೌದು. ಶ್ರೀಧರರ ಕದಂಬ ವೈಭವದ ಮೊದಲ ಸಾಲಿನಲ್ಲೇ ಭಾರ್ಗವರಾಮ ಕಾಣಿಸಿಕೊಳ್ಳುತ್ತಾನೆ. ಮಯೂರಶರ್ಮ ನಾಟಕದಲ್ಲಿ ಬ್ರಾಹ್ಮಣ ವಟು ಮಯೂರಶರ್ಮ ಪಲ್ಲವ ದೊರೆ ಶಿವಸ್ಕಂದನಿಂದ ಅವಮಾನಿತನಾದಾಗ "ಬ್ರಾಹ್ಮಣನಾದ ಪರಶುರಾಮ ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆ ಮಾಡಿ ಕ್ಷತ್ರಿಯರನ್ನೆಲ್ಲ ಸಮೂಲನಾಶ ಮಾಡಿದಂತೆ ನಿನ್ನ ಗರ್ವವನ್ನು ಹಿಂಡದಿದ್ದಲ್ಲಿ ನಾನು ಮಯೂರಶರ್ಮನಲ್ಲ" ಎಂದು ಪ್ರತಿಜ್ಞೆ ಮಾಡುತ್ತಾನೆ. ಇತರ ಕೃತಿಗಳಲ್ಲೂ 'ಇದಂ ಬ್ರಾಹ್ಮಂ ಇದಂ ಕ್ಷಾತ್ರಂ ಶಾಪಾದಪಿ ಶರಾದಪಿ" (ಪರಶುರಾಮ) ಮತ್ತು 'ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ' (ವಿಶ್ವಾಮಿತ್ರ) ಎಂಬ ಮಾತುಗಳು ಕಾಣಿಸಿಕೊಂಡಿವೆ. ಕಾವ್ಯಸೂತ್ರದಲ್ಲಿ "ಧರ್ಮಕ್ಷೇತ್ರಕ್ಕೆ ಕುರುಕ್ಷೇತ್ರದ ಕಳೆ ಬಂದಿದೆ" ಎಂದಿದ್ದಾರೆ ಬೇಂದ್ರೆ. ಶ್ರೀಧರರ ಗದ್ಯ ಶೈಲಿಯಲ್ಲಿ ಕ್ಷಾತ್ರ ತೇಜಸ್ಸಿದೆ (ಆ ಪದ ಬಳಸಬಹುದಾದರೆ).

ಇಂದಿನ ಸಾಹಿತ್ಯಿಕ ಪರಿಸರದಲ್ಲಿ ಪರಶುರಾಮನ ಬಗ್ಗೆ ಎರಡು ಆಕ್ಷೇಪಗಳಿವೆ: ಒಂದು ಮಾತೃಹಂತಕ ಎಂದು, ಇನ್ನೊಂದು ಜನಾಂಗದ್ವೇಷಿ ಎಂದು. ಮಾತೃಹಂತಕ ಎನ್ನುವವರು ತಾಯಿಗೆ ಮತ್ತೆ ಜೀವ ತಂದುದನ್ನು ಒಪ್ಪಿಕೊಳ್ಳುವುದಿಲ್ಲ. ಅದು ಹೇಗೆ ಸಾಧ್ಯ ಎಂದು ಭೌತವಾದಿ, ವಿಚಾರವಾದಿ ನೆಲೆಯಿಂದ ಪ್ರಶ್ನಿಸುತ್ತಾರೆ. ಪುರಾಣ ಕಥೆಗಳಲ್ಲಿ ಎಲ್ಲವೂ ಸಾಧ್ಯ, ಸಮಗ್ರವಾಗಿ ಓದಿ ಎನ್ನಬೇಕಾಗುತ್ತದೆ. ಪುರಾಣದ ಪಠ್ಯ ಸಾಹಿತ್ಯಿಕ ಪಠ್ಯದಂತಲ್ಲ; ಹಲವು ಆವೃತ್ತಿಗಳಿರುವುದು ಸಹಜ. "ತಾಯೀ ತಲೀ ಕಡದಾ/ಮತ್ತ ಮಾತೃಭಕ್ತನಾಗಿ ಉಳದಾ" ಎಂದಿದ್ದಾರೆ ಬೇಂದ್ರೆ. (ತಾ ಲೆಕ್ಕಣಿಕಿ ತಾ ದೌತಿ, ಪುಟ ೫೮). ಇನ್ನು ಜನಾಂಗ ದ್ವೇಷದ ಬಗ್ಗೆ. ವಶಿಷ್ಠ–ವಿಶ್ವಾಮಿತ್ರರ ಸಂಘರ್ಷ ವೈಯಕ್ತಿಕವೆಂದೂ, ಭಾರ್ಗವ ಬ್ರಾಹ್ಮಣರು ಮತ್ತು ಹೈಹೆಯ ಕ್ಷತ್ರಿಯರದು ಜನಾಂಗ/ವರ್ಗ/ಸಮುದಾಯಗಳ ಸಂಘರ್ಷವೆಂದೂ ವಿಶ್ಲೇಷಿಸಿದವರಿದ್ದಾರೆ. 'ಸಂಘರ್ಷ' ಪದ ಸ್ವಲ್ಪ ವಸ್ತುನಿಷ್ಠವೆನಿಸಿದರೆ 'ದ್ವೇಷ'ವು ಮನಃಕಷಾಯವನ್ನು ಸೂಚಿಸುತ್ತದೆ. ಹುಯಿಲಗೋಳ ನಾರಾಯಣರಾಯರ 'ಉದಯವಾಗಲಿ ನಮ್ಮ ಚಲುವ ಕನ್ನಡನಾಡು' ಹಾಡಿನಲ್ಲಿ 'ರಾಜನ್ಯರಿಪು ಪರಶುರಾಮನಮ್ಮನ ನಾಡು' ಎಂಬ ಸಾಲಿನ ಬಗ್ಗೆ ಎದ್ದ ವಿವಾದವೂ ಇದೇ ನೆಲೆಯದು. ವಿನಾಯಕರ ಭಾರತ ಸಿಂಧುರಶ್ಮಿಯಲ್ಲಿ ವಿಶ್ವಾಮಿತ್ರರೆದುರು ಪರಶುರಾಮ ತನ್ನ ಸ್ವಭಾವದೋಷ ಒಪ್ಪಿಕೊಳ್ಳುತ್ತಾನೆ – "ಅಂಕಿತದೊಳಿಲ್ಲ ಹಲವಾರು ಮರ್ತ್ಯಾಂಶಗಳು:/ ಪ್ರಶಂಸೆಯ

ಪ್ರೀತಿ, ಮುಂಗೋಪ, ಹಿತ್ತಾಳೆ ಕಿವಿ" (ಸಂಪುಟ ೨, ಪುಟ ೭೧೩). ಈ ಲೇಖನದ ಚಿಂತನೆ ಮಾಡುತ್ತಿರುವಾಗ ನಾನೊಂದು ಚುಟುಕ ಬರೆದೆ.

**ಪರಶುರಾಮನ ಶಪಥ ಕ್ಷತ್ರಿಯರ ಕುಲನಾಶ**
**ಜನಕ ದಶರಥರೆಂತೊ ಉಳಿದರಲ್ಲ।**
**ಇನ್ನೊಂದು ಶಪಥ ಕ್ಷತ್ರಿಯಗೆ ಕಲಿಸುವುದಿಲ್ಲ**
**ಭೀಷ್ಮನಿವನಿಂದಲೇ ಕಲಿತನಲ್ಲ॥**

ಈ ಚುಟುಕ ಮೂಡಿದ್ದು ನನ್ನ ಸ್ಪಷ್ಟತೆಗೇ ಹೊರತು ಯಾರದೋ ಕಾಮಾಲೆ ರೋಗಕ್ಕೆ ಔಷಧಿಯಾಗಿ ಅಲ್ಲ.

ಆಫ್ರಿಕಾ ಬಗ್ಗೆ ಜೊಸೆಫ್ ಕಾನ್ರಾಡನ ಕತ್ತಲೆಯ ಹೃದಯ (Heart of Darkness, 1899) ಕಾದಂಬರಿ ಯುರೋಪಿಯನ್ನರ 'ಹೃದಯದ ಕತ್ತಲೆ' ಎಂದು ವಾದಿಸುವ ಆಫ್ರಿಕಾದ ಲೇಖಕ ಚಿನುವಾ ಅಛಬೆ ಆ ಕಾದಂಬರಿಯಲ್ಲಿ ಜನಾಂಗವಾದದ ಕುರುಹುಗಳನ್ನು ಎಳೆ ಎಳೆಯಾಗಿ ಬಿಡಿಸುತ್ತಾನೆ. ಅವನ ಲೇಖನದ (೧೯೭೭) ಕೊನೆಯಲ್ಲಿ ಒಂದು ವಾಕ್ಯ ಬರುತ್ತದೆ: "ಕಾನ್ರಾಡ್ ಸಾಮ್ರಾಜ್ಯವಾದೀ ಶೋಷಣೆಯ ಕೇಡನ್ನು ಕಂಡನು, ಖಂಡಿಸಿದನು, ಆದರೆ ಅದು ತನ್ನ ಕಬ್ಬಿಣದ ಹಲ್ಲುಗಳನ್ನು ಮಸೆದುಕೊಂಡ ಜನಾಂಗವಾದದ ಬಗ್ಗೆ ಅವನಿಗೆ ಗೊತ್ತಿಲ್ಲದಿರುವುದು ವಿಚಿತ್ರವಾಗಿದೆ." ಅರ್ಧವಾಕ್ಯದಲ್ಲಿ ಸಾಧನೆ ಗುರುತಿಸಿ, ಇನ್ನರ್ಧದಲ್ಲಿ ಇತಿಮಿತಿ ತೋರಿದ ಅಛಬೆ ನನಗೆ ಒಪ್ಪಿಗೆ. ತ್ರಿಮೂರ್ತಿಗಳನ್ನಾಗಲೀ, ಅವತಾರಗಳನ್ನಾಗಲೀ ಒಪ್ಪದ ಬುದ್ಧನ ಹೃದಯ ಅಮಾಯಕರಿಗೆ ಕರುಣೆ ಹರಿಸುವಾಗ ಬ್ರಾಹ್ಮಣ ಅಬ್ರಾಹ್ಮಣ ಭೇದ ನೋಡುವುದಿಲ್ಲ ಎಂಬ ನಂಬಿಕೆ ನನಗಿದೆ. ಹೃದಯಕ್ಕೆ ಹೃದಯವೇ ಸಾಕ್ಷಿ, ಬೇರೆ ಇಲ್ಲ ಪ್ರಾಕ್ಸಿ (proxy). ವಾರಾನ್ನದ ವಿದ್ಯಾರ್ಥಿಯಾಗಿ, ಗುಮಾಸ್ತರಾಗಿ, ಚಾಕರಿ – ನೌಕರಿಗಳಲ್ಲಿ, ಸಂಸಾರಿಕೆಯ ತಪಸ್ಸಿನಲ್ಲಿ ಶ್ರೀಧರರು ಎಲ್ಲೋ ಅನುಭವಿಸಿದ ಅವಮಾನ, ನಂಬಿಕೆ ದ್ರೋಹಗಳು ಛಲ, ನಿಷ್ಠುರತೆಯಾಗಿ ರೂಪುಗೊಂಡಿವೆ ಎಂದು ನನ್ನ ಅನಿಸಿಕೆ.

ಶ್ರೀಧರರ ಸ್ವಭಾವ, ಸಂಬಂಧಗಳನ್ನು ಎತ್ತಿ ತೋರುವ ಒಂದೆರಡು ನಿದರ್ಶನಗಳನ್ನು ನೀಡಬಹುದು. ಬೇಂದ್ರೆಯವರ ಕನ್ನಡ ಮೇಘದೂತದ ಮೊದಲನೇ ಪದ್ಯದಲ್ಲಿ 'ಶಪಿತ ವರುಷವನು' ಎಂಬ ಪದಪ್ರಯೋಗವಿದ್ದು 'ಶಪಿತ' ಎಂಬುದು ಅಪಾಣಿನೀಯ, 'ಶಪ್ತ' ಎಂದಾಗಬೇಕು ಎಂದು ಹೇಳಿದರಂತೆ. ಶಿವರಾಮ ಕಾರಂತರ ಕಾದಂಬರಿಯೊಂದರಲ್ಲಿ 'ಏನಕೇನ ಪ್ರಕಾರೇಣ' ಎಂಬ ಪದವಿದ್ದು 'ಏನಕೇನ' ತಪ್ಪು, 'ಯೇನ ಕೇನ' ಎಂದಾಗಬೇಕು ಎಂದರಂತೆ. ಆ ಹಿರಿಯರಿಬ್ಬರೂ 'ಬಾಲಾದಪಿ ಸುಭಾಷಿತಂ' ಎಂದು ಶ್ರೀಧರರನ್ನು ಒಪ್ಪಿಕೊಂಡರಂತೆ. ಇವರ ಧೈರ್ಯ, ಅವರ ಔದಾರ್ಯ ಎರಡೂ ಮೆಚ್ಚಬೇಕಾದ್ದೇ. ಈ ಘಟನೆಗಳಿಂದ ಅವರ ಸಂಬಂಧಗಳು ಹಾಳಾಗಲಿಲ್ಲ ಎಂಬುದು ಮುಖ್ಯ. ಲಿಪಿದೋಷ, ವ್ಯಾಕರಣ ದೋಷಗಳೇನೂ ನೈತಿಕ ಪತನವಲ್ಲ.

ಶ್ರೀಧರರ ಹಸ್ತಪ್ರತಿ ರೂಪದಲ್ಲಿದ್ದ ಓಂ ಸಾಧು ಅವರ ರಮಣಮಾರ್ಗ ಮತ್ತು ಅರವಿಂದರ ವೇದರಹಸ್ಯ ಕನ್ನಡ ಭಾಷಾಂತರಗಳು ಈ ಸಮಗ್ರ ಸಾಹಿತ್ಯ ಸಂಪುಟದಲ್ಲಿ ಪ್ರಥಮ ಬಾರಿಗೆ ಪ್ರಕಟವಾಗುತ್ತಿರುವುದು ಸಂತೋಷದ ಸಂಗತಿ. ಶ್ರೀಧರರು ಹೇಳಿರುವಂತೆ "ಶಂಕರಾರ್ಥ ವಿವರಣೆ ರಮಣರಿಂದಾಗಿದೆ; ರಮಣಾರ್ಥ ವಿವರಣೆ ಅರವಿಂದರಿಂದಾಗಿದೆ. ಅರವಿಂದಾರ್ಥ ವಿವರಣೆಯು ಶಾಸ್ತ್ರೇತರ ಮಾರ್ಗದ ಮೂಲಕ ಬೇಂದ್ರೆಯವರಿಂದಾಗಿದೆ." ವೇದಗಳಿಗೆ ಸಾಯಣರ ಯಾಜ್ಞಿಕ ಅರ್ಥ ಮತ್ತು ಪಾಶ್ಚಾತ್ಯರ ಸಾಮಾಜಿಕ ಅರ್ಥ ತನಗೆ ಗ್ರಾಹ್ಯವಿಲ್ಲ, ಅರವಿಂದರ ಸಾಂಕೇತಿಕ ಅರ್ಥವೇ ಸಮ್ಮತ ಎನ್ನುತ್ತಿದ್ದರವರು. ಅದ್ವೈತಿಗಳು ಭೋಳೆ ಸ್ವಭಾವದವರು, ಸುಲಭವಾಗಿ ಮೋಸ ಹೋಗುತ್ತಾರೆ ಎನ್ನುವ ವ್ಯಾವಹಾರಿಕ ಜಾಣ ಸಾಹಿತಿಗಳಿದ್ದಾರೆ. ರಶಿಯಾದ ಕವಿ ಪುಷ್ಕಿನ್ ಹೇಳಿದಂತೆ ಪೆದ್ದು ಹುಡುಗಿಯೊಬ್ಬಳು ತನ್ನ ಭೋಳೇತನದಿಂದಾಗಿ ಪ್ರಿಯಕರನನ್ನು ಕಳೆದುಕೊಂಡರೆ ಅದು ಹಾಡಾಗಬಲ್ಲದು, ಲೋಭಿಯಾದ ಜಿಪುಣ ಅತ್ಯಾಸೆಯಿಂದ ಹಣ ಕಳೆದುಕೊಂಡರೆ ಅದು ಕೇವಲ ವಿಡಂಬನೆಗೆ ವಸ್ತುವಾಗಬಲ್ಲದು. ಕಳೆದ ಶತಮಾನದ ಕೊನೆಯಲ್ಲಿ ಗಣಪತಿ ಹಾಲು ಕುಡಿದ ಪವಾಡ (?) ಘಟಿಸಿದಾಗ

ಸಂಭ್ರಮ ಪಟ್ಟವರಲ್ಲಿ ಮುಗ್ಧ ಭಕ್ತಿಯವರು ಮಾತ್ರವಲ್ಲ, ಭಾರತದ ಮಾಧ್ಯಮದವರು, ವಿಜ್ಞಾನ–ತಂತ್ರಜ್ಞಾನದವರೂ ಪಾಲ್ಗೊಂಡಿರಲೇ ಬೇಕು. ಅವರ ಕೈವಾಡ (!) ವಿಲ್ಲದೇ ಅದು ಜಾಗತಿಕ ಮಟ್ಟದಲ್ಲಿ ಹರಡುವುದು ಸಾಧ್ಯವೇ ಇಲ್ಲ. ಗಣಪತಿಯ ಜೊತೆ ನಾನಂತೂ ಹಾಲು ಕುಡಿದಿದ್ದೇನೆ. ಕವಿ ಬೇಂದ್ರೆ ಹೇಳಿರುವಂತೆ ತಾಯಿಯ ಹಾಲನ್ನು ಎಂಜಲು ಮಾಡುವ ಮಗ ಇನ್ನೂವರೆಗೆ ಹುಟ್ಟಿ ಬಂದಿಲ್ಲ; ಅಕಸ್ಮಾತ್ ಯಾರಿಗಾದರೂ ಹಾಗೆ ಅನಿಸಿದರೆ ಅವರ ಕಣ್ಣಿನಲ್ಲೇ ದೋಷವಿರಬೇಕು.

ಜೀವನದ ನಾಟ್ಯಶಾಲೆಯಲ್ಲಿ ಶ್ರೀಧರರು ಪಾಲ್ಗೊಂಡ ವಾರಾನ್ನದೂಟ, ಗುಮಾಸ್ತಗಿರಿ, ಪತ್ರಿಕಾವೃತ್ತಿ, ಆಡಳಿತ ನಿರ್ವಹಣೆ, ಶಾಸ್ತ್ರ ಸಾಹಿತ್ಯ ರಚನೆ, ಇತಿಹಾಸ ಸಂಶೋಧನೆ–ಈ ಯಾವುದರ ನೇರ ಕ್ಷೇತ್ರಾನುಭವವೂ ನನಗಿಲ್ಲ. ಅವರನ್ನು ಆತ್ಮಿಕವಾಗಿ ಹಚ್ಚಿಕೊಂಡವನೆಂಬ ಕಾರಣಕ್ಕಾಗಿ ನನ್ನಿಂದ ಈ ಲೇಖನ ಬರೆಸಿದ್ದಾರೆ. ಇದು ಪಾಮರರಿಗೆ ಅಜೀರ್ಣವೂ, ಪಂಡಿತರಿಗೆ ಅಪಥ್ಯವೂ ಆಗದೇ ಶ್ರೀಧರ ಸಾಹಿತ್ಯದ ಅನುಸಂಧಾನಕ್ಕೆ ಪೀಠಿಕೆಯಾಗಲಿ ಎಂದು ಆಶಿಸುತ್ತೇನೆ. ಒಳಗೆ ಬನ್ನಿ.

**ಎಚ್.ಆರ್. ಅಮರನಾಥ**
ಇಂಗ್ಲೀಷ್ ಸಹ ಪ್ರಾಧ್ಯಾಪಕ
ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು
ಸಾಗರ (ಶಿವಮೊಗ್ಗ ಜಿಲ್ಲೆ) ೫೭೭೪೦೧

# ಹರಕೆ

**ಡಿ.ವೀರೇಂದ್ರ ಹೆಗ್ಗಡೆಯವರು**

ಶ್ರೀ ಧರ್ಮಸ್ಥಳ – ೫೭೪೨೧೬
ದಕ್ಷಿಣ ಕನ್ನಡ, ಕರ್ನಾಟಕ
ಕಛೇರಿ : (೦೮೨೫೬) ೨೭೭೧೨೧
ಫ್ಯಾಕ್ಸ್ : ೨೭೭೧೧೬
ತಾ. ૩.೫.೨೦೧೨

ಶ್ರೀಮತಿ ರಾಜೇಶ್ವರಿ ಲೊಕಾರೆಯವರಿಗೆ,

ಖ್ಯಾತ ಸಾಹಿತಿಗಳೂ, ವಿಮರ್ಶಕರೂ ಆಗಿದ್ದ ಬಿ.ಎಚ್.ಶ್ರೀಧರರ ಸಮಗ್ರ ಕೃತಿಗಳ ಪುನರ್ ಮುದ್ರಣ ಮಾಡುವ ವಿಚಾರ ತಿಳಿದು ಸಂತೋಷವಾಯಿತು.

ತನ್ನ ವಿಭಿನ್ನ ಚಿಂತನಾ ಶೈಲಿಯಿಂದ ಅವರು ಕನ್ನಡ ನಾಡು–ನುಡಿಗೆ ಅನುಪಮ ಸೇವೆ ಸಲ್ಲಿಸಿದ್ದಾರೆ. ಅವರ ಕೃತಿಗಳ ಪುನರ್ ಮುದ್ರಣ ಮಾಡುತ್ತಿರುವುದು ಅವರಿಗೆ ನೀಡುವ ಗೌರವವಾಗಿದೆ.

ನೀವು ಹಮ್ಮಿಕೊಂಡ ಕಾರ್ಯ ಯಶಸ್ವಿಯಾಗುವಂತೆ ಶ್ರೀ ಮಂಜುನಾಥ ಸ್ವಾಮಿ ಹರಸಲೆಂದು ಪ್ರಾರ್ಥಿಸುತ್ತೇನೆ.

ಇತಿ,

(ಡಿ.ವೀರೇಂದ್ರ ಹೆಗ್ಗಡೆಯವರು)

# ಹಾರೈಕೆ

## ಜಿ. ವೆಂಕಟಸುಬ್ಬಯ್ಯ

ಶ್ರೀಮತಿ ರಾಜೇಶ್ವರಿಯವರೇ,

ನಿಮ್ಮ ತಂದೆಯವರನ್ನು ನಾನು ಚೆನ್ನಾಗಿ ಬಲ್ಲೆ. ನಾನು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಅತ್ಯಂತ ಕಿರಿಯ ಉಪನ್ಯಾಸಕನಾಗಿದ್ದಾಗ ಶ್ರೀ ಬಿ.ಎಚ್.ಶ್ರೀಧರ ಅವರು ಸಂಸ್ಕೃತ ವಿಭಾಗದಲ್ಲಿ ಐ.ಜೆ.ವಿದ್ಯಾರ್ಥಿಯಾಗಿದ್ದರು. ನಾವು ಆಗಾಗ ಸಂಧಿಸುತ್ತಿದ್ದೆವು. ೧೯೪೨ರಲ್ಲಿ ಪಂಪಮಹಾಕವಿಯ ಸಹಸ್ರಮಾನೋತ್ಸವವನ್ನು ನಾವೆಲ್ಲ ನೆರವೇರಿಸಿದಾಗ ಶ್ರೀ ಶ್ರೀಧರ ಅವರು ಪಂಪನ ಮೇಲೆ ಸಂಸ್ಕೃತ ಭಾಷೆಯಲ್ಲಿ ಹೊಗಳಿಕೆಯ ಸ್ತುತಿ ರಚಿಸಿ ಎಲ್ಲ ವಿದ್ವಾಂಸರ ಮನಸ್ಸನ್ನು ಗೆದ್ದರು. ಆ ಕಾಲದಲ್ಲಿಯೇ ಅವರು ಆಗಾಗ ಲೇಖನಗಳನ್ನು ರಚಿಸುತ್ತಿದ್ದರು. ನೇರವಾದ ಮಾತಿನ, ಗಟ್ಟಿ ನಿಲುವಿನ, ದೃಢವಿಶ್ವಾಸದ ವ್ಯಕ್ತಿಯಾಗಿದ್ದರು ಅವರು. ಅವರು ಉ.ಕನ್ನಡದಲ್ಲಿ ಸಂಸ್ಕೃತ ಉಪಾಧ್ಯಾಯರಾಗಿ ನಿಂತಮೇಲೆ, ಸಿದ್ಧಾಪುರದಲ್ಲಿ ಪ್ರಾಂಶುಪಾಲರಾಗಿದ್ದ ಕಾಲದಲ್ಲಿ ನಮ್ಮಿಬ್ಬರಿಗೂ ಸ್ವಲ್ಪ ಕಾಲ ಪತ್ರ ವ್ಯವಹಾರವಿತ್ತು. ಆ ಬಳಿಕ ನಾವಿಬ್ಬರೂ ವೃತ್ತಿಯ ಗೊಂದಲದಲ್ಲಿ ಮುಳುಗಿಬಿಟ್ಟಿತ್ತು. ಅವರು ರಚಿಸಿದ ಕೆಲವು ಪುಸ್ತಕಗಳು ಈಗಲೂ ನನ್ನ ಬಂಡಾರದಲ್ಲಿ ಮುಳುಗಿರುತ್ತವೆ. ಹುಡುಕಿದರೆ ಸಿಗುತ್ತವೆ. ಈ ವಯಸ್ಸಿನಲ್ಲಿ ಆ ಕೆಲಸ ಕಷ್ಟ.

ಶ್ರೀಧರರ ಪುಸ್ತಕಗಳನ್ನು ಪುನರ್ಮುದ್ರಿಸುವ ಕೆಲಸ ಸ್ತುತ್ಯವಾದುದು. ಅವರ ಎಲ್ಲ ಪ್ರಕಾರದ ಕೃತಿಗಳನ್ನು ಸಮಗ್ರವಾಗಿ ಒಂದೊಂದು ಸಂಪುಟವಾಗಿ ಪ್ರಕಟಿಸಿದರೆ ಕನ್ನಡಕ್ಕೆ ಸಹಾಯವಾಗುತ್ತದೆ. ನಿಮ್ಮ ಕಾರ್ಯದಲ್ಲಿ ನಿಮಗೆ ಗೆಲುವು ದೊರಕಲಿ. ನನ್ನ ಶುಭಾಶಯಗಳು.

ಇಂತೀ ನಿಮ್ಮ

**ಜಿ.ವೆಂಕಟಸುಬ್ಬಯ್ಯ**

೯-೩-೧೨

# FOREWORD

I feel honoured that I am invited to write a few words way of a Foreword to the complete works or Professor B.H.Shridhar in six volumes edited with devotion Shrimati Sumitra Halawai, for the excellent reason that Professor B.H.Shridhar was a fascinating figure in the intellectual history of modern Karnataka in the last century. It is one of the regrets of my life that I did not have the opportunity or knowing him personally. I may have run into him either places my younger brother, Prof. K.V.Rao, was his junior colleague in colleges there. But I have no recollection of any such meeting. I see that destiny has forged four connections with him. First he was an independent thinker who refused to be anybody's man. I think I am somewhat like him in this regard. Then, he was devoted to Bendre and I am an equally ardent devotee of Bendre. He was a dedicated teacher whom his students worshipped. I may also claim immodestly that I am a committed teacher, committed to my work and my students. Lastly he has one more interesting link with me. I am not potentially a promising candidate for awards, and the first award I received in my life was given in his name in 2000 for my service to Kannadamma through the mediation of Englishamma! I later learnt that it was given to distinguished writers, and I was happy to be in good company.

Prof. Shridhar was a prolific writer who contributed to a variety of literary fields - creative poetry, drama, fiction, discursive writings, works of impeccable scholarship and lively translations from Sanskrit and English into Kannada. A brief Foreword is no place to engage in a serious discussion of his writings. Instead, I shall focus on one of his central ideas with which I wholly agree. This is the idea that Indian cultural

categories do not mix mechanically with Western categories. This is not to say that the West can have no entry into our cultural universe but that it can enter it only on our terms after being refracted through Indian cultural glass. This was the position of Gandhi and Bendre, perhaps not of Tagore, and I am one with him on this basic idea. It is to the great man's credit that he did not dilute his cultural identity. Instead he fashoined creatively an Indian version of modernity, contrasting sharply with imitative modernity. Shrimati Halawai has done a signal service to the cause of our culture by editing competently Prof Shridhar's corpus. We should all be greateful to her. I am sure these volumes will make a profound impact on our cultural and intellectual life.

Dharwad **K.Raghavendra Rao**

# ಮೂರನೆಯ ಸಂಪುಟದ ಕುರಿತು...

ಕವಿ, ವಿಮರ್ಶಕ ಬಿ.ಎಚ್. ಶ್ರೀಧರರ ಕವನ ಸಂಕಲನಗಳು ಮತ್ತು ವಿಮರ್ಶಾಕೃತಿಗಳ ಸಂಕಲನಗಳನ್ನು 'ಕಾವ್ಯ', 'ವಿಮರ್ಶೆ' ಎಂಬ ಮೊದಲೆರಡು ಸಂಪುಟಗಳಲ್ಲಿ ಹೊರತಂದ ಬಳಿಕ ಬಿ.ಎಚ್. ಶ್ರೀಧರ ಸಮಗ್ರ ಸಾಹಿತ್ಯದ ಸರಣಿಯಲ್ಲಿ 'ವಿಚಾರ' ಎಂಬ ಈ ಮೂರನೆಯ ಸಂಪುಟದಲ್ಲಿ – ಜ್ಞಾನಸೂತ್ರ. ರಾಷ್ಟ್ರಸೂತ್ರ, ವಿಚಾರವಿಜಯ, ವಿದೇಶದ ತಿಳಿವಳಿಕೆಗಳು, ಭಾರತೀಯ ನಾಗರಿಕತೆಗೆ ಮನುವಿನ ಕೊಡುಗೆ, ಸಂಸ್ಕೃತ ಕನ್ನಡಗಳ ಬಾಂಧವ್ಯ, ಭಾವನಾಸಮನ್ವಯ, ಮಾನಸದರ್ಪಣ ಮತ್ತು ಭಾರತೀಯ ಮೂರ್ತಿಶಿಲ್ಪ ಎಂಬ ಒಂಬತ್ತು ವೈಚಾರಿಕ ಕೃತಿಗಳನ್ನು ಸಂಕಲಿಸಿದ್ದೇವೆ.

ಶ್ರೀಧರರ ಏಕಮೇವ ಕಾಳಜಿ ಸಮಷ್ಟಿಕಲ್ಯಾಣದ ಕುರಿತಾದುದರಿಂದ ಮತ್ತು ಸಮಾಜದ ಕೊರತೆಗಳು ಅವರನ್ನು ತೀವ್ರವಾಗಿ ನೋಯಿಸಿದ್ದರಿಂದ ("ಅಯ್ಯಯ್ಯೋ ನಾನು ನರನಾದೆನೇಕೆ ಹರನಾಗಲಿಲ್ಲವೇಕೆ? ಶರ–ಶಾಪಶಕ್ತಿಗಳನೆಲ್ಲ ಬಿಟ್ಟು ನಾಬರಿದೆ ಬಂದೆನೇಕೆ?) ಅವುಗಳಿಗೆ ಪರಿಹಾರವನ್ನು ಹುಡುಕುತ್ತ ಹೊರಟ ಹಾದಿಯಲ್ಲಿ ತತ್ಸಂಬಂಧಿತವಾದ ಎಲ್ಲ ಸಂಗತಿಗಳನ್ನೂ ಅವರು ಆಳವಾಗಿ ಶೋಧಿಸಿದ್ದಾರೆ. ಹಾಗೆ ಶೋಧಿಸುವಾಗ ಕಂಡ ತಥ್ಯಗಳನ್ನು ತಾರ್ಕಿಕವಾಗಿ ತೂಗಿನೋಡಿ ಸಮಾಜದ ಒಳಿತಿಗೆ ಅತ್ಯಗತ್ಯವಾದ ಅಂಶಗಳನ್ನು ತಮ್ಮ ವಿಚಾರಗಳಲ್ಲಿ ಪ್ರಸ್ತುತಪಡಿಸಿದ್ದಾರೆ. ಪಾಶ್ಚಿಮಾತ್ಯ, ಪೌರಾತ್ಯ ವಿಚಾರಧಾರೆಗಳನ್ನು, ಸಿದ್ಧಾಂತಗಳನ್ನು, ತುಲನೆ ಮಾಡಿಡಿ ನಮ್ಮ ಭಾರತೀಯತೆಗೆ ಹೊಂದದ ಆಚಾರ, ವಿಚಾರಗಳ ಅಂಧಾನುಕರಣೆ (ಆಂಗ್ಲಾಕ್ಷತೆ!) ಸೂಕ್ತವಲ್ಲವಷ್ಟೇ ಅಲ್ಲ, ವಿನಾಶಕಾರಿ ಕೂಡ ಎಂದು ಎಚ್ಚರಿಸುತ್ತಾರೆ. ಹಾಗೆಯೇ ದೇಶೀಯ ಅಂಧಾಚಾರನಿಷ್ಠೆ ಕೂಡ ಅಷ್ಟೇ ಅಪಾಯಕಾರಿ ಎಂದೂ ನೆನಪಿಸುತ್ತಾರೆ. ಅಲ್ಲಿಗೆ, ಅನಪೇಕ್ಷಿತ ಆಚಾರ–ವಿಚಾರಗಳನ್ನು ಕಳಚಿಕೊಂಡು ಪರಿಷ್ಕೃತವಾದ ಶುದ್ಧ ಭಾರತೀಯತೆಯೇ ಶ್ರೀಧರರ ಆದರ್ಶ ಮತ್ತು ಅದೇ ಎಲ್ಲ ಕೊರತೆಗಳಿಗೂ ಮದ್ದು. ಇದನ್ನವರು ಶುದ್ಧತರ್ಕದ, ನೀತಿಯ ತಳಹದಿಯ ಮೇಲೆ ಪ್ರತಿಷ್ಠಾಪಿಸುತ್ತಾರೆ. 'ಧರ್ಮಾದರ್ಥಶ್ಚಕಾಮಶ್ಚ' ಎಂಬ ವ್ಯಾಸೋಕ್ತಿ ಶ್ರೀಧರರ ಪ್ರಕಾರ ಎಲ್ಲ ಕಾಲಕ್ಕೂ ಸಲ್ಲುವ ತಾರ್ಕಿಕ ಅನಿವಾರ್ಯ. ಇಂದಿನ ಈ ಸ್ಥಿತ್ಯಂತರದಲ್ಲೂ, ಸ್ವಕೇಂದ್ರಿತ ಚಿಂತನೆಯ ಜಾಡು ಹಿಡಿದ ಮನಸ್ಸುಗಳಿಗೂ ಇದೇ ಅಂತಿಮವಾದ ಅನಿವಾರ್ಯ ವಿಕಲ್ಪವಾಗಬಹುದೇನೋ...! ಅದೇನೇ ಇರಲಿ, ಓದುಗರ ಮನದಲ್ಲಿ ಒಂದು ಮರು–ಜಾಗರ ಮೂಡಿದರೂ, ಸಮತೋಲನ ದೃಷ್ಟಿ ತುಸು ತೆರೆದರೂ, ಶ್ರೀಧರರ ಚಿಂತನೆಗೆ ಸಾಫಲ್ಯ ದೊರೆತಂತೆ! ಡಾ. ಎಮ್.ಜಿ. ಹೆಗಡೆಯವರು 'ಶ್ರೀಧರ ಚಿಂತನೆ'ಯಲ್ಲಿ ನುಡಿದಂತೆ – "ಈಗ ಐವತ್ತು ವರ್ಷಗಳ ಈಚೆ ಕೂಡ ಶ್ರೀಧರರು ಎತ್ತಿರುವ ಪ್ರಶ್ನೆಗಳು ಬೇರೆ ಬೇರೆ

ಪರಿಭಾಷೆಗಳಲ್ಲಿ ಕೇಳುತ್ತಲೇ ಇವೆ." ಅವರು ಅಂದು ಕೊಟ್ಟ ಉತ್ತರವನ್ನು, ಪರಿಹಾರವನ್ನು, ಶ್ರೀಧರರ ಚಿಂತನೆಯನ್ನು, ಗಂಭೀರವಾಗಿ ಅಧ್ಯಯನ ಮಾಡಿ, ಅವಲೋಕಿಸಿ ನೋಡಬೇಕಿದೆ ಇಂದಿನ ಸಮಾಜದಲ್ಲಿ! ಸುವಿಚಾರಗಳ ಮರುಹುಟ್ಟು ಸಮಷ್ಟಿ ಕಲ್ಯಾಣಕ್ಕೆ ನಾಂದಿಯಾಗಬಹುದು.

ಶ್ರೀಧರರ ಆಸಕ್ತಿಯ, ಅಧ್ಯಯನದ ವಿಸ್ತಾರ, ವೈವಿಧ್ಯ, ಹರಹು ಈ ಸಂಪುಟದಲ್ಲಿ ಓದುಗರಿಗೆ ವೇದ್ಯವಾಗುತ್ತದೆ. ಭಾಷೆ, ಮನಃಶಾಸ್ತ್ರ, ಶಿಲ್ಪಶಾಸ್ತ್ರ, ದರ್ಶನ, ಎಲ್ಲವೂ ಅವರ ಗಂಭೀರ ಸಂಶೋಧನೆಯ ಕ್ಷೇತ್ರಗಳು. ಅವರಿಗೆ ಆಸಕ್ತಿ ಇಲ್ಲದ ವಿಷಯಗಳೇ ಇರಲಿಲ್ಲವೆಂದರೆ ಅತಿಶಯೋಕ್ತಿ ಎನಿಸದು. ಹಾಗೆ ನೋಡಿದರೆ, ಅವರ ಅಪಾರ ಜ್ಞಾನಸಂಗ್ರಹದ ಎಲ್ಲೋ ಕೆಲವು ಭಾಗವಷ್ಟೇ ಪ್ರಕಾಶಗೊಂಡಿದೆ. ಶ್ರೀಧರ ವಿಚಾರ-ಧಾರೆಯ ವಾಚನ-ಮನನ ಸುಜ್ಞಾನ ಸಂಗ್ರಹದ ದಾಹಕ್ಕೆ ಪ್ರೇರಣೆಯಾಗಲೆಂಬುದೇ ಆಶಯ.

– ಸಂಪಾದಕರು

# ಶ್ರೀಧರರ ಚಿಂತನೆ

ಶ್ರೀಧರರ ವಿಚಾರಸಾಹಿತ್ಯದ ಹರಹು ದೊಡ್ಡದು. ಮನಃಶಾಸ್ತ್ರ, ತಂತ್ರಜ್ಞಾನ, ನೀತಿಶಾಸ್ತ್ರ, ಇತಿಹಾಸ, ರಾಜ್ಯಶಾಸ್ತ್ರ ಮೊದಲಾದ ವಿಭಿನ್ನ ಜ್ಞಾನಶಾಖೆಗಳಿಗೆ ಸೇರಿದ ಕೃತಿಗಳನ್ನು ಅವರು ರಚಿಸಿದ್ದಾರೆ. ಅವುಗಳಲ್ಲಿ ಕೆಲವು ಕೃತಿಗಳು ಹೊಸ ಜ್ಞಾನಶಾಖೆಯ ಅಥವಾ ವಿಚಾರ ಸರಣಿಯ ಪ್ರಾಥಮಿಕ ಪರಿಚಯವನ್ನು ಮಾಡಿಕೊಡಬೇಕೆಂಬ ಉದ್ದೇಶದಿಂದ ರಚಿತವಾಗಿದ್ದರೆ ಇನ್ನು ಕೆಲವು ಶ್ರೀಧರರ ಸಂಶೋಧನೆ ಹಾಗೂ ಚಿಂತನೆಯ ಫಲಶ್ರುತಿಗಳು. ಇವುಗಳಲ್ಲಿ ಬಹುತೇಕ ಕೃತಿಗಳನ್ನು ಅವರು ಕುಮುಟೆಯ ಕೆನರಾ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದ ಕಾಲದಲ್ಲಿ (೧೯೫೧–೧೯೬೨) ಬರೆದು ಪ್ರಕಟಿಸಿದರು. ಆಗ ಗೋಪಾಲಕೃಷ್ಣ ಅಡಿಗ, ಜಿ.ಎಸ್. ಅಮೂರ, ವಿ.ಜಿ. ಕುಲಕರ್ಣಿ, ಎಲ್.ಆರ್. ಹೆಗಡೆ, ಕೆ. ಕೃಷ್ಣಮೂರ್ತಿ, ಎಲ್.ಟಿ. ಶರ್ಮಾ ಮೊದಲಾದ ಧೀಮಂತರು ಅವರ ಸಹೋದ್ಯೋಗಿಗಳಾಗಿದ್ದರು. ಜಿಲ್ಲೆಯಲ್ಲಿ ಬೇರೆ ಕಾಲೇಜುಗಳೇ ಇರಲಿಲ್ಲವಾದ್ದರಿಂದ ಜಿಲ್ಲೆಯಾದ್ಯಂತ ಸಭೆ–ಸಮಾರಂಭಗಳಲ್ಲಿ ಅತಿಥಿಗಳಾಗಿಯೋ, ಉಪನ್ಯಾಸಕರಾಗಿಯೋ ಭಾಗವಹಿಸುವುದು ಕಾಲೇಜಿನ ಈ ಅಧ್ಯಾಪಕರಿಗೆ ಕರ್ತವ್ಯವೇ ಆಗಿತ್ತು ಎಂದು ಅಮೂರರು ಹೇಳುತ್ತಾರೆ. ದಣಿವಿಲ್ಲದೆ ನಿರರ್ಗಳವಾಗಿ ಘಂಟೆಗಟ್ಟಲೆ ಮಾತನಾಡುತ್ತಿದ್ದ ಶ್ರೀಧರರು ಆಗ ಬಹುಬೇಡಿಕೆಯ ಉಪನ್ಯಾಸಕರಾಗಿದ್ದರು. ಯಾವ ಮೂಲಭೂತ ಸೌಕರ್ಯಗಳೂ ಇಲ್ಲದ ಅರಣ್ಯಜಿಲ್ಲೆಯ ಮೂಲೆ ಮೂಲೆಯನ್ನೂ ಅವರು ಹಾಗೆ ತಲುಪಿದರು. ಅನಕ್ಷರಸ್ಥರೇ ಹೆಚ್ಚಾಗಿರುತಿದ್ದ ಸಭೆಗಳಲ್ಲೂ ಶ್ರೀಧರರು ಘಂಟೆಗಟ್ಟಲೆ ಹೊಸ ವಿಚಾರಗಳನ್ನೂ, ಹೊಸ ಸಾಹಿತ್ಯವನ್ನೂ ಪರಿಚಯಿಸಿ ಸ್ವಾರಸ್ಯಕರವಾಗಿ ಮಾತನಾಡುತ್ತಿದ್ದರೆಂದು ಅಮೂರರು ನೆನಪಿಸಿಕೊಳ್ಳುತ್ತಾರೆ. ಸಂಸ್ಕಾರ ನೀಡುವುದರಲ್ಲಿ ಅಪ್ರತಿಮ ತತ್ಪರತೆ ಹೇಗೆ ಶ್ರೀಧರರ ಗುಣವೇ ಆಗಿತ್ತೆಂದು ಗೌರೀಶ ಕಾಯ್ಕಿಣಿಯವರು ಬರೆದಿದ್ದಾರೆ. ಜನಶಿಕ್ಷಣದ ಈ ಹವ್ಯಾಸವೇ ಶ್ರೀಧರರ ಗದ್ಯಬರಹ ಹಾಗೂ ಪತ್ರಿಕೋದ್ಯಮದ ಪ್ರಧಾನ ಪ್ರೇರಣೆಯಾಗಿದೆ. 'ಸಮಾಜಶಿಕ್ಷಣ ಪ್ರಯತ್ನಕ್ಕೆ ನನ್ನ ಅಲ್ಪಕಾಣಿಕೆ ಇದು' ಎಂದೇ ಅವರು ತಮ್ಮ ಕೆಲವು ಕೃತಿಗಳನ್ನು ಪರಿಚಯಿಸಿದ್ದಿದೆ.

ಶ್ರೀಧರರ ವಿಚಾರಸಾಹಿತ್ಯದ ಕೃತಿಗಳಲ್ಲಿ ಮತ್ತೆ ಮತ್ತೆ ಮಾತು ಪಡೆಯುವ ಎರಡು ಅಂತರಗಳೆಂದರೆ ನಮ್ಮ ರಾಜಕೀಯ ಸೋಲು ಹಾಗೂ ವೈಚಾರಿಕ ಅವಲಂಬನೆ. 'ಜ್ಞಾನಸೂತ್ರ', 'ವಿಚಾರವಿಜಯ', 'ರಾಷ್ಟ್ರಸೂತ್ರ'ಗಳಲ್ಲಿ ಮತದಾರರ ಅಪ್ರಬುದ್ಧತೆ ಹಾಗೂ ಪ್ರಜಾಪ್ರತಿನಿಧಿಗಳ ಅಪ್ರಶಿಕ್ಷಣ ಇವು ನಮ್ಮ ರಾಜಕೀಯ ಸೋಲಿಗೆ ಕಾರಣವೆಂದು ಅವರು ವಾದಿಸುತ್ತಾರೆ. ವ್ಯಕ್ತಿತ್ವ, ಚಾರಿತ್ರ್ಯ, ಬುದ್ಧಿಮತ್ತೆಗಳಲ್ಲಿ ಶ್ರೇಷ್ಠರಾದವರನ್ನು ಆಯ್ಕೆ

ಮಾಡಲು ಬೇಕಾದ ಪ್ರಬುದ್ಧತೆ ಮತದಾರರಿಗಿಲ್ಲ; ಅವರು ಚುನಾಯಿಸುವ ಪ್ರತಿನಿಧಿಗಳಿಗೂ ಆಡಳಿತ ನಡೆಸಲು ಬೇಕಾದ ಕೌಶಲ್ಯವಾಗಲಿ, ತಿಳಿವಳಿಕೆಯಾಗಲಿ ಇಲ್ಲ. ಹೀಗಾಗಿ ಬ್ರಿಟಿಷರ ರಾಜ್ಯವ್ಯವಹಾರ ನೀತಿಗಳ ಹೊರಮೈ ಸ್ವರೂಪವನ್ನಷ್ಟೇ ಅಂಧಶ್ರದ್ಧೆಯಿಂದ ಅನುಕರಿಸುವಂತಾಗಿದೆ. ಈ ರಾಜಪ್ರಮಾದವು ಪ್ರಜಾಪ್ರಭುತ್ವದ ಅಯಶಸ್ಸಿಗೂ ಇನ್ನಿತರ ಪ್ರಮಾದಗಳಿಗೂ ಕಾರಣವಾಗಿದೆ ಎಂದು ಶ್ರೀಧರರ ನಿಲುವು.

ನಮ್ಮ ವೈಚಾರಿಕ ಸೋಲಿನ ಮೂಲವನ್ನು ಅವರು ಬ್ರಿಟಿಷ್ ಆಳ್ವಿಕೆಯಲ್ಲಾದ 'ಪರಂಪರಾ ವಿಚ್ಛೇದನ'ದಲ್ಲಿ ಗುರುತಿಸುತ್ತಾರೆ. ನಮ್ಮ ಪರಂಪರೆಯ ಯಥಾರ್ಥವಾದ ಅರಿವು ನಮಗಿಲ್ಲದೇ ಇರುವುದರಿಂದ ನಮ್ಮ ಪರಂಪರೆಗೆ ಹೊಂದುವ ಆಧುನಿಕತೆಯ ಮಾದರಿಯನ್ನು ರೂಪಿಸಿಕೊಳ್ಳಲು ಸಾಧ್ಯವಾಗದೆ ನಾವು ಪಾಶ್ಚಿಮಾತ್ಯ ಅಂಧಾನುಕರಣದಲ್ಲೇ ತೃಪ್ತಿಪಡುವಂತಾಗಿದೆ ಎಂಬುದು ಶ್ರೀಧರರ ಆತಂಕ:

'ತತ್ವಶಾಸ್ತ್ರ, ತರ್ಕಶಾಸ್ತ್ರ, ಸಮಾಜಶಾಸ್ತ್ರ ಇತ್ಯಾದಿ ಶಾಸ್ತ್ರಗಳಿಗೆ ನಮ್ಮದೇ ಸಿದ್ಧಾಂತಗಳ ಅರಿವಿಲ್ಲ... ಭಾರತೀಯರನ್ನು ದೇಶೀಯ ಸಾಂಸ್ಕೃತಿಕ ಬೇರುಗಳಿಂದ ಬಿಂಗಡಿಸಿ ತಬ್ಬಲಿಯನ್ನಾಗಿ ಮಾಡಲಾಗುತ್ತಿದೆ. ಸಾಂಸ್ಕೃತಿಕ ಹನನವು ರಾಷ್ಟ್ರೀಯತೆಯೆಂಬ ಆತ್ಮದ ಕೊಲೆ. ಅರಾಷ್ಟ್ರೀಯಕತೆಯು ಅರಾಜಕತೆ, ಅಕ್ಷೇಮ, ಶೋಷಣ, ಅಶಾಂತಿಗಳ ಬೀಜ.'

ಈ ಹಿನ್ನೆಲೆಯಲ್ಲಿ ಭಾರತೀಯ ಹಾಗೂ ಪಾಶ್ಚಾತ್ಯ ವೈಚಾರಿಕ ಪರಂಪರೆಗಳ ಸ್ಥೂಲ ಪರಿಚಯವನ್ನು ಮಾಡಿಕೊಡುವುದರೊಂದಿಗೆ ಅವನ್ನು ತೌಲನಿಕವಾಗಿ ವಿಮರ್ಶಿಸುವುದು ಶ್ರೀಧರರ ವಿಚಾರಸಾಹಿತ್ಯದ ಮುಖ್ಯ ಉದ್ದೇಶ. ಐವತ್ತು ವರ್ಷಗಳ ಈಚೆ ನಿಂತು ನೋಡಿದಾಗ ಅವರ ಸಂಸ್ಕೃತಪರವಾದ ಹಾಗೂ ಗಣ್ಯಪರವಾದ ನಿಲುವು, ಶಾಸ್ತ್ರವಿಚಾರಗಳ ಮಂಡನೆಯಲ್ಲಿ ನುಸುಳಿರುವ ಸರಳೀಕರಣಗಳು, ಶಾಸ್ತ್ರಕ್ಕೆ ಪ್ರಶಸ್ತವಲ್ಲದ ವಾಗ್ವೈಖರಿ, ಇವು ಒಪ್ಪಿತವಾಗದಿರುವುದು ಸಾಧ್ಯ. ಹಲವೆಡೆ ವಿಚಾರ ವಿಜಯಕ್ಕಿಂತ ಭಾವೋದ್ವೇಗಗಳೇ ಗೆದ್ದಿವೆ ಎಂದೂ ಅನಿಸುವುದು ಸಾಧ್ಯ. ಆದರೆ 'ಸರ್ವ ಪ್ರಾಚೀನ ರೀತಿಗಳ ಪುನರುಪಕ್ರಮ'ಗಳನ್ನೂ, 'ಸರ್ವ ಪಾಶ್ಚಾತ್ಯ ರೀತಿಗಳನ್ನು ಅಚಿಕಿತ್ಸಕ ದೃಷ್ಟಿಯಿಂದ ಅಳವಡಿಸಿಕೊಳ್ಳುವ ಪ್ರಯತ್ನ'ಗಳನ್ನೂ ಅವರು ಖಂಡಿಸುತ್ತಾರೆನ್ನುವುದನ್ನೂ, 'ಸಮನ್ವಯ' ಕೂಡ ತಾತ್ತ್ವಿಕವಾಗಿ ಅಸಾಧ್ಯವೆಂಬ ಅವರ ಎಚ್ಚರಿಕೆಯನ್ನು ಗಮನಿಸಬೇಕು.

'ಭಾರತೀಯ ನಾಗರಿಕತೆಗೆ ಮನುವಿನ ಕೊಡುಗೆ' ಉಪನ್ಯಾಸದಲ್ಲಿ ವರ್ಣಾಶ್ರಮಧರ್ಮ ಹಾಗೂ ಸ್ತ್ರೀ-ಪುರುಷ ಧರ್ಮಗಳನ್ನು ತರ್ಕಿಸುವ ಭಾಗಗಳಲ್ಲಿ ಹಲವು ತೊಡಕುಗಳನ್ನು ಅವರು ಎದುರಿಸಿದ್ದಾರೆ. 'ಜ್ಞಾನಸೂತ್ರ'ದಲ್ಲಿ ಸಿ.ಇ.ಎಂ. ಜೋಡ್‌ನ Philosophical aspects of modern scienceಪುಸ್ತಕದ ಪ್ರತಿಯೊಂದು ಪ್ರಮೇಯವನ್ನು ಖಂಡಿಸುತ್ತ 'ಪರ್ಯಾಪ್ತವಾದ ಜಗತ್ಸತ್ಯ ವಿಜ್ಞಾನಕ್ಕೆ ನಿಶ್ಚಯಾತ್ಮಕವಾಗಿ ಗೊತ್ತಾಗಿದೆ ಎಂಬುದು ಅವೈಜ್ಞಾನಿಕ' ಎಂದು ಏರುದನಿಯಲ್ಲಿ ನುಡಿದಿದ್ದಾರೆ. ಒಮ್ಮೆ ಗಾಂಧೀಜಿಯವರ ವಿಚಾರಗಳಲ್ಲೂ, ಮತ್ತೊಮ್ಮೆ ಸಮಾಜವಾದದ ಸಿದ್ಧಾಂತಗಳಲ್ಲೂ ಅವರು ಒಲವನ್ನು ತೋರಿಸಿದ್ದಿದೆ. ಆದರೆ ಇವು ಯಾವುವೂ ಅವರಿಗೆ ಪರ್ಯಾಪ್ತವಾದ ಉತ್ತರವೆನಿಸಲಿಲ್ಲ. ಭಾವತೀವ್ರತೆಗೆ ಒಪ್ಪಿಸಿಕೊಂಡೂ ವಿಚಾರ ವಿಜಯಕ್ಕಾಗಿ ಹಂಬಲಿಸಿದ, ವಿಚಾರ

ಸಮನ್ವಯತೆಯ ಅಸಾಧ್ಯತೆಯ ಗಾಢ ಅರಿವಿನಲ್ಲೂ ಭಾವ ಸಮನ್ವಯಕ್ಕಾಗಿ ತುಡಿಯುತ್ತಿದ್ದ ಶ್ರೀಧರರದು ನೆಲೆ ನಿಲ್ಲದ ಪಯಣ. ಈಗ ಐವತ್ತು ವರ್ಷಗಳ ಈಚೆ ಕೂಡ ಶ್ರೀಧರರು ಎತ್ತಿರುವ ಪ್ರಶ್ನೆಗಳು ಬೇರೆ ಬೇರೆ ಪರಿಭಾಷೆಗಳಲ್ಲಿ ಕೇಳುತ್ತಲೇ ಇವೆ. ಹೀಗಾಗಿ ಅವರು ಕ್ರಮಿಸಿದ ಮಾರ್ಗವನ್ನು ಪುನರವಲೋಕಿಸುವುದು ಅಗತ್ಯ. ಸುಲಭಲಭ್ಯವಿಲ್ಲದ ಅವರ ಕೃತಿಗಳು ಪುನರ್ಮುದ್ರಣಗೊಳ್ಳುತ್ತಿರುವುದು ಪುನರವಲೋಕನಕ್ಕೆ ಅನುಕೂಲವಾಗಿದೆ.

**ಡಾ. ಎಮ್.ಜಿ. ಹೆಗಡೆ**

# ಪರಿವಿಡಿ

# ಅರಿಕೆ

ಇತರ ಮತಧರ್ಮಗಳಿಗಿರುವಂತೆ ಹಿಂದು ಧರ್ಮಕ್ಕೆ ಪ್ರವಾದಿಯಿಲ್ಲ; 'ಹಿಂದು' ಎಂಬುದು ಪ್ರವಾದಿಯ ಹೆಸರಲ್ಲ. ಅದಕ್ಕೆ ಮತಸ್ಥಾಪಕನಾವನೂ ಇಲ್ಲ. ಅದರ ಧರ್ಮಗ್ರಂಥವಾದ ವೇದವಾದರೂ ಅಂಕಿತನಾಮವೆನಿಸುವ ಮೊದಲು 'ಜ್ಞಾನದ ಆಕರ' ಎಂಬ ಸಾಮಾನ್ಯ ರೂಢನಾಮವೇ ಆಗಿತ್ತು. ಅದರ ಹಿಂದಿನ ಹೆಸರು ಆರ್ಯಧರ್ಮ ಎಂದು. ಮನು ಪ್ರಪಂಚ ಆರ್ಯಯುಗದ್ದು. ಅವನ ನೆಲ ಆರ್ಯಾವರ್ತ. ಅವನು ಹೇಳಿದ್ದು ಆರ್ಯರ ಆರ್ಯ ಅಥವಾ ಪೂಜ್ಯವಾದ ಆಚಾರ, ವಿಚಾರ.

ಮನುಸ್ಮೃತಿಯು ವೈದಿಕ ಸಂಸ್ಕೃತಿಯ ಅಂತಿಮ ಘಟ್ಟವನ್ನು ಅಭಿಲೇಖಿಸುತ್ತದೆ ಎಂಬುದನ್ನು ಅದು ಸನಾತನವೆಂದು ಕೆಲವೊಮ್ಮೆ ಕೊಡುವ ಅಸನಾತನ ಧರ್ಮಗಳಿಂದ ಊಹಿಸಬಹುದು. ಅದೊಂದು ಹಿಂದು ನಾಗರಿಕತೆಯ ಮೊದಲ ಮೈಲುಗಲ್ಲು; ವೇದಕಾಲೀನ ಭಾರತದ ಸಂಸ್ಕೃತಿಯನ್ನು ಕಾಯ್ದಿಡಲು ಮಾಡಿದ ಪ್ರಥಮ ಪ್ರಯತ್ನ.

ಪ್ರಸ್ತುತ ಪ್ರವಚನವು ಮನುಸ್ಮೃತಿಯ ಅಕ್ಷರಾರ್ಥಕ್ಕಂಟಿಕೊಂಡಿಲ್ಲ; ಅದರ ಭಾವಕ್ಕೇ ಪ್ರಾಧಾನ್ಯ ಕೊಡುತ್ತದೆ. ಅಲ್ಲದೆ, ಅದರ ಹನ್ನೆರಡೂ ಅಧ್ಯಾಯಗಳ ಪ್ರತ್ಯೇಕ ಸಾರಾಂಶಗಳನ್ನು ಹೇಳುವ ಉದ್ದೇಶವನ್ನಿಟ್ಟುಕೊಂಡಿಲ್ಲ. ಅದನ್ನು ನವಭಾರತೀಯನು ಹೇಗೆ ನೋಡಬಹುದು, ಅದರಿಂದ ಯಾವ ಪ್ರಯೋಜನವನ್ನು ಪಡೆಯಬಹುದು–ಅಂಥ ನಿತ್ಯನೂತನ ವಿಚಾರಗಳು ಅದರಲ್ಲಿ ಯಾವುವು? ಎಂಬ ದೃಷ್ಟಿಯಿಂದ ಮಾಡಿದ ಅಭ್ಯಾಸದ ಫಲವಿದು. ಭಾರತೀಯ ನಾಗರಿಕತೆಯ ಕಟ್ಟಡಕ್ಕೆ ಎಂಥ ವಜ್ರಸ್ತಂಭಗಳನ್ನು ಮನು ಆಧಾರವಾಗಿ ನಿಲ್ಲಿಸಿದ್ದ? ಎಂದು ಭೃಗು ಹೇಳಿದ ಅಂಶಗಳನ್ನು ಪರಾಮರ್ಶಿಸಿ ತಿಳಿದುಕೊಳ್ಳಲು ಮಾಡಿದ ಒಂದು ನಮ್ರ ಪ್ರಯತ್ನವಿದು.

ಮನುವು ಪ್ರತಿನಿಧಿಸುವುದು ಇತಿಹಾಸವು ಖಂಡಿತವಾಗಿ ಅಂದಾಜು ಕಟ್ಟಲಾರದಷ್ಟು ಅಳತೆಯ ಒಂದು ಪ್ರಾಚೀನ ಯುಗವನ್ನು. ಅದು ಮಹಾಭಾರತದ ಕಾಲ, ಕ್ರಿಸ್ತಪೂರ್ವ ಪ್ರಪಂಚ. ಮನು ಹೇಳುವ ಆರ್ಯರ ಪರಂಪರೆಯು ಬುದ್ಧನಿಗೂ ಹಿಂದಿನದು, ಶುದ್ಧ ವೈದಿಕರಾಜ್ಯದ್ದು. ಅಂದಿನ ಜನರಿಗೆ ತಮ್ಮ ಜಗತ್ತೇ ಮಹಾಜಗತ್ತೆಂಬ ಅಭಿಮಾನವಿದ್ದಂತೆ ತೋರುತ್ತದೆ. ಅಖಿಲ ಮಾನವರ ಉತ್ತಮ ಪ್ರತಿನಿಧಿಗಳು ತಾವೇ ಎಂಬ ಭಾವನೆ ಅವರಲ್ಲಿಯ ವಿಚಾರವಂತರಿಗಿದ್ದಂತೆ ಕಾಣುತ್ತದೆ. ಅದರಿಂದಲೇ ಅವರು 'ಹಿಂದುಗಳಿಗಾಗಿ' ಎಂದು ಯಾವ ಉಪದೇಶವನ್ನೂ ಮಾಡಿಲ್ಲ. ಶ್ರೇಷ್ಠ ಆರ್ಯರಾಗಬೇಕಾದರೆ ಹೀಗೆ

ನಡೆನುಡಿಗಳನ್ನಿಟ್ಟುಕೊಳ್ಳುವುದು ಸಾಂಪ್ರದಾಯಿಕ ಅವಶ್ಯಕತೆ–ಹೀಗೆ ಸತ್ಯವನ್ನು ಬಗೆದು ಬಾಳುವುದು ಅಗತ್ಯ–ಎಂಬಿಷ್ಟೇ ದೃಷ್ಟಿಯಿಂದ ವಿಚಾರ ಮಾಡುತ್ತ ಹೋದುದರಿಂದ ಅವರ ವಿಚಾರವಾಙ್ಮಯದಲ್ಲಿ ಅಖಿಲ ಮಾನವಕೋಟಿಗೆ ಅನ್ವಯಿಸುವಂಥ ವ್ಯಾಪಕ ವಾಕ್ಯಗಳು ಪದೇ ಪದೇ ಸಿಕ್ಕುತ್ತವೆ. ಅದೇ ಮಾದರಿಯಲ್ಲಿ ಮನುಧರ್ಮವು ಮಾನವಧರ್ಮ ಎನ್ನಿಸಿಕೊಳ್ಳಲು ಅರ್ಹವಾದದ್ದು.

ಕರ್ನಾಟಕ ವಿಶ್ವವಿದ್ಯಾಲಯವು ನನ್ನ ಅಲ್ಪಾಭ್ಯಾಸಕ್ಕೆ ಮನ್ನಣೆಯಿತ್ತು, ತನ್ನ ವ್ಯಾಸಂಗ ವಿಸ್ತರಣ ಭಾಷಣ ಮಾಲೆಯಲ್ಲಿ ಅವಕಾಶವಿತ್ತು, ಕನ್ನಡ ಬಾಂಧವರು ಈ ನನ್ನ ಅಭ್ಯಾಸದಲ್ಲಿ ಸಹಭಾಗಿಗಳಾಗುವಂತೆ ಮಾಡಿದ್ದಕ್ಕಾಗಿ ಅದಕ್ಕೆ ನಾನು ಚಿರಋಣಿ.

**ಬಿ.ಎಚ್. ಶ್ರೀಧರ**

# ಪರಿವಿಡಿ

# ೧

# ಮಾನವಧರ್ಮ

ನೀತಿಯಿಲ್ಲದೆ ಮಾನವರು ಬದುಕಲಾರರು. ನೀತಿಯಿಲ್ಲದ ಸಮಾಜವಿಲ್ಲ. ಮನುಷ್ಯರು ಸಮಾಜಜೀವಿಗಳು. ವ್ಯಷ್ಟಿ–ಸಮಷ್ಟಿಗಳ ಹಿತಾರ್ಥಗಳಲ್ಲಿ ಘರ್ಷಣ ಬರದಂತೆ ನೋಡಿಕೊಳ್ಳುವುದು ನೀತಿಯ ಅಥವಾ ಧರ್ಮದ ಕರ್ತವ್ಯ. ಧರ್ಮವು ನಿಯಮ ಹಾಗೂ ಕಾಯದೆಗಳನ್ನೊಳಗೊಂಡದ್ದು. ಅದರಲ್ಲಿ ವಿಧಿಗಳಿವೆ, ನಿಷೇಧಗಳಿವೆ. ಎಚ್.ಸ್ಪೆನ್ಸರ್ ಹೇಳಿದಂತೆ ಧರ್ಮವು ಆದರ್ಶ ಸಮಾಜದಲ್ಲಿರುವ ಆದರ್ಶ ಮನುಷ್ಯನ ಆದರ್ಶ ವರ್ತನಾಸಂಹಿತೆ. ಅಂಥ ಆದರ್ಶ ಮಟ್ಟದಲ್ಲದು ಶಾಶ್ವತ; ಸೂರ್ಯಚಂದ್ರರು ಪಾಲಿಸುವ ನಿಸರ್ಗನಿಯಮದಂತಹ ಋತ, ಸತ್ಯ. ಅದರ ವ್ಯಾಪ್ತಿಯೋ ಸಾರ್ವಕಾಲಿಕ, ಸಾರ್ವದೇಶಿಕ. ವ್ಯಾವಹಾರಿಕವಾದ ಒಳ ಪರಿಭೇದಗಳ ಮನ್ನಣೆ ಅವಶ್ಯವಾದಾಗ ಅದು ತನ್ನ ಶಾಶ್ವತ ಸೂತ್ರಗಳಿಗೆ ಅವಿರುದ್ಧವಾದ ದೇಶ–ಕಾಲ–ಸಂದರ್ಭೋಚಿತ ನಿಯಮಗಳನ್ನು ಸಾಧುವೆಂದು ಪರಿಗಣಿಸುತ್ತದೆ.

ಧರ್ಮವು ಯೋಗ್ಯಕಾರ್ಯದಲ್ಲಿ ಮನುಷ್ಯನನ್ನು ಚೋದಿಸುತ್ತದೆ, ಯೋಗದ ಮೂಲಕ ಆತ್ಮಸಾಕ್ಷಾತ್ಕಾರವನ್ನು ಮಾಡಿಸುತ್ತದೆ; ಅದು ಆಚಾರದ ಸ್ವರೂಪವುಳ್ಳದ್ದು; ಇಷ್ಟವನ್ನು ಪಡೆಯಲು ಮತ್ತು ಅನಿಷ್ಟವನ್ನು ಪರಿಹರಿಸಿಕೊಳ್ಳಲು ಧರ್ಮವೊಂದು ಅಲೌಕಿಕೋಪಾಯ; ನಿರ್ದಿಷ್ಟ ಕರ್ತವ್ಯಗಳನ್ನು ಮಾಡುವುದರ ಮೂಲಕ ಸ್ವಸ್ಥಾನವನ್ನು ವ್ಯಕ್ತಿಯು ಉಳಿಸಿಕೊಳ್ಳುವುದಕ್ಕೂ ಧರ್ಮವೆನ್ನುತ್ತಾರೆ. ನೀತಿಯು ಧರ್ಮದ ಉಸಿರಾದರೆ, ಅತಿಭೌತ ತತ್ವಜ್ಞಾನವು (Metaphysics) ಅದರ ಶ್ವಾಸಕೋಶ. ಮಾನವ್ಯ ನಾಗರಿಕತೆಯಲ್ಲಿ ಅದು ಮಾಡಬೇಕಾದದ್ದು ವಿರುದ್ಧಗಳ ಸಮನ್ವಯವನ್ನು (Concordantia Oppositorum). ಕರ್ಮಕಾಂಡ, ಮತಪದ್ಧತಿ, ಶ್ರದ್ಧಾಮಯ ಪೂಜೆ–ಪುರಸ್ಕಾರ, ಪುರುಷಸ್ವರೂಪದ ದೇವರಂತಹ ಅತಿಮಾನುಷ ಶಕ್ತಿಯನ್ನು ಮನ್ನಿಸುವುದು ಮತ್ತು ಅಂಥ ಮನ್ನಣೆಯಿಂದ ಮನುಷ್ಯರ ನಡತೆ ಹಾಗೂ ಮನಃಪ್ರವೃತ್ತಿಗಳು ರೂಪಿಸಲ್ಪಡುವುದು ಮುಂತಾದವೆಲ್ಲವೂ ಧರ್ಮದ ಕಕ್ಷೆಯಲ್ಲಿ ಬರುತ್ತವೆ.

ಧರ್ಮದ ವಿಷಯಗಳು ನಾಲ್ಕು: (೧) ಅಹಂಕಾರ ಅಥವಾ ಜೀವ. (೨) ಪ್ರಪಂಚ ಅಥವಾ ಜೀವಿಯ ಆವರಣ, (೩) ವಿಚಾರದ ಉದಯಕ್ಕೂ ಪೂರ್ವದಲ್ಲೇ ಸ್ವತಃ

ಸಿದ್ಧವಾದ ದೇವತಾಕಲ್ಪನೆ ಮತ್ತು (೪) ಮಹಾರ್ಘ ಪದಾರ್ಥಗಳು, ಉತ್ತಮ ಆದರ್ಶಗಳು ಹಾಗೂ ಉಚ್ಚಮೌಲ್ಯಗಳು. ಹಿಂದು ಧರ್ಮದ ಪ್ರಕಾರ ಅಹಂಕಾರವುಳ್ಳ ಜೀವ, ಪ್ರಪಂಚ ಮತ್ತು ಲೌಕಿಕ ಪುರುಷಾರ್ಥಗಳು ಸ್ಥಿರವಲ್ಲ; ಬ್ರಹ್ಮವೊಂದೇ ಸರ್ವತಂತ್ರ ಸ್ವತಂತ್ರವಾದ ವಸ್ತು–ಅದು ನೀತ್ಯತೀತ. ಶುದ್ಧಜೀವ ಅಥವಾ ಆತ್ಮವು ಅವಿನಾಶಿ; ಕರ್ಮಾನುಸಾರ ಜನ್ಮಾಂತರಗಳಲ್ಲಿ ಹೊಕ್ಕು ಹೊರಡುತ್ತದೆ. ಹುಟ್ಟಿ ಹಾಗೆಯೇ ಉಳಿದಿರುವ ಮನುಷ್ಯನು ತನ್ನ ನಿಜವಾದ ಆತ್ಮವನ್ನು ಪ್ರತಿನಿಧಿಸನು. ಅವನಿಗೆ ಮಾನವ ಸಂಸ್ಕಾರವಾಗಬೇಕು; ಆಗಲೇ ಅವನು ದ್ವಿಜ ಅಥವಾ ಸಂಸ್ಕೃತ, ನಾಗರಿಕ ಎನ್ನಿಸುತ್ತಾನೆ. ವರ್ಣಾಶ್ರಮದ ಧರ್ಮಪದ್ಧತಿಯು ಅಂಥ ಸಂಸ್ಕಾರಗಳನ್ನು ಹಿಂದುವಿಗೆ (ಆರ್ಯನಿಗೆ) ಕೊಡುತ್ತದೆ.

ಪ್ರತಿಯೊಂದು ವೇದಕ್ಕೂ ಶಾಖೆ, ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷದ್ ಮತ್ತು ಕಲ್ಪಸೂತ್ರಗಳಿವೆ. ಕೃಷ್ಣ ಯಜುರ್ವೇದದ ಮೈತ್ರಾಯಣೀ ಸಂಹಿತೆಗನುಗುಣವಾಗಿ ಮಾನವಕಲ್ಪಸೂತ್ರವಿದೆಯೆಂದು ಹೇಳಿಕೆ. ಕಲ್ಪಸೂತ್ರಗಳನ್ನು ಎರಡು ಬಗೆಯಾಗಿ ವಿಂಗಡಿಸುತ್ತಾರೆ: (೧) ಶ್ರೌತ ಸೂತ್ರಗಳು ಮತ್ತು (೨) ಸ್ಮಾರ್ತಸೂತ್ರಗಳು–ಎಂದು. 'ಸ್ಮೃತಿ' ಎಂಬುದು ಸ್ಮಾರ್ತಸೂತ್ರಗಳ ಸಂಗ್ರಹ; ಮನುಷ್ಯರ ಪರಂಪರಾಗತ ಆಚಾರಗಳ ಸಂಹಿತೆ. ಸ್ಮಾರ್ತಸೂತ್ರಗಳು ಪುನಃ ಗೃಹ್ಯಸೂತ್ರಗಳೆಂದೂ ಧರ್ಮಸೂತ್ರಗಳೆಂದೂ ವಿಭಕ್ತವಾಗಿವೆ.

'ಸ್ಮೃತಿ' ಎಂದರೆ ಪರಂಪರಾಗತ ಕಾಯದೆ, ಅಂಥ ಕಾಯದೆ–ಕಟ್ಟಳೆಗಳ ಸಂಹಿತೆ, ಸಂಗ್ರಹ; ಒಂದು ಸ್ಮೃತಿಯು ಪಠ್ಯಪುಸ್ತಕ; ವಿಧಿವಿಧಾನ, ಕಾಯದೆಗಳ ಶಾಸನ ಅಥವಾ ನಿಯಮಗಳು ಇಲ್ಲವೆ ಕಾಯದೆಗಳು ತುಂಬಿರುವ ಗ್ರಂಥ. ಪ್ರಸಿದ್ಧ ಸ್ಮೃತಿಗಳು ೧೮: ವಿಷ್ಣು–ಪರಾಶರ–ದಕ್ಷ–ಸಂವರ್ತ–ವ್ಯಾಸ–ಹಾರೀತ–ಶಾತಾತಪ–ವಸಿಷ್ಠ–ಯಮ–ಅಪಸ್ತಂಬ–ದೇವಲ–ಶಂಖಲಿಖಿತ–ಭರದ್ವಾಜ–ಉಶನ–ಅತ್ರಿ–ಶೌನಕ–ಯಾಜ್ಞವಲ್ಕ್ಯ ಮತ್ತು ಗೌತಮರು ಬರೆದ ಸ್ಮೃತಿಗಳು. ಇದು ಇತ್ತೀಚಿನ ಮತ. ಯಾಜ್ಞವಲ್ಕ್ಯನ ಪ್ರಕಾರ ಮನ್ವಾದಿ ೨೦ ಸ್ಮೃತಿಕಾರರಿದ್ದಾರೆ.

'ಮನ್' ಧಾತುವಿನಿಂದ ಹುಟ್ಟಿದ 'ಮನು' ಎಂದರೆ ಮನುಷ್ಯ. ಮನುಗಳು ೧೪ ಜನರು. ಒಬ್ಬೊಬ್ಬ ಮನುವಿನ ಕಾಲ ಅಥವಾ ಮನ್ವಂತರ ಎಂದರೆ ೩೦,೬೭,೨೦,೦೦೦ ವರ್ಷಗಳು. ಸ್ವಯಂಭುವೆನಿಸಿದ ಬ್ರಹ್ಮನಿಂದ ಹುಟ್ಟಿದ ಸ್ವಾಯಂಭುವನು ಮೊದಲನೆಯ ಮನು. ಬ್ರಹ್ಮನು ಹೆಣ್ಣು ಗಂಡೆಂದು ಎರಡಾದನು. ಆ ಹೆಣ್ಣು–ಗಂಡುಗಳಿಂದ ವಿರಾಟ್ ಪುರುಷನು ಜನಿಸಿದನು. ಸ್ವಾಯಂಭುವ ಮನುವು ಅವನ ಮಗ. ಬದಲಿ ಸೃಷ್ಟಿಕರ್ತನಾದ ಈತನು ೧೦ ಜನ ಪ್ರಜಾಪತಿಗಳನ್ನು ನಿರ್ಮಿಸಿದನು. ಇನ್ನೊಂದು ಕತೆಯ ಪ್ರಕಾರ ಇವನು ಬ್ರಹ್ಮನಿಂದ ಅವನ ಮಗಳಾದ ಶತರೂಪೆಯ ಬಸಿರಿನಲ್ಲಿ ಹುಟ್ಟಿದನು. ಬ್ರಹ್ಮನು ಮನುವಾದನು; ತನ್ನ ವಾಮಾರ್ಧವನ್ನು ಶತರೂಪೆಯನ್ನಾಗಿ ಮಾಡಿಕೊಂಡನು. ಅನಂತರ ಅವನು ಅವಳನ್ನು ಮದುವೆಯಾದನು. ನಮಗೆ ದೊರಕಿರುವ ಮನುಸ್ಮೃತಿಯ ಕರ್ತನಿವನು ಎಂದು ನಂಬಿಗೆ. ಮಾನವ ಶ್ರೌತಸೂತ್ರವೆಂಬ ಗ್ರಂಥಕ್ಕೂ ಈತನೇ ಲೇಖಕನೆನ್ನಲಾಗುತ್ತದೆ. ನಾವೀಗ ಬದುಕಿರುವುದು ಏಳನೆಯ ಮನುವಾದ ವೈವಸ್ವತನ ಮನ್ವಂತರದಲ್ಲಿ. ಇವನು

ಸೂರ್ಯನ ಮಗ, ಕ್ಷತ್ರಿಯ. ಇವನಿಗೆ ಸತ್ಯವ್ರತನೆಂಬ ಇನ್ನೊಂದು ಹೆಸರಿದೆ. ಪ್ರಲಯಪ್ರವಾಹವೊಂದರಿಂದ ಇವನನ್ನು ವಿಷ್ಣುವೋ ಬ್ರಹ್ಮನೋ ಕಾಯ್ದನಂತೆ.

ಸ್ವಾಯಂಭುವನು ಬದುಕಿದ್ದದ್ದು ಸುಮಾರು ೧೬೬,೪೫೦, ೧೦೬೦ ವರುಷಗಳ ಹಿಂದೆ. ಈತನ 'ಮನುಸ್ಮೃತಿ' ಒಬ್ಬನ ಕೃತಿಯಂತೆ ತೋರದು. ಈ ಗ್ರಂಥವು ಮೊದಲನೆಯದೂ ಮುಖ್ಯವೂ ಆದ ಸ್ಮೃತಿ. ಇದೊಂದು ವ್ಯವಸ್ಥಿತ ಯೋಜನಾಬದ್ಧ ಸಂಹಿತೆಯಲ್ಲ; ಇದರಲ್ಲಿ ಅಂದಿನ ಕಾಯದೆಗಳೂ ಮತಗಳೂ (Creeds) ತುಂಬಿವೆ. ಇದು ಹಿಂದು ಕಾಯದೆಯ ತಳಪಾಯ. ಇದಕ್ಕೆ ಸಲ್ಲುವ ಗೌರವವು ಇನ್ನಾವ ಸ್ಮೃತಿಗೂ ಸಲ್ಲದು. ಇದರದು ವೇದೋತ್ತರ ಕಾಲ. ಆದರೆ ಇಲ್ಲಿ ಹೇಳಿದ ದೇವತೆಗಳೆಲ್ಲಾ ವೈದಿಕ; ಪೌರಾಣಿಕ ದೇವತೆಗಳಲ್ಲ, ಮನುಧರ್ಮಶಾಸ್ತ್ರವು ಷಡ್‌ದರ್ಶನಗಳಿಗಿಂತ ಹಿಂದಿನದು. ಕ್ರಿಸ್ತಪೂರ್ವ ೫ನೆಯ ಶತಮಾನದಲ್ಲಿ ಇದು ರಚಿತವಾಯಿತೆಂದು ಹೇಳಲಾಗಿದೆ. ಆದರೆ ಇದರಲ್ಲಿಯ ನಿಯಮಗಳೂ ಉಪದೇಶಗಳೂ ಪರಂಪರಾ ರೂಪದಲ್ಲಿ ಮೊದಲೇ ಬಳಕೆಯಲ್ಲಿದ್ದವು. ಕೃಷ್ಣಯಜುರ್ವೇದದ ಮಾನವರೆಂಬ ಬ್ರಾಹ್ಮಣರು ಈ ಪರಂಪರೆಯನ್ನುಳಿಸಿಕೊಂಡು ಬಂದವರು. ಕಾಯದೆಯನ್ನಲ್ಲದೆ ಇದು ಇತರ ವಿಷಯಗಳನ್ನೂ ಪ್ರತಿಪಾದಿಸುತ್ತದೆ. ಹಳೆಯ ಹಿಂದು ಸಮಾಜದ ಮಹೋದ್ಗ್ರಂಥವಿದೇ. ಮೊಟ್ಟಮೊದಲು ಇದಕ್ಕೆ ಒಂದು ಲಕ್ಷ ಶ್ಲೋಕಗಳಿದ್ದವೆಂದೂ ಅವನ್ನು ೨೪ ಅಧ್ಯಾಯಗಳಲ್ಲಿ ವಿಂಗಡಿಸಿಡಲಾಗಿತ್ತೆಂದೂ ನಂಬಿಗೆ. ನಾರದನವನ್ನು ೧೨,೦೦೦ಕ್ಕೆ ಇಳಿಸಿದ. ಅನಂತರ ಸುಮತಿ ಪುನಃ ಆ ೧೨,೦೦೦ವನ್ನು ೪,೦೦೦ ಶ್ಲೋಕಗಳಿಗಿಳಿಸಿದ. ಉಪಲಬ್ಧವಿರುವ ಮನುಸ್ಮೃತಿಯಲ್ಲಿ ಈಗ ಇರುವುದು ೨೬೮೫ ಶ್ಲೋಕಗಳು ಮಾತ್ರ. ಆಗೀಗ ಗ್ರಂಥದಲ್ಲಿ ಬೃಹನ್ಮನು ಅಥವಾ ವೃದ್ಧ ಮನುವಿನ ಹೆಸರು ಬರುವುದರಿಂದ ಇದನ್ನು ಒಂದಕ್ಕಿಂತ ಹೆಚ್ಚು ಸಲ ಸಂಹಿತೆಗಿಳಿಸಲಾಗಿದೆಯೆನ್ನಬಹುದು. ಪ್ರಸ್ತುತ ಮನುಸ್ಮೃತಿಯು ಭೃಗು ಹೇಳಿದ್ದು. ಇದರ ಕಾಲವು ಕ್ರಿ.ಪೂ. ೨ನೆಯ ಶತಮಾನಕ್ಕೂ ಕ್ರಿ.ಶ. ೨ನೆಯ ಶತಮಾನಕ್ಕೂ ನಡುವೆ ಎಂದು ಕೆಲವರ ಅಭಿಪ್ರಾಯ.

ಕ್ರಿ.ಶ.೧೬೦೦–ರ ಧರ್ಮಸಾರವಾದ ವೀರಮಿತ್ರೋದಯವು ಬೃಹಸ್ಪತಿಯ ಪ್ರಕಾರ ಮನುವು ಅತ್ಯುನ್ನತ ವಿಧಿವಿಧಾತ ಎನ್ನುತ್ತದೆ. ಮಿಕ್ಕ ಸ್ಮೃತಿಗಳ ವ್ಯಾಪ್ತಿ ಕಿರಿದೆಂದು ಕುಮಾರಿಲನೆನ್ನುತ್ತಾನೆ. ಬ್ರಹ್ಮದೇಶ ಹಾಗೂ ಜಾವಾದ್ವೀಪದ ಕಾಯದೆ–ಪುಸ್ತಕಗಳು ಮನುಸ್ಮೃತಿಯನ್ನವಲಂಬಿಸಿವೆ. ಸಯಾಂ ದೇಶದಲ್ಲಿ ಈಗಲೂ ಮನುವನ್ನು ಶಾಸನ ವಿಧಾತ ಎಂದು ಹೇಳುತ್ತಾರೆ. ಪ್ರೊ.ಜಾಲಿ (Prof. Jolly) ಅಖಿಲಭಾರತ ಪ್ರಶಾಸನಾಧಿಕಾರ ಮನುಸ್ಮೃತಿಗಿದೆ ಎಂದಿದ್ದಾರೆ. ಮನುಸ್ಮೃತಿಯ ವ್ಯಾಖ್ಯಾನಕಾರರು ಅನೇಕರು. ಅವರಲ್ಲಿ ಮೇಧಾತಿಥಿ–ಕುಲ್ಲೂಕ ಭಟ್ಟರು ಪ್ರಸಿದ್ಧರು.

ಮನುಸ್ಮೃತಿಗೆ ೧೨ ಅಧ್ಯಾಯಗಳಿವೆ. ಅವುಗಳಲ್ಲಿ ಕ್ರಮಶಃ (೧) ಹೆಚ್ಚುಕಡಮೆ ಸಾಂಖ್ಯ ರೀತಿಯಲ್ಲಿ ಸ್ವಯಂಭುವಿನಿಂದ ಪ್ರಪಂಚವು ಸೃಷ್ಟಿಯಾದದ್ದು, ಬ್ರಹ್ಮಾದಿ ಗುರುಪರಂಪರೆ, ಸ್ವಾಯಂಭುವಾದಿ ಚತುರ್ದಶ ಮನುಗಳು, ಮನ್ವಂತರ–ಪ್ರಲಯ

ಮುಂತಾದ ಕಾಲಾವಧಿಗಳು, ಯುಗಧರ್ಮಗಳು, ಚಾತುರ್ವರ್ಣ್ಯಧರ್ಮ, ವಿಷಯಾನುಕ್ರಮಣಿಕೆ; (೨) ಧರ್ಮಲಕ್ಷಣ, ಧರ್ಮಮೂಲ. ನಾಲ್ಕುದೇಶವಿಭಾಗಗಳು, ಸಂಸ್ಕಾರದ ಅಗತ್ಯ, ಬ್ರಹ್ಮಚರ್ಯ ಮುಂತಾದ ನಾಲ್ಕು ಆಶ್ರಮಗಳು; (೩) ಮದುವೆ, ದಾಂಪತ್ಯಧರ್ಮಗಳು, ಪಂಚಯಜ್ಞಗಳು–ಶ್ರಾದ್ಧ ಮುಂತಾದ ಗೃಹಸ್ಥ ಧರ್ಮಗಳು, (೪) ಗೃಹಸ್ಥ ಜೀವನದ ವಿವರಗಳು, ವೃತ್ತಿ, ಸ್ನಾತಕ ಧರ್ಮ, ಶಿಕ್ಷಣಾಂತ ಸಮಯಗಳು, ಆಹಾರ ನಿಯಮಗಳು; (೫) ಸಸ್ಯ–ಮಾಂಸಾಹಾರ ವಿವೇಕ, ಸೂತಕಾವಧಿಗಳು, ಸಪಿಂಡ–ಸಮಾನೋದಕ ಲಕ್ಷಣಗಳು, ಶೌಚವಿಧಿಗಳು, ಪತ್ನೀ–ವಿಧವಾ ಧರ್ಮಗಳು; (೬) ವಾನಪ್ರಸ್ಥ ಸಮಯ ಹಾಗೂ ಧರ್ಮ, ಪರಿವ್ರಾಜಕ ಧರ್ಮ, ಗೃಹಸ್ಥ ಪ್ರಶಂಸೆ; (೭) ರಾಜಧರ್ಮ; (೮) ನ್ಯಾಯದಾನದ ರೀತಿನೀತಿಗಳು, ದುರ್ಬಲರ ಸಂರಕ್ಷಣೆ, ದಂಡವಿಧಾನ, ಸಾಲವಸೂಲು, ಶಾರೀರಿಕ ಶಿಕ್ಷೆ, ತೂಕ–ಅಳತೆ, ಬಡ್ಡಿಯ ದರ, ಹೊಣೆಗಳು, ಗಡಿ, ಅಪ್ರೌಢರ ಆಸ್ತಿ, ನಿಕ್ಷೇಪ, ಆಸ್ತಿ ಮಾರಾಟ–ಒಡೆಯತನ, ಪಾಲುಗಾರಿಕೆ, ಹುಲ್ಲುಗಾವಲು, ದುರುಪಯೋಗ, ಒಡೆಯ–ಒಕ್ಕಲು ಜಗಳ, ವಿಧಿಭಂಗ, ಕನ್ಯಾಪಹಾರ, ಹಾದರ, ಬಲಾತ್ಕಾರದ ಸಂಪ್ರಯೋಗ, ಮಾತಾಪಿತೃಕಲತ್ರಪುತ್ರರ ಸಂರಕ್ಷಣೆ, ಸುಂಕ, ಗುತ್ತಿಗೆ, ಸೇವಕರ ಏಳು ವರ್ಗ; (೯) ಗಂಡ–ಹೆಂಡಿರ ವೈಧಿಕ ಕರ್ತವ್ಯಗಳು, ದಾನಧರ್ಮ, ವಿವಾಹವಯಸ್ಸು, ದಾಯಭಾಗ, ಸ್ತ್ರೀಧನ, ದ್ಯೂತನಿರೋಧ, ಪಂಚಮಹಾಪಾತಕಗಳು, ಜೈಲು, ಸಪ್ತಾಂಗಗಳು, ವೈಶ್ಯ–ಶೂದ್ರ ಧರ್ಮಗಳು, (೧೦) ವರ್ಣಸಂಕರ, ಕ್ಷತ್ರಿಯವೈಶ್ಯ ಕರ್ಮ, ಆಪದ್ಧರ್ಮ (೧೧) ದಾನಪ್ರಶಂಸೆ, ಪ್ರಾಯಶ್ಚಿತ್ತ, ಪಾಪವಾರಣ ಮಂತ್ರ; (೧೨) ಕರ್ಮವಿಚಾರ, ಕ್ಷೇತ್ರಜ್ಞ–ಭೂತಾತ್ಮ–ಜೀವ, ನರಕದ ಚಿತ್ರಹಿಂಸೆ, ಗುಣತ್ರಯ, ಆತ್ಮಜ್ಞಾನವು ಮುಕ್ತಿಗೆ ಸಾಧನವಾಗಿರುವುದು, ಪ್ರವೃತ್ತ–ನಿವೃತ್ತರ ಕರ್ಮಗಳು, ವೇದಪ್ರಶಂಸೆ, ತರ್ಕದ ಸ್ಥಾನ, ಶಿಷ್ಟರು ಮತ್ತು ಪರಿಷತ್ತುಗಳು, ಮಾನವ ಧರ್ಮದ ಅಭ್ಯಾಸದ ಫಲಶ್ರುತಿ–ಎಂಬಿವು ದಿಗ್ದರ್ಶಕವಾಗಿವೆ ಎನ್ನಬಹುದು.

ಮಾನವಧರ್ಮದ ಅವಲೋಕನದಲ್ಲಿ ಐತಿಹಾಸಿಕ ದೃಷ್ಟಿಯಿರುವುದು ಅತ್ಯಾವಶ್ಯಕ. ಏಕೆಂದರೆ ಮನುಸ್ಮೃತಿಯಲ್ಲಿ ಆದರ್ಶನಿಯಮಗಳೂ ಬಂದಿವೆ, ವಾಸ್ತವಿಕವೂ ವ್ಯಾವಹಾರಿಕವೂ ಸಾಂದರ್ಭಿಕವೂ ಆದ ನಿಯಮಗಳೂ ಇವೆ. ಮನುವು ಶಾಸನಗಳ ನಿರ್ಮಾಪಕನಷ್ಟೇ ಅಲ್ಲದೆ ಅಭಿಲೇಖಕನೂ ಆಗಿದ್ದಾನೆ. ಅವನ ಶಾಸ್ತ್ರದಲ್ಲಿ ಶಾಶ್ವತ ಧರ್ಮಗಳೂ ಇವೆ, ಅಶಾಶ್ವತ ಧರ್ಮಗಳೂ ಇವೆ; ಆ ಧರ್ಮವಿಧಿಗಳಲ್ಲಿಯ ತಾರತಮ್ಯ, ಉತ್ತಮ–ಮಧ್ಯಮ–ಅಧಮ ಎಂಬ ವಿವೇಕ, ಸ್ವಪ್ರಿಯ–ಅನ್ಯಪ್ರಿಯ ಎಂಬ ಭೇದ ಸೂಕ್ಷ್ಮಜ್ಞರಿಗೆ ಹೊಳೆಯದಿರವು. ರಾಗದ್ವೇಷರಹಿತರೂ ಸಂತರೂ ತಿಳಿದವರೂ ಆಚರಣೆಯಲ್ಲಿಟ್ಟುಕೊಂಡಿರುವ ಮತ್ತು ತನ್ನ ಹೃದಯವು ಮನ್ನಿಸುವ ಧರ್ಮತತ್ತ್ವಗಳನ್ನು ಹೇಳುತ್ತೇನೆ, ಎನ್ನುತ್ತಾನೆ ಮನು (II–೧). ಅವನ ಕಾಲದಲ್ಲಿ ವೇದ, ಸ್ಮೃತಿ, ಸದಾಚಾರ ಮತ್ತು ಅರ್ಥ–ಕಾಮಗಳಲ್ಲಿ ಅನಾಸಕ್ತರಾದವರ ಆತ್ಮತುಷ್ಟಿಗೆ ಹೇತುವಾದುದು ಎಂಬೀ ನಾಲ್ಕು ಧರ್ಮಜ್ಞಾನದ ಮೂಲ ಆಕರಗಳಾಗಿದ್ದವು. ಮೊದಲನೆಯ ಮೂರು ಆಕರಗಳ ಸ್ಥಾನಗೌರವವು ಅನುಕ್ರಮವಾಗಿ

ಪ್ರಥಮ, ದ್ವಿತೀಯ, ತೃತೀಯ, ರಾಗ–ದ್ವೇಷರಹಿತರಾದ ಅನಾಸಕ್ತರು ಮಹಾತ್ಮರು; ಅವರ ಪಂಕ್ತಿಯೇ ಪ್ರತ್ಯೇಕ; ತ್ರಿಗುಣಾತೀತರ ವರ್ತನೆ ತ್ರಿಗುಣಾತೀತರಿಂದಲೇ ವಿಮರ್ಶನೀಯ. ಅವರೊಮ್ಮೆ ಶ್ರುತಿ–ಸ್ಮೃತಿ–ಸದಾಚಾರಗಳನ್ನು ಮೀರಬಲ್ಲರು; ಆ ಸ್ವಾತಂತ್ರ್ಯವು ಅಂಥ ಮಾನ್ಯರಿಗಷ್ಟೇ ಮೀಸಲಲ್ಲದೆ, ಇತರ ಸಾಮಾನ್ಯರಿಗಲ್ಲ ಎಂಬುದು ಮನುಹೃದಯ. ಇಲ್ಲಿ ಕಾಣುವ ಅಭಿಪ್ರಾಯ–ಆಚಾರಗಳ ಸ್ವಾತಂತ್ರ್ಯವು ಅವಲಂಬಿಸಿರುವ ವಿವೇಕವು ಎಷ್ಟು ಪ್ರಶಂಸನೀಯ ಎಂಬುದನ್ನು ಎತ್ತಿ ಹೇಳಬೇಕಾಗಿದೆ. ಧರ್ಮಾಧರ್ಮ, ನ್ಯಾಯಾನ್ಯಾಯ, ಸತ್ಯಾಸತ್ಯ ಎಂಬೀ ಭೇದಗಳನ್ನು ಎಲ್ಲರೂ ಎಲ್ಲ ಸಂದರ್ಭಗಳಲ್ಲೂ ಸೂಕ್ಷ್ಮವಾಗಿ, ವಾಸ್ತವಿಕವಾಗಿ ವಿಮರ್ಶಿಸಲಾರರು ಎಂಬುದು ಅನುಭವಸಿದ್ಧವಾಗಿರುವುದರಿಂದ ಮಹಾಜನರು (ಮಹಾತ್ಮರು) ಕಂಡ, ಹೇಳಿದ ಮತ್ತು ಆಚರಣೆಯಲ್ಲಿಟ್ಟುಕೊಂಡ ನಿಯಮಗಳನ್ನೊಳಗೊಂಡ (ವೇದ–ಸ್ಮೃತಿ–ಆಚಾರ ರೂಪದ) ಆಧಾರಗಳು ಜನರಿಗೆ ಧರ್ಮಬದ್ಧ ನಡತೆಯಲ್ಲಿ ಮಾರ್ಗದರ್ಶಕಗಳು. ಮಹಾತ್ಮರು ವೇದಹೃದಯಜ್ಞರಾದುದರಿಂದ ಅವರು ಮೀರಿದರೆಂದು ತೋರಿದಾಗಲೂ ಅವರ ಆಚಾರವು ವೇದವಿಹಿತವಾಗಿರಬಹುದು. *ತನಗೆ ಇರುವ ಶುದ್ಧ ಬುದ್ಧಿಯ ಬಲದಿಂದ ಸಾಮಾನ್ಯನು ಸುದೀರ್ಘ ಸಹವಾಸ–ಪರಿಶೀಲನಗಳ ಮೂಲಕ ಮಹಾತ್ಮರು ಮಾತ್ರ ಆಚರಿಸಬಹುದಾದುದು ಯಾವುದು? ಸಾಮಾನ್ಯರೇ ಆಚರಿಸಬೇಕಾದ ಅವರ ಆಚಾರಗಳಾವುವು? ಉಭಯರೂ ಆಚರಿಸಬಹುದಾದ ಅವರ ಆಚಾರ ನಿಯಮಗಳಾವುವು? ಎಂಬುದನ್ನು ಅರಿತುಕೊಳ್ಳಬಲ್ಲ. ಗಾಂಧಿಯವರನ್ನರಿತುಕೊಂಡಂತೆ ಜನಹೃದಯವು ಯಾವಾಗಲೂ ಮಹಾತ್ಮರ ಆತ್ಮವನ್ನು ಗುರುತಿಸಬಲ್ಲುದೆಂಬುದು ಲೋಕಪ್ರಸಿದ್ಧ. The fact that the spiritual experience do not tend to disappear but rather to deepen and become more frequent as the mind develops does not suggest that they are hallucinations. The fact that these sublime realisations have come to highly educated men, to great philosophers and scientists, does not suggest that they are the outcome of ignorant superstition- 'Meaning and purpose' by Kenneth Walker.

⌘ ⌘ ⌘

---

* ದೃಶ್ಯತೇ ಧರ್ಮರೂಪೇಣ ಹ್ಯಧರ್ಮಂ ಪ್ರಾಕೃತಶ್ಚರನ್ ।
ಧರ್ಮಂಚಾಧರ್ಮರೂಪೇಣ ಕಶ್ಚಿದಪ್ರಾಕೃತಶ್ಚರನ್ ॥

# ೨

# ಸಾಮಾನ್ಯ ಧರ್ಮ

Universal moral principles ಅಥವಾ ವಿಶ್ವವ್ಯಾಪಕವಾದ ನೀತಿತತ್ವಗಳು ಎಂದು ನಾವಿಂದು ಕರೆಯುವ ವರ್ತನಾನಿಯಮಗಳನ್ನು ಧರ್ಮಶಾಸ್ತ್ರಕಾರರು ಸಾಮಾನ್ಯಧರ್ಮ ಅಥವಾ ಸಾಧಾರಣಧರ್ಮ ಎನ್ನುತ್ತಾರೆ. ಅವು ಶಾಶ್ವತವಾದ ಮಾನವಧರ್ಮಗಳು. ಅವನ್ನಲ್ಲದೆ ಮನುವು ವರ್ಣ–ಆಶ್ರಮ–ದೇಶ–ಜಾತಿ–ಕುಲ–ಪಾಷಂಡಗಣಗಳ ಧರ್ಮಗಳನ್ನೂ ಹೇಳಿದ್ದಾನೆ. ಇವು ವ್ಯಷ್ಟಿ–ಸಮಷ್ಟಿ ಅಥವಾ ಸಮಾಜ–ಸಮುದಾಯ (Community)ಗಳ ವೈಯಕ್ತಿಕ ಹಾಗೂ ಸಾಮೂಹಿಕ ನಡತೆಗಳನ್ನೊಳಗೊಳ್ಳುವುವು; ವ್ಯಕ್ತಿಯ ಮತ್ತು ಗುಂಪಿನ ಆಚಾರ–ವಿಚಾರ–ಉಚ್ಚಾರಗಳ ಸ್ವಾತಂತ್ರ್ಯವನ್ನು ಪರಿಸೀಮನಗೊಳಿಸುವುವು.

ಸಾಮಾನ್ಯ ಧರ್ಮವು ಸಂಪೂರ್ಣ ಅರ್ಥದಲ್ಲಿ ಸರ್ವಮಾನವರ ಧರ್ಮ. ಅದು ಪರಮವ್ಯಾಪ್ತಿಯುಳ್ಳದ್ದು. ಉಳಿದ ಧರ್ಮಪ್ರಕಾರಗಳು ಅದಕ್ಕೆ ವಿರುದ್ಧವಾಗಿರಬಾರದು* –ಎಂಬುದು ಮನುವಿನ ಇಂಗಿತ. ಅದು ಭಾರತೀಯ ನಾಗರಿಕತೆಯ ಆತ್ಮ. ಧರ್ಮ–ಅರ್ಥ–ಕಾಮ–ಮೋಕ್ಷಗಳು ಪುರುಷಾರ್ಥಗಳು, ಜೀವನದಲ್ಲಿ ಸಾಧಿಸಬೇಕಾದ ಮೌಲ್ಯಗಳು (Human Values). ಅವುಗಳಲ್ಲಿ ಮೋಕ್ಷ ಅಥವಾ ಅಸೀಮ ಸ್ವಾತಂತ್ರ್ಯವು ಪರಮೋಚ್ಚ ಪುರುಷಾರ್ಥ. ಆ ಶಾಶ್ವತ ಪುರುಷಾರ್ಥದ ಸಿದ್ಧಿಗೆ ಅನುಕೂಲವಾಗುವಂತೆಯೇ ಉಳಿದ ಮೂರು ಪುರುಷಾರ್ಥಗಳ ಸಾಧನೆ ಸಾಗಬೇಕು. ಧರ್ಮ–ಅರ್ಥ–ಕಾಮಗಳನ್ನು ಪರಸ್ಪರ ಅವಿರುದ್ಧವಾಗಿಯೇ ಸಾಧಿಸಬೇಕು (II–೨೨೪). ಆದರೆ ಅವುಗಳಲ್ಲಿ ಅನಿವಾರ್ಯವಾಗಿ ವಿರೋಧ ಬಂದಾಗ ಧರ್ಮಸಿದ್ಧಿಗಾಗಿ ಅರ್ಥ–ಕಾಮಗಳನ್ನು ಬದಿಗಿರಿಸಬೇಕು§ – ಎಂಬುದು ಮನುವಿನ ಒಲವು. Wish is the father of thought and thought is the father of action–ವಿಚಾರವು ಇಚ್ಛಾಜನ್ಯ, ಆಚಾರವು ವಿಚಾರಜನ್ಯ. ಅಕಾಮನಿಗೆ ಮಾಡಬೇಕಾದ

---

* ಪ್ರಣಷ್ಟಃ ಶಾಶ್ವತೋ ಧರ್ಮಃ ಸದಾಚಾರೇಣ ಮೋಹಿತಃ ।
ತೇನ ವೈದ್ಯಸ್ತಪಸ್ವೀ ವಾ ಬಲವಾನ್, ವಾ ವಿಮುಹ್ಯತೇ ॥ ಮ.ಭಾ.

§ ೧. ಅಪ್ಯರ್ಥಕಾಮೌ ತಸ್ಯಾಸ್ತಾಂ ಧರ್ಮ ಏವ ಮನೀಷಿಣಃ ॥ ರಘುವಂಶ.

೨. ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥ ಮ.ಭಾ.

೩. ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ಭ. ಗೀ.

ಕೆಲಸವೇನಿದೆ? (II–೪). ವಿಶಾಲಾರ್ಥದಲ್ಲಿ ಮನುಷ್ಯನು ಮಾಡುವುದೆಲ್ಲವೂ ಕಾಮಕಾರ್ಯ; ಸನ್ಯಾಸಿಯೂ ಮೋಕ್ಷಕಾಮನು. ನಿಸ್ಪೃಹನಿಗೆ ಜಗತ್ತು ತೃಣ; ಆದರೆ ಮೋಕ್ಷವು ಪರ್ವತ! ತಪಸ್ಸು, ಪೂಜೆ, ದಾನ ಮುಂತಾದ ಧರ್ಮಪ್ರಕಾರಗಳಿಂದ ಶುದ್ಧ ಬುದ್ಧಿ ರೂಪಿಸಲ್ಪಡುತ್ತದೆ; ಅದು ಮೋಕ್ಷಸಾಧನ. ಆದುದರಿಂದ ಧರ್ಮದ ಮುಂದೆ ಅರ್ಥ–ಕಾಮಗಳು ಚಿಕ್ಕವು; ಅವು ಧರ್ಮಾಧೀನವಾಗಿಯೇ ಸಾಗಬೇಕು. ಧರ್ಮವೇ ಕಾಯದೆ, ಧರ್ಮವೇ ನೀತಿ; ಧಾರ್ಮಿಕನೇ ಮಾನವ (ಅತಾಮಸ). ಮಾನವನು ಧರ್ಮವನ್ನು (Ethics) ಕೊಂದರೆ ಹಾಗೆ ಹತವಾದ ಧರ್ಮವು ಅವನನ್ನು ಹಾನಿಗೀಡುಮಾಡುತ್ತದೆ, ಅಧಃಪತನಕ್ಕೀಡು ಮಾಡುತ್ತದೆ (VIII-೧೫)–ಎಂಬಲ್ಲಿ ನೀತಿಯ ಸುಪ್ರಸಿದ್ಧ ರೂಪವಾದ ಕಾಯದೆ ಅಥವಾ ವಿಧಿಯನ್ನು, ಶಾಸನವನ್ನು ಪ್ರಜೆಗಳು ಯಾವ ಕಾರಣದಿಂದ ಗೌರವಿಸಬೇಕು, ಪಾಲಿಸಬೇಕು ಎಂಬ ಮನುಮತ ಎಷ್ಟು ಹೃದಯಂಗಮವಾಗಿದೆ!

ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯನಿಗ್ರಹ ಎಂಬೀ ಐದು ಸುಪ್ರಸಿದ್ಧವಾದ ಸಾಮಾನ್ಯ ಧರ್ಮಗಳು. ಈ ಐದರಲ್ಲಿ ಸತ್ಯಕ್ಕೂ ಮೊದಲಿನ ಸ್ಥಾನ ಅಹಿಂಸೆಗೆ! ಕ್ರಿಸ್ತಪೂರ್ವದ ಐದಾರು ಶತಮಾನಗಳಲ್ಲಿ ಬೌದ್ಧ, ಜೈನ, ಇತಿಹಾಸ–ಪುರಾಣ ಹಾಗೂ ಧರ್ಮಶಾಸ್ತ್ರದ ಗ್ರಂಥಗಳೆಲ್ಲವೂ ಸ್ಪಷ್ಟವಾಗಿ ಅಹಿಂಸೆಗೆ ಅಗ್ರಪೂಜೆ ಸಲ್ಲಿಸಹೊರಟದ್ದು ಕಾಣುತ್ತದೆ. ಚರಾಚರಗಳ ಅತಿ ಹೆಚ್ಚಿನ ಒಳಿತಿಗಾಗುವುದು ಯಾವುದೋ ಅದೇ ಸತ್ಯ ಎಂದು ಮಹಾಭಾರತ (ಶಾಂ.ಪ. ೨೮೮.೨೦ ಮತ್ತು ೩೩೦.೧೩) ಸಾರಿದ್ದು ಸತ್ಯದ ಅಹಿಂಸಾತ್ಮಕತೆಯನ್ನು ಸೂಚಿಸುತ್ತದೆ. ಅಹಿಂಸೆ ಅಥವಾ ದಯೆಯೇ ದೇವರು ಎಂಬ ಅಭಿಪ್ರಾಯವನ್ನಿಂದು ಎಲ್ಲರೂ ಮಾನ್ಯ ಮಾಡುತ್ತಾರೆ. ದಯೆಯಿಲ್ಲದ ಯಾವುದನ್ನಾದರೂ ದೇವಾಂಶವುಳ್ಳದ್ದೆಂದು ಹೇಳಲಾದೀತೇ? ಪ್ರಿಯವನ್ನು ನೀಡುವುದಕ್ಕಿಂತ ಹೆಚ್ಚಾಗಿ ಹಿತವನ್ನು ನೀಡುವುದೇ ದಯೆ. ಅದೇ ಮಾನವತೆ, ಮಾನವೀಯತೆ. ಆದರೆ ಯಾರಿಗೆ ಏನನ್ನು ಹೇಳಿದರೆ ಅಥವಾ ಮಾಡಿದರೆ ಅವರ ಹಿತವು ಸಾಧಿಸಲ್ಪಡುತ್ತದೆ? ಎಂಬುದನ್ನು ಅರಿಯುವುದು ಕಷ್ಟ. ಏಕೆಂದರೆ ಒಬ್ಬನಿಗೆ ಒಂದು ಸಂದರ್ಭದಲ್ಲಿ ಅಮೃತವೆನಿಸಿದ್ದು ಇನ್ನೊಬ್ಬನಿಗೆ ವಿಷವಾಗಿ ಪರಿಣಮಿಸೀತು. ಆದುದರಿಂದ ಅನ್ಯರಿಗೆ ಹಿಂಸೆಯಾಗದಂತೆ ಮನುಷ್ಯನು ತನ್ನ ಮನಸ್ಸು, ಮಾತು ಮತ್ತು ವರ್ತನೆಗಳನ್ನು ನಿಯಮಿಸಿಕೊಂಡಿರಬೇಕು ಎಂದು ಹೇಳಲಾಗಿದೆ. ಯಾರಿಗೆ ಯಾರಿಂದಲೂ (ಯಾವಾಗಲೂ) ಹೆದರಿಕೆಯಿಲ್ಲವೋ ಯಾರು ಯಾರನ್ನೂ (ಯಾವಾಗಲೂ) ಹೆದರಿಸರೋ ಅವರೇ ಅಹಿಂಸಾ ಸಿದ್ಧರೆನ್ನುತ್ತದೆ ಮಹಾಭಾರತ. ಅದೇ ಅಭಯಸಿದ್ಧಿ, ಮುಕ್ತಸ್ಥಿತಿ. ಏಕೆಂದರೆ ಭಯಮುಕ್ತನಿಗೆ ಸಾಧಿಸಬೇಕಾದುದಿನ್ನಾವುದಿದೆ? ಅಭೀತನು ಅನಿರ್ಬದ್ಧ, ಸ್ವತಂತ್ರ, ಮುಕ್ತ. ಈ ಆದರ್ಶವಾದಕ್ಕೆ ಧರ್ಮಸಾಧನೆಯೇ ವಾಸ್ತವಿಕ ಬುನಾದಿ. ಈ ದೃಷ್ಟಿಯಿಂದಲೇ ಗ್ರಂಥದಲ್ಲಿ ಇತರ ಸಾಮಾಜಿಕ, ಆರ್ಥಿಕ, ರಾಜಕೀಯ ವಿಷಯಗಳೆಷ್ಟೇ ವಿವರಪೂರ್ವಕವಾಗಿ ಬಂದಿದ್ದರೂ ಮನುವಿನ ಈ ಗ್ರಂಥವು ಧರ್ಮಶಾಸ್ತ್ರವೆಂದೇ ಪ್ರಸಿದ್ಧವಾಗಿದೆ. ಅಂಥ ಧರ್ಮದ ಪ್ರಧಾನ ಲಕ್ಷಣ ಅಹಿಂಸೆ; ಪರಹಿತದ ಸಾಧನೆಯಲ್ಲಿ ಸ್ವಹಿತಸಾಧನೆಯನ್ನು ಕಾಣುವುದೇ ಅದರ ಸತ್ವ, ಸಾರ, ಸತ್ಯ. ಸಾತ್ವಿಕತೆ

ಅಥವಾ ದಿವ್ಯತೆಯು ಮಾನವ ಹತ್ತಬೇಕಾದ ನಾಗರಿಕತೆಯ ಶಿಖರ. ಅದು ಉತ್ತಮಲೋಕ, ಉತ್ತಮ ಪ್ರಜ್ಞೆ, ಉತ್ತಮವಾದ ಇರುವಿಕೆ. ಮಾನವನು ಮಧ್ಯಮ ಲೋಕಸ್ಥ, ರಾಜಸ; ಅವನು ತಮೋಮುಖನಾಗದಂತೆ ನಿಷೇಧಿಸುವ ಹಾಗೂ ಸತ್ವಮುಖನಾಗುವಂತೆ ವಿಧಿಸುವ ಶಾಸ್ತ್ರವೇ ಧರ್ಮಶಾಸ್ತ್ರ ಎಂದು ಗ್ರಹಿಸಬಹುದು. ಈ ವಿಚಾರ ಸರಣಿಯಿಂದಲೇ ಗಾಂಧಿಯವರು ಅಹಿಂಸೆ ಹಾಗೂ ಸತ್ಯಗಳು ಒಂದನ್ನೊಂದು ಬಿಟ್ಟಿರಲಾರವೆಂದೂ ಅವು ಒಂದೇ ನಾಣ್ಯದ ಎರಡು ಮುಖಗಳಂತಿವೆ ಎಂದೂ ತಿಳಿದದ್ದು, ಅವೇ ಧರ್ಮ ಎಂದು ಸಾರಿದ್ದು.[೪]

ಅಹಿಂಸೆ–ಸತ್ಯಗಳ ಆದರ್ಶ ಸ್ವರೂಪಗಳನ್ನು ತಿಳಿದ ಬಳಿಕ ಕಳವು ಮಾಡದಿರುವುದು, ಬಾಹ್ಯಶುದ್ಧಿ ಮತ್ತು ಇಂದ್ರಿಯನಿಗ್ರಹ ಅಥವಾ ಅಂತರಂಗಶುದ್ಧಿ ಎಂಬೀ ಧರ್ಮಗಳತ್ತ ಲಕ್ಷ್ಯ ಹಾಕೋಣ. ಅಸತ್ಯ ಅಥವಾ ವಂಚನೆಯ ಒಂದು ರೂಪವಾದ ಕಳವನ್ನು ಎತ್ತಿಹೇಳಿ ಬಹಿಷ್ಕರಿಸಲು ಬಹುಶಃ ಭಾರತದಲ್ಲಿದು ಹೆಚ್ಚಾಗಿತ್ತೆನ್ನಬೇಕು.[೫] ಅಖಿಲ ಭಾರತದ ಬಹುಸಂಖ್ಯ ಪ್ರಜಾಕೋಟಿಯ ಮನೋವಿಜ್ಞಾನವನ್ನು ಧರ್ಮಶಾಸ್ತ್ರಕಾರರಷ್ಟು ಚೆನ್ನಾಗಿ ಇನ್ನಾರು ಬಲ್ಲರು? ಅದರಿಂದಲೇ ಮನುವು (VII- ೨೨) ಶಿಕ್ಷೆಯ ಭಯವಿಲ್ಲದೆ ಲೋಕವನ್ನು ನೆಟ್ಟಗಿಡಲಸಾಧ್ಯ, ಶುದ್ಧಚರಿತ್ರನಾದ ನರನು ದುರ್ಲಭ ಎಂದು ಘೋಷಿಸಿದ್ದು, ದಬ್ಬೆ ಕಟ್ಟದೆ ನಾಯಿಯ ಬಾಲವನ್ನು ನೆಟ್ಟಗಿಡಲು ಸಾಧ್ಯವಿಲ್ಲ. ಈ ಮಾತನ್ನು ನಮ್ಮ ಇಂದಿನ ಸರಕಾರಗಳೂ ಅರಿತು ತಕ್ಕ ವ್ಯವಸ್ಥೆಯನ್ನು ಆಡಳಿತದಲ್ಲಿ ಅಳವಡಿಸಿಕೊಳ್ಳಲು ಎಷ್ಟು ಪ್ರಯತ್ನಿಸಿದರೂ ಕಡಿಮೆಯೆ ಎಂದು ಲಂಚಗುಳಿತನದ ಪಿಡುಗನ್ನು ಕಂಡು ಕೇಳಿದ ಆಧುನಿಕ ಭಾರತೀಯನಾವನೂ ಒತ್ತಿ ಹೇಳದಿರಲಾರ. ಪರಸ್ವಾಪಹಾರವೆಲ್ಲಾ ಕಳ್ಳತನ, ಸಮಾಜದ್ರೋಹ. ಸಮಾಜದ್ರೋಹಿಯೆಂದೂ ಸ್ವಹಿತವನ್ನು ಸಾಧಿಸಿಕೊಳ್ಳಲಾರ. ಅನ್ಯನಿಗೆ ನ್ಯಾಯವಾಗಿ ಸೇರಿರುವ ಅಥವಾ ಸೇರತಕ್ಕ ಧನ, ಧಾನ್ಯ, ದಾಸಿ, ಭೃತ್ಯ, ಸುತ, ಬಂಧು, ವಸ್ತು, ವಾಹನ ಮತ್ತು ಪ್ರಸಿದ್ಧಿ, ಕೀರ್ತಿ, ಗ್ರಂಥಕರ್ತೃತ್ವ ಹಾಗೂ ಗೌರವ–ಪದವಿ–ಬಿರುದು ಮುಂತಾದವನ್ನು ಕೂಟತಂತ್ರದಿಂದ ಅಪಹರಿಸಿಕೊಂಡು ಹೋಗುವವರು

---

೪. (1) Non-Violence is the law of the human race...(2) Ahimsa and Truth are so intertwined that it is difficult to disentangle and separate them. (3) Perfect fearlessness can be attained only by him who has realized the supreme, as it implies freedom from delusions.... Fearlessness is the requisite of spirituality. Cowards can never be moral. (4) Truth for me is God.

-M.K. Gandhi

೫. Theft is the typical crime, the treatment of which serves as the model for the rest. Megasthenes undoubtedly gives too favourable a picture when he says that theft was rare: the number of injunctions relating to it and the extreme severity of its punishment, are sufficient evidence against him.

-Louis Renou : The Civilization in Ancient India.

ಬಹಳ ಕಾಲದಿಂದ ಭಾರತದ ಪಂಡಿತ–ಪಾಮರರಿಬ್ಬರಲ್ಲೂ ಇರುತ್ತ ಬಂದವರು. ಧನ–ಕನಕ–ವಸ್ತು–ವಾಹನಗಳ ಹಾಗೂ ಜೀವಿತದ ಅಪಹರಣ ಸಾಮಾನ್ಯ. ವಿವಿಧ ಅಪಹಾರಗಳ ರೂಪದ ಪ್ರಜಾಹಿಂಸೆಯನ್ನು ತಡೆಯಲೆಂದೇ ಮನುವೂ ಕೌಟಿಲ್ಯನೂ ಅತ್ಯಂತ ವ್ಯಾಪಕವಾದ ಗೂಢಚಾರ ಪದ್ಧತಿಯನ್ನು ಆಡಳಿತದ ಅನಿವಾರ್ಯ ಅಂಗವೆಂದು ಪ್ರತಿಪಾದಿಸಿದ್ದಾರೆ. ಗೂಢಚಾರರನ್ನು ಮನುವು ಐದು ವರ್ಗಗಳನ್ನಾಗಿ ವಿಂಗಡಿಸಿದ್ದಾನೆ. (VII- ೧೫೪); ಕಾಪಟಿಕ, ಉದಾಸ್ಥಿತ, ಗೃಹಪತಿ, ವೈದೇಹಕ, ತಾಪಸ–ಎಂಬಿವೇ ಆ ಐದು ವರ್ಗಗಳು. ಕಾಪಟಿಕರೆಂಬ ವರ್ಗಕ್ಕೆ ಸೇರಿದ ಚಾರರು ಪರಮರ್ಮಜ್ಞರೂ ಪ್ರೌಢರೂ ವಿದ್ಯಾರ್ಥಿಗಳೂ ಎನಿಸಿದರೆ, ಉದಾಸ್ಥಿತವರ್ಗದವರು, ಪ್ರಜ್ಞಾಶೌಚವುಳ್ಳವರೂ ಪರಿವ್ರಾಜಕರಾಗಲು ಯತ್ನಿಸಿ ಸೋತವರೂ ಲೋಕದ ದೋಷಗಳನ್ನು ಬಲ್ಲವರೂ ಆಗಿರುತ್ತಿದ್ದರು. ಹೆಚ್ಚು ಹಣ–ಕಾಸು–ಆಸ್ತಿ–ಪಾಸ್ತಿಯುಳ್ಳ, ವಿಸ್ತಾರವಾದ ವ್ಯವಹಾರಕ್ಷೇತ್ರವಿರುವ ಮಠಾದಿ ಸಂಸ್ಥೆಗಳಲ್ಲಿ ನಡೆಯುವ ವಿದ್ಯಮಾನಗಳನ್ನು (ಗುಪ್ತವೇಷದಲ್ಲಿ ಅಂಥ ಕಡೆ ವಾಸಿಸಿದ್ದು) ರಾಜನಿಗೆ ಅವರು ತಿಳಿಸಬೇಕಾಗಿತ್ತು. ಗೃಹಪತಿವರ್ಗದ ಚಾರರು ಒಕ್ಕಲಿಗರೂ ಬಡವರೂ ಆಗಿ, ರಾಜಭೂಮಿಯಲ್ಲಿ ಒಕ್ಕಲುತನ ಮಾಡುತ್ತಿದ್ದವರು. ವೈದೇಹಕ ಎಂಬ ವರ್ಗದವರು ಬಡವ್ಯಾಪಾರಿಗಳು; ಅವರಿಗೆ ನೆರವಿತ್ತು ರಾಜನು ಅವರಿಂದ ವ್ಯಾಪಾರ ಮಾಡಿಸುತ್ತಿದ್ದ. ಜಟಾಧಾರಿಗಳಾದ ಅಥವಾ ಬೋಳ್ದಲೆಯ ಬೈರಾಗಿಗಳು ತಾಪಸವರ್ಗದ ಗೂಢಚಾರರು. ಅಂದರೆ ಅಂದಿನ ಗೂಢಚಾರರು ಹೆಚ್ಚಾಗಿ ಬ್ರಹ್ಮಚಾರಿ–ಅವಧೂತ–ಕೃಷಿಕ–ವೈಶ್ಯ–ತಪಸ್ವಿಗ ವೇಷಗಳಲ್ಲಿ ಪ್ರಜೆ ಹಾಗೂ ಪ್ರಭುಭೃತ್ಯರ ಒಳ–ಹೊರ ನಡತೆಗಳನ್ನು ಕಣ್ಣಿಗೆ ಎಣ್ಣೆ ಹಾಕಿಕೊಂಡು ಪರೀಕ್ಷಿಸಿ ರಾಜನಿಗೆ ವರದಿ ಮಾಡುತ್ತಿದ್ದರು. ಒಬ್ಬ ಗೂಢಚಾರನಿಗೆ ಇನ್ನೊಂದು ವರ್ಗದ ಗೂಢಚಾರನ ಗುರುತಿರದಂತೆ ವ್ಯವಸ್ಥೆಯಿತ್ತಂತೆ. ಈ ಗೂಢಚಾರರ ಅತಿವ್ಯಾಪಕವಾದ ಜಟಿಲ ಜಾಲದ ಪ್ರತಿಪಾದನೆಯೂ ಭಾರತೀಯ ಅಧಿಕಾರಿಗಳ ಹಾಗೂ ಪ್ರಜೆಗಳ ಪರಂಪರೆಯ ದೌರ್ಬಲ್ಯರಾಶಿಗಳಿಗೆ ಸಾಕ್ಷಿಯಾಗಿದೆ. ದಕ್ಷ ಆಡಳಿತಗಾರರಿದ್ದಾಗಲೇ ಭಾರತವು ನಾಗರಿಕತೆಯ ಉನ್ನತ ಶಿಖರವನ್ನು ಮುಟ್ಟಿದ್ದು;. ಅಂಥವರಿಲ್ಲದ ಇತಿಹಾಸಾವಧಿಯಲ್ಲಿ ಅದು ಅವನತಿಯ ಪಾತಾಳಕ್ಕಿಳಿದದ್ದು.[೬] ಸುಮಾರು ಆರೇಳು ಸಾವಿರಕ್ಕಿಂತಲೂ ಹೆಚ್ಚು ಹಳೆಯದಾದ ಭಾರತದ ಭಾಗ್ಯವು ಬಹಳ ಸಲ ಇಳಿದು ಹೋಗಿ ಅಸ್ತಂಗತವಾದ ಐತಿಹಾಸಿಕ ಅವಧಿಗಳು **ಸ್ತೇಯಯುಗ**ಗಳೆನ್ನಲು ಯಾವ ಅಭ್ಯಂತರವೂ ಇಲ್ಲ.'ರಾಜಾ ಕಾಲಸ್ಯ ಕಾರಣಂ' ಎಂಬುದು ಮಾನಸ ಶಾಸ್ತ್ರೀಯವಾದ ವಸ್ತುಸತ್ಯವಾಗಿರುವುದರಿಂದ ಸರಕಾರವು ಒಳ್ಳೆಯದೆನಿಸಿದಾಗಲೇ (ದಕ್ಷ ಎನಿಸಿದಾಗಲೇ) ಈ ದೇಶದಲ್ಲಿ ಪ್ರಜೆಗಳು ಒಳ್ಳೆಯವರಾಗಿ ಬಾಳಿಯಾರು. ಹೀಗೆ "ಶಾಸಕರು ನೇತೃಗಳು; ಶಾಸ್ಯರು (ಪ್ರಜೆಗಳು) ನೇಯರು ಎಂಬುದೇ ಭಾರತದ ನಾಗರಿಕತೆಯ ಮೂಲಸೂತ್ರ" ಎಂಬುದು ಆಸ್ತೇಯವನ್ನು

---

೬. Failure to build up a sound judicial and administrative machinary and failure to preserve its independence and integrity have often been the undoing of nations.

- Prof. Satyanatha Aiyar

ವಿಶಿಷ್ಟವಾಗಿ ಪಂಚ ಮಹಾಸಾಮಾನ್ಯ ಧರ್ಮಗಳಲ್ಲಿ ಗಣಿಸಿ ಹೇಳಿದ್ದರಿಂದ ಅನುಮಿತವಾಗುತ್ತದೆ. ಇಲ್ಲಿಯವರೆಗೆ ಜನರು ಸ್ವರಾಜ್ಯಪ್ರಿಯರು ಎನಿಸಿದ್ದುದಕ್ಕಿಂತ ಹೆಚ್ಚಾಗಿ ಸುರಾಜ್ಯಪ್ರಿಯರಾಗಿದ್ದುದಕ್ಕೂ ಉಕ್ತ ಮನೋಧರ್ಮವೇ ಕಾರಣವೆನ್ನಬಹುದು.

ಬಾಹ್ಯ ರೀತಿ–ನೀತಿಗಳ ಶುಚಿ–ರುಚಿಗಳ ಆವಶ್ಯಕತೆಯನ್ನು ಎಲ್ಲರೂ ಬಲ್ಲರು. ದೇಹಶುಚಿಯು ಆರೋಗ್ಯಕ್ಕೆ ಅವಶ್ಯಕವಾದರೆ, ಶೀಲಶುಚಿಯು ಸಾಮಾಜಿಕ ಸಭ್ಯತೆ–ಸಂಸ್ಕೃತಿ–ನಾಗರಿಕತೆಗಳಿಗೆ ಅಗತ್ಯ. ನಿಜವಾದ ಶೀಲಶುಚಿಗೆ ಇಂದ್ರಿಯನಿಗ್ರಹವೇ ಅಡಿಗಲ್ಲು. ಅಹಿಂಸೆಯು ಸತ್ಯಕ್ಕೆ ಆಧಾರ, ಸತ್ಯವು ಅಸ್ತೇಯಕ್ಕೆ ಆಧಾರ, ಅಸ್ತೇಯ ಅಥವಾ ಆತ್ಮವಂಚನೆ–ಪರವಂಚನೆಗಳ ಅಭಾವವು ಬಾಹ್ಯದಲ್ಲಿ ಪ್ರಾಮಾಣಿಕವಾಗಿ ದೃಶ್ಯವಾಗುವ ಕಾರ್ಯಕ್ರಮಗಳ ನಿತ್ಯಾಧಾರ ಮತ್ತು ಈ ದೃಶ್ಯ ಶುಚಿಗೆ ಅದೃಶ್ಯವಾದ ಇಂದ್ರಿಯನಿಗ್ರಹ ರೂಪದ ಮನಸ್ಥಿತಿಯೇ ಆಧಾರ. ಹಾಗಲ್ಲದೆ, ಇಂದ್ರಿಯನಿಗ್ರಹದಿಂದ ಆರಂಭಿಸಿ, ಆ ಮೂಲ ಹೇತುವಿನಿಂದ ಅನುಕ್ರಮವಾಗಿ ಅಹಿಂಸಾಸಿದ್ಧಿಯನ್ನೂ ಮುಟ್ಟಬಹುದು. ಹೀಗೆ ಈ ಐದು ಸಾಮಾನ್ಯ ಧರ್ಮಗಳು ಒಂದರೊಳಗೊಂದು ಓತಪ್ರೋತವಾಗಿವೆ; ಒಂದನ್ನು ಬಿಟ್ಟು ಇನ್ನೊಂದಿಲ್ಲ; ಇದ್ದಂತೆ ತೋರಿದರೆ ಅದು ಕಪಟ!

ಇಂದ್ರಿಯನಿಗ್ರಹವನ್ನು ಅರ್ಥಾತ್ ಭೋಗಪರಿಮಿತಿಯನ್ನು ಎತ್ತಿ ಹೇಳದ ಮತಧರ್ಮವಿಲ್ಲ. ಇಂದ್ರಿಯ ಲಂಪಟತೆಯು ವ್ಯಕ್ತಿಗೂ ಗುಂಪಿಗೂ ತಪ್ಪದೆ ಹಾನಿಕರ. ಅದೇ ಸ್ವಾಚ್ಛಂದ್ಯ. ಸ್ವಾಚ್ಛಂದ್ಯವು ಹಿಂಸಾಕೃತ್ಯಗಳ ಪ್ರೇರಕ; ಅದು ಸಂಪೂರ್ಣ ಅಧರ್ಮ; ಕಾಮ ಕ್ರೋಧಾದಿ ಆರು ಹಗೆಗಳ ತಂದೆ. ಅದರಿಂದಲೇ ರಾಜನಾಗಲಿ (ಸರಕಾರವೆನಿಸಿಕೊಂಬ ರಾಜಪುರುಷ–ಸ್ತ್ರೀವರ್ಗವಾಗಲಿ) ಪ್ರಜೆಗಳಾಗಲಿ, ಸಮಾಜ ಕಂಟಕರೆನಿಸಿ ಆ ಮೂಲಕ ಸ್ವಹಿತಕಂಟಕರಾಗುವುದು. ಅದು ಎಲ್ಲ ಪಾಪ, ತಪ್ಪು, ಅಪರಾಧ, ದೌರ್ಬಲ್ಯ, ಅನ್ಯಾಯಗಳ ತಾಯಿ. ಭಾರತದಲ್ಲಿ ಅನೇಕ ರಾಜ್ಯ–ಸಾಮ್ರಾಜ್ಯಗಳು ಹಾಳಾದದ್ದು, ಆಳುವವರು ಐಷಾರಾಮವೃತ್ತಿಗಿಳಿದಾಗ. ಆಳುವವರಿದ್ದಾಗಲೂ ಅರಾಜಕತೆ ಉಂಟಾಗಲು ಅವರ ವೈಯಕ್ತಿಕ ಅಥವಾ ಸಾಮೂಹಿಕ ಅತಿಭೋಗವೃತ್ತಿಯೇ ಕಾರಣ. ಆ ಪರಿಸ್ಥಿತಿಯಲ್ಲಿ ಪ್ರಜಾಶೋಷಣೆ ನಡೆಯದಿರದು; ಧನಿಕ ದರಿದ್ರ ಭೇದ ಹೆಚ್ಚದಿರದು; ಅಲ್ಪಸಂಖ್ಯರು ಅತಿಧನಿಕರಾಗಿ ಬಹುಸಂಖ್ಯರು ಅತಿದರಿದ್ರರಾದಾಗ ಸಮಾಜವು ಅಸ್ತವ್ಯಸ್ತವಾಗಿ ರಾಜ್ಯವು ವಿದೇಶೀಯರ ಅಥವಾ ಸ್ವದೇಶೀಯ ಆಕ್ರಾಮಕರ ದಾಳಿಗೆ ತುತ್ತಾಗದಿರದು.[೭] ನಮ್ಮ ಧರ್ಮ ಹಾಗೂ ತತ್ವಗ್ರಂಥಗಳು ಮೇಲಿಂದ ಮೇಲೆ ಕಾಮ ಕ್ರೋಧಾದಿ ಷಡ್ರಿಪುಗಳನ್ನೂ ಅತ್ಯಾಶೆಯನ್ನೂ ವಿಷಯಲಂಪಟತೆಯನ್ನೂ ನಿಂದಿಸುವ ಭರದಲ್ಲಿ ಗಡಿಮೀರಿ

---

೭. 'Inequality there has always been in history all over the world but whenever the contrasts of wealth have been excessive and the ruling classes have neglected the building up of the prosperity and happiness of the middle-classes as well as of the peasantry and workers, the future of nations has been invariably threatened.'

- Sardar K.M.Panikkar

ನಿರಾಶಾವಾದವನ್ನೋ ನಿಷ್ಪ್ರಪಂಚತೆಯನ್ನೋ ನಿಷ್ಕ್ರಿಯತೆಯನ್ನೋ ನಿರ್ವೀರ್ಯತೆಯನ್ನೋ ಎತ್ತಿ ಹಿಡಿದು ಪ್ರತಿಪಾದಿಸಹೋದುದೂ ಹಾಗೆ ಹೋದಂತೆ ತೋರುವುದೂ ನಮ್ಮ ಹವಾಮಾನದಲ್ಲಿ ಹುಟ್ಟಿ ಬೆಳೆದ ಜನರ ಭೋಗಪರವಶತೆಯನ್ನು ಪ್ರಕಟಿಸುವ ಮಹಾಭಾಷ್ಯವೆನ್ನಬಹುದು. ಪಾತಂಜಲಯೋಗ ದರ್ಶನವು ಚಿತ್ತವೃತ್ತಿಯನ್ನು ನಿರೋಧಿಸಲು ಹೇಳಿದ್ದಾದರೂ ಮೇಲಿನ ದೃಷ್ಟಿಯಿಂದಲೇ ಎಂಬುದು ನಿರ್ವಿವಾದವಾದುದು.

ಮನುವಿನ ಸ್ಮೃತಿಯ ಐತಿಹಾಸಿಕ ಯುಗದಲ್ಲೇ ಇದ್ದ ಬುದ್ಧನು ಹೇಳಿದ ಪಂಚಶೀಲಗಳಾದ ಅಹಿಂಸೆ, ಅಸ್ತೇಯ, ಬ್ರಹ್ಮಚರ್ಯೆ, ಸತ್ಯ, ಮದ್ಯನಿಷೇಧಗಳಿಗೂ ಮೇಲೆ ಹೇಳಿದ ಧರ್ಮಪಂಚಾಂಗಗಳಿಗೂ ಎಷ್ಟು ಹತ್ತಿರದ ಹೋಲಿಕೆಯಿದೆ! ಎಂಬುದು ಸುಸ್ಪಷ್ಟ; ಮನುಮತಕ್ಕೆ ಬುದ್ಧಮತ ಅನುಮತವಾಗಿರುವುದು ಸುವೇದ್ಯ. ಆ ಯುಗದ ವಿಚಾರಮಥನದಿಂದ ಬೇರೆ ಬೇರೆ ಚಿಂತಕಮಂಡಲಗಳಲ್ಲಿ ಇದೇ ಮೇರೆಗೆ ಧರ್ಮಸಾರದ ಬಗ್ಗೆ ಏಕಮತವುಂಟಾದದ್ದು ಭಾರತೀಯ ಸಂಸ್ಕೃತಿಯ ಮೂಲಸೆಲೆ ಒಂದೇ ಎಂಬುದಕ್ಕೆ ನಿದರ್ಶನ. ಇಂದು ಭಾರತದ ಧೋರಣೆಯೆಂದು ಹೆಸರಾಗಿರುವ (೧) ರಾಷ್ಟ್ರಸ್ವಾಮ್ಯ ಮತ್ತು ಪ್ರದೇಶಪ್ರಭುತ್ವ ಆಯಾ ರಾಷ್ಟ್ರಕ್ಕಿದೆ ಎಂದು ಮನ್ನಿಸುವುದು; (೨) ರಾಷ್ಟ್ರಗಳು ಪರಸ್ಪರ ಆಕ್ರಮಣಕ್ಕಿಳಿಯದಿರುವುದು; (೩) ಅನ್ಯರಾಷ್ಟ್ರಗಳ ಒಳವ್ಯವಹಾರಗಳಲ್ಲಿ ಕೈಹಾಕದಿರುವುದು; (೪) ಪರಸ್ಪರ ಸಮಾನತೆಯಿಂದ ರಾಷ್ಟ್ರಗಳು ಪರಸ್ಪರ ಪ್ರಯೋಜನಕ್ಕಾಗಿ ದುಡಿಯುವುದು; (೫) ರಾಷ್ಟ್ರಗಳು ಪರಸ್ಪರ ಶಾಂತ ಸಹಜೀವನ ನೀತಿಯನ್ನು ಹಿಡಿಯುವುದು – ಎಂಬ ಪಂಚಶೀಲಗಳು ವ್ಯಕ್ತಿಯ ಸ್ಥಾನದಲ್ಲಿ ರಾಷ್ಟ್ರವನ್ನಿಟ್ಟು ಅಳವಡಿಸಿದಂಥವು. ನಿಮ್ಮ ಮನೆಯಲ್ಲಿ ನಿಮಗಿರುವ ಸಾರ್ವಭೌಮ ಅಧಿಕಾರವನ್ನೂ ನಿಮ್ಮ ನೆಲದ ಮೇಲಿನ ನಿಮ್ಮ ಒಡೆಯತನವನ್ನೂ ನಾನು ಗೌರವಿಸುತ್ತೇನೆ, ಒಪ್ಪುತ್ತೇನೆ ಎಂಬುದು ನಾನವನ್ನು ಕಸಿದುಕೊಳ್ಳಬರುವುದಿಲ್ಲ ಎಂಬ ಅಸ್ತೇಯವ್ರತ ಅಥವಾ ಹಾಗೆ ಕದ್ದು ಕಸಿದು ಹಿಂಸಿಸುವುದಿಲ್ಲ ಎಂಬ ಅಹಿಂಸಾವ್ರತ. ಅನಾಕ್ರಮಣ ಶೀಲವೂ ಅಹಿಂಸೆ–ಅಸ್ತೇಯಗಳ ಸ್ವರೂಪದ್ದೇ – ಅನ್ಯರ ಮನೆಯ ಆಂತರಿಕ ವ್ಯವಹಾರದಲ್ಲಿ ಕೈಹಾಕೆನೆಂಬುದೂ ಹಾಗೇ; ಅಥವಾ ನಾನು ಬ್ರಹ್ಮಚಾರಿಯಂತೆ ಜಿತೇಂದ್ರಿಯನಾಗಿರುತ್ತೇನೆ, ಆತ್ಮಸ್ವದಲ್ಲಿಯೇ ರಮಿಸುತ್ತೇನೆ, ಪರರ ಪದಾರ್ಥಗಳನ್ನು ಭೋಗಿಸ ಹೋಗೆನು ಎಂಬ ವ್ರತವೂ ಆದೀತು; ಇಂದ್ರಿಯೋತ್ತೇಜಕವಾದ ಮದ್ಯಾದಿಗಳನ್ನುಳಿದು ಶುಚಿವ್ರತದಲ್ಲಿರುತ್ತೇನೆ ಎಂದೂ ಆಗಬಹುದು. ತನ್ನಂತೆಯೇ ಪರರೆಂಬ ಸಮಾನಶೀಲತೆಯಿಂದ ಪರಸ್ಪರರ ಸ್ವಾತಂತ್ರ್ಯವನ್ನು ಭಂಗಗೊಳಿಸ ಹೋಗದಿರುವುದೂ ಅಹಿಂಸಾ ವ್ರತವೇ, ಅಭಯ ವ್ರತವೇ, ದಯಾಧರ್ಮವೇ; ಪರೋಪಕಾರವೂ ದಯೆಯಲ್ಲೇ ಅಡಕವಾಗುತ್ತದೆ. ನನ್ನಷ್ಟಕ್ಕೆ ನಾನು ಶಾಂತನಾಗಿರುತ್ತೇನೆ, ನಿನಗೆ ಬದುಕಗೊಟ್ಟು ನಾನು ಬದುಕುತ್ತೇನೆ ಎಂಬುದಾದರೂ ಅಹಿಂಸಾವ್ರತದ ಪ್ರಭೇದವೇ ಆಗುತ್ತದೆ.[೮] ಈಗ ಸೂಕ್ಷ್ಮವಾಗಿ ಪರಾಮರ್ಶಿಸಿದರೆ ಕೊನೆಯ ನಾಲ್ಕು ಧರ್ಮಾಂಗಗಳು ಮೊದಲಿನದಾದ ಅಹಿಂಸಾಂಗದ ವಿವಿಧ ಅವತಾರಗಳು ಎಂಬುದು ಸ್ಪಷ್ಟವಾಗುತ್ತದೆ.

ಆದುದರಿಂದ ಮನುಧರ್ಮ ಎಂದರೆ ಅಹಿಂಸೆ; ಮಾನವತೆ – ಮಾನವೀಯತೆಗಳೆಂದರೂ ಅಹಿಂಸೆ. ಅಹಿಂಸೆಯೇ ಸತ್ಯ; ಸತ್ಯವೆಂದರೆ ಇರುವಿಕೆ: ಅಹಿಂಸೆಯಿಲ್ಲದಲ್ಲಿ ಬದುಕಿಲ್ಲ! ಮಾನಸ ಶಾಸ್ತ್ರೀಯವಾಗಿ ಪರಹಿಂಸಾಕಾರ್ಯವು ಸ್ವಹಿಂಸೆಯಾಗಿ ಅಂತ್ಯದಲ್ಲಿ ಪರಿಣಮಿಸದೆ ಎಂದೂ ಉಳಿಯದು. ಆದುದರಿಂದ ಹಿಂಸೆಯು ಅಸ್ತಿತ್ವಕ್ಕೆ ಅಥವಾ ಬಾಳಿಗೆ ವಿರುದ್ಧ. ಅಪೂರ್ಣವಾಗಿಯಾದರೂ ಮಾನವರ ಜೀವನವು ಸತತಧಾರೆಯಿಂದ ಮುಂಬರಿಯುತ್ತ ಬಂದಿರುವುದು ಈ ಅಹಿಂಸಾರೂಪದ ದೃಢತರ ಸತ್ಯದಿಂದಲೇ.[೯] ಅಹಿಂಸೆಯೆಂದರೆ ಮೂಲಭೂತವಾದ ಸತ್ಯ ಎಂದಾದ ಮೇಲೆ ಅದು ದೇವರಲ್ಲದೆ ಇನ್ನೇನಾದೀತು? ದೇವರಿಂದಲೇ ಜಗತ್ತು ನಡೆಯುತ್ತದೆ ಎಂದರೂ ಒಂದೇ; ಸತ್ಯದಿಂದಲೇ ಸರ್ವವೂ ಸಾಗುತ್ತದೆ ಎಂದರೂ ಒಂದೇ; ಅಹಿಂಸೆಯಿಂದಲೇ ಬದುಕು ಬದುಕಿದೆ ಎಂದರೂ ಅಷ್ಟೇ– ಅದೇ ದೇವರು, ಅದೇ ಧರ್ಮ ಎಂದರೂ ಅಷ್ಟೆ! ದೇವವಾದಿಗಳಿಗೂ ದೇವ ವಿರೋಧಿಗಳಿಗೂ ಇಲ್ಲಿ ಯಾವ ತಕರಾರು ಉಳಿದೀತು?

ಸಾಮಾನ್ಯ ಧರ್ಮಗಳು* ಎಷ್ಟು ಮಾನ್ಯ ಎಂಬುದನ್ನೀಗ ಕಂಡ ಹಾಗಾಯಿತು. ಅವು ಬಾಳಿಗೆ ನೀರು–ಗಾಳಿ–ಬೆಳಕುಗಳಷ್ಟು ಆವಶ್ಯಕ. ಆದುದರಿಂದಲೋ ಏನೋ ಅವೀಗ ಬಹಳ 'ಸಾಮಾನ್ಯ' (ಸಸಾರ)ವಾಗಿ ಹೋಗಿ ಬಿಟ್ಟಿವೆ. ಸಾಮಾನ್ಯರಿಗಿಂತ ಅಲ್ಲವೆಂದು ಒಮ್ಮೆ ಹೇಳಿದರೂ ಸಾಮಾನ್ಯರಷ್ಟೇ ಆದರೂ ನಮ್ಮ ಕೆಲ ಮಾನ್ಯರಿಂದು ಅವನ್ನು ಅಸಾಮಾನ್ಯವೆಂದು ಆಗೀಗ ದೂರ ಇಡುತ್ತಾರೆ, ಮಹಾತ್ಮರಿಗಷ್ಟೇ ಮೀಸಲೆನ್ನುವಂತೆ ವರ್ತಿಸುತ್ತಾರೆ!

⌘ ⌘ ⌘

---

೮. (೧) ಜೀವಿತುಂ ಯಃ ಸ್ವಯಂಚೇಚ್ಛೇತ್ ಕಥಂ
ಸೋಽನ್ಯಂ ಪ್ರಘಾತಯೇತ್।
ಯದ್ಯದಾತ್ಮನ ಇಚ್ಛೇತ ತತ್ಪರ ಸ್ಯಾಪಿ ಚಿಂತಯೇತ್ ॥ –ಮ.ಭಾ.

(೨) ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಂ।
ದಯಾಃಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಂ॥
ತೇಜಃ ಕ್ಷಮಾಧೃತಿಃ ಶೌಚಂ ಅದ್ರೋಹೋ ನಾತಿಮಾನಿತಾ।
ಭವಂತಿ ಸಂಪದಂ ದೈವೀಂ ಅಭಿಜಾತಸ್ಯ ಭಾರತ ॥ –ಭ.ಗೀ.

೯. ಸತ್ಯೇನ ವಿಧೃತಂ ಸರ್ವಂ ಸರ್ವಂ ಸತ್ಯೇ ಪ್ರತಿಷ್ಠಿತಂ –ಮ.ಭಾ.

* Absolute Ethics formulates the ideal code of conduct of an ideal man in the ideal society. Relative Ethics applies the code of conduct to actual men in actual societies. - The Dictionary of Philosophy, p. 100

## ೩

# ರಾಜಧರ್ಮ

ಮನುವಿನ ವಿಶೇಷಧರ್ಮಗಳಲ್ಲಿ ರಾಜಧರ್ಮದತ್ತ ಈಗ ಹೊರಳೋಣ. ಏಕೆಂದರೆ ಅದು ನಾಯಕ ಧರ್ಮ. 'ಯಥಾ ರಾಜಾ, ತಥಾ ಪ್ರಜಾಃ' ಎಂಬುದು ಇಂದಿಗೂ ಸಲ್ಲುತ್ತದೆ.[೧೦] ಪ್ರಜಾಪ್ರಭುತ್ವದಲ್ಲಿಂದು ಪ್ರಜಾಪ್ರತಿನಿಧಿಗಳೇ ರಾಜರು, ನಾಯಕರು – ಜನರಿಗೆ. ಜನರು ತಮ್ಮನ್ನು ತಾವೇ ಆಳಿಕೊಳ್ಳಲಾರರು, ಅವರಿಗೆ ನೇತೃವೇ ನೇತ್ರ; ರಾಜ ಬೇಕು, ಸರಕಾರ ಬೇಕು, ಶಾಸಕರು ಬೇಕು – ಎಂದು ಅಂದೇ ಮನು ಹೇಳಿದ (VII-3); ಅರಾಜಕ ಪರಿಸ್ಥಿತಿಯಲ್ಲಿ ಬಲಿಷ್ಠರು ದುರ್ಬಲರನ್ನು ಶೋಷಿಸದೆ ಇರರು, ದೊಡ್ಡ ಮೀನು ಸಣ್ಣದನ್ನು ನುಂಗುವ ಮಾತ್ಸ್ಯ ನ್ಯಾಯ ರೂಢವಾದೀತು – ಎಂದ. (Law of the jungle) – ಕಾಡಿನ ಕಾಯದೆ ರೂಢಿಗೆ ಬಾರದಂತೆ ತಡೆಯಬೇಕಾದರೆ ಧರ್ಮಜ್ಞನೂ ಆಚಾರಶೀಲನೂ ಆದ ಪ್ರಭು ಬೇಕೇಬೇಕು. ನಾಗರಿಕತೆಯ ಗರತಿತನವನ್ನು ಕಾಯುವ ಗಂಡರೆಂದರೆ ಶಾಸಕರು. ಅವರು ವೇದವೇತ್ತರಾಗಿರಬೇಕು. ಅರ್ಥಾತ್ ಕಾಯದೆ (ನೀತಿ) ಪಂಡಿತರಾಗಿರಬೇಕು; ದಂಡನೀತಿಜ್ಞರಾಗಿರಬೇಕು ಅರ್ಥಾತ್ ಯಾವ ಅತಿಗೂ ಒಲೆಯದೆ ಹದಿನಾರಾಣೆ ನ್ಯಾಯವನ್ನು ರಾಜಕೀಯ, ಆರ್ಥಿಕ, ನ್ಯಾಯಾಂಗೀನ ಕ್ಷೇತ್ರಗಳಲ್ಲಿ ಪ್ರಜೆಗಳಿಗೆ ದೊರಕಿಸಿ ಕೊಡುವ ತಜ್ಞ ಆಡಳಿತಗಾರರಾಗಿರಬೇಕು; ಕೃತ್ಯಾಕೃತ್ಯ ವಿವೇಕವನ್ನು ನಿರ್ಧರಿಸುವ ಬುದ್ಧಿ ವೈಶದ್ಯವನ್ನು ಬೆಳೆಯಿಸಿ ಕೊಡುವ ಧರ್ಮ್ಯವಾದ ತರ್ಕಶಾಸ್ತ್ರದ ರೀತಿ–ನೀತಿ–ವಿವರ–ವಿಜ್ಞಾನಗಳನ್ನು ಕಲಿತವರಾಗಿರಬೇಕು; ಆತ್ಮಸ್ವರೂಪವನ್ನು ಅರಿತುಕೊಳ್ಳುವ ವಿದ್ಯೆ ಅವರಿಗೆ ಗೊತ್ತಿರಬೇಕು ಅರ್ಥಾತ್ ತಮ್ಮ ಅಂತರ್–ಬಾಹ್ಯ ಶಕ್ತಿಗಳ ಸದ್ಯದ ಅಳತೆಯನ್ನೂ ಅವು ಸಾಧಿಸಬಹುದಾದ ಅತ್ಯುನ್ನತ ಆದರ್ಶಮಾನವನ್ನೂ ಅರಿತವರಾಗಿರಬೇಕು. ಕೃಷಿ–ಪಶುಪಾಲನ–ವಾಣಿಜ್ಯರೂಪದ ವಾರ್ತಾಶಾಸ್ತ್ರವನ್ನು ಅರ್ಥಾತ್ ಮನುಷ್ಯರ ಜೀವನಕ್ಕೆ ಸಾಧನಗಳಾದ ವಿವಿಧ ಉದ್ಯಮ–ಉದ್ಯೋಗ–ವೃತ್ತಿಗಳ ವಿವರಪೂರ್ಣ ಮಾಹಿತ್ಯವನ್ನು ತಿಳಿದುಕೊಂಡಿರಬೇಕು. ಇದು ಮನು ಹೇಳಿದ ರಾಜಶಿಕ್ಷಣ. ನಮ್ಮ ಪ್ರಜಾಪ್ರತಿನಿಧಿಗಳ Qualifications ಯೋಗ್ಯತೆಗಳೆಂತಿರಬೇಕು? ಎಂಬುದನ್ನು ಮನುವಿನ ಈ ಮಾತಿನಲ್ಲಿ ನಾವು ಕಂಡುಕೊಳ್ಳಬಹುದಲ್ಲವೇ? ಅನರ್ಹರಾದ ಶಾಸಕರು (ಪ್ರಜಾಕ್ರೋಧಕ್ಕೆ ತುತ್ತಾಗಿ)

---

೧೦. ಯದ್ಯದಾಚರತಿ ಶ್ರೇಷ್ಠಸ್ತತ್ತ ದೇವೇತರೋ ಜನಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ – ಭ.ಗೀ.

ಸರ್ವನಾಶ ಹೊಂದುತ್ತಾರೆ ಎಂಬ ಅಭಿಪ್ರಾಯವನ್ನು ಸೂಚಿಸಿರುವುದು ಪ್ರಜಾಪ್ರಭುತ್ವಕ್ಕೆ ಅನುಗುಣವಾದ ಮಾತು (VII-40, 41). ದುಃಶಾಸಕರನ್ನೂ ದುರಧಿಕಾರಿಗಳನ್ನೂ ಮನೆಗೆ ಕಳಿಸದಿರುವುದು ಅಧರ್ಮವೆಂಬ ಅಂಶವಿದರಿಂದ ಹೊರಡುತ್ತದೆ. ಒಂದೇ ಮಾತಿನಲ್ಲಿ ಮನುಮತವನ್ನಿಡುವುದಾದರೆ Philosopher-Kings – ತತ್ವಜ್ಞ ಶಾಸಕರೇ ನಿಜವಾದ ಶಾಸಕರು ಎನ್ನಬೇಕು; ಉಳಿದವರು ಅಲ್ಪಾರ್ಹರು, ಅನರ್ಹರು.

ಅಹಿಂಸೆಯನ್ನಾಧರಿಸಿದ್ದು ಸತ್ಯ, ನ್ಯಾಯ. ಅದು ಶಾಸ್ಯ–ಶಾಸಕವರ್ಗಗಳೆರಡರ ಹಿತಕ್ಕೂ ಪರಮ ಸಾಧನ. ಅನ್ಯೂನ–ಅನತಿರಿಕ್ತ ಪ್ರಮಾಣದಲ್ಲಿ–ತಪ್ಪಿಗೆ, ಕಾಯದೆ ಭಂಗಕ್ಕೆ ತಕ್ಕ ಅರ್ಥಾತ್ ಹೆಚ್ಚೂ ಆಗದ ಹಾಗೂ ಕಡಮೆಯೂ ಆಗದ – ಶಿಕ್ಷೆಯನ್ನು ವಿಧಿಸುವುದು ರಾಜಧರ್ಮದ ಆತ್ಮ (VII-40, 41). ಕಾರ್ಯಾಂಗದ ಅಧಿಕಾರಿಗಳು ಉಗ್ರದಂಡರೂ ಆಗಬಾರದು, ಶಿಥಿಲದಂಡರೂ ಆಗಬಾರದು. ಇದೇ ಶಿಕ್ಷಣನ್ಯಾಯ, ಕಾಲಾಂತರದಲ್ಲಿ ಹಿತವನ್ನು ಉಂಟುಮಾಡುವ ಅಹಿಂಸಾಬುದ್ಧಿ. ಈ ಬಗೆಯ ಅಹಿಂಸಾತ್ಮಕ ಆಡಳಿತವೇ ದಕ್ಷ ಆಡಳಿತವಲ್ಲವೇ? ದಂಡನೆಯು Preventive ಇತರರನ್ನು ಕಾಯದೆಬದ್ಧವಲ್ಲದ ವರ್ತನೆಗಳಿಗೆ ವಿಮುಖರಾಗುವಂತೆ ಮಾಡುವ ಲಕ್ಷಣವುಳ್ಳದ್ದಾಗಿರಬೇಕು ಎಂಬುದೂ ಸೂಚ್ಯವಾಗಿದೆ (VII-279) – ಅದಕ್ಕೂ ಹೆಚ್ಚಾಗಿ ಆಯಾ ವ್ಯಕ್ತಿಗಳ ಸಂಸ್ಕೃತಿಯ ಮಟ್ಟವನ್ನೂ ತಪ್ಪಿನ ಗುರುತ್ವ–ಲಘುತ್ವವನ್ನೂ ಲೋಕಸಿದ್ಧ ನಾಗರಿಕ ನೀತಿಯ ದೃಷ್ಟಿಯಲ್ಲಿ ಅಳೆದು ನೋಡಿ ದಂಡ್ಯರನ್ನು ದಂಡಿಸಬೇಕು ಎಂಬುದು ಸ್ಪಷ್ಟವಾಗಿ ಮನುಸ್ಮೃತಿಯು ಧ್ವನಿಸುತ್ತದೆ ಎನ್ನಬಹುದು. ಇದು ಇಂದಿನ ಭಾರತ ಕಲಿಯಬೇಕಾದ ಪಾಠ.

ಮಂತ್ರಿಗಳೇ ಮೊದಲಾದ ಅಧಿಕಾರಿಗಳ ಆಯ್ಕೆಯಲ್ಲಿ ಇಟ್ಟುಕೊಳ್ಳಬೇಕಾದ ಅರ್ಹತೆಯ ಮಾನದಂಡವೂ ಗಣ್ಯವಾಗಿದೆ (VII-54). ಅವರ ಪ್ರಾಮಾಣಿಕತೆ ಹಾಗೂ ದಕ್ಷತೆಗಳು ಸುಪರೀಕ್ಷಿತವಾಗಿರಬೇಕು. ಮನು ಮನೋಧರ್ಮದ ಯುಗಕ್ಕೆ ಸೇರಿದ ಕೌಟಿಲ್ಯನು ಬಹಳ ಮಾರ್ಮಿಕವಾಗಿ ಉಚ್ಚಾಧಿಕಾರಿಗಳ ಅರ್ಹತಾಪರೀಕ್ಷೆಗಳನ್ನು ವಿವರಿಸಿದ್ದಾನೆ. ಇದು ಕೂಡ ಆಧುನಿಕ ಭಾರತವು ಅರಗಿಸಿಕೊಳ್ಳಬೇಕಾದ ಅಂಶ. ಏಕೆಂದರೆ ಆಯಾ ಅಧಿಕಾರಿಗಳು ಅವರವರ ಸ್ವಧರ್ಮವನ್ನು (ಸ್ವಕರ್ತವ್ಯವನ್ನು) ಚಾಚೂ ತಪ್ಪದೆ ಸಮರ್ಥವಾಗಿ ನಿರ್ವಹಿಸಿಕೊಂಡು ಹೋದರೆ ಮಾತ್ರ ಸ್ವರಾಜ್ಯದ ಗುರಿಯಾದ ಸುರಾಜ್ಯ ಸ್ಥಾಪನೆ ಶಕ್ಯ. ಪದ್ಯದಲ್ಲಿ ಅತ್ಯುತ್ತಮ ಪದಗಳು ಅತ್ಯುತ್ತಮ ಕ್ರಮದಲ್ಲಿ ಬದ್ಧವಾಗಿರಬೇಕು ಎಂಬ ಮಾತಿನಂತೆಯೇ ಸರಕಾರದಲ್ಲಿ ಅತ್ಯುತ್ತಮರು (ಸಾಂಸ್ಕೃತಿಕ ಶ್ರೀಮಂತಿಕೆಯುಳ್ಳ ಕುಬೇರರು ಅಥವಾ ಪುರುಷೋತ್ತಮರು) ಅತ್ಯುತ್ತಮ ಕ್ರಮದಲ್ಲಿ ನಿಯುಕ್ತರಾಗಿರಬೇಕು ಎಂಬುದು ಮನುಹೃದಯ. ನವಭಾರತವೀಮಾತಿಗೆ ಎರಡಾಡೀತೇ?

ಕೆಲವೆಡೆ ಇಂದು ಕಂಡು ಬರುವ ಜವಾಬುದಾರಿ ಸರಕಾರದ ಬೇಜವಾಬುದಾರಿಯನ್ನು ಟೀಕಿಸಲೋ ಎಂಬಂತೆ ದಂಡನೀಯರಿಗೆ ತಕ್ಕ ದಂಡನೆಯನ್ನು ಶಾಸಕರು ವಿಧಿಸದೆ ಹೋದರೆ ಅಪರಾಧಿಗಳ ಪಾಪವು ದಂಡನಾಧಿಕಾರಿಗಳಾದ ಶಾಸಕರಿಗೆ ಲೇಪಿಸುತ್ತದೆ ಎನ್ನುತ್ತಾನೆ ಮನು (VIII-316). ಅಪ್ರೌಢರ (ಅಪ್ರಾಪ್ತ ವಯಸ್ಕರ) ಅಪರಾಧಕ್ಕೆ, ಅಬಲೆಯರ ತಪ್ಪಿಗೆ ಅವರ ಪಾಲಕರು ದಂಡ ತೆರಬೇಕೆಂಬುದು ಇಂದೂ ರೂಢಿಯಲ್ಲಿರುವಾಗ

ಪ್ರಜೆಗಳ ತಪ್ಪುಗಳಿಗೆ ಪ್ರಜಾಪಾಲಕರಾದ ನ್ಯಾಯ–ಕಾರ್ಯ–ಶಾಸನಾಂಗಗಳ ಮುಖ್ಯರೇ ಆತ್ಯಂತಿಕ ಹೊಣೆಗಾರರು ಎಂಬ ಧರ್ಮರಹಸ್ಯವು ಅಭೇದ್ಯವಲ್ಲವೇ? ಸರಕಾರವೊಂದು ಪ್ರಚಾರೋಪದೇಶದ ಸಂಸ್ಥೆ ಎಂಬ ತಪ್ಪು ತಿಳಿವಳಿಕೆ ಅಳಿದ ಹೊರತು ಸರಕಾರಸ್ಥರು ಉಕ್ತ ಧರ್ಮರಹಸ್ಯವನ್ನು ಅರಗಿಸಿಕೊಳ್ಳಲಾರರು; 'ರಚನಾತ್ಮಕ ಟೀಕೆ ಬೇಕು, ವಿಘಾತಕ ಟೀಕೆ ಬೇಡ' ಎಂದು ಮುಂತಾಗಿ ಬಡಬಡಿಸುವುದನ್ನು ಬಿಡಲಾರರು; ಅಂತಹ ಗಳಹುವ ಅಭ್ಯಾಸವನ್ನು ಬಿಟ್ಟ ಹೊರತು ಅವರು ಸುಧಾರಿಸಲಾರರು.

ನ್ಯಾಯವಾಗಿ ಶಿಕ್ಷೆಗೆ ಗುರಿಯಾದವರು ಪುನಃ ಅಂಥ ಶಿಕ್ಷಾರ್ಹವಾದ ತಪ್ಪುಗಳನ್ನು ಮಾಡದೆ ಉಳಿಯಬೇಕಾದರೆ ಮನುವಿನ ಮನಃಶಾಸ್ತ್ರಜ್ಞಾನವು ನಮ್ಮ ಕಾರ್ಯ – ನ್ಯಾಯಾಂಗಸ್ಥರಿಗಿರುವುದು ಅತ್ಯಗತ್ಯ. ಕಳ್ಳನೆಂದು ಕೋರ್ಟು ತೀರ್ಪಿತ್ತ ಬಳಿಕ ರಾಜನು (ನ್ಯಾಯಾಧಿಕಾರಿಯು) ಅವನ ತಲೆ ಬೋಳಿಸಿ ರಾಜಮಾರ್ಗದಲ್ಲಿ ಓಡಿಸಿಕೊಂಡು ಹೋಗಬೇಕು. 'ನಾನು ಇಂಥ ವಸ್ತುವನ್ನು ಕದ್ದೆ, ನಾನು ಮಾಡಿದ್ದು ಹೀಗೆ, ನನಗೆ ಶಿಕ್ಷೆಯನ್ನು ವಿಧಿಸಿರಿ' ಎನ್ನುತ್ತ ಕಳ್ಳನು ಹೆಗಲ ಮೇಲೆ ಒನಕೆಯನ್ನೋ ಬಡಿಗೆಯನ್ನೋ ಶಕ್ತ್ಯಾಯುಧವನ್ನೋ ಅಥವಾ ಎರಡೂ ತುದಿಗಳು ಚೂಪಾಗಿರುವ ಕಬ್ಬಿಣದ ಸರಳನ್ನೋ ಹೊತ್ತುಕೊಂಡು ಓಡಬೇಕು (VIII-314, 315). ಏಕೆ? ಅವನೇ ಅಪರಾಧಿ – ಎಂಬುದು ಸಮಸ್ತ ಜನರಿಗೂ ತಿಳಿದರೆ ಅವರು ಅವನಿಗೆ ಅಂಥ ಅಪರಾಧವನ್ನು ಮಾಡಲು ಮತ್ತೆ ಅವಕಾಶ ಕೊಡಲಾರರು; ಅವನಿ(ಳಿ)ಗಾದರೂ ಮರ್ಯಾದೆ ಕಳೆದುಕೊಂಬುದು ಎಂದರೇನೆಂಬುದು ಚೆನ್ನಾಗಿ ಅರ್ಥವಾಗಿ ಮತ್ತೆ ಅಂಥ ಅಧಾರ್ಮಿಕ ವರ್ತನೆಗೆ ಕೈಹಾಕಲು ಪರಿಣಾಮಕರವಾಗಿ ಹೆದರುತ್ತಾನೆ(ಳೆ). ಈ ಮಾದರಿಯಲ್ಲಿ ಸಾರ್ವಜನಿಕವಾಗಿ ಸಾರಿಕೊಂಡು ಹೋಗುವ ತಪ್ಪೊಪ್ಪಿಗೆಯನ್ನು ರೂಢಿಗೆ ತಂದ ಹೊರತು ಭಾರತದಲ್ಲಿಂದು ಮೋಸಗಾರಿಕೆಯ ಪ್ರಮಾಣ ಕಡಮೆಯಾಗದು. ಈ ವಿಧಾನವು ಅನಾಗರಿಕವೆನ್ನಲು ಇಂದಿನ ಭಾರತಕ್ಕೆ ಅಧಿಕಾರವಿಲ್ಲ – ಎಂದು ಮನೋವಿಜ್ಞಾನಿ ಹೇಳದಿರಲಾರ; ನ್ಯಾಯದ ನೀತಿಯ ವಾಸ್ತವಿಕ ಮಾನಸ ಶಾಸ್ತ್ರೀಯ ಸತ್ಯವನ್ನು ಎಂದೂ ಕಡೆಗಣಿಸಲಾರ.

ಸುಳ್ಳುಸಾಕ್ಷಿ ಹೇಳುವುದು ಸಾಮಾನ್ಯವಾಗುತ್ತ ಬಂದ ಇಂದಿನ ಭಾರತದಲ್ಲಿ ಅದು ಎಷ್ಟು ಅನಾಗರಿಕ ಎಂಬುದನ್ನು (VIII-44) ನಿತ್ಯವೂ ಪ್ರಚಾರ ಮಾಡಿದರೂ ಕಡಮೆಯೇ ಸರಿ.[೧೧] ವಚನಭಂಗ, ಅನೃತವಾದ, ಅಪಲಾಪ, ಅಪಸಮರ್ಥನೆಗಳು ವಿದ್ಯಾವಂತರಲ್ಲೂ ದಿನೇ ದಿನೇ ವೃದ್ಧಿಯಾಗುತ್ತಿರುವಾಗ ಇಂದಿನ ನಾಗರಿಕತೆ ಸದ್ಗತಿಯನ್ನು ಹೊಂದಬೇಕಾದರೆ ಈ ಬಗೆಗೂ ಗೌರವಚ್ಯುತಿಯಾಗುವಂಥ ಶಿಕ್ಷಾಪದ್ಧತಿಯನ್ನು ಕೂಡಲೇ ಜಾರಿಗೆ ತರುವುದಗತ್ಯ.

ಅಂಗಹೀನರೇ ಮೊದಲಾದ ಅನಾಥರ ಹಾಗೂ ದುರ್ಬಲರಾದ ಬಾಲ–ವೃದ್ಧ ಸ್ತ್ರೀಯರ ಸಂರಕ್ಷಣೆಗೆ ವಿಶೇಷ ವಿಧಿಗಳನ್ನು ಧರ್ಮಶಾಸ್ತ್ರಗಳಲ್ಲಿ ಕಾಣಬಹುದು (VIII-27, 149, 395). ಜೊತೆಗೆ ಆದರ್ಶ ಲೌಕಿಕ–(Gentleman) ಸಂಸ್ಕೃತ ಎಂದು ಅಂದು

---

೧೧. 'The false witness was punished by a fine (the amputation of a limb, according to Megasthanese) without prejudice to religious penalties.'

- Louis Renou : The Civilization in Ancient India

ಪ್ರಸಿದ್ಧನಾಗಿದ್ದ ಶ್ರೋತ್ರಿಯನಿಗೂ ಮನು ವಿಶೇಷ ಸಂರಕ್ಷಣೆಯನ್ನು ಹೇಳಿದ್ದಾನೆ. ಇದೇಕೆ? ಕೆಲವೆಡೆ ಸಭ್ಯತೆಯು ಆದರ್ಶ ಸೀಮೆಯು ಸಭ್ಯನನ್ನು (ಸಂಸ್ಕೃತನನ್ನು) ಅರಕ್ಷಿತತೆಗಿಳಿಸಬಹುದಾಗಿದೆ– ಸಭ್ಯತೆಗೆ ಬಗ್ಗದ ಜನ ಎದುರಾದಾಗ. ಮಹಾಕುಲೀನನಾದ ಆರ್ಯನಿಗೆ (ಸಂಸ್ಕೃತನಿಗೆ) ಇಂಥ ವಿಶೇಷ ರಾಜಾನುಗ್ರಹವನ್ನು ಆತ ಹೇಳಿದ್ದಾದರೂ ಉಕ್ತದೃಷ್ಟಿಯಿಂದಲೇ. ಈ ಸಂದರ್ಭವು ನಾಗರಿಕತೆಯ Effeminacy ಸ್ತ್ರೈಣತೆಯನ್ನು ಹೊರಗೆಡಹುತ್ತದೆ. ಸಂಸ್ಕೃತರು ಅಲ್ಪ ಸಂಸ್ಕೃತ ಅಥವಾ ಅಸಂಸ್ಕೃತರ ನಡುವೆ ಬಾಳುವೆ ಮಾಡುವಾಗ ದಾರಿದ್ರ್ಯಕ್ಕಿಳಿಯಬಹುದು, ಅಗೌರವಿತರಾಗಬಹುದು, ವ್ಯಾಧಿಗೆ ತುತ್ತಾಗಬಹುದು, ಅಂಗವಿಕಲತೆ ಹೊಂದಬಹುದು. ಹೀಗೆ ಭೌತಿಕ ಹಾಗೂ ಮಾನಸಿಕ ನಷ್ಟಕ್ಕೆ ಗುರಿಯಾಗುವ ಸಂದರ್ಭವು ಸಾತ್ವಿಕರಿಗೆ ಬಹಳ ಎಂಬುದನ್ನರಿತ ಕಾರಣದಿಂದಲೋ – ಅಥವಾ ತಮ್ಮ ಆದರ್ಶ ಜೀವನಕ್ಕೆ ಲೋಕನಾಯಕರ ಮನ್ನಣೆಯಿಲ್ಲವೆಂದು ತಿಳಿದಾಗ ಸಂಸ್ಕೃತರು ಸಭ್ಯತೆಯ ಆದರ್ಶಗಳನ್ನು ಬಿಡುತ್ತ ಹೋಗಬಹುದು, ಅದನ್ನು ಕಂಡು ಅವರಿಗಿಂತ ಕನಿಷ್ಠರು ಮತ್ತಷ್ಟು ಕನಿಷ್ಠರಾಗುತ್ತ ಹೋಗಬಹುದು, ಇದೇ ಪ್ರಕ್ರಿಯೆ ಮುಂಬರಿದರೆ ಜನತೆ ಕೊನೆಯಲ್ಲಿ ಮಾತ್ಸ್ಯನ್ಯಾಯವನ್ನು ಅನುಸರಿಸಿ ಕ್ರಮಶಃ ನಾಶಹೊಂದುವ ಸ್ಥಿತಿಗಿಳಿಯಬಹುದು– ಇಲ್ಲವೆ ಸಂಸ್ಕೃತರು ಅನಾದರಕ್ಕೆ ಕೆರಳಿ ಪ್ರತೀಕಾರ ಮಾರ್ಗ ಹಿಡಿದರೆ ಅಸಂಸ್ಕೃತರಿಂದಾಗುವ ಸಾಮಾಜಿಕ ನಷ್ಟಕ್ಕಿಂತ ಹೆಚ್ಚಿನ ನಷ್ಟವು ಸಂಭವಿಸಬಹುದು ಎಂಬ ಕಾರಣದಿಂದಲೋ ಮನುವು ಪೂಜ್ಯರಾದ ಶ್ರೋತ್ರಿಯರನ್ನೂ ಆರ್ಯರನ್ನೂ ಮಹಾ ಕುಲೀನರನ್ನೂ ಸಮ್ಯಗನುಗ್ರಹಕ್ಕೆ ಪಾತ್ರರೆಂದು ದುರ್ಬಲರ ಪಟ್ಟಿಯಲ್ಲಿ ಸೇರಿಸಿದ್ದೆಂದು ತೋರುತ್ತದೆ. ಈ ದೃಷ್ಟಿಯಿಂದಲೇ ಬಹುಶಃ ಕಾಳಿದಾಸನು ತನ್ನ ರಘುವಂಶದಲ್ಲಿ ದೇವತಾ ವಿಶೇಷವಾದ ಕಾಮಧೇನುವನ್ನು ಸ್ವರ್ಗದಿಂದ ಭೂಮಿಗಿಳಿದು ಬರುವಾಗ ಹಾದಿಯಲ್ಲಿ ಅನ್ಯ ಕರ್ತವ್ಯ ಚಿಂತನದಲ್ಲಿ ಲೀನನಾಗಿದ್ದ ಕಾರಣದಿಂದ ನಮಸ್ಕರಿಸಲು ಮರೆತು ಅದರ ಶಾಪಕ್ಕೆ ದಿಲೀಪ ಮಹಾರಾಜನು ತುತ್ತಾದನೆಂದು ಹೇಳಿದ್ದಾನೆ. ಅವನ ಮನುಹೃದಯಜ್ಞತೆಯ ಪ್ರಕಾರ ಪೂಜ್ಯಪೂಜಾವ್ಯತಿಕ್ರಮವು ಸಮಾಜದ್ರೋಹ, ನಾಗರಿಕತೆಗೆ ಗಂಡಾಂತರವುಂಟು ಮಾಡುವಂಥದು. ಇಲ್ಲಿ ನಾವು Positive Social Virtue– ವಿಧಾಯಕವಾದ ಸಾಮಾಜಿಕ ಶೀಲದ ಅತ್ಯನಿವಾರ್ಯತೆಯನ್ನು ಕಾಣಬಹುದು. ಅಪೂಜ್ಯರ ಪುರಸ್ಕಾರ, ಪೂಜ್ಯರ ತಿರಸ್ಕಾರ ಎಲ್ಲಿ ದಿನೇ ದಿನೇ ವರ್ಧಿಸುತ್ತ ಹೋಗುವುದೋ ಆ ದೇಶದ ಅವನತಿ ಕಟ್ಟಿಟ್ಟದ್ದು ಎಂಬ ಎಚ್ಚರಿಕೆಯನ್ನು ಮನು ಕೊಟ್ಟಿದ್ದಾನೆ ಎನ್ನಬಹುದು. ಆಧುನಿಕ ಭಾರತೀಯ ನಾಗರಿಕತೆಯಲ್ಲಿ ಆದರವುಳ್ಳ ಶಾಸಕರಿಗಿದು ಪರಮಪಾಠ. ಇಂದಿನ ಅರ್ಧಮರ್ಧ ಅರಾಜಕವಾದ ಸಾಮಾಜಿಕ ವರ್ತನೆಯ ದಿನಮಾನದಲ್ಲಿ ಪ್ರತಿಯೊಬ್ಬ ಪ್ರಜೆಯೂ ಈ ನಾಗರಿಕತೆಯ ಜೀವಾಳವನ್ನು ಶ್ರವಣ–ಮನನ–ನಿಧಿಧ್ಯಾಸಗಳಿಂದ ಆಚಾರದಲ್ಲಿ ತರುವುದಗತ್ಯ. ಇದು ಸಮಾಜಧರ್ಮದ ಪರಮ ರಹಸ್ಯ. ಸುಶೀಲರನ್ನು ಕಾಯೇನ ವಾಚಾ ಮನಸಾ ಸತ್ಕರಿಸುವುದೂ ದುಃಶೀಲರನ್ನು ಅದೇ ಪ್ರಕಾರ ದಂಡಿಸುವುದೂ ಸಾಂವಿಧಾನಿಕ, ಧರ್ಮಸಂಸ್ಥಾಪಕ ಎಂಬುದನ್ನು ಶಾಸಕರೂ ಶಾಸ್ಯರೂ ಹೃದ್ಗತಮಾಡಿಕೊಳ್ಳಬೇಕು. ಮನುವಿನ ಈ ಕೊಡುಗೆ ಅಮೂಲ್ಯ.

ಶ್ರೇಷ್ಠರ ಶ್ರೇಷ್ಠತೆ ಬೆಳೆಯುವಂತೆ ತನು–ಮನ–ಧನದಿಂದ ನೆರವಾಗುವುದು ಮತ್ತು ಕನಿಷ್ಠರ ಕನಿಷ್ಠತೆ ಅಳಿಯುವಂತೆ ಹಾಗೇ ಮನೋವಾಕ್ಕಾಯ ಕರ್ಮಗಳಿಂದ ಸತತವಾಗಿ ದುಡಿಯುವುದು ವ್ಯಷ್ಟಿ–ಸಮಷ್ಟಿಗಳೆರಡರ ಹಿತಕ್ಕೂ ಅಪರಿಹಾರ್ಯ ಎಂಬುದು ಮಾನಸಶಾಸ್ತ್ರೀಯವಾದ ವ್ಯಾವಹಾರಿಕ ಸತ್ಯ. "Eternal Vigilance is the price of Liberty ನಿತ್ಯವೂ ಮಾಡುವ ಪ್ರತ್ಯಕ್ಷವೇಕ್ಷಣ ಎಂಬುದು ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ತೆರಬೇಕಾದ ಬೆಲೆ" ಎಂಬುದಕ್ಕಿಂತಲೂ "Eternal Vigilance is the price of Civilization – ನಾಗರಿಕತೆಯನ್ನುಳಿಸಿಕೊಳ್ಳಲು ನಾಗರಿಕರ ನೀತಿ–ನಡತೆಗಳ ಮೇಲೆ ಸ್ವ–ಪರಭೇದವಿಲ್ಲದೆ ಎಲ್ಲರೂ ಸದಾ ಜಾಗರೂಕರಾಗಿ ನೋಡುತ್ತಿರುವುದು ನಾವು ಅನಿವಾರ್ಯವಾಗಿ ತೆರಬೇಕಾದ ಮಹಾಮೂಲ್ಯ" – ಎಂಬುದೇ ಹೆಚ್ಚೆನ್ನಬೇಕು. ಪೂಜ್ಯಪೂಜಾವ್ಯತಿಕ್ರಮವು ಪರೋಕ್ಷಾಪರೋಕ್ಷವಾಗಿ ಕ್ರಮೇಣ ಸರ್ವರ ಸರ್ವನಾಶಕ್ಕೆ ಹೇತು. ಪೂಜ್ಯರ ಅಸಂತೋಷವು ನಾಗರಿಕತೆಗೆ ಕೊಟ್ಟ ಶಾಪ; ಅಪೂಜ್ಯ ಜನರ ಸಂತೋಷವು ಅದರ ನಾಶಕ್ಕೆಂದು ಕೊಟ್ಟ ಬೆಂಕಿ. ಒಂದು ನಾಗರಿಕತೆಯು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಮಾಡಬೇಕಾದ ಮಹಾದೇವ ಪೂಜೆಯೆಂದರೆ ನಿಂದ್ಯಾನಿಂದ್ಯಗುಣವಿವೇಕವೇ. ಅಹಿಂಸೆಯು ಅನಿಂದ್ಯ, ಹಿಂಸೆಯು ನಿಂದ್ಯ; ಅಹಿಂಸಾಚಾರಪರರು ಸತ್ವದಿಂದ ಹುಟ್ಟಿದ ನಿಜವಾದ **ಜ್ಞಾನವುಳ್ಳವರು,**[೧೨] ಹಿಂಸಾ ಪರಾಯಣರು ತಮದಿಂದ ಹುಟ್ಟಿದ ಅಜ್ಞಾನ–ಜ್ಞಾನಾಭಾಸಗಳನ್ನುಳ್ಳವರು. ಅಹಿಂಸಾಸಿದ್ಧಿಯುಳ್ಳವರು ಶ್ರೋತ್ರಿಯರು, ಕುಲೀನರು, ಆರ್ಯರು, ಸಂಸ್ಕೃತರು, ನಾಗರಿಕರು; ಅವರ ಸಂರಕ್ಷಣೆಯೆಂದರೆ ಅಹಿಂಸಾಧರ್ಮದ ಸಂರಕ್ಷಣೆ, ನಾಗರಿಕತೆಯ ಸಂಗೋಪನ.

ಈ ಧೋರಣಕ್ಕನುಗುಣವಾಗಿ ಪ್ರಜೆಗಳು ತಮ್ಮ ತಮ್ಮ ಧರ್ಮಗಳನ್ನು ತಪ್ಪದೆ ಪಾಲಿಸುತ್ತಿರುವಂತೆ ನೋಡಿಕೊಳ್ಳುವುದೇ ರಾಜಧರ್ಮದ ರಾಜಮಾರ್ಗ. ಕ್ರಿ.ಪೂ. ಮೂರನೆಯ ಶತಮಾನದಲ್ಲಿದ್ದ (ಮನು–ಬುದ್ಧ–ಕೌಟಿಲ್ಯ ಯುಗಕ್ಕೆ ಸೇರಿದ) ಅಶೋಕ ಚಕ್ರವರ್ತಿಯು ಪ್ರಜೆಗಳೆಲ್ಲರೂ ದಯಾ–ದಾನ–ಸತ್ಯ–ಪಾವಿತ್ರ್ಯ–ಮಾರ್ದವ–ಶಾಂತಿ–ಪ್ರಸಾದ–ಸಾಧುಶೀಲ–ಜಿತೇಂದ್ರಿಯತ್ವಗಳನ್ನು ಪಾಲಿಸುತ್ತಿರಬೇಕೆಂದು ಶಿಲಾಶಾಸನ ಕೊರೆಯಿಸಿದನು. ಸಂಸ್ಕೃತ ಸಾಹಿತ್ಯದಲ್ಲಿ ಬರುವ ಧೀರೋದಾತ್ತ ನಾಯಕರೆಲ್ಲರೂ ಮೇಲೆ ಹೇಳಿದ ಬಗೆಯ ಧರ್ಮಶೀಲರು, ಆದರ್ಶರಾಜರು. ಧರ್ಮಶಾಸ್ತ್ರಗಳು ವಾಚ್ಯವಾಗಿ ಉಪದೇಶಿಸಿದ್ದನ್ನು ಹೀಗೆ ಕವಿಗಳು ಕಲಾರೂಪದಲ್ಲಿ ಧ್ವನಿಸಿದರು; ಜೀವನ ಮತ್ತು ಲಲಿತವಾಙ್ಮಯಾದಿ ಕಲೆಗಳ ಸಹಕಾರವು ಹಿತಕರವಾದ ಆದರ್ಶಗಳನ್ನು ಜನರ ಮುಂದೆ ಕಡೆದು ನಿಲ್ಲಿಸಿ, ಅವೆಲ್ಲವನ್ನು ಜನಪ್ರಿಯಗೊಳಿಸುತ್ತ ಬಂದುದರ ಫಲವಾಗಿಯೇ ಹಿತಾಹಿತವಿವೇಕವಿಂದು ನಮ್ಮಲ್ಲಿ ಇಷ್ಟಾದರೂ ಉಳಿಯುವಂತಾಗಿದೆ.[೧೩]

⌘ ⌘ ⌘

---

೧೨. 'ಸತ್ವಾತ್ ಸಂಜಾಯತೇ ಜ್ಞಾನಂ –ಭ. ಗೀ.

೧೩. ಆದಿರಾಜಯಶೋಬಿಂಬಂ ಆದರ್ಶಂ ಪ್ರಾಪ್ಯ ವಾಙ್ಮಯಂ ।
ತೇಷಾಮಸನ್ನಿಧಾನೇಽಪಿ ನ ಸ್ವಯಂ ಪಶ್ಯ ನಶ್ಯತಿ ॥ –ದಂಡಿ: ಕಾವ್ಯಾದರ್ಶದಲ್ಲಿ

## ೪

# ಯೋಧಧರ್ಮ

ರಾಜಧರ್ಮದಲ್ಲಿ ಧರ್ಮಯುದ್ಧದ ಪದ್ಧತಿಯನ್ನು ಹೇಳಿದವನೂ ಮನುವೇ. ಅಲೆಕ್ಸಾಂಡರನನ್ನು ಎದುರಿಸಿದ ಪುರೂರವನು ಈ ಯೋಧಧರ್ಮದವನಾಗಿದ್ದ. ಗುಪ್ತಾಯುಧ, ವಿಷಲಿಪ್ತ ಆಯುಧ, ಜ್ವಾಲಾಮಯ ಆಯುಧ ಮುಂತಾದವುಗಳು ನಿಷಿದ್ಧ; ಷಂಢ, ಶರಣಾಗತ, ಹೆದರಿ ಓಡಿ ಹೋದವ, ನೋಟಕ, ನಿದ್ರಾಪರವಶ, ನಿಃಶಸ್ತ್ರ, ನಿಷ್ಕವಚ, ಅನ್ಯಾಸಕ್ತ, ಭಗ್ನಶಸ್ತ್ರ, ಆರ್ತ, ಭಯಗ್ರಸ್ತ, ಆಪದ್ಗತ ಮುಂತಾದವರೊಡನೆ ನಿಜಧೀರನು ಸೆಣಸಲು ಹೋಗಬಾರದೆಂದ ಮನುವಿಗೆ ಗೊತ್ತಿದ್ದಷ್ಟು ಮಾನವತೆ ಇಂದಿನ ನಮಗೆ ಗೊತ್ತಿದೆಯೇ? ಧರ್ಮಯುದ್ಧದ ಅತಿರೇಕವೇ ಮಹಮ್ಮದ್ ಘೋರಿಗೆ ಜಯವನ್ನು ದೊರಕಿಸಿಕೊಟ್ಟ ಐತಿಹಾಸಿಕ ದೃಷ್ಟಾಂತವನ್ನು ನೆನೆದರೆ, ನಾಗರಿಕತೆಯ ಉಚ್ಚಮಟ್ಟದಲ್ಲಿ ತಲೆಹಾಕುವ ಸ್ತ್ರೈಣತೆಯ ಅಂಶವು ಪುನಃ ಕಣ್ಣಿಗೆದುರಾಗುತ್ತದೆ. ಈ ಸ್ತ್ರೈಣತೆಯು ಅವಿವೇಕ; ನಾಗರಿಕತೆಯ, ಸಂಸ್ಕೃತಿಯ ಆಭಾಸ ಎನ್ನದೆ ಗತ್ಯಂತರವಿಲ್ಲ. 'ಯೋದೇಶ–ಕಾಲ–ಕಾರ್ಯವ್ಯಪೇಕ್ಷಯಾ ಪಂಡಿತಃ ಸ ಪುಮಾನ್' ಎಂಬ ಪಾತ್ರಾಪಾತ್ರವಿವೇಕದ ದೃಷ್ಟಿಯಿಲ್ಲದ ಕಾಲದಲ್ಲಿ ಇಂಥ ಧರ್ಮಾಭಾಸವು ಧರ್ಮವೆನಿಸಿ ಮನುಷ್ಯರ ಸೋಲಿಗೆ ಕಾರಣವಾಗುತ್ತದೆ. ಗಾಂಧಿಯವರು ಹುತಾತ್ಮರಾದಾಗ "It is dangerous to be too good" ಎಂದು ಬರ್ನಾಡ್ ಷಾ ಹೇಳಿದ ಹಾಗೆ, 'ಅತಿ ಸರ್ವತ್ರ ವರ್ಜಯೇತ್' ಅಲ್ಲವೆ? ವೈಯಕ್ತಿಕ ಹಿತಾಹಿತಗಳ ವಿವೇಕದ ಪ್ರಕಾರ ಅತಿಸಾತ್ವಿಕತೆಯು ಸಾಧುವೆನಿಸಬಹುದಾದರೂ ಸಮಷ್ಟಿಯಲ್ಲಿ ಬದುಕಬೇಕೆಂದಿರುವ ಎಲ್ಲ ವ್ಯಕ್ತಿಗಳ ದೃಷ್ಟಿಯಿಂದ ಎಷ್ಟೋ ವೇಳೆ ಕರ್ತವ್ಯಬದ್ಧ ವ್ಯಕ್ತಿಯೊಬ್ಬನ ಅಥವಾ ಗುಂಪೊಂದರ ಅತಿಸಾತ್ವಿಕತೆಯು ಲೌಕಿಕಮಾನದಲ್ಲಿ ಹಲವು ಸಲ ಅಷ್ಟೊಂದು ಒಳಿತಿಗಾಗದು. ರಾಜಾದಿನಾಯಕರೇ ಇದಕ್ಕೆ ದೃಷ್ಟಾಂತ. ಅವರ ನೇತೃ ಧರ್ಮಕ್ಕದೊಮ್ಮೆ ವಿರುದ್ಧವಾದೀತು– ನೇಯರಿಗೆ ಹಾನಿ ಎನಿಸಿದಾಗ.

ಬಹೂದಯದಲ್ಲೇ ಸರ್ವೋದಯವಿರುವುದು ವ್ಯವಹಾರ್ಯವಾದುದರಿಂದ ಧರ್ಮಾಧರ್ಮ ವಿವೇಚನೆಯಲ್ಲಿ ಸಮಷ್ಟಿದೃಷ್ಟಿಗೂ ವ್ಯಷ್ಟಿದೃಷ್ಟಿಗೂ ವಿರೋಧ ಬಂದಾಗ ಮೊದಲಿನದರ ಹಿತದೃಷ್ಟಿಗೆ ವಿರೋಧವುಂಟಾಗದಿರುವಂತೆ ನಡೆದುಕೊಳ್ಳುವುದು ಎರಡನೆಯದಕ್ಕೆ ನ್ಯಾಯಬದ್ಧವೆನಿಸುತ್ತದೆ; ವ್ಯಷ್ಟಿಯ ಅಭಿಪ್ರಾಯವನ್ನು ಸಮಷ್ಟಿ ಸ್ವೀಕರಿಸಿದಾಗ

ಮಾತ್ರ ಇಂತಹ ತೊಂದರೆ ಉಂಟಾಗದು. ವ್ಯಕ್ತಿಯ ಕಾರ್ಯಸ್ವಾತಂತ್ರ್ಯಕ್ಕೆ ಗಡಿಗೆರೆ ಎಳೆಯುವ ನಿಯಮವಿದು.[೧೪] ವ್ಯಕ್ತಿಯು ತನಗೆ ಕಂಡಂತೆ ವಿಚಾರ ಮಾಡಬಹುದು, ಅಂಥ ವಿಚಾರವನ್ನು ಅನಿರ್ಬದ್ಧವಾಗಿ ಉಚ್ಚಾರ ಮಾಡಬಹುದು. ಆದರೆ ಆಚಾರದಲ್ಲಿ ತನ್ನ ಸುತ್ತುಮುತ್ತಲಿನ ಮಹಾಭಾಗರ (Majority) ಬಗೆಗೆ ತಾನು ಮಾಡಬೇಕಾಗಿರುವ ಕರ್ತವ್ಯಕ್ಕೆ ಲೋಪ–ಆಗಮ–ಆದೇಶಗಳುಂಟಾಗದಂತೆ ನೋಡಿಕೊಳ್ಳುವುದು ಅಗತ್ಯವಲ್ಲವೇ? ಸ್ವದೇಶದ ಹಿತಕ್ಕೆ ವಿರುದ್ಧವಾದದು ಎಂದೂ ಸ್ವಧರ್ಮವಾಗದು.

ಮನುಮತಾನುಸಾರಿಯಾದ ಮಹಾಭಾರತವು 'ಶೂರಃ ಸರ್ವಂ ಪಾಲಯತಿ' ಎಂದು ಯೋಧನ ಪಾಲಕತ್ವವನ್ನೂ 'ಬಲೇ ಪ್ರತಿಷ್ಠಿತೋ ಧರ್ಮಃ' ಎಂದು ಅವನಿಗಿರಬೇಕಾದ ಬಲವನ್ನೂ 'ಗುರೋರಪ್ಯವಲಿಪ್ತಸ್ಯ.....' ಎಂದು ಅವನ ವಿಧೇಯತೆಗೆ ಅಪವಾದವಾಗಿ ಅವಿವೇಕಿ ಸ್ವಾಮಿಯನ್ನು ದಂಡಿಸುವ ಪ್ರಬುದ್ಧತೆಯನ್ನೂ ಎತ್ತಿ ಹೇಳಿದೆ.

⌘ ⌘ ⌘

---

೧೪. "Acts, of whateve0r kind, which without justifiable casue do harm to others may be, and in the more important cases absolutely require to be, controlled by the unfavourable sentiments, and, when needful by the active interference of mankind. The liberty of the individual must be thus far limited; he must not make himself a nuisance to other people."

-John Stuart Mill : on Liberty.

೫

# ಶ್ರದ್ಧಾಧರ್ಮ

ಧರ್ಮವನ್ನು 'ಅಲೌಕಿಕೋಪಾಯ' ಎಂದು ಭಾರತವು ಗ್ರಹಿಸಿದ್ದರ ಅರ್ಥವನ್ನು ಮನುವು ಸುಳ್ಳುಸಾಕ್ಷಿ ಹೇಳಬಾರದೆಂದು ವಿಧಿಸುವಾಗ (VIII-82) ಅರಿತು ಕೊಳ್ಳಬೇಕಾಗುತ್ತದೆ. ಸುಳ್ಳು ಸಾಕ್ಷಿಗಾರನು 'ವರುಣನ ಪಾಶದಿಂದ ಬದ್ಧನಾಗುತ್ತಾನೆ; ಹಾಗೆ ಅವನು ನೂರಾರು ಜನ್ಮಗಳವರೆಗೆ ವಿವಶನಾಗಿ ಬದುಕಬೇಕಾಗುತ್ತದೆ'– ಅರ್ಥಾತ್ ದುಃಖಿಯಾಗಿರಬೇಕಾಗುತ್ತದೆ: 'ಸರ್ವಂ ಪರವಶಂ ದುಃಖಂ, ಸರ್ವಂ ಆತ್ಮವಶಂ ಸುಖಂ' (IV-160) ಎಂಬುದು ಮನುವಿನ ಸ್ವಾತಂತ್ರ್ಯಸೂತ್ರ. 'ಎಂಥವನ ಮನವನ್ನೂ ಓದಬಲ್ಲೆ' ಎಂಬ ಮನಃಶಾಸ್ತ್ರಜ್ಞನಿನ್ನೂ ಹುಟ್ಟಿಲ್ಲ. ಆದುದರಿಂದ ಆತ್ಮಸಾಕ್ಷಿಯನ್ನು ಆಧರಿಸದೆ ಮಾನವ ವ್ಯವಹಾರಕ್ಕೆ ಗತ್ಯಂತರವಿಲ್ಲ. ಮನಃಸಾಕ್ಷಿಯನ್ನು ಅದುಮಬಹುದು; ಧರ್ಮ–ಆತ್ಮ–ಪರಮಾತ್ಮರ ಸ್ಥಾನಮಾನಗಳೊಂದೇ ಎಂಬ ಶ್ರದ್ಧೆಯಿದ್ದಾಗ ಆತ್ಮಸಾಕ್ಷಿಯನ್ನು ಮನುಷ್ಯನೆಂದೂ ವಂಚಿಸಲಾರ. ಕನಕದಾಸರು ಬಾಳೆಹಣ್ಣನ್ನು ತಿಂದ ಕತೆ ಇದಕ್ಕೆ ನಿದರ್ಶನ. ದೈವಶ್ರದ್ಧೆಯ ಮಹಿಮೆ, ಅಪ್ರತಿಹತ ಪ್ರಯೋಜನ ಮತ್ತು ಅನಿವಾರ್ಯತೆ ಮನುವಿಗೆ ಗೊತ್ತು (VIII-86). ತರ್ಕವು ಅಪ್ರತಿಷ್ಠ ಎಂಬುದು ತರ್ಕಸಿದ್ಧವಾಗಿರುವಾಗಲಂತೂ ದೈವಶ್ರದ್ಧೆ ಸುಪ್ರತಿಷ್ಠವಾಗುತ್ತದೆ.[೧೫] ಇಲ್ಲವಾದರೆ ಯಾವ ಸರ್ವಾಧಿಕಾರಿಯೂ ಎಲ್ಲ ಸಾಕ್ಷಿಗಾರರಿಂದಲೂ ಸತ್ಯವನ್ನೇ ಹೇಳಿಸಬಲ್ಲೆನೆಂದು ಹೇಳಲಾರನಾದುದರಿಂದ ಸುಳ್ಳು ಸಾಕ್ಷಿಗೆ ದೃಢವಾದ, ಅಭೇದ್ಯವಾದ ಪ್ರತಿಬಂಧವೇ ಇಲ್ಲದಂತಾಗುತ್ತದೆ. ಸುಳ್ಳೆಂಬ ತೂತನ್ನು ಭದ್ರವಾಗಿ ಮುಚ್ಚಿದ ಹೊರತು ಬಾಳುವೆ ಎಂಬ ಕುಂಭವು ಸುಖಪೂರ್ಣವಾಗದು; ನಮ್ಮ ನ್ಯಾಯದಾನ ಪದ್ಧತಿಯೆಂಬುದು ತೂತುಕೊಡದಿಂದ ಗಿಡಕ್ಕೆ ನೀರೆರೆಯಹೋದಷ್ಟೇ ಸ್ಥಿತಿಗಿಳಿದೀತು; ಅರ್ಥ–ಕಾಮಾಸಕ್ತಿಗಳನ್ನು ಒಂದು ಗಳಿಗೆಯ ಮಟ್ಟಿಗಾದರೂ ಬಿಡಬಲ್ಲ ಜೀವಿ ಆ ಗಳಿಗೆಯಲ್ಲಾದರೂ ಶುದ್ಧಾತ್ಮ, ಅವನಿಗೆ ಮಾತ್ರ ಧರ್ಮಜ್ಞಾನವಾಗಲು ಸಾಧ್ಯ (II-13). ನಿಷ್ಪಕ್ಷಪಾತ ಬುದ್ಧಿ

೧೫ "Plato believes that a nation cannot be strong unless it belives in God... A living God... can stir or frighten the self-seeking individualist into some moderation of his greed, some control of his passion"

-Willdurant : The story of Philosophy

ಅನ್ಯನಿಗಿರುವುದಸಾಧ್ಯ. ಮನುಷ್ಯನ ಅರ್ಥ–ಕಾಮ–ಮುಕ್ತ ಶುದ್ಧಸ್ವರೂಪವೇ ಆತ್ಮ. ಅದಕ್ಕೆ ಬೆಲೆಯಿಲ್ಲದಾಗ ಜೀವನಕ್ಕೆ ಎಲ್ಲಿಯ ಬೆಲೆ? ಆತ್ಮವು ಇಂದ್ರಿಯಪ್ರತ್ಯಕ್ಷಕ್ಕೆ ಮೀರಿದ್ದಾದುದರಿಂದ ಅದೂ, ಅದು ಮಾತ್ರ ಕೊನೆಯದಾಗಿ ತಿಳಿದುಕೊಳ್ಳಬಹುದಾದಂಥ ಸೂಕ್ಷ್ಮತೆಯುಳ್ಳ ಧರ್ಮವೂ ಅಲೌಕಿಕ, ಅತೀಂದ್ರಿಯ, ಮನೋವಾಗತೀತ. ಆತ್ಮಸಾಕ್ಷಿಗೆ ಸ್ಥಾನವಿಲ್ಲದ ಸಮಾಜದಲ್ಲಿ ಪ್ರಾಮಾಣಿಕತೆಯೆಂಬುದೊಂದು ಟೊಳ್ಳುಗಟ್ಟಿ. 'ಯೋ ಯತ್ + ಶ್ರದ್ಧ: ಸ ಏವ ಸಃ – One becomes what he believes – ಮಾನವನು ತಾನು ನಂಬಿದಂತೆಯೇ ಆಗುವನು' ಎಂಬುದು ಮಾನಸಶಾಸ್ತ್ರ ಸಿದ್ಧವಾದ ಅನುಭವದ ಮಾತು. ತಾನು ಮರ್ತ್ಯನಷ್ಟೇ ಎಂದು ನಂಬಿದವ ಮರ್ತ್ಯನಷ್ಟೇ; ತಾನು ಅಮರನಾದೇನೆಂದು ನಂಬಿದವನು ಅಮರನಾದಾನು!

Enlightened Faith - ಪ್ರಬುದ್ಧ ಶ್ರದ್ಧೆಯು ಯಾವಾಗಲೂ ಮಹೋನ್ನತ ನೈತಿಕ ಆದರ್ಶವನ್ನು ಆಧರಿಸಿರುತ್ತದೆ. ಅದರಿಂದಲೇ ಮನುವಿನ ಸಹಚಿಂತಕರಾದ ವ್ಯಾಸರು "ಶ್ರದ್ಧಾವಾನ್ ಪೂತ ಏವಸಃ" ಎಂಬ ಮಾತಿನಲ್ಲಿ ಶ್ರದ್ಧೆಯು ಮನುಷ್ಯನ ಶೀಲವನ್ನು ತೊಳೆದು ಸ್ವಚ್ಛಗೊಳಿಸುತ್ತದೆ' ಎಂದು ಅಭಿಪ್ರಾಯಪಟ್ಟಿದ್ದಾರೆ. ಅಶ್ರದ್ಧಧಾನರು ಗೋಮುಖವ್ಯಾಘ್ರರಲ್ಲವೇ? ಅವರ ಸಭ್ಯತೆ ಕೇವಲ ಪ್ರದರ್ಶನವಲ್ಲವೇ?

⌘ ⌘ ⌘

# ೬

# ವರ್ಣಾಶ್ರಮಧರ್ಮ

ಮನು ಮೊದಲಾದ ಧರ್ಮಶಾಸ್ತ್ರಕಾರರು ಹೇಳಿದ ವರ್ಣ–ಜಾತಿಗಳ ಕಡೆಗೆ ದೃಷ್ಟಿಯನ್ನೀಗ ತಿರುಗಿಸೋಣ. ವರ್ಣ–ಜಾತಿ ಭೇದಗಳ ದೆಸೆಯಿಂದ ಶ್ರಮವಿಭಜನೆಯ ತತ್ವವು ಅಮಲಿನಲ್ಲಿ ಬಂದು ಹಾನಿಕರವಾದ ಸ್ಪರ್ಧೆಯು ಉದ್ಯಮ–ಉದ್ಯೋಗ ಕ್ಷೇತ್ರಗಳಲ್ಲಿ ತಲೆಹಾಕದಂತಾಯಿತು ಎಂಬ ಸನಾತನ ಸಮರ್ಥನೆಯೊಂದು ಕಡೆ ಇದೆ; ಇನ್ನೊಂದು ಕಡೆ ಅವುಗಳ ದೆಸೆಯಿಂದ 'ಹಾಳರ್ಧ ಹೊಲೆಯರೆಂದು, ಬೀಳರ್ಧ ಹೆಣ್ಣು ಎಂದು – ಹೋಳು ಹೋಳಾಗಿಹುದು, ಆಳು ಬಾಳಾಗಿಹುದು' ಎಂಬಂತಹ ಮೇಲು–ಕೀಳು ಎಂಬ ಭಾವನೆ ಬೆಳೆದ, ಸಾಮಾಜಿಕ ಐಕ್ಯ ಅಳಿದ, ಜಾತಿ ದ್ವೇಷ ನೆತ್ತಿಗೇರಿದ ಅಪದಶೆ ಬಂದಿತೆಂಬ ಖಂಡನೆಯೂ ಇದೆ. ಇವೆರಡರಲ್ಲಿ ಒಂದೊಂದು ಐತಿಹಾಸಿಕ ಅವಧಿಯಲ್ಲಿ ಒಂದೊಂದು ಸತ್ಯ ಎನ್ನಬಹುದು; ಸನಾತನಮತವು ಪ್ರಾಚೀನ ಸತ್ಯ, ವಿನೂತನಮತವು ಅರ್ವಾಚೀನ ಸತ್ಯ–ಅಂದಿಗಂದು, ಇಂದಿಗಿಂದು.[೧೭] ಧರ್ಮಶಾಸ್ತ್ರಗಳ ಇತಿಹಾಸವನ್ನು ಬರೆದ ಮಹಾಮಹೋಪಾಧ್ಯಾಯ ಕಾಣೆಯವರ ಮೂಲಶೋಧ ಇಂತಿದೆ:

ಮೂಲತಃ 'ವರ್ಣ'ದ ಕಲ್ಪನೆಯು ಕುಲ (Race), ಸಂಸ್ಕೃತಿ (Culture), ಚಾರಿತ್ರ (Character) ಮತ್ತು ವೃತ್ತಿ (Profession)ಗಳನ್ನು ಆಧರಿಸಿದೆ. ಮುಖ್ಯವಾಗಿ ಅದು ಮನುಷ್ಯನ ನೈತಿಕ ಹಾಗೂ ಬೌದ್ಧಿಕ ಯೋಗ್ಯತೆಯನ್ನು ಲೆಕ್ಕಕ್ಕೆ ತೆಗೆದುಕೊಳ್ಳುತ್ತದೆ. ಅದು ಮಾಡಿದ ಸಮಾಜವರ್ಗೀಕರಣವು ಹೆಚ್ಚು ಕಡಮೆ ಸ್ವಾಭಾವಿಕವೆನ್ನಬಹುದು. ಸ್ಮೃತಿಗಳಲ್ಲಿ ಸಹ ವರ್ಣದ ಆದರ್ಶವು ಕರ್ತವ್ಯಗಳಿಗೂ, ಸಮಾಜ–ಸಮುದಾಯಗಳ ಪ್ರಯತ್ನದ ಉನ್ನತತರಮಟ್ಟಕ್ಕೂ ಕೊಟ್ಟಷ್ಟು ಪ್ರಾಶಸ್ತ್ಯವನ್ನು ಆನುವಂಶಿಕ ಅಥವಾ ಜನ್ಮಸಿದ್ಧವೆನಿಸುವ ಹಕ್ಕು ಹಾಗೂ ವಿಶೇಷಾಧಿಕಾರಗಳಿಗೆ ಕೊಟ್ಟಿಲ್ಲ. ಜಾತಿಪದ್ಧತಿಯಾದರೋ ಹುಟ್ಟು ಹಾಗೂ ಆನುವಂಶಿಕತೆಗಳಿಗೆ ಸರ್ವಪ್ರಾಧಾನ್ಯವನ್ನು ಕೊಡುತ್ತದೆ; ಮತ್ತು ಸಂಬಂಧಿಸಿದ ಕರ್ತವ್ಯಗಳನ್ನು ಮಾಡಲು ಪ್ರಯತ್ನಿಸದೆ ಕೇವಲ ಅಂಥ ವಿಶೇಷ ಹಕ್ಕುಗಳಿಗೇ ಅಂಟಿಕೊಳ್ಳುವ ಮನೋಧರ್ಮದತ್ತ ಒಲೆಯುತ್ತದೆ.

---

೧೭. 'The Asrama system conveys the spirit of the Indian social order better'
-Lois Renou

ಕುಲದ ಪ್ರಶ್ನೆಯೇ ಅಳಿದಿರುವ ಇಂದಿನ ಭಾರತದಲ್ಲಿ ಗುಣ–ಕರ್ಮಾನುಸಾರ ವರ್ಣವರ್ಗಗಳನ್ನು ಗುರುತಿಸುವ ನೈತಿಕ ಸ್ವಾತಂತ್ರ್ಯವನ್ನು ಯಾರೂ ವಹಿಸಬಹುದು. ಜಾತಿಯನ್ನಂತೂ ನಮ್ಮ ರಾಜ್ಯಸಂವಿಧಾನವು ಮನ್ನಿಸದು. ಆದುದರಿಂದ ಜಾತಿಗಳಿಂದು ಕೇವಲ ಸಾಮಾಜಿಕ ಗುಂಪುಗಳಾಗಿವೆ; ಮಠಾಚಾರ್ಯರ ಸಂಪ್ರದಾಯಗಳೇ ಅವುಗಳ ವಿಂಗಡಣೆಯ ನಿಯಾಮಕಗಳಾಗಿವೆ. ಅವುಗಳ ಮೂಲಕವೇ ಜಾತೀಯ ದ್ವೇಷವನ್ನು ಎಬ್ಬಿಸಿ, ಗುಂಪುಗಳ ಅವಿಚಾರಬದ್ಧ ಐಕಮತ್ಯವನ್ನು ಕೆಲವೊಮ್ಮೆ ಘಟಿಸಿ, ಆ ಈ ರಾಜಕೀಯರೂ ವ್ಯಾವಹಾರಿಕರೂ ಸ್ವಾರ್ಥವನ್ನು ಪರಹಾನಿಕರವಾಗಿ ಸಾಧಿಸಿಕೊಳ್ಳುವುದನ್ನು ನಾವಿಂದು ನಿಲ್ಲಿಸಬೇಕಾಗಿದೆ.

ಆಶ್ರಮಧರ್ಮವೆಂಬುದನ್ನು ಭಾರತೀಯರು ಈಗಲೂ ಹೆಮ್ಮೆಯಿಂದ ಕಾಣಬಹುದಾಗಿದೆ.[೧೭] ಮನುಷ್ಯನು ತನ್ನ ಆಯುಷ್ಯವನ್ನು ಸ್ವಾಭಾವಿಕವಾಗಿ ನಾಲ್ಕು ಮಟ್ಟಗಳ ಬೆಳವಣಿಗೆಗೆ ಮೀಸಲಿಟ್ಟುಕೊಳ್ಳುವುದು ಯೋಜನಾಬದ್ಧವಾದ ಜೀವನ. ಬಾಲ್ಯದಲ್ಲಿ ವಿದ್ಯಾರ್ಜನೆ ಮಾಡುವುದು, ಯೌವನದಲ್ಲಿ ಧರ್ಮಕ್ಕೆ ಅವಿರುದ್ಧವಾಗಿ (ಕಾಯದೆಶೀರ್) ಗೃಹಸ್ಥಜೀವನವನ್ನು ನಡೆಸಿಕೊಂಡು ಹೋಗುವುದು (ಅಥವಾ ಗೃಹಿಣಿಯ ಜೀವನವನ್ನು ಸಾಗಿಸುವುದು), ಮುಪ್ಪಿನಲ್ಲಿ (ಅರುವತ್ತನ್ನು ತಲುಪಿದ ಬಳಿಕ) ಮೌನವಾಗಿ ಜೀವನದ ಮೂಲಸತ್ವದ ಚಿಂತನವನ್ನು ಹಿಡಿಯುವುದು ಮತ್ತು ಅಂತ್ಯದಲ್ಲಿ ಪಕ್ವಬುದ್ಧಿಯ ಯೋಗದಿಂದ ಶಾಂತವಾಗಿ ಮರಣವನ್ನು ಸ್ವೀಕರಿಸುವುದು– ಎಂಬೀ ವ್ಯವಸ್ಥೆ ನಿತ್ಯನೂತನವಲ್ಲವೇ? ದ್ವಿಜತ್ವದ ಕಲ್ಪನೆಯೂ ಹಾಗೇ 'ವಿದ್ಯಾವಿಹೀನಃ ಪಶುಃ' ಎಂಬ ತತ್ವವನ್ನು ಎತ್ತಿ ಹಿಡಿಯುತ್ತದೆ. ಈ ದೃಷ್ಟಿಯಿಂದಲೇ ವರ್ಣ– ಆಶ್ರಮಧರ್ಮವನ್ನು ಗಾಂಧಿಯವರು ಮೆಚ್ಚಿದ್ದು. ವಿಶಿಷ್ಟಜ್ಞಾನ ಬೇಕಾದ ಕಸಬುಗಳ ತರಬೇತಿನ ಕೇಂದ್ರಗಳ ಅವಶ್ಯಕತೆಯನ್ನು ಕಡಿಮೆ ಮಾಡುವುದು ಕುಲಕಸುಬಿನ ಉದ್ದೇಶ. ಜಾತಿಪದ್ಧತಿಯ ನಿಜವಾದ ಪ್ರಯೋಜನ ಅನಾರೋಗ್ಯಕರ ಸ್ಪರ್ಧೆಯನ್ನು ನಿಲ್ಲಿಸುವುದರಲ್ಲೂ ದಕ್ಷತೆಯನ್ನು ಹೆಚ್ಚಿಸುವುದರಲ್ಲೂ ಇತ್ತು.[೧೭(ಬ)]

⌘ ⌘ ⌘

---

೧೭(ಬ). 'It shows the existence at an early time of large number of castes, of which each had for its chief common characteristic a certain trade or profession - functional castes - and it derives them form certain left handed unions.'

-Antiquities of India
By Dr. L.D.Barnett

# ೭

# ಪ್ರಜಾಧರ್ಮ

ಊಟ–ಉಡಿಗೆ, ಆಹಾರ–ವ್ಯವಹಾರಗಳ ಶೌಚವೂ ಅದೇ ಮೇರೆಗೆ ಸಂಸ್ಕಾರದಿಂದ ಸಂಪನ್ನವಾಗಿರಬೇಕೆಂಬುದನ್ನು ಮನು ಒತ್ತಿ ಹೇಳುತ್ತಾನೆ. ಇದರಲ್ಲಿ Health and Sanitation – ಆರೋಗ್ಯ ಮತ್ತು ನೈರ್ಮಲ್ಯಗಳ ವಿಷಯವೂ Social Etiquette– ಸಾಮಾಜಿಕ ಸಭ್ಯವರ್ತನಾ ನಿಯಮಗಳೂ ಅಡಕವಾಗುತ್ತವೆ. ಧರ್ಮಶಾಸ್ತ್ರಗಳು ಮುಖ್ಯವಾಗಿ ಆಚಾರದ ಕೈಪಿಡಿಗಳಾಗಿ ಪರಿವರ್ತನ ಹೊಂದುತ್ತ ಹೋಗಲು ಅವು **ಆಚಾರಕ್ಕೆ ತರಲಾರದ ವಿಚಾರ ಅಪ್ರಯೋಜಕ** ಎಂಬುದನ್ನಾಧರಿಸಿದ್ದೇ ಕಾರಣ. ಆಚಾರವು ಬಹಳ ವ್ಯಾಪಕಾರ್ಥವುಳ್ಳದ್ದು. ಅದರಲ್ಲಿ ಉಪಚಾರ (Formality), ಸತ್ಕಾರ (Respectable treatment), ಸದಾಚಾರ (Good conduct) ಮುಂತಾದ ಎಲ್ಲವೂ ಅಡಕವಾಗುತ್ತವೆ. ಕಾವ್ಯಬಂಧದಲ್ಲಿ ಔಚಿತ್ಯಕ್ಕೆ ಎಷ್ಟು ಸ್ಥಾನವಿದೆಯೋ ಜೀವನದಲ್ಲಿ ಆಚಾರಕ್ಕೆ ಅಷ್ಟೇ ಸ್ಥಾನವಿದೆ. ಬ್ರಹ್ಮಚಾರಿಯ ನಡತೆ, ಗೃಹಸ್ಥ–ಗೃಹಿಣಿಯರ ನಡತೆ, ವಾನಪ್ರಸ್ಥ ಹಾಗೂ ಸನ್ಯಾಸಿಗಳ ನಡತೆಗಳಲ್ಲದೆ ಕುಟುಂಬದಲ್ಲಿಯ ಸದಸ್ಯರ ಪರಸ್ಪರ ನಡವಳಿಕೆಗಳೂ ಆಚಾರದಲ್ಲಿ ಅಂತರ್ಗತವಾಗುತ್ತವೆ. ದೇವ–ದ್ವಿಜ–ಗುರು–ಶಿಷ್ಯ–ಹಿರಿಯ–ಕಿರಿಯ–ಸ್ತ್ರೀ–ಪುರುಷ–ಪಿತೃ–ಪುತ್ರ–ಸಭಾಧ್ಯಕ್ಷ–ಸಭಾಸದಸ್ಯರೆಲ್ಲರ ವರ್ತನಾ ಮರ್ಯಾದೆಗಳೆಲ್ಲವೂ ಉಕ್ತವಾದ ಆಚಾರದ ಪ್ರಕರಣವು 'ಸಿವಿಕ್ಸ್' ಶಾಸ್ತ್ರಕ್ಕಿಂತಲೂ ವ್ಯಾಪಕವಾದುದು; ಅದೊಂದು ನಾಗರಿಕ ಧರ್ಮ, ಸತ್ಪ್ರಜಾಧರ್ಮ.

ಆಚಾರದ ಮೂಲವಿರುವುದು ಶುದ್ಧಿಯಲ್ಲಿ, ಪಾವಿತ್ರ್ಯದಲ್ಲಿ. ಅದರಿಂದಲೇ ಗಾಂಧಿಯವರು 'Purity is beauty – ಪಾವಿತ್ರ್ಯವೇ ಸೌಂದರ್ಯ, ನೈರ್ಮಲ್ಯವೇ ಸೊಬಗು' ಎಂದು ಹೇಳಿದ್ದು. ಅಪ್ರಾಮಾಣಿಕತೆ, ಅನಾರ್ಜವಗಳು ಆಂತರಿಕ ಅಶುಚಿಗಳು, ಸಂಮಿಶ್ರಸ್ಥಿತಿಗಳು. ಅದರಿಂದಲೇ ಅಲ್ಲೂ ಗಾಂಧಿಯವರು 'Secrecy is sin – ಸದಾ ಸರ್ವವನ್ನೂ ಗುಪ್ತವಾಗಿಟ್ಟುಕೊಳ್ಳುವ ಅತಿವೃತ್ತಿ ಪಾಪಕರ' ಎಂದದ್ದು. ಯುಕ್ತವು ಶುಚಿ; ಅಯುಕ್ತವಾದ, ಅಸಮರಸವಾದ ಮಿಶ್ರಣವು ಅಶುಚಿ. ಅಶುಚಿಯು ಅರುಚಿ. ಅರುಚಿ ಅರಸಿಕತೆ. ಯುಕ್ತ, ಉಚಿತ, ಸಮಂಜಸ, ಹದ ಎನ್ನುವಂತಹ ವರ್ತನಾ ನಿಯಮಗಳನ್ನು ಆಚಾರಧರ್ಮವೆನ್ನಬಹುದು. ಇದು ಸಾಂದರ್ಭಿಕ. ದೇಶ–ಕಾಲ–ಕಲಾ–ಲೋಕ–ನ್ಯಾಯ–

ಆಗಮಗಳಿಗೆ ವಿರುದ್ಧವಾದ ಯಾವ ಅಂಶವೂ ಕಾವ್ಯದಲ್ಲಿ (ಸಾಹಿತ್ಯದಲ್ಲಿ) ಬರಬಾರದೆಂಬಂತೆ ಜೀವನದಲ್ಲೂ ಅಂಥ ಅಂಶಗಳು ಜುಗುಪ್ಸಾವಹ; ಮನ್ವಾದಿ ಧರ್ಮಶಾಸ್ತ್ರಕಾರರು ಹೇಳಿದ ಗ್ರಾಹ್ಯ–ತ್ಯಾಜ್ಯ ಆಚಾರಗಳ ಬಹುಭಾಗವನ್ನು ನಾವು ಇಂದಿಗೂ ಭಾರತದ ಶಿಷ್ಟರ ನಡತೆಯಲ್ಲಿ ಕಾಣಬಹುದಾಗಿದೆ. ಈ ಪಿತ್ರಾರ್ಜಿತ ಸಂಸ್ಕಾರ ಸಂಪನ್ನತೆ ಎಂಬುದು ಭಾರತೀಯ ನಾಗರಿಕತೆಗೆ ಮನು ಕೊಟ್ಟ ದೊಡ್ಡ ಕಾಣಿಕೆಯಲ್ಲವೇ?

ಆಹಾರದ ವಿಷಯವನ್ನೆತ್ತಿಕೊಂಡರೆ, ಮಾಂಸ–ಮದ್ಯಗಳನ್ನು ಮನು ನಿಷೇಧಿಸದಿದ್ದರೂ ಅವನ್ನು ಬಿಟ್ಟರೆ ಮಹಾಫಲವುಂಟೆಂದಿದ್ದಾನೆ (V-56). ಬೆಳ್ಳುಳ್ಳಿ, ನೀರುಳ್ಳಿ, ಕೆಂಪು ಬೆಳ್ಳುಳ್ಳಿ, ಅಣಬೆ, ಕೊಳಕಿನಲ್ಲಿ ಬೆಳೆದ ಸಸ್ಯಪದಾರ್ಥಗಳು ಮುಂತಾದವನ್ನು ನಿಷೇಧಿಸಿರುವುದು ಶೌಚವಿಧಾನ (V-5). ಭಗವದ್ಗೀತೆಯಲ್ಲಿ ಹೇಳಿದಂತೆ ಆಯುಷ್ಯ, ಸತ್ವ, ಬಲ, ಆರೋಗ್ಯ, ಸುಖ. ಪ್ರೀತಿಗಳನ್ನು ಬೆಳೆಯಿಸುವಂತಹ ರಸ್ಯ, ಸ್ನಿಗ್ಧ, ಸ್ಥಿರ, ಹೃದ್ಯ ಆಹಾರ ಪದಾರ್ಥಗಳೇ ಮನುವಿನ ಮತದಲ್ಲೂ ಸಾತ್ವಿಕ, ಶ್ರೇಷ್ಠ ಎಂದು ತಿಳಿದುಕೊಂಡರೆ ತಪ್ಪಾಗದು. ಕ್ಷೀಣಬಲರು ನಿಷ್ಕರುಣರಾಗುವಂತೆಯೇ ದಡಿಗರೂ ನಿಷ್ಕರುಣರಾಗುವುದು ಲೋಕಪ್ರಸಿದ್ಧ. ಆದುದರಿಂದ ಈ ಎರಡು ಅತಿದಶೆಗಳಿಗೂ ಒಯ್ಯದಿರುವ ನಿರ್ಮಲ–ಸೌಮ್ಯ ಆಹಾರಗಳ ಸೇವನೆ ಶರೀರಶಾಸ್ತ್ರದ ದೃಷ್ಟಿಯಿಂದಷ್ಟೇ ಅಲ್ಲದೆ, ಅದಕ್ಕೂ ಹೆಚ್ಚಾಗಿ ದೇಹದ ಒಳಗೂ ಹೊರಗೂ ಸಾತ್ವಿಕ ಆವರಣವನ್ನು ನಿರ್ಮಿಸಿಕೊಡುವ ಕಾರಣದಿಂದ ಮಾನಸಶಾಸ್ತ್ರದ ಹಾಗೂ ನೀತಿಶಾಸ್ತ್ರದ ದೃಷ್ಟಿಗಳಿಂದಲೂ ಗಣ್ಯ. ಮೈಥುನಕ್ಕೆ ಹೇಗೆ ಉತ್ತಮಾಧಮಾದಿ ವಿವಾಹ ಸಂಸ್ಕಾರಗಳಿರುವುವೋ ಹಾಗೆ ಆಹಾರಕ್ಕೂ ಉತ್ತಮ–ಮಧ್ಯಮ–ಅಧಮ(ಸಾತ್ವಿಕ–ರಾಜಸ–ತಾಮಸ) ಮಟ್ಟಗಳಿರುವುದು ಸಹಜ. ಆಹಾರ–ನಿದ್ರಾ–ಭಯ–ಮೈಥುನಗಳೆಂಬ ಪ್ರಾಣಿಧರ್ಮಗಳ ನಿರ್ವಹಣವು ಅವರವರ ಸಂಸ್ಕಾರದ ಮಟ್ಟಕ್ಕೆ ತಕ್ಕ ಹಾಗೇ ನಡೆಯುತ್ತಿರುವುದು ಇಂದಿಗೂ ಇದೆ. ಉತ್ತಮತ್ವವನ್ನು ಬಯಸುವವರು ಈ ನಾಲ್ಕರ ಅನುಭವವನ್ನೂ ಉತ್ತಮ ವಸ್ತುಗಳಿಂದ ಹಾಗೂ ಉತ್ತಮ ರೀತಿಯಿಂದ ಪಡೆಯುವ ಯೋಜನೆಯನ್ನು ತಾವೇ ಹಾಕಿಕೊಳ್ಳುತ್ತಾರೆ. ಧರ್ಮಭೀರುಗಳೆಂದಾದರೂ ಧನಿಕಭೀರುಗಳಾದಾರೇ? ಹಾಗೇ.

ಸರ್ವಾಶ್ರಮಿಗಳಿಗೂ ಆಶ್ರಯದಾತನಾದ ಗೃಹಸ್ಥನ ಆಶ್ರಮಧರ್ಮದಲ್ಲಿ ಅತಿಥಿಸತ್ಕಾರಕ್ಕೆ ಬಹಳ ಮಹತ್ವವಿದೆ. ಈಗಲೂ ವಿದೇಶೀಯರಿಲ್ಲಿ ಬಂದು ಭಾರತೀಯರ ಸತ್ಕಾರ ಶೀಲವನ್ನು ಕೊಂಡಾಡುವಂತಾಗಲು ನಮ್ಮ ಸಂಸ್ಕೃತಿ ನಾಯಕರಾದ ಮನ್ವಾದಿ ಧರ್ಮಜ್ಞರು ಅದನ್ನು ನಮ್ಮಲ್ಲಿ ಅಂದೇ ಬಿತ್ತಿ ಹೋದದ್ದೇ ಕಾರಣ. ತಮಗಾಗಿಯೇ ಅಡಿಗೆ ಮಾಡಿಕೊಳ್ಳುವ ಜನರು ಅನ್ನವನ್ನು ತಿನ್ನರು– ಅವರು ತಿನ್ನುವುದೆಲ್ಲಾ ಪಾಪವನ್ನೇ (III-118) ಎಂದ ನಾಗರಿಕತೆಯ ಮುಂದೆ ಮನೆಗೆ ಬಂದವರನ್ನು ಹೋಟೇಲಿಗೆ ಅಟ್ಟುವ ನಾಗರಿಕತೆಯನ್ನು ಇಟ್ಟು, ಬೇಕಾದವರು ಬೇಕಾದ ಹಾಗೆ ಬೆಲೆ ಕಟ್ಟಬಹುದು! ಭೋಜನವು ಭೋಗ–ವ್ಯಂಜಕ. ಯಜ್ಞವು ದಾನ–ತ್ಯಾಗಗಳ ವ್ಯಂಜಕ. ಭೋಗ್ಯಗಳನ್ನು ಅರ್ಥಾತ್ ಪಂಚೇಂದ್ರಿಯಗಳ ಹಸಿವನ್ನು ನೀಗಿಸುವ ವಸ್ತುಗಳನ್ನು ಯಜ್ಞ ಮಾಡಿ ಸತ್ಪಾತ್ರದಲ್ಲಿ ದಾನಮಾಡಿ, ಉಳಿದುದನ್ನು

ಮನುಷ್ಯನು ಭೋಗಿಸುವುದೇ ಭಾರತದ ಹಿಮಾಲಯೋಪಮವಾದ ಆದರ್ಶ.[೧೮] ಗೌರೀಶಂಕರವನ್ನೇರಿದ ತೇನಸಿಂಗರೆಷ್ಟು ವಿರಳವೋ ಈ ಆದರ್ಶವನ್ನು ಸಂಪೂರ್ಣವಾಗಿ ಪಾಲಿಸುವವರೂ ಅಷ್ಟೇ ವಿರಳ. ಕನ್ಯಾದಾನ, ಅನ್ನದಾನ, ಧನ–ಕನಕದಾನ ಇತ್ಯಾದಿ ಅಷ್ಟಭೋಗ್ಯಗಳ ದಾನವನ್ನೂ ಪ್ರಶಂಸಿಸಿರುವುದು ಬ್ರಾಹ್ಮ–ಯಜ್ಞಧರ್ಮದ ದೃಷ್ಟಿಯಿಂದಲೇ – ಅದೇ ಸುಕೃತ, ರಸ, ಆತ್ಮ: ಪರಹಿತವೇ ಸ್ವಹಿತ ಎಂಬ ಪರಮಧರ್ಮ;[೧೯] ಸಜ್ಜನರನ್ನು ಸಂತೋಷಗೊಳಿಸುವುವೆಲ್ಲವೂ ಸದ್ಧರ್ಮಕಾರ್ಯಗಳಲ್ಲವೇ?

ತ್ಯಾಗವೇ ಸೇವೆ, ಸೇವೆಯೇ ಧರ್ಮಸಾರ. ತ್ಯಾಗಧರ್ಮವು Ethico - spiritual ನೈತಿಕವೂ ಹೌದು, ಆಧ್ಯಾತ್ಮಿಕ ಲಕ್ಷಣವುಳ್ಳದ್ದೂ ಹೌದು. ನೈತಿಕವಾಗಿ ಯೋಗ–ಕ್ಷೇಮ–ವೃದ್ಧಿ–ವ್ಯಯರೂಪದ ಭಾರತೀಯ ಅರ್ಥನೀತಿಯ ಕೊನೆಯ ಹಂತವನ್ನು ಸಂಚಿತ ಆಸ್ತಿಗೆ ಕೊಡಿಸುವ ವಿಧಾನವೆಂದರೆ ತ್ಯಾಗವೇ. ಅದು ಸಮಾಜಹಿತವನ್ನು ಕಾಯುವ ನೀತಿ. Economic Imperialism ಆರ್ಥಿಕ ಸಾಮ್ರಾಜ್ಯವಾದ ಎಂಬ ಪೆಡಂಭೂತವಾಗಿ ವಿಕಾಸ ಹೊಂದುವ ಅಥವಾ ಧನಿಕ ಸರ್ವಾಧಿಕಾರಿತ್ವ ಇಲ್ಲವೆ ಸಂಕುಚಿತ–ಅಪ್ರಬುದ್ಧ ಬಂಡವಾಳಶಾಹಿಯಾಗಿ ಜಿಗಿದೇಳುವ ಪ್ರಭುತ್ವದ ಗರ್ಭಸ್ವರೂಪವು ವ್ಯಕ್ತಿಯ ಕೇವಲ ಸ್ವಾರ್ಥದ ಸಾಧನೆಯಲ್ಲಡಗಿದೆ– ಗುಂಪೊಂದು ವ್ಯಕ್ತಿಯಂತೆ ವರ್ತಿಸಿದಾಗ, ಒಕ್ಕಟ್ಟಿನಿಂದ ವ್ಯವಹರಿಸಿದಾಗ, ಅದರಿಂದಲೇ ವ್ಯಕ್ತಿಯ ಲಾಭಬಡಿಕತನವು ನಿಸರ್ಗಸಹಜವಾಗಿರುವ ಭಾರತದೇಶದಲ್ಲಿ "Live anf let Live – ಬದುಕು ಮತ್ತು ಬದುಕಗೊಡು" ಎಂಬುದನ್ನು ಹೇಳದೆ ತ್ಯಾಗವನ್ನು ಅರ್ಥಾತ್ "Let live and then Live – ಅನ್ಯರಿಗೆ ಬದುಕಗೊಟ್ಟು ಅನಂತರ ನೀನು ಬದುಕು" ಎಂಬ ವ್ಯಕ್ತಿಧರ್ಮವನ್ನು ಪದೇಪದೇ ಒತ್ತಿ ಹೇಳಲಾಗಿದೆ. ಅದು ಸಂಗತ್ಯಾಗವನ್ನು, ಅನಾಸಕ್ತಿಯನ್ನು, ಲೌಕಿಕವಾದ ಅಲ್ಪ ಆದರ್ಶಗಳನ್ನು ಬೆಂಬತ್ತಿ ಹೋಗುವ ಪ್ರವೃತ್ತಿಯ ಪರಿವರ್ತನವನ್ನು ಕ್ರಮೇಣ ಸಂಸ್ಕೃತನಲ್ಲಿ ಬೇರೂರುವಂತೆ ಮಾಡುತ್ತದೆ. ಆದುದರಿಂದ ಭಾರತದ ಆದರ್ಶ ಪುರುಷರೆಲ್ಲಾ ತ್ಯಾಗಿಗಳು; ಅವರೇ ಯೋಗಿಗಳು, ಭಗವಂತರು, ಮಹಾತ್ಮರು! ಮಹಾತ್ಮರಲ್ಲದೆ ಮತ್ತಾರು ಆಧ್ಯಾತ್ಮಿಕರು?[೧೯(೩)]

⌘ ⌘ ⌘

---

೧೮. ೧) ತೇನ ತ್ಯಕ್ತೇನ ಭುಂಜೀಥಾಃ ॥ –ಈಶಾವಾಸ್ಯ ಉಪನಿಷತ್

೨) ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವ–ಕಿಲ್ಬಿಷೈಃ ।
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥ –ಭ.ಗೀ.

೩) ಕೇವಲಾಘೋ ಭವತಿ ಕೇವಲಾದೀ ॥ –ವೇದ

೧೯. ೧) 'Man becomes all the truer the more he realises himself in others'.
– R. Tagore in 'Nationalism'

೨) ಸಂತೋಷಂ ಜನಯೇತ್ ಪ್ರಾಜ್ಞಸ್ತದೇವೇಶ್ವರ ಪೂಜನಂ.

(೩) ಪುತ್ರಾನ್ ಭ್ರಾತೃನ್ ನಿಗೃಹ್ಣಂತೋ ವಿನಯಂತಶ್ಚ ತಾನ್ ಸದಾ
ವಿನೀತಾಂಶ್ಚ ಪ್ರಗೃಹ್ಣಂತೋ ವಿವರ್ಧಂತೇ ಗಣೋತ್ತಮಾ: ।
ಪ್ರಾಜ್ಞಾನ್ ಶೂರಾನ್ ಮಹೋತ್ಸಾಹಾನ್ ಕರ್ಮಸುಸ್ಥಿರ ಪೌರುಷಾನ್
ಮಾನಯಂತಃ ಸದಾಯುಕ್ತಾ ವಿವರ್ಧಂತೇ ಗಣಾ ನೃಪ ॥ – ಮ.ಭಾ.

# ೮
# ಶಿಕ್ಷಣಧರ್ಮ

Students' Indiscipline – ವಿದ್ಯಾರ್ಥಿಗಳ ಶಿಸ್ತುಗೇಡಿತನದ ಬಗ್ಗೆ ಮಾರುದ್ದ ಲೇಖನ–ಭಾಷಣಗಳು ಹೊರಬೀಳುತ್ತಿರುವ ಇಂದಿನ ದಿನಮಾನದಲ್ಲಿ ಭಾರತೀಯ ಗುರುಕುಲವು ನೀತಿಗೆ ಕೊಟ್ಟ ಪ್ರಾಧಾನ್ಯವನ್ನು ಲೆಕ್ಕಿಸದೆ, ಸದ್ಯದ ಪದ್ಧತಿಯಲ್ಲೇ ಶಿಕ್ಷಣವನ್ನು ಸಾಗಿಸಿಕೊಂಡು ಹೋಗುತ್ತಿರುವುದು ಎಂಥ ವ್ಯಾಹತಿ (Contradiction), ವಿರುದ್ಧವರ್ತನೆ ಎಂಬುದು ವಿಚಾರವಂತರಿಗೆ ತಿಳಿಯದಿರದು. ಉಚ್ಚ ಪದಗಳಲ್ಲಿರುವ ಶಿಕ್ಷಣದ ಆಡಳಿತಗಾರರೂ, ಶಿಕ್ಷಕರೂ, ಮಾತಾಪಿತೃಗಳೂ, ಪಾಲಕರೂ ನಿರ್ಮಿಸಿದ ಶಿಕ್ಷಣಾವರಣದ ಪರಿಣಾಮವಾಗಿಯೇ ವಿದ್ಯಾರ್ಥಿಗಳಿಂದು ಬಯಸಿದಷ್ಟು ಜ್ಞಾನಿಗಳೂ ಶೂರರೂ ದಕ್ಷರೂ ಪ್ರಾಮಾಣಿಕರೂ ಸಭ್ಯರೂ ಆಗುತ್ತಿಲ್ಲ. ಧರ್ಮಶಾಸ್ತ್ರಗಳ ಆಳಿಕೆಯಲ್ಲಿದ್ದ ಸರ್ವಾಂಗತಃ ಸುಬದ್ಧವಾದ ಜೀವನಪದ್ಧತಿ ನಮ್ಮದಲ್ಲ; ಜೀವನದ ಎಲ್ಲ ವಿಭಾಗಗಳನ್ನೂ ಏಕಸೂತ್ರ ಬದ್ಧಗೊಳಿಸುವ ಸಮಾಜ ವ್ಯವಸ್ಥೆಯನ್ನು (ಕಾಲಾನುಗುಣವಾಗಿ) ಹೊಸದಾಗಿ ರಚಿಸಿಕೊಳ್ಳದೆ ಆವರಣವು ಸುಧಾರಿಸದು.

ಆದರ್ಶರೂಪದಲ್ಲಿ ಬಣ್ಣಿಸಲಾದ ಭಾರತದ ಗುರು–ಶಿಷ್ಯರ ಬಾಂಧವ್ಯವನ್ನು ಹೊಗಳದ ಆಧುನಿಕನಿರಲಾರ. ನಾಗರಿಕತೆಯ ಬುನಾದಿಯಾದ ವಿದ್ಯೆಯನ್ನು ಕುರಿತು ಮನುವೇನೆನ್ನುತ್ತಾನೆ? "ಅಜ್ಞಾನಿಯೊಬ್ಬ ಶಿಶು" ಎಂದನವ (II-153). ಅಶಿಕ್ಷಿತ–ಅಪಶಿಕ್ಷಿತರಿಂದ ತುಂಬಿದ ಭಾರತಕ್ಕೆ ಈಗಲೂ ಆ ಮಾತು ಖಾರವಾದ ಎಚ್ಚರಿಕೆಯೆನಿಸಿದೆ. ಮನುವಿನ ಕಾಲದಲ್ಲಿ ಉತ್ತಮರಾಗಲು ವೇದಾಭ್ಯಾಸ ಬೇಕಾಗಿತ್ತು. ಅದರಿಂದ ಅವನದನ್ನೇ ಎತ್ತಿ ಹೇಳಿದ. ವೇದವಾಙ್ಮಯವೇ ಅಂದಿನ ಉತ್ತಮ 'ವೇದ' ಅರ್ಥಾತ್ ಜ್ಞಾನ ಎನಿಸಿತ್ತು: ಇಂದಿಗೂ ಉತ್ತಮರಿಗೆ ಉತ್ತಮಜ್ಞಾನ ಭಂಡಾರವೆನಿಸೀತು– ಉತ್ತಮ ರೀತಿಯಿಂದ ಕಲಿತರೆ. ವಿಷಯದ ನೀತಿಮತ್ತೆಯೊಡನೆ ವಿಷಯ ವಿವರಣದ ವ್ಯವಸ್ಥೆಯಲ್ಲಿಯೂ ನೀತಿಗೆ (ಸಾಮಾನ್ಯ ಧರ್ಮಕ್ಕೆ) ಅತ್ಯಂತ ಹೆಚ್ಚಿನ ಸ್ಥಾನವಿತ್ತೆಂಬುದು ಗಮನಾರ್ಹವಾದ ಅಂಶ.[೨೦] ಏಕೆಂದರೆ ಮನಃಶಾಸ್ತ್ರರೀತ್ಯಾ ಗಾಂಧಿಯವರೆಂದ ಹಾಗೆ ಸಾಧನವು ಪವಿತ್ರವಾಗಿರದಲ್ಲಿ

---

೨೦. (1) 'We see here the great part which moral ideas played in ancient education'.

(2) 'It was an all-round education, which brought into play, all the resources of the individual'.

- L. Renou: The Civilization in Ancient India.

ಸಾಧ್ಯವು ಸಿದ್ಧಿಗೆ ಮುಟ್ಟುವ ಹಾದಿಯಲ್ಲೇ ಅಪವಿತ್ರವಾಗುತ್ತ ಹೋಗಿ, ಸಿದ್ಧಿಯ ಆಭಾಸವನ್ನಷ್ಟೇ ಮನುಷ್ಯನು ಸಾಧಿಸುವಂತಾಗುತ್ತದೆ. ಆದುದರಿಂದ ವಿದ್ಯಾದಾನದ ಪದ್ಧತಿಯು ಅತ್ಯಂತ ಮಹತ್ವವುಳ್ಳದ್ದು. ಅಲ್ಲಿ ಆದರ್ಶ ಶಿಕ್ಷಕನನ್ನು ಆಯ್ದುಕೊಳ್ಳುವುದೂ, ಒಮ್ಮೆ ಹಾಗೆ ಆಯ್ದುಕೊಂಡ ಬಳಿಕ (ಆಚಾರ್ಯದೇವ) ಆಚಾರ್ಯನೇ ದೇವರೆಂದು ತಿಳಿವ ಶ್ರದ್ಧೆ–ನಿಷ್ಠೆಗಳೂ ಆವಶ್ಯಕ. ಈ ಸೂತ್ರವನ್ನು ವ್ಯವಹಾರದಲ್ಲಿ ತರಲು ಈಗ ಯಾರು ಎಲ್ಲಿ ಎಷ್ಟು ಪ್ರಯತ್ನವನ್ನು ಮಾಡುತ್ತಿದ್ದಾರೆ? ಶೀಲಕ್ಕೆ ತಕ್ಕಂತೆ ಜ್ಞಾನವಿದ್ದೀತಲ್ಲದೆ ಜ್ಞಾನಕ್ಕೆ ತಕ್ಕಂತೆ ಶೀಲವಿರಲಾರದು. ಗುರುತರವಾದ ಶೀಲಸಂಪನ್ನತೆಗೆ ತಕ್ಕ ಧನ–ಸ್ಥಾನ–ಮಾನಗಳನ್ನಿತ್ತು ನಿಯಮಿಸಲಾದ ಆದರ್ಶೋನ್ಮುಖರಾದ ತಜ್ಞರನ್ನು ನಾವಿಂದು  ಎಷ್ಟು ಉಚ್ಚವಿದ್ಯಾನಿಲಯಗಳಲ್ಲಿ ಯಾವ ಪ್ರಮಾಣದಲ್ಲಿ ಕಂಡೇವು? ಕಾರಣಾಭಾವದಲ್ಲಿ ಕಾರ್ಯಾಭಾವವು ಸಹಜ. ಜೊತೆಗೆ ಶಿಕ್ಷಣದ ಏಕಾಂಗೀನತೆಯೂ ಅಪೂರ್ಣಶಿಕ್ಷಿತತೆಗೆ ದೊಡ್ಡದೊಂದು ಕಾರಣ. ಮೊದಲೇ ಹೇಳಿದಂತೆ ನೀತಿಶಿಕ್ಷಣಕ್ಕಿಂದು ವಿಶಿಷ್ಟ ಸ್ಥಾನವಿಲ್ಲ. ದೈಹಿಕ ಶಿಕ್ಷಣವು ಅವ್ಯವಸ್ಥಿತವೂ ವರದಿ–ಮಾತ್ರ–ಸತ್ಯವೂ ಆಗಿರುವುದು ಅನುಭವಸಿದ್ಧ. ಸಂಸ್ಕಾರಕ್ಕೆ ಸಹಜವಾದ ವೃತ್ತಿಶಿಕ್ಷಣವನ್ನು ತಕ್ಕ ವಯಸ್ಸಿನಲ್ಲೇ ಸಫಲವಾಗಿ ಸರ್ವರಿಗೂ ಕೊಡುವ ಅನುಕೂಲವನ್ನು ಮೊದಲೇ ಮಾಡಿಲ್ಲ. ಆಹಾರ–ವ್ಯವಹಾರಗಳೆಲ್ಲಾ ಅನಿಯಂತ್ರಿತ–ಗುರುವಿಗೂ ಶಿಷ್ಯನಿಗೂ ಎಲ್ಲರಿಗೂ! ಮನುವಿನ ಕಾಲದ ಗುರುಕುಲದಲ್ಲಿ ಇವೆಲ್ಲಾ ಇಲ್ಲ. ಅಲ್ಲಿ ಎಲ್ಲವೂ ನಿಯಮಬದ್ಧ–ದಿನದ ೨೪ ತಾಸುಗಳಲ್ಲೂ, ವರ್ಷದ ಮುನ್ನೂರರವತ್ತು ದಿನಗಳಲ್ಲೂ! ೧೨ ವರ್ಷಗಳ ಕಾಲದಲ್ಲಿ ಬ್ರಹ್ಮಚಾರಿಯು ಸ್ನಾತಕನಾಗಬಲ್ಲ– ಅವನ ಆಚಾರ್ಯ ಶುಶ್ರೂಷೆಯ ಫಲವಾಗಿ.[೨೧] ಕಾಲೇಜಿನಲ್ಲಿಯೂ ಮುಖ್ಯ ವಿಷಯದ ಅಧ್ಯಾಪಕರಲ್ಲೂ ಅಂಥ ಮಹಾಚಾರ್ಯನನ್ನು ಕಾಣಲಾರದ ವಿದ್ಯಾರ್ಥಿಯೆಂತು ಸತ್ಪ್ರಜೆಯಾಗಿ ಭಾರತದಲ್ಲಿ ಕಡೆಯತನಕ ಉಳಿದಾನು? ಒಳ್ಳಿದರಿಗೆ ಕಳ್ಳರ ಸ್ಥಾನ, ಕಳ್ಳರಿಗೆ ಒಳ್ಳಿದರ ಸ್ಥಾನ – ಎಂಬ ನ್ಯಾಯವು ನೆಲೆನಿಂತ ಕಡೆಗಳಲ್ಲಿ **ಆಚರಣೀಯ ಆಚಾರವುಳ್ಳ ಆಚಾರ್ಯನು** ಬದುಕಿಯಾನೇನು? ಆಚಾರವಿಲ್ಲದಲ್ಲಿ ಧರ್ಮವಿದ್ದೀತೇನು? ಧರ್ಮವಿಲ್ಲದೆ ಯಾವ ಸಂಸ್ಥೆಗೆ ಜಯ ದೊರಕೀತು? ಅಧರ್ಮದ ಮಗು ಅಶಿಸ್ತು; ಅನ್ಯಾಯದ ಮಗು ಅರಾಜಕತೆ. ಕೇವಲ ಸುದ್ದಿರೂಪದ ಜ್ಞಾನವು ಭಾರತದಲ್ಲಂತೂ 'ಜ್ಞಾನ'ವಲ್ಲ. ಮನಸ್ಸು–ಮಾತು–ಕಾರ್ಯಗಳ ಏಕರೂಪತೆ ಕಂಡುಬರದ ಮನುಷ್ಯನಿಲ್ಲಿ 'ಜ್ಞಾನಿ' ಎನಿಸಿದ್ದಿಲ್ಲ. ತಾಮಸಿಕ ಜ್ಞಾನಿಗಳ ಸಂಖ್ಯೆ ಹೆಚ್ಚಿದಾಗಲೆಲ್ಲಾ ಭಾರತವು ಗ್ಲಾನಿ ಹೊಂದಿತು. ಸಾತ್ವಿಕ ಆಚಾರ್ಯರಿಲ್ಲದಲ್ಲಿ ಸಾತ್ವಿಕ ವಿದ್ಯಾರ್ಥಿಗಳೆಲ್ಲಿದ್ದಾರು? ಕೇವಲ ಅರ್ಥ–ಕಾಮ–ಕೀರ್ತ್ಯಾಸಕ್ತ ಸ್ಪರ್ಧಾಳುಗಳ ಈರ್ಷ್ಯಾಮಯ ಶಿಕ್ಷಣಜಗತ್ತಿನಲ್ಲಿ ಭಾರತೀಯನಿಗೆಂತು ಸ್ವಧರ್ಮದ ಅರಿವಾದೀತು?[೨೨] ಸ್ವಧರ್ಮವರಿಯದವನ ಭಾರತೀಯತೆಗೆ ಅರ್ಥವೇನುಳಿಯಿತು?

---

೨೧. ಮನುವಿನ ಪ್ರಕಾರ ವೇದತ್ರಯದ ಅಭ್ಯಾಸ ಮುಗಿಯುವುದು ೩೬ ವರ್ಷಗಳ ಗುರುಕುಲ ವಾಸದಲ್ಲಿ. ಒಂದೊಂದು ವೇದ ಶಾಖಾಭ್ಯಾಸಕ್ಕೆ ೧೨ ವರ್ಷಗಳು. ಏಕವೇದಿಯಾದರೂ ೧೨ ವರ್ಷ ಗುರ್ವಾಜ್ಞಾಪಾಲಕನಾಗಿ ಅಧ್ಯಯನ ಮುಗಿಸಿದವ.

೨೨. 'Let me repeat that India may take what She desires from the West or elsewhere, provided that She is not false to her own Racial Soul (Swadharma)'.

-Sir John Woodroffe

ಸ್ವಧರ್ಮವನ್ನರಿತವನೇ ಮಾನವಧರ್ಮಜ್ಞ. (Aptitude) ಸ್ವಪ್ರವೃತ್ತಿಜ್ಞನಾಗಿ ತನ್ನ ಕರ್ತವ್ಯವನ್ನು ಕಂಡುಕೊಂಡು ಬಾಳುವ ಭಾರತೀಯತೆ ಇಲ್ಲವಾದುದೇ ಶಿಥಿಲ ಆಡಳಿತ, ಶಿಥಿಲಶೀಲ ಅಲ್ಲಿ ಇಲ್ಲಿ ಕಂಡು ಬರಲು ಕಾರಣ.

"ಭೋಗಕ್ಕೆ ಮರುಳಾಗಿ ಧರ್ಮವ ಮರೆದಧೊ–
ಭೋಗಕೆ ಬೀಳ್ವರ ನಗುತ ।
ಭೋಗದೊಳಿದ್ದು ಯೋಗಿಗಳಂತೆ ಸುಖಿಯಹ
ಭೋಗಿಗಳರಸ ನೀನೇಳು"

ಎಂದು ರತ್ನಾಕರವರ್ಣಿ ಮನುಸಂಮತ ಶಿಕ್ಷಿತನನ್ನು ಎತ್ತಿಹಿಡಿದ್ದಾನೆ.

⌘ ⌘ ⌘

# ೬

# ಸ್ತ್ರೀ–ಪುರುಷಧರ್ಮ

ಸಾಮಾಜಿಕ ಹಾಗೂ ಕೌಟುಂಬಿಕ ಸಮುದಾಚಾರಗಳ ಬಗ್ಗೆ ನಾವು ಧರ್ಮಶಾಸ್ತ್ರಗಳನ್ನೇ ತೆರೆದು ಓದಬೇಕಾಗಿಲ್ಲ. ಮನುಹೃದಯಜ್ಞರಾದ ವಾಲ್ಮೀಕಿ–ವ್ಯಾಸ–ಭಾಸ–ಕಾಳಿದಾಸ ಮುಂತಾದ ಋಷಿಗಳೂ, ಕವಿಗಳೂ ನಮ್ಮೆದುರು ಕಡೆದಿಟ್ಟ ಅತ್ಯಂತ ಸುಂದರವಾದ ನಾಯಕ ಕುಟುಂಬಗಳೂ, ಮಠಗಳೂ, ಆಶ್ರಮಗಳೂ ಪ್ರಜಾ–ರಾಜಸಂಬಂಧದ ಚಿತ್ರಗಳೂ ಯಥೇಷ್ಟವಾಗಿವೆ. ತನ್ನ ಕುಲದಲ್ಲಿ ಶ್ರೇಷ್ಠರೆಂದು ಪ್ರಸಿದ್ಧರಾದವರ ಸತ್‌ಕೀರ್ತಿಯನ್ನು ಹೆಚ್ಚಿಸುವಂತಹ ನಡತೆ ಪುರುಷನಿಗಿರಬೇಕೆಂದೂ ಪತಿವ್ರತೆಯಾದ ವೀರಪತ್ನಿಯಾಗಿ ವೀರಮಾತೆಯಾಗುವ ಮಹತ್ವಾಕಾಂಕ್ಷೆ ಸ್ತ್ರೀಗಿರಬೇಕೆಂದೂ ಪ್ರಾಚೀನ ಕಾಲದ ಅಭಿಜಾತ ಸಾಹಿತ್ಯವು ಉದ್ದಕ್ಕೂ ಹೇಳುತ್ತ ಬಂದಿದೆ. ಕಾಳಿದಾಸನು ರೂಪಿಸಿದ ನಾಯಿಕೆಯರನ್ನು ಇಂದಿನ ಪಾಶ್ಚಾತ್ಯ ವಿದ್ವಾಂಸರೂ ವಿದುಷಿಯರೂ ಬಾಯಿತುಂಬ ಹೊಗಳುತ್ತಾರೆ. ಸ್ತ್ರೀ–ಪುರುಷರ ಹಕ್ಕು–ಬಾಧ್ಯತೆಗಳ ವಿಷಯದಲ್ಲಿ ಭಿನ್ನಾಭಿಪ್ರಾಯವುಳ್ಳ ಆಧುನಿಕ ವಿದ್ವಜ್ಜನರೂ ಧೀರೋದಾತ್ತ ಪುರುಷರ ಮತ್ತು ಸಾಧ್ವಿಯರ ಚರಿತ್ರೆಗಳನ್ನು ಹೃತ್ಪೂರ್ವಕವಾಗಿ ಮೆಚ್ಚದೆ ಉಳಿದಿಲ್ಲ. ಆ ಮಾದರಿಯ ಪುರುಷರನ್ನೂ ಸ್ತ್ರೀಯರನ್ನೂ ರೂಪಿಸಿದ ಸಾಮಾಜಿಕ–ಆರ್ಥಿಕ–ಧಾರ್ಮಿಕ ಆವರಣವನ್ನು ವಿಮರ್ಶಿಸುವಾಗ ಕಾರ್ಯಗಳ ಔನ್ನತ್ಯವು ಕಾರಣಗಳ ಔನ್ನತ್ಯದ ವ್ಯಂಜಕ ಎಂಬುದನ್ನು ಅನೇಕ ಸಲ ಮರೆತುಬಿಡುವುದುಂಟು. ಹಾಲಿನ ಉತ್ತಮಿಕೆ ಹಸುವಿನ ಉತ್ತಮಿಕೆಗೆ ಸಾಕ್ಷಿಯಲ್ಲವೇ?

ನಾಗರಿಕತೆಯ ರೂಪಣದಲ್ಲಿ ಮನುಷ್ಯ ಒಂದು ಅಂಗ, ಪದ್ಧತಿ ಇನ್ನೊಂದು ಅಂಗ (Man and the System). ಈ ಎರಡೂ ಅಂಗಗಳು ಯುಕ್ತವಾಗಿದ್ದರೆ ಉತ್ತಮ ನಾಗರಿಕತೆ ಫಲಿಸುವುದು. ಹಾಗಲ್ಲದೆ ಮನುಷ್ಯ ಯೋಗ್ಯನಾದರೂ ಅವನ ಜೀವನಯೋಜನೆಯ ತತ್ವಪದ್ಧತಿಯು ಅಷ್ಟೇನೂ ಚೊಕಶುದ್ಧವಾಗಿಲ್ಲ – ಅವನ Philosophy of Socio-political and Ethico-economic life ಸಾಮಾಜಿಕ–ರಾಜಕೀಯ–ನೈತಿಕ–ಆರ್ಥಿಕ ಜೀವನ ಸಿದ್ಧಾಂತಗಳು ನೆಟ್ಟಗಿಲ್ಲ ಎಂಬುದೊಂದು ವಿಕಲ್ಪ; ಹಾಗಲ್ಲದೆ ಮನುಷ್ಯ ಯೋಗ್ಯನಾಗಿಲ್ಲವಾದರೂ ಅವನ ಉಕ್ತ ಜೀವನವಿಧಾನಗಳು ತುಂಬ ಚೊಕಶುದ್ಧ, ನ್ಯಾಯಬದ್ಧ, ಆದರ್ಶ, ಪ್ರಬುದ್ಧ ಎನಿಸಿರುವುದು ಇನ್ನೊಂದು ವಿಕಲ್ಪ (Alternative).

ಈ ಎರಡು ತರಹದ ಸನ್ನಿವೇಶಗಳು ಎದುರಾದಾಗ ಇವುಗಳಲ್ಲಿ ಯಾವುದು ಹೆಚ್ಚು ಉತ್ತಮ ಜೀವನಕ್ಕೆ ಪೋಷಕ? ಎಂಬುದನ್ನು ಪರಾಮರ್ಶಿಸುವ ಅಗತ್ಯವೂ ಇತಿಹಾಸದ ವಿವಿಧ ಯುಗಗಳಲ್ಲಿ ವಿವೇಕಿಗಳಲ್ಲಿ ತಲೆದೋರುತ್ತದೆ. ಇಂತಹ ಸಂದರ್ಭಗಳಲ್ಲಿ ತರ್ಕಶುದ್ಧವೆಂದು ತೋರದ, ಆದರೆ ಮನಃಶಾಸ್ತ್ರ ಶುದ್ಧವಾದ "ಸಾಧನ ಪಾವಿತ್ರ್ಯವು ಸಿದ್ಧಿಯ ಪಾವಿತ್ರ್ಯಕ್ಕೆ ಕಾರಣ" ಎಂಬ ನೀತಿಯನ್ನೇ ಹಿಡಿಯುವುದು ನ್ಯಾಯ. ಏಕೆಂದರೆ ಆಗಮಾನುಸಾರಿ ತರ್ಕಕ್ಕಷ್ಟೇ ವೇದಾಂತದ ಆಚಾರ್ಯರು ಪುರಸ್ಕಾರವಿತ್ತಂತೆ ವಿಚಾರ–ವಿಚಾರಾತೀತ ಎಂಬೆರಡೂ ಅಂಶಗಳಿಂದ ಕೂಡಿದ ಜೀವನದ ನ್ಯಾಯನಿರ್ಣಯವನ್ನು ಮಾಡುವಾಗ ಮನಃಶಾಸ್ತ್ರಾನುಗುಣವಾದ ತರ್ಕಕ್ಕಷ್ಟೇ ಮಾನ್ಯತೆ ಕೊಡುವುದು ವಸ್ತುಸ್ಥಿತಿಯಿಂದ ನಮ್ಮನ್ನು ಬಹಳ ದೂರ ಒಯ್ಯಲಾರದು. ಬದಲಾವಣೆಯೇ ಸ್ವಭಾವವಾಗಿರುವ ಈ ಜಗತ್ತಿನಲ್ಲಿ ವಸ್ತು–ವ್ಯಕ್ತಿ–ತತ್ವಗಳ ಸ್ವರೂಪವು ಮನುಷ್ಯನ Understanding Capacity ಗ್ರಹಣ ಶಕ್ತಿ ಬದಲಾಗುತ್ತ ಹೋದಹಾಗೆ ಬದಲಾಗುತ್ತ ಹೋಗುತ್ತದೆ. ಆದುದರಿಂದ ವ್ಯಕ್ತಿ ಯೋಗ್ಯತೆ–ತತ್ವಯೋಗ್ಯತೆಗಳೆರಡರಲ್ಲಿ (ಅತ್ಯಯ ಪ್ರಸಂಗ ಬಂದಾಗ) ಎರಡನೆಯದಕ್ಕಿಂತ ಮೊದಲನೆಯದಕ್ಕೇ ಯಾವಾಗಲೂ ಜ್ಞಾನಿಲೋಕವು ಮತ ಹಾಕುತ್ತದೆ. ವ್ಯಕ್ತಿಯ ವ್ಯಕ್ತೀಕರಣಕ್ಕೆ ಜೀವನದ ಮಾನಸ–ಶಾರೀರಿಕ ಕಾರ್ಯಗಳೇ ಮಾಧ್ಯಮಗಳಲ್ಲವೆ? ಅಲ್ಲದೆ, ವ್ಯಕ್ತಮಾಡುವ ಮಾಧ್ಯಮಕ್ಕಿಂತ ವ್ಯಕ್ತವಾಯ್ತೆಂದು ನಾವು ತಿಳಿದುಕೊಂಬ ವ್ಯಕ್ತಿ–ವಸ್ತು–ಕಲ್ಪನೆ ಯಾವಾಗಲೂ ವ್ಯಾಪಕತರವಾದುದು. ಆದುದರಿಂದ ನಾಗರಿಕತೆಗಿಂತ ಮನುಷ್ಯನು ಹೆಚ್ಚು ಅಂಶಗಳಿಂದ ಕೂಡಿದವನಾಗಿರುತ್ತಾನೆ; ಅವನಲ್ಲಿ ನಾಗರಿಕತೆ, ತತ್ವಸಿದ್ಧಾಂತಗಳಲ್ಲಿ ಪೂರ್ಣವಾಗಿ ಪ್ರಕಟವಾಗದ ಎಷ್ಟೋ ಗುಣಗಳು, ಧರ್ಮಗಳು, ಸ್ವರೂಪಾಂಶಗಳು ಅಡಗಿರಬಹುದು. ಈ ವಿಚಾರದಿಂದಲೇ ಅಲೆಕ್ಸಿಸ್ ಕೆರೆಲ್ಲರು ಮನುಷ್ಯನಿನ್ನೂ ಪೂರ್ಣಜ್ಞಾತನಾಗಿಲ್ಲ ಎಂದದ್ದು.

ಮೇಲಿನ ಮಾತುಗಳಿಂದ, ಮನುಹೃದಯವನ್ನು ಅಂದಿನ ಭಾರತೀಯ ಶ್ರೇಷ್ಠರ ಜೀವನವು ವ್ಯಕ್ತ ಮಾಡಿದಷ್ಟು ಚೆನ್ನಾಗಿ ಇತಿಹಾಸವು ಬರೆದಿಟ್ಟ ಗ್ರಾಂಥಿಕ ನಿಯಮಗಳು ವ್ಯಾಖ್ಯಾನಿಸಲಾರವು; ಆ ನಿಯಮಗಳನ್ನಾದರೂ ಅಂದಿನ ಜನ ಅರ್ಥಮಾಡಿಕೊಂಡಂತೆ ಇಂದಿನ ನಾವು ಅರ್ಥ ಮಾಡಿಕೊಳ್ಳಲಾರೆವು– ಎಂಬ ಅಂಶವೂ ಹೊರಬೀಳುವುದು. ಆದುದರಿಂದ ಅಭಿಜಾತ ವಾಙ್ಮಯವು ಚಿತ್ರಿಸಿಟ್ಟ ಮಹಾಪಾತ್ರಗಳ ಮೂಲಕವೇ ನಾವು ಮನುವಿನ ಶ್ಲೋಕಗಳನ್ನು ಹೆಚ್ಚು ಸಮರ್ಪಕವಾಗಿ ಅರ್ಥ ಮಾಡಿಕೊಳ್ಳಬಲ್ಲೆವು. ರಾಮ, ಧರ್ಮರಾಯ, ಭೀಷ್ಮ, ದಿಲೀಪ, ರಘು, ಅಜದುಷ್ಯಂತ, ಪುರೂರವ, ನಳ ಹಾಗೂ ಸೀತೆ, ದ್ರೌಪದಿ, ಸಾವಿತ್ರಿ, ಅರುಂಧತಿ, ಲೋಪಾಮುದ್ರೆ, ದಮಯಂತಿಯರು ಮಾನವ ನಾಗರಿಕತೆಯ ಉತ್ತಮ ಪ್ರತೀಕಗಳು. ಮನುವಿನ ಗ್ರಂಥವು ಕೇವಲ ದಿಕ್ಸೂಚಿ. ಅದನ್ನು ಆಧರಿಸಿ ಬಾಳಿದ ಮಹಾಪುರುಷರೂ ಮಹಾಸತಿಯರೂ ಇಂದೂ ರಸ್ಯಮಾನ ಪಾತ್ರಗಳಾದರೆ, ಆ ಗ್ರಂಥದಲ್ಲಿ ಇಂದಿಗೂ ಸ್ಫೂರ್ತಿ ಕೊಡತಕ್ಕ ನೈತಿಕ ಅಂಶಗಳಿವೆ ಎಂಬುದು ಶತಶಃಸಿದ್ಧ. ಉದಾಹರಣೆಗಾಗಿ ಶಕುಂತಲೆಯನ್ನು ತೆಗೆದುಕೊಂಡರೆ, ಅವಳು

ಉತ್ತಮ **'ಸಾಧ್ವಿ'** ಎಂದೆನಿಸಿದ್ದಾಳೆ, ಸ್ತ್ರೀತ್ವದ ಪರಮಾದರ್ಶ ಎನಿಸಿದ್ದಾಳೆ. ಮನುವಿನ ಪ್ರಕಾರ (V-165) ಯಾವಾವಳು ಮನಸ್ಸು–ವಾಕ್–ದೇಹಗಳನ್ನು ಸದಾ ಸಂಯಮದಲ್ಲಿಟ್ಟುಕೊಂಡು (ಅರ್ಥಾತ್ ಅವನ್ನು ಯಾವಾಗಲೂ ಗಂಡನಲ್ಲೇ ನಿಷ್ಠವಾದವನ್ನಾಗಿ ಇಟ್ಟುಕೊಂಡು), ಗಂಡನನ್ನು ಬಿಟ್ಟು ಅವು ಚಲಿಸದಂತೆ ಅಂಕೆಯಲ್ಲಿಟ್ಟುಕೊಂಡು ವರ್ತಿಸುವಳೋ ಅಂಥ ಅನುಕೂಲ ಸ್ತ್ರೀಯೇ ಸಾಧ್ವಿ; ಅಂಥವಳಿಗೆ ಗಂಡನ ಲೋಕ ಅರ್ಥಾತ್ ಗತಿ ದೊರಕುತ್ತದೆ. ಅಂಥ ವೀರಪತ್ನಿ–ವೀರಮಾತೆ ಎನಿಸಿದ ಶಕುಂತಲೆಯ ಮಗ ಭರತನ ದೇಶವಿದು! ಅವನು **ಸರ್ವದಮನ!**

ಮನುವು ಬಾಲ್ಯವಿವಾಹವನ್ನು ಹೇಳಿದ್ದಾನೆಂಬ ಆರೋಪವಿದೆ. ಅದಕ್ಕೆ ವಿವೇಕಾನಂದರಂಥ ವಿವೇಕಿಗಳು "We marry and then love ನಾವು (ಭಾರತೀಯರು) ಮದುವೆಯಾದ ಬಳಿಕವೇ ಪ್ರೀತಿಸುತ್ತೇವೆ" ಎಂದು ಉತ್ತರಿಸಿದ್ದುಂಟು. ಆದರೆ ಮನುವು ಹೆಣ್ಣಿಗೆ ಮದುವೆಯ ವಯಸ್ಸು ೮ ಅಥವಾ ೧೨ ಎಂದೂ, ಗಂಡಿಗೆ ೨೪ ಅಥವಾ ೩೦ ಎಂದೂ ಹೇಳಿದರೆ, ಅದೇ ಯುಗಕ್ಕೆ ಸೇರಿದ ಕೌಟಿಲ್ಯನು ಹೆಣ್ಣಿಗೆ ೧೨ ಆಗಬೇಕು, ಗಂಡಿಗೆ ೧೬ ಆದರೆ ಸಾಕು ಎಂದೂ ಹೇಳಿದ್ದುಂಟು. ಜಾತಕ ಕಥೆಗಳಲ್ಲಿ ಹೆಣ್ಣಿನ ಮದುವೆಯ ವಯಸ್ಸು ಸಾಮಾನ್ಯವಾಗಿ ೧೬ ವರ್ಷ ಎಂದು ಹೇಳಿದೆ. ಈ ಸಂಗತಿಗಳನ್ನು ನೋಡಿದರೆ ಮದುವೆಯು ದೇಶ–ಕಾಲ–ಸಾಮಾಜಿಕ ಪರಿಸ್ಥಿತಿಗಳಂತೆ ಬದಲಾಗುವ ವಯೋನಿಯಮವುಳ್ಳದ್ದೆಂಬುದು ಸ್ಪಷ್ಟವಾಗುತ್ತದೆ. ಪ್ರಾಚೀನ ಕಾಲದಲ್ಲಾದರೂ ವೈದ್ಯ ಹಾಗೂ ಕಾಮಶಾಸ್ತ್ರಗಳು ಜನನಶಾಸ್ತ್ರದ ದೃಷ್ಟಿಯಿಂದ ಪ್ರೌಢರ ವಿವಾಹವನ್ನೇ ಹೇಳಿದ್ದನ್ನು ನೋಡಿದರೆ ಮನುವು ಹೇಳಿದ ಮಾತು ಅಂದಿನ ಒಂದು ಕಡೆಯ ರೂಢಿಯ ಅಭಿಲೇಖವಷ್ಟೇ ಎಂದುಕೊಳ್ಳಬಹುದು.

ಎರಡನೆಯದಾಗಿ, ಸ್ತ್ರೀಯರನ್ನು ಗೌರವಿಸುವ ದೇಶವೇ ನಾಗರಿಕ ದೇಶ ಎಂಬ ಅಭಿಪ್ರಾಯವನ್ನು ಹೇಳಿದ ಮನುವೇ ಸ್ತ್ರೀಗೆ ಸ್ವಾತಂತ್ರ್ಯವಿಲ್ಲ ಎಂದು ಹೇಳಿದ್ದು ಹೇಗೆ? ಎಂಬುದೊಂದು ಕುತೂಹಲಜನಕವಾದ ಪ್ರಶ್ನೆ. ಒಂದು ಮೂರನೆಯ ಅಧ್ಯಾಯದ ಐವತ್ತಾರನೆಯ ಶ್ಲೋಕವಾದರೆ ಇನ್ನೊಂದು ಐದನೆಯ ಅಧ್ಯಾಯದ ೧೪೮ನೆಯ ಶ್ಲೋಕ. ಈ ಸಂದರ್ಭದಲ್ಲಿ ಹಿಂದೆ ಹೇಳಿದ ಸಾಧ್ವಿಯ ಲಕ್ಷಣವನ್ನು ನೆನೆದುಕೊಳ್ಳಬೇಕು. ಅವಳ ಬಗ್ಗೆ ಹೇಳುವಾಗ ಮನುವು (V-154) ಗಂಡನ ಗುಣಾವಗುಣಗಳನ್ನು ಲೆಕ್ಕಿಸದೆ ಅವನು ಎಂಥವನಾದರೂ ಅವನನ್ನು ಉಪಚರಿಸುವುದು, ಸತ್ಕರಿಸುವುದು ಸಾಧ್ವಿಯ ಲಕ್ಷಣ; ಒಮ್ಮೆ ಗಂಡನೆಂದು ವರಿಸಿದ (ಆಯ್ದುಕೊಂಡ) ಬಳಿಕ ಅವಳ ಮನೋದೈಹಿಕ ತೃಪ್ತಿಗಳಿರುವುದು ಅವನಿಗೆ ಸ್ತ್ರೀಲಿಂಗವಿಶಿಷ್ಟವಾದ ವ್ಯವಹಾರಗಳಲ್ಲಿ ಸದಾ ಅನುಕೂಲೆಯಾಗಿ ವರ್ತಿಸುವುದರಲ್ಲಿಯೇ – ಎಂಬ ಮನಃಶಾಸ್ತ್ರವನ್ನೂ ಕಾಮಶಾಸ್ತ್ರವನ್ನೂ ಹೇಳಿದ್ದಾನೆ. ಸ್ತ್ರೀಗೆ ಸ್ವಾತಂತ್ರ್ಯವಿಲ್ಲ ಎಂದರೆ ವ್ಯವಹಾರ ಜೀವನದಲ್ಲಿ ಅವಳು ರಕ್ಷಣೀಯಳು ಎಂದಿಷ್ಟೇ ಅರ್ಥ. ಇದು ನಿಸರ್ಗನಿಯಮದಷ್ಟೇ ನಿಯತವಾಗಿದೆ – ಮಾನವರಲ್ಲಿ, ಸಂಸ್ಕೃತರಲ್ಲಿ ವಿವಾಹಧರ್ಮವನ್ನು ಪವಿತ್ರವೆಂದು ಸತ್ಪ್ರಜೋತ್ಪಾದನೆಯ ದೃಷ್ಟಿಯಿಂದ ಒಪ್ಪಿಕೊಂಡವರಲ್ಲಿ.

ರಕ್ಷಕತ್ವವನ್ನು ಬಿಟ್ಟ ಗಂಡನ ಹೆಂಡತಿಗೆ ರಕ್ಷಿತಧರ್ಮವಿಲ್ಲವೆಂಬುದನ್ನು ಹೊಸದಾಗಿ ಯಾರೂ ಹೇಳಬೇಕಾಗಿಲ್ಲ; ಆಗಲೂ ಆ ಧರ್ಮವನ್ನವಳು ಇಟ್ಟುಕೊಂಡರೆ ಅಂಥವಳು ಮಹಾಸತಿ ಎನಿಸುತ್ತಾಳೆ. 'ಯತ್ರ ನಾರ್ಯಸ್ತು ಪೂಜ್ಯಂತೇ' ಎಂಬ ಮಾತಿನಲ್ಲೇ ಗೌರವಿಸುವ ಅಥವಾ ಗೌರವಿಸದಿರುವ ಕರ್ತೃತ್ವವು ಪುರುಷಕೋಟಿಯದೆಂಬುದು ವ್ಯಕ್ತವಾಗುತ್ತದೆ. ಪುರುಷನೇ ಸ್ತ್ರೀಗುಣದ Recognising Agent ಮನ್ನಣೆಕಾರ ಎಂಬುದು ಅನುಭವಸಿದ್ಧ. ಆದುದರಿಂದ ಅವನೊಡನಾಟವಿಲ್ಲದಲ್ಲಿ ಅವಳ ಜೀವನದ ಮೌಲ್ಯಕ್ಕೆ ಸಾರ್ಥಕತೆಯಿಲ್ಲ ಎಂಬ ಧ್ವನಿ ಈಗಲೂ ಭಾರತೀಯ ನಾಗರಿಕತೆಯಲ್ಲಿದೆ. ಇತರ ದೇಶಗಳಲ್ಲೂ ಇದನ್ನು ಗುರುತಿಸಬಹುದು. ಕೇವಲ ಸ್ತ್ರೀಯ ಮೆಚ್ಚುಗೆಯಿಂದಲೇ ಜೀವನದ ಸಾರ್ಥಕತೆಯನ್ನು ಕಾಂಬ ಪುರುಷಹೃದಯಗಳು ಬಹಳ ಕಡಮೆ ಎನ್ನಬಹುದು. ಜೊತೆಗೆ ವ್ಯವಹಾರವಿನ್ನೂ ಸ್ತ್ರೀಯ ಅಬಲತೆಗೆ ಪ್ರಮಾಣವಾಗಿಯೇ ಇದೆ. ಆದರೆ ರಕ್ಷಣೀಯತೆಯನ್ನು ದಾಸ್ಯವೆಂದು ಅನುಭವಿಸುವುದಾಗಲಿ ದಾಸ್ಯವೆಂದು ಹೇರುವುದಾಗಲಿ ಮನುಷ್ಯ ಮಾನ್ಯವಾದ ಧರ್ಮವಲ್ಲ. ಹೇಳುವುದಷ್ಟೇ ಶಾಸ್ತ್ರವಾಗಿ, ಹಾಕುವುದು ಗಾಳವನ್ನೇ ಎಂಬ ಇತಿಹಾಸಾವಧಿಯಲ್ಲಿ ಯಾವ ಆದರ್ಶಶಾಸ್ತ್ರವೂ ಯಾರನ್ನೂ ರಕ್ಷಿಸದು. ವ್ಯಕ್ತಿಗಳ ನೈತಿಕ ಅರ್ಹತೆಗೆ ಮೀರಿದ ಪ್ರಮಾಣದಲ್ಲಿ ಸ್ವಾತಂತ್ರ್ಯ ಅವರಿಗೆ ದೊರೆತರೆ ಇತರರ ಜೀವನಸ್ವಾತಂತ್ರ್ಯಕ್ಕೂ ತಮ್ಮ ಸುಖಕ್ಕೂ ಅವರು ಕಂಟಕರಾಗಿಯೇ ತೀರುವುದು ನಿಸರ್ಗಸಹಜ. ಸ್ತ್ರೀ–ಪುರುಷರ ಸಮಾನತೆಯನ್ನು ಸಾರಿದ ಈ ಸ್ವತಂತ್ರಯುಗದಲ್ಲಿಯೂ ಸ್ತ್ರೀಯು ಮಾನಸ–ಶಾರೀರಿಕವಾದ ಸಂಸ್ಕೃತ ಸುಖವನ್ನು ಹೆಚ್ಚು ಪ್ರಮಾಣದಲ್ಲಿ ಉಣ್ಣುತ್ತಿದ್ದಾಳೆ ಎಂದು ವಿಜ್ಞಾನ–ಶುದ್ಧವಾಗಿ ಹೇಳುವುದು ಕಷ್ಟ. ಏಕೆ? ಸಾಮಾನ್ಯ ಸ್ಥಿತಿಯನ್ನು ಅಂದಾಜು ಮಾಡುವಾಗ ಸರಾಸರಿ ತೆಗೆದುಕೊಳ್ಳಲು ಬಹುಸಂಖ್ಯ ಪ್ರಯೋಜ್ಯರ (Subjects of Experiment) ಸ್ವಪರ–ಲಾಭ–ಹಾನಿಗಳನ್ನು ನಾಗರಿಕತೆಯ ಉತ್ಕರ್ಷಾಪಕರ್ಷಗಳ ಮಾನದಿಂದ, ವಸ್ತುನಿಷ್ಠತ್ರಯಸ್ಥ ದೃಷ್ಟಿಯಿಂದ ತೂಗಿ ನೋಡಬೇಕಾಗುತ್ತದೆ. ಇಂದಿನ ಮತಾಧಿಕಾರದಿಂದ ಸಂಪನ್ನರಾದ ಬಹುಸಂಖ್ಯರ ಪಾಡಿಗೂ ಇಂದಿನ ಹೊಸದಾಗಿ ಪಡೆದ (?) ಸ್ವಾತಂತ್ರ್ಯವುಳ್ಳ ಸ್ತ್ರೀಯರ ಪಾಡಿಗೂ ಸಮಷ್ಟಿದೃಷ್ಟಿಯಿಂದ ತೂಗಿ ನೋಡಿದರೆ ಬಹಳ ವ್ಯತ್ಯಾಸವು ಕಂಡುಬರುವುದಿಲ್ಲ. ಈ ಮಾತಿನ ಸತ್ಯತೆಯನ್ನು ಬಡ ಭಾರತೀಯ ಸ್ತ್ರೀ–ಪುರುಷರ ಜೀವನ ಪರಿಸ್ಥಿತಿಯಲ್ಲಿ ನಿಂತುಕೊಂಡಾಗ ಮಾತ್ರ ಅರಿತುಕೊಳ್ಳಲು ಶಕ್ಯವಾದೀತು. **ರೊಕ್ಕಸ್ಥರು ಸ್ವಾತಂತ್ರ್ಯವನ್ನು ಅಸಮಾಜವಾದೀಯ ಸಮಾಜದಲ್ಲಿ ಯಾವಾಗಲೂ ಕೊಳ್ಳಬಲ್ಲರು!** Money buys many more things than people generally imagine – ಸಾಮಾನ್ಯರು ಊಹಿಸುವುದಕ್ಕಿಂತ ಹೆಚ್ಚಿನ ವಸ್ತುಗಳನ್ನು ರೊಕ್ಕ ಕೊಳ್ಳುತ್ತದೆ: ಸ್ವಾಚ್ಛಂದ್ಯ ಕೂಡ ಧನಾಧೀನ – ಇಂದಿನ ಅರಾಜಕ ಸಾಮಾಜಿಕ ಜೀವನದಲ್ಲಿ! ಇಂದಿನ ಸ್ತ್ರೀಗೇನಾದರೂ ಕೆಲಮಟ್ಟಿಗೆ ಕೆಲವೆಡೆ ಉತ್ತಮಸ್ಥಿತಿ ಬಂದಿದ್ದರೆ ಹಿಂದಿನಂತೆಯೇ ಪುರುಷರ ಪ್ರಬುದ್ಧ ವಿಚಾರ – ವ್ಯವಹಾರಗಳಿಂದ; ಕಾಯದೆಯೂ ಅದರ ಫಲವೇ ಆದರೂ ಕಾಯದೆ ಜಾರಿಯಲ್ಲಿ ಬಂದು ಫಲಿಸಿದ್ದಕ್ಕಿಂತ ಹೆಚ್ಚು ಸ್ತ್ರೀಯ ಮೇಲಿನ ದಯೆ ಪುರುಷರ ನಿತ್ಯದ ವ್ಯವಹಾರದಲ್ಲಿ ಕೆಲಸ ಮಾಡುತ್ತಿರುವುದೇ ಹೆಚ್ಚು ಪ್ರಭಾವಿ. ಸಾಮಾಜಿಕ – ಕೌಟುಂಬಿಕ ಜೀವನದ ಇಡಿನೋಟ ಹಿಡಿದು ಸಾಗಿದರೆ

ತೋರುವುದಿದು: ಮದ್ಯನಿರೋಧ, ಮಾಂಸವಿರೋಧ, ವೇಶ್ಯಾವೃತ್ತಿಯ ಪ್ರತಿಬಂಧ ಮತ್ತು ಸ್ತ್ರೀಸ್ವಾತಂತ್ರ್ಯದಾನಗಳು ಯಾವಾಗಲೂ ಕಾಯದೆಯಿಂದ ಸಾಧ್ಯವಾಗಲಾರವು.* ಈ ವಿಷಯಗಳಲ್ಲಿ ರಾಷ್ಟ್ರೀಯ ಆವಶ್ಯಕತೆ ಉಂಟಾದಾಗಲೆಲ್ಲಾ ನೈತಿಕ ಚಳವಳವನ್ನು ಪ್ರಬಲವಾಗಿ ಕೈಕೊಳ್ಳುವುದೊಂದೇ ಪರಿಣಾಮಕರವಾದ ಉಪಾಯ. ಆದರೆ ಅದಕ್ಕ ಸರಕಾರಗಳು ಸಾರ್ವಜನಿಕ ಅಭಿಪ್ರಾಯಕ್ಕೆ ಅನುಗುಣವಾದ ಕಾಯದೆಯನ್ನೂ ಸಮರ್ಥವಾಗಿ ಜಾರಿಗೆ ತಾರದಿರುವುದಕ್ಕೆ ಇಂದಿನ ಭಾರತ ಹಲವು ನಿದರ್ಶನಗಳನ್ನು ಕೊಡಬಲ್ಲದು.

⌘ ⌘ ⌘

---

* A nation cannot be reformed by laws. The reform must well from within and be a part of the life of the people. Legislature is the creature rather than the creator of reforms. It is very often said that legislation must not go ahead of public opinion but keep pace with it.

– Justice P.B.Mukharji

# ೧೦

# ಶಾಸನಧರ್ಮ

ಮೇಲಿನ ವಿಚಾರವು ಮನುಪಕ್ಷೀಯ. ಆದರೆ ಅದು ಶಾಶ್ವತಧರ್ಮಕ್ಕೆ ವಿರುದ್ಧವಾಗಿ ವ್ಯವಹಾರದಲ್ಲಿ ಬಂದಾಗ ತ್ಯಾಜ್ಯ; ಹಾಗೆ ಬಾರದಿದ್ದಾಗ ಗ್ರಾಹ್ಯ. ಪಂಚಮಹಾಧರ್ಮಗಳ ಭಂಗವೇ ಯುರೋಪಿನಲ್ಲಾದರೂ ಕ್ರಾಂತಿಗಳನ್ನು ಎಬ್ಬಿಸಿದ್ದು. ಅವಕ್ಕೆ ಭಂಗ ಬಂತೋ ಇಲ್ಲವೋ ಎಂಬುದನ್ನು ಜನತೆಯಲ್ಲಿಯ ಯಾವ ಮೂರೂ ಮುಕ್ಕಾಲು ಮಂದಿಯೂ ನಿರ್ಣಯಿಸಲಾರರು. ಜನತಾತ್ಮವು ದಂಗೆಯೆದ್ದಾಗ ಐತಿಹಾಸಿಕ ನಿರ್ಣಯವನ್ನು ಎಲ್ಲ ಸಂಗತಿಗಳ ಮೇಲೂ ಅದೇ ಭದ್ರವಾಗಿ ಕೊಟ್ಟುಬಿಡುತ್ತದೆ. ಅಂಥ ಹೊಸ ಸದಾಚಾರದ ನೇತೃ 'ನಾನಾಗಬೇಕು ತಾನಾಗಬೇಕು' ಎಂದು ಜನರು ಪ್ರಯತ್ನಿಸುವುದೂ ಯೋಗ್ಯ; ಅವರ ಭಿನ್ನಮತಗಳ ಪ್ರಕಟನೆಯೂ ಯೋಗ್ಯ. ಆದರೆ ಜನಾಂತರಂಗವನ್ನು ಅರಿಯದೆ, ಅದು ಕೆಲವೇ ಪಂಡಿತಂಮನ್ಯರು ಯೋಜಿಸಿದ ಸುಧಾರಣೆಯನ್ನು ಸ್ವಾಗತಿಸಿ ಜೀರ್ಣಿಸಿಕೊಂಬಷ್ಟು ಪಕ್ವವಾಗದೆ ಇರುವಾಗ ಮಾಡಿದ ಸಮಾಜ ಸುಧಾರಣೆಯ ಕಾಯದೆ (ಚಳವಳವಲ್ಲ, ಪ್ರಚಾರವಲ್ಲ, ಉಪದೇಶವಲ್ಲ, ವ್ಯಾವಹಾರಿಕ ಆದರ್ಶ ಉದಾಹರಣೆಗಳಲ್ಲ!) ಅಪ್ರಯೋಜಕ ಮತ್ತು ಕೆಲವೊಮ್ಮೆ ಹಾನಿಕರ ಎಂಬುದನ್ನು ದಿವಂಗತ ಡಾ. ಶ್ಯಾಮಪ್ರಸಾದ ಮುಖರ್ಜಿಯವರಂಥ ಭಾರತದ ಹಿತಚಿಂತಕರು ಸಮರ್ಥವಾಗಿ ಪ್ರತಿಪಾದಿಸಿದ್ದಾರೆ. ಅಶಾಶ್ವತಧರ್ಮಗಳನ್ನೆಂದೂ ಯಾರೂ ಶಾಶ್ವತವೆನ್ನಲಾರರು. ವರ್ಣಾಶ್ರಮಾದಿ ಧರ್ಮಗಳನ್ನಲ್ಲದೆ ಜಾತಿಗಳ ಧರ್ಮಗಳನ್ನೂ ಶಾಶ್ವತವೆಂದು ಮನು ಹೇಳಿದಂಥ ಭಾವ ತೋರಿದರೆ, ಅದು ವರ್ಣ–ಜಾತಿಗಳಿಂದ ಭಾರತವು ಗಣ್ಯವಾದ ಯಾವ ತೊಂದರೆಯನ್ನೂ ಅನುಭವಿಸದಿದ್ದ ಕಾಲದಲ್ಲಿ. ಪರಸ್ಪರವಾದ ಯಾವ ವ್ಯವಹಾರವೂ ಇಬ್ಬಣಗಳೂ ಏಕಾರ್ಥಕವಾಗಿ ತಿಳಿದು, ಭಾವಿಸಿ, ಜೀವಿಸುವಾಗಲೇ ವಾಸ್ತವಿಕ ಸತ್ಯವೆನಿಸುತ್ತದೆ. ಶೋಷ್ಯ–ಶೋಷಕ ಅನುಭವಗಳಾದರೂ ಹಾಗೇ; ಪೋಷ್ಯ–ಪೋಷಕ ಅನುಭವಗಳಾದರೂ ಅಷ್ಟೇ.

ಈ ಮಾತುಗಳನ್ನಾಡಲು ಕಾರಣವೇನೆಂದರೆ ಹಿಂದಿನ ಧಾರ್ಮಿಕ ಮತಗಳ ಬಹಿಷ್ಕಾರಕ್ಕಿಂತಲೂ, ಅನ್ಯಾಯವಾದ ಒಂದು ಕಾಯದೆಯು ಉಂಟು ಮಾಡುವ ಕ್ರೂರ ಪರಿಸ್ಥಿತಿ ಅವರ್ಣನೀಯ ಎಂಬುದೇ ಆಗಿದೆ. ಅಂಥ ಒಂದು ಕಾಯದೆ ಹತ್ತು ಹೆಜ್ಜೆ ಮುಂದೆ ಹೋದ ನೈತಿಕ ನಾಗರಿಕತೆಯನ್ನು ಒಂದೇ ಏಟಿಗೆ ಹಿಂದೆಳೆದೀತು.

ಅದರಲ್ಲೂ ನಿಸರ್ಗ, ಜನಾಂತರಂಗದ ಸಂಸ್ಕಾರ, ಇತಿಹಾಸದ ಪರಿಸ್ಥಿತಿಗಳನ್ನು ವಿವರವಾಗಿ ನೋಡದೆ ಉದ್ದೇಶಸಾಧಕವಾಗುವಂತೆ ವ್ಯವಸ್ಥಿತವಾಗಿ ಅಮಲಿನಲ್ಲಿ ತರಲಾರದಂಥ, ಸದಾದರ್ಶವೆಂದು ಕೆಲವರು ತಿಳಿದುಕೊಂಡ, ಕಾಯದೆಯನ್ನು ಮಾಡುವುದು ನೀತಿಶೋಷಕ. ಮನುವಿನ ಪ್ರಪಂಚದಲ್ಲಿ ಆಳರಸರಿಗೆ ಕಾಯದೆ ಮಾಡುವ ಸ್ವಾತಂತ್ರ್ಯವಿದ್ದಿಲ್ಲವೆಂಬುದನ್ನು ನೆನಪಿಟ್ಟುಕೊಳ್ಳಬೇಕು. ಅಂದರೆ Public Opinion ಜನಾಭಿಪ್ರಾಯುವನ್ನು ಗೂಢಚಾರಾದಿಗಳಿಂದ ತಿಳಿದೇ ರಾಜನು ಕೆಲವೊಮ್ಮೆ ಸ್ಮೃತೀತರವಾದ ಅವಶ್ಯಕ ಆಜ್ಞೆಗಳನ್ನು ಹೊರಡಿಸಬಲ್ಲವನಾಗಿದ್ದ. ಇದರರ್ಥವೇನೆಂದರೆ, ಭದ್ರವಾದ ನಾಗರಿಕತೆಯ ತಳಹದಿಯು ನೀತಿಪ್ರಧಾನವಾದ ಶಿಕ್ಷಣವಲ್ಲದೆ ಕಾಯದೆಯಲ್ಲ– ಎಂಬುದೇ ಆಗಿದೆ. ಕಾಯದೆಯು ನೀತಿಗೆ ಕೇವಲ ಪೂರಕ. ಅದರಿಂದಲೇ ಹಿಂದಿನ ಭಾರತವು "ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುಃ ಸಾಕ್ಷಾನ್ಮಹೇಶ್ವರಃ" ಎಂದು ಹೇಳಿದ್ದು. ಎಲ್ಲ ಪ್ರವಾದಿಗಳೂ ಮಹಾಚಾರ್ಯರು; ಅವರೇ ನಾಗರಿಕತೆಗಳ ವಕ್ತಾರರು. **ಅವರ ಶಿಷ್ಯರಾಗುವುದೇ ಪ್ರಜಾಧರ್ಮ.**

ಧರ್ಮವನ್ನು ವಿಶಾಲಾರ್ಥದಲ್ಲಿ "Way of Life – ಜೀವನದ ಮಾರ್ಗ" ಎಂದು ಧರ್ಮಜ್ಞರೆಂದುದುಂಟು. ಅದು ಜನತೆಯ ಸಂಸ್ಕೃತಿಯಾದಾಗ ಅದನ್ನು ರಾಜ ಗೌರವಿಸಿ ಅದನ್ನೇ ಅಮಲಿನಲ್ಲಿ ತರಬೇಕೆಂದು ವಿಜಿಗೀಷುಗಳಾದ (Conquerors) ರಾಜರಿಗೆ ಉಪದೇಶ ಮಾಡಲಾಗಿದೆ. ಇದನ್ನು ಅರಿತರೆ ಲೋಕಮತಕ್ಕೆ ಹಿಂದಿನ ಕಾಯದೆತಜ್ಞರು ಎಷ್ಟು ಮನ್ನಣೆ ಕೊಡುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಪ್ರಜಾಪ್ರಭುತ್ವದ ಈ ಯುಗದಲ್ಲಿ ಪ್ರಜಾಭಿಪ್ರಾಯ (ಬಹುಮತ) ಯಾವುದೆಂಬುದನ್ನು ತಿಳಿದುಕೊಳ್ಳಲು ಯೋಗ್ಯ ಮಾರ್ಗಗಳಿಂದ ಪ್ರಯತ್ನಿಸದೆ, ಪ್ರತಿಯೊಬ್ಬನೂ ತಾನೇ ಜನಪ್ರತಿನಿಧಿ ಎಂದು ಅಧಿಕಾರ ಸ್ಥಾನದಲ್ಲಿದ್ದಾಗ ಭಾವಿಸಿಕೊಂಡು ಕಾರ್ಯಾಸಕ್ತನಾಗುವ ಅಧರ್ಮ ಅತ್ಯಂತ ಹಾನಿಕರ.

'ಆಚಾರವೇ ಧರ್ಮ, ಅನಾಚಾರವೇ ಅಧರ್ಮ' ಎಂಬುದು ಮನುಮತ. ಶಾಸನಬದ್ಧ ನಡೆವಳಿಕೆಯನ್ನಿದು ಒತ್ತಿ ಹೇಳುತ್ತದೆ. ಕಾಯದೆಯನ್ನು ಪಾಲಿಸಬೇಕೆಂಬುದು ಇಂದಿಗೂ ಸತ್‌ಪ್ರಜಾಸ್ವಭಾವವೆಂದು ಪರಿಗಣಿತವಾಗಿಲ್ಲವೇ?[೨೨(ಬ)]

⌘ ⌘ ⌘

೨೨(ಬ) Dharma (Law) is dependent upon Achara-achara being defined as that which is ordained by Shruti and smriti and is properly acted up to by good men, which shows that achara stands, not for customs, but for Right Behaviour.

– Manu Smriti Notes by Ganganath Jha

# ೧೧

# ಆತ್ಮಧರ್ಮ

ಕೊನೆಯದಾಗಿ, ಅಧ್ಯಾತ್ಮವಿದ್ಯೆಗೆ ಹೆಸರಾದ ಭಾರತೀಯ ನಾಗರಿಕತೆಯನ್ನು ಮನು ಹೇಗೆ ಪ್ರತಿನಿಧಿಸುತ್ತಾನೆ ಎಂಬುದನ್ನು ನೋಡೋಣ – ಮುಕ್ತಾತ್ಮನ ಧರ್ಮವೇನೆಂಬುದನ್ನು ಅವಲೋಕಿಸೋಣ:

ಧರ್ಮ – ಅರ್ಥ – ಕಾಮಗಳ ಸಾಧನೆಯ ರೀತಿ, ಮಾರ್ಗ, ಧರ್ಮ ಎಂಬುದನ್ನು ವಿವರಿಸಿದ್ದಲ್ಲದೆ ಮನುವು ಮಾನವ ಜೀವಿತದ ಪರಮಮೌಲ್ಯ, ಪರಮಾರ್ಥ, ಪರಮಾದರ್ಶ ಎನಿಸಿದ ಮೋಕ್ಷ ಅಥವಾ Absolute Liberty– ನಿರಪೇಕ್ಷ ಸ್ವಾತಂತ್ರ್ಯದ ಮನಃಸ್ಥಿತಿ, (ಮನೋಧರ್ಮ, ಮನಃಸಾರ, ಶುದ್ಧಚೇತನಾಸ್ವರೂಪ) ಅಥವಾ ಆತ್ಮಾವಸ್ಥೆಯು ಮನುಷ್ಯನಲ್ಲಿ ಚಾಲಕಶಕ್ತಿಯಾಗಿ ಅವನ ಇಡಿ ನಿಷ್ಠೆಯನ್ನು ಆಕ್ರಮಿಸಿದಾಗ ಅವನ ಒಳ–ಹೊರ ಲಕ್ಷಣಗಳೆಂತಿರುವುವೆಂಬುದನ್ನು ಆರನೆಯ ಅಧ್ಯಾಯದಲ್ಲಿ (VI-44) ಹೇಳಿದ್ದಾನೆ. ಅಶನಕ್ಕೆ ಮಣ್ಣಿನ ಭಿಕ್ಷಾಪಾತ್ರೆ ಹಿಡಿದು ತಿರುಗುವುದು, ವಸತಿಗೆ ಮರದ ನೆರಳನ್ನಾಧರಿಸುವುದು, ವಸನಕ್ಕೆ ಹಳೆಯ ಹರಕು ಅರಿವೆಯನ್ನು ಬಳಸುವುದು (ಕೇವಲ ಕೌಪೀನಧಾರಿಯಾಗಿ ತಿರುಗುವುದು) ಮತ್ತು ಯಾರನ್ನೂ ಸಹಾಯಕರೆಂದು ಅವಲಂಬಿಸದಿರುವುದು (ಏಕಾಕಿಯಾಗಿ ಇರುವ ಮನೋಭಾವ ತಾಳಿರುವುದು), ಬೇಕಾದವರು, ಬೇಡವಾದವರು ಎಂಬ ಭೇದಬಿಟ್ಟ ಸಾಮ್ಯವಾದಿಯಾಗಿ ಜೀವಿಸುವುದು – ಮುಕ್ತನ ಲಿಂಗ ಅಥವಾ ಗುರುತು, ಲಕ್ಷಣ. ಇಂಥ ಜೀವನಮಾರ್ಗವು ಮುಮುಕ್ಷುವಿಗೂ ಮುಕ್ತನಿಗೂ ಸಾಧಾರಣ. ಭಾರತದಲ್ಲಿ ವೇದಾಂತದ ಆಚಾರ್ಯತ್ರಯರ ಉದಯವಾದ ಕಾಲದಿಂದ ಮುಕ್ತಚೇತನೆಯ ಸ್ವರೂಪವು ಅತ್ಯಂತ ವಿವಾದಾಸ್ಪದವಾಯಿತು. ಆದರೆ ಮುಕ್ತರ ಬಾಹ್ಯ ಲಕ್ಷಣವಂತೂ ಇಂದಿಗೂ ಮೇಲೆ ಹೇಳಿದಂತೆ ಬಹುಸಂಖ್ಯರ ಅಭಿಪ್ರಾಯಕ್ಕೆ ಸಮ್ಮತವಾಗಿಯೇ ಇದೆ. ನೀತಿಶಾಸ್ತ್ರ, ಮಾನಸಶಾಸ್ತ್ರಗಳ ದೃಷ್ಟಿಯಿಂದ ಉಕ್ತ ಮುಕ್ತ ಜೀವನಪದ್ಧತಿ ಅತ್ಯಂತ ಸಾಧುವೆನಿಸುತ್ತದೆ – ಅದೊಂದೇ ಸಾಧುವೆನಿಸುತ್ತದೆ – ಮುಕ್ತರಿಗೆ ಮಾನ್ಯತೆ ಇರುವ ರಾಷ್ಟ್ರದಲ್ಲಿ. ಇದೇ ಯೋಗಜೀವನದ ಬಾಹ್ಯಶೀಲ.

ಶರೀರಿಗಳಿಗೆ ಮರಣವು ಪ್ರಕೃತಿ, ಜೀವಿತವು ವಿಕೃತಿ; ಕ್ಷಣದ ಮಟ್ಟಿಗೆ ಉಸಿರಾಡಿಸುತ್ತ ಬದುಕಲಾದರೆ ಜೀವಿಗೆ ಅಷ್ಟೇ ಲಾಭ – ಎಂದು ಕಾಳಿದಾಸ ಕೂಡ ಆತ್ಯಂತಿಕವಾದ ಮಾನವಜೀವಿತದ ವಿಕಾಸಪದವನ್ನು ಹೇಳಿದ್ದು ಮನ್ವನುಕೂಲವಾಗಿಯೇ. ಪ್ರಪಂಚವನ್ನು ಮೀರಿ ಮತ್ತೂ ಎತ್ತರಕ್ಕೇರಿ ನೋಡುವ ಮಾನವವ್ಯಕ್ತಿತ್ವದ ದೃಷ್ಟಿಯಲ್ಲಿ ಮುಕ್ತಸ್ಥಿತಿ ಅತ್ಯಂತ ಆರೋಗ್ಯಕರವಾದ ಪರಮ ಪದವಿ. ಪ್ರಪಂಚಪ್ರಜ್ಞೆಯನ್ನು ಮೀರಿ ನಿಷ್ಪ್ರಪಂಚ ಪ್ರಜ್ಞೆಗೇರುವುದೂ, ಮರ್ತ್ಯಪ್ರಜ್ಞೆಯಿಂದ ಅಮೃತಪ್ರಜ್ಞೆಗೇರುವುದೂ, ಪ್ರತ್ಯೇಕ ಜೀವಪ್ರಜ್ಞೆಯಿಂದ ವಿಶ್ವಾತ್ಮಪ್ರಜ್ಞೆಗೇರವುದೂ ಸಹಜವಾದ ಮಾನವವಿಕಾಸದ ಕ್ರಮ. ಮುಕ್ತಿಯ ಅಂತಃಸ್ವರೂಪವಿದು. ಏಕೆಂದರೆ, ಮನುವಿನ ಪ್ರಕಾರ (XII-118) ತನ್ನಲ್ಲಿ ಎಲ್ಲವನ್ನೂ (ಸತ್ತನ್ನೂ ಅಸತ್ತನ್ನೂ) ನೋಡಬೇಕು, ಸಮಾಧಾನಶೀಲನಾಗಿರಬೇಕು; ಹೀಗೆ ಸರ್ವವನ್ನೂ ಆತ್ಮಸ್ಥವನ್ನಾಗಿ ನೋಡಿದರೆ ಮನುಷ್ಯನ ಮನಸ್ಸು (ರಾಗ – ದ್ವೇಷಗಳಿಂದ ಮುಕ್ತವಾಗಿ) ಅಧರ್ಮಾಚರಣೆಗೆ ಒಲೆಯದು; ಸರ್ವಭೂತಗಳಲ್ಲಿ (XII-91) ಆತ್ಮವನ್ನೂ (ತನ್ನನ್ನೂ) ಆತ್ಮದಲ್ಲಿ (ತನ್ನಲ್ಲಿ) ಎಲ್ಲ ಚರಾಚರಗಳನ್ನೂ ಸಮದೃಷ್ಟಿಯಿಂದ ಏಕಕಾಲದಲ್ಲಿ ಭಾವಿಸಬಲ್ಲ ಪ್ರಜ್ಞಾವಂತನಾದವ ಸ್ವಾರಾಜ್ಯವನ್ನು (ಸ್ವಸ್ವರೂಪ ಸ್ಥಿತಿಯನ್ನು) ಅರ್ಥಾತ್ ಮೋಕ್ಷವನ್ನು ಅನುಭವಿಸುತ್ತಾನೆ. Consciousness– ಚೇತನೆಯ ಅಥವಾ ಪ್ರಜ್ಞೆಯ ಉಕ್ತ ಅವಸ್ಥೆಯ ಲಕ್ಷಣವನ್ನು ಗಮನಿಸಿದರೆ ಮನು ಹೇಳುವ ಮೋಕ್ಷದ ಕಲ್ಪನೆ ಸ್ಪಷ್ಟವಾಗುವುದು. ಅದು ನಿಜವಾದ ಜೀವನ್ಮುಕ್ತಪ್ರಜ್ಞೆ, ವಿಶ್ವಕುಟುಂಬಿತ್ವ ಅಥವಾ ವಿಶ್ವವೇ ನಾನೆಂಬ ಏಕೀಕೃತ ಪ್ರಜ್ಞೆ; ಭಿನ್ನಾತ್ಮನಾಗಿದ್ದೆನೆಂದು ಭಾವಿಸುತ್ತಿದ್ದ ವ್ಯಕ್ತಿಗೆ ಏಕಾತ್ಮಪ್ರತ್ಯಯಸಾರದ ಸಾಕ್ಷಾತ್ಕಾರವಾಗುವುದು– Absolute universalisation of the individual Consciousness. "ನಾನು ಜಗತ್ಪ್ರಜೆ" ಎಂದುಕೊಂಡು ಹೆಮ್ಮೆಪಡುವ ಇಂದಿನ ನವ್ಯಕಲ್ಪನೆಯನ್ನು ಪ್ರಚಾರ ಮಾಡುತ್ತ ಬದುಕುವ ಆ ಈ ಸದಾತ್ಮರ ಮಟ್ಟಕ್ಕಿಂತ ಮನುದರ್ಶನ ಎಷ್ಟು ಎತ್ತರ ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಈ ಆತ್ಮಸ್ಥಿತಿಯನ್ನು ಅಗ್ನಿಯೆಂದೂ, ಮನುವೆಂದೂ, ಪ್ರಜಾಪತಿಯೆಂದೂ, ಇಂದ್ರನೆಂದೂ, ಪ್ರಾಣವೆಂದೂ, ಬ್ರಹ್ಮವೆಂದೂ ಶಾಶ್ವತಪದಾರ್ಥವೆಂದೂ ಬೇರೆ ಬೇರೆ ಜನರು ಬೇರೆ ಬೇರೆ ರೀತಿಯಿಂದ ಭಾವಿಸಿ ಉಪಾಸಿಸುತ್ತಾರೆ (XII-123). ಈ ಪರಮ ಆತ್ಮವೆಂಬುದರಲ್ಲಿ ಎಲ್ಲ ದೇವತೆಗಳೂ ಅಡಕವಾಗುತ್ತಾರೆ, ಅದರಲ್ಲೇ ಎಲ್ಲವೂ ಇವೆ; ಅದೇ ಶರೀರಗಳ ಕರ್ಮಯೋಗವನ್ನು ಹುಟ್ಟಿಸಿದ್ದು (XII-119). ಅದೇ ಪುರುಷ, ಪುರುಷೋತ್ತಮ, ಸರ್ವಪ್ರಶಾಸನ ಕರ್ತೃ, ಅಣುವಿಗಿಂತ ಅಣುತರ (ಸರ್ವಾತ್ಮತ್ವದ ದೆಸೆಯಿಂದ), ತಪ್ತಕಾಂಚನದಂತೆ ದೀಪ್ತಿಯುಳ್ಳದ್ದು, (ಸ್ವಪ್ನಬುದ್ಧಿಗಲ್ಲ) ಸ್ವಪ್ನಪ್ರಜ್ಞೆಗೆ ಸದೃಶವಾದ ಪ್ರಜ್ಞೆಗೆ ಗಮ್ಯ (XII-122) ಎಂದು ಮುಂತಾಗಿ ಸುಲಭ ಸಂಸ್ಕೃತದಲ್ಲಿ ಅವಿವಾದಾಸ್ಪದವಾಗಿ ಮನುವು ಮಾನವನ ಚೇತನೆಯ ವಿಕಾಸದ ಅಂತ್ಯ ಘಟ್ಟವು 'ಸರ್ವೋಽಹಂ' ಅಥವಾ 'ಎಲ್ಲಪ್ಪ'–'ಎಲ್ಲಾ' ಎಂದು ಸರ್ವಭಾವದಿಂದ (ಸರ್ವಜ್ಞಾನಸಾಧನಗಳಿಂದಲೂ) ಭಾವಿಸಿ ಬಾಳುವ ಬೃಹತ್ತಮವಾದ ನಿತ್ಯಸ್ಥಿತಿ– ಎಂದು ಹೇಳಿ ಮಾರ್ಗದರ್ಶನ ಮಾಡಿದ್ದು ನಿತ್ಯನೂತನ.

ಒಮ್ಮೆ ಆಧುನಿಕನು ತಾನು 'ವಿಶ್ವನಾಗರಿಕ' ಎಂದು ಭಾವಿಸಿಕೊಂಡು ಬಾಳುವುದರ ಸಾಧ್ಯತೆಯನ್ನೊಪ್ಪಿಯಾನು. ಅವನಿಗೆ ಮುಕ್ತನ 'ಚರಾಚರೋಽಹಂಭಾವ' ಗಮ್ಯವಾಗದೆ ಹೋಗಬಹುದು. ಆದರೆ ನಾವಿಂದು – ಗ್ರಹಣ ಮಾಡಿಕೊಳ್ಳುವುದು ಎಂಬುದರ[೨೩] ನಿಜವಾದ ಪೂರ್ಣಾರ್ಥವನ್ನು ತಿಳಿದರೆ, 'ಭಾವಿಸಿಕೊಳ್ಳುವುದು' ಎಂಬ ಪದದ ಅರ್ಥ ಚೆನ್ನಾಗಿ ಆಗುವುದು. ತನ್ನಿಂದ ಭಿನ್ನವಾದ ಅನ್ಯ ವಸ್ತು ವ್ಯಕ್ತಿ – ಮನಃಸ್ಥಿತಿಗಳನ್ನು ಸರಿಯಾಗಿ ತಿಳಿದುಕೊಳ್ಳುವಲ್ಲಿ ತಾದಾತ್ಮ್ಯಭಾವ ಅಥವಾ ತಲ್ಲೀನಭಾವ ತಾಳುವುದಗತ್ಯ ಎಂಬುದು ಮಾನಸಶಾಸ್ತ್ರಕ್ಕೂ ಅನುಭವಕ್ಕೂ ಸಮ್ಮತ. ಅಂಥ ತಾದಾತ್ಮ್ಯಭಾವವನ್ನು ಒಬ್ಬನು ಒಂದು ಕ್ಷಣ ಅಥವಾ ಗಳಿಗೆ, ತಾಳಬಹುದಾದರೆ ಅದನ್ನು ಅಭ್ಯಾಸ ಬಲದಿಂದ ಸಾಕಷ್ಟು ಸತತಗೊಳಿಸಿಕೊಳ್ಳುವುದು ಅಸಾಧ್ಯವೆನ್ನಲು ಬರದು. ನಾವು ಜೀವಿಸಿರುವಾಗ ಅಂಥ ಸಿದ್ಧಿ ಪರಿಪೂರ್ಣವಾಗಿ ಆಗದೆ ಹೋದರೂ ಅದರ ಮಾರ್ಗದಲ್ಲಿ ಬಹುದೂರ ಹೋಗುವುದಾದರೂ ಸಾಧ್ಯ. ಮನುಷ್ಯ ಸಮಾಜದ ಹಿತಾಹಿತಗಳೇ ತನ್ನ ಹಿತಾಹಿತಗಳು ಎಂಬ ಭಾವವನ್ನು ಅರಗಿಸಿಕೊಂಡ ಅಧ್ಯಾತ್ಮಸಿದ್ಧನಾದರೂ ಸರ್ವಾರಾಧ್ಯನೆನ್ನಿಸಿಕೊಳ್ಳಲಡ್ಡಿಯಿಲ್ಲ. ಇದು ಮಾನವ ಧರ್ಮದ ಸಾರ, ರಸ, ಸಿದ್ಧಿ. ಈ ದೃಷ್ಟಿಯಿಂದಲೇ ಮನುವು (V-109) ಶರೀರಶುದ್ಧಿ ನೀರಿನಿಂದ, ಮನಃಶುದ್ಧಿಯು ಸತ್ಯದಿಂದ, ಜೀವಾತ್ಮನ ಶುದ್ಧಿಯಾಗುವುದು ವಿದ್ಯೆ–ತಪಸ್ಸುಗಳಿಂದ ಮತ್ತು ಬುದ್ಧಿಯ ಶುದ್ಧಿಯು ಜ್ಞಾನದಿಂದ – ಎಂದು ಹೇಳಿದ್ದು. ಜ್ಞಾನವು ಸತ್ವಸ್ವರೂಪದ್ದು (XII-26). ಸತ್ವವೆಂದರೆ ನಮ್ಮ ಸಾರಭೂತ ಆಂತರಿಕ ಭಾವದಲ್ಲಿ ಗೋಚರವಾಗುವ ಒಂದು ವಿಧದ ಪ್ರೀತಿ ಸಂವೇದನೆ, ಅತಿಶುದ್ಧ ಎನಿಸುವ ಸಂವೇದನೆ, ಅತಿ ಶಾಂತ ಎನಿಸುವ ಸಂವೇದನೆ (XII-12, 27). ಶುದ್ಧಬುದ್ಧಿಗಷ್ಟೇ ಆತ್ಮವು ಗಮ್ಯ. ಶರೀರವನ್ನು ಕರ್ಮದಲ್ಲಿ ಪ್ರವರ್ತಿಸುವವನು ಕ್ಷೇತ್ರಜ್ಞ; ಆ ಕರ್ಮದ ಫಲವಾಗಿ ಸುಖದುಃಖಗಳನ್ನು ಅನುಭವಿಸುವವನೆಂದರೆ ಜೀವನೆಂಬ ಅಂತರಾತ್ಮ– ಈ ಜೀವಾತ್ಮನು ಎಲ್ಲ ದೇಹವಂತರಿಗೂ ಸಹಜ (XII-12, 13), ನೈಸರ್ಗಿಕ. ಜೀವಾಹಂಕಾರದಿಂದ ಮುಕ್ತವಾದ ಸಾರಭೂತ ಪ್ರಜ್ಞೆಯು ಆತ್ಮ. ಆತ್ಮಜ್ಞಾನದಿಂದ ಅಮೃತತ್ವ, ನಿಶ್ರೇಯಸ, ಮೋಕ್ಷ, ಸಮ್ಯಗ್ ದರ್ಶನ, ಬ್ರಹ್ಮಭೂಯ, ಪರಮಪದ!

ಸ್ವಲ್ಪ ಓದಿದವರು ಅಜ್ಞರಂತೆ; ಸಮಗ್ರವಾಗಿ ಓದಿದವರು ಅವರಿಗಿಂತ ಉತ್ತಮರೆನ್ನಬಹುದು. ಹಾಗೆ ಸಮಗ್ರವಾಗಿ ಸಾತ್ವಿಕ ಜ್ಞಾನವನ್ನು ಕೊಡುವಂಥ ಗ್ರಂಥವನ್ನು ಓದಿ ಮರೆಯದೆ ಮನಸ್ಸಿನಲ್ಲಿ ಯಾವಾಗಲೂ ಇಟ್ಟುಕೊಳ್ಳಬಲ್ಲವರು ಅವರಿಗೂ ಹೆಚ್ಚಿನವರು.

---

೨೩. "For to understand the culture is to understand the people and this means an imaginative understanding. Such understanding can never be complete; either it is abstract and the essence escapes-or else it is lived; and in so far as it is lived, the student will tend to identify himself so completely with the people whom he studies, that he will lose the point of view from which it was worthwhile and possible to study it"-T.S.Eliot in "Notes towards the Definition of Culture".

ಅವರಿಗಿಂತಲೂ ಮಿಗಿಲಾದವರೆಂದರೆ – ಅಂಥ ಗ್ರಂಥವನ್ನು ಹಾಗೆ ಓದಿ ನೆನಪಿನಲ್ಲಿಟ್ಟುಕೊಳ್ಳುವುದಷ್ಟೇ ಅಲ್ಲದೆ, ಅದರ ಅರ್ಥವನ್ನೂ ಚೆನ್ನಾಗಿ ತಿಳಿದುಕೊಂಡವರು; ಆಮೇಲೆ, ಹಾಗೆ ತಿಳಿದು ಆ ಪ್ರಕಾರವಾಗಿ ನಡೆದುಕೊಳ್ಳುವವರು ಸರ್ವೋತ್ತಮರು (XII-103)! ಆತ್ಮಜ್ಞಾನವನ್ನು ಪಡೆಯಲು ಹೊರಟವರಲ್ಲಿ ಇಷ್ಟು ವಿಧದ ವಿದ್ವಾಂಸರು ಲೋಕದಲ್ಲಿ ನಮಗೆದುರಾಗುತ್ತಾರೆ. ಸರ್ವಭೂತಗಳನ್ನೂ ಆತ್ಮವೆಂದೇ (ತಾನೆಂದೇ) ಭಾವಿಸುವ ಮನುಷ್ಯನು ಆತ್ಮಜ್ಞಾನಿ – ಎಂಬ ಮಥಿತಾರ್ಥವನ್ನು ಮನುಸ್ಮೃತಿ ಹೇಳುತ್ತದೆ; ಅರ್ಥಾತ್ **ಸರ್ವೋದಯದಲ್ಲಿ ಆತ್ಮೋದಯವನ್ನು ಕಾಣುವವನೇ ಆತ್ಮಜ್ಞಾನಿ**. ಈ ಅರ್ಥವನ್ನು ಹಿಂದುಧರ್ಮದ ಸಾರವೆಂದು ಗ್ರಹಿಸಿಯೇ ಗಾಂಧಿಯವರು ತಾವು ಹದಿನಾರಾಣೆ ಹಿಂದುಗಳೆಂದು ಹೇಳಿದ್ದು. ಹಿಂದುಧರ್ಮವೆಂದರೆ ಮಾನವಧರ್ಮ; ಮಾನವಧರ್ಮವೆಂದರೆ ಸರ್ವೋದಯ (ಬಹುಜನೋದಯವಲ್ಲ)!'

ವೈಯಕ್ತಿಕ ಮುಕ್ತಿಯನ್ನು ಸಾಧಿಸಿಕೊಂಬ ಸ್ವಾರ್ಥಿಗಳಾದ ಸನ್ಯಾಸಿಗಳಿಂದ ಸಮಾಜಕ್ಕೇನು ಪ್ರಯೋಜನ? ಎಂದು ಕೆಲವರು ಕೇಳುವುದುಂಟು. ಕರ್ಮಯೋಗಿಗಳಾಗದೆ ಉಳಿದರೂ ಅಂಥವರ ಅಸ್ತಿತ್ವವೇ "ಸಮದರ್ಶನವು ಸಾಧ್ಯ" ಎಂಬುದನ್ನು ನಿದರ್ಶಿಸಿ, ಜನರಲ್ಲಿ ಆ ದಿಶೆಯಲ್ಲಿ ಪ್ರಯತ್ನಮಾಡುವ ಪ್ರವೃತ್ತಿಯನ್ನು ಹುಟ್ಟಿಸಬಲ್ಲುದು. ಕಾಮ್ಯಕರ್ಮಗಳನ್ನು ಬಿಟ್ಟ ಸನ್ಯಾಸ ಮನೋಧರ್ಮವನ್ನು ಸಾಧಿಸಿಕೊಂಡ ಆತ್ಮವಂತರೇ ಭಾರತೀಯ ನಾಗರಿಕತೆಯು ಅವನತಿಗಿಳಿದಾಗಲೆಲ್ಲಾ ಅದನ್ನು ಉನ್ನತಮುಖಗೊಳಿಸಲು ನಾಯಕತ್ವ ವಹಿಸಿದ ಐತಿಹಾಸಿಕ ಸಂಗತಿಯನ್ನು ಅವಲೋಕಿಸಿದರೆ, ಸನ್ಯಾಸವನ್ನು ಅತ್ಯಂತ ಮೇಲಿನದಾದ ಚತುರ್ಥಾಶ್ರಮ ಎಂದು ಗಣಿಸಿದ್ದರ ಅರ್ಥ ಇನ್ನಷ್ಟು ಸ್ಫುಟವಾಗುವುದು. ಪ್ಲೇಟೋವಿನ ಕಾಲದ ಗ್ರೀಕರು ಸುಂದರನೂ ಸುಗುಣನೂ ಆದವನನ್ನು ಆದರ್ಶ ಮಾನವನೆನ್ನುತ್ತಿದ್ದರಂತೆ; ಅರಿಸ್ಟಾಟಲನ ಕಾಲದಲ್ಲಿ ಜಗದ್ಭರಿತ ಭಾವನೆಯುಳ್ಳ ಉದಾತ್ತಮನಸ್ಕನನ್ನು ಪುರುಷೋತ್ತಮನೆನ್ನುತ್ತಿದ್ದರಂತೆ. ಸ್ಟೋಯಿಕ್ ತತ್ವಜ್ಞಾನಿಗಳ ಪ್ರಕಾರ ಆತ್ಮಸಂಯಮವುಳ್ಳ ವಿವೇಕಿಯನ್ನು ಹಾಗೆಂದು ತಿಳಿಯಲಾಗುತ್ತಿತ್ತು. ರಾಜಪುತ್ರನಂತಿರುವ ಮನುಷ್ಯನನ್ನು ಚೀನೀಯರು ಮೆಚ್ಚುವರು. ಶಿಸ್ತಿನ ಯೋಧನು ಜಪಾನೀಯರಿಗೆ ಪ್ರಿಯ; ಹೀಬ್ರೂಗಳಿಗೆ Rightous man– ಶ್ರದ್ಧಾವಂತನು ಸುಪ್ರಿಯ. ರೋಮನ್ನರು ಜಪಾನೀಯರಂತೆಯೇ ಯೋಧಾದರ್ಶವನ್ನು ಎತ್ತಿ ಹಿಡಿದವರು. ಬ್ರಿಟಿಶರಿಗೆ 'ಜೆಂಟ್ಲ್‌ಮನ್' ಉತ್ತಮ ಪುರುಷ. ಜರ್ಮನ್ನರಲ್ಲಿ ಸ್ವಾಭಿಮಾನಿಯು ಗಣ್ಯ. ಕ್ರೈಸ್ತರ ದೃಷ್ಟಿಯಲ್ಲಿ Saint– ಸಂತ (ಯೇಸುವಿನ ಸತ್ವದಿಂದ ಆವಿಷ್ಟನಾಗಿ ಜಗತ್ತಿನೊಡನೆ ಸಮರಸವಾಗಿದ್ದೂ ಅದನ್ನು ಬದಲಾಯಿಸಲು ಪ್ರಯತ್ನಿಸುವವನು) ಶ್ರೇಷ್ಠ ಮನುಷ್ಯ. ಮುಸಲ್ಮಾನರಲ್ಲಿ ಸರ್ವಶಕ್ತನಾದ ಅಲ್ಲಾದೇವರಿಗೆ ಆತ್ಮಾರ್ಪಣ ಮಾಡಿಕೊಂಡು ಆತನ ದಾಸನೆಂದು ಭಾವಿಸಿ ಬದುಕುವವನು ಅತ್ಯಂತ ಗೌರವಾರ್ಹ. ಭಾರತೀಯರಿಗಾದರೋ ಸಾಧುವೇ ಪರಮಾದರ್ಶಪುರುಷ.[೨೪]

---

೨೪. 'Comparative Religion'

– by A.C. Bouquet.

ಸಾಧುವೆಂದರೆ [೨೫]ತಪಸ್ವಿಯಾಗಿರುವವನು, ಒಳ್ಳೆಯವನು, ಪವಿತ್ರಾತ್ಮನು. ಅವನೇ ಯೋಗಿ– ಶುದ್ಧಬುದ್ಧಿಯನ್ನು ಆತ್ಮದಲ್ಲಿ ಯೋಜಿಸಿಕೊಂಡವನು. ಭಗವದ್ಗೀತೆ ಹೇಳಿದಂತೆ ಯೋಗಿಯೇ ಸರ್ವೋತ್ತಮ. ಅವನೇ ಮನು ವಿವರಿಸಿದ ಆತ್ಮಜ್ಞಾನಿ, ನಿಜವಾದ ಸನ್ಯಾಸಿ, ವಿಶ್ವಸೇವಾಪರಾಯಣ.

ಭಾರತೀಯರ ಉತ್ತಮಾದರ್ಶದ ಪ್ರಕಾರ ಆತ್ಮಜ್ಞಾನಹೀನರು ಮೂಢರು. ಲೌಕಿಕವಾಗಿಯೂ ಈ ಮಾತು ಅರ್ಥವತ್ತಾಗಿದೆ. ತನ್ನ ಶಕ್ತಿಗಳ ಇತಿಮಿತಿಗಳನ್ನೂ ಅವುಗಳ ಕ್ರಮಿಕ ವಿಕಾಸದ ಯೋಜನೆಯನ್ನೂ ಅರಿತು ಬದುಕುವ ಯೋಚನೆಯಿಲ್ಲದವನು ತನ್ನ ಹಿತಾಹಿತಗಳನ್ನರಿಯದ ಮೂಢ–ಮನುವಿನ ಪ್ರಕಾರ ತಾಮಸಿಕ–ಎಂದಾಗುತ್ತದೆ. ಇಡಿ ಮಾನವ ನಾಗರಿಕತೆಗೇ ಭಾರತೀಯ ನಾಗರಿಕತೆ ಹಾಕಿಕೊಟ್ಟ ಅತ್ಯುತ್ತಮ ಪಾಠವಿದಲ್ಲವೇ? ಆತ್ಮವೆಂಬ ಪದಕ್ಕೆ ತಾನು, ಪರಮಾತ್ಮ, ಜೀವತತ್ವ, ಸ್ವರೂಪ, ಶರೀರ, ಮನಸ್ಸು, ಬುದ್ಧಿ, ಎಂಬೀ ಯಾವ ಅರ್ಥವನ್ನೇ ಇಟ್ಟುಕೊಂಡರೂ, 'ಆತ್ಮಜ್ಞಾನ ಅತ್ಯವಶ್ಯಕ' ಎಂಬ ಉಪದೇಶದ ಸತ್ಯಕ್ಕೆ ಭಂಗ ಬರಲಾರದು. "Charity begins at home – ದಯಾ, ಧರ್ಮ ಇಲ್ಲವೆ ದಾನ ಮನೆಯಲ್ಲೇ ಆರಂಭವಾಗುತ್ತದೆ" ಎಂಬ ಆಂಗ್ಲ ಗಾದೆಯಂತೆ ತನ್ನ ದೈಹಿಕ–ಮಾನಸಿಕ–ಜೈವಿಕ ಅಥವಾ ಆಧ್ಯಾತ್ಮಿಕ ಸ್ವರೂಪಗಳನ್ನು ಚೆನ್ನಾಗಿ ಅರಿತುಕೊಳ್ಳದೆ, ಇತರ ವಸ್ತು–ವ್ಯಕ್ತಿ–ಕಲ್ಪನೆಗಳ ವಿಮರ್ಶೆಗೆ ಹೊರಡುವ ಪ್ರವೃತ್ತಿ ಅಸಾಧುವೆಂಬುದನ್ನು ಭಾರತೀಯ ನಾಗರಿಕತೆ ಘಂಟಾಘೋಷವಾಗಿ ಸಾರುತ್ತದೆ. ಸ್ವಜ್ಞಾನದಿಂದಲೇ ಅನ್ಯಜ್ಞಾನವು ಚೆನ್ನಾಗಿ ಆಗಲು ಸಾಧ್ಯ. ಅಥವಾ ತನಗಿಂತ ಮನುಷ್ಯನೊಬ್ಬನಿಗೆ ಪ್ರಿಯತರವಾದ ಪದಾರ್ಥವಾದರೂ ಯಾವುದು? ಅಂಥ ಪ್ರಿಯತಮವಾದ ಪದಾರ್ಥದ ಸತ್ಯ ಸ್ವರೂಪವನ್ನು ಅರಿತುಕೊಳ್ಳ ಹೊರಡುವುದು ಅತ್ಯಂತ ಸ್ವಾಭಾವಿಕವಲ್ಲವೇ? ಪರಮಾರ್ಥತಃ ಈ ಸ್ವ–ಭಾವ, ಸ್ವ–ಅಸ್ತಿತ್ವ ಎಂಥದೆಂಬುದನ್ನು ಅರಿತು, ತದನುಗುಣವಾಗಿ ಬಾಳಲು ತಕ್ಕ ಯೋಜನೆ ಹಾಕಿಕೊಳ್ಳುವುದೇ ಮಾನವಧರ್ಮ, ಮಾನವ ಸಂಸ್ಕೃತಿ, ಮಾನವ ನಾಗರಿಕತೆ.

ಹಿಂದೆ ಹೇಳಿದ ಹನ್ನೆರಡನೆಯ ಅಧ್ಯಾಯದ ನೂರಿಪ್ಪತ್ತಮೂರನೆಯ ಶ್ಲೋಕದಲ್ಲಿ ಕೆಲವರ ಪ್ರಕಾರ 'ಮನು' ಎಂದರೆ ಆತ್ಮವೆಂದಾಗುತ್ತದೆ– ಎಂದು ಹೇಳಲಾಗಿದೆ. ಮನುಷ್ಯಧರ್ಮದ ಅತಿಶ್ರೇಷ್ಠವಾದ ವಿಕಸಿತ ಅವಸ್ಥೆಯನ್ನು ಸಾಧಿಸಿಕೊಂಡ ಸಾಧು, ಯೋಗಿ 'ಮನು' ಎಂಬ ಅರ್ಥ ಹುಟ್ಟುತ್ತದೆ. ಆತ್ಮಧರ್ಮವೇ ಮಾನವಧರ್ಮ, ಮನುಧರ್ಮ; ಆತ್ಮವು ವಿಶ್ವವ್ಯಾಪಕ, ಬ್ರಹ್ಮ – ಅಗಲದ ಕಲ್ಪನೆಯನ್ನೂ ಮೀರಿ ನಿಂತ ಅಗಲ! ಅಲ್ಪದಲ್ಲಿ ಆನಂದವಿಲ್ಲ, ಅನಂತದಲ್ಲೇ ಆನಂದ; ಅನಿತ್ಯವಾದವೆಲ್ಲವೂ ಅಲ್ಪ, ನಿತ್ಯವಾದುದೊಂದೇ ಅನಲ್ಪ. ಆದುದರಿಂದ ಮನುಷ್ಯನು ತನ್ನಲ್ಲಿ ಸುಪ್ತವಾಗಿರುವ 'ಮನು'

---

೨೫. 'The main concern of Indians swayed by these systems of thought was to discover how by tapas, or the technique of asceticism they might achieve such a control of the body as to render the spirit free from its interference. This technique became known as yoga'.

- Ditto

ವನ್ನು ಪ್ರಕಾಶಪಡಿಸಿಕೊಳ್ಳಲು ಮಾನವಧರ್ಮವನ್ನು ಅನುಸರಿಸಬೇಕು–ಎಂಬುದು ಮನುಸ್ಮೃತಿಯ ಕೂಲಂಕಷ ಅವಲೋಕನದಿಂದ ಧ್ವನಿತವಾಗುತ್ತದೆ. 'ಎಲ್ಲವೂ ನಾನೇ' ಎಂಬ ವ್ಯಕ್ತಿ ಅಹಿಂಸೆಯನ್ನಲ್ಲದೆ ಮತ್ತಾವುದನ್ನು ಆಚಾರದಲ್ಲಿ ಇಟ್ಟುಕೊಳ್ಳಬಲ್ಲ? ಸಾಮಾನ್ಯ (ಸಾಧಾರಣ, ಶಾಶ್ವತ) ಧರ್ಮದ ಉಪೋದ್ಘಾತಕ್ಕೆ ಮನುತ್ವದ ಸಾಕ್ಷಾತ್ಕಾರವೇ ಉಪಸಂಹಾರ.

ಇನ್ನು ಯಾವುದು ಅಹಿಂಸೆ, ಯಾವುದು ಹಿಂಸೆ? ಎಂಬುದನ್ನು ತಿಳಿಯಲು ಪ್ರತಿಯೊಂದು ವ್ಯಕ್ತಿಗೂ ಸಹಜ ಶಕ್ತಿಯಿದೆ. "ಮಾಡಿದ ಪಾಪಕ್ಕೆ ಮನವೇ ಸಾಕ್ಷಿ; ತೋಡಿದ ಬಾವಿಗೆ ಜಲವೇ ಸಾಕ್ಷಿ" ಎಂಬ ಗಾದೆ ಅದರಿಂದಲೇ ಹುಟ್ಟಿದೆ. ಇಂದಿನ ಕಾಯದೆ ಕೂಡ ಕಾರ್ಯವೊಂದರ ಉದ್ದೇಶ (ಇರಾದೆ) ಎಂತಿತ್ತೆಂಬುದನ್ನು ಶೋಧಿಸಿಯೇ ನ್ಯಾಯಾನ್ಯಾಯವನ್ನು ನಿರ್ಣಯಿಸುತ್ತದೆ. ಅಹಿಂಸೆಯೇ ಸತ್ಯವಾದುದರಿಂದ ಅದು ತನಗೆ ತಾನೇ ಪ್ರಮಾಣ; ಅದನ್ನರಿಯಲು ಅನ್ಯಪ್ರಮಾಣ ಬೇಕಾಗಿಲ್ಲ. "ಮನಸೈವ ಕೃತಂ ಪಾಪಂ ನ ಶರೀರಕೃತಂ ಕೃತಂ – ಮನಸ್ಸಿನಲ್ಲಿ ಮಾಡಿದ್ದೇ ನಿಜವಾದ ಪಾಪವೆನಿಸುತ್ತದಲ್ಲದೆ, ಕೇವಲ (ವಶತಪ್ಪಿ, ಮನಃಪ್ರೇರಣೆಯಿಲ್ಲದೆ, ಮರೆತು) ಶರೀರವು ಪಾಪಕರವೆಂದು ತೋರಬಹುದಾದ ಕಾರ್ಯವನ್ನು ಮಾಡಿದರದು ಪಾಪವಲ್ಲ" ಎನ್ನುವ ಸೂತ್ರವಾದರೂ ಉಕ್ತ ಆತ್ಮಸಾಕ್ಷಿಯ ಪ್ರಮಾಣವನ್ನೇ ಎತ್ತಿಹಿಡಿಯುತ್ತದೆ.

'ಹರನೆಂಬುದೇ ಸತ್ಯ, ಸತ್ಯವೆಂಬುದೆ ಹರನು' ಎಂದು ರಾಘವಾಂಕ ಸಾರಿದರೆ – ಅಹಿಂಸೆಯೇ ಸತ್ಯ, ಸತ್ಯವೇ ಅಹಿಂಸೆ; ಅಹಿಂಸೆಯೇ (ಬಾಳು) ಅಸ್ತಿತ್ವ, ಅಸ್ತಿತ್ವವೇ ಅಹಿಂಸೆ ಎಂದು ಮನುವು ಧರ್ಮರಹಸ್ಯವನ್ನು ಧ್ವನಿಸಿದ್ದಾನೆ– ಎಂಬುದಾಗಿ ಬಗೆಯಬಹುದು. ಆದರೆ ಮನುವು ಜೈನ ಯತಿಗಳು (ಮಾತಾಡುವಾಗ ಗಾಳಿಯಲ್ಲಿರುವ ಅಣುಗಳಿಗೆ ಹಿಂಸೆಯಾದೀತೆಂದು ಬಾಯಿಗೆ ಬಟ್ಟೆ ಕಟ್ಟಿಕೊಳ್ಳುತ್ತಾರೆಂದು ಪ್ರತೀತಿ) ಆಚರಿಸುತ್ತೇವೆಂಬ ಅಸಾಧ್ಯವೂ ಅವ್ಯವಹಾರ್ಯವೂ ಆದ ಭೌತಿಕ ಅಹಿಂಸಾಚಾರವನ್ನು ಪ್ರತಿಪಾದಿಸಿಲ್ಲ. ಶಿಕ್ಷೆಯೆಂದೂ ಹೇಗೆ ಅಪರಾಧವೆನಿಸದೋ ಶಿಕ್ಷಣವೇ ಎನಿಸಬೇಕೋ ಹಾಗೇ ಸ್ಥೂಲವಾಗಿ ಹಿಂಸೆಯೆಂದು ತರ್ಕಿಸಬಹುದಾದ ಕಾರ್ಯಗಳ ಉದ್ದೇಶವು ಅಹಿಂಸೆಯೇ ಆದರೆ, ಅಂಥ ಕಾರ್ಯಗಳೆಂದೂ ಹಿಂಸಾತ್ಮಕವೆಂದು ಮನು ಹೇಳಲಾರ. ಮನುವಿನ 'ಅಹಿಂಸೆ' ನ್ಯಾಯಾನ್ಯಾಯ (Justice and Injustice) ವಿವೇಕಕ್ಕೆ ಬದ್ಧವಾದದ್ದು; ದೇಶ–ಕಾಲ–ಸಂದರ್ಭಗಳ ವ್ಯಾಖ್ಯೆಗೆ ಒಳಪಟ್ಟದ್ದು. ಅಹಿಂಸೆಯ ಈ ವ್ಯಾವಹಾರಿಕ ಮುಖವನ್ನೂ ಅವನು ಗಣನೆಗೆ ತೆಗೆದುಕೊಂಡುದರಿಂದಲೇ ತನ್ನ ಹೃದಯವು ಆದರ್ಶದೆತ್ತರಕ್ಕೇ ಹಾರುತ್ತಿದ್ದಾಗಲೂ ಸ್ವಕಾಲೀನ ಸಾಮಾಜಿಕ–ಧಾರ್ಮಿಕ ರೂಢಿ–ಪರಂಪರೆಗಳಿಗೆ ಅವನು ಸ್ಥಾನಕೊಡಲು ಶಕ್ತನಾದನು. ಇದೇ ದೃಷ್ಟಿಯಿಂದಲೇ ಇಂದಿನ ಭಾರತವು ಸೈನ್ಯ ಬಲವನ್ನಿಟ್ಟುಕೊಂಡೇ ತಾನು ವಿದೇಶಗಳೊಡನೆ ಅಹಿಂಸೆ ಆಚರಿಸುತ್ತಿದ್ದೇನೆ – ಎಂದು ಪ್ರಾಮಾಣಿಕವಾಗಿ ಹೇಳಲು ಶಕ್ತವಾಗಿದೆ.

"ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ"

⌘ ⌘ ⌘

# ಟಿಪ್ಪಣಿ

ಈ ಲೇಖಕನ "ಜ್ಞಾನಸೂತ್ರ" ಎಂಬ ಇತ್ತೀಚಿನ ಗ್ರಂಥಕ್ಕೆ ಬರೆದುಕೊಟ್ಟ ಹರಕೆಯಲ್ಲಿ ಪೂಜ್ಯ ಡಾ.ದ.ರಾ.ಬೇಂದ್ರೆ ಅವರು ಭಾರತೀಯ ನಾಗರಿಕತೆ ನಂಬಿದ ಚತುರ್ವಿಧ ಪುರುಷಾರ್ಥಗಳ ಜೊತೆಗೆ ಪಂಚಮ ಪುರುಷಾರ್ಥವೊಂದನ್ನು ಕಲ್ಪಿಸಿಕೊಳ್ಳಬೇಕಾದ ಅಗತ್ಯವನ್ನು ಸೂಚಿಸಿದ್ದಾರೆ. ಮನುವಿನ ಕಾಲದಿಂದ ಇಂದಿನವರೆಗೆ ಮುಕ್ತಿಯು ಪರಮ ಪುರುಷಾರ್ಥವೆಂದು ಭಾರತ ನಂಬಿಕೊಂಡು ಬಂದರೂ ಜೀವನ್ಮುಕ್ತ ಸ್ಥಿತಿಯ ಲಕ್ಷಣವು ವಿವಿಧ ವಿಕಲ್ಪಗಳಿಗೆಡೆ ಕೊಟ್ಟು, ಸಾಕಷ್ಟು ನಿಷ್ಕೃಷ್ಟವೆಂದು ಕೆಲ ಲೌಕಿಕ ವಿದ್ವಾಂಸರಿಗೆನ್ನಿಸದಿರುವುದು ಬಹುಶಃ ಉಕ್ತ ಸೂಚನೆಗೆ ಪ್ರೇರಣೆ ಕೊಟ್ಟಿರಬಹುದು. ದಿವಂಗತ ರವೀಂದ್ರನಾಥ ಠಾಕೂರರು ತಮ್ಮ ತತ್ವವ್ಯಾಖ್ಯೆಯಲ್ಲಿ ವ್ಯಕ್ತಿತ್ವದ ಆಧ್ಯಾತ್ಮಿಕವಾದ ಲೋಕಸೇವೆಯ ಆದರ್ಶವನ್ನು ವರ್ಣಿಸಿದ್ದಾರೆ. ಹಾಗೇ "ಜ್ಞಾನಸೂತ್ರ"ದಲ್ಲಿ ಪ್ರಸ್ತುತ ಕಿಬ್ಬೊತ್ತಗೆಯಲ್ಲಿರುವ ನಿಗಮನವನ್ನು ಸಮರ್ಥಿಸುವಂತೆ ಲೋಕ ಸಂಗ್ರಹ, ಲೋಕೋಪಕಾರ ಅಥವಾ ತತ್‌ಪ್ರೇರಣೆ ಎಂಬುದು ಜೀವನ್ಮುಕ್ತನಾದ ಮಹಾತ್ಮನ ಜೀವನಧರ್ಮಯೋಗವೆಂದು ಕೊಡಲಾಗಿದೆ. ಮಹಾಭಾರತೋಕ್ತ ತುಲಾಧಾರ ಅಂಥ ಯೋಗಿ.

ಭಗವದ್ಗೀತೆಯ ಕೃಷ್ಣನು "ವೇದಾಂತಕೃದ್ ವೇದವಿದೇವಚಾಹಂ" ಎಂದಿರುವುದರಿಂದ ಕೃಷ್ಣನ ಜೀವನ ಧರ್ಮವೂ ಬಾದರಾಯಣ ಕೃಷ್ಣದ್ವೈಪಾಯನ ವ್ಯಾಸನ ಜೀವನ ಧರ್ಮವೂ (ಕಾಲಿದಾಸ ಹೇಳಿದ ಮನೂಕ್ತ" ಸಂಪ್ರದಾಯದ ಅನುಯಾಯಿಯಾದ ದಿಲೀಪನ ಜೀವನ ಧರ್ಮವೂ) ಒಂದೇ ಆಗಿದೆ. ಮಾನವತೆಯ ಮೂಲಾರ್ಥವು "ಮನು" ಎಂದು ವಿವರಿಸುವಾಗ ಇಲ್ಲಿ ಪಂಚಮ ಪುರುಷಾರ್ಥದ ಕಲ್ಪನೆಯ ಅಗತ್ಯವನ್ನು ನಿವಾರಿಸಿ ಅಧಿಯಜ್ಞ, ಆಧಿಭೂತ, ಅಧಿದೈವ, ಜ್ಞಾನಿತ್ವಗಳೆಂಬ ಕಲ್ಪನೆಗಳೆಲ್ಲವನ್ನೂ ಏಕಾಪೋಶನ ಮಾಡುವ "ಆತ್ಮಾಚಬ್ರಹ್ಮ"ದ ಅರ್ಥವನ್ನು ಮನುಸಂಮತವಾಗಿ ಹೇಳಲಾಗಿದೆ. ಸಚ್ಚಿದಾನಂದ ಪುರುಷೋತ್ತಮತ್ವಗಳು ಮನು ಸಂಪ್ರದಾಯಕ್ಕೆ ಸಮಕಾಲೀನವಾಗಿದ್ದ ಔಪನಿಷದಿಕ ಅನುಭಾವೋದ್ಗಾರಗಳು. ಅವು ಬ್ರಾಹ್ಮೀಸ್ಥಿತಿ, ಸ್ಥಿತಪ್ರಜ್ಞತೆ ಮತ್ತು ಅಸಂಪ್ರಜ್ಞಾತ ಸಮಾಧಿಸ್ಥಿತಿ ಎಂಬ ಪದಗಳಿಂದ ನಿರ್ದಿಷ್ಟವಾದ ಜೀವನ್ಮುಕ್ತ ಸ್ಥಿತಿಯಿಂದ ಭಿನ್ನವಲ್ಲ. ಆ ಸ್ಥಿತಿಯ ವ್ಯಾಪ್ತಿಯಲ್ಲಿ ಅಡಕವಾಗುವಂತೆ ಜಾಗತಿಕ ಮಾನವಾವಸ್ಥೆಗಳ ಷಷ್ಟಿತಂತ್ರ, ಸಪ್ತತಿ ತಂತ್ರ, ಅಶೀತಿತಂತ್ರ ಅಥವಾ ಶತತಂತ್ರಗಳ ಸಂಖ್ಯಾ ಸೂತ್ರಗಳನ್ನು ಹೇಳಿದರೂ ಉಕ್ತ ಸ್ಥಿತಿಯು ಸರ್ವಗ್ರಹವಾದ ಚೈತನ್ಯದ ಸತ್ತಾ ಸಾಮಾನ್ಯ ಸ್ವರೂಪವನ್ನು ಕಳೆದುಕೊಳ್ಳದೆಂಬುದು ಮನುವಿನ ಆಧ್ಯಾತ್ಮವಿದೋಪದೇಶ. ಸಂಖ್ಯೆಯ ಗುಣತ್ವವನ್ನು ದ್ರವ್ಯತ್ವಕ್ಕೆ ಮಾರ್ಪಡಿಸುವುದು

ಕಲ್ಪನಾ ಕರ್ಕಶ. ತತ್ವಗಳು ಭಾವಗಳಲ್ಲದೆ ಸಂಖ್ಯೆಗಳಲ್ಲೆಂಬುದು ಸ್ಪಷ್ಟ. ಆದುದರಿಂದ "ಭೂತವಸ್ತು"ವಿನ ಏಕತೆಯ ಭಾವವು ಮನು, ಆತ್ಮ ಅಥವಾ ತತ್ವಸಾರ–ಎಂಬುದೂ Education to Personality–ವ್ಯಕ್ತಿತ್ವದ ಪೂರ್ಣತೆಯ ಸಿದ್ಧಿಗೆ ವಿದ್ಯೆಯು ಸಾಧನ" ಎಂಬ ನೀತಿಯಲ್ಲಡಗಿದ ಹಾಗೂ ಮಾನವನ ಪರಮಾತ್ಮವಾದ ಪರಮಾರ್ಥವನ್ನು ಚರಮ ಮೌಲ್ಯವನ್ನಾಗಿ ಗ್ರಹಿಸುವುದಗತ್ಯ ಎಂಬುದು ಮನುಕೃತ ಧರ್ಮಶಾಸ್ತ್ರವನ್ನು ಓದಿದವರ ಮನದಲ್ಲಿ ನಿಲ್ಲುವ ಸರ್ವಾತ್ಮಕತೆಯ ಸ್ಮೃತಿ. "ಪುರುಷ ಏವೇದಂ ಸರ್ವಂ" ಎಂಬುದರ "ಅತ್ಯತಿಷ್ಠದ್ದಶಾಂಗುಲಂ" ಎಂಬ ವ್ಯಾಪ್ತಿಯು ಮನುವಿಗೆ ಅಪರಿಚಿತವೂ ಅಲ್ಲ, ಅಗ್ರಾಹ್ಯವೂ ಅಲ್ಲ. ನಿತ್ಯ ಸತ್ಯದ ಸಾಮಾಧಿಕ ಜ್ಞಾನವು ಅನಂತರವಾಗುವುದೇ ಆತ್ಮಜ್ಞಾನ, ಪೂರ್ಣ ಪುರುಷತ್ವ ಅಥವಾ ಈಶತ್ವ.

"Brahman is the impersonal pantheistic world-soul, the Absolute, union with which is the highest goal of the Upanishads and Vedic thinking in general. It is occasionally identified with Atman or made the exclusive reality thus laying the foundation for a deep mystic as well as rational insight into the con-naturalness of the human and divine and an uncompromising monism which gave its impress to much of Hindu thinking."

- *The Dictionary of Philosophy* P. 41.

–ಬಿ.ಎಚ್.ಶ್ರೀ.

# ಮುನ್ನುಡಿ

ಭಾರತ ದೇಶದಲ್ಲಿ ರಾಜ್ಯಶಾಸ್ತ್ರಕ್ಕೆ ಸಂಬಂಧಿಸಿದ ವಿಚಾರಗಳನ್ನು ಸ್ಪಷ್ಟಾಸ್ಪಷ್ಟ ರೂಪದಲ್ಲಿ ವೇದ–ಬ್ರಾಹ್ಮಣಾದಿ ಗ್ರಂಥಗಳಲ್ಲಿ ನಾವು ಮೊಟ್ಟಮೊದಲಿಗೆ ಕಾಣುತ್ತೇವೆ. ಮನುಸ್ಮೃತಿ ಮೊದಲಾದ ಧರ್ಮಶಾಸ್ತ್ರಗಳಲ್ಲಿ ರಾಜನೀತಿಯ ಬೀಜವು ಸ್ಪಷ್ಟ ಆಕೃತಿಯನ್ನು ಹೊಂದಿ ಸಸಿಯಾಗಿ ಬೆಳೆದು ಕೌಟಿಲ್ಯನ "ಅರ್ಥಶಾಸ್ತ್ರ" ಹಾಗೂ "ಶುಕ್ರನೀತಿಸಾರ." ಮೊದಲಾದ ಗ್ರಂಥಗಳಲ್ಲಿ ಪೂರ್ಣ ವಿಕಾಸವನ್ನು ಮುಟ್ಟಿ, ಸಫಲ ವೃಕ್ಷವಾಗಿ ನೆಲೆ ನಿಂತಿತು. ಅನಂತರ ಇತಿಹಾಸದ ಏರುಪೇರುಗಳಲ್ಲಿ ಹತ್ತಿ ಇಳಿದ ಭಾರತವು ಅಷ್ಟು ಜಗತ್ಪ್ರಸಿದ್ಧ ರಾಜ್ಯಧರ್ಮಶಾಸ್ತ್ರಗಳನ್ನು ನಿರ್ಮಿಸಲಿಲ್ಲ. ಆದರೆ ಬ್ರಿಟಿಷರ ಪೂರ್ವದಲ್ಲಿ ಆಡಳಿತ ನಡೆಸಿದ ಶಿವಾಜಿ ಮೊದಲಾದ ಅರಸರೂ ದಿಲ್ಲಿಯ ಬಾದಶಹರೂ ಮೈಸೂರಿನ ಅರಸರೂ ರಾಜ್ಯಾಡಳಿತ ಕ್ರಮದ ವಿವಿಧ ನೀತಿಗಳನ್ನೂ ಧೋರಣೆಗಳನ್ನೂ ವ್ಯವಹಾರಕ್ಕಿಳಿಸಿ ರಾಜ್ಯಧರ್ಮ, ಅರ್ಥಶಾಸ್ತ್ರ ಮತ್ತು ಧಾರ್ಮಿಕ–ನೈತಿಕ ನಿಯಮಗಳನ್ನು ರೂಪಿಸಿ, ಭಾರತೀಯ ಸಂಸ್ಕೃತಿಗೆ ಯಥೇಷ್ಟವಾಗಿ ಕಾಣಿಕೆಯನ್ನು ಸಲ್ಲಿಸಿದರು.

ಬ್ರಿಟಿಷರ ಆಡಳಿತದಲ್ಲಿಯ ಕಾಯಿದೆ–ಕಾನೂನುಗಳಲ್ಲಿ ಒಂದು ವಿಧದ ಪಾಶ್ಚಾತ್ಯ–ಪೌರಸ್ತ್ಯ ಸಮ್ಮಿಶ್ರಣವುಂಟಾಯಿತು. ಅವರದು ಭಾರತದಲ್ಲಿ ಸಾಮ್ರಾಜ್ಯ ನೀತಿಯಾಗಿದ್ದರೂ ಬ್ರಿಟನ್ನಿನಲ್ಲಿ ಪ್ರಜಾಪ್ರಭುತ್ವನೀತಿಯಾಗಿದ್ದುದರಿಂದ ಅವರಿಂದ ಈಗ ಹನ್ನೆರಡು ವರ್ಷಗಳ ಹಿಂದೆ ಸ್ವಾತಂತ್ರ್ಯವನ್ನು ಪಡೆದ ಭಾರತವು ಪ್ರಜಾಸತ್ತಾತ್ಮಕವಾದ ನೀತಿಯನ್ನೇ ಹಿಡಿದು ಸಾಗಲಾರಂಭಿಸಿದೆ. ನಾವಿಂದು ಭಾರತೀಯ ನಾಗರಿಕತೆಯ ಕೌಮಾರದಶೆಯಲ್ಲಿದ್ದೇವೆ. ಪ್ರಾಚೀನ ಕಾಲದಿಂದ ನಡೆದು ಬಂದ ರಾಜಕೀಯ, ಆರ್ಥಿಕ ಹಾಗೂ ನೈತಿಕ ವಿಚಾರ–ಪ್ರವಾಹಗಳನ್ನು ಇಂದು ಪಾಶ್ಚಾತ್ಯ ದಿಕ್ಕಿನಿಂದ ಹರಿದು ಬಂದ ಆ ವಿಷಯಗಳ ವಿಚಾರ–ಪ್ರವಾಹಗಳು ಕೂಡಿಕೊಳ್ಳುತ್ತಿವೆ. ಆ ಮೂಲಕವಾಗಿ ನಾವಿಂದು ನಮ್ಮ ನಾಗರಿಕತೆ ಹಾಗೂ ಸಂಸ್ಕೃತಿಗಳ ಹೊಸ ರೂಪಗಳನ್ನು ರೂಪಿಸಿಕೊಳ್ಳಬೇಕಾಗಿದೆ.

ಇಂತಹ ಸಂಧಿಕಾಲದಲ್ಲಿ ನಮ್ಮ ಪ್ರಜಾಕೋಟಿಯು ಯುರೋಪ್ ಅಮೇರಿಕಾಗಳಲ್ಲಿ ನಡೆದು ಬಂದ ರಾಜ್ಯ–ತಾತ್ವಿಕ ವಿಚಾರವಾಹಿನಿಯಲ್ಲಿ ಮುಳುಗಿ, ಮಿಂದು, ಆಳನೋಡಿ ಅರಿತುಕೊಳ್ಳುವುದು ಅತ್ಯವಶ್ಯಕವಾದ ಸಾಮಾಜಿಕ ಶಿಕ್ಷಣವಾಗಿದೆ. "ರಾಜಾ ಕಾಲಸ್ಯ ಕಾರಣಂ" ಎಂಬುದು ಹಿಂದಿಗಿಂತ ಇಂದು ಮಾನಸಶಾಸ್ತ್ರೀಯವಾಗಿ ಹೆಚ್ಚು ಅರ್ಥಪೂರ್ಣವಾಗಿದೆ. ನಮ್ಮ ರಾಜಕೀಯ ಜೀವನಕ್ಷೇತ್ರವು ಇಂದಿನ ದಿನಮಾನದಲ್ಲಿ ವಿಶಾಲತಮವಾಗಿದೆ. ವ್ಯಕ್ತಿಗಳ ದೈನಂದಿನ ವ್ಯವಹಾರಗಳೆಲ್ಲವೂ ಹಿಂದಿಗಿಂತ, ಇಂದು ಹೆಚ್ಚಾಗಿ ಪ್ರಕಟವಾದ ಲಿಖಿತ, ಕಾಯಿದೆ, ಕಾನೂನು, ನೀತಿ ನಿಯಮಾವಳಿಗಳಿಂದ ಬದ್ಧವಾಗಿದೆ. ವ್ಯಕ್ತಿಸ್ವಾತಂತ್ರ್ಯವನ್ನು ರಕ್ಷಿಸುವ ಹೊಣೆ ಹೊತ್ತ ನಮ್ಮ ಸಮಾಜವಾದಿ

ಸ್ವರೂಪದ ಸಮಾಜ ರಚನೆಯಲ್ಲಿ ವ್ಯಕ್ತಿಗಳ ವಿಚಾರಶಕ್ತಿಯನ್ನೂ ಯೋಜನಾಪರತೆಯನ್ನೂ ವ್ಯಾವಹಾಕಾರಿಕ ನಿರ್ಣಾಯಕತೆಯನ್ನೂ ಸಂವರ್ಧಿಸುವ ಕಾರ್ಯವು ಅತ್ಯಂತ ಹೆಚ್ಚಿನದೆನಿಸಿದೆ. ಪ್ರಜಾಪ್ರಭುತ್ವದ ಯಶಸ್ಸಿಗೆ ಹೆಚ್ಚು ಹೆಚ್ಚು ಮತದಾರರು ವಿವೇಕ ಸಂಪನ್ನರಾಗುವಂತಹ ಉತ್ತಮ ಸಮಾಜಶಿಕ್ಷಣವು ಪ್ರಥಮ ಅವಶ್ಯಕತೆ. ಕೇವಲ ಅಕ್ಷರಜ್ಞರೂ, ಶುಷ್ಕಪಂಡಿತರೂ ಹೃದ್ಬುದ್ಧಿಯೋಗವನ್ನು ಸಾಧಿಸಿಕೊಳ್ಳದ ಹಾಗೂ ಸಮಷ್ಟಿದರ್ಶನವಿಲ್ಲದ ತಜ್ಞರೂ ರಾಷ್ಟ್ರೀಯ ಸಮಾಜದ ಹಿತಚಿಂತಕರಾಗಿ ಕೆಲಸ ಮಾಡಲಾರರು. ಮಾನ್ಯ ಸ್ಥಾನದಲ್ಲಿರುವವರಿಗೂ, ಸಾಮಾನ್ಯ ಸ್ಥಾನದಲ್ಲಿರುವವರಿಗೂ ಭಾರತೀಯ ಪ್ರಜಾಸತ್ತಾತ್ಮಕ ಜೀವನದ ಆದರ್ಶವನ್ನು ಕಲ್ಪಿಸಿಕೊಳ್ಳಲು ತಕ್ಕ ಸಮಾಜಶಿಕ್ಷಣ ಸಾಮಗ್ರಿಗಳನ್ನು ನಾವಿಂದು ಒದಗಿಸಿಕೊಡಬೇಕಾಗಿದೆ. ಈ ಕೆಲಸವನ್ನು ಹೊಣೆಗಾರರಾದ ಪತ್ರಿಕಾಸಂಪಾದಕರೂ, ಶಾಸನಸಭಾಸದಸ್ಯರೂ ವಿದ್ವಾಂಸರಾದ ಲೇಖಕರೂ ಮಾಡಿಕೊಡಬೇಕಾದದ್ದು ಅತ್ಯಂತ ಸ್ವಾಭಾವಿಕ.

"ವಿದೇಶದ ತಿಳಿವಳಿಕೆಗಳು" ಎಂಬ ಪ್ರಸ್ತುತ ಗ್ರಂಥವು ಮೊದಲು ಶ್ರೀ॥ ವಿ.ಎಮ್. ಮಿರ್ಜಾನಕರರ "ಕರ್ನಾಟಕ ಧುರೀಣ"ದಲ್ಲಿ ಖಂಡಶಃ ಪ್ರಕಟವಾಗಿ ಅನಂತರ ಪುಸ್ತಕರೂಪದಲ್ಲಿ ಪ್ರಸಿದ್ಧವಾಗುತ್ತಿದೆ. ಅದರ ಗ್ರಂಥಕರ್ತರು ಶ್ರೇಷ್ಠ ಕವಿಗಳೂ ಜನಪ್ರಿಯ ವಾಗ್ಮಿಗಳೂ ವಿಚಾರವನ್ನು ಕೆಣಕಿ ಸಮಾಧಾನ ಪಡಿಸಬಲ್ಲ ಪ್ರಬಂಧಕಾರರೂ ಆಗಿ ಆಗಲೇ ಮೈಸೂರು ರಾಜ್ಯದ ಎಲ್ಲೆಡೆಯ ಕನ್ನಡಿಗರಿಗೂ ಸುಪರಿಚಿತರಾದವರು. ಗ್ರಂಥದಲ್ಲಿ ಪ್ಲೇಟೋವಿನಿಂದ ಹಿಡಿದು ರಸೆಲ್ ಡ್ಯೂಯಿಗಳವರೆಗಿನ ಖ್ಯಾತನಾಮ ತತ್ವಜ್ಞಾನಿಗಳ ರಾಜಕೀಯ, ಆರ್ಥಿಕ ಹಾಗೂ ನೈತಿಕ ಸುಧಾರಣಾಪರ ವಿಚಾರಗಳನ್ನು ಸಂಕ್ಷೇಪತಃ ಕಾಣಬಹುದು. ಭಾಷೆಯ ಸರಳತೆಯೂ ವಾಕ್ಯಗತಿಯ ನೇರವಾದ ಓಟವೂ ವಿಚಾರಗಳ ಧಾರಾವಾಹಿತ್ವವೂ ಗ್ರಂಥದಲ್ಲಿ ಎದ್ದು ಕಾಣುವ ಗುಣಗಳು. ಮೈಸೂರು ಅಭಿನವ ವಿಜಯನಗರ ಕರ್ನಾಟಕವಾಗಿ ರೂಪುಗೊಳ್ಳುತ್ತಿರುವ ಕನ್ನಡಿಗರ ಈ ವರ್ಧಮಾನ ದಶೆಯಲ್ಲಿ ಪ್ರಸ್ತುತ ಬರೆಹವು ಪ್ರಜಾಕೋಟಿಯ ವಿಚಾರಪಿಪಾಸೆಯನ್ನು ನಿವಾರಿಸುವುದರಲ್ಲಿ ಮೊದಲ ಹೆಜ್ಜೆಯನ್ನಿಟ್ಟ ಪ್ರಯತ್ನಗಳಲ್ಲಿ ಒಂದಾಗಿ ನಿಂತಿರುವುದು ಅಭಿನಂದನೀಯ.

"ಏಳ್ ಕನ್ನಡ ತಾಯ್, ಬಾಳ್ ಕನ್ನಡ ತಾಯ್, ಆಳ್ ಕನ್ನಡ ತಾಯ್" ಎಂದು ಪ್ರಾರ್ಥಿಸಿದ ದಿವಂಗತ ಬಿ.ಎಮ್. ಶ್ರೀಕಂಠಯ್ಯನವರ ಆಶೆಯು ಫಲಿಸಬೇಕಾದರೆ ಪ್ರಸ್ತುತ ಗ್ರಂಥದಂತಹ ನೂರಾರು ಗ್ರಂಥಗಳು ಕನ್ನಡ ನಾಡಿನಲ್ಲಿ ಉದಯಿಸಿ ಆಬಾಲವೃದ್ಧ ಸ್ತ್ರೀ–ಪುರುಷರ ಕೈಪಿಡಿಗಳಾಗಬೇಕು. ಸತ್ಪ್ರಜಾಜೀವನದ ಆದರ್ಶ ನೀತಿಗಳನ್ನು ತಿಳಿದು ವಿವೇಚಿಸಿ, ನಿರ್ಣಯಿಸಿ, ಪ್ರತಿಯೊಂದು ವ್ಯಕ್ತಿಯೂ ಆಚರಣೆಯಲ್ಲಿ ತಂದುಕೊಳ್ಳಬೇಕು. ಇಂತಹ ಸದುದ್ದೇಶವುಳ್ಳ ಪ್ರಸ್ತುತ ಲೇಖಕರಾದ ಶ್ರೀ॥ ಬಿ.ಎಚ್. ಶ್ರೀಧರರ ಲೇಖನ ಪ್ರಯತ್ನವನ್ನೂ ಪ್ರಕಾಶಕರಾದ ಕುಮಟೆಯ ಶ್ರೀ ರಾಮಕೃಷ್ಣ ಮುದ್ರಣಾಲಯದವರನ್ನೂ ನಾನು ಹಾರ್ದಿಕವಾಗಿ ಅಭಿನಂದಿಸುತ್ತೇನೆ.

ಸ್ಥಳ: ಬೆಂಗಳೂರು ಹಸ್ತಾಕ್ಷರ: B.D. Jatti.

ದಿನಾಂಕ: ೧೯–೯–೫೯ ಅಧಿಕಾರ: ಮುಖ್ಯಮಂತ್ರಿ

# ಬಿನ್ನಹ

ಮಾನವನ ದಾರಿದ್ರ್ಯ ಮತ್ತು ದುಃಖಗಳನ್ನು ಕಂಡು ಹಿಡಿದ ಹೆಮ್ಮೆ ತತ್ವಜ್ಞಾನಕ್ಕಿದೆಯಂತೆ. ಅದು ಏಕಾಂತಪ್ರಿಯತೆಯನ್ನು ಬೆಳೆಸುವುದೆನ್ನುವರು. ಅದರಲ್ಲಿರುವುದು ಕೇವಲ ವಸ್ತುಸತ್ಯ, ಸರಳವ್ಯವಹಾರ. ಒಳಬಾಳಿಗದು ಪೌಷ್ಟಿಕ. ವಿವೇಕಪ್ರಿಯತೆಯೇ ಅದರ ಜೀವಾಳ; ಅಥವಾ ಯುಕ್ತಾಯುಕ್ತ ವಿವೇಕವೇ ತತ್ವಜ್ಞಾನ ಎಂದರೂ ಸರಿಯೆ.

"ಆತ್ಮನೇತ್ರಸಂಪನ್ನವಾದ ತರ್ಕಶಕ್ತಿ" ಎಂದು ತತ್ವಜ್ಞಾನವನ್ನು ಹೊಗಳಿದ್ದುಂಟು. ವ್ಯಾವಹಾರಿಕ ಔಚಿತ್ಯ ಕೂಡಿದ ತರ್ಕಾನ್ವಯವು ಅದರ ಕೆಲಸ. ತತ್ವಜ್ಞಾನವೇ ಜೀವನದ ಕಲೆ, ಕಾಯದೆ. ಅದಿಲ್ಲದಲ್ಲಿ ಬದುಕುವ ಕಲೆಯಿಲ್ಲ. ಅದೊಂದು ಕಲ್ಪವೃಕ್ಷ, ಕಾಮಧೇನು. ತತ್ವಜ್ಞವಲ್ಲದ ಮನಸ್ಸು ಆರೋಗ್ಯವಿದ್ದ ಮನಸ್ಸಲ್ಲ. ಧರ್ಮಬುದ್ಧಿಗೆ ಪೂರಕವಾಗಿ ನಿಲ್ಲಬಲ್ಲುದೇ ತತ್ವ. ಕಲಾಸಾಮ್ರಾಜನೆನಿಸಿದ ತತ್ವಜ್ಞನ ಒಂದು ಪ್ರತಿಭಾಪ್ರಕಾಶ, ಆನ್ವೀಕ್ಷಿಕಿ, ಶಾಸ್ತ್ರದ ಶಾಸ್ತ್ರ!

ಮನುಷ್ಯನ ತರ್ಕಶಕ್ತಿಯ ಅವಶ್ಯಕ ಗುರಿಗಳಿಗೆ ಸಂಬಂಧಿಸಿದ ಎಲ್ಲ ಜ್ಞಾನಗಳ ವಿಜ್ಞಾನಪಟ್ಟ ತತ್ವಶಾಸ್ತ್ರಕ್ಕೆ ಮೀಸಲು, ಮನುಷ್ಯನ ಶಕ್ಯಾಶಕ್ಯತೆಗಳ ಅಳತೆಯನ್ನು ತತ್ವಶಾಸ್ತ್ರವೊಂದೇ ಮಾಡಬಲ್ಲುದು. ಅದು ಸತ್ಯಜ್ಞಾನದ ಆಗರ; ಸುಖದುಃಖ ಸಮದರ್ಶನವನ್ನು ಕೊಡುವ ಸಂಜೀವನಿ. ಪ್ರತಿಭಾವಂತರ ಚಾರಿತ್ರಮೂಲ ಅದರಲ್ಲಿದೆ! ಅದೊಂದು ಸರ್ವವಿದ್ಯಾಪ್ರದೀಪ!

ತತ್ವಜ್ಞಾನದಿಂದಲೇ ಮೋಕ್ಷ. ಮೋಕ್ಷವು ಅಖಂಡ ಸ್ವಾತಂತ್ರ್ಯ, ಅಪರಿಮಿತ ಆತ್ಮಪ್ರಕಾಶ. ರಾಜಕೀಯ ಸ್ವಾತಂತ್ರ್ಯವು ಐಹಿಕ ಮುಕ್ತಿ; ಭಾವನಾಸ್ವಾತಂತ್ರ್ಯವು ಇಹ–ಪರ ಮುಕ್ತಿ. ಆದುದರಿಂದ ಸ್ವಾತಂತ್ರ್ಯ ಅಥವಾ ಮುಕ್ತಿ ಅಮೂಲ್ಯವಾದ ಶಾಶ್ವತ ಮೌಲ್ಯ. ಅದು ಸಕಲ ಧ್ಯೇಯನದಿಗಳು ಸಮರಸವಾಗುವ ಮಹಾಸಾಗರ. ಪ್ರಜ್ಞೆಯ ಎಲ್ಲ ಸ್ಥಲಗಳಲ್ಲೂ ಬೇರೆ ಬೇರೆ ಬಣ್ಣಗಳಲ್ಲಿ ಸಾರತಃ ಸತತವಾಗಿರುವ ಈ 'ಭಾವನೆ' ಎಲ್ಲ ಧ್ಯೇಯ ಬೀಜಗಳ ಕ್ಷೇತ್ರ. ಅದರ ಬಂಧನ ಆತ್ಮವಿಕಾಸಕ್ಕೆ ಕಂಟಕ.

ನಾವಿಂದು ಸ್ವತಂತ್ರ ಭಾರತದಲ್ಲಿದ್ದೇವೆ. ಐಹಿಕ–ಲೌಕಿಕ ಸ್ವಾತಂತ್ರ್ಯ, ರಾಜಕೀಯ–ಸಾಮಾಜಿಕ–ಆರ್ಥಿಕ–ಧಾರ್ಮಿಕ ಸ್ವಾತಂತ್ರ್ಯ ಎಂಬುದು ಪಾಶ್ಚಾತ್ಯ ನಾಗರಿಕತೆಯ ಸಂಪರ್ಕದಿಂದ ಇಂದು ಸ್ಪಷ್ಟತರವಾಗಿದೆ.

ಹಿಂದೆ ಭಾರತದಲ್ಲಿ ರಾಜಪ್ರಭುತ್ವವೇ ಗಣ್ಯವಾಗಿತ್ತು. ವರ್ಣಾಶ್ರಮ ಧರ್ಮದಲ್ಲಿ ಪ್ರಜೆಗಳು ನಿರತರಾಗಿರುವಂತೆ ನೋಡಿಕೊಳ್ಳುವುದು ರಾಜನ ಕರ್ತವ್ಯವೂ ಪ್ರಭುತ್ವಾಧಿಕಾರವೂ ಆಗಿತ್ತು. ಸಾರ್ವಜನಿಕ ಯೋಗಕ್ಷೇಮದ ಚಿಂತೆ ಸಂಪೂರ್ಣವಾಗಿ ರಾಜನ ಹಾಗೂ

ಅವನ ಅಧಿಕಾರಿಗಳ ಮತ್ತು ಅವನಿಂದ ಗೌರವಿಸಲ್ಪಟ್ಟ ನಾಯಕರ ಪಾಲಿಗೆ ಸೇರಿದ್ದಾಗಿತ್ತು. ಅನಂತರ ದುಡ್ಡಿದ್ದವರೆನಿಸಿದ ರಾಜೋಪರಾಜರೂ ಜಮೀನುದಾರ– ಮುಖಂಡರೂ ಸಾರ್ವನೀತಿಯ ವಿಧಾಯಕರಾದರು, ವಿನಾಯಕರಾದರು. ಮೊನ್ನೆ ಮೊನ್ನಿನವರೆಗಿದ್ದ ಬ್ರಿಟಿಶ್ ಆಡಳಿತವಾದರೂ ಪ್ರಜಾಸಮಷ್ಟಿಯ ಹಿತಚಿಂತನವೆಲ್ಲವನ್ನೂ ತನ್ನ ಅಧೀನದಲ್ಲಿ ಇಟ್ಟುಕೊಂಡಿತ್ತು. ಆದರೆ ೧೯೪೭ರಲ್ಲಿ ಸ್ಥಿತ್ಯಂತರ ಸಂಭವಿಸಿತು; ರಾಜಾಧಿಕಾರವಳಿದು ಪ್ರಜಾಧಿಕಾರ ಪ್ರಾಪ್ತವಾಯ್ತು. ಈ ಪ್ರಜಾರಾಜರು ಪ್ರಜಾಪ್ರತಿನಿಧಿಗಳು; ಐದು ವರ್ಷಗಳಿಗೊಮ್ಮೆ ಅವರ ಆಡಳಿತಾಧಿಕಾರ ಹಸ್ತಾಂತರ ಹೊಂದುವ ನಿರ್ವಾಚನ ಅಥವಾ ಚುನಾವಣೆ ಪ್ರಜಾರಾಜ್ಯಧರ್ಮವೆನಿಸಿದೆ.

ಎಂದಿನಿಂದಲೂ ಒಂದು ರಾಜ್ಯವಾಸಿಗಳ ಅಥವಾ ರಾಷ್ಟ್ರವಾಸಿಗಳ ಇಡೀ ಜೀವನದ ಸಾಮುದಾಯಿಕ ನೀತಿ, ದೃಷ್ಟಿ, ಮನಃಪ್ರಣಾಳಿ, ಧ್ಯೇಯ. ಧೋರಣ, ಅಭಿರುಚಿ, ಅಭಿಪ್ರಾಯ, ಮೌಲ್ಯಪ್ರಾಧಾನ್ಯಗಳು ಶಾಸಕರು ಪರೋಕ್ಷಾಪರೋಕ್ಷ ರೀತಿಗಳಿಂದ ವಿಧಿಸುವ ಕಟ್ಟು– ಕಾಯದೆ, ಆಚಾರ–ಪ್ರಚಾರಗಳಿಂದ ನಿಯಂತ್ರಿಸಲ್ಪಡುವುದು ಸ್ವಾಭಾವಿಕ. ಮನುಷ್ಯರ ಮನಸ್ಸು ಸಾಮಾನ್ಯವಾಗಿ ಆವರಣಾಧೀನ. ಅವರಿರುವ ರಾಜಕೀಯ ಪ್ರಜ್ಞಾವರಣವು ಅವರ ಮಿಕ್ಕ ಪ್ರಜ್ಞಾವರಣಗಳನ್ನು ಆವರಿಸಿ ನಿಯಂತ್ರಿಸುತ್ತದೆ. 'ರಾಜಾ ಕಾಲಸ್ಯ ಕಾರಣಂ' ಎಂಬುದಕ್ಕೆ ಆಳುವವರು ಆಳಲ್ಪಡುವವರ ನೇತ್ರಗಳು ಎಂಬುದು ಮಾನಸಶಾಸ್ತ್ರೀಯವಾದ ಅರ್ಥ. ನಾಗರಿಕರ ಸಾಮಾಜಿಕ, ಔದ್ಯಮಿಕ, ಔದ್ಯೋಗಿಕ, ನೈತಿಕ, ವೈಯಕ್ತಿಕ, ಧಾರ್ಮಿಕ, ಆರ್ಥಿಕ, ಕಾಮಿಕ ಸಿದ್ಧಿಗಳೂ ಸಾಧನಗಳೂ ಶಾಸನದತ್ತ ಅನುಕೂಲ–ಪ್ರತಿಕೂಲಗಳಿಗೆ ಒಳಗಾಗಿವೆ. ಶಿಕ್ಷಣ–ಕಲೆ–ವಿಜ್ಞಾನಗಳ ಮುಖ್ಯ ಚಟುವಟಿಕೆಗಳು ಕೂಡ ಸಾರ್ವಜನಿಕವಾಗಿ ಶಾಸನಬದ್ಧವಾದ ಕೆಲ ಮೂಲಭೂತ ಸಾಮಾನ್ಯ ನಿಯಮಗಳಿಗೆ ಒಳಪಟ್ಟೇ ಇಂದಿಗೂ ಸಾಗುತ್ತಿವೆ. ಆದುದರಿಂದ ರಾಜನೀತಿಯು ವ್ಯಾಪಕ, ಇತರ ನೀತಿಗಳು ವ್ಯಾಪ್ಯಗಳು. ಈ ಅರ್ಥವನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಗ್ರಂಥದಲ್ಲಿ ಯುರೋಪು–ಅಮೆರಿಕಗಳ ಪ್ರಾಚೀನ–ಮಧ್ಯಯುಗೀನ–ಅರ್ವಾಚೀನ ತತ್ವಜ್ಞಾನಿಗಳಲ್ಲಿ ಅಗ್ರಗಣ್ಯರು ರೂಪಿಸಿದ ತತ್ವಶಾಸ್ತ್ರಗಳಿಂದ ಹೆಚ್ಚಾಗಿ ರಾಜಕೀಯ, ಸಾಮಾಜಿಕ ಮತ್ತು ನೈತಿಕ ಅಂಶಗಳಷ್ಟನ್ನೇ ಎತ್ತಿಕೊಂಡು ಸಾರ್ವಜನಿಕರ ಅವಗಾಹನೆಗಾಗಿ ಬಹಳ ಸಂಕ್ಷೇಪವಾಗಿಯೂ ಸರಳವಾಗಿಯೂ ಕೊಡಲಾಗಿದೆ. ಈ ಸಂಕ್ಷೇಪಿಸುವ ಹಾಗೂ ಸರಳೀಕರಿಸುವ ಯತ್ನದಲ್ಲಿ ಅನಿವಾರ್ಯವಾಗಿಯೂ ಅಜ್ಞಾತವಾಗಿಯೂ ಉಳಿದಿರಬಹುದಾದ ಲೋಪ–ಆಗಮ–ಆದೇಶ ರೂಪದ ದೋಷಗಳು ವಿದ್ವಾಂಸರಿಂದ ಕ್ಷಮ್ಯವಾದಾವೆಂದು ನಮ್ರ ಹಾರೈಕೆ.

ವಿವರಪೂರ್ವಕವಾದ ಪ್ರಜಾಪ್ರಭುತ್ವ – ವಿಚಾರಗಳು ಯುರೋಪು–ಅಮೇರಿಕಗಳ ಗ್ರಂಥಗಳಲ್ಲಿ ಸಿಗುವಷ್ಟು ನಮ್ಮಲ್ಲಿ ಸಿಗಲಾರವು. ವೇದದ ಕಾಲದ ವೈರಾಜ್ಯವಾಗಲಿ, ಬೌದ್ಧಯುಗದ ಗಣರಾಜ್ಯವಾಗಲಿ ನಮಗೆ ಇಂದು ಕೇವಲ ಶಬ್ದರೂಪಗಳು, ಅತಿ ಸ್ಥೂಲ ಕಲ್ಪನೆಗಳು. ಹೀಗಿರುವುದರಿಂದ ಹೊಸ ಪ್ರಜಾಸತ್ತೆಯನ್ನಾರಂಭಿಸಿದ ಭಾರತೀಯರು ಪ್ರಜಾಪ್ರಭುತ್ವದ ರಾಜ–ಪ್ರಜಾಧರ್ಮಗಳ (ಶಾಸಕ–ಶಾಸ್ಯಧರ್ಮಗಳ) ಬೆಳವಣಿಗೆಯಲ್ಲಿ

ಸರಿಯಾದ ಭಾಗಿಗಳಾಗಲು ಯುರೋಪು–ಅಮೆರಿಕಗಳ ಪ್ರಭುತ್ವಗಳ ಐತಿಹಾಸಿಕ ಸ್ಥೂಲಚಿತ್ರಗಳನ್ನಾದರೂ ಅಭ್ಯಸಿಸುವುದು ಉಪಕಾರಿ. ಹಿಂದಿನ ಆದರ್ಶ ಭಾರತೀಯನೆಂದರೆ ಶ್ರೋತ್ರೀಯ, ಸಾಧು, ಪರೋಪಕಾರಿ, ಧರ್ಮನಿಷ್ಠ, ಪ್ರಭುವಿಧೇಯ. ಇಂದಿನ ಆದರ್ಶ ಭಾರತೀಯನು ಇಷ್ಟೆಲ್ಲಾ ಆಗಿದ್ದೂ ಸ್ವತಂತ್ರ ವಿಚಾರಶೀಲತೆಗೆ ಹೆಚ್ಚಿನ ಮಹತ್ವವನ್ನು ಕೊಡುವವನಾಗಿರುವುದು ಪ್ರಜಾಪ್ರಭುತ್ವದ ವೈಶಿಷ್ಟ್ಯ. ಇಂದು ರಾಜ್ಯಹಿತಾರ್ಥದ ಚಿಂತನ ಶಾಸಕರಿಗಷ್ಟೇ ಪರಿಸೀಮಿತವಲ್ಲ; ಅದು ಸರ್ವಪ್ರಜೆಗಳ ಕರ್ತವ್ಯವಾಗಿದೆ. ಆದುದರಿಂದ ಇಂದು ಪ್ರಜಾಧರ್ಮ ಹಿಂದಿನದಕ್ಕಿಂತ ಸ್ವಲ್ಪ ಭಿನ್ನವಾಗಿದೆ, ಅಧಿಕ ವ್ಯಾಪ್ತಿಯುಳ್ಳದ್ದಾಗಿದೆ. ಪುರುಷೋತ್ತಮರ ಆಳಿಕೆಯೇ ಎಲ್ಲ ಪ್ರಜೆಗಳ ಇಷ್ಟ. ಹೀಗಿರುವಾಗ ಪುರುಷೋತ್ತಮರು ಉದಯಿಸಲು, ರೂಪುಗೊಳ್ಳಲು, ಹಾಗೆ ರೂಪಿತರಾಗಿ ಪ್ರಜಾಪ್ರತಿನಿಧಿಗಳಾಗಲು ಅವಶ್ಯಕವಾದ ಸಾಮಾಜಿಕ–ಶೈಕ್ಷಣಿಕ–ನೈತಿಕ ವ್ಯವಹಾರಗಳನ್ನು ಮತ್ತು ಮೌಲ್ಯವಿವೇಕಗಳನ್ನು ವರ್ತನೆ–ವಿಚಾರಗಳಲ್ಲಿ ಅಳವಡಿಸಿಕೊಳ್ಳುವುದು ಅತ್ಯಂತ ಮಹತ್ವವುಳ್ಳ ಪ್ರಜಾಕರ್ತವ್ಯ. ಇಂಥ ಪ್ರಜಾಸಂಸ್ಕಾರವನ್ನು ಬೆಳೆಯಿಸುವ ನಮ್ಮ ರಾಷ್ಟ್ರ ನಿರ್ಮಾಪಕ ಯೋಚನೆ–ಯೋಜನೆಗಳ ಸಾಗರಕ್ಕೆ ಪ್ರಸ್ತುತ ಕಿಬ್ಬೊತ್ತಿಗೆ ಒಂದು ಕಿರು– ದೊರೆಯಾಗಿ ಸೇರಲೆಂಬುದೇ ಲೇಖಕನ ಸದಾಶಯ.

ಆತ್ಮಸಾಕ್ಷಿಯ ಅಥವಾ ದೇವರ ಹಾಗೂ ಕಾಯಿದೆಯ ಕಣ್ಣಿಗೆ ಮಣ್ಣು ಹಾಕುವ ರಾಜಕಾರಣಿಗೆ ಪುರಸ್ಕಾರ ದೊರಕದಿರಲು ಮತ್ತು ರಾಜ್ಯನೀತಿ ಎಂಬುದು ದುಷ್ಕರ್ಮಪರರ ಹಸಿವನ್ನು ನೀಗಿಸಲು ನೀಡಿದ ಜ್ಞಾನಾಹಾರವೆನ್ನಿಸದಿರಲು ಇಂದು ಪ್ರಜೆಗಳು ಪಹರೆಗಾರರಂತೆ ಸದಾ ಜಾಗರಿತರಾಗಿರಬೇಕಾಗಿದೆ. ಜನಜಾಗರೂಕತೆಯೇ ಪ್ರಜಾರಾಜ್ಯದ ನೆಲಗಟ್ಟು. ಎಚ್ಚರತಪ್ಪಿದ ಜನರಿಗೆ ತಮ್ಮ ಇಚ್ಛೆ (ಹಿತಾರ್ಥ) ಏನೆಂಬುದನ್ನೇ ತಿಳಿಯಲು ಸಾಧ್ಯವಾಗಲಾರದು. ದೂರದೃಷ್ಟಿಯಿಂದ ಚಿರಸ್ಥಾಯಿಯಾದ ಸಾಮುದಾಯಿಕ ಹಿತಸಿದ್ಧಿಯನ್ನು ಕಂಡುಕೊಂಡು, ಅದಕ್ಕನುಕೂಲವಾದ ಆವರಣವು ದೇಶದಲ್ಲಿ ಸದಾ ನೆಲೆಗೊಂಡಿರುವಂತೆ ತನ್ನ ವಿಚಾರ–ವರ್ತನೆ–ವ್ಯವಹಾರಗಳನ್ನು ಯೋಜಿಸಿಕೊಳ್ಳಲು ಪ್ರತಿಯೊಬ್ಬನೂ ಬದ್ಧಪ್ರತಿಜ್ಞನಾಗದೆ ಪ್ರಜಾಪ್ರಭುತ್ವವು ಚಿರಕಾಲ ಯಶಸ್ವಿಯಾಗಿ ಯಾವ ರಾಷ್ಟ್ರದಲ್ಲೂ ಬಾಳಲಾರದು ಎಂಬುದು ಎಲ್ಲರಿಗೂ ಮನವರಿಕೆಯಾಗಲು ಈ ಬರಹ ಪ್ರೇರಕವಾದೀತೆಂದು ನನ್ನ ನಮ್ರವಾದ ಪ್ರತ್ಯಾಶೆ.

–ಬಿ.ಎಚ್. ಶ್ರೀಧರ

# ವಿದೇಶದ ತಿಳಿವಳಿಕೆಗಳು

## ೧

ವಿದೇಶದ ನಾಗರಿಕತೆಗಳ ಇತಿಹಾಸವನ್ನು ಓದುವವರು ಪ್ರಾರಂಭಿಸುವುದು ಹೆಚ್ಚಾಗಿ ಗ್ರೀಸ್ ದೇಶದಿಂದ. ಗ್ರೀಸು ಭಾರತದಂತೆಯೇ ತತ್ವಜ್ಞಾನಿಗಳ ನಾಡಾಗಿತ್ತು. ನಮ್ಮಲ್ಲಿಯ ಹಳೆಯ ಋಷಿಗಳಂತೆ ಪ್ರಖ್ಯಾತನಾದ ಆದ್ಯ ಆಚಾರ್ಯ ಸೊಕ್ರೆಟೀಸ್. ಪ್ಲೇಟೋ ಅವನ ಶಿಷ್ಯ. ಅವರ ಕಾಲದಲ್ಲಿ ಸೋಫಿಸ್ಟರೆಂಬ ಒಂದು ವಿಧದ ಚಾರ್ವಾಕ ವಿದ್ವಾಂಸರು ಪ್ರಭಾವಿಗಳಾಗಿದ್ದರು. ಆ ಚಾರ್ವಾಕರು ಸಮಾಜದಲ್ಲಿ ನಡೆದು ಬಂದು ನೀತಿಯನ್ನು ವಿಡಂಬಿಸುತ್ತಿದ್ದರು. ಅವರೆತ್ತಿದ ರಾಗ ಹೇಗಿತ್ತು ಗೊತ್ತೆ?

ದೊಣ್ಣೆ ಯಾರದ್ದೋ ಎಮ್ಮೆ ಅವನದು. ಬಲಿಷ್ಠನ ಹಿತಸಾಧನೆಯೇ ನಿಜವಾದ ನ್ಯಾಯ. ತನ್ನ ತನ್ನ ಹಿತದ ಸಾಧನೆಗಾಗಿ ಆಯಾ ಸರಕಾರ ಪ್ರಜಾಸತ್ತಾತ್ಮಕ, ಸರ್ವಾಧಿಕಾರಿ ಅಥವಾ ಕುಬೇರ ಹಿತವರ್ಧಕ ಕಾಯದೆಗಳನ್ನು ಪಾಸು ಮಾಡುತ್ತದೆ. ಇಂಥ ಕಾಯದೆಯನ್ನದು ನ್ಯಾಯ ಎಂದು ತನ್ನ ಪ್ರಜೆಗಳಿಗಿತ್ತು ಅದಕ್ಕೆ ತಪ್ಪಿದವರನ್ನು ಶಿಕ್ಷಿಸುತ್ತದೆ. ನಿರಂಕುಶ ಪ್ರಭುತ್ವದಲ್ಲಂತೂ ಇದು ಎದ್ದು ಕಾಣುತ್ತದೆ. ಎಲ್ಲರೂ ಅಲ್ಲಿ ಗೆದ್ದ ಎತ್ತಿನ ಬಾಲವನ್ನು ಹಿಡಿಯುವವರೇ. ಕಾಯದೆಯಿಂದ ಪರಸ್ವಾಪಹಾರ ಮಾಡಿ ದೊಡ್ಡವನಾದ ಮನುಷ್ಯನು ಸರ್ವಾದರಣೀಯ. ಅನ್ಯಾಯವನ್ನು ನಿಂದಿಸುವವರು ಹಾಗೇಕೆ ಮಾಡುತ್ತಾರೆ ಗೊತ್ತೇ? ಆ ನಿಂದಕರಿಗೆ ತಾವು ಕಷ್ಟಪಡುವ ಬಗ್ಗೆ ಹೆದರಿಕೆಯಿದೆ–ಅಷ್ಟೇ. ಮಂದಿಗೆ ತೊಂದರೆಯಾಗುತ್ತದೆ ಎಂಬ ಸದ್ಭಾವನೆಯಿಂದ ಅವರು ಅನ್ಯಾಯವನ್ನು ಹಳಿಯುತ್ತಿಲ್ಲ. ತಮಗೇ ನಾಳೆ ತೊಂದರೆ ಬಂದರೇನು ಗತಿ? ಎಂಬ ಭಯದಿಂದ ಆ ಎಲ್ಲರೂ ನ್ಯಾಯವನ್ನು ಎತ್ತಿ ಹಿಡಿಯುತ್ತಾರೆ!

ತಮ್ಮ ಹಿತಸಂವರ್ಧನೆಗಾಗಿ ಸರಕಾರಗಳು ಜನರಲ್ಲಿ ನಿಂದಾಸ್ತುತಿಗಳನ್ನು ಹಂಚುತ್ತವೆ. ಅಪ್ರಾಮಾಣಿಕತೆಯು ಅನ್ಯಾಯ, ನಾಚಿಕೆಗೇಡಿತನದ್ದು ಎನ್ನುತ್ತವೆ ಅವು. ಸಹಜೀವಿಗಳಿಗಿಂತ ತನಗೆ ಹೆಚ್ಚು ಸಿಗಬೇಕು ಎಂಬ ಆಶೆಯೇ ಅಪ್ರಾಮಾಣಿಕತೆಯ ಬೀಜ: ಕೀಳು ಜನರು ತಮ್ಮ ಯೋಗ್ಯತೆಯು ಕೀಳ್ತನವನ್ನರಿತುಕೊಂಡು ಎಲ್ಲರೂ ಸರಿಸವಾನ ಹಕ್ಕುಬಾಧ್ಯತೆಗಳುಳ್ಳವರಾಗಿರಬೇಕು ಎನ್ನುತ್ತಾರೆ. ಆದರೆ ಯಾರಾದರೂ ಬಲಿಷ್ಠನಿದ್ದರೆ, ಅವನು ನಮ್ಮ ಎಲ್ಲ ನಿಯಮಗಳನ್ನೂ ಮಂತ್ರಗಳನ್ನೂ ಕಾಯದೆಗಳನ್ನೂ ನಿಸರ್ಗದ

ವಿರುದ್ಧವಾಗಿ ಮಾಡಿದ ಪಾಪಗಳೆಂದು ತಿಳಿದು ಕಾಲಕಸವನ್ನಾಗಿ ಮಾಡಿ ತುಳಿದು ಧ್ವಂಸಗೊಳಿಸದೆ ಉಳಿಯುವನೇ? ನಿಜವಾಗಿ ಬದುಕುವವನು ತನ್ನ ಆಶೆಗಳನ್ನು ಗಗನದವರೆಗೆ ಹರಿಯಲು ಬಿಡುತ್ತಾನೆ. ಆದರೆ ಅವು ಗೌರೀಶಂಕರವನ್ನೇರಿದ ಬಳಿಕ ಅವನ್ನು ತೃಪ್ತಿಪಡಿಸುವ ಧೈರ್ಯವೂ ಬುದ್ಧಿಮತ್ತೆಯೂ ಅವನಿಗಿರಬೇಕು. ಇದೇ ನೈಸರ್ಗಿಕ ನ್ಯಾಯ ಹಾಗೂ ಉದಾತ್ತತೆ. ಆದರೆ ಬಹಳ ಜನರಿಗೆ ಹಾಗೆ ಮಾಡಲು ಸಾಧ್ಯವಾಗುವುದಿಲ್ಲ. ಆದುದರಿಂದಲೇ ಅವರು ಹಾಗೆ ಮಾಡಿದವನನ್ನು ದೂರುತ್ತಾರೆ, ತಮ್ಮ ಅಶಕ್ತತೆಯ ಬಗ್ಗೆ ನಾಚಿಕೆಯಿಂದಲೇ– ಅದನ್ನು ಮುಚ್ಚಿಟ್ಟುಕೊಂಡೇ– ಹಾಗೆ ದೂರುತ್ತಾರೆ; ಅದರಿಂದಲೇ ಅವರು ಅಪರಿಮಿತ ಭೋಗವನ್ನು ಕೀಳೆಂದು ಹಳಿಯುತ್ತಾರೆ. ಉದಾತ್ತ ಸ್ವಭಾವಗಳನ್ನು ಅವರು ದಾಸ್ಯಕ್ಕೆ ತಳ್ಳುತ್ತಾರೆ. ಮತ್ತು ತಾವು ಹೇಡಿಗಳಾದುದರಿಂದಲೇ ನ್ಯಾಯವನ್ನು ಹೊಗಳುತ್ತಾರೆ!

ಸಾಮಾನ್ಯರು ನ್ಯಾಯವೆಂದು ಕರೆಯುವ ಪದಾರ್ಥವು ಗೌರವಸ್ಥರು ಪಾಲಿಸತಕ್ಕದ್ದಲ್ಲ. ಅದೆಲ್ಲಾ ಪಾದಚಾರಿಗಳಿಗೇ. ಅದು ವೀರನು ಅನುಸರಿಸಬೇಕಾದ ನೀತಿಯಲ್ಲ; ಅದು ಗುಲಾಮರ ನೀತಿ. ಮನುಷ್ಯನ ನಿಜವಾದ ಸದ್ಗುಣಗಳೆಂದರೆ ಧೈರ್ಯ ಮತ್ತು ಬುದ್ಧಿಮತ್ತೆ.

## ೨

ಮೇಲೆ ಹೇಳಿದ ನೀತಿಭಾವದ ಬಲದಿಂದಲೇ ಬಹುಶಃ ಗ್ರೀಸಿನ ಅಥೆನ್ಸ್ ಸರಕಾರವು ತನ್ನ ವಿದೇಶ ನೀತಿಯಲ್ಲಿ ದುರ್ಬಲ ರಾಜ್ಯಗಳನ್ನು ಅತಿ ಕ್ರೂರವಾಗಿ ನಡೆಸಿಕೊಂಡಿತು. ಈ ವಾದವನ್ನು ಸೊಕ್ರೆಟೀಸ್ ಎದುರಿಸಿದ; ಅವನ ಶಿಷ್ಯ ಪ್ಲೇಟೋ ಎದುರಿಸಿದ. ಅವರ ಪ್ರಕಾರ ನ್ಯಾಯವು ವ್ಯಕ್ತಿಗಳ ನಡುವಣ ಸಂಬಂಧ. ಅದು ಸಾಮಾಜಿಕ ಸಂಘಟನೆಯನ್ನು ಅವಲಂಬಿಸಿದೆ. ಆದುದರಿಂದ ಅದನ್ನು ಚೆನ್ನಾಗಿ ಅರಿಯಬೇಕಾದರೆ ಅದು ವ್ಯಕ್ತಿಯ ನಡತೆಯ ಅಂಗವೆಂದು ತಿಳಿಯದೆ ಸಮಾಜ ಅಥವಾ ಸಮಷ್ಟಿಯ ರಚನೆಯ ಅಂಗವೆಂದು ತಿಳಿದುಕೊಳ್ಳಬೇಕು. ನ್ಯಾಯವಾದ ರಾಜ್ಯವೊಂದನ್ನು ನಮಗೆ ಕಲ್ಪಿಸಿಕೊಳ್ಳಲು ಸಾಧ್ಯವಾದರೆ ಅದಕ್ಕನುಗುಣವಾಗಿ ನ್ಯಾಯವಾಗಿ ನಡೆದುಕೊಂಬ ವ್ಯಕ್ತಿಯನ್ನು ಕಲ್ಪಿಸಿಕೊಳ್ಳಬಹುದು. ಈ ದೃಷ್ಟಿಯಿಂದಲೇ ಆಚಾರ್ಯನು ವ್ಯಕ್ತಿಧರ್ಮ, ಸಾಮಾಜಿಕ ಸಮಸ್ಯೆ ಮತ್ತು ರಾಜಕೀಯ ಪುನರ್‍ರಚನೆಗಳನ್ನು ಚರ್ಚಿಸಿದ್ದಾನೆ. ಅದೇ ಮೇರೆಗೆ ಆಚಾರ್ಯ ಪ್ಲೇಟೋ ಆದರ್ಶ ರಾಜ್ಯವನ್ನು ಬಣ್ಣಿಸಿದ್ದಾನೆ; ಅದನ್ನು ನಿರ್ಮಿಸಲು ಪ್ರತಿಜ್ಞೆ ಮಾಡಿದನು.

ಮನುಷ್ಯರು ಸರಳ ಜೀವಿಗಳಾಗಿದ್ದರೆ ನ್ಯಾಯವೂ ಸರಳವಾಗಿರುತ್ತಿತ್ತು ಎನ್ನುತ್ತಾನೆ ಪ್ಲೇಟೋ. ಅರಾಜಕ ಸಮಾಜವಾದವಷ್ಟೇ ಮನುಷ್ಯರಿಗಾಗಿ ಸಾಕಾಗುತ್ತಿತ್ತು. ಅವರು ಹಾಗಿಲ್ಲವಾದುದರಿಂದಲೇ ಅವರಿಗೆ ರಾಜ್ಯ, ಶಾಸನ, ಸರಕಾರ ಬೇಕಾಯಿತು. ಆದರ್ಶ ರಾಜ್ಯದ ಪ್ರಜೆಗಳು ದೈವಭಕ್ತರಾಗಿ, ಇತರರೊಡನೆ ಮಧುರ ಬಾಂಧವ್ಯದಿಂದ ನಡೆದುಕೊಂಡು, ಶಕ್ತಿ ಮೀರಿ ಭೋಗಪರರಾಗದೆ, ಮಿತಾಹಾರ–ವಿಹಾರಗಳಿಂದ ಶಾಂತರಾಗಿ ಚಿರಕಾಲ ಬಾಳುತ್ತಾರೆ; ಮತ್ತು ಅಂಥದೇ ಜೀವನಪದ್ಧತಿಯನ್ನು ಅವರು ಮುಂದಿನ ತಲೆಮಾರಿಗೆ

ಬಿಟ್ಟು ಹೋಗುತ್ತಾರೆ. ಅಲ್ಲಿ ಮಿತಪ್ರಜೋತ್ಪಾದನ, ಸಸ್ಯಾಹಾರ, ನಿಸರ್ಗಸಹಜ ಸರಳ ಜೀವನ ಕಂಡುಬರುತ್ತದೆ. ಇಂಥ ರಾಜ್ಯವನ್ನು ಕಟ್ಟಲು ಮನುಷ್ಯರು ಅಶಕ್ತರಾಗಲು ಅವರಿಗೆ ಹಿಡಿದ ದುರಾಶೆ ಹಾಗೂ ವೈಭವಪ್ರಿಯತೆಗಳೇ ಕಾರಣ. ಅವರಿಗೆ ಸರಳ ಜೀವನದಲ್ಲಿ ತೃಪ್ತಿಯಿಲ್ಲ. ಅವರು ಅರ್ಜನಪರರು, ಮಹತ್ವಾಕಾಂಕ್ಷೆಯುಳ್ಳವರು, ಸ್ಪರ್ಧಾಲುಗಳು ಮತ್ತು ಮತ್ಸರಗ್ರಸ್ತರು. ಅವರಿಗೆ ಇದ್ದದ್ದರ ಬಗ್ಗೆ ಬೇಗ ಬೇಸರ ಉಂಟಾಗುತ್ತದೆ; ಕೂಡಲೇ ಇಲ್ಲದುದಕ್ಕಾಗಿ ಪರಿತಪಿಸಲಾರಂಭಿಸುತ್ತಾರೆ. ತತ್ಫಲವಾಗಿ ಅನ್ಯರ ಕ್ಷೇತ್ರದಲ್ಲಿ ಒಂದು ಗುಂಪು ಆಕ್ರಮಣ ಮಾಡುತ್ತದೆ. ನೆಲದ ಸಂಪತ್ತಿಗಾಗಿ ಗುಂಪುಗಳಲ್ಲಿ ಸ್ಪರ್ಧೆಯುಂಟಾಗುತ್ತದೆ. ಅದರಿಂದ ಯುದ್ಧ ಶುರುವಾಗುತ್ತದೆ. ವ್ಯಾಪಾರವೂ ಹಣಕಾಸೂ ಬೆಳೆಯುತ್ತವೆ ಮತ್ತು ಆ ಮೂಲಕ ಹೊಸ ವರ್ಗವಿಭಾಗಗಳು ಹುಟ್ಟುತ್ತವೆ. ಪ್ರತಿಯೊಂದು ಸಾಮಾನ್ಯ ನಗರವೂ ನಿಜವಾಗಿ ಎರಡು ನಗರಗಳು: ಒಂದು ಬಡವರ ನಗರ, ಇನ್ನೊಂದು ಶ್ರೀಮಂತರ ನಗರ. ಅವರಿಬ್ಬರಲ್ಲಿ ಸದಾ ಯುದ್ಧ. ಇಬ್ಬಣಗಳಲ್ಲೂ ಸಣ್ಣ ಸಣ್ಣ ಬಣಗಳಿರುತ್ತವೆ. ಆದುದರಿಂದ ಅವನ್ನೆಲ್ಲಾ ಒಟ್ಟು ಒಂದೇ ರಾಜ್ಯವೆಂದು ತಿಳಿದರೆ ತಪ್ಪಾಗುತ್ತದೆ. ಒಂದು ವೈಶ್ಯ "ಬೂರ್ಜ್ವಾಜಿ" ಉದಯಿಸುತ್ತದೆ. ಅದರ ಸದಸ್ಯರು ಐಶ್ವರ್ಯ ಹಾಗೂ ಹೆಚ್ಚು ವೆಚ್ಚಗಳ ಮೂಲಕ ಸಾಮಾಜಿಕ ಸ್ಥಾನವನ್ನು ಗಳಿಸಲು ಹೊರಡುತ್ತಾರೆ. ಅವರು ತಮ್ಮ ಹೆಂಡತಿಯರಿಗಾಗಿ ಬಹಳ ಹಣವನ್ನು ವ್ಯಯಿಸುತ್ತಾರೆ. ಈ ಅರ್ಥವಿತರಣದ ಬದಲಾವಣೆಗಳು ರಾಜಕೀಯ ಬದಲಾವಣೆಗಳಿಗೆ ಕಾರಣವಾಗುತ್ತವೆ. ವ್ಯಾಪಾರಿಯ ಐಶ್ವರ್ಯವು ಜಮೀನುದಾರನದನ್ನು ಮೀರಿಸುತ್ತದೆ. ಕುಬೇರಪ್ರಭುತ್ವವು ಕುಬೇರರ ಕುಲದ ಅಲ್ಪಸಂಖ್ಯರ ಸ್ವಯಂನಾಯಕತ್ವದ ಪ್ರಭುತ್ವವಾಗಿ ಮಾರ್ಪಡುತ್ತದೆ. ಶ್ರೀಮಂತ ವೈಶ್ಯರೂ ಬ್ಯಾಂಕರರೂ ರಾಜ್ಯಶಾಸನ ನಡೆಸಲಾರಂಭಿಸುತ್ತಾರೆ. ಆಗ ಸಾಮಾಜಿಕ ಶಕ್ತಿಗಳ ಹಾಗೂ ಬೆಳವಣಿಗೆಗೆ ಹೊಂದಿಕೆಯಾದ ರಾಜನೀತಿಯ ಸಮನ್ವಯವು ಅಳಿಸಿ ಹೋಗಿ ರಾಜಕಾರಣ ತಲೆಯೆತ್ತುತ್ತದೆ. ರಾಜಕಾರಣವೆಂದರೆ ಪಕ್ಷಪ್ರಭುತ್ವದ ತಂತ್ರ ಮತ್ತು ಅಧಿಕಾರಗಳಿಂದ ಲಬ್ಧವಾದ ಸುಲಿಗೆಗಳಿಗಾಗಿ ಮಾಡುವ ಲೋಭ.

ತಮ್ಮ ಮೂಲ ತತ್ವವನ್ನು ಅತಿರೇಕವಾಗಿ ಅನ್ವಯಿಸ ಹೋದಾಗ ಎಲ್ಲ ಬಗೆಯ ಸರಕಾರಗಳೂ ನಾಶ ಹೊಂದುವವು. ಕುಬೇರರ ಪ್ರಭುತ್ವವು ಅಧಿಕಾರವುಳ್ಳವರ ಗುಂಪನ್ನು ಅತಿ ಚಿಕ್ಕದ್ದನ್ನಾಗಿ ಮಾಡಹೋಗಿ ನಾಶ ಹೊಂದುತ್ತದೆ. ಅಲ್ಪಸಂಖ್ಯರ ಪ್ರಭುತ್ವವು ಕೂಡಲೇ ಪಡೆಯುವ ಐಶ್ವರ್ಯಕ್ಕಾಗಿ ಎಚ್ಚರ ತಪ್ಪಿ ಸ್ಪರ್ಧಿಸಿ, ಜಗಳಕ್ಕಿಳಿದು ಹಾಳಾಗುತ್ತದೆ. ಎರಡು ಸಂದರ್ಭಗಳಲ್ಲೂ ಕ್ರಾಂತಿಯೇ ಅಂತ್ಯಾವಸ್ಥೆ. ಕ್ರಾಂತಿ ಬರುವಾಗ ಅದೇನೋ ಅತಿ ಚಿಕ್ಕ ಕಾರಣಗಳಿಂದ ಹಾಗೂ ಕ್ಷುದ್ರ ಸ್ವೇಚ್ಛಾವಿಚಾರಗಳಿಂದ ಬಂತೆಂದು ತೋರುತ್ತದೆ. ಆದರೆ ಅದು ಹಾಗೆ ಅತಿ ಲಘು ಸಂದರ್ಭಗಳಿಂದ ಹುಟ್ಟಿದಂತೆ ತೋರಿದರೂ ನಿಜವಾಗಿ ಬಹಳ ಕಾಲದಿಂದ ಸಂಚಿತವಾದ ಗಂಭೀರ ಅನ್ಯಾಯಗಳಿಂದಲೇ ಫಕ್ಕನೆ ಪರಿಣಮಿಸಿದ್ದಾಗಿರುತ್ತದೆ. ಆಗ ಪ್ರಜಾಸತ್ತೆ ಏಳುತ್ತದೆ. ಬಡವರು ತಮ್ಮ ವಿರೋಧಿಗಳನ್ನು ಗೆಲ್ಲುತ್ತಾರೆ. ಅವರು ವಿರೋಧಿಗಳಲ್ಲಿ ಕೆಲವರನ್ನು ಕೊಂದೊಗೆಯುತ್ತಾರೆ. ಮತ್ತೆ ಕೆಲವರನ್ನು ದೇಶಭ್ರಷ್ಟರನ್ನಾಗಿ

ಮಾಡುತ್ತಾರೆ; ಅಲ್ಲದೆ ಜನರಿಗೆ ಸ್ವಾತಂತ್ರ್ಯ ಹಾಗೂ ಅಧಿಕಾರಗಳಲ್ಲಿ ಸಮ ಪಾಲು ಸಿಗುವಂತೆ ಮಾಡುತ್ತಾರೆ.

## ೩

ಪ್ರಜೆಗಳ ಪ್ರಭುತ್ವವೂ ಅತಿಯಾದರೆ ಹಾಳಾಗಿ ಹೋಗುವದು. ಅಧಿಕಾರ ವಹಿಸಲು ಎಲ್ಲರಿಗೂ ಸಮಾನವಾದ ಹಕ್ಕು ಇದೆ; ಸಾರ್ವಜನಿಕ ಜೀವನದ ಧೋರಣವನ್ನು ನಿರ್ಧರಿಸಲು ಎಲ್ಲರಿಗೂ ಅಧಿಕಾರವಿದೆ–ಎಂಬುದೇ ಪ್ರಜಾಪ್ರಭುತ್ವದ ಮೂಲತತ್ವ. ಮೊದಲನೆಯ ನೋಟಕ್ಕಿದು ತುಂಬ ಆಹ್ಲಾದಕರವಾದ ವ್ಯವಸ್ಥೆ ಎಂದು ತೋರುತ್ತದೆ. ಅತ್ಯುತ್ತಮ ಶಾಸಕರನ್ನು ಆಯುಧ ಹಾಗೂ ಅತ್ಯಂತ ವಿವೇಕಯುಕ್ತ ಮಾರ್ಗಗಳನ್ನು ಹಿಡಿಯುವ ಶಿಕ್ಷಣ ಜನತೆಗಿಲ್ಲವಾದುದರಿಂದ ಅದು ವಿನಾಶಕರವಾಗಿ ಪರಿಣಮಿಸುತ್ತದೆ. ಜನರಿಗೆ ಸ್ವಂತ ಬುದ್ಧಿಯಿಲ್ಲ, ಆಳುವವರು ಹೇಳಿಕೊಟ್ಟದ್ದನ್ನು ಗಿಳಿಯಂತೆ ಪುನರುಚ್ಚರಿಸುತ್ತಾರೆ ಎನ್ನುತ್ತಾನೆ ಪ್ರೋಟಾಗೊರಾಸ್. ಯಾವುದಾದರೂ ತತ್ವವನ್ನು ಜನರಿಗೆ ಸ್ವೀಕರಿಸಲು ಅಥವಾ ತ್ಯಜಿಸಲು ಬೋಧಿಸಬೇಕಾದರೆ ಜನಪ್ರಿಯ ನಾಟಕ ಮಾರ್ಗದಿಂದ ಪ್ರಚಾರ ಮಾಡಿಬಿಟ್ಟರೆ ಅಲ್ಲಿ ನಡೆದು ಹೋಗುತ್ತದೆ. ಈ ಸಂತೆಯ ಜನರ ಆಳಿಕೆ ರಾಜ್ಯನೌಕೆಗೆ ತಕ್ಕ ನೀರಲ್ಲ. ಪ್ರತಿಯೊಬ್ಬನ ವಾಕ್ ಪಾಂಡಿತ್ಯವೂ ಆಗೀಗ ನೌಕೆಯನ್ನು ಬೇಕಾದ ದಿಕ್ಕಿಗೆ ತಿರುಗಿಸುತ್ತಿರುತ್ತದೆ. ಅಂಥ ಪ್ರಜಾಪ್ರಭುತ್ವದಲ್ಲಿ ಕ್ರೂರ ದಬ್ಬಾಳಿಕೆ ಅಥವಾ ನಿರಂಕುಶ ಸತ್ತೆ ಅನುಭವಕ್ಕೆ ಬಂದೀತು. ಜನಜಂಗುಳಿ ಮುಖಸ್ತುತಿಗಾಗಿ ಹಸಿದಿರುತ್ತದೆ. ನರಿಯಣ್ಣ ಹೆಗ್ಗಡೆಯಂಥ ಮುಖಸ್ತುತಿ ಕಲಾವಿದ ಕೊನೆಯಲ್ಲಿ ತಾನೇ ಜನರಕ್ಷಕ, ಜನನಾಯಕ ಎಂದು ಆಷಾಢಭೂತಿ ತಂತ್ರದಿಂದ ಅತ್ಯುನ್ನತ ಅಧಿಕಾರದ ಗದ್ದುಗೆ ಏರಿ ಮರೆಯುತ್ತಾನೆ.

ಮೇಲಿನ ವಿಚಾರ ಪ್ಲೇಟೋವಿಗೆ ಭಯಂಕರ ಎನಿಸಿತು. ಭೂರಿ ಜನದ ಮನಸ್ವಿಯಾದ ವಿಚಾರಲಹರಿ– ಭೋಳೆತನ ಹೊಣೆಗಾರ ರಾಜಕೀಯ ಅಧಿಕಾರಿಗಳನ್ನು ಹೇಗೆ ಆರಿಸೀತು? ಇನ್ನು ಕೋಶದಾಸರಾದ ತಂತ್ರಿಗಳಂತೂ ಇದ್ದೇ ಇರುತ್ತಾರೆ. ಅವರು ಸ್ವಯಂಪ್ರಭುಗಳನ್ನು ಪ್ರಜಾಪ್ರಭುತ್ವದ ರಂಗಕ್ಕಿಳಿಸದೆ ಬಿಡುತ್ತಾರೇನು? ಮೆಟ್ಟು ಹೊಲಿಯುವದಕ್ಕೆ ಆ ವಿದ್ಯೆ ಕಲಿತವನೇ ಆಗಬೇಕೆಂಬುದನ್ನು ಒಪ್ಪುವ ನಾವು ರಾಜಕಾರಣದಲ್ಲಿ ಮಾತ್ರ "ಮತ ತೆಗೆದುಕೊಳ್ಳಬಲ್ಲವನೆಲ್ಲಾ ಒಂದು ರಾಜ್ಯವನ್ನು ನಡೆಸಬಲ್ಲ" ಎಂದು ನಂಬುವುದು ಅತ್ಯಂತ ಹುಚ್ಚುತನ ಎನ್ನುತ್ತಾನೆ ಪ್ಲೇಟೋ. ಅದಕ್ಷತೆಯನ್ನು ದೂರವಿರಿಸಿ, ಸಾರ್ವಜನಿಕ ಕಾರ್ಯಾಲಯಗಳಲ್ಲಿ ವಂಚಕರು ಹೋಗದಂತೆ ಮಾಡಿ, ಸರ್ವಹಿತಕ್ಕಾಗಿ ಸುಶಾಸನಗೈವ ಉತ್ತಮರನ್ನು ಆಯ್ದು ಸಿದ್ಧಗೊಳಿಸುವುದೇ ರಾಜಕೀಯ ತತ್ವಜ್ಞಾನದ ಸಮಸ್ಯೆ.

ಈ ರಾಜಕೀಯ ಸಮಸ್ಯೆಗಳ ಹಿಂದೆ ಮನುಷ್ಯನ ತಲೆಬುರುಡೆ ಇದೆ. ರಾಜಕಾರಣವನ್ನು ತಿಳಿಯಬೇಕಾದರೆ ದುರ್ದೈವದಿಂದ ನಾವು ಮಾನಸಶಾಸ್ತ್ರವನ್ನು ಕಲಿಯಬೇಕು. "ಮನುಷ್ಯನಂತೆಯೇ ರಾಜ್ಯವೂ" ಜನರ ಚರಿತ್ರ ಬದಲಾದ ಹಾಗೆ ಸರಕಾರಗಳೂ

ಬದಲಾಗುತ್ತವೆ. ಮನುಷ್ಯರಲ್ಲಿಯ ಮನುಷ್ಯತನಗಳಿಂದಲೇ ರಾಜ್ಯಗಳು ನಿರ್ಮಿತವಾಗುತ್ತವೆ. ಉತ್ತಮ ಮನುಷ್ಯರು ಉದಯಿಸಿದ ಹೊರತು ಉತ್ತಮ ರಾಜ್ಯವನ್ನು ನಾವು ಕಾಣಲಾರೆವು. ಅಲ್ಲಿಯವರೆಗೆ ಪ್ರತಿಯೊಂದು ಬದಲಾವಣೆಯೂ ಮೌಲಿಕಾಂಶಗಳನ್ನು ಹಾಗೇ ಉಳಿಸಿಕೊಂಡು ಹೋಗುತ್ತದೆ. ಜನತೆ ಎಷ್ಟು ಆಕರ್ಷಕವಾಗಿದೆ! ಅವರು ಯಾವಾಗಲೂ ಚಿಕಿತ್ಸೆ ಮಾಡಿಕೊಳ್ಳುತ್ತ, ತಮ್ಮ ರೋಗಗಳನ್ನು ಹೇಗೆ ತೀವ್ರ, ಜಟಿಲ ಮಾಡಿಕೊಳ್ಳುತ್ತಿರುತ್ತಾರೆ! ಎಷ್ಟು ಅಳಲೆಕಾಯಿ ಪಂಡಿತರು ಬಂದರೂ ಅವರಿಗೆ ಸ್ವಾಗತ–ಅವರು ಹೇಳಿದ್ದೆಲ್ಲಾ ನಿಷ್ಫಲವಾದರೂ ಅದರಿಂದ ಕಾಹಿಲೆ ಹೆಚ್ಚಾದರೂ ಜನರೇನೂ ನಿರಾಶಾವಾದಿಗಳಾಗುವದಿಲ್ಲ; ಮತ್ತೂ ಒಬ್ಬ ಅಳಲೆಕಾಯಿ ಪಂಡಿತನನ್ನು ನೋಡಿಯೇ ಬಿಡೋಣ ಎನ್ನುತ್ತಾರೆ! ಆಟ ಆಡಲು ಕೂಡ ವೇಳೆ ಸಿಗದಷ್ಟು ನಿಷ್ಠೆಯಿಂದ ಕಾಯಿದೆಯ ಮೇಲೆ ಕಾಯಿದೆ ಪಾಸು ಮಾಡಿ ಅಪ್ರಾಮಾಣಿಕತೆಯನ್ನೂ ಕುತಂತ್ರಗಳನ್ನೂ ನಿಲ್ಲಿಸಿಬಿಡುತ್ತೇವೆಂಬ ಅವರ ಹುಂಬತನಕ್ಕೇನನ್ನಬೇಕು? ಹಾಗೆ ಮಾಡುತ್ತ ಹೋಗಿ ಅವರು ಪೂರ್ಣ ದಿವಾಳಿಯನ್ನು ಸಮೀಪಿಸುವುದು ಅವರಿಗೆ ತಿಳಿಯುವುದೇ ಇಲ್ಲ– ಪಾಪ!

ಮನುಷ್ಯನ ವರ್ತನೆಯ ಆಕರಗಳು ಮೂರು: ಆಶೆ, ಭಾವನೆ ಮತ್ತು ಅರಿವು. ಆಶೆ ಸಾಮಾನ್ಯವಾಗಿ ಕಾಮಜ, ಭಾವನೆ ಹಾರ್ದಿಕ, ಅರಿವು ಶಿರೋಜ. ಅರಿವು ಆಶೆಯ ಕಣ್ಣು; ಆತ್ಮದ ಸಾರಥಿಯಾಗಬಲ್ಲುದದು. ಕೆಲವರು ಕಾಮದಾಸರು; ಅವರು ಸದಾ ಸಂಪಾದನೆಯಲ್ಲೇ ಮಗ್ನರಾಗಿರುತ್ತಾರೆ. ಈ ಲೋಭಿಗಳೇ ಉದ್ಯಮರಾಜರಾಗುವವರು. ಉಳಿದ ಕೆಲವರು ಧೀರರು, ಭಾವನಾಬಲ ಹೆಚ್ಚಾಗಿ ಉಳ್ಳವರು; "ಯಾತಕ್ಕಾಗಿ ಹೋರಾಡಬೇಕು" ಎಂಬುದಕ್ಕಿಂತ "ಯಾತಕ್ಕಾದರೂ ಹೋರಾಡಿ" ಗೆದ್ದರೆ ಆಗಿ ಹೋಯಿತು– ಎಂಬುದೇ ಅವರ ಗುರಿ. "ಗೆಲುವಿಗಾಗಿ ಗೆಲುವು" ಎಂಬುದೇ ಅಂಥವರ ನಿಲುವು. ಅವರೇ ಜಗತ್ತಿನ ನೌಕಾದಲ, ಭೂದಲಗಳಲ್ಲಿ ಭರತಿಯಾಗುವವರು; ಅವುಗಳನ್ನು ಬೆಳೆಸುವವರು. ಆಸ್ತಿಗಿಂತ ಅವರಿಗೆ ಅಧಿಕಾರದ ಜಂಭದ ಮೇಲೇ ಹೆಚ್ಚು ಆಸೆ. ಇನ್ನು ಅರಿವಿನ ಆರಾಧಕರು ಅತ್ಯಲ್ಪ. ವಿಚಾರಮಗ್ನರೂ ಎಲ್ಲವನ್ನೂ ಚೆನ್ನಾಗಿ ಅರ್ಥಮಾಡಿಕೊಳ್ಳುವವರೂ ಹಾಗೆ ಮಾಡಿಕೊಂಬುದರಲ್ಲೇ ಆನಂದಪಡುವವರೂ ಬಹಳ ಕಡಿಮೆ. ಅವರಿಗೆ ಆಸ್ತಿ–ಮನೆ, ಅಧಿಕಾರ–ದರ್ಪ ಇವು ಬೇಡ; ತಿಳಿವೇ ಅವರ ಉಳಿವು. ಅವರು ಸಂತೆ ಬಜಾರವನ್ನೂ ರಣರಂಗವನ್ನೂ ಶಾಂತ ವಿಚಾರದ ಲಾಭಕ್ಕಾಗಿ ಕಳೆದುಕೊಳ್ಳಬಲ್ಲರು. ಅವರ ಇಚ್ಛಾಶಕ್ತಿ ಬೆಂಕಿಯಲ್ಲ, ಬೆಳಕು; ಅವರ ಬಂದರು ಅಧಿಕಾರವಲ್ಲ, ಸತ್ಯ; ಅವರನ್ನು ಜನ ಬಳಸಿಕೊಳ್ಳುವುದಿಲ್ಲ– ಅವರು ಈ ದೃಷ್ಟಿಯಿಂದ ಅಸ್ಪೃಶ್ಯರೇ!

ಆದುದರಿಂದ ಆದರ್ಶ ರಾಜ್ಯದಲ್ಲಿ ಭಾವನೆಯ ಬಿಸಿಯಲ್ಲಿ ಕಾದ ಆಶೆಯು ಅರಿವಿನ ಉಪದೇಶದಂತೆ ವರ್ತಿಸುತ್ತದೆ. ಉದ್ಯಮ ಚಕ್ರವರ್ತಿಗಳು ಉತ್ಪಾದಿಸುವರಲ್ಲದೆ ಅವರೆಂದೂ ಅಲ್ಲಿ ಶಾಸಕರಾಗಿ ಬರಲಾರರು; ಅಧಿಕಾರ ಪ್ರಿಯ ಸೈನಿಕ ಮನೋಭಾವದವರು ರಕ್ಷಣೆಯ ಕಾರ್ಯದಲ್ಲಿ ನಿಂತಾರಲ್ಲದೆ ಆಳಲೆಂದೂ ಪ್ರವೇಶಿಸಲಾರರು; ಜ್ಞಾನ, ತತ್ತ್ವ, ವಿಜ್ಞಾನಗಳ ಶಕ್ತಿಗಳು ಬೆಳೆದು, ರಕ್ಷಣೆ ಪಡೆದು, ಆಳುವ ಕಡಿವಾಣವನ್ನು ಹಿಡಿಯುವುವು.

ಜ್ಞಾನದ ಸಾರಥ್ಯವಿಲ್ಲದ ಜನ ಲಗಾಮಿಲ್ಲದ ಕುದುರೆಯಂತೆ. ಅವರ ಆಳಿಕೆ ಯದ್ವಾತದ್ವಾ. ಆಶೆಗಳ ಮೇಲೆ ಅರಿವಿನ ಬೆಳಕು ಬೀಳಬೇಕಾದಂತೆ ಜನರಿಗೆ ತತ್ವಜ್ಞಾನಿಗಳ ಮಾರ್ಗದರ್ಶನ ಬೇಕು. ಅರ್ಥದಾಸರ ಆಳಿಕೆ ಶುರುವಾದರೆ ದೇಶಕ್ಕೆ ದಿವಾಳಿ ಕಟ್ಟಿಟ್ಟದ್ದು. ಅಥವಾ ಸೇನಾಪತಿ ತನ್ನ ಸೈನ್ಯವನ್ನು ಬಳಸಿ ಸರ್ವಾಧಿಕಾರವನ್ನು ಸ್ಥಾಪಿಸಿದರೂ ಅಷ್ಟೆ. ವೈಶ್ಯಮನೋಧರ್ಮದವರೂ ಕ್ಷಾತ್ರಮನೋಧರ್ಮದವರೂ ಸಾರ್ವಜನಿಕ ಆಡಳಿತಕ್ಕೆ ಕೈಹಾಕಿದರೆ ಆಗುವುದದೇ. ಅವರವರ ಕ್ಷೇತ್ರದಲ್ಲೇ ಅವರವರಿದ್ದರೆ ಚೆಂದ. ರಾಜನೀತಿಜ್ಞತೆ ಅವರಿಗಳವಡದು. ಅದು ಬ್ರಾಹ್ಮ ಮನೋಧರ್ಮದ ಸ್ವತ್ತು. ರಾಜನೀತಿ ಒಂದು ಶಾಸ್ತ್ರ, ವಿಜ್ಞಾನ–ಕಲೆಯಲ್ಲ. ಅದಕ್ಕೆ ಬಹಳ ತರಬೇತು ಬೇಕು, ಸಿದ್ಧತೆ ಬೇಕು. ಆದ್ದರಿಂದ ತತ್ವಜ್ಞಾನಿಯಾದ ಶಾಸಕನೇ ಅದಕ್ಕಗತ್ಯ. ವಿವೇಕವೂ ರಾಜಕೀಯ ನೇತೃತ್ವವೂ ಕೂಡಿರುವ ತತ್ವಜ್ಞಾನಿ ರಾಜನೇ ಆದರ್ಶ ಆಡಳಿತಗಾರ.

ಅಂಥ ಸ್ವಕ್ಷೇತ್ರದಲ್ಲೇ ಉಳಿಯುವ ಸ್ವಧರ್ಮನಿಷ್ಠರನ್ನು ತಯಾರು ಮಾಡಬೇಕಾದರೆ ಅಪ್ಪ ಅಮ್ಮಂದಿರಿಂದ ಹತ್ತು ವರ್ಷಗಳಾದ ಕೂಡಲೇ ಮಕ್ಕಳನ್ನು ತೆಗೆದುಕೊಂಡು ಹೋಗಬೇಕು. ಅವರಿಗೆ ಅವರ ಮನೆಯ ಅಭ್ಯಾಸಗಳ ಸಂಪರ್ಕ ತಪ್ಪಬೇಕು. ದೊಡ್ಡವರ ಉದಾಹರಣೆಯಿಂದ ದುರ್ಮಾರ್ಗಿಗಳಾಗುವ ತರುಣರು ಆದರ್ಶರಾಜ್ಯವನ್ನೆಂದೂ ಕಟ್ಟಲಾರರು. ಒಬ್ಬನಾದರೂ ವಿವೇಕಿ ಆಳರಸ ಅಂಥ ಮಕ್ಕಳ ಅಗ್ರಹಾರ ರಚಿಸಲು ನಮಗೆ ಅವಕಾಶ ಮಾಡಿಕೊಟ್ಟಾನು. ಪ್ರತಿಯೊಬ್ಬ ಮಗುವಿಗೂ ಶಿಕ್ಷಣದಲ್ಲಿ ಸಮಾನಾವಕಾಶ ದೊರಕಬೇಕು. ಸಾರ್ವತ್ರಿಕ ಶಿಕ್ಷಣವನ್ನಾರಂಭಿಸಿ ಯಾವ ಗಣಿಯಲ್ಲಿ ಯಾವ ರತ್ನವಿದೆ ಎಂಬುದನ್ನು ನಾವು ಅರಸಬೇಕು. ಮೊದಲಿನ ಹತ್ತು ವರ್ಷದ ಶಿಕ್ಷಣ ಶರೀರ ಪ್ರಧಾನವಾಗಿರಬೇಕು. ಗರಡಿಮನೆ ಹಾಗೂ ಆಟದ ಮೈದಾನಗಳು ಪ್ರತಿಯೊಂದು ಶಾಲೆಗೂ ಇರತಕ್ಕದ್ದು. ಆಟವೇ ಆಗ ಪಾಠಕ್ಕಿಂತ ಪ್ರಧಾನ. ಅದರಿಂದ ವೈದ್ಯರ ಹತ್ತಿರ ಹೋಗದಂಥ ಆರೋಗ್ಯ ಸಿದ್ಧಿಸುವುದು. ವೈದ್ಯರು ಕಾಹಿಲೆ ಬರಿಸಿಕೊಳ್ಳುವುದನ್ನು ಸೋಮಾರಿಗಳಿಗೂ ಐಷಾರಾಮಿಗಳಿಗೂ ಕಲಿಸಿಕೊಡಲೆಂದೇ ಹೆಚ್ಚಾಗಿ ಇರುವುದು. ಅವರು ಜನರನ್ನು ಸಾಯಗೊಡದೆ ಬಹುಕಾಲ ನರಳುತ್ತಾ ಬಾಳುವಂತೆ ಮಾಡುತ್ತಾರೆ. ಇದು ಅಲಸ ಧನಿಕರ ಬಾಳ ನಗೆಗೇಡಿತನ. ವರ್ಷಗಟ್ಟಲೆ ಪಥ್ಯಪಾನ ಮಾಡಿಕೊಂಡು ನರಳುವ ಜೀವಿಗಳಿಂದ ಆದರ್ಶರಾಜ್ಯ ನಡೆಯದು. ಒಂದೇ ಚೆನ್ನಾಗಿ ಬದುಕಬೇಕು, ಇಲ್ಲವೇ ಬಹಳ ನರಳದೆ ಸಾಯಬೇಕು.

ಆದರೆ ಬರಿ ಜಟ್ಟಿತನದಿಂದ ಆದರ್ಶ ರಾಜ್ಯವಾಗದು. ಸಂಗೀತ ಕಲಿಸಬೇಕು. ಅದು ಅಜ್ಞಾತವಾದ ಮಾನಸಿಕ ಕಾಹಿಲೆಗಳನೇಕಕ್ಕೆ ಮದ್ದು. ಅದರಿಂದ ಧೈರ್ಯ–ಮಾಧುರ್ಯಗಳು ಹೃದಯದಲ್ಲಿ ನೆಲೆಗೊಳ್ಳುವುವು. ಜೊತೆಗೆ ಗಣಿತ, ವಿಜ್ಞಾನ, ಸಾಮೂಹಿಕ ಗಾಯನ, ಆಟ, ಇತಿಹಾಸ ಮುಂತಾದವುಗಳನ್ನು ೧೬ರ ನಂತರ ಐಚ್ಛಿಕಗಳನ್ನಾಗಿ ಕೊಡುತ್ತ ಹೋಗಬೇಕು. ಯುಕ್ತಾಹಾರ, ಯುಕ್ತ ವಿಹಾರಗಳೇ ಶಿಕ್ಷಣದ ಅಡಿಗಲ್ಲು. ಅವುಗಳ ಮೇಲೆಯೇ ಯುಕ್ತಾಭ್ಯಾಸ ನಡೆಯಬೇಕು.

## ೪

ಮಕ್ಕಳ ಪ್ರತಿಭೆಯನ್ನು ಗುರುತಿಸಲು ನಮಗೆ ಅನುಕೂಲವಾಗುವಂತೆ ಏನೂ ಬಲಾತ್ಕಾರವಿಲ್ಲದೆಯೇ ಅವರ ಇಚ್ಛಾನುಸಾರವಾಗಿ ವಿಷಯಗಳನ್ನು ಸಂತೋಷಕರವಾಗಿ ಕಲಿಸುತ್ತ ಹೋದರೆ ಅವರು ಸ್ವತಂತ್ರ ನಾಗರಿಕರಾಗಿ ಬೆಳೆದು ನಿಂತಾರಲ್ಲದೆ, ಅನ್ಯಥಾ ಸಾಧ್ಯವಿಲ್ಲ. ಹೀಗೆ ದೈಹಿಕ ಹಾಗೂ ಮಾನಸಿಕ ಆರೋಗ್ಯ ಚೆನ್ನಾಗಿರುವ ಪ್ರಜೆಗಳಿದ್ದಲ್ಲಿ ಅವರು ಆದರ್ಶ ರಾಜ್ಯದ ಎಲ್ಲ ಬೆಳವಣಿಗೆಗೂ ಸಾಧನೆಗಳಿಗೂ ಸಾಕಾಗಬಲ್ಲ ತಳಪಾಯವಾದಾರು. ಆದರೆ ಅಂಥ ಪ್ರಬುದ್ಧ ಪ್ರಜೆಗಳಿಗೆ ಇನ್ನೊಂದು ಸಾಧನವೂ ಅಗತ್ಯ. ಅದೆಂದರೆ ನೀತಿವಂತಿಕೆ. ಸಾಮಾಜಿಕ ಒಕ್ಕಟ್ಟಿನ ನೀತಿ ಅವರಲ್ಲಿರಬೇಕು. ಸಮಾಜ ಋಣದ ಜ್ಞಾನವಿಲ್ಲದ ಜನವನ್ನು ವಿಶ್ವವ್ಯಾಪಿಯಾದ ಪೋಲೀಸ್ ಪಡೆಯ ಮೂಲಕ ಆಳಬೇಕೆ? ಅದು ಪಾಶವ, ಅತಿವ್ಯಯಕಾರಕ ಮತ್ತು ಉದ್ವೇಗಕರ. ಆದುದರಿಂದ ಜನರಲ್ಲಿ ನೀತಿಮತ್ತೆಯನ್ನು ನಿಲ್ಲಿಸಲು ಒಂದು ಧರ್ಮ ಅಗತ್ಯ; ಅತಿಮಾನವ್ಯವಾದ ಪ್ರಾಧಿಕಾರವೊಂದರ ಪ್ರಮಾಣ ಮುದ್ರೆ ಅದಕ್ಕೆ ಆವಶ್ಯಕ.

ದೇವರಲ್ಲಿ ನಂಬಿಗೆಯಿಡದೆ ಯಾವ ರಾಷ್ಟ್ರವೂ ಬಲಿಷ್ಠವಾಗಲಾರದೆಂಬುದು ಪ್ಲೇಟೋವಿನ ನಂಬಿಗೆ. ಬರಿ ಒಂದು ವಿಶ್ವಶಕ್ತಿ ಎಂದಿಟ್ಟುಕೊಂಡರೆ ಅಂಥ ದೇವರು ಪ್ರತ್ಯಾಶೆ, ನಿಷ್ಠೆ ಹಾಗೂ ತ್ಯಾಗಬುದ್ಧಿಯನ್ನು ಜನತೆಯಲ್ಲಿ ಮೂಡಿಸಲಾರ; ದುಃಖಿಗಳೂ ಭೀತರೂ ದೀನರೂ ಅಂಥ ದೇವರಿಂದ ಸಮಾಧಾನ ಹೊಂದಲಾರರು. ಆದ್ದರಿಂದ ಪುರುಷ ಸ್ವರೂಪದ ದೇವರಲ್ಲಿ ಜನ ನಂಬಿಗೆಯಿಡಬೇಕು. ಪುರುಷೋತ್ತಮನು ಸ್ವಾರ್ಥಸಾಧಕರ ಎದೆಯನ್ನು ನಡುಗಿಸುವನು. ಜೊತೆಗೆ ವ್ಯಕ್ತಿಗೆ ಅಮರತ್ವವು ಮರಣಾನಂತರ ನೀತಿಮತ್ತೆಯ ಫಲವಾಗಿ ಸಿದ್ಧಿಸುವ ಅಂಶವೂ ವಿಶ್ವಸನೀಯ. ಮತ್ತೊಂದು ಜನ್ಮಲಭ್ಯ ಎಂಬ ನಂಬಿಗೆ ನಮಗೆ ಯುಕ್ತ ಕಾರಣಕ್ಕಾಗಿ ಪ್ರಾಣ ತೆರುವ ಧೈರ್ಯವನ್ನು ಕೊಡಬಲ್ಲುದು; ಇಷ್ಟ–ಮಿತ್ರ–ಬಂಧುಗಳ ಸಾವನ್ನು ಸಹಿಸಿಕೊಂಬ ಶಕ್ತಿಯನ್ನು ನೀಡಬಲ್ಲುದು.

ಓದಿ ಸ್ನಾತಕರಾದವರನ್ನು ಆ ಮೇಲೆ ವಿಶ್ವವಿದ್ಯಾಲಯದ ಪರೀಕ್ಷೆಗಳಿಂದ ಭಿನ್ನವಾದ ಉಗ್ರಪರೀಕ್ಷೆಗಳಿಗೆ ಗುರಿಪಡಿಸಿ, ನಿಷ್ಪಕ್ಷಪಾತವಾಗಿ ಯಾರು ವೈಶ್ಯ ವ್ಯವಹಾರದಲ್ಲಿ ಸಮರ್ಥರು, ಯಾರು ಸೈನಿಕ–ಕ್ಷಾತ್ರ ಉದ್ಯೋಗಕ್ಕೆ ತಕ್ಕವರು ಮತ್ತು ಯಾರು ತತ್ತ್ವಜ್ಞಾನಿಗಳಾಗಿ ದೇಶದ ಆಳಿಕೆಯ ಕ್ಷೇತ್ರದಲ್ಲಿ ಕೆಲಸ ಮಾಡಬಲ್ಲರು– ಎಂಬುದನ್ನು ನಿರ್ಣಯಿಸಬೇಕು. ಇಂಥ ಉಗ್ರ ಆಯ್ಕೆಯಲ್ಲಿ ಗುತ್ತಿಗೆದಾರಿಕೆ ಹಾಗೂ ಬಂಧುವೋಹಗಳಿಗೆ ಎಳ್ಳಷ್ಟೂ ಅವಕಾಶವಿರಕೂಡದು. ಈ ಪ್ರಥಮ ಪರೀಕ್ಷೆಯಲ್ಲಿ ಪಾಸಾದವರಿಗೆ ಆದರ್ಶ ರಾಜ್ಯದಲ್ಲಿ ಮುಂದೆ ಹತ್ತು ವರ್ಷಗಳ ಕಾಲ ಹೆಚ್ಚಿನ ಶಿಕ್ಷಣ ಹಾಗೂ ತರಬೇತು ಸಿಗುವುದು. ಅದರಿಂದ ಅವರ ದೇಹ–ಮನ–ಶೀಲಗಳು ಶುದ್ಧತರ ಹಾಗೂ ದೃಢತರ ಆಗುವುವು: ಅನಂತರ ಅವರನ್ನು ಮತ್ತೊಂದು ಪರೀಕ್ಷೆಗೆ ಗುರಿಪಡಿಸಲಾಗುವುದು. ಆ ಪರೀಕ್ಷೆ ಮತ್ತಷ್ಟು ಉಗ್ರತರ. ಅದರಲ್ಲಿ ಫೇಲಾದವರು ಸಹಾಯಕ ಅಧಿಕಾರಿಗಳು, ಕಾರ್ಯಪಾಲಿಕೆಯ ನೌಕರರು

ಮತ್ತು ಸೈನಿಕ ಆಫೀಸರರು ಎನ್ನಿಸಲು ಮಾತ್ರ ಅರ್ಹರು. ಅದಕ್ಕೂ ಮೇಲಿನ ಅಧಿಕಾರ ತಮಗೆ ಸಿಗಲಿಲ್ಲ ಎಂದು ಸಂತಪ್ತರಾಗದಿರಲು ಅವರಿಗೆ ಆಧಿದೈವಿಕ ನಿಯಮದಲ್ಲಿಯ ಶ್ರದ್ಧೆ ಕಾರಣವಾಗುತ್ತದೆ. ಮೇಲೆ ಹೇಳಿದ ಎರಡನೆಯ ಪರೀಕ್ಷೆಯಲ್ಲಿ ಪಾಸಾದವರಿಗೆ ತತ್ವಜ್ಞಾನವನ್ನು ಕಲಿಸಲಾದೀತು. ಅವರಿಗೀಗ ಮೂವತ್ತು ನಡೆಯುತ್ತದೆ. ಇದಕ್ಕೂ ಮೊದಲೇ ಅವರ ಕೈಯಲ್ಲಿ ತತ್ವಶಾಸ್ತ್ರ ಸಿಕ್ಕಿದರೆ ಅದು ಅವರಿಗೆ ಒಂದೇ ವಿನೋದದ ವಸ್ತುವಾದೀತು, ಇಲ್ಲವೇ ಪರಸ್ಪರ ವ್ಯಾಜ್ಯ ಹೂಡಲು ಕಾರಣವಾದೀತು.

ತತ್ವಜ್ಞಾನದ ಭಾಗಗಳು ಎರಡು: ಶುದ್ಧವಾಗಿ ವಿಚಾರ ಮಾಡುವುದನ್ನು ಕಲಿಸುವ ಅತಿಭೌತ ತತ್ವದ ವಿವೇಚನೆ ಮತ್ತು ವಿವೇಕದಿಂದ ರಾಜ್ಯವಾಳುವುದನ್ನು ಹೇಳಿಕೊಡುವ ರಾಜ್ಯಧರ್ಮ. ಈ ದ್ವಿಪರೀಕ್ಷಿತ ದ್ವಿಜರು ಮೊದಲು ಶುದ್ಧವಾಗಿ ವಿಚಾರ ಮಾಡುವುದನ್ನು ಕಲಿಯುವುದಕ್ಕಾಗಿ ವಿಚಾರ ಶಾಸ್ತ್ರವನ್ನು ಅಭ್ಯಸಿಸಬೇಕು. ಅದರಿಂದ ಅವರಿಗೆ ಪ್ರತ್ಯಕ್ಷವನ್ನು ನಿಯಂತ್ರಿಸುವ ಉತ್ಸರ್ಗ ನಿಯಮಗಳ ಪರಿಚಯವಾಗುತ್ತದೆ. ಗಣಿತ–ತರ್ಕ–ಪ್ರಕೃತಿ ನಿಯಮಗಳ ಜ್ಞಾನದಿಂದ ಪ್ರತ್ಯಕ್ಷಾನುಭವದ ಕಾರ್ಯಕಾರಣ ವಿವೇಕ ಅವರಲ್ಲಿ ಉಂಟಾಗುತ್ತದೆ: ಜೀವನದ ಗೊತ್ತು–ಗುರಿ–ಕ್ರಮಬದ್ಧತೆಗಳ ಅರ್ಥವಾಗುತ್ತದೆ; ಆಗ ಮಾತ್ರ ಅವರು ರಾಷ್ಟ್ರಜೀವನದಲ್ಲಿ ಸಾಮರಸ್ಯವನ್ನು ಉಂಟುಮಾಡಿ ರಾಷ್ಟ್ರವು ಉನ್ನತ ಧ್ಯೇಯವನ್ನು ಅನುಸರಿಸುವಂತೆ ಮಾಡಲು ಶಕ್ತರಾದಾರು.

ಐದು ವರ್ಷ ಈ ಅತಿಭೌತ ತತ್ವದ ಅಭ್ಯಾಸ ನಡೆದ ಬಳಿಕ ಅವರಿಗೆ ಮೂವತ್ತೈದು ವರ್ಷವಾಗುತ್ತದೆ. ಆಮೇಲೆ ಹದಿನೈದು ವರ್ಷಗಳವರೆಗೆ ಅವರು ಜಗತ್ತಿನ ವಿವಿಧ ಸ್ವಾರ್ಥಿಗಳ ನಡುವೆ ನೆಲೆಸಿ ತಮ್ಮ ಹೊಟ್ಟೆಯನ್ನು ತಾವೇ ಹೊರೆದುಕೊಂಬ ದುಡಿತವನ್ನು ಸಾಗಿಸಿ ವ್ಯವಹಾರ ಜ್ಞಾನವನ್ನು ಸಂಪಾದಿಸಬೇಕು. ಇದು ಅವರ ತೃತೀಯ ಪರೀಕ್ಷೆ. ಇದರಲ್ಲಿ ಅವರ ಪಾಂಡಿತ್ಯದ ಜಂಭ–ದಂಭಗಳಳಿದು ಸ್ವಾವಲಂಬಿಗಳಾಗಿ ಉಳಿಯುವವರು ತೀರ ಸ್ವಲ್ಪ. ಹಾಗೆ ಉಳಿದ ಸ್ವಲ್ಪ ಜನರು ಪರಂಪರೆ, ಅನುಭವ ಹಾಗೂ ಸಂಸ್ಕೃತಿ–ಸಂಘರ್ಷಗಳಿಂದ ವಿವೇಕವನ್ನು ಪಡೆದು ರಾಜ್ಯವನ್ನಾಳಲು ಅರ್ಹರಾದ ತತ್ವಜ್ಞ ರಾಜ್ಯ ಪ್ರಶಾಸಕರಾಗುತ್ತಾರೆ– ತಮ್ಮ ೫೦ನೆಯ ವಯಸ್ಸಿನಲ್ಲಿ.

ಮತದಾನದ ವಂಚನೆಯಿಲ್ಲದ ಪ್ರಜಾಪ್ರಭುತ್ವವೆಂದರೆ ಸರ್ವರಿಗೂ ಸಮಾನಾವಕಾಶವಿರುವುದೇ ಆಗಿದೆ– ಅದರಲ್ಲೂ ಹೆಚ್ಚಾಗಿ ಶಿಕ್ಷಣಲಾಭದಲ್ಲಿ ಎಲ್ಲರಿಗೂ ಸಮಸೌಕರ್ಯವಿರುವುದು. ಹಾಗಲ್ಲದೆ ಶೀನಿ, ಕಿಟ್ಟಿ, ನಾಣಿ ಅಥವಾ ಸಿದ್ಧ, ಬೋರ, ಬಸವರೆಲ್ಲರಿಗೂ ಸರದಿಯಂತೆ ಸಾರ್ವಜನಿಕ ಕಾರ್ಯಾಲಯಗಳಲ್ಲಿ ಹುದ್ದೆಯನ್ನು ದೊರಕಿಸಿಕೊಡುವುದು ಪ್ರಜಾಸತ್ತೆ ಎಂದು ಹೇಳಲು ಬರದು. ಆಡಳಿತದ ಜಟಿಲ ಕಾರ್ಯವನ್ನು ನಿರ್ವಹಿಸುವುದರಲ್ಲಿ ಅರ್ಹತೆಯನ್ನು ಪಡೆಯಲು ಪ್ರತಿಯೊಂದು ವ್ಯಕ್ತಿಗೂ ಸಮಾನಾವಕಾಶ ಇರುವುದೇ ಪ್ರಜಾಸತ್ತೆ. ಅದರಲ್ಲಿ ಉಕ್ತ ಪರೀಕ್ಷಾತ್ರಯದಲ್ಲಿ ಪಾಸಾದವರಷ್ಟೇ ಆಡಳಿತದ ಮುಖ್ಯಸ್ಥರಾಗುತ್ತಾರೆ. ಸಾರ್ವಜನಿಕ ಹುದ್ದೆಗಳಿಗೆ ಚುನಾವಣೆಯಿಂದಾಗಲಿ ಕೂಟತಂತ್ರದಿಂದಾಗಲಿ ಪ್ರಭಾವಪ್ರಭೆಯಿಂದಾಗಲಿ ಅಧಿಕಾರಿಗಳನ್ನು ನಿಯಮಿಸಿಕೊಳ್ಳಲಾಗದು.

ಪ್ರಜಾಪ್ರಭುತ್ವದ ಮೂಲ ಬುನಾದಿಯಾದ ಪರೀಕ್ಷೆಗಳಲ್ಲಿ ಉತ್ತೀರ್ಣರಾದ, ಸಮಾನಾವಕಾಶದಿಂದ ಸಮದರ್ಜೆಯನ್ನು ಪಡೆದವರೇ ಅಂಥ ಅಧಿಕಾರಿಗಳಾಗಲರ್ಹರು.

ಸುಪರೀಕ್ಷಿತ ಯೋಗ್ಯತಾನುಸಾರ ಸಾರ್ವಜನಿಕ ಅಧಿಕಾರಸ್ಥಾನಗಳಿಗೆ ಜನರನ್ನು ತೆಗೆದುಕೊಳ್ಳುವುದು ಕುಬೇರ ಪ್ರಭುತ್ವದ ಲಕ್ಷಣವೇ? ಆಗಲಿ; ಹಾಗೆಂದು ಒಮ್ಮೆಯಾದರೂ ಅದನ್ನು ಕರೆದರೂ ನಾವು ಹೆದರಬೇಕಾಗಿಲ್ಲ. ಪದಗಳಿಗೆಲ್ಲಾ ಸ್ವಂತ ಬೆಲೆಯಿದೆಯೆ? ಬುದ್ಧಿವಂತರು ಕೊಟ್ಟ ಅರ್ಥ ಅವಕ್ಕಿರುವದಲ್ಲದೆ, ಅವಕ್ಕೆಲ್ಲಿ ಖಾಯಂ ಅರ್ಥ? ರಾಜಕಾರಣಿಗಳೂ ಹುಚ್ಚರೂ ಬೇಕಾದ ಹಾಗೆ ಅವನ್ನು ಬಳಸುತ್ತಿರುತ್ತಾರೆ. ನಮ್ಮನ್ನಾಳುವವರು ಪುರುಷೋತ್ತಮರಾಗಿರಬೇಕು ಎಂಬುದು ಎಲ್ಲರ ಆಸೆ. ಆದರೆ ಆ ಪುರುಷೋತ್ತಮತ್ವ ಆನುವಂಶಿಕವೆಂದು ಸಾರಿದಾಗ ಮಾತ್ರ ಅಂಥ ಪ್ರಭುತ್ವ ಕುಬೇರ ಪ್ರಭುತ್ವವೆನಿಸುತ್ತದೆ. ಆದುದರಿಂದ ಉಕ್ತಪ್ರಭುತ್ವವನ್ನು ಪ್ಲೇಟೋ ಹೇಳಿದ್ದನ್ನು ನೋಡಿದರೆ, ಅದನ್ನು ನಾವಿಂದು ಪ್ರಜಾಸತ್ತಾತ್ಮಕ ಪುರುಷೋತ್ತಮ ಪ್ರಭುತ್ವ ಎನ್ನಬಹುದು. ಹೇಗೆಂದರೆ, ಅದರಲ್ಲಿ ಎದುರು ನಿಂತ ಇಬ್ಬರು ಉಮೇದುವಾರರಲ್ಲಿ ಕಡಿಮೆ ಕೇಡಿಗನನ್ನು ಮತದಾನದ ಮೂಲಕ ಕಣ್ಣುಮುಚ್ಚಿ ಆರಿಸುವುದು ತಪ್ಪಿ, ಸ್ವತಃ ಜನರಲ್ಲಿಯ ಪ್ರತಿಯೊಬ್ಬ ವ್ಯಕ್ತಿಯೂ ಉಮೇದುವಾರನಾಗುವಂತಾಗುತ್ತದೆ ಮತ್ತು ಆ ಪ್ರತಿಯೊಬ್ಬನಿಗೂ ಸಾರ್ವಜನಿಕ ಅಧಿಕಾರಸ್ಥಳಗಳನ್ನಾಕ್ರಮಿಸಲು "ಶೈಕ್ಷಣಿಕ ನಿರ್ವಾಚನವನ್ನು" ಪಡೆಯುವ ಅವಕಾಶವಿರುತ್ತದೆ. ಇಲ್ಲಿ ಜಾತಿಯಿಲ್ಲ; ಸ್ಥಾನ ಹಾಗೂ ಹಕ್ಕುಗಳು ಆನುವಂಶಿಕವಲ್ಲ; ದಾರಿದ್ರ್ಯದ ದೆಸೆಯಿಂದ ಯಾವ ವ್ಯಕ್ತಿಯ ಪ್ರತಿಭೆಯೂ ವಿಕಾಸ ಹೊಂದಲಾರದೆ ಮೂಲೆಗುಂಪಾಗಬೇಕಿಲ್ಲ. ಆಳುವ ಅಧಿಕಾರಿಗಳ ಮಕ್ಕಳು ಚಮಗಾರರ ಮಕ್ಕಳಷ್ಟೇ ಸವಲತ್ತುಗಳಿಂದ ಜೀವನಾರಂಭ ಮಾಡುತ್ತಾರೆ. ಇಬ್ಬರಿಗೂ ಸಮಾನ ಆದರಾತಿಥ್ಯ, ಸಮಾನಾವಕಾಶ, ಸಮಾನಾನುಕೂಲ್ಯ. ಇವರಲ್ಲಿ ಯಾರು ದಕ್ಷರೋ ಅವರು ಉತ್ತೀರ್ಣರಾಗಿ ಅಂತ್ಯದಲ್ಲಿ ಆಡಳಿತಗಾರರಾಗುತ್ತಾರೆ; ಅಧಿಕಾರಿ ಪುತ್ರರತ್ನಗಳು ಅಯೋಗ್ಯರಾದರೆ ಹಿಂದಕ್ಕೆ ಬೀಳುತ್ತಾರೆ! ಎಲ್ಲೇ ಹುಟ್ಟಲಿ, ಅಪಾಪಪರವಾದ ಪ್ರತಿಭೆಗೆ ಉದ್ಯೋಗವು ಕಾದಿರುತ್ತದೆ ಈ ಪ್ರಜಾಸತ್ತೆಯಲ್ಲಿ! ಇದೇ ಶಾಲಾ ಪ್ರಜಾಸತ್ತೆ. ಮತದಾನ ಪ್ರಧಾನವಾದ ಪ್ರಜಾಸತ್ತೆಗಿಂತ ಇದು ನೂರುಪಟ್ಟು ಪ್ರಾಮಾಣಿಕ ಮತ್ತು ಪರಿಣಾಮಕರ.

ಈ ಪ್ರಕಾರವಾಗಿ ತ್ರಿಪರೀಕ್ಷಿತ ಶಾಸಕರು ಉಳಿದೆಲ್ಲ ಕೆಲಸವನ್ನೂ ಬದಿಗಿಟ್ಟು ರಾಜ್ಯದಲ್ಲಿ ಸ್ವಾತಂತ್ರ್ಯರಕ್ಷಕರಾಗಿ ನಿಲ್ಲುತ್ತಾರೆ. ಅವರೇ ಶಾಸನ ನಿರ್ಮಾತರು, ಕಾರ್ಯಪಾಲಕರು ಹಾಗೂ ನ್ಯಾಯನಿರ್ಣಾಯಕರು–ಅತ್ಯುಚ್ಚ ನೆಲೆಯಲ್ಲಿ. ಪರಿಸ್ಥಿತಿ ಬದಲಾದ ಸಂದರ್ಭಗಳಲ್ಲಿ ಸ್ವತಃ ಕಾಯದೆಯ ಅಂಧಸ್ಮೃತಿ ಕೂಡ ಅವರನ್ನು ಬಂಧಿಸಲಾರದು; ಈ ಸಂರಕ್ಷಕರ ಆಳಿಕೆಯು ಪೂರ್ವಾಚಾರ ಬಂಧನಕ್ಕೊಳಗಾಗದೆ ಸಂದರ್ಭೌಚಿತ್ಯದಂತೆ ಬದಲಾವಣೆಗೆಡೆಗೊಡುವ ಮೇಧಾವಿತ್ವವನ್ನು ಹಿಡಿದು ಸಾಗುತ್ತದೆ.

ಆದರೆ ಐವತ್ತರ ನೆಲೆಗೆ ಮುಟ್ಟಿದವರಲ್ಲಿ ಅಂಥ ಔಚಿತ್ಯಜ್ಞ ಬುದ್ಧಿ ಎಲ್ಲಿಂದ ಬರಬೇಕು? ನಿತ್ಯಾಭ್ಯಾಸದ ಕೊಜೆ ಮಣ್ಣಿನಿಂದ ತಯಾರಾಗಿ ಬಿಸಿಲಿಗೆ ಒಣಗಿ ಗಟ್ಟಿಯಾಗಿ

ನಿಂತಿರುವುದಿಲ್ಲವೇನು ಅಂಥವರ ಬುದ್ಧಿ? ಅಂಥ ಮೂರ್ತಿ ಒಡೆದು ಹೋದೇನೆಂದೀತಲ್ಲದೆ ತಿದ್ದಿಕೊಂಡೇನೆಂದೀತೆ? ತಿದ್ದಿಕೊಳ್ಳುವ ಮಿದುಗುಣ ಅದಕ್ಕೆಲ್ಲಿ ಉಳಿದಿರುತ್ತದೆ? ಈ ತತ್ವಜ್ಞಾನಿ ಶಾಸಕರು ಕೊನೆಗೆ ಹುಚ್ಚರೋ ಸ್ವಾರ್ಥಿಗಳೋ ಅಥವಾ ಈ ಎರಡೂ ಬಗೆಯವರೋ ಆಗದೇ ಉಳಿಯುವುದುಂಟೇ? ಎಂಬ ಅದೈಮಂತಸನ ಪ್ರಶ್ನೆಗೆ ಉತ್ತರವಾಗಿ ಪ್ಲೇಟೋ ಹೇಳುತ್ತಾನೆ: ಅವರ ತರಬೇತೇ ಅಂಥ ಗುಣಕ್ಕೆ ಅವಕಾಶ ಕೊಡುವುದಿಲ್ಲ. ಅವರು ಕೇವಲ ಶುಷ್ಕತರ್ಕದ ಖಸೂಚಿ ತತ್ವಚಿಂತಕರಲ್ಲ. ವ್ಯವಹಾರರಂಗದಲ್ಲಿ ಅವರಿಗೆ ಯಥೇಷ್ಟ ಅನುಭವ ಸಿಕ್ಕಿರುತ್ತದೆ. ಕೆಲಸಕ್ಕೆ ಬರದ ಗಾಳಿಗೋಪುರ ಕಟ್ಟುವ ವಿಲಾಸಿ ವೇದಾಂತಿಗಳಲ್ಲ ಅವರು. ವ್ಯವಹಾರಕ್ಕೆ ಅಗತ್ಯವಾದ ವಿವೇಕಕ್ಕಷ್ಟೇ ಅಂಟಿಕೊಳ್ಳುವ ಅಭ್ಯಾಸವನ್ನು ಅವರು ಪಡೆದಿರುತ್ತಾರೆ. ಆದುದರಿಂದ ಅವರೆಂದೂ ಕಾರ್ಯದಕ್ಷತೆಯಿಂದ ಕುಸಿದು ಬೀಳಲಾರರು, ಅವ್ಯವಹಾರ್ಯ ಯೋಜನೆಗಳಿಗೆ ಕೈಯಿಕ್ಕರು. ಅಷ್ಟೇ ಅಲ್ಲದೆ ಅವರು ಸ್ವಾರ್ಥಿಗಳಾಗಲು ಅವಕಾಶ ಇಲ್ಲವೇ ಇಲ್ಲ. ಏಕೆಂದರೆ ಅವರಿಗೆ ನಿತ್ಯದ ಖರ್ಚಿಗೆ ಬೇಕಾದ ಭತ್ತೆಗಿಂತ ಹೆಚ್ಚಿನ ಯಾವ ಆಸ್ತಿ–ಆದಾಯಗಳೂ ಇರತಕ್ಕದ್ದಲ್ಲ ಎಂಬ ನಿಯಮವಿದೆ. ಅವರಿಗೆ ಖಾಸಗಿ ಮನೆ ಸಹ ಇರಕೂಡದೆಂದಿದೆ. ರಣರಂಗದಲ್ಲಿ ಕಾರ್ಯಾಸಕ್ತನಾದ ಯೋಧನಂತೆ ಅವರು ತಾತ್ಕಾಲಿಕ ಆವಶ್ಯಕ ಸಾಮಗ್ರಿಗಳಷ್ಟನ್ನೇ ಇಟ್ಟುಕೊಳ್ಳುವ ಹಕ್ಕುಳ್ಳವರು. ಮಿತವ್ಯಯಿಗಳೂ ಧೀರರೂ ಆಗಿರುವ ಅವರ ಅನುಭವ ಹಾಗೂ ಆನುಕೂಲ್ಯಗಳು ಅವರನ್ನು ಎಂದೂ ಸ್ವಾರ್ಥಿಗಳಾಗಗೊಡವು. ತಮ್ಮ ಅನಿವಾರ್ಯವಾದ ಸಾರ್ವಜನಿಕ ರೀತಿಯ ಜೀವನಕ್ಕೆ ಅತ್ಯಗತ್ಯವೆನಿಸುವ ಸಾಮಗ್ರೀ ಸಂಗ್ರಹಕ್ಕೆ ಬೇಕಾದಷ್ಟೇ ಸಂಬಳವನ್ನವರು ಪ್ರತಿವರ್ಷ ಪಡೆಯುತ್ತಾರೆ. ಇಷ್ಟೇ ಅಲ್ಲ. ಅವರೆಲ್ಲರೂ ಪ್ರತಿನಿತ್ಯ ಒಂದೇ ಪಂಕ್ತಿಯಲ್ಲಿ ಉಣ್ಣಬೇಕೆಂದಿದೆ. ಅವರ ಅಡಿಗೆ, ಊಟ, ವಸತಿಗಳೆಲ್ಲಾ ಏಕತ್ರ. ಅವರದ್ದು ಶಿಬಿರ ಜೀವನ. ಅವರಿಗೆ ಯಾವ ರೂಪದಲ್ಲೂ ಚಿನ್ನ–ಬೆಳ್ಳಿಗಳ ಸಂಪರ್ಕ ಜೀವನದಲ್ಲಿಲ್ಲ. ಏಕೆಂದರೆ ಅವರ ಸತ್ವವೇ ಬಂಗಾರ. ಈ ಬಳಕೆಯ ಬಂಗಾರದಿಂದ ಅದು ಕೆಡಬಾರದು. ಇಂಥ ಜೀವನವೇ ಅವರ ಮೋಕ್ಷ, ರಾಜ್ಯದ ಪರಮದಪದ. ಅವರೇನಾದರೂ ಸ್ವಂತ ಮನೆ–ಮಠ ಕಟ್ಟಿಕೊಂಡರೆಂದರೆ ಅವರು ಗೃಹಸ್ಥಮಟ್ಟಕ್ಕಿಳಿದಂತೆಯೇ ಆಗುತ್ತದೆ. ಆಗ ಅವರು ರಾಜ್ಯರಕ್ಷಕರಾಗಿ ಉಳಿಯದೆ ರಾಜ್ಯಭಕ್ಷಕರಾಗಲು ಬಹಳ ಕಾಲ ಹಿಡಿಯದು. ತಾವು ಜನತೆಗೆ ಗೆಳೆಯರಾಗದೆ ಜನತೆ ತಮಗೆ ಗೆಳೆಯರಾಗದಂತೆ ಮಾಡಿಕೊಂಡು, ರಾಜ್ಯದ್ರೋಹ–ಸ್ವದ್ರೋಹಗಳನ್ನು ಮಾಡುತ್ತ, ಅಂತ್ಯದಲ್ಲಿ ಉಭಯ ನಾಶವನ್ನು ಒಡರಿಸುವುದು ಸ್ವಂತದ ಹಿತ ಸಂಬಂಧಗಳಿಗಂಟಿಕೊಂಬ ರಾಜಕಾರಣಿಗಳಿಗೆ ನಿಯತಿಸಿದ್ಧ!

ಹಾಗಾದರೆ ನಮ್ಮ ಈ ಪುರುಷೋತ್ತಮ ಶಾಸಕರಿಗೆ ಹೆಂಡಿರು ಮಕ್ಕಳಿರುವದಿಲ್ಲವೆ? ಇದ್ದಾರೆ. ಆದರೆ ಆ ಹೆಂಡಿರು ಮಕ್ಕಳಾದರೂ ಇವರಂತೆಯೇ ಶಿಬಿರ ಜೀವನವನ್ನು ಹಿಡಿದಿರಬೇಕು. ಇವರಂತೆಯೇ ಅವರೂ ಪರಹಿತಪ್ರಧಾನವಾದ ಸಮಷ್ಟಿವಾಸ ಹಿಡಿಯಬೇಕು. ಹೆಂಗಸರಲ್ಲಿ ಕೆಲವರು ಬ್ರಾಹ್ಮವರ್ಚಸ್ಸಿನ ಪುರುಷೋತ್ತಮರಾಗಲು ತ್ರಿಪರೀಕ್ಷಿತರಾದರೆ ಅವರಿಗೂ ಸ್ವಾಗತ. ಅಂಥವರ ಗಂಡಂದಿರು (ಪುರುಷೋತ್ತಮರಲ್ಲದಿದ್ದಲ್ಲೂ) ಶಿಬಿರಜೀವನ

ಹಿಡಿಯಬೇಕು, ಸಾರ್ವಗೃಹವಾಸಿಗಳಾಗಬೇಕು. ಅರ್ಥಾತ್ ಪುರುಷೋತ್ತಮರಾದ ಶಾಸಕವರ್ಗೀಯರು ಅಹಂಕಾರ–ಮಮಕಾರಗಳಿಂದ ಮುಕ್ತರಾಗಿರಲು ಈ ವ್ಯವಸ್ಥೆಯನ್ನು ಉಲ್ಲೇಖಿಸಲಾಗಿದೆ. ವೈಯಕ್ತಿಕ ಹಾಗೂ ಕೌಟುಂಬಿಕ ವ್ಯಾಮೋಹಗಳ ಗಡಿಯ ಹೊರಗೇ ಅವರ ಮನೋವ್ಯಾಪಾರ ಸಾಗಿದಾಗ ಮಾತ್ರ ಅವರು ಸಾರ್ವಗುಣದ ಜನನಾಯಕರಾಗಿ ಉಳಿದಾರು; ಇಲ್ಲವಾದರೆ ಇಲ್ಲ. ಶಿಬಿರಜೀವನವು ವೈಯಕ್ತಿಕ ದಾಂಪತ್ಯದ ಪ್ರಾಮಾಣಿಕ ಸಂಬಂಧಕ್ಕೆ ಯಾವ ರೀತಿಯಿಂದಲೂ ಭಂಗ ತರಲಾರದು. ಏಕೆಂದರೆ ಅದೊಂದು ಅವಿಭಕ್ತ ಅಥವಾ ಸಂಯುಕ್ತ ಕುಟುಂಬದಂತೆ ಸಾಗತಕ್ಕದ್ದು.

ನಮ್ಮ ಪುರುಷೋತ್ತಮ ಶಾಸಕರಿಗೆ ಬೆಂಬಲವಾಗಿ ನಿಲ್ಲಲು ಅವರಂತೆಯೇ ಸರಳಜೀವಿಗಳಾದ ಯೋಧರು ರಾಜ್ಯದಲ್ಲಿ ನೆಲೆ ನಿಲ್ಲುವಂತಾಗಬೇಕು. ಅಂಥ ಶೀಲ–ಶೌರ್ಯ–ಸ್ವದೇಶಾಭಿಮಾನಗಳುಳ್ಳ ಕ್ಷಾತ್ರಬಲವನ್ನು ತಯಾರಿಸಿ ಶಾಸಕರು ನಿಯಮಿಸಿಕೊಳ್ಳಬೇಕು. ರಾಜ್ಯವು ಆದಷ್ಟುಮಟ್ಟಿಗೆ ಅಂತಃಕಲಹ ಹಾಗೂ ವಿದೇಶಗಳೊಡನಾಗುವ ಯುದ್ಧದಿಂದ ಮುಕ್ತವಾಗಿರಬೇಕಾದರೆ ವಿದೇಶೀಯ ವ್ಯಾಪಾರವನ್ನು ಬಹಳ ಪರಿಮಿತಗೊಳಿಸಬೇಕು; ರಾಜ್ಯವು ಆದಷ್ಟುಮಟ್ಟಿಗೆ ಸ್ವಾವಲಂಬಿಯಾಗಬೇಕು– ತನ್ನ ಆವಶ್ಯಕತೆಗಳನ್ನು ತಾನೇ ಪೂರಯಿಸಿಕೊಳ್ಳಬೇಕು.

ಪ್ರಜೆಗಳು ಆರೋಗ್ಯಸಂಪನ್ನರಾಗಿರುವುದವಶ್ಯಕ. ಪುರುಷರ ಪ್ರಜೋತ್ಪಾದನಾವಧಿ ೩೦–೪೫ ವರ್ಷ ವಯಸ್ಸಿನ ನಡುವೆ; ಸ್ತ್ರೀಯರ ಆ ಅವಧಿ ೨೦–೪೦ರ ನಡುವೆ. ಆದಷ್ಟು ಮಟ್ಟಿಗೆ ಉತ್ತಮ ಪುರುಷವರ್ಗ ಉತ್ತಮ ಸ್ತ್ರೀವರ್ಗವನ್ನೇ ಮದುವೆಯಾಗಬೇಕು. ಶೂರರೂ ಉದಾರರೂ ಬಹುಭಾರ್ಯರಾಗಲು ಅವಕಾಶ ಕೊಡಬೇಕು. ಅದರಿಂದ ಸತ್ಪ್ರಜಾಬಲ ಸಮಾಜಕ್ಕೆ ಹೆಚ್ಚಾಗಿ ಸಿಗುವಂತಾಗುತ್ತದೆ.

ಬ್ರಾಹ್ಮ–ಕ್ಷಾತ್ರವರ್ಗಗಳನ್ನುಳಿದ ಕೊನೆಯದಾದ ವೈಶ್ಯವರ್ಗ ಮಾತ್ರ ಸ್ವಂತ ಆಸ್ತಿ–ಮನೆ ಮಾಡಿಕೊಂಡಿರಬಹುದು. ಇವರೇ ಒಕ್ಕಲಿಗ ಹಾಗೂ ವ್ಯಾಪಾರಿಗಳು. ಆದರೆ ಈ ವರ್ಗದವರು ಮಿತಿಮೀರಿದ ಖಾಸಗಿ ಐಶ್ವರ್ಯವನ್ನು ಗಳಿಸದಂತೆ ತಕ್ಕ ಶಾಸನ ನಿಯಂತ್ರಣವು ನಮ್ಮ ಆದರ್ಶರಾಜ್ಯದಲ್ಲಿರುತ್ತದೆ. ಇಲ್ಲವಾದರೆ ಅಲ್ಪಸಂಖ್ಯರು ಅಟ್ಟದ ಐಶ್ವರ್ಯಕ್ಕೇರಿ ಬಹುಸಂಖ್ಯರು ದಟ್ಟದರಿದ್ರರಾಗುವರು. ಅದಕ್ಕಾಗಿ ಬಡ್ಡಿ ತೆಗೆದುಕೊಳ್ಳಬಾರದು, ಲಾಭ ಪರಿಸೀಮಿತವಾಗಬೇಕು ಎಂಬ ನಿಯಮವಿರುತ್ತದೆ. ಮೇಲಿನ ಸಂರಕ್ಷಕ ಶಾಸಕ ವರ್ಗದ ಸಾಮ್ಯನೀತಿಯ ಬಾಳು ಈ ತೃತೀಯ ವರ್ಗದ ಅರ್ಥಜೀವಿಗಳಿಗೆ ಸರಿ ಹೋಗದು. ಈ ವರ್ಗಕ್ಕೆ ಅರ್ಜನ ಹಾಗೂ ಸ್ಪರ್ಧೆಗಳು ಬಲಿಷ್ಠ ಗುಣಗಳಾಗಿರುತ್ತವೆ; ಎಲ್ಲೋ ಕೆಲವು ಉದಾತ್ತ ಜೀವಗಳು ಮಾತ್ರ ಈ ಗುಣಗಳಿಂದ ಮುಕ್ತವಾಗಿರಬಹುದು. ಮೊದಲೇ ಸೂಚಿಸಿದಂತೆ ಅರ್ಥಾರ್ಜನಪರರು ಶಾಸಕರಾಗಲು ಅನರ್ಹರು. ಅವರಿಗೆ ಅರ್ಥಾರ್ಜನೆ ಮಾಡಲು ಬೇಕಾದಷ್ಟು ಅವಕಾಶವಿತ್ತು, ಐಶ್ವರ್ಯ ಭೋಗಿಗಳಾಗಿ ಇರಗೊಟ್ಟರೆ, ಅವರು ಮೇಲ್ಮಟ್ಟದ ರಾಜ್ಯಶಾಸಕರ ಕ್ಷೇತ್ರದಲ್ಲಿ ಕಾಲಿಡದೆ ಸುಗಮವಾಗಿ ರಾಜ್ಯಭಾರ ಮಾಡಿಕೊಂಡು ಹೋಗಲು ಅವರನ್ನು ಬಿಟ್ಟಾರು. ಹೀಗೆ ಪರಿಪೂರ್ಣ ಸಮಾಜದಲ್ಲಿ ಆಯಾ ವರ್ಗವು

ತನ್ನ ತನ್ನ ಕರ್ತವ್ಯದಲ್ಲಿ ನಿಷ್ಠವಾಗಿದ್ದು ಮಿಕ್ಕ ವರ್ಗಗಳ ಕಾರ್ಯಕ್ಷೇತ್ರದಲ್ಲಿ ಕೈ ಹಾಕದೆ ರಾಜ್ಯದ ಸರ್ವತೋಮುಖವಾದ ಅಭಿವೃದ್ಧಿ ಸಾಧಿಸಲ್ಪಡುತ್ತದೆ ಎನ್ನಬಹುದು; ಅಂಥ ರಾಜ್ಯವೇ ನ್ಯಾಯವಾದ ರಾಜ್ಯ ಎಂದು ಪರಿಗಣಿಸಬಹುದು.

೫

ನ್ಯಾಯವೆಂದರೇನು? ಎಂಬ ನೈತಿಕ ಪ್ರಶ್ನೆ ಈಗ ನಮ್ಮೆದುರು ಬಂದಿದೆ. ಬಹುಶಃ ಸತ್ಯ–ಸೌಂದರ್ಯಗಳಂತೆ ನ್ಯಾಯವಾದರೂ ಲಕ್ಷಣಿಸಲು ಬರದೆಂದು ತೋರುತ್ತದೆ. ಆದರೂ ಪ್ಲೇಟೋ ಒಂದು ಪ್ರಯತ್ನ ಮಾಡಿ, "ತನ್ನದನ್ನು ಮಾಡುವುದು ಮತ್ತು ಇಟ್ಟುಕೊಳ್ಳುವುದು" ಎಂದು ಹೇಳುತ್ತಾನೆ. ಅದರ ಅರ್ಥ ಹೀಗೆ: ಪ್ರತಿಯೊಬ್ಬನೂ ತಾನು ಉತ್ಪಾದಿಸಿದ್ದಕ್ಕೆ ಸಮನಾದಷ್ಟನ್ನು ಪಡೆಯುವುದು ಮತ್ತು ತಾನು ಯಾವ ಕೆಲಸಕ್ಕೆ ಅತ್ಯಂತ ಯೋಗ್ಯನೋ ಅದನ್ನು ಮಾಡುವುದು. ನ್ಯಾಯವಾದ ಮನುಷ್ಯನೆಂದರೆ ಸರಿಯಾದ ಸ್ಥಾನದಲ್ಲಿ ನಿಂತು ತನ್ನ ಕೈಯಲ್ಲಿ ಆದಷ್ಟು ಉತ್ತಮವಾಗಿ ಕೆಲಸ ಮಾಡುವವನು; ಅಲ್ಲದೆ, ತಾನು ಪಡೆದುದಕ್ಕೆ ಸರಿಸಮವಾಗಿ ತಿರುಗಿ ಕೊಡುವವನು. ಆದುದರಿಂದ ನ್ಯಾಯವಂತರ ಒಂದು ಸಮಾಜವು ಸಮನ್ವಿತವೂ ಶೌರ್ಯ ದಕ್ಷವೂ ಆಗಿರುತ್ತದೆ. ಅಂಥ ಸಮಾಜದಲ್ಲಿ ಅದರ ಪ್ರತಿಯೊಂದು ಅಂಗವೂ ಅದರ ಸ್ಥಾನದಲ್ಲೇ ಇರುತ್ತದೆ; ಮತ್ತು ಮೇಳವಾದ್ಯದ ಅಂಗಗಳಂತೆ ಅವು ತಂತಮ್ಮ ಕರ್ತವ್ಯಗಳನ್ನು ನೆಟ್ಟಗೆ ಮಾಡುತ್ತವೆ. ಸೌರವ್ಯೂಹದಲ್ಲಿ ಗ್ರಹಗಳು ನಿರ್ದಿಷ್ಟ ಕ್ರಮದಲ್ಲಿ ಇರುವಂತೆ ಇರುವುದೇ ನ್ಯಾಯವಾದ ಸಮಾಜ ನೀತಿ. ಹಾಗೆ ಸಂಘಟಿತವಾದ ಸಮಾಜವೊಂದೇ ಬದುಕಲರ್ಹ. ಅಲ್ಲಿ ಮಾತ್ರ ಸಮರ್ಥವಾದ ಕ್ರಮಬದ್ಧತೆಯ ರೂಪದ ನ್ಯಾಯವಿರಬಲ್ಲುದು. ಬ್ರಾಹ್ಮ (ಆಳುವ) ಕ್ಷಾತ್ರ (ಸೈನಿಕ) ಹಾಗು ವೈಶ್ಯ (ವ್ಯಾಪಾರ–ಕೃಷಿಗಳ) ಮನೋಧರ್ಮವುಳ್ಳವರು ತಂತಮ್ಮ ಸ್ಥಾನಗಳನ್ನು ಬಿಟ್ಟು ಅನ್ಯಸ್ಥಾನಗಳನ್ನು ಆಕ್ರಮಿಸಹೋದಾಗ ಕ್ರಮಬಂಧವಳಿದು ಸಮಾಜವು ನಾಶವಾಗುತ್ತದೆ. ವ್ಯಕ್ತಿಯಲ್ಲಿ ಸಹ ಸಮರ್ಥ ಕ್ರಮಬಂಧವೇ ನ್ಯಾಯ; ಅವನಲ್ಲಿಯ ದೈಹಿಕ–ಮಾನಸಿಕ ಅಂಗೋಪಾಂಗಗಳು ಸಮನ್ವಿತವಾಗಿ ತಂತಮ್ಮ ಸ್ಥಾನಗಳಲ್ಲಿದ್ದು ಸಹಕಾರವೃತ್ತಿಯಿಂದ ಕೂಡಿ ಕೆಲಸ ಮಾಡಿದಾಗ ಮಾತ್ರ ಅವನ ವರ್ತನೆ ನೆಟ್ಟಗಿರುತ್ತದೆ. ಪ್ರತಿಯೊಂದು ವ್ಯಕ್ತಿಯೂ ಆಶೆ, ಭಾವನೆ ಮತ್ತು ಕಲ್ಪನೆಗಳ ಒಂದೊಂದು ಸಮಸ್ತ ವಿಶ್ವ ಅಥವಾ ವ್ಯಸ್ತ ರಾಶಿ. ಇವು ಸಮನ್ವಿತವಾದಾಗಲೇ ವ್ಯಕ್ತಿಗೆ ಜಯ, ಉಳಿವು. ಉಕ್ತ ಶಕ್ತಿತ್ರಯದಲ್ಲಿ ಒಂದೊಂದೂ ತನಗಲ್ಲದ ಅಧಿಕಾರವನ್ನು (ಒಬ್ಬನಲ್ಲಿ) ವಹಿಸಿದಾಗ ಅವನ ವ್ಯಕ್ತಿತ್ವ ಒಡೆದು ಹೋಗುವುದು. ನ್ಯಾಯವು ಹೀಗೆ ಒಂದು ಕ್ರಮಬಂಧ ಮತ್ತು ಸೌಂದರ್ಯ. ಕೇಡೆಲ್ಲವೂ ವ್ಯಸ್ತ. ಆ ಅಸಾಂಗತ್ಯವು ಮಾನವ–ನಿಸರ್ಗ, ಒಬ್ಬ ಮತ್ತು ಇತರರು ಅಥವಾ ಒಬ್ಬ–ಅವನ ಆತ್ಮ ಇವು ಯಾವುದಾದರೂ ಜೊತೆಗಳ ನಡುವೆ ಉಂಟಾಗಬಹುದು. ಆದುದರಿಂದ ನ್ಯಾಯವು ಕೇವಲ ಬಲವಲ್ಲ, ಸಮನ್ವಿತವಾದ ಬಲ. ಬಲಿಷ್ಠರ ಬಲವೆಂದೂ ನ್ಯಾಯವಾಗಲಾರದು. ಇಡಿ ಸಮಾಜದ

ಸಮರ್ಥ ಸಮನ್ವಯವೇ ನ್ಯಾಯ. ನಿಸರ್ಗದ ನ್ಯಾಯಾಸ್ಥಾನದಲ್ಲಿ ಅನ್ಯಾಯಗಳಿಗೆ ಶಿಕ್ಷೆ ಕಟ್ಟಿಟ್ಟದ್ದು.

ಪ್ಲೇಟೋವಿನ ಬಳಿಕ ಅವನ ಶಿಷ್ಯೋತ್ತಮನಾದ ಅರಿಸ್ಟಾಟಲನು ಸರ್ವಶಾಸ್ತ್ರ ವಿಶಾರದನೆನಿಸಿ ಗ್ರೀಸಿನಲ್ಲಿ ಪ್ರಖ್ಯಾತನಾದನು. ಈ ತತ್ವಜ್ಞಾನಿಯು ಕಲೆಯ ಬಗ್ಗೆ ಈ ಕೆಳಗಿನಂತೆ ಬರೆದಿಟ್ಟಿದ್ದಾನೆ:

ಮನುಷ್ಯನ ರೂಪನಿರ್ಮಾಣದ ಪ್ರವೃತ್ತಿಯಿಂದಲೂ ಭಾವನೆಯನ್ನು ಪ್ರಕಟಿಸುವ ಉತ್ಕಟೇಚ್ಛೆಯಿಂದಲೂ ಕಲಾತ್ಮಕ ಸೃಷ್ಟಿಯು ಸಂಭವಿಸುತ್ತದೆ. ಕಲಾಕೃತಿಯು ಸಾರತಃ ವಾಸ್ತವಿಕ ಜಗತ್ತಿನ ಅನುಕರಣ. ಅದು ನಿಸರ್ಗದ ಮುಖಕ್ಕೆ ಕನ್ನಡಿ ಹಿಡಿಯುತ್ತದೆ. ಮನುಷ್ಯನಲ್ಲಿ ಪ್ರಾಣಿಗಳಲ್ಲಿಲ್ಲದ ಒಂದು ಬಗೆಯ ನಕಲು ಮಾಡಿ ಆನಂದಪಡುವ ಪ್ರವೃತ್ತಿಯಿದೆ. ಹೀಗಿದ್ದರೂ ಬಾಹ್ಯ ಪ್ರಪಂಚದ ಹೊರ ಮುಖವನ್ನು ಚಿತ್ರಿಸುವುದು ಕಲೆಯ ಗುರಿಯಲ್ಲ; ಅದರ ಗುರಿ ವಾಸ್ತವಿಕ ಜಗತ್ತಿನ ಒಳ ಅರ್ಥವನ್ನು ಹೊರಹೊಮ್ಮಿಸುವುದರಲ್ಲಿದೆ. ಕಲೆಯ ಸತ್ಯವಿರುವುದು ಹೀಗೆ ವಸ್ತುಸೃಷ್ಟಿಯ ಅಂತಃಸ್ಸಾರವನ್ನು ಪ್ರಕಟಿಸುವುದರಲ್ಲೇ.

ಅತ್ಯುದಾತ್ತ ಕಲಾಕೃತಿಯು ಬುದ್ಧಿ–ಭಾವನೆಗಳೆರಡನ್ನೂ ತಣಿಸುತ್ತದೆ. ಈ ಬೌದ್ಧಿಕ ಆನಂದವೇ ಮನುಷ್ಯ ಸಾಧಿಸಬಲ್ಲ ಅತ್ಯುನ್ನತ ರಸಸ್ಥಿತಿ. ಆದುದರಿಂದ ಕಲಾಕೃತಿಯು ರೂಪ ಸಾಮಂಜ್ಯಸವನ್ನು, ಅದಕ್ಕೂ ಹೆಚ್ಚಾಗಿ, ಅಂಗಾಗಿಗಳ ಐಕ್ಯವನ್ನು ಗುರಿಯಾಗಿಟ್ಟು ಕೊಳ್ಳಬೇಕು. ಈ ಐಕ್ಯವು ರಚನೆಯ ಬೆನ್ನೆಲುಬೂ, ರೂಪ ಅಥವಾ ಆಕೃತಿಯ ಕೇಂದ್ರಬಿಂದುವೂ ಆಗಿದೆ. ಉದಾಹರಣೆಗಾಗಿ ಒಂದು ನಾಟಕ. ನಾಟಕದಲ್ಲಿ ಕಾರ್ಯಾಂಗಗಳ ಐಕ್ಯವಿರಬೇಕು. ಗೊಂದಲ ಹುಟ್ಟಿಸುವ ಉಪಕಥೆಗಳಲ್ಲಿರಬಹುದು. ಆದರೆ ಕಲೆಯ ಮಹಾ ಕರ್ತವ್ಯವೆಂದರೆ ಹೃದಯಶುದ್ಧೀಕರಣ ಅಥವಾ ಹೃತ್ಕಲ್ಮಷ ವಿರೇಚನ. ಸಾಮಾಜಿಕ ಒತ್ತಾಯಗಳ ದೆಸೆಯಿಂದ ನಮ್ಮಲ್ಲಿ ಹತ್ತಿಕ್ಕಲ್ಪಟ್ಟ ಭಾವನೆಗಳು ಸಮಾಜಹಾನಿಕರವಾದ ಸ್ವರೂಪದಲ್ಲಿ ಹೊರಬೀಳುವುದು ತಪ್ಪಿ ರಂಗದೃಶ್ಯದ ಸಂಪರ್ಕದಿಂದ ಅನಪಾಯಕರ ರೂಪದಲ್ಲಿ ಹೊರಬಿದ್ದು ಹೋಗುತ್ತವೆ. ಹೀಗೆ ಆವಿದ್ಧ ಅಥವಾ ದುರಂತ ನಾಟಕವು ಕರುಣ–ಭಯ ಸಂವೇದನೆಗಳನ್ನು ರಸಿಕರಲ್ಲಿ ಉಂಟುಮಾಡಿ, ಆ ಮೂಲಕ ಉಕ್ತ ಭಾವನೆಗಳನ್ನು ವಿರೇಚಿಸಿ ಅವರ ಹೃದಯವನ್ನು ನಿರ್ಮಲಿಸುತ್ತದೆ.

ಸಂಘಟಿತ ಜನತೆ ಕಟ್ಟಿದ ಸಮೃದ್ಧ ರಾಜ್ಯದಲ್ಲಿ ಉತ್ತಮ ಕಲೆಗಾರಿಕೆಯ ಪ್ರವೃತ್ತಿ ಹಾಗೂ ಪ್ರೋತ್ಸಾಹಗಳನ್ನು ಕಾಣಲಾದೀತಲ್ಲದೆ, ನಿತ್ಯವೂ ಕೂಳಿಗಾಗಿ ಕಚ್ಚಾಡುವ ರಾಜ್ಯದಲ್ಲಿ ಕಲೆಯಿದ್ದೀತೇ? ಸಂಸ್ಕೃತಿ ಇದ್ದೀತೇ? ಇದ್ದರೆ ಅವುಗಳ ಆಭಾಸ–ಆಡಂಬರಗಳು ಮಾತ್ರ!

ಜನಸಂಘಟನೆ ಫಲಪ್ರದವಾಗಬೇಕಾದರೆ ಶೀಲವಂತಿಕೆ ಅಗತ್ಯ ಎನ್ನುತ್ತಾನೆ ಅರಿಸ್ಟಾಟಲ್. ಅವನ ಪ್ರಕಾರ ಒಳಿತಿಗಾಗಿ ಒಳಿತೆಂಬುದು ಜೀವನದ ಧ್ಯೇಯವಲ್ಲ; ಸುಖವೇ ಜೀವನದ ಗುರಿ. ಗೌರವ, ತೃಪ್ತಿ, ಬುದ್ಧಿವಿಕಾಸ ಮುಂತಾದವುಗಳೆಲ್ಲ ಸುಖಸಾಧನಗಳು. ಮನುಷ್ಯನು ಪ್ರಾಣಿಗಳಿಂದ ಭಿನ್ನನಾಗಿರುವುದರಿಂದ, ಅವುಗಳ ಸುಖಕಲ್ಪನೆಯಿಂದ ಇವನ ಸುಖಕಲ್ಪನೆ

ಭಿನ್ನ. ಮನುಷ್ಯನ ವಿಶಿಷ್ಟಗುಣವೆಂದರೆ ವಿಚಾರವಂತಿಕೆ. ಅದರ ಬಲದಿಂದಲೇ ಆತ ಮಿಕ್ಕೆಲ್ಲಾ ಸೃಷ್ಟಿರೂಪಗಳನ್ನು ಆಳುತ್ತಾನೆ. ಅದೇ ಮೇರೆಗೆ ಅದರ ಬೆಳವಣಿಗೆಯೇ ಜೀವನ ಸಾರ್ಥಕ್ಯವನ್ನೂ ನಿಜಸುಖವನ್ನೂ ಕೊಡಬಲ್ಲುದು.

ಅನಿವಾರ್ಯ ದೈಹಿಕ ಆವಶ್ಯಕತೆಗಳನ್ನುಳಿದರೆ ಸುಖದ ಅಸಾಧಾರಣ ಸಾಧನವಾಗಬಲ್ಲುದು ವಿಚಾರಮಯ ಬಾಳೇ. ಸ್ಫುಟ ವಿಚಾರದಿಂದ ಬರುವ ನಿರ್ಣಯವೇ ಸೌಜನ್ಯದ ಆಧಾರ. ಮಿಕ್ಕ ಆಧಾರಗಳೆಂದರೆ ಆತ್ಮಸಂಯಮ, ಆಶಾಸಮಪಾರ್ಶ್ವತೆ, ಸಾಧನಗಳ ಕಲೆಗಾರಿಕೆ. ಸದ್ಗುಣವೆಂಬುದು ಕೇವಲ ಸರಳ ಸ್ವಭಾವದಲ್ಲಿಲ್ಲ, ನಿಷ್ಪಾಪ ಬಯಕೆಯು ಕೊಡುವ ವರವಲ್ಲ; ಪೂರ್ಣ ಬೆಳೆದ ಮನುಷ್ಯನ ಅನುಭವವು ಸಾಧಿಸಬೇಕಾದ ವಸ್ತುವದು. ಅಂಥ ಸದ್ಗುಣದ ಸಿದ್ಧಿಗೆ ಇರುವ ದಾರಿಯೆಂದರೆ ಅತಿರೇಕಗಳಿಲ್ಲದೆ ಮಧ್ಯಮಾರ್ಗ ಹಿಡಿದು ಬಾಳುವುದು. ಮನುಷ್ಯನ ಶೀಲ ಅಥವಾ ಚಾರಿತ್ರದ ಆದಿ–ಅಂತಗಳಲ್ಲಿರುವ ಗುಣಗಳು ಅತಿರೇಕಪರ, ಕೆಡುಕು; ನಡುವೆ ಇರುವ ಗುಣವೇ ಸದ್ಗುಣ. ಧೈರ್ಯವು ಹೇಡಿತನಕ್ಕೂ ಅವಿವೇಕದ ಹುಂಬ ಪ್ರವೃತ್ತಿಗೂ ನಡುವೆ ಇರುವ ಗುಣ. ದುಂದಿನ ಪ್ರವೃತ್ತಿಗೂ ಕಂಜೂಷಿತನಕ್ಕೂ ನಡುವೆ ಇರುವುದು ಔದಾರ್ಯ. ಮೈಗಳ್ಳತನಕ್ಕೂ ದುರಾಶೆಗೂ ನಡುವಿನದು. ಮಹತ್ವಾಕಾಂಕ್ಷೆ. ದೈನ್ಯಗುಣಕ್ಕೂ ಜಂಭಕ್ಕೂ ಮಧ್ಯದಲ್ಲಿ ವಿನಯವಿದೆ. ಗುಟ್ಟಿನ ಪ್ರವೃತ್ತಿಗೂ ಬಾಯಿಹರಿಕತನಕ್ಕೂ ನಡುವೆ ಪ್ರಾಮಾಣಿಕತೆ ಇದೆ. ಬೇಸರದ ಮುದ್ರೆಗೂ ಹುಚ್ಚು ಹನುಮನಾಯಕತೆಗೂ ಮಧ್ಯ ಒಳ್ಳೆಯ ಹಾಸ್ಯಪ್ರವೃತ್ತಿ ನಿಂತಿದೆ. ಜಗಳಗಂಟುತನಕ್ಕೂ ಮುಖಸ್ತುತಿ ಪರಾಯಣತೆಗೂ ಮಧ್ಯವರ್ತಿಯಾಗಿದೆ ಸ್ನೇಹ. ಹ್ಯಾಮ್ಲೆಟ್ಟನ ಸಂಶಯಾತ್ಮಿಕೆಗೂ ಡಾನ್ ಕ್ವಿಗ್ಸೋಟನ (ಕಂಡದ್ದನ್ನು ಕಂಡಕೂಡಲೇ ಮಾಡುವ) ಪ್ರವೃತ್ತಿಗೂ ಮಧ್ಯಸ್ಥಲವಾದುದು ಆತ್ಮಸಂಯಮ. ಆದುದರಿಂದ 'ಸರಿ' ಎಂಬುದು ನೀತಿಶಾಸ್ತ್ರದಲ್ಲೂ ಒಂದೇ, ಗಣಿತಶಾಸ್ತ್ರ ಅಥವಾ ಶಿಲ್ಪಶಾಸ್ತ್ರದಲ್ಲೂ ಒಂದೇ. ಸರಿಯಾದುದು ಎಂದರೆ ಯುಕ್ತ, ಯಥಾವತ್, ಸಮರ್ಥ–ಅತ್ಯುತ್ತಮ ಫಲ ದೊರಕಿಸಬಲ್ಲುದು ಎಂಬರ್ಥ.

ಆದರೆ ಈ ಔಚಿತ್ಯಸೂತ್ರವು ಗಣಿತಗ್ರಾಹ್ಯವಾದ ಇತ್ತುದಿಗಳ ಸರಾಸರಿ ಲಬ್ಧವಲ್ಲ. ಅದು ಭಿನ್ನ ಸನ್ನಿವೇಶಗಳ ಭಿನ್ನ ಉಪಾಧಿ–ಆವಾರಗಳ ದೆಸೆಯಿಂದ ಹೆಚ್ಚು ಕಡಿಮೆಯಾಗುತ್ತದೆ. ಪರಿಪಕ್ವವಾದ, ತಿದ್ದಿಕೊಂಬ ಗುಣವುಳ್ಳ, ಮೃದು ವಿಚಾರವಂತಿಕೆಗೆ ಮಾತ್ರ ನಿಜವಾದ ಯುಕ್ತಬುದ್ಧಿ ಲಭ್ಯ; ಸೌಜನ್ಯ, ಸದ್ಗುಣ, ತರಬೇತು ಅಭ್ಯಾಸಗಳಿಂದ ಸಾಧಿಸಿಕೊಳ್ಳಬೇಕಾದ ಕಲೆಯದು. ನಮ್ಮಲ್ಲಿ ಸದ್ಗುಣವಿರುವುದರಿಂದ ನಾವು ನ್ಯಾಯವಾಗಿ ನಡೆದುಕೊಳ್ಳುತ್ತಿದ್ದೇವೆ ಎಂಬುದಲ್ಲ; ನಾವು ಸರಿಯಾಗಿ ನಡೆದುಕೊಳ್ಳುತ್ತಿರುವುದರಿಂದ ನಮ್ಮನ್ನು ಸದ್ಗುಣಿಗಳೆನ್ನುತ್ತಾರೆ ಎನ್ನಬೇಕು. ಎಲ್ಲ ಸದ್ಗುಣಗಳೂ ಮಾನವನಿಗೆ ಸ್ವವರ್ತನಾಲಭ್ಯ. ನಾವು ಪದೇ ಪದೇ ಏನು ಮಾಡುತ್ತೇವೋ ಅದೇ ನಾವು. ಸದ್ಗುಣವು ಕಾರ್ಯವಲ್ಲ, ಒಂದು ಅಭ್ಯಾಸ, ಮನುಷ್ಯನು ಸಾಧಿಸುವ ಒಳಿತೆಂಬುದು ಅವನು ನಡೆಸಿದ ಪೂರ್ಣ ಜೀವನದಲ್ಲಿ ಅವನ ಆತ್ಮ ಮಾಡಿದ ದುಡಿತ. ಅಂಥ ಒಳ್ಳೆಯ ಬಿಡಿಗೆಲಸಗಳ ಮೊತ್ತದಿಂದಲ್ಲದೆ ಒಂದೇ ಒಂದು ಸಲ ಅಕಸ್ಮಾತ್ತಾಗಿ ಒಬ್ಬ ಒಂದು ಒಳ್ಳೆಯ ಕೆಲಸ ಮಾಡಿದ್ದರಿಂದ ಇಡೀ ಬಾಳಿನೊಳಿತು ಎಂದೂ ಸಿದ್ಧಿಸದು. ಅಂಥ ಒಳಿತಿನಿಂದಲೇ ಅವನಿಗೆ ನಿಜಸುಖ.

ಹರೆಯವು ಅತಿರೇಕಗಳ ಕಾಲ. ತರುಣ–ತರುಣಿಯರು ತಪ್ಪು ಮಾಡಿದರೆ ಅದು ವಯಸ್ಕರ ತಪ್ಪಿಗಿಂತ ಹೆಚ್ಚು ಅತಿರೇಕವೂ ಅತಿಶಯವೂ ಆಗಿರುತ್ತದೆ. ಎಲ್ಲರೂ ಪ್ರಯತ್ನಿಸಬೇಕಾದ ಅಂಶವೆಂದರೆ ಒಂದು ಅತಿರೇಕದಿಂದ ತದ್ವಿರುದ್ಧವಾದ ಇನ್ನೊಂದಕ್ಕೆ ಬೀಳದಂತೆ ತಪ್ಪಿಸಿಕೊಳ್ಳುವುದು. ಇದು ಕಠಿನವಾದುದರಿಂದ ಅನೇಕ ಕಡೆ ಅಪ್ರಾಮಾಣಿಕರು ಅತಿಶಯವಾಗಿ ಪ್ರತಿಭಟನೆ ಹಿಡಿಯುತ್ತಾರೆ; ದೀನಭಾವವು ಅಥವಾ ನಮ್ರತೆಯು ವಂಚನೆಯ ಅಗಳಿನೆಡೆ ಸುಳಿಯುತ್ತಿರುತ್ತದೆ. ಬುದ್ಧಿಪೂರ್ವಕವಾಗಿ ಒಂದು ತುದಿಯಲ್ಲಿರುವವರು ತದ್ವಿರುದ್ಧವಾದ ಮತ್ತೊಂದು ತುದಿಯನ್ನು ಸದ್ಗುಣವೆನ್ನುತ್ತಾರಲ್ಲದೆ ಮಧ್ಯವೃತ್ತಿಯನ್ನಲ್ಲ. ಕೆಲವೆಡೆ ಇದು ಸರಿಯಾದುದು. ಏಕೆಂದರೆ ನಮಗೆ ಒತ್ತುದಿಯಲ್ಲಿ ತಪ್ಪುವುದೆಂದು ತಿಳಿದಾಗ ಮತ್ತೊಂದು ತುದಿಯಲ್ಲಿ ನಿಲ್ಲಲು ಗುರಿಹೂಡುವುದು ನಮಗೆ ಅಗತ್ಯ. ಹಾಗೆ ಮಾಡಿದಾಗ ನಾವು ಮಧ್ಯಪದವನ್ನು ಮುಟ್ಟಿಯೇವು. ಆದರೆ ತಾವು ಅತಿರೇಕಿಗಳಿದ್ದರೂ ಅತಿರೇಕಿಗಳೆಂಬ ಜ್ಞಾನವಿಲ್ಲದವರು ಮಧ್ಯಮಾರ್ಗವನ್ನು ದೊಡ್ಡ ದೌರ್ಜನ್ಯವೆಂದು ಹಳಿಯುತ್ತಾರೆ. ಅವರು ಮಧ್ಯಮನನ್ನು ಪರಸ್ಪರರತ್ತ ಒತ್ತುತ್ತಾರೆ. ಹೇಡಿಯು ಶೂರನನ್ನು ಅವಿವೇಕವುಳ್ಳ ಹುಂಬನೆಂದು ಕರೆಯುತ್ತಾನೆ; ಹುಂಬನು ಶೂರನನ್ನು ಹೇಡಿ ಎನ್ನುತ್ತಾನೆ. ಆದುದರಿಂದಲೇ ಇಂದಿನ ರಾಜಕೀಯದಲ್ಲಿ "ಲಿಬರಲ್" ಪಂಥದವರನ್ನು "ರ್‍ಯಾಡಿಕಲ್ಲರು" "ಕನ್ಸರ್ವೇಟಿವ"ರೆಂದೂ, "ಕನ್ಸರ್ವೇಟಿವರು" "ರ್‍ಯಾಡಿಕಲ್ಲ"ರೆಂದೂ ದೂರುತ್ತಾರೆ. ಅದರಿಂದಲೇ ಅತಿ ಸನಾತನಿಗಳ ದೃಷ್ಟಿಯಲ್ಲಿ ಇಂದಿನ ನಾಗರಿಕ ಆಚಾರಹೀನ; ಅತಿ ನಾವೀನ್ಯವ್ಯಾಧರ ದೃಷ್ಟಿಯಲ್ಲಿ ಅವನು ಅಂಧಾಚಾರಪರ ಸನಾತನಿ!

ಈ ಮಧ್ಯಸ್ಥಿತಿಯ ತತ್ವವು ಗ್ರೀಸಿನ ಪ್ರತಿಯೊಂದು ತತ್ವಪ್ರಸ್ಥಾನದಲ್ಲೂ ಸಾಧಾರಣವಾಗಿ ಕಂಡು ಬರುತ್ತದೆ ಎಂದು ಹೇಳಬಹುದು. ಸದಾಚಾರವನ್ನು ಸಮನ್ವಿತ ಕಾರ್ಯವೆಂದ ಪ್ಲೇಟೋ ಹಾಗೂ ಸದಾಚಾರ ಅಥವಾ ಸದ್ಗುಣವನ್ನು ಜ್ಞಾನವೆಂದ ಅವನ ಗುರು ಸಾಕ್ರೆಟೀಸ ಇವರು ಉಕ್ತ ದೃಷ್ಟಿಯನ್ನೇ ಇಟ್ಟುಕೊಂಡಿದ್ದರು. ಕಾಮ–ಕ್ರೋಧಾದಿಗಳು ಸ್ವತಃ ದುಷ್ಟವಲ್ಲ; ಅವು ಒಳಿತು ಕೇಡುಗಳೆರಡರ ಕಚ್ಚಾ ಸಾಮಗ್ರಿ; ಅವು ಅತಿರಿಕ್ತವಾದಾಗ, ವಿಷಮ ಪ್ರಮಾಣದಲ್ಲಿದ್ದಾಗ ಕೇಡೂ, ಸಮರಸವಾಗಿ ಸಮಪ್ರಮಾಣದಲ್ಲಿದ್ದಾಗ ಒಳಿತೂ ಉಂಟಾಗುವುವು–ಎಂಬುದು ಗ್ರೀಕ್ ಭಾವನೆ.

ಬರಿ ಮಧ್ಯಸ್ಥಿತಿಯೊಂದಿದ್ದರೆ ಸಾಲದು; ತಕ್ಕಮಟ್ಟಿಗೆ ಪ್ರಾಪಂಚಿಕ ಸಾಮಗ್ರಿಗಳೂ ಸದಾತ್ಮನಿಗೆ ಅಗತ್ಯ ಎನ್ನುತ್ತಾನೆ ಆಚಾರ್ಯ ಅರಿಸ್ಟಾಟಲ್. ಬಡತನವು ಕಂಜೂಷಿತನವನ್ನೂ ಚಾಪಲ್ಯವನ್ನೂ ಕಲಿಸುತ್ತದೆ. ಊಟ ಸಿಕ್ಕಿದ್ದರೆ ಈ ಅತಿಚಾಪಲ್ಯ ಹಾಗೂ ದುರಾಶೆಗಳು ನಮ್ಮಿಂದ ದೂರವಿರುತ್ತವೆ. ಆಗ ಮಾತ್ರ ಬಾಳಿನಲ್ಲಿ ಸೊಗಸಿರಲು ಶಕ್ಯ. ಸುಖಕ್ಕೆ ಬೇಕಾದ ಹೊರಗಿನ ಸಾಧನಗಳಲ್ಲಿ ಅತ್ಯುತ್ತಮವಾದುದು ಸ್ನೇಹ. ಸ್ನೇಹವು ದುಃಖಿಗಳಿಗಿಂತ ಸುಖಿಗಳಿಗೆ ಹೆಚ್ಚು ಅಗತ್ಯ. ಸಹಕರಿಸಿ ಅನುಭವಿಸುವುದರಿಂದ ಸುಖವು ಇಮ್ಮಡಿ ಮುಮ್ಮಡಿಯಾಗುವುದು. ಅದು ನ್ಯಾಯಕ್ಕಿಂತಲೂ ಬಾಳಿಗೆ ಹೆಚ್ಚು ಆವಶ್ಯಕ. ಜನರೆಲ್ಲಾ ಸ್ನೇಹಿತರಾದಾಗ ಯಾರಿಗಾದರೂ ನ್ಯಾಯದ ಹಂಗೇಕೆ? ಜನರೆಲ್ಲಾ ನ್ಯಾಯಸ್ಥರಾದಾಗಲೂ ಸ್ನೇಹವೊಂದು ವರ. ಸ್ನೇಹಿತನೆಂದರೆ

ಎರಡು ಶರೀರಗಳಲ್ಲಿರುವ ಒಂದೇ ಆತ್ಮ. ಆದರೂ ಸ್ನೇಹವೆಂದ ಕೂಡಲೇ ಬಹಳ ಜನರದಲ್ಲ, ಸ್ವಲ್ಪ ಜನರದು ಎಂಬ ಧ್ವನಿಯೇಳುತ್ತದೆ. ಎಲ್ಲರಿಗೂ ಪೂರ್ಣ ಸ್ನೆಹಿತನಾಗಿರುವುದು ಅಸಾಧ್ಯ. ಒಳ್ಳೆಯ ಸ್ನೇಹದಲ್ಲಿ ಕ್ಷಣಿಕ ಆವೇಶದ ಆಳವಿಲ್ಲ, ಚಿರಸ್ಥಾಯಿತ್ವವಿರುತ್ತದೆ. ಇದಕ್ಕೆ ಚಾರಿತ್ರದ ಸ್ತಿಮಿತತೆ ಅವಶ್ಯ. ಸ್ನೇಹ ಅಳಿಯಲು ಚಾರಿತ್ರಪರಿವರ್ತನವೇ ಕಾರಣ. ಸ್ನೇಹಕ್ಕೆ ಸಮಾನತೆ ಅವಶ್ಯಕ. ಕೃತಜ್ಞತೆಯು ಅದಕ್ಕೆ ಅಷ್ಟು ಗಟ್ಟಿಯಾದ ನೆಲಗಟ್ಟೆನಿಸದು. ದಾನ ಕೊಟ್ಟವರಿಗೆ ತೆಗೆದುಕೊಂಡವರ ಮೇಲಿರುವ ಸ್ನೇಹವು ಇವರಿಗೆ ಅವರಲ್ಲಿರುವುದಕ್ಕಿಂತ ಅಧಿಕ. ಒಬ್ಬರು ದಾತಾರರು ಒನ್ನೊಬ್ಬರು ಋಣಿಗಳು ಎಂಬುದಿಷ್ಟೇ ಸಾಮಾನ್ಯರ ಸಮಾಧಾನ. ಋಣಿಗಳು ದಾತಾರರು ತಮ್ಮಿಂದ ದೂರ ಹೋಗಬೇಕೆಂದೂ ತಮ್ಮ ಕಾಲ್ತೊಡಕಾಗಿರ ಬಾರದೆಂದೂ ಬಯಸಿದರೆ, ದಾತಾರರು ತಮ್ಮ ಋಣಿಗಳನ್ನು ಉಳಿಸುವುದರಲ್ಲೇ ಆಸಕ್ತರಾಗಿರುತ್ತಾರೆ. ಈ ಅಭಿಪ್ರಾಯ ಅರಿಸ್ಟಾಟಲನಿಗೊಪ್ಪದು. ಅವನ ಪ್ರಕಾರ ದಾತಾರ ಋಣಿಯನ್ನು ಪ್ರೀತಿಸುವುದು ತಾಯಿ ಮಗುವನ್ನು ಪ್ರೀತಿಸಿದ ಹಾಗೆ, ಕಲೆಗಾರ ತನ್ನ ಕಲಾಕೃತಿಯನ್ನು ಪ್ರೀತಿಸಿದ ಹಾಗೆ.

ಸುಖಕ್ಕೆ ಹೊರಗಿನ ಸಾಧನಗಳು ಎಷ್ಟೇ ಅಗತ್ಯವಿದ್ದರೂ ಅದರ ಸಾರವು ನಮ್ಮ ಒಳಗೇ ಇರತಕ್ಕದ್ದು. ಅದರ ಲಕ್ಷಣವೆಂದರೆ ಸುವ್ಯವಸ್ಥಿತವಾದ ಜ್ಞಾನವಂತಿಕೆ ಹಾಗೂ ಆತ್ಮನೈರ್ಮಲ್ಯ ಇರುವುದು. ಇಂದ್ರಿಯ ಭೋಗವಂತೂ ಅದಕ್ಕೆ ಹಾದಿಯಲ್ಲ; ಅದರ ದಾರಿ ವೃತ್ತಾಕಾರವಾಗಿದೆ– ತುರಿಯಿಂದ ತುರಿಕೆ, ತುರಿಕೆಯಿಂದ ತುರಿ– ಎಂಬಂತೆ, ರಾಜಕೀಯ ವ್ಯವಹಾರವೂ ಅಂಥ ಸುಖದ ಮಾರ್ಗವಲ್ಲ; ಅಲ್ಲಿ ನಾವು ಜನರ ತಾಳಕ್ಕೆ ತಕ್ಕಂತೆ ಕುಣಿಯಬೇಕಾಗುವುದು. ಗುಂಪಿನಷ್ಟು ಚಂಚಲ ಮನಸ್ಕವಾದುದಿನ್ನೊಂದಿಲ್ಲ. ಯಾವ ಸುಖವೂ ಮಾನಸತೃಪ್ತಿಯ ರೂಪದ್ದಾಗಬಾರದು. ಸತ್ಯಾನ್ವೇಷಣೆಯಿಂದಷ್ಟೇ ನಿಜಸುಖವು ಲಭ್ಯ. ಪ್ರಜ್ಞೆಗೆ ತಾನೇ ಗುರಿ. ಅದರ ಕಾರ್ಯದಿಂದ ಬರುವ ಆನಂದವೇ ಅದನ್ನು ಮುಂದಿನ ಕಾರ್ಯದಲ್ಲಿ ತೊಡಗಿಸುತ್ತದೆ. ಸ್ವಾವಲಂಬನ, ಅಶ್ರಮ, ವಿರಾಮಾನುಭವ ಶಕ್ತಿಗಳು ಈ ಉದ್ಯೋಗಕ್ಕಷ್ಟೇ ಸೇರಿದವಾದ್ದರಿಂದ ಪೂರ್ಣ ಸುಖವು ಪ್ರಜ್ಞೆಯಲ್ಲೇ ಇದೆ.

## ೬

ಅತ್ಯಂತ ಮೇಲ್ಮಟ್ಟದ ನೀತಿಯನ್ನು ಪ್ರತಿಪಾದಿಸಿದ ಅರಿಸ್ಟಾಟಲಾಚಾರ್ಯನು ಅದೇ ಮೇರೆಗೆ ಒಂದು ಉನ್ನತ ಮಟ್ಟದ ರಾಜನೀತಿಶಾಸ್ತ್ರವನ್ನೂ ರೂಪಿಸಿದನು. ಸರಿಯಾದ ಶಾಸ್ತ್ರಜ್ಞನಂತೆ ಅವನು ತನ್ನ ದೇಶದಲ್ಲಿ ಸುವ್ಯವಸ್ಥೆ, ಸುರಕ್ಷಿತತೆ ಮತ್ತು ಶಾಂತಿ ಇರಬೇಕೆಂದು ಬಯಸಿದನು. ಅವನ ಪ್ರಕಾರ ಕಾಯದೆಗಳನ್ನು ಸುಖವಾಗಿ ಬದಲಾಯಿಸುತ್ತ ಹೋಗುವುದು ಕೆಟ್ಟದ್ದು. ಬದಲಾವಣೆಯಿಂದಾಗುವ ಲಾಭ ಅಲ್ಪವಿದ್ದಾಗ ಕಾಯದೆಯಲ್ಲಿ ಅಥವಾ ಶಾಸಕರಲ್ಲಿ ಕಂಡು ಬಂದ ಚಿಲ್ಲರೆ ದೋಷಗಳನ್ನು ಗಣಿಸದಿರುವುದೇ ಮೇಲು. ಅಂಥ ಸಂದರ್ಭದಲ್ಲಿ ಬದಲಾವಣೆಯಿಂದ ಒದಗುವ ಲಾಭಕ್ಕಿಂತ ಪ್ರಜೆಗೆ ತಗಲುವ ಶಾಸನ ಭಂಗದ

ದುರಭ್ಯಾಸದಿಂದಾಗುವ ನಷ್ಟವೇ ಹೆಚ್ಚು. ವಿಧೇಯತೆಯನ್ನು ಸಾಧಿಸಬಲ್ಲ ಕಾಯದೆಯ ಶಕ್ತಿಯೂ ಆ ಮೂಲಕ ಉಳಿಸಿಕೊಳ್ಳಲಾಗುವ ರಾಜಕೀಯ ಸ್ತಿಮಿತತೆಯೂ ಬಹುಮಟ್ಟಿಗೆ ರೂಢಿ ಪರಂಪರೆಗಳನ್ನೇ ಅವಲಂಬಿಸಿವೆ. ಹಳೆಯ ಕಾಯದೆಯನ್ನು ಬಿಟ್ಟು ಹೊಸ ಕಾಯದೆಯತ್ತ ಸುಲಭವಾಗಿ ನಿಷ್ಕಾಳಜಿಯಿಂದ ಸಾಗುವುದರಿಂದ ಎಲ್ಲ ಕಾಯದೆಗಳ ತಿರುಳನ್ನೂ ದುರ್ಬಲಗೊಳಿಸಿ ದಂತಾಗುತ್ತದೆ. ಸಾವಿರಾರು ವರ್ಷಗಳಿಂದ ಬಂದ ಅನುಭವವೊಂದನ್ನು ಒಮ್ಮೆಲೇ ಅಲ್ಲಗಳೆಯಬಾರದು ಎಂಬ ಎಚ್ಚರಿಕೆಯನ್ನಿತ್ತನು ಅರಿಸ್ಟಾಟಲ್.

ತನ್ನ ಗುರುವರ್ಯನಾದ ಪ್ಲೇಟೋವಿನ "ಸಮಾಜವಾದೀ ಪ್ರಜಾರಾಜ್ಯ"ದ ಸೂತ್ರಗಳಲ್ಲಿ ಹಲವು ಲೋಪದೋಷಗಳನ್ನು ಅರಿಸ್ಟಾಟಲ್ ಕಂಡ. ಪ್ಲೇಟೋ ಹೇಳಿದ ರಕ್ಷಕ ತತ್ವಜ್ಞಾನಿಗಳ ಅರ್ಥಾತ್ ಪುರುಷೋತ್ತಮ ಶಾಸಕರ ಇಟ್ಟಿಗೆ ಕೋಣೆಗಳಂತಹ ಸಂಪರ್ಕಸಾತತ್ಯವನ್ನು ಅವನು ಮೆಚ್ಚದಾದ. ಸಂಕುಚಿತ ಮಡಿವಂತಿಕೆಯವನಾದರೂ ಅವನು ವ್ಯಕ್ತಿಗುಣ, ವ್ಯಕ್ತಿಯ ಖಾಸಗಿ ಬಾಳು ಮತ್ತು ಸ್ವಾತಂತ್ರ್ಯಗಳನ್ನು ಪುರಸ್ಕರಿಸುತ್ತಿದ್ದನು. ಎಲ್ಲಕ್ಕೂ ಹೆಚ್ಚಾಗಿ ಅವನು ಹೇಳಿದ್ದು ಸಾಮಾಜಿಕ ದಕ್ಷತೆ ಹಾಗೂ ಶಕ್ತಿಗಳನ್ನು ಹೆಂಗಸರು ಮತ್ತು ಮಕ್ಕಳುಮರಿಗಳೆಲ್ಲರನ್ನೂ ಸಾಮಾಜಿಕರೆಂದು ಕಾಣಬೇಕೆಂಬ ದೃಷ್ಟಿಯಿಂದ ಖಾಸಗಿಯ ಬಾಂಧವ್ಯ–ಸೌಹಾರ್ದಗಳು ಸಮುದ್ರದಲ್ಲಿ ಇಂಗು ಕರಡಿದಂತೆ ಅರ್ಥಹೀನವಾಗುವುವೆಂದು ಅವನ ಮತ. ಪ್ಲೇಟೋವಿನ ರಾಜ್ಯ ಕಲ್ಪನೆಯಲ್ಲಿ ಮಮಕಾರಕ್ಕೆ, ಸ್ವಂತ ವಸ್ತುವಿಗೆ ಬೆಲೆಯಿಲ್ಲದುದು ಅವನಿಗೆ ಸೇರಲಿಲ್ಲ. ಹೆಚ್ಚು ಛಿನ್ನ ವಿಚ್ಛಿನ್ನವಾದ ಸಮಾಜದಲ್ಲಿ ಶ್ರಮವಿಭಾಗವು ವಿಷಮ ಪ್ರಾಮುಖ್ಯವನ್ನು ಹೊಂದಿರುವುದರಿಂದ ಮಾನವನ ಸ್ವಾಭಾವಿಕ ತಾರತಮ್ಯ ಇನ್ನಷ್ಟು ಅಗಲವಾಗುತ್ತ ಹೋಗುವುದು. ಅಂಥಲ್ಲಿ ಸಮಾಜವಾದವು ಹೆಚ್ಚಿನ ಪ್ರತಿಭಾವಂತರಿಗೆ ತಮ್ಮ ಪ್ರತಿಭೆಗೆ ತಕ್ಕ ಕಾರ್ಯವನ್ನು ಕೈಕೊಳ್ಳಲು ಅಗತ್ಯವಾದ ಪ್ರೋತ್ಸಾಹವನ್ನು ಕೊಡಲಾರದು. ಶ್ರಮಸಾಧ್ಯವಾದ ಕೆಲಸಕ್ಕೆ ವಿಶೇಷ ಪ್ರೋತ್ಸಾಹ ಅಗತ್ಯ. ಉದ್ಯೋಗ–ದಂಧೆಗಳು ಯೋಗ್ಯವಾಗಿ ಸಾಗಲು ಒಡೆಯತನದ ಪ್ರೇರಣೆ ಆವಶ್ಯಕ. ಎಲ್ಲರಿಗೂ ಎಲ್ಲವೂ ಸೇರಿದ್ದೆಂದಾಗ ಯಾರೂ ಯಾವುದನ್ನೂ ಲಕ್ಷಿಸರು. ಬಹುಸಂಖ್ಯರಿಗೆ ಸೇರಿದ ಯಾವುದರ ಬಗ್ಗೂ ಅತ್ಯಲ್ಪ ಲಕ್ಷ್ಯ ಹೋಗುವುದು ರೂಢಿ. ಪ್ರತಿಯೊಬ್ಬನೂ ತನ್ನದಷ್ಟನ್ನೇ ನೋಡುತ್ತಾನಲ್ಲದೆ ಸಾರ್ವಜನಿಕ ಹಿತವನ್ನು ಯಾರೂ ನೋಡರು. ಒಟ್ಟಿಗೆ ಬದುಕುವದರಲ್ಲಿ ಒಟ್ಟಿನ ಒಡೆಯತನದಲ್ಲಿ–ಅದರಲ್ಲೂ ಆಸ್ತಿಯ ಸಾಮೂಹಿಕ ಒಡೆಯತನದಲ್ಲಿ ಒಂದಲ್ಲಾ ಒಂದು ತೊಂದರೆಯಿದ್ದೇ ಇರುತ್ತದೆ. ಸಹ ಪ್ರಯಾಣಿಕರ ಪಾಲುಗಾರಿಕೆಗಳನ್ನು ಇಂಥ ಕಷ್ಟಕ್ಕೆ ಒಂದು ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು. ಏಕೆಂದರೆ ಸಾಮಾನ್ಯವಾಗಿ ಅವರು ಹಾದಿಯಲ್ಲೇ ತಿರುಗಿಬಿದ್ದು ಚಿಲ್ಲರೆ ಸಂಗತಿಗಳ ಬಗ್ಗೆ ಜಗಳವಾಡುವುದು ಸುಸ್ಪಷ್ಟ.

ಜನರು ಯಾವಾಗಲೂ ಬಹುಬೇಗ ರಾಮರಾಜ್ಯಗಳ ಕಥೆಗೆ ಕಿವಿಗೊಡುತ್ತಾರೆ; ಮತ್ತು ಸದ್ಯದ ಯಾವುದಾದರೊಂದು ದೋಷವನ್ನು ಯಾರಾದರೂ ಎತ್ತಿ ಹೇಳುವುದನ್ನು ಕೇಳುತ್ತಿದ್ದಾಗಂತೂ ಅವರು ಅಂಥ ಆದರ್ಶ ರಾಜ್ಯದಲ್ಲಿ ಅದ್ಭುತ ರೀತಿಯಿಂದ ಪ್ರತಿಯೊಬ್ಬನೂ ಇನ್ನೊಬ್ಬನ ಗೆಳೆಯನಾಗುತ್ತಾನೆ ಎಂದು ಭಾವಿಸಿಬಿಡುತ್ತಾರೆ. ಖಾಸಗಿ ಆಸ್ತಿಯೇ

ಸರ್ವದುಃಖಗಳಿಗೆ ಮೂಲ ಎಂಬುದನ್ನು ನಂಬಿಬಿಡುತ್ತಾರೆ. ಆದರೆ ಸದ್ಯದ ದೋಷಗಳೆಲ್ಲವಕ್ಕೂ ಖಾಸಗಿಯ ಆಸ್ತಿಯಲ್ಲ ಕಾರಣ – ಮಾನವ ಸ್ವಭಾವದಲ್ಲಿಯ ದೌರ್ಜನ್ಯ! ರಾಜನೀತಿಯು ಜನರನ್ನು ನಿರ್ಮಿಸುವುದಿಲ್ಲ; ಅದು ನಿಸರ್ಗ ಹಡೆದೆಸೆದ ಮನುಷ್ಯರನ್ನು ಹಾಗೇ ಎತ್ತಿಕೊಳ್ಳಬೇಕಾಗುತ್ತದೆ. ಮನುಷ್ಯರಲ್ಲಿ ಸಾಮಾನ್ಯರ ಸ್ವಭಾವವು ಪ್ರಾಣಿಗಳ ಸ್ವಭಾವಕ್ಕೇ ಹೆಚ್ಚು ಹತ್ತಿರವಾಗಿದೆಯಲ್ಲದೆ ದೇವತ್ವಕ್ಕಲ್ಲ. ಬಹುಸಂಖ್ಯರು ಯಾವಾಗಲೂ ಸ್ವಾಭಾವಿಕವಾಗಿ ಶುದ್ಧ ಶುಂಠಿಗಳು, ಸೋಮಾರಿಗಳು. ಯಾವ ರಾಜ್ಯ ಪದ್ಧತಿ ಬಂದರೂ ಅದರಲ್ಲಿ ಇವರು ನೆಲಮಟ್ಟಕ್ಕೂ ಕೆಳಗಿಳಿದು ಹೋಗುವರು. ಸರಕಾರವು ಅಂಥವರಿಗೆ ಸಹಾಯಧನವನ್ನಿತ್ತು ಸಲಹಹೋಗುವುದು ವಟ್ಟೆಮಡಕೆಗೆ ನೀರು ಸುರಿದಂತೆಯೇ ಸರಿ. ಅಂಥವರನ್ನು ರಾಜನೀತಿಯಿಂದ ಆಳಬೇಕು, ಉದ್ಯಮಗಳಲ್ಲಿ ಹೇಳಿದ ಹಾಗೆ ನಡೆದುಕೊಂಬಂತೆ ಮಾಡಬೇಕು. ಹಾಗೆ ಮಾಡುವ ಸಮಯದಲ್ಲಿ ಅವರ ಒಪ್ಪಿಗೆ ಸಿಕ್ಕಿದರೆ ಒಳ್ಳೆಯದು– ಸಿಗದಿದ್ದಲ್ಲಿ ಯಾವ ಚಿಂತೆಯೂ ಇಲ್ಲ. ಅವಶ್ಯಕತೆ ಹೇಗೆ ಬರುತ್ತದೋ ಹಾಗೆ ಅವರನ್ನು ನಡೆಸಿಕೊಳ್ಳಬೇಕು. ಅವರಲ್ಲಿ ಕೆಲವರು ಹುಟ್ಟಿದಾಗಲೇ ದಾಸ್ಯಕ್ಕೆ ಅರ್ಹರೆಂಬ ಗೆರೆಯನ್ನು ಪಡೆದಿರುತ್ತಾರೆ; ಮತ್ತೆ ಕೆಲವರು ಆಳಲಿಕ್ಕೇ ಹುಟ್ಟಿದವರು. ಮುನ್ನೋಟವುಳ್ಳವನು ಯಾವಾಗಲೂ ಯಜಮಾನನಾಗಲು ಅರ್ಹ. ಕೇವಲ ಮಾಡುವವನು ಸ್ವಭಾವತಃ ಗುಲಾಮ. ಮನಸ್ಸಿಗೆ ದೇಹವು ಹೇಗೋ ಯಜಮಾನನಿಗೆ ಗುಲಾಮ ಹಾಗೆ. ಎಲ್ಲ ನೀಚರೂ ಒಬ್ಬ ಉಚ್ಚನ ಯಾಜಮಾನ್ಯಕ್ಕೊಳಗಾಗುವುದು ಶ್ರೇಯಸ್ಕರ. ದಾಸನು ಜೀವವಿರುವ ಒಂದು ಯಂತ್ರೋಪಕರಣ; ಯಂತ್ರೋಪಕರಣಕ್ಕೆ ಜೀವವಿಲ್ಲ– ಇಷ್ಟೇ ವ್ಯತ್ಯಾಸ. ಪ್ರತಿಯೊಂದು ಉಪಕರಣವೂ ತನ್ನ ತನ್ನ ಕೆಲಸವನ್ನು ಮಾಡಬಲ್ಲುದಾದರೆ– ಹಾಗೆ ಮಾಡುವಾಗ ಮಿಕ್ಕವರ ಇಚ್ಛೆಯನ್ನು ನಿರೀಕ್ಷಿಸಬಲ್ಲುದಾದರೆ ಅಥವಾ ಅನುಸರಿಸಬಲ್ಲುದಾದರೆ ಆಗ ಮಗ್ಗ ತನ್ನಷ್ಟಕ್ಕೇ ನೂಲು ತೆಗೆದೀತು, ಕಮಾನು ತನ್ನಷ್ಟಕ್ಕೇ ಪಿಟೀಲು ಬಾರಿಸೀತು; ಕೆಲಸಗಾರರಲ್ಲಿ ಮುಖ್ಯಸ್ಥರಿಗೆ ಸಹಾಯಕ ಕೆಲಸಗಾರರೂ ಬೇಡ, ಒಡೆಯರಿಗೆ ಗುಲಾಮರೂ ಬೇಡ!

## ೭

ಅರಿಸ್ಟಾಟಲನ ರಾಜನೀತಿಯ ಬುಡದಲ್ಲಿರುವ ತತ್ವವಿಚಾರವು ಅಂದಿನ ಗ್ರೀಕರ ದೇಹಶ್ರಮ ತಿರಸ್ಕಾರವನ್ನು ಚೆನ್ನಾಗಿ ವ್ಯಕ್ತಮಾಡುತ್ತದೆ. ಅಂದು ದೇಹಶ್ರಮದ ಕಾರ್ಯವು ಕೇವಲ ದೈಹಿಕವಾಗಿತ್ತು. ಅರಿಸ್ಟಾಟಲನು ಅದನ್ನು ನೀಚವೆಂದು ಭಾವಿಸಿದನು. ತತ್ವಜ್ಞಾನದ ಗೌರೀಶಂಕರದಲ್ಲಿ ಕುಳಿತ ಅವನ ದೃಷ್ಟಿಯಲ್ಲಿ ಮನಸ್ಸಿಲ್ಲದ ಮನುಷ್ಯರಿಗಷ್ಟೇ ದೇಹಶ್ರಮದ ಕಾರ್ಯ ಹೇಳಿಸಿದ್ದು; ಅಂಥವರೇ ಗುಲಾಮರು. ದೇಹಶ್ರಮದ ಕಾರ್ಯವು ಅವನ ಪ್ರಕಾರ ಮನಸ್ಸನ್ನು ಮಂದಗೊಳಿಸಿ ಕೆಳಮಟ್ಟಕ್ಕಿಳಿಸುತ್ತದೆ. ಅದನ್ನು ಮಾಡಹೋದರೆ ರಾಜನೈತಿಕ ಬುದ್ಧಿಮತ್ತೆಗೆ, ವಿಚಾರಕ್ಕೆ ಕಾಲವೂ ಉಳಿಯದು, ಶಕ್ತಿಯೂ ಉಳಿಯದು.

ಆದುದರಿಂದ ವಿರಾಮವುಳ್ಳವರಿಗಷ್ಟೇ ಸರಕಾರಿ ಆಡಳಿತದಲ್ಲಿ ಸ್ವರಾವಕಾಶವಿರಬೇಕು; ಉತ್ತಮ ರಾಜ್ಯದಲ್ಲಿ ದುರಸ್ತುಗಾರ ಅಥವಾ ಯಂತ್ರವಾಹಕನು ನಾಗರಿಕ ಹಕ್ಕನ್ನು ಹೊಂದಲಾರನು ಎಂದನವ. ಅವನ ವರ್ಗೀಕರಣದಲ್ಲಿ ವ್ಯಾಪಾರಿಗಳೂ ಹಣಕಾಸಿನ ವ್ಯವಹಾರಗಾರರೂ ದಾಸರು. ಚಿಲ್ಲರೆ ಅಥವಾ ಕಿರುಕುಳ ವ್ಯಾಪಾರವು ಅನೈಸರ್ಗಿಕ; ಅದು ಒಬ್ಬರಿಂದ ಇನ್ನೊಬ್ಬರು ಲಾಭಗಿಟ್ಟಿಸುವ ದುರ್ವಿಧಾನ. ಬಡ್ಡಿಗೆ ಹಣಕೊಡುವುದು ಅಂತಹ ವ್ಯವಹಾರಗಳಲ್ಲಿ ನೀಚತಮ; ಹಣದಿಂದ ಹಣ ಹುಟ್ಟಿಸುವ ಈ ವ್ಯವಹಾರ ಅತ್ಯಂತ ಅನೈಸರ್ಗಿಕ ಎಂಬುದು ಅರಿಸ್ಟಾಟಲನ ಅಭಿಪ್ರಾಯ. ಅದು ಸ್ವತಂತ್ರ ನಾಗರಿಕನಿಗೆ ಲಾಂಛನಾಸ್ಪದ ಎಂದು ಅವನ ಹೇಳಿಕೆ.

ಅರಿಸ್ಟಾಟಲ ಮಹಾಶಯನ ಸ್ತ್ರೀಧರ್ಮಶಾಸ್ತ್ರವೂ ಗಮನಾರ್ಹವಾಗಿದೆ. ಹೆಂಗಸಿಗೂ ಗಂಡಸಿಗೂ ಇರುವುದು ಭೃತ್ಯ–ಸ್ವಾಮಿಭಾವದ ಸಂಬಂಧ ಎಂದುಬಿಟ್ಟನವ! ಏಕೆ? ಹೆಂಗಸು, ಅವನ ಪ್ರಕಾರ, ಅಪರಿಪೂರ್ಣನಾದ ಗಂಡಸು; ಪ್ರಗತಿಯಲ್ಲಿ ಅವಳ ಬೆಳವಣಿಗೆ ಒಂದು ಹೆಜ್ಜೆ ಹಿಮ್ಮೆಟ್ಟಿಲಿನಲ್ಲಿ ಉಳಿದಿದೆ. ನಿಸರ್ಗತಃ ಗಂಡು ಶ್ರೇಷ್ಠ, ಹೆಣ್ಣು ಕನಿಷ್ಠ– ಒಂದು ಅರಸು, ಇನ್ನೊಂದು ಆಳು. ಇದು ಎಲ್ಲ ಮಾನವರಿಗೂ ಅನ್ವಯಿಸುವ ಸಾಮಾನ್ಯ ನಿಯಮ. ಹೆಂಗಸಿನ ಇಚ್ಛಾಶಕ್ತಿ ದುರ್ಬಲ. ಆದುದರಿಂದ ಅವಳಿಗೆ ಸ್ಥಾನದಲ್ಲೂ ಚಾರಿತ್ರದಲ್ಲೂ ಸ್ವಾತಂತ್ರ್ಯವನ್ನು ಇಟ್ಟುಕೊಳ್ಳಲು ಸಾಧ್ಯವಾಗದು. ಅವಳಿಗೇನಾದರೂ ಪ್ರಭುತ್ವವಿರಬಲ್ಲುದಾದರೆ ಅದು ಮನೆಯೊಳಗೆ. ಪ್ಲೇಟೋವಿನ ಪ್ರಜಾರಾಜ್ಯದಲ್ಲಿ ಹೇಳಿರುವಂತೆ ಹೆಂಗಸನ್ನು ಪುರುಷೀಕರಿಸ ಹೋಗುವುದು ಅರ್ಥವಿಲ್ಲ; ತದ್ವಿರುದ್ಧವಾಗಿ ಅವರಲ್ಲಿಯ ಪರಸ್ಪರ ಅಸಾದೃಶ್ಯಗಳನ್ನು ಸಂವರ್ಧಿಸಬೇಕು. ಭಿನ್ನವಾದ ಪದಾರ್ಥದಷ್ಟು ಆಕರ್ಷಕವಾದುದು ಈ ಜಗತ್ತಿನಲ್ಲಿ ಮತ್ತೊಂದಿಲ್ಲ. ಸಾಕ್ರೇಟೀಸ ಊಹಿಸಿದಂತೆ ಸ್ತ್ರೀಪುರುಷರ ಧೈರ್ಯವು ಒಂದೇ ಬಗೆಯದೆಂಬುದು ಸುಳ್ಳು. ಗಂಡಸಿನ ಧೈರ್ಯವಿರುವುದು ಆಜ್ಞಾಪಿಸುವುದರಲ್ಲಿ–ಹೆಂಗಸಿನದು ವಿಧೇಯತೆಯಲ್ಲಿ! ಕವಿವಾಣಿಯಂತೆ– "ಮೌನವೆಂಬುದು ಸ್ತ್ರೀಯ ವೈಭವ!"

ಗಂಡಸಿಗೆ ೭೦ರವರೆಗೆ ಮಕ್ಕಳಾಗಬಹುದು, ಹೆಂಗಸಿಗೆ ೫೦ರವರೆಗೆ. ಆದುದರಿಂದ ಅವರು ಸಮರ್ಥ ದಾಂಪತ್ಯ ಮಾಡಬೇಕಾದರೆ ಗಂಡಸು ೩೦–೩೭ರಲ್ಲಿ ೨೦ರ ಹೆಂಗಸನ್ನು ಮದುವೆಯಾಗಬೇಕು. ಎಳೆಯರ ಮದುವೆಯಿಂದ ದುರ್ಬಲರ ಹಾಗೂ ಸ್ತ್ರೀಯ ಹುಟ್ಟು ಅಧಿಕವಾಗುತ್ತದೆ. ಆರೋಗ್ಯವು ಪ್ರೇಮಕ್ಕಿಂತ ಹೆಚ್ಚಿನದು– ಎನ್ನುತ್ತಾನೆ ಅರಿಸ್ಟಾಟಲ್. ಮದುವೆಗಳ ಮೇಲ್ವಿಚಾರಣೆಯನ್ನು ಸರಕಾರ ವಹಿಸಿಕೊಂಡು ನಿಯಂತ್ರಣದಲ್ಲಿಟ್ಟುಕೊಳ್ಳಬೇಕು. ಮದುವೆಯ ವಯೋಮಾನವನ್ನು ಗರ್ಭಧಾರಣಯೋಗ್ಯ ಋತುಮಾನವನ್ನೂ ಜನಸಂಖ್ಯಾವೃದ್ಧಿಯ ಪ್ರಮಾಣವನ್ನೂ ಸರಕಾರವೇ ನಿರ್ಧರಿಸಬೇಕು. ಜನಸಂಖ್ಯಾವೃದ್ಧಿಯ ನೈಸರ್ಗಿಕವಾದ ಪ್ರಮಾಣ ಹೆಚ್ಚಾದಾಗ ಗರ್ಭಸ್ರಾವ ಪದ್ಧತಿಯಿಂದ ಅದನ್ನು ಕಡಿಮೆ ಮಾಡಬಹುದು. ಅಂಥ ಗರ್ಭಸ್ರಾವವನ್ನು ಪಿಂಡದಲ್ಲಿ ಪ್ರಾಣ–ಚೇತನಗಳು ಪ್ರಾರಂಭವಾಗುವ ಮೊದಲೇ ಮಾಡಬೇಕು. ಪ್ರತಿಯೊಂದು ರಾಜ್ಯದಲ್ಲೂ ಅದದರ ಸ್ಥಾನ ಹಾಗೂ ಸಂಪತ್ತುಗಳಿಗೆ

ತಕ್ಕ ಜನಸಂಖ್ಯೆಯಿರಬೇಕು. ಹೆಚ್ಚೂ ಆಗಬಾರದು, ಕಡಿಮೆಯೂ ಆಗಬಾರದು. ಅತಿ ಸಂಖ್ಯೆಯದು ರಾಜ್ಯವಾಗಿ ಉಳಿಯದು, ರಾಷ್ಟ್ರವಾದೀತು; ಅಲ್ಲಿ ಘಟನಾತ್ಮಕ ಸರಕಾರವನ್ನು ನಡೆಸುವುದು ಅಸಾಧ್ಯವಾದೀತು; ನೀತಿ ನಿಲ್ಲದು, ರಾಜಕೀಯ ಐಕ್ಯ ಕನಸಿನ ಮಾತಾದೀತು. ಒಂದು ಸಾಮಾನ್ಯ ರಾಜ್ಯದಲ್ಲಿ ಸುಮಾರು ೧೦,೦೦೦ ಪ್ರಜೆಗಳಿರುವುದು ನ್ಯಾಯ ಎಂದ ಅರಿಸ್ಟಾಟಲ್.

ಶಿಕ್ಷಣ ಕೂಡ ಸರಕಾರದ ಕೈಯಲ್ಲಿರಬೇಕು. ಸರಕಾರದ ಸ್ವರೂಪಕ್ಕೆ ಅನುಗುಣವಾದ ಶಿಕ್ಷಣವಿದ್ದರೆ ಮಾತ್ರ ರಾಜ್ಯಘಟನೆಗಳು ಶಾಶ್ವತವಾಗಿ ಉಳಿಯುತ್ತವೆ. ತಾನು ಯಾವ ಸ್ವರೂಪದ ಸರಕಾರದಲ್ಲಿ ಬಾಳುತ್ತಿದ್ದಾನೋ ಆ ಸ್ವರೂಪಕ್ಕೆ ತಕ್ಕಂತೆ ಆಯಾ ನಾಗರಿಕನ ಸ್ವರೂಪ ರೂಪಿಸಲ್ಪಡಬೇಕು. ಶಾಲೆಗಳನ್ನು ಸರಕಾರಿ ನಿಯಂತ್ರಣದಲ್ಲಿಟ್ಟರೆ ಜನರನ್ನು ಉದ್ಯಮದಿಂದ ಒಕ್ಕಲುತನಕ್ಕೆ ತಿರುಗಿಸಬಹುದು ಮತ್ತು ಖಾಸಗಿ ಒಡೆಯತನವನ್ನಿಟ್ಟು ಕೊಂಡೂ ಅವರ ಆಸ್ತಿಯನ್ನು ವಿವೇಕಬದ್ಧವಾಗಿ ಸಾರ್ವಜನಿಕ ಬಳಕೆಗೆ ತರಲು ಸಾಧ್ಯ. ಒಳ್ಳಿದರಲ್ಲಿ "ಗೆಳೆಯರಲ್ಲಿ ಎಲ್ಲವೂ ಸಾರ್ವಜನಿಕ, ಸರ್ವಸಾಧಾರಣವಾಗಿರಬೇಕು" ಎಂಬ ನ್ಯಾಯವಿರುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಪ್ರವರ್ಧಮಾನ ನಾಗರಿಕನಿಗೆ ಕಾಯದೆಗೆ ತಲೆಬಾಗುವುದನ್ನು ಕಲಿಸಬೇಕು; ಇಲ್ಲವಾದರೆ ರಾಜ್ಯ ಅಥವಾ ಸರಕಾರವನ್ನು ನಡೆಸುವುದೇ ಅಶಕ್ಯ. ವಿಧೇಯತೆಯನ್ನರಿಯದವನು ವಿವೇಕದಿಂದ ಆಜ್ಞಾಪಿಸಲಾರ. ಒಳ್ಳೆಯ ನಾಗರಿಕ ಎರಡನ್ನೂ ಅರಿತಿರಬೇಕು. ವಿವಿಧ ಕುಲವುಳ್ಳ ರಾಜ್ಯದಲ್ಲಿ ಸರಕಾರಿ ನಿಯಂತ್ರಿತ ಶಾಲೆಗಳಿಂದಲೇ ಸಾಮಾಜಿಕ ಐಕ್ಯ ಸಾಧ್ಯವಾಗುತ್ತದೆ. ರಾಜ್ಯವು ನಾನಾ ತತ್ವವುಳ್ಳದ್ದು. ಅದನ್ನು ಒಂದು ಸಮುದಾಯವನ್ನಾಗಿ, ಸಮಾಜವನ್ನಾಗಿ ರೂಪಿಸಬಲ್ಲುದು ಶಿಕ್ಷಣವೊಂದೇ. ಸಾಮಾಜಿಕ ಸಂಘಟನೆಯಿಂದ ಬರುವ ಸುರಕ್ಷಿತತೆ ಅಥವಾ ಕಾಯದೆಯಿಂದ ಬರುವ ಸ್ವಾತಂತ್ರ್ಯವನ್ನು ಯುವಜನಕ್ಕೆ ಕಲಿಸಬೇಕು ಎಂಬುದು ಅರಿಸ್ಟಾಟಲನ ಆಶಯ.

## ೮

'ಪೂರ್ಣತೆಯನ್ನು ಮುಟ್ಟಿದಾಗ ಮಾನವನು ಪ್ರಾಣಿಗಳಲ್ಲೆಲ್ಲಾ ಸರ್ವೋತ್ತಮ; ಆದರೆ ಅವನು ಪ್ರತ್ಯೇಕಿಸಲ್ಪಟ್ಟಾಗ ಅವನಷ್ಟು ದುಷ್ಟ ಜಂತು ಇನ್ನಾವದೂ ಇಲ್ಲ' ಎನ್ನುತ್ತಾನೆ ಅರಿಸ್ಟಾಟಲ್. ಅನ್ಯಾಯ ಪಿಶಾಚಕ್ಕೆ ಶಸ್ತ್ರ ದೊರೆತಾಗ ಅದು ಇನ್ನಷ್ಟು ಅಪಾಯಕರವಾಗುತ್ತದೆ; ಹುಟ್ಟಿನೊಡನೆಯೇ ಮನುಷ್ಯನು ಬುದ್ಧಿಯನ್ನು ಪಡೆದುಕೊಂಡು ಬಂದಿರುತ್ತಾನೆ. ಚಾರಿತ್ರದ ಗುಣಗಳು ಅವನಿಗೆ ಆಜನ್ಮ ಲಬ್ಧ; ಅವನ್ನವನು ದುಷ್ಟತಮ ಉದ್ದೇಶದ ಸಾಧನೆಗಾಗಿ ಬಳಸಬಹುದು. ಸದ್ಗುಣರಹಿತನು ಅಪವಿತ್ರತಮನು, ಅಸಂಸ್ಕೃತತಮನು, ಅತ್ಯಾಶಾಬದ್ಧನು, ಅತಿಕಾಮವಶನು; ಸಾಮಾಜಿಕ ನಿಯಂತ್ರಣವೊಂದೇ ಅವನಿಗೆ ಸದ್ಗುಣವನ್ನು ಕಲಿಸಬಲ್ಲುದು. ಸಮಾಜದಿಂದ ಬುದ್ಧಿಲಾಭ, ಬುದ್ಧಿಯಿಂದ ಕ್ರಮಬದ್ಧ ವರ್ತನೆ ಸಾಧ್ಯ; ಕ್ರಮ ವ್ಯವಸ್ಥೆಯಿಂದ ನಾಗರಿಕತೆ ಸಿದ್ಧಿಸುತ್ತದೆ. ಅಂಥ ಕ್ರಮಬದ್ಧ ರಾಜ್ಯದಲ್ಲಿ ವ್ಯಕ್ತಿಯ ಅಭಿವೃದ್ಧಿಗೆ ಅಸಂಖ್ಯ

ಅವಕಾಶಗಳಿರಬಲ್ಲವು. ಪ್ರತ್ಯೇಕವಾಗಿ ಬದುಕಿದರೆ ಅಂಥ ಅವಕಾಶ ಎಂದೂ ಸಿಗದು. ಒಂಟಿಯಾಗಿ ಬದುಕುವವನು ಪಶುವಾಗಿರಬೇಕು, ಇಲ್ಲವೆ ಪಶುಪತಿಯಾಗಿರಬೇಕು.

ಆದುದರಿಂದ ಬಹಳಮಟ್ಟಿಗೆ ಕ್ರಾಂತಿಗೆ ಕೈಹಾಕುವುದು ಯಾವಾಗಲೂ ಅವಿವೇಕ. ಅದರಿಂದ ಅಲ್ಪಸ್ವಲ್ಪ ಒಳಿತಾದೀತು; ಆದರೆ ಜೊತೆಗೇ ಹೆಚ್ಚಿನ ಕೇಡೂ ಸಂಭವಿಸೀತು. ಅಂಥ ಕೇಡುಗಳಲ್ಲಿ ಸಮಾಜದ ವ್ಯವಸ್ಥೆ ಹಾಳಾಗುವುದು ಅತಿ ಮುಖ್ಯ; ಅವ್ಯವಸ್ಥೆ ಅರಾಜಕತೆಯನ್ನು ಅಮಂತ್ರಿಸಿಯೇ ತೀರುತ್ತದೆ. ಆಗ ರಾಜ್ಯವು ಉದ್ವಸ್ತವಾಗುತ್ತದೆ. ಬಿಸಿ ನೆತ್ತರಿನವರು ಕ್ರಾಂತಿಗೆ ಮರುಳಾಗುವುದು ಜಾಸ್ತಿ. ಆದರೆ ಕ್ರಾಂತಿಯ ಮೂಲಕ ಇದ್ದ ಸಂವಿಧಾನವನ್ನು ಉರುಳಿಸಿ ಹೊಸ ಬಗೆಯ ಸಂವಿಧಾನದ ಸರಕಾರವನ್ನು ರಚಿಸಿದರೆ, ಹಳೆಯ ಅಭ್ಯಾಸ ಹಾಗೂ ಕಲ್ಪನೆಗಳಿಂದ ಮುಕ್ತರಾಗದ ಜನರು ಅದನ್ನು ಉರುಳಿಸದೆ ಉಳಿಯರು– ಅಥವಾ ಅದನ್ನು 'ನಾಮಕೇ ವಾಸ್ತೇ' ಸರಕಾರವನ್ನಾಗಿ ಮಾಡದೆ ಬಿಡರು. ಏಕೆಂದರೆ, ಕಾಯದೆಗಳಷ್ಟು ಸುಲಭವಾಗಿ ಮಾನವ ಚಾರಿತ್ರ ಬದಲಾಗದು. ಒಂದು ರಾಜ್ಯ ಸಂವಿಧಾನವು ಪರಿಣಾಮಕರವಾಗಿ ಉಳಿದುಕೊಂಡಿರ ಬೇಕಾದರೆ ಸಮಾಜದ ಎಲ್ಲ ಭಾಗಗಳೂ ಹೃತ್ಪೂರ್ವಕವಾಗಿ ಅದು ಉಳಿಯಲೆಂದು ಆಶಿಸುತ್ತಿರಬೇಕು. ಆದುದರಿಂದ ಕ್ರಾಂತಿಯಿಂದ ತಪ್ಪಿಸಿಕೊಳ್ಳಬೇಕೆಂಬ ಶಾಸಕರು ತಮ್ಮ ರಾಜ್ಯದಲ್ಲಿ ಧನಿಕ–ದರಿದ್ರರ ನಡುವಣ ಅಂತರ ಹೆಚ್ಚಾಗದಂತೆ ಜಾಗ್ರತೆ ವಹಿಸಬೇಕು. ಅಂಥ ಅಂತರ ಹೆಚ್ಚಲು ಅನೇಕ ವೇಳೆ ಯುದ್ಧವೇ ಕಾರಣ. ಜನಸಂಖ್ಯೆ ಹೆಚ್ಚಾದಾಗ ಹೊರಗಡೆ ವಲಸೆ ಹೋಗುವುದನ್ನು ಪ್ರೋತ್ಸಾಹಿಸಬೇಕು; ಧರ್ಮವನ್ನು ಅನುಸರಿಸಬೇಕು ಮತ್ತು ಪ್ರಚುರಪಡಿಸಬೇಕು. ನಿರಂಕುಶ ಶಾಸಕರು ಜನರೆದುರು ಎಷ್ಟು ದೈವಭಕ್ತಿಯನ್ನು ಪ್ರದರ್ಶಿಸಿದರೂ ಅಷ್ಟಷ್ಟು ಹೆಚ್ಚು ಲಾಭಕರ. ಏಕೆಂದರೆ ಅಂಥವರು ಮಾಡುವ ಅನ್ಯಾಯಗಳನ್ನು ಅನುಭವಿಸಲು ಜನರು ಹೆಚ್ಚು ಅಂಜುವುದಿಲ್ಲ. ಅವರ ವಿರುದ್ಧವಾಗಿ ಒಳಸಂಚು ಮಾಡುವ ಪ್ರವೃತ್ತಿ ಅಷ್ಟು ಬೆಳೆಯುವುದಿಲ್ಲ– ಏಕೆಂದರೆ ಅವರಿಗೆ ದೈವಬಲವಿದೆ ಎಂದು ಜನರು ಭಾವಿಸುತ್ತಾರೆ.

ಈ ಮೇರೆಗೆ ಧರ್ಮ, ಶಿಕ್ಷಣ ಮತ್ತು ಕುಟುಂಬ ಜೀವನದ ಕ್ರಮ ಬದ್ಧತೆಗಳಲ್ಲಿ ತಕ್ಕ ಮುಂಜಾಗ್ರತೆಯ ಕ್ರಮಗಳನ್ನು ತೆಗೆದುಕೊಂಡರೆ ಪರಂಪರಾಗತವಾದ ಯಾವ ಸ್ವರೂಪದ ಸರಕಾರವಾದರೂ ನಡೆಯಬಲ್ಲುದು. ಬೇರೆ ಬೇರೆ ಸ್ವರೂಪವುಳ್ಳ ಎಲ್ಲ ಸರಕಾರಗಳು ಗುಣ–ದೋಷ–ಸಂಮಿಶ್ರ. ತಾತ್ವಿಕವಾಗಿ ನೋಡಿದರೆ ಒಬ್ಬನೇ ಒಬ್ಬ ಪುರುಷೋತ್ತಮನು ಸರ್ವಾಧಿಕಾರ ನಡೆಸುವ ಪದ್ಧತಿ ಅತ್ಯುತ್ತಮ ಆದರ್ಶ ಎಂಬುದು ಅರಿಸ್ಟಾಟಲನ ಮತ. ಏಕೆಂದರೆ, ಅಂಥವನಿಗೆ ಕಾಯದೆಯು ಒಂದು ಸಾಧನವಲ್ಲದೆ ಅವನ ಅಧಿಕಾರ ವ್ಯಾಪ್ತಿಗೆ ಅಡ್ಡಿಯೆನಿಸದು. ದಕ್ಷರಿಗೆ ಕಾಯದೆ ಬೇರೆಯಿಲ್ಲ, ಅವರೇ ಕಾಯದೆ. ಅವರಿಗೆಂದು ಕಾಯದೆ ಮಾಡಹೋಗುವವನು ಹಾಸ್ಯಾಸ್ಪದನೆನಿಸುತ್ತಾನೆ.

ಆದರೆ ವ್ಯವಹಾರದಲ್ಲಿ ರಾಜಪ್ರಭುತ್ವದಷ್ಟು ಕೆಟ್ಟದ್ದಿನ್ನೊಂದಿಲ್ಲ. ಅಲ್ಲಿ ಬಲಕ್ಕೂ ಸೌಜನ್ಯಕ್ಕೂ ಮಿತ್ರತ್ವವಿರುವುದು ಕಡಿಮೆ. ಆದುದರಿಂದ ಕುಬೇರ ಪ್ರಭುತ್ವವು ವ್ಯವಹಾರ ದೃಷ್ಟಿಯಿಂದ ಅತ್ಯುತ್ತಮ– ಅರಿಸ್ಟಾಟಲನ ಪ್ರಕಾರ, ಜ್ಞಾನಿಗಳೂ ದಕ್ಷರೂ ಆದ ಶಾಸಕರನ್ನು

ಕುಬೇರರೆನ್ನಬಹುದು. ಅವರು ಎಲ್ಲ ದೇಶಗಳಲ್ಲೂ ಅಲ್ಪಸಂಖ್ಯರು. ಸೂಕ್ಷ್ಮ ಪ್ರಕರಣಗಳ ನಿರ್ಣಯ ಕುಬೇರರಿಗಲ್ಲದೆ ಬಹುಸಂಖ್ಯ ಭೂರಿಜನಗಳಿಗಳವಲ್ಲ. ಅಂಥ ಕುಬೇರರನ್ನು ಆಯಲು ಬರದು. ಆದುದರಿಂದ ಅವರು ವಂಶಪಾರಂಪರ್ಯದಿಂದ ಆಳುತ್ತ ಹೋಗಬೇಕಾಗುತ್ತದೆ. ಆದರೆ ಲಕ್ಷ್ಮಿಯು ಚಂಚಲೆ; ಧನಬಲ ಕಡಿಮೆಯಾದ ಕೂಡಲೇ– ಕುಬೇರರು ಕುಚೇಲರಾದ ಕೂಡಲೇ– ಕೋಶದಾಸರು ಅವರ ಅಧಿಕಾರವನ್ನು ಕೊಂಡುಕೊಳ್ಳುತ್ತಾರೆ. ಆಗ ದಕ್ಷತೆ ಬೆಲೆ ಕಳೆದುಕೊಂಡು ರೊಕ್ಕದ ಜುಲುಮೆ ಹೆಚ್ಚಾಗುತ್ತದೆ. ಆಳರಸರು ಲೋಭಿಗಳಾದಾಗ ಜನ ಶೋಷಣೆ ಹೆಚ್ಚುವುದು ಸಹಜ. "ಯಥಾ ರಾಜಾ ತಥಾ ಪ್ರಜಾ:" ಎಂಬಂತೆ ಜನರಲ್ಲೂ ಲೋಭಿಗಳು ಹೆಚ್ಚಿ ಬಹುಸಂಖ್ಯ ಸಾಮಾನ್ಯರನ್ನು ಗೋಳು ಹುಯಿದುಕೊಳ್ಳುತ್ತಾರೆ. ದಕ್ಷತೆಯಿಲ್ಲದ ಕುಬೇರ ಪ್ರಭುತ್ವಕ್ಕೆ ಅರ್ಥವಿಲ್ಲ– ಅದು ಕೋಶದಾಸಪ್ರಭುತ್ವವಾಗಿ ಪರಿಣಮಿಸುತ್ತದೆ. ಜನರು ಬೇಸತ್ತು ಆಗ ಕ್ರಾಂತಿ ಮಾಡಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಲು ಯತ್ನಿಸುತ್ತಾರೆ. ಶಾಸಕರು ಲೋಭಿಗಳಾಗುತ್ತ ಹೋದ ಹಾಗೆ ಅವರ ಸಂಖ್ಯಾಬಲ ಉಡುಗುತ್ತ ಹೋಗುತ್ತದೆ. ಅದರಿಂದ ಜನತೆಯ ಬಲ ಹೆಚ್ಚಿ ಅವರು ತಮ್ಮ ನಾಯಕರನ್ನು ಗದ್ದಿಗೆಗೇರಿಸಿ ಪ್ರಜಾಸತ್ತೆಯನ್ನು ಸ್ಥಾಪಿಸಿಬಿಡುತ್ತಾರೆ.

## ೯

ಪ್ರಜಾಪ್ರಭುತ್ವವೆಂದರೆ ಬಡವರ ಆಳಿಕೆ. ಅದರಿಂದ ಕೆಲ ಲಾಭಗಳಿವೆ. ವೈಯಕ್ತಿಕವಾಗಿ ಜನರಲ್ಲಿ ಪ್ರತಿಯೊಬ್ಬನೂ ಕನಿಷ್ಠ ನಿರ್ಣಾಯಕ, ಧರ್ಮಜ್ಞ ಎನಿಸಿದರೂ ಸಾಮೂಹಿಕವಾಗಿ ಅವರು ವಿಶೇಷಜ್ಞರಿಗೆ ಸರಿಸಮಾನರೆನಿಸುತ್ತಾರೆ. ಕೆಲ ಕಲೆಗಾರರಿದ್ದಾರೆ– ಅವರ ಕಲೆಯ ಬೆಲೆಯನ್ನು ಅವರಿಗಿಂತ ಚೆನ್ನಾಗಿ ಅಂಥ ಕಲೆಗಾರಿಕೆಯಿಲ್ಲದವರೇ ಕಟ್ಟಬಲ್ಲರು! ಕಟ್ಟಡ ಕಟ್ಟಿದ ಶಿಲ್ಪಿಗಿಂತ ಅದರಲ್ಲಿ ವಾಸಿಸುವ ಯಜಮಾನನೇ ಅದರ ಯೋಗ್ಯತೆಯನ್ನು ಚೆನ್ನಾಗಿ ಹೇಳಬಲ್ಲನು; ಅಡುವಳನಿಗಿಂತ ಊಟಕ್ಕೆ ಬಂದ ಅತಿಥಿಯೇ ಊಟದ ಸವಿಯನ್ನು ಚೆನ್ನಾಗಿ ತಿಳಿದು ಅಳೆಯಬಲ್ಲ! ಅಲ್ಪಸಂಖ್ಯರಿಗಿಂತ ಬಹುಸಂಖ್ಯರು ಹೆಚ್ಚು ನಿರ್ವಂಚಕರಾಗಿರಬಲ್ಲರು. ಸ್ವಲ್ಪ ನೀರಿಗಿಂತ ಬಹಳ ನೀರು ಬೇಗ ಕಲಕಿ ಹೋಗುವುದು ಕಡಿಮೆ. ಕೋಪ–ತಾಪಗಳಿಗಾಳಾಗಿ ವ್ಯಕ್ತಿಯು ತಪ್ಪುನಿರ್ಣಯ ಕೊಟ್ಟಾನು. ಆದರೆ ಬಹಳ ಜನರು ಏಕಕಾಲದಲ್ಲಿ ಕಾಮ ಕ್ರೋಧಾದಿಗಳಿಗೆ ವಶರಾಗಿ ಅಪನಿರ್ಣಯ ಕೊಡುವ ಸಂಭವ ಕಡಿಮೆ. ಇಷ್ಟೆಲ್ಲಾ ಗುಣಗಳಿದ್ದರೂ ಒಟ್ಟಿನಲ್ಲಿ ಪ್ರಜಾಪ್ರಭುತ್ವವು ಕುಬೇರ ಪ್ರಭುತ್ವಕ್ಕಿಂತ ಕೀಳು. ಏಕೆಂದರೆ ಅದು ಸರ್ವರ ಅವಾಸ್ತವ ಸಾಮ್ಯಸಿದ್ಧಾಂತವನ್ನವಲಂಬಿಸಿದೆ. ಒಂದು ಅಂಶದಲ್ಲಿ ಸಮಾನಸ್ಕಂಧರಾದ ಜನರು ಎಲ್ಲ ಅಂಶಗಳಲ್ಲೂ ಸಮಾನಸ್ಕಂಧರೆಂಬ ಅಸತ್ಯ ಅಲ್ಲಿಯ ಸಾಮ್ಯನೀತಿಗೆ ಆಧಾರವಾಗಿದೆ. ಅಲ್ಲಿ ಎಲ್ಲರೂ ಸಮಾನ ಸ್ವಾತಂತ್ರ್ಯ ಉಳ್ಳವರಾದುದರಿಂದ ತಾವು ಸರ್ವಾಂಶತಃ ಸಮಾನರು ಎಂದು ಜನರು ಸಾಧಿಸುತ್ತಾರೆ. ತತ್ಫಲವಾಗಿ ದಕ್ಷತೆಯನ್ನು ಸಂಖ್ಯಾಬಲಕ್ಕೆ ಬಲಿಕೊಡಲಾಗುತ್ತದೆ. ಸಂಖ್ಯಾಬಲವನ್ನು

ವಂಚನೆಯಿಂದ ಹೆಚ್ಚೆಂದು ತೋರಿಸಲಾಗುತ್ತದೆ. ಜರನನ್ನು ತಪ್ಪು ತಿಳಿವಳಿಕೆಗೆ ಗುರಿವಮಾಡುವುದು ಪ್ರಜಾಪ್ರಭುತ್ವದಲ್ಲಿ ಅತಿ ಸುಲಭ. ಜನಮನದಷ್ಟು ಚಂಚಲವಾದುದಿನ್ನೊಂದಿಲ್ಲ. ಆದುದರಿಂದ ಪ್ರತಿನಿಧಿಗಳನ್ನು ಚುನಾಯಿಸುವ ಮತಾಧಿಕಾರವನ್ನು ಬುದ್ಧಿವಂತರಿಗಷ್ಟೇ ಕೊಡಬೇಕು. ಹಾಗೆ ಮಾಡುವುದರಿಂದ ಪ್ರಜಾಪ್ರಭುತ್ವ–ಕುಬೇರಪ್ರಭುತ್ವಗಳೆರಡರ ಸಂಯೋಗ ಉಂಟಾಗಿ, ಎರಡರ ದೋಷಗಳಿಂದಲೂ ನಾವು ಮುಕ್ತರಾಗಿ ಎರಡರ ಗುಣಗಳನ್ನೂ ಪಡೆಯಬಲ್ಲವರಾದೇವು ಎನ್ನುತ್ತಾನೆ ಅರಿಸ್ಟಾಟಲ್.

ಮೇಲೆ ಹೇಳಿದಂಥ ಸುಖಸಂಯೋಗವು ಘಟನಾತ್ಮಕ (ಸಾಂವಿಧಾನಿಕ) ಸರಕಾರದಿಂದ ಲಭ್ಯ. ಆದರದು ಕಲ್ಪನಾಲೋಕದ ಆದರ್ಶ ಸರಕಾರವಲ್ಲ– ನಮಗೆ ಸ್ಥಾಪಿಸಲು ಸಾಧ್ಯವಾಗಬಹುದಾದ ಅತ್ಯುತ್ತಮ ರಾಜ್ಯವಷ್ಟೆ. ಬಹುಸಂಖ್ಯ ರಾಜ್ಯಗಳಿಗೆ ಬೇಕಾದ ಅತ್ಯುತ್ತಮ ಸಂವಿಧಾನ ಯಾವುದು? ಬಹುಸಂಖ್ಯರಿಗೆ ಬೇಕಾದ ಅತ್ಯುತ್ತಮ ಬಾಳುವೆ ಯಾವ ಬಗೆಯದು? ಬಹುಸಂಖ್ಯರ ಕೈಗೆಟುಕಬಹುದಾದ ಬಾಳುವೆ ಹಾಗೂ ಬಹು ಸಂಖ್ಯ ರಾಜ್ಯಗಳು ಸಾಧಿಸಿಕೊಳ್ಳಬಲ್ಲ ರಾಜ್ಯಘಟನೆ (ಸಂವಿಧಾನ) ಎಂತಿರಬೇಕೆಂಬುದೇ ನಮ್ಮೆದುರಿನ ಪ್ರಶ್ನೆ. ಈ ಸಂದರ್ಭದಲ್ಲಿ ರಾಜ್ಯದ ಯಾವ ಭಾಗವು ಪ್ರಕೃತ ಕಾಲದ ಸರಕಾರ ಉಳಿದು ಸಾಗಬೇಕೆಂಬುದೋ ಅದು ವಿರುದ್ಧ ಮತವುಳ್ಳ ಭಾಗಕ್ಕಿಂತ ಬಲಿಷ್ಠವಾಗಿರಬೇಕು ಎಂಬ ಸಾಮಾನ್ಯ ತತ್ವವನ್ನು ನೆನೆದುಕೊಳ್ಳಬೇಕು. ಅಂಥ ಬಲವಿರುವುದು ಸಂಖ್ಯೆ, ಆಸ್ತಿ, ಸೈನಿಕ ಅಥವಾ ರಾಜಕೀಯ ದಕ್ಷತೆ ಎಂಬ ಈ ಯಾವ ಒಂದರಲ್ಲೂ ಅಲ್ಲ– ಅವೆಲ್ಲವುಗಳ ಸಂಯೋಗದಲ್ಲಿ. ಆದುದರಿಂದ ಸ್ವಾತಂತ್ರ್ಯ, ಐಶ್ವರ್ಯ, ಸಂಸ್ಕೃತಿ, ಕುಲ (ಆಭಿಜಾತ್ಯ) ಮತ್ತು ಸಂಖ್ಯೆಗಳೆಲ್ಲವನ್ನೂ ಗಣನೆಗೆ ತಂದುಕೊಳ್ಳಬೇಕು. ಇಂಥ ಸರ್ವಗುಣ ಸಂಯೋಗವನ್ನು ಮಧ್ಯವರ್ಗದವರಲ್ಲಿ ಕಾಣಬಹುದು. ಇಷ್ಟಲ್ಲದೆ ಸರಕಾರದ ಅಧಿಕಾರ ಸ್ಥಳಗಳಿಗೆ ಹೋಗಲು ಸರ್ವರಿಗೂ ಅವಕಾಶವಿರಬೇಕು. ಹಾಗಿದ್ದಾಗ ಸರಕಾರವು ಸಾಕಷ್ಟು ಪ್ರಜಾಸತ್ತಾತ್ಮಕವಾದೀತು. ಎರಡನೆಯದಾಗಿ, ಅರ್ಹತೆಯನ್ನು ನೋಡಿಯೇ ಅಧಿಕಾರ ಸ್ಥಳಗಳಿಗೆ ಜನರನ್ನು ನಿಯಮಿಸಿಕೊಳ್ಳುವ ಪದ್ಧತಿಯಿರಬೇಕು. ಆಗ ಸರಕಾರವು ಸಾಕಷ್ಟು ಕುಬೇರಾತ್ಮಕವಾದೀತು. ಇಂಥ ಮಧ್ಯಮಾರ್ಗ ಹಿಡಿದ ಸರಕಾರವೇ ವ್ಯವಹಾರದಲ್ಲಿ ರಚಿಸಲು ಸಾಧ್ಯವಾಗುವ ಆದರ್ಶ ಸರಕಾರ. ಒಂದು ವಿಚಾರ: ಜನರು ಸಾಧಿಸಬೇಕಾದ ಗುರಿಗಳನ್ನು ಜನಸಮುದಾಯವೇ ನಿರ್ಧರಿಸಬೇಕು; ಆದರೆ ಅಂಥ ಗುರಿಗಳ ಸಿದ್ಧಿಗೆ ಅಗತ್ಯವಾದ ಸಾಧನಗಳನ್ನು ವಿಶೇಷಜ್ಞರು ನಿರ್ಧರಿಸಬೇಕು– ಆಯ್ದು ಅನ್ವಯಿಸಬೇಕು. ಆ ಆಯ್ಕೆಯು ಪ್ರಜಾಸತ್ತಾತ್ಮಕವಾಗಿ ಹರಡಿರಬೇಕು; ಆದರೆ ಅಧಿಕಾರದ ಜಾಗಗಳಿಗೆ ಮಾತ್ರ ಯುಕ್ತ ಅರ್ಹತೆಗಳುಳ್ಳವರಲ್ಲಿಯ ಅತ್ಯುತ್ತಮ ಕೆಲಸಗಾರರನ್ನೇ ನಿಯಮಿಸಿಕೊಳ್ಳಬೇಕು. ಯಾವ ದೃಷ್ಟಿಕೋನದಿಂದ ವಿಚಾರಿಸಲಾರಂಭಿಸಿದರೂ ರಾಜನೈತಿಕ ಚರ್ಚೆಯು ಈ ಏಕತಾನಕ್ಕೇ ಬಂದು ಮುಟ್ಟುತ್ತದೆ. ಸಂಖ್ಯಾಲಬ್ಧಗುಣ ಮತ್ತು ಸಂಖ್ಯೇತರ ಗುಣಸಮುಚ್ಚಯಗಳ ಸಂಯೋಗ–ಸಹಕಾರ ಕಂಡುಬರುವ ಆಡಳಿತಯಂತ್ರದ, ಸರಕಾರದ, ರಾಜ್ಯಶಾಸನದ ಸಿದ್ಧಿಯೇ ಪರಮಸಿದ್ಧಿ.

ಕ್ರಿ.ಪೂ. ೩೨೨ದರಲ್ಲಿ ತತ್ವಾಚಾರ್ಯ ಅರಿಸ್ಟಾಟಲ್ ನಿಧನ ಹೊಂದಿದನು. ಅದೇ ವರ್ಷ ಅವನಂತೆಯೇ ವಿಷ ಕುಡಿದು ಗ್ರೀಸಿನ ಪ್ರಖ್ಯಾತ ವಾಗ್ಮಿಡೆ ಮಾಸ್ತನೀಸನೂ ಮಡಿದನು. ಚಕ್ರವರ್ತಿ ಅಲಕ್ಸಾಂದರ ಕೂಡ ಅದೇ ಕಾಲದಲ್ಲಿ ಪರಲೋಕವಾಸಿಯಾದನು. ಗ್ರೀಸಿನ ವೈಭವ ಗತಿಸಿತು; ರೋಮಿನ ರವಿ ಉದಯಿಸಿದ. ರೋಮಿನ ವೈಭವವು ಶಕ್ತಿಯ ದರ್ಪ–ದಂಭಗಳಲ್ಲಲ್ಲದೆ ಜ್ಞಾನಜ್ಯೋತಿಯಲ್ಲಿರಲಿಲ್ಲ. ಆ ವೈಭವವೂ ಕೊನೆಗೆ ಅಳಿಯಿತು. ಅನಂತರ ಒಂದು ಸಾವಿರ ವರ್ಷಗಳವರೆಗೆ ಯುರೋಪಿನ ಮುಖವನ್ನು ಕತ್ತಲು ಮುಸುಕಿತು. ಯುರೋಪಿನ ಜಗತ್ತೆಲ್ಲಾ ತತ್ವಜ್ಞಾನದ ಪುನರುಜ್ಜೀವನಕ್ಕಾಗಿ ಕಾದು ಕುಳಿತಿತು.

ಪ್ಲೇಟೋವಿನ ಆದರ್ಶ ರಾಜ್ಯದ ಕಲ್ಪನೆ ಉತ್ಸಾಹವರ್ಧಕವಾಗಿತ್ತು. ಆತ ಹೇಳಿದ ಸಮಾಜವಾದವು ಶ್ರೇಷ್ಠರಿಗಷ್ಟೇ ಪರಿಮಿತವೆಂಬುದನ್ನು ಮರೆತು, ಅರಿಸ್ಟಾಟಲ್ ಭಿನ್ನಮಾರ್ಗ ಹಿಡಿದು ಸಾಗಿ, ಪ್ಲೇಟೋ ಹೇಳಿದ ಒಂದು ಪರಿಣಾಮಕ್ಕೇ ಬಂದು ಮುಟ್ಟಿದ. ಅರಿಸ್ಟಾಟಲ್ ಅತ್ಯಂತ ಸ್ತಿಮಿತವಾದ ಪರಾಯಣ; 'ಅತಿಸರ್ವತ್ರ ವರ್ಜಯೇತ್' ಎಂಬ ತತ್ವವನ್ನವ ಅತಿಯಾಗಿ ಎತ್ತಿ ಹಿಡಿದು ಯಾಂತ್ರಿಕ ದಕ್ಷತಾವಾದಿಯಾದನು. ಅವನಿಗೆ ಜಗತ್ತಿನಲ್ಲಿ ಯಾವುದನ್ನು ಕಂಡರೂ ಆಶ್ಚರ್ಯವಾಗುತ್ತಿದ್ದಿಲ್ಲವಂತೆ! ಅರಾಜಕತೆಗೆ ಅತಿಯಾಗಿ ಹೆದರಿದ ಅವನು ದಾಸ್ಯಜೀವನದ ಸಂಭವದ ಬಗ್ಗೆ ಹೆದರುವುದನ್ನೇ ಮರೆತಿದ್ದನೆನ್ನುತ್ತಾರೆ. ಅಂಥ ಸಪ್ಪೆ ಶಿಸ್ತಿನ ಶಿವಪ್ಪನಾಯಕ ಅರಿಸ್ಟಾಟಲ್! ತರ್ಕಶಾಸ್ತ್ರದ ತವರು, ರಾಜ್ಯಶಾಸ್ತ್ರದ ತೊಟ್ಟಿಲು, ನೀತಿಶಾಸ್ತ್ರದ ನೆಲಗಟ್ಟು, ಮನಃಶಾಸ್ತ್ರದ ಮೂಲಮನೆ, ಕಲಾಶಾಸ್ತ್ರದ ಅಶ್ವತ್ಥನ ಕಟ್ಟೆ, ಜೀವಶಾಸ್ತ್ರ–ಅತಿಭೌತಶಾಸ್ತ್ರಗಳ ಮೂಲಾಧಾರ ಎನಿಸಿದ್ದ ಅರಿಸ್ಟಾಟಲ್ ಜ್ಞಾನದಲ್ಲಿ ಭಾರತದ ಭೀಷ್ಮನಂತಿದ್ದನೆನ್ನಬಹುದು!

## ೧೦

ಅನಂತರದ ಗಣ್ಯ ಚಿಂತಕನೆಂದರೆ ಇಂಗ್ಲೆಂಡ್ ದೇಶದಲ್ಲಿ ಕ್ರಿ.ಶ. ೧೫೬೧ರಲ್ಲಿ ಜನಿಸಿದ ಫ್ರಾನ್ಸಿಸ್ ಬೇಕನ್. ಬೇಕನ್ನನ ಪ್ರಬಂಧಗಳನ್ನು ಬೇಡ ಎಂಬವರಿಲ್ಲ. ಅವನು ತತ್ವಜ್ಞಾನ ಪ್ರಿಯ. ಅವನ ಪ್ರಕಾರ, 'ನೀನು ಏನನ್ನೂ ಬಳಸದಿದ್ದರೆ ಯಾವ ಆಶೆಯೂ ನಿನ್ನ ಹತ್ತಿರ ಸುಳಿಯದು; ಏನನ್ನೂ ನೀನು ಆಶಿಸದಿದ್ದರೆ ಯಾವುದಕ್ಕೂ ಅಂಜಬೇಕಾಗಿಲ್ಲ' ಎಂಬುದು ಹಳೆಯ ತತ್ವವಿವೇಕ. ಅದರಿಂದ ಮರಣಭಯವನ್ನು ತಾತ್ವಿಕರು ಜನರಲ್ಲಿ ಹೆಚ್ಚಿಸಿದರಲ್ಲದೆ ಮತ್ತೇನನ್ನೂ ಸಾಧಿಸಲಿಲ್ಲ. ಅಂಥ ತತ್ವಜ್ಞಾನವು ಸಾಯಲು ಬೇಕಾದ ಪೂರ್ವಸಿದ್ಧತೆ ಹಾಗೂ ನಿಯಮಶೀಲತೆಗಳಿಗಿಂತ ಬಾಳುವೆ ಎಲ್ಲೋ ಸ್ವಲ್ಪ ಮಾತ್ರ ಹೆಚ್ಚು ಎನಿಸಿತು. 'ಸುಖದುಃಖೇ ಸಮೇಕೃತ್ವಾ' ಎಂಬಂತಹ ಆಶಾದಮನ–ಪ್ರಧಾನವಾದ ಸ್ಟೋಯಿಕ್ ತತ್ವಪ್ರಣಾಲಿಗಿಂತ ಅನಾರೋಗ್ಯಕರವಾದುದು ಇನ್ನೊಂದಿಲ್ಲ. 'ಉದಾಸೀನ–ಮನೋಭಾವವು ಜೀವನವನ್ನು ಮೊದಲೇ ಮರಣಸಮ ಮಾಡಿರುವಾಗ ಬದುಕಿ ಉಳಿದಿರುವುದಾದರೂ ಏಕೆ?' ಎಂಬುದು ಬೇಕನ್ ಹಾಕುವ ಸವಾಲು. ಅಲ್ಲದೆ, ಮೂಲ–ಪ್ರವೃತ್ತಿಯನ್ನು ಒಮ್ಮೆ

ಅಡಗಿಸಿ ಇಟ್ಟುಕೊಳ್ಳಬಹುದು, ಒಮ್ಮೆ ಗೆಲ್ಲಬಹುದು– ಆದರೆ ಅದನ್ನೆಂದೂ ಇಲ್ಲದಂತೆ ಮಾಡಲು ಬರದು. ದಮಿಸಿದ ಮೂಲಪ್ರವೃತ್ತಿಯು ಒಮ್ಮೆ ತಲೆಯೆತ್ತಿದರೆ ಮೊದಲಿಗಿಂತ ಹೆಚ್ಚು ರಭಸದಿಂದ ಕಾರ್ಯ ಪ್ರವೃತ್ತವಾಗುತ್ತದೆ. ತತ್ವ–ಚರ್ಚೆಗಳು ಸ್ವಭಾವ ತರುವ ಒತ್ತಡವನ್ನು ಮಾತ್ರ ಕಡಿಮೆ ಮಾಡಿಯಾವು. ಆದರೆ ರೂಢಿ–ಪದ್ಧತಿಗಳು ಸ್ವಭಾವವನ್ನು ಬದಲಿಸಿಯಾವು ಅಥವಾ ಬಗ್ಗಿಸಿಯಾವು. ಹೀಗಿದ್ದರೂ ಮನುಷ್ಯನು ತನ್ನ ಸ್ವಭಾವವನ್ನು ಗೆದ್ದೆನೆಂದು ಬಹಳವಾಗಿ ನಂಬಿಕೊಂಡಿರಬಾರದು. ಏಕೆಂದರೆ, 'ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ!' ಆದುದರಿಂದ ಒಂದೇ ಅಹಿತಕರ ಸನ್ನಿವೇಶದಿಂದ ಮನುಷ್ಯನು ದೂರವಿರಬೇಕು– ಇಲ್ಲವೇ ಅಂಥ ಸನ್ನಿವೇಶದಲ್ಲಿ ಪದೇ ಪದೇ ಹೊಕ್ಕು ಅಕ್ಷೋಭ್ಯ ಸ್ಥಿತಿಯನ್ನು ಸಾಧಿಸಿಕೊಳ್ಳಬೇಕು. ನಮ್ಮ ಶರೀರವು ಸಂಯಮ–ಅಸಂಯಮಗಳೆರಡನ್ನೂ ಸಹಿಸಿಕೊಳ್ಳಲು ಕಲಿತಿರಬೇಕು– ಎರಡು ತರದ ಸಂದರ್ಭಗಳಲ್ಲೂ ಸಮತೋಲವನ್ನಿಟ್ಟುಕೊಳ್ಳಲು ಶಕ್ತವಾಗಿರಬೇಕು. ಒಂದು ಬಗೆಯ ಸುಖದ ಅತಿರೇಕಾನುಭವಕ್ಕಿಂತ ವಿವಿಧ ಸುಖಗಳ ಅನುಭವ ಹಿತಕರ. ಏಕೆಂದರೆ, ವಾರ್ಧಕ್ಯದವರೆಗೆ ಋಣಿಯಾಗಿ ನಿಲ್ಲುವ ಅನೇಕ ಅತಿರೇಕಗಳನ್ನು ಯೌವನದ ಶಕ್ತಿಯು ದಾಟಿಕೊಂಡು ಹೋಗುತ್ತದೆ; ತನ್ನ ಯೌವನದ ಬೆಲೆಯನ್ನು ಮನುಷ್ಯನ ಪಕ್ವಸ್ಥಿತಿಯು ತೆರುತ್ತದೆ. ತೋಟಗಾರಿಕೆಯೇ ಆರೋಗ್ಯದ ರಾಜರಸ್ತೆ. ದೇವರು ಮೊದಲು ಸೃಷ್ಟಿಸಿದ್ದು ತೋಟವನ್ನೇ ಎನ್ನುತ್ತಾನೆ ಬೇಕನ್!

ಬೇಕನ್ನನ ನೀತಿಶಾಸ್ತ್ರವು ಸ್ವಲ್ಪ ತಂತ್ರಗಾರಿಕೆಯನ್ನವಲಂಬಿಸಿದ್ದು; ವ್ಯಾವಹಾರಿಕ ಅಲ್ಪದ್ರೋಹ ಪರತೆಯನ್ನು ಗ್ರಾಹ್ಯವೆಂಬಂಥದು. ಒಳಿತು ದೀರ್ಘಾಯುವಾಗಬೇಕಾದರೆ ಕೇಡಿನ ಕೆಲ ಅಂಶವನ್ನು ಜೀರ್ಣಿಸಿಕೊಂಡು ಗಟ್ಟಿಯಾಗಬೇಕಾಗುತ್ತದೆ ಎನ್ನುತ್ತಾನವ. ಅವನ ಪ್ರಕಾರ ಮನುಷ್ಯನ ಬಾಳು ತುಂಬುಬಾಳೆನಿಸಬೇಕು, ವೈವಿಧ್ಯಪೂರ್ಣವಾಗಿರಬೇಕು; ಅದರಿಂದ ಮನಸ್ಸನ್ನು ಅಗಲಗೊಳಿಸುವ, ಆಳಗೊಳಿಸುವ, ಹರಿತಗೊಳಿಸುವ ಇಲ್ಲವೆ ಅದಕ್ಕೆ ಕಸುಕೊಡುವ ವಸ್ತುಗಳ ಪರಿಚಯ ಅವನಿಗಾಗುತ್ತದೆ. ಬೇಕನ್ನನ ತತ್ವಜ್ಞಾನವು ನಾಸ್ತಿಕ್ಯವೆಂದು ತೋರುವಷ್ಟು ವಿಚಾರಪ್ರಧಾನವೆನಿಸಿದರೂ ಅವನು ದೈವಶ್ರದ್ಧೆಯನ್ನು ಘಂಟಾಘೋಷವಾಗಿ ಸಾರಿದವನು. ತತ್ವಜ್ಞಾನ ಅಲ್ಪ ಪ್ರಮಾಣದಲ್ಲಿರುವಾಗ ಮನುಷ್ಯ ಸ್ವಲ್ಪ ನಾಸ್ತಿಕತೆಗೆ ಒಲೆದಾನು, ಆದರೆ ಅದರಲ್ಲಿ ಸಾಕಷ್ಟು ಆಳವಾಗಿ ಮುಳುಗಿದಾಗ ಅವನು ಧರ್ಮಶ್ರದ್ಧೆಯತ್ತ ಒಲೆಯದಿರನು. ಧರ್ಮವೊಂದರಲ್ಲಿ ಅನೇಕಾನೇಕ ಪಕ್ಷ ಪಂಗಡ–ಪಂಥ–ಉಪಪಂಥಗಳುಂಟಾದಾಗಲೂ, ಶಾಂತಿ–ನೆಮ್ಮದಿ ಸಮೃದ್ಧಿ ದೇಶದಲ್ಲೆಲ್ಲಾ ಯಥೇಷ್ಟವಾಗಿ ನೆಲೆನಿಂತಿರುವಾಗಲೂ ನಾಸ್ತಿಕತೆ ಮನುಷ್ಯನ ತಲೆಯನ್ನು ಹೊಗುತ್ತದೆ; ಅನ್ಯಥಾ ಹೊಗದು.

ಕಾಮಸುಖಕ್ಕಿಂತ ಸ್ನೇಹಸುಖ ಹೆಚ್ಚಿನದೆಂದರೂ, ಅದನ್ನೂ ಬೇಕನ್ ಕಡೆತನಕ ಅವಲಂಬನೀಯ ಎನ್ನುವುದಿಲ್ಲ. ಅಸಾಧಾರಣ–ಪ್ರತಿಭರನ್ನುಳಿದರೆ ಸಾಮಾನ್ಯ ಎಳೆಯರ ಶಿಕ್ಷಣ ಪರಂಪರಾಗತ ಪದ್ಧತಿಯಿಂದ ಸಾಗುವುದೇ ಉತ್ತಮ ಎನ್ನುತ್ತಾನವ. ಏಕೆಂದರೆ, ಮಾನವಜೀವನದಲ್ಲಿ ರೂಢಿಪದ್ಧತಿಯೇ ಮುಖ್ಯ ನ್ಯಾಯಾಧೀಶ!

ಬೇಕನ್ನನು ಉತ್ತಮ ರಾಜ್ಯದ ಲಕ್ಷಣ ಹೇಳುವಾಗ ಕೇಂದ್ರ ಸರಕಾರ ಬಲಿಷ್ಠವಾಗಿರಬೇಕೆನ್ನುತ್ತಾನೆ. ಅವನು ಮತಕೊಡುವುದು ರಾಜಪ್ರಭುತ್ವಕ್ಕೆ. ಒಂದು ರಾಜ್ಯದ ಆಡಳಿತದಕ್ಷತೆ ಅದರ ಸಾಮರ್ಥ್ಯದ ಕೇಂದ್ರೀಕರಣಕ್ಕೆ ಸಮಪ್ರಮಾಣದಲ್ಲಿರುತ್ತದೆ. ಸಿದ್ಧತೆ, ಪರಾಮರ್ಶೆ ಮತ್ತು ಕಾರ್ಯನಿರ್ವಾಹ ಎಂದು ರಾಜಕಾರ್ಯವು ತ್ರಿಮುಖವುಳ್ಳದ್ದು. ಪರಾಮರ್ಶೆ–ಪರೀಕ್ಷಣಗಳಿಗೆ ಬಹಳ ಜನರಿದ್ದರೆ ಒಳಿತು; ಸಿದ್ಧತೆ–ಕಾರ್ಯನಿರ್ವಾಹಗಳಿಗೆ ಕಡಿಮೆ ಜನರಿರುವುದೇ ಒಳ್ಳೆಯದು. ಉದ್ಯಮಿಗಳೇ ಒಂದು ರಾಜ್ಯದಲ್ಲಿ ಅತಿಸಂಖ್ಯರಾದರೆ ರಣವೀರರ ಸಂಖ್ಯೆ ಕಡಿಮೆಯಗುತ್ತದೆ. ಬಹಳ ಕಾಲ ಒಂದು ರಾಜ್ಯದಲ್ಲಿ ಶಾಂತಿ ನೆಲೆಸಿದ್ದರೆ ಮನುಷ್ಯರ ಕ್ಷಾತ್ರತೇಜಸ್ಸು ಕಳೆಗೆಟ್ಟು ಹೋಗುತ್ತದೆ. ಕಚ್ಚಾ ಸಾಮಾನುಗಳ ಉತ್ಪಾದನೆ ಮಾತ್ರ ಅಸರಂತ ಸಾಗುತ್ತಿರಬೇಕು.

ಅರಿಸ್ಟಾಟಲನಂತೆಯೇ ಬೇಕನ್ನನೂ ಕ್ರಾಂತಿಯಾಗದಂತೆ ನೋಡಿಕೊಳ್ಳಬೇಕೆನ್ನುತ್ತಾನೆ. ರಾಜದ್ರೋಹ ಹೆಚ್ಚಾಗಲು ಬಡತನ ಮತ್ತು ಅತೃಪ್ತಿಗಳು ಕಾರಣವಾಗುತ್ತವೆ. ಧರ್ಮದಲ್ಲಿ ಹೊಸ ವಿಚಾರ ಮೂಡುವುದು, ಕರಭಾರ ಮಿತಿಮೀರುವುದು, ಕಾಯದೆ ಹಾಗೂ ರೂಢಿಗಳನ್ನು ಬದಲಿಸುವುದು, ಹಕ್ಕುಗಳಿಗೆ ಮುಟ್ಟುಗೋಲು ಹಾಕುವುದು, ಸಾಮಾನ್ಯ ಶೋಷಣೆ, ಅಯೋಗ್ಯರು ಅಭಿವೃದ್ಧಿ ಹೊಂದುವುದು ಅಪರಿಚಿತರ ಕೈಮೇಲಾಗುವುದು, ಬಳಕೆಯ ಸಾಮಗ್ರಿಗಳ ಕೊರತೆಯುಂಟಾಗುವುದು, ನೌಕರಿಯಿಂದ ಹಿಂದೆರಳಿದ ಶಿಪಾಯಿಗಳು, ಉತ್ಕಟ ದ್ವೇಷಕ್ಕೇರಿದ ಪಕ್ಷ–ಪಂಗಡಗಳು ಮತ್ತು ಜನತೆಯನ್ನು ಅಪಮಾನಗೊಳಿಸುವಂಥ ಕೃತ್ಯಗಳು ರಾಜದ್ರೋಹಕ್ಕೆ ಕಾರಣಗಳಾಗುತ್ತವೆ.

ಜನರು ಕಾಯದೆ ಭಂಗಕ್ಕಿಳಿಯದಂತೆ ಮಾಡಬೇಕಾದರೆ ದೇಶದ ಐಶ್ವರ್ಯದ ವಿತರಣ ಪ್ರಜೆಗಳಲ್ಲಿ ನ್ಯಾಯವಾಗಿ ಆಗುವಂತೆ ಮಾಡಬೇಕು ಅತ್ಯಯ ಪ್ರಸಂಗದಲ್ಲಿ ಸರಕಾರದ ವಿರೋಧಿಗಳನ್ನು ಬಡಿದಾಳಬೇಕು, ಸರಕಾರದವರು ಒಕ್ಕಟ್ಟಾಗಿರಬೇಕು. ಸಾಮಾನ್ಯ ಭೂರಿ ಜನರ ಹೊಗಳಿಕೆ ಅತ್ಯಂತ ಹೀನವಾದುದು. ಅದಕ್ಕೆ ಯಾವ ರಾಜಕಾರಣಿಯೂ ಮರುಳಾಗಬಾರದು. ಸ್ವಾಯತ್ತ ಆಸ್ತಿಯುಳ್ಳ ರೈತ ದುಡಿತಗಾರರು ರಾಜ್ಯದ ಬುಡಕಟ್ಟು; ಆಡಳಿತ ಕ್ಷೇತ್ರದಲ್ಲಿ ಜ್ಞಾನಿಗಳೂ ದಕ್ಷರೂ ಆದ ಕುಬೇರರಿರುವುದು ಅದರ ತಲೆಕಟ್ಟು. ರಾಜ್ಯದ ನೇತಾರನು ತತ್ವಜ್ಞಾನಿಯಾಗಿರಬೇಕು. ಪ್ರಬುದ್ಧ ಶಾಸಕರಿರುವ ರಾಜ್ಯವೆಂದೂ ಅಸಮೃದ್ಧವಾದುದಿಲ್ಲ.

ವಿಜ್ಞಾನದಂತೆಯೇ ಸರಕಾರವಾದರೂ ತತ್ವಜ್ಞಾನವಿಲ್ಲದಾಗ ನಷ್ಟ ಹೊಂದುತ್ತದೆ. ರಾಜ್ಯಶಾಸ್ತ್ರಕ್ಕೆ ರಾಜಕಾರ್ಯಜ್ಞತೆ ಹೇಗೋ ಹಾಗೇ ವಿಜ್ಞಾನಕ್ಕೆ ತತ್ವಜ್ಞಾನ ಆವಶ್ಯಕ. ವಿಜ್ಞಾನ–ತತ್ವಜ್ಞಾನಗಳ ನೆರವಿಲ್ಲದ ರಾಜಕೀಯ ಚಟುವಟಿಕೆಯು ವಿಧ್ವಂಸಕವಾಗಿ ಪರಿಣಮಿಸುತ್ತದೆ. ಜ್ಞಾನ ಸಂಘಟನೆಯ ರೂಪದ ವಿಜ್ಞಾನವಿದ್ದರೆ ಶ್ರಮವಿಭಾಗ ಸಮಾಜದಲ್ಲಿ ರೂಢವಾಗಿ ಆ ಮೂಲಕ ಪ್ರತಿಯೊಂದು ಅಭಿವೃದ್ಧಿ ಕ್ಷೇತ್ರದಲ್ಲೂ ಚುರುಕಾಗಿ, ಲಾಭಕರವಾಗಿ ಕೆಲಸ ನಡೆಯುವಂತಾಗುವುದು. ಜೊತೆಗೆ ದೇಶದ ವಿಶ್ವವಿದ್ಯಾನಿಲಯಗಳೆಲ್ಲವೂ ಒಕ್ಕಟ್ಟಿನಿಂದ ಸಂಘಟಿತವಾಗಿ ಜನೋಪಕಾರಕ ಸಂಶೋಧನೆಗಳನ್ನು ನಡೆಸುವುದಗತ್ಯ. ಅಂಥ

ಸಂಶೋಧನೆಗಳಿಗೆ ರಾಜ್ಯವು ಧನಸಹಾಯ ನೀಡಬೇಕು. ವಿಶ್ವವಿದ್ಯಾನಿಲಯಗಳು ಸಂಘಟಿತ ಯೋಜನೆಯಂತೆ ಶಿಕ್ಷಣ ಕೊಟ್ಟಾಗ ನಿಷ್ಪಕ್ಷಪಾತವಾದ ಜ್ಞಾನವು ನಾಯಕತನಕ್ಕೇರುವವರಿಗೆ ದೊರಕಿ ಆ ಮೂಲಕ ಒಳ್ಳೆಯ ಆಡಳಿತವನ್ನು ಒಂದು ರಾಜ್ಯ ಸಾಧಿಸಿಕೊಂಡೀತು. ವೇದದ ಕಾಲದಿಂದ ಶೋಧದ ಕಾಲದವರೆಗೂ ಸರಕಾರಗಳು ಮಾಡುತ್ತ ಬಂದ ತಪ್ಪೆಂದರೆ ಶಿಕ್ಷಣಕ್ಕಿಂತ ಕಾಯದೆ ಮಾಡುವುದಕ್ಕೆ ಹೆಚ್ಚಿನ ಧನ–ಕಾಲಗಳನ್ನು ವೆಚ್ಚ ಮಾಡುವುದು. ವಿಜ್ಞಾನವು ಸರ್ವರ ಸ್ವತ್ತಾದಾಗಲೇ ಮಾನವನ ಶಕ್ತಿಯು ವ್ಯಾಪಕತೆಯನ್ನು ಹೊಂದೀತು.

ಬೇಕನ್ ಹೇಳುತ್ತಾನೆ: ಮನುಷ್ಯರೆಂದರೆ ನೆಟ್ಟಗೆ ನಡೆಯುವ ಪ್ರಾಣಿಗಳಲ್ಲ; ಅವರು ಅಮರ ದೇವತೆಗಳು. ದೇವರು ನಮಗೆ ಎಲ್ಲ ಜಗಜ್ಜಾಲಕ್ಕೆ ಸಾಟಿಯಾದಂಥ ಆತ್ಮವನ್ನಿತ್ತಿದ್ದಾನೆ. ಒಂದು ಜಗತ್ತಿನಿಂದ ಆ ಆತ್ಮ ತಣಿಯದು. ಮನುಷ್ಯನಿಗೆ ಎಲ್ಲವೂ ಸಾಧ್ಯ. ವೇಳೆ ದೊರೆತದ್ದೇ ಆದರೆ ಅವನು ಸೃಷ್ಟಿಯನ್ನೇ ಪುನಾರಚಿಸಬಲ್ಲನು. ಅನಂತರ ಮನುಷ್ಯನು ಮನುಷ್ಯನೊಡನೆ ಯುದ್ಧ ಮಾಡಕೂಡದು ಎಂಬ ಪಾಠವನ್ನು ಕಟ್ಟಕಡೆಗೆ ನಾವು ಕಲಿತೇವು. ನಿಸರ್ಗ ನಮ್ಮೆದುರಿಡುವ ವಿಘ್ನಗಳೊಡನಷ್ಟೇ ನಮ್ಮ ಹೋರಾಟ. ಮನುಷ್ಯರಿಗಿರುವ ರಾಜಕೀಯ ಮಹಾತ್ವಾಕಾಂಕ್ಷೆಗಳು ಮೂರು: ಸ್ವದೇಶದ ಶಕ್ತಿಯನ್ನು ಅಲ್ಲೇ ಬಿತ್ತರಿಸುವುದು ಮೊದಲನೆಯದು. ಅದು ತೀರಾ ಕೆಳಮಟ್ಟದ ಮಹತ್ವಾಕಾಂಕ್ಷೆ. ಪರದೇಶಗಳ ಮೇಲೆ ತಮ್ಮ ಹಿರಿಯತನವನ್ನು ಸ್ಥಾಪಿಸುವ ಹಂಬಲು ಎರಡನೆಯದರಲ್ಲಿ ಕಂಡು ಬರುತ್ತದೆ. ಅದು ಮೊದಲಿನದಕ್ಕಿಂತ ಹೆಚ್ಚಿನದು– ಹೆಚ್ಚು ಗಂಭೀರ, ಆದರೆ ಕಡಿಮೆ ಆಕರ್ಷಕವಲ್ಲ. ಮೂರನೆಯದೆಂದರೆ, ಇಡೀ ವಿಶ್ವದ ಮೇಲೆ ಮನುಷ್ಯಕುಲದ ಸಾಮರ್ಥ್ಯವನ್ನು ಸಂಸ್ಥಾಪಿಸಿ ಬಿತ್ತರಿಸುವುದು. ಅದು ಹಿಂದಿನ ಎರಡು ಮಹತ್ವಾಕಾಂಕ್ಷೆಗಳಿಗಿಂತಲೂ ಹೆಚ್ಚು ಆರೋಗ್ಯಕರ ಹಾಗೂ ಉದಾತ್ತತರ.

"ದೊಡ್ಡ ದೊಡ್ಡ ಅಧಿಕಾರ ಸ್ಥಾನಗಳಲ್ಲಿರುವವರು ತ್ರಿಗುಣಸೇವಕರು. ಮೊದಲನೆಯದಾಗಿ ಅವರು ರಾಜ್ಯದ ಸೇವಕರು; ಅನಂತರ ಕೀರ್ತಿಯ ಆಳುಗಳು; ಆಮೇಲೆ ವ್ಯವಹಾರದಾಸರು. ಅವರಿಗೆ ಸ್ವಾತಂತ್ರ್ಯವೆಂಬುದಿಲ್ಲ. ಸ್ವದೇಹ, ಸ್ವಕಾರ್ಯ ಮತ್ತು ಸ್ವಕಾಲಗಳಲ್ಲಿ ಅವರು ಪರಾಧೀನರು. ಅವರು ದೊಡ್ಡ ಸ್ಥಾನಕ್ಕೇರಲು ಮಾಡುವುದು ಭಗೀರಥ ಪ್ರಯತ್ನ. ಅಂಥ ಪ್ರಯತ್ನ ಮಾಡುವವರಿಗೆ ಯಾವಾಗಲೂ ಅದಕ್ಕೂ ಹೆಚ್ಚಿನ ಪ್ರಯತ್ನ ಮಾಡುವ ಸಂದರ್ಭಗಳು ಎದುರಾಗುತ್ತ ಹೋಗುತ್ತವೆ. ಅವರ ಪ್ರಯತ್ನಗಳು ಕೆಲವೊಮ್ಮೆ ಕೀಳು; ಕೀಳ್ತನದಿಂದ ಅವರು ಮೇಲ್ತನಕ್ಕೇರುತ್ತಾರೆ. ಅವರಿಡುವ ಹೆಜ್ಜೆಗಳು ಜಾರುಹೆಜ್ಜೆಗಳು; ಅವರ ಸ್ಥಾನವು ಸದಾ ಜೋಲಿ ಹೊಡೆಯುತ್ತಿರುತ್ತದೆ. ಹಿಂಜರಿಯುವ ಪ್ರಸಂಗ ಬಂದಾಗ ಅವರಿಗೆ ಕಾದಿರುವದು ಅಧಃಪಾತ– ಅಥವಾ ಕೊನೆಯ ಪಕ್ಷ ಖಗ್ರಾಸ ಗ್ರಹಣ."

೧೬೨೧ರಲ್ಲಿ ಜೇಮ್ಸ್ ದೊರೆಯ ಆಸ್ಥಾನದಲ್ಲಿ ಚಾನ್ಸೆಲರಾಗಿದ್ದು ಪದಚ್ಯುತಿ ಹೊಂದಿದ ಬೇಕನ್ನನ ಬಗ್ಗೆ ಮೇಲಿನ ಮಾತನ್ನು ಆಡಲಾಗಿದೆ. ಆದರೆ ವೈವಿಧ್ಯಪೂರ್ಣವಾದ ಬಾಳನ್ನು ನಡೆಸಿದ ಬೇಕನ್ ತನ್ನ ಮೃತ್ಯುಪತ್ರದಲ್ಲಿ ಬರೆದಿಟ್ಟ ಮಾತು ಅವನ ಹೆಮ್ಮೆಯ ಗಾಂಭೀರ್ಯವನ್ನು ಹೊರಗೆಡಹುತ್ತದೆ: "ನನ್ನ ಆತ್ಮವನ್ನು ನಾನು ದೇವರಿಗೆ ಬಿಟ್ಟು

ಹೋಗುತ್ತೇನೆ. ನನ್ನ ದೇಹವನ್ನು ಎಲ್ಲಾದರೂ ಒಂದು ಮೂಲೆಯಲ್ಲಿ ಹುಗಿದುಬಿಡಲಿ. ಮುಂಬರುವ ಕಾಲಮಾನಗಳಿಗೂ ಪರರಾಷ್ಟ್ರಗಳಿಗೂ ನನ್ನ ಹೆಸರು ಲಭ್ಯವಾಗಲಿ."

ಪುರುಷಕಾರದ ಪುರಸ್ಕರ್ತನಾದ ಬೇಕನ್ ಕಂಡ ಕಲ್ಪನಾರಾಜ್ಯದಲ್ಲಿ ಜನತೆಯೊಳಗಿಂದ ಹೆಕ್ಕಿ ತೆಗೆದ ಅತ್ಯುತ್ತಮ ಶಾಸಕರಿದ್ದಾರೆ. ಆ ಸರಕಾರವಿರುವುದು ಜನರಿಗಾಗಿ– ಅದು ಜನರದ್ದು. ಅದರ ಕಾರ್ಯಗಳನ್ನು ನೆರವೇರಿಸಲು ತಂತ್ರಜ್ಞರು, ಶಿಲ್ಪಿಗಳು, ಖಗೋಲಶಾಸ್ತ್ರಜ್ಞರು, ಭೂಗರ್ಭ ಶಾಸ್ತ್ರಜ್ಞರು, ಜೀವಶಾಸ್ತ್ರಜ್ಞರು, ವೈದ್ಯರು, ರಸಾಯನಶಾಸ್ತ್ರಜ್ಞರು, ಅರ್ಥಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಮನಃಶಾಸ್ತ್ರಜ್ಞರು ಮತ್ತು ತತ್ವಶಾಸ್ತ್ರಜ್ಞರಿದ್ದಾರಲ್ಲದೆ ರಾಜಕಾರಣಿಗಳೆಂಬ ವರ್ಗವೇ ಇಲ್ಲ!

## ೧೧

ಆಧುನಿಕ ಯುಗದ ಯೆಹೂದಿ ತತ್ವಜ್ಞಾನಿಗಳಲ್ಲಿ ಸ್ಪಿನೋಜ ಅಗ್ರಗಣ್ಯ ಎಂದು ಹೇಳುತ್ತಾರೆ. ಅವನದು ೧೭ನೆಯ ಶತಮಾನ. ಬಲವೇ ಹಕ್ಕೆನಿಸುವುದು ಇಂದಿಗೂ ಇದೆಯೆನ್ನುತ್ತಾನವ. ಆದರೆ ಸಮಷ್ಟಿಯ ಬಲ ವ್ಯಷ್ಟಿಯ ಬಲವನ್ನು ಪರಿಮಿತಗೊಳಿಸುತ್ತದೆ; ಅರ್ಥಾತ್ ಒಬ್ಬನ ಹಕ್ಕುಗಳನ್ನು ಇನ್ನೊಬ್ಬನ ಹಕ್ಕುಗಳೊಡನೆ ಸರಿಸಮಗೊಳಿಸುತ್ತದೆ. ವ್ಯಕ್ತಿಯ ನೈಸರ್ಗಿಕ ಶಕ್ತಿಯ ಅಥವಾ ಸಾರ್ವಭೌಮತ್ವದ ಒಂದು ಅಂಶವು ಸಂಘಟಿತ ಸಮಾಜಕ್ಕೆ ಕೊಡಲ್ಪಡುತ್ತದೆ. ಅದಕ್ಕೆ ಬದಲಾಗಿ ಅವನು ಸಮಾಜದ ಮೂಲಕ ತನ್ನ ಇತರ ಶಕ್ತಿಗಳ ವ್ಯಾಪ್ತಿಯನ್ನು ಬೆಳೆಸಿಕೊಳ್ಳುತ್ತಾನೆ. ಮನುಷ್ಯರು ಭಾವೋದ್ರೇಕಕ್ಕೆ ಒಳಗಾಗುವ ಸ್ವಭಾವವುಳ್ಳವರಾದುದರಿಂದ ಅವರಿಗೆ ಕಾಯಿದೆ ಅವಶ್ಯಕವಾಗುತ್ತದೆ. ಎಲ್ಲರೂ ವಿಚಾರವಂತರಾದರೆ ಕಾಯದೆಯೇ ಅನವಶ್ಯಕವಾಗುತ್ತದೆ. ಪರಿಪೂರ್ಣ ವಿಚಾರಪರತೆಗೂ ಭಾವೋದ್ರೇಕಗಳಿಗೂ ಯಾವ ಸಂಬಂಧವಿದೆಯೋ ಅದೇ ಸಂಬಂಧವು ಪರಿಪೂರ್ಣ ಕಾಯದೆಗಳಿಗೂ ವ್ಯಕ್ತಿಗಳಿಗೂ ಇದೆ. ಪರಸ್ಪರ ಸಂಘರ್ಷಿಸುವ ಶಕ್ತಿಗಳನ್ನು ಸಮೀಕರಿಸಿ ಆ ಮೂಲಕ ನಾಶವನ್ನು ತಡೆಗಟ್ಟಿ ಸಮಷ್ಟಿಯ ಶಕ್ತಿಯನ್ನು ಬೆಳೆಸುವುದೇ ವಿಧಿಬದ್ಧ ವ್ಯವಸ್ಥೆಯ ಉದ್ದೇಶ, ಅತಿಭೌತ ಶಾಸ್ತ್ರದಲ್ಲಿ ವಸ್ತುಗಳಲ್ಲಿಯ ಕಾರ್ಯ ಕಾರಣ ಸಂಬಂಧವೇ ಹೇಗೆ ಕಾಣ್ಕೆಯಾಗಿದೆಯೋ, ನೀತಿಶಾಸ್ತ್ರದಲ್ಲಿ ಬಯಕೆಗಳಲ್ಲಿ ಕ್ರಮಬದ್ಧತೆಯನ್ನು ಸ್ಥಾಪಿಸುವುದೇ ಹೇಗೆ ಮುಖ್ಯೋದ್ದೇಶವಾಗಿದೆಯೋ ಹಾಗೇ ರಾಜ್ಯಧರ್ಮದಲ್ಲಿ ಮನುಷ್ಯರಲ್ಲಿ ಸುವ್ಯವಸ್ಥಿತ ಜೀವನವನ್ನು ನೆಲೆಗೊಳಿಸುವುದೇ ಪರಮಧ್ಯೇಯ. ಪರಸ್ಪರ ವಿನಾಶಕಗಳಾದ ಶಕ್ತಿಗಳಷ್ಟನ್ನು ತನ್ನ ನಾಗರಿಕರಲ್ಲಿ ಮಿತಗೊಳಿಸುವುದೇ ಪರಿಪೂರ್ಣ ರಾಜ್ಯದ ಉದ್ದೇಶ. ಅದು ಅವರ ಯಾವ ಸ್ವಾತಂತ್ರ್ಯವನ್ನೂ (ಅದಕ್ಕಿಂತ ಹೆಚ್ಚಿನ ಇನ್ನೊಂದು ಸ್ವಾತಂತ್ರ್ಯವನ್ನು ಅವರಿಗೆ ಕೊಡುವದಕ್ಕಲ್ಲದೆ) ಮತ್ತಾವುದರ ಸಲುವಾಗಿಯೂ ಕಸಿದುಕೊಳ್ಳಲಾರದು.

ರಾಜ್ಯದ ಚರಮೋದ್ದೇಶವು ಜನರ ಮೇಲೆ ಪ್ರಭುತ್ವ ನಡೆಸುವುದಲ್ಲ; ಅವರನ್ನು ಹೆದರಿಸಿ ತಡೆಹಿಡಿದಿಡುವುದೂ ಅಲ್ಲ. ತದ್ವಿರುದ್ಧವಾಗಿ ಪ್ರತಿಯೊಬ್ಬನನ್ನೂ ಭಯದಿಂದ

ಮುಕ್ತಗೊಳಿಸುವುದೂ ಹಾಗೆ ಮುಕ್ತನಾಗಿ ಅವನು ಸಂಪೂರ್ಣ ಸುರಕ್ಷಿತತೆಯಲ್ಲಿ ಬಾಳಿ ತನಗೂ ತನ್ನ ನೆರೆಯವನಿಗೂ ಯಾವ ಬಗೆಯ ಅಪಾಯವೂ ಉಂಟಾಗದಂತೆ ನಡೆದುಕೊಳ್ಳುವಂತೆ ಮಾಡುವುದೂ ಅದರ ಗುರಿ. ವಿಚಾರವಂತರನ್ನು ಹಿಂಸ್ರ ಜಂತುಗಳನ್ನಾಗಿಯೂ ಯಂತ್ರಗಳನ್ನಾಗಿಯೂ ಮಾರ್ಪಡಿಸುವುದು ರಾಜ್ಯದ ಗುರಿಯಲ್ಲ. ಅವರ ಶರೀರ–ಮನಗಳು ಸುರಕ್ಷಿತವಾಗಿ ಕೆಲಸ ಮಾಡಗೊಡುವುದೇ ರಾಜ್ಯದ ಉದ್ದೇಶ. ಸ್ವತಂತ್ರವಿಚಾರಪರರಾಗಿ ಜನ ಬದುಕುವಂತೆ ಮಾಡುವುದೇ ಎಲ್ಲ ರಾಜ್ಯಸ್ಥಾಪನೆಯ ಮೂಲೋದ್ದೇಶ.

ಹೀಗೆ ರಾಜ್ಯದ ಉದ್ದೇಶ ಸ್ವಾತಂತ್ರ್ಯವೆಂದಾಯಿತು. ಜನರ ಅಭಿವೃದ್ಧಿಯೇ ರಾಜ್ಯದ ಕರ್ತವ್ಯ. ಯೋಗ್ಯತೆಗೆ, ಕಾರ್ಯದಕ್ಷತೆಗೆ ಸ್ವಾತಂತ್ರ್ಯ ದೊರಕುವುದನ್ನೇ ಅವಲಂಬಿಸಿದೆ ಅಭಿವೃದ್ಧಿ. ಆದರೆ ಒಮ್ಮೆ ಶಾಸಕವರ್ಗವು ಸ್ವಸ್ಥಾನಭದ್ರತೆಯನ್ನು ಕಾಯ್ದುಕೊಳ್ಳಲು ಬೇಕುಬೇಕಾದ ಕಾಯದೆಗಳನ್ನು ಮಾಡುತ್ತ ಹೋಗಿ ಜನರನ್ನು ದಬ್ಬಾಳಿಕೆಗೆ ಗುರಿಪಡಿಸಿದರೆ ಗತಿಯೇನು? ಅನ್ಯಾಯವಾದ ಕಾಯದೆಗೂ ಜನ ವಿಧೇಯವಾಗಿ ನಡೆದುಕೊಳ್ಳಬೇಕು ಎನ್ನುತ್ತಾನೆ ಸ್ಪಿನೋಜ. ಯಾವಾಗ? ಯುಕ್ತವಾದ ಪ್ರತಿಭಟನೆಗೂ ಚರ್ಚೆಗೂ ಶಾಂತಿಯುತವಾದ ಬದಲಾವಣೆಯನ್ನು ಪಡೆದುಕೊಳ್ಳಲು ಬೇಕಾದ ಮಾತುಕತೆಯ ಸ್ವಾತಂತ್ರ್ಯಕ್ಕೂ ಮುಟ್ಟುಗೋಲು ಹಾಕದೆ ಇರುವಾಗ! ಎಲ್ಲ ಕಾಯದೆಗಳಿಗಿಂತಲೂ ವಾಕ್‌ಸ್ವಾತಂತ್ರ್ಯವನ್ನು ಅಪಹರಿಸುವ ಕಾಯದೆಯು ಅತ್ಯಂತ ಮೂಲಘಾತುಕವಾದುದು. ಯಾರೂ ತಮ್ಮ ವಿಮರ್ಶೆಗೆ ಬಾಹಿರವಾದ ಕಾಯದೆಯನ್ನು ಗೌರವಿಸರು; ಮತ್ತು ನೆರೆಯವರಿಗೆ ಯಾವ ಅನ್ಯಾಯವೂ ಆಗದಿರುವಂತೆ ಮುರಿಯಬಹುದಾದ ಕಾಯದೆಗಳು ಹಾಸ್ಯಾಸ್ಪದವೆನಿಸಿ, ಜನರ ದುರಾಶೆಗಳನ್ನು ಹೆಚ್ಚಿಸುತ್ತವೆಯಲ್ಲದೆ ಅವನ್ನು ಅದುಮಲಾರವು, ತಡೆಯಲಾರವು. ಏನು ಬೇಕಾದರೂ ಮಾತಾಡಬಹುದು, ಆದರೆ ಕಾರ್ಯತಃ ಮಾತ್ರ ಯಾವ ಅಪರಾಧವನ್ನೂ ಮಾಡಕೂಡದು ಎಂಬ ತತ್ವವನ್ನು ಅನುಸರಿಸಿದರೆ, ಎಂಥ ಸಂದರ್ಭದಲ್ಲೂ ರಾಜದ್ರೋಹವು ಜನರ ದೃಷ್ಟಿಯಲ್ಲಿ ಸಮರ್ಥನೀಯವೆನಿಸದು. ಆದುದರಿಂದ ರಾಜ್ಯದಲ್ಲಿ ಸರಕಾರದ ನಿಯಂತ್ರಣವು ಜನರ ಮನಸ್ಸಿನ ಮೇಲೆ ಎಷ್ಟು ಕಡಿಮೆಯಿದ್ದರೆ ಅಷ್ಟು ಉತ್ತಮ. ಎಂಥ ಆದರ್ಶ ಸರಕಾರದಲ್ಲಾದರೂ ಅಧಿಕಾರವು ಅವಂಚಕ ಅಧಿಕಾರಿಗಳ ತಲೆಯನ್ನೂ ಕೆಡಿಸದಿರದು. ಅದರಿಂದ ಸರಕಾರದವರ ಅಧಿಕಾರವು ಜನರ ಶರೀರ ಹಾಗೂ ಕಾರ್ಯಗಳಿಗಷ್ಟೇ ಪರಿಮಿತವಾಗಿರಬೇಕಲ್ಲದೆ ಅವರ ಆತ್ಮ ಹಾಗೂ ವಿಚಾರಗಳನ್ನು ಮುಟ್ಟಬಾರದು; ಹಾಗೆ ಅದು ಮುಟ್ಟಿದರೆ ಆಗ ಜನಾಭಿವೃದ್ಧಿ ಇತಿಶ್ರೀಗೊಂಡು ಅವರ ಸಂಘಟಿತ ಸ್ವರೂಪಕ್ಕೆ ಅದು ಮೃತ್ಯುವಾಗುವುದು ಖಂಡಿತ.

ಮೇಲಿನ ವಿಚಾರದ ನೇರವಾದ ನಿಗಮನರೂಪದಲ್ಲಿ ಸ್ಪಿನೋಜ ಸಾರುತ್ತಾನೆ: ಶಿಕ್ಷಣವೆಂದೂ ಸರಕಾರದ ಕೈಗೆ ಸೇರಬಾರದು – ಅದರಲ್ಲೂ ವಿಶ್ವವಿದ್ಯಾನಿಲಯದ ಮಟ್ಟದಲ್ಲಿ. ಸಾರ್ವಜನಿಕ ವೆಚ್ಚದಿಂದ ನಡೆಸಲಾಗುವ ವಿಶ್ವವಿದ್ಯಾನಿಲಯಗಳಲ್ಲಿ ಜನರ ನೈಸರ್ಗಿಕ ಶಕ್ತಿಗಳನ್ನು ಬೆಳೆಯಿಸುವುದರ ಬದಲು ಅವನ್ನು ನಿಯಂತ್ರಿಸಲಾಗುತ್ತದೆ. ಆದರೆ

ಸ್ವತಂತ್ರವಾದ ಸಾರ್ವಪ್ರಭುತ್ವದಲ್ಲಿ ತನ್ನ ಜವಾಬುದಾರಿಯಿಂದ, ತನ್ನದೇ ಖರ್ಚಿನಿಂದ ಸಾರ್ವಜನಿಕವಾಗಿ ಕಲಿಸುತ್ತೇನೆಂಬವನಿಗೆ ಅನುಮತಿ ದೊರಕುವುದರಿಂದ ಕಲೆ ಹಾಗೂ ವಿಜ್ಞಾನಗಳನ್ನು ಜನರು ಚೆನ್ನಾಗಿ ಕಲಿಯಲಾಗುತ್ತದೆ. ಇಂಥ ಸ್ವತಂತ್ರ ವ್ಯಕ್ತಿಗಳ ಪಾಠಶಾಲಾ ಪದ್ಧತಿಯ ಉಚ್ಚ ವಿದ್ಯಾಭ್ಯಾಸ ಪದ್ಧತಿಯನ್ನು ಹಿಂದೆ ಗ್ರೀಸ್‌ದೇಶ ಇಟ್ಟುಕೊಂಡಿತ್ತು.

ಖಾಸಗಿ ಲಾಭಕ್ಕಿಂತ ಸಾರ್ವಜನಿಕ ಹಕ್ಕು ಹೆಚ್ಚಿನದು ಎಂಬ ತತ್ವವನ್ನಾಧರಿಸಿ ಪರಂಪರಾಗತವಾದ ಯಾವ ರಾಜ್ಯಸ್ವರೂಪವನ್ನೂ ಕಾಯದೆ ಪಂಡಿತನು ನಡೆಸಿಕೊಂಡು ಹೋಗಬಹುದು. ರಾಜಪ್ರಭುತ್ವವೇನೋ ತುಂಬ ಸಮರ್ಥ; ಆದರೆ ಅದು ದಮನಶೀಲ ಮತ್ತು ಸೈನಿಕ ಪ್ರವೃತಿಯುಳ್ಳದ್ದು. ನಿರಂಕುಶ ಪ್ರಭುತ್ವದಲ್ಲಿ ಹಗೆಗರಿಯಬಾರದೆಂದು ಯುದ್ಧ ಕಾಲದಲ್ಲಿ ರಾಜರಹಸ್ಯಗಳನ್ನು ಸರ್ವತಂತ್ರಸ್ವತಂತ್ರ ಅರಸನು ಕಾಯ್ದಿಟ್ಟುಕೊಳ್ಳುತ್ತಾನೆ; ಅದೇ ಅವನು ತನ್ನ ಆ ಸರ್ವಾಧಿಕಾರದ ಮೂಲಕ ಶೋಷಕನಾದಾಗ, ದೈತ್ಯಧೋರಣ ಹಿಡಿದು, ಪ್ರಜೆಗಳನ್ನು ವಂಚಿಸಲು ಸಾರ್ವಜನಿಕ ಹಿತರಕ್ಷಣೆಯ ಹೆಸರಿನಲ್ಲಿ ರಾಜಕೀಯ ರಹಸ್ಯಗಳನ್ನು ಕಾಯ್ದಿಡುವ ಸಂಭವವಿದೆ. ಆದುದರಿಂದ ಹಗೆಗಳಿಗೊಮ್ಮೆ ಗೊತ್ತಾದರೂ ಅಡ್ಡಿಯಿಲ್ಲ; ಅಂತೂ ಅಂಥ ನೀತಿಯ ಬಲದಿಂದ ಪ್ರಜೆಗಳನ್ನು ವಂಚಿಸುವ ಪ್ರಸಂಗ ಬೇಡ. ಹೀಗೆ ಸ್ವಾರ್ಥಸಾಧನೆಗೆ ರಾಜನಿಗನುಕೂಲ ಮಾಡಿಕೊಡುವ ರಾಜಪ್ರಭುತ್ವಕ್ಕಿಂತ ಪ್ರಜಾಪ್ರಭುತ್ವವೇ ಮೇಲು. ಪ್ರಜಾಸತ್ತೆಯು ಅತ್ಯಂತ ತರ್ಕಬದ್ಧವಾದ ಪ್ರಭುತ್ವ. ಏಕೆಂದರೆ ಅಲ್ಲಿ ಎಲ್ಲರೂ ತಮ್ಮ ಕಾರ್ಯಗಳನ್ನು ಪ್ರಾಧಿಕಾರದ ನಿಯಂತ್ರಣಕ್ಕೊಳಪಡಿಸುತ್ತಾರೆ; ಆದರೆ ತಮ್ಮ ನಿರ್ಣಾಯಕವೂ ವಿಚಾರಪರವೂ ಆದ ಬುದ್ಧಿಯನ್ನು ಹಾಗೆ ಸರಕಾರಿ ಅಧಿಕಾರಕ್ಕೆ ಒಳಪಡಿಸಿಕೊಂಡಿರುವುದಿಲ್ಲ. ಎಲ್ಲರೂ ಒಂದೇ ತರದ ವಿಚಾರ ಇಟ್ಟುಕೊಂಡಿರುವುದು ಅಶಕ್ಯವಿರುವುದರಿಂದ ಅದರಲ್ಲಿ ಬಹುಸಂಖ್ಯರ ಅಭಿಪ್ರಾಯಕ್ಕೆ ಕಾಯದೆಯ ಬಲವಿರುತ್ತದೆ. ಪ್ರಜಾಸತ್ತೆಯಲ್ಲಿ ಸೈನಿಕ ಸೇವೆಯು ಸಾರ್ವತ್ರಿಕವಾಗಿರಬೇಕು; ಯಾರು ಬೇಕೆಂದರೆ ಅವರು ಸೈನ್ಯಕ್ಕೆ ಸೇರುವಂತಿರಬೇಕು. ಶಾಂತಿಕಾಲದಲ್ಲಿ ಎಲ್ಲ ನಾಗರಿಕರಿಗೂ ಅವರವರ ಶಸ್ತ್ರಗಳನ್ನು ಇಟ್ಟುಕೊಂಡಿರುವ ಹಕ್ಕಿರಬೇಕು. Single Tax ಅಥವಾ ಏಕಕರಪದ್ಧತಿಯು ಅದರಲ್ಲಿ ಸ್ವೀಕಾರ್ಯ. ಪ್ರಜಾಸತ್ತೆಯ ಒಂದೇ ಒಂದು ದೋಷವೆಂದರೆ ಅಯೋಗ್ಯರಾದ ಜನರನ್ನು ಅಧಿಕಾರಸ್ಥಳಗಳಲ್ಲಿ ಕುಳ್ಳಿರಿಸುವುದೇ ಆಗಿದೆ. ಚೆನ್ನಾಗಿ ತರಬೇತಾದ ಕೌಶಲವುಳ್ಳವರಿಗಷ್ಟೇ ಅಧಿಕಾರ ಸ್ಥಳಗಳನ್ನು ಪರಿಸೀಮಿತಗೊಳಿಸುವುದೊಂದನ್ನು ಬಿಟ್ಟರೆ ಅಂಥ ದುರ್ಯೋಗವನ್ನು ತಪ್ಪಿಸುವ ಉಪಾಯ ಬೇರಾವುದೂ ಇಲ್ಲ. ಬರಿ ಸಂಖ್ಯಾಬಲವೆಂದೂ ವಿವೇಕವನ್ನು ಹಡೆಯದು. ಅದು ಒಮ್ಮೆ ತನ್ನ ಅತ್ಯುಚ್ಚ ಅನುಗ್ರಹವನ್ನು ಅತಿ ನೀಚ ಹೊಗಳುಭಟ್ಟರಿಗೆ ಕೊಟ್ಟುಬಿಡುವ ಸಂಭವವಿದೆ. ಭೂರಿ ಜನರ ಮಾನಸಿಕ ಚಾಂಚಲ್ಯವು ಅನುಭವಸ್ಥರನ್ನು ಅಲ್ಲಿ ಬಹುಬೇಗ ಬೇಸರಗೊಳಿಸುತ್ತದೆ. ಜನಸಾಮಾನ್ಯರು ಭಾವನಾಧೀನರಾಗಿ ವರ್ತಿಸುವರಲ್ಲದೆ ಅವರಿಗೆ ವಿಚಾರಪರತೆಯಿಂದ ವರ್ತಿಸುವ ಅಭ್ಯಾಸ ತೀರ ಕಡಿಮೆ. ಹೀಗಿರುವುದರಿಂದ ಪ್ರಜಾಸತ್ತಾತ್ಮಕ ಸರಕಾರವೊಂದು ಅತ್ಯಲ್ಪ ಕಾಲ ಅಧಿಕಾರದಲ್ಲಿರುವ ಪುಢಾರಿಗಳ ಮೆರವಣಿಗೆಯಷ್ಟೇ

ಆದೀತು ಮತ್ತು ಯೋಗ್ಯತೆಯುಳ್ಳ ಜನರು ತಮಗಿಂತ ಕಡಿಮೆ ಯೋಗ್ಯತೆಯುಳ್ಳವರಿಂದ ಬೆಲೆಕಟ್ಟಿಸಿಕೊಂಡಿರಬೇಕಾಗುವುದರಿಂದ ನೌಕರಿಗಳಿಗೆ ಸೇರಿ ದುಡಿಯಲು ಅವರು ಬಹಳ ಹಿಂಜರಿಯುತ್ತಾರೆ. ಒಂದಲ್ಲ ಒಂದು ಸಲ ಸಮರ್ಥರು ಅಂಥ ರಾಜ್ಯಪದ್ಧತಿಯ ವಿರುದ್ಧವಾಗಿ ಬಂಡೆದ್ದು ಪ್ರತಿಭಟಿಸುವುದು ನಿಶ್ಚಿತ; ಒಮ್ಮೆ ಅವರು ಅಲ್ಪಸಂಖ್ಯರಿದ್ದರೂ ಅವರು ಹೆದರಲಾರರು. ಆದುದರಿಂದ ಪ್ರಜಾಸತ್ತೆಗಳು ಕ್ರಮೇಣ ಕುಬೇರ ಪ್ರಭುತ್ವಗಳಾಗಿಯೂ ಅನಂತರ ರಾಜಪ್ರಭುತ್ವಗಳಾಗಿಯೂ ಮಾರ್ಪಡುವುದು ಯೋಗ್ಯವೆಂದು ತೋರುತ್ತದೆ. 'ಅವ್ಯವಸ್ಥೆಗಿಂತ ಶೋಷಣೆಯಾದರೂ ಬೇಕು' ಎಂದೆನಿಸಿದಾಗ ಜನರು ಇದಕ್ಕೊಪ್ಪುತ್ತಾರೆ. ಶಕ್ತಿ ಅಥವಾ ಅಧಿಕಾರದ ಸರಿಸಮಾನತೆಯನ್ನು ಎಲ್ಲೂ ಬಹಳ ಕಾಲ ಕಾಯ್ದುಕೊಳ್ಳುವುದು ಕಷ್ಟ. ನಿಸರ್ಗತಃ ಮನುಷ್ಯರು ಅಸಮಾನಸ್ಕಂಧರು. ಅಸಮಾನಸ್ಕಂಧರಲ್ಲಿ ಸಮಾನತೆಯನ್ನರಸುವುದು ಹಾಸ್ಯಾಸ್ಪದ. ಶಾಸಕರಾಗಲು ಅರ್ಹತೆಯುಳ್ಳವರನ್ನು ಆಯುವ ಹಕ್ಕನ್ನು ಎಲ್ಲರಿಗೂ ಕೊಟ್ಟುಕೊಂಡು, ಅದೇ ಕಾಲದಲ್ಲಿ ಅವರಲ್ಲಿಯ ಅತ್ಯುತ್ತಮರ ಶಕ್ತಿಯ ಉಪಯೋಗವನ್ನು ಪಡೆಯುವುದು ಹೇಗೆಂಬ ಪ್ರಶ್ನೆಯನ್ನು ಪ್ರಜಾಸತ್ತೆ ಇನ್ನೂ ಬಿಡಿಸಬೇಕಾಗಿದೆ.

ಸ್ಪಿನೋಜನ ರಾಜನೈತಿಕ ವಿವೇಚನೆಯು ಅವನ ಮರಣದ ದೆಸೆಯಿಂದ ಅಪೂರ್ಣವಾಗಿ ಉಳಿಯುವಂತಾದರೂ ಅದರ ಪ್ರಭಾವ ಎಲ್ಲೆಲ್ಲೂ ಹರಡಿತು. ಅವನ ವಾಣಿಯ ಬಲವೇ ಹಾಗಿತ್ತು. ಎಲ್ಲ ಗಂಭೀರೋದ್ಗಾರಗಳೂ ಹಾಗೇ– ಬೇರೆ ಬೇರೆ ಅರ್ಥಮುಖಗಳನ್ನು ಬೇರೆ ಬೇರೆಯವರಿಗೆ ತೋರುತ್ತವೆ. ಋಷಿವಾಣಿಗಳ ಆಳ–ಅಗಲಗಳು ಸಾಗರೋಪಮವಲ್ಲವೇ?

## ೧೨

ಫ್ರೆಂಚ್ ತತ್ವಜ್ಞಾನಿ ವಾಲ್ಟೇರ್ ಬರೆದದ್ದು ೯೦ ಸಂಪುಟಗಳನ್ನು. ೧೮ನೆಯ ಶತಮಾನದ ಯುರೋಪಿನ ಪ್ರಾತಿನಿಧಿಕ ತತ್ವಶಾಸ್ತ್ರಜ್ಞನೆನಿಸಿದ ಈತನದು ತೈಲಬುದ್ಧಿ; ಅಥವಾ ಪಾದರಸದ್ದೆಂದರೂ ಸರಿಯೆ. ವಾಲ್ಟೇರ್ ಒಂದು ತಿರುಗಾಡುತ್ತಿದ್ದ ವಿಶ್ವಕೋಶ!

"ತಮ್ಮ ಕೊಠಡಿಯ ಮೂಲೆಗಳಲ್ಲಿ ಕುಳಿತು ರಾಜ್ಯಗಳನ್ನಾಳುವ ಜನರನ್ನು– ಒಂದು ಹಾಳೆಗೆ ಎರಡು ಬಿಲ್ಲೆಯಂತೆ ಜಗತ್ತನ್ನಾಳುವ ಈ ಕಾಯದೆ ಪಂಡಿತರನ್ನು (ವಿಧಾನ ಸಭಾಸದರನ್ನು)– ಕಂಡು ನಾನು ಬೇಸತ್ತು ಹೋಗಿದ್ದೇನೆ" ಎನ್ನುತ್ತಾನೆ ವಾಲ್ಟೇರ್. "ಇವರಿಗೆ ತಮ್ಮ ಹೆಂಡಿರು ಮಕ್ಕಳನ್ನೂ ಮನೆಮಾರುಗಳನ್ನೂ ನಡೆಸಿಕೊಂಡು ಹೋಗಲು ಬರುವುದಿಲ್ಲ; ಇಂಥವರು ವಿಶ್ವವನ್ನು ನಿಯಂತ್ರಿಸುವುದರಲ್ಲಿ ಎಷ್ಟು ಉತ್ಸಾಹ ತೋರಿಸುತ್ತಾರೆ!"

ಸರಕಾರದ ಅಥವಾ ರಾಜ್ಯದ ಸ್ವರೂಪಗಳ ಬಗ್ಗೆ ವಾಲ್ಟೇರ್ ಬಹಳ ಉತ್ಸಾಹ ತೋರಿಸುವುದಿಲ್ಲ. ಸಿದ್ಧಾಂತದೃಷ್ಟಿಯಿಂದ ಗಣರಾಜ್ಯ ಪದ್ಧತಿ (Republic) ಅವನ ಆದರಕ್ಕೆ ಪಾತ್ರವಾಗಿದೆ. ಆದರೆ ಅದರ ದೋಷಗಳನ್ನೂ ಅವನು ಹೇಳದೆ ಬಿಟ್ಟಿಲ್ಲ. ಅದರಲ್ಲಿ ಪಕ್ಷ–

ಪಂಗಡಗಳು ಉಂಟಾಗುತ್ತವೆ. ಅವು ಒಮ್ಮೆ ಅಂತಃಕಲಹ ಅಥವಾ ಯಾದವೀಯ ಯುದ್ಧವನ್ನು ತಾರದೆ ಹೋದರೂ ರಾಷ್ಟ್ರೀಯ ಐಕ್ಯವನ್ನು ನಾಶ ಮಾಡುವುದು ಖಂಡಿತ. ಭೌಗೋಲಿಕ ಸನ್ನಿವೇಶದಿಂದ ರಕ್ಷಿತವಾದ ಸಣ್ಣ ರಾಜ್ಯಗಳಿಗಷ್ಟೇ ಗಣರಾಜ್ಯ ಉಚಿತ; ಐಶ್ವರ್ಯದಿಂದ ಭ್ರಷ್ಟವಾಗದ ಮತ್ತು ಹರಿದು ಹಂಚಿಹೋಗದ ಸಮಾಜದಲ್ಲಿ ಅದು ಯಶಸ್ವಿಯಾದೀತು. ಸಾಮಾನ್ಯವಾಗಿ ಯಾವ ಜನರೂ ತಮ್ಮನ್ನು ಆಳಿಕೊಳ್ಳಲು ಅರ್ಹರಾಗಿರುವುದು ಅತಿ ವಿರಳ. ಗಣರಾಜ್ಯಗಳು ಹೆಚ್ಚೆಂದರೆ ತಾತ್ಕಾಲಿಕವಾಗಿ ಉಳಿದಾವು. ಅವು ಸಮಾಜದ ಮೊದಲ ಸ್ವರೂಪದವು. ಅವು ಹುಟ್ಟುವುದು ಕುಟುಂಬಗಳ ಒಕ್ಕೂಟದಿಂದ. ಆದರೆ ಆರ್ಥಿಕ ಸ್ಥಾನ–ಮಾನಗಳ ವ್ಯತ್ಯಾಸವು ಇಂಥ ಸರಕಾರಗಳನ್ನು ಕೊನೆಗೊಳಿಸಿಬಿಡುತ್ತದೆ. ಅಭಿವೃದ್ಧಿಯಾಗುತ್ತ ಹೋದ ಹಾಗೆ, ಹಾಗೇ ಆರ್ಥಿಕ ವ್ಯತ್ಯಾಸವಾಗುತ್ತ ಹೋಗುವುದೂ ಅನಿವಾರ್ಯ. ಶ್ರೀಮಂತರು ಕುಬೇರಪ್ರಭುತ್ವವು ಬೇಕೆಂದರೆ, ಜನರು ಪ್ರಜಾಪ್ರಭುತ್ವ ಬೇಕೆನ್ನುತ್ತಾರೆ. ರಾಜರನ್ನು ಕೇಳಿದರೆ ರಾಜಪ್ರಭುತ್ವವೇ ಒಳ್ಳೆಯದೆನ್ನುತ್ತಾರೆ. ಆದರೆ ಪ್ರಾಚೀನ ಕಾಲದಿಂದಲೂ ಜಗತ್ತಿನ ಬಹು ಭಾಗಗಳನ್ನು ರಾಜರೇ ಆಳುತ್ತ ಬಂದಿದ್ದಾರೆ. ಏಕೆ? ಬೆಕ್ಕಿನ ಕೊರಳಿಗೆ ಗಂಟೆ ಕಟ್ಟಬೇಕೆಂಬ ಸೂಚನೆ ತಂದ ಇಲಿಗಳನ್ನು ಕೇಳಿದರೆ ಉತ್ತರ ದೊರೆತೀತು! ಹೆಚ್ಚಿಗೆ ಹೇಳುವುದೇನು? ರಾಯನಿಗೆ ರಾಜ್ಯವಾದರೆ ರಾಗಿ ಬೀಸುವುದು ತಪ್ಪುವುದೇ? ಬಡವನಿಗೆ ಒಬ್ಬ ರಾಜ ಶೋಷಿಸುವುದೂ ಒಂದೇ, ನೂರಾರು ನಾಯಕರು ಅಥವಾ ಪ್ರತಿನಿಧಿಗಳು ಶೋಷಿಸುವುದೂ ಒಂದೇ ಅಲ್ಲವೆ?

ಇದೇ ಮೇರೆಗೆ ವಾಲ್ಟೇರನ ದೃಷ್ಟಿಯಲ್ಲಿ ಆ ಈ ರಾಷ್ಟ್ರೀಯತೆಯ ಹೆಮ್ಮೆಗೂ ಮಹತ್ವವಿಲ್ಲ. ಅವನು ವಿಡಂಬಿಸಿದ ಪ್ರಕಾರ ದೇಶಪ್ರೇಮವೆಂದರೆ ಸಾಮಾನ್ಯವಾಗಿ ತನ್ನದಲ್ಲದ ದೇಶಗಳೆಲ್ಲವನ್ನೂ ದ್ವೇಷಿಸುವುದೇ ಆಗಿದೆ. ಪರದೇಶಗಳಿಗೆ ಹಾನಿಯನ್ನುಂಟು ಮಾಡದೆ ತನ್ನ ದೇಶ ಅಭಿವೃದ್ಧಿ ಹೊಂದಬೇಕೆಂಬವನು ಬುದ್ಧಿವಂತ ದೇಶಭಕ್ತ; ಅವನೇ ವಿಶ್ವಪ್ರಜೆ. ಯುದ್ಧಾಸಕ್ತವಾದ ರಾಷ್ಟ್ರಗಳಲ್ಲಿ ಉತ್ತಮಾಧಮ ಭೇದಕ್ಕೆ ಅರ್ಥವಿಲ್ಲ. ಯುದ್ಧವು ಎಲ್ಲಕ್ಕೂ ಹೆಚ್ಚಿನ ಅಪರಾಧ. ಕ್ರಾಂತಿಯೂ ಯೋಗ್ಯವಲ್ಲ. ಏಕೆಂದರೆ, ಬಹುಸಂಖ್ಯರಿಗೆ ಒಂದು ಸಂಗತಿಯ ಸತ್ಯತೆ ಗೊತ್ತಾಗುವುದು ಬದಲಾದ ಪರಿಸ್ಥಿತಿಯ ಪರಿಣಾಮವಾಗಿ ಆ ಸತ್ಯವು ಸುಳ್ಳಿನ ಸ್ವರೂಪವನ್ನು ತಾಳಿದ ನಂತರ. ಜೊತೆಗೆ ಅಸಮಾನತೆಯು ಸಮಾಜದ ಎಲುಬಿನಲ್ಲಿ ಕೊರೆಯಲ್ಪಟ್ಟಿದೆ. ಮನುಷ್ಯನು ಮನುಷ್ಯನಾಗಿರುವವರೆಗೆ, ಜೀವನವೊಂದು ಸಂಗ್ರಾಮವಾಗಿರುವ ತನಕ, ಅದನ್ನಾರೂ ಕಿತ್ತೊಗೆಯಲಾರರು. ಸ್ವಾತಂತ್ರ್ಯವನ್ನು ಅನುಭವಿಸುವುದರಲ್ಲಿ ತಮ್ಮದನ್ನು ತಾವಿಟ್ಟು ಕೊಳ್ಳುವುದರಲ್ಲಿ ಮತ್ತು ಕಾಯದೆಯ ರಕ್ಷಣೆಯನ್ನು ಪಡೆಯುವುದರಲ್ಲಿ ಎಲ್ಲರಿಗೂ ಸಮವಾದ ಹಕ್ಕಿದೆ ಎಂದರೆ ಅದು ಸತ್ಯ. ಹಾಗಲ್ಲದೆ ಎಲ್ಲರೂ ಸಮಾನ ಬಲವುಳ್ಳವರು ಎಂದರೆ ಅದು ಸುಳ್ಳು. ಎಲ್ಲರೂ ಸಮಾನ ಸ್ವಾತಂತ್ರ್ಯ ಹೊಂದಿರಬಹುದು. ಸ್ವತಂತ್ರರಾಗಿರುವುದೆಂದರೆ ಕಾಯದೆಗಳ ಹೊರತು ಇನ್ನೊಂದಕ್ಕೆ ವಶವರ್ತಿಯಾಗದೆ ಇರುವುದು. ಇಂಗ್ಲೀಷರಿಗಿದು ಚೆನ್ನಾಗಿ ಗೊತ್ತು. ಹಾಗಿದ್ದಾಗ ಮಾತ್ರ ಶಾಂತಿಯುತವಾದ ಕ್ರಾಂತಿಸಾಧ್ಯ. ರೂಸೋವಿನ ಅನುಯಾಯಿಗಳಿದನ್ನೊಪ್ಪದೆ

ಸಮಾನತೆಗೇ ಪ್ರಾಧಾನ್ಯವಿತ್ತು ಸ್ವಾತಂತ್ರ್ಯವನ್ನು ಗಲ್ಲಿಗೇರಿಸಿ ಸಮಾನತೆಯನ್ನು ಸಾಧಿಸಲು ಯತ್ನಿಸಿದರು.

ವಾಲ್ಟೇರನಿಗೆ ಕಲ್ಪನಾರಮ್ಯವಾದ ಸ್ವರ್ಗೀಯ ರಾಜ್ಯದ ಸಾಧ್ಯತೆಯಲ್ಲಿ ನಂಬಿಗೆಯಿಲ್ಲ. ಸಮಾಜವೆಂಬುದು ಸಾವಕಾಶವಾಗಿ ಕಾಲಮಾನದಲ್ಲಿ ಬೆಳೆದು ಬರುವ ವಸ್ತುವಲ್ಲದೆ ತರ್ಕಶಾಸ್ತ್ರದಲ್ಲಿ ಬರುವ Syllogism– ಪಂಚಾವಯವ ವಾಕ್ಯವಲ್ಲ. ಗತಕಾಲದ ಚರಿತ್ರೆಯನ್ನು ಹೆಬ್ಬಾಗಿಲಿನಿಂದ ಹೊರಗಟ್ಟಿದರೆ, ಹಿತ್ತಿಲ ಬಾಗಿಲಿಂದ ಅದು ಬಂದೇ ತೀರುತ್ತದೆ. ನಾವು ಸಾಕ್ಷಾತ್ತಾಗಿ ಬದುಕುತ್ತಿರುವ ಪ್ರಪಂಚದಲ್ಲಿರುವ ದುಃಖ–ದುರ್ಣಯಗಳನ್ನು ಯಾವ ಬದಲಾವಣೆ ಮಾಡಿ ಕಡಿಮೆ ಮಾಡಬಹುದು? ಎಂಬುದೇ ನಮ್ಮೆದುರಿರುವ ಸಮಸ್ಯೆ ಎನ್ನುತ್ತಾನೆ ವಾಲ್ಟೇರ್.

ವಾಲ್ಟೇರನು ವಿಚಾರಪರತೆಯನ್ನೇ ನಂಬಿದವನು. ಅದರಿಂದಲೇ ಅವನು 'ನಾವು ಮಾತು ಹಾಗೂ ಲೇಖನಗಳಿಂದ ಜನರನ್ನು ಪ್ರಬುದ್ಧರನ್ನಾಗಿ ಮಾಡಬಹುದು, ಉತ್ತಮರನ್ನಾಗಿ ಮಾಡಬಹುದು' ಎಂದು ಹೇಳುತ್ತಾನೆ. ಮಾನವರ ಸ್ವಭಾವವನ್ನು ಬದಲಾಯಿಸದೆ ಅವರು ಕಟ್ಟಿದ ಸಂಸ್ಥೆಗಳನ್ನು ಬದಲಾಯಿಸಹೋದರೆ, ಹಾಗೆ ಬದಲಾಯಿಸಿದ ಮರುಕ್ಷಣದಲ್ಲಿಯೇ ಅಪರಿವೃತ್ತ ಸ್ವಭಾವದ ಆ ಮಾನವರು ಅದನ್ನು ಮತ್ತೆ ಮೊದಲಿನಂತೆ ಕಟ್ಟದೆ ಬಿಡರು. ಮನುಷ್ಯರಿಂದ ಸಂಸ್ಥೆಗಳು, ಸಂಸ್ಥೆಗಳಿಂದ ಮನುಷ್ಯರು– ಅವರು ಅವನ್ನು ರೂಪಿಸಿದರೆ, ಅವು ಅವರನ್ನು ರೂಪಿಸುತ್ತವೆ. ಅವರು ಬದಲಾಗದೆ ಅವು ಬದಲಾಗಲಾರವು. ಅವು ಬದಲಾಗದೆ ಅವರು ಬದಲಾಗಲಾರರು! ಈ ವಿಷಮವೃತ್ತ ಅಥವಾ ಅನ್ಯೋನ್ಯಾಶ್ರಯವನ್ನು ಗೆಲ್ಲಬೇಕಾದರೆ ಬುದ್ಧಿಯು ಕಾರ್ಯವೆಸಗಬೇಕು. ಬುದ್ಧಿಯು ಜನರಿಗೆ ಶಿಕ್ಷಣ ನೀಡಿ ಮೆಲ್ಲಗೆ ಶಾಂತರೀತಿಯಿಂದ ಅವರನ್ನು ಬದಲಾಯಿಸಬಲ್ಲುದು. ರೂಸೋವಿನ ಪ್ರಕಾರ ಇದು ಸಾಧ್ಯವಾಗುವುದು ಮೂಲ ಪ್ರವೃತ್ತಿಯ ಹಾಗೂ ತೀಕ್ಷ್ಣ ಭಾವನೆಯ ಕಾರ್ಯದಿಂದ ಮಾತ್ರ; ಅದೊಂದೇ ಹಳೆಯ ಸಂಸ್ಥೆಗಳನ್ನು ಅಳಿದು ಹೃದಯದ ಅಪ್ಪಣೆಯ ಮೇರೆಗೆ ಹೊಸವನ್ನು ಕಟ್ಟಬಲ್ಲುದು. ಬಹುಶಃ ಸತ್ಯವು ವಾಲ್ಟೇರ್ ಮತ್ತು ರೂಸೋಗಳ ನಡುವೆ ಇರುವಂತೆ ತೋರುತ್ತದೆ. ಹಳೆಯ ಸಂಸ್ಥೆಗಳನ್ನಳಿಯಲು ರೂಸೋ ಹೇಳಿದ ಹಾಗೆ ಮೂಲಪ್ರವೃತ್ತಿಯ ಬಲ ಬೇಕು; ಹೊಸ ಸಂಸ್ಥೆಗಳನ್ನು ರಚಿಸಲು ವಾಲ್ಟೇರ್ ಹೇಳುವ ಹಾಗೆ ಬುದ್ಧಿ ಕಾರ್ಯಪ್ರವೃತ್ತವಾಗಬೇಕು.

ಧರ್ಮದ ಕುರಿತು ವಾಲ್ಟೇರ್ ಅಭಿಪ್ರಾಯ ಪಡುವದು ತುಂಬ ಮನನೀಯವಾಗಿದೆ. ದೈವಶ್ರದ್ಧೆ ನೀತಿ ಪ್ರಚೋದಕವೆಂಬುದು ನಿಜ; ಅದರೆ ಅದರಲ್ಲಿ ಅಂಧಶ್ರದ್ಧೆಗೆ ಅವಕಾಶವಿರಕೂಡದು. ಧರ್ಮದಿಂದ ಆದ ಒಳಿತನ್ನು ಯಾರು ಬೇಡವೆಂದಾರು? ಆದರೆ ಅದಕ್ಕಂಟಿಕೊಂಡ ಅಂಧಶ್ರದ್ಧೆಗಳಿಂದಾದ ಹಾವಳಿಯೂ ಅಷ್ಟಿಷ್ಟಲ್ಲ. ಧರ್ಮದ ಕತ್ತು ಹಿಸುಕುವ ವಿಷಸರ್ಪವೆಂದರೆ ಅಂಧಶ್ರದ್ಧೆ. ಧರ್ಮಶ್ರದ್ಧೆ ಕೆಡದಂತೆ ಅದಕ್ಕೆ ಸುತ್ತಿಕೊಂಡ ಕುರುಡುನಂಬಿಗೆಗಳನ್ನು ಹೊಡೆದೋಡಿಸುವುದು ನಮ್ಮೆಲ್ಲರ ಆದ್ಯಕರ್ತವ್ಯ.

## ೧೩

ಯುರೋಪ್ ಖಂಡದಲ್ಲಿ ಅನಂತರ ಪ್ರಖ್ಯಾತನಾದವನು ಜರ್ಮನ್ ತತ್ವಜ್ಞಾನಿ ಇಮ್ಯಾನುಯಲ್ ಕ್ಯಾಂಟ್. ಈತನ ಪ್ರಕಾರ ಜೀವನಸಮರದಲ್ಲಿ ಒಬ್ಬನು ಮತ್ತಿತರರ ವಿರುದ್ಧ ಹೋರಾಡುವುದು ಸ್ವಾಭಾವಿಕ. ಅಂಥ ಹೋರಾಟದ ಮೂಲಕ ನಿಸರ್ಗವು ಜೀವನದ ಸುಪ್ತ ಶಕ್ತಿಗಳನ್ನು ಬೆಳೆಯಿಸುತ್ತದೆ. ಹೋರಾಟವು ಪ್ರಗತಿಯ ಅನಿವಾರ್ಯ ಹಿಮ್ಮೇಳ. ಎಲ್ಲರೂ ಸಾಮಾಜಿಕತೆಯುಳ್ಳವರಾದರೆ ಸಮಾಜವು ಕೊಳೆತು ನಾರಲಾರಂಭಿಸೀತು. ಮಾನವಕುಲ ಬದುಕಿ ಉಳಿದು ಬೆಳೆಯಬೇಕಾದರೆ ವೈಯಕ್ತಿಕತೆ ಹಾಗೂ ಸ್ಪರ್ಧೆ ಎಂಬ ಒಂದು ವಿಧದ ಬೆರಕೆಯ ಲೋಹ ಅಗತ್ಯ. ಅಸಾಮಾಜಿಕ ಗುಣವೊಂದು ಮನುಷ್ಯನಲ್ಲಿ ಇಲ್ಲದಿದ್ದರೆ ಮನುಷ್ಯರೆಲ್ಲರೂ ಆರ್ಕೇಡಿಯದ ಕುರುಬರಂತೆ ಸಂಪೂರ್ಣ ಸಾಮರಸ್ಯದಿಂದ, ಪ್ರೇಮದಿಂದ, ತೃಪ್ತಿಯಿಂದ ಹಾಯಾಗಿ ಇದ್ದು ಬಿಡುತ್ತಿದ್ದರು. ಆಗ ಅವರ ಸುಪ್ತಶಕ್ತಿಗಳೆಲ್ಲವೂ ಸುಪ್ತವಾಗಿಯೇ ಉಳಿದು ಬಿಡುತ್ತಿದ್ದವು. ಮನುಷ್ಯನೇನೋ ಹೊಂದಿಕೆಯನ್ನು ಬಯಸುತ್ತಾನೆ. ಆದರೆ ನಿಸರ್ಗಕ್ಕೆ ಗೊತ್ತು– ಅವನ ಅಂತಃಶಕ್ತಿಗಳು ಕಾರ್ಯಪ್ರವೃತ್ತವಾಗಿ ಪ್ರಯತ್ನದ ಮೂಲಕ ಅಭಿವೃದ್ಧಿ ಹೊಂದಬೇಕಾದರೆ ಅವನಿಗೆ ವಿಸಂವಾದ ಬೇಕೇ ಬೇಕು ಎಂದು. ಆದುದರಿಂದ ಜೀವನಕ್ಕಾಗಿ ಮಾಡುವ ಸಂಗ್ರಾಮವು ಕೆಟ್ಟದ್ದಲ್ಲ. ಆದರೆ ಅದು ಕೆಲ ಪರಿಮಿತಿಗಳಲ್ಲಿ ಸಾಗಬೇಕೆಂಬುದು ಜನರಿಗೆ ಬಹುಬೇಗ ಗೊತ್ತಾಗುತ್ತದೆ. ಅದರಿಂದಲೇ ಸಮಾಜದಲ್ಲಿ ಕೆಲ ನೀತಿ, ನಿಯಮ, ಕಾಯದೆ, ಕಟ್ಟಳೆಗಳು ಉಂಟಾಗುತ್ತವೆ; ನಾಗರಿಕ ಸಮಾಜ ಬೆಳೆಯುತ್ತದೆ.

ಆದರೆ ಸಮಾಜರೂಪದಲ್ಲಿ ಸಂಘಟಿತರಾಗಿ ಬಾಳಲು ಜನರನ್ನು ಪ್ರೇರಿಸಿದ, ಒತ್ತಾಯಿಸಿದ ಅಸಾಮಾಜಿಕತೆಯೆ ಒಂದೊಂದು ಸಾರ್ವಪ್ರಭುತ್ವವೂ ತನ್ನ ವಿದೇಶ ಸಂಬಂಧಗಳಲ್ಲಿ ಅನಿಯಂತ್ರಿತ ಸ್ವಾತಂತ್ರ್ಯವನ್ನು ವಹಿಸುವ ಮನಃಪ್ರಣಾಲಿಯುಳ್ಳದ್ದು ಆಗುವಂತೆಯೂ ಮಾಡುತ್ತದೆ. ಅಂದರೆ ಮೊದಲು ವ್ಯಕ್ತಿಗಳು ತಮ್ಮ ಪರಸ್ಪರ ಅಸಾಮಾಜಿಕತೆಗಳಿಂದ ಪಾರಾಗಲು ಸಂಘಟಿತರಾಗಿ ರಾಜ್ಯವನ್ನು ಕಟ್ಟಿಕೊಂಡರಲ್ಲವೆ? ಹಾಗೇ ಆ ವ್ಯಕ್ತಿಗಳ ಅಸಾಮಾಜಿಕತೆ ಅವರ ರಾಜ್ಯಗಳಲ್ಲೂ ಕಂಡು ಬಂದು ವೈಯಕ್ತಿಕ ರಾಜ್ಯಗಳು ಪರಸ್ಪರ ಘರ್ಷಣಕ್ಕಾರಂಭಿಸಿವೆ. ಇದರಿಂದ ಪಾರಾಗಲು ರಾಜ್ಯಸಮಾಜವೊಂದು ನಿಯಮಘಟಿತ ಸಮಾಜಗಳಂತೆಯೇ ರಚಿತವಾಗಬೇಕಾಯಿತು. ಅನಾಗರಿಕ ವ್ಯಕ್ತಿಗಳು ಕಾಯದೆಯ ಕರಾರಿನ ತತ್ವವನ್ನಾಧರಿಸಿ ಸಮಾಜವನ್ನು ಕಟ್ಟಿಕೊಂಡು ಆ ಮೂಲಕ ಪರಸ್ಪರ ದುಷ್ಟತನದಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಹೊರಟಂತೆಯೇ ಜಗತ್ತಿನ ರಾಜ್ಯಗಳೂ ತಮ್ಮ ತಮ್ಮ ವೈಯಕ್ತಿಕ ಹಿಂಸಾಶೀಲದಿಂದ ಪರಸ್ಪರವಾಗಿ ಸಂರಕ್ಷಣೆ ಪಡೆಯಲು ರಾಜ್ಯಸಮಾಜವನ್ನು ಕಟ್ಟಿಕೊಳ್ಳುವ ಕಾಲವೀಗ ಬಂದಿದೆ. ಇತಿಹಾಸದ ಇಡಿ ಅರ್ಥವೇ, ಗತಿಯೇ ಕ್ರೋಧ–ಹಿಂಸೆಗಳನ್ನು ದಿನೇದಿನೇ ಹೆಚ್ಚು ಹೆಚ್ಚು ನಿಯಂತ್ರಣಕ್ಕೊಳಪಡಿಸುತ್ತ ಹೋಗಿ, ಆ ಮೂಲಕ ಸತತವೂ ಶಾಂತಿಯ ಕ್ಷೇತ್ರವನ್ನು ವಿಸ್ತರಿಸುತ್ತ ಮುಂಬರಿಯುವುದಾಗಿದೆ.

ಮಾನವಕುಲದ ಇಡಿ ಇತಿಹಾಸವನ್ನು ಅವಲೋಕಿಸಿದರೆ, ಒಳಗೂ, ಹೊರಗೂ ಪರಿಪೂರ್ಣವಾದ ಒಂದು ರಾಜಕೀಯ ಸಂವಿಧಾನ ತಯಾರಾಗಬೇಕು– ಆ ಅದ್ವಿತೀಯ ರಾಜ್ಯದಲ್ಲಿ ಮಾನವರ ನಿಸರ್ಗದತ್ತ ಶಕ್ತಿಗಳೆಲ್ಲವೂ ಸಂಪೂರ್ಣವಾಗಿ ಬೆಳೆದು ನಿಲ್ಲಬೇಕು ಎಂಬ ಗುಪ್ತ ಯೋಜನೆಯನ್ನು ನಿಸರ್ಗವು ಕಾರ್ಯರೂಪಕ್ಕೆ ತರಲೆದ್ದಂತೆ ತೋರುತ್ತದೆ. ಇಂಥ ಪ್ರಗತಿಯಿಲ್ಲದೆ ಹೋದಲ್ಲಿ ಉತ್ತರೋತ್ತರವಾಗಿ ಎದ್ದ ನಾಗರಿಕತೆಗಳ ದುಡಿತವೆಲ್ಲವೂ ವ್ಯರ್ಥ ಎನ್ನಬೇಕಾಗುತ್ತದೆ; ಮತ್ತು ಹಿಂದುಗಳಂತೆ ಎಲ್ಲರೂ ಭೂಮಿಯು ನಾವು ಹಿಂದೆ ಎಂದೋ ಮಾಡಿ ಮರೆತುಬಿಟ್ಟ ಹಳೆಯ ಪಾಪಗಳನ್ನು ತೊಳೆಯಲು ಸಿದ್ಧವಾದ ಸ್ಥಳ ಎಂದು ನಂಬಬೇಕಾಗುತ್ತದೆ.

ಸಾರ್ವಜನಿಕ ಶಿಕ್ಷಣಕ್ಕಾಗಿ ವೆಚ್ಚ ಮಾಡಲು ನಮ್ಮ ಶಾಸಕರ ಹತ್ತಿರ ಹಣವಿಲ್ಲ. ಏಕೆಂದರೆ ಅವರ ಎಲ್ಲ (ಸರಕಾರದ) ಹಣವೂ ನಾಳೆ ಬರಲಿರುವ ಯುದ್ಧದ ಸಿದ್ಧತೆಗಾಗಿ ಮಾಡುವ ವೆಚ್ಚದ ಖಾತೆಗೆ ಸೇರಿಸಲ್ಪಟ್ಟಿದೆ. ಸಿದ್ಧ ಸೈನ್ಯಗಳೆಲ್ಲವನ್ನೂ ವಿಸರ್ಜಿಸದ ಹೊರತು ರಾಷ್ಟ್ರಗಳಿಂದು ನಾಗರಿಕ ಎನಿಸಲಾರವು. ಸಿದ್ಧಸೈನ್ಯಗಳು (Standing Armies) ಪ್ರತಿಯೊಂದು ರಾಜ್ಯವನ್ನೂ ಇನ್ನೊಂದಕ್ಕಿಂತ ಹೆಚ್ಚು ಸಶಸ್ತ್ರ ಸೈನಿಕರನ್ನಿಟ್ಟುಕೊಳ್ಳಬೇಕೆಂದು ಪೈಪೋಟಿ ನಡೆಸಲು ಹಚ್ಚುತ್ತವೆ. ಸೈನಿಕರ ಸಂಖ್ಯೆಯನ್ನು ಬೆಳೆಯಿಸುವುದಕ್ಕೆ ಗಡಿಯಿಲ್ಲ, ಮಿತಿಯಿಲ್ಲ. ಸೈನ್ಯಸಜ್ಜೆಗಾಗಿ ಮಾಡಬೇಕಾಗಿ ಬರುವ ವೆಚ್ಚದ ಫಲವಾಗಿ ಕ್ರಮೇಣ ಕಾಲ ಹೋದ ಹಾಗೆ ಶಾಂತಿಯು ಒಂದು ಚಿಕ್ಕ ಯುದ್ಧಕ್ಕಿಂತ ಹೆಚ್ಚು ದಮನಕಾರಿ ಎನಿಸುತ್ತದೆ. ಈ ಅಧಿಕ ವೆಚ್ಚದ ಭಾರವನ್ನು ಪರಿಹರಿಸಿಕೊಳ್ಳಲೆಂದು ಸಿದ್ಧ ಸೈನ್ಯವನ್ನು ಆಕ್ರಾಮಕ ಯುದ್ಧಗಳನ್ನು ನಡೆಸಲು ಬಳಸಿಕೊಳ್ಳುವುದು ಅಗತ್ಯವೆನಿಸುತ್ತದೆ. ಏಕೆಂದರೆ ಯುದ್ಧಕಾಲದಲ್ಲಿ ಸೈನ್ಯವು ಆಜ್ಞೆ–ಆಗ್ರಹ–ಅಪಹಾರಗಳ ಮೂಲಕ ದೇಶವನ್ನು ಹೀರಿ ತನ್ನನ್ನು ಹೊರೆದುಕೊಳ್ಳುತ್ತದೆ. ಈ ಕಾರ್ಯವನ್ನದು ಸಾಧ್ಯವಾದರೆ ಶತ್ರುರಾಜ್ಯದಲ್ಲಿ ನಡೆಸುತ್ತದೆ. ಸಾಧ್ಯವಾಗದಿದ್ದಲ್ಲಿ ಸ್ವದೇಶದಲ್ಲೇ ನಡೆಸಿಬಿಡುತ್ತದೆ. ಈ ಎರಡನೆಯ ಕ್ರಮ ಕೂಡ ಸರಕಾರಿ ವೆಚ್ಚದಿಂದ ಅದನ್ನು ಸಾಕುವುದಕ್ಕಿಂತ ಉತ್ತಮ ಎನಿಸುತ್ತದೆ– ಆಗ.

ಹೀಗೆ ಸಾಮ್ರಾಜ್ಯಕ ಲೋಭವು ರಾಜ್ಯಗಳಿಗೆ ಹಿಡಿಯಲು ಯುರೋಪಿನಲ್ಲಿ ಆ ಕಾಲದಲ್ಲಿದ್ದ ಸ್ವಯಂಪ್ರಭು ಸಂವಿಧಾನ (Oligarchical Constitution) ಕಾರಣವಾಯಿತೆಂಬುದು ಕ್ಯಾಂಟನ ಮತ. ಪರರಾಷ್ಟ್ರಗಳಿಂದ ಲೂಟಿಮಾಡಿ ತಂದ ಧನ–ಕನಕಗಳನ್ನು ರಾಜ್ಯದ ಕೆಲವೇ ಸ್ವಯಂಪ್ರಭುಗಳು ತಮ್ಮಲ್ಲಿ ಹಂಚಿಕೊಂಡು ಬಿಡುತ್ತಾರೆ. ಪ್ರಜಾಸತ್ತೆ ಇರುವ ರಾಜ್ಯದಲ್ಲಾದರೆ ಈ ಅಂತಾರಾಷ್ಟ್ರೀಯ ಕಳ್ಳ ಮಾಲುಗಳ ಹಂಚುವಿಕೆ ಬಹಳ ಜನರಲ್ಲಿ ನಡೆಯಬೇಕಾಗಿ ಬರುವುದರಿಂದ, ಹಾಗೆ ಹಂಚಿದರೆ ಪ್ರತಿಯೊಬ್ಬ ಪ್ರತಿನಿಧಿಗೂ ಅತ್ಯಲ್ಪ ಸಿಗುವುದರಿಂದ ಅಂಥ ಸಾಮ್ರಾಜ್ಯಕ ಅಕ್ರಮಣಗಳು ಆಕರ್ಷಕವೆಂದು ಜನರಿಗೆ ತೋರಲಾರದು. ಈ ದೃಷ್ಟಿಯಿಂದ ವಿಚಾರ ಮಾಡಿದ ಕ್ಯಾಂಟ್ ಮಹಾಶಯನು ೧೭೯೫ರಲ್ಲಿ ಪ್ರಕಟವಾದ "ಶಾಶ್ವತ ಶಾಂತಿ" ಎಂಬ ನಿಬಂಧದಲ್ಲಿ ಮೊಟ್ಟಮೊದಲು– "ಪ್ರತಿಯೊಂದು ರಾಜ್ಯದ ವ್ಯಾವಹಾರಿಕ ಸಂವಿಧಾನವೂ ಗಣಸತ್ತಾತ್ಮಕವಾಗಿರಬೇಕು; ಮತ್ತು

ರಾಜ್ಯದಲ್ಲಿಯ ಎಲ್ಲರ ಮತಗಣನೆ ನಡೆಸದೆ ಯುದ್ಧವನ್ನೆಂದೂ ಸಾರಕೂಡದು"– ಎಂದು ಬರೆದ. ಸಾಕ್ಷಾತ್ತಾಗಿ ಯುದ್ಧ ಮಾಡುವವರಿಗೆ ಯುದ್ಧ ಬೇಕೋ ಶಾಂತಿ ಬೇಕೋ ಎಂಬುದನ್ನು ನಿರ್ಣಯಿಸುವ ಹಕ್ಕಿದ್ದಲ್ಲಿ ಇತಿಹಾಸವೆಂದೂ ರಕ್ತಾಕ್ಷರಗಳಿಂದ ಬರೆಯಲ್ಪಡದು. ಹಾಗಲ್ಲದೆ ಪ್ರಜೆಗೆ ಮತಾಧಿಕಾರವಿಲ್ಲದ ರಾಜ್ಯದಲ್ಲಿ ಅರ್ಥಾತ್ ಗಣಸತ್ತೆಯಿಲ್ಲದಲ್ಲಿ ಯುದ್ಧ ಮಾಡಬೇಕೆಂದು ನಿಮಿಷಾರ್ಧದಲ್ಲಿ ನಿರ್ಣಯಿಸಿಬಿಡಬಹುದು. ಏಕೆಂದರೆ, ಅಂಥ ರಾಜ್ಯದ ಶಾಸಕರು ಕೇವಲ ಪ್ರಜೆ ಇಲ್ಲವೆ ನಾಗರಿಕರಲ್ಲ; ಅವರು ಅದರ ಒಡೆಯರು; ಅವರಿಗೆ ಯುದ್ಧದಿಂದ ಯಾವ ವೈಯಕ್ತಿಕ ಹಾನಿಯೂ ಆಗದು; ಅವರು ತಮ್ಮ ಯಾವ ಐಷಾರಾಮಾಂಶವನ್ನೂ ಕಳೆದುಕೊಳ್ಳಬೇಕಾಗಿಲ್ಲ. ಅಂಥವರು ಬೇಟೆಗೆ ಹೋಗಬೇಕೆಂದು ನಿರ್ಣಯಿಸುವಷ್ಟು ಸುಲಭವಾಗಿ ಯುದ್ಧಮಾಡಲು ನಿರ್ಣಯಿಸಬಲ್ಲರು!

ಯಾವ ಸರಕಾರದ ಕರ್ತವ್ಯವಾದರೂ ವ್ಯಕ್ತಿಗೆ ನೆರವೀಯುವುದು ಮತ್ತು ಆತನನ್ನು ಅಭಿವೃದ್ಧಿಗೊಳಿಸುವುದಲ್ಲದೆ, ಅವನನ್ನು ಬೇಕಾದ ಹಾಗೆ ಬಳಸಿಕೊಳ್ಳುವುದು ಮತ್ತು ದುರುಪಯೋಗ ಮಾಡಿಕೊಳ್ಳುವದು ಅಲ್ಲ. ಆದುದರಿಂದ ದಾಸ್ಯ ಹಾಗೂ ಶೋಷಣೆಗಳಿಲ್ಲದ ಪ್ರಜಾಸತ್ತಾತ್ಮಕವಾದ ಗಣರಾಜ್ಯವೇ ಸರ್ವಾದರಣೀಯ. ಪ್ರತಿಯೊಬ್ಬನಿಗೂ ಅವನವನದೇ ಆದ ಒಂದು ಸಿದ್ಧಿಯಿದೆ, ಪುರುಷಾರ್ಥವಿದೆ ಎಂಬುದು ಸ್ಥಿರಗೊಳ್ಳಬೇಕು. ಯಾವುದೋ ಒಂದು ಹೊರ ಉದ್ದೇಶಕ್ಕಾಗಿ ಪ್ರಜೆಯನ್ನು ಬಳಸಿಕೊಳ್ಳುವುದು ಮಹಾ ಅಪರಾಧ. (ಇನ್ನು ಪ್ರಜೆಗಳ ಉದ್ಧಾರದ ಹೆಸರಿನಲ್ಲೇ ಅವರನ್ನೂ ಅವರ ಶ್ರಮ–ವಿತ್ತಗಳನ್ನೂ ದುರುಪಯೋಗ ಮಾಡಿಕೊಂಬ ತಂತ್ರವನ್ನೂ ರಾಜಕಾರಣಿಗಳು ಬಲ್ಲರೆನ್ನಿ!) ಪ್ರಜೆಯ ವ್ಯಕ್ತಿಗೌರವಕ್ಕೆ ಬೆಲೆ ಕೊಡದ ಧರ್ಮವಾದರೂ ಒಂದು ವಂಚನೆಯೇ, ಕಪಟನಾಟಕವೇ. ಆದುದರಿಂದ ರಾಜ್ಯದಲ್ಲಿ 'ಸಮಾನತೆ' ಇರಬೇಕು. ಯಾವುದರಲ್ಲಿ ಸಮಾನತೆ? ವ್ಯಕ್ತಿ ಸಾಮರ್ಥ್ಯದಲ್ಲಲ್ಲ; ಅವಕಾಶ ಲಾಭದಲ್ಲಿ. ವ್ಯಕ್ತಿಗಳಿಗೆ ತಮ್ಮ ವೈಯಕ್ತಿಕ ಶಕ್ತಿಗಳನ್ನು ಬೆಳೆಸಿಕೊಂಡು ಬಳಸಲು ಸಮಾನಾವಕಾಶವಿರಬೇಕು. ಆಗರ್ಭವೂ ವರ್ಗನಿಷ್ಠವೂ ಆದ ಹಕ್ಕುಗಳಿಗೆ ಅರ್ಥವಿಲ್ಲ. ಎಲ್ಲ ಆನುವಂಶಿಕ ಹಕ್ಕುದಾರಿಕೆಯೂ ಹಿಂದೆ ಒಂದಲ್ಲ ಒಂದು ಸಲ ಇನ್ನೊಬ್ಬರಿಂದ ಕಸಿದುಕೊಂಡದ್ದೇ ಸರಿ; ಹೇಗಾದರೂ ಗೆದ್ದುಕೊಂಡದ್ದೇ ಆಗಿರುತ್ತದೆ. ಈ ಪ್ರಕಾರ ಎಲ್ಲೆಲ್ಲೂ ಪ್ರಜಾಪ್ರಭುತ್ವ ನಿಲ್ಲಬೇಕು, ಎಲ್ಲರಿಗೂ ಸ್ವಾತಂತ್ರ್ಯ ಸಿಗಬೇಕು ಎಂದು ಸಾರಿದ ವೀರ ತತ್ವಜ್ಞಾನಿ ಕ್ಯಾಂಟ್ ತನ್ನ ವೃದ್ಧದಶೆಗೆ ಮುಟ್ಟಿ ೧೮೦೪ರಲ್ಲಿ ಅಮರನಾದನು.

## ೧೪

ಆ ಬಳಿಕ ಜರ್ಮನಿಯಲ್ಲಿ ಜನ್ಮ ತಳೆದ ಮತ್ತೊಬ್ಬ ತತ್ವಜ್ಞಾನಿ ಪ್ರಸಿದ್ಧನಾದ. ಅವನೇ ಜಾರ್ಜ್ ವಿಲ್‌ಹೆಮ್ ಫ್ರೆಡ್‌ರಿಕ್ ಹೆಗೆಲ್. ಇವನು ಸ್ಥಾಪಿಸಿದ್ದು "ವಿರೋಧ ಸಮನ್ವಯ ಸಿದ್ಧಾಂತವನ್ನು." ಅದರ ಪ್ರಕಾರ ಪ್ರತಿಯೊಂದು ಸನ್ನಿವೇಶದಲ್ಲಿಯೂ ಎರಡು ವಿರುದ್ಧ

ಕೋಟಿಗಳಿರುತ್ತವೆ. ಅವನ್ನು ವಿಕಾಸವು ಒಂದು ಹೊಂದಿಕೊಳ್ಳಬಲ್ಲ ಐಕ್ಯದಿಂದ ಸಮನ್ವಯಗೊಳಿಸಬೇಕು. ನಮ್ಮ ಇಂದಿನ ಸಾಮಾಜಿಕ ಪದ್ಧತಿಯಲ್ಲಿ ಉತ್ತೇಜಕವಾದ ವ್ಯಕ್ತಿವಾದವಿದೆ ಎಂದುಕೊಂಡರೆ ಕೆಲ ಕಾಲಾನಂತರ ಅದು ಸಹಕಾರಿ ಸಾರ್ವಪ್ರಭುತ್ವದ ಆವಶ್ಯಕತೆಯನ್ನು ಉಂಟುಮಾಡುತ್ತದೆ. ಅದಕ್ಕೂ ಮುಂದಿನ ಕಾಲದಲ್ಲಿ ವ್ಯಕ್ತಿವಾದವೂ ಇರದು, ಸಾರ್ವಪ್ರಭುತ್ವವಾದವೂ ಇರದು– ಆದರೆ ಉತ್ತಮ ಜೀವನಕ್ಕೆ ಹೇತುವೆನಿಸುವ ಹಾಗೆ ಅವೆರಡೂ ಪದ್ಧತಿಗಳ ಅಂಶಗಳು ಕೂಡಿದ ಒಂದು ಸಮನ್ವಿತವಾದ ಹೊಸ ಪದ್ಧತಿಯು ಉದಯವಾಗುತ್ತದೆ. ಈ ಮೂರು ಮೆಟ್ಟಿಲುಗಳ ಒಂದು ಅವಸ್ಥೆ ಮುಗಿದ ನಂತರ ಅದರಿಂದ ಮತ್ತೆ ಇಂತಹ ಮೂರು ಮೆಟ್ಟಿಲುಗಳ ಅವಸ್ಥೆ ಬರುವುದು. ಆಗ ಇದಕ್ಕೂ ಹೆಚ್ಚಿನ ಸಂಘಟನೆ ಸಮ್ಮಿಶ್ರ ಸ್ಥಿತಿ ಮತ್ತು ಐಕ್ಯಭಾವಗಳು ಸಮಾಜದಲ್ಲಿ ನೆಲೆ ನಿಲ್ಲುತ್ತವೆ. ಈ ಪ್ರಕಾರ ವಿಚಾರದ ಗತಿಯು ವಸ್ತುಗತಿಗೆ ಸರಿಸಮವಾಗಿರುತ್ತದೆ; ಪ್ರತಿಯೊಂದು ಗತಿಯಲ್ಲಿಯೂ ಐಕ್ಯದಿಂದ ವೈವಿಧ್ಯದ ಮೂಲಕ ಐಕ್ಯಗತ ವೈವಿಧ್ಯಕ್ಕೆ ಸಾಗುವ ವಿರೋಧಸಮನ್ವಯದ ಪುರೋಗತಿಯಿದೆ. ವಿಚಾರವೂ ಇರವೂ ಒಂದೇ ವಿಧಿಯನ್ನು ಅನುಸರಿಸುತ್ತವೆ; ಮತ್ತು ತರ್ಕಶಾಸ್ತ್ರವೂ ಅತಿಭೌತಶಾಸ್ತ್ರವೂ ಒಂದೇ.

ಈ ವಿರೋಧಸಮನ್ವಯದ ಪ್ರಕ್ರಿಯೆ ಮತ್ತು ಭೇದಗತ ಅಭೇದಗಳು ಮನೋಗ್ರಾಹ್ಯ. ಮನಸ್ಸಿನ ಹಾಗೂ ತತ್ವಜ್ಞಾನದ ಕರ್ತವ್ಯವೆಂದರೆ ಭೇದ ಅಥವಾ ವೈವಿಧ್ಯದಲ್ಲಿ ಗೂಢವಾಗಿರುವ ಐಕ್ಯ ಅಥವಾ ಅಭೇದವನ್ನು ಹುಡುಕಿ ತೆಗೆಯುವುದು. ಅದೇ ಮೇರೆಗೆ ಶೀಲವನ್ನೂ ಚಾರಿತ್ರ್ಯವನ್ನೂ ಏಕೀಕರಿಸುವುದು ನೀತಿಶಾಸ್ತ್ರದ ಕರ್ತವ್ಯ; ವ್ಯಕ್ತಿಗಳನ್ನು ರಾಜ್ಯವನ್ನಾಗಿ ಒಂದುಗೂಡಿಸುವ ಕರ್ತವ್ಯವು ರಾಜ್ಯಧರ್ಮಕ್ಕೆ ಸೇರಿದ್ದು. ಹಾಗೆಯೇ ಎಲ್ಲ ವಿರುದ್ಧ ಕೋಟಿಗಳೂ ಸಮನ್ವಿತವಾಗುವ ಐಕ್ಯಸ್ವರೂಪದ ಮತ್ತು ಜೀವ–ಜಡ, ಕರ್ತೃ–ಕರ್ಮ, ಒಳಿತು–ಕೇಡುಗಳ ಒಂದು ದೊಡ್ಡ ಮೊತ್ತವೆನಿಸಿದ ಸರ್ವ ನಿರಪೇಕ್ಷನಾದ ಪರಮಾತ್ಮನನ್ನು ಸೇರಿ ಅನುಭವಕ್ಕೆ ತಂದುಕೊಳ್ಳುವುದು ಧರ್ಮದ ಕರ್ತವ್ಯ. ದೇವರು ಅಥವಾ ಪರಮಾತ್ಮನು ಸಂಬಂಧಗಳ ಒಂದು ಮಂಡಲ. ಅವನಲ್ಲಿ ಎಲ್ಲ ವಸ್ತುಗಳ ಚಲನೆ ಅಸ್ತಿತ್ವ ಮತ್ತು ಅರ್ಥಗಳಿವೆ. ಮನುಷ್ಯನಲ್ಲಿ ಪರಮಾತ್ಮನು ಆತ್ಮಪ್ರಜ್ಞೆಯ ಮಟ್ಟಕ್ಕೇರಿ ಪರಮಾತ್ಮ ಕಲ್ಪನೆಯ ರೂಪವನ್ನು ತಾಳುತ್ತಾನೆ–ಅಂದರೆ ಮನುಷ್ಯನ ವಿಚಾರವು ತಾನು ಪರಮಾತ್ಮನ ಅಂಶವೆಂದು ತಿಳಿದುಕೊಂಡು ವೈಯುಕ್ತಿಕ ಇತಿಮಿತಿಗಳನ್ನೂ ಉದ್ದೇಶಗಳನ್ನೂ ಮೀರಿ ವಿಶ್ವಸಂಘರ್ಷದಡಿಯಲ್ಲಿ ಅಡಗಿರುವ ಸರ್ವವಸ್ತು ಸಾಮರಸ್ಯವನ್ನು ಗ್ರಹಿಸುತ್ತದೆ. ವಿಚಾರವೇ ವಿಶ್ವದ ಮೂಲದ್ರವ್ಯ. ವಿಶ್ವದ ಯೋಜನೆಯು ಸಂಪೂರ್ಣ ತರ್ಕಬದ್ಧವಾದುದು.

ಘರ್ಷಣೆಯೂ ಕೇಡೂ ಕೇವಲ ನಿಷೇಧರೂಪದ ಕಲ್ಪನಾವಿಲಾಸಗಳಲ್ಲ; ಅವು ಸಾಕಷ್ಟು ಸತ್ಯವಾದವುಗಳು. ಆದರೆ ವಿವೇಕದ ದೃಷ್ಟಿಯಲ್ಲಿ ಅವು ಪೂರ್ಣತೆ ಹಾಗೂ ಒಳಿತುಗಳನ್ನು ಮುಟ್ಟುವ ಏಣಿಯ ಮೆಟ್ಟಿಲುಗಳು. ಹೋರಾಟವೇ ಬೆಳವಣಿಗೆಯ ವಿಧಿ. ಜಗತ್ತಿನ ಸಾವು ನೋವು, ಗಡಿಬಿಡಿ ಗೊಂದಲಗಳಲ್ಲಿಯೇ ಮನುಷ್ಯ ಚಾರಿತ್ರವು ರೂಪುಗೊಳ್ಳುತ್ತದೆ. ಬಲಾಢ್ಯರ ಹೊಣೆಗಾರಿಕೆ ಮತ್ತು ಕ್ಲೇಶಗಳ ಮೂಲಕವೇ ಮನುಷ್ಯನ

ವ್ಯಕ್ತಿತ್ವವು ತನ್ನ ನಿಜವಾದ ನಿಲುವಿನ ಎತ್ತರಕ್ಕೆ ಏರುತ್ತದೆ. ದುಃಖಕ್ಕೂ ಒಂದು ನೀತಿಯಿದೆ; ಅದೊಂದು ಜೀವನದ ಕುರುಹು ಮತ್ತು ಪುನರ್‌ರಚನೆಯ ಪ್ರಚೋದನೆ. ವಸ್ತು ವಿವೇಕದಲ್ಲಿ ಭಾವನೆಯ ಆವೇಶಕ್ಕೂ ಒಂದು ಸ್ಥಾನವಿದೆ. ಜಗತ್ತಿನಲ್ಲಿ ಯಾವ ಮಹತ್ಕಾರ್ಯವೂ ಭಾವಾವೇಶವಿಲ್ಲದೆ ಸಾಧಿಸಲ್ಪಟ್ಟಿಲ್ಲ. ಬಾಳು ಸುಖಕ್ಕಾಗಿ ಇರುವುದಲ್ಲ– ಅದಿರುವುದು ಸಾಧಿಸಿ ಸಿದ್ಧಿಹೊಂದುವುದಕ್ಕಾಗಿ. ಪ್ರಪಂಚದ ಇತಿಹಾಸವು ಸುಖದ ರಂಗಸ್ಥಲವಲ್ಲ. ಸುಖಾವಧಿಗಳು ಅದರ ಇತಿಹಾಸದ ಹೆಬ್ಬೊತ್ತಿಗೆಯ ಖಾಲಿ ಪುಟಗಳು. ಏಕೆಂದರೆ ಅವು ಸಾಮರಸ್ಯದ ಕಾಲಗಳು. ಇಂತಹ ಜಡ ತೃಪ್ತಿಯು ಮನುಷ್ಯನಿಗೆ ಹೇಳಿಸಿದ್ದಲ್ಲ. ಇತಿಹಾಸವು ನಿರ್ಮಿಸಲ್ಪಡುವುದು ವಿರೋಧ ಸಮನ್ವಯದ ಚಳವಳಿಯಿಂದ. ಅದೊಂದು ಕ್ರಾಂತಿ ಮಾಲೆ. ಅದರಲ್ಲಿ ಜನಗಳಾದ ಮೇಲೆ ಜನಗಳು, ಪ್ರತಿಭಾವಂತರಾದ ಮೇಲೆ ಪ್ರತಿಭಾವಂತರು ಪರಮಾತ್ಮನ ಸಾಧನಗಳಾಗಿ ಕೆಲಸ ಮಾಡುತ್ತಾರೆ. ಮಹಾ ಪುರುಷರು ಭವಿಷ್ಯತ್ತನ್ನು ಹೆರುವ ತಾಯಂದಿರೆಂಬುದಕ್ಕಿಂತ ಅದನ್ನು ಹೆರಿಸುವ ಬಿಜ್ಜಂತಿಯರೆಂಬುದು ಹೆಚ್ಚು ನಿಜವಾದ ಮಾತು. ಅವರು ಒದಗಿಸಿ ಕೊಟ್ಟದ್ದನ್ನು ಯುಗಧರ್ಮವು ಸಾಕಿ ದೊಡ್ಡದು ಮಾಡುತ್ತದೆ. ಪ್ರತಿಭಾವಂತನೂ ಎಲ್ಲರಂತೆಯೇ ರಾಶಿಗೊಂದು ಕಲ್ಲನ್ನು ಹಾಕುತ್ತಾನೆ. ಸುದೈವದಿಂದ ಅದು ಕೊನೆಯ ಕಲ್ಲಾಗಿ ಪರಿಣಮಿಸಿ ಆ ಕೂಡಲೇ ಆ ಕಲ್ಲಿನ ರಾಶಿಯು ಒಂದು ಸುಂದರವಾದ ಗೋಪುರದ್ವಾರವಾಗಿ ನಿಂತುಬಿಡುತ್ತದೆ.

ಮೇಲೆ ಹೇಳಿದಂಥ ತತ್ವಜ್ಞಾನವು ಅವಶ್ಯವಾಗಿ ಕ್ರಾಂತಿಕಾರಿ ತೀರ್ಪುಗಳಿಗೆ ನಮ್ಮನ್ನೊಯ್ದು ಮುಟ್ಟಿಸುತ್ತದೆ. ಅದರ ಪ್ರಕಾರ ರಾಜ್ಯಧರ್ಮದ ಅತ್ಯಂತ ಗಂಭೀರವಾದ ವಿಧಿಯೆಂದರೆ ಸ್ವಾತಂತ್ರ್ಯ. ಸ್ವಾತಂತ್ರ್ಯವು ಬದಲಾವಣೆಯ ದ್ವಾರ. ಏಕೆಂದರೆ, ಜೀವನದ ಪರಮ ತತ್ವವು ಬದಲಾವಣೆಯೇ ಅಲ್ಲವೆ? ಇಲ್ಲಿ ಯಾವ ಪರಿಸ್ಥಿತಿಯೂ ನಿತ್ಯವಲ್ಲ. ಪದಾರ್ಥಗಳ ಪ್ರತಿಯೊಂದು ಅವಸ್ಥೆಯಲ್ಲೂ ಪರಸ್ಪರ ವಿರೋಧವಿದ್ದೇ ಇರುತ್ತದೆ. ಹಾಗೂ ಅದನ್ನು ವಿರುದ್ಧ ಪದಾರ್ಥಗಳ ಸಂಘರ್ಷವೊಂದೇ ಪರಿಹರಿಸಬಲ್ಲುದಲ್ಲವೆ? ಹೀಗಿರುವಾಗ ಇತಿಹಾಸವೆಂಬುದು ಸ್ವಾತಂತ್ರ್ಯದ ಬೆಳವಣಿಗೆ; ಮತ್ತು ರಾಜ್ಯವೆಂಬುದು ಸಂಘಟಿತವಾದ ಸ್ವಾತಂತ್ರ್ಯ. ವಾಸ್ತವಿಕವಾದುದೆಲ್ಲವೂ ತರ್ಕಬದ್ಧವಾದುದು. ಇರುವುದೆಲ್ಲವೂ ಸರಿಯಾದುದು. ಐಕ್ಯವೇ ಅಭಿವೃದ್ಧಿಯ ಗುರಿ. ಕ್ರಮವ್ಯವಸ್ಥೆಯೇ ಸ್ವಾತಂತ್ರ್ಯದ ಪ್ರಥಮಾವಶ್ಯಕತೆ. ಎಷ್ಟೇ ನಶ್ವರವಾದ ಸನ್ನಿವೇಶವಾದರೂ ತಾನೊಂದು ವಿಕಾಸಾವಸ್ಥೆಯಾಗಿ ಅಷ್ಟು ಕಾಲ ಉಳಿದಿರುವ ದೇವದತ್ತ ಹಕ್ಕುಳ್ಳದ್ದು.

ಹೆಗೆಲ್ಲನ ತತ್ವವಿಚಾರದಲ್ಲಿರುವ ವಿರುದ್ಧ ಕೋಟಿಗಳ ಫಲವಾಗಿ, ಅವನ ಅನಂತರದ ತಲೆಮಾರಿನಲ್ಲಿ ಅದಕ್ಕೆ ದಕ್ಷಿಣಪಂಥ ಮತ್ತು ವಾಮಪಂಥಗಳೆಂಬ ಎರಡು ಶಾಖೆಗಳುಂಟಾದವು ವಾಸ್ತವಿಕದಾದುದೆಲ್ಲವೂ ತರ್ಕಬದ್ಧ, ವಿಚಾರಘಟಿತ ಎಂಬ ಅವನ ಮಾತಿನಿಂದ ದೈವವಾದ (Doctrine of Providence) ಬೆಳೆದು, ಸಂಪೂರ್ಣ ವಿಧೇಯತೆಯ ತತ್ವವನ್ನಾಧರಿಸಿದ ರಾಜ್ಯಧರ್ಮವನ್ನು ಕೆಲವರು ಸಮರ್ಥಿಸತೊಡಗಿದರು. ಹೆಗೆಲ್ಲನು ತನ್ನ ತಾರುಣ್ಯದಲ್ಲಿ ಸಾರಿದ ನಾಸ್ತಿಕವಾದ (Scepticism) ಮತ್ತು ಉಚ್ಚ ವಿಮರ್ಶೆ (Higher Criticism)ಗಳನ್ನು

ಅವಲಂಬಿಸಿ ಮಾರ್ಕ್ಸ್ ಮೊದಲಾದವರು ಚರಿತ್ರೆಯ ತತ್ವಜ್ಞಾನವನ್ನು (ವರ್ಗಕಲಹ ಅಥವಾ) ವರ್ಗಸಂಘರ್ಷ ಸಿದ್ಧಾಂತಕ್ಕಿಳಿಸಿ, ಅವನದೇ ಆವಶ್ಯಕತಾಸೂತ್ರದನುಸಾರವಾಗಿ (ಸಾಮ್ಯವಾದ ಅಥವಾ) ಸಮಾಜವಾದವು ಅನಿವಾರ್ಯವೆಂಬಲ್ಲಿಗೆ ಬಂದು ಮುಟ್ಟಿದರು. ಯುಗಧರ್ಮದ ಮೂಲಕ ಪರಮಾತ್ಮನು ಇತಿಹಾಸವನ್ನು ಗೊತ್ತುಪಡಿಸುವ ಹೆಗಲ್–ತತ್ವಕ್ಕೆ ಬದಲಾಗಿ ಮಾರ್ಕ್ಸ್ ಮಹಾಶಯನು ಜನತೆಯ ಚಳವಳ ಮತ್ತು ಆರ್ಥಿಕ ಶಕ್ತಿಸಂಪಾತಗಳನ್ನು ಪ್ರತಿಯೊಂದು ಮೂಲಭೂತ ಬದಲಾವಣೆಗೂ ಮೂಲ ಕಾರಣವನ್ನಾಗಿ ತೆಗೆದುಕೊಂಡನು. ವಸ್ತುಪ್ರಪಂಚದಲ್ಲೂ ಹಾಗೇ ವಿಚಾರ ಪ್ರಪಂಚದಲ್ಲೂ ಹಾಗೇ. ಈ ಪ್ರಕಾರ ತತ್ವಜ್ಞಾನದ ಪ್ರಾಚಾರ್ಯನಾದ ಹೆಗೆಲ್ ಸಮಾಜವಾದವನ್ನು ಹೆಸರಿಸಲು ಕಾರಣವಾದನು.

## ೧೫

ಹರ್ಬರ್ಟ್ ಸ್ಪೆನ್ಸರನು ಕ್ರಿ.ಶ.೧೮೨೦ರಲ್ಲಿ ಡರ್ಬಿಯಲ್ಲಿ ಜನ್ಮತಾಳಿದ. ಇಚ್ಛೆ ಅಥವಾ ಮೂಲ ಕಾಮವನ್ನು ಸುಜ್ಞಾನಕ್ಕೂ ಸುಬುದ್ಧಿಮತ್ತೆಗೂ ಅಧೀನಗೊಳಿಸಿದ ಹೊರತು ಜಗತ್ತಿಗೆ ಕ್ಷೇಮವಿಲ್ಲ ಎಂದು ಜರ್ಮನ್ ತತ್ವಜ್ಞಾನಿ ಷೋಪೆನ್ ಹೌರ್ ಹೇಳಿದರೆ, ಧರ್ಮವು ಪರಮಾತ್ಮನೆಂದರೆ "ದೊಡ್ಡ ಮನುಷ್ಯ"ಎಂದು ಪ್ರತಿಪಾದಿಸುವುದನ್ನೂ ವಿಜ್ಞಾನವು ದೇವರಿಲ್ಲ, ಎಲ್ಲ ಜಡದ ರೂಪಾಂತರಗಳು ಎಂದು ಹೇಳುವುದನ್ನೂ ಬಿಟ್ಟಾಗ ಜಗತ್ತಿಗೆ ಕ್ಷೇಮ ಎಂದು ಸ್ಪೆನ್ಸರ್ ಸಾರಿದ.

ಸ್ಪೆನ್ಸರನ ಸಮಾಜ ವಿಜ್ಞಾನ ತುಂಬ ಚೆನ್ನಾಗಿದೆ. ವ್ಯಷ್ಟಿಯಂತೆಯೇ ಸಮಷ್ಟಿಯ ಸಮಾಜವೂ ಬೆಳೆಯುವ ಸ್ವಭಾವವುಳ್ಳದ್ದು. ಬೆಳೆಯುವಾಗ ಅದು ಹೆಚ್ಚು ಸಂಮಿಶ್ರ ಅಥವಾ ಜಟಿಲವಾಗುತ್ತ ಹೋಗುತ್ತದೆ. ಅದು ಜಟಿಲವಾಗುವಾಗ ಅದರ ಅಂಗಗಳು ಹೆಚ್ಚು ಹೆಚ್ಚು ಪರಸ್ಪರಾವಲಂಬನವನ್ನು ಹಿಡಿಯುತ್ತವೆ. ಅದರ ಬಿಡಿ ಅಂಗಗಳ ಆಯುಷ್ಯಕ್ಕಿಂತ ಇಡಿಯಾದ ಅದರ ಆಯುಷ್ಯ ಹೆಚ್ಚಿನದು. ಅದರಲ್ಲಿ ಅಂಗಸಮನ್ವಯ ಹೆಚ್ಚುತ್ತ ಹೋದಹಾಗೆ ವಿಸಂಗತ ಅಂಗಗಳೂ ಹೆಚ್ಚುತ್ತ ಹೋಗುತ್ತವೆ. ಜೀವವಿಕಾಸದ ತತ್ವವನ್ನೇ ಸಮಾಜವಿಕಾಸವೂ ಅನುಸರಿಸುತ್ತದೆ. ಕುಟುಂಬದಿಂದ ರಾಜ್ಯವನ್ನು ಮುಟ್ಟುವ ಅಥವಾ ರಾಷ್ಟ್ರಸಂಘವನ್ನು ಸಾಧಿಸಿಕೊಂಬ ರಾಜಕೀಯದಲ್ಲೂ ಕ್ಷುದ್ರ ಗೃಹೋದ್ಯಮದ ಮಟ್ಟದಿಂದ ವಿಶ್ವವ್ಯಾಪಕ ಗುತ್ತಿಗೆದಾರಿಕೆಗೇರುವ ಆರ್ಥಿಕ ಕ್ಷೇತ್ರದಲ್ಲೂ ಹಳ್ಳಿಗಳಿಂದಾರಂಭಿಸಿ ಪಟ್ಟಣ–ನಗರಗಳಾಗಿ ಪರಿಣಮಿಸುವ ಜನತಾರಂಗದಲ್ಲೂ ಸಮನ್ವಯದ ಪ್ರಕ್ರಿಯೆ ಎದ್ದು ಕಾಣುತ್ತದೆ. ಶ್ರಮವಿಭಜನೆ, ಉದ್ಯೋಗ–ವ್ಯಾಪಾರಗಳ ಗುಣಿತ ಪ್ರಕಾರಗಳು, ನಗರ–ಗ್ರಾಮಗಳಲ್ಲಿ ಆರ್ಥಿಕ ಅನ್ಯೋನ್ಯಾವಲಂಬನ ಹೆಚ್ಚಾಗುವುದು ಮತ್ತು ರಾಷ್ಟ್ರಗಳಲ್ಲಿ ಅದೇ ಪ್ರಕಾರ ಪರಸ್ಪರಾವಲಂಬನ ಹೆಚ್ಚುತ್ತ ಹೋಗುವುದು ಸಾಮಾಜಿಕ ಸಮವಾಯ ಹಾಗೂ ಅಸಮವಾಯಗಳನ್ನು ತೋರಿಸುತ್ತವೆ.

ರಾಷ್ಟ್ರಗಳಲ್ಲಿ ಎರಡು ವಿಧ; ಯುದ್ಧೋಪಜೀವಿಗಳು, ಕರ್ಮೋಪಜೀವಿಗಳು ಎಂದು. ಸೈನಿಕ ಪ್ರಭುತ್ವದಲ್ಲಿ ಹೆಚ್ಚಾಗಿ ರಾಜನಲ್ಲಿ ಎಲ್ಲ ಅಧಿಕಾರವೂ ಕೇಂದ್ರೀಕೃತವಾಗಿರುತ್ತದೆ. ಅದು ಕಲಿಸುವ ಸಹಕಾರವು ಆಜ್ಞಾಧಾರಕ ಹಾಗೂ ಬಲಾತ್ಕಾರ ಸ್ವರೂಪದ್ದು. ಸ್ವಾಮಿಪೂಜಾಧರ್ಮವನ್ನೂ ಕ್ಷಾತ್ರ ದೇವತಾರ್ಚನೆಯನ್ನೂ ಅದು ಪ್ರೋತ್ಸಾಹಿಸುತ್ತದೆ. ಜನರಲ್ಲಿ ಬಿಗಿಯಾದ ವರ್ಗಭೇದವನ್ನೂ ವರ್ಗಶಾಸನ ವಿಧಿಗಳನ್ನೂ ಬೆಳೆಸಿ, ಮನೆಯಲ್ಲಿ ಪುರುಷ ಸರ್ವಾಧಿಕಾರ ಸತ್ತೆಯನ್ನು ಸ್ಥಾಪಿಸುತ್ತದೆ. ಅಲ್ಲಿ ಯುದ್ಧೋದ್ಯಮದ ದೆಸೆಯಿಂದ ಗಂಡಸರ ಮರಣಸಂಖ್ಯೆ ಹೆಚ್ಚಾಗಿ, ಬಹುಪತ್ನೀತ್ವ ಅವಶ್ಯಕವೆನಿಸಿ ಸ್ತ್ರೀಯರ ಸ್ಥಾನ–ಮಾನಗಳು ಕೆಳಮಟ್ಟಕ್ಕಿಳಿಯುವುವು. ಕೇಂದ್ರ ಸರಕಾರದ ಶಕ್ತಿಯನ್ನು ಹೆಚ್ಚಿಸಿ ರಾಜ್ಯದ ಹಿತಾರ್ಥಕ್ಕೆ ಮಿಕ್ಕ ಹಿತಾರ್ಥಗಳನ್ನು ಅಧೀನಗೊಳಿಸಲನುಕೂಲವಾಗುವುದರಿಂದ ಹೆಚ್ಚಾಗಿ ರಾಷ್ಟ್ರಗಳು ಸೈನಿಕ ಧೋರಣವನ್ನು ಪದೇಪದೇ ಹಿಡಿಯುತ್ತವೆ. ಅದರಿಂದ "ಮಾನುಷಾ ಮಾನುಷಾನೇವ ದಾಸಭಾವೇನ ಭುಂಜತೇ" ಎಂಬ ಪರಿಸ್ಥಿತಿಯುಂಟಾಗುವುದು. ಆದುದರಿಂದ ಯುದ್ಧವು ಬಹಿಷ್ಕೃತವಾದ ಹೊರತು ಉನ್ನತ ಮಟ್ಟದ ಸಮಾಜವನ್ನು ಕಟ್ಟಲು ಸಾಧ್ಯವಿಲ್ಲ.

ಯುದ್ಧತ್ಯಾಗವು ಕೇವಲ ಆಧ್ಯಾತ್ಮಿಕ ಹೃದಯಪರಿವರ್ತನದಿಂದಾಗದು. ಮನುಷ್ಯರು ಯಾವಾಗಲೂ ಆವರಣದಂತೆ ನಡೆದುಕೊಳ್ಳತಕ್ಕವರಾದುದರಿಂದ ಔದ್ಯಮಿಕ ಸಮಾಜಗಳನ್ನೂ ಸಂಘಗಳನ್ನೂ ಸ್ಥಾಪಿಸುವುದರಿಂದಲೇ ಯುದ್ಧಪ್ರವೃತ್ತಿ ನಿಲ್ಲುತ್ತದೆ. ಉದ್ಯಮವೇ ಶಾಂತಿಗೂ ಪ್ರಜಾಸತ್ತೆಗೂ ಆಧಾರ. ಅದರ ಶಕ್ತಿಯು ಉದ್ಯಮ ಸಮಾಜದಲ್ಲಿ ವಿಸ್ತಾರವಾಗಿ ಹರಡಿ ಹೋಗುತ್ತದೆ. ಅದರಿಂದ ಜನಹಿತಸಿದ್ಧಿ ಚೆನ್ನಾಗಿ ಆಗುತ್ತದೆ. ಸ್ವತಂತ್ರ ಆರಂಭಕ್ಕೆ ಅವಕಾಶವಿದ್ದಲ್ಲೇ ಉತ್ಪಾದನೆ ವೃದ್ಧಿ ಹೊಂದಬಲ್ಲುದು. ಸ್ವತಂತ್ರ ಉದ್ಯಮಿಗಳ ಸಂಖ್ಯೆ ಹೆಚ್ಚಾದರೆ ಪ್ರಾಧಿಕಾರ, ಮಟ್ಟಗಳ ನಿಃಶ್ರೇಣಿ, ಜಾತಿ ಮುಂತಾದ ಸೈನಿಕ ಸಮಾಜದ ಪದ್ಧತಿಗಳು ನಷ್ಟವಾಗುತ್ತವೆ. ಕ್ಷಾತ್ರೋದ್ಯಮಕ್ಕೆ ಸಲ್ಲುವ ಅತಿಮರ್ಯಾದೆ ಕಡಿಮೆಯಾಗುತ್ತದೆ. ದೇಶಭಕ್ತಿಯು ದೇಶಪ್ರೇಮವಾಗಿ ಪರಿಣಮಿಸುವುದಲ್ಲದೆ, ವಿದೇಶದ್ವೇಷವಾಗಿ ಉಳಿಯುವುದಿಲ್ಲ. ಅಭಿವೃದ್ಧಿಗೆ ಆಂತರಿಕ ಶಾಂತಿ ಅವಶ್ಯಕವೆನಿಸುತ್ತದೆ. ಬಂಡವಾಳವು ಅಂತಾರಾಷ್ಟ್ರೀಯವಾಗಿ ದೇಶ–ವಿದೇಶಗಳಲ್ಲಿ ಹಣದ ತೊಡಗಾಟ ಆರಂಭಿಸುತ್ತದೆ. ಅಂತರ್‍ರಾಷ್ಟ್ರೀಯ ಶಾಂತಿಯೂ ಆಗ ಅನಿವಾರ್ಯವಾಗುತ್ತದೆ. ವಿದೇಶಗಳೊಡನೆ ಮಾಡುವ ಯುದ್ಧಗಳು ಕಡಿಮೆಯಾಗುವದರಿಂದ ಅಂತರ್ದೇಶೀಯ ಒರಟುತನಗಳೂ ಕಡಿಮೆಯಾಗುತ್ತವೆ. ಹೆಂಗಸರಷ್ಟೇ ದೀರ್ಘಕಾಲ ಗಂಡಸರು ಬದುಕುವಂತಾಗುವದರಿಂದ ಬಹುಪತ್ನೀತ್ವ ಹೋಗಿ ಏಕಪತ್ನೀತ್ವ ನಿಲ್ಲುತ್ತದೆ. ಅದರಿಂದ ಹೆಂಗಸರ ಸ್ಥಾನ–ಮಾನಗಳು ಹೆಚ್ಚುವುವು. ಅವರ ಉದ್ಧಾರ ಸ್ವಾಭಾವಿಕವಾಗಿಯೇ ಆಗುವಂತಾಗುವುದು. ಅಂಧಶ್ರದ್ಧೆಯ ಧರ್ಮಗಳು ಕ್ಷೀಣ ಹೊಂದಿ ಉದಾರ ಮತಗಳಿಗೆಡೆಗೊಟ್ಟು ಮನುಷ್ಯರ ಚಾರಿತ್ರ ಹಾಗೂ ಜೀವನಗಳನ್ನು ಉದಾತ್ತಗೊಳಿಸಲಾಗುವುದು. ಉದ್ಯಮದ ಯಂತ್ರಸಾಮಗ್ರಿಯು ವಿಶ್ವಯಂತ್ರದ ರಚನಾವಿಧಾನವನ್ನು ಜನರಿಗೆ ತಿಳಿಸುತ್ತದೆ; ಕಾರಣ–ಕಾರ್ಯಗಳ ಅವ್ಯತ್ಯಯವಾದ ಪೌರ್ವಾಪರ್ಯ–ನಿಯಮವನ್ನು ಅರುಹುತ್ತದೆ. ಪ್ರತಿಯೊಂದು ಘಟನೆಯ ನೈಸರ್ಗಿಕ

ಕಾರಣಗಳ ಸಂಶೋಧದತ್ತ ಜನ ಲಕ್ಷ್ಯ ಹಾಕಲು ಕಲಿತು ಸುಲಭವಾಗಿ ಅತಿಮಾನುಷ ವಿವರಣೆ ಕೊಡಲು ಹೋಗುವುದನ್ನು ಬಿಟ್ಟುಕೊಡುತ್ತದೆ. ಇತಿಹಾಸವು ಯುದ್ಧಮಗ್ನ ರಾಜರ ಲೆಕ್ಕಚಾರವನ್ನುಳಿದು ಕಾರ್ಯಮಗ್ನ ಜನರನ್ನು ಅಭ್ಯಸಿಸಲು ಆರಂಭಿಸುತ್ತಿದೆ. ಗಣ್ಯ ವ್ಯಕ್ತಿಗಳ ದಾಖಲೆಯೆನಿಸದೆ ಅದು ಆಗ ಮಹಾಶೋಧ ಹಾಗೂ ಹೊಸ ಕಲ್ಪನೆಗಳ ಚರಿತ್ರೆಯಾಗಿ ಪರಿಣಮಿಸುತ್ತದೆ. ಸರಕಾರದ ಅಧಿಕಾರ ಕಡಿಮೆಯಾಗಿ ರಾಜ್ಯದಲ್ಲಿರುವ ಉತ್ಪಾದನ–ಮಂಡಲಗಳ ಶಕ್ತಿ ಬೆಳೆಯುತ್ತದೆ. ಸ್ಥಾನಬಲದ ಬದಲು ಕರಾರಿನ ಬಲವೂ ಪರಾಧೀನತೆಯ ಸಮಾನತೆಯ ಬದಲು ಆರಂಭ ಸ್ವಾತಂತ್ರ್ಯವೂ ಒತ್ತಾಯದ ಸಹಕಾರದ ಬದಲು ಸ್ವತಂತ್ರ ಸಹಕಾರ ಪದ್ಧತಿಯೂ ರೂಢಿಗೆ ಬರುತ್ತದೆ. ಸೈನಿಕ ಪ್ರಭುತ್ವದಲ್ಲಿ ವ್ಯಕ್ತಿಯಿರುವುದು ರಾಜ್ಯಕಾರ್ಥಸಿದ್ಧಿಗಾಗಿ; ಔದ್ಯಮಿಕ ಸಮಾಜದಲ್ಲಿ ರಾಜ್ಯವಿರುವುದು ವ್ಯಕ್ತ್ಯರ್ಥಸಿದ್ಧಿಗಾಗಿ!

ಸ್ಪೆನ್ಸರನು ಇಂಗ್ಲೆಂಡಿನಲ್ಲಿ ಸಾಮ್ರಾಜಕೀಯ ಸೈನಿಕತೆ ಬೆಳೆಯುವುದನ್ನು ಪ್ರತಿಭಟಿಸುವಾಗ, ಅಂಥ ಸಮಾಜಕ್ಕೆ ಫ್ರಾನ್ಸ್–ಜರ್ಮನಿಗಳನ್ನು ದೃಷ್ಟಾಂತ ಕೊಟ್ಟ; ತನ್ನ ನಾಡಾದ ಇಂಗ್ಲೆಂಡ ಔದ್ಯಮಿಕ ಸಮಾಜವಾಗಬೇಕೆಂದ. ಅವನ ಪ್ರಕಾರ ಸೈನಿಕ ಪ್ರಧಾನವೂ ಆನುವಂಶಿಕ ಯಾಜಮಾನ್ಯ ಪ್ರಧಾನವೂ ಆದ ಯುಯುತ್ಸು ಪ್ರಭುತ್ವವು ಸಮಾಜವಾದವನ್ನು ಹಡೆಯುತ್ತದೆ; ಉದ್ಯಮಕ್ಕದು ಅನುಕೂಲವಲ್ಲ. .ಕ್ಷಾತ್ರ ಧರ್ಮದಂತೆಯೇ ಸಮಾಜ ರಾಜ್ಯಧರ್ಮವಾದರೂ ಅಧಿಕಾರದ ಕೇಂದ್ರೀಕರಣ, ಸರಕಾರಿ ಅಧಿಕಾರದ ವಿಸ್ತರಣ, ಖಾಸಗಿ ಪ್ರಯತ್ನದ ಕ್ಷೀಣದಶೆ ಮತ್ತು ವ್ಯಕ್ತಿಯ ಅಪ್ರಾಮುಖ್ಯ ಗಳಿಗೆಡೆಗೊಡುತ್ತದೆ. ಉದ್ಯಮದಲ್ಲಿ ಸಮಾಜವಾದಿ ಸಮಾಜವು ಪ್ರಾಣಿಗಳಲ್ಲಿರುವ ಮೂಲ ಪ್ರವೃತ್ತಿಗಳಷ್ಟು ಬಿಗಿಯಾದ ಹಿಡಿತದಿಂದ ಆಡಳಿತ ಸಾಗಿಸುತ್ತದೆ. ಆಗ ಮಾನುಷ–ರೂಪದ ಇರುವೆ ಹಾಗೂ ತುಂಬಿಗಳ ಸಮುದಾಯ ರಚಿತವಾಗುತ್ತದೆ ಮತ್ತು ಅತ್ಯಂತ ಏಕತಾನದಿಂದ ಬೇಸರ ಬರಿಸುವ ನಿರಾಶಾವಹವಾದ ದಾಸ್ಯಜೀವನ ಫಲಿಸುತ್ತದೆ.

ಅರ್ಥಸಂಬಂಧಗಳು ರಾಜ್ಯಸಂಬಂಧಗಳಿಗಿಂತ ಬಹಳ ಭಿನ್ನ, ಜಟಿಲ. ಆದುದರಿಂದ ದಾಸ್ಯಾಧಾಯಕ ನೌಕರಶಾಹಿಯಿಂದ ಮಾತ್ರ ಯಾವ ಸರಕಾರವಾದರೂ ಅವನ್ನು ನಿಯತಗೊಳಿಸಲು ಶಕ್ತವಾದೀತು. ಎಲ್ಲ ಔದ್ಯಮಿಕ ಕಠಿನ ಪ್ರಕರಣದಲ್ಲೂ ರಾಜ್ಯ ಕೈಹಾಕಿದರೆ, ಅದು ಯಾವುದಾದರೊಂದು ಕಾರಕವನ್ನು ಅಲಕ್ಷಿಸಿಯೇ ತೀರುವುದು; ಅದು ಹಾಗೆ ಕೈಹಾಕಿದಾಗಲೆಲ್ಲಾ ಅದಕ್ಕೆ ಸೋಲಾಗಿದೆ. ಮಧ್ಯಯುಗದ ಇಂಗ್ಲೆಂಡಿನಲ್ಲಿ ಕೂಲಿ ನಿಷ್ಕರ್ಷಕ ಕಾಯದೆ ಮಾಡಿದ್ದೂ ಕ್ರಾಂತಿಕಾರಿ ಫ್ರಾನ್ಸಿನಲ್ಲಿ ಮೂಲ್ಯ ನಿಷ್ಕರ್ಷಕ ಕಾಯದೆ ಮಾಡಿದ್ದೂ, ಮೇಲಿನ ಮಾತಿಗೆ ನಿದರ್ಶನ. ಅರ್ಥಸಂಬಂಧಗಳನ್ನು ತಾವೇ ಹೊಂದಿಕೊಳ್ಳಲು (ಅಂಥ ಪ್ರಯತ್ನ ಅಸಮರ್ಪಕ, ನ್ಯೂನ ಎನಿಸಿದಾಗ ಸಹ) ಬಿಟ್ಟು ಬಿಡುವುದು ಸರ್ವೋತ್ತಮ. ಬೇಡಿಕೆ–ಪೂರಯಿಕೆಯ ನಿಯಮ ಆ ಪ್ರಯತ್ನಕ್ಕಾಧಾರ. ಬಹಳ ಬೇಕಾದ ವಸ್ತುವಿಗೆ ಸಮಾಜವು ಬಹಳ ರೊಕ್ಕ ಕೊಡಬೇಕಾಗುತ್ತದೆ. ಅದು ಸಹಜ. ಅಲ್ಲದೆ, ಕೆಲ ವ್ಯಕ್ತಿಗಳಿಗೂ ಕೃತ್ಯಗಳಿಗೂ ಹೆಚ್ಚಿನ ಬಹುಮಾನ ದೊರಕೀತು. ಅದೂ ಸಹಜ, ಏಕೆಂದರೆ ಅವರಿಗೆ

ಆಯಾ ಉತ್ಪಾದನೆಯಲ್ಲಿ ಅಂಥಂಥ ಕಷ್ಟ–ಕಾರ್ಪಣ್ಯಗಳು ಉಂಟಾಗಿರಬಹುದು. ಇಂದಿನ ಜನ ಬಲಾತ್ಕಾರದ ಸಾಮ್ಯಕರಣವನ್ನು ಒಪ್ಪದು. ಆವರಣವನ್ನು ಮನುಷ್ಯಚಾರಿತ್ರವು ಬದಲಾಯಿಸಿದಲ್ಲದೆ, ಕಾಯದೆಯಿಂದ ಕೃತಕವಾಗಿ ಅರ್ಥಸಾಮ್ಯವನ್ನು ಹೇರಿದರೆ ಅದು ಕವಡೆ ಜೋಯಿಸರ ಭವಿಷ್ಯ ಕಥನದಷ್ಟೇ ಸತ್ಯ ಪರಿಣಾಮವನ್ನುಂಟು ಮಾಡೀತು!

ಕೂಲಿ ಕುಂಬಳಿಯವರು ಜಗತ್ತನ್ನಾಳುವ ಕಲ್ಪನೆ ಸ್ಪೆನ್ಸರನಿಗೆ ಸೇರದು. ಕೂಲಿಸಂಘಗಳು ಅವನನ್ನು ಅಷ್ಟು ಆಕರ್ಷಿಸದಾದವು. ಬಹಳ ಮುಷ್ಕರಗಳು ಅಕೃತಾರ್ಥವಾಗುವವರೆಗೆ ಮುಷ್ಕರ ಉಪಯೋಗವಾಗದು ಎಂದ ಸ್ಪೆನ್ಸರ್. ಏಕೆಂದರೆ, ಎಲ್ಲ ಕಾರ್ಮಿಕರೂ ಎಲ್ಲೆಡೆಯೂ ಮುಷ್ಕರ ಹೂಡಿ ಗೆದ್ದರೆ ಕೂಲಿಯ ದರ ಏರಿದ ಹಾಗೆ ಸಾಮಾನಿನ ದರವೂ ಏರುತ್ತ ಹೋಗುತ್ತದೆ. ಆಗ ಪರಿಸ್ಥಿತಿಯಲ್ಲಿ ಯಾವ ಅನುಕೂಲ ಬದಲಾವಣೆಯೂ ಉಂಟಾಗದು. ನಿಯೋಜಕರು ಹಿಂದೆ ಮಾಡಿದ ಅನ್ಯಾಯಕ್ಕೆ ನಿಯೋಜ್ಯರಿಂದು ಪ್ರತೀಕಾರ ಮಾಡುವುದಷ್ಟೇ ಅದರಿಂದ ನಮಗಾಗುವ ಲಾಭ. ಈ ಅಭಿಪ್ರಾಯ ತಾಳಿದರೂ ಸ್ಪೆನ್ಸರನಿಗೆ ತನ್ನ ಸುತ್ತುಮುತ್ತಲಿನ ಸಮಾಜ ಮಾಡುವ ಕಾಡುಗೆಯ್ಮೆಗಳ ಬಗ್ಗೆ ಬೇಸರ ಹುಟ್ಟಿತು. ಅದರಿಂದ ಅವನು ಕೊನೆಗೆ ಸಹಕಾರಿ ಚಳುವಳಿಗೆ ಪ್ರೋತ್ಸಾಹ ಕೊಡಬೇಕೆಂದನು. ಅವನ ವಿಚಾರದ ಪ್ರಕಾರ ಸಹಕೃತ ಕಾರ್ಯಕ್ಕೆ ಅನುಗುಣವಾಗಿ ಸಮಾಜ ವಿಕಾಸವಾದಾಗ ಬಲಾತ್ಕಾರ ತರುವ ವಿಧಿಗಳು ಅತ್ಯಂತ ಪರಿಮಿತ ಸಂಖ್ಯೆಗಿಳಿಯುತ್ತವೆ. ಅಂತ್ಯದಲ್ಲಿ ಸಹಕಾರಿ ಸಂಘದ ಪ್ರತಿಯೊಬ್ಬ ಸದಸ್ಯನೂ ತನಗೆ ತಾನೇ ಯಜಮಾನನೆನಿಸುತ್ತಾನೆ; ಬಹುಸಂಖ್ಯ ಸದಸ್ಯರು ಕ್ರಮಬದ್ಧತೆಯನ್ನು ಉಳಿಸಿಕೊಳ್ಳಲು ಮಾಡಿದ ನಿಯಮಗಳಿಗಷ್ಟೇ ಅವನು ಬದ್ಧನಾಗಿರುತ್ತಾನೆ. ಇಲ್ಲಿಗೆ ಸೈನಿಕ ಪ್ರಧಾನ ಯೋಧ ಸಮಾಜದ ಬಲಾತ್ಕಾರದ ಸಹಕಾರಿ ವ್ಯವಸ್ಥೆಯಿಂದ ಔದ್ಯಮಿಕ ಸಮಾಜದ ಸ್ವೇಚ್ಛಾಕೃತ ಸಹಕಾರಿ ವ್ಯವಸ್ಥೆಗೆ ಬಂದು ಮುಟ್ಟಿದಂತಾಯಿತು. ಸ್ವೇಚ್ಛಾಕೃತ ಸಹಕಾರಿ ಪ್ರಯತ್ನಗಳನ್ನು ಯಶಸ್ವಿಗೊಳಿಸುವಷ್ಟು ದಕ್ಷರೂ ಪ್ರಾಮಾಣಿಕರೂ ಆದಾರೇನೀ ಮನುಷ್ಯರು? ಎಂದು ಕೇಳುತ್ತಾನೆ ಸ್ಪೆನ್ಸರ್. ಅಷ್ಟರ ಮಟ್ಟಿನ ಪ್ರಜಾತ್ಮಾತ್ಮಕ ಬುದ್ಧಿ ಜನರಿಗೆ ಬರುವುದು ದುರ್ಲಭ ಎಂದು ಅವನ ಶಂಕೆ. ಆದರೆ ಆ ಬಗ್ಗೆ ಪ್ರಯತ್ನ ಮಾಡಲೇಬೇಕೆನ್ನುತ್ತಾನವ. ಒಂದಲ್ಲ ಒಂದು ದಿನ ಆ ಪ್ರಯತ್ನಕ್ಕೆ ಜಯವಾಗಿಯೇ ಆಗುತ್ತದೆ ಎಂಬುದು ಅವನ ಪ್ರತ್ಯಾಶೆ. ವ್ಯಕ್ತಿಗಳಿರುವುದು ರಾಜ್ಯಕ್ಕಾಗಿ ಎಂಬುದು ಸೈನಿಕಪದ್ಧತಿಯ ಸಮಾಜದ ಮಂತ್ರ; ರಾಜ್ಯವಿರುವುದು ವ್ಯಕ್ತಿಗಳಿಗಾಗಿ ಎಂಬದು ಔದ್ಯಮಿಕ ಸಮಾಜದ ಆಧಾರತತ್ವ. ಹಾಗೇ ಔದ್ಯಮಿಕ ಸಮಾಜ ಜೀವನವಿರುವುದು ದುಡಿತಕ್ಕಾಗಿ ಎಂದುಸಿರಿದರೆ, ಅದರಿಂದ ಹುಟ್ಟುವ ಮುಂದಿನ ಸಮಾಜವು ದುಡಿವಿರುವುದು ಜೀವನಕ್ಕಾಗಿ ಎಂದು ಸಾರೀತು!

ನೀತಿಗೆ ಸ್ಪೆನ್ಸರ್ ಬಹಳ ಪ್ರಾಮುಖ್ಯ ಕೊಟ್ಟಿದ್ದಾನೆ. ಅತಿಮಾನುಷ ಶಕ್ತಿಗಳ ಕಲ್ಪನೆಯನ್ನಾಧರಿಸಿದ ಹಳೆಯ ನೀತಿಶಾಸ್ತ್ರದ ಬದಲು ಆತ ಜೀವ ಶಾಸ್ತ್ರವನ್ನಾಧರಿಸಿದ ಹೊಸ ನೀತಿಪದ್ಧತಿಯನ್ನು ಸ್ಥಾಪಿಸಿದ. ಪಿಂಡವಿಕಾಸವನ್ನು ಒಪ್ಪಿದರೆ, ಅದರಿಂದ ಕೆಲ ನೀತಿ ಕಲ್ಪನೆಗಳು ಹೊರಡುತ್ತವೆ.

ನೈಸರ್ಗಿಕ ಆಯ್ಕೆಯ ಹಾಗೂ ಬಾಳುವೆಗಾಗಿ ಮಾಡುವ ಹೋರಾಟದ ಪರೀಕ್ಷೆಗಳಲ್ಲಿ ಪಾಸಾಗದ ನೀತಿಪದ್ಧತಿ ಬಾಯಲ್ಲಷ್ಟೇ ಉಳಿದು ವ್ಯರ್ಥವಾಗುವುದು ಖಂಡಿತ. ಪುರುಷಾರ್ಥಗಳಿಗೆ ಅನುಕೂಲವಾದ ನಡತೆ ಒಳಿತು; ಅವಕ್ಕೆ ವಿರುದ್ಧವಾದ ನಡತೆ ಕೆಟ್ಟದ್ದು. ಜೀವನದ ಪರಮಾವಧಿ ದೈರ್ಘ್ಯ, ವಿಸ್ತಾರ ಹಗೂ ಪೂರ್ಣತೆಗಳಿಗೆ ಅನುಕೂಲವಾದದ್ದೇ ಅತ್ಯುನ್ನತ ನಡತೆ. ವಿಕಾಸಸೂತ್ರಾನುಸಾರವಾಗಿ ನಡತೆಯೆಂದರೆ ವಿವಿಧ ಜೀವನ ಧ್ಯೇಯಗಳ ನಡುವೆ ವ್ಯಕ್ತಿ ಅಥವಾ ಗುಂಪು ಹೆಚ್ಚು ಸಮನ್ವಿತವೂ ಸಮವೇತವೂ ಆಗುವಂತೆ ಮಾಡಬಲ್ಲ ನೀತಿ. ಕಲೆಯಂತೆ ನೀತಿಯಾದರೂ ವೈವಿಧ್ಯದಲ್ಲಿ ಐಕ್ಯವನ್ನು ಸಾಧಿಸಿಕೊಡುವಂಥದು. ಆದರ್ಶಮಾನವನು ತನ್ನಲ್ಲಿ ಜೀವನದ ಅತಿ ಹೆಚ್ಚಿನ ವೈವಿಧ್ಯ, ಜಟಿಲತೆ ಹಾಗೂ ಪೂರ್ಣತೆಗಳನ್ನು ಸಂಯೋಜಿಸಬಲ್ಲವನು!

ಸಮಾಜಗಳ ಹೊರಗಣ ವೈರಗಳಳಿದು ಒಳಗಣ ಸಹಕಾರಗಳು ಅವುಗಳ ಸದಸ್ಯರಲ್ಲಿ ಬೆಳೆದಾಗ ನ್ಯಾಯದ ರಸವೂ ಕಲ್ಪನೆಯೂ ದೃಢಪಡುತ್ತವೆ, ಪುಷ್ಟವಾಗುತ್ತವೆ. ಆಂತರಿಕ ಸಹಕಾರಪ್ರವೃತ್ತಿ ಬೆಳೆಯಲು ಜನರಲ್ಲಿ ಸಾಮರಸಿಕ ಜೀವನ ನೆಲೆಗೊಳ್ಳಬೇಕು. ಸಮರಸ ಜೀವನಕ್ಕೆ ನಿಯಮನ–ನಿಯಂತ್ರಣಗಳಿಗಿಂತ ಸ್ವಾತಂತ್ರ್ಯ–ಸ್ವಾಯತ್ತತೆಗಳೇ ಹೆಚ್ಚು ಸಾಧಕ. ನ್ಯಾಯಸೂತ್ರ ಹೀಗಿರಬೇಕು: ಇನ್ನೊಬ್ಬನಿಗಿರುವ ಸಮಪ್ರಮಾಣದ ಸ್ವಾತಂತ್ರ್ಯಕ್ಕೆ ಭಂಗತಾರದೆ ತನಗೆ ಇಷ್ಟಬಂದುದನ್ನು ಮಾಡಲು ಪ್ರತಿಯೊಬ್ಬನೂ ಸ್ವತಂತ್ರ. ಇದು ರಣರಸಿಕರ ಜೀವನನೀತಿಗೆ ವಿರುದ್ಧ. ರಣನ್ಯಾಯದಲ್ಲಿ ಪ್ರಾಧಿಕಾರ, ಉಗ್ರಶಿಸ್ತು, ವಿಧೇಯತೆಗಳಿಗೇ ಪ್ರಾಶಸ್ತ್ಯ. ಪೂರ್ವೋಕ್ತ ನ್ಯಾಯಸೂತ್ರವು ಶಾಂತಿಯುತವಾದ ಉದ್ಯಮಶೀಲ ಜೀವನಕ್ಕೆ ಹಿತಕರ. ಅದು ಸಂಪೂರ್ಣ ಸಮಾನಾವಕಾಶದ ಸವಲತ್ತಿನ ಜೊತೆಗೆ ಪರಮಾವಧಿಯ ಉದ್ಯಮಾರಂಭ ಸ್ವಾತಂತ್ರ್ಯದ ಪ್ರೇರಣೆಯನ್ನು ಕೊಡುತ್ತದೆ. ಅದರ ಪ್ರಕಾರ ಪ್ರತಿಯೊಬ್ಬನ ವ್ಯಕ್ತಿತ್ವವೂ ಪವಿತ್ರ, ಅನಾಕ್ರಮಣೀಯ. ನೈಸರ್ಗಿಕ ಆಯ್ಕೆಗೆ ಅದು ಪ್ರಾಶಸ್ತ್ಯವೀಯುತ್ತದೆ. ಹೇಗೆಂದರೆ, ಅದು ಭೂಮಿಯ ಸಂಪತ್ತನ್ನು ಸಮಾನ ಕರಾರಿನಂತೆ ಎಲ್ಲರ ಬಳಕೆಗೂ ತೆರೆದಿಡುತ್ತದೆ ಮತ್ತು ತನ್ನ ತನ್ನ ಕಾರ್ಯ–ಕಾರ್ಯಶಕ್ತಿಗಳಿಗೆ ತಕ್ಕ ಹಾಗೆ ಪ್ರತಿವ್ಯಕ್ತಿಗೂ ಅಭಿವೃದ್ಧಿ ಹೊಂದಲು ಅವಕಾಶಕೊಡುತ್ತದೆ.

"ಮಾಡಿದ್ದುಣ್ಣೋ ಮಹರಾಯ" ಎಂಬ ಈ ಸೂತ್ರವು ನಿರ್ಘೃಣವೆಂದು ತೋರಬಹುದು. ಇಡೀ ರಾಷ್ಟ್ರದಲ್ಲೆಲ್ಲ ಹೀಗೇ ನಡೆದುಕೊಳ್ಳುವಂತಾದರೆ ಗತಿಯೇನು? ಎಂದು ಯಾರಾದರೂ ಗಾಬರಿಯಾಗಬಹುದು. ಪ್ರತಿಯೊಬ್ಬನ ಆವಶ್ಯಕತೆಗೆ ತಕ್ಕಂತೆ ವಸ್ತು ದೊರಕಬೇಕೆಂಬ ಕುಟುಂಬನ್ಯಾಯಕ್ಕೆ ವಿರುದ್ಧವಾದ ಅವನವನ ಶಕ್ತಿ ಮತ್ತು ಉತ್ಪಾದನೆಗೆ ತಕ್ಕಷ್ಟೇ ಸಿಗಬೇಕು ಎಂಬ ನ್ಯಾಯವು ಒಮ್ಮೆ ಉಗ್ರವೆಂದು ತೋರಿತು. ಆದರೆ ಕುಟುಂಬ ಸೂತ್ರವು ಕ್ರಮೇಣ ಸೋಮಾರಿಗಳ ಸಂಖ್ಯೆಯನ್ನು ಬೆಳೆಸಿ ಸಮಾಜವನ್ನೇ ಅಳಿಸೀತು!

ಅಪ್ರೌಢದೆಶೆಯಲ್ಲಿ ಶಕ್ತಿಗೆ ವಿಪರೀತವಾದ ಪ್ರಮಾಣದಲ್ಲಿ ಲಭ್ಯಗಳು ದೊರಕಬೇಕು. ಕುಟುಂಬದೊಳಗಿನ ವ್ಯಕ್ತಿಗಳಲ್ಲಿ ಅತ್ಯನರ್ಹರಿಗೆ ಅತಿಶಯ ಸಿಗಬೇಕು– ಅರ್ಹತೆಯನ್ನು

ದಕ್ಷತೆಯಿಂದ ಅಳೆಯುವಾಗ, ತದ್ವಿರುದ್ಧವಾಗಿ, ಪ್ರೌಢದಶೆಯಲ್ಲಿ ಶಕ್ತಿಗೆ ಸಮಪ್ರಮಾಣದಲ್ಲಿ ಲಭ್ಯಗಳು ಸಿಗಬೇಕು; ಜೀವನ ಪರಿಸ್ಥಿತಿಗೆ ಸಮವಾಗಿರಬಲ್ಲ ಶಕ್ತಿಯೇ ಇಲ್ಲಿ ಅರ್ಹತೆ, ಬೆಲೆ. ಅನರ್ಹರು ಅನರ್ಹತೆಯ ದುಷ್ಫಲಗಳನ್ನೂ ಅರ್ಹರು ಅರ್ಹತೆಯ ಸುಫಲಗಳನ್ನೂ ಉಣಬೇಕು. ಉಳಿಯಬೇಕೆಂಬ ಕುಲ ಈ ನಿಯಮವನ್ನು ಪಾಲಿಸಬೇಕಾಗುತ್ತದೆ. ಚಿಕ್ಕವರಲ್ಲಿ ಈ ನ್ಯಾಯವನ್ನು ಕಾರ್ಯಗತಗೊಳಿಸಿದಾಗ ಮಾತ್ರ ಇದು ಕುಲನಾಶಕವಾದೀತು. ಹಾಗೇ ದೊಡ್ಡವರಲ್ಲಿ ಇದನ್ನು ಜಾರಿಮಾಡದಿದ್ದರೂ ಕೆಲವೇ ತಲೆಮಾರುಗಳಲ್ಲಿ ಕುಲವು ನಾಶವಾಗುವುದು ಖಂಡಿತ. ಸರಕಾರಕ್ಕೂ ಪ್ರಜೆಗಳಿಗೂ ನಡುವೆ ತಂದೆ ಮಕ್ಕಳ ಸಂಬಂಧವಿದೆ ಎಂದು ತಿಳಿದುಕೊಳ್ಳುವುದು ಪ್ರಜೆಗಳ ಹುಡುಗಾಟಿಕೆ, ಹುಚ್ಚುತನ.

ಯುದ್ಧ ಕಡಿಮೆಯಾಗುತ್ತ ಹೋದಂತೆ ವ್ಯಕ್ತಿಯ ಮೇಲಿನ ರಾಜ್ಯದ ಪ್ರಭುತ್ವ ಕಡಿಮೆಯಾಗುತ್ತ ಹೋಗುತ್ತದೆ ಎಂಬುದು ಸ್ಪೆನ್ಸರ್ ಮಹಾಶಯನ ಭಾವನೆ. ಸ್ಥಿರ ಶಾಂತಿಯ ಸನ್ನಿವೇಶದಲ್ಲಿ ಸಮಾನ ಸ್ವಾತಂತ್ರ್ಯದ ನೀತಿಯನ್ನು ಪ್ರಜೆ ಭಂಗಿಸದಂತೆ ನೋಡಿಕೊಳ್ಳುವುದಷ್ಟೇ ರಾಜ್ಯದ (ಸರಕಾರದ) ಕರ್ತವ್ಯವಾಗುತ್ತದೆ. ಅಂಥ ನ್ಯಾಯವಾದರೂ ಜನಕ್ಕೆ ಖರ್ಚಿಲ್ಲದೆ ಸಿಗಬೇಕು ಎಂಬುದು ಅವನ ವಾದ. ಅನ್ಯಾಯಗಾರರನ್ನು ಆಗ ಅನ್ಯಾಯಕ್ಕೀಡಾದವರ ದಾರಿದ್ರ್ಯ ರಕ್ಷಿಸದಂತಾಗುವುದು. ರಾಜ್ಯದ ಖರ್ಚಿಗೆ ಬೇಕಾದ ಹಣವೆಲ್ಲವನ್ನೂ ಪ್ರತ್ಯಕ್ಷ ಕರಗಳಿಂದಲೇ ಪಡೆಯಬೇಕು. ಆಗ ಸರಕಾರವು ಮಾಡಬಹುದಾದ ದುಂದನ್ನದು ಜನರ ಕಣ್ಣಿಗೆ ಕಾಣದಂತೆ ಮುಚ್ಚಿಡಲಾರದು. ಆದರೆ ನ್ಯಾಯವನ್ನು ಮುರಿಯದೆ ಆಗ ಯಾವ ಸರಕಾರವೂ ನ್ಯಾಯಧಾರಣೆಯೊಂದನ್ನು ಬಿಟ್ಟು ಮತ್ತೇನನ್ನೂ ಮಾಡಲಾರದಂತಾಗುತ್ತದೆ. ಅದು ನ್ಯಾಯ ಮುರಿದರೆ, ಸಮಾಜ ಪ್ರಗತಿಯ ಬುನಾದಿ ಸೂತ್ರಕ್ಕೆ ವಿರುದ್ಧವಾಗಿ, ಕರ್ಮಕ್ಕೆ ತಕ್ಕಫಲ ಸಿಗದಂತೆ ಮಾಡಿ, ಅಯೋಗ್ಯರನ್ನು ಎತ್ತಿ ಹಿಡಿದು ಕುಲಕಂಟಕವಾಗುತ್ತದೆ.

ಸ್ಪೆನ್ಸರನ ನ್ಯಾಯಸೂತ್ರದ ಪ್ರಕಾರ ಭೂಮಿಯು ಎಲ್ಲರಿಗೂ ಸೇರಿದ್ದು; ಅದರ ಸುಧಾರಣೆಯ ಪ್ರಶ್ನೆ ಬೇರೆ. ಎಲ್ಲ ಭೂಮಿಯೂ ರಾಷ್ಟ್ರೀಕೃತವಾಗಬೇಕು. ಆಗ ಅರ್ಥಾರ್ಜನೆಯ ಸಮಾನಾವಕಾಶ ಸಿದ್ಧಿಸುತ್ತದೆ. ಆದರೆ ಕಡೆಗೊಮ್ಮೆ ಸುಧಾರಣೆಯ ಕಡೆ ದೃಷ್ಟಿಸಿ ಅವನು ಭೂಮಿಯು ಕೌಟುಂಬಿಕ ಒಡೆಯತನದಲ್ಲಿರುವುದು ಹೆಚ್ಚು ಉಪಯುಕ್ತ ಎಂದದ್ದುಂಟು. ಖಾಸಗಿ ಆಸ್ತಿಯಲ್ಲಿ ಅವನವನದವನವನದೇ ಆಗಿರತಕ್ಕದ್ದು. ಒಡೆಯತನದ ಹಕ್ಕು ಒಡೆಯನಿಗೆ. ಒಡವೆಯನ್ನು ಮತ್ತೊಬ್ಬನಿಗೆ ಕೊಡುವ ಹಕ್ಕಿದ್ದರೇ ಪರಿಪೂರ್ಣ. ವ್ಯಕ್ತಿಗಳ ನಡುವೆ ಹೇಗೋ ಹಾಗೇ ರಾಷ್ಟ್ರಗಳ ನಡುವೆಯೂ ಅನಿರ್ಬದ್ಧ ವ್ಯಾಪಾರ–ವ್ಯವಹಾರಗಳಿರಬೇಕು. ನ್ಯಾಯವಿಧಿಯು ಸಣ್ಣಸಣ್ಣ ಗುಂಪುಗಳಿಗಷ್ಟೇ ಪರಿಮಿತವಾಗಿರದೆ ಅಂತರ್ರಾಷ್ಟ್ರೀಯ ವ್ಯಾಪ್ತಿಯುಳ್ಳದ್ದಾಗಿರಬೇಕು.

ಮೇಲೆ ಹೇಳಿದಂಥವು ಸ್ಥೂಲವಾಗಿ "ಮಾನವನ ಹಕ್ಕುಗಳು". ಬದುಕುವ, ಸ್ವತಂತ್ರವಾಗಿರುವ ಮತ್ತು ಸಮಾನ ಕರಾರಿನಂತೆ ಸುಖವಸ್ತುವನ್ನು ಆರ್ಜಿಸುವ ಹಕ್ಕುಗಳು ಎಲ್ಲ ಮಾನವರಿಗೂ ಪ್ರಥಮತಃ ಇರಬೇಕಾದಂಥವು. ಈ ಅರ್ಥಾಧಿಕಾರದ ಮುಂದೆ

ರಾಜ್ಯಾಧಿಕಾರ ಗೌಣ. ಅರ್ಥಸ್ವಾತಂತ್ರ್ಯವಿಲ್ಲದಲ್ಲಿ ರಾಜ್ಯಸ್ವಾತಂತ್ರ್ಯಕ್ಕೆ ಅರ್ಥವಿಲ್ಲ. ರಾಗಿಬೀಸುವ ದಾರಿದ್ರ್ಯ ತಪ್ಪದಿರಲು ಯಾವ ಪಕ್ಷದ, ಪದ್ಧತಿಯ ಸರಕಾರ ಬಂದರೇನು? ಹೋದರೇನು? ಅರ್ಥ ವ್ಯವಹಾರದಲ್ಲಿ ಸ್ವತಂತ್ರರಾದ ಪ್ರಜೆಗಳೇ ನಿಜವಾಗಿಯೂ ಸ್ವತಂತ್ರರು. ಈ ಪರಿಸ್ಥಿತಿಯನ್ನು ತರಲು ಸ್ಪೆನ್ಸರನ ಪ್ರಕಾರ ಸಮಾಜವಾದಿ ಪ್ರಜಾಸತ್ತೆಗಿಂತ ಅರ್ಥಸ್ವಾತಂತ್ರ್ಯವೀಯುವ ರಾಜಪ್ರಭುತ್ವವೇ ಯೋಗ್ಯ.

ರಾಜಕೀಯ ಹಕ್ಕುಗಳು ಹಿಂದೆ ಹೇಳಿದ ಪ್ರಕಾರ ಭ್ರಮೆಗಳು. ಹೆಂಗಸರಿಗೆ ಮತಾಧಿಕಾರ ದೊರೆತರೆ ಅನರ್ಹ ಅಸಹಾಯರಿಗೆ ಬೆಂಬಲಕೊಡುವಂತಹ ಮಾ–ಬಾಪ್ ಸರಕಾರದ ರಚನೆಗೆ ಅವರು ಕಾರಣರಾದಾರು. ಜೊತೆಗೆ ಯುದ್ಧದಲ್ಲಿ ಜೀವಕಳಕೊಳ್ಳುವವರು ಗಂಡಸರು. ಹಾಗಿದ್ದಾಗ ಸುಖವಾಗಿ, ಸುರಕ್ಷಿತವಾಗಿ ಕಾಲಹಾಕುವ ಹೆಂಗಸರು ಮತಾಧಿಕಾರಕ್ಕೆ ಹೇಗೆ ಅರ್ಹರಾದಾರು?

ಉದ್ಯಮವೂ ಶಾಂತಿಯೂ ಕೊನೆಯ ವಿಕಾಸಾವಸ್ಥೆಯಲ್ಲಿ 'ಪರೋಪಕಾರಾರ್ಥಮಿದಂ ಶರೀರಂ' ಎಂಬ ವ್ಯಷ್ಟಿ ಜೀವನವನ್ನು ಸಾಧಿಸಿಕೊಡಬಲ್ಲವು. ಅವು ವ್ಯಕ್ತಿಯ ಸ್ವಾರ್ಥಸಾಧನೆ ಮೇರೆ ಮೀರದಂತೆ ತಡೆಹಿಡಿದು ಸಮತೋಲವನ್ನು ಕಾಯಬಲ್ಲವು. ಹೀಗೇ ಮುಂದುವರಿದರೆ ಸಮಾಜವು ತಾತ್ವಿಕ ಶಿಸ್ತಿನ ಅರಾಜಿಕ ಸ್ವರೂಪವನ್ನು ಹೊಂದಬಲ್ಲುದು– ಆಳುವವರ ಅವಶ್ಯಕತೆಯಿಲ್ಲದೆ ಎಲ್ಲರೂ ತಮ್ಮನ್ನು ತಾವೇ ಸರಕಾರದಷ್ಟೇ ದಕ್ಷತೆಯಿಂದ ಆಳಿಕೊಂಡು ಸರಕಾರ ರಹಿತರಾಗಿ ಬಾಳುವಂತಾದೀತು!

ಸ್ವಾರ್ಥ–ನಿಸ್ವಾರ್ಥಗಳ ದ್ವಂದ್ವದಲ್ಲಿ ಮಾನವ ಸಿಕ್ಕಿ ಅವನಲ್ಲಿ ಒಂದು ವಿಧದ ಸಮತೋಲ ಬರುತ್ತದೆ. ಹಾಗೆ ಬಂದರೆ ಅದು ಸಹಜ. ಬರಿ ನಿಃಸ್ವಾರ್ಥಮಯವಾದ ಮಂದಿಯಿಂದ ಕೂಡಿದ ಸಮಾಜವೊಂದಿದ್ದರೆ ಅದು ಬಲಿಚಕ್ರವರ್ತಿಯ ರಾಜ್ಯದಂತಾದೀತು. ಅಲ್ಲಿ ಬದುಕಿದರೆ ಯಾವ ಅನುಭವ ಬಂದೀತು? ಅಲ್ಲಿ ಎಲ್ಲರೂ ದಾಕ್ಷಿಣ್ಯಶೀಲರು, ನಮಸ್ಕಾರ–ವಷಟ್ಕಾರಗಳ ಮಂಟಪೋತ್ಸವ, ಎಲ್ಲೆಲ್ಲೂ 'ಅಯ್ಯೋ ಪಾಪ'ಗಳ ಹೆಣ್ಣಿಗತನ–ಹಿಂದೇಟು–ಹಿನ್ನಡೆ! ಅದೊಂದು ಗಲಿಬಿಲಿಯ, ಗೊಂದಲದ, ಅವ್ಯವಸ್ಥೆಯ ಪ್ರಪಂಚವೆನಿಸೀತು! ಬಹುಸಂಖ್ಯರ ಸಾಮಾನ್ಯ ಸುಖದ ಅತ್ಯುಚ್ಚ ಮಟ್ಟವನ್ನು ಸಾಧಿಸಬೇಕಾದರೆ, ಸಾಮಾಜಿಕ ಪರಿಸ್ಥಿತಿ ನಿಯಂತ್ರಣದಲ್ಲಿಟ್ಟ ಅವಕಾಶದಲ್ಲಿ ವ್ಯಕ್ತಿಯು ತನ್ನ ಸುಖವನ್ನು ಸಾಧಿಸಿಕೊಳ್ಳುವ ಕ್ರಮವೊಂದೇ ಸಾಧಕ. ಸಹಾನುಭೂತಿ, ಪರೋಪಕಾರ ಬುದ್ಧಿಗಳಿಗೆ ಬಲವಾದ ಉತ್ತೇಜನ ಅಂಥ ಸಮಾಜದಲ್ಲಿ ಸಿಕ್ಕುತ್ತದೆ, ಅಷ್ಟೆ. ಮಾತಾಪಿತರಗಳ ಸ್ವಾರ್ಥರಹಿತವಾದ ಮಕ್ಕಳ ಪೋಷಣೆ, ಮಕ್ಕಳ ಪಡೆವ ಆಸೆ, ದತ್ತಕ್ಕೆ ಮಕ್ಕಳನ್ನು ತೆಗೆದುಕೊಳ್ಳುವುದು ಮುಂತಾದ ನಿಃಸ್ವಾರ್ಥ ಕೃತ್ಯಗಳು ಸ್ವಾರ್ಥದ ತೃಪ್ತಿಗೇ ಅವಶ್ಯವಾದಂಥವು. ತನ್ನ ಸದ್ಯದ ಸುಖವನ್ನು ತ್ಯಜಿಸಿ ದೇಶಕ್ಕಾಗಿ ದುಡಿವ ದೇಶಭಕ್ತಿಯು ಅಂಥ ನಿಃಸ್ವಾರ್ಥ ಜೀವನದ ಉತ್ತಮ ಉದಾಹರಣೆ. ಸಮಾಜ ಜೀವನಪದ್ಧತಿಯು ಕ್ರಮಬದ್ಧವಾಗಿ ಮುಂಬರಿದರೆ ಪ್ರತಿ ತಲೆಮಾರಿಗೂ ಪರಸ್ಪರ ಸಹಾಯಕತೆಯಲ್ಲಿ ವ್ಯಕ್ತಿಗಳು ಒಂದೊಂದು ಹೆಜ್ಜೆ ಮುಂದೆ ಹೋದಾರು. ಅವಿರತವಾದ ಸಾಮಾಜಿಕ ಶಿಸ್ತು ಕಾಲಕ್ರಮೇಣ ಎಲ್ಲರಿಗೂ ಲಾಭಕರವಾದ,

'ಅವನ ಸುಖವೇ ನನ್ನ ಸುಖ' ಎಂಬ ಸಹಾನುಭೂತಿಯ ಹರ್ಷ–ಶೀಲವನ್ನು ಪ್ರತಿಯೊಂದು ವ್ಯಕ್ತಿಯೂ ಹಿಡಿಯುವಂತಹ ಸದವಕಾಶವನ್ನು ಬೆಳೆಯಿಸೀತು. ತಲೆತಲಾಂತರದಿಂದ ಸಾಮಾಜಿಕ ಒತ್ತಾಯವು ಕಲಿಸಿದ ಕರ್ತವ್ಯಭಾವವು ಅಳಿದು ಆಗ ಸ್ವೇಚ್ಛಾಕೃತ, ಸ್ವಯಂಭೂತ ಪರಹಿತಕಾರ್ಯ ಸಮಾಜದಲ್ಲಿ ನಿತ್ಯದ ಮಾತಾಗುತ್ತದೆ. ಸಾಮಾಜಿಕ ಪ್ರಯೋಜನಕ್ಕಾಗಿ ನೈಸರ್ಗಿಕವಾಗಿ ಆಯ್ದುಕೊಳ್ಳಲ್ಪಡುವ ನಿಃಸ್ವಾರ್ಥಸೇವೆಯೆಂಬುದು ಜನರಲ್ಲಿ ಅಂದು ಒಂದು ಹುಟ್ಟುಗುಣವೆನಿಸೀತು. ಒತ್ತಾಯ ಎಳ್ಳಷ್ಟೂ ಯಾರದೂ ಇಲ್ಲದೆ ಆತ್ಮಸಂತೋಷಕ್ಕಾಗಿ ಪರಹಿತಕ್ಕಾಗಿ ದುಡಿವ ಸದಸ್ಯರುಳ್ಳ ಸಮಾಜ ಪರಿಪೂರ್ಣ ಸ್ವರೂಪದ ಸಮಾಜಕ್ಕೆ ಅತಿ ಹತ್ತಿರವಾದದ್ದು.

## ೧೬

ಕ್ರಿ.ಶ. ೧೮೪೪ರಲ್ಲಿ ಪ್ರಸಿಯದಲ್ಲಿ ಅವತರಿಸಿದ ಅತಿಮಾನವವಾದಿಯಾದ ನೀಷೆಯು ಅಪೂರ್ವ ಪ್ರತಿಭಾವಂತನು ತನ್ನ ಸುತ್ತುಮತ್ತಲಿನ ಕ್ಷುದ್ರ ಜೀವಿಗಳನ್ನು ಕಂಡು ಹೇಸಿದ ಆ ಬಲೋಪಾಸಕನು ಮಹಾ ಪ್ರವಾದಿಯ ವೀರ್ಯವತ್ತೆಯಿಂದ ಉದ್ಗರಿಸಿದ ಮಾತುಗಳು ಮನೋಹರವಾಗಿವೆ.

ಆರ್ಜವ ಹಾಗೂ ಆತ್ಮನಿರ್ವಂಚನೆಗಳಿಲ್ಲದವರ ದೊಡ್ಡಸ್ತಿಕೆಯು ತೃಣಪ್ರಾಯ. ಮೆತ್ತಗಿನವರಿಗೆ ಮತ್ತೊಂದು ಗುದ್ದು ಎಂಬ ಜಗತ್ತಿನಲ್ಲಿ ನಾವೆಂದೂ ಮೆತ್ತಗಿನವರಾಗಕೂಡದು. ತೋರಿಕೆಯ ನಯ–ನಾಜೂಕು–ನಾಗರಿಕತೆಗಳು ವಿಷಪ್ರಾಯ.

ಹಳೆಯ ದೇವರು ಎಂದೋ ಸತ್ತುಹೋದರು. ಅವರ ಸಾವು ಬಹಳ ಒಳ್ಳೆಯದು, ಆನಂದಕರವಾದುದು. ಅವರು ನಕ್ಕು ನಕ್ಕು ಅಜೀರ್ಣವಾಗಿ ಸತ್ತದ್ದು.

ಪರಲೋಕದ ಪ್ರತ್ಯಾಶೆಯನ್ನು ಬಿಡಿರಿ. ಇಹವನ್ನು ಆಧರಿಸಿರಿ. ಅತಿಮಾನುಷ ಕಲ್ಪನೆಗಳು ಮಧುರ ವಿಷ, ಎಚ್ಚರ ತಪ್ಪಿಸುವ ಮದ್ದು.

ಹೊಸದನ್ನು ಹುಟ್ಟಿಸಬೇಕೆಂಬಾತ ಹಳೆಯದನ್ನು ಧ್ವಂಸಗೊಳಿಸಬೇಕು. ಅತ್ಯುನ್ನತ ದೌರ್ಜನ್ಯವು ಅತ್ಯುನ್ನತ ಸೌಜನ್ಯದ ಅವಿಭಾಜ್ಯವಾದ ಅಂಗ. ಅಡಗಿಸಿಡುವ ಸತ್ಯ ವಿಷೋಪಮ.

ಈಗ ಹಳೆಯ ದೇವರಾರೂ ಇಲ್ಲ. ಆದ್ದರಿಂದ ಅತಿಮಾನವರು ಹುಟ್ಟುತ್ತಾರೆ. ಮಾನವನು ಮಾನವತ್ವದ ಗಡಿಮಿತಿಗಳನ್ನು ದಾಟುತ್ತಾನೆ. ಮಾನವನ ಇರವು ಒಂದು ಸೇತು – ಮುಟ್ಟತಕ್ಕ ಕೊನೆಯ ಸ್ಥಳವಲ್ಲ. ಅದೊಂದು ಮಧ್ಯಲೋಕ, ಮಧ್ಯಾವಸ್ಥೆ – ನಶ್ವರ! ನಷ್ಟ ಹೊಂದಿ ತಮ್ಮನ್ನು ತಾವೇ ಮೀರಿ ಹೋಗುವವರು ನನಗೆ ಪ್ರಿಯರು. ನಕ್ಷತ್ರಲೋಕದಾಚೆ ಹೋಗಿ ಬದುಕಲೆಂದು ಸಾಯದೆ, ಭೂಮಿಗಾಗಿ ಅಹುತಿ ಕೊಟ್ಟುಕೊಂಡು ಅದನ್ನು ಅತಿಮಾನವನ ಒಡೆಯತನಕ್ಕೆ ತರುವವರು ನನಗೆ ಪ್ರಿಯರು!

ಯಾರೂ ನಿಮ್ಮ ಶಕ್ತಿಮೀರಿ ಸುಗುಣಿಗಳಾಗಬೇಡಿರಿ. ಅಸಂಭವವೆನಿಸುವ ಯಾವುದನ್ನೂ ಮಾಡದಿರಿ. ನಮ್ಮ ಸುಖ ನಮಗರಿಯದು. ಅದು ಅತಿಮಾನವನಿಗಷ್ಟೇ ಗೊತ್ತು. ಅವನಿಗೆ

ನೇರವಾಗಿ ದುಡಿಯುವುದಷ್ಟೇ ನಮ್ಮ ಕೆಲಸ.

ವಿಶ್ವದ ಸೃಷ್ಟಿ–ಸ್ಥಿತಿ–ಲಯ ಚಕ್ರವು ಎದೆಂದೂ ನಿಲ್ಲದೆ ಸಾಗುತ್ತದೆ. ಯುಗಚಕ್ರದ ಪರಿವರ್ತನದಲ್ಲಿ ಎಲ್ಲರಿಗೂ ಎಲ್ಲಕ್ಕೂ ಪುನರುದಯ ಹಾಗೂ ಪುನರಸ್ತಗಳಾಗುತ್ತವೆ.

ದಾಸ್ಯ ದೈನ್ಯದ ತಾಯಿ. ಅಸಹಾಯಕತೆಯೇ ನಿಃಸ್ವಾರ್ಥಕ್ಕೆ ತಂದೆ. ಅಧಿಕಾರ–ಅಂಜಿಕೆಗಳನ್ನಾಲಿಂಗಿಸುವ ಆಶೆ ಹೋಗಿ ಮಿಗಬಾಳಿನಲಿ ಸಂರಕ್ಷಿತತೆ ಶಾಂತಿಗಳನ್ನು ಜನ ಬೇಡುತಿದೆ! ಸಾಮರ್ಥ್ಯಕಾದೇಶವಾಯ್ತು ಉಪಾಯಜ್ಞಮತಿ. ಪ್ರಕಟ ಪ್ರತೀಕಾರ ಮಾಡುವುದ ಬಿಟ್ಟೀಗ ಗುಪ್ತ ಪ್ರತೀಕಾರ ಪದ್ಧತಿಯ ಹಿಡಿದಿಹರು ಮಾನವರು. ಬಿಗಿಯಳಿದು ಹೆಂಗರುಳು ಬಂತು; ಅರಂಭವಳಿದು ಅನುಕರಣ ಎಲ್ಲೆಲ್ಲು ಕಾಣುತಿದೆ. ಗೌರವದ ಗರ್ವಕ್ಕೆ ತಳವಿಲ್ಲ; ಅದರ ಬದಲಾತ್ಮಸಾಕ್ಷಿಯ ಬಾರುಗೋಲೇಟು ನಿತ್ಯವೂ! ಇಂದ್ರಿಯ–ಶರೀರಗಳ ಆಸೆ ಕೆಟ್ಟದ್ದೆಂದು, ಬಡತನವ ಸದ್ಗುಣಕೆ ಸಾಕ್ಷಿಯೆಂದು ಉಸುರಿದುದು ದಾಸಜನ–ಧೀರ ಜನವೆಂದೆಂದಿಗೂ ಅಲ್ಲ!

ದಯೆದೋರುವುದು ಒಂದು ಷೋಕಿ; ತಮ್ಮಧಿಕತೆಯನಸಹಾಯರೆದುರು ಮೆರೆಯಿಸುವ ತಂತ್ರವದಲ್ತೆ? ಈ ನೀತಿಮತ್ತೆಯಡಿ ಅಧಿಕಾರಶಕ್ತಿಯನು ಸೆಳೆದುಕೊಳ್ಳುವ ಗುಪ್ತ ಸಂಕಲ್ಪವಡಗಿಹುದು! ಅನ್ಯರನು ವಶಗೊಳಿಸಿಕೊಳ್ಳುವಾಸೆಯೆ ಪ್ರೇಮ. ಒಲಿಸಿಕೊಳ್ಳುವುದೊಂದು ಯುದ್ಧ–ಸಂಗಮ, ಯಾಜಮಾನ್ಯ. ಒಲಿದವನು ಒಲಿಯದವಳನು ಕೊಲುವನೇತಕ್ಕೆ? ಅವಳನ್ಯನಾಸ್ತಿಯಾಗದೆ ಇರಲಿ ಎಂದಷ್ಟೆ! ಪ್ರೇಮದಲಿ ತಾವು ನಿಃಸ್ವಾರ್ಥರೆಂಬರು ಜನರು; ತಮ್ಮದನು ಬದಿಗಿಟ್ಟು ತದ್ವಿರೋಧಕವಾದ ಪರಹಿತಕೆ ದುಡಿವೆವೆನ್ನುವರು– ನಿಜ; ಅಲ್ಲಿಯೂ ಹಾಗೆ ಮಾಡಿದ್ದಕ್ಕೆ ಪ್ರತಿಯಾಗಿ ಉಪಕೃತರು ತಮ್ಮ ವಶದಲ್ಲಿರುವುದನ್ನು ಹಾರಯಿಸುವರು! ಸತ್ಯಕಾಮರು ಕೂಡ ಅ ಸತ್ಯದೊಡೆಯತನವನ್ನು ಮೊದಲಿಗರಾಗಿ ಪಡೆಯಬಯಸುವರಮಮ! ದೈನ್ಯ ಅಧಿಕಾರ ಸಂಪಾದಿಸುವ ಸಂಕಲ್ಪಕಿಟ್ಟ ರಕ್ಷಕವರ್ಣ! ನ್ಯಾಯ ನೀತಿಗಳೆಲ್ಲ ಅಧಿಕಾರ ದಾಹದೆದುರಸಹಾಯ, ಅಸಹಾಯ; ಆ ದಾಹಕಾಳಾಗಿ ದುಡಿವ ದಾಸಯ್ಯಗಳು– ತತ್ವದರ್ಶನವೆಲ್ಲ ಬಿಸಿಲುಗುದುರೆಗಳಲ್ತೆ? ಅಲ್ಲಿ ಸಿಗುವುದು ನಾವು ಚಿರಕಾಲದಿಂದರಸುತಿದ್ದ ಸತ್ಯವೆ? ಅಲ್ಲ; ನಮ್ಮ ಬಯಕೆಗಳ ಪಡಿನೆಳಲಲ್ಲದಿನ್ನೇನು ಕಾಣಬಂದೀತಲ್ಲಿ? ತಾತ್ವಿಕರು ತಮ್ಮೆದೆಯ ಪೂರ್ವಗ್ರಹಗಳನ್ನು ತರ್ಕಬಲದಿಂದಲ್ಲಿ ಎತ್ತಿಹಿಡಿಯುವರಷ್ಟೆ. ಅಂತಃಸ್ಥ ಕಾಮವೇ ಎಲ್ಲವರ ಎಲ್ಲಾ ವಿಚಾರಗಳ ತಂದೆ; ಅದೊ ಆಧಿಪತ್ಯದ ಕಾಮ! ಮೂಲ ಪ್ರವೃತ್ತಿಯದು; ಅದನ್ನು ಮೀರಿದ ಬುದ್ಧಿಸಂಪನ್ನ ವಸ್ತುವಿನ್ನೊಂದಿಲ್ಲ ಜಗದಲ್ಲಿ. ನಮ್ಮ ಜಾಗ್ರದವಸ್ಥೆ ಕೆಲಸಕ್ಕೆ ಬಾರದುದು, ಅತ್ಯಂತ ದುರ್ಬಲ ಪದಾರ್ಥವದು ಬಾಳಿನಲಿ.

ಸತ್ವಸಂಪನ್ನ ಬಯಸಿದ್ದೆಲ್ಲವೂ ನ್ಯಾಯ. ದಯೆ, ಆತ್ಮಸಾಕ್ಷಿ, ಪಶ್ಚಾತ್ತಾಪಗಳಿಗಲ್ಲಿ ಎಳ್ಳಷ್ಟೂ ಎಡೆ ಇಲ್ಲ; ನಾಚುವುದೇಕೆ ಬಲ್ಲಿದನು ದೇಹಬಲ–ಬುದ್ಧಿಬಲವಿರಲಾಗಿ? ಕೈಯಲಾಗದುದನ್ನು ಮಾಡದಿರುವುದು ಸಜ್ಜನಿಕೆಯೇನು? ಬಲಿ ಕೂಡ ದುರ್ಬಲರ ಹಾಗಿರುವುದೆಂತು ಸಭ್ಯತೆ ಹೇಳಿ ಹೇಳಿ! ಬಲವಂತರನು ಬಿಡದೆ ಬಳಸಲು ಬಲವ,

ಅಮತರ್ಮುಖರ ಮಾಡಿ ಕೊಳೆಯ ಹಚ್ಚಿದ ಕಾಲದಲ್ಲೆ ಕಂಡಿತ್ತಾತ್ಮವೆಂಬ ನಿರ್ಗುಣವಸ್ತು! ಭಾವನಾಬಲ, ಶಕ್ತಿ, ಸಂಕಲ್ಪವುಳ್ಳವನೆ ಬಲಿ; ಅವಿಲ್ಲದ ಜೀವಿ ಸಪ್ಪೆ ಸಾವಿತ್ರಿ, ಪ್ಯಾಲ್‌ಪಿಂಡಿ, ಪುಕ್ಕಟೆ ಫೌಜುದಾರ, ಗೌಜಿಗರರಸ!

ಈ ಪ್ರಕಾರ ಗರ್ಜಿಸಿದ ನೀಷೆ ತನ್ನ ಭಾವೋದ್ರೇಕದಲ್ಲಿ "ಬಲವಂತಿಕೆಯೇ ನ್ಯಾಯವಂತಿಕೆ" ಎಂಬ ಕಾಡಾಡಿತನವನ್ನು ಎತ್ತಿ ಹಿಡಿದು ತಾಳತಪ್ಪಿ ಬೀಳುವಂತಾದನು. ಆ ತುದಿಗೆ ಹೋಗದಿದ್ದರೆ ಅವನು ಹೀಗೆ ಮುಗ್ಗರಿಸುತ್ತಿದ್ದಿಲ್ಲ. ಅವನ ಪ್ರಖರ ಪ್ರತಿಭೆ ಕಂಡ ಕಾಣ್ಕೆ ಇಡಿಯಾಗಿ ಅಖಂಡಿತವಾಗುತ್ತಿತ್ತು. ಅವನ ಮಾತಿನಲ್ಲಿ, ಬಲೋಪಾಸನೆಯ ವೀರವಾಣಿಯಲ್ಲಿ ಎಷ್ಟೋ ಸತ್ಯಾಂಶವಿದೆ. ಭೀರುತನವನ್ನು ಚೆಂದವೆಂದು, ಹೇಡಿತನವನ್ನು ಸಭ್ಯತೆಯೆದು, ಹೆಳವತನವನ್ನು ದಯೆ–ದಾಕ್ಷಿಣ್ಯವೆಂದು ವ್ಯವಹರಿಸುವ ಸಮಾಜ ಅವನ ಮಾತಿನಿಂದ ಇಂದು ಬುದ್ಧಿ ಕಲಿಯಬೇಕಾಗಿದೆ. ವಂಚನೆಯನ್ನು ಬುದ್ಧಿವಂತಿಕೆ, ಪರಾಕ್ರಮ ಎಂದು ಅನುಸರಿಸುವ ಸಮಾಜ ದೈತ್ಯ ಸಮಾಜ!

## ೧೭

ಉತ್ತಮರು ಉತ್ತಮೆಯರನ್ನು ಮದುವೆಯಾಗಬೇಕು. ಪ್ರೇಮದ ಪ್ರಜಾಪ್ರಭುತ್ವಕ್ಕೆ ಅರ್ಥವಿಲ್ಲ. ಮದುವೆ ಕೇವಲ ಮಾನವ್ಯ ಮಾದರಿಗಳ ಪುನರುತ್ಪಾದನೆಗಾಗಿ ಅಲ್ಲ– ಆ ಮಾದರಿಗಳ ಸುಧಾರಣೆಯೂ ಆಗುತ್ತ ಹೋಗಬೇಕು ಎನ್ನುತ್ತಾನೆ ನೀಷೆ.

ಮನುಷ್ಯನು ದೊಡ್ಡ ಮನೆತನದಲ್ಲಿ ಹುಟ್ಟದೆ ದೊಡ್ಡ ಮನಸ್ಸಿನವನಾಗಲಾರ. ತಂದೆತಾಯಿಗಳು ಉದಾತ್ತಶೀಲರಾಗಿರುವದು ಮತ್ತು ಉಗ್ರಶಿಸ್ತಿನ ಶಿಕ್ಷಣ ದೊರಕುವದು ಅತಿಮಾನವ ಅಥವಾ ಪುರುಷೋತ್ತಮನಾಗಲು ಅವಶ್ಯಕ. ಪುರುಷೋತ್ತಮರಿಂದಲೇ ಸಮಾಜದ ಪ್ರಗತಿ ಸಾಧ್ಯ. ಅವರು ವಜ್ರಾದಪಿ ಕಠೋರರೂ ಕುಸುಮಾದಪಿ ಮೃದುಗಳೂ ಆಗಬಲ್ಲವರು; ಕಷ್ಟಗಳನ್ನು ಕಂಡು ತಿರಸ್ಕರಿಸಿ ನಗಬಲ್ಲ ಸತ್ವಸಂಪನ್ನರು: ತ್ರಿಗುಣಾತೀತ ನಡತೆ ಅವರದು. ಧೀರತ್ವವೇ ಒಳ್ಳೆಯತನ; ಈಶತ್ವವೇ ಒಳಿತು; ವಿಭೂತಿ ಮತ್ತೆಯೇ ಪುರುಷೋತ್ತಮಿಕೆ. ದೌರ್ಬಲ್ಯವೇ ದೌರ್ಜನ್ಯ. ಸುಲಭ ಸುಖಲಾಲಸೆ ಪುರುಷೋತ್ತಮನಿಗಿಲ್ಲ. ಅವನು ನಿರ್ಭಯವನ್ನು ಸಾಧಿಸಿಕೊಂಡ ಯೋಗಿ; ಭಯಕ್ಕೇ ಭಯ ಹುಟ್ಟಿಸಬಲ್ಲವ! ಸದುದ್ದೇಶಕ್ಕಾಗಿ ಮಾಡುವ ಹೋರಾಟವೂ ಯುದ್ಧವೂ ಒಳ್ಳೆಯದು. ಅಲ್ಲಿ ವ್ಯಕ್ತಿಯ ಸುಪ್ತ ಮಾಹಾತ್ಮ್ಯ ಬೆಳಕಿಗೆ ಬರಲು ಅವಕಾಶವಿದೆ.

ಉತ್ಸಾಹ ಬುದ್ಧಿಮತ್ತೆ ಮತ್ತು ಹೆಮ್ಮೆಗಳು ಪುರುಷೋತ್ತಮನ ಮುಖ್ಯ ಲಕ್ಷಣಗಳು ಅವನ್ನವನು ಸಮರಸಗೊಳಿಸಿಕೊಳ್ಳಬೇಕು. ಬಯಕೆಗಳ ಸಂತೆಯನ್ನು ವ್ಯಕ್ತಿತ್ವದ ಶಕ್ತಿಯನ್ನಾಗಿ ಮಾರ್ಪಡಿಸುವ ಮಹೋದ್ದೇಶವನ್ನಿಟ್ಟುಕೊಂಡರೆ, ಅದು ತೀವ್ರ ಭಾವನೆಗಳನ್ನು ಆಯ್ದು ಏಕರಸಗೊಳಿಸಿ ಶಕ್ತಿರೂಪಕ್ಕಿಳಿಸಬಲ್ಲದು. ತನ್ನನ್ನು ಶಿಸ್ತಿನಿಂದ ಆದರ್ಶವಾಗಿ ರೂಪಿಸಿಕೊಳ್ಳುವ

ಪುರುಷೋತ್ತಮ– ಪುರುಷಾರ್ಥವೇ ಜೀವನದಲ್ಲಿ ಆತ್ಯಂತಿಕ ಸಿದ್ಧಿ. ಪುರುಷಾಧಮ ರಾಶಿಯಲ್ಲೊಬ್ಬನೆನಿಸಿಕೊಳ್ಳಬಾರದೆನ್ನುವ ಯಾವನಾದರೂ ತನ್ನ ವರ್ತನೆಯಲ್ಲಿ ಸಡಿಲಾಗಬಾರದು. ತನ್ನ ಬಗ್ಗೆ ದಯೆ ಮಾಯೆಗಳನ್ನಿಟ್ಟುಕೊಳ್ಳ ಬಾರದು. ತನ್ನ ಮಹೋದ್ದೇಶದ ಸಾಧನೆಗಾಗಿ ಪುರುಷೋತ್ತಮನು ಮಿತ್ರದ್ರೋಹವೊಂದನ್ನುಳಿದು ಮತ್ತೆ ಏನನ್ನು ಬೇಕಾದರೂ ಮಾಡಲು ಸಿದ್ಧ! ಅದು ಉದಾತ್ತತೆಯ ಮಹಾ ಚಿಹ್ನೆ, ಪುರುಷೋತ್ತಮತೆಯ ಪರಮಲಕ್ಷಣ. ಅಂಥ ಪುರುಷೋತ್ತಮನ ಮಹೋದ್ದೇಶಕ್ಕೆ ನೆರವಾಗಿ ನಿಲ್ಲುವದೇ ಇತರರ ಜೀವನಸಾರ್ಥಕತೆ. ಅದಕ್ಕಾಗಿ ದುಡಿಯಲು ದೇಶ–ಕಾಲಾದಿ ಪ್ರತಿಬಂಧವಾವುದೂ ಇರಕೂಡದು. ಆಗ ಅಭಿಜಾತವರ್ಗ ಹುಟ್ಟುತ್ತದೆ; ಅನಂತರ ಅದರಲ್ಲಿ ಪುರುಷೋತ್ತಮನ ಅಥವಾ ಕಾರಣ ಪುರುಷನ ಉದಯ ಇಲ್ಲವೆ ಅವತಾರವಾಗುವುದು!

ಕುಬೇರ ಪ್ರಭುತ್ವವೇ ಪುರುಷೋತ್ತಮನ ಬರವಿಗೆ ಮಾರ್ಗ. ಪುರುಷೋತ್ತಮನು ಪುರುಷಾಧಮರ ಸೇವಕನಾಗಬೇಕೆಂಬ ತತ್ವ ಪ್ರಜಾಪ್ರಭುತ್ವದ್ದು. ಅಂಥ ತತ್ವಕ್ಕೆ ಅರ್ಥವುಂಟೇ? ನಾಗರಿಕತೆ ನಿರ್ವೀರ್ಯವಾಗಲು ಸ್ತ್ರೀಗುಣಗಳ ಪ್ರಶಂಸೆ ಸಮಾಜದಲ್ಲಿ ಮಿತಿಮೀರುವುದೇ ಕಾರಣ. ಗಂಡು ಗುಣಗಳಾದ ಸತತ ಪ್ರಯತ್ನ, ಸಹಿಷ್ಣುತೆ, ಉದ್ಯಮಶೀಲಗಳಿದ್ದಲ್ಲಿ ವಿದಗ್ಧತೆ, ವಿಜ್ಞಾನ, ಯೋಧಧರ್ಮಗಳು ಬೆಳೆದು ನಾಗರಿಕತೆಯನ್ನು ಕಟ್ಟಬಲ್ಲವು!

ಪ್ರಜಾಸತ್ತೆಯೆಂದರೆ ಹೊರಳುವ ಧರ್ಮ; ಎತ್ತಲೆಂದರತ್ತ ಒಲೆಯುವ ಪ್ರವೃತ್ತಿ ಸಮಷ್ಟಿಯ ಯಾವ ಅಂಗ ಏನನ್ನು ಎಲ್ಲಿ ಬೇಕಾದರೂ ಮಾಡಬಹುದು. ಅದರಲ್ಲಿ ಸಮವೇತ ಪ್ರಯತ್ನ ಅಶಕ್ಯ; ಅಸಹಕಾರ ಅಸಾಧ್ಯ. ಸ್ವಾಚ್ಛಂದ್ಯ ಅರಾಜಕತೆಗಳಿಗಲ್ಲಿ ಅಗ್ರಪೂಜೆ. ಉತ್ತಮರನ್ನು ದ್ವೇಷಿಸುವ ಹಾಗೂ ಮಧ್ಯಮರನ್ನು ಪೂಜಿಸುವ ಕಾರ್ಯ ಅಲ್ಲಿ ನಿತ್ಯವೂ ನಡೆಯುತ್ತದೆ. ಚುನಾವಣೆಯ ಅವಮಾನ ಹಾಗೂ ಅಶ್ಲೀಲಗಳಿಗೆ ಉತ್ತಮರೆಂದೂ ತಲೆಗೊಡರು. ತಲೆಗೊಟ್ಟರೆ ಅವರಿಗೆಲ್ಲಿಯ ಜಯ? ಯಾರನ್ನೂ ಪೂಜಿಸೆನೆಂಬ ಸ್ವತಂತ್ರವೃತ್ತಿಯವರನ್ನು ಅಲ್ಲಿ ದ್ವೇಷಿಸಲಾಗುತ್ತದೆ. ಪಕ್ಷವೊಂದರ ಸದಸ್ಯನಾಗಿರದವನಿಗಲ್ಲಿ ಸ್ಥಾನವಿಲ್ಲ. ಅಂಥ ನೆಲದಲ್ಲಿ ಪುರುಷೋತ್ತಮ ಹುಟ್ಟಲಾರ! ಪುರುಷೋತ್ತಮರ ಗೈಮೆಯನ್ನು ಬಳಸಿಕೊಳ್ಳದೆ ಯಾವ ರಾಷ್ಟ್ರವಾದರೂ ಹೇಗೆ ಮಹಾರಾಷ್ಟ್ರವೆನಿಸಿಕೊಂಡೀತು? ಪುರುಷೋತ್ತಮರನ್ನು ಕಡೆಗಣಿಸಿದ ಸಮಾಜಕ್ಕೆ ಶತಮುಖ ವಿನಿಪಾತ ಕಟ್ಟಿಟ್ಟದ್ದು ನಿಜವಾದ ಮಾನ್ಯತೆಯನ್ನು ಗಣಿಸದೆ ಸಾಮಾನ್ಯತೆಯನ್ನು ಬೆಂಬತ್ತಿ ಹೋಗುವ ಪ್ರವೃತ್ತಿ ಪ್ರಜಾಸತ್ತೆಯಲ್ಲಿರುವುದರಿಂದ ಅದೆಂದೂ ಮಹಾರಾಷ್ಟ್ರವನ್ನು ಸಾಧಿಸದು!

ಪ್ರಜಾಸತ್ತೆಯು ಸ್ತ್ರೈಣ. ಅಲ್ಲಿ ಹೆಂಗಸರು ಗಂಡಸರಂತಾಗಲು ಪ್ರಯತ್ನಿಸುತ್ತಾರೆ. ಗಂಡಸಿನಲ್ಲಿ ಸಾಕಷ್ಟು ಗಂಡಸುತನವಿದ್ದರಲ್ಲವೇ ಹೆಂಗಸಿನ ಹೆಂಗಸುತನವನ್ನು ಕಾಯುವುದು? ವೃದ್ಧನಾರಿಯಾದ ಇಬ್ಸೆನ್ ಮುಕ್ತಸ್ತ್ರೀಯ ನಿರ್ಮಾಪಕ. ಅದರಿಂದ ಅವಳ ಶಕ್ತಿಪ್ರತಿಷ್ಠೆಗಳು ಕುಂದಿದವು. ಸ್ತ್ರೀಪುರುಷರ ನಡುವಿನ ಹೋರಾಟ ಶಾಶ್ವತಸ್ವರೂಪದ್ದಾಗಿರುವುದರಿಂದ ಇಬ್ಬರಲ್ಲಿ ಯಾರಾದರೊಬ್ಬರಿಗೆ ಯಜಮಾನಿಕೆ ದೊರೆತ ಹೊರತೂ ಶಾಂತಿ ಅಸಾಧ್ಯವೇ ಸರಿ. ಅವರ ಸಮಾನತೆ ಅಸಂಬದ್ಧ. ಹೆಂಗಸಿನೊಡನೆ ಸಮಾನತೆಗಿಳಿಯುವುದು ಹಾನಿಕರ;

ಅವಳಿಗದರಿಂದೆಂದೂ ತೃಪ್ತಿಯಾಗದು. ಗಂಡಸು ಗಂಡಸಾದಾಗಲೇ ಅವನಿಗನುಯಾಯಿಯಾಗಿ ಅವಳು ತೃಪ್ತಿಯನ್ನು ಕಂಡಾಳು. ಮಾತೃತ್ವವೇ ಅವಳ ಪೂರ್ಣತೆಯ ಮತ್ತು ಸುಖದ ಆಕರ. ಅವಳ ಎಲ್ಲ ಸಮಸ್ಯೆಗೂ ಪುತ್ರಪ್ರಸವವೇ ಸಮಾಧಾನಕರವಾದ ಉತ್ತರ.

ಸ್ತ್ರೀವಾದದ ಜೊತೆಗೇ ಸಮಾಜವಾದ ಹಾಗೂ ಅರಾಜಕತಾವಾದಗಳು ಬರುತ್ತವೆ. ಈ ಎಲ್ಲವೂ ಪ್ರಜಾಪ್ರಭುತ್ವದ ಬುಟ್ಟಿಗೇ ಸೇರಿದಂಥವು. ರಾಜಕೀಯ ಸಮಾನಾಧಿಕಾರ ಇರಬಹುದಾದರೆ ಆರ್ಥಿಕ ಸಮತೆ ಏಕಿರಬಾರದು? ಎಂಬ ಪ್ರಶ್ನೆ ಸ್ವಾಭಾವಿಕವಾಗಿಯೇ ಏಳುವುದು. ಎಲ್ಲಾದರೂ ನಾಯಕರೆಂಬವರು ಏಕಾದರೂ ಬೇಕು? ಮನುಷ್ಯರು ಸಮಾನರಲ್ಲ. ಸಾರ್ವಜನಿಕ ಒಡೆಯತನವನ್ನಿಟ್ಟುಕೊಳ್ಳುವುದು ಅವರಿಗೆ ಸಹಜವಲ್ಲ. ಸಮಾನತೆಯು ಪ್ರಕೃತಿ ವಿರುದ್ಧ. ವ್ಯಕ್ತಿ–ಜಾತಿ–ವರ್ಗಗಳ ಪ್ರತ್ಯೇಕತೆ ಪ್ರಕೃತಿಸಹಜ. ಸಮಾಜವಾದವು ಜೀವಶಾಸ್ತ್ರಕ್ಕೆ ವಿರುದ್ಧ. ವಿಕಾಸಪ್ರಕ್ರಿಯೆಯಲ್ಲಿ ಉತ್ತಮವು ಅಧಮ ಜಾತಿ–ಕುಲ–ವರ್ಗ–ವ್ಯಕ್ತಿಗಳನ್ನು ಬಳಸಿಕೊಳ್ಳುತ್ತದೆ. ಆತ್ಯಂತಿಕವಾಗಿ ಜೀವನವೆಲ್ಲವೂ ಶೋಷಣಾಮಯ! ಜೀವೋ ಜೀವಸ್ಯ ಜೀವನಂ! ಮತ್ಸ್ಯನ್ಯಾಯವೇ ಇಲ್ಲಿ ಮಹಾನ್ಯಾಯ!

ಸಿರಿಯಣ್ಣನ ಪೂಜೆ ಮತ್ತು 'ಅವನಲ್ಲಿರುವುದು ನಮ್ಮಲ್ಲಿಲ್ಲವಲ್ಲ!' ಎಂದು ಹೊಟ್ಟೆ ತಿಕ್ಕಿಕೊಳ್ಳುವುದು ಅಧಮಶೀಲ, ಅನುದಾತ್ತಶೀಲ! 'ಉಣ್ಣದೊಡವೆಯ ಗಳಿಸಿ ಮಣ್ಣೊಳಗೆ ಬಚ್ಚಿಟ್ಟು ಚೆನ್ನಾಗಿ ನೆಲವ ಸಾರಿಸಿದವನ ಬಾಯೊಳಗೆ ಮಣ್ಣು ಕಾಣಯ್ಯ' ಎಂಬುದನ್ನು ಮರೆಯಲಾದೀತೇ? ಉದಾತ್ತ ಉದ್ದೇಶಕ್ಕಾಗಿ ಉಪಯೋಗ ಮಾಡದಿರುವ ಹಣ ಇದ್ದರೇನು ಇಲ್ಲದಿದ್ದರೇನು? ಸಮಾಜ ಅಂಥ ಕ್ರಿಮಿಜೀವಿಯನ್ನು ಗೌರವಿಸಬಾರದು. ನಿಜವಾದ ಬುದ್ಧಿವಂತನಿಗೆ ಮಾತ್ರ ಆಸ್ತಿಯ ಒಡೆಯತನವಿರಬೇಕು. ಆಸ್ತಿ ದಾಹ ಹಿಡಿದ ರಾಷ್ಟ್ರವೂ ವ್ಯಕ್ತಿಯೂ ರಣಹದ್ದುಗಳೇ ಸರಿ. ಚೋರ ನೀತಿಗೂ ವೈಶ್ಯನೀತಿಗೂ ಬಹಳ ಅಂತರವಿಲ್ಲ. ವೈಶ್ಯನೀತಿಯೇ ಬೂರ್ಜ್ವ ನೀತಿ. ಯೋಧನು ಸೆಟ್ಟಿಗಿಂತ ಮೇಲು ಕುಬೇರನಿಗಿಂತ ಕೀಳು. ಲಾಭಯಂತ್ರದಲ್ಲಿ ಕೂಲಿಕಾರರನ್ನು ಬಳಸುವ ಮಾಲಕನಿಗಿಂತ, ವೈಭವದ ಅಮಲು ಹಿಡಿಸಿ ಯೋಧರನ್ನು ರಣರಂಗದಲ್ಲಿ ಬಳಸುವ ಸೇನಾಪತಿ ಮೇಲು ಮಟ್ಟದವನು. ವ್ಯಾಪಾರಿ ವರ್ಗಕ್ಕಿಂತ ಕ್ಷಾತ್ರವರ್ಗ ಎಂದಾದರೂ ಮೇಲು. ಪ್ರಜಾಸತ್ತೆಯ ಸ್ತ್ರೈಣ ಜೀವನಕ್ಕೆ ಯುದ್ಧವೂ ಸಾರ್ವತ್ರಿಕ ಸೈನ್ಯಸೇವೆಯೂ ತಕ್ಕ ಮದ್ದುಗಳು. ಯುದ್ಧವನ್ನೂ ಜಯವನ್ನೂ ಆತ್ಯಂತಿಕವಾಗಿ ಬಿಟ್ಟು ಕೊಡುವ ಸಮಾಜ ಪತನೋನ್ಮುಖ – ಪ್ರಜಾಪ್ರಭುತ್ವಕ್ಕೂ ಅಂಗಡಿಕಾರರ ಆಳಿಕೆಗೂ ಅರ್ಹ. ಆದರೆ ಯುದ್ಧವು ಉದಾತ್ತ ಉದ್ದೇಶಕ್ಕಾಗಿ ನಡೆದರೆ ಮಾತ್ರ ಯೋಗ್ಯ. ರಾಜ ಮನೆತನದ ಹಕ್ಕುದಾರಿಕೆಗಾಗಿ ಮತ್ತು ಧರ್ಮಾಂತರೀಕರಣಕ್ಕಾಗಿ ಮಾಡಿದ ಯುದ್ಧಗಳೂ ವ್ಯಾಪಾರಿ ಸವಲತ್ತುಗಳಿಗಾಗಿ ಮಾಡಿದ ಯುದ್ಧಗಳೂ ಅನುದಾತ್ತ ನೀಚ.

ವ್ಯಾಪಾರಿ ವರ್ಗ ಆಳದಂತೆ ನೋಡಿಕೊಳ್ಳುವುದೇ ರಾಜಕಾರಣದ ಮುಖ್ಯ ಸಮಸ್ಯೆ. ವ್ಯಾಪಾರಿ ಯಾವಾಗಲೂ ಕುಬೇರನಂತೆ ದೂರದೃಷ್ಟಿಯುಳ್ಳ ರಾಜನೀತಿಜ್ಞನಾಗಲಾರ.

ಅವನ ದೃಷ್ಟಿ ಎಂದೂ ವ್ಯಾಪಕವಾಗಲಾರದು. ಪುರುಷೋತ್ತಮ ಇಲ್ಲವೆ ಉದಾತ್ತ ಕುಬೇರನು ದೈವದತ್ತವಾದ ಶಾಸನಾಧಿಕಾರವುಳ್ಳವ. ಅವನ ದಕ್ಷತೆಯೇ ಅವನ ಆಳಿಕೆಯ ಹಕ್ಕು. ನೇತೃವಿನಂತೆಯೇ ಅನುಯಾಯಿಯೂ ಸಮಾಜಕ್ಕೆ ಬೇಕು. ಆದರೆ ನೇತೃವಿನ ಸ್ಥಾನದಲ್ಲಿ ನೇಯನನ್ನೆಂದೂ ಕುಳ್ಳಿರಿಸಲಾಗದು. ಸಾಮಾನ್ಯ ಮನುಷ್ಯನು ಉದ್ಯಮಶೀಲ, ಮಿತವ್ಯಯ, ನಿಯತ ನಡತೆ, ಅತಿ ವರ್ತನೆಯ ತ್ಯಾಗ, ದೃಢ ವಿಶ್ವಾಸ ಮುಂತಾದ ಗುಣಗಳಿಂದ ಪೂರ್ಣತೆ ಹೊಂದುತ್ತಾನೆ. ಅವನು ನಾಗರಿಕತೆಯ ಸಾಧನ. ಉನ್ನತ ನಾಗರಿಕತೆಯೊಂದು ಗೋಪುರಗೃಹ. ದೃಢವಾಗಿಯೂ ಸರಿಯಾಗಿಯೂ ಸಂಘಟಿತವಾದ ಸಾಮಾನ್ಯರೇ ಅದರ ನೆಲಗಟ್ಟು. ಅವರು ಅಲ್ಲಿ ಪುರುಷೋತ್ತಮರಿಗೆ ವಿಧೇಯರಾಗಿದ್ದು ಸುಖಪಡುತ್ತಾರೆ.

ಆದರ್ಶ ಸಮಾಜದಲ್ಲಿ ತ್ರಿವರ್ಗವಿರಬೇಕು. ಉತ್ಪಾದಕರಾದ ಒಕ್ಕಲಿಗ, ಕಸಬಿಗ, ವ್ಯಾಪಾರಿಗಳದು ಒಂದು ವರ್ಗ. ಅಧಿಕಾರಿಗಳಾದ ಯೋಧರು ಮತ್ತು ಕಾರ್ಯಪಾಲಿಕಾ ಸೇವಕರು ಮತ್ತೊಂದು ವರ್ಗವಾಗಬೇಕು. ಪುರುಷೋತ್ತಮ ಶಾಸಕರದು ಮೂರನೆಯ ವರ್ಗ. ಶಾಸಕರು ಆಳುವರಲ್ಲದೆ ನೌಕರಿ ಮಾಡರು. ಸರಕಾರದ ಪ್ರತ್ಯಕ್ಷ ಆಡಳಿತವೆಂಬುದು ಮುಸುರೆ ತೊಳೆಯುವ, ಕಸಗುಡಿಸುವ ಬಗೆಯ ಕೆಲಸ. ಪುರುಷೋತ್ತಮ ಶಾಸಕರು ತತ್ವಜ್ಞಾನ ಸಂಪನ್ನ ರಾಜನೀತಿಜ್ಞರಾದದರಿಂದ ಆಡಳಿತಕ್ಕವರಿಳಿಯಬಾರದು. ಕೋಶ–ದಂಡಗಳು ಅವರಿಗಧೀನ. ಅವರದು ಸಾವಕಾರ–ಜೀವನವಲ್ಲ, ಯೋಧರ ಜೀವನ. ಪ್ಲೇಟೋ ಹೇಳಿದ ಸಂರಕ್ಷಕರಂಥವರವರು.

ಈ ಕುಬೇರ ಪ್ರಭುತ್ವ ಬಹುಮಟ್ಟಿಗೆ ಆನುವಂಶಿಕ; ಆದರೆ ಯಾವಾಗಲೂ ಆನುವಂಶಿಕವಾಗಕೂಡದು. ಪುರುಷೋತ್ತಮಯೋಗವನ್ನೊಪ್ಪದ ರಾಜ್ಯ ಇನ್ನು ಮುಂದೆ ಬದುಕಿ ಉಳಿಯದು. ಅದರ ಕ್ಷುದ್ರ ರಾಜಕಾರಣಕ್ಕಿನ್ನು ಸ್ಥಳವಿಲ್ಲ. ಮಹಾರಾಜಕಾರಣಕ್ಕೇ ಇನ್ನು ಮೇಲೆ ಜಯ. ಮಹಾರಾಜ್ಯವೇ ಇನ್ನು ಮುಂದೆ ಬರುವ ರಾಜ್ಯ!

## ೧೮

೧೮೫೯ರಲ್ಲಿ ಉದಿಸಿದ ಫ್ರೆಂಚ್ ತತ್ವಜ್ಞಾನಿ ಬರ್ಗ್‌ಸನ್ ಹೇಳಿದ– ಮಾನವನು ಮೂಲಪ್ರವೃತ್ತಿಯಿಂದ ಬದುಕುತ್ತಾನೆ; ಆದರೆ ಬುದ್ಧಿಯಿಂದ ಮುಂಬರಿಯುತ್ತಾನೆ. "ಮಾನವನ ಇತಿಹಾಸವನ್ನು ಬರೆಯುವುದೆಂದರೆ ಸತ್ಯಕ್ಕೆ ಅತಿ ಹತ್ತಿರವೆನಿಸುವ ಸುಳ್ಳೊಂದನ್ನು ಸುಳ್ಳಿನ ರಾಶಿಯಿಂದ ಆಯ್ದುಕೊಳ್ಳುವ ಕಲೆ" ಎಂದು ರೂಸೋ ಹೇಳಿದ ಮಾತನ್ನು ಕ್ರೋಚೆಯೂ ಎತ್ತಿಹೇಳಿದ. ಕಲಾಪ್ರವೃತ್ತಿಯನ್ನೆತ್ತಿ ವಿವರಿಸ ಹೋದ ಕ್ರೋಚೆ "ಸೌಂದರ್ಯವೆಂದರೆ ಅಭಿವ್ಯಕ್ತಿ" ಎಂಬ ತತ್ವವನ್ನು ಜಗತ್ತಿಗೆ ಸಾರಿದ. ಇಟಾಲಿಯನ್ ತತ್ವಜ್ಞಾನಿ ಕ್ರೋಚೆಯ ಬಳಿಕ ಇಂಗ್ಲೆಂಡಿನ ತತ್ವಜ್ಞಾನಿ ಬರ್ಟ್ರೆಂಡ್ ರಸೆಲ್ ಪ್ರಸಿದ್ಧಿಗೆ ಬಂದ.

ರಸೆಲ್ಲನ ಪ್ರಕಾರ ಆಸ್ತಿಯೆಂಬುದೆಲ್ಲವೂ ಮೂಲತಃ ಹಿಂಸೆ ಮತ್ತು ಚೌರ್ಯಗಳಿಂದ ಬಂದದ್ದು. ಖಾಸಗಿ ಭೂಸ್ವಾಮ್ಯದಿಂದ ಸಮುದಾಯಕ್ಕೆ ಯಾವ ಪ್ರಯೋಜನವೂ ಇಲ್ಲ. ಜನರು ವಿಚಾರವಂತರಾದರೆ ನಾಳೆಯೇ ಮಿತ ಪ್ರಮಾಣದ ಆಮರಣ ಪರಿಹಾರ ಧನವನ್ನು ತೆಗೆದುಕೊಂಡು ಜಮೀನುದಾರರೆಲ್ಲರೂ ತಮ್ಮ ಭೂಮಾಲಕತನವನ್ನು ಬಿಟ್ಟುಕೊಡುವುದೊಳಿತು. ಖಾಸಗಿ ಆಸ್ತಿಗೆ ರಾಜ್ಯದ (ಸರಕಾರದ) ರಕ್ಷಣೆಯಿರುವುದರಿಂದ, ಆಸ್ತಿ ಸಂಗ್ರಹಿಸುವ ಕಳ್ಳತನಕ್ಕೆ ಅದು ಕಾಯದೆ ಮಾಡಿ ಆಯುಧ ಹಾಗೂ ಯುದ್ಧಗಳ ಮೂಲಕ ಅದನ್ನು ಜಾರಿಗೆ ತರುವುದರಿಂದ ರಾಜ್ಯ ಅಥವಾ ಸರಕಾರವೆಂಬುದು ಒಂದು ದುಃಸಂಸ್ಥೆ. ಆದುದರಿಂದ ಅದರ ಬಹುಸಂಖ್ಯ ಕೃತ್ಯಗಳನ್ನು ಸಹಕಾರಿ ಸಂಘಗಳೂ ಉತ್ಪಾದಕ ನಿಕಾಯಗಳೂ ತೆಗೆದುಕೊಂಡು ನಡೆಸುವುದುತ್ತಮ. ನಮ್ಮ ಇಂದಿನ ಸಮಾಜಗಳು ವ್ಯಕ್ತಿತ್ವವನ್ನು ದಮಿಸುತ್ತವೆ, ಯಾಂತ್ರೀಕರಿಸಿಬಿಡುತ್ತವೆ. ಆಧುನಿಕ ಸರಕಾರದಿಂದ ದೊರಕುವ ಲಾಭವೆಂದರೆ ಕೇವಲ ಮೊದಲಿಗಿಂತ ಹೆಚ್ಚಿನ ಸುರಕ್ಷಿತತೆ ಹಾಗೂ ಕ್ರಮಬದ್ಧತೆ.

ಸ್ವಾತಂತ್ರ್ಯವೇ ಪರಮಸಿದ್ಧಿ. ಅದಿಲ್ಲದೆ ವ್ಯಕ್ತಿತ್ವ ಬೆಳೆಯದು. ಜೀವನವೂ ಜ್ಞಾನವೂ ಇಂದು ಬಹಳ ಜಟಿಲ. ಆದುದರಿಂದ ಪೂರ್ಣದೃಷ್ಟಿಯನ್ನು ಅರ್ಥಾತ್ ಸತ್ಯವನ್ನು ಸೇರುವ ದಾರಿಯನ್ನು ಸ್ವತಂತ್ರ ಚರ್ಚೆಯ ಮೂಲಕ ನಾವಿಂದು ಪೂರ್ವಗ್ರಹ ಮತ್ತು ತಪ್ಪುಗಳಿಂದ ತಪ್ಪಿಸಿಕೊಂಡು ಮುಟ್ಟಬೇಕಾಗಿದೆ. ಶಿಕ್ಷಕರು ಸಹ ಭಿನ್ನಾಭಿಪ್ರಾಯ ತಾಳಿ ಚರ್ಚಿಸಲಿ. ಅಂಥ ವಿವಿಧಾಭಿಪ್ರಾಯಗಳಿಂದ ಸುಲಭವಾಗಿ ತಳಕೀಳದ ಬುದ್ಧಿ ಸಾಪೇಕ್ಷ ನಂಬಿಗೆ ಸಿದ್ಧಿಸುತ್ತದೆ. ಯುದ್ಧವೂ ದ್ವೇಷವೂ ರೂಢಮೂಲ ಕಲ್ಪನೆ ಹಾಗೂ ಶಠಶ್ರದ್ಧೆಗಳಿಂದಲೇ ಹೆಚ್ಚಾಗಿ ಆರಂಭವಾಗುವವು. ಆಧುನಿಕರ ನರವಿಕಾರ ಮತ್ತು ಕುರುಡು ನಂಬಿಗೆಗಳಿಗೆ ವಿಚಾರ ಹಾಗೂ ವಾಕ್ ಸ್ವಾತಂತ್ರ್ಯವೇ ಮದ್ದು.

ನಾವಾರೂ ನಾವು ತಿಳಿದುಕೊಂಡಿರುವಷ್ಟು ಶಿಕ್ಷಿತರಲ್ಲ. ವಿಶ್ವಶಾಲೆಯಲ್ಲಿ ಇದೀಗ ಕಲಿಯುವ ಪ್ರಯೋಗವನ್ನು ಆರಂಭಿಸಿದವರು ನಾವು. ನಮ್ಮ ವಿಚಾರ ಹಾಗೂ ಸಾರ್ವಜನಿಕ ಜೀವನಗಳ ಸರಣಿಯ ಮೇಲದು ಇನ್ನೂ ಸಾಕಷ್ಟು ಪರಿಣಾಮ ಮಾಡಿಲ್ಲ. ನಾವು ಸಜ್ಜಾಗುತ್ತಿದ್ದೇವೆ. ಆದರೆ ನಾವಿನ್ನೂ ನಮ್ಮ ತಂತ್ರದಲ್ಲೂ, ಕ್ರಮದಲ್ಲೂ ಪೂರ್ವ ನಾಗರಿಕರೇ ಆಗಿದ್ದೇವೆ. ನಿಷ್ಕೃಷ್ಟ ಜ್ಞಾನವನ್ನು ಹುಡುಗರಿಗೆ ಕೊಡುವುದೇ ನಾವು ಶಿಕ್ಷಣವೆಂದು ತಿಳಿದಿದ್ದೇವೆ. ಅದು ತಪ್ಪು. ಮನಸ್ಸಿಗೆ ವೈಜ್ಞಾನಿಕ ಅಭ್ಯಾಸವನ್ನು ಅಳವಡಿಸುವುದೇ ವಿದ್ಯಾದಾನ.

ಬಹುಬೇಗ ಮತ್ತು ಸ್ಥಿರವಾದ ಅಭಿಪ್ರಾಯಗಳನ್ನು ವ್ಯಕ್ತ ಮಾಡುವುದು ಬುದ್ಧಿಹೀನತೆಯ ಒಂದು ವಿಶಿಷ್ಟ ಲಕ್ಷಣ. ವಿಜ್ಞಾನಶೀಲನು ಯಾವುದನ್ನೂ ಅಷ್ಟು ಬೇಗ ನಂಬನು. ಯಾವ ಅಭಿಪ್ರಾಯವನ್ನೂ ತಿದ್ದುಪಡಿಯಿಲ್ಲದೆ ವ್ಯಕ್ತಪಡಿಸನು. ವಿಜ್ಞಾನವನ್ನೂ ವಿಜ್ಞಾನ ಕ್ರಮವನ್ನೂ ವಿದ್ಯಾಭ್ಯಾಸದಲ್ಲಿ ಹೆಚ್ಚು ಹೆಚ್ಚಾಗಿ ಬಳಕೆಗೆ ತಂದರೆ, ಸಾಕ್ಷಿ ಇದ್ದಷ್ಟೇ ನಂಬುವ ಮತ್ತು ಅಭಿಪ್ರಾಯ ತಪ್ಪಾಗಿರಬಹುದೆಂದು ಒಪ್ಪುವ ಬೌದ್ಧಿಕ ಪ್ರಜ್ಞೆ ನಮ್ಮಲ್ಲಿ ಉದಯಿಸೀತು. ಅಂಥ ಕ್ರಮಗಳಿಂದ ಸಾಗುವ ಶಿಕ್ಷಣವು ನಮ್ಮ ಅನೇಕ ದೋಷಗಳನ್ನು ಪರಿಹರಿಸೀತು; ನಮ್ಮ ಮಕ್ಕಳೂ ಮೊಮ್ಮಕ್ಕಳೂ ಹೊಸ ಸಮಾಜವನ್ನು ಕಟ್ಟುವಂತೆ ಮಾಡೀತು. ನಮ್ಮ

ಚಾರಿತ್ರದ ಮೂಲ ಪ್ರವೃತ್ತಿಯ ಭಾಗವು ಬಹಳ ರೂಪಣಾರ್ಹವಾಗಿರುತ್ತದೆ. ಅದು ನಂಬಿಗೆ, ಭೌತಿಕ ಸಂದರ್ಭ, ಸಾಮಾಜಿಕ ಸನ್ನಿವೇಶ ಮತ್ತು ಸಂಸ್ಥೆಗಳಿಂದ ಬದಲಾಗಬಲ್ಲುದು. ಹಣಕ್ಕಿಂತ ಹೆಚ್ಚಾಗಿ ಕಲೆಯನ್ನು ಮೆಚ್ಚಿಕೊಳ್ಳುವ ಪ್ರವೃತ್ತಿಯನ್ನು ಶಿಕ್ಷಣದ ಮೂಲಕ ಬೆಳೆಯಿಸಬಹುದು. ಅದರಿಂದ ಆಸ್ತಿ ಸಂಗ್ರಹದ ಆಸೆಯನ್ನು ಜನರಲ್ಲಿ ಕಡಿಮೆ ಮಾಡಲಾದೀತು. ಇದು ಬೆಳವಣಿಗೆಯ ತತ್ವ. ಸಾಧ್ಯವಾದಷ್ಟು ಮಟ್ಟಿಗೆ ವ್ಯಕ್ತಿ ಹಾಗೂ ಸಮುದಾಯಗಳ ಪ್ರಾಣ ಶಕ್ತಿಯನ್ನು ವೃದ್ಧಿ ಮಾಡುವುದು; ಒಂದು ವ್ಯಕ್ತಿ ಅಥವಾ ಸಮುದಾಯದ ಬೆಳವಣಿಗೆಯು ಆದಷ್ಟು ಮಟ್ಟಿಗೆ ಅನ್ಯರ ಶೋಷಣೆಗೆ ಕಾರಣವಾಗದೆಯೇ ಸಿದ್ಧಿಸಬೇಕು– ಎಂಬೀಯೆರಡು ಆ ತತ್ವದ ನೈತಿಕ ಅಂಗಗಳು. ಮೊದಲನೆಯದನ್ನು ಗೌರವ ನೀತಿಯೆಂದೂ ಎರಡನೆಯದನ್ನು ಸಹನ ನೀತಿಯೆಂದೂ ಕರೆಯಬಹುದು.

ಮನುಷ್ಯಚಾರಿತ್ರದ ಪುನಾರಚನೆಗಾಗಿ ನಮ್ಮ ಶಾಲೆ–ಕಾಲೇಜುಗಳನ್ನು ಚೆನ್ನಾಗಿ ಅಭಿವೃದ್ಧಿಗೊಳಿಸಿ, ಯುಕ್ತವಾಗಿ ನಡೆಯಿಸಿಕೊಂಡು ಹೋಗಿ, ಕೌಶಲದಿಂದ ಉದ್ದೇಶಕ್ಕೆ ಉನ್ಮುಖಗೊಳಿಸಿದರೆ ಮನುಷ್ಯನಿಗೆ ಅಸಾಧ್ಯ ಎಂಬ ಯಾವುದೂ ಉಳಿಯದು. ಮನುಷ್ಯರ ಅರ್ಥತೃಷ್ಣೆ ಮತ್ತು ಅಂತಾರಾಷ್ಟ್ರೀಯ ಅನಾಗರಿಕತೆಗಳನ್ನು ಪರಿಹರಿಸಲು ಇದೇ ಸರಿಯಾದ ಮಾರ್ಗವಲ್ಲದೆ, ಹಿಂಸಾಮಯ ಕ್ರಾಂತಿ ಮತ್ತು ಕಾಗದದ ಮೇಲಿನ ಕಾಯದೆಗಳು ತಕ್ಕ ಮಾರ್ಗಗಳೆನಿಸವು. ಜೀವಶಕ್ತಿಯ ಮಿಕ್ಕೆಲ್ಲ ಆವಿರ್ಭಾವಗಳನ್ನೂ ನಿಯಂತ್ರಣದಲ್ಲಿಟ್ಟುಕೊಳ್ಳಲು ಮನುಷ್ಯನಿಗೆ ಸಾಧ್ಯವಾಗಲು ಅವನು ತನ್ನ ಬೆಳವಣಿಗೆಗೆ ಹೆಚ್ಚು ಕಾಲ ತೆಗೆದುಕೊಂಡದ್ದೇ ಕಾರಣ. ಹಾಗೇ ಆತನು ಇನ್ನೂ ಹೆಚ್ಚು ಕಾಲವನ್ನು ಇನ್ನೂ ವಿವೇಕದಿಂದ ಬಳಸಿದರೆ ತನ್ನನ್ನು ತಾನೇ ನಿಯಂತ್ರಿಸಿಕೊಂಡು ಪುನಾರಚಿಸಿಕೊಳ್ಳಬಲ್ಲನು. ಸ್ವರ್ಗಸದೃಶದ ರಾಜ್ಯದ ಸಿದ್ಧಿಗೆ ನಮ್ಮ ಶಾಲೆಗಳೇ ತೆರೆವಾಗಿಲು!

## ೧೯

ಅಮೇರಿಕದ ತತ್ವಜ್ಞಾನಿ ಶಾಂತಾಯನ ಸಾರುತ್ತಾನೆ: ಅತಿಮಾನುಷೀಯ ಆಶೆ–ಅಂಜಿಕೆಗಳ ಪ್ರೇರಣೆಗಳನ್ನು ಬಳಸದೆ ಮನುಷ್ಯನನ್ನು ಸದಾಚಾರ ಸಂಪನ್ನನನ್ನಾಗಿ ಮಾಡುವುದೇ ತತ್ವಜ್ಞಾನದ ದೊಡ್ಡ ಸಮಸ್ಯೆ. ಈ ಕಾರ್ಯದಲ್ಲಿ ಬಳಕೆಯಲ್ಲಿರುವ ಸಂಸ್ಥೆಗಳು ಎರಡು: ಕುಟುಂಬ ಮತ್ತು ರಾಜ್ಯ. ಕುಟುಂಬಪ್ರೀತಿಯು ವ್ಯಾಮೋಹಕ್ಕಿಳಿದರೆ ಮನುಷ್ಯನು ರಾಜ್ಯಹಿತಸಾಧನೆಗೆ ವಿಮುಖನಾಗುವನು. ರಾಜ್ಯಪ್ರೀತಿಯು ವ್ಯಾಮೋಹವಾಗಿ ಪರಿಣಮಿಸಿದರೆ ತನ್ನ ಸರಕಾರ ತಪ್ಪು ಧೋರಣ ಹಿಡಿದರೂ ಅದನ್ನವ ಸಮರ್ಥಿಸ ಹೋಗುವನು. ಜಗತ್ತೆಲ್ಲಾ ಒಂದೇ ಆಳಿಕೆಗೆ ಒಳಪಟ್ಟರೆ ದೇಶಪ್ರೇಮವು ವ್ಯಾಮೋಹವಾಗಿ ತಿರುಗಿ ಪರದೇಶವನ್ನು ವಶಮಾಡಿಕೊಳ್ಳುವ ಯುದ್ಧಾದಿ ವಿಪತ್ತುಗಳುಂಟಾಗಲಾರವು.

ಜನರಲ್ಲಿ ಮತ್ತು ರಾಷ್ಟ್ರಗಳಲ್ಲಿ ಯುದ್ಧಾಸಕ್ತಿ ಕಡಿಮೆಯಾಗಬೇಕಾದರೆ ಅಂತಾರಾಷ್ಟ್ರೀಯ ಆಟಗಳನ್ನು ಹೆಚ್ಚಿಸಬೇಕು. ಗುಂಪಿನ ಸ್ಪರ್ಧಾಲುತ್ವ ಆ ಮೂಲಕ ವ್ಯಯವಾಗಿ ಹೋಗುವುದು.

ಅಂತಾರಾಷ್ಟ್ರೀಯ ಆಟವು ಯುದ್ಧದ ನೈತಿಕ ಪರ್ಯಾಯ. ಎರಡನೆಯದಾಗಿ ವಾಣಿಜ್ಯ ಕ್ಷೇತ್ರದಲ್ಲಿ ಒಂದು ದೇಶದವರು ಇನ್ನೊಂದರಲ್ಲಿ ಬಂಡವಾಳವನ್ನು ತೊಡಗಿಸಬೇಕು. ಅದರಿಂದ ಮಾರುಕಟ್ಟೆಗಾಗಿ ಹೋರಾಡುವದು ನಿಂತೀತು. ಉತ್ಪಾದನೆ ಅತಿ ಹೆಚ್ಚಾದರೆ ಮಾಲು ಮನುಷ್ಯನ ಬೆನ್ನೇರಿ ಸವಾರಿ ಮಾಡಲು ತೊಡಗೀತು– ಎಂದ ಎಮರ್ಸನ್ನನ ಮಾತು ನಿಜ. ಆದುದರಿಂದ ಅಂಗಡಿಗಾರಿಕೆಯ ನಾಗರಿಕತೆಗಿಂತ ಕುಬೇರ ನಾಗರಿಕತೆಯೇ ಮೇಲು. ಕೃಷಿ–ಗೋರಕ್ಷ–ವಾಣಿಜ್ಯಗಳಲ್ಲೇ ಆಸಕ್ತರಾದ ವೈಶ್ಯರ ಆಳಿಕೆ ಅನಾಗರಿಕ. ಅಂಥವರೇ ತುಂಬಿ ತುಳುಕುತ್ತಿರುವ ರಾಜ್ಯ ಕಾಡುರಾಜ್ಯ. ಅದರಲ್ಲಿ ಎಲ್ಲ ಉದಾರ ಪರಂಪರೆಯೂ ಅಳಿದು ಹೋದೀತು; ವಿಚಾರಯುಕ್ತವೂ ಇತಿಹಾಸಸಾರ ಸಂಪನ್ನವೂ ಆದ ದೇಶ ಪ್ರೇಮವೇ ಅಲ್ಲಿ ಇರದಾದೀತು! ಏಕೆಂದರೆ ಅಂಥ ಸಮಾಜದ ಸಂಘಟನೆಯಲ್ಲೇ ಔದಾರ್ಯದ ಕಾರ್ಯಗಳಿಗೆ ಅವಕಾಶವಿರದು.

ಸಮಾನತೆಯ ಮಾತಿಗೆ ಅರ್ಥವಿಲ್ಲ. ಅಸಮಾನರ ಸಮಾನತೆ ಎಂಬುದೇ ಅಸಮಾನತೆ. ಆದುದರಿಂದ ಕುಬೇರ ಪ್ರಭುತ್ವದ ಉಚ್ಚಮಟ್ಟವನ್ನು ಕಾದುಕೊಳ್ಳುವುದಗತ್ಯ. ಆದರೆ ಕುಬೇರರು ಶೋಷಕರಾಗುವ ಸಂಭವ ಬಾರದಂತೆ ವ್ಯವಸ್ಥೆ ಮಾಡಿಕೊಳ್ಳಬೇಕು. ತನ್ನ ಸದಸ್ಯರ ಜೀವನ ಮತ್ತು ಕಾರ್ಯಶಕ್ತಿಗಳನ್ನು ಬೆಳೆಯಿಸುವ ಸಮಾಜವೇ ಶ್ರೇಷ್ಠ ಸಮಾಜ ಎಂಬುದು ರಾಜನೀತಿಯ ಪ್ರಥಮ ತತ್ವವಾಗಬೇಕು. ಈ ತತ್ವವೇನೋ ಪ್ರಜಾಸತ್ತೆಯಲ್ಲಿದೆ. ಆದರೆ ಕುರಿಗಳನ್ನು ಗೌರವಿಸುವ, ಕುರಿಗಳನ್ನು ತರಬೇತುಗೊಳಿಸುವ, ಪ್ರತಿಭಾವಂತರಿಗೆ ಅವಕಾಶ ಕೊಡದ, ಅಸಹ್ಯ ಸಮಾನತೆಯನ್ನು ಆರಾಧಿಸುವ ಅದರ ಅನಾಮಧೇಯ ಶೋಷಣೆ ಎಂದೆಂದಿಗೂ ಬೇಡ!

ಆಧುನಿಕ ಜೀವನದ ಗೊಂದಲ, ಗಡಿಬಿಡಿ ಅತ್ಯಂತ ಅಸಹ್ಯ ಎನ್ನುತ್ತಾನೆ ಶಾಂತಾಯನ. ಎಲ್ಲವನೂ ದೊಡ್ಡ ಮನುಷ್ಯನಾಗಲು ನೇತಾಡುವ ಈ ಪ್ರಜಾಸತ್ತೆಯಲ್ಲಿ ಯಾರಿಗೂ ತೃಪ್ತಿ ಸಿಗದು. ಒಂದು ಮಾವಿನ ಹಣ್ಣನ್ನು ಹೆಕ್ಕಲು ಹತ್ತು ದನಗಳು ಓಡಿದ ಹಾಗೆ ಚಾಪಲದಿಂದ ಸ್ಥಾನಮಾನ ಧನಗಳನ್ನು ಹೆಕ್ಕಲು ಅಪಾತ್ರರೇ ಧಾವಿಸುವ ಈ ಪ್ರಜಾರಾಜ್ಯ ಹಾಸ್ಯಾಸ್ಪದ. ಇದರಲ್ಲಿ ವರ್ಗಕಲಹ ಪ್ರತಿದಿನವೂ ನಡೆಯುತ್ತದೆ. ಇಂಥ ಹೋರಾಟದಲ್ಲಿ ಗೆದ್ದ ವರ್ಗವು ಉದಾರ ನೀತಿಗೆ ಇತಿಶ್ರೀ ಬರೆದು ಬಿಡುವುದು!

ಇತಿಹಾಸ ಎಷ್ಟೋ ಸಮಾಜರೂಪಗಳನ್ನು ನಿರ್ಮಿಸಿತು. ಯಾವುದೂ ನಿರ್ದುಷ್ಟವಾಗಿ ಕೊನೆಯ ತನಕ ಉಳಿಯಲಿಲ್ಲ. ಆನುವಂಶಿಕವಲ್ಲದ ಯೋಗ್ಯರ ಆಡಳಿತವುಳ್ಳ ಕುಬೇರ ಪ್ರಭುತ್ವ ಅವುಗಳಲ್ಲಿ ಸರ್ವಶ್ರೇಷ್ಠ. ಯೋಗ್ಯತೆಗೆ ಮಾತ್ರ ಅಲ್ಲಿ ಮನ್ನಣೆ; ದಕ್ಷರಿಗೆ ಮಾತ್ರ ಉಚ್ಚಾಧಿಕಾರ ಸ್ಥಾನ. ಸಮಾನಾವಕಾಶವೊಂದೇ ಅಲ್ಲಿರುವ ಸಮಾನತೆ. ಅಂಥ ಸರಕಾರ ಲಂಚ ವಂಚನೆಗಳಿಂದ ಮುಕ್ತವಾಗಿರಬಲ್ಲುದು– ಕುಬೇರರು ರಾಮನಂಥ ಮನುಷ್ಯರಾಗಿರುವುದರಿಂದ. ಯುಕ್ತಾಯುಕ್ತ ವಿವೇಕದಿಂದ ಪ್ರೋತ್ಸಾಹ ನೀಡುವ ಅಂಥ ಸರಕಾರ ವಿಜ್ಞಾನ ಹಾಗೂ ಕಲೆಗಳನ್ನು ಅಭಿವೃದ್ಧಿಗೊಳಿಸಬಲ್ಲುದು. ಅಂಥ ಕುಬೇರ–ಪ್ರಜಾಪ್ರಭುತ್ವದ ಸಂಮಿಶ್ರ ಸಮಾಜವಲ್ಲದೆ, ಶುದ್ಧ ಪ್ರಜಾಪ್ರಭುತ್ವದ ಸಮಾಜವು ಎಂದೂ

ಪೂಜ್ಯಪೂಜಾವ್ಯತಿಕ್ರಮವಾಗದಂತೆ ನೋಡಿಕೊಳ್ಳಲಾರದು– ಅಯೋಗ್ಯರಿಗೆ ಉತ್ತೇಜನ ಸಿಕ್ಕದಂತೆ ಮಾಡಲಾರದು. ಜಗತ್ತಿಂದು ತಪಸ್ಸು ಮಾಡುತ್ತಿರುವುದೇ ಅಂಥ ಸಂಮಿಶ್ರ, ಸಮನ್ವಿತ, ಸಮಗ್ರ ಸಮಾಜದ ಸಿದ್ಧಿಗಾಗಿ. ಪ್ಲೇಟೋ ಹೇಳಿದ್ದು ಇದನ್ನೇ. ಉತ್ತಮರೇ ಆಳಬೇಕು; ಉತ್ತಮತೆ ಗಳಿಸಲು ಎಲ್ಲರಿಗೂ ಸಮಾನಾವಕಾಶವಿರಬೇಕು– ಎಂಬ ನೀತಿಯನ್ನು ಯಾವ ರಾಜನೀತಿಜ್ಞ ಅಲ್ಲಗಳೆದಾನು?

## ೨೦

ಅಮೇರಿಕದ ಇನ್ನೊಬ್ಬ ಇಂದಿನ ಪ್ರಸಿದ್ಧ ತತ್ವಜ್ಞಾನಿ ಡ್ಯೂಯಿ. ರಸೆಲ್ಲನಂತೆಯೇ ಇವನಾದರೂ ಶೈಕ್ಷಣಿಕ ಸುಧಾರಣೆಯೇ ನವ ಸಮಾಜ ಹುಟ್ಟಲು ತಕ್ಕ ಆವರಣವನ್ನು ರಚಿಸಬಲ್ಲುದು ಎನ್ನುತ್ತಾನೆ. ಅವನ ಹಾಗೇ ಇವನೂ ಶಿಕ್ಷಣದಲ್ಲಿ ಸಾಹಿತ್ಯಕ್ಕಿಂತ ವಿಜ್ಞಾನ ಹೆಚ್ಚಿರಬೇಕು ಎನ್ನುವವ. ಆದರೆ ಇವನ ಪ್ರಕಾರ ಪುಸ್ತಕ ಓದಿ ವಿಜ್ಞಾನಾರ್ಜನೆ ಮಾಡಿದರೆ ಫಲವಿಲ್ಲ; ಉಪಯುಕ್ತ ಉದ್ಯೋಗ ನಡೆಸಿ ಆ ಮೂಲಕ ಬರುವ ಅನುಭವದಿಂದಲೇ ವಿಜ್ಞಾನಾರ್ಜನೆ ಸಾಗಬೇಕು. "ಲಿಬರಲ್" ಅಥವಾ ಉದಾರ ನೀತಿಯ ಶಿಕ್ಷಣವು "ಸ್ವತಂತ್ರ ಮನುಷ್ಯ" ಅರ್ಥಾತ್ ಉಂಡುಮಲಗನನ್ನು ತಯಾರಿಸುವ ಸಾಧನ. ಅದು ಶ್ರೀಮಂತ ಸಮಾಜದ ವಿರಾಮ–ಐಷಾರಾಮ ಜೀವನಕ್ಕೆ ಮಾತ್ರ ಹೇಳಿಸಿದ್ದು; ಔದ್ಯಮಿಕ ಪ್ರಜಾಸತ್ತೆಯ ಜೀವನಕ್ಕೆ ಹೊಂದುವಂಥದಲ್ಲ. ಜಗತ್ತೇ ಇಂದು ಉದ್ಯಮವನ್ನು ಬೆಂಬತ್ತಿ ಸಾಗುತ್ತಿರುವಾಗ ಉದ್ಯೋಗದ ಮೂಲಕವಲ್ಲದೆ, ಪುಸ್ತಕದ ಮೂಲಕ ವಿಜ್ಞಾನಾರ್ಜನೆ ಮಾಡುವುದು ಕೆಲಸಕ್ಕೆ ಬರದು. ಪಂಡಿತಸಂಸ್ಕೃತಿಯು ಡಾಂಭಿಕರನ್ನು ನಿರ್ಮಿಸುತ್ತದೆ; ಉದ್ಯೋಗದ ಸಹಜೀವನವು ಪ್ರಜಾಸತ್ತಾತ್ಮಕ ಭಾವನೆಯನ್ನು ಬೆಳೆಯಿಸುತ್ತದೆ. ಔದ್ಯಮಿಕ ಸಮಾಜದಲ್ಲಿ ಶಾಲೆಯೆಂದರೆ ಒಂದು ವರ್ಕ್‌ಷಾಪ್ ಅಥವಾ ಕರ್ಮಶಾಲೆ– ಸಣ್ಣ ಸ್ವರೂಪದ ಒಂದು ಸಮುದಾಯ. ಆಚಾರವೇ ಅಲ್ಲಿ ಶಿಕ್ಷಣ ಮಾಧ್ಯಮ. ಆ ಮೂಲಕವೇ ಅದು ಅನುಭವದಿಂದ ಪಾಠ ಕಲಿಯುತ್ತ ಆರ್ಥಿಕ ಹಾಗೂ ಸಾಮಾಜಿಕ ವ್ಯವಸ್ಥೆಗೆ ಅವಶ್ಯವಾದ ಕಲೆ ಹಾಗೂ ಶಿಸ್ತುಗಳನ್ನು ಗಳಿಸಬೇಕು. ಹಿಂದೆ ತಿಳಿದಿದ್ದಂತೆ ಶಿಕ್ಷಣವೆಂದರೆ ದೊಡ್ಡವನಾಗಲು ಚಿಕ್ಕವನಿಗೆ ಕೊಡುವ ಸಿದ್ಧತಾಜ್ಞಾನವಲ್ಲ; ದೊಡ್ಡವನ ವಯಸ್ಸು ಬಂದ ಕೂಡಲೇ ಕಲಿಯುವುದು ಮುಗಿದು ಹೋಯಿತು ಎಂಬ ದುರ್ಭಾವಕ್ಕದು ಎಡೆಗೊಡುತ್ತದೆ. ಹುಟ್ಟಿದಂದಿನಿಂದ ಸಾಯುವವರೆಗೆ ಮನಸ್ಸು ಬೆಳೆಯುತ್ತ ಹೋಗುವುದು ಹಾಗೂ ಸತತವೂ ಜೀವನ ಬೆಳಕು ಕಾಣುತ್ತ ಹೋಗುವುದು ನಿಜವಾದ ವಿದ್ಯಾಭ್ಯಾಸ. ಶಾಲೆಯಲ್ಲಿ ಸಿಗುವುದು ಮಾನಸಿಕ ಬೆಳವಣಿಗೆಯ ಸ್ಥೂಲ ಸಾಧನ ಮಾತ್ರ; ಮಿಕ್ಕದ್ದನ್ನೆಲ್ಲಾ ಮನುಷ್ಯನು ಅನುಭವ ಸಂಪಾದಿಸಿ, ಅದನ್ನು ಅರ್ಥಮಾಡಿಕೊಂಡೇ ಪಡೆಯಬೇಕು. ಶಾಲೆ ಬಿಟ್ಟ ಮೇಲೆ ಪಡೆಯುವುದೇ ನಿಜವಾದ ಶಿಕ್ಷಣ. ಆದುದರಿಂದ ನಾವು ಸಾಯುವ ಮೊದಲೇ ಅದು ನಿಂತು ಹೋಗಲು ಬಿಡುವುದು ಅಸಮರ್ಥನೀಯ, ಅಸಂಬದ್ಧ, ಅಯುಕ್ತ.

ಸಾಪೇಕ್ಷವಾದರೂ ಬೆಳವಣಿಗೆಯೇ ಮನುಷ್ಯನ ಪರಮ ಪುರುಷಾರ್ಥ. ಪೂರ್ಣತೆಯು ಬಾಳಿನ ಅಂತಿಮ ಗುರಿಯಲ್ಲ. ಪೂರ್ಣವಾಗುವ, ಪಕ್ವವಾಗುವ, ಸುಧಾರಿಸುವ ಸತತ ಪ್ರಯತ್ನವೇ ಜೀವನದಲ್ಲಿ ಸಾಧಿಸಬೇಕಾದ ಗುರಿ. ಎಷ್ಟೇ ಒಳ್ಳೆಯ ಮನುಷ್ಯನಾದರೂ ಅವನು ಕ್ರಮೇಣ ಕಡಿಮೆ ಒಳ್ಳೆಯವನಾಗುತ್ತ ಹೋಗಲಾರಂಭಿಸಿದರೆ ಕೆಟ್ಟವನೆನಿಸುತ್ತಾನೆ. ಮೊದಲು ಎಷ್ಟೇ ಕೆಟ್ಟ ಮನುಷ್ಯನಾಗಿದ್ದರೂ ದಿನದಿನವೂ ಹೆಚ್ಚು ಹೆಚ್ಚು ಉತ್ತಮನಾಗುತ್ತ ಹೋಗಲು ಪ್ರಯತ್ನಿಸುತ್ತಿದ್ದರೆ ಅವನು ಒಳ್ಳೆಯವನೆನಿಸುತ್ತಾನೆ. ಇಂಥ ನೀತಿ ಕಲ್ಪನೆಯುಳ್ಳವನು ತನ್ನನ್ನು ಉಗ್ರವಾಗಿ ವಿಮರ್ಶಿಸಿಕೊಳ್ಳಬಲ್ಲವನೂ ಅನ್ಯರನ್ನು ದಯಾದೃಷ್ಟಿಯಿಂದ ವಿಮರ್ಶಿಸಬಲ್ಲವನೂ ಆಗುತ್ತಾನೆ.

ಕೇವಲ ವಿಧೇಯರಾಗಿಯೂ ಅಹಿಂಸಕರಾಗಿಯೂ ಬಾಳುವುದಷ್ಟೇ ಒಳ್ಳೆಯತನವಲ್ಲ. ವಿಧೇಯತೆ, ಅಹಿಂಸಕತೆಗಳ ಜೊತೆಗೆ ಪರೋಪಕಾರಶಕ್ತಿಯೂ ಕೂಡಿರಬೇಕು; ಜೊತೆಗೆ ಬುದ್ಧಿಮತ್ತೆಯೂ ಆವಶ್ಯಕ. ಅಜ್ಞಾನವೆಂದೂ ಆನಂದವೆನಿಸದು; ಅದು ಪ್ರಜಾಹೀನತೆ ಮತ್ತು ದಾಸ್ಯ ಎನಿಸುತ್ತದೆ. ನಿಜವಾದ ಬುದ್ಧಿಮತ್ತೆಯೊಂದೇ ನಮ್ಮ ಭವಿತವ್ಯವನ್ನು ರೂಪಿಸುವುದರಲ್ಲಿ ನಮ್ಮನ್ನು ಪಾಲುಗಾರರೆನಿಸಬಲ್ಲುದು. ಸಂಕಲ್ಪದ ಅನಿರ್ಬಂಧವೆಂದರೆ ಕರ್ಮಫಲ ಸೂತ್ರದ ಭಂಗವಲ್ಲ. ಜ್ಞಾನಬಲದಿಂದ ಪ್ರಬುದ್ಧ ವರ್ತನೆಯನ್ನಿಟ್ಟುಕೊಳ್ಳುವುದೇ ಸ್ವಾತಂತ್ರ್ಯ. ತಾನು ಯಾರ ಹತ್ತಿರ ಏನು ಮಾಡುತ್ತಿದ್ದೇನೆ ಎಂಬುದರ ಪೂರ್ಣ ಜ್ಞಾನವನ್ನು ಹೊಂದಿರುವುದೇ ಸ್ವಾತಂತ್ರ್ಯಭವನದ ಕೀಲಿ. ನಾವು ನಮ್ಮ ವಿಚಾರದಲ್ಲಿ ಶ್ರದ್ಧೆಯುಳ್ಳವರಾಗಬೇಕಲ್ಲದೆ, ಮೂಲ ಪ್ರವೃತ್ತಿಯಲ್ಲಲ್ಲ. ಇಂದಿಗೆ ಔದ್ಯಮಿಕ ನಾಗರಿಕತೆ ನಿರ್ಮಿಸಿದ ಕೃತಕ ಆವರಣಕ್ಕೂ ಜಟಿಲ ಸಮಸ್ಯೆಗಳಿಗೂ ಹೊಂದಿಕೊಂಬ ಶಕ್ತಿ ಮೂಲಪ್ರವೃತ್ತಿಗಿಲ್ಲ.

ಪ್ರಜಾಪ್ರಭುತ್ವವೇನೋ ದೋಷಯುಕ್ತವಾದದ್ದು. ಆದರೆ ಇದ್ದವುಗಳಲ್ಲಿ ಅದೇ ಹೆಚ್ಚು ಉತ್ತಮ. ಅದರ ದೋಷವನ್ನು ಪರಿಹರಿಸಲು ಪ್ರತಿಯೊಬ್ಬನೂ ನಿತ್ಯ ಪ್ರಯತ್ನ ಮಾಡುತ್ತಿರಬೇಕು, ಅಷ್ಟೆ. ಏಕೆಂದರೆ, ಪೂರ್ಣವಾಗಿ ಬೆಳೆಯಲು ಪ್ರತಿಯೊಬ್ಬ ವ್ಯಕ್ತಿಗೂ ನೆರವೀಯುವುದೇ ರಾಜನೈತಿಕ ವ್ಯವಸ್ಥೆಯ ಉದ್ದೇಶ; ತನ್ನ ಸಮಾಜದ ಭವಿಷ್ಯವನ್ನು ರೂಪಿಸುವ ಧೋರಣವನ್ನು ನಿರ್ಧರಿಸುವುದರಲ್ಲಿ ಪ್ರತಿಯೊಬ್ಬನೂ ಯಥಾಶಕ್ತಿ ಪಾಲುಗಾರನಾಗಲು ಪ್ರಜಾಪ್ರಭುತ್ವದಲ್ಲಿ ಮಾತ್ರ ಸಾಧ್ಯ. ಆದರೆ ಪ್ರಜಾಸತ್ತಾತ್ಮಕ ಸರಕಾರವನ್ನು ಎಲ್ಲದಕ್ಕೂ ಅವಲಂಬಿಸಿ ಬಾಳಬಾರದು. ಶಕ್ಯವಿರುವಷ್ಟು ಸಾಮಾಜಿಕ ಸಾರ್ವಜನಿಕ ಕಾರ್ಯಗಳನ್ನು ಸ್ವೇಚ್ಛಾಕೃತ ಸಂಘ–ಸಂಸ್ಥೆಗಳೇ ನಡೆಸಿಕೊಂಡು ಹೋಗುವುದು ಹೆಚ್ಚು ಕ್ಷೇಮಕರ. ಸಂಘ, ಪಕ್ಷ, ನಿಗಮ (Corporation), ಕಾರ್ಮಿಕ ಸಂಘ ಮುಂತಾದ ನಿಕಾಯಗಳು ಹೆಚ್ಚಾದರೆ ವ್ಯಕ್ತಿವಾದದ ಅತಿ ವೈಯಕ್ತಿಕತೆಯ ದುಷ್ಪರಿಣಾಮವನ್ನು ತಡೆಗಟ್ಟಬಹುದು. ಇದರಿಂದ ಸಮಾಜವಾದ ಮತ್ತು ವ್ಯಕ್ತಿವಾದಗಳ ಸಾಮರಸ್ಯವನ್ನು ಸಾಧಿಸಿದಂತಾಗುತ್ತದೆ.

ಗಣಿತಜ್ಞರ, ರಾಸಾಯನಿಕರ, ಖಗೋಲಶಾಸ್ತ್ರಜ್ಞರ, ವಾಣಿಜ್ಯಕರ, ಕಾರ್ಮಿಕರ,

ಧಾರ್ಮಿಕರ ಸಂಘಗಳು ಅಂತಾರಾಷ್ಟ್ರೀಯವಾಗಿ ಬೆಳೆಯಬೇಕು. ಅವಕ್ಕೆ ರಾಜಕೀಯ ಪ್ರದೇಶದ ಗಡಿಮಿತಿಗಳಿರಕೂಡದು. ಹಾಗಾಗಬೇಕಾದರೆ ಸಂಪೂರ್ಣ ರಾಷ್ಟ್ರೀಯ ನಿರಂಕುಶತೆ ಯಾವ ದೇಶದಲ್ಲೂ ಇರಕೂಡದು. ಅಂತಾರಾಷ್ಟ್ರೀಯ ಮನದ ಬೆಳವಣಿಗೆಗೆ ಅದು ಪರಮ ಶತ್ರು. ನಿಸರ್ಗ ವಿಜ್ಞಾನಗಳಲ್ಲಿ ಫಲಪ್ರದವೆನಿಸಿದ ಪ್ರಾಯೋಗಿಕ ಕ್ರಮಗಳನ್ನೂ ಮನಃಪ್ರಣಾಳಿಗಳನ್ನೂ ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸಲು ಬಳಸುತ್ತ ಹೋದರೆ ನಮ್ಮ ನಮ್ಮ ರಾಷ್ಟ್ರದ ರಾಜಕೀಯವನ್ನೂ ಕ್ರಮೇಣ ಪುನಾರಚಿಸಲು ಶಕ್ಯ. ವ್ಯಕ್ತಿವಾದ, ಪ್ರಜಾಸತ್ತೆ, ರಾಜಸತ್ತೆ, ಕುಬೇರಸತ್ತೆ ಮುಂತಾದ ವೈಭವಯುತವಾದ, ಅಮೂರ್ತ–ವಾಕ್ಯ ಎನಿಸಿದ ತತ್ವಸಿದ್ಧಾಂತಗಳನ್ನು ಬೆನ್ನು ಹತ್ತಿ ಆವಾಸ್ತವ ವಾಗ್ಯುದ್ಧ ನಡೆಸುವುದು ವ್ಯರ್ಥ. ಯಾವ ನಿತ್ಯ ವಿವಾದಾರ್ಹ ಸಿದ್ಧಾಂತವನ್ನೂ ಅಪ್ಪಿಕೊಳ್ಳದೆ, ಪ್ರತಿಯೊಂದು ಸಮಸ್ಯೆಯನ್ನೂ ಅದಕ್ಕುಚಿತವಾದ ನಿರ್ದಿಷ್ಟ ಪ್ರಾಯೋಗಿಕ ಪರಿಹಾರಸೂತ್ರ ಹಿಡಿದು ಎದುರಿಸುವುದೊಂದೇ ನಮಗಿಂದು ತಾರಕ ಮಾರ್ಗ.

ಸಾಮಾಜಿಕ ದ್ವೇಷಾಸೂಯೆಗಳನ್ನು ಶಮನಗೊಳಿಸಲು ಅಗತ್ಯವಾದ ತತ್ವಸೂತ್ರವನ್ನು ಮನುಷ್ಯಕುಲ ಸಂಗ್ರಹಿಸಿದ ಜ್ಞಾನಭಂಡಾರದಿಂದ ಹುಡುಕಿ ತೆಗೆದು ಅನ್ವಯಿಸುವುದೇ ತತ್ವಜ್ಞಾನದ ಮಹತ್ಕಾರ್ಯ. ಈಗ ಸಾಹಿತ್ಯ ಹಾಗೂ ರಾಜಕಾರಣಗಳು ಆ ಕಾರ್ಯವನ್ನು ಯಥಾಶಕ್ತಿ ಮಾಡುತ್ತಿವೆ. ಆದರೆ ಅವು ದುರ್ಬಲಾಸ್ತ್ರಗಳು. ಹಳಗಾಲದ ಸಮಸ್ಯೆ ಹಾಗೂ ಕಲ್ಪನೆಗಳಿಗಂಟಿಕೊಂಡರೆ ತತ್ವಜ್ಞಾನ ಅಂಜುಬುರುಕ ವಿಧವೆಯಂತಾಗುವುದು. ವರ್ತಮಾನ ಕಾಲದ ಪ್ರಶ್ನೆಗಳನ್ನದು ಎದುರಿಸಲು ಸಿದ್ಧವಾಗಬೇಕು. ಇಂದಿನ ಮನುಷ್ಯರೂ ಅವರ ಜೀವನವೂ ತತ್ವಜ್ಞಾನದ ವಸ್ತು. ಪ್ರಮಾಣಶಾಸ್ತ್ರವೆಂಬ ಕಸದ ಮೂಲೆಯಲ್ಲೇ ಒದ್ದಾಡುತ್ತ ಬಿದ್ದಿದ್ದರೆ ತತ್ವಜ್ಞಾನ ಅಪ್ರಯೋಜಕವಾದೀತು. ಹಳೆಯ ಸಮಸ್ಯೆಗಳಾದ 'ಕಸ್ತ್ವಂ, ಕೋಹಂ, ಕುತ ಆಯಾತಃ ಕಾ ಮೇ ಜನನೀ, ಕೋ ಮೇ ತಾತಃ; ಎಂಬಿವೆಲ್ಲ ಆಧುನಿಕರನ್ನು ಬಾಧಿಸುವುದಿಲ್ಲ. ಹಾಗಾದರೆ ನಾವವನ್ನು ಪರಿಹರಿಸಿ ಬಿಟ್ಟಿದ್ದೇವೆಯೇ? ಇಲ್ಲ, ಯಾರೂ ಈವರೆಗೆ ಪರಿಹರಿಸಿಲ್ಲ– ಎಲ್ಲರಿಗೂ ಸಮಾಧಾನಕರವಾಗುವಂತೆ. ಆದುದರಿಂದ ನಾವಿಂದು ಅವನ್ನು ದಾಟಿಕೊಂಡು ಹೋಗಿ ಪಾರಾಗುತ್ತೇವೆ. ಸಾಮಾಜಿಕ ಘರ್ಷಣ ಹಾಗೂ ಸಚೇತನ ಪರಿವರ್ತನಗಳ ಬಿಸಿಯಲ್ಲಿ ಆ ಸಮಸ್ಯೆಗಳು ಆವಿಯಾಗಿ ಹೋಗಿ ಬಿಡುತ್ತವೆ. ಮಿಕ್ಕ ಜ್ಞಾನ ಶಾಖೆಗಳಂತೆಯೇ ತತ್ವಜ್ಞಾನವೂ ಇಂದು ಲೌಕಿಕ–ಧಾರ್ಮಿಕವಲ್ಲ. ಅದು ಗಗನವಿಹಾರಿಯಾಗದೆ, ಖಸೂಚಿಯಾಗದೆ, ಗಗನಾರವಿಂದ ಸುರಭಿಗೆಳಸದೆ, ಪರಲೋಕದ ಸುಖಮರೀಚಿಕೆಯನ್ನು ಬೆಂಬತ್ತದೆ, ಭೂಮಿಯಲ್ಲೇ ಉಳಿದು, ಜೀವನಮಾರ್ಗದ ಮೇಲೆ ಬೆಳಕು ಬೀರಿ, ತನ್ನ ಸಾರ್ಥಕತೆಯನ್ನು ವ್ಯಾವಹಾರಿಕವಾಗಿ ಸಾಧಿಸಿಕೊಳ್ಳಲಿದೆ.

ದಿನದ ೨೪ ತಾಸೂ ಇಂದ್ರಿಯೋತ್ತರ ಪ್ರಜ್ಞೆಯಲ್ಲೇ ಬದುಕಬಲ್ಲ ಮಹನೀಯರ ತತ್ವಶಾಸ್ತ್ರ ಅವರಿಗಷ್ಟೇ ಉಪಯುಕ್ತ. ಅಂಥ ಪ್ರಜ್ಞಾಸ್ಥಲವನ್ನು ಒಮ್ಮೆಯಾದರೂ ಮುಟ್ಟಲು ಅಗತ್ಯವಾದ ಕ್ರಮಿಕ ತರಬೇತನ್ನು ಕೊಡುವ ತತ್ವಶಾಸ್ತ್ರ ಲೌಕಿಕ ತತ್ವಶಾಸ್ತ್ರ. ಅದೇ ಇಂದು ನೂರರಲ್ಲಿ ೯೯ ಜನರಿಗೆ ಬೇಕಾದದ್ದು ಎಂಬುದು ಆಧುನಿಕ ಮತ. ಇಹ ಜೀವನದ

ವಿವೇಕ, ವ್ಯವಸ್ಥೆಗಳು ಸಾಮಾಜಿಕವಾಗಿಯೂ ವೈಯಕ್ತಿಕವಾಗಿಯೂ ವ್ಯಾವಹಾರಿಕ ಕ್ಷೇತ್ರಗಳಲ್ಲಿ ಸಮನ್ವಿತವಾಗಬೇಕಾದರೆ ಪರಿವರ್ತಿಯಾದ ಲೌಕಿಕ ಪರಿಸ್ಥಿತಿಗೆ ತಕ್ಕ ವರ್ತನಾಯೋಜನೆ ಆವಶ್ಯಕ. ಅಂಥ ವಿಚಾರ–ವರ್ತನೆಗಳ ಸಮನ್ವಿತ ಸೂತ್ರಗಳನ್ನು ಆಯಾ ಪರಿಸ್ಥಿತಿಗನುಗುಣವಾಗಿ ರೋಗಕ್ಕೆ ತಕ್ಕ ಮದ್ದನ್ನು ಕೊಡುವಂತೆ ತಯಾರಿಸಿ ಕೊಡುವುದು ತತ್ವಜ್ಞಾನದ ಕೆಲಸ ಎಂಬುದೇ ಆಧುನಿಕ ಅಭಿಪ್ರಾಯ. ಈ ದೃಷ್ಟಿಯಲ್ಲಿ ಸಾಗಿದರೆ ಸಾರ್ವಕಾಲಿಕ ತತ್ವನಿರ್ಣಯಕ್ಕಾಶಿಸುವುದು ಬಹುಸಂಖ್ಯ ಸಾಮಾನ್ಯ–ಅಸಾಮಾನ್ಯ ಬುದ್ಧಿವಂತರಿಬ್ಬರಿಗೂ ಹೇಳಿಸಿದ್ದಲ್ಲ ಎನ್ನಬೇಕಾಗುತ್ತದೆ. ಏಕೆಂದರೆ, 'ಪ್ರಯೋಜನ ಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ!' ಅಲ್ಲವೇ?

ಈ ಆಧುನಿಕತೆಯ ಪ್ರಾಮಾಣಿಕತೆಯ ಪ್ರಾಮಾಣಿಕತೆಯನ್ನು ಅಲ್ಲಗಳೆದರೆ, ಶಬ್ದಬ್ರಹ್ಮರೂ ಬಾಯಬಲದವರೂ ಅವ್ಯವಹಾರ್ಯ ತತ್ವಪ್ರಬೋಧಕರೂ ಕಪಟ ಸನ್ಯಾಸಿಗಳೂ ಗೋಮುಖವ್ಯಾಘ್ರರೂ ವಿದ್ವತ್ಪ್ರಪಂಚದಲ್ಲಿ ಹೆಚ್ಚಿ, ಸಾಮಾನ್ಯರಿಗೆ ಅಮಲು ಕೊಟ್ಟು, ಅವರಿಂದ ಸ್ಥಾನ–ಮಾನ–ಗೌರವ–ಧನ ಮುಂತಾದವನ್ನು ಕಸಿದುಕೊಳ್ಳುವ ಪಿಡುಗು ಹೆಚ್ಚಿ, ಸಮಾಜವು ಕ್ರಮೇಣ ಅಪ್ರಬುದ್ಧವೂ ಅದೃಢವೂ ಅರಕ್ಷಿತವೂ ಆಗುತ್ತ ಹೋಗುವುದು ಇಂದು ಅನುಭವಸಿದ್ಧವಾಗಿದೆಯಲ್ಲವೇ?

⌘ ⌘ ⌘

# ಮುನ್ನುಡಿ

ಅದೊಂದು ದಿವ್ಯ ಆಕಸ್ಮಿಕ!

ಈಗ ಸುಮಾರು ಒಂದೂವರೆ ವರ್ಷದೀಚೆಯ ಒಂದು ಸಂಜೆ. ಎಂದಿನಂತೆ ಪೇಟೆಯಿಂದ ವೀಳ್ಯದೆಲೆ ಮತ್ತು ತಂಬಾಕನ್ನು ತಂದಿದ್ದೆ. ಅವನ್ನು ಸುತ್ತಿದ್ದ ಕಂದು ಬಣ್ಣಕ್ಕೆ ತಿರುಗಿದ ಗೆರೆಹಾಳೆಯ ಮೇಲಿನ ಸ್ಫುಟವಾದ ಅಕ್ಷರ ಪರಿಚಿತವಾದದ್ದು ಎನಿಸಿ ಕುತೂಹಲದಿಂದ ಬಿಡಿಸಿ ಓದಿದೆ. ಬರವಣಿಗೆಯ ಶೈಲಿಯೂ ಪರಿಚಿತವಾದದ್ದೇ ಎನಿಸಿತು. ಗಾಂಧಿ, ಗೀತೆ ಹಾಗೂ ವೇದದ ಉಲ್ಲೇಖವಿದ್ದ ಈ ಪುಟ ಲೇಖನವೊಂದರ ಕೊನೆಯ ಸಾಲುಗಳೆಂಬುದು ಸ್ಪಷ್ಟವಿತ್ತು. ಕುಮಟಾದಲ್ಲಿಯಂತೂ ಈ ಬಗೆಯಲ್ಲಿ ಯಾರೂ ಬರೆಯುತ್ತಿಲ್ಲ ಎಂಬುದೂ ಖಚಿತವಿತ್ತು. ನಾಲ್ಕಾರು ಪುಟಗಳಾದರೂ ಇದ್ದರೆ ಊಹಿಸಬಹುದಾಗಿತ್ತು ಎಂದುಕೊಂಡು ಪುನಃ ಪೇಟೆಗೆ ಗಾಡಿ ಓಡಿಸಿದೆ–ಇಂತಹ ಪುಟಗಳು ಇನ್ನೂ ಇವೆಯೇ ಎಂದು ವಿಚಾರಿಸಲು. ಪರಿಚಯದ ಪುಟ್ಟ ಅಂಗಡಿ ಅದು. ವ್ಯಾಪಾರವೂ ಸಣ್ಣದು. ಅಂಗಡಿ ಮುಚ್ಚಲು ತಯಾರಾಗುತ್ತಿದ್ದ ಆತ ನೀವೇ ನೋಡಿಕೊಳ್ಳಿ ಎಂದು ಕರೆದ. ನನ್ನಲ್ಲಿದ್ದ ಪುಟವನ್ನು ಹೋಲುವ ಕೈಬರಹದ ಹಲವು ಪುಟಗಳು ಅವನ ರದ್ದಿರಾಶಿಯಲ್ಲಿ ಮೇಲೆಯೇ ಇದ್ದವು. ಪುಟ ಸಂಖ್ಯೆ ಹಾಕಿದ್ದರಿಂದ ಜೋಡಿಸುವುದೂ ಕಷ್ಟವಾಗಲಿಲ್ಲ. ಹಾಗೆ ಜೋಡಿಸಿದಾಗ ಅದು "Integration Achived by the Modern Kannada Poets and Dramatists" ಎಂಬ ಇಂಗ್ಲೀಷ್ ಶೀರ್ಷಿಕೆ ಹೊತ್ತ ಎಂಭತ್ತೈದು ಪುಟಗಳಷ್ಟು ದೀರ್ಘವಾದ ಲೇಖನವಾಯಿತು! ಈ ಹಸ್ತಪ್ರತಿಯ ಕೊನೆಯ ಪುಟವೇ ಎಲೆ–ತಂಬಾಕು ಸುತ್ತಿಕೊಂಡು ನನ್ನ ಕೈಸೇರಿತ್ತು. ಶೀರ್ಷಿಕೆಯ ಅಡಿಯಲ್ಲಿ ಲೇಖಕರ ಹೆಸರೇನೂ ಇರಲಿಲ್ಲ. ಬದಲಾಗಿ 'ನಾಲ್ಕುಮಾತು' ಎಂಬ ಪ್ರಸ್ತಾವನೆ ಶುರುವಾಗಿತ್ತು. ಯಾವುದಕ್ಕೂ ಓದಿ ನೋಡೋಣವೆಂದು ಎತ್ತಿಕೊಂಡು ಬಂದವನೆ ಕವಳ ಹಾಕಿಕೊಂಡು ಪುಟ ತಿರುವಲಾರಂಭಿಸಿದೆ. ಎಂಟು ಪುಟಗಳ 'ನಾಲ್ಕು ಮಾತಿ'ನ ತುದಿಯಲ್ಲಿ ಬಿ.ಎಚ್.ಶ್ರೀಧರ, ಕೆನರಾ ಕಾಲೇಜು, ಕುಮಟೆ, ೧–೧–೧೯೬೭ ಎಂದು ಬರೆದಿತ್ತು! 'ಶ್ರೀಧರ ಸ್ಮರಣೆಯ' ಸಂಪಾದನೆಯ ಹೊತ್ತಿನಲ್ಲಿ ಶ್ರೀಧರರ ಎಲ್ಲ ಪ್ರಕಟಿತ ಪುಸ್ತಕಗಳನ್ನೂ ಓದಿದ್ದರಿಂದ ಇದೊಂದು ಅಪ್ರಕಟಿತ ಪುಸ್ತಕದ ಹಸ್ತಪ್ರತಿ ಎಂಬುದರಲ್ಲಿ ಅನುಮಾನವೇ ಇರಲಿಲ್ಲವಾದರೂ ಮತ್ತೆ 'ಶ್ರೀಧರ ಕೃತಿಸೂಚಿ' ತೆಗೆದು ಖಚಿತಪಡಿಸಿಕೊಂಡೆ. ಊಟದ ನಂತರ ಪಟ್ಟಾಗಿ ಕೂತು ಇಡೀ ಬರಹ ಓದಿದೆ. ನಲ್ವತ್ತೈದು ವರ್ಷಗಳ ಅಜ್ಞಾತವಾಸದ ನಂತರ ಹೀಗೆ ಆಕಸ್ಮಿಕವಾಗಿ ಕೈಸೇರಿದ ಹಸ್ತಪ್ರತಿ ನಿದ್ರೆಯನ್ನು ಪೂರ್ತಿಯಾಗಿ ಓಡಿಸಿತ್ತು.

೧೯೫೧ ರಿಂದ ೬೨ರ ವರೆಗೆ ಹನ್ನೊಂದು ವರ್ಷ ಶ್ರೀಧರರು ಕುಮಟೆಯ ಕೆನರಾ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದರು. ಆಗ ಗೋಪಾಲಕೃಷ್ಣ ಅಡಿಗ, ಜಿ. ಎಸ್. ಆಮೂರ, ವಿ.ಜಿ. ಕುಲಕರ್ಣಿ, ಎಲ್.ಆರ್.ಹೆಗಡೆ, ಕೆ. ಕೃಷ್ಣಮೂರ್ತಿ, ಎಲ್.ಟಿ.ಶರ್ಮಾ ಮೊದಲಾದ ಹಲವು ಧೀಮಂತರು ಅವರ ಸಹೋದ್ಯೋಗಿಗಳಾಗಿದ್ದರು. ಆಗ ಜಿಲ್ಲೆಯಲ್ಲಿ ಬೇರೆ ಕಾಲೇಜುಗಳೇ ಇರಲಿಲ್ಲ. ಹೀಗಾಗಿ, ಆಮೂರರು ಹೇಳುವಂತೆ, ಜಿಲ್ಲೆಯಾದ್ಯಂತ ಸಭೆ ಸಮಾರಂಭಗಳಲ್ಲಿ ಅತಿಥಿಗಳಾಗಿಯೋ, ಉಪನ್ಯಾಸಕರಾಗಿಯೋ ಭಾಗವಹಿಸುವುದು ಕಾಲೇಜಿನ ಈ ಅಧ್ಯಾಪಕರಿಗೆ ಕರ್ತವ್ಯವೇ ಆಗಿತ್ತು. ದಣಿವಿಲ್ಲದೇ ನಿರರ್ಗಳವಾಗಿ ಗಂಟೆಗಟ್ಟಲೆ ಮಾತಾಡುತ್ತಿದ್ದ ಶ್ರೀಧರರು ಆಗ ಬಹುಬೇಡಿಕೆಯ ಉಪನ್ಯಾಸಕರಾಗಿದ್ದರು. ಯಾವ ಮೂಲಭೂತ ಸೌಕರ್ಯಗಳೂ ಇಲ್ಲದ ಅರಣ್ಯ ಜಿಲ್ಲೆಯ ಮೂಲೆ ಮೂಲೆಯನ್ನೂ ಅವರು ಹೀಗೆ ತಲುಪಿದರು. ಅನಕ್ಷರಸ್ಥರೇ ಹೆಚ್ಚಾಗಿರುತ್ತಿದ್ದ ಸಭೆಗಳಲ್ಲೂ ಶ್ರೀಧರರು ಘಂಟೆಗಟ್ಟಲೇ ಹೊಸ ವಿಚಾರಗಳನ್ನೂ, ಹೊಸ ಸಾಹಿತ್ಯವನ್ನೂ ಪರಿಚಯಿಸಿ ಸ್ವಾರಸ್ಯಕರವಾಗಿ ಮಾತನಾಡುತ್ತಿದ್ದರೆಂದು ಆಮೂರರು ನೆನಪಿಸಿಕೊಳ್ಳುತ್ತಾರೆ. ಸಂಸ್ಕಾರ ನೀಡುವುದರಲ್ಲಿ ಅಪ್ರತಿಮ ತತ್ಪರತೆ ಹೇಗೆ ಶ್ರೀಧರರ ಗುಣವೇ ಆಗಿತ್ತೆಂದು ಗೌರೀಶರು ಬರೆದಿದ್ದಾರೆ. ಹಾಗೆ ನೋಡಿದರೆ ಜನಶಿಕ್ಷಣದ ಹವ್ಯಾಸವು ಉತ್ತರ ಕನ್ನಡದಲ್ಲಿ ಶಿಕ್ಷಣರಂಗದಿಂದ ಬಂದ ಶ್ರೀಧರ, ಕಾಯ್ಕಿಣಿ ಹಾಗೂ ಆರ್.ವಿ.ಭಂಡಾರಿ ಈ ಮೂವರು ವಿಚಾರಶೀಲ ಬರಹಗಾರರ ಬರವಣಿಗೆಯ ಧಾಟಿ–ಧೋರಣೆಗಳನ್ನು ಆಳವಾಗಿ ಪ್ರಭಾವಿಸಿದೆ. ಶ್ರೀಧರರಂತೂ ಕುಮಟೆಯಲ್ಲಿದ್ದ ಅವಧಿಯಲ್ಲಿ ಕಾವ್ಯರಚನೆಯನ್ನು ಬಹುಮಟ್ಟಿಗೆ ಕೈಬಿಟ್ಟು ಗದ್ಯ ಬರವಣಿಗೆಯಲ್ಲಿ ತೊಡಗಿಕೊಂಡಿದ್ದರು. ಅವರ ಹದಿಮೂರು ಗದ್ಯಕೃತಿಗಳು ಈ ಹನ್ನೊಂದು ವರ್ಷಗಳಲ್ಲಿ ಪ್ರಕಟವಾಗಿದ್ದವು. ಈ ಎಲ್ಲ ಕೃತಿಗಳೂ ಹೊಸ ವಿಚಾರಗಳನ್ನೂ, ಹೊಸ ಸಾಹಿತ್ಯವನ್ನೂ ಉಮೇದಿನಿಂದ ಪರಿಚಯಿಸುತ್ತವೆ ಅಥವಾ ಅನುವಾದಿಸುತ್ತವೆ.

'ಭಾವನಾ ಸಮನ್ವಯ'ವು ಅದರ ಉದ್ದೇಶ ಹಾಗೂ ಆಕೃತಿಯಲ್ಲಿ ಈ ಸಾಲಿನಲ್ಲೇ ಬರುವ ಕೃತಿ: ವಾಗ್ಮಿತೆಯ ಪಟ್ಟುಗಳೆಲ್ಲ ಇದರಲ್ಲಿದೆ–ಓದುಗರ ಆಸಕ್ತಿ ಹಾಗೂ ಅಭಿರುಚಿಯನ್ನು ಉದ್ದೀಪಿಸುವ ಉದ್ದೇಶ ಹೊತ್ತು, ಹೊಸದಾಗಿ ರೂಪಿಸಿಕೊಂಡ ಪ್ರಜಾಪ್ರಭುತ್ವ ಜನರ ಅಜ್ಞಾನವನ್ನೇ ಆಧರಿಸಿ ನಡೆಯುತ್ತಿದೆ ಎಂದೂ, ಇಂಥ ಅವ್ಯವಸ್ಥೆಯನ್ನು ದಾಟಿ ಮುನ್ನಡೆಯುವುದು ಅಗತ್ಯವೆಂದೂ, ಮುನ್ನಡೆಗೆ ಅಗತ್ಯವಾದ ಕೈದೀವಿಗೆಯಾಗಿ ಸಾಹಿತ್ಯ ಕೃತಿಗಳು ಒದಗಬಲ್ಲವು ಎಂದೂ ಈ ಬರವಣಿಗೆ ನಂಬಿಕೊಂಡಿದೆ.

ಹೀಗೆ ಶ್ರೀಧರರ ಗದ್ಯ ಬರವಣಿಗೆಯ ಪ್ರಾತಿನಿಧಿಕ ಕೃತಿಯೊಂದು ಅದು ಹೇಗೆ ಕೈತಪ್ಪಿ ಉಳಿದುಕೊಂಡಿತು? ಹಸ್ತಪ್ರತಿಯ 'ನಾಲ್ಕು ಮಾತು' ನೋಡಿದರೆ ಇದೊಂದು ಪ್ರಕಟಣೆಗಾಗಿ ಒಪ್ಪಿಸಿದ ಕೃತಿಯಾಗಿರುವಂತಿದೆ. ಯಾರು ಪ್ರಕಟಿಸಬೇಕಾದ ಪುಸ್ತಕವಾಗಿತ್ತು ಇದು? ಅದು ಹೇಗೆ ಪ್ರಕಾಶಕರ ಹಾಗೂ ಲೇಖಕರ ಮನಸ್ಸಿನಿಂದ ಮರೆಯಾಯಿತು? ನಾಲ್ಕೂವರೆ ದಶಕಗಳ ಅಜ್ಞಾತವಾಸವನ್ನು ಇದು ಎಲ್ಲಿ ಕಳೆಯಿತು? ಇಷ್ಟು ವರ್ಷಗಳ ನಂತರ ಮುಕ್ಕಾಗದೇ ಅದು ಮತ್ತೆ ಶ್ರೀಧರ ಬಳಗವನ್ನೇ ಸೇರಿದ್ದು ಈಗಲೂ ನನಗೆ

ವಿಸ್ಮಯದ ಸಂಗತಿಯಾಗಿದೆ. ಆ ರಾತ್ರಿಯಂತೂ ತಕ್ಷಣವೇ ರಾಜಶೇಖರ್‌ಗೆ ಫೋನ್ ಮಾಡಿ ಹೇಳಬೇಕು ಎಂಬ ಉತ್ಸಾಹವನ್ನು ಕಷ್ಟಪಟ್ಟು ಅದುಮಿಟ್ಟುಕೊಂಡೆ–ಸ್ವತಃ ಹಸ್ತಪ್ರತಿಯನ್ನೇ ಅವನ ಮುಂದೆ ಹಿಡಿದು ಆತ ಹೇಗೆ ಪ್ರತಿಕ್ರಿಯಿಸುತ್ತಾನೆಂದು ನೋಡಬೇಕೆಂದು. ಆದರೆ ಮುಂದಿನ ಎರಡು ತಿಂಗಳು ನಾನು ನನ್ನದೇ ತಿರುಗಾಟದಲ್ಲುಳಿದೆ. ರಾಜಶೇಖರನೂ ಆಸ್ಪತ್ರೆಗಳನ್ನು ಸುತ್ತಬೇಕಾಯಿತು. ಈ ಮಧ್ಯದಲ್ಲಿ ರಮಾಬಾಯಿಯವರೂ ನಮ್ಮನ್ನಗಲಿದರು. ಹೀಗಾಗಿ ಶ್ರೀಧರ ಬಳಗಕ್ಕೆ ಹಸ್ತಪ್ರತಿಯನ್ನು ಹಸ್ತಾಂತರಿಸುವಾಗ ಖುಷಿಯ ಕ್ಷಣದ ಮೇಲೆ ಸೂತಕದ ನೆರಳು ಬಿದ್ದಿತ್ತು.

ಇದೀಗ ಶ್ರೀಧರ ಪ್ರಶಸ್ತಿಗೆ ಇಪ್ಪತ್ತು ತುಂಬುತ್ತಿರುವ ಅವಸರದಲ್ಲಿ ವಿಠ್ಠಲ ಇದನ್ನು ಪ್ರಕಟಿಸಲು ಮುಂದಾಗಿದ್ದಾನೆ. ಆರ್.ವಿ.ಭಂಡಾರಿಯವರು ಹುಟ್ಟು ಹಾಕಿದ ಬಂಡಾಯ ಪ್ರಕಾಶನ ಇದನ್ನು ಪ್ರಕಟಿಸುತ್ತಿರುವುದು ಉಚಿತವಾಗಿದೆ. ವೈಚಾರಿಕ ನಿಲುವಿನಲ್ಲಿ ಆರ್.ವಿ.ಯವರೂ, ಶ್ರೀಧರರೂ ವಿರುದ್ಧ ದಿಕ್ಕುಗಳು. ಆದರೆ ಜನಶಿಕ್ಷಣದ ಘನೋದ್ದೇಶದಲ್ಲಿ ಇವರಿಬ್ಬರೂ ಕೈಜೋಡಿಸುತ್ತಾರೆ. ಬೆಳಕಿನ ದಾರಿಯಲ್ಲಿ ಇಡಿಯ ಸಮುದಾಯವನ್ನೇ ಮುನ್ನಡೆಸಬೇಕೆಂಬ ಸಂಕಲ್ಪ ಮತ್ತು ಪ್ರಯತ್ನದಲ್ಲಿ ಸಹಭಾಗಿಗಳಾಗುತ್ತಾರೆ.

ಇದೂ ಒಂದು ಆಕಸ್ಮಿಕ!

**–ಎಂ. ಜಿ. ಹೆಗಡೆ, ಕುಮಟಾ**

# ಪರಿವಿಡಿ

**ಭಾಗ ೧**

**ಭಾವ ವಿಹಾರ**



**ಭಾಗ ೨**

**ರಂಗ ವಿಹಾರ**

# ಪ್ರಸ್ತಾವನೆ

ಭಾರತೀಯ ಸಂಸ್ಕೃತಿಯ ಸ್ವರೂಪವನ್ನು ತಿಳಿಯಲು ಪ್ರೌಢ ವಿದ್ವಾಂಸರಿಗೆ ಗಮ್ಯವಾದ ಹಲವಾರು ಗ್ರಂಥಗಳು ಸಿಗಬಹುದು. ಅದರ ಐತಿಹಾಸಿಕವೂ, ಸಮಗ್ರವೂ ಆದ ಸಾರವನ್ನು 'ಕಾವ' ಪರೀಕ್ಷೆಗೆ ಪಠ್ಯವನ್ನಾಗಿ ಇಟ್ಟಿರುವ ಸಿ.ಎನ್. ಶಾಸ್ತ್ರಿಗಳು ಬರೆದ 'ಆರ್ಯಧರ್ಮ' ಎಂಬ ಪುಸ್ತಕದಲ್ಲೂ ಕಾಣಬಹುದು. ಅದನ್ನೇ ಶಾಸ್ತ್ರೀಯ ವಿಷಯವನ್ನಾಗಿ ತೆಗೆದುಕೊಂಡು ಅನೇಕ ವಿದ್ವಾಂಸರು ಬರೆದ ಪ್ರಬಂಧ ಸಂಗ್ರಹವೂ ಇದೆ ಕನ್ನಡದಲ್ಲಿ. ಹೀಗಿರುವಾಗ ಪ್ರಸ್ತುತ ಪುಸ್ತಕವನ್ನು ಬರೆಯಲು ಹೊರಟ ಉದ್ದೇಶವೇನು?

ಸುಲಭವಾದ ಮಾತಿನಲ್ಲಿ ಹೇಳುವುದಾದರೆ, ಮಾಡತಕ್ಕದ್ದು ಸಂಸ್ಕೃತಿ, ಮಾಡಬಾರದ್ದು ಅಸಂಸ್ಕೃತಿ ಅಥವಾ ಕುಸಂಸ್ಕೃತಿ. ಇದನ್ನೇ ಕೃತ್ಯ–ಅಕೃತ್ಯ ಎಂದು ವಿಂಗಡಿಸಿದರು ಹಿಂದಿನವರು. ಈ ಕೃತ್ಯಾಕೃತ್ಯ ವಿವೇಕವನ್ನು ಪಾಂಡಿತ್ಯ ಬಹಳ ಇಲ್ಲದವರಿಗೆ ಉಂಟು ಮಾಡಲು ಸಾಹಿತ್ಯ ಹೊರಟಿತು ಎಂದರು ಹಳೆಯ ವಿಮರ್ಶಕರು. ನೇರವಾಗಿ ಹೀಗೆ ಮಾಡು, ಹಾಗೆ ಮಾಡದಿರು ಎಂದು ನೀತಿಶಾಸ್ತ್ರದಂತೆ ಬೋಧಿಸದೆ, ತಿಳಿಸದೆ ತಿಳಿಸುವ ಅರ್ಥಾತ್ ಅಜ್ಞಾತ ರೀತಿಯಿಂದ ಮನಸ್ಸಿನಲ್ಲಿ ಪಳಚ್ಚನೆ ಹೊಳೆಯಿಸುವ ಕಾವ್ಯತಂತ್ರ ಸಾಮಾನ್ಯರಿಗಾಗಿಯೇ ಹುಟ್ಟಿತೆಂಬುದು ಅನುಭವಸಿದ್ಧ. ಈ ದೃಷ್ಟಿಯಿಂದಲೇ ರಾಮಾಯಣ–ಮಹಾಭಾರತಗಳನ್ನು ಭಾರತೀಯ ಸಂಸ್ಕೃತಿಯ ಬೆನ್ನೆಲುಬು ಎಂದು ವಿದ್ವಾಂಸರು ಹೊಗಳಿದ್ದು. ಅಲ್ಲಿಯ ರಾಮ–ರಾವಣರ, ಕೃಷ್ಣ–ಕೌರವರ, ಸೀತೆ–ಶೂರ್ಪಣಖೆಯರ, ಕುಂತಿ–ಗಾಂಧಾರಿಯರ ಚಾರಿತ್ರ ಚಿತ್ರಗಳು ಕೃತ್ಯಾಕೃತ್ಯಗಳ ಕೈಮರಗಳು. ಕವಿಗಳು ಋಷಿಗಳೆನ್ನಿಸಿ ಕೊಂಡದ್ದು ಇಂಥ ರಸದರ್ಶನಗಳಿಂದ, ಅದರಿಂದಲೇ ಅವರನ್ನು ಜಗತ್ತಿನ ಅಪ್ರತ್ಯಭಿಜ್ಞಾತ (ಗುರುತಿಸಲ್ಪಡದೆಯೇ ಇರುವ) ಶಾಸನಕರ್ತರು ಎಂದು ಆಂಗ್ಲರಲ್ಲಿ ಹೇಳುವ ವಾಡಿಕೆಯಿದೆ. ಏಕೆಂದರೆ, ಅವರ ಕೃತಿಗಳೇ ಜನರ ಹೃದಯದ ಧ್ಯೇಯ–ಆದರ್ಶಗಳನ್ನು ರೂಪಿಸುತ್ತವೆ. ಆದುದರಿಂದ ಅವರೇ ನಿಜವಾದ ಸಮಾಜ ಶಿಕ್ಷಕರು.

ಹೊಸಗನ್ನಡ ಸಾಹಿತ್ಯವಿನ್ನೂ ಎಷ್ಟೋ ಮಹಾಜನರಿಗೆ ಹೊಸದಾಗಿಯೇ ಉಳಿದಿದೆ. ಭಾಷಾ ಸಂಸ್ಕಾರದ ಹಳೆಯ ಶೈಲಿ ಅದರಲ್ಲಿ ಹದಿನಾರಾಣೆವರೆಗೆ ಹಾಗೇ ಉಳಿದುಕೊಂಡಿಲ್ಲ. ಆದುದರಿಂದ ಹಳ್ಳಿಗಂತೂ ನಮ್ಮ ಮಹಾಕವಿಗಳ, ಮಹಾನಾಟಕಕಾರರ, ಮಹಾಕಾದಂಬರಿಕಾರರ ವಾಣಿಗಳು ಸಾಕಷ್ಟು ಮುಟ್ಟಿಲ್ಲ ಇನ್ನೂ. ಈ ಸಂದರ್ಭದಲ್ಲಿ ಹೊಸ ಕಾಲಧರ್ಮ–ದೇಶ ಧರ್ಮಗಳನ್ನು ಬಿಂಬಿಸುವ ಭಾವ–ಭಾವನೆಗಳನ್ನು ಹರಿಯಿಸುವ ಜನಪ್ರಿಯವಾಗಲು ಯೋಗ್ಯವಾದ ಕೆಲ ಆಧುನಿಕ ಪುಟ್ಟ ಕೃತಿಗಳನ್ನು ಸಂಗ್ರಹಿಸಿ ಅವುಗಳಲ್ಲಿ

ಧ್ವನಿತವಾಗುವ ಸಾಂಸ್ಕೃತಿಕ ಸಂದೇಶವನ್ನು ನನ್ನದೇ ಮಾತಿನಲ್ಲಿ ಇಲ್ಲಿ ಇಡಲು ಪ್ರಯತ್ನಿಸಲಾಗಿದೆ. ಓದುಗರು ಕೃತಿಗಳನ್ನು ತಾವೇ ಎತ್ತಿಕೊಂಡು ಓದಿ ರಸ ತಲ್ಲೀನತೆಯ ಮೂಲಕ ಈ ಸಂದೇಶವನ್ನು ಅರಗಿಸಿಕೊಳ್ಳಹಚ್ಚಲು ಇದೊಂದು ಚಿಕ್ಕ ಪ್ರೇರಣೆಯಷ್ಟೆ.

ಪ್ರಸ್ತುತ ಪ್ರಯತ್ನದಲ್ಲಿ ಕವನಗಳನ್ನೂ, ನಾಟಕಗಳನ್ನೂ ಆರಿಸಿಕೊಂಡು ಕತೆ ಕಾದಂಬರಿಗಳನ್ನು ಬಿಡಲು ಕತೆ–ಕಾದಂಬರಿಗಳಿಗಿಂತ ಕವನ–ನಾಟಕಗಳು ಬಹು ಸಂಖ್ಯರಿಗೆ ಹೆಚ್ಚು ಅಪರಿಚಿತವಾಗಿರಬಹುದೆಂಬುದೇ ಕಾರಣ. ಅಪರಿಚಿತ ಕಾವ್ಯಭಾಗವನ್ನು ಪರಿಚಯಮಾಡಿಕೊಳ್ಳಲು ಉತ್ತೇಜಿಸುವ ಉದ್ದೇಶ ಇದರಲ್ಲಡಗಿದೆ. ಆಯ್ಕೆಯಲ್ಲಿ ಸಣ್ಣ ಸಣ್ಣ ಕವನ, ನಾಟಕಗಳಿಗೇ ಪ್ರಾಮುಖ್ಯ ಕೊಡಲು ಅವುಗಳು ಸುಲಭ ಗ್ರಾಹ್ಯವಾದಾವು ಎಂಬುದೇ ಆಶಯ. ಪುಸ್ತಕದ ಅಳತೆಯನ್ನು ಕಿರಿದಾಗಿ ಇಟ್ಟುಕೊಂಡುದರಿಂದ ಕರ್ನಾಟಕದ ಎಲ್ಲ ಪ್ರಸಿದ್ಧ ಕವಿ–ನಾಟಕಕಾರರ ಕೃತಿಗಳಿಗೂ ಎಡೆಯನ್ನು ದೊರಕಿಸಿ ಕೊಡಲಾಗಲಿಲ್ಲ. ಆದರೆ ಆದಷ್ಟು ಔಚಿತ್ಯ ವಿವೇಕದಿಂದ ಸಾಕಷ್ಟು ಪ್ರಾತಿನಿಧಿಕವೆನಿಸುವಂತೆ ಬೇರೆ ಬೇರೆ ಕವಿಗಳ ಹಾಗೂ ನಾಟಕಕಾರರ ಕೃತಿಗಳನ್ನಿಲ್ಲಿ ಎತ್ತಿಕೊಡಲಾಗಿದೆ.

ಇಡಿ ಕೃತಿಯ ಸರಳಾನುವಾದ, ಭಾವಾನುವಾದ, ತಾತ್ಪರ್ಯ, ಕಥಾ ಸಾರಗಳನ್ನು ಕೊಡುವ ಕೆಲಸವನ್ನಿಲ್ಲಿ ಮಾಡಿಲ್ಲ. ಏಕೆ? ಅದು ಬರೆಹದ ಉದ್ದೇಶವಲ್ಲ. ಅಥವಾ ಅವುಗಳ ಸಾಹಿತ್ಯಿಕ ವಿಮರ್ಶೆಗೂ ಇಲ್ಲಿ ಸ್ಥಳ ಕೊಟ್ಟಿಲ್ಲ. ಸಂಸ್ಕೃತಿಯ ಪ್ರಾಣವಾಯುಗಳನ್ನು ವಿವೇಚಿಸಿ ಓದುಗರೆದುರಿಡುವುದೇ ಪ್ರಥಮೋದ್ದೇಶವಾಗಿರುವುದರಿಂದ ಆ ವಿಚಾರಭರಶೈಲಿಯಿಂದಲೇ ಉದ್ದಕ್ಕೂ ಬರೆಹ ಸಾಗಿದೆ. ವಿಚಾರವನ್ನೇ ಪ್ರತ್ಯೇಕವಾಗಿ ಇಟ್ಟರೆ ಜನಸಾಮಾನ್ಯರಿಗೆ ಶುಷ್ಕವೆನಿಸೀತೆಂದು ಪುಸ್ತಕವು ಕಾವ್ಯನಿಷ್ಠವಿಚಾರದ ಹಾದಿಯನ್ನು ಹಿಡಿದಿದೆ. ಕಾವ್ಯವೊಂದಿದ್ದರೆ ವಿಚಾರದ ಸ್ಪಷ್ಟತೆ ಇನ್ನೂ ಹೆಚ್ಚಾಗುವುದು. ಹಾಗೆ ಓದುವ ಸಂದರ್ಭದ ಪೂರ್ವದಲ್ಲಿ ಕೂಡ ಬರೆಹ ಉಪಯುಕ್ತವಾಗಿ ಉಳಿಯಬೇಕೆಂಬ ಉದ್ದೇಶದಿಂದ ಕಾವ್ಯದ ನೆಪದಲ್ಲಿ ಸ್ವತಂತ್ರವಿಚಾರಧಾರೆಯೇ ಎಷ್ಟೋ ಕಡೆ ಹರಿದಿದೆ. ಇಂಥ ಪ್ರಯತ್ನವೊಂದು ಹೊಸ ಪ್ರಯೋಗ. ಇನ್ನು ವಿಚಾರದ ಜಾತಿಯೇ ಅನಾಕರ್ಷಣೀಯವೆನ್ನುವ ಅಸಹೃದಯರಿಗಿಲ್ಲಿ ಆದರಣೆಯಿಲ್ಲ.

ಇಲ್ಲಿ ಹರಿಯುವ ವಿಚಾರದ ಭಿತ್ತಿ ನಮ್ಮ ದೇಶ ಅದೂ ಇಂದಿನ ಪ್ರಜಾಸತ್ತಾವಾದಿಯಾದ, ಗಣರಾಜ್ಯವನ್ನು ಪುರಸ್ಕರಿಸಿದ ಸ್ವತಂತ್ರ ಭಾರತದೇಶ. ಸಂವಿಧಾನದಲ್ಲಿ ಹೇಳಿದ ಧ್ಯೇಯ–ಧೋರಣೆಗಳೇ ವಿಚಾರದ ಆವಾರ. ಈ ದೃಷ್ಟಿಯಿಂದ ಗೀತಗಳನ್ನು, ನಾಟಕಗಳನ್ನೂ ನೋಡಿದಾಗ ನಮ್ಮ ಗೀತಾಚಾರ್ಯ–ರಂಗಾಚಾರ್ಯ ಸಾಹಿತಿಗಳು ಬಹಳ ಮಟ್ಟಿಗೆ ಪ್ರಗತಿಶೀಲವೂ ಸರ್ವಹಿತಕರವೂ ಆದ ಅಭಿಪ್ರಾಯಗಳನ್ನೂ ಭಾವನೆಗಳನ್ನೂ ತಮ್ಮ ನವ್ಯಕೃತಿಗಳಲ್ಲಿ ಮೂಡಿಸಿರುವುದು ಎದ್ದು ಕಾಣುತ್ತದೆ. ಕಾದಂಬರೀ ರಸಜ್ಞರಿಗೂ ಇದೇ ಅನುಭವವಾಗಬಹುದು. ಏಕೆಂದರೆ ಎಲ್ಲರೂ ಸಮಕಾಲೀನರು. ಏಕಾವರಣದಲ್ಲಿ ಬೆಳೆದವರು. ಈ ಕವಿ–ನಾಟಕಕಾರ–ಕತೆಗಾರರ ಮಹತ್ವದ ಸಂದೇಶಗಳಲ್ಲಿ ಭೇದ ಕಡಿಮೆ. ಅದೂ ಒಂದು ಕಾರಣ–ಕತೆಗಳನ್ನು ತೆಗೆದುಕೊಂಡು ವಿಚಾರ ಮಾಡುವುದನ್ನಿಲ್ಲಿ

ಬಿಡಲು. ಚರ್ವಿತ ಚರ್ವಣವಾಗದಿರುವುದು ಅವಶ್ಯವಲ್ಲವೇ? ಆದರೂ ಭಾವ-ರಂಗಪ್ರಪಂಚಗಳ ಸಂಚಾರದಲ್ಲೇ ಕೆಲವೆಡೆ ಅನಿವಾರ್ಯವಾಗಿ ಅಭಿಪ್ರಾಯ-ತಾತ್ಪರ್ಯಗಳ ಪುನರುಕ್ತಿ ಸಂಭವಿಸಿರಬಹುದಾಗಿದೆ. ಅಂಥ ಪುನರುಕ್ತಿಗಳು ಪದ್ಯವೊಂದರಲ್ಲಿ ಪುನರುಕ್ತವಾಗುವ ಪಲ್ಲವಿದ್ದ ಹಾಗೆ ಎಂದು ಭಾವಿಸಬಹುದು.

ಅನೇಕ ಪುಸ್ತಕ ಭಂಡಾರದ ಅಧಿಕಾರಿಗಳ ಅನುಭವದ ಪ್ರಕಾರ ವಿಚಾರ ಪ್ರಧಾನವಾದ ಕೃತಿಗಳನ್ನು ಹಾಗೂ ಕವನ-ನಾಟಕಗಳನ್ನು ಓದಲು ಒಯ್ಯುವವರ ಸಂಖ್ಯೆ ಕಡಿಮೆಯೆಂದು ಕಂಡು ಬಂದಿದೆ. ಈ ಭಾಗದಲ್ಲಿ ಓದುಗರ ಆಸಕ್ತಿ ಅಭಿರುಚಿಗಳನ್ನು ಉದ್ದೀಪಿಸಲೆಂದು ಸಾಹಿತ್ಯದ ಈ ಮೂರು ಉತ್ತಮಾಂಗಗಳನ್ನು ಇಲ್ಲಿ ಬೆರೆಸಲಾಗಿದೆ. ಇದೊಂದು ಹೊಸ ಚಂಪು. ಬೇಸರವಾದಾಗ ಹತ್ತು ನಿಮಿಷ ಓದಿದರೂ ಏನಾದರೊಂದು ವಿಚಾರ ಓದುಗರಲ್ಲಿ ಎದ್ದು ಸಂಚರಿಸುವಂತಾದರೆ ಆ ದಿಶೆಯಲ್ಲಿ ಮಾಡಿದ ಈ ಪ್ರಯತ್ನ ಸಾರ್ಥಕವೆನ್ನುವೆ.

ನಮ್ಮ ಸಮಾಜದ ನಾಳಿನ ಪ್ರೌಢರೆನಿಸುವ ಮಾಧ್ಯಮಿಕ ವಿದ್ಯಾಲಯದ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಹಾಗೂ ತತ್ಸಮರಾದ ಇತರ ಮಾತು ಬಲ್ಲ ಮಹನೀಯರು ಬಹುಸಂಖ್ಯರು. ಪ್ರಜಾಪ್ರಭುತ್ವದ ಇಂದಿನ ಜೀವನರಂಗದಲ್ಲಿ ಪಾಲಿಸಬೇಕಾದ ಪ್ರಜಾಧರ್ಮದ ಮೂಲಸೆಲೆಗಳನ್ನು ಹೃದಯದಲ್ಲಿ ಒಂದಿಸಿಕೊಳ್ಳಬೇಕಾದ ಅವಧಿ ಬಹುಬೇಗ ಮೀರುತ್ತಿದೆ. ಈ ಸನ್ನಿವೇಶದಲ್ಲಿ ನಾಯಕತ್ವದ ಹಾಗೂ ಅನುಯಾಯಿತ್ವದ ವ್ಯಕ್ತಿತ್ವಗಳನ್ನು ನಮ್ಮ ಜನ ಸುಸ್ಪಷ್ಟವಾಗಿ ಬೆಳೆಸಿಕೊಂಡು ದೃಢಬುದ್ಧಿಯಿಂದ ವ್ಯವಹರಿಸಲು ಕಲಿತ ಹೊರತು ಪ್ರಯೋಗರೂಪದಲ್ಲಿರುವ ಈ ಪ್ರಜಾಸತ್ತೆಯಿಲ್ಲಿ ಯಶಸ್ವಿಯಾಗದು. ಈಗ ನಡೆಯುವ ಪ್ರಭುತ್ವವು ಅನಿವಾರ್ಯವಾಗಿ Democracy is a form of government by popular ignorance ಸಾಮಾನ್ಯ ಜನರ ಅಜ್ಞಾನವನ್ನಾಧರಿಸಿ ನಡೆವ ಪ್ರಜಾಪ್ರಭುತ್ವವೆನಿಸಿದೆ. ಇಂಥ ಮಿದುಳಿಗೆ ಬದಲು ಮತಗಳನ್ನು ಬಳಸಿಕೊಂಬ ಇಂಥ ಅವಸ್ಥೆಯನ್ನು ನಾವು ದಾಟಿ ಮುನ್ನಡೆಯಿಡಬೇಕಾಗಿದೆ. ಪ್ರಜಾಸತ್ತೆಯ ಪಾವಿತ್ರ್ಯ ಸೌಂದರ್ಯಗಳನ್ನು ಸರ್ವಭಾವದಿಂದ ಸರ್ವೋಚ್ಚವೆಂದು ಚಿತ್ತದಲ್ಲಿ ನಿಲ್ಲಿಸಿಕೊಂಬ ಸುಸಂಸ್ಕೃತಿಯ ರಸಪೋಷಣೆ ಎಷ್ಟು ಮಾರ್ಗಗಳಿಂದ ನಮಗಿಂದು ದೊರಕಿದರೂ ಕಡಿಮೆಯೇ. ಈ ಪ್ರಯತ್ನ ಪ್ರವಾಹಗಳಲ್ಲಿ ಪ್ರಸ್ತುತವಾದ ಸೌಮ್ಯ, ಸುಲಭ, ಸರಳ ಎನಿಸಿದ ತಿಳಿವೊನಲು ಒಂದು.

ದೇವತಾಕಲ್ಪನೆ ಎಂದರೆ ಏನು? ಎಂದು ಕೇಳಿದ್ದಕ್ಕೆ ಉತ್ತರವಾಗಿ 'ಪ್ರತಿಯೊಬ್ಬರ ಮನಸ್ಸಿನ ಅತ್ಯುನ್ನತ ಕಲ್ಪನೆಯೇ ದೇವರು' ಎಂದೊಬ್ಬ ಉತ್ತರಿಸಿದ. ಭಾರತರಾಷ್ಟ್ರಪುರುಷನೇ ನಮಗಿಂದು ಲೌಕಿಕ, ಜಾತ್ಯಾತೀತ ದೇವರು. ಈ ಸಮಷ್ಟಿಭಾವವು ನಮ್ಮಲ್ಲಿಯ ಪ್ರತಿಯೊಂದು ವ್ಯಕ್ತಿಯಲ್ಲೂ ಜಾಗೃತವಾಗಬೇಕಾಗಿದೆ. ಹಾಗೆ ಜಾಗೃತವಾದರೆ ಮಾತ್ರ ನಾವು 'ಭಾರತೀಯ ಸಮಾಜ' ಎಂಬ ಪದವನ್ನು ಸಾರ್ಥಕವಾಗಿ ನಮಗೆ ಅನ್ವಯಿಸಿಕೊಳ್ಳಬಹುದು. ಅಲ್ಲಿಯವರೆಗೆ ಅದೊಂದು ಕೇವಲ ಶಬ್ದಸಂಗೀತ. 'ಭಾರತವೇ ನಮ್ಮ ಕುಲದೈವ' ಎಂಬ ಶ್ರದ್ಧೆಯೊಂದು ಕಲ್ಪವೃಕ್ಷ. ಆ ಕಲ್ಪವೃಕ್ಷವನ್ನು ಜನಮನದಲ್ಲಿ ನೀರೆರೆದು ಪೋಷಿಸುವ ಕಾರ್ಯವನ್ನು ಸಾಹಿತ್ಯವು ಮಾಡುತ್ತಿದೆ. ಅದು ತನಗೆ ಸಹಜವಾದ ಪರೋಕ್ಷತಂತ್ರದಿಂದ ಮಾಡುತ್ತ

ಬಂದ ಸೇವೆಯ ಬಗೆಯನ್ನು ಇಲ್ಲಿ ಪ್ರತ್ಯಕ್ಷಕ್ಕೆ ತರುವ ಪ್ರಯತ್ನವನ್ನು ಮಾಡಿರುವುದಲ್ಲದೆ, ಆ ದಿಶೆಯಲ್ಲಿ ಕಣ್ತೆರೆದು ರಸಿಕರು ಲಕ್ಷ್ಯಹಾಕಬೇಕೆಂದು ಪರೋಕ್ಷ ಉತ್ತೇಜನವನ್ನು ಈ ಧಾರೆ ಕೊಡುತ್ತಹೋಗುತ್ತದೆ.

ಒಂದು ಜನಾಂಗದ ಮನ–ಮಾತು–ಕಾರ್ಯಗಳಲ್ಲಿ ಅತ್ಯುತ್ತಮವಾದವುಗಳನ್ನು ಪರಿಚಯ ಮಾಡಿಕೊಳ್ಳುವುದು ಸಂಸ್ಕೃತಿವರ್ಧಕ ಎಂದು ಬಲ್ಲವರೆನ್ನುತ್ತಾರೆ. ಹಾಗೇ ಅದರ ಅತ್ಯಧಮ ಅಂಶಗಳ ಪರಿಚಯವೂ ಅವುಗಳ ಹೇಯತೆಯನ್ನು ಬೆಳೆಸಿಕೊಳ್ಳಲು ಅವಶ್ಯಕ. ಜೀವನದಲ್ಲಿ ಬರುವ ಅನುಭವಗಳು ಒಂದು ಮಾದರಿಯವಾಗಿರುವುದಿಲ್ಲ; ಅವು ಎಷ್ಟೋ ವೇಳೆ ನಮ್ಮನ್ನು ಕೇಳಿಕೊಂಡು ಬರುವುದೂ ಇಲ್ಲ. ಹೀಗಿರುವಾಗ ಆಯಾ ಅನುಭವದ ಯೋಗ್ಯ ಬೆಲೆಯನ್ನು ಕಟ್ಟುವ ಯೋಗ್ಯತೆ ಬರಲು ಅದನ್ನು ಹೋಲುವ ಅನುಭವಗಳ ಸಾಹಿತ್ಯಿಕ ಪರಿಚಯವು ಮೊದಲೇ ನಮಗಿರುವುದು ಲಾಭಕರ.

Custom is the deposit of the past in the life of the present- ರೂಢಿ, ಪದ್ಧತಿ ಎಂಬುದು ಇಂದಿನ ಬಾಳಿನಲ್ಲಿ ನೆಲೆನಿಂತ ಹಿಂದಿನ ಅನುಭವಾಂಶ ಎಂದು ಹೇಳುವುದುಂಟು. ಇದು ಬಹಳ ಮಟ್ಟಿಗೆ ನಿಜ. ನಮ್ಮ ನಿತ್ಯದ ನಡತೆಯಲ್ಲಿ ಯಾಂತ್ರಿಕ ಅನುಕರಣವಿರುವಂತೆಯೇ ವಿಚಾರದಲ್ಲೂ ಭಾವ–ರಸಗಳಲ್ಲೂ ಪರಂಪರೆಯ ಅಜ್ಞಾತ, ಅರ್ಧಜ್ಞಾತ ಅನುಕರಣವಿರುತ್ತದೆ. ಅವೇ ಕೆಲವು ನಮ್ಮನ್ನು ತಿಳಿದ ವಿಚಾರ ಹಾಗೂ ಮಾಡುವ ವರ್ತನೆಗಳ ನಡುವೆ ಸೇತುಗಟ್ಟದಂತೆ ವಿಘ್ನವಾಗಿ ತಡೆದುನಿಲ್ಲಿಸಬಲ್ಲ ಗೋಡೆಗಳು. ವಿಕಾಸ ಹೊಂದುತ್ತಿರುವ ಜೀವನನೀತಿಯು ತನ್ನ ವಿವರಗಳಲ್ಲಿ ಹಳೆಯದೂ ಅಕಾಲಿಕವೂ ಆದ ಕೆಲ ಅಂಶಗಳನ್ನು ಹಿಡಿಯುತ್ತಲೂ ಹೊಸವೂ ಕಾಲೋಚಿತವೂ ಆದ ಕೆಲ ಅಂಶಗಳನ್ನು ಹಿಡಿಯುತ್ತಲೂ ಹೋಗುವುದು ಸ್ವಾಭಾವಿಕ. ಈ ವ್ಯವಕಲನ–ಸಂಕಲನ ಪದ್ಧತಿಯೇ ಎಲ್ಲ ಬಗೆಯ ಬೆಳವಣಿಗೆಗೂ ಮೂಲಭೂತವಾದ ಮಾರ್ಗ.

ನವ ಭಾರತೀಯರೂ ನವಕರ್ನಾಟಕರೂ ತಮ್ಮ ನವಜೀವನವನ್ನು ರೂಪಿಸಿಕೊಳ್ಳ ಹೊರಟ ಈ ಸಂದರ್ಭದಲ್ಲಿ ಬಿಡಬೇಕಾದ ಹಾಗೂ ಹಿಡಿಯಬೇಕಾದ ವಿಚಾರ ಆಚಾರಗಳ ವಿವೇಚನೆ ಕ್ರಮಪ್ರಾಪ್ತ. ಈ ವಿವೇಚನೆ ಸಾಕಷ್ಟು ಕಡೆಗಳಲ್ಲಿ ಸಾಕಷ್ಟು ತೀವ್ರಗತಿಯಿಂದಲೂ ಗಂಭೀರವಾಗಿಯೂ ಸಾಗುತ್ತಿಲ್ಲ. ಅದರಿಂದ ಔದಾಸೀನ್ಯ, ಅನಾಸಕ್ತಿ, ನಿರುತ್ಸಾಹ, ಅಪವ್ಯಯ, ಅಪ್ರಾಮಾಣಿಕತೆ, ಅದಕ್ಷತೆ, ಅಪರುಚಿ, ಅಶುಚಿ ಮುಂತಾದವು ನಮ್ಮ ಸಾರ್ವಜನಿಕ ಜೀವನದ ಕಾರ್ಯಕ್ಷೇತ್ರಗಳಲ್ಲಿಂದು ಕಂಡು ಬಂದಿವೆ. ಇಂಥ ಅಪ್ರಬೋಧದ ಮುಗಿಲೊಡ್ಡುಗಳನ್ನು ಒಡೆದು ಚೂರುಚೂರುಮಾಡಿ, ವಿಚಾರ ಸೂರ್ಯನ ಬೆಳಕಿಗೆ ಜನರ ಎದೆಗಣ್ಣು–ಮಿದುಳ್ಗಣ್ಣುಗಳನ್ನು ತೆರೆಯಿಸಿ ಎದುರುಮಾಡುವ ಸತತೋದ್ಯೋಗಿಯೇ ಸಾಹಿತಿ. ಸಾಹಿತ್ಯದ ಈ ಕರ್ತವ್ಯವನ್ನು ಹೊಸಗನ್ನಡ ತಕ್ಕಮಟ್ಟಿಗೆ ನೇರವೇರಿಸಿದೆ ಎಂಬುದು ಆಶಾದಾಯಕವಾದ ಸಂಗತಿ.

ಕಾವ್ಯವೆಂದರೆ ಸಾಹಿತ್ಯ, ಒಂದು ಶಬ್ದ ಸಾಧನವನ್ನು ಬಳಸುವ ಲಲಿತ ಕಲೆ. ಗದ್ಯ, ಪದ್ಯ, ಮಿಶ್ರ ಎಂಬುದು ಅದರ ವಿಭಜನಾಕ್ರಮ. ಕವನಗಳನ್ನು ಪದ್ಯವೆನ್ನುತ್ತಾರೆ. ಕತೆ–

ಕಾದಂಬರಿ–ನಿಬಂಧಗಳು ಗದ್ಯಗಳು. ನಾಟಕವು ಗದ್ಯ–ಪದ್ಯ ಸಂಮಿಶ್ರವಾಗಿತ್ತು ಹಿಂದೆ. ಇಂದಿನ ನಾಟಕಗಳಲ್ಲಿ ಬಹುಸಂಖ್ಯೆ ಗದ್ಯಮಯ. ನಾಟಕದಲ್ಲಿ ಸಂವಾದವೇ ಎದ್ದು ಕಾಣುವ ಲಕ್ಷಣ.

ಹೊಸಗನ್ನಡ ಪದ್ಯಗಳಲ್ಲಿ ಹೆಚ್ಚಿನವನ್ನು ಭಾವಗೀತಗಳೆನ್ನುತ್ತಾರೆ. ಅವು ಹೆಚ್ಚಾಗಿ ನಡುಗನ್ನಡದ ಷಟ್ಪದಿ ಛಂದಸ್ಸಿಗೆ ಸಂಬಂಧಿಸಿದ ಗಣಘಟಕಗಳನ್ನು ಆಧರಿಸಿವೆ. ದಾಸರಪದ, ಶರಣರ ವಚನಗಳಲ್ಲಿ ಹೇಗೋ ಹಾಗೇ ಭಾವಗೀತದಲ್ಲೂ ಒಂದು ಭಾವದ ಪ್ರತಿಪಾದನೆಯಾಗಿರುತ್ತದೆ. ಭಾವವೆಂಬುದೊಂದು ಮನಃಸ್ಥಿತಿ. ಇಲ್ಲದು ಭಾವನಾಪ್ರಧಾನವಾಗಿರುತ್ತದೆ. ಕವಿಯು ತನ್ನ ಸುತ್ತುಮುತ್ತ ಕಂಡ ಘಟನೆಗೆ ತೋರಿಸುವ ಒಂದು ಮಾನಸಿಕ ಪ್ರತಿಕ್ರಿಯೆಯೇ ಪದ್ಯವೊಂದರ ಭಾವ. ಅವನ ಅನಿಸಿಕೆ ನಮ್ಮ ಅನಿಸಿಕೆಯಾಗುತ್ತದೆ–ನಾವು ತಲ್ಲೀನರಾಗಿ ಪದ್ಯವೋದಿದಾಗ ಅದೇ ರಸಾಸ್ವಾದ.

ನಾಟಕಗಳಲ್ಲಿ ಏನಾದರೊಂದು ಕಥಾವಸ್ತುವಿರುತ್ತದೆ; ಪಾತ್ರಗಳು ಅಲ್ಲಿ ಪರಸ್ಪರ ಮಾತಾಡುತ್ತವೆ. ಆ ಪಾತ್ರಗಳಲ್ಲಿ ಯಾವುದಾದರೂ ಒಂದೆರಡು ಮುಖ್ಯವಾಗಿರುತ್ತವೆ. ಆ ಮುಖ್ಯ ಪಾತ್ರಗಳು ಏನಾದರೊಂದು ಸಂಕಲ್ಪವನ್ನಿಟ್ಟುಕೊಂಡು ಕಾರ್ಯಸಾಧನೆಗೆ ತೊಡಗುತ್ತವೆ. ನಾಟಕ ಮುಗಿಯುವುದು ಸಾಮಾನ್ಯವಾಗಿ ಕಾರ್ಯದ ಕೊನೆಯ ಹಂತದಲ್ಲಿ. ಕೊನೆಯ ಹಂತ ಸಂಕಲ್ಪದಂತೆ ಫಲಿಸಿದರೆ ಸುಖಾಂತ ನಾಟಕವಾಗುತ್ತದೆ, ಫಲಿಸದೆ ಹೋದರೆ ದುಃಖಾಂತ ನಾಟಕವಾಗುತ್ತದೆ. ಮುಖ್ಯ ಪಾತ್ರಗಳ ಹೃದಯ–ಬುದ್ಧಿಗಳಲ್ಲಿ ಓಡಾಡುವ ಹಲವಾರು ಭಾವನೆ–ಅಭಿಪ್ರಾಯಗಳು ಸಾಮಾನ್ಯವಾಗಿ ನಾಟಕಕಾರನವೇ ಆಗಿರುವುದು ಸಂಭವ–ಅದರಲ್ಲೂ ಹೆಚ್ಚಾಗಿ ಸಾಮಾಜಿಕ ನಾಟಕಗಳಲ್ಲಿ.

ಕವನವನ್ನು ಓದುತ್ತೇವೆ, ಕೇಳುತ್ತೇವೆ ನಾಟಕವನ್ನು ನಾವು ಓದುತ್ತೇವೆ, ಕೇಳುತ್ತೇವೆ ಮತ್ತು ನೋಡುತ್ತೇವೆ. ಆದುದರಿಂದ ದೃಶ್ಯವು ತಿಳಿದುಕೊಳ್ಳಲು ಎಲ್ಲಕ್ಕಿಂತ ಹೆಚ್ಚು ಸುಲಭ. ಅದಕ್ಕೇ ಅದನ್ನೊಂದು 'ಸಾಮಾಜಿಕ ಕಲೆ' ಎನ್ನುತ್ತಾರೆ; ಸಾಮಾನ್ಯರಿಗಾಗಿಯೇ ಅದಿರುವುದು–ತನ್ನ ಕಲಾತಂತ್ರದ ಮುಖ್ಯದೃಷ್ಟಿಯಿಂದ. ಕೆಟ್ಟತನದ ಕರಾಳತೆಯನ್ನೂ ಒಳ್ಳೆಯತನದ ಸೊಬಗನ್ನೂ ನಾವು ನಾಟಕದಲ್ಲಿ ಸ್ಪಷ್ಟವಾಗಿ ಕಾಣಬಹುದಂತೆ. ಕವನವು ಸಾಹಿತ್ಯದ ತಾರುಣ್ಯದ ಮೂರ್ತಿಯಾದರೆ, ನಾಟಕವು ಅದರ ಪ್ರೌಢದಶೆಯೆಂದು ಹೇಳುವುದುಂಟು.

ಭಾವಗೀತಕ್ಕೆ ಕತೆಯ ಹಿನ್ನೆಲೆಯನ್ನು ಕೊಡಲಾಗುವುದಿಲ್ಲ. ಅದರಲ್ಲಿ ಬಂದ ಸ್ಥೂಲ ಉಲ್ಲೇಖಗಳಿಂದಲೇ ನಾವು ಅದರಲ್ಲಿರುವ ಭಾವನಾಪ್ರತಿಕ್ರಿಯೆಯ ಪ್ರೇರಕವಾಗಿ ನಿಂತ ಪ್ರಾಪಂಚಿಕ ಪರಿಸರವನ್ನು, ಸನ್ನಿವೇಶವನ್ನು, ಘಟನೆಯನ್ನು, ಸಂಗತಿಯನ್ನು ಊಹಿಸಿಕೊಳ್ಳಬೇಕು. ಈ ಊಹಾಶಕ್ತಿ ಶಿಕ್ಷಣ–ಅನುಭವಗಳಿಂದ ನಮ್ಮಲ್ಲಿ ಬೆಳೆದಿರುತ್ತದೆ. ಪತ್ರಿಕೆಗಳನ್ನೋದುವಾಗ ನಾವು ಎಷ್ಟೋ ವೇಳೆ ಹಿಂದೆ ನಮಗೆ ತಿಳಿದು ಬಂದಿದ್ದ ಸಂಗತಿಗಳ ಹಿನ್ನೆಲೆಯನ್ನು ಸ್ಮರಿಸಿಕೊಂಡು ಕೆಲವೊಂದು ಸುದ್ದಿಗಳನ್ನು ಅರ್ಥಮಾಡಿಕೊಳ್ಳುವುದಿಲ್ಲವೇ? ಹಾಗೇ. ಗೀತಕವಿ–ರಂಗಕವಿಗಳ ಮೂಲಭೂತ ಆಶಯಗಳು

ಅವರ ಕೃತಿಯ ನೆಲಗಟ್ಟಾಗಿರುತ್ತವೆ. ಆ ಕೃತಿಗಳು ಆ ಆಶಯಗಳನ್ನು ಸಂದೇಶಗಳನ್ನಾಗಿ ಧ್ವನಿಸುತ್ತವೆ. ಅವೇ ನಮಗೆ ದೊರಕುವ ಕಾಂತೋಪದೇಶ.

Literature is the expression of the thoughts of society- ಸಾಹಿತ್ಯವು ಸಮಾಜದ ವಿಚಾರಗಳ ಪ್ರಕಟಸ್ವರೂಪ ಎನ್ನುತ್ತಾರೆ. ಕೃತಿಕಾರರು ಸಮಾಜದ ಗಣ್ಯ ಗುಂಪುಗಳ ಸದಸ್ಯರ ಪ್ರಾತಿನಿಧಿಕ ಮೂರ್ತಿಗಳಾಗಿರುತ್ತಾರೆ–ಭಾವಿಕ ಲೋಕದಲ್ಲಿ. ಅನೇಕರ ಸುಖದುಃಖಗಳಲ್ಲಿ ಹೊಕ್ಕು ಹೊರಟ ಪ್ರತಿಭೆ ಅವರ ಸ್ವತ್ತು. ಅವರು ಒಂದು ಬಗೆಯ ಸೂಕ್ಷ್ಮದರ್ಶಿಗಳು. ಅಂಥ ಸೂಕ್ಷ್ಮದರ್ಶನದಿಂದ ಪುಷ್ಟವಾದ ಅವರೆದೆಯಲ್ಲಿ ಮೂರ್ತಿಗೊಂಡ ಪ್ರಾತಿಭವ್ಯಕ್ತಿತ್ವವು ಅನುಭವದಿಂದ ತುಂಬಿದಾಗ ತುಳುಕುತ್ತದೆ. ಹಾಗೆ ತುಳುಕಿ ಶಬ್ದರೂಪದಿಂದ ಹೊರಬಿದ್ದ ಭಾವವು ಕಾವ್ಯಕೃತಿಯೆನಿಸುತ್ತದೆ. ಆದುದರಿಂದ ಸಾಹಿತಿಗಳ ಕೃತಿಗಳನ್ನು ಅವಲೋಕಿಸುವಾಗ ತೀರ ಅಪರಿಚಿತ ಸ್ಥಳವನ್ನು ಹೊಕ್ಕಂತೆನಿಸುವುದಿಲ್ಲ. ಅವರೂ ನಾವೂ ಸಹಜೀವಿಗಳು, ಸಹಾನುಭವಿಗಳು, ಸಹಧರ್ಮೀಯರು ಎಂಬ ಭಾಸವಾಗುತ್ತದೆ.

ಇಂದಿನ ನಾಟಕಗಳಲ್ಲಿರುವುದು ಶುದ್ಧ ಆಡು ಮಾತು. ಕೆಲವೆಡೆ ಗೀತರೂಪಕಗಳಲ್ಲಿ ಮತ್ತು ಕವನಗಳಲ್ಲಿ ಹೆಚ್ಚಾಗಿ ಇರುವಂತೆ ಗ್ರಾಂಥಿಕ ಭಾಷೆ ನಮಗೆದುರಾಗುತ್ತದೆ. ಅಂಥ ಗ್ರಾಂಥಿಕತೆಯು ಭಾವದ ಔನ್ನತ್ಯ ಅಥವಾ ತೀವ್ರತೆಯನ್ನು ವ್ಯಕ್ತಪಡಿಸಲು ಅನುಕೂಲಿಸುತ್ತದೆ– ಇಲ್ಲವೆ ಆ ಮೂಲಕ ಹೇಳುವ ಭಾವದ ಗಾಂಭೀರ್ಯ (ಆಳ) ಸ್ವಲ್ಪ ಹೆಚ್ಚಾಗುವಂತೆ ತೋರುತ್ತದೆ. ಅಂಥ ಸಾಲುಗಳು ಕಲಾಸಂಯೋಜನೆ ಚೆನ್ನಾಗಿದ್ದಲ್ಲಿ ನಮ್ಮ ಸ್ಮೃತಿಭಿತ್ತಿಯಲ್ಲಿ ಚಿರಸ್ಥಾಯಿಗಳಾಗಿ ನಿಲ್ಲುತ್ತವೆ. ಎಷ್ಟೋ ಕವಿಗಳ ಮಾತುಗಳು ಗಾದೆಗಳಾಗಿ ಹೋದದ್ದು ಹೀಗೆ. ಗಾದೆಗಳು ಅನುಭವದ ಗಟ್ಟಿಗಳಲ್ಲವೇ? ವಿಚಾರ ಪ್ರಚೋದನೆಗೆ ನಾವು ಅವುಗಳನ್ನೆಷ್ಟು ಸಲ ಬಳಸುವುದಿಲ್ಲ? ಅಂಥ ಸುಭಾಷಿತಗಳು ಮಹಾಕವಿಪ್ರಸಾದಗಳು!

ನಿಃಸ್ವಾರ್ಥ ಆತ್ಮದಲ್ಲಿ ಅರಳಿ ನಿಲ್ಲುವ ಹೂವೇ ಸೌಂದರ್ಯವಂತೆ! ಅಂಥ ಆತ್ಮವುಳ್ಳ ಸಾಹಿತಿಯೇ ನಿಜವಾದ ಕವಿ, ಕಾವ್ಯಕಾರ–ಅವನ ವಾಣಿ ಅಂಥ ಸೌಂದರ್ಯರೂಪದ್ದು. ಅಂಥ ರೂಪವು ಆತ್ಮಕ್ಕೆ ಆಪ್ಯಾಯಮಾನವಾಗುವ ಸತ್ಯವನ್ನು ಧ್ವನಿಸಬಲ್ಲದು. ಈ ಅರ್ಥದಲ್ಲೇ ಸತ್ಯವು ದಿವ್ಯ ಮನಸ್ಸಿನ ಆವಿರ್ಭಾವ! ಎಂದು ಹೇಳುವುದು. ಜಾತಕಗಳಲ್ಲಿ ಮನುಷ್ಯರನ್ನು ಮನುಷ್ಯ–ದೇವ–ರಾಕ್ಷಸ ಗಣಗಳವರೆಂದು ಮೂರು ವಿಧವಾಗಿ ವರ್ಗೀಕರಿಸುತ್ತಾರೆ. ಬಹುಶಃ ಈ ವರ್ಗೀಕರಣವು ಆಯಾ ವ್ಯಕ್ತಿಗಳ ಮುಖ್ಯವಾದ ಭಾವನಾಧಾರೆಯನ್ನು ಎತ್ತಿ ಸೂಚಿಸಲೆಂದು ಹೊರಟಿದ್ದೊ ಏನೋ! ಅದು ಹೇಗಿದ್ದರೂ ಜೀವನದಲ್ಲಂತೂ ನಮಗೆ ಅವರವರ ಚರಿತ್ರೆಯ ಮೂಲಕ ಹಾಗೆ ವರ್ಗೀಕರಣ ಮಾಡಲು ಬರುತ್ತದೆ.

ಒಬ್ಬನ ಪ್ರಧಾನಭಾವವು ಕಲೆ, ವಿಜ್ಞಾನ, ತತ್ವಜ್ಞಾನ, ಕಸಬು, ಕೈಗಾರಿಕೆ ಮುಂತಾದ ಅನೇಕ ರೂಪಗಳಲ್ಲಿ ಪ್ರಕಟವಾಗಬಹುದು. ಶಬ್ದಕಲೆಯ ಮೂಲಕ ಹೊರಬಿದ್ದಾಗ ಕಾವ್ಯವೆನಿಸುತ್ತದೆ ಆ ಭಾವ. Art is a missionary of civilization, its message is both to heart and mind- ಕಲೆಯೆಂಬುದು ನಾಗರೀಕತೆಯನ್ನು ಪ್ರಸಾರಮಾಡುವ ಪಾಠಕ,

ಉಪದೇಶಕ; ಅದರ ಸಂದೇಶವು ಹೃದಯವನ್ನೂ ಮುಟ್ಟುತ್ತದೆ, ಮನಸ್ಸನ್ನೂ ಮುಟ್ಟುತ್ತದೆ. ಹೀಗೆ ಹೃದಯಕ್ಕೆ ಮುಟ್ಟಿದ ಸಂದೇಶವು ನಮ್ಮದಾದಾಗ ಅದು ನಮ್ಮ ವ್ಯಕ್ತಿ ಭಾವದ ಅಂಗವಾಗಿ ಕೂಡಿ ನಮ್ಮ ವ್ಯಕ್ತಿತ್ವವನ್ನು, ಮನೋದಾರ್ಢ್ಯವನ್ನು ಬೆಳೆಸುತ್ತದೆ; ಮನಃಪ್ರಣಾಳಿಕೆಯನ್ನು ರೂಪಿಸುತ್ತದೆ: ಮನದ ಒಲವು ನಿಲುವುಗಳನ್ನು ದಿಗ್ದರ್ಶಿಸುತ್ತದೆ. ಹೀಗಿರುವುದರಿಂದಲೇ

**'ಸಾಹಿತ್ಯ ಸಂಗೀತ–ಕಲಾವಿಹೀನ:**

**ಸಾಕ್ಷಾತ್ ಪಶುಃ ಪುಚ್ಛ–ವಿಷಾಣಹೀನ:'**

ಎಂಬುದಾಗಿ ಅರಸಿಕನನ್ನು ಪ್ರಾಣಿಸದೃಶನೆಂದು ಬಯ್ಯಲಾಗಿದೆ. ಸಮಾಜಜೀವಿಯಾದ ಮಾನವನಿಗೆ ಸಹಾನುಭೂತಿ ಅತ್ಯಗತ್ಯ. ಆ ಗುಣವು ವೃದ್ಧಿಯಾಗಲು ಸಾಹಿತ್ಯಾದಿ ಕಲೆಗಳನ್ನು ಅವಲೋಕಿಸುವುದೇ ತರಬೇತು. ಕುರಿತೋದದೆಯೂ ಕಾವ್ಯಪ್ರಯೋಗ ಪರಿಣತಮತಿಗಳೆಂಬ ಹೊಗಳಿಕೆಗೆ ಪಾತ್ರರಾಗಿದ್ದ ಕನ್ನಡಿಗರು ಆ ಹೊಗಳಿಕೆಯ ಅರ್ಹತೆಯನ್ನು ಇಂದೂ ಉಳಿಸಿಕೊಳ್ಳಬೇಕಾದರೆ ಕುರಿತೋದುವುದಗತ್ಯ–ಜೀವನಕ್ರಮ ಈಗ ಬದಲಾಗಿರುವುದರಿಂದ, ನಿತ್ಯ–ನೈಮಿತ್ತಿಕ ಆಚಾರ–ಅಭ್ಯಾಸಗಳು ಲೋಪ–ಆಗಮ–ಆದೇಶಗಳಿಗೆ ಗುರಿಯಾದುದರಿಂದ; ಅಲ್ಲವೇ?

ಕುಮಟ, ೦೧–೦೧–೧೯೬೨ **ಬಿ.ಎಚ್.ಶ್ರೀಧರ.**

# ಭಾಗ – ೧
# ಭಾವ ವಿಹಾರ

## ಪೀಠಿಕೆ

ನಾವು ಯಾರು?

ಭಾರತದ ಹಳ್ಳಿಗರು, ಪಟ್ಟಣಿಗರು, ನಗರವಾಸಿಗಳು. ನಮ್ಮ ಪೂರ್ವಜರು ಎಷ್ಟನೆಯ ಇಸವಿಯಲ್ಲಿದ್ದರು? ೮–೧೦ ಸಾವಿರ ವರ್ಷಗಳ ಹಿಂದೆ. ನಮ್ಮ ನಮ್ಮ ಕುಲಮೂಲನಿವಾಸಿಗಳಿಂದ ಹಿಡಿದು ಆರ್ಯ–ದ್ರಾವಿಡ ಮುಂತಾದ ಅಸಂಖ್ಯ ಜನಾಂಗಗಳ ಒಂದು ಮಹಾಸಂಮಿಶ್ರ ಮಾನವಕುಲ. ನಮ್ಮ ಜಾತಿ ಬ್ರಾಹ್ಮಣಾದಿ ವರ್ಣಗಳಿಂದ ಹಿಡಿದು ಶುದ್ಧ ವಿದೇಶೀಯ ಆಚಾರವುಳ್ಳವರವರೆಗಿನ ಜಾತಿ–ಮತ–ಪಂಥಸ್ಥರ ಒಂದು ಮಹಾಸಾಗರದ ಜಾತಿ. ಭಾರತ ರಾಷ್ಟ್ರವಿಂದು ಒಂದು ಜನಸಾಗರ, ವಿಶ್ವಮಾನವ ಮಹಾಕುಟುಂಬ! ನಮ್ಮ ಆಚಾರ–ವಿಚಾರ–ಉಚ್ಚಾರ–ಉಪಚಾರಗಳಲ್ಲಿ ಎಷ್ಟು ಭೇದಗಳಿದ್ದರೂ ನಮ್ಮ ಮೋರೆಯನ್ನು ಕಂಡಕೂಡಲೇ ವಿದೇಶಿಯರು ಇವರು ಭಾರತೀಯರೆಂದು ಗುರುತಿಸಿ ಬಿಡುತ್ತಾರೆ! ನಮ್ಮ ಆಹಾರ, ವೇಷ, ಭಾಷೆ, ವೇದಾಂತ, ವ್ಯವಹಾರಗಳಲ್ಲಿ ಅನಂತ ಪ್ರಕಾರಗಳಿದ್ದರೂ ಹೊರದೇಶದವರಿಗೆ ನಾವು ಕಾಣಿಸುವುದು ಭಾರತೀಯರಾಗಿ. ಇದು ಒಂದು ವಿಚಿತ್ರ ಸಂಗತಿಯೇ ಅಲ್ಲವೆ? ಹೌದು–ಈ ವೈಚಿತ್ರ್ಯದ ಬಗ್ಗೆ 'ಮರುಳಸಿದ್ಧ'* ಕವಿ ಆಶ್ಚರ್ಯ ಪಟ್ಟಿದ್ದಾನೆ. ಅವನ ಭಾರತ ವರ್ಣನೆ ಹೇಗಿದೆ ಗೊತ್ತೆ?

ಭಾರತ ಸಾಗರದಲ್ಲಿ ತೆರೆಗಳೋ ಕೋಟಿ ಕೋಟಿ ಕೋಟಿ;
ಒಂದು ತೆಗೆವ ದನಿಯಲ್ಲೆ ಹತ್ತು ಹದಿನೈದು ತರದ ಧಾಟಿ!
ಒಂದಕೊಂದ ಹೋಲಿಸಲು ಸಾಧ್ಯವೇ? ಬಣ್ಣಕ್ಕೆಲ್ಲಿ ಸಾಟಿ?
ಎತ್ತರದಲ್ಲೂ ಏರುಪೇರು! ಬಾನ್ಗೆಲ್ಲಿ ನೆಲದ ಭೇಟಿ?

ಕಡಲಲೆಗಳಂತೆ ಗಾಳಿಗಳು ಕೂಡ ತಣ್–ಬಿಸಿಯ ಹಲವು ಮಾಟ
ಮೋಡಗಳ ಸೈನಿಕರು ಕೂಡ ತೋರುವರು ಬೇರೆ ಬೇರೆ ಅಧಟ!
ತೀರಗಳ ಮರಗಳೊಂದೆರಡೆ? ಲೆಕ್ಕಿಸುವ ಬುದ್ಧಿ ಪಡೆಗು ಗೊರಟ
ಜಲಯಾನಕೇನು ರೂಪೊಂದೇ ಭಾಂಡಿಗಳ ಚೂರಿನಷ್ಟು ವಿಕಟ!

---

* ಶ್ರೀಧರರ ಕಾವ್ಯನಾಮ

ಅಲ್ಲೆರಗುವಂಥ ಸಿಡಿಲೊಂದು ಬಗೆಯದೇ? ಅಲ್ಲ ಅಲ್ಲ ಅಲ್ಲ
ಅದರೊಡನೆ ಹೊಳೆವ ಮಿಂಚುಗಳನೆಣಿಸಲೀತಲೆಯೆ ಸಾಲದಲ್ಲ!
ಆ ಕಡಲ ಜೀವ–ಜಡ ರತ್ನರಾಶಿಗಳನಳೆಯಲಾರಿಗಳವು?
ಅದರೊಡಲ ಹೊನಲ ಹೊಕ್ಕುಳನು ಹೊಕ್ಕರೋ ಸೆಳವು ಸೆಳವು ಸೆಳವು!

ಜಡಜಭವನು ನಿರ್ಮಿಸಿದ ಭುವನಗಳ ಮೊದಲ ಪಂಕ್ತಿಯಾಗಿ
ಕಡೆಯೆ ನಂಜಮರ್ದುಗಳನುಗುಳಿ ದೈತ್ಯರನು ಕೊಂದು ಕೂಗಿ
ಬುಡದೊಳಮೃತಶಿಲೆಮಾಡಿ ಹೂಳಿ ಕೆಡದಂತೆ ಸುರರನಿಟ್ಟು
ನಡುವೆ ತೇಲಿಸಿದೆ ಮನುಜಕುಲವ ಭಾರತದ ಕಡಲ ಕಟ್ಟು!

ಅನಂತಾವತಾರಗಳ ತಾಳಿದೀ ಕಡಲತಳದೊಳಲ್ಲಿ
ಅನಿತ್ಯಗಳ ನಿತ್ಯವೂ ಹೊತ್ತಿರುವ ಸತ್ಯರೂಪದಲ್ಲಿ
ಕನತ್ಕನಕ ತತ್ವ ಪ್ರದೀಪಿಕೆಯ ಬೆಳಗುತಿರುವ ಶೇಷ
ಜನಾಂತಸ್ಥ ವಿಶ್ವಾತ್ಮ ಸಾರುತಿಹ ಪುಣ್ಯ ಶಾಂತಿ ಘೋಷ!



# ೧

# ಶೃಂಗಾರ ಸಂದೇಶ

ವಿಂಧ್ಯ, ಹಿಮಾಚಲ, ಯಮುನೆ, ಗಂಗೆಯರ ಗುರುತುಗಳನ್ನು ರವೀಂದ್ರರು ಎತ್ತಿ ಹೇಳಿದರೆ ಮರುಳಸಿದ್ಧ ಕವಿ ಭಾರತದೇಶವನ್ನೆ ಒಂದು ಸ್ವತಂತ್ರ ಸೃಷ್ಟಿ, ಒಂದು ವೈವಿಧ್ಯಪೂರ್ಣ ಬ್ರಹ್ಮಾಂಡ. ಒಂದು ಮಹಾಜೀವಸಾಗರ ಎಂದು ಅದ್ಭುತವಾಗಿ ಬಣ್ಣಿಸಿದ್ದಾನೆ; ಅದರಲ್ಲಿಯ ಜೀವ–ಜಡ ಪದಾರ್ಥಗಳ ನಮೂನೆಗಳನ್ನು ಎಣಿಸಲಸಾಧ್ಯ ಎಂದು ಬಿಟ್ಟಿದ್ದಾನೆ! ಜಗತ್ತಿನಲ್ಲೇ ಅತ್ಯುನ್ನತವೆನಿಸಿದ ಗೌರೀಶಂಕರವೂ ಅತ್ಯಂತ ಆಳವಾದ ಜಲಪಾತವೆನಿಸಿದ ಜೋಗಜಲಪಾತವೂ ನಮ್ಮ ದೇಶದಲ್ಲಿವೆ. ನಮ್ಮ ಜನಗಳಲ್ಲಿರುವ ಗುಣ–ಬುದ್ಧಿಗಳಲ್ಲೂ ಇಂಥ ತಾರತಮ್ಯವಿರುವುದು ನಮಗೆಲ್ಲ ತಿಳಿದ ಸಂಗತಿಯಲ್ಲವೇ? ವಿದೇಶದ ಪಂಡಿತರು ಹಿಂದು ಧರ್ಮವೆಂದರೇನೆಂಬುದನ್ನು ಲಕ್ಷಣಿಸಿ ಹೇಳಲಾರದೆ ಹೋದರು. ಹಾಗೇ ಒಂದು ದೇಶವಾದರೂ ಹಿಂದೀಯ ಜನಗಳಾದ ನಾವಾದರೂ ವರ್ಣನೆಗೆ. ವರ್ಗೀಕರಣಕ್ಕೆ ನಿಲುಕದವರಾಗಿದ್ದೇವೆ. ಆದರೆ ನಮ್ಮ ತಳ ಮಾತ್ರ ಒಂದೇ. ಈ ಐಕ್ಯದ ತಳವನ್ನು ನಾವಿಂದು ಕಂಡುಕೊಳ್ಳಬೇಕಾಗಿದೆ. ಏಕೆ? ಏಕೆ ಎಂಬ ಪ್ರಶ್ನೆಗೆ ಉತ್ತರವಾಗಿ "ಅಂಬಿಕಾತನಯದತ್ತ"ರು ಇಂದಿನ ಶೃಂಗಾರ ದೃಷ್ಟಿಯನ್ನು ಹೀಗೆ ನಮ್ಮೆದುರಿಡುತ್ತಾರೆ:

ಎಂದಿನಿಂದಲೊ ಏನೋ ಒಳಗೊಂದು ಸಖ–ಜೀವ
'ಸಖೀ! ಬಾರೆ ಬಾ! ಎಂದು ಕೂಗುತಿದೆ
'ಮುಂದಿನ ಪಥದಲಿ ಸಖಿಯಾಗು ಬಾ' ಎಂದು
ನನ್ನ ಮನೋರಥ ನೂಗುತಿದೆ
ಬಾನಿಂದ ಬಾನಿಗೆ ಹಾಡಿನ ತಾನೊಂದು
ಸಖಿ–ಸಖಿ–ಸಖಿಯೆಂದು ತೂಗುತಿದೆ
'ನಾನೂ ನೀನೂ ಸಖ–ಸಖಿ ಸಮ–ಸುಖಿ'
ಎಂದೆನುತ ಮುಂದಕೆ ಹೋಗುತಿದೆ

(ಸಖೀ ಗೀತ: ೮೮೯–೮೯೬ ಸಾಲು)

ಶೃಂಗಾರ ರಸಕ್ಕೆ ರತಿಯು ಸ್ಥಾಯಿಭಾವ. ವಿಶಾಲಾರ್ಥದಲ್ಲಿ ರತಿಯೆಂದರೆ ಪ್ರೇಮ, ಪ್ರೀತಿ. ಮೇಲಿನದು ದಾಂಪತ್ಯಪ್ರೇಮವನ್ನು ವ್ಯಂಜಿಸುವ ಉದಾಹರಣೆ. ಕನ್ನಡ–ಭಾರತ ದಂಪತಿಗಳ ಪ್ರೇಮವಿಂದು ಗೆಳೆತನದ ತತ್ವವನ್ನಾಧರಿಸಿ ನಿಂತಿದೆ. ಗೆಳೆತನಕ್ಕೆ ವ್ಯಕ್ತಿ ಗೌರವದ ಸ್ಥೂಲ ಸಮಾನಸ್ಕಂಧತೆ ಅಗತ್ಯ. ಶೀಲ–ಅಭ್ಯಾಸ–ಅಭಿರುಚಿಗಳಲ್ಲಿ ಸ್ವಲ್ಪ ಭೇದವಿದ್ದರೂ ಹೆಚ್ಚಿನ ಹೋಲಿಕೆಯಿದ್ದಲ್ಲಿ ಸಮಭಾವವು ದೃಢಗೊಳ್ಳುವುದು ಸುಲಭಸಾಧ್ಯ. ಕೌಟುಂಬಿಕ ಜೀವನದ ಗುರಿಯ ಬಗ್ಗೆ ದಂಪತಿಗಳಲ್ಲಿ ಐಕಮತ್ಯವಿರುವುದು ಅನಿವಾರ್ಯ. ಇಂಥ ಐಕಮತ್ಯಕ್ಕೆ ಶಿಕ್ಷಣ–ಸಂಸ್ಕಾರಗಳ ನೆರವೇ ಆಧಾರ. ಹೃದಯ–ಬುದ್ಧಿಗಳ ಸಮಾನ ಔನ್ನತ್ಯವು ಇಬ್ಬರಿಗೂ ಸಮಮಟ್ಟದಲ್ಲಿರುವುದನ್ನು ಧ್ವನಿಸುವ ಮೇಲಿನ ಪದ್ಯದಲ್ಲಿ ಸಖೀತ್ವದ ಮಟ್ಟಕ್ಕೆ ಬಂದು ನಿಲ್ಲೆಂದು ಪತಿಯೊಬ್ಬನು ಸತಿಗೆ ಕರೆಗೊಡುತ್ತಾನೆ. ಇಂಥ ಕಾಂತಸಂಮಿತಿಯ ಕರೆಗೆ ಓಗೊಡದ ಸುಸಂಸ್ಕೃತ ಕಾಂತೆ ಯಾವಳಿದ್ದಾಳು?

ನಮಗಿಂತ ಹಿರಿಯರಲ್ಲಿ ಹಾಗೂ ದೇವರಲ್ಲಿ ನಮಗಿರುವ ಪ್ರೀತಿ ಅಥವಾ ಪ್ರೇಮವು ಭಕ್ತಿಯೆನಿಸುತ್ತದೆ. ಭಕ್ತಕವಿಗಳಿಗೆ ಹೆಸರಾದ ನಾಡು ನಮ್ಮದು. 'ಮಾತೃದೇವೋಭವ' ಎಂಬುದು ಪ್ರಾಚೀನ ಕಾಲದಿಂದ ಭಾವವುಳ್ಳ ಇಂದಿನವರೆಗೂ ಗೌರವಿಸಲ್ಪಡುವ ಸಂದೇಶ. ಈ ನಿತ್ಯನೂತನವಾದ ಭಕ್ತಿ ಮನೋಭೂಮಿಕೆಯಿಂದ 'ವಿನಾಯಕ'ರು ಕೊಟ್ಟ ಆದರ್ಶ ತಾಯಿ ಹೇಗಿದ್ದಾಳೆ ಗೊತ್ತೇ?

ಪ್ರೇಮವೆನಗಾರಾಧ್ಯವಿರಲದಕೆ ನೈವೇದ್ಯ
ವಲ್ಲವೆ ನನ್ನಣುಗರೆಳೆಯ ನಗೆಯು
ಅವರ ಮೃದು ಮಧುರ ಧ್ವನಿಯಲ್ಲವೇ ಘನ ಮಂತ್ರ?
ಇದನುಳಿದುಪಾಸನೆಯು ಯಾವ ಬಗೆಯು?

(ಬಾಳ ದೇಗುಲದಲ್ಲಿ : ೫೨ನೇ ಪುಟ ೫ನೇ ನುಡಿ)

ತನ್ನ ಮಕ್ಕಳ ಹೃದಯದಲ್ಲಿ ತನ್ನ ಬಗ್ಗೆ ಭಕ್ತಿ ಹುಟ್ಟುವಂತೆ ಬಾಳುವ ತಾಯಿ ವಾತ್ಸಲ್ಯಮಯಿಯಾಗಿರಬೇಕು. 'ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾನಭವತಿ' ಎಂದು ಹಿಂದೆ ಶಂಕರಾಚಾರ್ಯರು ತಾಯಿಯ ಆದರ್ಶ ತಾಯ್ತನವನ್ನು ಕೊಂಡಾಡಿದ್ದು ಎಲ್ಲರಿಗೂ ತಿಳಿದ ಸಂಗತಿ. ಅದರಲ್ಲಿ ಮಕ್ಕಳು ತನ್ನನ್ನು ಭಕ್ತಿಯಿಂದ ನೋಡಲಿ ಬಿಡಲಿ– ತಾನೆಂದೂ ಅವರಲ್ಲಿ ತನಗಿರುವ ವಾತ್ಸಲ್ಯವನ್ನು ಕಳೆದುಕೊಳ್ಳೆನು ಎಂಬ ಹಿರಿಯ ತಾಯ್ತನವು ಧ್ವನಿಸಿದೆ. ವಿನಾಯಕರ ನುಡಿಯಲ್ಲಿ ೧೨ನೆಯದಾದ–

ಬಾಳ್ವಿಕೆಯ ಒಗಟಕ್ಕೆ ಬಾಳುವೆಯೆ ಉತ್ತರವು
'ಎಂತಿರಲಿ?' 'ನಿನ್ನಿರವು ಎಂತೊ ಅಂತೆ!'
ಇದ್ದುದಕೆ ಇಲ್ಲದರ ಕುಂದಣವ ಬಳಸದಿರು
ವಿದ್ಯೆ, ಸಂಪದ, ಬುದ್ಧಿ–ಎಲ್ಲ ಕಂತೆ!

ಎಂಬುದು ತಾಯಿಯ ತಾಯ್ತನದ ಭಾವಾವೇಶವನ್ನು ಮುಗಿಲಿಗೊಯ್ದು ಮುಟ್ಟಿಸಿದೆ. ಶಂಕರರ ಮಾತಿನಂತೆಯೇ ಮಕ್ಕಳನ್ನು ಹಡೆದು ಅವರನ್ನು ಸಾಕಿಸಲಹುವದೆ ತನ್ನ ಪರಮಾದರ್ಶ, ಪರಮಸಿದ್ಧಿ ಎಂದು ತಿಳಿದು. ತಾಯ್ತನದ ವಾತ್ಸಲ್ಯ–ಮಮತೆಗಳು ವಿದ್ಯೆ–ಸಂಪತ್ತು ಬುದ್ಧಿಗಳೆಲ್ಲಕ್ಕೂ ಹೆಚ್ಚಿನವೆಂದು ಭಾವಿಸುವ ತಾಯಿಗೆ ೫ನೆಯ ನುಡಿಯಲ್ಲಿ ಹೇಳಿದಂತೆ ಮಕ್ಕಳ ಲೀಲೆಯೇ ಅವು ಮಾಡುವ ತನ್ನ ಆರಾಧ್ಯದೈವತವಾದ ಪ್ರೇಮದ ಉಪಾಸನೆ ಎನಿಸುವುದು ಸಹಜವಲ್ಲವೆ?

ಈ ಸುಮಾತೃತ್ವದ ಆದರ್ಶವನ್ನು ಯಾವ ಭಾರತೀಯ ತಾಯಿ ಮೆಚ್ಚಳು? ನಮ್ಮ ಕಲಿತ ಆಧುನಿಕ ಮಹಿಳೆಯಾದರೂ ಇಂದು ಇದೇ ಆದರ್ಶವನ್ನು ಎತ್ತಿ ಹಿಡಿದು ಸಮಾಜದಲ್ಲಿ ಮಾನ್ಯಳಾಗುತ್ತಿದ್ದಾಳೆ. 'ಮಕ್ಕಳು ನನ್ನನ್ನು ಎಷ್ಟು ಪ್ರೀತಿಸುವುವೋ ಅಷ್ಟೇ ನಾನು ಅವರನ್ನು ಪ್ರೀತಿಸುವೆನಲ್ಲದೆ, ಅವರ ಪ್ರೀತಿ ಕಡಿಮೆಯಾದಲ್ಲಿ ಅವರ ಬಗ್ಗೆ ಇರುವ ನನ್ನ ಪ್ರೀತಿಯೂ ಕಡಿಮೆಯಾದೀತು' ಎಂಬ ತರ್ಕಶುದ್ಧಿ ಭಾರತದ ಹಾಗೂ ಕನ್ನಡದ ತಾಯ್ತನಕ್ಕಿದ್ದಿಲ್ಲ–ಈಗಲೂ ಇಲ್ಲ.

ಹಿರಿಯರು ಕಿರಿಯರ ಬಗ್ಗೆ ತಾಳುವ ಪ್ರೇಮವೇ ವಾತ್ಸಲ್ಯ. ಅಂಥ ವಾತ್ಸಲ್ಯ ಸಂಪನ್ನ ತಾಯಂದಿರ ಸಂಖ್ಯೆ ಹೆಚ್ಚಿದ ಸಮಾಜದಲ್ಲಿ ಭಕ್ತಿಸಂಪನ್ನರಾದ ಮಕ್ಕಳು ಹೆಚ್ಚಾಗಲಾರರೇ? ಎಂದು ಯಾರಾದರೂ ಕೇಳಬಹುದು. ಹೌದೆಂದು ಯಾರಾದರೂ ಪಕ್ಕನೆ ಉತ್ತರವನ್ನೂ ಕೊಟ್ಟು ಬಿಡಬಹುದು. ಆದರೆ ತನ್ನ ಹೃದಯದಲ್ಲಿರುವ ವಾತ್ಸಲ್ಯವನ್ನು ತನ್ನ ವರ್ತನೆಯಲ್ಲಿ ವ್ಯಕ್ತಗೊಳಿಸುವ ಕಲೆಯೂ ತಾಯಿಗೆ ಗೊತ್ತಿರಬೇಕು. ಆಯಾ ಮಗುವಿನ ಗ್ರಹಣಶಕ್ತಿಯ ಬಗೆಯನ್ನೂ ಆಳವನ್ನೂ ಅರಿತು ವರ್ತಿಸದ ತಾಯಂದಿರ ಮಕ್ಕಳ 'ತಾಯಿಯಂತೆ ಕರು, ನಾಯಿಯಂತೆ ಬಾಲ' ಎಂಬ ಸೂತ್ರಕ್ಕೆ ಅಪವಾದವಾಗಿ ಬೆಳೆದದ್ದುಂಟು ಅಂಥ ಸಂದರ್ಭದಲ್ಲಿ ವಾತ್ಸಲ್ಯನಿರ್ಭರಳಾದ ತಾಯಿಯು–

'ಮಕ್ಕಳಿವರೇನಮ್ಮ ಮಕ್ಕಳಿವರೇನಮ್ಮ
ಮೂವತ್ತು ಮೂರು ಕೋಟಿ?'

(ಅಂಬಿಕಾತನಯದತ್ತರ ಗರಿ: ೫೧ನೇ ಪುಟ)

ಎಂದು ಅಧಿಕೃತವೆಂದು ತೋರುವಂತೆ ಮಕ್ಕಳನ್ನು ಹಳಿದು ಅಳುವ ಪ್ರಸಂಗ ಉಂಟಾಗಬಹುದು ಅಥವಾ 'ತಾಯಿಯಂತೆ ಕರು' ಎಂಬ ಮಾತಿನ ಮತ್ತೊಂದು ಮಗ್ಗುಲಿಗೆ ಮಕ್ಕಳು ಉದಾಹರಣೆಯಾಗಬಹುದು–ಅರ್ಥಾತ್ ಅವಿವೇಕಿಗಳಾಗಬಹುದು. ಹಾಗಲ್ಲದೆ ತಾಯಿಯಲ್ಲಿ ಮೇಲೆ ಹೇಳಿದ ಗುಣ ಹಾಗೂ ಕಲೆಗಳೆರಡೂ ಇದ್ದಾಗ ಕೂಡ ಮಕ್ಕಳು ಅವಿವೇಕಿಗಳಾದರೆ ಅದಕ್ಕೆ ಬೇರೆಯ ಕಾರಣಗಳನ್ನು ನಾವು ಹುಡುಕಬೇಕಾಗುತ್ತದೆ. ಅಂಥ ಕಾರಣಗಳ ಕ್ಷೇತ್ರ ಅವುಗಳ ಕುಟುಂಬ ಮತ್ತು ಸುತ್ತಲಿನ ಸಮಾಜ. ಆದುದರಿಂದ ದಾಂಪತ್ಯದಲ್ಲಿ ಸತ್ಯದ ಆದರ್ಶವನ್ನು ಮೆಚ್ಚಿಕೊಂಬ ಇಂದಿನ ಸಮಾಜದಲ್ಲಿ ಆದರ್ಶ ತಾಯಿಗೆ ಹೃದಯ ಸೌಂದರ್ಯದಂತೆ ಬುದ್ಧಿಸೌಂದರ್ಯವೂ ಇರುವುದವಶ್ಯವೆಂಬುದು ಈ ಸಂದರ್ಭದಲ್ಲಿ ಗೃಹೀತವಾದ ಅಂಶ.

ತಾಯಿಗಿರುವ ಅಥವಾ ತಂದೆಗಿರುವ ಮಕ್ಕಳ ಮೇಲಿನ ಮಮತೆಯ ಚೆಂದವನ್ನು 'ಮರುಳಸಿದ್ಧ'ಕವಿಯ 'ಮೇಘನಾದ'ದ ೬೦ನೇ ಪುಟದ 'ಮಕ್ಕಳಿಗೆ ಕರೆ'ಯಲ್ಲಿ ಕಾಣಬಹುದು.

ನಂದನವನದರವಿಂದಳೇ,
ಮಂದಾರದ ಮಕರಂದಗಳೇ,
ರಸರೂಪಗಳೇ.
ಹೊಸ ದೀಪಗಳೇ.
ದೆಸೆದೆಸೆಗೋಡುವ ಚಿಟ್ಟೆಗಳೇ,
ಮಿಸುನಿಯ ರಾಗದ ಮಿಟ್ಟೆಗಳೇ
ಆನಂದಾಂಭೋರಾಶಿಯ ತೆರೆಗಳೆ
ತೇಲಿ ತೇಲಿ ಬನ್ನಿ;
ಚೀನಾಂಬರವನು ತೊಡಿಸುವೆ, ತಲೆಯನು
ತೂಗಿ ತೂಗಿ ಬನ್ನಿ!
ತೆಕ್ಕನೆ ಬನ್ನಿ!
ಫಕ್ಕನೆ ಬನ್ನಿ
ಮಂಗಲಮಯ ಜಲ್ಪನೆಗಳಿರಾ
ತಂಗಾಲದ ಕಲ್ಪನೆಗಳಿರಾ
ತಾವರೆಗಳಿರಾ ದೇವತೆಗಳಿರಾ
ನೀವೇ ನನ್ನುಸಿರು;
ನಾನೇ ಕರೆಯಲು ನೀವೇ ನೆರೆಯಲು
ಲೀಲೆಗೆ ಮತ್ತೆ ಶುರು!

ಮಾತೃಭಕ್ತಿ–ದೈವಭಕ್ತಿಗಳೆರಡರ ಮಧುರ ಸಮನ್ವಯವನ್ನು 'ಅಂಬಿಕಾತನಯದತ್ತ'ರ 'ಗಂಗಾವತರಣ'ದಲ್ಲಿ ಚೆನ್ನಾಗಿ ನೋಡಬಹುದು. ಆ ಕವನದ ಪ್ರಾಣಸ್ಥಲಗಳನ್ನಿಲ್ಲಿ ಗುರುತಿಸಬುದು:

ಕರು ಕಂಡ ಕರುಳೆ
ಮನ ಉಂಡ ಮರುಳೆ
ಉದ್ದಂಡ ಅರುಳೆ
ಸುಳಿ ಸುಳಿದು ಬಾ
ಶಿವಶುಭ್ರ ಕರುಣೆ
ಅತಿ ಕಿಂಚಿದರುಣೆ

ವಾತ್ಸಲ್ಯವರುಣೆ
ಇಳಿ ಇಳಿದು ಬಾ
ಇಳಿದು ಬಾ ತಾಯಿ
ಇಳಿದು ಬಾ

ಮತ್ತು–

ಹರಕೆ ಸಂದಂತೆ
ಮಮತೆ ಮಿಂದಂತೆ
ತುಂಬಿ ಬಂದಂತೆ
ದುಮ್ಮುಮೆಂದಂತೆ ದುಡುಕಿ ಬಾ
ನಿನ್ನ ಕಂದನ್ನ ಹುಡುಕಿ ಬಾ
ಹುಡುಕಿ ಬಾ ತಾಯಿ ಹುಡುಕಿ ಬಾ

ಎಂಬಲ್ಲಿ ಆದರ್ಶಪುತ್ರನ ಮಾತೃಭಕ್ತಿಯ ಪರಾಕಾಷ್ಠೆಯು ಹರಿದಿದೆ. ಗಂಗೆ ಪಾವಿತ್ರ್ಯಕ್ಕೆ ಹೆಸರಾದವಳು. ಇದು ಮಕ್ಕಳ ದೃಷ್ಟಿಯಲ್ಲಿ ತಾಯಿಯ ಜೀವನ ಹಾಗೂ ಚಾರಿತ್ರಗಳ ಪಾವಿತ್ರ್ಯ ಎಷ್ಟು ಗಣ್ಯ ಎಂಬುದನ್ನೂ ಹೊಳೆಯಿಸುತ್ತದೆ. ಅದೇ ಮೇರೆಗೆ ಅದು ಎಷ್ಟು ಗೌರವಾರ್ಹ ಎಂಬುದೂ ಧ್ವನಿತವಾಗುತ್ತದೆ. ಜೊತೆಗೆ ಅದನ್ನು ಗುರುತಿಸಿ, ಮೆಚ್ಚಿ, ಅದಕ್ಕೆ ಶರಣಾಗುವ ಮಗ ಅಥವಾ ಮಗಳ ಸಂಸ್ಕೃತಿಯ ರೇಖೆಯೂ ಸುಸ್ಪಷ್ಟವಾಗುತ್ತದೆ. ಅಂಥ ತಾಯಿಗೆ ಇಂಥ ಮಕ್ಕಳಿರುವುದು ಇಂದಿನ ಕವಿದರ್ಶನ ಕಂಡ ಉನ್ನತ ಆದರ್ಶ. ಕನ್ನಡದ ನಾಡದೇವತೆ ಭುವನೇಶ್ವರಿಯಾದುದರಿಂದ ಜಗನ್ಮಾತೆಯ ರೂಪದಲ್ಲಿ ದೇವರನ್ನು ನೆನೆಯುವ ರೂಢಿ ಸಹಜವಾಗಿದೆ. ನಮಗೆ ನಮ್ಮ ನಾಡೂ ತಾಯಿ, ನುಡಿಯೂ ತಾಯಿ! ಇದರ ಮೇಲೆ ಗಂಡು ಕವಿಗಳು ತಾಯ ಆರಾಧಕರಾದುದು ಮಾನಸಶಾಸ್ತ್ರೀಯವಾಗಿಯೂ ಅತ್ಯಂತ ನೈಸರ್ಗಿಕ. ನಮ್ಮ ಸಂಸ್ಕೃತಿಯಲ್ಲಿ ಈ ಭಕ್ತಿಯೇ ಗಂಡಸಿನ ಪೌರುಷ–ಪರಾಕ್ರಮಗಳ ಶಕ್ತಿ. ಈ ಮಾತಿಗೆ 'ಗರಿ'ಯಲ್ಲಿರುವ 'ಕನಸಿನೊಳಗೊಂದು ಕಣಸು' ಎಂಬ ಕವನ ನಿದರ್ಶನವಾಗಿದೆ. ಅದರ ಕೊನೆಯ ಸಾಲುಗಳು:

'ಚಂಡಿ ಚಾಮುಂಡಿ ಪೇಳ್ ಬೇಕಾದುದೇನು?'
'ಗಂಡುಸಾದರೆ ನಿನ್ನ ಬಲಿ ಕೊಡುವೆಯೇನು?'

ಮನವು ನಡುಗಿತು ತನುವು ನವಿರಿಗೊಳಗಾಯ್ತು
ನೆನವು ನುಗ್ಗಿತು–ಹೊರಗೆ ಕಂಡೆ–ಬೆಳಗಾಯ್ತು.

ಇದರಲ್ಲಿ ರಂಜಕವಾದ ಶೃಂಗಾರ ಸಾಹಸದ ಮನೋಭೂಮಿಕೆಯ ಛಾಯೆಯನ್ನು ಕಾಣಬಹುದು. ಸ್ತ್ರೀ–ದಾಕ್ಷಿಣ್ಯಪ್ರಧಾನವಾದ ಧೀರೋದಾತ್ತ ಮನೋಧರ್ಮವುಳ್ಳ ಪುರುಷ ಪಾತ್ರಗಳೇ ಅಥವಾ ಶೃಂಗಾರವೀರರು. ಅವರ ಪ್ರೇಮಾವೇಶವು ಮಾತೃನಿಷ್ಠವಾದಾಗ

ಸಾತ್ವಿಕ ಸೌಂದರ್ಯ ತಾಳಿದರೆ. ಪ್ರಿಯಾನಿಷ್ಠವಾದಾಗ ರಾಜಸಸೌಂದರ್ಯವನ್ನು ತಾಳುತ್ತದೆ. ಹಿಂದಿನ ಶೃಂಗಾರವೀರರಿಗೆ ಹೆಚ್ಚಾಗಿ ಮುಗ್ಧರೂ ಪವಿತ್ರಶೀಲರೂ ಪತಿವ್ರತೆಯರೂ ಆದ ಸ್ತ್ರೀಯರು ಮೆಚ್ಚಿನವರಾಗಿದ್ದರೆ, ಇಂದಿನ ಶೃಂಗಾರವೀರರಿಗೆ ಪಾವಿತ್ರ್ಯ–ಪಾತಿವ್ರತ್ಯಗಳ ಜೊತೆಗೆ ಮುಗ್ಧತೆಯ ಬದಲು ಪ್ರೌಢತೆ ಅಥವಾ ಮಧ್ಯಮತೆ ಅಪೇಕ್ಷಣೀಯವೆನಿಸಿದ್ದು ಗಮನಾರ್ಹ. ದಾಂಪತ್ಯಕ್ಕೆ ಸಖ್ಯ ಆದರ್ಶವಾದುದೇ ಈ ಮೆಚ್ಚಿಗೆಗೆ ಕಾರಣ. ಆದರೆ ನಮ್ಮ ಸಮಾಜದಲ್ಲಿಯ ವಸ್ತುಸ್ಥಿತಿ ಸ್ವಲ್ಪ ಹಳೆಯ ಕಾಲದ್ದೇ ಎಂಬುದು ಸ್ಪಷ್ಟ. ಕವಿಗಳೂ, ಕಾದಂಬರಿಕಾರರೂ, ಕತೆಗಾರರೂ, ಇದ್ದದ್ದರ ಜೊತೆಗೆ ಇರಬೇಕಾದ ಬಗೆಯನ್ನೂ ಕಲ್ಪಿಸುವುದು ಸಹಜವಲ್ಲವೆ? ಅಂಥ ಇರಬೇಕೆನಿಸುವ ಶೃಂಗಾರನಾಯಿಕೆಯ ಒಂದು ಚಿತ್ರವನ್ನು 'ಆನಂದಕಂದ'ರ 'ವಿರಹಿಣಿ'ಯಲ್ಲಿ ಕಾಣಬಹುದು.

ಕೆಳದಿಯರನೊಡಗೊಂಡು ಕೆಲೆ ಕೆಲೆ–  
  ದುಲಿದು ಮೇಲಕೆ ಹಾರಿ,  
ಇಳೆಯವರನಣಕಿಸುತೆ ಪಕ್ಕವ  
  ಕೆಳರಿ ಬಾನೆಡೆಗೇರಿ,  
ತಳರುತಿಹೆ ನೀನೆಲ್ಲಿ? ಹಕ್ಕಿಯ  
  ಕುಲದರಸ ಹೇಳಿಲ್ಲಿ?  
ಗೆಳೆಯನೆಡೆ ದೊರೆಯುವುದೆ ನೀನಡೆ–  
ದುಳಿವ ದಾರಿಯೊಳೆಲ್ಲ?  
  ದೊರೆತರಾತಗೆ ನೀನು...  
ದೊರೆತರಾತಗೆ ನನ್ನ ಬಾಳಿನ  
ಕೊರಗನರುಹುವೆಯೇನು?

(ಹಾರಯ್ಕೆ: ೩೫ನೇ ಪುಟ)

ಇಂಥ ಸಹೃದಯೆಯಾದ ಆಧುನಿಕ ಪ್ರೇಯಸಿಯು ಇಂದು ಆಕರ್ಷಕಳು– ಹಿಂದೆಯೂ ಗಾಂಧರ್ವಪ್ರಣಯ ಇಂಥವಳ ಪಾತ್ರ ದೊಡ್ಡದಾಗಿತ್ತು. ತಾರುಣ್ಯವು ನಿತ್ಯನೂತನವಹುದಾದರೆ, ಈ 'ಯಕ್ಷ–ಯಕ್ಷಿ'ಯರ ಶೃಂಗಾರೋತ್ಸಾಹವೂ ನಿತ್ಯನೂತನವಾಗಿ ಉಳಿಯದಿರದು. ಬಿಸಿನೆತ್ತರಿಗೆ ಭಾವಾವೇಶ–ಭಾವೋದ್ರೇಕಗಳೇ ರಮ್ಯವೆನಿಸುವುದು ಸ್ವಾಭಾವಿಕ. ಸುಶಿಕ್ಷಿತ ನಾಯಕ–ನಾಯಿಕೆಯರಿಗೆ ಕಲ್ಪನಾಶಕ್ತಿ ಕಡಿಮೆಯಿರುವ ಅರಸಿಕ ಪ್ರೇಮವ್ಯವಹಾರ, ರುಚಿಸದು. ಆವೇಶವಿಲ್ಲದ ಸಪ್ಪೆ ಶೃಂಗಾರದಲ್ಲಿ ರೋಮಾಂಚಕತೆಯಿಲ್ಲ, ಸಸ್ಮಿತ ವಿಸ್ಮಿತವಿಲ್ಲ, ಅರ್ಥವ್ಯಕ್ತಿಯಿಲ್ಲ. 'ವಿರಹಿಣಿ'ಯ ಕರೆವೆನೇನೆಂದು' ಎಂಬ (೨೩ನೇ ಪುಟ) ಹಾಡಿನಲ್ಲಿ ಅವಳ ರಸಿಕ ಕಲ್ಪನಾ ವಿಲಾಸ ಬಹಳ ಚೆನ್ನಾಗಿ ಮೂಡಿದೆ:

'ಚೆಲ್ವ' ಎಂದೆನಲೆ! 'ಪ್ರಿಯ ವಲ್ಲಭಾ' ಎಂದೆನಲೆ!  
'ನಲ್ಲ' ಎಂದೇ ಕೂಗಿ ಕರೆದು ಬಿಡಲೆ!

'ಚೆನ್ನ' ಎನ್ನುವುದಿಂಪೊ! 'ರನ್ನ' ಎಂದರೆ ಸೊಂಪೊ!
'ನನ್ನೊಲವೆ' ಎಂದು ಕೂಗುವುದೆ ಪೆಂಪೊ?

'ಅರಸಿಕೇಷು ಕವಿತ್ವನಿವೇದನಂ ಶಿರಸಿ ಮಾಲಿಖ. ಮಾಲಿಖ, ಮಾಲಿಖ' ಎಂದು ಹಿಂದೊಬ್ಬ ಕವಿ ಬ್ರಹ್ಮನನ್ನು ಬೇಡಿಕೊಂಡಂತೆ ಇಂದಿನ ನವಯುವಕರಾದರೂ ತಮ್ಮ ರಸಿಕ ಕಲ್ಪನೆಯ ವ್ಯವಹಾರವನ್ನು ಅರಸಿಕೆಯರಲ್ಲಿ ನಡೆಸಲು ಒಪ್ಪರು. ಆದರೆ ಬದಲಾವಣೆ ಸ್ವಲ್ಪವಾದರೂ ಆಗಿರುವ ಇಂದಿನ ಸಮಾಜದ ಶಿಕ್ಷಿತ ಮಟ್ಟದಲ್ಲಿ 'Bold Masculinity and shy Famininity' ಗಂಡಸಿಗೆ ಧೈರ್ಯವು ಸೌಂದರ್ಯ, ಹೆಂಗಸಿಗೆ ಲಜ್ಜೆಯೇ ಸೌಂದರ್ಯ' ಎಂಬ ಆದರ್ಶವು ಸಾಮಾನ್ಯ ಜೀವನದಲ್ಲಿ ಅತಿ ಸ್ಪಷ್ಟವಾಗಿ ಎಲ್ಲೆಡೆ ಎದ್ದು ಕಾಣುವುದಿಲ್ಲ; ಆದರೆ ಕಾವ್ಯದಲ್ಲಿ ಅದು ಅಷ್ಟೇನೂ ಮಸುಳಿಸಿಲ್ಲ. ಈ ಪ್ರಕಾರ ಭಾವಾವೇಶ ಪ್ರಖರವಾಗಿ ತೋರುವ ತರುಣ, ಪ್ರಿಯ–ಪ್ರೇಯಸಿಯರ ವಿಪ್ರಲಂಭ ಶೃಂಗಾರವನ್ನು ಶ್ರೀ ಕಡೆಂಗೊಡ್ಲು ಶಂಕರಭಟ್ಟರ 'ಹೊನ್ನಿಯ ಮದುವೆ' ಎಂಬ ಕವನದಲ್ಲಿ ಅವಲೋಕಿಸಬಹುದು; ಸಾಮಾಜಿಕ ವಿಘ್ನದಿಂದ ಪ್ರಣಯ ಫಲಿಸದ ಆ ಪ್ರೇಮಿಗಳ ದುರಂತ ಜೀವನವಿಂತಾಯಿತು.

ದಿನಗಳು ಕಳೆದವು
  ನೆನಪಿನ ನಾಡಿಗೆ
ಒಯ್ದವು ಹೊನ್ನಿಯ ಚೆನ್ನನನು
ಹೊಸ ಹೊಸ ವರ್ಷದ
  ಪರದೆಯನಿಕ್ಕುತ
ವಿಧಿಯದನೂ ಮರೆಮಾಚುವನು
ಕಡಲ ತಡಿಯ ಮಳಲೊಟ್ಟಿಲೊಳೊಂದೆಡೆ
ಕೇಳುವುದೊಮ್ಮೊಮ್ಮೆಗೆ ಕೂಗು
ಸುಯ್ಯುವ ತೆರದಿ ಹಲುಬುವ ತೆರದಲಿ
ಬಯ್ಯುವ ಹೊಯ್ಯುವ ದನಿ ಸೋಗು
  ಇರುಳ ಮೊದಲ ಮುಂ
  ಜಾವದೊಳೊಮ್ಮೆಗೆ
ತಿಂಗಳು ಬೆಳಕಿಗೆ ನೆಳಲಂತೆ
  ಏನೋ ಕಾಂಬುದು!
  ಭೂತದ ದಂಪತಿ
ಅಲ್ಲಿ ನಲಿವುದೆಂಬುದು ವಾರ್ತೆ ('ನಲ್ಮೆ' : ೩೨–೩ ಪುಟಗಳು)

ಮೇಲಿನ ಸಾಲುಗಳು ವಿಫಲ ಪ್ರಣಯಿಗಳ ಆತ್ಮಹತ್ಯೆಯನ್ನು ಬಣ್ಣಿಸುತ್ತವೆ. ಹಣ, ಹೆಸರು, ಕುಲ, ವಿದ್ಯೆ, ಗೌರವ, ಸೌಂದರ್ಯ, ಔದಾರ್ಯಗಳೆಲ್ಲ ಬೇಕಾದ ಗುಣಗಳೇ; ಆದರೆ ಅವೆಲ್ಲ ಪ್ರಾಮಾಣಿಕವೂ ಅಚಲವೂ ಗಂಭೀರವೂ ಆದ ಪ್ರೇಮವಿದ್ದರೆ ಮಾತ್ರ

ಶೋಭಿಸುವುವು ಎಂಬುದು ಆದರ್ಶಪ್ರಣಯಿಗಳ ಅಭಿಪ್ರಾಯ. ತಕ್ಕಡಿಯಲ್ಲಿಟ್ಟು ತೂಗಿದರೆ ಆ ಎಲ್ಲ ಗುಣಗಳ ತೂಕವೂ ಅವಿಚಲವಾದ ಪ್ರಣಯನಿಷ್ಠೆಯ ತೂಕಕ್ಕೆ ಸರಿಸಮವೆನಿಸದು. ಹೀಗೆ ಲೈಂಗಿಕ ಪ್ರೇಮದ ಉಚ್ಚ ಆದರ್ಶವಿಂದು ಅನೇಕ ಕವಿಗಳಿಂದ ಪ್ರಶಂಸಿಸಲ್ಪಟ್ಟಿದೆ. ಇದರಲ್ಲಿ ಶೃಂಗಾರ ಸಾಹಸಿಕ ಮನೋಧರ್ಮದ ತಿರುಳಿದೆ, ಅದರ ರಂಜಕ ವರ್ಣವಿದೆ: ಪ್ರೇಮ ಶುದ್ಧಿಯ ಮುಂದೆ ಯಾವ ಧರ್ಮವೂ ಹೆಚ್ಚಲ್ಲ ಎಂಬ ಅಭಿಮಾನ–ಅಹಂಕಾರ ಇದರಲ್ಲಡಗಿದೆ. ಅಂತರ್ಜಾತೀಯ ವಿವಾಹ ಮುಂತಾದವುಗಳ ಮೂಲಕ ಜಾತೀಯತೆಯನ್ನು ಕೊನೆಗೊಳಿಸಬೇಕೆಂಬ ಅಭಿಪ್ರಾಯಕ್ಕೆ ಈ ಭಾವನೆ ಪೋಷಕವಾಗಿದೆ. 'ಮೊದಲು ಪ್ರೇಮ, ಕಡೆಗೆ ಧರ್ಮ' ಎಂಬ ಮನಸ್ಸೇ ಇಂದು ಬಾಲ್ಯವಿವಾಹವನ್ನು ತಡೆಗಟ್ಟಲು ಕಾರಣವಾದದ್ದು. ಇದಕ್ಕೆ ಅಂಧ ಶ್ರದ್ಧೆ ಅರುಚಿಕರ, ತಿಳಿವಳಿಕೆ ಅಡಿಗಲ್ಲಾಗಿದೆ. ಪ್ರಣಯಿಗಳಲ್ಲಿ (ಅವರ ಭಾವಾವೇಶ ಮುಂತಾದ ಕಾರಣಗಳಿಂದ ಎಷ್ಟೇ ನ್ಯೂನ್ಯತೆಯುಳ್ಳವರಾಗಿದ್ದರೂ) ಪರಸ್ಪರರ ತಿಳಿವಳಿಕೆ ಇರುವುದು ಮದುವೆಗೆ ಅನಿವಾರ್ಯವಾದ ಪೂರ್ವಸಿದ್ಧತೆ ಎಂಬುದು ಇಂದಿನ ಮತವೆನ್ನಬಹುದು. ಈ ಮತದ ಆಧಾರದ ಮೇಲೆಯೇ ಸಾಮಾಜಿಕ ನೀತಿ–ನಿಯಮಗಳ ಉಗ್ರತೆಯನ್ನು ಟೀಕಿಸುವ ಕತೆ ಕಾದಂಬರಿಗಳೆಷ್ಟೋ ಇಂದು ಬರೆಯಲ್ಪಟ್ಟಿವೆ. ಕವಿಗಳಾದರೂ ಇದಕ್ಕೆ ಹೊರತಾದಾರೇ? ಅವರೂ ಮೇಲೆ ಹೇಳಿದಂತೆ ಶುದ್ಧವೂ ಪ್ರಬುದ್ಧವೂ ಆದ ದಾಂಪತ್ಯ ಪ್ರಣಯಕ್ಕೆ ಅಗ್ರಪೂಜೆ ಸಲ್ಲಿಸಿದ್ದಾರೆ! ಶ್ರೀ ವೈ.ಎಸ್. ಲೂಯಿಸರ 'ಪ್ರೇಮ ಶ್ರೀಗಂಧ' ಎಂಬ ಪದ್ಯವೂ ಇದಕ್ಕೊಂದು ದೃಷ್ಟಾಂತವಾದೀತು:

> ನೀನು ಹೊರಡುವೆಯೆಂದು ನಿನ್ನಿಂದ ಕೇಳುವಾ
> ಮೊದಲೆ ಅರಿತೆನು ನಾನು ಅದನೆಂತೊ ಇನಿಯ.
> ಅರಿಯುವಂತೆಲ್ಲರೂ ಬರುವೊಂದು ಹಿರಿದುಗುಡ–
> ವನ್ನೆದೆಯ ಗೂಡಿಸಲಿ ನೆಮ್ಮದಿಯ ಕೊನೆಯ!
> ವಿರಹದನುಭವಕಿಂತ ವಿರಹಿಣಿಯವೋಲಿರುವೆ
> ನೆನುವ ಭಯವಿಮ್ಮಡಿಯ ದುಃಖವನು ತರಲು,
> ಪ್ರೇಮ ಚಕ್ಷುವಿನಿಂದ ಬೆನ್ನೊಳಗು ಹೊರಗೆಲ್ಲ
> ತಿಳಿದಿರುವ ನೀನೊಡನೆ ಸಂತವಿಸಿ ಬಂದೆ,
> ಒಲುಮೆ ಶ್ರೀಗಂಧವನು ನನ್ನೆದೆಗೆ ಲೇಪಿಸಿರೆ
> ದುಃಖದಲು ನಾನಂದು ಸುಖಿಯಾಗಿ ನಿಂದೆ!
>
> ('ಗಾನಲಹರಿ' : ೧೭ನೇ ಪುಟ)

ಎಂಬ ಸಾಲುಗಳಲ್ಲಿ ಆಧುನಿಕ ಪ್ರೇಮನಾಯಿಕೆಯ ಹೃದಯ ಸೌಂದರ್ಯ ಚೆನ್ನಾಗಿ ಮೂಡಿದೆ. ಹಾಡಿನ ಶೀರ್ಷಿಕೆ ಪ್ರೇಮಶ್ರೀಗಂಧವೆಂದಿರುವುದು ಪ್ರೇಮಪಾರಮ್ಯ ಹೇಳುವ ಆಧುನಿಕತೆಗೊಂದು ಪ್ರಮಾಣ. ಪ್ರೇಮವ್ಯವಹಾರದಲ್ಲಿ ನಿಷ್ಕ್ರಿಯಾತ್ಮಕ ಸಹಕಾರವೀವ ಸಾಮಾನ್ಯವಾದ ಪ್ರಾಚೀನ ಸಾಮಾಜಿಕ ಗರತಿತನ ಇಂದಿನ ತರುಣನಾಯಕರಿಗೆ

ಮೆಚ್ಚಿಗೆಯಾಗದು. ಅವರ ಕಲ್ಪನೆಗೆ ಮೇಲೆ ಕೊಟ್ಟಂಥ ಸಹೃದಯ ನಾಯಿಕೆಯೇ ರಮ್ಯೆ. ಈ ಮಾತಿಗೆ ಶ್ರೀ ಗಂಗಪ್ಪ ವಾಲಿಯವರ 'ಕವಿತಾ ಸುಂದರಿಗೆ' ಎಂಬ ಕವನದಲ್ಲೂ ಉದಾಹರಣೆಯನ್ನು ಕಾಣಬಹುದು; ಅದರ ಕೊನೆಯ ನುಡಿ ಇಂತಿದೆ:

ಚೆಲುವಿನ ಬರೆಹಕೆ ಮಿಗಿಲಿನ ಬರೆಹವು
ಮುಗಿಲಿನ ಸೊಬಗಿಗು ಬಲು ಹಿರಿದು;
ಒಲವಿನ ಕರೆಹಕೆ ಮಿಗಿಲಿನ ಕರೆಹವು
ಮುಗಿಲಿನ ಲೋಕದೊಳೂ ಅರಿದು

('ಕಲ್ಯಾಣ ಕ್ರಾಂತಿ: : ೩೬ನೇ ಪುಟ)

'ಚೆಲುವಿನ ಬರೆಹ' ಎಂಬುದು ಹೃದಯಲ್ಲಿರುವ ಪ್ರಣಯವು ವ್ಯಕ್ತವಾಗುವ ರೀತಿಯೆಂದು ಇಡಿ ಪದ್ಯದ ಸಂದರ್ಭ ಧ್ವನಿಯ ಬಲದಿಂದ ತಿಳಿದುಕೊಳ್ಳಬಹುದು. ತನ್ನಲ್ಲಿರುವ ಪ್ರೇಮವನ್ನು ಪ್ರಿಯವಾಗಿ ವ್ಯಕ್ತಮಾಡುವ ಕಲೆ ನಾಯಿಕೆಗಿರಬೇಕು. ಒಲವು ಪ್ರಾಣವಾದರೆ ಚೆಲುವದರ ಒಡಲು. ಒಲವು ಅವ್ಯಕ್ತ. ಚೆಲುವು ಅದರ ವ್ಯಕ್ತರೂಪ. ಒಲವನ್ನು ವ್ಯಕ್ತಪಡಿಸಲಾರದ ಚೆಲುವು ಚೆಲುವಲ್ಲ. ಚೆಲುವೆಂಬುದಿಂದು ಒಲವಿನ ಭಾಷೆ. ಒಲವಿನ ಬರವಣಿಗೆಯ ರೂಪವಾದ ವ್ಯಕ್ತಿಯೆಂದರೆ ಚೆಲುವು; ಅಥವಾ ಬರೆದ ಒಲವೇ ಚೆಲುವು, ಬರೆಯದೆ ಇಟ್ಟುಕೊಂಡ ಚೆಲುವೇ ಒಲವು–ಎಂದು ಮುಂತಾಗಿ ಮೇಲಿನ ನುಡಿಯಿಂದ ಸಾರಸಂಗ್ರಹ ಮಾಡಬಹುದು. ಒಲವು ಅಂತಃಸೌಂದರ್ಯ; ಅದರ ಪ್ರಕಟ ಸ್ವರೂಪ ಚೆಲುವು–ಎಂಬ ರುಚಿ ತುಂಬ ಮನನೀಯವಾಗಿದೆ. 'ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ' ಎಂದು ಎಚ್ಚರಿಕೆಯಿತ್ತ ಅಂಬಿಕಾತನಯದತ್ತರ ತತ್ವಾಖ್ಯಾನವನ್ನಿಲ್ಲಿ ನೆನೆದುಕೊಂಬುದೊಳಿತು. ಬಾಹ್ಯಾಂಗ ಸೌಂದರ್ಯವು ಅಂತರ್ಗತ ಶುದ್ಧ ಪ್ರೀತಿಯನ್ನು ವ್ಯಕ್ತಪಡಿಸುವ ಮಾಧ್ಯಮವೆನಿಸದಿದ್ದಾಗ ಅದು ವ್ಯರ್ಥ ಎಂಬುದು ಆಧುನಿಕ ಸೌಂದರ್ಯಮಿಮಾಂಸೆಯ ಸುಂದರ ನಿರ್ಣಯ. ಒಲವಿನ ಕರೆಯನ್ನು ಚೆಲುವಿನ ಓಲೆಯಲ್ಲಿ ಬರೆದು ಕಳಿಸಬಲ್ಲವಳೇ ಕವಿಕಲ್ಪಿತ ಕಾವ್ಯಮಯ ಸುಂದರಿ! ಚಿನ್ನಕ್ಕೆ ಕುಂದಣವಿಡುವಂತೆ ಒಳಗಿನ ಗುಣಕ್ಕೆ ಹೊರಗಿನ ಸಂಸ್ಕಾರ ಅಗತ್ಯವಲ್ಲವೇ? ನಾಯಿಕೆಯನ್ನು ತೆಗೆದು ಅವಳ ಸ್ಥಾನದಲ್ಲಿ ನಾಯಕನನ್ನಿಟ್ಟರೆ ಅವನಿಗೂ ಈ ಮಾತು ಅನ್ವಯಿಸುತ್ತದೆ. ಇಂದಿನ ನಾಯಿಕೆಯ ಹೊಸ ಸ್ವರೂಪದ ಶಕ್ತಿಯನ್ನು ಹಳೆಯ ನಾಯಿಕೆಯರಲ್ಲಿ ಕಾಣಹೋದರೆ 'ಕುವೆಂಪು' ಅವರ 'ಚಿತ್ರಾಂಗದೆ' ಎದುರಾಗುತ್ತಾಳೆ. ಅವಳ ವ್ಯಕ್ತಿತ್ವದ ರಸಿಕ ಮುಖವನ್ನಿಲ್ಲಿ ತೆಗೆದುಕೊಳ್ಳೋಣ:

ಬೆಕ್ಕಸದಿ ನೋಡುತಿರ್ದಳು ತರಳೆ ಕಣ್ಗಳೆವೆ
ಇಕ್ಕದೆಯೆ. ಕಂಡಳಿನ್ನೊಂದದ್ಭುತವನಲ್ಲಿ:
ತೇಲುವಾ ದ್ವೀಪಮಧ್ಯದ ಪುಷ್ಪರಂಗದಲಿ
ಯಾರವನು ದೇವವಂದಿತ ಮೋಹನಾಕೃತಿಯ

ರುಕ್ಮರಾಗಾತಪಸ್ನಾತ ಮಾನವಮೂರ್ತಿ?
ಕಂಡು ನಿಷ್ಪಂದಳಾದಳು ಕನ್ಯೆ ಕರುವಿಟ್ಟು
ಕಂಡರಿಸಿದಂತೆ; ಕುಂಚಿಗೆಯ ವರ್ಣದ ಕರ್ಮ
ಚಿತ್ರಸ್ಥವಾದಂತೆ. ಕಣೆವೆರಸಿ ಕೈಬಿಲ್ಲು
ಜಗುಳ್ದುರುಳಿದುದು ನೆಲಕೆ. ಸ್ಫುರಿಸಿತಾ ಗಂಡೆದೆಯ
ಹೃದಯದಲಿ ತಾನು ಹೆಣ್ಣೆಂಬ ಲಜ್ಜೆಯ ಲಹರಿ
ಮೊತ್ತ ಮೊದಲು! ಕೋಮಲತೆ ಕುಡಿವರಿದುದೊಡನೊಡನೆ
ಸೌಂದರ್ಯತೃಷೆಯಿಂದ ಪ್ರೇಮಲತೆ ಬಾಯಾರಿ
ಕಾತರಿಸಿತಾವುದನೊ ತಾನರಿಯದುದ ಬಯಸಿ
ನಾಚಿದಳು ತನ್ನವಸ್ಥೆಗೆ ತಾನೆ ಕನಸಿನಲಿ
ಲಲನೆ ಕನಲ್ದಿನ್ನೊಮ್ಮೆ ಪೌರುಷವನುರೆ ಹಾರಿ
ಬರಿದೆ! (ಚಿತ್ರಾಂಗದಾ: ೭ನೇ ಪುಟ)

ಈ ಧೀರ ನಾಯಿಕೆಯ ಚಿತ್ರ ಇಂದಿನ ಸ್ತ್ರೀ ಪುರುಷರಿಬ್ಬರಿಗೂ ಪ್ರಿಯ. ಈಗಿನ ನಾಗರಿಕತೆ ತಳೆಯಬೇಕೆನ್ನುತ್ತಿರುವ ಆದರ್ಶಮಟ್ಟದಲ್ಲಿ ಈ ಹೊಸ ಚಿತ್ರಾಂಗದೆ ಹುಟ್ಟಿದ್ದಾಳೆ. ಶ್ರೀ ವಿನೋಬಾ ಭಾವೆಯವರಿಂದು ಹೆಂಗಸಿಗೆ ಭೀರುತ್ವ ಹೆಚ್ಚಾಗುವುದೊಳ್ಳೆಯದಲ್ಲ ಎಂದು ಉದ್ಗರಿಸುತ್ತಿರುವುದು ಆಧುನಿಕ ಅಭಿರುಚಿಯನ್ನೇ ಸೂಚಿಸುತ್ತದೆ. ಸಾರ್ವಜನಿಕ ವ್ಯವಹಾರಗಳಲ್ಲಿ ಸ್ತ್ರೀ ಪುರುಷರ ಸಮಾನ ಹಕ್ಕು, ಸಮಾನ ಸ್ವಾತಂತ್ರ್ಯಗಳನ್ನು ಎತ್ತಿಹಿಡಿದ ಭಾರತದ ಪ್ರಜಾಪ್ರಭುತ್ವವು ಹೆಂಗಸೊಂದು (Prize Doll) ಆಭರಣದ ಬುಟ್ಟಿಯಾಗಿ, ಬುರುಕಿಯೊಳಗಿನ ಬೆಡಗಿಯಾಗಿ ಬೆಳೆಯುವುದನ್ನು ಮೆಚ್ಚದು. ಕುಟುಂಬದ ಹಾಗೂ ದೇಶದ ಕಾರ್ಯಗಳಲ್ಲಿ ಗಂಡಸಿನ ಸಮತೂಕದ ಹೊಣೆಯನ್ನಿಂದು ಹೆಂಗಸುಹೊರಬೇಕೆಂದು ಹೇಳಲಾಗುತ್ತಿದೆ; ಅದರಿಂದಲೇ ಅವಳಿಗೆ ಸಮಕ್ಕೂ ಸ್ವಲ್ಪ ಹೆಚ್ಚೇ ಆದ ಹಕ್ಕುಗಳನ್ನು ಕಾಯದೆ ಕೊಟ್ಟಿದೆ. ಅದರ ಮೇರೆಗೆ ಅವಳ, ವ್ಯಕ್ತಿತ್ವ ಬೆಳೆದು ಬರಬೇಕಾದರೆ ಭವಿಷ್ಯದರ್ಶಿಗಳಾದ ನಮ್ಮ ಕವಿಪ್ರವಾದಿಗಳು ಕಡೆದಿಟ್ಟ ಚಿತ್ರಾಂಗದೆಯಂಥ ಸ್ತ್ರೀಮೂರ್ತಿಗಳನ್ನು ಲಕ್ಷಿಸಬೇಕು. ಅವಳದು ವೀರಶೃಂಗಾರ, ಭೀರುಶೃಂಗಾರವಲ್ಲ. ಭೀರುಶೃಂಗಾರವು ಬಾದರಾಯಣ ಕಾಲಕ್ಕೆ ಸೇರಿದ್ದು. 'ಅಂಕಂಗತಾಪಿ ಯುವತಿ: ಪರಿರಕ್ಷಣೀಯಾ' ಎಂಬುದು ಅಂದಿನವರ ಅನಿಸಿಕೆ. ರಕ್ಷ್ಯ ರಕ್ಷಕ ಭಾವವೇ ಅಂದಿನ ಸ್ತ್ರೀ ಪುರುಷರ ಸಂಬಂಧದ ಮೂಲಾಧಾರ. ಈ ಗಾಂಧಿಯುಗದಲ್ಲಾದರೋ ಹೆಂಗಸನ್ನು ಆತ್ಮರಕ್ಷಣೆ–ಪರರಕ್ಷಣೆಗಳಿಗೆ ಸಿದ್ಧಳನ್ನಾಗಿ ಮಾಡುವ ವಿಚಾರ ಹೊರಟಿದೆ–ಕಾರ್ಯದಲ್ಲೂ ಕೆಲಮಟ್ಟಿಗೆ ಅಂಥ ಪ್ರಯತ್ನ ನಡೆದಿದೆ. ಈ ದೃಷ್ಟಿಯಿಂದ ಚಿತ್ರಾಂಗದೆಯೊಂದು ನವ್ಯ ಸಂಕೇತ, ನವನಾಗರಿಕತೆಯ ಪ್ರತಿಮೆ. ಇನ್ನು ಆಧುನಿಕ ನಾಯಕರ ಬಾಹ್ಯ ಲಕ್ಷಣಗಳಿಗೆ ಉದಾಹರಣೆ ದುರ್ಲಭವಾದರೂ ನಾಯಿಕೆಯರ ಹೊರಮುಖವನ್ನು ನಮ್ಮ ಪದ್ಯಕಾವ್ಯ

ಪ್ರಪಂಚದಲ್ಲಿ ಅಲ್ಲಿ ಇಲ್ಲಿ ಕಾಣಬಹುದಾಗಿದೆ. ಶ್ರೀ 'ಚೆನ್ನವೀರ ಕಣವಿ'ಯವರ 'ಶ್ವೇತಪುತ್ರಿ' ಸಿಗರೇಟಿನ ಮೂರ್ತಿ. ಆದರೆ ಆ ಮೂರ್ತಿಕರಣಕ್ಕೆ (Personification) ಬಳಸಲಾದ ಬಣ್ಣನೆ ಆಧುನಿಕ ಸ್ತ್ರೀಯದು:

ಗಾಳಿಯ ಬೆರಳಿಗೆ ಬೆಳ್ಳಿಯ ಉಂಗುರ
ತೊಡಿಸುತ ಬರುತಿಹ ವಯ್ಯಾರಿ!
ಹೊಗೆಯ ಸುರುಳಿಗಳ ಅರಳಿನ ಮಾಲೆಯ
ಕೊರಳಿಗೆ ಸೂಡುವ ಸುಕುಮಾರಿ!
ಬಿಳಿಯ ಪತ್ತಲದ ತೆಳ್ಳನೆಯುಡುಗೊರೆ
ಕೆಂಗಿಡಿ ಕೆಂಬರಳಿನ ನತ್ತು!
ನಿರಾಭರಣ ಸುಂದರಿ ಸುವಿಲಾಸಿನಿ
ಕಲಿಸಿದರಾರೀ ಹೊಸಗತ್ತು?
ಸುಳಿಗಾಳಿಗೆ ಬಲು ಬಳುಕುತ ನಟಿಸುವ
ಒಪ್ಪಿಡಿ ನಡುವಿನ ಹೊಗೆರಾಣಿ!
ಒಂದೇ ಸೆಳೆತಕ್ಕೆ ತುಟಿಗಳ ಮುದ್ರಿಕೆ
ನಿನ್ನಯ ಹೆಸರೇ 'ಜೇನುಹನಿ'
ಮೊದ ಮೊದಲಿಗೆ ಹಿರಿಕಿರಿಯರಿಗಂಜುತ
ಕಟ್ಟೇಕಾಂತದಿ ನೀನೊಲಿದೆ;
ಕಿತ್ತಳೆತೊಳೆತುಟಿ ಮಧುರಿಮೆ ಹೀರಲು
ಮುತ್ತಿನ ಸತ್ತಿಗೆ ನೀನಾದೆ!

('ಆಕಾಶ ಬುಟ್ಟಿ' ೧೯ನೇ ಪುಟ)

ಇಲ್ಲಿ 'ಶ್ವೇತಪುತ್ರಿ'ಯನ್ನು ರೂಪಿಸಲು ತೆಗೆದುಕೊಂಡ ಅಲಂಕಾರ ಸಾಮಗ್ರಿಗಳು ಆಧುನಿಕ ಸ್ತ್ರೀಯ ಉಡುಗೆ–ತೊಡುಗೆಗಳೇ ಆಗಿವೆ. ಈ ಬಾಹ್ಯರೂಪವು ಇಂದು ಹೃದಯಾಕರ್ಷಕವೆನ್ನಬಹುದು. ಹೆಣ್ಣುಮಕ್ಕಳಿಗೆ ಹೆಸರಿಡುವಾಗ ಸಹ ಇಂದು 'ಜೇನುಹನಿಗೆ ಸದೃಶ್ಯವಾದ ವಿಲಾಸಮಯ ಕಲ್ಪನೆ ಕೆಲಸ ಮಾಡುತ್ತಿದೆ ತಂದೆ–ತಾಯಂದಿರ ಹೃದಯದಲ್ಲಿ ಎಂಬುದನ್ನು ಅನುಭವ ತೋರಿಸಿಕೊಡುತ್ತದೆ. ಕಾವ್ಯ ಶೈಲಿಯಲ್ಲಿ ಹೇಗೋ ಹಾಗೇ ಜೀವನದ ಶೈಲಿಯಲ್ಲಿ ಸರಳತೆಗಿಂದು ಪ್ರಾಧಾನ್ಯ ಬಂದಿದೆ;

ಕುಸುರಗೆಲಸದ ಕಲಾಜಟಿಲತೆ ಹಿಮ್ಮೆಟ್ಟುತ್ತಿದೆ. ಇದು ಜನತಾಯುಗದ ಲಕ್ಷಣವೇನೋ! ಜನಪದ ಸಾಹಿತ್ಯದ ವಿಶೇಷಾಭ್ಯಾಸದ ಅಭಿರುಚಿ ವಿದ್ವಾಂಸರಲ್ಲಿ ಹುಟ್ಟಿದ್ದು ಈ ಮನೋಭೂಮಿಕೆಯಿಂದಲೇ ಆಗಿರಬಹುದೇ? ಸಾಮಾನ್ಯನ ಮಾನ್ಯತೆ ಪುರಸ್ಕೃತವಾದದ್ದೇ ಇದಕ್ಕೆ ಕಾರಣವಿರಬಹುದೇ? ಸಾಹಿತ್ಯವು ಜೀವನದ ಪ್ರತಿಬಿಂಬವಾಗಬಹುದು, ಇಲ್ಲವೆ ಜೀವನವೇ ಸಾಹಿತ್ಯದ ಪ್ರತಿಬಿಂಬವಾಗಬಹುದು. ಮೊದಲಿನ ಪ್ರಕರಣಕ್ಕೆ ವಾಸ್ತವ ದೃಷ್ಟಿ

ಕಾರಣವಾದರೆ, ಎರಡನೆಯದಕ್ಕೆ ಆದರ್ಶದೃಷ್ಟಿ ಕಾರಣವಾಗುತ್ತದೆ. ಸಾಹಿತ್ಯವೂ ಜೀವನವೂ ಅವಳಿಜವಳಿಗಳಾಗಿರುವಂತೆ ಆದರ್ಶವೂ ವಾಸ್ತವವೂ ಅವಳಿಜವಳಿಗಳಾಗಿವೆ. ಆದುದರಿಂದ 'ಶ್ವೇತಪತ್ರಿ'ಯ ಸ್ವರೂಪ ಒಂದು ದೃಷ್ಟಿಯಿಂದ ವಾಸ್ತವ, ಇನ್ನೊಂದು ದೃಷ್ಟಿಯಿಂದ ಆದರ್ಶ. ಶೃಂಗಾರ ಜೀವನದ ಒಳಸೊಬಗಿನಂತೆಯೇ ಹೊರಸೊಬಗಾದರೂ ವಾಸ್ತವವು ಆದರ್ಶಕ್ಕೇರುವ ಮತ್ತು ಆದರ್ಶವು ವಾಸ್ತವರೂಪ ತಾಳುವ ಚಕ್ರಾರಪಂಕ್ತಿಯ ಗತಿಯನ್ನೆ ಹಿಡಿದಿರುವುದಲ್ಲವೇ?

ಸೃಷ್ಟಿ ಸೌಂದರ್ಯವು ಜಡವಸ್ತುವಿನ ಗುಣವೆಂಬುದು ನಿಜ. ಆದರೆ ಆ ಜಡ ಭಿತ್ತಿಯಲ್ಲಿ ಮನುಷ್ಯನ ಕವಿದೃಷ್ಟಿಯು ತಾನೇ ಆರೋಪಿಸುವ ಮಾನವಗುಣಗಳನ್ನು ಕಾಣಬಲ್ಲದು. ಹಿಂದಿನಿಂದಲೂ ಕವಿಗಳು ಪ್ರಾಕೃತಿಕ ಜೀವ–ಜಡಗಳಲ್ಲಿ ಮಾನುಷ ಭಾವನೆಗಳನ್ನು ಕಂಡು ಬಣ್ಣಿಸುತ್ತಾ ಬಂದಿದ್ದಾರೆ. ಇಂದಿನ ಕವಿಗಳೂ ಈ ನಿಯಮಕ್ಕೆ ಹೊರತಲ್ಲ. ಅಂಬಿಕಾತನಯದತ್ತರ ಶ್ರಾವಣದ ಪ್ರಾಕೃತಿಕ ಆವರಣವನ್ನು ನೋಡಿ:

ಬೆಟ್ಟ ತೊಟ್ಟಾವ ಕುತನಿಯ ಅಂಗಿ
ಹಸಿರು ನೋಡ ತಂಗಿ
ಹೊರಟಾವೆಲ್ಲೊ ಜಂಗಿ
ಜಾತ್ರಿಗೇನೋ ನೆರದದ ಇಲ್ಲೆ ತಾನೋ
ಬನಬನ ನೋಡು ಈಗ ಹ್ಯಾಂಗ
ಮದುವಿ ಮಗನ್ಹಾಂಗ
ತಲಿಗೆ ಬಾಸಿಂಗ
ಕಟ್ಟಿಕೊಂಡೂ–ನಿಂತಾವ ಹರ್ಷಗೊಂಡು
ಹಸಿರುಟ್ಟು ಬಸುರಿಯ ಹಾಂಗ
ನೆಲಾ ಹೊಲಾ ಹ್ಯಾಂಗ
ಅರಿಸಿಣ ಒಡೆಧಾಂಗ
ಹೊಮ್ಮತಾವ–ಬಂಗಾರ ಚಿಮ್ಮತಾವ
ಗುಡ್ಡ ಗುಡ್ಡ ಸ್ಥಾವರಲಿಂಗ
ಅವಕ ಅಭ್ಯಂಗ
ಎರಿತಾವನ್ನೊ ಹಾಂಗ
ಕೂಡ್ಯಾವ ಮೋಡ–ಸುತ್ತೆಲ್ಲ ನೋಡ ನೋಡ
ನಾಡೆಲ್ಲ ಏರಿಯ ವಾರಿ
ಹರಿತಾವ ಝರಿ
ಹಾಲಿನ ತೊರಿ

ಈಗ ಯಾಕ ನೆಲಕೆಲ್ಲ ಕುಡಿಸಲಾಕ
ಶ್ರಾವಣಾ ಬಂತು

('ಹಾಡು–ಪಾಡು: ೨೨ನೇ ಪುಟ)

ಇಲ್ಲಿ ಕವಿಯು ಶ್ರಾವಣದ ಪ್ರಾಕೃತಿಕ ವಸ್ತುಗಳಲ್ಲಿ ಯಾತ್ರೆಗೆ ಹೋಗುವ ಉತ್ಸಾಹವನ್ನೂ ಮದುವೆ ಮಾಡಿಕೊಳ್ಳುವ ಉಲ್ಲಾಸವನ್ನೂ ಒಳಗಿರುವ ತಾಯ್ತನ ಹೊರಹೊಮ್ಮುತ್ತಿರುವ ಬಸುರಿಯ ಸೊಬಗನ್ನೂ ಲಿಂಗಪೂಜೆ ಭಕ್ತಿಯನ್ನೂ ಮಕ್ಕಳಿಗೆ ಮೊಲೆಯೂಡಿಸುವ ತಾಯಿಯ ವಾತ್ಸಲ್ಯವನ್ನು ಕಂಡಿದ್ದಾನೆ. ಶ್ರೀ 'ವೀ.ಸೀ.' ಅವರು ಬೆಂಗಳೂರಿನ ಲಾಲಭಾಗಿನಲ್ಲಿ ಪ್ರೀತಿಯ ಆಹ್ವಾನವನ್ನು ಕೇಳಿದ್ದು ಅಥವಾ ಕೇಳಿ ಎಂದು ಹೇಳಿದ್ದು ಕೇಳುವ ಹಾಗೂ ಇದೆ, ಓದುವ ಹಾಗೂ ಇದೆ;

ಕೆಂಪುವೂ ಸಾಲ್ಮರನ ದಾರಿಯಲಿ ನಡೆನಡೆದು
ಕೆಂಪು ತೋಟಕೆ ಬನ್ನಿ ವಿಶ್ರಾಂತಿಗೆ;
ಒಮ್ಮೆಗೇ ಕಾಣುವುವು ಬಿಳಿಹಸುರು ಕೆಂಪುಗಳು
ಕಣ್ಣ ರಂಜಿಸಿಕೊಳುವ ಎಲ್ಲ ರಂಗುಗಳು.
ಎಲ್ಲವೂ ಕರೆಯುತಿವೆ ವನಕೆ ನೆಳಲಾಸರೆಗೆ
ನೆಲದಲ್ಲಿ ಸುರಿದಿರುವ ಹೂವು ಹಾಸುಗೆಗೆ
ಮೇಲಿಂದ ಬೇಯಿಸುವ ಬೇಸಗೆಯ ನೇಸರಿನ
ಹಿಂಸೆಗಳ ನೀಗಿಕೊಳಿರೆನ್ನುತ್ತಿವೆ

ಜಡಪ್ರಕೃತಿಯು ಮಾನವ ಗುಣಗಳಿಲ್ಲದ ಶುದ್ಧ ಕನ್ನಡಿ ಎಂಬುದು ಪ್ರತ್ಯಕ್ಷಸಿದ್ಧ. ಅಂಥಲ್ಲಿ ಪ್ರೇಮ, ಸ್ನೇಹ, ವಾತ್ಸಲ್ಯ, ಕರುಣೆ ಅಥವಾ ಅಪ್ರೀತಿ, ದ್ವೇಷ, ಒರಟುತನ, ಕ್ರೌರ್ಯ ಮುಂತಾದ ಗುಣಗಳನ್ನು ಕಾಣುವುದು ಕಲಾಭಿಜ್ಞರ ದೃಷ್ಟಿಯಲ್ಲಿ ಬಹಳ ಮೆಚ್ಚುಗೆಗೆ ಪಾತ್ರವಾಗಿದೆ. ಶ್ರೀ 'ಬಿಳಿಗಿರಿ'ಗಳ 'ಬಿಳಿಗಿರಿಯ ಕಮರಿ'ಯಲ್ಲಿ ಏನು ಕಾಣಿಸುತ್ತದೆ? ಎಂಬುದನ್ನೀಗ ನೋಡೋಣ:

ಎಷ್ಟು ಕ್ಷುಲ್ಲಕವಾಗಿ ಕಂಗಳಿಗೆ ತೋರುತಿದೆ
ಕೆಳಗಿನ ಜಗತ್ತು ನಾನೊರಗಿದೀ ಬಂಡೆಗಳ
ಪೀಠದಿಂ! ಹಸಿರು ಬಣ್ಣದ ಹತ್ತಿಯುಂಡೆಗಳ
ವೋಲು ತೋರಿ ತರುರಾಜಿಯಿದು ಮಂಕ ತೂರುತಿದೆ
ತಳವ ನೋಡುತಲಿರುವ ನನ್ನ ಕಣ್ಣುಗಳಂಜೆ!
ಅದೋ! ಸುದೂರದಗಿರಿಗೆ ಹಾವಿನೊಲು ರೂಹಾಂತು
ಕಾಳ್ಗಿಚ್ಚು ಅಗ್ನಿಸೋಪಾನವನು ತಾನೆಂತು
ರಚಿಸಿ ರಂಜಿಪುದಹಾ! ಅಗೋ ಅಗೋ! ಮುಚ್ಚಂಜೆ

ಹಡೆದಳೋ ದಿವ್ಯ ಶಿಶುವಂ, ಬೆಳಕ ಸುಧೆಯಿಂದ
ಹೆಪ್ಪುಗಟ್ಟಿದ ಕೆನೆಯೊ ಎಂಬವೊಲು ಪೆರೆಯುದಿಸಿ
ಕಮರಿಯಾಳದ ಬಸಿರ ಪುರುಳ ಪರಿಕಿಸಲೆಳಸಿ
ಶೀತಕಿರಣಗಳಟ್ಟು ತೇರಿದನು ಜವದಿಂದ!
ಪ್ರಕೃತಿ ಕವಯಿತ್ರಿಯೊಮ್ಮೊಮ್ಮೆ ರಚಿಸುವ ಹಾಡು
ಮರೆಯಲಾಗದ ಮಧುರ ತಾನಗಳ ನೆಲೆವೀಡು!

('ನಂದನ' ೧೦ನೇ ಪುಟ)

ಈ ಪದ್ಯದಲ್ಲಿ ಬಳಸಲಾದ ಅಲಂಕಾರದ ಮಾತುಗಳಲ್ಲಿ ತೂರುವ ರೂಹುದಾಳುವ, ರಚಿಸುವ, ಹಡೆಯುವ, ಮತ್ತು ಪರೀಕ್ಷಿಸುವ ಮುಂತಾದ ಮಾನುಷ ಕ್ರಿಯೆಗಳನ್ನು ಹೇಳಲಾಗಿದೆ. ಕಮರಿಯಲ್ಲಿ ಬಣ್ಣಿಸಲಾದ ವಸ್ತುಗಳೆಲ್ಲವೂ ಜಡ. ಆ ಜಡಗಳ ಕ್ರಿಯೆಯ ಹಿನ್ನೆಲೆಯಲ್ಲಿ ಮನುಷ್ಯಸಹಜವಾದ ಯಾವುದಾದರೊಂದು ಭಾವವಿದೆ ಎಂಬ ಆರೋಪವನ್ನಿಲ್ಲಿ ನಾವು ಕಾಣಬಹುದು. ಪೂರ್ವೋಕ್ತ ಆದರ್ಶ ತಾಯಿ ಮಕ್ಕಳನ್ನು ಕಾಣುವಂತೆ, ಸಾತ್ವಿಕ ಸಾಧುಸಂತರು ಇತರರನ್ನು ನೋಡುವಂತೆ ಅಥವಾ ಭಕ್ತರು ದೇವರನ್ನು ಲಕ್ಷಿಸುವಂತೆ ನಾವು ಪ್ರಕೃತಿಯನ್ನು ಲಕ್ಷಿಸುತ್ತೇವೆ, ಪ್ರೀತಿಸುತ್ತೇವೆ. ಇದು ಪ್ರತಿಪ್ರೀತಿನಿರಪೇಕ್ಷವಾದ ಏಕಮುಖ ಪ್ರೀತಿ. ಮೇಲಿನ ಪದ್ಯದ ಕೊನೆಯಲ್ಲಿ ಕವಿಯು ಪ್ರಕೃತಿಯನ್ನು ಕವಯಿತ್ರಿ ಎಂದು ಕರೆದುದಾದರೂ ಮನುಷ್ಯಸಹಜವಾದ ಕವಿಧರ್ಮವನ್ನು ಪ್ರಕೃತಿಯಲ್ಲಿ ಆರೋಪಿಸಿಯೇ. ಆಗ ಪ್ರಕೃತಿಯ ಸೌಂದರ್ಯ ಅರ್ಥಪೂರ್ಣವೆನಿಸುತ್ತದೆ; ಪ್ರಕೃತಿಯು ಪ್ರಿಯ ಎನಿಸುತ್ತದೆ. ಮೆಚ್ಚಲರ್ಹವಾಗುತ್ತದೆ. ಕವಿಯ ಮನದಲ್ಲಿ ಯಾವ ಭಾವ ಪ್ರಧಾನವಾಗಿರುವುದೋ ಅದು ಅವನ ಪ್ರಕೃತಿ ವರ್ಣನೆಯಲ್ಲಿ ಸಂದರ್ಭಾನುಸಾರ ಗಣ್ಯವಾಗಿ ಪ್ರತಿಬಿಂಬಿಸುತ್ತದೆ. ಪ್ರಕೃತ ಉದಾಹರಣೆಯಲ್ಲಿ ಬಿಳಿಗಿರಿಯ ಕಮರಿಯೊಂದು ಜಗತ್ತು. ಅದರ ಪ್ರಕೃತಿಭಾವಗಳು ಒಂದೇ ಎರಡೇ? ಅನೇಕ! ಕ್ಷುಲ್ಲಕತನ. ಮಂಕತೂರುವ ಮಾಯಾವಿತನ. ಎದೆಯೊಡೆಯಿಸುವ ಭಯಾನಕತೆ, ರಂಜಕತೆ, ಶಂಕಾಸ್ಪದ ಚರಿತ್ರೆಗಳೆಲ್ಲಾ ಜಗತ್ತಿನಲ್ಲಿರುವ ಅಂಶವು ಎತ್ತರದ ದಿವ್ಯ ದೃಷ್ಟಿಗೆ ಹೊಳೆಯುತ್ತದೆ. ಆದ್ದರಿಂದ ಪ್ರಕೃತಿಯ ಪ್ರತಿನಿಧಿಯಾದ ಬಿಳಿಗಿರಿಯ ಕಮರಿಯನ್ನು ನೋಟಕ ಮರೆಯಲಾರ. ಹೀಗೆ ಪ್ರಕೃತಿಯ ರಸ್ಯಮಾನವೆನಿಸುವ ಬಗೆಯನ್ನು ಆಧುನಿಕವಾಗಿ ಅರ್ಥಯಿಸಿ ಹೇಳಿದ ಈ ಪದ್ಯವು ನಮ್ಮಲ್ಲಿಂದು ಪ್ರಕೃತಿ ಸೌಂದರ್ಯವನ್ನು ಸವಿಯುವ ಪ್ರವೃತ್ತಿ ಹೊಸದಾಗಿ ಎಂಬಂತೆ ಜಾಗರಿತವಾದುದನ್ನು ನಿದರ್ಶಿಸುತ್ತದೆ. ನಿರ್ಮಾನುಷ ಧರ್ಮವುಳ್ಳ ಪ್ರಕೃತಿಯಲ್ಲಿ ನಮ್ಮರತಿ ಉದ್ಬುದ್ಧವಾಗುವುದು ನಿಜವಾದ ಸಾತ್ವಿಕ ಶೃಂಗಾರವೆಂದು ಹೇಳಬಹುದಲ್ಲವೇ? ಇದು ದೈವಭಕ್ತಿಗೆ ಸರಿಸಾಟಿಯೆನಿಸಿರುವುದಲ್ಲದೆ ಅಸನಾತನಿಗಳ ದೃಷ್ಟಿಯಲ್ಲಿ ಅದಕ್ಕೊಂದು ಬದಲಿಯೂ ಆಗಿದೆ ಎನ್ನಬಹುದು. 'ಪ್ರಕೃತಿಯು ಅವ್ಯಕ್ತನಾದ ದೇವರ ವ್ಯಕ್ತರೂಪ' ಎಂಬ ಅರ್ಥಬರುವಂತೆ ಪರಮೇಶ್ವರನಿಗೆ ಅಷ್ಟಮೂರ್ತಿತ್ವವನ್ನು ಹೇಳಿದ ಕಾಳಿದಾಸನು ತಪ್ಪನ್ನು ಆಡಿಲ್ಲವಷ್ಟೇ! ಮನುಷ್ಯನು ಕಣ್ಣು ತೆರೆದು ಏನನ್ನು ಕಂಡರೂ ಅದರಲ್ಲಿ

ಮಾನುಷಾರ್ಥವಿರುತ್ತದೆ. ಮಾನವ್ಯವಲ್ಲದ ಅರ್ಥವೇನಾದರೂ ಇದೆ ಎಂದು ಮನುಷ್ಯ ಹೇಳಿದರೆ ಅದು ಕೇವಲ ಊಹೆ–ಅದರಲ್ಲೂ ತನ್ನನ್ನೇ ತಾನು ನಂಬಲಾರದಂತಹ ಊಹೆ! ಅನುಭವದ ಗುಟ್ಟು ಹೀಗಿರುವುದರಿಂದ ನಮ್ಮ ನಾಗರಿಕ ಪ್ರಕೃತಿಪ್ರೇಮ ಇಂದು ಹೆಚ್ಚಾಗಿ ವಿಚಾರವನ್ನು ಪ್ರಚೋದಿಸುವಂಥದ್ದಾಗಿದೆ. ಇದು ಹಿಂದಿನ ತಪಸ್ವಿಯುಗದ ವೈಜ್ಞಾನಿಕ ಪರ್ಯಾಯ ಅಥವಾ ವಿಜ್ಞಾನಾವತಾರ. ವೈಜ್ಞಾನಿಕ ದೃಷ್ಟಿಗೆ. ವಿಚಾರಪರತೆಗೆ ನಮ್ಮ ನಾಡಿನಲ್ಲಿ ಇಂದು ಬಂದಿರುವ ಮಹತ್ವ ಎಲ್ಲರಿಗೂ ಗೊತ್ತು; ಅದರಿಂದ ಕವಿಯು ಹೇಗೆ ತಪ್ಪಿಸಿಕೊಂಡಾನು? ಹಿಂದೆ ಹೆಚ್ಚಾಗಿ... ಭಾವನೆಗೆ ಆಲಂಬನವಾಗಿದ್ದ ನಿಸರ್ಗವಿಂದು ವಿಚಾರಕ್ಕೂ ಆಲಂಬನವಾಗುತ್ತಿದೆ. ವಿನಾಯಕರ 'ಉದಾರ ಸಮುದ್ರ'ವನ್ನು ನೋಡಿ:

ತೆರೆಗಳೊಡನೆ ತಿಳ್ಳಿಯಾಡಲು ಬಂದ ಗಾಳಿಗೆ
ಬುರುಗಿನ ಬೆಳ್ಳಿಯನಿತ್ತು ಕಳಿಸಿದ ಸಮುದ್ರರಾಜ:
ಬಿಡಿಸಲು ಬಂದ ಹರಿಗೆ ಕಮಲವನೇರಿಸಲಿಲ್ಲವೆ ಗಜೇಂದ್ರ?
ಮುಗಿಲೊಳಗಿಂದ ಬೆಳಕು ಕರೆವ ದಿನಮಣಿಗೆಂದು
ಬೆಳ್ಳಿಕಟ್ಟನೊಂದನಣಿಗೊಳಿಸಿದನು ಸಾಗರಪತಿಯು–
ಆಕಾಶದರಮನೆಯ ನೀಲಿಮತೆಗೆ ನೆಲಗಟ್ಟೆನಲು!
ನೌಕೆಯು ಸಾಗಿದೆ ನೇರವಾಗಿ ತನ್ನದೆಯ ಮೇಲೆ,
ಕ್ಷೀರದಾಗರವಾಗಿ ಸುಗಮವಾಗಿಸಿದ ಪಥವ–
ಮಳೆಬಿಲ್ಲುಗಳಿಂದ ಮಜ್ಜನಗೊಳಿಸಿದ ಕಡಲೊಡೆಯ!
ಬೆಳಗಬಂದವನನ್ನು ಮುಳುಗಿಸುವದಿಲ್ಲ.
ಮುಳುಗಬಂದವನಿಗೆ ಬೇಡೆನ್ನುವದಿಲ್ಲ
ದೇವನಂತೆ ಅನಾಸಕ್ತನಿವ, ಸಮುದ್ರರಾಜ!
ಇವನಲ್ಲದೆ ಚಿರಂಜೀವಿ ಯಾರು?

('ಸಮುದ್ರ ಗೀತಗಳು': ೨೨ನೇ ಪುಟ)

ಈ ಸಮುದ್ರ ವರ್ಣನೆಯ ವಚನರಚನೆಯಲ್ಲಿ ಭಾವನೆಯೇರುತ್ತ ಹೋಗಿ, ವಿಚಾರದ ಶಿಖರವನ್ನು ಮುಟ್ಟಿ, ಪ್ರಕೃತಿಯ ಪ್ರತೀಕವಾದ ಸಮುದ್ರವು ದೇವನಂತೆ ಆರಾಧ್ಯ ಎಂಬ ಧ್ವನಿ ನಮಗೆ ಕೇಳಿಸುತ್ತದೆ. ಸಮುದ್ರರಾಜನಿಲ್ಲಿ ಒಬ್ಬ ಅಪಾರ ಕರುಣೆಯುಳ್ಳ ಯೋಗೀಶ್ವರ; ಅನಾಸಕ್ತಕರ್ಮದಲ್ಲಿ ತೊಡಗಿದ ಸಾಕ್ಷಿಚೇತನೆಯ ಮೂರ್ತಿ; 'ಪರೋಪಕಾರಾರ್ಥಮಿದಂ ಶರೀರಂ' ಎಂದು ವ್ಯವಹರಿಸುವ ನೀರೊಡಲ ನಿತ್ಯಾನಂದ ಸಂತ. ಆದುದರಿಂದ ನೋಟಕನಿಗವನು ಪ್ರಿಯ ಔದಾರ್ಯವೇ ಅವನ ಸೌಂದರ್ಯ!

ಪ್ರಕೃತಿ ಭಕ್ತಿ ದೈವಭಕ್ತಿಗೆ ಬಹಳ ಹತ್ತಿರವಾದುದು ಎಂಬುದಕ್ಕೆ ಶ್ರೀ ಎಸ್.ಆರ್. ಎಕ್ಕುಂಡಿಗಳ 'ಹಾಡು' ಒಳ್ಳೆಯ ದೃಷ್ಟಾಂತವಾಗಿದೆ:

ಸೌರವ್ಯೂಹದ ಸಾವಿರ ಕಿರಣ
ಮುಗಿಲಿನ ಪಾರದೊಳಂತಃಕರಣ
ಮೋಡಗಳರಳಿದ ವರುಣನ ಕನಸು
ಹಸಿರೋ ಹಸಿರು ದೇವರ ಮನಸು
ನೀಲವ್ಯೋಮದ ನೀರಿನ ಹರಕೆ
ನೆಲದೊಳಗಿಳಿದಿದೆ ಬಳ್ಳಿಗೆ ಮರಕೆ
ಜಡಜಂಜಡದಲ್ಲಿ ಚೈತನ್ಯದ ಹನಿ
ಸ್ಪರ್ಶಕ್ಕೆ ಚಿಗಿತಿವೆ ಸೃಷ್ಟಿಯ ಧಮನಿ
ಸುಳಿವ ಸಮಾರಣೆ ದೇವರ ಉಸಿರು
ಚೈತನ್ಯವೆ ಋತು ಋತುವಿನ ಬಸಿರು
ನಭದ ನಾಭಿಕಮಲದ ದಲ ತೆರೆದು
ಆನಂದ ಬ್ರಹ್ಮನ ದಯೆಯೆರೆದು
ಸೃಷ್ಟಿಯು ಪರಮಾತ್ಮನ ರಸರಾಸ
ಉದಿತೋದಿತ ಜೀವನದುಲ್ಲಾಸ
ನೆಲ ಮುಗಿಲಿನ ನಲವಿನ ಮೈ ತಿಕ್ಕಿ
ಹಾಡಿದ ಜೀವಕೆ ಮೂಡಿತು ರೆಕ್ಕೆ
ಮಾರ್ಮೊಳಗಿತು ಮುನಿಯಭಯ ನ್ಯಾಸ
"ತೇಜಸ್ವಿನಾ ವಧೀತ ಮಸ್ತು"

('ಸಂತಾನ' : ೫ನೇ ಪುಟ)

ಇದರಲ್ಲಿ ಮನುಷ್ಯನು ಪ್ರಕೃತಿ ಮಾಧ್ಯಮದ ಮೂಲಕ ದಿವ್ಯಸಂದೇಶವನ್ನು ಅರ್ಥೈಸಿಕೊಂಬ ಪ್ರಯತ್ನವಿದೆ; ಪ್ರಕೃತಿ ಭಾವವಿಲ್ಲಿ ದೈವಭಾವಕ್ಕೇರುವ ಮೆಟ್ಟಲಾಗಿದೆ. ಅಥವಾ ಇನ್ನೊಂದು ಮಾತಿನಲ್ಲಿ ಹೇಳುವುದಾದರೆ, ಆಧುನಿಕ ಪ್ರಕೃತಿಪ್ರೇಮವು ದೈವಭಕ್ತಿಗೆ ತೊಡಿಸಿದ ಹೊಸಕವಚ ಎನ್ನಬಹುದು. ಈ ಪ್ರೇಮವೇ ಪೂರ್ಣತೆಗೇರಿದಾಗ ಶಾಂತವಾಗಿ ಪರಿಣಮಿಸುತ್ತದೆ. ಶ್ರೀ ಡಿ.ಎಸ್. ಕರ್ಕಿಗಳ 'ಜೋಗದ ಯೋಗ'ವನ್ನು ಹೊಕ್ಕು ನೋಡಿ:

ನಾಟ್ಯಗೈವುದದ್ಭುತವು ಸೌಂದರ್ಯದ
  ಜೊತೆಗೆ ಜೋಗದಲ್ಲಿ
ನಿಲ್ಲು ಮರೆತು ಎಲ್ಲವನು ಇಲ್ಲಿ ಸೌಂ–
  ದರ್ಯಯೋಗದಲ್ಲಿ
ರಾಜನೊಂದು ಬದಿಯಲ್ಲಿ ರಾಣಿಯಂ
  ದದಲಿ ಗೌರವನಿತೆ

ಇಳಿದು ಬಹಳದೋ ಜರಿಯ ಶಾಲುವಿನ
ನಿರಿಯ ಚಿಮ್ಮುವಂತೆ
ಎರಡು ಪಾತ್ರಗಳನೊಂದೆ ಲಹರಿಯಲಿ
ಸೂತ್ರಗೊಳಿಸೆ ನೇತ್ರ
ಮನದಿ ಮೂಡುವುದು ಅರ್ಧನಾರಿ
ನಟನೊಂದು ನಾಟ್ಯ–ಚಿತ್ರ!

('ಭಾವತೀರ್ಥ': ೩೨ನೇ ಪುಟ)



# ೨

# ಶಾಂತ ಸಂದೇಶ

ಪ್ರಕೃತಿ ಸೌಂದರ್ಯದ ಸಮಾಧಿಯಲ್ಲಿ ನಮ್ಮ ಕವಿಗಳಿಂದು ಶಾಂತಿಯನ್ನು ಕಾಣಲೆಳಸಿದ್ದಾರೆ. ಇದು ಅತ್ಯಂತ ಸಹಜ. ದೈವ ಚಿಂತನವು ವಿಚಾರ ಪ್ರಧಾನರಿಗೆ ಕಷ್ಟ. ಅಚಿಂತ್ಯವನ್ನು ಚಿಂತಿಸಿ ಸಮಾಧಿ ಹೊಂದುವುದು ಸುಲಭವಲ್ಲ; ಅವ್ಯಕ್ತ ವಸ್ತುವಿನಲ್ಲಿ ಚಿತ್ತವನ್ನು ನಿಲ್ಲಿಸುವುದು ಅಸಾಧ್ಯ. ಆದುದರಿಂದ ಸುವ್ಯಕ್ತವಾದ ಮತ್ತು ಅನಾಸಕ್ತವೆಂದು ತೋರುವ ಅಥವಾ ತ್ರಿಗುಣಾತೀತ ಸಮದೃಷ್ಟಿಯಿಂದ ತ್ರೈಗುಣ್ಯವನ್ನು ಪ್ರದರ್ಶಿಸುವ ನಿಸರ್ಗದ ಸುಮುಖಗಳೊಂದೊಂದನ್ನೂ ಎತ್ತಿ ಹಾಡಿ ಮನಃ ಶಾಂತಿಯನ್ನು ಪಡೆಯುವುದು 'ಕಲಿಯುಗದಲ್ಲಿ ಲಘೂಪಾಯ' ಎಂದೆನ್ನಿಸುವಂತೆ ಆಧುನಿಕ ಕನ್ನಡ ಕವಿಋಷಿಗಳನೇಕರು ಪ್ರಕೃತಿಯೋಗವನ್ನು ಹಿಡಿದಿದ್ದಾರೆ. ಇದೇ ಶುದ್ಧವಾದ ಸೌಂದರ್ಯೋಪಾಸನೆಯೇನೋ ಎನ್ನಿಸುವಷ್ಟು ಮಟ್ಟಿಗೆ ಕವಿಗಳ ಮೆಚ್ಚಿಗೆ ಈ ವಿಷಯದಲ್ಲಿ ವ್ಯಕ್ತವಾಗಿದೆ. ಅಂಬಿಕಾತನದತ್ತರಂತೂ ತಮ್ಮ 'ಬೆಳಗಿ'ನಲ್ಲಿ ಈ ಮಾತಿಗೆ ಸ್ಪಷ್ಟ ಪ್ರಮಾಣವನ್ನು ಕೊಡುತ್ತಾರೆ:

ಗಿಡಗಂಟೆಯಾ ಕೊರಳೊಳಗಿಂದ
ಹಕ್ಕಿಗಳ ಹಾಡು
ಹೊರಟಿತು–ಹಕ್ಕೀಗಳ ಹಾಡು
ಗಂಧರ್ವರಾ ಸೀಮೆಯಾಯಿತು
ಕಾಡಿನಾ ನಾಡು
ಕ್ಷಣದೊಳು–ಕಾಡಿನಾ ನಾಡು
ಕಂಡಿತು ಕಣ್ಣು ಸವಿದಿತು ನಾಲಗೆ
ಪಡೆದೀತೀ ದೇಹ
ಸ್ಪರ್ಶಾ–ಪಡೇದೀತೀ ದೇಹ
ಕೇಳಿತು ಕಿವಿಯೂ ಮೂಸಿತು ಮೂಗು
ತನ್ಮಯವೀಗೇಹಾ
ದೇವರ–ದೀಮನಸಿನ ಗೇಹಾ
ಅರಿಯದು ಅಳವು ತಿಳಿಯದು ಮನವು

ಕಾಣsದೋ ಬಣ್ಣಾ
ಕಣ್ಣಿಗೆ–ಕಾಣsದೋ ಬಣ್ಣಾ
ಶಾಂತೀರಸವೇ ಪ್ರೀತೀಯಿಂದಾ
ಮೈದೋರೀತಣ್ಣಾ
ಇದು ಬರಿ–ಬೆಳಗಲ್ಲೋ ಅಣ್ಣಾ.

('ಗರಿ' : ೨–೩ನೇ ಪುಟಗಳು)

ಎಂಬಲ್ಲಿ ಪ್ರೀತಿಯ ಪಕ್ವವಾದ ಅವಸ್ಥೆ ಶಾಂತಿಯನ್ನು ಉದ್ಬೋಧಿಸುವುದೆಂದು ಅನುಭವ ಸಾಕ್ಷಿಯು ಹೇಳುತ್ತದೆ. ಪ್ರಕೃತಿಯ ಬೆಳಗುಮೊಗವನ್ನು ಉಷಸ್ಸಿನ ರೂಪದಲ್ಲಿ ವೈದಿಕ ಋಷಿಗಳು ಎಂದೋ ಕೊಂಡಾಡಿಬಿಟ್ಟಿದ್ದಾರೆ. ಉಷಸ್ಸು ವೇದದಲ್ಲಿ ಒಂದು ದೇವತೆ. ಅದರಲ್ಲಿ ಉಷಸ್ಸುಗಳೆಂದು ಅದನ್ನು ಬಹುವಚನದಲ್ಲಿಯೂ ಕರೆಯಲಾಗಿದೆ. ಆದುದರಿಂದ ಅಂದಿನ ಬೆಳಗಿನ ಮುಖವೆನಿಸಿದ ಉಷಸ್ಸು ಆ ಋಷಿ ಕವಿಗಳಿಗೆ ಶಾಂತಿಯ ಸಂದೇಶವನ್ನು ಕೊಟ್ಟರೆ, ಇಂದಿನ ಬೆಳಗುಗಳು ಈ ಹೊಸ ಕವಿಗಳಿಗೆ (ಹಾಗೂ ಅವರ ಮೂಲಕ ನಮ್ಮೆಲ್ಲರಿಗೆ) ಶಾಂತಿಯ ಸಂದೇಶವನ್ನು ಕೊಡುವುದು ಸ್ವಾಭಾವಿಕವಲ್ಲವೆ? ಈ ಶಾಂತಭಾವವು ವ್ಯಕ್ತಕ್ಕೂ ಅವ್ಯಕ್ತಕ್ಕೂ ನಡುವಿನ ಒಂದು ಸಂಕ, ಸೇತು, ಏಣಿ ಎಂಬಂತೆ ತೋರುತ್ತದೆ. ಅದರಿಂದಲೇ ಕವಿಯಿಲ್ಲಿ 'ಅರಿಯದು ಅಳವು ತಿಳಿಯದು ಮನವು' ಎಂದು ಉದ್ಗರಿಸಿದ್ದು ಎದ್ದು ಕಾಣುತ್ತದೆ. ಇದು ಶಾಂತಿಲೋಕಕ್ಕೆ ಮನಸ್ಸಿನ ಉದಾತ್ತಾವಸ್ಥೆ ತೆರೆಯುವ ಬಾಗಿಲು. ಪ್ರಾಪಂಚಿಕವಾದ ಅಷ್ಟ ಭಾವರಸಗಳು ಉಂಟುಮಾಡಿದ ಕ್ಷೋಭೆಯು ಸ್ತಿಮಿತ ರೂಪಕ್ಕೆ ಬರುವ ಅಥವಾ ಸಹಜ ಪ್ರಕೃತಿಯನ್ನು ಹೊಂದುವ ಬಗೆಯೇ ಮನಸ್ಸು ಶಾಂತವಾಗುವ ಬಗೆಯಲ್ಲವೇ? ನಮ್ಮ ಮನಸ್ಸು ಶಾಂತಿಪಥವನ್ನು ಹಿಡಿದು ನಡೆಯುವ ಚಿತ್ರವನ್ನು ಇಂದಿನ ಕವನಗಳಲ್ಲಿ ಪ್ರಕೃತಿ ಸೌಂದರ್ಯಕ್ಕೆ ಮೀಸಲಾದ ಪದ್ಯಗಳೇ ಹೆಚ್ಚು ಚೆನ್ನಾಗಿ ಕೊಡುತ್ತವೆ. ದೈವಭಕ್ತಿಯ ಪರಾಕಾಷ್ಠೆಯು ಹೀಗೇ ಶಾಂತ–ಸ್ಥಲಕ್ಕೊಯ್ಯಬಲ್ಲುದಾದರೂ ಅದು ಸರ್ವಾರಾಧ್ಯ ಮಾಧ್ಯಮವೆನಿಸಿಲ್ಲ. ನಿಸರ್ಗವಾದರೋ ಸರ್ವಾರಾಧ್ಯ–ಅಥವಾ ದೈವಕ್ಕಿಂತ ಹೆಚ್ಚು ವ್ಯಾಪಕವಾದ ಆರಾಧ್ಯ ಯೋಗ್ಯತೆಯುಳ್ಳದ್ದೆಂದು ನವನಾಗರಿಕರು ತಿಳಿಯುತ್ತಾರೆ ಈ ವಿಚಾರಯುಗದಲ್ಲಿ–ಎಂದರೆ ತಪ್ಪಾಗದಲ್ಲವೇ? ಈ ಅಂಶವನ್ನು 'ನಕ್ಷತ್ರ ವೀಕ್ಷಣೆ'ಯಲ್ಲಿ ಸ್ಪಷ್ಟಮಾಡಿಕೊಳ್ಳಬಹುದು:

ವಿಶ್ವಶಿಲ್ಪಿಯ ಕಲೆಯ ಅದ್ಭುತ ಪವಾಡವೆನೆ
ಸುರಕಲಾವಿದನಾದ ದೇವದೇವನ ಕಲೆಯ
ಸೌಂದರ್ಯದುತ್ತಮ ಪ್ರದರ್ಶನದ ಶಾಲೆಯೆನೆ,
ಭುವನಮೋಹನ ಕವಿಯ ಕೋಟಿ ಸಂಖ್ಯೆಯ ಕವನ
ಬರೆದಿರುವ ಹೊತ್ತಗೆಯೊ ಎನೆ, ಮೇಲೆ
ತೋರುತಿದೆ ನಕ್ಷತ್ರಖಚಿತವಾದೀ ವ್ಯೋಮ

ಆಲೋಚಿಸುತ್ತಿಂತು ಆಸ್ವಾದಿಸಿದೆನಂದು
ನಕ್ಷತ್ರವೀಕ್ಷಣೆಯ ಅಮೃತರಸನಿಮಿಷಮಂ ('ಗಾನಲಹರಿ' ೬ನೇ ಪುಟ)

ರಸಸಮಾಧಿಯು ಯಾವ ಆಲಂಬನ ವಸ್ತುವಿನಲ್ಲೂ ಆಗಬಹುದೆಂದು ಯಾರಾದರೂ ಹೇಳಬಹುದು. ಆದರೆ ಮನುಷ್ಯನ ಪ್ರಾಪಂಚಿಕ ವಿಚಾರದಿಂದ ಅಂಥ ಸಮಾಧಿಯು ತೀರ ಮುಕ್ತ ಎಂದು ಎಲ್ಲ ಸಂದರ್ಭಗಳಲ್ಲೂ ಹೇಳಲು ಸಾಧ್ಯವಿಲ್ಲ. ಇಷ್ಟ ಪ್ರಾಪ್ತಿಯಿಂದ ತೃಪ್ತಿಯುಂಟಾಗುತ್ತದೆ. ಮನಸ್ಸು ಅಕ್ಷುಬ್ಧವಾಗುತ್ತದೆ ಎಂಬುದು ನಿಜ. ಆದರೆ ಇಷ್ಟಗಳಲ್ಲಿ ಜೀವಿಗಳು ನಮ್ಮ ಪ್ರಚೋದನೆಗಳಿಗೆ ತಕ್ಕ ಪ್ರತಿಕ್ರಿಯೆಗಳನ್ನು ಕೊಡಬೇಕೆಂದು ಶರ್ತವು ಅನೇಕ ಕಡೆಗಳಲ್ಲಿ ಕಂಡು ಬರುತ್ತದೆ. ಅನುಕೂಲ ಪ್ರತಿಕ್ರಿಯೆಗಳನ್ನು ಅಪೇಕ್ಷಿಸಿ, ಅವುಗಳನ್ನು ಸಾಕಷ್ಟು ಪೂರ್ಣವಾಗಿ ಪಡೆದು, ಮನಸ್ಸು ಶಾಂತವಾಗುವಲ್ಲಿ–ಸ್ವತಂತ್ರರಾದ ಇತರರ ಮನಸ್ಸುಗಳಿಗೆ ನಮ್ಮ ಮನಸ್ಸು ಅಧೀನವಾಗಿರುವ ಅಂಶ ಗಮನಾರ್ಹ. ಆದರೆ ಗಿರಿ–ವನ–ನದಿ–ಸಮುದ್ರ–ನಕ್ಷತ್ರ–ಮೋಡ–ಬೆಳಗು ಮುಂತಾದ ನಿಸರ್ಗದ ಜಡಸ್ವರೂಪಗಳು ಆಲಂಬನವಾದಾಗ ನಾವು ಅವುಗಳಿಂದ ಅನುಕೂಲ ಪ್ರತಿಕ್ರಿಯೆಯನ್ನು ಬಯಸುವುದಿಲ್ಲ. ಅವು ಪ್ರತಿಕೂಲವಾದಾಗ ಗಂಭೀರವಾಗಿ ಅವುಗಳನ್ನು ನಾವು ಬುದ್ಧ್ಯಾ ದೂರಲು ಹೋಗುವುದೂ ಇಲ್ಲ. ಏಕೆಂದರೆ ಅಂಥ ವಸ್ತುಗಳ ಕಾರ್ಯಗಳು ಅನಿಚ್ಛಾಕೃತ ಎಂದು ನಮಗೆ ಪ್ರತ್ಯಕ್ಷ ಗೊತ್ತಿರುತ್ತದೆ. ಅನುಕೂಲ–ಪ್ರತಿಕೂಲ ಕಲ್ಪನೆಗಳಿಂದ ನಿರಪೇಕ್ಷವಾಗಿರುವ ಪ್ರಕೃತಿದರ್ಶನದ ಇಷ್ಟ ಮತ್ತು ಆ ಇಷ್ಟದ ಪೂರೈಕೆಗಳು ಶುದ್ಧವಾದ ಆನಂದವನ್ನು ನಮಗೆ ಕೊಡಬಲ್ಲವಲ್ಲವೇ? ಇಂಥ ಭಾವನೈರ್ಮಲ್ಯ ಕಂಡು ಬರುವುದು ಅಂಥಲ್ಲೇ ಹೆಚ್ಚೆಂಬುದು ಅನುಭವದ ಮಾತಾಗಿರುವುದರಿಂದಲೇ ಅದನ್ನು ನೀತಿಯ ಮಾನದಂಡದಿಂದ ಯಾರೂ ಅಳೆಯ ಹೋಗುವುದಿಲ್ಲ. ಆದುದರಿಂದ 'ರಸಸಮಾಧಿ' ಎಂಬ ಪದ ಸ್ಪಷ್ಟವಾಗಿ ಸಾರ್ಥಕವಾಗುವುದು ನಿಸರ್ಗದ ಜಡಾವತಾರಗಳಲ್ಲಿ ಅಥವಾ ಮಾನುಷೇತರ ರೂಪಗಳಲ್ಲಿ ನಮ್ಮ ಮನಸ್ಸು ಲೀನವಾದಾಗಲೇ. ಪ್ರಯೋಜನಗಳೆಲ್ಲವನ್ನು ಮರೆತು, ವಿಚಾರವು ಸ್ತಬ್ಧವಾಗಿ, ನಿಸರ್ಗದ ವಿಭೂತಿಯಲ್ಲಿ ಮನಸ್ಸು ಅಪಹೃತವಾಗುವ, ಲಯವಾಗುವ, ತನ್ನ ಇರವಿನ ಅರಿವನ್ನು ಕಳೆದುಕೊಳ್ಳುವ ನಿಶ್ಚಿಂತತೆಯ ರೂಪದ ಜೀವನ್ಮುಕ್ತಿಯ ಪ್ರಕೃತಿ ಸೌಂದರ್ಯದ ನಿರೀಕ್ಷಣೆಯಲ್ಲಿ ಸುಲಭ ಸಾಧ್ಯ ಎಂಬುದು ಎಲ್ಲ ಭಾವಿಕರಿಗೂ ತಿಳಿದ ವಿಷಯ. ಈ ದೃಷ್ಟಿಯಿಂದಲೇ 'ಜ್ಞಾನಿ'ಯಲ್ಲಿ ವಿನಾಯಕರು–

ಮಲೆನಾಡಿನೈಸಿರಿಗೆ
ನಿನ್ನ ಕಣ್ಮನವಿತ್ತು
ಸತಿಸುತರಿಗೆಂದೆದೆಯ ನಲುಮೆಯಿತ್ತು
ನೀನು ಬಾಳಿದೆ ಜ್ಞಾನ–
ಕೆಂದು ಎಲ್ಲವನಿತ್ತು
ಆತ್ಮವನು ಮುನ್ನೀರ ಮೊಳಗಿಗಿತ್ತು.

(ಬಾಳ ದೇಗುಲದಲ್ಲಿ : ೨೬೫ನೇ ಪುಟ)

ಜ್ಞಾನಿಯ ಕಣ್ಮನಗಳು ಮೊದಲು ಪ್ರಕೃತಿ ಸೌಂದರ್ಯದತ್ತ ಹರಿದುದನ್ನು ಉಲ್ಲೇಖಿಸಿದ್ದಾರೆ. ಅದು ಮನುಷ್ಯನ ಸಾತ್ವಿಕ ಸಂಸ್ಕಾರಕ್ಕೆ ಪ್ರಥಮ ಸೋಪಾನವೆಂದು ಅನೇಕರು ಗ್ರಹಿಸುತ್ತಾರೆ. 'ಬೆಟ್ಟಕುಳಿ'ಯ ಕೊನೆಯ ಭಾಗ ಇದನ್ನು ಪುಷ್ಟೀಕರಿಸುತ್ತದೆ:

ಹಗಲಿನಲ್ಲಿಯೂ ಸೊಗಯಿಸುವೆನುಯೆಂದಾಸುಧಾಂಶುವಿಲ್ಲಿ
ಬಾ–ನಗಲಿ ಗುಡ್ಡಮೆಯ್ಗೊಂಡು ಬಂದನಿದೊ ಹರಿತವರ್ಣದಲ್ಲಿ;
ಜಲಧಿಯಲ್ಲಿ ಜಲರೂಪ ಬೇಸರಾಗಿ
ತೆರೆಗಳಿತ್ತ ಸಾಗಿ
ತ–ಣ್ಣೆಲು ಮೇಲೆ ಮಲಗಿಹವು ಬೆಟ್ಟವಾಗಿ
ಹಸಿರು ತಲೆಯ ತೂಗಿ!
ಆತ್ಮ ಆತ್ಮ ಮಾತಾಡುವ ಮನೆಯಿದು,
ಪ್ರೀತಿ ಪ್ರೀತಿಯಲಿ ಬಿಟ್ಟಿಹ ತೆನೆಯಿದು,
ಧಾತ್ರಿದೇವಿಯೆದೆ ಸೊಬಗಿನ ತೆನೆಯಿದು
ಚೊಕ್ಕದಲ್ಲಿ ಬಲು ಚೊಕ್ಕ
ಪರ–ಮಾತ್ಮನೆಡೆಗೆ ಸೋಪಾನ ಪಂಕ್ತಿಯಿದು
ನೋಡಬಾರ ನನ್ನಕ್ಕ!

('ಮೇಘನಾದ' ೫೧–೫೨ನೇ ಪುಟಗಳು)

ಪಾವಿತ್ರ್ಯವೇ ಸೌಂದರ್ಯವೆಂದ ಗಾಂಧಿಯವರ ಮಾತನ್ನಿಲ್ಲಿ ನೆನೆದುಕೊಂಡರೆ ಮೇಲೆ ಹೇಳಿದ ಶುದ್ಧ ರತಿಯ ಆಲಂಬನವಾಗಲು ಜಡನಿಸರ್ಗದಷ್ಟು ಯೋಗ್ಯವಾದ ಪದಾರ್ಥವಿನ್ನೊಂದಿಲ್ಲ ಎಂಬುದು ಚೆನ್ನಾಗಿ ಗೊತ್ತಾಗುತ್ತದೆ. ನಿಸರ್ಗದ ಬೆಟ್ಟ–ಕುಳಿ (Hills and Valleyes) ಎಂಬ ಮೊಗವು (ಬಿ.ಹೆಚ್.ಶ್ರೀ) ಮರುಳ ಸಿದ್ಧಕವಿ ಹೇಳಿರುವಂತೆ 'ಚೊಕ್ಕದಲ್ಲಿ ಬಲು ಚೊಕ್ಕ'ವಲ್ಲವೆ? ಈ ಅರ್ಥವನ್ನಿಟ್ಟುಕೊಂಡೇ ಆತನು 'ಅದಿತಿ ಸೂಕ್ತ' ದಲ್ಲಿ ಇಂತೆಂದ:

ಲಯವಾದರು ಆಗಬಹುದು, ಆದರು ಅತ್ಯಲ್ಪ ನಷ್ಟ
ಪುನರುದಯಕ್ಕಿಲ್ಲ ಕಷ್ಟ; ಅನಿತ್ಯದಲಿ ಸ್ವಲ್ಪ ನಿತ್ಯ,
ಪ್ರಮಿತದೊಳಪ್ರಮಿತ ಕೊಂಚ, ಸುಖ ದುಃಖವ ದಾಟಿನಿಂತ
ಆನಂದದ ಅರ್ಥವನ್ನು ಅಂದಾಜಿಸಿ ತೋರಿಸುತಿಹ
ಭಾಸ್ವತ್ತೆಯ ಸೂಕ್ಷ್ಮ ಜಾಲ, ಜೀವ–ಜಡಾಶ್ರಯ ವಿಶಾಲ;
ಆದಿತ್ಯರು ಅರಳಿ ನಿಂತ ಕಲ್ಪ ಕುಸುಮತರು!
ಬೊಮ್ಮ ಹೊದೆದ ಸಮ್ಮ, ಶಕ್ತಿ, ಮಾಯೆ, ಪ್ರಕೃತಿ, ಕಂಡರೂ
ಕಾಣಿಸದಿಹ ಕರ್ಮದುಸಿರು; ಗೌಣವಾಗಿ ನಿಂದರೂ

ಪ್ರಧಾನತೆಯ ಗುಣವ ಹೊತ್ತೆ: ವಿರಾಡಾಗಿ ಬಂದರೂ
ಬೊಮ್ಮ–ನೀನು ಬೆದರದುಳಿದೆ ಬೆದರಿದರೂ ಅದಿರದಾದೆ!
ಭಕ್ತಳಾಗಿ ಅವಿಭಕ್ತಗೆ ಸಕ್ತಿಯಿಂದ ಬಾಗಿಹೆ–
ಅವನಂಬರವಾಗಿಹೆ;
ಅಲಿಪ್ತ ಸನ್ಮಾತ್ರಗೆ ಬಳಿದ ಲೇಪ್ಯ ಲೇಪ,
ಅವರ್ಣ್ಯ ಚಿನ್ಮಯನು ತೊಟ್ಟ ಸುವರ್ಣ್ಯ ರೂಪ!

('ಮಂಜುಗೀತ' ೯–೧೦ನೇ ಪುಟಗಳು)

ಪ್ರಕೃತಿಯನ್ನು ಸಾಧಕನ ಮನಸ್ಸು ಕಲ್ಪಿಸಿಕೊಳ್ಳುವ ಬಗೆಯನ್ನು ಅದಿತಿಯ ವರ್ಣನೆಯಲ್ಲಿ ಮೇಲಿನ ಪದ್ಯವು ನಮ್ಮ ಮುಂದಿಡುತ್ತದೆ. ದೇವತೆಗಳೆಲ್ಲ ಪ್ರಕಾಶಸ್ವರೂಪರು. ಅವರ ತಾಯಿ ಅದಿತಿ; ಅರ್ಥಾತ್ ಎಲ್ಲ ಬೆಳಕಿನ ಆಕರ. ಧಾತೃ, ಅರ್ಯಮ, ಮಿತ್ರ, ವರುಣ, ಇಂದ್ರ, ವಿವಸ್ವಂತ, ಪರ್ಜನ್ಯ, ಪೂಷ, ಅಂಶುಮಂತ, ಗಭಸ್ತಿಮಂತ, ತ್ವಷ್ಟೃ ಮತ್ತು ವಿಷ್ಣು ಎಂಬ ದ್ವಾದಶಾದಿತ್ಯರು ಅದಿತಿಯ ಪ್ರಸಿದ್ಧರಾದ ಮಕ್ಕಳು.

ವಿಶ್ವದ ಬೆಳಗ್ರೊಗವೇ ಅದಿತಿ; ಪ್ರಕೃತಿಯ ಅನಂತ ಪ್ರದೇಶವೇ ಅದಿತಿ; ಸ್ವಾತಂತ್ರ್ಯವೇ ಅದಿತಿ. ಆದುದರಿಂದ 'ಏನನ್ನು ಕೊಡಲೂ ಶಕ್ತಿಯಿಲ್ಲದ್ದು' ಎಂಬ ಅರ್ಥವುಳ್ಳ ಅದಿತಿಯು ಎಲ್ಲವನ್ನೂ ಕೊಟ್ಟರೂ ಉಂಟಾಗದ ಅಸೀಮ ಆನಂದಕ್ಕೆ ಸಾಧನ ಎಂಬುದೇ ಪ್ರಕೃತಿಯ ಅದಿತಿತ್ವವನ್ನು ಕವಿ ಎತ್ತಿ ಹಾಡಲು ಕಾರಣ. ಹೀಗೆ ಆಧುನಿಕ ಕಾವ್ಯ ಪ್ರಪಂಚದಲ್ಲಿ ಹೊಸಕವಿಗಳು ಶಾಂತಿಯ ಸಂದೇಶವನ್ನು ಹೆಚ್ಚಾಗಿ ಪ್ರಕೃತಿಯ ದರ್ಶನದ ಮೂಲಕ ಪಡೆಯಲು ಯತ್ನಿಸಿದ್ದಕ್ಕೆ ಇನ್ನೂ ಎಷ್ಟೋ ಉದಾಹರಣೆಗಳನ್ನು ಕೊಡಬಹುದು. ಆದರೆ ಪ್ರಸ್ತುತ ಸಂದರ್ಭಕ್ಕೆ ಇಷ್ಟು ಸಾಕೆಂದು ತೋರುತ್ತದೆ.



## ೩

# ವೀರ ಸಂದೇಶ

ಪ್ರಜಾಪ್ರಭುತ್ವದ ಇಂದಿನ ಸ್ವತಂತ್ರ ಆವರಣದಲ್ಲಿ ಜನತೆಯ ವೀರಭಾವದ ಉದ್ಬೋಧವಾಗುವುದು ದೇಶಭಕ್ತಿಯಿಂದ. ಶಾಂತಿ, ಸುಖ, ಸಂತೃಪ್ತಿಗಳನ್ನು ನಾಡಿನಲ್ಲಿ ಸ್ಥಾಪಿಸಲು ಬೇಕಾದ ರಾಷ್ಟ್ರನಿರ್ಮಾಪಕ ಕಾರ್ಯಗಳಲ್ಲಿ ನಾವು ಉತ್ಸಾಹ ತಾಳುವುದು ಇಂದು ಸ್ವಾಭಾವಿಕ. ಉತ್ಸಾಹವೇ ವೀರರಸದ ಸ್ಥಾಯಿ. ಭಾರತ ಹಾಗೂ ಕರ್ನಾಟಕ ಮಾತೆಯರನ್ನು ಕುರಿತು ಉಸಿರಿದ ಉತ್ಸಾಹೋದ್ಗಾರಗಳ ಸ್ಫೂರ್ತಿದಾಯಕತೆಗೆ ನಿದರ್ಶನವಾಗಿ ಮೊದಲು ಶ್ರೀ ಜಿ.ಆರ್. ಪಾಂಡೇಶ್ವರರ 'ನಿಜ ಸ್ವರಾಜ್ಯ ಮುಟ್ಟು' ಎಂಬ ಗೀತವನ್ನು ತೆಗೆದುಕೊಳ್ಳಬಹುದು.

ಕಟ್ಟು ಕಟ್ಟು ನಾಡಕಟ್ಟು
ಲೋಕಮತಕೆ ಪಟ್ಟಗಟ್ಟು
ನೀತಿ ನಿಯಮಗಳನು ತೊಟ್ಟು
ಜಾತಿಮತದ ಮದವ ಸುಟ್ಟು
ಸ್ವಾತಂತ್ರ್ಯದ ಸಮಭಾವದ
ಭದ್ರವಾದ ತಳಗಟ್ಟು
ಅದರ ಮೇಲೆ ಲೋಕಮತದ
ಪ್ರಜ್ವಲಿಪ ಕಿರೀಟವಿಟ್ಟು
ಕಟ್ಟು ಕಟ್ಟು ನಾಡ ಕಟ್ಟು!
ಸವಿದೆವೊಂದು ವರುಷ
ಸ್ವಾತಂತ್ರ್ಯದ ಹರುಷ!
ಬಡವರೊಡಲ –ಹಸಿವೆ ಬೆಂಕಿ, ನಾಡನೆಲ್ಲ ಸುಟ್ಟಿತು;
ಬಡಗಿನ ಕಿಡಿ ಸಿಡಿದು ತೆಂಕ ನಾಡನೆಲ್ಲ ಮುಟ್ಟಿತು!
ಕುರಿಯ ವೇಷದಿಂದ ತೋಳ ಕುರಿಮಂದೆಯ ಮುಕ್ಕಿತು:
ಸಿರಿವಂತರ ಸ್ವಾರ್ಥಿಗಳ ಧುರೀಣತ್ವ ಸೊಕ್ಕಿತು!

ದುರ್ಬುದ್ಧರ ದುರ್ಮಂತ್ರರ ನಿರ್ಭಿಡೆಯಿಂ ಕುಟ್ಟು;
ಸತ್ಯ–ಶಾಂತಿ–ಸೌಂದರ್ಯದ ಹೊಸನಾಡನೆ ಕಟ್ಟು
ನಿಜ ಸ್ವರಾಜ್ಯ ಮುಟ್ಟು!

('ಸುಪಂಥಾ' : ೧೪–೧೫ನೇ ಪುಟಗಳು)

ಗೀತದ ಅರ್ಥ ಸ್ವಯಂ ಸ್ಪಷ್ಟ. ಅದರಲ್ಲಿ ಭಾರತೀಯನೆದೆ ಮೆಚ್ಚುವ ಆದರ್ಶ ತತ್ವಗಳ ಉಲ್ಲೇಖವಿದೆ. ಆದರೆ ಅಂಥ ಸ್ವಾತಂತ್ರ್ಯ, ಸಮಭಾವ, ಜಾತ್ಯಾತೀತತೆ, ದೀನೋದ್ಧಾರಗಳನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನಕ್ಕೆ ದುರ್ಬುದ್ಧರೂ ದುರ್ಮಂತ್ರರೂ ಅಡ್ಡಿಯನ್ನೊಡ್ಡಿದ್ದರಿಂದ ಭಾರತೀಯ ಕೆರಳುತ್ತಾನೆ. ಲಂಚ ವಂಚನೆಗಳೆಂಬ ರೋಗಗಳೀಗ ನಮ್ಮ ರಾಷ್ಟ್ರದ ಆರೋಗ್ಯವನ್ನು ಹಾಳು ಮಾಡುತ್ತಿರುವುದು, ನಮ್ಮೆಲ್ಲರ ಅನುಭವಕ್ಕೆ ಬಂದ ವಿಷಯ. ಸತ್ಯ, ಶಾಂತಿ, ಸೌಂದರ್ಯಗಳು ಪ್ರಕಾಶಿಸುವ ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಾಮಾಜಿಕ ಮತ್ತು ಔದ್ಯಮಿಕ ಸಂಸ್ಥೆಗಳನ್ನು ಕಟ್ಟುವ ನಮ್ಮ ಪ್ರಯತ್ನವು ಪಂಚವಾರ್ಷಿಕ ಯೋಜನೆಗಳ ರೂಪದಲ್ಲಿ ಸಾಗುತ್ತಿರುವುದೂ ಸುವೇದ್ಯ. ಹಾಗೇ ಆ ನಮ್ಮ ಪ್ರಯತ್ನ ಅಸಮರ್ಪಕವಾಗಿ ನಡೆಯಲಾರಂಭಿಸಿದ್ದೂ ನಮಗೆ ಗೊತ್ತಿದೆ. ಅಂಥ ಅಸಮರ್ಪಕತೆಗೆ ನಮ್ಮ ಜನರಲ್ಲಿಯ ಹಲವರ ದುರ್ಬುದ್ಧಿ ಅಥವಾ ಸ್ವಾರ್ಥೈಕಪರಾಯಣತೆ ಹಾಗೂ ದುರ್ಮಂತ್ರ ಇಲ್ಲವೆ ಕಪಟಕಾರಸ್ಥಾನಗಳೇ ಕಾರಣವೆಂಬುದು ಗೊತ್ತಾದ ನಮಗೆ ಎಷ್ಟೋ ವೇಳೆ ಮೇಲೆ ಹೇಳಿದಂತೆ ಸಿಟ್ಟು ಬಂದು, ದುಷ್ಟಶಕ್ತಿಗಳನ್ನು ಕಟ್ಟಿ ಕೆಡೆಯುವ ವೀರಾವೇಶ ಉಂಟಾದದ್ದು ಉಂಟು. ಅಂಥ ವೀರಾವೇಶದ ಒಂದು ಬಗೆಯನ್ನು ಮೇಲಿನ ಪದ್ಯವು ವ್ಯಕ್ತಪಡಿಸುತ್ತದೆ. ಪದ್ಯದ ಟಕಾರಾಂತ್ಯಪ್ರಾಸವು ದಿಟ್ಟತನದ ಗಟ್ಟಿತನವನ್ನು ಬಲವಾಗಿ ಧ್ವನಿಸುತ್ತದೆ.

ಇದೇ ಮೇರೆಗೆ ಕಳೆಗುಂದಿದ ನಮ್ಮ ನಾಡಿನಲ್ಲಿ ಚೈತನ್ಯ ಪುಟಿದೇಳಲಿ ಎಂಬ ಭಾವದಿಂದ 'ದಂಡನಾಯಕ ಬಸವ ಬಾ' ಎಂದಿದ್ದಾರೆ ಗಂಗಪ್ಪನವರು:

ಸಿರಿಯು ಬಡವರ ನೆತ್ತರದ ಹಸಿ–
ಕುಂಕುಮದ ಹಣೆಗಿಡುತಿದೆ,
ನಿರತ ದುಡಿಯುವ ಕರ್ಮಯೋಗಿಗ–
ಳೆದೆಗೆ ಬಾಣವ ಬಿಡುತಿದೆ,
ಮಾನವನ ಹೃಚ್ಚರಧಿಮಥನದಿ
ಕಾಳಕೂಟವು ಹುಟ್ಟಿದೆ;
ದೀನಜನತೆಯು ವಿಷದ ಧೂಮದ
ಕತ್ತಲೊಳು ಕಂಗೆಟ್ಟಿದೆ.
ತಮದ ಗುಣಗಳ ತಮದ ಪಟಲವ
ಪರಿದು ಬಾ ಬಾ ಬಸವನೆ

ವಿಮಲ ಭಕ್ತಿ ಪ್ರೇಮ ಕ್ರಿಯೆಗಳ

ಸೂರ್ಯ ಬಾ ಬಾ ಬಸವನೆ,

ನಾಡಿನೇಳಿಗೆಗಾಗಿ ಬಾಳಿದ

ದಂಡನಾಯಕ ಬಸವ ಬಾ

ನಾಡ ನಾಡಿಗಳಲ್ಲಿ ನೂತನ

ಚೇತನೆಯ ತುಂಬಿಸಲು ಬಾ

('ಕಲ್ಯಾಣಕ್ರಾಂತಿ' : ೨೦–೨೫ನೇ ಪುಟಗಳಲ್ಲಿ)

ಮೇಲಿನ ಆಯ್ದ ನುಡಿಗಳು ಪ್ರಾರ್ಥನಾರೂಪದಲ್ಲಿದ್ದರೂ, ಭಾರತದ ಆಧುನಿಕ ಪರಿಸ್ಥಿತಿಯನ್ನು ಚಿತ್ರಿಸಿ, ಆ ಹಿನ್ನೆಲೆಯಲ್ಲಿ ದಂಡನಾಯಕನಾಗಿ ಬಾ ಎಂದು ಬಸವನಿಗೆ ಆಮಂತ್ರಣವಿತ್ತದ್ದು ಕೆಚ್ಚನ್ನು ಹೊಟ್ಟೆಯಲ್ಲಿ ಸಾಕಷ್ಟು ತುಂಬಿಕೊಂಡಿದೆ. ಇದು ವೀರಕ್ಕೊಂದು ಆಹ್ವಾನ. 'ಮೂವತ್ತ ಮೂರು ಕೋಟಿ'ಯಲ್ಲಿ ಬರುವ

ಡಿಂಭಗಳನೊಡೆದು ಬನ್ನಿ, ಕಂಭಗಳನೊಡೆದು ಬನ್ನಿ!

ಮೈಯಲ್ಲಿ ಮಡಗದಿರಿ, ಮನದಲ್ಲಿ ಅಡಗದಿರಿ,

ತಾಯಿ ಇದೊ ಬಂದೆವೆನ್ನಿ

ನಾ ಪಡೆದ

ಮೂವತ್ತು ಮೂರು ಕೋಟಿ!

('ಗರಿ' : ೫೧ನೇ ಪುಟ) (ಬೇಂದ್ರೆ)

ಎಂಬ ಸಾಲುಗಳು ಶೋಕ–ಸಂತಾಪಗಳ ಸೌದೆಯಿಂದ ಪುಷ್ಟವಾಗಿ ಕೊನೆಯಲ್ಲಿ ಪ್ರಜ್ವಲಿಸುವ ವೀರಾವೇಶದ ಕರೆಯನ್ನು ಪ್ರಕಟಿಸುತ್ತವೆ. 'ನರಕುರಿಗಳಂತಿರುವ ಮಕ್ಕಳೇ ನರಸಿಂಹರಾಗಿ ಅವತರಿಸಿರಿ' ಎಂಬ ಗರ್ಜನೆ ಹೃದಯವನ್ನು ಹೊಡೆದೆಬ್ಬಿಸುತ್ತದೆ. ಗ್ರಾಮಸಿಂಹಗಳನ್ನು ಅರಣ್ಯಸಿಂಹಗಳನ್ನಾಗಿ ಮಾರ್ಪಡಿಸುವ ವೀರ ಕಲೆಗಾರಿಕೆ ಮೇಲಿನ ಐದು ಸಾಲುಗಳಿಗಿರುವುದು ಹೊಸಗನ್ನಡ ಕಾವ್ಯಕಲೆಯ ಪ್ರತಿಭಾ ವೈಶಿಷ್ಟ್ಯಕ್ಕೊಂದು ಅದ್ವಿತೀಯ ಉದಾಹರಣೆ. ಅವುಗಳ ಅರ್ಥರಭಸವನ್ನು ಪದಗಳು ನಾದ ಸಾಮರ್ಥ್ಯ ಇಮ್ಮಡಿ–ಮುಮ್ಮಡಿ ಹೆಚ್ಚು ಮಾಡಿ ನಮ್ಮೆದುರು ಹಾಯಿಸಿರುವುದು ನರ–ನಾಡಿಗಳಲ್ಲಿ ವೀರ ಭಾವದ ವಿದ್ಯುತ್ಸಂಚಾರವನ್ನು ಯಾರಿಗಾದರೂ ಮಾಡಿಸದಿರದು. ವೀರರಸವೇ ಮೂರ್ತಿಮತ್ತಾಗಿ ಎದುರಾಯಿತೇ? ಎಂಬ ಭಾವಸ್ಪಂದ ಹೃದಯದಲ್ಲಿ ಉಂಟುಮಾಡಬಲ್ಲ ಇತರ ನಿದರ್ಶನಗಳತ್ತ ಹೊರಳೋಣ:

ಪಂಡಿತನೆ ಪಂಡ ಅಥವಾ ಮುಂಡ ಪಶು ಕಲಿಯ

ಖಂಡದಲಿ; ಮೇದಸ್ಸು ಮೇದಸ್ಸು; ವಿಜ್ಞಾನ–

ಮುಂಡುತರ್ಕವಪಾಯಮಾನವೀ ಯಜ್ಞಕ್ಕೆ;

ದಂಡವೇದದ ಸೂಕ್ತವನುವಾಕ: ಮುಂಡವೆ ಪು–
ರೋಡಾಶಪಿಂಡ–ಖಂಡನದ ಖಂಡಿತ ಸಾಮ–
ಗಾನ; ನೃತ್ಯ ಪ್ರೇತನೃತ್ಯ! ಜಯ ಚಂಡಿಕೇ,
ಚೆಂಡಿಕೆಯ ಮೊದಲೆ ಕತ್ತರಿಸಿಹೆ ನಿನ್ನಡಿಗೆ!
ಭಾರತೋದ್ಧಾರಕ್ಕೆ ಬಾರ ಭಂಗಿನಿ, ಗುಡಿಸು
ಕೌರವ್ಯ–ಬೌರವ್ಯ–ರೌರವ್ಯ ರಂಪಗಳ;
ಹೊಸ ಹುಟ್ಟ ಹೊಟ್ಟೆಯಲಿ ಹೊತ್ತ ಬಸಿರಿನ ಬಯಕೆ
ತೀರಲಿಂದೇ ಬಂದು ನಿಲ್ಲು ಜಗದಂಬೆ ಬಾ–
ಯುಂಟೆಂದೆ ಬೊಗಳುವರ ಮೂಕಿಸುವ ಮೂಕಾಂಬೆ!

(ನವ್ಯಧ್ವನಿ–೧೩ನೆಯ ಪುಟ)

"ಕ್ಷೇತ್ರದಲ್ಲಿ ಯಾತ್ರಿಕರನ್ನು ಸುಲಿದುಂಬ ಪಂಡರಂತಿದ್ದಾರೆ ನಮ್ಮ ತಜ್ಞರನೇಕರು. ಅಂಥವರು ವಧ್ಯರು. ದುಷ್ಟ ಸಂಹಾರಕ್ಕಾಗಿ ಮಾಡುವ ನರಮೇಧಕ್ಕೆ ಅಂಥ ವಂಚನಾವಿದಗ್ಧರು ತಕ್ಕ ಪಶುಗಳು. ಅವರು ಅನ್ಯಾಯಾರ್ಜಿತಗಳನ್ನುಂಡು ಬೆಳೆಸಿಕೊಂಡ ಬುದ್ಧಿಮತ್ತೆಯೇ ಆ ಯಜ್ಞಾಗ್ನಿಗೆ ಸುರಿವ ತುಪ್ಪ. ಅದಕ್ಕಾಹುತಿ ಕೊಡಲು ವಿಜ್ಞಾನದ ಹೆಸರಿನಲ್ಲಿ ಆ ತಜ್ಞರು ಮಾಡುತ್ತಿರುವ ಕುತರ್ಕವೆಂಬ ವಪೆ ಸಿದ್ಧವಾಗಲಿ. ಅಪರಾಧಿಗಳನ್ನು ದಂಡಿಸುವ ದಂಡನೀತಿ ಸೂತ್ರಗಳು ಯಜ್ಞದಲ್ಲಿ ಹೇಳುವ ಮಂತ್ರದ ಸ್ಥಾನವನಾಕ್ರಮಿಸಲಿ; ಸಾಮಗಾನದ ಸ್ಥಾನದಲ್ಲಿ ಅವರ ವಾದವನ್ನು ಖಂಡಿಸುವ ಖಂಡಿತೋಕ್ತಿಯ ನ್ಯಾಯನಿರ್ಣಯಗಳಿರಲಿ ಚಂಡಿಯೇ, ನಿನಗೆ ಜಯವಾಗಲಿ. ಹಳೆಯ ನಾಗರಿಕತೆಯ ಚಿಹ್ನವಾದ ತಲೆಗೂದಲನ್ನು ನಾನು ನಿನಗೆ ಮೊದಲೇ ಅರ್ಪಿಸಿಬಿಟ್ಟಿದ್ದೇನೆ. ಆ ಈ ಯೋಜನೆಗಳ ಕಾರ್ಯಾಚರಣೆಯಲ್ಲಿ ಲಕ್ಷಣಗಳನ್ನು ಲಕ್ಷಿಸದೆ ನುಂಗಿ–ನೀರು ಕುಡಿಯುವ ಕಪಟನಾಟಕಸೂತ್ರಧಾರರೆಂಬ ಕಸಗಳನ್ನು ಭಾರತದಿಂದ ದೂರ ಗುಡಿಸಿ ಒಗೆ. ಅವರ ಭಾಷಣದ ಬೊಬ್ಬೆಯಿನ್ನಡಗಲಿ, ನವಭಾರತ ನಿರ್ಮಾಣವನ್ನು ಹೃದಯಗರ್ಭದಲ್ಲಿಟ್ಟುಕೊಂಡ ನಿನ್ನ ಬಯಕೆಯು ಈ ಅಸುರರನ್ನು ಸಂಹರಿಸುವುದರ ಮೂಲಕ ತೀರಲಿ" ಈ ಮಾರಣ ಹೋಮದ ಭಾಷೆಯಲ್ಲಿ ರುದ್ರವೀರದ ಆವೇಶವಿದೆ; ಪ್ರಾರ್ಥನೆಗೆ ಪಾತ್ರಳಾದ ಚಂಡಿಯ ಚಂಡಪರಾಕ್ರಮದ ಆವೇದನೆಯಿದೆ. ಪ್ರಾರ್ಥಿಸುವ ಭಕ್ತನೇ ಚಂಡಿಯ ಅವತಾರ ತಾಳಿ ಮಾತಾಡುವಂತಿದೆ. ಚೋರತಜ್ಞರ ಮುಂಡವನ್ನು ಹಿಟ್ಟಿನುಂಡೆ ಮಾಡಿ ಚಂಡಿಯನ್ನು ತೃಪ್ತಿಗೊಳಿಸುವ ಮಹಾನರಮೇಧಕ್ಕೆ ಹಾಕಬೇಕು. ಅವಳ ಗಣಗಳಾದ ಪ್ರೇತಗಳು ಆನಂದಿಸಿ ಕುಣಿಯಬೇಕು–ಎಂಬುದು ಆವೇಶದ ಪರಾಕಾಷ್ಠೆ. ವೀರಕ್ಕೆ ರೌದ್ರಕೊಟ್ಟಷ್ಟು ಪುಷ್ಟಿಯನ್ನು ಇನ್ನಾವುದೂ ಕೊಡದು ಎಂಬುದನ್ನು ರನ್ನನ 'ಗದಾಯುದ್ಧ'ವನ್ನು ಓದಿದವರಿಗೆ ಹೊಸದಾಗಿ ಹೇಳಬೇಕಾಗಿಲ್ಲ.

ನಾವಿಂದು 'ಸ್ವಾತಂತ್ರ್ಯ' ಎಂಬ ರಾಜಕೀಯ ಮೌಲ್ಯವನ್ನು ಎತ್ತಿ ಹಿಡಿದಿದ್ದೇವೆ. ನಮಗಿಂದು ದಾಸ್ಯವು ಅಸಹ್ಯದ ವಸ್ತು. ಇತಿಹಾಸದ ನಾನಾ ಬದಲಾವಣೆಗಳ ಫಲವಾಗಿ

ಈ ಹಿಂದೆ ನಾವೆಲ್ಲ ಪರರ ಆಳಿಕೆಗೆ ಒಳಪಟ್ಟಿದ್ದೆವು. ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿದ್ದ ನಮ್ಮ ಜನತೆಯೀಗ ಆರ್ಥಿಕ, ಸಾಮಾಜಿಕ, ನೈತಿಕ ಸ್ವಾತಂತ್ರ್ಯಗಳನ್ನು ರೂಪಿಸಲು ಹೆಣಗುತ್ತಿದೆ. ಶತಮಾನಗಳಿಂದ ಬೆಳೆದು ಬಂದ ನಮ್ಮ ಮಾನಸಿಕ ಆವರಣದಲ್ಲಿ ದಾಸ್ಯದ ಯಾವ ಅಂಶವೂ ಇರದಂತೆ ಮಾಡಬೇಕೆನ್ನುತ್ತಿದ್ದೇವೆ; ಸ್ವತಂತ್ರವಾಗಿ ಯುಕ್ತಾಯುಕ್ತ ವಿವೇಕವನ್ನು ಕಂಡುಕೊಳ್ಳುವ ಶಿಕ್ಷಣಬೇಕೆನ್ನುತ್ತಿದ್ದೇವೆ; ಸ್ವಾಚ್ಛಂದ್ಯದಷ್ಟೇ ಅಂಧವಿಧೇಯತೆಯೂ ಹಾನಿಕರ ಎಂದು ನಾವಿಂದು ನಂಬಿದ್ದೇವೆ. ಯಾವ ಕ್ಷೇತ್ರದಲ್ಲೂ ನಮಗಿಂದು ನಿರಂಕುಶ ಪ್ರಭುತ್ವಬೇಡ. ನಿರಂಕುಶತೆ ಎಲ್ಲಿ ಕಂಡು ಬಂದರೂ ನಾವಿಂದು ಪ್ರತಿಭಟಿಸಲಾರಂಭಿಸಿದ್ದೇವೆ. ಶ್ರೀ ಕೋ. ಚನ್ನಬಸಪ್ಪನವರ "ನಿರಂಕುಶಾಧಿಕಾರಕ್ಕೆ" ಎಂಬ ಕವನ ಈ ಪ್ರತಿಭಟನೆಯನ್ನು ವ್ಯಕ್ತಪಡಿಸಿದ ಬಗೆಯನ್ನೀಗ ನೋಡೋಣ:

> ಧೂರ್ತ ದೈತ್ಯ ದೌರ್ಜನ್ಯಮಂ ನಿಲಿಸು ಓ ನಿಲಿಸು!
> ಗುಂಡಿಕ್ಕಿ ಕೊಂದು ಹಣಿದು ಮಣಿಸುವೆನೆಂಬ ಪೊಳ್ಳು
> ಹುಸಿ ಹುಮ್ಮಸದು ಬೇಡ; ನಿನ್ನಿರುವಿಕೆಗದೆ ಮುಳ್ಳು
> ಉಳಿವಾಸೆ ಇರ್ದೊಡಾ ಜನತೆಯಾಕಾಂಕ್ಷೆಯಂ ಸಲಿಸು!
> ಇಲ್ಲದಿರೆ, ಪ್ರಲಯಜ್ವಾಲೆಯ ಪೋಲ್ವ ಕುಪಿತ ಪ್ರಜಾಇಷ್ಟ
> ನಿನ್ನಂಥ ನೂರಾರು ಜಿಗಳೆಗಳ ನೆಕ್ಕಿ ನುಂಗುವುದು;
> ತುಳಿಯುವೆನ್ ಎಂಬ ನಿನ್ನ ಕಾಲನ್ ಕಚ್ಚಿ ಅಗಿಯುವುದು;
> ಮಹಾ ಹಿಮರಾಶಿ ಕೊಚ್ಚಿ ಬರೆ ತಡೆಯುವುದೆ ರಾಜದಂಡದ ಕಾಷ್ಠ?
> ಕೆನ್ನೂಟದೊರೆಗೆಯ್ದು ಅನುಚಿತ ಶಾಸನವಗೈಯುವೆಯಾ?
> ಹಿಂದೆ ನಿನ್ನಂತೆ ನೂರಾರು ರಾಜರ್ ಜನರೊಡನೆ ಕಾದಿ
> ತಮ್ಮವಸಾನವನೆ ಆಮಂತ್ರಿಸಿದ ಕರುಣಕಥೆ ಕೇಳೆಯಾ!
> ನಿರಂಕುಶಾಧಿಕಾರಮನ್ ಬಯಸಿಕೊಳ್ಳದಿರು ಶವ ಬೂದಿ!
> ಜನತೆಯದಕಣಿಗೆಯ್ಯುತ್ತಿದೆ ಚಂದನವ ಕಡಿದೊಟ್ಟಿ
> ಬಿಡುಗಡೆಯ ಸಾರುವುದು ಬಂಧನದ ಬೇಡಿಗಳ
> ಪುಡಿಕುಟ್ಟಿ!

('ಪ್ರಾಣಪಕ್ಷಿ' ೫೦ನೇ ಪುಟ)

ಈ ವಚನರಚನೆಯಲ್ಲಿ ವೀರತನದ ಕಡುಪು. ಕಟ್ಟಾಯಗಳು ತುಂಬಿವೆ. ಮನಸ್ವಿಯಾಗಿ ನಿರಂಕುಶಾಧಿಕಾರವನ್ನು ನಡೆಸಲು ಬರುವ ರಾಜನನ್ನು ಇಲ್ಲಿ ಸಾಂಕೇತಿಕವಾಗಿ ಗ್ರಹಿಸಿದರೆ, ಈ ಯುಗಧರ್ಮ ಪ್ರಜಾಧಿಕಾರವನ್ನು ಎತ್ತಿ ಹಿಡಿದಿರುವುದನ್ನು ಗಮನಕ್ಕೆ ತಂದುಕೊಂಡರೆ, ಪದ್ಯದ ವೀರಾವೇಶದೊಡನೆ ನಮ್ಮ ಮನಸ್ಸು ಸಮರಸವಾಗಿ ಅದರ ವೀರಸಂದೇಶವನ್ನು ಅರಗಿಸಿಕೊಳ್ಳಲು ಶಕ್ತವಾಗುತ್ತದೆ. ವ್ಯಕ್ತಿಯ ದಾಸ್ಯದಲ್ಲಿರಲು ಸಮಷ್ಟಿ ಒಪ್ಪದೆಂಬುದು ತಾತ್ಪರ್ಯವಾದರೂ ಆ ತಾತ್ಪರ್ಯವು ತನ್ನ ಪ್ರಕಟನ ಶೈಲಿಯ ಬಲದಿಂದ ಸ್ವಾತಂತ್ರ್ಯದ

ಇತರ ಅಲೆಗಳನ್ನೂ ನಮ್ಮ ಹೃದಯ ಸಮುದ್ರದಲ್ಲಿ ಎಬ್ಬಿಸಬಲ್ಲುದಾಗಿದೆ. ಅಂಥ ಅಲೆಗಳನ್ನು ಶ್ರೀ ಭುಜೇಂದ್ರ ಮಹಿಷವಾಡಿಗಳ 'ಹಿಂದುಳಿದುಹುರುಳಿಲ್ಲ' ಎಂಬ ದಿಟ್ಟ ನುಡಿಯಲ್ಲಿ ಚೆನ್ನಾಗಿ ಕಾಣಬಹುದಾಗಿದೆ:

ತರುಣರಾ ಮುನ್ನಡೆಗೆ ಮಾರ್ಗವದು ಮಾಡಲ್ಕೆ
ವಿಧವೆಯರ ಸಧವೆಯರ ಯಾತನೆಯ ಬಿಡಿಸಲ್ಕೆ
ಜಾತಿಯಾ ಭೂತವನೆ ಹೊಡೆದಾಚೆ ಹಾಕಲ್ಕೆ
ನೀತಿಯಾ ದೇವರನೆ ನೆಲೆಯಾಗಿ ನಿಲಿಸಲ್ಕೆ
ಹತ್ತಾಗಿ ಹರಿದವರನೊಂದಾಗಿ ಮಾಡಲ್ಕೆ
ಹೋಗಿಹರು ತ್ಯಾಗಿಗಳು ಮುಂದೋಡಿ ಅವರೆಡೆಗೆ
ಬೆಂದಿರುವ ನೊಂದಿರುವ ಮಾನವರ ಬಳಿ ಬಳಿಗೆ!
ಮುಂದಿರುವ ಮಂದೆಯನು ಕೂಡಲಿಕೆ ನಡೆ ಮುಂದೆ
ತ್ಯಾಗಿಗಳ ಬಗೆಯಲ್ಲಿ ಸಾಗಲಿಕೆ ನಡೆಮುಂದೆ!
ನಡೆ ಬೇಗ ನಡೆ ಬೇಗ ತಡಮಾಡಿ ಫಲವಿಲ್ಲ!
ಓಡೋಡು ಮುಂದೋಡು ಹಿಂದುಳಿದು ಹುರುಳಿಲ್ಲ!!

(ಮಾಯಾಮಂದಿರ ೨೦–೨೧ನೆಯ ಪುಟ)

ಈ ಸಾಲುಗಳಲ್ಲಿ ನವಭಾರತದ ಸಾಮಾಜಿಕ ಸದಾದರ್ಶಗಳ ಪಟ್ಟಿಯೇ ಬಂದಿದೆಯೆನ್ನಬಹುದು. ಈ ಸದಾದರ್ಶಗಳೊಂದೊಂದನ್ನೂ ಸಾಧಿಸಲು ಹೊರಡೆಂದು ಸಾಮಾಜಿಕನನ್ನು ಕವಿ ಹುರಿದುಂಬಿಸುತ್ತಾನಿಲ್ಲಿ. 'ಉತ್ತಿಷ್ಠತ ಜಾಗ್ರತ, ಪ್ರಾಪ್ಯವರಾನ್ನಿಬೋಧತ' ಎಂಬ ಹಳೆಯ ಜನಜಾಗೃತಿಯ ಸಂದೇಶದಂತೆಯೇ ಈ ಹೊಸ ಪದ್ಯವಾದರೂ ಅಯತ್ನಶೀಲರನ್ನು ಹೊಡೆದೆಚ್ಚರಿಸಿ, ಮೇಲೆ ಹೇಳಿದ ಸಾಮಾಜಿಕ ಸಿದ್ಧಿಗಳಿಗಾಗಿ ಹೋರಾಡಲು ಬಲವಾಗಿ ಪ್ರೇರಿಸುತ್ತದೆ. 'ಓ ನನ್ನ ಜನವೇ' ಎಂಬ ಪದ್ಯದಲ್ಲಿ ಶ್ರೀ ಗೋಪಾಲಕೃಷ್ಣ ಅಡಿಗರು ಕೊಟ್ಟ ಕರೆಯನ್ನೀಗ ಕೇಳೋಣ:

ಓ ಬನ್ನಿ ಜನವೆ, ಕನ್ನಡ ನಾಡ ಗಡಿಮೂಲೆ
ಮೂಲೆಯಿಂದ,
ಹಳ್ಳಿ ಪಟ್ಟಣಗಳಿಂದ:
ಮೈಸುರೋ, ಮಂಗಳೂರೋ, ಧಾರವಾಡವೋ
ರಾಯಚೂರೋ–ಎಂಟು ದಿಕ್ಕಿನಿಂದ
ಮುಳುಗಿದೀ ಕನ್ನಡವನೆತ್ತುವೊಮ್ಮನ ಮಿಣಿಯ
ಬಿಗಿವ, ಎಳೆಯುವ, ಗೆಲುವ ಭಾವದಿಂದ.
ಬನ್ನಿರೋ ಬನ್ನಿ, ನನ್ನೆದೆಗೆ ಬನ್ನಿ!

('ನಡೆದು ಬಂದ ದಾರಿ' ೬೪–೬೫ನೇ ಪುಟ)

ಈ ಸುಶ್ಲಿಷ್ಟ ಪಂಕ್ತಿಗಳು ಕನ್ನಡ ನಾಡಿನ ಹೃದಯೈಕ್ಯವನ್ನು ಸಾಧಿಸಲು ಪ್ರಯತ್ನಿಸಬೇಕೆಂಬ ಸಂದೇಶವನ್ನು ಜನತೆಗೆ ಕೊಟ್ಟಿವೆ. ಕರ್ನಾಟಕ ಏಕೀಕರಣವು ಕವಿಗಳ ಸ್ಥಾಯಿಯಾದ ರಸವಲ್ಲವೇ? ಈ ರಸದ ವೀರ್ಯವತ್ತೆಗೆ 'ಒಂದೇ ಕರ್ನಾಟಕ' ಮತ್ತೊಂದು ನಿದರ್ಶನ:

ಇಂದೇ ಮುಂದೇ ಎಂದೇ ಕರ್ನಾಟಕ ಒಂದೇ
ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ
ಇಲ್ಲಿಯ ಜನ–ಮನ–ಭಾಷೆಯು ಕನ್ನಡವದು ಒಂದೇ
ಒಂದೇ ಜನವೂ ಮನವೂ ಕನ್ನಡಿಗರು ಎಂದೇ
ಕುಲವೊಂದೇ ಸ್ಥಲವೊಂದೇ ನೀತಿಯ ನೆಲೆಯೊಂದೇ
ಹೀಗೆನ್ನದ ಹೆರವರು ಅವರಿದ್ದರು ಒಂದೇ
ಇರದಿದ್ದರು ಒಂದೇ!
ಕನ್ನಡವೆಂದೂ ಒಪ್ಪದು ಕರ್ನಾಟಕ ನಿಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ
ಕನ್ನಡ ಮಾತೇ ಮಾತೆಯು, ಕರ್ನಾಟಕ ಒಂದೇ
ಅದು ದೈವತ ಅದು ಜೀವಿತ ಒಪ್ಪಿಹೆವದುವೆಂದೇ
ನಮ್ಮದು ನಿಮ್ಮದು ಅವರದು ಈ ಆಸ್ತಿ ಪಾಸ್ತಿ.
ನಾಡಿನ ತಾಯಿಗೆ ಸೇರಿದೆ, ಬೇರೆಯ ಮನೆ ನಾಸ್ತೀ
ಕನ್ನಡ ಕಾಯಕದಲ್ಲಿಲ್ಲವು ಕಮ್ಮಿ ಜಾಸ್ತೀ
ಇದನೊಪ್ಪದ ಹೆರವರು ಅವರಿದ್ದರು ಒಂದೇ
ಇರದಿದ್ದರು ಒಂದೇ
ಕರ್ನಾಟಕ ಹಿತ–ವಿಹಿತವು ಕನ್ನಡ–ಕುಲದಿಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ

(ಬೇಂದ್ರೆಯವರ 'ಗಂಗಾವತರಣ' ೪೨ನೇ ಪುಟ)

ಈ ವೀರ ಘೋಷವು ಅಪೂರ್ವ ಚೈತನ್ಯದಾಯಕವಾಗಿದೆ. ಇದರದು ಶಾಪಾನುಗ್ರಹ ಶೈಲಿ. ಇಲ್ಲಿ ಭಾವದ ತೂಕ, ಹೃದಯದ ನಿಶ್ಚಯ, ಧೈರ್ಯರಭಸಗಳು ಒಂದನ್ನೊಂದು ಒತ್ತಿಕೊಂಡು ಬಂದು ಹೊರ ಹರಿದಿವೆ. ಜೀವನವನ್ನು ರೂಪಿಸಬಲ್ಲ ಸಾಹಿತ್ಯ ಶಕ್ತಿಗೆ ಇಂಥ ಮಾರ್ಮಿಕವಾದ ಉತ್ತೇಜನ ಗತಿಯಿರುತ್ತದೆ, ನಿರ್ಭಿಡೆಯ ಧಾಟಿಯಿರುತ್ತದೆ. ಕರ್ನಾಟಕದ ಜೀವನಧರ್ಮವನ್ನು ಸಾರುವ ಈ ಸಾಹಿತ್ಯ ಧರ್ಮವೇ ಎಳೆಯ ಕರ್ನಾಟಕವನ್ನು ಬೆಳೆಯಿಸಿ ಕಟ್ಟಿ ನಿಲ್ಲಿಸ ಬಲ್ಲುದಾಗಿದೆ 'ರಣಭೈರವಿ'ಯಲ್ಲಿ ಶ್ರೀ ವಿ.ಜಿ. ಭಟ್ಟರ ಗರ್ಜನೆಯೂ ಜೋರಾಗಿದೆ.

ಸರಿ ಹಿಂದೆ ಸರಿ ಹಿಂದೆ ಸರಿ ಹಿಂದೆ ಗಂಡೆ
ಗಂಡಲ್ಲ ಹೆಣ್ಣು ನೀನೆಂಬುದನು ಕಂಡೆ
ನಾಡೆಲ್ಲ ಸೆರೆಯೊಳಿರೆ ತೋಳ್ಸೆರೆಯು ಬೇಕೆ?
ಕ್ಷಾಮ ವಿಷ ಕುಡಿಯುತಿರೆ ತುಟಿಯ ಸೊದೆಯೇಕೆ?
ಕಲಿ ತಬ್ಬಿರಲು ಮೈಯ ಹೆಣ್ಣಲ್ಲ ಹೆಣ್ಣು
ನಾನಿಂದು ಭೈರವಿಯು ಹರನ ಕಿಡಿಗಣ್ಣು
ಹೆಳಲು ಹಾವಾಗಿಹುದು ಅರಿ–ಮಾಂಸ ಮುಡಿವೆ
ನಾಲಿಗೆಯು ಕೇಸುರಿಯು ಕೆನ್ನೀರ ಕುಡಿವೆ
ಕಹಳೆಯಾಗಿದೆ ಕಂಠ ಎದೆ ಸೂಲ ಸಾಲೆ
ಮೂರ್ತಿಗೊಂಡಿಹುದೆನ್ನೊಳಿದೊ ರುದ್ರಲೀಲೆ
ಕೈಗಳಲಿ ಪಾಂಚಜನ್ಯವು ಗಂಡುಗೊಡಲಿ
ಕಣಕಿಳಿದಿಹೆನು ಹೆಣ್ಣು ಜಯ ಸಿಗಲಿ ಬಿಡಲಿ
ಗಂಡಸಾದರೆ ಗಂಡೆ ನೀನಿಂದು ರುದ್ರ
ಬೆಂಡೆದೆಯ ಬೂಚಿಯಿರೆ ಕ್ರಿಮಿಕೀಟ ಕ್ಷುದ್ರ!

('ರಕ್ತಾಂಜಲಿ' : ೭–೮ನೇ ಪುಟ)

'ಪೌರುಷರಸಃ ಸ್ತ್ರೀಣಾಂ ಕುತಃ ಸಿಧ್ಯತಿ?' ಎಂದ ಜಯದೇವನ ಮಾತಿನಂತೆ ಜಗತ್ತಿನಲ್ಲಿಯೇ–ಅದರಲ್ಲೂ ಹೆಚ್ಚಾಗಿ ಭಾರತದಲ್ಲಿ–ವೀರ ಕಾರ್ಯಗಳಿಗೆ ಗಂಡಸು ಪ್ರಥಮಾಧಿಕಾರಿಯಾಗಿರುವುದು ಸಾಮಾನ್ಯವಾದ ಸಾಂಸ್ಕೃತಿಕ ನಿಯಮ. ಈ ಭಾವನೆ ಅಂತತಃ ಹೆಣ್ಣು ಗಂಡುಗಳಿಬ್ಬರಲ್ಲೂ ಸ್ಥಿರವಾಗಿರುವುದರಿಂದ ಪ್ರಾಣಿಗಳಲ್ಲಿರುವಂತೆಯೇ ಭಾರತದ ಪ್ರಾಚೀನ ಯೋಧಧರ್ಮವು ಹೆಂಗಸಿಗೂ ಗಂಡಸಿಗೂ ಯುದ್ಧವಿಲ್ಲ ಎಂದಿತು. ಹೆಂಗಸು ವೀರೆಯಾಗಬಯಸುವುದಕ್ಕಿಂತ ವೀರಮಾತೆಯಾಗಬಯಸುವುದು ರೂಡಿ. ಶ್ರೀ ಅರವಿಂದಾಶ್ರಮದ ಶ್ರೀಮಾತೆಯಾದರೂ ಇಂದು ಹಾಗೇ ಅಪ್ಪಣೆ ಕೊಡಿಸಿದ್ದಾರೆ. ಆದುದರಿಂದ ಇದು ನಮ್ಮ ಪ್ರಾಚೀನ ಆದರ್ಶವೂ ಹೌದು. ಅರ್ವಾಚೀನ ಆದರ್ಶವೂ ಹೌದು. ಇದನ್ನು ಮನೋಭೂಮಿಕೆಯಲ್ಲಿಟ್ಟುಕೊಂಡೇ ಶ್ರೀ ಭಟ್ಟರು ಹೆಣ್ಣಿನ ಬಾಯಿಂದ ಗಂಡನ್ನು ಮೂದಲಿಸುವಂತೆ ಮಾತನಾಡಿಸಿದ್ದಾರೆ. ಹೆಣ್ಣಿಗೆ ವೀರಮನೋಧರ್ಮವಷ್ಟೇ ಮುಖ್ಯ. ಗಂಡಿಗೆ ವೀರಮನೋಧರ್ಮವೂ ಮುಖ್ಯ, ವೀರಕರ್ಮದ ಕೌಶಲ್ಯವೂ ಅಷ್ಟೇ ಮುಖ್ಯ. ಇದಕ್ಕೆ ಅವರವರ ದೈಹಿಕ ಉದ್ದೇಶಗಳೇ ಸಾಕ್ಷಿ. ಈ ನಿಸರ್ಗ ನ್ಯಾಯದ ಸಾಮಾನ್ಯ ಧೋರಣವನ್ನು ಗ್ರಹಿಸಿಕೊಂಡ ಸಹೃದಯರಿಗೆ ಇಲ್ಲಿಯ ವೀರಪ್ರೇರಣೆ ಹೃದಯಂಗಮವಾಗುತ್ತದೆ. ಇಂದಿನ ಕಾಲದಲ್ಲಿ ಹೆಂಗಸರೂ ಮಿಲಿಟರಿಗೆ ಸೇರಿರಬಹುದು. ಆದರೆ ರಣರಂಗದಲ್ಲಿ ಮುಖಾಮುಖಿಯಾಗಿ ನಿಂತು ಶಸ್ತ್ರಪಾಣಿಗಳಾಗಿ ಹೋರಾಡುವ ಕಾಲಾಳುಗಳಲ್ಲಿ ಸ್ತ್ರೀಯರ ಸಂಖ್ಯೆ ಶೂನ್ಯವೇ ಅಲ್ಲವೇ? ಈ ದೃಷ್ಟಿಯಿಂದ ನೋಡಿದಾಗ

'ಗಂಡಲ್ಲ ಹೆಣ್ಣು ನೀನೆಂಬುದನು ಕಂಡೆ' ಎಂಬ ಭೈರವಿಯ ವೀರವಾಣಿಯ ಮೊನಚು, ಹರಿತ ಅರ್ಥವಾಗುತ್ತದೆ. ದಯೆಯಲ್ಲಿ, ದಾನದಲ್ಲಿ, ಸೇವೆಯಲ್ಲಿ ಹೆಂಗಸೂ ಗಂಡಸೂ ಸಮಾನ ವೀರತನವನ್ನು ತೋರಿಸಬಹುದು. ಆದರೆ ಸ್ಥೂಲದೇಹದ ಕಾರ್ಯವೇ ಪ್ರಧಾನವಾಗಿರುವ ಕುಸ್ತಿ–ಕಾಳಗಗಳು ಇಂದಿಗೂ ಗಂಡಸಿಗೇ ವಿಶಿಷ್ಟವಾಗಿವೆಯಲ್ಲವೇ? ಈ ಮಾತುಗಳಿಗೆ ಅಪವಾದಗಳಿದ್ದರೆ ಅವು ನಿಯಮಗಳನ್ನು ಸಿದ್ಧಮಾಡಿಯಾವಲ್ಲದೆ ವಿರೋಧಿಸಲಾರವು. ಅಕ್ಕ ಮಹಾದೇವಿಯ ಸನ್ಯಾಸವು ಅಪವಾದವಾಗಿ ಸ್ತ್ರೀಯರ ಸನ್ಯಾಸದ ಉದಾಹರಣೆಗಳ ಅತ್ಯಲ್ಪ ಸಂಖ್ಯೆಯನ್ನು ಎತ್ತಿ ಹಿಡಿಯುತ್ತಿಲ್ಲವೇ? ಹಾಗೇ. ಇದರಿಂದ ಹೆಂಗಸಿನ ಹಿಮ್ಮೆಟ್ಟು ಗಂಡಸಿನ ಮುಮ್ಮೆಟ್ಟಿಗೆ ಮತ್ತಷ್ಟು ಉತ್ತೇಜಕವಾಗಿ ಪರಿಣಮಿಸುವಂತಾಗಿದೆ; ಹೆಂಗಸಿನ ವೀರವು ಗಂಡಸಿನ ನಿರ್ವೀರ್ಯತೆಗೆ ರಾಮಬಾಣದಂಥ ಭಾವನಾತ್ಮಕ ಔಷಧವಾಗಿ ಇತಿಹಾಸದಲ್ಲಿ ಫಲಿಸಿದೆ. 'ಹಿಂದೂ ವೀರರು' ಎಂಬ ಗೀತವನ್ನು ಗಮನಿಸಿ;

ಬಹು ಬಲಶಾಲಿಯು ಅಂತಃಕರಣವು
ನಮ್ಮಯ ಬಲ ನಮ್ಮೊಳಗಿಹುದು:
ಬಹುವಿಧ ಬಾಧೆಯ ದುಃಖಕೆ ಬೆದರೆವು
ಎದೆಗಾರಿಕೆ ನಮ್ಮೊಳಗಿಹದು!
ಆಸುರ ವೃತ್ತಿಯ ರಾಗದ್ವೇಷದ
ಮಾಯಾಮೋಹಕೆ ಹಗೆ ನಾವು;
ಸಾಸಿರ ಆಸೆಯ ಮುರಿಯುತ ಸುಖಸುಮ–
ಶಯ್ಯೆಯನೊದೆಯುತ ನಡೆಯುವೆವು!
ಚಿಂತೆಯ ಕಂತೆಯ ಬೇಗೆಯುಬಾರದು
ನಿರ್ಮಲ ಕರ್ಮಠ ಮನದಲ್ಲಿ;
ಸಂತತ ಶಾಂತದಿ ನಡೆದಿರೆ, ಒಂದರೆ
ಚಣ ವೆತೆ ತಡೆಯದು ಪಥದಲ್ಲಿ–
ಮನದಲಿ ಆಸೆಯು ಕುಗ್ಗದು, ದಾರಿಯ
ದಣಿವಿಕೆ ತಡೆಯದು ಮಾರ್ಗವನು;
ಕೊರಗದ ಹೃದಯದ ದೀಪವು ಹರಡಿದೆ
ಪ್ರತಿಕ್ಷಣ ನೂತನ ಕಿರಣವನು:
ಪ್ರಗತಿಯ ಪಥದಲಿ ಅಡಿಗಳ ಕೆಡದಲೆ
ಬಾಗದೆ ಬಳುಕದೆ ನಡೆಯುವೆವು!
ದೃಢ ವಿಶ್ವಾಸದ ಶಸ್ತ್ರವ ತ್ಯಾಗದ
ಕವಚವ ತೊಟ್ಟೆವು ರಣಕಾಗಿ:

ಸುಡಿಸುತ ನಡೆವೆವು ತನು ಜೀವನಗಳ
ನಿಜ ವೈಭವ ಚಿರ ಸುಖಕಾಗಿ!

('ಅರ್ಚನಾ' ೬೪ನೇ ಪುಟ)

ಈ ಪ್ರತಿಜ್ಞಾವೀರ ವಾಣಿಗಳು ನಮ್ಮ ರಾಷ್ಟ್ರದ ನವನಿರ್ಮಾಣದಲ್ಲಿ ಕಂಕಣ ತೊಟ್ಟ ಹೊಸ ನಾಗರಿಕರ ಎದೆಯಲ್ಲಿ ವಿದ್ಯುತ್ಸಮ ಸ್ಫೂರ್ತಿಯನ್ನು ಮೂಡಿಸಬಲ್ಲವು. ನಿರ್ವೀರವೋ ಏನೋ ಎನಿಸಿದ ನಮ್ಮಿ ಉರ್ವೀತಳವಿಂದು ಸಚೇತನವಾಗಿ ಪುನಾರಚನೆಯನ್ನು ಭರದಿಂದ ಸಾಗಿಸಿಕೊಂಡು ಹೋಗಬೇಕಾದರೆ ಇಂಥ ಉತ್ಸಾಹವರ್ಧಕವಾದ ವೀರೋದ್ಗಾರವು ಜನಕವಿಗಳ ಲೇಖನಿಯಿಂದ ಇನ್ನೂ ಹೆಚ್ಚು ಹೆಚ್ಚಾಗಿ ಹರಿದು ಬರಬೇಕು. ನಮ್ಮೆದೆಯಲ್ಲಿ ವೀರಗುಣ ಬೆಳೆಯಬೇಕಾದರೆ ನಾವಿಂದು ಸಾರ್ವಜನಿಕ ಚಿಂತನದ ಸದಭ್ಯಾಸವನ್ನು ಅಳವಡಿಸಿಕೊಳ್ಳಬೇಕು. ಹತ್ತು ಜನರ ಕಷ್ಟವೇ ನಮ್ಮ ಕಷ್ಟ ಎಂಬುವನ್ನು ಜೀರ್ಣಿಸಿಕೊಳ್ಳದಿದ್ದರೆ

ಮೇಲಿನ ಮಾದರಿಯ ಪದ್ಯಗಳು ನಮಗೆ ರುಚಿಸವು: ನಾವು ಜಂಭಕೊಚ್ಚಿಕೊಂಬ ನಮ್ಮ ರಾಷ್ಟ್ರೀಯತೆಗೂ ಅರ್ಥವಿಲ್ಲ. ಸಾಂಘಿಕ ಹಿತವನ್ನು ಸ್ವಹಿತವೆಂದು ಭಾವಿಸುವ ಸಂದರ್ಭವೊಂದೇ ನಮಗಿಂದು ಗೌರವಾರ್ಹವಾಗಿ ಪರಾಕ್ರಮವನ್ನು ಪ್ರದರ್ಶಿಸಲು ಉಚಿತವೆನಿಸಿದ್ದು. ಆದುದರಿಂದ ನಮ್ಮ ಗಣರಾಜ್ಯದಲ್ಲಿ ಗಣಧರ್ಮವೇ ಸ್ವಧರ್ಮ, ಗಣಹಿತವೇಗಣ್ಯ, ಗಣಕಾರ್ಯವೇ ವೀರಕಾರ್ಯ!



## ೪

# ಬೀಭತ್ಸ ಸಂದೇಶ

ಬೇಡವಾದುದು ಯಾವುದೆಂಬುದನ್ನು ಎತ್ತಿ ಒತ್ತಿ ಹೇಳಿದರೆ, ಬೇಕಾದುದು ಯಾವುದೆಂಬುದು ಚೆನ್ನಾಗಿ ಗೊತ್ತಾಗುವುದು. ನಮಗೆ ಯಾವ ವ್ಯಕ್ತಿ, ಗುಣ, ಕಾರ್ಯ ಅಥವಾ ಕಲ್ಪನೆ ಜುಗುಪ್ಸೆ ಹುಟ್ಟಿಸುವುದೋ ಅದು ಅಸಹ್ಯ (ಅಸಹನೀಯ) ಎನಿಸುತ್ತದೆ. ಈ ಅಸಹ್ಯದ ತೀಕ್ಷ್ಣಭಾವವು ತದ್ವಿರುದ್ಧವೆನಿಸುವ ಸಹ್ಯ, ಗ್ರಾಹ್ಯ ಪದಾರ್ಥಗಳ ಅಪೇಕ್ಷಣೀಯತೆಯನ್ನು ಪ್ರಖರವಾಗಿ ಧ್ವನಿಸುತ್ತವೆ. ಇಲ್ಲಿ ಜುಗುಪ್ಸೆ ಸ್ಥಾಯಿಭಾವ, ಭೀಭತ್ಸವು ರಸ. ನಮ್ಮ ಪರಂಪರಾಗತ ನಾಗರಿಕತೆಯಲ್ಲಿ ಕಂಡು ಬರುವ ಮಾನಸಿಕ ಹಾಗೂ ದೈಹಿಕ ಅಭ್ಯಾಸಗಳಲ್ಲಿ ಬದಲಾದ ಕಾಲಕ್ಕನುಗುಣವಾಗಿ ಕೆಲವು ತ್ಯಾಜ್ಯ ಮತ್ತು ಕೆಲವು ಗ್ರಾಹ್ಯ. ತ್ಯಾಜ್ಯವಾದ ದೃಷ್ಟಿಕೋನಗಳು, ಕಲ್ಪನೆಗಳು, ರೂಢಿಗಳು, ಪದ್ಧತಿಗಳು, ವಿಚಾರಗಳು ಪಾತ್ರೆಗಂಟಿದ ಕಿಲುಬಿನಂತೆ ನಮ್ಮ ಮನಸ್ಸಿಗಂಟಿಕೊಂಡಿರುತ್ತವೆ. ಭಾರತವೊಂದು ಬಹಳ ಹಳೆಯದೇಶ. ಇಲ್ಲಿ ಸಮಾಜಕ್ಕೂ ವ್ಯಕ್ತಿಗೂ ಅನಾರೋಗ್ಯಕರವಾದ ಹಲವಾರು ಧಾರ್ಮಿಕ, ನೈತಿಕ, ಸಾಮಾಜಿಕ ಕಲ್ಪನೆಗಳು ನಡತೆಗಳೂ ಉಳಿದುಕೊಂಡಿವೆ. ನಮ್ಮ ನಾಗರಿಕತೆಯ ಅಂಥ ಅಸಹ್ಯ ಮುಖವನ್ನು 'ಕೃಷ್ಣನ ಕೊಳಲಿ'ನಲ್ಲಿ ಬರುವ ಈ ಕೆಳಗಿನ ಸಾಲುಗಳು ತೀಕ್ಷ್ಣವಾಗಿ ಚಿತ್ರಿಸುತ್ತವೆ:

ನಿಂತೆ ರುಗ್ಣಗಿರಿಯ ಭಗ್ನ ಶಿಖರದ ಮೆದೆ ಕೂದಲ ಕೊಳೆ
ಕೋಟೆ ಕೆಳಗೆ
ಬಿದ್ದ ಹಲ್ಲ ಬಚ್ಚ ಬಾಯಿ ಲೊಚ ಲೊಚ ಲಟ್ಟಣಿಸಿದಂತೆ
ಆಕಳಿಸುವ ಕಿರಲು ಚಿಲಕ
ಅರವತ್ತರ ಕಚ್ಚೆಹರಕುತನದ ತೆವಲು ದುಡುಕಿದಂತೆ
ಹೆಬ್ಬಾಗಿಲಿನರೆತೆರೆದ ಬಾಯಿ.
ಕಮರುತೇಗುಬಿಟ್ಟು ಮುಖವ ಮುದ್ರಿಸಿದೊಲು ಕೊತ್ತಳಗಳು,
ಸುಕ್ಕು ಗೋಡೆ
ಗಾರೆ ಬಿದ್ದು ಗೋಗರೆಯುವ ಇಟ್ಟಿಗೆ. ಕುಸಿದ ಕಂಭ.

ಬಾಗಿದ ಬೆನ್ನೆಲುಬು ಜಂತಿ, ತೊಲೆ, ರೀಪು
ಲೋಳೆ ಜೊಲ್ಲು ಚೆಲ್ಲಿದವೊಲು ಅಲ್ಲಿ ಇಲ್ಲಿ ಕೊಳೆವ ನೀರು
ಬಿರುಕುಗೋಡೆ ಸಂದಿ ಸಂದಿ ಜೇಡನ ಬಲೆ–ಪುರಾಕೃತದ
ಪೊರೆ, ಪೊರೆ, ಪೊರೆ, ಹೇರಿದೆ
ಬಾಗಿಲ ಬಳಿ ಕೈದೊಣ್ಣೆಗೆ ಸಿಂಹಮುಖದ ಭೀಕರ ಹೊರೆ;
'ದೊಂಗಲುನ್ನಾರು ಜಾಗ್ರತ!'
ಬಾವಲಿಹಳೆಯುಚ್ಚೆ ಹಿಕ್ಕೆ ಗಿಜಿ ಗಿಜಿ ಗಿಜಿ ಚಾವಡಿಯಲಿ
ಗೋಪಿಕೆಯರ ಹಳಸುನೆಳಲ ಮೇಲೆ ನೊಣೆದು ಮುಸುರುತ್ತಿವೆ
ಮತಿದಾಸ್ಯದ, ಮತದಾಸ್ಯದ ನೊಣ, ನುಸಿ.
ಬಾಲವಾಡಿಸುತ್ತ ನಾಯಿ
ಸತ್ತ ಗರುಡಪಕ್ಷಿ ರೆಕ್ಕೆ ಕಿತ್ತಾಡಿಸುತಿರೆ ಬಾಯಿ!

(ಅಡಿಗರ 'ಚಂಡೆ ಮದ್ದಳೆ' : ೫೩ನೇ ಪುಟ)

ಇಲ್ಲಿ ಕೊಟ್ಟ ಸಾಲುಗಳಲ್ಲಿ ಒಂದು ಹಳೆಯದಾದ ಬೃಹದಾಕಾರದ ಹೊಲಸು ಮನೆಯ ಚಿತ್ರ ನಮಗೆದುರಾಗುತ್ತದೆ. ಅದನ್ನು ಮನೆಯೆಂದರೂ ಸರಿಯೆ, ಕೋಟೆಯೆಂದರೂ ಸರಿಯೆ–ಅದೊಂದು ಸಂಪೂರ್ಣವಾಗಿ ನಾಶಹೊಂದಲು ಕ್ಷಣಮಾತ್ರ ಬಾಕಿ ಇರುವ, ಅಸಹ್ಯ ವಸ್ತುಗಳಿಂದ ಅತಿಯಾಗಿ ತುಂಬಿರುವ ಸ್ಥಳ ಎಂಬುದು ಸ್ಪಷ್ಟವಾಗುತ್ತದೆ. Fool proof Evidence ದಡ್ಡನಿಗೂ ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ಹೊಳೆಯಬೇಕೆಂದು ಅತಿ ದಟ್ಟವಾದ ವರ್ಣಹೊಯ್ದ ಚಿತ್ರದಂತೆ ಪ್ರಸ್ತುತ ಗಣಪಂಕ್ತಿಗಳು ಅತ್ಯಸಹ್ಯ ಭಾವವು ರಸಿಕರಲ್ಲಿ (ತ್ಯಾಜ್ಯವಾದ ಹಳತನಗಳ ಬಗ್ಗೆ) ಮೂಡುವಂತೆ ಪ್ರಯತ್ನಿಸುತ್ತವೆ. ಅಂಥ ಮನೆ ಮತಿದಾಸ್ಯದ ಮಹಾಚಿಹ್ನ. ಅದರ ಬಗ್ಗೆ ನಮಗೆ ಜುಗುಪ್ಸೆ ಹುಟ್ಟಬೇಕು. ಹೊಸತೆಲ್ಲ ಹಸನಾದುದು ಎಂಬ ಮಾತು ಎಷ್ಟು ಅಸಂಬದ್ಧವೋ ಹಳತೆಲ್ಲಾ ಹೊನ್ನು ಎಂಬ ಮಾತೂ ಅಷ್ಟೇ ಅಸಂಬದ್ಧ. ಮೊದಲಿನ ಮಾತನ್ನು ಇಲ್ಲಿ ಹೇಳದೆ, ಎರಡನೆಯದಷ್ಟನ್ನೇ ಒತ್ತಿ ಹೇಳಿದಂತಿದೆ. ಪದ್ಯದ ಕೊನೆಯಲ್ಲಿ ಕೃಷ್ಣನ ಕೊಳಲು 'ಕೊಲುವ ದನಿಯನ್ನು ಕೊಂದು ಬದುಕಿಸುವ ದನಿಯನ್ನು ಮತ್ತು ಸಾವೆನು ಎಂಬ ಆಸೆಯನ್ನು ಕೆರಳಿಸುವ ದನಿಯನ್ನು 'ಕೊಟ್ಟಿದೆ ಎಂಬ ಅರ್ಥ ಬರುವಂತಿದೆ. ಅಂದಿನ ಆಹ್ಲಾದಕ ವಸ್ತುವಿಂದು ಜೀವೋತ್ತರ. ಮೃತ ಜಡ! ಯಾರಿಗೆ? ಯಾಕೆ? ಯಾವ ಸಂದರ್ಭಗಳಲ್ಲಿ? ಇಡಿ ದೇಶದ ದೃಷ್ಟಿಯಿಂದ ಕೆಲ ಪರಂಪರಾಗತವಾದ (ಸಾಂಪ್ರದಾಯಿಕ) ಆಚಾರ ವಿಚಾರಗಳು ತ್ಯಾಜ್ಯವೆನಿಸಿರುವುದನ್ನು ಅರಸಿನೋಡಲು ಕವಿ ಇಲ್ಲಿ ಪ್ರಚೋದಿಸಿದ್ದಾನೆ. ಎಂದು ಬಾಸವಾಗುತ್ತದೆ. ಇಂಥ ಆತ್ಮಶೋಧ ನಮ್ಮ ನವಭಾರತಕ್ಕಿಂದು ಅತ್ಯಗತ್ಯವೆಂಬುದನ್ನು ಅಲ್ಲಗಳೆಯಲು ಸಾಧ್ಯವೇ? ಇದರ ಮೇಲೆ 'ಮಲೆನಾಡಿನಲ್ಲಿ ಮನು' ಕಂಡದ್ದೇನನ್ನು? ಎಂಬುದನ್ನು ಗಮನಿಸೋಣ:

ತೋಟಿಗ ಕಲಿ ಬೆಳೆಸಿರುವೀ
ಹೇತಾರಿಯ ಕಾಡು
ಚಕ್ಕೆ ತೊಗಟು ತಿರುಳೆಲ್ಲಾ
ಸುಮಲಗಂಧ ನೋಡು!
ಹೊಲಸಾಗಿಯೆ ಹುಲುಸಾಗಿಹ
ಚರತರುಗಳ ಥಾಟು
ಸೈತಾನ ಸ್ಫೂರ್ತಿ ಗುರುವ–
ಲೊದಗಿಸುವೇರ್ಪಾಟು!
ಭಗವಂತನ ವಿಶ್ವರೂಪ
ಮಲ–ನಿರ್ಮಲವಿತ್ತು;
ಶ್ವರೂಪದೀ ನೆಲಕೊ ಮಲ–
ಸ್ವರೂಪ ಸಂಪತ್ತು!

('ಮಂಜುಗೀತ' ಪುಟ ೭೦–೭೧) (ಬಿ.ಹೆಚ್.ಶ್ರೀ)

ಇಂದಿನ ಸಹಜೀವಿಗಳೇ ಚರತರುಗಳು. ಕಿರುಗಾಡ ಜಡ(ಮತಿ)ಗಳಾದ ಗಿಡ–ಮರಗಳು–ಅದರಲ್ಲೂ ಹೆಚ್ಚಾಗಿ ಹೇತಾರಿಮರಗಳು ಆ ಮರಗಳ ಚಕ್ಕೆಯನ್ನು ತಂದು ಭೂತ–ಸರ್ಪ–ಪಿಶಾಚಾದಿಗಳ ಬಾಧೆಯುಂಟಾಗದಿರಲೆಂದು ಹಳ್ಳಿಗರು ಮಕ್ಕಳ ತೊಟ್ಟಿಲಿಗೆ ಕಟ್ಟುತ್ತಾರೆ. ಅದು ಸರ್ವಾಂಗದಲ್ಲೂ ದುರ್ವಾಸನೆಯುಳ್ಳ ಜಾತಿಯ ಮರ. ಆ ಮರದಂತೆ ಮನುಷ್ಯನಿರುವುದು ಹೇಗೆ? ಅವನಲ್ಲಿ ಪರಹಿಂಸೆಯ ಮೂಲಕ ಸ್ವಾರ್ಥ ಸಾಧಿಸಿಕೊಳ್ಳುವ ದುರ್ಗುಣವೇ ದುರ್ಗಂಧ: 'ಸರ್ವಾಂಗಂ ದುರ್ಜನೇ ವಿಷಂ' ಎಂದ ಹಾಗೇ ಅವನ ಸರ್ವಾಂಗ ಅಂಥ ದುರ್ಗಂಧದಿಂದ ತುಂಬಿದಾಗ ಅವನು ಹೇತಾರಿ ಮರದಂತಾಗುವುದು ಸಹಜವಲ್ಲವೇ? ಇದು ಕಲಿಯುಗ. ಕಲಿ ಮಹಾರಾಯನು ಇಂಥ ಮಾನುಷ ಹೇತಾರಿಗಳ ತೋಟವನ್ನೇ ಬೆಳೆಸಿರುವಂತೆ ತೋರುತ್ತದೆ. 'ಸರ್ವಂ ಖಲ್ವಿದಂ ಮಲಂ'– ಇಂದಿನ ಸಮಾಜದಲ್ಲಿ ಇಂಥ ಮಲರೂಪ ತಾಳಿರುವ ಮಂದಿ ಹೆಚ್ಚಾಗಿರುವುದು ಅವರ ಲಂಚ–ವಂಚನೆ–ಲೋಭ–ಮತ್ಸರಗಳೆಂಬ ವಾಸನೆಗಳಿಂದ ಸುಸ್ಪಷ್ಟವಾಗಿದೆ. ಭಾರತೀಯ ನಾಗರಿಕತೆಯಲ್ಲಿ ಸಾಮಾಜಿಕ ವ್ಯವಹಾರ ಅಪ್ರಾಮಾಣಿಕತೆಯ ನೆಲೆವೀಡಾಗಿರುವುದು ಅನುಭವಸಿದ್ಧ. ಗಾಂಧಿನಿಧಿಯಿಂದ ಕೂಡ ಹಣ ಕದ್ದು ತಿಂದ ಕಾಲವಿದು! ಭಗವಂತ ಮೂಲತಃ ನಿರ್ಮಿಸಿದ ಜಗತ್ತು ಮಲವಷ್ಟೇ ಆಗಿದ್ದಿಲ್ಲ. ಜೊತೆಗೆ ನಿರ್ಮಲವೂ ಆಗಿತ್ತು–ಅರ್ಥಾತ್ ಅದು ಸಂಮಿಶ್ರರೂಪದ್ದಾಗಿತ್ತು; ಅರ್ಧ ಹಾಗೆ, ಅರ್ಧ ಹೀಗೆ ಎಂದು. ಆದರೀಗ ಅದರ ಸ್ವರೂಪವೋ ಮೊದಲಿನ ವಿಶ್ವ (ವಿವಿಧವಾದ) ರೂಪಗಳನ್ನು–ಮಲ, ನಿರ್ಮಲ ಭೇದಗಳನ್ನು–ಕಳೆದುಕೊಂಡು ಸಂಪೂರ್ಣ ಶ್ವರೂಪಕ್ಕಿಳಿದಿದೆ, ಶ್ವಾನದಂತೆ ಮಲವನ್ನೇ ಹುಡುಕಿಕೊಂಡು ಹೋಗುವ ಸ್ವಭಾವವನ್ನು ತಾಳಿದೆ! ವರ್ತಮಾನ ಭಾರತದ

ರಾಷ್ಟ್ರೀಯ ಜೀವನದ ವ್ಯವಹಾರದಲ್ಲಿ ತೊಡಗಿದ ಹಲ–ಕೆಲ ಮಹನೀಯರ ಚಾರಿತ್ರವೇ ಕವಿಗೆ ಭಾರತವನ್ನು ಹೀಗೆ ದರ್ಶನ ಮಾಡಿಸಿದ್ದು. ಈ ಅಸಹ್ಯ ಭಾರತ ಮುಖವನ್ನು ನೆನೆದರೇ ಓಡಿಹೋಗಬೇಕೆನಿಸುವುದಿಲ್ಲವೇ?

ಇದು ನಿಸರ್ಗ ಬಿಟ್ಟ ಹೇಸಿಗೆಯ ಹೂ!
ಮನುಜ ಕುಲದ ಧರ್ಮ, ನ್ಯಾಯಬುದ್ಧಿ ಸತ್ತ ಹಾಗೆ
ಅದೋ ಕಾಗೆ, ಕರಿಯ ಕಾಗೆ
ಏರಿ ಏರಿ ಏರಿ
ಹಾರಿ ಮುಗಿಲ ಮರೆಯಸೇರಿ
ತಮದ ಬಸುರಿನಾಳದಿಂದ
ತಿಳಿವು ಚಿಕ್ಕೆ ಬೀಜಗಳನು
ಕಿತ್ತು ಮುಕ್ಕ ತೊಡಗಿದೆ
ಹಣ್ಣು ಹೂವು ಎಲೆಗಳನ್ನು
ಕಳಚಿ ನಿಂತ ಗಿಡಲತೆಗಳು
ಚಳಿಗೊ ಏನೊ ನಡುಗಿವೆ
ಏನದೇನು ಸದ್ದು?
ಎಲ್ಲಿ ಯಾರಿಗಿಂಥ ಇಂಥ ಗುದ್ದು?
ನೋಡು. ಕಾಣದೇನು ಸೂಡು!
ಗುಣಿಯ ತೋಡಿ ಆಳನೋಡಿ
ಮಲಗಿ ಒಳಗೆ ತಾನೆ ತನ್ನ
ಮೇಲೆ ಮಣ್ಣು ಮುಚ್ಚಿತು
('ಏಳು ಸುತ್ತಿನಕೋಟೆ' : ಪುಟ ೨–೩)

ಶ್ರೀರಾಮಚಂದ್ರ ಶರ್ಮರಿಲ್ಲಿ ಮನುಷ್ಯ ಕುಲ ಆತ್ಮಹತ್ಯೆ ಮಾಡಿಕೊಳ್ಳುವ ಚಿತ್ರವನ್ನು ಕೊಟ್ಟಿದ್ದಾರೆ. ಮನುಷ್ಯರ ಶೀಲ ಎಷ್ಟು ಭೀಭತ್ಸವಾಗುತ್ತಿದೆ, ಎಷ್ಟು ನಿರಾಶಾದಾಯಕವಾಗಿದೆ–ಎಂಬುದನ್ನು ಉಗ್ರವಾಗಿ ನಾವಿಲ್ಲಿ ಕಾಣಬಹುದು. ಶ್ರೀ ಕಣವಿಯವರ 'ಕೊನೆಯ ಎಚ್ಚರಿಕೆ'ಯನ್ನು ಕೇಳಿದರೂ ಇದೇ ಧ್ವನಿ ಕೇಳಿಸುತ್ತದೆ;

ದೊಡ್ಡ ಜನರ ದೊಡ್ಡಸ್ತಿಕೆ
ಹೊಗಳುಭಟರ ಡಬಡ್ಡಳಿಕೆ
ಅನ್ಯಾಯದ ದಬ್ಬಾಳಿಕೆ
ಹೇಳು ಕ್ರೂರಿ ಏತಕೆ?
(ಸ್ವಲ್ಪ ಜನರ ಸಂತೋಷಕೆ!)

ನರಗೆ ನರನ ರಕ್ತ ರುಚಿಯೆ?
ಶೋಷಣೆಯಿದು ನಿನಗೆ ಶುಚಿಯೆ?
ಹೇ! ಸಮಾಜಪಾತಕಿ
ಕಪಟವೇಷ ನರ್ತಕಿ!
ನಿನ್ನ ಲಾಸ್ಯ ಹಾಸ್ಯದಲ್ಲಿ
ಕುಡಿತ ಮೆರೆತ ಕೇಕೆಯಲ್ಲಿ
ಉದರಭರಣಕಾಗಿ ಹರಣ
ಕೊಡುವ ಈ ದುರಂತ ಮರಣ
ಚರಮಗೀತ ಕೇಳದೆ?
ಅಂಜುಬುರುಕರೆಂದು ಕಪ್ಪೆ ಚೆಲ್ಲಿ ಮೋಜು ನೋಡುವೆ;
ಮುಗ್ದ ಕುಸುಮ ಕೋಮಲೆಯರ ರುಂಡಮಾಲೆ ಸೂಡುವೆ!
ನಿಷ್ಕಲ್ಮಷ ಎದೆಗಳನ್ನು ಹತ್ತಿ ತುಳಿದು ಹಿಂಡುವೆ;
ಧೀರರೆಂದು ಕಂಡು ಬರುವ ಮೊದಲೆ ಜೀವ ಹೀರುವೆ!

('ಆಕಾಶಬುಟ್ಟಿ' ಪುಟ ೯–೧೦)

ಇಲ್ಲಾದರೂ ಕವಿಯು ಸಮಾಜದ ಶೋಷಕ ಪಿಶಾಚಿಯ ಭೀಭತ್ಸ ತಾಂಡವವನ್ನು ಕನಲಿ ಕಣ್ಮುಂದೆ ಕೋರೈಸುವಂತೆ ಕೊಟ್ಟಿದ್ದಾರೆ. ಇದೇ ಮಾತನ್ನು–

ಮೃತ ಮನುಜತೆವೆತ್ತ ಜನರ
ಶೃಂಗಾರವ ನೋಡಿ
ಮಸಣದ ಭೀಭತ್ಸ ಹೇಸಿ
ಕಾರದಿರದು ಓಡಿ!
ಹೆಣವ ಕೂಡ ಹಂಚಿ ತಿಂಬ
ಪಿಶಾಚಗಳೆ ಬೇಕು;
ಹಣದಿನಿಗಳ ಹೂಹಾಸಿಗೆ–
ಯಾತಿಥ್ಯವು ಸಾಕು!
ಪ್ರೇತಲೋಕ ಭಯಾನಕತೆ–
ಯಲ್ಲು ಕರುಣೆ ಹೊಳೆಗು
ನೀತಿ ಸತ್ತ ನರಲೋಕದಿ
ನಿತ್ಯದುಃಖ ಬೆಳೆಗು!
ಶಾಕಿನಿ ಡಾಕಿನಿಯರೊಮ್ಮೆ
ಅಹಿಂಸೆಯನು ಹಿಡಿದರೂ

ಲೋಕಮಾನ್ಯ ಮೃತಸತ್ವರು
ಧನ್ನ ಹಿಂಸೆ ತಡೆಯರು!
ಮಸಣ ಮದ್ದು ಮೆಚ್ಚಿದವಗೆ
ಎಂಬ ಸೊಲ್ಲು ಸಲ್ಲ
ಮಸಣಗಸಣಿ ಮರೆಸಿ ಬಾಳ್ವ–
ನಾಗರಿಕತೆ ಹೊಲ್ಲ!
ಬಂದೆ ಮಸಣವಾನಿಸರೇ
ನಿಮ್ಮ ಸೇರಲಿಂದು!
ಹಂದಲೆಯಿಂದೆತ್ತಿ ಕೊಡಿರಿ
ಹಸಿದೆ ನನ್ನಿಗೆಂದು!

('ನವ್ಯಧ್ವನಿ' : ಪುಟ ೨೮–೯)

ಎಂಬಲ್ಲಿಯೂ ಮತ್ತೊಂದು ರೀತಿಯಿಂದ ಕಾಣಬಹುದು. ಮಾನವನು ದಾನವನಂತೆ ಹಿಂಸಾಪರಾಯಣನಾದಾಗ ಅವನ ಭೂತಲೀಲೆಗೆ ಅಂತವಿದೆಯೆ? ಪಾರವಿದೆಯೆ? ಮಸಣದ ಪಿಶಾಚಗಳಿಗಿಂತಲೂ ಹೆಚ್ಚು ಅಸಹ್ಯವಾದೀತು ಅವನ ವರ್ತನೆ! ನವಭಾರತದ ಸ್ವತಂತ್ರಯುಗದಲ್ಲಿ Sharing the Spoils ಲೂಟಿ ಮಾಡಿದ್ದನ್ನು ಹಂಚಿ ತಿಂಬ ಬಗೆಯ ಶೋಷಣೆ ಹಲವೆಡೆ ಕಂಡು ಬಂದುದನ್ನು ಕವಿಯಿಲ್ಲಿ ಕಟುವಾಗಿ ಟೀಕಿಸಿದ್ದಾನೆ. ಇದೇನು ಪುಂಡರಾಜ್ಯವೋ ಗುಂಡರಾಜ್ಯವೋ ಎನಿಸುವಂಥ ಕೆಲ ಘಟನೆಗಳೇ ಇಂಥ ಉದ್ಗಾರಗಳಿಗೆ ಪ್ರೇರಕಗಳು ಇಂಥ ಗೋಮುಖ ವ್ಯಾಘ್ರ ವೃತ್ತಿಯ ಪರಪೀಡಕ ತಂತ್ರಗಳು ಹೆಚ್ಚುತ್ತ ಹೋದ ಹಾಗೆ ಹೆದರಿಕೆಯಾಗದೆ ಉಳಿದೀತೆ ಪ್ರಾಮಾಣಿಕನಿಗೆ?



೫

# ಭಯಾನಕ ಸಂದೇಶ

ಹಾಗೇ ಹೆದರಿಸುವಂಥ ಕ್ರೌರ್ಯದ ಚಿತ್ರಣದಲ್ಲಿ ಭಯ ಭಾವವು ಸ್ಥಾಯಿ. ಅಂಬಿಕಾತನಯದತ್ತರ 'ಕುರುಡು ಕಾಂಚಾಣ'ದಲ್ಲಿ ನಮ್ಮೆದುರು ಮೂರ್ತಿಮತ್ತಾಗಿ ನಿಲ್ಲುವ ಶೋಷಣ ದೈತ್ಯನನ್ನು ಸಾಕ್ಷಾತ್ಕರಿಸಿಕೊಳ್ಳೋಣ:

ಬಾಣಂತಿಯೆಲುಬ ಸಾಬಾಣದ ಬಿಳುಪಿನಾ
ಕಾಣದ ಕಿರುಗೆಜ್ಜೆ ಕಾಲಾಗ ಇತ್ತೋ;
ಸಣ್ಣ ಕಂದಮ್ಮಗಳ ಕಣ್ಣೀನ ಕವಡೀಯ
ತಣ್ಣನ್ನ ಜೋಮಾಲೆ ಕೊರಳೊಳಗಿತ್ತೋ;
ಬಡವರ ಒಡಲಿನ ಬಡಬಾsನಲದಲ್ಲಿ
ಸುಡು ಸುಡು ಪಂಜು ಕೈಯೊಳಗಿತ್ತೋ
ಕಂಬನಿ ಕುಡಿಯುವ ಹುಂಬ ಬಾಯಿಲೆ ಮೈ-
ದುಂಬಿದಂತುಧೊ ಉಧೊ ಎನ್ನುತಲಿತ್ತೋ;
ಕೂಲಿ ಕುಂಬಳಿಯವರ ಪಾಲಿನ ಮೈದೊಗಲ
ಧೂಳಿಯ ಭಂಡಾರ ಹಣೆಯೊಳಗಿತ್ತೋ!

('ನಾದಲೀಲೆ' : ಪುಟ ೩೮)

ಈ ಭೀಷಣ ಶೋಷಣಾಸುರನ ಕಾಪಾಲಿಕ ಅವತಾರ ಎದೆ ಝಲ್ಲೆನಿಸುವಂತಿದೆ. ಈ ಸಾವಕಾರಿಕೆ ಎಷ್ಟು ಜನರ ಸಾವು ನೋವುಗಳಿಗೆ ಕಾರಣವಾಗುತ್ತಿದೆಯೋ! ಶೋಷ್ಯ-ಶೋಷಕ ವರ್ಗಗಳ ವೃದ್ಧಿ ಭಾರತಕ್ಕೆ ಗಂಡಾಂತರಕರವಾಗಿದೆ. ಇದನ್ನು ಗಮನಿಸಿಯೇ ನಮ್ಮ ಮುಖಂಡರಿಂದು ಧನಿಕ-ದರಿದ್ರರ ಅಂತರವನ್ನು ಕಡಿಮೆ ಮಾಡಲು Socialistic Pattern of Society ಸಮಾಜವಾದಿ ಸ್ವರೂಪದ ಸಮಾಜವನ್ನು ರಚಿಸುವುದೇ ಮದ್ದೆಂದು ಸಾರಿದ್ದಾರೆ. 'ನರಬಲಿ'ಯಲ್ಲಿ-

ನಿಂದಿಹರಿದೊ ಇಗೊ!
ಎಕ್ಕಡ ಮೆಟ್ಟಿಹ ಎಕ್ಕಲ ಬಂಟರು

ಉಕ್ಕಡಗಾತ್ರದ ಉಕ್ಕಡದವರು
ಕಕ್ಕಡ ಹೊತ್ತಿಸಿ ಕಣ್ಣುಗಳಲ್ಲಿ
ಮಾಡಿಸೆ ಕೆನ್ನೀರ್ ಜಳಕವನು
ಏರಿಸೆ ರುಂಡದ ಹೂವುಗಳ
ಹಾಕಲು ಮದ್ದಿನ ಧೂಪವನು
ಬಾರಿಸೆ ಗುಂಡಿನ ಗಂಟೆಗಳ
ಬಂದಿತು ಬಂದಿತು ನೈವೇದ್ಯ
ನೀತಿಯ ಭೂತವೆ ಹೊರಡಿಲ್ಲಿಂದ
ದಯೆಯ ದೆವ್ವವೇ ನೀ ಹೊರಡು
ಕರುಳಿನ ಮರುಳೇ ಓಡಿಲ್ಲಿಂದ
ನ್ಯಾಯ ರಾಕ್ಷಸನೆ ನೀನೋಡು!

(ಬೇಂದ್ರೆ–'ಗರಿ' : ಪುಟ ೬೭)

ಅದೇ ಕಂಸಾಸುರರ ಕರ್ಗೆಯ್ಮೆಯ ಕರಾಳ ಮೂರ್ತಿಗಳನ್ನು ಕಾಣಬಹುದು. 'ಚಂಡೆಮದ್ದಳೆ' ಯಲ್ಲಿಯ 'ಗೊಂದಲಾಸುರ'ನ ಘೋರಮುಖವೇನಾದರೂ ಕಡಿಮೆಯೇ?

ಯಾರಿವನು ನಾಯಕ?
ದೀನ ದುಃಖಿ ದರಿದ್ರ ಕೋಟಿ ದುಃಖತ್ರಾತ,
ಆರ್ತರಕ್ಷಕ ಈ ಅನಾಥ ಬಂಧು?
ಏ. ಎಲಾ. ಇದು ಎಂಥದಯ್ಯ, ಈ ಹೊಸ ಜಂತು?
(ಅವತಾರಲೋಕಕ್ಕು ಮಿಕ್ಕಿತಲ್ಲ!)
ರೋಬಟ್ಟು, ನರಯಂತ್ರ?
ಸುಟ್ಟ ಬೀಜದಿ ಹುಟ್ಟಿ ಬಂದ ಜಾಲಿಯ ಮರ?
ಕಾಲೋ ಸ್ಟೀಮ್ ರೋಲರೋ! ಹೃದಯವೋ ರುಬ್ಬುಗುಂಡೋ?
ಕಣ್ಣೊ? ಕಣ್ಣೂ ಹೌದು. ಕಣ್ಣಲ್ಲ–ಹೈವೊಲ್ಟೇಜು ಬಲ್ಬು!
ತಲೆಯೊಳತ್ಯಾಧುನಿಕ ಗೋಡೆಗಡಿಯಾರದೊಳ
ಕರುಳಂತದೇನೇನೊ ತಂತಿತಂತ್ರ:
ಹೊಟ್ಟೆಯೊಳಗಿದ್ದಿರಲು ಬೇಕು ಮಾರಣಗಿರಣಿ
ಬಾಯಿ ಹೊಗೆಕೊಳವೆಯಿಂದೆದ್ದು ಕವಿಯುತ್ತಿತ್ತು
ವಿಷವಾಯು ಕಣಜ ಹೊಗೆ! (ಅಡಿಗ)

ಈ ವಿರಾಡ್ರೂಪದ ವಿಕಟಮೂರ್ತಿಯನ್ನು ಕಂಡರೆ ಯಾರು ಹೆದರರು? ಯಾಂತ್ರೀಕರಣದ ಫಲವಾಗಿ ಮನುಷ್ಯ ಹೃದಯವು ಯಂತ್ರದಂತೆಯೇ ಕಲ್ಲಾಗಿ, ಇಂದು

ಹುಂಬ ಜನರ ತಂಡಗಳನ್ನು ಕಟ್ಟಿ ಬ್ರಹ್ಮಾಂಡ ಭಾಂಡದಂತೆ ತನ್ನ ಉದರವನ್ನು ಬೆಳೆಯಿಸಿಕೊಂಡು ತಿರುಗಾಡುವ ದಸ್ಯುಗಳ ಅನಾರ್ಯ ವ್ಯವಹಾರ ಅಲ್ಲಿ ಇಲ್ಲಿ ಆಗೀಗ ಭಾರತೀಯನ ಕಣ್ಣಿಗೋ ಕಿವಿಗೋ ಬೀಳುತ್ತಿದೆ. ಇಂಥ ಕಪಟಿಗಳೂ ಕ್ರೂರಿಗಳೂ ಹಿಂಸಾಮತ್ತರೂ ದೀನ–ದಲಿತ–ದುಃಖಿಗಳ ಹೃದಯವನ್ನು ಹೀರಿ ಹಿಪ್ಪೆಯಾಗಿ ಮಾಡುವ ಕಾರಭಾರಕ್ಕಂಜಿ ಹಳ್ಳಿಯ, ಪಟ್ಟಣದ ಜನ ಹಿಂಜರಿದದ್ದುಂಟು. ಈ ಕಗ್ಗೊಲೆಗಾರಿಕೆಯ ಧಾರ್ಮಿಕ–ರಾಜಕೀಯ–ಆರ್ಥಿಕ–ಸಾಮಾಜಿಕ ನೇತೃತ್ವ ಎಲ್ಲಿ ತಲೆದೋರಿದರೂ ಅಲ್ಲಿ ಭಯವುಂಟಾಗದಿರದು. ಮುಗ್ಧ ಜನರು ಮುಂದುಗಾಣದ ಮೊಗಚಿ ಬೀಳಬಹುದು. ಆಗ ಪ್ರಜೆಗಳು ಸತ್ತ ಪ್ರಜಾಸತ್ತೆ ಕಂಗೊಳಿಸೀತು! ಇಂಥವರ ಅಟ್ಟಹಾಸವನ್ನು ಮುರಿಯಲು ತಡವಾಗಿಯಾದರೂ ಸಮಾಜದಲ್ಲಿ ರುದ್ರಾವತಾರವಾಗದಿರದು. ಅಂಥ ರುದ್ರಾವತಾರದಿಂದ ಅನಾಗರಿಕ ಸರ್ವಾಧಿಕಾರಕ್ಕೆ ಅಂತ್ಯವಿಧಿಯುಂಟಾಗಿಯೇ ತೀರುತ್ತದೆ!



# ೬

# ರೌದ್ರ ಸಂದೇಶ

ರೌದ್ರಕ್ಕೆ ಕ್ರೋಧವು ಸ್ಥಾಯಿಭಾವ. ವೀರಾವೇಶದ ಪರಮಾವಧಿ ರುದ್ರವಾಗುತ್ತದೆ. ವೀರ ಕಾರ್ಯ ಮುಗಿದ ಬಳಿಕ ಬೀಭತ್ಸವೋ ಎನಿಸುವಷ್ಟರ ಮಟ್ಟಿನ ಪ್ರತೀಕಾರ–ಲೀಲೆಯಲ್ಲಿ ರುದ್ರತೆ ತೊಡಗುತ್ತದೆ. ಅನ್ಯಾಯವನ್ನು ಅಸಲು ಬಡ್ಡಿಗಳ ಸಹಿತವಾಗಿ ತೀರಿಸುವವ ರುದ್ರನೊಬ್ಬನೇ. ಈ ದಂಡನೆ ಗೆದ್ದ ದಂಡನಾಯಕರೆಂದರೆ ಭಾರತದ ಭೀಮ; ದಕ್ಷಾಧ್ವರವನ್ನು ನಾಶಮಾಡಿದ ವೀರಭದ್ರ; ಮಾರನನ್ನು ಮುಹೂರ್ತದಲ್ಲಿ ಸುಟ್ಟು ಬೂದಿ ಮಾಡಿದ ಹರ! ಈ ಹರ ಶಕ್ತಿ "Destruction is the prerequisite of Construction- ಪ್ರಲಯವೇ ಸೃಷ್ಟಿಗೆ ಪೂರ್ವದಲ್ಲಿ ಮಾಡಬೇಕಾದ ಸಿದ್ಧತೆ" ಎಂದು ಗರ್ಜಿಸಿ ಕ್ರಾಂತಿಯಲ್ಲಿ ಕೈಹಾಕುತ್ತದೆ. ಜಗತ್ತಿನಲ್ಲಿ ಮಹಾಕ್ರಾಂತಿಗಳು ಸಿಡಿಲಿನಂತೆ ಬಡಿದ ಬಗೆಗೆ ವೀರಕ್ಕಿಂತ ರೌದ್ರವೇ ಹೆಚ್ಚು ಕಾರಣ. ಆವೇಶವೆಂದರೆನ್ನಬೇಕು ರೌದ್ರಕ್ಕೆ! ಭಾವನೆಯ ಬಿಸಿ ಉನ್ಮಾದಕ್ಕೇರಿ ವೀರದ ಹೆಸರಿನಲ್ಲಿ ಭೀಭತ್ಸಕ್ಕಿಳಿದ ಉದಾಹರಣೆಗೆ ರೌದ್ರಾಧಿಕ್ಯ ಬೀಜವೆನಿಸಿದ್ದುಂಟು. ಇದು ಒಂದು ವಿಧದ ಪ್ರಕೃತಿಯ ಕೋಪ–ಜ್ವಾಲಾಮುಖಿ, ಭೂಕಂಪ, ಪ್ಲೇಗು, ಕಾಲರಾ ಇದ್ದ ಹಾಗೆ; ದೈವಶಾಪದ ಆವಿಷ್ಕಾರ ಒಂದು ದೇಶಕ್ಕೆ ದೇಶವೇ ಅಥವಾ ಜಗತ್ತೇ ಇಂಥ ಒಂದು ಸಿಟ್ಟಿನಿಂದ ಉಧ್ವಸ್ತವಾದೀತು. ಒಂದು ಮಾನವಕುಲವೇ ಈ ಪ್ರಕಾರ ನಾಶವಾದುದಕ್ಕೆ ಇತಿಹಾಸ ಉದಾಹರಣೆ ಕೊಡಬಲ್ಲುದು. ಮನುಷ್ಯ ಸಮಾಜ ಸುಧಾರಿಸಲಾರದಷ್ಟು ಕೆಳಗಿಳಿದು ಹೋದಾಗ ಇಂಥ ಶಸ್ತ್ರ ಚಿಕಿತ್ಸೆಯನ್ನು ವಿಶ್ವಶಕ್ತಿ ಮಾಡುತ್ತದೆ. ಅಣುಬಾಂಬಿನ ಇಂದಿನ ಸ್ಪರ್ಧಾಳುತ್ವದಲ್ಲಿ ಪರಿಸ್ಥಿತಿ ಅಂಥ ವಿಕೋಪಕ್ಕೆ ಹೋದೀತೆ? ಹೋದರೆ ಏನಾದಿತು? ಎಂಬ ಅಂಶವನ್ನು 'ರುದ್ರಾವತಾರ'ದಲ್ಲಿ ನಿವೇದಿಸಲಾಗಿದೆ:

> ರುದ್ರೋಹಂ ರುದ್ರೋಹಂ ಕ್ಷುದ್ರಾದ್ರಿಯಿನೆದ್ದು ಬಂದೆ;
> ಜಗದಗಲಕೆ ಹರಹಿ ನಿಂದೆನಿದೋ ಮುಗಿಲು ಜಡೆಯ ತೂಗಿ!
> ವಿದ್ಯುದಸ್ತ್ರ ಹಿಡಿದೆ. ಗುಡುಗಿ ನಡುಗಿಸುತಿಹೆ ಚರಾ ಚರದೊ
> ಳಿರುವ ದುಷ್ಟಸರ್ಪಮತಿಗಳೆಲ್ಲರನ್ನ ಮೆಟ್ಟಲೆಂದು
> ರಾಕೀಸಿನ ತುಂಗತಮ ಶಿರಃಪ್ರದೇಶದಲ್ಲಿ ಮೂಡಿ
> ಗರ್ಜಿಸುತಿಹೆನಿದೋ ಕೇಳಿ: ಅಣುಮಾನವ ಜಂತುಗಳೇ!

ಕ್ಷುದ್ರ ಲೋಭ ಮೆತ್ತಿಕೊಂಡ ಮೈಮನಗಳ ಮೂಟೆಗಳೇ!
ನಿಲ್ಲಿರಲ್ಲಿ ನಿಂತಲ್ಲೇ ವಜ್ರಮುಷ್ಠಿಯಿಂದ ನಿಮ್ಮ
ಬೆನ್ನೆಲುಬನು ಹುಡಿಗೂಡಿಸಿ ಭುವಿಗೆ ಗೊಬ್ಬರವನಿಕ್ಕುವೆ;
ಮಣ್ಣಿನಾಸೆ ಹೊನ್ನಿನಾಸೆ ಕಸಕಿಂತಲು ಕಡಿಮೆಯಾದ
ಜೊಳ್ಳು ಬಿರುದು ಬಾವಲಿಗಳ ಹೆಕ್ಕುವಾಸೆ ಬೆನ್ನು ಹತ್ತಿ
ನನ್ನಿಗಾರರೆದೆಗೆ ಹಿಂದಿನಿಂದ ಚೂರಿಯಿಕ್ಕಿ ಬಾಳ್ವ
ನರನರಿಗಳೆ! ಇಗ್ಗಾಲಿನ ಕರ್ಕೋಟಕ ಕುಂಡಗಳೇ!
ಕುದುರಾಳಗಳೆಲ್ಲ ಸತ್ತು ಹುಟ್ಟಿದ ವಿಷಖಂಡಗಳೇ!
ಕೆಡೆದು ನಿಮ್ಮ ತೆರೆಚರಂಡಿಯಲ್ಲಿ ನೂಕಿ ಜಡಿದು ಬಡಿದು
ಕಡೆದು ನುಣ್ಣನೆಣ್ಣೆ ಮಾಡಿ ಹರಿಯ ಬಿಡುವೆ ನರಕದೆಡೆಗೆ!

ಇದೋ ಶೂಲ. ಇದೋ ಪಾಶ, ಕಚ್ಚಿ ಚುಚ್ಚಿ ತಿಂಬ ಭೂತ
ಇದೋ ರಕ್ತ ರಕ್ತವನ್ನು ಕಾರಿಸುವ ಪಿಶಾಚ ತಂಡ!
ಬಿಟ್ಟೆ ನಿಮ್ಮ ಮೇಲೆ ತಾಳಿಕೊಳ್ಳಿರೆಂಜಲುಂಬ ಮಾನ
ಸತ್ತ ಹೇಡಿ ಹೆಣಗಳೇ. ಕರಾಳ ತಂತ್ರಗಣಗಳೇ!
ಎತ್ತ ಓಡಲೆದ್ದಿರಯ್ಯ? ಹೋಗಿರೋ–ಅದೆಲ್ಲಿ ನೀವು
ತಲೆ ತಪ್ಪಿಸಿಕೊಂಬಿರೆಂದು ನೋಳ್ಪೆ ನನ್ನ ಮಾಯೆಯಿಂದ!
ತತ್ತರಿಸಿರಿ ತಬ್ಬಿಕೊಳ್ಳಿರಯ್ಯ ನಿಮ್ಮ ಪಾಪಗಳನು;
ಚಾಡಿ, ಛಿದ್ರ, ಕಪಟ, ಕಂತ್ರಿವಿದ್ಯೆ, ಕಳ್ಳ–ಸುಳ್ಳತನದ
ಮೋಡಿ ಮಂತ್ರ–ಒಂದೆ. ಎರಡೆ? ಕಾರ್ಗೆಲಸದ ಗುಡ್ಡ ಗುಡ್ಡ!
ಆ ಅರಮನೆಗಳಲಿ ತಲೆಯ ಮರೆಸಿಕೊಳ್ಳಲೇಳಿರಯ್ಯ–
ಏಕೆ ಗಾಬರಿಯಲಿ ಎಡಹುತಿರುವಿರೀಗ ಗಣ್ಯರೇ?
ಏಕೆ ಬೆದರಿ ಬಳುಕುತಿಹಿರಿ ನಾಗರಿಕವರೇಣ್ಯರೇ?
ಕ್ಷುದ್ರ ಶತ್ರು ರುದ್ರ ನಾನು
ಇಡಿಪಸ್‌ಕಾಂಪ್ಲೆಕ್ಸಿನವನು!
ಮದ್ಯಗಿದ್ಯವಿದ್ದರೆಯ್ದಿ
ಬೇಗ ಕುಡಿದು ಬನ್ನಿರೋಡಿ
ಗುಟ್ಟುಗಳ ಕಪಾಟನೊಮ್ಮೆ ತೆರೆದು ನೋಡಿ ಬನ್ನಿರಯ್ಯೊ
ಕಷ್ಟ. ಕಷ್ಟ ಪರರ ಕೈಗೆ ಸಿಕ್ಕರವು! ಬೃಹಸ್ಪತಿಗಳೆ.
ಕಾಲವಿಲ್ಲ; ಕಾಲಕಾಲ ಆಜ್ಞೆಯಿತ್ತೆ: ಕೇಳಿತೇನು?

ಬಾಲ ಮಡಿಸಿಕೊಂಡು ನಿಲ್ಲಿ; ಚೀರಲಲ್ಲಿ ಫಲವದೇನು?
ಖ್ಯಾತೋಹಂ, ವಿಷಯಲುಬ್ಧ–ರಾಷ್ಟ್ರಕೃತ–ದ್ಯೂತೋಹಂ;
ವಿಜ್ಞಾನ–ವ್ಯಾಪಾರ–ವಿಷಾಬ್ಧಿಜನ್ಯ ಭೂತೋಹಂ!
ಧಗದ್ಧಗಿಸಿ ನಿಂದೆನಿದೋ ದಿಗ್–ದಿಗಂತಗಳಲಿ ಹರಡಿ;
ಜೀವಗಳ್ಳರಿತ್ತ ಕಾಣಿರೊಮ್ಮೆ ಕಣ್ಣನರಳಿಸಿ!
ಕಟ್ಟಿ ಗಂಟುಮೂಟೆಗಳನು ಹೊರಡಲಿನ್ನು ಸರಳಿಸಿ!
('ಮಂಜುಗೀತ' ಪುಟ ಸಂಖ್ಯೆ ೫೮–೫೯) (ಬಿ.ಎಚ್.ಶ್ರೀ)

ಒಂದು ಮನುಷ್ಯ ಸಮಾಜದಲ್ಲಿಯ ಬಹುಸಂಖ್ಯಾ ಗಣ್ಯರು ಚಾಪಲ್ಯದಂಡೆಗಳಾದಾಗ, ಮಾತ್ಸರ್ಯದುಂಡೆಗಳಾದಾಗ, ಮುದಮೆತ್ತಿ ಹೊಲಸಾದ ಜೀಜೀತನದ ಜೋಲುಗೊಂಡೆಗಳಾದಾಗ–ಅವರ ಮಂಡೆಗಳು ಲಜ್ಜೆಯಿಲ್ಲದ ಕೊಳಚೆ ಹಂಡೆಗಳಾದಾಗ ಅವರ ಮೊಗದಲ್ಲಿ ಹೇಸುನಗೆಯರಳಿ ಮಿರುಗಲಾರಂಭಿಸಿದಾಗ ರುದ್ರಾವತಾರವಾಗುತ್ತದೆ. ವಕೀಲರು ಸುಳ್ಳು ಹೇಳಲಾರಂಭಿಸಿದಾಗ, ಮಹಾಧ್ಯಾಪಕರು ಪರೋಪದೇಶ–ಪಂಡಿತರಾದಾಗ, ಧರ್ಮರಾಯ ಶೆಟ್ಟರು ಕಳ್ಳಪೇಟಿಗರಾದಾಗ, ಟೊಪ್ಪಿ ಹಾಕುವವರು ರಾಜಕಾರಣಿಗಳಾದಾಗ, ಪರಮತದ ಗಿಳಿಪಾಠ ಮಾಡಿ ಅದೆ ಎಲ್ಲ ತತ್ವಜ್ಞಾನ ಎಂಬ ಜಂಭದ ಜಯದ್ರಥರು ವಿದ್ವಾಂಸರೆಂದು ಮಾನಿಸಲ್ಪಡುವಾಗ, ಸಮತಾವಾದದ ಹೆಸರಿನಲ್ಲಿ ನೆಲಸಮತಾವಾದದ ಆಡಳಿತ ಶುರುವಾದಾಗ, ಚಿತ್ರಗುಪ್ತನಿಗೆ ಇಂಥ ಸಮಾಜಶ್ರೇಷ್ಠಿಗಳ ಲೆಕ್ಕವಿಟ್ಟು ಪೂರೈಸದಾದಾಗ ರುದ್ರಾವತಾರವಾಗಿಯೇ ತೀರುತ್ತದೆ. ಪ್ರಕಾಶಕರೂ, ಪುಸ್ತಕ ವ್ಯಾಪಾರಿಗಳೂ ಲೇಖಕರನ್ನು ನುಂಗಿ ನೀರ್ಕುಡಿದೇ ಬದುಕಲಾರಂಭಿಸಿದಾಗ, ಸಂಕುಚಿತ ಜಾತೀಯತೆ ಪ್ರಾದೇಶಿಕತೆಗಳು ನೆಗಳೆಯಂತೆ ಬಾಯ್ದೆರೆದಾಗ, ಮತಾಂಧತೆ ಮೇರುವಿನೆತ್ತರಕ್ಕೇರಿದಾಗ, ಪಂಕ್ತಿಭೇದವೇ ಪರಮಧರ್ಮವಾದಾಗ, ನಿಷ್ಪಕ್ಷಪಾತತೆಯು ಪಕ್ಷರಹಿತವಾದಾಗ ರುದ್ರಾವತಾರವಾಗದೆ ಎಂದೂ ಇರದು! ಒಂದು ಸಮಾಜ ಈ ಪ್ರಕಾರ ವ್ಯಕ್ತಿಸ್ವಾರ್ಥ, ಜಾತಿಸ್ವಾರ್ಥ, ಪ್ರದೇಶಸ್ವಾರ್ಥ, ತಂಡಸ್ವಾರ್ಥಗಳಿಗೆ ಆಳಾಗಿ ಮುಗ್ದರನ್ನೂ ಪ್ರಾಮಾಣಿಕರನ್ನೂ, ಬಡವರನ್ನೂ, ಗುಣಿಗಳನ್ನೂ, ನಿಜವಾದ ಕಲೆಗಾರರನ್ನೂ, ವಿದ್ವಾಂಸರನ್ನೂ ಕಡೆಗಣಿಸಿ ಶೋಷಿಸಿ, ತಿರಸ್ಕರಿಸಿ ಬಾಳಲಾರಂಭಿಸಿದಾಗ, 'ಹರ ಕೊಲ್ಲಲ್ ಪರ ಕಾಯ್ವನೇ?' ಎಂಬಂತಹ ಪರಿಸ್ಥಿತಿ ಉಂಟಾಗುವುದು ಅನಿವಾರ್ಯವಲ್ಲವೇ? 'ಅಲ್ಲಾವದೀನ ನೃಪತೌ ನಸಂಧಿರ್ನಚವಿಗ್ರಹಃ ಎಂಬಂತಹ ನ್ಯಾಯವಂತಿಕೆ ಸಣ್ಣದರಿಂದ ದೊಡ್ಡದರವರೆಗಿನ ಎಲ್ಲ ಸಾರ್ವಜನಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ವ್ಯವಹಾರದಲ್ಲೂ ತಲೆದೋರಿದಾಗ 'ಅನ್ಯಥಾ ಶರಣಂ ನಾಸ್ತಿ' ದೇವರು ಅಥವಾ ವಿಶ್ವದ ನಿಯಾಮಕ ಶಕ್ತಿಯು ರುದ್ರಲೀಲೆಗಾರಂಭಿಸದೆ ಗತ್ಯಂತರವಿಲ್ಲ! ಕ್ರಾಂತಿ, ವಿಪ್ಲವ, ಹೋರಾಟ, ಹಿಂಸೆ, ದರೋಡೆ, ಬಲಾತ್ಕಾರ ಮುಂತಾದ ಅರಾಜಕವೆಂದು ಪ್ರತ್ಯಕ್ಷವಾಗಿ ತೋರುವ ಚಳವಳಗಳು ಅಸಹ್ಯವಾದ ಅಪ್ರತ್ಯಕ್ಷ ಹಿಂಸೆಯನ್ನು ಪ್ರತಿಭಟಿಸಲು ಎದ್ದು ನಿಂತದ್ದಕ್ಕೆ ಚರಿತ್ರೆಯು ಸಾಕ್ಷಿ ಕೊಡಬಲ್ಲದು ಇಂಥ ಅಶಾಂತಿಪರ್ವವು ಭಾರತದಲ್ಲಿ ಸಂಭವಿಸದಂತೆ ನೋಡಿಕೊಳ್ಳುವುದಕ್ಕಾಗಿಯೇ ನಾವಿಂದು ಕವಿಕೊಟ್ಟ ನೋಟೀಸಿನಿಂದ

ಎಚ್ಚೆತ್ತು ಮುಂಜಾಗ್ರತೆ ವಹಿಸಬೇಕು. ವ್ಯಕ್ತಿಚಾರಿತ್ರ ಅಶುದ್ಧವಾಗಿ ಆ ಮೂಲಕ ಸಮಾಜಚಾರಿತ್ರ, ರಾಷ್ಟ್ರಚಾರಿತ್ರಗಳು ಹೊಲೆಗೆಟ್ಟು ಹೋಗುವ ಸಂದರ್ಭವನ್ನು ತಪ್ಪಿಸಿಕೊಳ್ಳಬೇಕಾದರೆ 'England expects every man to do his duty- ಪ್ರತಿಯೊಬ್ಬ ಪ್ರಜೆಯೂ ತನ್ನ ಕರ್ತವ್ಯವನ್ನು ಮಾಡಬೇಕೆಂದು ಇಂಗ್ಲೆಂಡು ನಿರೀಕ್ಷಿಸುತ್ತದೆ' ಎಂದ ನೆಲ್ಸನ್ನನ ಮಾತಿನಂತೆ ಭಾರತೀಯರಾದರೂ ಚುರುಕಿನಿಂದ ತಮ್ಮ ತಮ್ಮ ವೈಯಕ್ತಿಕ ಶೀಲ–ಚಾರಿತ್ರಗಳನ್ನು ಶುದ್ಧಗೊಳಿಸಿಕೊಳ್ಳಲು ಅರೆನಿಮಿಷವೂ ತಡಮಾಡದೆ ಕಂಕಣಬದ್ಧರಾಗುವುದೀಗ ಕ್ರಮ ಪ್ರಾಪ್ತ. ಹೊಸದಾಗಿ ಗಳಿಸಿಕೊಂಡ ಸ್ವಾತಂತ್ರ್ಯ ನಮಗುಳಿಯಬೇಕಾದರೆ ಅಂತರ್ದೇಶಿಯ ಸಂಘಟನೆ. ಸಹಕಾರ, ಸಂವಿಭಾಗ, ಸಮದೃಷ್ಟಿ ಸಹಾನುಭೂತಿ ನಮ್ಮಲ್ಲಿ ಬೆಳೆದು ಬರಬೇಕು. ತನ್ನ ಸಂಸ್ಕೃತಿಯ ಬಗ್ಗೆ ಎಲ್ಲರಿಗಿಂತ ಹೆಚ್ಚು ಹೆಮ್ಮೆ ಪಟ್ಟುಕೊಳ್ಳುವ ಭಾರತವೇ ಕ್ಷುದ್ರಾತ್ಮವಾದರೆ ಹರಿ–ಹರ–ಹಿರಣ್ಯಗರ್ಭರು ನಗರೇ?

ಮೇಲೆ ಹೇಳಿದಂಥ ರುದ್ರಲೀಲೆಯ ವಿಕಟಾಟ್ಟಹಾಸವನ್ನು–

ಇಂದಕಾರಣವನ್ನೊಳಾನಂದವುಕ್ಕುತಿದೆ–
ಆಯಿತಾವುದೊ ಮುಕುಟ ಹುಡಿಯ ಪಾಲು!
ಇಂದಕಾರಣವೆನ್ನೊಳಾನಂದವುಕ್ಕುತಿದೆ–
ಕುಡಿಯಿತಾವುದೊ ಹುಡಿಯ ಹಸುಳೆ ಹಾಲು!
ಆನಂದದೆಲ್ಲೆಯೇ ಮೀರಿ ಹರಿಯುತ್ತಿಹುದು–
ಜಗಕೆ ಬಿಡುಗಡೆಯ ಡಂಗುರವ ಹೊಡೆವಂತೆ!
ಆನಂದದೆಲ್ಲೆಯೇ ಮೀರಿ ಹರಿಯುತ್ತಿಹುದು–
ಮಾನವನ ಹೀನತೆಗೆ ತೀರ್ಪುಕೊಡುವಂತೆ!

('ರಕ್ತಾಂಜಲಿ' ಪುಟ ೮೮)

ಈ 'ಸೆರೆಯಾಳಿ'ನ ಪಂಕ್ತಿಗಳಲ್ಲಿ ಕಾಣಬಹುದು. ಅಟ್ಟಹಾಸವು ಹಾಸ್ಯದ ಅತಿಹಸಿತವೆಂಬ ಆರನೆಯ (ನೀಚ) ವರ್ಗಕ್ಕೆ ಸೇರಿದ್ದೆಂಬಂತೆ ಹೊರಗೆ ಕಂಡರೂ ಅಂತತಃ ಅದು ಸಾತ್ವಿಕ. ಹರನು ಅಟ್ಟಹಾಸಕ್ಕೆ ಹೆಸರಾದದ್ದು ಈ ಅರ್ಥದಲ್ಲೇ ಅಲ್ಲವೇ? ಅವನದೆಂದಾದರೂ Villian's Laughter-ಧೀರೋದ್ಧತನ ನಗೆಯೆನ್ನಲಾದಿತೆ?



# ೭

# ಹಾಸ್ಯ ಸಂದೇಶ

ಮುಖದ ಮೇಲೆ ಪ್ರಕಟವಾಗುವ ನಗೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ನಮ್ಮಲ್ಲಿ ಹಾಸ್ಯವನ್ನು ಆರು ಪ್ರಕಾರಗಳನ್ನಾಗಿ ವಿಂಗಡಿಸಿದ್ದಾರೆ. ಸ್ಮಿತ ಮತ್ತು ಹಸಿತಗಳು ಜ್ಯೇಷ್ಠ ಜನರಲ್ಲಿಯೂ ವಿಹಸಿತ ಅವಹಸಿತಗಳು ಮಧ್ಯಮರಲ್ಲಿಯೂ, ಅಪಹಸಿತ–ಅತಿ–ಹಸಿತಗಳು ನೀಚರಲ್ಲಿಯೂ ಸಹಜ ಎಂದು ಹೇಳುತ್ತಾರೆ. ಅಪಹಾಸ್ಯ, ವಕ್ರೋಕ್ತಿ, ವ್ಯಂಗ್ಯೋಕ್ತಿ, ಅವಹೇಳನ, ಪರಿಹಾಸ, ಹುಚ್ಚುಹಾಸ್ಯ, ವಿಕಟಹಾಸ್ಯ, ನಕಲಿ, ಚತುರೋಕ್ತಿ ಮತ್ತು ನಿಂದೆ ಎಂದು ಆಂಗ್ಲ ವಿಮರ್ಶಕರು ಹಾಸ್ಯವನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರಂತೆ. ಹಾಸವು ಹಾಸ್ಯರಸದ ಸ್ಥಾಯಿಭಾವ. ಅಸಾಂಗತ್ಯವು ಹಾಸ್ಯದೃಷ್ಟಿಗೆ ಅವಲಂಬನ. ಸಮಾಜದಲ್ಲಿ ಕಂಡು ಬರುವ ನಾನಾ ವಿಧದ ಅಸಂಬದ್ಧತೆಗಳನ್ನು ನಮ್ಮ ಕವಿಗಳು ತಮ್ಮ ಕಾವ್ಯಗಳಲ್ಲಿ ನಾನಾ ರೀತಿಯಿಂದ ವಿಂಡಂಬಿಸಿದ್ದಾರೆ. ಅದರಲ್ಲೂ ವಿಡಂಬನೆಯು ಅವಹೇಳನದ, ಚತುರೋಕ್ತಿಯ, ಕುಚೇಷ್ಟೆಯ ಅಥವಾ ವಿಕಟಹಾಸ್ಯದ, ನಕಲಿಯ ಮತ್ತು ವಕ್ರೋಕ್ತಿಯ ರೂಪಗಳಲ್ಲಿ ಹೊರ ಹೊರಟದ್ದೇ ಹೆಚ್ಚು. ವಿಮರ್ಶೆಯ ಅಸಿಧಾರೆಯುಳ್ಳ ಹೊಸಗನ್ನಡ ವಿಡಂಬನ ಕವನಗಳು ಎಂದೆಂದೂ ಬದುಕಿ ಉಳಿಯುವಂತಿವೆ.

ಇಂಗ್ಲೀಷು ಕಲಿತವರೂ ಸಿನೆಮಾ ಕಂಡವರೂ 'ಸೌಂದರ್ಯವೆಂದರೇನು?' ಎಂದು ಆಗೀಗ ಚರ್ಚೆ ಮಾಡುವುದುಂಟು. ಪ್ರಾಧ್ಯಾಪಕರು Truth is Beauty, Beauty is Truth-ಸೊಬಗೇನನ್ನಿ ನನ್ನಿಯೇ ಸೊಬಗು' ಎಂದು ಮುಂತಾಗಿ ಉದ್ಧರಿಸಿ ಹೇಳುವುದುಂಟು. ನಮ್ಮ ಹೊಸ ಬಾಳಿನಲ್ಲಿ ಹೊಕ್ಕ ಹೊಸ ಬಗೆಯ ಪ್ರಶ್ನೆಯಿದೊಂದು. ಹಿಂದೆ ನಮ್ಮಲ್ಲಿ ಅಂದ–ಚೆಂದಗಳ ಬಗ್ಗೆ ಮೀಸಲಾದ Aesthetis ತತ್ವಶಾಸ್ತ್ರ ವಿಭಾಗಗಳಿದ್ದಿಲ್ಲ. ಪಾಶ್ಚಾತ್ಯರಲ್ಲಿ ಅಂಥ ವಿಶಿಷ್ಟಶಾಸ್ತ್ರವು ಮಹತ್ವ ಪಡೆದಿರುವುದರಿಂದ ನಮ್ಮಲ್ಲೂ ಆಗೀಗ ಅಂಥ ಪ್ರಶ್ನೆಯನ್ನು ಕೇಳಿದವರಿದ್ದಾರೆ. ಶ್ರೀ ಅರವಿಂದರಂಥ ತತ್ವಜ್ಞಾನಿಗಳು ಹುಟ್ಟಿ 'Supra-Rational Beauty'- ತರ್ಕಾತೀತ ಸೌಂದರ್ಯ ಎಂದು ವಿಷಯತ್ವವಿತ್ತು ಅದನ್ನು ವ್ಯಾಖ್ಯಾನಿಸಿದ್ದಾರೆ. ಒಬ್ಬ ಸಂಸ್ಕೃತ ಕವಿ ಹಿಂದೆ ಇಂಥ ಪ್ರಶ್ನೆಗೆ ವಿಡಂಬನರೂಪದ ಉತ್ತರವನ್ನು ಹೀಗೆ ಕೊಟ್ಟಿದ್ದ:

ಅತಿ ಹೆಚ್ಚು ಡೊಂಕಾದ ಬಾಲವುಳ್ಳ ಹೆಣ್ಣು ನಾಯಿಯನ್ನು ಗಂಡು ನಾಯಿಯು ತ್ರಿಲೋಕ ಸುಂದರಿ ಎಂದು ಆಯ್ದುಕೊಳ್ಳುತ್ತದೆ. ಅತಿ ಹೆಚ್ಚಾಗಿ ಅಷ್ಟೂ ಹಲ್ಲುಗಳನ್ನೂ ಕಿರಿದು ತೋರಿಸಬಲ್ಲ ಹೆಣ್ಣು ಮಂಗ ಅತ್ಯಂತ ಸುಂದರಿ ಎಂದು ಗಂಡು ಮಂಗ

ಆರಿಸಿಕೊಳ್ಳುತ್ತದೆ. ಅತಿ ದೊಡ್ಡದಾದ ಹೊಟ್ಟೆಯುಳ್ಳ ಹೆಣ್ಣು ಹಂದಿಯನ್ನು ಗಂಡು ಹಂದಿ ಅಪ್ಸರೆಯೆಂದು ವರಿಸುತ್ತದೆ. ಅತ್ಯಂತ ಕರ್ಕಶವಾಗಿ ಕಿರಿಚಬಲ್ಲ ಹೆಣ್ಣು ಕತ್ತೆಯನ್ನು ಗಂಡು ಕತ್ತೆ ಆದರ್ಶಸುಂದರಿಯೆಂದು ಅನುಸರಿಸುತ್ತದೆ. ಮನುಷ್ಯರಲ್ಲಿ ಗಂಡಸು ಮೊಲೆಗಳ ಗಾತ್ರ ಅತೀ ದೊಡ್ಡದಾಗಿರುವವಳು ಅದ್ವಿತೀಯ ಸುಂದರಿ ಎಂದು ನಿರ್ಣಯಿಸುತ್ತಾನೆ. ಆದುದರಿಂದ ಅವರವರ ಅಜ್ಞಾನವನ್ನುಳಿದರೆ ಸೌಂದರ್ಯವೆಂಬುದಕ್ಕೇನಾದರೂ ಅರ್ಥವಿದೆಯೇ?

'ಕಾವ್ಯವೇದನೆಯಲ್ಲಿ' ಹೊಸಗನ್ನಡ ಕವಿಯಿಂತೆಂದ: (ವಿ.ಜಿ.ಭಟ್)

ಸುತ್ತು ಹೇಟೆಯ ಹಿಂಡು:
ನಡುವಿಹುದು ಹುಂಜ
ಹೇಸಿ ಹೇಟೆಗಳೆಲ್ಲ
ಹುಂಜಕ್ಕೆ ಚೆಂದ!
ಈ ನಿಸರ್ಗದ ಚೆಲುವು
ನನಗೆಲ್ಲ ಚೆಂದ:
ಸುತ್ತಲೂ ಹೇಟೆಗಳು
ನಡುವೆ ನಾ ಹುಂಜ!

'ಅದು ಚೆಂದ, ಇದು ಚೆಂದ' ಎಂದು ತೀರ್ಮಾನಿಸುವ ಮನುಷ್ಯನ ಬುದ್ಧಿಗೆ ಅಹಂಕಾರದ ಭಿತ್ತಿಯಿರುವುದನ್ನು ಇಲ್ಲಿ ಸೂಚಿಸಲಾಗಿದೆ. ಅಂಥ ಭಿತ್ತಿ ಇಲ್ಲದೆ ಇರುವ ಸಂದರ್ಭವೂ ಇರಬಹುದು. ಆದರಿಂದು ಮೆಹರ್‌ಖಾನಿ ಮಾಡುವ ದೃಷ್ಟಿಯಿಂದ ಕಲಾವಸ್ತುಗಳನ್ನು ಪ್ರಶಂಸಿಸುವ ಮನೋಧರ್ಮದವರು ಹೆಚ್ಚಾಗಿ ಕಾಣಲಾರಂಭಿಸಿದ್ದಾರೆ. ಒಂದು ದೃಷ್ಟಿಯಿಂದ ಇದು ಅಂಥವರಿಗೊಂದು ಹೊಡೆತ. ತಮ್ಮ ಜೀವನ ಸ್ವರೂಪ, ಆವರಣಸಹಿತವಾದ ವ್ಯಕ್ತಿತ್ವ, ಇರಸ್ತಿಕೆ ಎಂಬುದು ಪರಮರಮ್ಯವೆಂದು ಒಳಗೊಳಗೇ ಭಾವಿಸಿಕೊಂಡು 'ಹೋಗಲಿ ಪಾಪ' ಎಂದು ಮತ್ತೊಬ್ಬರನ್ನೂ ಅವರ ಕೃತಿಗಳನ್ನೂ ಖುಷಿ ಬಂದಾಗ, ಉದಾರವಾಗಿ, ದಯೆಯಿಟ್ಟು ಚೆಲುವಾಗಿದೆ ಎಂದು ಹರಸುವ ಹುಂಜತನವನ್ನಿಲ್ಲಿ ವಿಡಂಬಿಸಲಾಗಿದೆ ಎಂದರೂ ಸರಿಯೇ. ಹಾಗಲ್ಲದೆ, ಅದು ಚೆಲುವು, ಇದು ಚೆಲುವು ಅವಳು ಚೆಲುವೆ, ಇವಳು ಚೆಲುವೆ ಎಂದು ಸಿನೆಮಿಸುವ ಸಂಭ್ರಾಂತರನ್ನು ಗೇಲಿಮಾಡಲು ಹೊರಟ ಪದ್ಯವಿದೆಂದರೂ ಸರಿಯೇ. ಮೊದಲಿನ ನಾಲ್ಕು ಸಾಲುಗಳು ಈಗ ಹೇಳಿದ ದೃಷ್ಟಿಯನ್ನು ಬೆಂಬಲಿಸಿದರೆ, ಎರಡನೆಯ ನಾಲ್ಕು ಸಾಲುಗಳು ಮೊದಲು ಹೇಳಿದ ದೃಷ್ಟಿಯನ್ನು ಸಮರ್ಥಿಸಬಲ್ಲವು. ಸ್ವತಃ ಸುಂದರರೂ ಸುಂದರ ಕೃತಿಗಳ ನಿರ್ಮಾತರೂ ಆಗಿದ್ದರೂ ಅನೇಕರು 'ಮೆಚ್ಚಿದವನಿಗೆ ಮರಣವೇ ಸುಖ'ವೆಂಬ ಗಾದೆಯಂತೆ ಯಾರನ್ನೋ ಯಾವುದನ್ನೋ ಯಾವುದೋ ಭ್ರಮೆಗೊಳಗಾಗಿ ಚೆಂದವೆಂದು ಮರುಳಾಗುವ ಉದಾಹರಣೆಗಳಿವೆ. ಪರಾಕ್ರಮ ಕಂಠೀರವನು ಹುಂಬನಾದರೆ ಅತ್ಯಂತ ಭೀರುವೂ

ದುರ್ಬಲಳೂ ಆದ ಹೆಂಗಸನ್ನು ಮೆಚ್ಚಿಕೊಳ್ಳುತ್ತಾನೆ; ಅತ್ಯಂತ ಶುದ್ಧನಾದವನು ಹುಂಬನಾದರೆ ಅತಿ ಅಶುಚಿಶೀಲದ ಹೆಂಗಸನ್ನು ಮೆಚ್ಚಿ ಮದುವೆಯಾಗುತ್ತಾನೆ! ಇಂಥ ವಿಕಟಯೋಗಗಳಿಗೆ ಜೀವನದಲ್ಲಿ ಯಾವಾಗಲೂ ದೃಷ್ಟಾಂತಗಳು ಸಿಕ್ಕಿಯೇ ಸಿಗುತ್ತವೆ!

ಪ್ರತಿಯೊಬ್ಬನಿಗೂ ತನ್ನ ಅಭ್ಯಾಸವನ್ನು ಸಮರ್ಥಿಸಿಕೊಳ್ಳುವ ಅಭ್ಯಾಸವಿರುವುದು ಎಲ್ಲರಿಗೂ ತಿಳಿದ ಸಂಗತಿ. ವ್ಯಕ್ತಿಯು ಹೆಚ್ಚು ಹೆಚ್ಚು ಬುದ್ಧಿವಂತನಿದ್ದಂತೆ ಅವನ ಸಮರ್ಥನೆಯೂ ಹೆಚ್ಚು ಹೆಚ್ಚು ತರ್ಕಬದ್ಧ ಎಂಬಂತೆ ತೋರುತ್ತದೆ. ಭಾವನೆಯ ಆವೇಶಕ್ಕೆ ಆಳಾಗಬಾರದೆಂಬ ತತ್ವವನ್ನು ವೇದಿಕೆಯ ಮೇಲೆ ನೂರು ಸಲ ಎತ್ತಿ ಹೇಳಿದ ಮನುಷ್ಯನೇ ಅಂಥ ಆಳಾಗಿ ವ್ಯವಹರಿಸುವುದನ್ನು ನಾವು ಎಷ್ಟೋ ಕಡೆ ಕಾಣಬಹುದಾಗಿದೆ. ಅದರಿಂದ ಬಹುಶಃ ಅಭಿರುಚಿಯೇ ಮೂಲತಃ ಮಾನವನ ವ್ಯವಹಾರದಲ್ಲಿ ಪ್ರಬಲ ಪ್ರೇರಣೆಯೋ ಏನೋ ಎಂಬ ಸಂದೇಹ ಕೂಡ ಉಂಟಾಗುತ್ತದೆ. ವಿಚಾರಶುದ್ಧತೆಗೆ ಸರಿಸಮವಾದ ಆಚಾರಶುದ್ಧತೆಯನ್ನು ಇಟ್ಟುಕೊಳ್ಳುವುದು ಒಂದು ತಪಸ್ಸೇ ಸರಿ! ಶ್ರೀ ಜಿ.ಪಿ.ರಾಜರತ್ನರ 'ಬುಂಡೇ ಬಕ್ತ ರತ್ನ' ಎಂಬ ಪದ್ಯವನ್ನೀಗ ಪರಾಂಬರಿಸೋಣ:

ಯೆಂಗೀಸ್ಗ್ ಎಂಗೆ ಅರಸ್ನ ಕುಂಕ್ಮ–
ಗಂಡೀಗ್ಗ್ ಅಂಗೆ ಯೆಂಡ.
ವುಟ್ಟಿದ್ ಮನ್ಸ ರುಂಡಾಂತ್ ಅಂದ್ರೆ
ಯೆಂಡದ್ ಬುಂಡೆ ಮುಂಡ.

ಮನ್ಸಾಂತ್ ಅನ್ನೋ ಮೀನ್ ಬದಕೋದ್ಕೆ
ಯೆಂಡದ್ ನೀರೆ ಮುಕ್ಯ!
ಅನಬೋವಸ್ತನ್ ಮಾತ್ ಸುಳ್ಳಾಗ್ದು–
ಸತ್ಯ ರತ್ನನ್ ವಾಕ್ಯ!

('ರತ್ನನ ಪದಗಳು' : ಪುಟ ೧೫)

ಹೆಂಡದ ದುರಭ್ಯಾಸವುಳ್ಳವನು ಯೋಗೀಶ್ವರನಂತೆ, ಅನುಭಾವಿಯಂತೆ ಅನುಭವ ಪ್ರಾಮಾಣ್ಯವನ್ನು ಒತ್ತಿ ಹೇಳಿ, ಆ ಮೂಲಕ ಹೆಂಡದ ಅನಿವಾರ್ಯತೆಯನ್ನಿಲ್ಲಿ ಸಮರ್ಥಿಸಿಕೊಳ್ಳುತ್ತಾನೆ. ಹೆಂಡವೊಂದು ಸ್ಥೂಲವಾದ ಪದಾರ್ಥ–ಒಂದು ಪೇಯ ಅದರಂತೆ ಕಣ್ಣು, ಕಿವಿ, ಮೂಗು, ಚರ್ಮಗಳ ಭೋಗ್ಯ ವಸ್ತುಗಳಲ್ಲೂ ಅಹಿತಕರವಾದ ಭೋಗ್ಯಪದಾರ್ಥಗಳು ನಮಗೆ ಪ್ರಿಯವೆನಿಸುವುದುಂಟು. ಮನಸ್ಸು ಕೂಡ ಈ ಸಂದರ್ಭಕ್ಕೆ ಹೊರತಲ್ಲ. ಹಿತವನ್ನು ಬಿಟ್ಟು ಪ್ರಿಯಕ್ಕೆ ಅದು ಅಂಟಿಕೊಂಡು ಬುದ್ಧಿಯನ್ನು 'ಪ್ರಿಯವಾದುದೇ ಹಿತವಾದುದು' ಎಂದು ಸಮರ್ಥಿಸಲು ಬಳಸಿಕೊಳ್ಳುತ್ತದೆ. ಸಿಗರೇಟು–ಬೀಡಿಗಳ ಬಗ್ಗೆ ಬರೆದು ಬರುವ ಲೇಖನಗಳಲ್ಲಿ ವೈದ್ಯಶಾಸ್ತ್ರದ ಆಧಾರಗಳನ್ನು ತೋರುವ ಕಾರಣಗಳನ್ನೆ ಮುಂದೆ ಮಾಡಿ ಒಂದು ಪಕ್ಷ ಅವು ಹಾನಿಕರವೆಂದರೆ, ಇನ್ನೊಂದು ಅದು ಹಿತಕರ ಎಂದು ಸಾಧಿಸುವ ನಿದರ್ಶನವನ್ನು ಅನೇಕರು ಕಂಡಿರಬಹುದು. ಇತ್ತೀಚೆಗೆ ಬಿ.ಸಿ.ಜಿ.

ಚುಚ್ಚುಮದ್ದಿನ ಬಗೆಗೂ ಡಾಲ್ಡಾ ವನಸ್ಪತಿಯ ಬಗೆಗೂ ವ್ಯಾಕ್ಸಿನೇಶನ್ನಿನ ಬಗೆಗೂ ಹೀಗೇ ಸಮಸಾಮರ್ಥ್ಯವುಳ್ಳವೆಂದು ತೋರುವಂಥ ತರ್ಕ–ಪ್ರತಿತರ್ಕಗಳೂ ಆಧಾರ–ಪ್ರತ್ಯಾಧಾರಗಳೂ ಪ್ರಕಟವಾದದ್ದು ಎಲ್ಲರಿಗೂ ತಿಳಿದ ಸಂಗತಿ. ಲೋಕದಲ್ಲಿ ಅನೇಕ ಹಿತಾರ್ಥಿಗಳಿದ್ದಾರೆ. ಹೆಂಡ ಕುಡಿಯುವವರೆದುರು ಅದೇ ಯೋಗ್ಯ ಎಂಬುದು ಗಡಂಗಿನ ಮಾಲಿಕನ ಹಿತಾರ್ಥ. ಹೆಚ್ಚು ಕಮಿಶನ್ ಯಾವುದರ ಮೇಲೆ ಸಿಕ್ಕುವುದೋ ಅಂಥ ಕಂಪನಿಯ ಔಷಧವೇ ಅತ್ಯುತ್ತಮ ಎನ್ನುವುದು ಔಷಧ ವ್ಯಾಪಾರಿಯ ಹಿತಾರ್ಥ. ಇಂಥ ಅಂತರ್ಗತ ಹಿತಾರ್ಥಗಳನ್ನು ಅರಿತುಕೊಳ್ಳಲಾರದ ಕಲಿತ ಹಾಗೂ ಕಲಿಯದ ಭಾರತೀಯರನೇಕರು ಮೇಲೆ ಹೇಳಿದಂಥ ಹೆಂಡ ಕುಡುಕನಂತೆ ಭಾವಿಕತನದಿಂದ ಹಾನಿಕರವಾದ ಅಭ್ಯಾಸಗಳನ್ನು (ಅದನ್ನು ಹಚ್ಚಿಕೊಡುವ ವಂಚಕರಿಗಿಂತಲೂ ಹೆಚ್ಚು ಸಮರ್ಥವಾಗಿ) ಸಮರ್ಥಿಸಿಕೊಂಬುದು, ವಿಡಂಬನೀಯ, ವಿಜ್ಞಾನದ ಹೆಸರಿನಲ್ಲಿ, ತತ್ವಜ್ಞಾನದ ಹೆಸರಿನಲ್ಲಿ, ಶಿಕ್ಷಣ ಶಾಸ್ತ್ರದ ಹೆಸರಿನಲ್ಲಿ, ಕಲೆಗಾರಿಕೆಯ ಹೆಸರಿನಲ್ಲಿ ಹಾಗೂ ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಅನೇಕ ತರದ ತೋರಿಕೆಯ ಪ್ರಚಾರ, ಉಪದೇಶ, ಉಪನ್ಯಾಸಗಳ ಉಪದ್ವ್ಯಾಪದಿಂದ ವಂಚಿತರಾಗದಿರಲು ಉಕ್ತ ವಿಡಂಬನ ಶೈಲಿಯಿಂದ ಕವಿ ಎಚ್ಚರಿಸುತ್ತಾನೆ. ವಿಡಂಬನೆಯ ಮುಖ್ಯೋದ್ದೇಶವೇ ಇದು. ಇದ್ದದ್ದನ್ನು ಇದ್ದ ಹಾಗೇಯೇ ಹೇಳಿದರೆ ಎಷ್ಟೋ ವೇಳೆ ಜನರಿಗೆ ತಿಳಿಯುವುದಿಲ್ಲ. ಅಥವಾ ತಾಗುವುದಿಲ್ಲ. ಇಲ್ಲವೆ ರುಚಿಸುವುದಿಲ್ಲ. ಅಂಥ ಪ್ರಕರಣಗಳು ಜೀವನದಲ್ಲಿ ಬಹಳ. ಆದುದರಿಂದ ಕವಿಗಳು ಕೆಲವು ಡಿಗ್ರಿಯ ಖಾರವನ್ನು ಬೆರಸಿದ ಮಾತುಗಳ ಮೂಲಕ ಜನತೆಗೆ ಸತ್ಯವನ್ನು ಸಾಕ್ಷಾತ್ಕರಿಸಿ ಕೊಡುತ್ತಾರೆ.

ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ದೊರೆತಿದೆ ಎಂಬುದೇನೋ ನಿಜ. ಆದರೆ ಅದಕ್ಕಿನ್ನೂ ಅಭಿಪ್ರಾಯ–ಅಭಿರುಚಿಗಳ ದಾಸ್ಯ ಹೋಗಿಲ್ಲ. ವಿದೇಶಗಳಲ್ಲಿರುವ ಸದಾಚಾರಗಳನ್ನು ಅನುಸರಿಸುವುದಕ್ಕಿಂತ ಮೊದಲು ಅಲ್ಲಿಯ ಹಿತಘ್ನ ಆಚಾರಗಳನ್ನು ದಿಲ್ಲಿಯಿಂದ ಹಳ್ಳಿಯವರೆಗಿನ ಅನೇಕ–ವರ್ಗದವರೂ ಮಟ್ಟದವರೂ ಸ್ಥಾನ–ಮಾನದವರೂ ಅನುಕರಿಸಲು ಕಲಿಯುತ್ತಾರೆ. ಈ ಅಂಧಶ್ರದ್ಧೆಯು ಸ್ವದೇಶೀಯ ಅಂಧಶ್ರದ್ಧೆಯೊಡನೆ ಕೂಡಿಕೊಂಡು ನಮ್ಮನ್ನು ದಿನೇ ದಿನೇ ನಮ್ಮ ಹಿಂದಿನ ತಲೆಮಾರಿನವರಿಗಿಂತ ಕೆಳಗಿನ ಮಟ್ಟಕ್ಕೆ ನೂಕುತ್ತಿರುವುದನ್ನು ನಾವು ಮನಗಾಣಬೇಕು. ಅದಕ್ಕೆ ವಿಚಾರಶಕ್ತಿಯನ್ನು ಬೆಳೆಸಿಕೊಂಡು ಸ್ವವಿಚಾರದಂತೆ ನಡೆಯುವ ಧೈರ್ಯ–ಆರ್ಜವಗಳನ್ನು ರೂಡಿಸಿಕೊಳ್ಳುವುದೊಂದೇ ಮದ್ದು. ಈ ಭಾವವನ್ನು ಪ್ರೇರಿಸುವ ಇನ್ನೊಂದು ಕವನವನ್ನು ಅವಲೋಕಿಸೋಣ:

ಸಾವಿರಾರು ಗಿಡ
ನೆಟ್ಟೆವು ನಾವು
ಲಕ್ಷಾಂತರ ಗಿಡ–
ಕೊದಗಿತು ಸಾವು

ಯಾರೂ ನೆಡದೇ
ತೊಂದರೆ ಪಡದೇ
ಕೋಟ್ಯಂತರ ಸಸಿ ಮೊಳೆತವಲ
ಹರಿಹರ ಬ್ರಹ್ಮ
ಎಲ್ಲರು ನಮ್ಮ
ವನ ಮಹೋತ್ಸವದ ಮಹತ್ವವರಿತು
ಸಹಕಾರವ ನೀಡಿದರು ಭಲಾ!

('ಅರಣ್ಯರೋದನ' ಪುಟ ೧೯)

'ಸಹಕಾರ' ಎಂಬ ಈ ಪದ್ಯವು ವನಮಹೋತ್ಸವವನ್ನು ಕೆಲವೊಂದೆಡೆ ನಾವು ಆಚರಿಸಿದ್ದರ ಸುಂದರವಾದ ವಿಡಂಬನೆ. ಇದೇನೀ ಅದ್ಭುತ? ನಾವು ನೆಟ್ಟರೆ ಬದುಕಲಿಲ್ಲ; ತಾವೇ ಹುಟ್ಟಿ ಎಷ್ಟೋ ವನಸ್ಪತಿಗಳು ಬೆಳೆದುಕೊಂಡಿವೆ!' ಎಂಬುದು ಮೊದಲಿನ ಆಲೋಚನೆ, ಅನಂತರ ಹೇಗಾದರೂ ಮಾಡಿ ತಮ್ಮ ಅಪಯಶಸ್ಸನ್ನು ಯಶಸ್ಸೇ ಎಂದು ಸಮರ್ಥಿಸುವ ದುರಾಲೋಚನೆ ಉಂಟಾಗುತ್ತದೆ. ಅದರಿಂದ ತಾವೇ ತಾವಾಗಿ ಹುಟ್ಟಿ ಬೆಳೆದ ವನಸ್ಪತಿಗಳು ದೇವರು (ಅಥವಾ ನಿಸರ್ಗ) ನಮ್ಮ ವನಮಹೋತ್ಸವಕ್ಕೆ ಸಹಕಾರ ನೀಡಿದ್ದಕ್ಕೆ ಸಾಕ್ಷಿ ಎಂದು ಬೆನ್ನು ಚಪ್ಪರಿಸಿಕೊಳ್ಳುವ ಪ್ರವೃತ್ತಿ ಪ್ರಕಟವಾಗಿದೆ. ನಮ್ಮ ಇಂದಿನ ಹಲಕೆಲವು ತಜ್ಞ ಯೋಜನೆಗಳನ್ನು ಹೀಗೇ 'ಅಡಿಬಿದ್ದರೂ ಮೂಗು ಮೇಲೆ' ಎಂಬ ನಾಣ್ಣುಡಿಯಂತೆಯೇ ಸಮರ್ಥಿಸಿಕೊಳ್ಳುತ್ತಿದ್ದೇವೆ. ಇಂಥ ಸಮರ್ಥಕರನ್ನು ನಮ್ಮ ಸಮಾಜ ಸಾರ್ವಜನಿಕವಾಗಿ ಪುರಸ್ಕರಿಸುವುದು ಅದರ ಹೇಡಿತನದ ಲಕ್ಷಣ. ಅದಕ್ಕೆ ವಾಕ್ ಸ್ವಾತಂತ್ರ್ಯವಿರುವುದು ಖಾಸಗಿಯಾಗಿ ಕಟ್ಟೆಯ ಮೇಲೆ ಕುಳಿತು ಟೀಕೆ ಮಾಡುವುದರಲ್ಲಷ್ಟೇ ವ್ಯಯವಾಗುತ್ತಿದೆ. ಈ ಪ್ರವೃತ್ತಿ ಹೀಗೇ ಉಳಿದರೆ ನಮ್ಮ ರಾಷ್ಟ್ರವು ಇನ್ನು ೫೦೦ ವರ್ಷಗಳು ಕಳೆದರೂ ಪ್ರಗತಿ ಹೊಂದಲಾರದು. ವ್ಯಕ್ತಿಗೌರವ–ಗ್ರಂಥಗೌರವಗಳಿಗಂಜಿ ಅಯೋಗ್ಯ ವಿಚಾರ–ಆಚಾರಗಳನ್ನು ಆಳಿನಂತೆ ಅನುಸರಿಸುವುದನ್ನು ಅಂದೇ ಖಂಡಿಸಿದ ಭಗವಾನ್ ಬುದ್ಧನ ಅಶೋಕ ಚಿಹ್ನವನ್ನು ಧರಿಸಿದ ನಮ್ಮ ನಾಡಿಗೆ ಈ ಬಗೆಯ ತಾಳ್ಮೆ ಧೈರ್ಯಹೀನತೆ, ಸೋಮಾರಿತನಗಳು ಅಪಾಯಕರ. ಖಂಡನೀಯವಾದುದನ್ನು ಸರ್ವತ್ರ ಖಂಡಿಸುವುದು ವಿಧಿರೂಪದ ಸಾಮಾಜಿಕ ಸದ್ಗುಣ, ಅದು ಧೀರ ಜನಾಂಗದ ಪ್ರಥಮ ಕರ್ತವ್ಯ. ಅಪ್ರಿಯವಾದ ಸತ್ಯವನ್ನು ಪ್ರಿಯರೂಪದಲ್ಲಿ ಹೇಳುವುದು ಅನಿವಾರ್ಯ; ಆ ಶೈಲಿ ತಾಗದಾದಾಗ ನಾವು ಅಪ್ರಿಯರೂಪದಲ್ಲಾದರೂ ಹೇಳಲೇಬೇಕು–ಎಂಬುದು ಸಾರ್ವಜನಿಕ ಜೀವನದಲ್ಲಿ ಆಸಕ್ತಿಯುಳ್ಳ ನಮ್ಮೆಲ್ಲರ ತತ್ವವಾಗಬೇಕು! 'Society is the tribunal Which unmasks pretension and stamps real merit-ಕಾಪಟ್ಯದ ಬುರುಕಿಯನ್ನು ಕಿತ್ತೆಸೆದು ನಿಜವಾದ ಯೋಗ್ಯತೆಯನ್ನು ಗುರುತಿಸಿ, ಮನ್ನಣೆ ಕೊಡುವ ಸಮಾಜವೊಂದು ನ್ಯಾಯಮಂಡಲ; ಇಂಥ ಸಮಾಜರಚನೆಯೇ ವಿಡಂಬನದ ಗುರಿಯಾಗಿದೆ ನಮ್ಮ ಇಂದಿನ ವಿಡಂಬನ ಕವಿಗಳಿಗೆ ಈ ದೃಷ್ಟಿಯಿಂದಲೇ–

ಯುದ್ಧ ದೇವನು ಬಂದಾ
ಬುದ್ಧ ದೇವನು ಬಂದಾ
ಇದ್ದವರ ಇರುಚಿಂತೆ
–ಬಗೆ ಹರಿಯಲಿಲ್ಲಾ
ಬಗೆ ಹರಿಯಲಿಲ್ಲಾ
ಕಲ್ಕಿ ದೇವನು ಬಂದ
ಉಳ್ಕಿ ದೇವರ ತಂದ
ಸಲ್ಕಿ ಗುದ್ದಲಿಯಿಂದ ತೋಡಿದನಲ್ಲಾ
ತೋಡಿದನಲ್ಲಾ
ಎಲ್ಲಾ ದೇವರು ಬಂದು
ತಲ್ಲಣಗೊಂಡರು
ಇಲ್ಲಿಯವರ ಕಾಟ ಇಲ್ಲುಳಿಯಿತಲ್ಲಾ
ಇಲ್ಲುಳಿಯತಲ್ಲಾ
ಪ್ರಾಣದೇವನು ನಿತ್ರಾಣನಾಗುತ ಅಂದ
ಅನ್ನದೇವರು ಮಾತ್ರ ಇನ್ನೂ ಬರಲಿಲ್ಲೋ?
ಇನ್ನೂ ಬರಲಿಲ್ಲಾ!
('ನಾದಲೀಲೆ': ಪುಟ ೩೫) (ಬೇಂದ್ರೆ)

ಎಂಬ 'ಅನ್ನಾವತಾರ' ನಮ್ಮ Grow more food Campaign- ಆಹಾರ ಹೆಚ್ಚು ಬೆಳೆಯಬೇಕೆಂದು ಮಾಡಿದ ಪ್ರಚಾರದ ಒಳ್ಳೆಯ ಟೀಕೆಯೆನಿಸುವಂತಿದೆ. ಪ್ರಯತ್ನದಲ್ಲಿ ಪ್ರಾಮಾಣಿಕತೆಯು ಕಡಿಮೆಯಾದಾಗ ಅದರ ಯಶಸ್ಸು ಪ್ರಶ್ನಾರ್ಥಕ ಚಿಹ್ನೆಗೆದುರಾಗಬೇಕಾಗಿ ಬರುವುದು ಸಹಜ. ಅಂಥ ಅಪಯಶಸ್ಸನ್ನು ಜನನೇತ್ರರಾದ ಕವಿಗಳು ವಿಡಂಬಿಸುವುದೂ ಸಹಜ! ಅಂಥ ಟೀಕೆ ನಮ್ಮ ಕಣ್ಣನ್ನು ತೆರೆಯಿಸದಿದ್ದರೆ ಒಂದೇ ಕವಿಯ ವಾಣಿಯಲ್ಲಿ ಶಕ್ತಿ ಸಾಲದಾಗಿದೆ ಎನ್ನಬೇಕು–ಇಲ್ಲವೆ ನಾವು ಸಾಹಿತ್ಯದ ಸಂದೇಶಕ್ಕೆ ಮಣಿಯದಷ್ಟು ದಪ್ಪ ತೊಗಲಿನವರಾಗಿದ್ದೇವೆ ಎನ್ನಬೇಕು! ಈ ಎರಡು ಕಾರಣಗಳಿಲ್ಲದಿರುವಾಗ ಸಾಹಿತ್ಯವು ಜನಜೀವನವನ್ನು ತಿದ್ದುವುದರಲ್ಲಿ ಎಂದೂ ಅಶಕ್ತವಾಗದು Literature is the thought of thinking souls- ಸಾಹಿತ್ಯವೆಂಬುದು ಚಿಂತನಪರರ ವಿಚಾರ' ಎಂಬ ಮಾತು ವಿಡಂಬನಕಾರರಿಗೆ ಇನ್ನಷ್ಟು ಹೆಚ್ಚಾಗಿ ಅನ್ವಯಿಸುತ್ತದೆ. ಅವರ ಹಾಸ್ಯಭಂಗಿಯು ಸಮಾಜಶಿಕ್ಷಣದ ಹದವಾದ ಮಾರ್ಗ. ಅವರ ಬಿಚ್ಚುಮಾತು, ಮುಚ್ಚುಮಾತು, ಚುಚ್ಚುಮಾತು, ಹುಚ್ಚುಮಾತುಗಳು ಸಾರ್ವಜನಿಕ ಹಿತಚಿಂತನದ ಫಲವಾಗಿಯೇ ಹೊರಟಂಥವು. ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವುದರಲ್ಲಿ ಅವರ ಕೈ ಶಿಕ್ಷಿತ ಸಮಾಜದಲ್ಲಿ ಎಲ್ಲರಿಗಿಂತ ಮುಂದೆ.

ಶಿವಾ ಶಿವಾ ಹೇ
ಶಿವ ಮಾದೇವಾ!
ಅತ್ತಿತು ಕೂಗಿತು
ಚೀರಿತು ಜೀವ!
ಬಾಯಂಗಳದಲಿ
ಹುಟ್ಟಿದ ಮಾತು
ಮುಗಿಲಿನ ಕಿವಿಯನು ಮುಟ್ಟಲೆ ಇಲ್ಲ!
ಹಾಡುವ ಸಭೆಯಲಿ ನರಳುವದುಂಟೆ!

('ಗರಿ' ಪುಟ ೬೧) (ಬೇಂದ್ರೆ)

'ತುತ್ತಿನ ಚೀಲ'ದ ಮೇಲಿನ ಮಾತು ಧನಿಕ–ದರಿದ್ರರಲ್ಲಿಯ ಅಂತರವನ್ನು ಕಡಿಮೆ ಮಾಡುತ್ತೇವೆಂದು ಹೊರಟ, ಹಾಗೆ ಕಂಡ ಕಂಡಲ್ಲಿ ಸಾರಿದ, ಆದರೆ ಅದರಲ್ಲಿ ಸಾಕಷ್ಟು ಜಯ ಹೊಂದದ, ಬಡಾಯಿಗಾರರಾದ ಕೆಲ ರಾಜಕಾರಣಿಗಳನ್ನು ಮೂದಲಿಸುವಂತಿದೆ. ಮೆಟ್ಟನ್ನು ಮೆಟ್ಟಿ ನಡೆಯುವವನಿಗೆ ಬರಿಗಾಲಿನ ಪ್ರಯಾಣಿಕನ ಕಷ್ಟ–ಸುಖ ಹೇಗೆ ಗೊತ್ತಾಗಬೇಕು? ಕಾರಿನಲ್ಲೇ ತಿರುಗುವವರಿಗೆ ಮೋಟಾರಿನ ಅವ್ಯವಸ್ಥೆಯ ಬಗ್ಗೆ ಸಾರ್ವಜನಿಕರು ದೂರು ಕೊಟ್ಟರೆ ಅವರ ತೊಂದರೆಯ ಡಿಗ್ರಿ ಎಷ್ಟೆಂಬುದು ಗೊತ್ತಾದೀತೇ? ಅದೇ ಮೇರೆಗೆ ತಮ್ಮ ಜೀವನವನ್ನು ಸುಖವಾಗಿ ಕಳೆಯುತ್ತಿರುವ ಹೃದಯಹೀನ ನಾಯಕರಿದ್ದರೆ ಅವರಿಗೆ ಜನತೆಯ ತೊಂದರೆ–ತಾಪತ್ರಯಗಳನ್ನು ತಿಳಿದುಕೊಳ್ಳುವ, ತಿಳಿದುಕೊಂಡು ಅವನ್ನು ನಿವಾರಿಸುವ ಪ್ರೇರಣೆಯೇ ಉಂಟಾಗುವುದಿಲ್ಲ ಐಷಾರಾಮಪ್ರಿಯರು ಯಾವ ಸರಕಾರಿ ಅಥವಾ ಸಾರ್ವಜನಿಕ ಕ್ಷೇತ್ರದಲ್ಲಿ ಅಧಿಕೃತರಾದರೂ ಹೀಗೇ 'ದೈವವುಳ್ಳವರಿಗೆ ದಯವೇ ಇಲ್ಲ' ಎಂಬ ಗಾದೆಯಂತೆ ವರ್ತಿಸುತ್ತಾರೆ. ಇಂಥ ಪರೋಪಜೀವಿಗಳೆಂಬ ಕಳೆಯನ್ನು ಕಿತ್ತೊಗೆದಾಗಲೇ ಸಮಾಜವು ನಿರ್ಮಲವಾದೀತು; ಅದಕ್ಕೆ ಸ್ವಾಸ್ಥ್ಯವುಂಟಾದೀತು.

ಭಾರತದ ಜನಸಂಖ್ಯೆ ಬಹಳವಾಗ್ಹೋಯ್ತು:
ಅದರಿಂದಲೇ ಇಂದು ಊಟಕಿಲ್ಲಾಯ್ತು!
ಊಟಕಿಲ್ಲದ ಜನರ ಜಂಭ ಹೆಚ್ಚಾಯ್ತು;
ಅದನಿಳಿಸಲಿಂದು ರೇಶನ್ನೆ ಬೇಕಾಯ್ತು!
ಮಕ್ಕಳನು ಹಡೆದವರು ನವನಂದರಲ್ತೆ?
ಅವರ ರಾಕ್ಷಸತನವು ಹೆಚ್ಚಾಯಿತಂತೆ!
ಅವರ ಬಂಧಿಸಲು ರೇಶನ್–ಹಗ್ಗ ಬೇಕು–
ಚಾಣಕ್ಯ ಸರಕಾರಕೆನ್ನಿರೊ ಪರಾಕು!
ಐರೋಪ್ಯ ಪದ್ಧತಿಯ ಆಡಳತೆ ಬೇಕು,

ಕೈಗಾರಿಕೆಯು ಬಂದು ಕೃಷಿಯುಳಿಯಬೇಕು
ಆದರೂ ಆಹಾರ ಅಕ್ಷಯಿಸಬೇಕು;
ಅಪ್ಪಚ್ಚಿ ಅಮ್ಮಣ್ಣಿ ಎರಡೂನು ಬೇಕು!
ಬಂಡವಾಳಿಗ ಬೇಕು ಬಡವನೂ ಬೇಕು;
ಹುಲಿಹಸುಗಳೆರಡೂನು ಒಟ್ಟಿಗಿರಬೇಕು!
ಹುಲಿಯು ಹಸುವನು ಕಚ್ಚಿ ತಿನ್ನುತಿರಬೇಕು;
ಹಸುವಿಂಗೆ ಹೆದರಬೇಡನ್ನುತ್ತಿರಬೇಕು!

('ಬೇತಾಳಗಳ ಕುಣಿತ' : ಪುಟ ೨೭) (ಬಿ.ಹೆಚ್. ಶ್ರೀ)

ಒಂದು ಕಾಲದಲ್ಲಿ ಒಂದು ರಾಜಕೀಯ ಪಕ್ಷವು ತಳೆದ ಧೋರಣವನ್ನಿಲ್ಲಿ ವಿಡಂಬಿಸಲಾಗಿದೆ. 'ಸಾಹಿತ್ಯವೆಂಬುದು ಸಮಾಜದ ವಿಚಾರಗಳ ಅಭಿವ್ಯಕ್ತಿಯ ಸ್ವರೂಪದ್ದು' ಎಂಬ ನುಡಿಯಂತೆ ನಮ್ಮಲ್ಲಿ ನಮ್ಮ ಆಳಿಕೆಯ, ಆಡಳಿತೆಯ, ಆರ್ಥಿಕ ಯೋಜನೆಗಳ ಬಗ್ಗೆ ವಿಚಾರಘರ್ಷಣವುಂಟಾದುದರ ಫಲವಾಗಿಯೇ ನಾವೀಗ ಸಮಾಜವಾದಿ ಸ್ವರೂಪದ ಸಮಾಜದ ಆದರ್ಶವನ್ನು ಎತ್ತಿ ಹಿಡಿದದ್ದು. ಜನಕವಿಗಳ ಅಂತರ್ವಾಣಿ ಜನನಾಯಕರ ಹೃದಯವನ್ನು ಒಂದಲ್ಲ ಒಂದು ವಿಧದಿಂದ ಹೊಕ್ಕು ತನ್ನ ಪ್ರಭಾವವನ್ನು ಬೀರಿಯೇ ತೀರುತ್ತದೆ ಎಂಬುದಕ್ಕಿದೊಂದು ಚಿಕ್ಕನಿದರ್ಶನ: ನಾವೀಗ ಕೃಷಿಗೆ ತಕ್ಕ ಪ್ರಾಮುಖ್ಯವನ್ನು ಕೊಡಲಾರಂಬಿಸಿದ್ದೇವೆ. ಕಾರ್ಖಾನೆಗಳ ಕಾಳಜಿಯನ್ನು ಸ್ವಲ್ಪ ಕಡಿಮೆ ಮಾಡಿ ಗ್ರಾಮೋದ್ಯೋಗಗಳತ್ತ ಲಕ್ಷ್ಯ ಹಾಕಲಾರಂಭಿಸಿದ್ದೇವೆ. ಇಂಥ ನಮ್ಮ ದೃಷ್ಟಿ ಪರಿವರ್ತನಕ್ಕೆ ಕಾಲದ ಕರೆಯಾಗಿ ಕರೆಗೊಡುವ ಕವಿಗಳ ಕಂಠವು ಕೆಲವೊಮ್ಮೆ ಪ್ರತ್ಯಕ್ಷವಾಗಿ ಎಷ್ಟೋ ವೇಳೆ ಅಪ್ರತ್ಯಕ್ಷವಾಗಿ–ಕಾರಣವಾಗುತ್ತದೆ. ಮೇಲಿನ ಪದ್ಯವು ಆಡಿದ ಚುಚ್ಚುಮಾತಿನಲ್ಲಿ ಸಮಾಜವನ್ನು ಎಚ್ಚರಿಸುವ ಕಟುಧ್ವನಿಯಿದೆ. ಅಂಥ ಧ್ವನಿ ಜನತೆಯನ್ನು ಮುಟ್ಟಿದೆ, ಜನನಾಯಕರನ್ನು ತಟ್ಟಿದೆ. ಈಗ ನಾವು ದೃಷ್ಟಿದೋಷವನ್ನು ಅರಿತು ಅದನ್ನು ನಿವಾರಿಸಿಕೊಳ್ಳುತ್ತಿದ್ದೇವೆ ಎಂಬುದು ಪ್ರತ್ಯಕ್ಷವಾಗಿ ಅನುಭವಿಸುವ ಸಂಗತಿ. ಇಂದು ನಾವೇ ಸರಕಾರ, ಸರಕಾರವೇ ನಾವು. ಆದುದರಿಂದ ಸರಕಾರದ ಟೀಕೆಯೆಂದರೆ ನಮಗೆ ನಾವೇ ಮಾಡಿಕೊಂಡ ಟೀಕೆ ಎಂಬುದನ್ನು ಯಾರೂ ಮರೆಯಲಾಗದು. ಈ ಸ್ವದೋಷೋದ್ಘಾಟನವು ಸದಾ ನಡೆಯುತ್ತಿದ್ದರೇ ನಾವು ಬೇಗ ರಾಷ್ಟ್ರ ಪುನಾರಚನೆಯಲ್ಲಿ ಮುನ್ನಡೆಯನ್ನು ಸಾಧಿಸಿಯೇವು; ಸರ್ವೋದಯದ ನಮ್ಮ ಸೂರ್ಯನಂಥ ಆದರ್ಶವು ಕೈಗೂಡೀತು. ಇಲ್ಲವಾದರೆ–

ಜನವೆಂತು ಮರೆಯವದು?
ದೇವನೌರಸರಾದ
ಮಾನವರ, ಪಶುವಂತೆ ನಡೆಸಬೇಕೆ?
ಒಂದು ಗುಂಪನು ಕಟ್ಟು–

ತದರ ಹೆಚ್ಚಳಕಾಗಿ
ಉಳಿದ ಸಮುದಾಯಗಳ ಕೆಡಿಸಬೇಕೆ?

('ಬಾಳ ದೇಗುಲದಲ್ಲಿ' : ಪುಟ ೧೧೨)

ಎಂಬ 'ಅಸುರ'ನೀತಿ ಪ್ರಚುರವಾಗಿ ರಾಜಕೀಯದಲ್ಲೂ ಸಾಹಿತ್ಯದಲ್ಲೂ ಶಿಕ್ಷಣದಲ್ಲೂ ಉದ್ಯೋಗದಲ್ಲೂ ಗುಂಪು–ಮತಗಳನ್ನು ಕಟ್ಟಿಕೊಂಡ ಸ್ವಯಂವೃತ ನಾಯಕರ ದಬ್ಬಾಳಿಕೆ ದಿನೇ ದಿನೇ ಬೆಳೆದು ಮಿಕ್ಕ ಸಮುದಾಯಗಳ, ವರ್ಗಗಳ, ಗುಂಪುಗಳ, ಅಸಂಘಟಿತರ ಅರ್ಥಾಪಹರಣವನ್ನು ಚೆನ್ನಾಗಿ ಮಾಡುತ್ತ ಹೋಗುವ ಪರಿಪಾಠ ಉಂಟಾಗುವುದರಲ್ಲಿ ಯಾರೂ ಸಂದೇಹ ಪಡಬೇಕಾಗಿಲ್ಲ. 'ನಾಡಿನ ಬಡವನು ಸರ್ಕಸ್ಸಿನ 'ಸಿಂಹ'ದಂತಾಗುವುದು ತಪ್ಪಬೇಕಾದರೆ–

ನಾಡಿನ್ ಬಡವ! ಸರ್ಕಸ್ಸ್ ಸಿಮ್ಮ!
ಕಮ್ಚಿಯಿಡಿದೋನ್ ಬೆಪ್ಪ್ ನನ್ನ್ ತಮ್ಮ!
ಔನ್ಗೆ ಯೆದರಿ ಬಾಲಾ ಮುದರಿ
ಮೂಲ್ಯಾಗ್ ಮುದುರ್ಕೊಬೇಕ?

('ರತ್ನನಪದಗಳು' : ಪುಟ ೧೧೦)

ಎಂದು ಕೇಳುವ ಛಾತಿ ನಮ್ಮಲ್ಲಿ ಉಂಟಾಗಬೇಕು. ಹೆದರಿಕೆ ಎಂಬುದು ಆತ್ಮವನ್ನು ಕೊಲೆಮಾಡಲು ಕಾಪಟ್ಯವು ಉಪಯೋಗಿಸುವ ಇರಿಚೂರಿ. ಅಂಥ ಅಂಜುಕುಳಿಗಳು ಕಪಟಿಗಳಿಗಿಂತಲೂ ಹೆಚ್ಚಿನ ಸಮಾಜದ್ರೋಹಿಗಳು, ರಾಷ್ಟ್ರದ್ರೋಹಿಗಳು ಎನ್ನಬೇಕು. ಈ ಅಭಿಪ್ರಾಯದಿಂದಲೇ ಲಂಚ ತೆಗೆದುಕೊಳ್ಳುವವರಿಗಿಂತ ಕೊಡುವವರೇ ಹೆಚ್ಚಿನ ಅಪರಾಧಿಗಳು ಎಂದೊಮ್ಮೆ ಒಬ್ಬರು ವಾದಿಸಿದ್ದುಂಟು! ಈ ಮನೋಭಾವದಿಂದಲೇ ಶ್ರೀ ಪು.ತಿ. ನರಸಿಂಹಾಚಾರ್ಯರು 'ನವ ಭಾರತ ತರುಣರಾವು' ಎಂಬ ಪದ್ಯದಲ್ಲಿ ದೇವರನ್ನು ಹಂಗಿಸಿ ಬಿಟ್ಟಿದ್ದಾರೆ!

ನೂರುಕೋಟಿ ದೇವರಂತೆ
ನಮಗೇತಕೊ ಇವರ ಚಿಂತೆ?
ನಮ್ಮ ತೋಳ ಬಲದೊಳವರ
ನಳೆಯುವುದಕೆ ನಮ್ಮ ಬವರ?
ಅವರಾಯುಧವವರಿಗುಂಟು,
ಕಳಕೆ ಹತ್ತು ದೆಸೆಗಳುಂಟು
ಶರಣು ಶರಣನಂತರೇ.
ಶರಣು ಶರಣು ಸಂತರೇ,
ನಮ್ಮ ಬಿಡಿರಿ ದಮ್ಮಯ್ಯ,

ಬಯಲಿಗೋಡಿ ನಮ್ಮಯ್ಯ,
ನಿಮ್ಮ ಹಮ್ಮು ನಿಮಗಿರಲಿ
ನಮ್ಮ ದಮ್ಮು ನಮಗಿರಲಿ
ನಿಮಗೆ ನಿಮ್ಮ ಹೋರಿಕೆ
ಇದೇ ನಮ್ಮ ಕೋರಿಕೆ
ನವಭಾರತ ತರುಣರಾವು...

('ಶಾರದಯಾಮಿನಿ' ಪುಟ ೩೫)

ಇಲ್ಲಿ ಶೌರ್ಯದ ಉದ್ರೇಕವು ದೈವವಿಡಂಬನೆಗೆ ಅವಕಾಶ ಕೊಟ್ಟಿದೆ. 'ನಿನ್ನಿನ ಮೊನ್ನಿನ ಹುಡುಗರೊ ನಾವು, ನಮಗೇತಕೆ ಹೇಳಜ್ಜರ ಸಾವು' ಎಂದೊಮ್ಮೆ ಕುವೆಂಪುಗಳು ಹೂಂಕರಿಸಿದ ಧ್ವನಿ ಇಲ್ಲಿದೆ. ಇಂಥ ಅಧಟು ನಮ್ಮ ನಾಡಿ ನಾಡಿಯಲ್ಲಿ ಸದಾ ಜಾಗೃತವಾಗಿದ್ದರೆ ಮಾತ್ರ ನಾವು ದೇಶದಲ್ಲಿ ತೃಪ್ತಿಕರವಾದ ಸಂಘಟಿತ ಜೀವನವನ್ನು ಸಾಗಿಸಿಕೊಂಡು ಹೋಗಬಲ್ಲವರಾಗಿ, ವಿದೇಶೀಯರು ಹೊಂಚು ಹಾಕಿ ಬೀಸುವ ವಿವಿಧ ದಾಸ್ಯಗಳ ಬಲೆಯಿಂದ ತಪ್ಪಿಸಿಕೊಂಡು ಬಾಳಿಯೇವು. ಆದರೆ ನಮ್ಮ ಪರಾಕ್ರಮವು ಹುಂಬತನವಾಗಬಾರದು, ಪ್ರದರ್ಶನವಾಗಬಾರದು, ಉಪಜೀವನ ಸಾಧನವಷ್ಟೇ ಆಗಬಾರದು. ಈ ಎಚ್ಚರಿಕೆಯನ್ನು ಮತ್ತೊಬ್ಬ ಕವಿ ಕೊಟ್ಟಿದ್ದಾನೆ:

ಯೆಂಕ ಬಾವ ಓಗ್ತಾನೆ ಪರ್ದೇಸಕ್ಕೆ
ಓಗ್ತಾನೆ ಮುಂದಿನ್ ವರ್ಸ ಪರ್ದೇಸಕ್ಕೆ
  ಬೇರ್ಬೇರೆ ದೇಸ್‌ದಾಗೆ
  ಗಾಳಾ ಹಾಕೂ ಯಿದ್ಯ
ನೋಡ್ಡಾಂಗ್ ಮಾಡಿ ಅವ ಬರ್ತಾನೆ!
  ನೀರೇ ಇಲ್ದಿದ್ದಲ್ಲಿ
  ಮೀನ ಗೀನಾ ಹುಡ್ಕಿ
ಹಿಡ್ಯೊ ಯಂತ್ರ ಸಿಕ್ರೆ ತರ್ತಾನೆ!
  ಬೇರ್ಬೇರೆ ದೇಸ್ದಾಗೆ
  ಗಂಜೀ ಉಂಬ್ ನಮೂನಿ
ಥಾಟೂ ಗೀಟೂ ಕಲ್ತು ಬರ್ತಾನೆ!
  ಗಂಜೀ ನೀರೂ ಇಲ್ದೆ
  ಬದ್ಕೊ ಯಿದ್ಯ ಸಿಕ್ರೆ
ನೂರಾರ್ ಖಂಡೀನಾದ್ರೂ ತರ್ತಾನೆ
  ಬೇರ್ಬೇರೆ ದೇಸ್ದಾಗೆ
  ಗೊರ್ಕೇ ಹೊಡೂ ರೀತಿ

ಗೀತಿಯೆಲ್ಲ ಕಲ್ತು ಬರ್ತಾನೆ!
ಗೋರ್ಕೀ ಹೊಡೂ ಮನ್ಶ
ಎಚ್ರೇ ಆಗ್ದಿದ್ಧಾಂಗೆ
ಮಾಡೂ ಮದ್ದು ಸಿಕ್ರೆ ತರ್ತಾನೆ! (ವಿ.ಜಿ.ಭಟ್)

ವಿದೇಶಗಳಿಗೆ ಶಿಷ್ಯವೃತ್ತಿಗಳನ್ನಿತ್ತು ನಮ್ಮ ಸರಕಾರಗಳಿಂದು ನಮ್ಮಲ್ಲಿಯ ಎಷ್ಟೋ ಕಲಿತವರನ್ನು ವಿಶೇಷ ಜ್ಞಾನದ ಸಂಪಾದನೆಗಾಗಿ ಕಳಿಸಿಕೊಡುತ್ತಿವೆಯಲ್ಲವೇ? ಹಾಗೆ ಸಾವಿರಾರು ರೂಪಾಯಿಗಳ ಶಿಷ್ಯವೃತ್ತಿಗಳನ್ನು ಹೇಗಾದರೂ ಮಾಡಿ ಪಡೆದು, ವಿದೇಶಗಳಿಗೆ ತೆರಳಿ, ಅಲ್ಲಿ ಕೆಲಕಾಲ ಉಂಡಾಡಿಗಳಾಗಿ ಮೆರೆದು, ಅನಂತರ ಭಾರತಕ್ಕೆ ಮರಳಿ, ದೊಡ್ಡ ದೊಡ್ಡ ನೌಕರಿಗಳನ್ನು ಸಂಪಾದಿಸಿಕೊಂಡು, ಜಂಭದ ಕೋಳಿಗಳಾಗಿ, ಜಯಭೇರಿ ಹೊಡೆದುಕೊಂಡು ತಿರುಗಾಡುವ ಡಾಂಭಿಕರ ಸಂಖ್ಯೆ ಏರುತ್ತಿರುವ ಅಂಶವನ್ನು ಮೇಲಿನ ಪದ್ಯವು ವಿಡಂಬಿಸಿದೆ. ಈ ತಜ್ಞರ ಪಿಡುಗು ಎದ್ದು ಕಾಣುತ್ತಿರುವ ಇಂದಿನ ಅವಧಿಯಲ್ಲಿ ಇಂಥ ನೋಟಿಸು ನಮ್ಮ ಕಣ್ಣನ್ನು ತೆರೆಯಿಸಬೇಕು–ತೆರೆಯಿಸುವ ಶಕ್ತಿ ಕವಿವಾಣಿಗಿದೆ–ತೆರೆಯದಿದ್ದರೆ ನಾವೇ ದಪ್ಪ ತೊಗಲಿನವರೆನಿಸುತ್ತೇವೆ. ಇದೇ ಕವಿ ವಿ.ಜಿ.ಭಟ್ಟರು ಪ್ರಕಟಿಸಿದಂತೆ 'ಕಾಡುಕೋಣನ ಛಾಪೆಯ ಮಿದುಳುಗಳು ಬಿಕರಿಗೆ ಸಿದ್ಧವಾಗಿವೆ–ಮುಂಗಡವಾಗಿ ಹಣ ಕಳಿಸಿ ಅಮೇರಿಕದಿಂದ ಅವು ಬರುತ್ತಿರುವಾಗಲೇ ನಿಮಗೆ ಸಿಗುವಂತೆ ಗ್ಯಾರಂಟಿ ಮಾಡಿಕೊಳ್ಳಿರಿ" ಎಂಬ ಜಾಹೀರು ನಾಮೆಯನ್ನು ಕರ್ನಾಟಕವೂ ಭಾರತವೂ ಪುರಸ್ಕರಿಸುವ ಪ್ರಸಂಗ ಬಂದೀತು! ಆದರೆ ನಾವಿಂದು ತಕ್ಕಮಟ್ಟಿಗಾದರೂ ಎಚ್ಚೆತ್ತಿದ್ದೇವೆ. ಕವಿಗಳೂ ಕಲೆಗಾರರೂ ನಮ್ಮನ್ನು ನಾಡಕಟ್ಟುವ ಕೆಲಸದಲ್ಲಿ ಹುರಿದುಂಬಿಸುತ್ತಿದ್ದಾರೆ. ಈ ನಡುವೆ ನಾವು ಹಳೆಯ ಕಾಲದ ಕಿಲುಬುಗಳನ್ನು ಕಳೆದುಕೊಳ್ಳಬೇಕು. ಇದೇ ಭಾವವನ್ನು ಶ್ರೀ ಕಣವಿಯವರು

ಮಂತ್ರದರ್ಥವರಿಯದಯ್ಯೊ
ಮೂಢ ಸಂತೆ ನೆರೆದಿದೆ!
ಮಡಿಯ ಮಾಡಿ ಉಡುವೆನೆಂದು
ಬೊಗಸೆ ನೀರು ಸುರುವಿ ಕೊಳಕು
ಪಂಚೆ ತೊಳೆದ ಮಾತ್ರಕೆ
ಅಚ್ಚ ಹಸನುಗೊಳಿಸದಿರಲು
ಮನಕೆ ಶುಭ್ರವೆನಿಸದಿರಲು
ಮಡಿಯಾಯಿತೆ ಪೂಜೆಗೆ?
ಅದರೊಳುಳಿದ ಜಿಡ್ಡಿನಂತೆ
ನೀನು ಕೂಡ ಮಡ್ಡನಂತೆ,

ತಿಳಿಯೊ ಮೊದಲು ತತ್ವವ
ಅದರ ಮೂಲ ಸತ್ವವ!

('ಆಕಾಶ ಬುಟ್ಟಿ' : ಪುಟ ೧೧)

ನೇರವಾದ ದೂರಿನ ಶೈಲಿಯಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ. ಅವರ ಈ ಎಚ್ಚರಿಕೆಯಂತೆ ನಡೆಯದೆ ಪ್ರದರ್ಶನ ಶೀಲತೆಯನ್ನು ಹಿಡಿದರೆ–

ನಮ್ಮ ಮುಖಂಡರು ಮಾತಾಡಿದರು
ಎರಡೂವರೆ ತಾಸು
ರೈತರ ಮನದಲಿ ಬಿಂಬಿಸುವಂತೆ
ಮೇಜಿನ ಬಳಿ ಗುದ್ದಾಡಿದರು.
ಭಾಷಣ ಕೇಳಿದ ರೈತರಿಗಾಯಿತು
ಭೀಷಣ ಪರಿಣಾಮ
ಎರಡೂವರೆ ತಾಸು
ಉಪದೇಶದ ತ್ರಾಸು
ಕೊಟ್ಟದ್ದಕ್ಕೆ ಕೃತಜ್ಞತೆ ಸಲ್ಲಿಸಿ
ಕೈ ಚಪ್ಪಾಳೆಯ ತಟ್ಟಿದರು
ಭಾಷಣಕಾರರು ನೋಡಿದರು
ಬದನೇಕಾಯಿ ಬಟಾಟೆಗಳನ್ನೇ
ಮೇಜಿನ ಕಡೆಗೆಸೆದಾಡಿದರು
ಕೊರಳಿಗೆ ಗೆಣಸಿನ ಮಾಲೆಯ ಹಾಕಲು
ಗೌಡ ಪಟೇಲರು ಬಾಗಿರಲು
ನುಡಿಯಿತು ಭಾಷಣಕಾರರ ಕೊರಲು:
"ಹಸಿವಾಗಿದೆ ಹೊಟ್ಟೆ"
ಪಟೇಲನುತ್ತರ ಕೊಟ್ಟನು "ಸ್ವಾಮೀ.
ಆಹಾರದ ಬಿಕ್ಕಟ್ಟುಂಟು;
ಉಪವಾಸವ್ರತ ಸಾಧಿಸಿರಿ,
ಗಡ್ಡೆಗೆಣಸುಗಳ ಶೋಧಿಸಿರಿ
ದೇಹಕ್ಕೂ ಹಿತ ದೇಶಕ್ಕೂ ಹಿತ
ಆಹಾರದ ಮಿತವು"

('ಸಂತಾನ' ಪುಟ ೩೩–೩೪)

ಎಂದು 'ರೈತರ ಸಭೆಯಲ್ಲಿ ಹೇಳಿದ ಹಾಗೆ ಜಾಗೃತರಾದ ಜನರು ಇಂದು ಕಪಟನಾಯಕರಿಗೆ ಬುದ್ಧಿ ಕಲಿಸದಿರರು. ಹಾಗೆ ಬುದ್ಧಿ ಕಲಿಸುವವರೆಗೆ ಕಾದರೆ ನಾಗರಿಕ ಧುರಂಧರರೆಂದುಕೊಂಬ ನಾವು ಹಿಂದೆ ಅತ್ತಂತೆ ಇಂದೂ ಅಳಬೇಕಾದೀತು!



# ೮

# ಕರುಣ ಸಂದೇಶ

ಭಾರತ ಮಾತೆಯಿಂದ ಆರಂಭಿಸಿ ಹಳ್ಳಿಯೊಂದರ ಹಳೆಯ ಮುದುಕಿಯವರೆಗೂ ರಾಷ್ಟ್ರಕ್ಕೇನಾದರೂ ಅಪಾಯವುಂಟಾದರೆ ದುಃಖ ಪಡುವ ಸಂದರ್ಭ ಬಂದೀತು. ಶೋಕಸ್ಥಾಯಿ ಕದಡಿದರೆ ಹೃದಯ ಕರಗಿ ನೀರಾಗುತ್ತದೆ; ವಜ್ರಕಠೋರವಾದ ಮನಸ್ಸಾದರೂ ಕುಸುಮಕೋಮಲವಾಗುವ ಹೊತ್ತು ಬರುತ್ತದೆ; ಕರಣ ಕಳವಳಿಸುತ್ತದೆ, ಹರಣ ತಳಮಳಿಸುತ್ತದೆ.

ಹಡೆದೊಡಲು ಬಂಜೆಯಾಯ್ತೆ?
ಬಾಳ್ಮೊದಲೆ ಸಂಜೆಯಾಯ್ತೆ?
ಭಾರತಿಗೆ ತಲೆಭಾರ
ಇರುವಳೆಂಬ ವಿಚಾರ
ಬಾಳ್ವಣ್ಣು ಗಿಂಜು ಆಯ್ತೆ?
            ಬರಿಶೂನ್ಯ
ಮೂವತ್ತುಮೂರು ಕೋಟಿ!
ನನ್ನೆದೆಯ ಹಾಲನೆರಸೀ
ನನ್ನೊಳಿಹ ಬೆಳಕ ಬೆರಸೀ
ವಜ್ರದೇಹಿಗಳೆಂದೆ
ಗೊನೆ–ಮಿಂಚೊ ಎನೆ ಕಂಡೆ–
ವಿಜಯವಿರಲೆಂದು ಹರಸೀ
            ಕಳುಹಿದೆನು
ಮೂವತ್ತು ಮೂರು ಕೋಟಿ!
ಬಸುರಿನಲಿ ಪಡೆದುದೇನು?
ಹೊರಗಿಲ್ಲಿ ಹಡೆದುದೇನು?

ಆರರೆ ಬಡಕೊಡಲುಗಳು
ಸೆರೆಮನೆಗಳಾದವೋ!
ನನ್ನಳಲು ಕೇಳದೇನೋ!
ಎಲೆಲೇ
ಮೂವತ್ತು ಮೂರು ಕೋಟಿ

('ಗರಿ' : ೫೨–೫೪) (ಬೇಂದ್ರೆ)

ಮೂವತ್ತು ಮೂರು ಕೋಟಿ ಮಕ್ಕಳೂ ತಾಯಿಯ ಜೊತೆಗೆ ಹಿಂದೆ ಅತ್ತರು– ದೇಶ ಪಾರತಂತ್ರ್ಯದಲ್ಲಿದ್ದಾಗ ಈಗ ಹಾಗೆ ಅತ್ತು ಸತ್ತು ಗಳಿಸಿದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳದಿದ್ದರೆ ಮತ್ತೆ ಅಳಬೇಕಾದೀತು. ಕೂಸು ಸತ್ತಾಗ ತಾಯಿ, ತಂದೆ ಹೀಗೆ ಅತ್ತರಂತೆ:

ತಂಬಲs ಹಾಕದsತುಂಬ ಕೆಂಪುಗಿಣಿ
ಗಡಕ ಹಣ್ಣಿನ ಹಾಂಗ
ಇದ್ದತ್ತ ತುಟಿಯ ಬಣ್ಣೆತ್ತ ಹಾರಿತು?
ಯಾವ ಗಾಳಿಗೆ, ಹೀಂಗ
ಈ ಗದ್ದ, ಗಲ್ಲ, ಹಣಿ, ಕಣ್ಣು, ಕಂಡು
ಮಾರೀಗೆ ಮಾರಿಯ ರೀತಿ
ಸಾವನs ತನ್ನ ಕೈ ಸವರಿತಲ್ಲಿ,
ಬಂತೆನಗ ಇಲ್ಲದ ಬೀತಿ
ಧಾರೀಲೆ ನೆನೆದ ಕೈಹಿಡಿದೆ ನೀನು,
ತಣ್ಣಗ ಅಂತನ ತಿಳಿದು
ಬಿಡವೊಲ್ಲಿ ಇನ್ನುನೂ ಬೂದಿ ಮುಚ್ಚಿದ
ಕೆಂಡ ಇದಂತ ಹೊಳೆದು
ಮುಗಿಲನ ಕಪ್ಪರಿಸಿ ನೆಲಕ ಬಿದ್ದರ
ನೆಲಕ ನೆಲಿ ಎಲ್ಲಿನ್ನ?
ಆ ಗಾದಿ ಮಾತು ನಂಬಿ ನಾನು ದೇವರಂತ
ತಿಳಿದಿಯೇನ ನೀ ನನ್ನ
ಇಬ್ಬನ್ನಿ ತೊಳೆದರೂ ಹಾಲು ಮೆತ್ತಿದಾ
ಕವಳಿಕಂಟಿಯಾ ಹಣ್ಣು
ಹೊಳೆ ಹೊಳೆವ ಹಾಂಗ ಕಣ್ಣಿರುವ ಹೆಣ್ಣ, ಹೇಳು
ನಿನ್ನವೇನ ಈ ಕಣ್ಣು?

ದಿಗಿಲಾಗಿ ಅನ್ನತದ ಜೀವ ನಿನ್ನ ಕ
ಣ್ಣಾರೆ ಕಂಡು ಒಮ್ಮಿಗಲsಃ
ಹುಣ್ಣಿಮೀ ಚಂದಿರನ ಹೆಣಾ ಬಂತೊ ಮುಗಿ
ಲಾಗ ತೇಲತ ಹಗಲ!
('ನಾದಲೀಲೆ' : ಪುಟ ೫೮) (–ಬೇಂದ್ರೆ)

'ನೀ ಹೀಂಗ ನೋಡಬ್ಯಾಡ ನನ್ನ' ಎಂದು ಕೂಸಿನ ತಂದೆ ಕೂಸಿನ ತಾಯಿಗೆ ಹೇಳಿ ಅತ್ತ. ಭಾರತದ ತಂದೆ ಸತ್ತಾಗ ನಾನು ಹೇಗೆ ಅತ್ತೆ ಗೊತ್ತೇ?

ಭಾರತದ ಶುಭ್ರಾಭ್ರಕೀರ್ತಿಕ–
ರಂಡವೊಡೆದಿತೆ ಸೋದರ!
ಭಾರತದ ಸತ್ವಪ್ರದೀಪಕ
ನಂದಿತೇ ಹಾಯ್ ಸೋದರ!
ಭಾರತದ ದಿವ್ಯಾತ್ಮ ತನ್ನವ–
ತಾರ ಮುಗಿಸಿತೆ ಸೋದರ!
ಭಾರತದ ಸತ್ಯಾದ್ರಿ ಶೃಂಗವು–
ರುಳ್ದುದೇ ಹೇ ಸೋದರ!
ಅಕಟಕಟ ದುಃಖಾಬ್ಧಿವೀಚಿ ಹೃ–
ದಂತರಾಳ ಹೊಕ್ಕಿತೋ!
ಅಕಟ ಸಂತಾಪಾಗ್ನಿ ಕೇಸುರಿ–
ಗೊಂಡು ದೆಸೆಗಳ ನೆಕ್ಕಿತೋ!
ವಿಕಟ ಚರಿತನನೆಣಿಸಿ ರೋಮಗ–
ಳೆದ್ದು ತಿಸುಳಗಳಾದವೋ!
ಅಕುಟಿಲನ ಮರಣಕ್ಕೆ ಮರುಗಿದ
ಕರಣ ಹಸುಳೆಗಳಾದವೋ!
ಸತ್ತು ಬದುಕಿದ ದಿವ್ಯ ಮಾನವ–
ನಾತ್ಮ ಪಜ್ವಳಿಸುತ್ತಿದೆ!
ಸತ್ತು ಸಾಯದ ಕೀರ್ತಿಕಾಯದ
ಕಾಂತಿ ಕಜ್ಜಳ ಕಳೆದಿದೆ!
ಸತ್ಯಮತ್ತಮ ಹಿಂಸೆ ಮಂತ್ರಗ–
ಳುಲಿಯಲೈ ದಶದಿಶೆಯಲಿ!

ಸತ್ಪಥ ಧ್ರುವತಾರೆಯಾದ ಮ–
ಹಾತ್ಮ ತಣಿವನು ಕಾಣಲಿ!

('ಅಮೃತ ಬಿಂದು' ೪೨–೪೪) (ಬಿ.ಎಚ್.ಶ್ರೀ)

'ದುಃಖಾಷ್ಟಕ' ಹೀಗೆ ಹರಿಯಿತು. ಸಪ್ಪೆತನ ಮನವನ್ನಾವರಿಸಿತು. ನಿರಾಶೆಯ ನೀರವತೆ ಎಲ್ಲೆಲ್ಲೂ ತುಂಬಿದಂತೆನಿಸಿತು. ಭಾರತಕ್ಕೇ ಖಗ್ರಾಸ ಗ್ರಹಣ ಹಿಡಿದಂತಾಯ್ತು. ಯಾವುದಾದರೂ ಒಂದು ಅಪಾಯವು ನಡೆದು ಹೋದ ಮೇಲೆ ನಾವು ಅದರ ನಿವಾರಣೆಯ ಪೂರ್ವಸಿದ್ಧತೆಯನ್ನು ಶಕ್ತಿ ಮೀರಿ ಮಾಡಿದ್ದೆವೋ ಇಲ್ಲವೋ ಎಂಬ ಸಂದೇಹವು ಎಷ್ಟೋ ಸಲ ನಮಗುಂಟಾಗುತ್ತದೆ. ಆಗ ನಾವು ಮಾಡಬಹುದಾಗಿದ್ದು ಅಜಾಗ್ರತೆಯಿಂದ ಮಾಡದೆ ಉಳಿದ ಅಂಶಗಳಿದ್ದವೆಂದು ಗೊತ್ತಾದರೆ, ಉಂಟಾದ ದುರಂತದ ದುಃಖವು ಅನೇಕ ಪಟ್ಟು ಹೆಚ್ಚಾಗುತ್ತದೆ. ಹಾಗಲ್ಲದೆ ಮಾಡಲು ಸಾಧ್ಯವಿದ್ದುದೆಲ್ಲವನ್ನೂ ನಾವು ಮಾಡಿಯೇ ಇದ್ದೇವು ಎನಿಸಿದರೆ, ಆದಷ್ಟೇ ದುಃಖವಲ್ಲದೆ ಹೆಚ್ಚಾಗುವುದಿಲ್ಲ. ವ್ಯಕ್ತಿಗೆ ನಷ್ಟ ಸಂಭವಿಸಿದರೆ ಅದು ಒಬ್ಬನ ಕ್ಲೇಶಕ್ಕೆ ಕಾರಣವಾದೀತು. ಇಡಿ ದೇಶಕ್ಕೂ ಹಾನಿಯೊದಗಿದರೆ, ಅದೆಂಥ ಕರುಣಸಾಗರ ತರಂಗಗಳನ್ನು ಎಬ್ಬಿಸುವುದಿಲ್ಲ! ಗಾಂಧಿಯವರ ದಿವಂಗತಿ ಅಂಥ ಒಂದು ರಾಷ್ಟ್ರೀಯ ನಷ್ಟ. ಈ ಸಾಲನ್ನು ಬರೆಯುತ್ತಿರುವಾಗಲೇ ಅವರ ಜೊತೆಗೆ ಕೆಲಸಮಾಡಿದ ಮೌಲಾನಾ ಅಬುಲ್ ಕಲಾಂ ಅಜಾದರ ಸ್ವರ್ಗವಾಸದ ಸುದ್ದಿ ಈ ಲೇಖಕನ ಕಿವಿಗೆ ಮುಟ್ಟಿತು. ಸ್ವಾತಂತ್ರ್ಯ ವೀರರ ಮರಣ ಒಂದಾದ ಮೇಲೊಂದರಂತೆ ಉಂಟಾಗುತ್ತಿದೆ. ಇಂಥ ಶೋಕದ ಅವಧಿಯಲ್ಲಿ ನಾವು ಅವರ ಆತ್ಮಕ್ಕೆ ಶಾಂತಿಯನ್ನು ಕೋರುವುದು ಅವರಿಟ್ಟು ಹೋದ ಉದಾತ್ತ ರಾಷ್ಟ್ರಾದರ್ಶಗಳನ್ನು ಶಕ್ತಿಮೀರಿ ಆಚರಣೆಗೆ ತರುವುದರಲ್ಲೇ ಇದೆ. ಶೋಕವು ವೀರಪ್ರತಿಜ್ಞೆಯ ರೂಪ ತಾಳಿದಾಗಲೇ ಸಾರ್ಥಕ. ಇಲ್ಲವಾದರೆ ಅದು ಆತ್ಮಗ್ಲಾನಿಕರವಾದ ಹಾಲಾಹಲ! ಅಂಥ ಹಾಲಾಹಲವನ್ನು ಕುಡಿದು ನರಕುರಿಗಳಾಗಿ ಅಧಃಪತನ ಹೊಂದುವುದು ಯಾರಿಗೆ ಬೇಕು? ಭಾರತೀಯನಾವನೂ ಅಂಥ ರಾಷ್ಟ್ರದಾಸ್ಯದ ದುಃಸ್ಥಿತಿಯನ್ನು ಬಯಸನು!

'Liberty is the eternal spirit of the chainless Mind-ಸ್ವಾತಂತ್ರ್ಯವೆಂಬುದು ಅನಿರ್ಬದ್ಧ (ಮನಸ್ಸಿನ) ಆತ್ಮದ ಅಮರ ಸತ್ವ' ಎಂದು ನಾವಿಂದು ತಿಳಿದಿದ್ದೇವೆ. ಮರಣಾನಂತರ ಮೋಕ್ಷವೆಷ್ಟು ಅಪೇಕ್ಷಣೀಯವೋ ಬದುಕಿರುವಾಗ ಸ್ವಾತಂತ್ರ್ಯವು ಅಷ್ಟೇ ಅಪೇಕ್ಷಣೀಯ. ಅಂಥ ಸರ್ವೋತ್ತಮ ಪದವನ್ನು ನಮಗೆ ಲಭ್ಯಗೊಳಿಸಿದ ಮಹಾತ್ಮ, ಸುಭಾಷಚಂದ್ರ, ಸರದಾರ, ಲೋಕಮಾನ್ಯ ಮುಂತಾದ ಮಹಾವೀರರ ಮರಣದಿಂದ ನಮಗಾದ ಹಾನಿ ಅವರ್ಣನೀಯ. ತ್ಯಾಗವು ಅತ್ಯಂತ ಹೆಚ್ಚು ಶುದ್ಧವೂ ದಿವ್ಯಪಾವಿತ್ರ್ಯ ಸಂಪನ್ನವೂ ಸಮರ್ಥವೂ ಆದ ಸುಗುಣ; ಮನುಷ್ಯನ ಆತ್ಮವನ್ನು ಪವಿತ್ರಗೊಳಿಸಿ, ಅದರ ಕಿರೀಟವಾಗಿ ಕೂತುಕೊಂಬ ಪ್ರಭಾವಲಯವದು. ಅಂಥ ತ್ಯಾಗವೀರರ ಮರಣಕ್ಕಿಂತ ಕರುಣಾಜನಕವಾದ ಪ್ರಸಂಗವಿನ್ನೊಂದಿರುವುದೇ ಈ ಸಂದರ್ಭಗಳಲ್ಲಿ–

ಆವ ಹಾಲಾಹಲವ ನೀಂಟಿದೆನೊ, ಅಲ್ಲದಡೆ
ದೇವ ನನ್ನೆದೆಯೊಳೀ ಪರಿಯ ದಳ್ಳುರಿಯೆ?
ಎದೆಯ ಕತ್ತಲ ಕಾಡೊಳುರಿಯುವೀ ಕಾಳ್ಗಿಚ್ಚು
ಬದುಕಿನಾನಂದಗಳ ಸುಡುತ ಬರುತಿಹುದು
ಬಗೆಬಾನ ಬೆಳ್ಳಿ ಮಬ್ಬಿನಲಿ ಮರೆಯಾಗಿಹುದು
ಬಿಗಿದು ಬೆಂಬಳಿಪುದಳಿಗೆಯ್ತಗಳ ನೆಳಲು!
ನೂರಾರು ಆಸೆಗಳನಾಹುತಿಯ ಕೊಂಡಗ್ನಿ
ನೂರಾರು ನಾಲಗೆಯನೆತ್ತಿ ಹೊತ್ತಿ,
ಪ್ರಳ ಯಜ್ಞೇಶ್ವರನ ಕೆಂಗಿಡಿಯ ಕೊನೆಮುಟ್ಟಿ
ತಳವರಿಸಿ ತಂಗಿತನ್ನೆದೆಯನೊತ್ತಿ!
ಬಲ್ದೆರೆಯ ಘೋರ್ಗರೆಯೋ? ಸಿಡಿಲ ಸಿಂಹಧ್ವನಿಯೊ?
ಕತ್ತಲೆಯ ಮೃತ್ಯು ಮೌನಚ್ಛಾಯೆಯೊ?
ನಡುಗುತಿದೆಯಂಗಾಂಗ, ಹೃದಯ ಹಮ್ಮೈಸುತಿದೆ,
ತಡೆವುದೆಂತೋ ಕಾಣೆನೀ ರೌದ್ರವ!

('ಚೆಂಗಲವೆ:; ಪುಟ ೨೦)

ಎಂಬಂತಹ 'ನಿರಾಶೆ'ಗೆ ನಮ್ಮೆದೆ ನೆಲೆವೀಡಾಗದೆ ಉಳಿದಿತ್ತೇ? ಅವನ್ನು ನೆನೆದರೇ ಎದೆ ಝಲ್ಲೆನ್ನುತ್ತದೆ! ಅಂಥ ಅವಘಡಗಳು ಕಾಲಕೋಪಗಳೇ ಸರಿ! ಅವುಗಳ ಹೃದಯ ವಿದ್ರಾವಕತೆಗೆ ಅಳತೆಯಿದೆಯೇ! ಕಾಶಿಯ ಹಿಂದು ವಿಶ್ವವಿದ್ಯಾನಿಲಯವನ್ನು ಕಟ್ಟಿದ ದಿವಂಗತ ಮದನಮೋಹನ ಮಾಳವೀಯರು ಒಬ್ಬ ಭಾರತಪುತ್ರರತ್ನರೇ. ಅವರು ಕೈಲಾಸವಾಸಿಗಳಾದಾಗ ಶ್ರೀ ವೈ. ಎಸ್. ಲೂಯಿಸ್ ಹೀಗೆ ಅತ್ತರು:

ತಿಂಗಳಾರರ ಕಾಲ ಸಂಜೆ ತಾರೆಯದಾಗಿ
ಉಳಿದಾರು ತಿಂಗಳಲಿ ರವಿಯು ಮೂಡುವ ಮುನ್ನ'
ಆಕಾಶದಂಚಿನಲಿ ಹಿರಿದೀಪದೊಲು ತನ್ನ
ಕಾಂತಿಯಂ ಪಸರಿಸುವ ನಕ್ಷತ್ರದಂತಾಗಿ
ಜೀವನದ ಪೂರ್ವೋತ್ತರಂಗಳಲಿ ಕಂಗೊಳಿಸಿ,
ಆರ್ಯಧರ್ಮಕ್ಕೆ ಆಚಾರ್ಯನೋ ಎಂಬಂತೆ
ವಿಶ್ವವಿದ್ಯಾಲಯದ ಕುಲಪತಿಯು ತಾನಂತೆ
ಭಾರತದ ಇತಿಹಾಸದಲ್ಲೆ ಸ್ಥಾನವ ಗಳಿಸಿ
ತೆರಳಿದಿರಿ ನೀವಿಂದು ತುಂಬು ಜೀವನ ಕಳೆದು
ಕಾಳೆಗದ ರಂಗದೀ ಭಾರತವ ಹಿಂದುಳಿದು!

ಇಗೊ ನೀವೆ ಸ್ಥಾಪಿಸಿದ ಆಲಯದ ಬಾಲಕರು
ನಿಮ್ಮೊಡನೆ ತಾಯ ಸೇವೆಯ ಗೈದ ನಾಯಕರು
ಮೊಗಬಾಡಿ ಬಾಷ್ಪದಂಜಲಿವಿಡಿದು ನಿಂದಿಹರು;
ನಿಮ್ಮಾತ್ಮಶಾಂತಿಗಿದೊ ಪ್ರಾರ್ಥನೆಯ ಸಲಿಸಿಹರು

('ಗಾನಲಹರಿ'+ ಪುಟ ೩೮)

ಇಲ್ಲಿ ಶೋಕೋದ್ರೇಕದ ಉತ್ತರ ಕಾಲದಲ್ಲಿ ವಿವೇಚನಾ ಶಕ್ತಿ ಜಾಗ್ರತವಾಗಿದ್ದಾಗಿನ ಮನಃಸ್ಥಿತಿ ಸ್ಫುಟವಾಗಿದೆ; ಕೃತಜ್ಞತಾ ಸಮರ್ಪಣೆಯ ಭಾವವಿದೆ. ಕೃತಜ್ಞತೆಯು ಪ್ರಾಣಿ ಮಾತ್ರಕ್ಕೆ ಸಹಜ. ಕೃತಘ್ನತೆಯು ಪರಮನೀಚತನ; ಸಾಮಾಜಿಕನ ಅತ್ಯಧಮತನದ ಕುರುಹು. ನಾಡಿನ ಬಗ್ಗೆ ಕೃತಜ್ಞತೆ ಯಾರಲ್ಲಿ ಸದಾ ಜಾಗ್ರತವಾಗಿರುವುದೋ ಅವರೇ ನಿಜವಾದ ದೇಶಭಕ್ತರು. ಅವರು ಎಂದೂ ಅಪ್ರಾಮಾಣಿಕರಾಗಲಾರರು. ಸಾರ್ವಜನಿಕ ಹಿತಚಿಂತನವನ್ನೆಂದೂ ಮರೆಯಲಾರರು. ರಾಷ್ಟ್ರಹಿತ–ಸಹಜೀವಿಹಿತಗಳಿಗಾಗಿಯೇ ಅವರ ಜೀವನ ಮೀಸಲು. ಅಂಥವರನ್ನೇ ನಾವು ಹುತಾತ್ಮರೆನ್ನುತ್ತೇವೆ. ಹಿಂದೆ ಅಂಥ ದೇಶಪ್ರೇಮಿಗಳು ಅವತಾರ ಪುರುಷರೆನಿಸಿದರು. ಕೃಷ್ಣಾಷ್ಟಮಿ, ಶಿವರಾತ್ರಿಗಳು ಅಂಥವರ ಹಬ್ಬಗಳು. ಇಂದಿನ ಗಾಂಧಿಜಯಂತಿ, ಲೋಕಮಾನ್ಯರ ಪುಣ್ಯತಿಥಿಗಳಾದರೂ ಅದೇ ವರ್ಗಕ್ಕೆ ಸೇರಿದಂಥವು. 'ಸ್ಮೃತಿಭ್ರಂಶಾತ್ ಬುದ್ಧಿನಾಶಃ' ಎಂಬ ಗೀತಾಸೂಕ್ತಿಯಂತೆ ಮಹಾವೀರರ ಚರಿತವನ್ನು ಸ್ಮರಿಸದೇ ಜನರಲ್ಲಿ ವೀರವುಳಿದೀತೇ? ಸೆಗಣಿಯೊಳಗಣ ಹುಳುವಿಗೆ ಸೆಗಣಿ ವಾಸನೆ ಬರುವುದಿಲ್ಲವಂತೆ; ಮೆಣಸಿನ ಕಾಯೊಳಗಿನ ಹುಳುವಿಗೆ ಮೆಣಸಿನ ಕಾಯಿ ಖಾರವಾಗುವುದಿಲ್ಲವಂತೆ. ಇಂಥ ವಿಷಕ್ರಿಮಿ ನ್ಯಾಯದಿಂದ ದಾಸ್ಯದಲ್ಲಿ ಕೊಳೆಯುತ್ತಿದ್ದ ಭಾರತೀಯರಲ್ಲಿ ಮೇಲೆ ಹೇಳಿದಂಥ ಮಹಾನಾಯಕರು ಎಂಥ ವಿವೇಕವನ್ನು ಎಚ್ಚರಿಸಿದರೆಂದರೆ:

ಸುಡು ಈ ಗಾಳಿವೇಗವನ್ನು, ಭೋಗವನ್ನು ಚೆಲುವನ್ನು!
ಪಯಣವಿಲ್ಲದೆ ನರನು ಬಾಳಿದರೆ ತಪ್ಪೇನಿತ್ತು?
ನಿರ್ಮಿಸಿಹನೀಗ ನರಕವನ್ನು ನರಪ್ರಾಣಿಗಳಿಗೆ,
ಒಬ್ಬನ ಸುಖಕ್ಕಾಗಿ ಇನ್ನೊಬ್ಬನಿಗೆ ದುಃಖ
ಓರ್ವನ ಸ್ವರ್ಗಕ್ಕಾಗಿ ಇನ್ನೋರ್ವನಿಗೆ ರೌರವ ನರಕ!
ಇಂತಿದೆ ಇಲ್ಲಿಯ ನ್ಯಾಯ! ಇಂತಿದೆ ಇಲ್ಲಿಯ ಜೀವನ!
ಅನ್ಯಾಯವೆಂದು ಮುಗಿಯುವುದು?
ವಿವೇಕವೆಂದು ಚಿಗಿಯುವುದು?
ಬಿಳಿಯನಿಗಿದೆ ಮಂಜುಗಡ್ಡೆಯ ತಿನುವಾಸೆ
ಅದಕೆ ನಂಜಿನಂಥ ಶೆಡ್ಡಿನಲ್ಲಿ ನಿಲ್ಲುವನು ಕರಿಯ
ಬಿಳಿಯನಿಗೆ ಬೇಕು ಕೈಜೋಡಿಸಿದ ಸೇವೆ–

ಅದಕೆ ಕರಿಯನಾದ ನಿತ್ಯಸೇವಕ!
ಇವ ಬಿಳಿಯ ಅವ ಕರಿಯ
ಇವ ಹಾರುವ ಅವಹೊಲೆಯ,
ಇವ ಸೇವ್ಯ ಅವ ಸೇವಕ. ಇವ ಗಾಣಿಗ ಅವಗಾಣ
ಇವ ತ್ರಾಣ–ಅವ ನಿತ್ರಾಣ!
ಇಂತಿದೆ ಇಲ್ಲಿಯ ನ್ಯಾಯ! ಇಂತಿದೆ ಇಲ್ಲಿಯ ಜೀವನ!
ಅನ್ಯಾಯವೆಂದು ಮುಗಿಯುವುದು?
ವಿವೇಕವೆಂದು ಚಿಗಿಯುವುದು?

('ಸಮುದ್ರ ಗೀತಗಳು' ಪುಟ ೫೬) (ಗೋಕಾಕ)

ಇಂಥ ಇಲ್ಲಿಯ ನ್ಯಾಯದ ಅರಿವಾಗುವಂತೆ ನಮ್ಮ ಕಣ್ಣು ತೆರೆಯಿಸುವ ಪುಣ್ಯಕಾರ್ಯವನ್ನು ಜನನಾಯಕರು ಮಾಡಿದರು. ಅವರ ಸ್ಮೃತಿಯೇ ನಮಗಿಂದು ರಾಷ್ಟ್ರಾತ್ಮದ ಜ್ಞಾನವನ್ನು ಮಾಡಿಕೊಡಬಲ್ಲುದಾಗಿದೆ. ಅವರ ಸಾಸದ ಕಾರ್ಯಗಳು ಅದ್ಭುತ ರಮ್ಯ.



# ೯

# ಅದ್ಭುತ ಸಂದೇಶ

ವಿಸ್ಮಯವು ಅದ್ಭುತದ ಸ್ಥಾಯಿ. ಅಜ್ಞಾನವೇ ಆಶ್ಚರ್ಯದ ಕಾರಣ. ಕಾರಣ ತಿಳಿಯದಿರುವಾಗ ಕಂಡ ಮಹಾಕಾರ್ಯವೊಂದು ನಮಗೆ ಯಾವಾಗಲೂ ಅಚ್ಚರಿಯನ್ನುಂಟು ಮಾಡುತ್ತದೆ. Mystery is only a romantic name for ignorance- ಅಜ್ಞಾನದ ರಂಜಕ ನಾಮವೇ ಅದ್ಭುತ. ಸಾಮಾನ್ಯರಾದ ನಮಗೆ ಮಾನ್ಯರ ಮಹಾಕಾಯಕ ಅದ್ಭುತವೆನಿಸುವುದರಲ್ಲಿ ಆಶ್ಚರ್ಯವಿಲ್ಲ! ಪರಮಾತ್ಮನಷ್ಟು ಅದ್ಭುತವಸ್ತು ಮತ್ತಾವುದಾದರೂ ಇದೆಯೇ ನೋಡೋಣ:

ಮೌನಾ, ಮೌನಾ, ಮೌನಾ–ಮೌನಾವಿಮಾನಾರೂಢಾ
ಅಮೃತಾತ್ಮಾ, ತರ! ಉತ್ತರ! ಬೋ ಉರ್ಧ್ವೋರ್ಧ್ವೋ, ಭೋ
ಈ ಮಾಯಾಮಂಡಲ ಮುರಿಯೋ. ದಾಟೈ ಆ ತಿರ್‍ರನ ಚಕ್ರ!
ಏರೈ, ಏಕಾ, ಏಕೈಕಾ ಮರಣೋತ್ತೀರ್ಣಾ
ಘೂಃ! ಪಿಸು ಪಿಸು ಮಾತೋ ಮಾತು
ಇರುಳಿರುಳಿನ ಭುಂಭೋದ್ಸಾರಾ
ಕರೆ, ಕರೆನರೆ ಕಿರಿ ಕಿರಿ ಲೋಕಾ
ಬಿಡುಶೋಕಾ, ಉಳಿದೊದ್ದಾಟಾ
ಚಿರಮೌನದಿ ಹೊಗು ಹೊಗು ಏಗೂ ಮೇಗೂ
ವಿಶಾಲಾ, ಅಚಲಾ, ಅಕ್ಷರಾ, ಅರೂಪಾ, ಅದ್ಭುತ ಭೂತಾ
ಸ್ವರ್ಗೋಪರಿ ಸ್ವರ್ಗಾ, ಅಗಲಾ ಬ್ರಹ್ಮಾಂಡಕು ಮಿಗಿಲಾ
ಶುದ್ಧಾ, ವಿಶುದ್ಧಾ ಸತ್ವಾ ಮಹಿಮಾ ಮಗ್ನಾ
ಸ್ವಾನ್ವೀಕ್ಷಕ ಸೋಜ್ವಲ ಸ್ತಿಮಿತಾ
ಅಸೀಮಾ, ನಿರೋದ್ಗಾರಾ, ಸಾಕ್ಷಾತ್ ಸಂವಾದನ ಶೀಲಾ
ಮಾಡೈ ವಿಚಾರಾತೀತ ಜ್ಞಾನಾ, ಪಡೆ ಅಕ್ಷೋಭ್ಯಗಭೀರಾಮೋದಾ
ಅವಿಕಾರಿತ ಜ್ಯೋತಿಯೊಳಿರು ವಿಶ್ರಾಂತಾ ಮೂಕಾ,
ನಿಶ್ಯಬ್ದಿತ ಸಾಕ್ಷಾತ್ಕಾರಾ

ನಿನ್ನನ್ನೇ ಮೀರ್ರೈ ಆತ್ಮಾ, ಪ್ರಕೃತ್ಯೋತ್ತರ ಪುರುಷಾ
ಓ ಸಾಕ್ಷೀ, ಕಳೆದುಳಿ ಉಳಿ ಕಂಡದ್ದೆಲ್ಲಾ
ಕಾಣ್ಯೆ, ಕೇವಲಾ, ಬ್ರಹ್ಮಾ, ಶಾಶ್ವತಾ
ಸನಾತನ ಮಾತ್ರಾ, ಶಾಂತಾ, ಮೌನೋನ್ಮೌನಾ
ಓ ಲೋಕೋತ್ತಮ ನಾಮೋತೀತಾ, ಏಕಾ
ಭೌಮಾಮೃತ ಆತ್ಮಾ!
ಎಂಬ ಈ 'ಮೌನ' ವನ್ನೂ
ಇದು ಯಾವುದೊ ಬ್ರಹ್ಮಾತೀತಾ, ಬ್ರಹ್ಮಾಂತರ್ಜಾತಾ, ತ್ರಾತಾ
ಸ್ವರೂಪ, ರೂಪಾರೂಪಾರೂಪಾ, ಬಹುರೂಪಾ, ಭೂಪಾ, ಜೇತಾ
ಲೀಲಾ ವಿಗ್ರಹಾ, ಆಹಾ ಚಿರಸಂತತಿ ಸಂತತಜನಿತಾ
ಪ್ರಕೃತಾ ವಿಕೃತಾ ಕೃತಕಾ ಕೃತಕೃತ್ಯಾ ಧನ್ಯಾಮೂರ್ತಾ
ಸುಂದರಾ, ಸುಬಂಧಾ, ಸುಗಮಾ, ನಿಗಮಾತೀತಾ
ಹೃದಯೇ ಹೃದಯಾಂತರ್ಹೃದಯೇ ಲಗ್ನ: ಪರಮಾತ್ಮೇ ಮಗ್ನ:
ಸಾಕ್ಷಿನ್, ದೃಷ್ಟಂ ತ್ಯಜ, ದೃಷ್ಟಂ ತ್ಯಜ
ಭಜ ಸ್ವಾಂತಂ ಏಕಾಂತಂ ಏಕಂ ಬ್ರಹ್ಮಚಿರಂತನಂ
ಆಃ ಲೋಕಾತೀತಾ, ಅನಾಮಾ ಏಕೈಕಾ
ಓ ಮಹದ್ಭೂತಾ, ಅಮೃತಾ!
ಭವ ಮೌನೀ, ಶಾಂತೋಽ ನಂತೋಽ ನಂತಃ

('ಚೈತ್ಯಾಲಯ' ಪುಟ ೪೯–೫೦) (ಬೇಂದ್ರೆ)

ಎಂಬ ಈ 'ಮೌನಾತೀತ'ವನ್ನ ಓದಿದರೆ ನನಗಾದಷ್ಟು ಆಶ್ಚರ್ಯ ಇನ್ನಾವ ಕಲ್ಪನೆಯಿಂದಲೂ ಆಗಿಲ್ಲ. ಮೊದಲನೆಯದು ಅದ್ಭುತ ಭೂತದ ವರ್ಣನೆ. ಎರಡನೆಯದು ಮಹದ್ಭೂತದ ವರ್ಣನೆ. ಭೂತವಸ್ತುವೆಂದು ವೇದಾಂತಶಾಸ್ತ್ರವು ಬ್ರಹ್ಮನನ್ನು, ಪರಮಾತ್ಮನನ್ನು, ವಿಶ್ವಾಧಾರ ಶಕ್ತಿಯನ್ನು, ದೇವರನ್ನು ಕರೆಯುತ್ತದೆ. ವಿಚಾರಾತೀತ ಜ್ಞಾನಕ್ಕೆ ಕಾರಣವಾದ ಪದಾರ್ಥದ ವಿಚಾರ, ಕಲ್ಪನೆ, ಸೂಚನೆ ಎಂಬುದಕ್ಕೆ ವಿಚಾರವು ಸೋಲಬೇಕಲ್ಲವೇ? ದಂಗು ಬಡಿದು ಹೋಗುವುದು ಸಹಜವಲ್ಲವೇ? ಹೆಸರಿಲ್ಲದ್ದೆಂದು ಹೆಸರಿಸಲ್ಪಡುವ ಅನಂತದ ಕಲ್ಪನೆಯೇ ಅನಂತವಾದ ಅದ್ಭುತವಲ್ಲವೇ? ಆದರೆ ಇಂಥ ಅದ್ಭುತದ ಬಗ್ಗೆ ಲಕ್ಷ್ಯ ಹೋಗುವುದು ಹೆಚ್ಚಾಗಿ ಚಿಂತಕರಿಗೆ, ವಿಚಾರದ ಅಭಿರುಚಿ ವಿಶೇಷವಾಗಿ ಬೆಳೆದವರಿಗೆ. ಆದರೆ ನಮ್ಮ ಸಾಮಾಜಿಕ ವಿಷಯಗಳ ಚಿಂತನದಲ್ಲಿರುವವರಿಗೆ ತಮ್ಮ ಸುತ್ತಮುತ್ತಲಿನ ಚರಾಚರಗಳಲ್ಲೇ ವಿಚಿತ್ರಾಂಶಗಳು ಕಂಡು ಬಂದು, ಅವುಗಳಿಂದ ಆಶ್ಚರ್ಯಚಕಿತರಾಗುವುದುಂಟು. ಮನಃಶಾಸ್ತ್ರಕಾರರ ಪ್ರಕಾರ ಜಗತ್ತಿನಲ್ಲಿ ಅರ್ಧದಷ್ಟು ಜನರು ನರನಿಷ್ಠ ಮನೋರೋಗವುಳ್ಳವರು. ಅವರಲ್ಲಿ ಪ್ರಕೃತಿಯ ಸಮತೋಲವಿಲ್ಲದಿರುವ

ಮೂಲಕ ಒಂದಲ್ಲ ಒಂದು ಕಡೆಯಲ್ಲಿ ಅವರು ಅವ್ಯವಸ್ಥಿತ ವರ್ತನೆಯನ್ನು ತೋರ್ಪಡಿಸದಿರರು. ಅವರ ಮನೋವಾಕ್ಕಾಯಕರ್ಮಗಳ ನಡತೆಯಲ್ಲಿ ವಿಸಂಗತಿ, ವಿಲಕ್ಷಣತೆ, ವಿಚಿತ್ರತೆ, ವಿಪರೀತತೆಗಳು ಅಕಸ್ಮಾತ್ತಾಗಿ ಕಂಡು ಬಂದಾಗ ಅವರ ಸಹಜೀವಿಗಳಿಗೆ ಅಂಥ ಅನಿರೀಕ್ಷಿತ ಘಟನೆಗಳು ಅಚ್ಚರಿಯನ್ನುಂಟುಮಾಡುತ್ತವೆ. ಆ ತೆರನಾದ ಚಮತ್ಕಾರಗಳು ಅತಿ ಕ್ಷುದ್ರವೂ ಕ್ಷಣಿಕವೂ ಅಪೂರ್ವವೂ ಆದಾಗ ಅವನ್ನು ನಾವು ಸುಲಭವಾಗಿ ಮರೆತು ಬಿಡುತ್ತೇವೆ. ಆದರೆ ಗಂಭೀರ ಪರಿಣಾಮವನ್ನು ನಮ್ಮ ಮನಸ್ಸಿನ ಮೇಲೆ ಮಾಡುವಂತಾದಾಗ ನಾವೆಂದೂ ಅವನ್ನು ಮರೆಯೆವು. ನಾಗರಿಕತೆಯ ಇತಿಹಾಸದ ಜ್ಞಾನವು ಜಾಗೃತವಾಗಿರುವವನ ಮಾನಸದರ್ಪಣದಲ್ಲಿ ಅಂಥ ವೈಪರೀತ್ಯಗಳು ಬಹುಬೇಗ ಹೊಳೆಯುತ್ತವೆ. ೧೯೪೨ನೇಯ ಇಸವಿಯ ಹಿಂದಿದ್ದವರಿಗೆ ಈಗ ಅಂದಿನ ಹಾಗೂ ಇಂದಿನ ಜೀವನ ಪರಿಸ್ಥಿತಿಗಳಲ್ಲಿಯ ಅಂತರವು ಅಚ್ಚರಿಗೊಳಿಸುವುದಿಲ್ಲವೇ? ಒಂದು ಆಶ್ಚರ್ಯವು ಖೇದಕರವೂ ಆಗಬಹುದು ಸಂತೋಷಕರವೂ ಆಗಿ ಪರಿಣಮಿಸಬಹುದು. ಇಂದು ಬದುಕುತ್ತಿರುವ ಮಧ್ಯಮ ವರ್ಗೀಯ ಮೇಧಾವಿಗೆ ಹರ್ಷದ ಶತಮಾಂಶಗಳಿಗಿಂತ ವಿಷಾದದ ಶತಮಾಂಶಗಳೇ ಎದ್ದು ಕಾಣುತ್ತವೆಯಲ್ಲವೇ? ಇದಕ್ಕೆ ಕಾರಣವಾದ ಆಶ್ಚರ್ಯ ಇಂತಿದೆ:

ಪ್ರಕೃತಿ ಭೂಖಂಡದಲಿ ಸಂಸ್ಕೃತಿಯ ಕೊಡೆ ಹಿಡಿದು
ತಿರುಗುತ್ತಲಿದ್ದ ಗುಂಪೊಂದ ನೋಡಿದ. ನೋಡ–
ಲೆದೆಯೊಂದನುಳಿದೆಲ್ಲ ಅವಯುವಗಳೊಟ್ಟಿತ್ತು
ಒಂದೊಂದು ನರಯಂತ್ರದಲ್ಲಿಯೂ! ಮತ್ತಿನೆಡೆ
ಸಾಗಿತ್ತು ಕಡಲಲೆಯ ಮಾಲೆಯಂತೆ ಕಬಂಧ–
ಸೇನೆ–ಎದೆಯಲ್ಲಿತ್ತು, ಕರುಳಿತ್ತು, ಕೈಯಿತ್ತು;
ಆದರಿಲ್ಲವೆ ಇಲ್ಲ ಮಂಡೆಯೆಂಬ ಪದಾರ್ಥ!
ಎಲ್ಲ ಲೇಡೀಸಿನಂಬಿರ್ಲ! ಎಂತಿವು ನನ್ನ
ಮಕ್ಕಳಾದಾವು? ಏನಿದು! ಎಂದ ಮನುರಾಯ
ಮಂಡೆಯನು ಹಿಡಿದೆರಡು ಕೈಯಿಂದ ತುರಿಸುತ್ತ;
ಕಂಡರೂ ಮತ್ತೆ ಕಣ್ಣರಳಿಸಿದ ಕಾಣಲೆಂ
ದಂಡಲೆದು ಮಾನವ್ಯ ಮಂಡೆಗಳನುಹು–ಇಲ್ಲ!
ಎಡಕೆ ತಿರುಗಲು ಮಂಡೆಯೆದೆಗಳೆರಡೂ ಇರದ
ನಾಗರಿಕತೆಯ ವಸ್ತ್ರಭೂಷಣಗಳನು ಹೊದ್ದ
ನರಕಬಂಧಗಳನ್ನು ಕಂಡ! ('ಮಂಜುಗೀತ' : ಪುಟ ೬೬)

ಯಾವುದೋ ಒಂದುಲೋಕ. ಅಲ್ಲಿ ಒಂದೆಡೆ ಹೃದಯಹೀನರ ತಂಡ, ಇನ್ನೊಂದೆಡೆ ಬುದ್ಧಿಹೀನರ ತಂಡ, ಮತ್ತೊಂದೆಡೆ ಹೃದಯ–ಬುದ್ಧಿಗಳೆರಡೂ ಇಲ್ಲದವರ ತಂಡ! ಆಶ್ಚರ್ಯದ ಮೇಲೆ ಆಶ್ಚರ್ಯವಾಯಿತು ಗಲಿವರನಂತೆ ತಿರುಗಾಡ ಹೊರಟ

ಮನುಮಹಾರಾಯನಿಗೆ. ಈ 'ಮಲನಾಡಿ'ನಲ್ಲಿ ಮುಂದೆ ಸಾಗಿದಾಗ ಹೃದಯ ಬುದ್ಧಿಗಳೆರಡೂ ಇದ್ದರೂ ಕೆಲ ನರರಂತೆ ತೋರುವ ಪೂರ್ಣಕಾಯದ ಜೀವಿಗಳ ದೇಹದಲ್ಲಿ ಒಂದಕ್ಕಿಂತ ಹೆಚ್ಚು ಮಲಕೋಶಗಳು ಕಾಣಿಸಿದವಂತೆ! ಇದೆಂತಹ ನಾಡು? ವಿದ್ಯಾಧರರದೇ, ಅಪ್ಸರೆಯರದೇ. ಯಕ್ಷರದೆ, ರಾಕ್ಷಸರದೇ, ಗಂಧರ್ವರದೇ, ಕಿನ್ನರರದೇ? ಈ ಯಾವ ಲೋಕಗಳಲ್ಲಿಯೂ ಇಂಥ ಸೃಷ್ಟಿಗಳಿರುವುದನ್ನು ಪುರಾಣಗಳು ಹೇಳಿಲ್ಲ. ಹದಿನೆಂಟಲ್ಲ ನೂರೆಂಟು ಪುರಾಣಗಳನ್ನು ಹುಡುಕಿದರೂ ಇಂಥ ವಿಚಿತ್ರ ಮಾದರಿಯ ಶರೀರಗಳು ದೊರಕಲಾರವು. ಒಂದು ತರದ ಜೀವಾತ್ಮಗಳು ಹೃದಯ ಮಾರ್ದವವಿಲ್ಲದ ಕಲ್ಲುಗಳು, ಇನ್ನೊಂದು ತರದವು ಕೇವಲ ಭಾವನಾಮಯವಾದ ಕುರಿಗಳು, ಮತ್ತೊಂದು ತರದವು ಭಾವನೆ ಬುದ್ಧಿಗಳೆರಡೂ ಇಲ್ಲದ ಸ್ಮಶಾನ ಶಾಂತಿಯ ನಿರ್ವರ್ಣ–ನೀರುಚಿ–ನಿರ್ಗಂಧ ರೂಪಗಳು! ಕೊನೆಗೆ, ಈ ಅಂಗಗಳಿದ್ದಂತೆ ತೋರಿದರೂ ಇವುಗಳ ಯುಕ್ತ ಕಾರ್ಯಗಳು ಕೆಟ್ಟು ಹೋಗುವಂತೆ ಜೊತೆಗೆ ಜೋಡಿಸಲ್ಪಟ್ಟ ಮಲಕೋಶಗಳುಳ್ಳ ಜೀವರತ್ನಗಳು! ಇದಾವುದೋ ಒಂದು ಅಟ್ಟಂಬಟ್ಟಾರಣ್ಯದ ಆಚೆಯ ದ್ವೀಪದ ರಾಜ್ಯವಾಗಿರಬಹುದೇ? ಎಂದೆನಿಸುತ್ತದೆ. ವಿಚಾರ ಮಾಡಿದರೆ ಈ ಪ್ರತಿಮಾರಾಜ್ಯದ ಅಪ್ರತಿಮ ಉದಾಹರಣೆಗಳಿರುವುದು ಭಾರತದಲ್ಲೆ ಎಂಬುದು ಗೊತ್ತಾಗುತ್ತದೆ. ಆದರೆ ಹಿರಿಯರೀಭೂಮಿಯನ್ನು "ಪುಣ್ಯಭೂಮಿ" ಎಂದು ಹೆಮ್ಮೆಯಿಂದ ಹೇಳಿರುವಾಗ, ಇಲ್ಲಿ ಇಂಥ ವಿಕಟಪ್ರತಾಪದ ಉಪನಿವೇಶಗಳಿರಲು ಸಾಧ್ಯವೇ? ಎಂದು ಮತ್ತೂ ಆಶ್ಚರ್ಯವು ಮುಂದುವರಿಯುತ್ತದೆ. ಹೌದು–ಕಣ್ಣಾರೆ ಕಂಡರೂ ನಂಬಿಗೆಯಾಗುವುದಿಲ್ಲ. ಇಂಥ ಮಾದರಿಯ ದ್ವಿಪಾದಜಂತುಗಳಿರುವ ಅಂಶ. ಮುಂಧ್ರಾರವರ ಪ್ರಕರಣದ ವಿಚಾರಣೆ ಮೊನ್ನೆ ಮೊನ್ನೆ ನಡೆದದ್ದನ್ನು ನೆನೆದು ಕೊಂಡರೆ ಆಶ್ಚರ್ಯವು ವಾಸ್ತವ ಸ್ವರೂಪಕ್ಕೆ ತಿರುಗದಿರದು. ಸುಶಿಕ್ಷಿತವರ್ಗದಲ್ಲೇ ಮೇಲೆ ಹೇಳಿದಂಥ ವೈವಿಧ್ಯಗಳು ಸಿಗುವುದು ಹೆಚ್ಚು. ಅವರ್ಣನೀಯ ಪ್ರಮಾಣದಲ್ಲಿ ರಾಷ್ಟ್ರವಂಚನೆ, ಜನವಂಚನೆಗಳನ್ನು ಮಾಡಲು ಉಕ್ತ ಚತುರ್ವಿಧ ಮನೋಧರ್ಮಗಳೇ ಕಾರಣ. ಅವುಗಳ ವಂಚನಾ ರೀತಿಗಳು ನಾಲ್ಕು ಬಗೆಯವು– ಒಂದೇ ಬಗೆಯವಲ್ಲ ಅಷ್ಟೆ. ಗಾಂಧಿಯವರ ನಾಡಿನಲ್ಲಿ, ಅರವಿಂದರ ಭೂಮಿಯಲ್ಲಿ ಹೀಗಾಗುವುದು ಅಸಂಭವವೆನಿಸುವುದಿಲ್ಲವೆ? Fact is some times stranger than fiction-ವಸ್ತು ಸ್ಥಿತಿಯು ಕೆಲವೊಮ್ಮೆ ಕಟ್ಟು ಕತೆಗಿಂತಲೂ ಆಶ್ಚರ್ಯಕರವೆನಿಸುತ್ತದೆ! ಭಾರತ ದೇಶ ಬಹಳ ವಿಶಾಲವಾದುದು. ಹಿಂದೆ ಹೇಳಿದಂತೆ ಇಲ್ಲಿ ಗೌರೀಶಂಕರವೂ ಇದೆ, ಶರಾವತಿಯ ಆಳವೂ ಇದೆ, ಅತ್ಯುಚ್ಚವೂ ಇದೆ, ಅತ್ಯಧಮವೂ ಇದೆ, ಆದುದರಿಂದ ಇದನ್ನೇ ಒಂದು ಚಿಕ್ಕ ಪ್ರಪಂಚವೆನ್ನಬಹುದು. ಇದರ ವೈವಿಧ್ಯಗಳು ಅನಂತ. ಹಿಮಾಲಯ ಶ್ರೇಣಿಗಳಲ್ಲಿ ಜಗತ್ತಿನ ಎಲ್ಲ ವಲಯಗಳ ಸಸ್ಯವರ್ಗಗಳೂ ಇವೆಯಂತೆ! ಇಲ್ಲಿ ದಿಲ್ಲಿಯ ನಾಗರಿಕತೆಯ ಜೊತೆಗೆ ಗುಡ್ಡಗಾಡಿನ ನಾಗರಿಕತೆಯೂ ಇದೆ. ಜಗತ್ತಿನ ರಾಷ್ಟ್ರಗಳಲ್ಲಿ ಇಂಥದಿನ್ನೊಂದಿಲ್ಲ ಎಂಬ ಅಂಶಕ್ಕೆ ಶ್ರೀ ವಿನೋಬಾರವರು ಇನ್ನೂ ಒಂದು ಸಾಕ್ಷಿಯನ್ನಿತ್ತರು: ಪ್ರಬುದ್ಧವಾದ ೧೪ ಭಾಷೆಗಳನ್ನಾಡುವ ಜನರು ಒಂದೇ ರಾಷ್ಟ್ರವಾಗಿರುವುದು ಜಗತ್ತಿನಲ್ಲಿ ಇನ್ನೆಲ್ಲೂ ಕಾಣಸಿಗದು! ನಮ್ಮ ಹಾಗೆ ಇರುವವರು ನಾವೇ ಅಲ್ಲವೇ?

'ಯಾರವ್ವಾ ಇವ ಚೆಲುವಾ
ತನ್ನಷ್ಟಕ್ಕ...
ತಾನ... ನೋಡಿ ನಲಿವಾ' ('ಗರಿ' ಪುಟ ೮೯)

ಎಂಬ ಎಳಹರೆಯದವನಂತೆ ಭಾರತಕ್ಕೇ ಭಾರತ ಅಪೂರ್ವ ಆಶ್ಚರ್ಯಕರವಾಗಿದೆ. ಈ ಆಶ್ಚರ್ಯವನ್ನು ಬಿಂಬಿಸುವ 'ಬಲಿ–ವಾಮನ'ವನ್ನು ನೋಡಿರಿ:

ವಾ– "ನೋಡು ನೋಡು ಆಕಾಶವು ತುಂಬಿತು
ಮೆಟ್ಟಿದ ಮೊದಲಡಿಗೆ!"
ಬ– "ನೀಡಿದೆ ಎರಡನೆ ಪಾದವನಿಡು, ದೊರೆ,
ಭೂಮಂಡಲದೆಡೆಗೆ"
ವಾ– "ಗಿರಿ ತೊರೆ ಸಕಲ ಸಮುದ್ರಾಂಚಿತ ಧರೆ
ಮುದ್ದಿಸಿತೀ ಪಾದ!"
ಬ– "ಮೂರನೇ ಅಡಿಗೆಡೆ ಇಲ್ಲವೆ? ಈ ಶಿರ ಧರಿಸಲಿ ಶ್ರೀಪಾದ!"
ಧರಿಸಲಿ ಶ್ರೀಪಾದ!"
ವಾ– "ಸಗುಣಾಕೃತಿ ಇದು ಅವ್ಯಕ್ತದ ದ್ಯುತಿ
ಇದೆ ಸತ್ಯದ ಶೋಧ!"
('ಬಲಿವಾಮನ' : ಪುಟ ೧೮)

ವಾಮನನು ತ್ರಿವಿಕ್ರಮನಾಗಿ ನಿಂತಂಥ ಕಥೆಯಾದರೂ ಬೇರೆಯ ದೇಶದ ಪುರಾಣಗಳಲ್ಲಿದೆಯೆ? ನಾನಂತೂ ಕೇಳಿಲ್ಲ! ಈ ಪೌರಾಣಿಕ ಕಲ್ಪಕತೆ ಅತ್ಯದ್ಭುತ. ಭಾರತೀಯರ ಕಲ್ಪನಾ ಶಕ್ತಿಗಿದು ಮಹೋದಾಹರಣೆ. ಅದಾದರೂ ಕುಶಾಲಿನ ಕತೆಯೇ? ಅದರಲ್ಲೆಂಥ ನೀತಿ, ಸತ್ಯ, ಅಡಗಿದೆ? ಭಾರತವೇ ಬಲಿ, ಭಾರತವೇ ವಾಮನ! ಇಲ್ಲಿ ಸೌಂದರ್ಯ, ಅಹಂಕಾರವನ್ನು ಬಹಿಷ್ಕರಿಸಿದ್ದರಿಂದಲೇ ಭಾರತವೆಂದೂ ಸಾಮ್ರಾಜ್ಯವಾದಿಯಾಗಲಿಲ್ಲ. ವಿದೇಶದವರನ್ನು ಶೋಷಿಸಹೊರಡಲಿಲ್ಲ. ಈಗಲೂ ಅದಕ್ಕೆ ಸಾಮ್ರಾಜ್ಯವಾದ ಸೇರದು.

ಮೇಲಿನ ಅಭಿಪ್ರಾಯಕ್ಕೆ ಮುಕುಟರೂಪವಾಗಿ ವಿನಾಯಕರ 'ವಿಚಿತ್ರ' ಎಂಬ ಕೃತಿ ಸಮನ್ವಿತವಾಗಿ ಹೀಗೆ ಹೊರಟಿದೆ:

ಇಲ್ಲಿ ಸಾಮ್ರಾಜ್ಯವಿತ್ತು, ಸಕಲ ಸಂಪತ್ತಿತ್ತು.
ಕುಬೇರನ ಖಜಾನೆಯಿತ್ತು!
ಇಂದಿಗೆ ಭಾರತೀಯರಿಗೆ ತಿನ್ನಲು ಕೂಳಿಲ್ಲ;
ಕುಡಿಯಲು ನೀರಿಲ್ಲ!
ಇದೊಂದು ಪರಮ ವಿಚಿತ್ರ!
ವಿಲಾಯತಿಯಲ್ಲಿ ಗಡ್ಡೆಗೆಣಸಿತ್ತು,

ಅರೆದು ತಿನ್ನಲು ಮೆಣಸಿರಲಿಲ್ಲ:
ಇಂದಿಗೆ ಸಕಲ ಸಂಪತ್ತು ಸುರಿದಿಹುದಲ್ಲಿ,
ಸೃಷ್ಟಿಯ ಕೊಳುವ ಕುಬೇರರಲ್ಲಿ!
ಇದೊಂದು ಪರಮ ವಿಚಿತ್ರ!
ತಾಯ್ನಾಡಿನಲ್ಲಿ ಕೋಟ್ಯನುಕೋಟಿ ಜನರು–
ಆದರೆ ದಾಸಾನುದಾಸರಿಹರು!
ಬ್ರಿಟಿನ್ನಿನಲಿ ಕೆಲವು ಲಕ್ಷ ಜನರು
ಆದರೆ ಸಮ್ರಾಟರಿಹರು!
ಇದೊಂದು ಪರಮ ವಿಚಿತ್ರ!
ಭಾರತದಲ್ಲಿಲ್ಲದ್ದು ವಿಶ್ವದಲ್ಲಿಯೇ ಇಲ್ಲ–
ಲಕ್ಷ್ಮೀ ಸರಸ್ವತಿಯರ ತವರ್ಮನೆಯಿದು!
ತಕ್ಕಡಿಯ ಹಿಡಿದು ತಲೆದೂಗುತ್ತ
ಬ್ರಿಟನ್ನರು ಬರುತ್ತಿದ್ದರಿಲ್ಲಿ
ಇಂದು ಬ್ರಿಟನ್ನಿಗೆ ನಡೆದಿಹರು ಜೊತೆಗಾರರು–
ಹಿಡಿ ಹೊನ್ನಾಸೆಗೆ
ನಡೆದಿಹೆನು ನಾನು–ವಿದ್ಯೆ ಪಡೆಯಲೆಂದು!
ಇದೊಂದು ಪರಮ ವಿಚಿತ್ರ!

ಈ ಅದ್ಭುತ ಸಂದೇಶ ಇಂದಿನ ಹೊಸಗನ್ನಡ ಪದ್ಯ ಪ್ರಪಂಚ ಕೊಟ್ಟದ್ದು. ನಮಗಿಂದು ರಾಜಕೀಯ ಸ್ವಾತಂತ್ರ್ಯವೇನೋ ದೊರಕಿದೆ. ಆದರೆ ಮೇಲೆ ಹೇಳಿದ ಇತರ ಸಂಗತಿಗಳಲ್ಲಿ ಬಹಳ ವ್ಯತ್ಯಾಸ ಉಂಟಾಗಿಲ್ಲ. ಹೃದಯದಾಸ್ಯ, ಬುದ್ಧಿ ದಾಸ್ಯಗಳಿನ್ನೂ ನಮ್ಮ ನಾಗರಿಕರ ಬೆನ್ನು ಹತ್ತಿದ ಬೇತಾಳಗಳಾಗಿ ಉಳಿದಿವೆ. ಭಾರತದ ಪ್ರಸಿದ್ಧ ಹೋಟೆಲು ಒಡೆಯರನ್ನು ಉದ್ದೇಶಿಸಿ ಒಮ್ಮೆ ನೆಹರುಗಳು ಅಪ್ಪಣೆ ಕೊಡಿಸಿದರು: ಭಾರತದ ವೈಶಿಷ್ಟ್ಯವನ್ನು ಉಳಿಸಿಕೊಳ್ಳಿರಿ; ವಿದೇಶಿಯ ವ್ಯವಸ್ಥೆಯನ್ನು ಅನುಕರಿಸಿದರೆ ನಿಮ್ಮಲ್ಲಿ ಉಳಿದುಕೊಳ್ಳಲು ಬಂದ ವಿದೇಶಿಯರು ಮೆಚ್ಚುವುದಿಲ್ಲ– ಎಂದು ಮುಂಬಯಿಯಲ್ಲೊಮ್ಮೆ ಸಿನೆಮಾ ಪರಿಷತ್ತಿನಲ್ಲಿ ವಿದೇಶಿಯರ ಅಭಿಪ್ರಾಯವನ್ನಾಧರಿಸಿ ಶ್ರೀ ರಂಗರಾವ್ ದಿವಾಕರರು ಉಪದೇಶಿಸಿದರು; ವಿದೇಶೀಯ ಆಹಾರ–ವ್ಯವಹಾರ ಹಾಗೂ ಸಾಮಾಜಿಕ ನಡೆ–ನುಡಿಗಳನ್ನು ಭಾರತದ ಸಿನೆಮಾಗಳು ಪ್ರದರ್ಶಿಸಿದರೆ ಅವರೆಂದೂ ಅವನ್ನು ನೋಡಿ ಆನಂದಿಸಲಾರರು–ಎಂದು 'ಅಂಧೇನೈವನೀಯಮಾನಾ ಯಥಾಂಧಾಃ' ಎಂದೋ ಹೇಳಿದರು ಹಿರಿಯರು. ಅವರನ್ನೇ ಅಂಧರಾಗಿ ಅನಂತರದವರು ಅನುಸರಿಸಿದರು. ಈಗ ದೇಶ–ಕಾಲ ಕಾರ್ಯಗಳನ್ನು ಗಮನಿಸಿದೇ 'ಸನಾತನಿ'ಗಳೆಂದು ಕರೆದುಕೊಂಬ ಒಂದು ವರ್ಗವು ಆ ಪ್ರಾಚೀನ ಪರಂಪರೆಯನ್ನು ಸದೋಷವಾಗಿ ಅನುಸರಿಸಿದರೆ, ಸುಶಿಕ್ಷಿತರೆಂದುಕೊಂಬ ಮತ್ತೊಂದು ವರ್ಗವು ವಿದೇಶದ ಜೀವನಕ್ರಮ ಹಾಗೂ ಸಾಹಿತ್ಯ ನೀತಿಗಳು ಸರ್ವಾಂಗ ಸಹಿತವಾಗಿ

ಅನುಕರಣೀಯ ಎಂದು ನಾನಾ ಮುಖದಲ್ಲಿ ದನಿಗೊಡುತ್ತಿದೆ. ಈ ಎರಡು ಬಗೆಯ ದುರ್ವಾದಿಗಳ ನಡುವೆ ಸಿಕ್ಕಿದ ಸಾಮಾನ್ಯರು ಕಲ್ಲಪ್ಪ–ಗುಂಡಪ್ಪಗಳ ಮಧ್ಯ ಸಿಕ್ಕಿದ ಮೆಣಸಪ್ಪಗಳಾಗಿದ್ದಾರೆ! ಅಥವಾ ಗಂಡ ಹೆಂಡಿರ ಜಗಳದಲ್ಲಿ ಬಡವಾಗುತ್ತಿರುವ ದೃಷ್ಟಿಯಿಂದ ನಮ್ಮ ನವನಾಗರಿಕತೆಯಿಂದು ರಚಿತವಾಗಬೇಕಾಗಿದೆ. ಕವಿಗಳಲ್ಲೂ ಅನೇಕ ಅಭಿಪ್ರಾಯಗಳುಳ್ಳವರಿರಬಹುದು. ಅವರು ನಿಬಂಧಗಳನ್ನು ಬರೆದರೆ ಪರಸ್ಪರ ವಿರುದ್ಧವಾದ ಹಲವು ದೃಷ್ಟಿಕೋನಗಳನ್ನು ನಮ್ಮ ಮುಂದೆ ಇಡುತ್ತಿದ್ದರು. ಕೆಲವರು ಹಾಗೆ ಇಟ್ಟೂ ಇದ್ದಾರೆ! ಆದರೆ ಪದ್ಯದಲ್ಲಿ ಹೆಚ್ಚಾಗಿ ಹೃದಯದ ಕಣ್ಣಿನಿಂದ ಭಾರತದರ್ಶನವನ್ನು ಪಡೆಯುವ ಪ್ರಯತ್ನವು ಪ್ರಧಾನವಾಗಿರುವುದರಿಂದ ಅಂಥ ಪೂರ್ವಾಪರವೆಂಬಷ್ಟು ವಿರುದ್ಧಾಭಿಪ್ರಾಯಗಳ ತಾಂಡವವನ್ನು ನಾವಿಂದು ಕಾಣುತ್ತಿಲ್ಲ. ಹೃದಯಾವಲೋಕನವೇ ಭಾರತೀಯರ ಐಕ್ಯ ಸಂಪಾದನದ ಮಹಾರಾಜಮಾರ್ಗ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಗಾಂಧಿಯವರು ಅದರಿಂದಲೇ ಹೃದಯೈಕ್ಯವನ್ನು ಒತ್ತಿ ಹೇಳುತ್ತಿದ್ದರು. ಆ ಹೃದಯ ಹೇಗಿದೆ?

ಬಂಗಾರ ನೀರ ಕಡಲಾಚೆಗೀಚೆಗಿದೆ ನೀಲ ನೀಲ ತೀರಾ
ಮಿಂಚು ಬಳಗ ತೆರೆ ತೆರೆಗಳಾಗಿ ಅಲೆಯುವುದು ಪುಟ್ಟ ಪೂರಾ
ಅದು ನಮ್ಮ ಊರು ಇದು ನಿಮ್ಮ ಊರು ತಂತಮ್ಮ ಊರೊ ಧೀರಾ
ಅದರೊಳಗೆ ನಾವು ನಮ್ಮೊಳಗೆ ತಾವು ಅದು ಇಲ್ಲವಣ್ಣ ದೂರಾ!
ಕರೆ ಬಂದಿತಣ್ಣ ತೆರೆ ಬಂದಿತಣ್ಣ ನೆರೆ ಬಂದಿತಣ್ಣ ಬಳಿಗೆ
ಹರಿತ...ದ ಭಾವ ಬೆರಿತ...ದ ಜೀವ ಅದರೊಳಗೆ ಒಳಗೆ ಒಳಗೆ
ಇದೆ ಸಮಯವಣ್ಣ ಇದೆ ಸಮಯ ತಮ್ಮ ನಂನಿಮ್ಮ ಆತ್ಮಗಳಿಗೆ
ಅಂಬಿಗನು ಬಂದ ನಂಬಿಗನು ಬಂದ ಬಂದಽದ ದಿವ್ಯಗಳಿಗೆ!
ಇದು ಉಪ್ಪು ನೀರ ಕಡಲಲ್ಲೊ ನಮ್ಮ ಒಡಲಲ್ಲು ಇದರನೆಲೆಯು
ಕಂಡವರಿಗಲ್ಲೊ ಕಂಡವರಿಗಷ್ಟೆ ತಿಳಿದಽದ ಇದರ ಬೆಲೆಯು
ಸಿಕ್ಕಲ್ಲಿ ಅಲ್ಲ ಸಿಕ್ಕಲ್ಲೆ ಮಾತ್ರ ಒಡೆಯುವುದು ಇದರ ಸೆಲೆಯು
ಕಣ್ಣರಳಿದಾಗ ಕಣ್ ಹೊರಳಿದಾಗ ಹೊಳೆಯುವುದು ಇದರ ಕಳೆಯು!
ಬಂದವರ ಬಳಿಗೆ ಬಂದ...ದ ಮತ್ತು ನಿಂದವರನೆರೆಗು
ಬಂದಽದೋ ಬಂದಽದ
ನವ ಮನುವು ಬಂದ ಹೊಸ ದ್ವೀಪಗಳಿಗೆ ಹೊರಟಾನ ಬನ್ನಿ
ಅಂದ...ದೋ ಅಂದ...ದ!

('ಹೃದಯ ಸಮುದ್ರ' : ಪುಟ ೧) (ಬೇಂದ್ರೆ)



# ಭಾಗ – ೨
# ರಂಗ ವಿಹಾರ

ಆಧುನಿಕ ಕನ್ನಡ ನಾಟಕಗಳಲ್ಲಿ ಸಾಮಾಜಿಕಗಳೇ ಹೆಚ್ಚು. ಆದರೆ ಇತರ ವಿಷಯಗಳನ್ನೂ ಆಧರಿಸಿ ಬರೆದಂಥವಿವೆ. ಅವುಗಳಲ್ಲಿ ನಮ್ಮ ಇಂದಿನ ಜೀವನದ ಹಲವಾರು ಮುಖಗಳ ಪ್ರಾತಿನಿಧಿಕ ಚಿತ್ರಗಳಿವೆ. ಕಾವ್ಯಾವಲೋಕನದಿಂದ ರಸಿಕರಿಗೆ ವ್ಯವಹಾರ ಜ್ಞಾನ. ಆನಂದ ಮತ್ತು ಕಾಂತಾಸಂಮಿತಿಯ ಉಪದೇಶಗಳು ದೊರಕುವುದು ಅನುಭವಸಿದ್ಧ. ಕಾವ್ಯ ಕಲೆಗಳಲ್ಲೆಲ್ಲ ನಾಟಕವು ಹೆಚ್ಚು ಸಾಮಾಜಿಕ ಅಪೀಲುಳ್ಳದ್ದು ಎಂದು ನಂಬಲಾಗಿದೆ.

ನಾಟಕದಲ್ಲಿ ವಸ್ತು, ಪಾತ್ರ, ರಸಗಳು ಮುಖ್ಯ. ಅದೊಂದು ದೃಶ್ಯವಾದ ಲಲಿತ ಕಲೆ. ಅದರಲ್ಲಿ ಗದ್ಯ–ಪದ್ಯಗಳೆರಡೂ ಇರಬಹುದು. ಆದರೆ ಇಂದಿನ ನಾಟಕಗಳು ಹೆಚ್ಚಾಗಿ ಗದ್ಯಮಯ. ಆ ಗದ್ಯದಲ್ಲಿಯೂ ಸಂವಾದದ ಅಥವಾ ಸಂಭಾಷಣೆಯ ರೂಪವೇ ಸರ್ವತ್ರ ಕಾಣಬರುತ್ತದೆ. ಭಾವಗೀತವೇ ಪ್ರಧಾನವಾಗಿರುವ ಪದ್ಯಗಳಿಗಿಲ್ಲದ ಕಥಾವಸ್ತುರೂಪದ ಚೌಕಟ್ಟು ನಾಟಕಕ್ಕಿರುವುದರಿಂದ ಅದರಲ್ಲಿ ಅಭಿಪ್ರಾಯದ ಸ್ಪಷ್ಟತೆಗೆ ಸೌಲಭ್ಯ ಹೆಚ್ಚು.

ಬ್ರಿಟಿಷರ ಆಳಿಕೆಯ ಕಾಲದಿಂದ ವಿದೇಶೀಯ ಜೀವನ ಸ್ವರೂಪಗಳು ನಮ್ಮ ಶಿಕ್ಷಿತರಿಗೆ ಮೊದಲಿಗಿಂತ ಹೆಚ್ಚು ಸುಲಭವಾಗಿ ತಿಳಿಯಲಾರಂಭವಾಯ್ತು. ಅಲ್ಪವಿರಲಿ, ಸ್ವಲ್ಪವಿರಲಿ– ಅಂಥ ಜ್ಞಾನವು ನಮ್ಮ ಪರಂಪರಾಗತ ಆಚಾರ–ವಿಚಾರಗಳನ್ನು ಪರೀಕ್ಷಿಸಿ ನೋಡುವ ಪ್ರವೃತ್ತಿಯಿನ್ನು ಕ್ರಮೇಣ ನಮ್ಮಲ್ಲಿ ಬೆಳೆಯಿಸಲಾರಂಭಿಸಿತು. ಅದರಿಂದ ನಮ್ಮ ರಾಜಕೀಯ, ಸಾಮಾಜಿಕ, ಧಾರ್ಮಿಕ–ವ್ಯವಹಾರಗಳನ್ನು ಪುನರ್ವಿಮರ್ಶಿಸಲು ಸದವಕಾಶ ದೊರಕಿತು. ಮೊದಮೊದಲು (ಅಥವಾ ಈಗ ಕೂಡ) ವಿದೇಶೀಯ ವಿಚಾರಗಳ ಅಂಥ ಸ್ವೀಕಾರವು ನಮ್ಮ ರಾಷ್ಟ್ರದ, ಸಮಾಜದ ಮತ್ತು ಉದ್ಯಮದ ಆರಂಭಗಳಲ್ಲಿ ಅನೇಕ ಕಷ್ಟ ನಷ್ಟಗಳನ್ನು ಉಂಟು ಮಾಡಿದರೂ ಯುಕ್ತಾಯುಕ್ತ ವಿವೇಕವು ಬೆಳೆದು ಬಂದ ಹಾಗೆ, 'ಯಾನಿ, ಅನವದ್ಯಾನಿ, ನೋ ಇತರಾಣಿ' ಎಂಬ ನಿಯಮದಂತೆ, ಯೋಗ್ಯವೂ ಲಾಭಕರವೂ ಆದ ಅಂಶಗಳಷ್ಟನ್ನೇ ಸ್ವೀಕರಿಸುವ ಮತ್ತು ನಮ್ಮ ದೇಶ–ಕಾಲ–ಕಾರ್ಯಗಳಿಗೆ ಅನುಕೂಲವಾಗದ ಅಂಶಗಳನ್ನು ಬಿಟ್ಟು ಬಿಡುವ ಬುದ್ಧಿವಂತಿಕೆ ಬೆಳೆಯುತ್ತ ಬಂದುದು ಸ್ಪಷ್ಟ. ಈ ನಾಗರಿಕತೆಗಳ ಸಂಘರ್ಷದ ಅವಧಿಯಲ್ಲಿ ನಮ್ಮ ಮಾನ್ಯರೂ ಸಾಮಾನ್ಯರೂ ನಡೆಸಿದ ಕೌಟುಂಬಿಕ, ಸಾಮಾಜಿಕ ಹಾಗೂ ರಾಷ್ಟ್ರೀಯ ಕಾರ್ಯಭಾರಗಳ, ವಿಚಾರ ವಿಮರ್ಶೆಗಳ ಪ್ರತಿಬಿಂಬಗಳನ್ನು ಕವನಗಳಲ್ಲಿ ಹೇಗೋ ಹಾಗೇ ಕತೆ–ಕಾದಂಬರಿ ನಾಟಕ ಮತ್ತು ನಿಬಂಧಗಳಲ್ಲೂ ಕಾಣಬಹುದಾಗಿದೆ. ಸಾಹಿತ್ಯಪ್ರಬಂಧದ ಈ ನಾಲ್ಕೂ ಬಗೆಗಳೂ

ಅಭ್ಯಾಸಯೋಗ್ಯವಾಗಿದ್ದರೂ ನಾವಿಲ್ಲಿ ಕವನಗಳ ನಂತರ ನಾಟಕಗಳಷ್ಟನ್ನು ಅವಲೋಕಿಸುತ್ತೇವೆ. ಈ ಎರಡು ಬಗೆಗಳಲ್ಲೂ ಮಿಕ್ಕೆರಡು ಬಗೆಗಳಲ್ಲೂ ಅಭಿಪ್ರಾಯ ಸಾದೃಶ್ಯಗಳು ಹೇರಳವಾಗಿ ಕಂಡು ಬರುತ್ತವೆ. ಏಕೆ? ಈ ಎಲ್ಲವೂ ಒಂದೇ ಸಾಂಸ್ಕೃತಿಕ ಯುಗಕ್ಕೆ ಸೇರಿದಂಥವು. ಕರ್ನಾಟಕದ ಸಮಕಾಲೀನ ಗ್ರಂಥಕರ್ತರಲ್ಲಿರುವ ಅಭಿಪ್ರಾಯ ವರ್ಗಗಳು ಅವರ ಕೃತಿವರ್ಗಗಳಲ್ಲಿ ಸದೃಶ್ಯವಾಗಿ ಪಡಿಮೂಡಿರುವುದು ಸಹಜ. ಇಂತಿಷ್ಟು ಬಗೆಯ ಭಾವನೆ, ಕಲ್ಪನೆ, ವಿಚಾರಗಳನ್ನು ಒಂದು ಕಾವ್ಯ ಜಾತಿಯಲ್ಲಿ ಕಾಣಲಾದರೆ, ಹೆಚ್ಚು ಕಡಿಮೆ ಅಷ್ಟೇ ಬಗೆಯವನ್ನು ಹಾಗೂ ಅದೇ ನಮೂನೆಯವನ್ನು ಮತ್ತೊಂದು ಸಮಕಾಲೀನ ಕಾವ್ಯಜಾತಿಯಲ್ಲೂ ನಾವು ನೋಡಬಹುದೆಂಬುದು ವ್ಯವಹಾರ್ಯ. ಈ ದೃಷ್ಟಿಯಿಂದ ನಾವೀಗ ತೆಗೆದುಕೊಂಬ ನಾಟಕಗಳಲ್ಲಿ ಕವನಲೋಕದಲ್ಲಿ ಕಂಡ ಸಾಮಾಜಿಕ, ರಾಜಕೀಯ, ಧಾರ್ಮಿಕ ಪ್ರವೃತ್ತಿಗಳ ಸದೃಶ ಬದಲಿಗಳನ್ನು ಕಂಡರೆ ಏನೂ ಆಶ್ಚರ್ಯವಿಲ್ಲ. ಆಯ್ಕೆಯ ವ್ಯತ್ಯಾಸದಿಂದ ಇಲ್ಲಿ ಹೊಸವನ್ನೂ ಕಾಣಲಾದೀತು.

# ೧.

# ಕರ್ಮವೀರನೋ ಕಲ್ಪನಾ ವೀರನೋ?

ಶ್ರೀ ವಿನೋಬಾರವರು ಕಂಡ ಹಾಗೆ ಕರ್ನಾಟಕದ ಪ್ರಾತಿನಿಧಿಕ ಜನರೆನಿಸಿಕೊಂಡವರಲ್ಲಿ ಹಲವರು ಮೃತರೇನೋ ಎಂಬಷ್ಟು ಅಕಾರ್ಯದಕ್ಷರಾಗಿರುವುದು ವಿಷಾದಕರ. ಈ ನಿರುತ್ಸಾಹಜನಕವಾದ ಸಾರ್ವಜನಿಕ ಜೀವನರಂಗದಲ್ಲಿ ಉತ್ಸಾಹವುಂಟಾಗಲು ಶುದ್ಧ ಹೃದಯಿಂದ ನಮ್ಮ ಪೂರ್ವೇತಿಹಾಸವನ್ನು ಅಭ್ಯಸಿಸಿ ಕ್ಷಾತ್ರ ಶಕ್ತಿಯನ್ನು ವೃದ್ಧಿ ಮಾಡಿಕೊಳ್ಳಬೇಕು. ಈ ದೃಷ್ಟಿಯಿಂದ ಶ್ರೀ ಎಂ. ಆರ್. ಶ್ರೀನಿವಾಸ ಮೂರ್ತಿಗಳು 'ನಾಗರಿಕ' ಎಂಬ ಪದ್ಯಶೈಲಿಯ ನಾಟಕವನ್ನು ಬರೆದಿದ್ದಾರೆ. ಅದರ ಮುಖ್ಯಪಾತ್ರ ನಾಗರಿಕ; ಆವರಣ ಹಾಳು ಹಂಪೆಯದು. ದೇವರೆಲ್ಲವನ್ನೂ ಒದಗಿಸಿಕೊಡುವನೆಂದು ಹುಂಬರಂತೆ ನಿಷ್ಕ್ರಿಯರಾದ ಜನರ ಮೂಢಭಕ್ತಿಯನ್ನು ಕಂಡು ನಾಗರಿಕನು ಸಂತಪ್ತನಾಗುತ್ತಾನೆ.

ದೇವನೇ ಮಾಡಿಸುವ!<br>
ಮಾಡಿಸುವ ನಿಮಗೆಲ್ಲ! ಶಂಭುಗಿಂಭುಗಳೆಂದು<br>
ಪಾಡುಗಳ ನೋಡುವೀ ಹೇಡಿಗಳ ಹಿಂಡನ್ನು<br>
ಹಿಡಿದಿಂದು ದೇವನೇ ಮಾಡಿಸುವ! ಹರಕೆಯಂ<br>
ಬೇಡುವಿರಿ! ಏನೆಂದು ಬೇಡುವಿರಿ ಕುನ್ನಿಗಳೆ?<br>
ಮಕ್ಕಳನು ಮರಿಗಳನು ಧನಕನಕ ವಸ್ತುವನು?<br>
ಅನ್ಯರಿಗೆ ತೆರುವುದಕೆ ಏನನ್ನು ಬೇಡುವಿರಿ?<br>
ಮಡದಿ ಮಕ್ಕಳ ಪಾಲಿಸುವ ಶಕ್ತಿಯಿನಿತಿಲ್ಲ<br>
ಇದ್ದುದನು ಕೊಂಡೊಯ್ಯೆ ರೋದಿಸಲು ತಿಳಿದಿಲ್ಲ<br>
'ದಮ್ಮಯ್ಯ ದತ್ತಯ್ಯ ದೇವನಂ ಮುರಿಯದಿರಿ'<br>
ಎಂದೆಂದು ಮೊರೆಯಿಟ್ಟ ಹೇಡಿಗಳು; ಹೇಡಿಗಳ<br>
ಮರೆಯಲಿಹ ಪರಮಾತ್ಮ! ಜುಟ್ಟು ಜನಿವಾರದಲಿ<br>
ಜಾತಿಯಂ ಹಿಡಿದಿಹಿರಿ, ಮಾನವಂ ಬಿಟ್ಟಿಹಿರಿ<br>
ಹರಕೆಗಳ ಬೇಡುವಿರಿ! ಹೇಡಿ ಜನರಿಗೆ ತಕ್ಕ

ಈ ಮುರುಕು ದೈವಗಳು!

ಭೂರಿ ಜನರ, ಹತ್ತು ಸಮಸ್ತರ, ಜಾತ್ರೆಜಂಗುಳಿಯ ಸ್ವರೂಪದ ನಮ್ಮ ಮಹಾಜನರ ಹಣೆಯ ಬರೆಹ ಸ್ವತಂತ್ರ ಭಾರತದ ಸಂಯುಕ್ತ ಕರ್ನಾಟಕದಲ್ಲೂ ಸಾಕಷ್ಟು (ಈವರೆಗೆ) ಬದಲಾಗಲಿಲ್ಲ. ವಿಚಾರ ಶಕ್ತಿಯನ್ನು ಬೆಳೆಸಿಕೊಳ್ಳುವುದರಲ್ಲಿ ಇತರ ರಾಜ್ಯದವರಿಗಿಂತ ನಾವೇ ಸ್ವಲ್ಪ ಹಿಂದಿದ್ದೇವೆ ಎನ್ನಿಸುತ್ತದೆ. ಈ ನಪುಂಸಕತ್ವದ ಗ್ರಹ ಬಡಿದ ಇತಿಹಾಸಾವಧಿಯು ಮುಂದಿನ ಜನಾಂಗದವರಿಗೆ ಯಾವ ಸ್ಫೂರ್ತಿಯನ್ನು ಕೊಡಬಲ್ಲದು? ಸಾರ್ವಜನಿಕ ವ್ಯಕ್ತಿತ್ವವು ನಮ್ಮ ನಾಯಕರಲ್ಲಿ ಸಾಕಷ್ಟು ಚೆನ್ನಾಗಿ ಬೆಳೆದಿಲ್ಲ; ವೈಯಕ್ತಿಕ ವ್ಯಕ್ತಿತ್ವವೇನೋ ಅಲ್ಲಿ ಇಲ್ಲಿ ಕಾಣ ಸಿಕ್ಕೀತು–ಅಷ್ಟೇ. ಹೀಗೇ ಉಳಿದರೆ ನಮ್ಮ ಜನತೆಯ ಸ್ಥಾನವು ಇದ್ದ ಮಟ್ಟದಲ್ಲೂ ಉಳಿಯುವುದು ಕಷ್ಟ. ನಾವು 'ನಾಗರಿಕ'ನಂತೆ ನಾಗರಿಕರಾಗಬೇಕು.

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ'
ಎಂಬ ಅವನ ಶ್ರದ್ಧೆಯೆಂತಿದೆ ಎಂಬುದನ್ನು ನೋಡಿ:
ಈ ನಮ್ಮ ನಾಡಂತೆ ಬೇರೊಂದು ನಾಡುಂಟೆ?
ವೇದಗಳ ತೌರೂರು, ಯಾಗಗಳ ನೆಲೆವೀಡು
ದೇವ ಭಾಷೆಯ ಕೆಚ್ಚು, ವೇದಾಂತ ಮಾರ್ಗಗಳು
ಅವತಾರ ಲೀಲೆಗಳು, ಮತಶತದ ಜನ್ಮಗಳು
ಸತ್ಯದಲಿ, ಧರ್ಮದಲಿ, ಭೋಗದಲಿ, ಭಾಗ್ಯದಲಿ
ಈ ನಮ್ಮ ನಾಡಂತೆ ಬೇರೊಂದು ನಾಡುಂಟೆ?
ಪುಣ್ಯ ಭೂಮಿಯಿದೆಂದು ಋಷಿವರರು ಚರಿಸಿದರು
ಆಚಾರ್ಯರುದಿಸಿದರು. ತತ್ವಗಳ ತಿಳುಹಿದರು.
ಮಾಪುರುಷರೆನಿಬರೋ ಭಕ್ತಜನರೆನಿಬರೋ
ಮಹಿಮೆಯಂ ಬೀರಿದರು. ದೇವನಂ ಪಾಡಿದರು
ಕರ್ಮ–ಭೂಮಿಯಿದೆಂದು ವೀರರವತರಿಸಿದರು
ವಾಸವನ ಸೋಲಿಸುವ ವೈಭವದಿ ಮೆರೆದವರು
ಸಾರ್ವಭೌಮರ ಸಾಲು, ಚಂದ್ರಸೂರ್ಯರ ವಂಶ
ಸತ್ವದಲಿ, ಶೌರ್ಯದಲಿ, ಧೈರ್ಯದಲಿ, ವೀರ್ಯದಲಿ
ಈ ನಮ್ಮ ನಾಡಂತೆ ಬೇರೊಂದು ನಾಡುಂಟೆ?
ಅಚ್ಚರಿಯ ರೂಪಿನಲಿ, ಸುಗುಣದಲಿ, ಶೀಲದಲಿ
ಹದಿಬದೆಯರೆನಿಬರೋ ಸೂರ್ಯನಂ ತಡೆದವರು
ಯಮನನ್ನು ಗೆದ್ದವರು, ಹರಿಯಜಮಹೇಶ್ವರನು
ಶಿಶುಗಳಂ ಮಾಡಿದರು ಕೀರ್ತಿಯಂ ಬೆಳಗಿದರು.

ಈ ನಮ್ಮ ನಾಡಂತೆ ಬೇರೊಂದು ನಾಡುಂಟೆ?

Patriotism is the noblest passion that animates man in the character of a citizen.

ದೇಶಪ್ರೇಮವೆಂಬುದು ವ್ಯಕ್ತಿಯ ನಾಗರಿಕ ಮುಖವನ್ನು ಸಚೇತನಗೊಳಿಸುವ ಅತ್ಯುದಾತ್ತವಾದ ಭಾವಾವೇಶ. ಈ ಆವೇಶವಿಲ್ಲದ ಬರಿಯ ವೇಷಗಳೇ ನಮ್ಮಲ್ಲಿಂದು ಹೆಚ್ಚಾಗಿವೆ. ಇದನ್ನು ಕಂಡೇ 'ನಾಗರಿಕ' ಕಿಡಿಯುಗುಳಿದ್ದು . ಆತನ ನಾಡಭಕ್ತಿಯನ್ನು ನಾಟಕದಲ್ಲಿ ದೇವರು ಮೆಚ್ಚಿದನೆಂದು ಹೇಳಿದ್ದು ಮೇಲಿನ ಮಾತಿಗೆ ಪೋಷಕವಾಗಿದೆ. ಆತನು ದೇವರ ಹತ್ತಿರ ಹೀಗೆ ಹೇಳುತ್ತಾನೆ:

ನಿನ್ನ ನಂಬುವುದೇಕೆ? ಆಶ್ರಯವು ನಮಗೇಕೆ?
ಬಾಹುದಂಡಗಳಲ್ಲಿ ನಂಬಿಕೆಯನಿಡೆ ಲೇಸು
ತಾನಹುದು. ಹತ್ತಾರು ರಾಜ್ಯವಂ ಚಕ್ರಾಧಿ
ಪತ್ಯವಂ ಕಟ್ಟುವೆವು ನಾವಿಂದು, ಹಂಗಿನೊಳು
ನಾವಿರೆವು ನಿನಗಿಂತ ಮಿಗಿಲಾದ ದೇವನಂ
ಸೃಷ್ಟಿಸುತ ಲೋಕಗಳ ಸೃಷ್ಟಿಸುತ ಧಾತೃವಿಗೆ
ಧಾತೃವೆನಿಸುತಲೀಗ ಕೌಶಿಕನ ಸಾಹಸವ
ತೋರುವೆವು. ಕೈಕಟ್ಟಿ ಕುಳ್ಳಿಹರು ನಾವಲ್ಲ
ಅವತಾರ ಮಾಡೆಂದು ಬೇಡುವವರಾವಲ್ಲ
ನೀನಿನ್ನು ಬೇಕಿಲ್ಲ. ನಿನ್ನೆಡೆಗೆ ಪೋಗುವುದು
ಸುಖದಿಂದ ಬಾಳುವುದು ನಿದ್ದೆಯಂ ಮಾಡುವುದು.

ಈ ಕೆಚ್ಚು ನಮ್ಮಲ್ಲಿಂದು ಎದ್ದುರಿಯಬೇಕಾಗಿದೆ. ನಮ್ಮದಿಂದು ಸಪ್ಪೆ ಸಾಮ್ರಾಜ್ಯ. ವ್ಯಕ್ತಿಯ ಕ್ಷುದ್ರ ಸ್ವಾರ್ಥವೇ ವ್ಯವಹಾರದ ಧ್ಯೇಯವಾಗಿದೆ. ಅದನ್ನು ಭೇದಿಸಲು ವಿದ್ಯಾರಣ್ಯ ಮೂರ್ತಿಯು 'ನಾಗರಿಕ'ನಿಗೆ ಪ್ರತ್ಯಕ್ಷವಾದಾಗ ಕೊಟ್ಟ ಸಂದೇಶವಿಂತಿದೆ:

ಕಾರ್ಯವೊದಗಿರುವಲ್ಲಿ ಕಾರ್ಯವನು ಸಾಧಿಪುದು
ಬರಿದೆ ಶೋಕಿಪುದೆಲ್ಲ ಗತವೈಭವಕೆ ಕೊರಗಿ
ಹರಣಮಂ ಬಿಡಲುಂಟೇ? ಆಗುವುದು, ಪೋಗುವುದು.
ಮುಂದಿನಾ ವೈಭವಕೆ ತಳಹದಿಯು ಹಿಂದಿನಾ
ಸಂಪದವು
ಎತ್ತಲೇಂ ಪೋಗಿಲ್ಲ ನಾಡಿಹುದು, ನೀವಿಹಿರಿ
ಮುಂದಿನಾ ವೈಭವವು ಹೆಚ್ಚಿನದು. ಸಂಕಲ್ಪ
ದೊಳಗುಂಟು, ಭರತಮಾತೆಯ ಗರ್ಭದಲಿ ವೀರ

ರತ್ನಗಳಿಹವು; ಮುಂದೆ ಸ್ವಾತಂತ್ರ್ಯ ಸೂರ್ಯ ಹೊಂ
ಗದಿರ ಮಳೆಗರೆಯುವನು; ಉದಿಸುವರು, ಕಟ್ಟುವರು
ಚಕ್ರಾಧಿಪತ್ಯಗಳ

ದಿವಂಗತ ಎಂ.ಆರ್. ಶ್ರೀಗಳ ವಿದ್ಯಾರಣ್ಯಮುಖದ ಪ್ರತ್ಯಾಶೆಯಿಂದು ನಮ್ಮದೆಯಲ್ಲಿ ಜಾಗೃತವಾಗಬೇಕು. ಆಗ ನಾವು ನಾಗರಿಕರೆನಿಸಿಕೊಳ್ಳಲು ಅರ್ಹರಾಗುತ್ತೇವೆ. ಕೆಳಮಧ್ಯಮ ಹಾಗೂ ಕೆಳವರ್ಗಗಳ ಹಿತಕ್ಕಾಗಿ ಯೋಜನಾಬದ್ಧ ರೀತಿಯಿಂದ ಕರ್ನಾಟಕ ಕಾಲಿಡಲೆಂಬುದೇ ಈ ನಾಟಕದ ರಂಗಧ್ವನಿ.



# ೨.

# ಜನಿವಾರವೋ ದಯಾಹೀನತೆಯ ಆಧಾರವೋ?

ಜಾತೀಯತೆಯ ವಿಷಯವು ಆಗಲೇ ಬಂದಿತ್ತು. ಅದನ್ನೇ ಎತ್ತಿಕೊಂಡು ಶ್ರೀರಂಗರು 'ಹರಿಜನ್ವಾರ' ಎಂಬ ನಾಟಕವನ್ನು ಬರೆದಿದ್ದಾರೆ. ಅದರಲ್ಲಿ ಬರುವ ದೊಡ್ಡರಾಯರೆಂಬ ಪಾತ್ರವು ಇಮ್ಮಂಡೆ ಹದ್ದಿನಂತಹ ಬುದ್ಧಿಯುಳ್ಳದ್ದು. ಅದರ ತತ್ವಜ್ಞಾನ ಎಷ್ಟು ಸೊಗಸಾದುದು?

'ಸಭೆಯ ಮಾತು ಸಭೆಯೊಳಗೆ.

ಮನೆಯ ಮಾತು ಮನೆಯೊಳಗೆ.'

'ಹೇಳುವುದು ಶಾಸ್ತ್ರ, ಹಾಕುವುದು ಗಾಳ' ಎಂಬ ನೀತಿಯನ್ನು ಹಿಡಿದು 'ಒಳಗೊಂದು, ಹೊರಗೊಂದು' ಎಂಬ ವ್ಯವಹಾರದಲ್ಲಿ ತೊಡಗಿ ಜನವಂಚನೆ ಮಾಡುವ ಧುರೀಣರ ಸುಧಾರಣೋಪನ್ಯಾಸಗಳಿಗೆ ಇಂದು ಯಾವ ಕೊರತೆಯೂ ಇಲ್ಲ. ಇಂಥವರ ಉಪನ್ಯಾಸವನ್ನು ಮಾಡಿಸುವ ಅಜ್ಞಾನ–ಆಡಂಬರಗಳಿಂದ ಭೂರಿಜನ ಇಂದು ಮುಕ್ತವಾಗಬೇಕು. ಯೋಗ್ಯತೆಯನ್ನು ಅರಿಯುವ ಸೂಕ್ಷ್ಮದರ್ಶನವನ್ನು ನಾವು ಬೆಳೆಸಿಕೊಳ್ಳದೇ ಹೋದರೆ ನಮ್ಮ ಪ್ರಜಾಪ್ರಭುತ್ವವು ಒಂದು ಸರ್ವನಾಶಕವಾದ ವಿಕಟಹಾಸ್ಯವಾಗಿ ಹೋದೀತು. ಜನ ಮೆಚ್ಚಲೆಂದು ಹರಿಜನರು ದೇವಾಲಯವನ್ನು ಪ್ರವೇಶ ಮಾಡಬೇಕೆಂದು ಭಾಷಣ ಕುಟ್ಟಿಬಂದ, ದೊಡ್ಡರಾಯರು ಮನೆಯಲ್ಲಿ ಸನಾತನ ಧರ್ಮದ ಸಿಪ್ಪೆಗಂಟಿಕೊಂಡಿರುವ ತಾತ್ಯಾಚಾರಿಯನ್ನು ಸಮಾಧಾನಗೊಳಿಸುವಾಗ ಒಳಗಿನ ಇಂಗಿತವನ್ನು ಹೊರಗೆಡುಹುತ್ತಾರೆ. ಅವರಿಗೆ ಚುನಾವಣೆಯಲ್ಲಿ ಆರಿಸಿ ಬರುವುದು ಮುಖ್ಯವಲ್ಲದೆ ಹರಿಜನೋದ್ಧಾರವಲ್ಲ. ಹರಿಜನರ ಉದ್ಧಾರವಾಗಬೇಕೆಂಬರ ಮನವೊಲಿಸಿ ಅವರ ಮತಗಳನ್ನು ಬಗಲಿಗೆ ಹಾಕಿಕೊಳ್ಳಬೇಕು; ಮುಸಲ್ಮಾನರೆದುರು ಅವರ ಹಿತಚಿಂತಕನೆಂದು ಹೇಳಿ ಅವರಿಗೆ ಪ್ರಿಯವಾದ ಹರಿಜನರ ಉದ್ಧಾರದ ಪ್ರಯತ್ನವನ್ನು ಮಾಡುವುದಿಲ್ಲವೆಂದು ಆಶ್ವಾಸನ ಕೊಟ್ಟು ಸನಾತನಿಗಳ ಮತಗಳೊಡನೆ ಅವರ ಮತಗಳನ್ನು ಗಿಟ್ಟಿಸಬೇಕು–ಎಂಬುದೇ ದೊಡ್ಡರಾಯರ ಹಂಚಿಕೆ. 'ಎಂ.ಎಲ್.ಎ' ಆಗಲು ಅವರಿಗೆ ಎಲ್ಲವೂ ಸಾಧನ 'ಯೇನಕೇನ ಪ್ರಕಾರೇಣ ಪ್ರಸಿದ್ಧ ಪುರುಷೋಭವೇತ್' ಎಂಬ ರಾಜಕೀಯ ಮಹತ್ವಾಕಾಂಕ್ಷೆಯುಳ್ಳವರೇ ಈ ನಾಟಕದಲ್ಲಿ ವಿಡಂಬನಾಸ್ತ್ರದ ಲಕ್ಷ್ಯಗಳು. ತೋರಿಕೆಯಲ್ಲಿ ಧರ್ಮಶ್ರದ್ಧೆಯುಳ್ಳವರ ಹಾಗೆ ಆಚಾರಗಳನ್ನಿಟ್ಟುಕೊಂಡು, ತಮಗೆ ಬೇಕಾದಷ್ಟೇ ಪ್ರಮಾಣದ ಅಧರ್ಮಗಳನ್ನು ಮಾಡಿ,

ಅವನ್ನು ರಹಸ್ಯವಾಗಿ ಇರಿಸಿಕೊಂಡು, ನಿರ್ಘೃಣರಾದ ತಾತ್ಯಾಚಾರಿಯಂಥ ಅಂಧ ಧಾರ್ಮಿಕರನ್ನು ರಂಜಿಸುತ್ತ, ಹೊರಗೆ ಸಾರ್ವಜನಿಕರೆದುರು ಧರ್ಮದ ವಿಶಾಲ ಭಾವನೆಯನ್ನು ಬಾಯಲ್ಲಿ ಪ್ರಕಟಪಡಿಸಿ ಅವರನ್ನೂ ರಂಜಿಸುತ್ತ–ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವ ಗಣ್ಯ ಸಾಮಾಜಿಕರನ್ನು ಹಡೆದೇ ಭಾರತ ಹೀಗೆ ಬಡವಾಯಿತು. ಹರಿಜನರ ಕೂಸು ಗಟಾರದಲ್ಲಿ ಬಿದ್ದಾಗ ಅದನ್ನು ಮೇಲೆತ್ತಲು ದೊಡ್ಡರಾಯರಾಗಲಿ, ಅವರ ಕಾರಕೂನ ಅಂತಪ್ಪನಾಗಲಿ, ಅವರ ದೇವರ ಪೂಜೆಯ ಅಧಿಕಾರಿ ತಾತ್ಯಾಚಾರಿಯಾಗಲಿ ಹೊರಡರು. ಇಂಥ ಜಾತಿವಾದಿಗಳು ಸರ್ವರ ಸಮಾನ ಗೌರವವನ್ನು ಹೇಳುವ ಸಂವಿಧಾನದ ಕಲಮುಗಳನ್ನು ಅಮಲಿನಲ್ಲಿ ತರಲು ಕಂಕಣಬದ್ಧರಾಗಿ ನಿಂತ ಶಾಸನಸಭಾಸದರು!

ಈ ವಿಷಯದಲ್ಲಿ ಭಾರತದ ವಿಶ್ವಕವಿ ರವೀಂದ್ರರು–

"ಸಂಪೂರ್ಣವಾಗಿ ಮೇಲಿನವರನ್ನವಲಂಬಿಸಹಚ್ಚುವ ಹಾಗೂ ಸ್ವಾಭಿಮಾನವನ್ನು ಕಳೆಯುವ ಸಾಮಾಜಿಕ ರೂಢಿಗಳನ್ನು ಭಾರತವು ತೆಗೆದು ಹಾಕಬೇಕು. ಇಂಥ ರೂಢಿಗಳೆಲ್ಲಾ ಜಾತಿಪದ್ಧತಿಯಿಂದ ಹುಟ್ಟಿದಂಥವು; ಅವನ್ನು ಕುರುಡರಂತೆ ಜನರು ಆಧಾರಗ್ರಂಥಗಳನ್ನು ನಂಬಿ ಆದರಿಸಿದ್ದೇ ಕಾರಣ. ಅವರ ಈ ಮಾನಸಿಕ ಸೋಮಾರಿತನ ಹೋಗಬೇಕು. ಜಾತಿಪದ್ಧತಿ ಇಂದು ಅಸಂಬದ್ಧ... ಜಾತಿಪದ್ಧತಿಯಲ್ಲಿ ಭಾರತವು ಮನುಷ್ಯರಲ್ಲಿಯ ನಿವಾರ್ಯವಾದ ಭೇದಗಳನ್ನು ಮನ್ನಣೆ ಮಾಡಿ, ಜೀವನದ ನಿಯಮವಾದ ಪರಿವರ್ತನೀಯತೆಯನ್ನು ಕಡೆಗಣಿಸಿದೆ. ಘರ್ಷಣವನ್ನು ತಪ್ಪಿಸಹೊರಟ ಅದು ಮನುಷ್ಯರ ನಡುವೆ ಕೀಳಲಾಗದಂತಹ ಗೋಡೆಗಳನ್ನು ಕಟ್ಟಿ ಅವರನ್ನು ಬೇರ್ಪಡಿಸಿ ಬಿಟ್ಟಿದೆ. ಆ ಮೂಲಕ ತನ್ನ ಅಸಂಖ್ಯ ಕುಲದ ಜನರಿಗೆ ನಿಷೇಧ ರೂಪದ ಶಾಂತಿಯನ್ನದು ಗಳಿಸಿಕೊಟ್ಟು ವಿಧಿರೂಪದ ವಿಸ್ತರಣ ಹಾಗೂ ಪ್ರಗತಿಗಳ ಅವಕಾಶವನ್ನು ಇಲ್ಲದಂತೆ ಮಾಡಿದೆ. ವೈವಿಧ್ಯವನ್ನು ಹಡೆಯುವಲ್ಲಿ ಅದು ನಿಸರ್ಗನಿಯಮವನ್ನು ಸ್ವೀಕರಿಸಿ ಆ ವೈವಿಧ್ಯವನ್ನು ನಿಸರ್ಗವು ತನ್ನ ಅನಂತವಾದ ಬದಲಾವಣೆ ಹಾಗೂ ಸಂಯೋಜನೆಗಳನ್ನು ಮಾಡುವಲ್ಲಿ ನಿಸರ್ಗ ನಿಯಮವನ್ನು ಬಿಟ್ಟುಕೊಟ್ಟಿದೆ... ಇದರಿಂದ ಭಾರತದ ಸಮಾಜಪದ್ಧತಿಯು ನಿರ್ಜೀವವಾಗಿದೆ. ಜೀವಂತ ಸಮಾಜಕ್ಕೆ ಬದಲಾಗಿ ಅದೀಗ ತಾನು ನಿರ್ಮಿಸಿದ ಭವ್ಯವಾದ ಅಸಂಖ್ಯ ಯಂತ್ರ ವಿಭಾಗಗಳನ್ನು ವಿಜೃಂಭಣೆಯಿಂದ ಪೂಜಿಸುತ್ತಿದೆ.

ವ್ಯಾಪಾರಾದಿ ಉದ್ಯೋಗಗಳಲ್ಲಾದರೂ ಹಾಗೇ. ಘರ್ಷಣೆ, ಸ್ಪರ್ಧೆ, ಹಿಂಸೆ, ಕ್ರೂರತೆಗಳನ್ನು ತಪ್ಪಿಸಲೆಂದು ಅವನ್ನು ಜಾತಿವಾರು ಹಂಚಿ ಆನುವಂಶಿಕವಾಗಿ ಮಾಡಿದ ಭಾರತವು ಬದಲಾವಣೆಯ ತತ್ವವನ್ನು ಕಡೆಗಣಿಸಿ ಕ್ರಮೇಣ ಕಲೆಗಳನ್ನು ಕಸಬಿನ ಮಟ್ಟಕ್ಕೂ ಪ್ರತಿಭೆಯನ್ನು ಕೌಶಲದ ನೆಲೆಗೂ ಇಳಿಸಿಬಿಟ್ಟಿದೆ."

ಹಲವಾರು ಸುಶಿಕ್ಷಿತರೆನಿಸಿಕೊಂಡವರು ಇಂದಿನವರೆಗೆ ಮಾಡುತ್ತ ಬಂದುದು ಸಮಾಜ ಸುಧಾರಣೆ ಎಂಬ ಸಾಮಾಜಿಕ ಅಥವಾ ರಾಜಕೀಯ ನಾಟಕವನ್ನೇ ಎಂಬುದನ್ನು ಗಮನಿಸಿದರೆ ಶ್ರೀರಂಗರು ನಿಲ್ಲಿಸಿದ ದೊಡ್ಡರಾಯರ ಮತಾಪಹರಣದ ಭಾಷಣಾಭಿನಯ

ಎಂಥ ಮಾರ್ಮಿಕ ವಿಡಂಬನೆಯಾಗಿದೆ ಎಂಬುದು ಗೊತ್ತಾಗುತ್ತದೆ. ಜೊತೆಗೆ ಇತರ ಪಾತ್ರಗಳ ಕಪಟ ಸೂತ್ರಗಳ ವಿವರವನ್ನು ನೋಡಹೋದರೆ: ತಾತ್ಯಾಚಾರಿಗೆ ಶ್ರೀಮದಾನಂದ–ತೀರ್ಥರ ಹೆಸರನ್ನು ನಾಲಗೆಯಿಂದ ನುಡಿಯಲು ಕೂಡ ಯೋಗ್ಯತೆ ಇಲ್ಲ; ವಸಂತನಂತಹರಿಗೆ ಟೀಕಾರಾಯರನ್ನು ಮೀರಬೇಕೆಂದು ಆಕಾಂಕ್ಷೆ ಮಾತ್ರ ಇದೆ; ದೊಡ್ಡರಾಯರ ಮಗ ಶ್ಯಾಮನಿಗೆ ಆತ್ಮವಿಶ್ವಾಸವಿಲ್ಲ; ಸಕೇಶಿ ವಿಧವೆ ಯಮುನೆಗೆ ಪುನರ್ವಿವಾಹ ಮಾಡಿಕೊಂಬ ಧೈರ್ಯವಿಲ್ಲ; ದೊಡ್ಡರಾಯರ ಹೆಂಡತಿ ವೇಣಕ್ಕ ಮಾತ್ರ ಹೃದಯದ ಕಳಕಳಿಯುಳ್ಳವಳಾದುದರಿಂದ ಚರಂಡಿಯಲ್ಲಿ ಬಿದ್ದ ಹೊಲೆಯ ಕೂಸನ್ನು ಸ್ವತಃ ಎತ್ತುತ್ತಾಳೆ: ಆದುದರಿಂದ ಶ್ರೀರಂಗರೆನ್ನುತ್ತಾರೆ:

'ಸರ್ವಸ್ಯಚಾಹಂ ಹೃದಿ ಸನ್ನಿವಿಷ್ಟ:' ಎಂದು ಹೇಳುವ ಪರಮಾತ್ಮನು (ದಯಾಮಯಿ ವೇಣಕ್ಕನಂಥವರ ಹೃದಯದಲ್ಲಲ್ಲದೇ) ಯಾರ ಹೃದಯದಲ್ಲಿದ್ದಾನೆ? ಕೇವಲ ಹಿಂದಿನ ಕಾಲದವರ ಹೃದಯವನ್ನೇ ಎಂದಿನಿಂದಲೂ ಬಾಡಿಗೆಯ ಮನೆ ಎಂದು ಕಾಂಟ್ರಾಕ್ಟ್ ಮಾಡಿಕೊಂಡಿರುವನೇ ದೇವರು?... ಹೃದಯದಲ್ಲಿ ಪರಮಾತ್ಮನಿದ್ದುಕೊಳ್ಳಬೇಕಾದರೆ ಜಾತಿ–ಕಾಲ–ಮತಗಳ ನಿರ್ಬಂಧವಿಲ್ಲ. ಇನ್ನು ಪರಮಾತ್ಮನು ಹೃದಯದಲ್ಲಿಲ್ಲದಿರಲು ಆ ಹೃದಯಕ್ಕೆ ಹೊಲಸಾಗಿ ಅಂಟಿಕೊಳ್ಳುವ ಜನಿವಾರದಂತಹ ಬಾಹ್ಯ ಚಿಹ್ನೆಗಳ ಉಪಯೋಗವೇನು? ''ತನುವಿನಲ್ಲಿ ಹುಸಿ ತುಂಬಿ, ಮನದೊಳು ವಿಷ ತುಂಬಿ, ಮನದೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ" ಎಂದು ೭೦೦ ವರ್ಷಗಳ ಹಿಂದೆ ಬಸವೇಶ್ವರರು ಕೇಳಿದ ಪ್ರಶ್ನೆಯನ್ನೇ ಇಂದೂ ಕೇಳಬೇಕಾಗಿದೆ. ಅದನ್ನು ತಕ್ಕಮಟ್ಟಿಗೆ ಕೇಳಿದೆ– ಈ 'ಹರಿ–ಜ–ನ್ವಾರ' ನಾಟಕದಲ್ಲಿ.

ಜನಿವಾರ ಹರಿದು ಹರಿಜನ್ವಾರವನ್ನು ಆಚರಿಸುವ ಸಂದೇಶವನ್ನೀಗ ಕೇಳಿದ್ದಾಯಿತು. ಜನಿವಾರವು ಅರ್ಥಹೀನ ಪರಂಪರಾಪ್ರಿಯತೆಯಲ್ಲಿರುವ ಪರವಂಚನೆ ಪ್ರತೀಕ. ಹರಿಜನ್ವಾರವು ಸಾರ್ಥಕವಾದ ಹೊಸ ಪರಂಪರೆಯಲ್ಲಿರುವ ಪತಿತೋದ್ಧಾರದ ಸಂಕೇತ.



## ೩.

# ಬಡಾಯಿಯೇ ಬಂಡವಾಳವೋ ಬಂಡವಾಳವೇ ಬಡಾಯಿಯೋ?

ದಿವಂಗತ ಟೀ.ಪೀ. ಕೈಲಾಸಂ ಎಂಬುವರು ಸಾಮಾಜಿಕ ನಾಟಕಗಳ ರಚನೆಯಲ್ಲಿ ಅದ್ವಿತೀಯರು. ಅವರ ಅನೇಕ ನಾಟಕಗಳು ಇಂದಿನ ಸಮಾಜದ ಅನಾಚಾರಗಳ ವಿಡಂಬನೆಯನ್ನು ಮಾಡಿವೆ. 'ಬಂಡ್ವಾಳಿಲ್ಲದ ಬಡಾಯಿ' ಎಂಬುದು ಹೆಸರೇ ಹೇಳುವಂತೆ ಕರ್ಮವೀರರಲ್ಲದವರು ವಾಗ್ವೀರರಾಗಿ ಮೆರೆಯುತ್ತಿರುವ ಹಾಸ್ಯಾಸ್ಪದ ಅಂಶವನ್ನು ಟೀಕಿಸಿದೆ. ಹರಟೆ–ಪುರಾಣ–ಚಾಡಿಗಳಲ್ಲಿ ದಿನಕ್ಕೆ ೧೮ ತಾಸು ಕಾಲ ಕಳೆವಂಥ ಸಾಮಾನ್ಯ ರಸಿಕರಿಗೆ ಸಹ ನಮ್ಮ ನೇತೃತ್ವಗಳಲ್ಲಿ ಹಲವು ಜನ ಬಾಯಿಬಲವನ್ನು ತೋರಿಸಿ ಠಕ್ಕ ಠೌಳಿಗಳಿಂದ ದೊಡ್ಡ ದೊಡ್ಡ ಸ್ಥಾನಮಾನಗಳಲ್ಲಿದ್ದು ಅವಕ್ಕೆ ಗೌರವ ತರದಂಥ ಕೆಲಸ ಮಾಡುತ್ತಿರುವುದನ್ನು ಕಂಡು ಬೇಸರ ಬಂದಿದೆ. ದಿಲ್ಲಿಯಿಂದ ಧನುಷ್ಕೋಡಿಯವರೆಗೆ ವ್ಯಾಪಿಸಿದ ಪಟ್ಟಂಗಶೂರತನ, ಹುಡಿವಾತುಗಾರಿಕೆ, ಅಮೃತವಾಣಿಯ ಉತ್ಪಾದನೆ, ಬುಡವಿಲ್ಲದ ಆಶ್ವಾಸನ, ಎರಡುನುಡಿಯಾಡುವುದು, ಹುರುಳಿಲ್ಲದ ಪೌರುಷವಾಡುವುದು ಮುಂತಾದ ಉತ್ತರಭೂಪಗಿರಿಯ ವಿಶ್ವರೂಪಗಳೆಂಬಂತಹ ಪ್ರಚಂಡರ ಶಬ್ದಬ್ರಹ್ಮೋಪಾಸನೆಯನ್ನು ಖಂಡಿಸದೆ ರಾಷ್ಟ್ರನಿರ್ಮಾಣ ಕಾರ್ಯವು ಯಶಸ್ವಿಯಾಗದು. 'ವಚನೇ ಕಾ ದರಿದ್ರತಾ' ಎಂಬ ಗಾದೆಯಂತೆ ಸಾರ್ವಜನಿಕ ಕರ್ತವ್ಯಗಳನ್ನು ವಹಿಸಿಕೊಂಡವರು ವಚನವೀರರಷ್ಟೇ ಆಗಿರುವ ನಿದರ್ಶನಗಳು ನಮ್ಮ ಸುತ್ತ–ಮುತ್ತ ನೋಡಿದರೇನೇ ಸಾಕಷ್ಟು ಸಿಗಬಹುದು. ಅಹೋಬಲರಾಯರೆಂಬ ಆಧುನಿಕ ವಕೀಲರು ಪ್ರಸ್ತುತ ನಾಟಕದ ನಾಯಕರು. ಅವರ ವಾಗ್ಬಲವನ್ನು ಕಂಡು ಯಾರಾದರೂ 'ಅಹೋ ಏನು ಬಲ!' ಎಂದು ಉದ್ಗರಿಸದಿರರು. ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಬೇಕೆಂಬ ಆಡಂಬರದ ಅವತಾರ ಅಹೋಬಲರಾಯ! ತಾನೊಬ್ಬ ಲಾಯರು. ರಾಜ್ಯದ ವಿಧೇಯ ಪ್ರಜೆ, ಸದ್ಗೃಹಸ್ಥ, ನಗರಪಾಲಿಕೆಗೆ ಕರಕೊಡುವ ಸಭ್ಯ ಎಂದು ಮುಂತಾಗಿ ತನ್ನ ಬಗ್ಗೆ ಇಲ್ಲದ ಅಭಿಮಾನವನ್ನಿಟ್ಟುಕೊಂಡು ನಾಗರಿಕ ಹೊಣೆ, ಪೋಲೀಸರ ಹಾಗೂ ಸರಕಾರದ ಅವಶ್ಯಕತೆ ಇತ್ಯಾದಿ ವಿಶ್ವದ ವಿವಿಧ ಗಂಭೀರ ತತ್ವಗಳೆಲ್ಲವನ್ನೂ ಅರಗಿಸಿಕೊಂಡ ಆದರ್ಶ ಸುಶಿಕ್ಷಿತ ಮೇಧಾವಿ ಮತ್ತು ರಸಿಕ, ಅಲ್ಲದೆ ಪರೋಪಕಾರಿ ಎಂದು ಪ್ರದರ್ಶಿಸುವ ವಾಚಾಳಿ ನಮ್ಮ ಈ ಲಾಯರು ಮಹಾಶಯ!

ತನ್ನ ಮಗನ ಹೊಲಸು ಬಟ್ಟೆ ಬರೆಗಳನ್ನು ತೆಗೆದು ಹಾಕಲು ಶಾಲೆಯ ಮುಖ್ಯೋಪಾಧ್ಯಾಯರು ಬರೆದ ಪತ್ರವನ್ನು ನೋಡಿ ಆತ ಹೀಗೆ ರೇಗುತ್ತಾನೆ:

"ತನಗೆ ತಿಳಿದ ಅಲ್ಪ ಸ್ವಲ್ಪ ವಿದ್ಯೆಯನ್ನು ತನ್ನ ಬಳಿ ತಂದೆ ತಾಯಿಗಳು ಕಳಿಸಿದ ಶಿಶುಗಳ ಮಿದುಳಿಗೆ ಸೋಕಿಸುವ ನೆಪದಿಂದ ಸದರಿ ತಂದೆ ತಾಯಿಗಳಿಂದ ಸ್ಕೂಲ್ ಫೀಸ್ ಮುಖಾಂತರವಾಗಿ ಸುಲಿದುಕೊಳ್ಳುವ ಹಣದಿಂದ ಬಸಿರನ್ನು ಬೆಳೆಸುವ ಎಸ್.ಪಿ.ರಾವ್–ಶಿಶುಪೋತರಾಯನಿಗೆ

"ಹುಲಿಯೂರ್ ಅಹೋಬಲ್ ರಾಯರು ಹೇಳುವುದೇನೆಂದರೆ–ತಂದೆ ತಾಯಿಗಳು ತನುಜರನ್ನು ಪಾಠಶಾಲೆಗೆ ಕಳುಹಿಸುವ ನಿಮಿತ್ತವು, ಉಪಾಧ್ಯಾಯರುಗಳು ಮಕ್ಕಳಿಗೆ ಪಾಠವನ್ನು ಹೇಳುವುದಕ್ಕಲ್ಲದೆ ಮೇಲ್ಪೇಳಿದ ಮಕ್ಕಳ ಮೈ ಬಟ್ಟೆಗಳನ್ನು ಮೂಸಿ ನೋಡುವುದಕ್ಕಲ್ಲ!"

"ಲಾಯರ್ ನಾನು! ವೈಬಲ್ ಕೇಸ್ ಹಾಕಿ ಆ ಶಿಶುಪೋತ ಶನಿಯ ಕುಲಗೋತ್ರ ಕುಟುಂಬ ಕೊಂಪೆ ಕೊಂಪೇನ್ನೇ ಕೋರ್ಟ್ಗೆ ಎಳೆದು ಹರಾಜು ಹಾಕಿಸ್ಬಿಟ್ಟೇನು! ಹುಷಾರ್!

ಈ ರೇಗಾಟ ಲಾಯರ ನಿಜವಾದ ಸ್ವರೂಪಕ್ಕೆ ಕನ್ನಡಿ ಹಿಡಿಯುತ್ತದೆ. Vanity is the foundation of the vices, of affectation and common lying- ಡಂಭವು ದುರ್ಗುಣಗಳ ಅಡಿಗಲ್ಲು, ನಟ ಸಾರ್ವಭೌಮ ವಿದ್ಯೆಯ ಬೀಜ ಮತ್ತು ಸಾಮಾನ್ಯ ಸುಳ್ಳುಗಾರಿಕೆಯ ಸುಖನಿವಾಸ! ಹಳೆಯ ಕವಿಯೊಬ್ಬ, 'ದುರ್ಗುಣಗಳೆಂಬ ದೇವತೆಗಳ ಇಂದ್ರ' ಎಂದೂ ದಂಭಕ್ಕೆ ಅಗ್ರ ಪೂಜೆ ಸಲ್ಲಿಸಿದ್ದಾನೆ. ಮನುಷ್ಯನನ್ನು ಅಧೋಗತಿಗಿಳಿಸುವ ಸರ್ವರೋಗಗಳ ತಂದೆಯಾದ ಈ ಡಾಂಭಿಕತೆ ನಮ್ಮ ಹಳ್ಳಿ–ಪಟ್ಟಣಗಳಲ್ಲಿ ವಾಸಿಸುವ ಶಿಕ್ಷಿತರಲ್ಲಿ, ಶ್ರೀಮಂತರಲ್ಲಿ, ಅಧಿಕಾರಿಗಳಲ್ಲಿ ಮತ್ತು ಪರೋಪಜೀವಿಗಳಾದ ಇತರ ಸಾಮಾಜಿಕ ಉಂಡಾಡಿಗಳಲ್ಲಿ ದಿನೇ ದಿನೇ ಹೆಚ್ಚುತ್ತಿದೆಯೋ ಏನೋ ಎನ್ನಿಸುವ ಪರಿಸ್ಥಿತಿ ಸೂಕ್ಷ್ಮ ನಿರೀಕ್ಷಕರಿಗಷ್ಟೇ ಅಲ್ಲ–ಸ್ಥೂಲ ನಿರೀಕ್ಷಕರಿಗೂ ಇಂದು ತಿಳಿದು ಬರುವಂತಿದೆ. ನವಿಲುಗರಿಗಳನ್ನು ಉಟ್ಟು ನರ್ತಿಸಲು ಪ್ರಯತ್ನಿಸುವ ಈ ನಗರಕಾಕರು ನಮ್ಮ ಸಂಸ್ಕೃತಿಗೆ ಕಲಂಕಪ್ರಾಯರು. ಇಂಥ ಪುಡಾರಿಗಳ ಬೆಳೆ ಹೆಚ್ಚಿದ ಹಾಗೆ ನಮ್ಮ ಸಮಾಜ ತನ್ನ ಸಂಘ ಶಕ್ತಿಯನ್ನು ಕಳೆದುಕೊಳ್ಳುತ್ತ ಹೋಗುತ್ತದೆ: 'ಕೊಡಲಿಯ ಕಾವು ಕುಲಕ್ಕೆ ಮೃತ್ಯು' ಎಂಬಂತಹ ಕಾಮಕ್ರೋಧಾದಿ ಷಣ್ಮುಖಗಳುಳ್ಳವರನ್ನು ಹಡೆದು ಅವ್ಯವಸ್ಥೆ–ಅರಾಜಕತೆಗಳಿಗೆಡೆಗೊಡುತ್ತದೆ.

ಕೈಲಾಸಂ ಬರೆದ ನಾಟಕಗಳಲ್ಲಿ ಬರುವ ಪಾತ್ರಗಳಲ್ಲಿ ಹಲವು ಆಂಗ್ಲ–ಕನ್ನಡಗಳನ್ನು ಬೆರೆಸಿ ಮಾತಾಡುತ್ತವೆ. ಈ ಬೆರಕೆಗತ್ತು ನಮ್ಮ ಶಿಕ್ಷಿತರಲ್ಲನೇಕರ ಪರಭಾಷಾ ವ್ಯಾಮೋಹವನ್ನೂ, ಬುದ್ಧಿದಾಸ್ಯವನ್ನೂ ಶುಷ್ಕಪೌರುಷವನ್ನೂ ಕ್ಷುದ್ರ ಸ್ವಾರ್ಥವನ್ನೂ ಗೋಮುಖವ್ಯಾಘ್ರತನವನ್ನೂ ಪ್ರತಿಬಿಂಬಿಸುತ್ತದೆ. ಇಂದಂತೂ ಶ್ರೀ ರಾಜಗೋಪಾಲಚಾರಿಯಂಥ ಜ್ಞಾನವೃದ್ಧರು ಕೂಡ ಇಂಗ್ಲೀಷು ಭಾರತದಲ್ಲಿ ಖಾಯಂ ಇರಬೇಕೆಂಬಷ್ಟು ದೂರ ಹೋಗಿ, ಆಕಸ್ಮಿಕ ಅರೆಮರುಳುತನಕ್ಕಿಳಿದದ್ದು ಸ್ಪಷ್ಟವಾಗಿದೆ. ಇಂಗ್ಲೀಷು–ಶಿಕ್ಷಕರಲ್ಲಿ ಕೆಲ ಗಣ್ಯರು ಶಿಕ್ಷಣ ಮಾಧ್ಯಮ ಕೂಡ ಬುಡದಿಂದ ತಲೆವರೆಗೆ ಇಂಗ್ಲೀಷೇ ಆಗಿರಬೇಕೆಂದು ತಮ್ಮ

ಹೊಟ್ಟೆಹೊರಕತನವನ್ನು ಜಗಜ್ಜಾಹೀರು ಮಾಡಿದ್ದುಂಟು. ಹೀಗೆ ಹಲವು ವಿಧದಿಂದ ಸ್ಥಾನಭದ್ರಯೋಗ ಹಿಡಿದವರು ಕೂಗು ಹಾಕುವ ಆವರಣವನ್ನು ಕೈಲಾಸಂ ಕಲೆ ಖಂಡಿಸುತ್ತದೆ. ಇಂಥ ಸಂಸ್ಕೃತಿದ್ರೋಹಿಗಳ ಹಲವಾರು ಮಾದರಿಗಳನ್ನು ಅವರ ಇತರ ನಾಟಕಗಳಲ್ಲಿ ಕಾಣಬಹುದು.



# ೪.

# ಸಂಶಯಿತ ಸಂಭಾವಿತನೋ ಅಲ್ಪಾಶಯದ ಮಹಾಶಯನೋ?

'ದೀಪಾವಳಿ ಅಥವಾ ಅಳಿಯನ ಅರೈವಲ್' ಎಂಬುದು ಶ್ರೀ ಕ್ಷೀರಸಾಗರರು ಬರೆದ ಏಕಾಂಕ ದೃಶ್ಯ. ಇದರಲ್ಲಿ ಶ್ರೀಯುತ ಕೃಷ್ಣಮೂರ್ತಿ ನಾಯಕರು ಅವರ ಅನ್ವರ್ಥನಾಮ 'ಮಿಸ್ಟರ್ ಸರಳಾ!' ಅಂದರೆ ಸತೀವ್ರತ ಹಿಡಿದ ತದೇಕರಸವುಳ್ಳ ಮಹಾಶಯರು–ಹದಿನಾರಾಣೆ ಅಳಿಯಂದಿರು. 'ಮದುವೆಗಿದುವೆ' ಮಾಡಿಕೊಂಡು ಹಾಯಾಗಿರುವ ಮಹೋನ್ನತ ಧ್ಯೇಯದ ಆರಾಧಕರು!

"ಇನ್ನೆಲ್ಲಾ ಒಂದು ವರ್ಷ ಸರಳಾ. ಅಲ್ಲಿಗೆ ನನ್ನ ಓದು ಮುಗಿಯುತ್ತೆ. ನಗರದಲ್ಲಿ ನೆಲೆಸುವ ಯೋಚನೆ ಮಾಡಿದ್ದೇನೆ... ನೋಡೂ... ನಗರದಲ್ಲಿ ಒಳ್ಳೆಯದೊಂದು ಮನೆ. ಮನೆಯ ಸುತ್ತಲೂ ಹೂವಿನ ತೋಟ... ಹೂವಿನ ತೋಟದಲ್ಲಿ ಬೆಳದಿಂಗಳು... ಬೆಳದಿಂಗಳಲ್ಲಿ ನೀನು ನಾನು... ಹಾಗೆ ಪ್ರಸನ್ನಳಾಗು ದೇವೀ. ಇಲ್ಲಿ ಬಾ, ನನ್ನ ಪಕ್ಕದಲ್ಲಿ ಕೂತುಕೋ. ಏನಾದರೂ ಹೇಳು ಸರಳಾ."

ಮೇಲಿನ ಮಾತುಗಳಿಂದ ಇತ್ತೀಚಿನವರೆಗಿನ ನಾಗರಿಕ ತರುಣರ ಜೀವನಧ್ಯೇಯ ಕೇವಲ ಗೃಹಸೌಖ್ಯ ಎಂಬುದು ಸುವ್ಯಕ್ತ. ದೇಶವಿಂದು ದಾರಿದ್ರ್ಯ–ರೋಗ–ಅಜ್ಞಾನಗಳ ಮಡುವಿನಲ್ಲಿ ಕೊಳೆಯುತ್ತಿದೆ. ಆದರೂ ಎಷ್ಟೋ ಜನ ಕಲಿಯ ಯುವಕ–ಯುವತಿಯರಿಗೆ ಒಳ್ಳೆಯ ಮನೆ, ಒಳ್ಳೆಯ ನೌಕರಿ ಅಥವಾ–

"ಬೆಚ್ಚನೆಯ ಮನೆಯಾಗೆ
ವೆಚ್ಚಕ್ಕೆ ಹೊನ್ನಾಗೆ
ಇಚ್ಚೆಯಾನರಿವ ಸತಿಯಾಗೆ ಸ್ವರ್ಗಕ್ಕೆ
ಕಿಚ್ಚುಹಚ್ಚೆಂದ ಸರ್ವಜ್ಞ"

ಎಂಬಷ್ಟಕ್ಕೆ ಕೊನೆಗೊಂಬ ಮಹತ್ವಾಕಾಂಕ್ಷೆಯಿರುವುದು ಶೋಚನೀಯ. Help yourself and never heed what it costs to others-ನಿನ್ನ ಕೆಲಸ ನೀನು ಸಾಧಿಸಿಕೋ; ಮಂದಿಗದರಿಂದ ಎಷ್ಟು ನಷ್ಟವಾದರೂ ಲಕ್ಷಿಸಬೇಡ' ಎಂಬುದು ಪಾಶ್ಚಾತ್ಯರ

ಜೀವನಧ್ಯೇಯವೆಂದು ರವೀಂದ್ರರೊಂದು ಕಡೆ ಹೇಳಿದ್ದುಂಟು. ಆದರೆ ಈ ವಿಷಯದಲ್ಲಿ ಇಂದು ಭಾರತದ ಅನೇಕ ಭಾಗ್ಯವಂತರು ಪಾಶ್ಚಾತ್ಯರಿಗೂ ಒಂದು ಕೈ ಮೇಲಾಗಿ ವರ್ತಿಸುತ್ತಿದ್ದಾರೆ ಎನ್ನಬಹುದು. ಕೃಷ್ಣಮೂರ್ತಿಯಂಥ ಅಲ್ಪಾಶಯರನ್ನೇ ನಮ್ಮ ಶಾಲೆ–ಕಾಲೇಜುಗಳಿಂದು ತಯಾರು ಮಾಡಿ ಹೊರಬಿಡುತ್ತಿರುವುದು ಭಾರತದ ಭವಿಷ್ಯಕ್ಕೆ ಹಿತಕಾರಿಯಲ್ಲ. ಗಾಂಧಿಯವರ ಸತ್ಯ–ಅಹಿಂಸೆ–ದೇಶಸೇವಾಬುದ್ಧಿಗಳನ್ನು ಅವರ ಶವದ ಜೊತೆಗೇ ಸುಟ್ಟು ಹಾಕಲಾಯಿತೇನೋ ಎಂಬ ಆವರಣವಿಂದು ಕಂಡು ಬರುತ್ತಿದೆ–ಸುಶಿಕ್ಷಿತರಾದ ಉಚ್ಚನೌಕರಿ–ಜಾತಕಗಳಲ್ಲಿ! ಹೆಣ್ಣಿಗತನದ ನಾಗರಿಕತೆಯ ಬುರುಕಿಮೊಗಗಳು ಭಾರತಕ್ಕಿಂದು ಭೂಷಣವಲ್ಲ. ಸುಖ–ಶಾಂತಿ–ಸಮೃದ್ಧಿಗಳು ದೇಶದಾದ್ಯಂತ ತುಂಬಿದ ಕಾಲದಲ್ಲಿ ಒಮ್ಮೆ ಕೃಷ್ಣಮೂರ್ತಿತನವು ರಸ್ಯಮಾನವಾದೀತು. ಅರಕ್ಷಿತತೆಯ ಭಾವನೆ ತುಂಬಿಕೊಂಡಿರುವ ನಮ್ಮ ಇಂದಿನ ಅಸ್ತವ್ಯಸ್ತ, ಶೋಷಿತ, ಕ್ಷುದ್ರ ಸಮಾಜಕ್ಕದು ಆರೋಗ್ಯಕರವಲ್ಲ.

ಮೇಲಿನ ಮಾತು ಇಂದಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ನಾಟಕವನ್ನು ಕಂಡರೆ ಎನ್ನಿಸುವ ಸಂಗತಿ. ನಾಟಕದ ಪ್ರಕಟ ಸಂದೇಶವು ಕೃಷ್ಣಮೂರ್ತಿಗೆ ಹೆಂಡಕುಡಿಕನೆಂಬ ಅಪವಾದ ಅಕಸ್ಮಾತ್ತಾಗಿ ಬಂದು, ಅವನು ಅದರಿಂದ ಪಾರಾಗುವುದೇ ಆಗಿದೆ; ಮಾವನ ಮನೆಯವರು ಅವನ ಪೆಟ್ಟಿಗೆಯಲ್ಲಿ ಇಡಲಾಗಿದ್ದ ಔಷಧ ಬಾಟಲಿಗಳನ್ನು ಹೆಂಡದ ಬಾಟಲಿಗಳೆಂದು ತಿಳಿದು ಅವನ ಬಗ್ಗೆ ಸಂಶಯ ತಾಳಿದ ಪ್ರಕರಣ ಅಲ್ಲಿ ಮುಖ್ಯ. ಪಾನಪ್ರತಿಬಂಧದ ಪ್ರಚಾರ ಬೆಳೆಯುತ್ತಿರುವ ಈ ಯುಗದಲ್ಲಿ ಅಂಥ ಸಂಶಯಗಳು ನಿಶ್ಚಯಗಳಾಗಿ ಪರಿಣಮಿಸುವ ಸಂಭವವೇ ಹೆಚ್ಚು. ನಮ್ಮ ನಗರ–ಪಟ್ಟಣಗಳಲ್ಲಿ ಪರೋಕ್ಷವಾಗಿ ಬಲಿಷ್ಠ ಪ್ರಭಾವವನ್ನು ಬೀರುವ ಅಕಿರೀಟ ಸಮ್ರಾಟರ ಒಂದು ಗುಪ್ತ ಗುಂಪು ಸರಕಾರಿ ನೌಕರರನ್ನು ನಾನಾ ತಂತ್ರಗಳಿಂದ ಅಂಕೆಯಲ್ಲಿಟ್ಟುಕೊಂಡು, ಸ್ವಚ್ಛಂದ ದರಬಾರು ನಡೆಸಲು–ಪ್ರಾಮಾಣಿಕ ಅಧಿಕಾರಗಳಿದ್ದಲ್ಲೂ ಅವರು (Negative Virtue) ನಿಷೇಧ ರೂಪದ ಸದ್ಗುಣಗಳೆನಿಸಿ ಅನೀತಿವಂತರನ್ನು ತಡೆಗಟ್ಟದಿರುವ ಕೃಷ್ಣಮೂರ್ತಿ ವ್ಯಕ್ತಿತ್ವ ಉಳ್ಳವರಾಗಿರುವುದೇ ಕಾರಣ! ಕೃಷ್ಣಮೂರ್ತಿಗಳು ನಮಗಿಂದು ಅಪೂರ್ಣ ಸಾಮಾಜಿಕರು! ಅಶಕ್ತಿಯಿಂದ ಸಾಧುಗಳೆನಿಸಿದವರು!

ಓದು ನೌಕರಿಗಾಗಿ, ನೌಕರಿಯು ಹಣಕಾಗಿ,
ಹಣವು ಸತಿ–ಸುತರ ಮೆರವಣಿಗೆಗಾಗಿ ಎನೆ–
ನೆನೆದಾರೆ ಬಡವನಿರವನ್ನ?
ಹೊಗಳುವಂತಹ ಕೆಲಸವೇನನೂ ಮಾಡದೇ
ಹೊಗಳಿಕೆಗೆ ಬಾಯಿನೀರ್ಗರೆವ ಅಧಿಕಾರ–
ಖಗ ಕಾಣ್ಗೆ ಬಡವನಿರವನ್ನ?
ನಾನಿದ್ದರೇ ಸಾಕು, ನನ್ನದಷ್ಟೇ ಚೆನ್ನ;

ಜ್ಞಾನೋಪದೇಶ ನಿಮಗಾಗಿ ಎಂಬ ಜನ
ಮಾನಿಸುಗೆ–ಬಡವನಿರವನ್ನ?
ಅಧ್ಯಾತ್ಮ, ಅನುಭಾವ, ವಿಜ್ಞಾನ, ಕಲೆ–ಎಲ್ಲ
ಮಧ್ಯಕಾಯಕ್ಕೆ, ಮಾನಕ್ಕೆ, ಮೀಸಲಿಕೆ–
ಒದ್ದಾರು ಬಡವನಿರವನ್ನ!
ಆಡು–ಮಾಡುಗಳಲ್ಲಿ, ಎದುರು–ಹಿಂಬದಿಗಳಲಿ
ನೋಡದಿದ್ದಲ್ಲಿ ನೋಡಿದಲ್ಲೆರಡಿಹರು
ಕಾಡ್ಯಾರು ಬಡವನಿರವನ್ನ!
ದೇಹಾತ್ಮಭಾವಿಗಳು ದೇವಾತ್ಮವಾದಿಗಳು
ಸ್ನೇಹಿತರನೊತ್ತೆಯಿಟ್ಟುಂಬ ಮೇಧಿಗಳು
ಹೀರ್‍ಯಾರು ಬಡವನಿರವನ್ನ!



# ೫.

# ಬಿರುದೋ ಬೇತಾಳನೋ?

ಡಾ. ಮುಗಳಿ ಬರೆದ 'ನಾಮಧಾರಿ' ಯಲ್ಲಾದರೂ ಇದೇ ಜಾತಿಗೆ ಸೇರಿದ, ಅರ್ಥಾತ್ ಮತಿದಾನ ಯಜ್ಞವನ್ನು ಮಾಡಿದ, ಕೆಂಚನಗೌಡರು ರಾವ್‌ಸಾಹೇಬ ಎಂಬ ಬಿರುದನ್ನು ಪಡೆಯಲು ಮನೆ–ಮಠ, ಆಸ್ತಿ–ಪಾಸ್ತಿಗಳನ್ನು ಮಾರಿ ಭಿಕಾರಿಗಳಾದ ದೃಶ್ಯಚಿತ್ರವಿದೆ. ನವನಾಗರಿಕತೆಯ ಜೊತೆಗೇ ವ್ಯಾಮೋಹ ದಾಸ್ಯವನ್ನೂ ನಮಗೆ ದಯಪಾಲಿಸಿಹೋದ ಬ್ರಿಟಿಷ್ ಭೂಪತಿಗಳ ಕೃಪಾಚ್ಛತ್ರದ ನೆರಳಲ್ಲಿ ಬೆಳೆದ ಮಾದರಿಯ ಮಹಾತ್ವಾಕಾಂಕ್ಷಿಗಳೆಂದರೆ ಕೆಂಚನಗೌಡರು! ಕಡ್ಡಿಯಂತಹ ಮನುಷ್ಯರು ಗುಡ್ಡದಂಥವರಾಗಿ ಬಿಡುತ್ತೇವೆಂದು ನಂಬಿ, ಅಡ್ಡದಾರಿ ಹಿಡಿದು ಹಾಳಾಗುವ ಹವ್ಯಾಸ ಇಂದಿಗೂ ಜೀವಂತವಾಗಿದೆ. ಪತ್ರಿಕಾ ಪ್ರಸಿದ್ಧಿಗೆ ಬಾಯಿಬಿಡದ ಮಹತ್ವಾಕಾಂಕ್ಷಿ ಇಂದು ಸಿಕ್ಕಿಯಾನೇ?

"ರಾಜಸೇವಕದಲ್ಲಿ ನಿಮ್ಮ ಫೋಟೋ–ಪರಿಚಯ ಪ್ರಶಂಸೆ ಎಲ್ಲ ಒಂದು ಪುಟಕ್ಕೂ ಹೆಚ್ಚು ಬಂದಿದೆ" ಎಂದ ಕಾರ್ಯದರ್ಶಿ ನಂದೀಶನ ಮಾತನ್ನು ಕೇಳಿ ಹುಂಬ ಗೌಡರು ಹಿಗ್ಗಿ ಹಿಗ್ಗಿ ಹೀರೆಯಾಗುತ್ತಾರೆ. ಜಂಟಲ್‌ಮ್ಯಾನರಾಗಲು ಲಿಲಿಯ ಜೊತೆಗೆ 'ಲವ್' ಮಾಡಲು ಹೋದ, ಕೃತಕವಾಗಿ ಸಭೆಗಳನ್ನು ಸೇರಿಸಿ, ಹಣ ಸುರಿದು, ಭಾಷಣ ಬಡಿದು, ಪ್ರಸಿದ್ಧಿಗೆ ಬರಲು ಹೆಣಗಿದ, ಬೆಂಚ್ ಮ್ಯಾಜಿಸ್ಟ್ರೇಟ್ ಮುಂತಾದ ಒಂದೊಂದೇ ಅಧಿಕಾರ ಸ್ಥಾನಗಳನ್ನು ಹೇಗೆ ಹೇಗೋ ಸಂಪಾದಿಸುತ್ತ ಹೋದ, ಕೊನೆಗೆ ಮನೆ ಹರಾಜು ಮಠ ಹರಾಜು' ಆಗುವ ಸ್ಥಿತಿಯನ್ನು ತಂದುಕೊಂಡ ಅವಿದ್ಯಾಪಾರಂಗತ ಗೌಡರು–

"ಬರೂದುಲ್ಲ ಅಂತ ಹೇಳು. ನಾ ಬಾದಶಾರ ಹಂತ್ಯಾಕ ಹೋಗತೀನಿ. ನಾ ರಾವ್‌ಸಾಹೇಬ ಆಗೀನಿ ತಿಳೀತಿಲ್ಲೊ? ಬಾದಶಾರ ಹಂತ್ಯಾಕ ಅಲ್ಲೇ ಇಲಾಯತ್ಯಾಗ ಇರತೀನಿ"

–ಎಂಬುದನ್ನು ಗಮನಿಸಿದರೆ ಬ್ರಿಟೀಷರ ಕಾಲದಲ್ಲಿ ಎಂಥ ಭೇವಕೂಫರಿದ್ದರು ನಮ್ಮಲ್ಲಿ ಎಂಬುದು ಗೊತ್ತಾಗುತ್ತದೆ. ಆದರೆ ಇನ್ನೊಬ್ಬರಿಂದ ಭಾಷಣಗಳನ್ನು ಬರೆಸಿಕೊಂಡು ಓದಿ, ಸ್ಥಾನಮಾನ ಬಿರುದು ಬಾವಲಿಗಳಿಗಾಗಿಯೇ ಸಾವಿರ ಸರ್ಕಸ್ಸು ನಡೆಯಿಸುವ ನಿರ್ಘೃಣ ಧುರೀಣರಿಗೆ ಇಂದೂ ಕೊರತೆಯಿಲ್ಲ. ಯುಕ್ತಾಯುಕ್ತ, ಧರ್ಮಾಧರ್ಮ, ನ್ಯಾಯನ್ಯಾಯ ವಿವೇಕಕ್ಕೆ ತಿಲಾಂಜಲಿಯಿತ್ತು ಕೇವಲ ಸ್ವಲಾಭ–ಸ್ವಪ್ರತಿಷ್ಠೆಗಳಿಗಾಗಿ

ಹೊಡೆದಾಡುವ ಪದ್ಮಭೂಷಣ ಲೋಭ ಇಂದು ಅನೇಕರನ್ನು ಬಾ ಬಾ ಎಂದು ಕರೆಯುತ್ತಿದೆ. ಈ ಪದ್ಮಶ್ರೀಮಂತಿಕೆಯ ರೋಗ ಇನ್ನೂ ಹೊಸದು. ಇತರ ಸ್ಥಾನಮಾನ ಲೋಭಗಳೇ ಬೇಕಾದಷ್ಟಿವೆ. ಇಂಥ ಸಾಮಾಜಿಕರ ಸಂಖ್ಯೆ ಬೆಳೆದಷ್ಟೂ ಸಮಾಜ ದುರ್ಬಲವಾಗುತ್ತ ಹೋಗುತ್ತದೆ; ಸಂಸ್ಕೃತಿಯ ಕೊಡೆ ಹಿಡಿದು ತಿರುಗುವ ವಿಕೃತಿಗಳು ಹೆಚ್ಚಾಗುತ್ತವೆ. "ಮಹತ್ವಾಕಾಂಕ್ಷೆಯೊಂದು ಪ್ಲೇಗು, ಗುಪ್ತ ವಿಷಯ, ಪ್ರಚ್ಛನ್ನ ದುರಾಶೆ, ವೈಭವಕ್ಕಾಗಿ ಮಾಡುವ ಅತ್ಯಾಶೆ. ಅದು ಎದೆಯನ್ನು ಕುರುಡು ಮಾಡುತ್ತದೆ; ಅದು ಆತ್ಮಕ್ಕೆ ಹಿಡಿದ ಜಲೋದರ ರೋಗ, ಮೋಸಗಾರಿಕೆಯ ಸೂತ್ರದಾರ, ಕಪಟತನದ ತವರು, ದುರ್ಗುಣಗಳ ಜನ್ಮಭೂಮಿ, ಹೊಟ್ಟೆಕಿಚ್ಚಿನ ಅಪ್ಪ" ಎಂಬ ಮಾತು ಈ ಸಂದರ್ಭಕ್ಕೆ ಚೆನ್ನಾಗಿ ಅನ್ವಯಿಸುತ್ತದೆ. ಮಹತ್ವಾಕಾಂಕ್ಷೆಯೂ, ಡಾಂಭಿಕತೆಯೂ ಅವಳಿ ಜವಳಿ ಅಕ್ಕತಂಗಿಯರಂತೆ! ಭಾರತದ ರಾಜಕೀಯ ರಂಗಸ್ಥಳದಲ್ಲಿ ಇಂಥ ಮೊಗವಾಡದ ವೇಷಗಳನ್ನು ಸ್ಪಷ್ಟವಾಗಿ ಕಾಣಬಹುದು. ಆದರೆ ಇತರ ರಂಗಗಳಲ್ಲಿ ಇವುಗಳ ಸಂಖ್ಯೆಯೇನೂ ಕಡಿಮೆ ಎನ್ನುವಂತಿಲ್ಲ. ಈ ವೇಷಧಾರಿಗಳ ನಾಮಧಾರಿಗಳ ಪಿಡುಗು ಬೆಳೆಯದಂತೆ ಪ್ರಾರಂಭದಲ್ಲೇ ಮದ್ದರೆಯುವ ಸೂಕ್ಷ್ಮದೃಷ್ಟಿ ನಮ್ಮ ಸಾಮಾಜಿಕರಿಗಿಂದು ಅಗತ್ಯ; ಇದು ಪ್ರಜಾಪ್ರಭುತ್ವವು ಉಳಿಯಬೇಕೆಂಬ ಪ್ರತಿಯೊಬ್ಬನ ಕರ್ತವ್ಯ.



## ೬.

# ಔದಾರ್ಯವೋ ಅವಶ್ಯಕತೆಯ ಅರಿವೋ?

ಶ್ರೀ ಪು.ತಿ. ನರಸಿಂಹಾಚಾರ್ಯರು ಬರೆದ 'ವಿಕಟಕವಿ ವಿಜಯ'ವೊಂದು ರಾಜಕೀಯ ನಾಟಕ. ಇಂಥ ನಾಟಕಗಳು ಹೊಸಗನ್ನಡದಲ್ಲಿ ಅಪೂರ್ವ. ಈ ನಾಟಕದಲ್ಲಿ ಶ್ರೀ ನರಸಿಂಹಾಚಾರ್ಯರು ಕ್ರಿ.ಶ ೧೯೪೨ರಿಂದ ೧೯೪೭ರ ವರೆಗಿನ ನಮ್ಮ ದೇಶದ ರಾಜಕೀಯ ಕೋಲಾಹಲವನ್ನು ಕವಿಸಹಜವಾದ ರೀತಿಯಲ್ಲಿ ಚಿತ್ರಣ ಮಾಡಿದ್ದಾರೆ. ಒಂದಾನೊಂದು ದೇಶೀಯ ಸಂಸ್ಥಾನದಲ್ಲಿಯ ದೇಶ ಹಿತೈಷಿಯಾದ ರಾಜನು ಭಾರತ ಸ್ವಾತಂತ್ರ್ಯಕ್ಕಾಗಿಯೂ ಪ್ರಜಾಪರಮಾವಧಿಕಾರಕ್ಕಾಗಿಯೂ ನಡೆದ ಜನ ಸಮಾರಂಭವನ್ನು ಎಂಥ ದೃಕ್ಪಥದಿಂದ ನೋಡಿದನು? ಆತನಿಗೆ ಅಧಿಕಾರದಲ್ಲಿ ಅನಿವಾರ್ಯ ಸಹಭಾಗಿಯಾಗಿದ್ದ ಬ್ರಿಟಿಷ್ ಪ್ರತಿನಿಧಿಯ ನೀತಿಯೆಂಥಾದ್ದು? ಆ ರಾಜನ ಆಪ್ತ ಸಚಿವನಾಗಿದ್ದ ವಿಕಟಕವಿಯ ನ್ಯಾಯ ದೃಷ್ಟಿಯೆಂಥಾದ್ದು?' ಎಂಬ ವಿಚಾರಗಳನ್ನು ಅವರು ಇದರಲ್ಲಿ ಪ್ರತಿಬಿಂಬಿಸಲು ಯತ್ನಿಸಿದ್ದಾರೆ.

ದೇಶೀಯ ದೊರೆ:
ಹಾಯ್, ಹಾಯ್ ದಿಟ, ಕೋಡಂಗಿ
ನಮಗಿವರಿತ್ತೀ ದೊರೆತನದಂಗಿ
ನಿನ್ನೀ ಕತೆಯಂಗಿ
ಈ ಬಯಲಂಗಿಯ ಮೆರೆಸುತ ನಿತ್ಯ
ಲೋಕದ ನಗೆಪಾಡಾದೆವು ಸತ್ಯ.
ರಾಜಿಯೊಳಿದೆ ನಮ್ಮುಳಿಕೆ
ಎಂದಲ್ಲವೆ ನಿಮ್ಮರಿಕೆ?
ಇದುವೇ ನಮ್ಮಭಿಮತವೈ
ನಿನ್ನದೇನು ಸಲಹೆ ವಿಕಟ?
ಎಲ್ಲಕು ಕೈಹಾಕುವುದೇ ರೂಢಿ
ಸಾಕಾದೆವು ಸೋಬಾನೆಯ ಹಾಡಿ
ರೆಸಿಡೆಂಟ್ ರೆಸಿಡೆಂಟ್ ರೆಸಿಡೆಂಟ್!

ಮಾತೆ ನಡೆಯದಿರೆ ಎಂಥ ಪ್ರಭು?
ಸಮ್ಮತಿಯೊಳು– ಶಾಸನದಿಂದಲ್ಲ
ಇನ್ನಾಳಿಕೆ ತಿಳಿಯಿರಿ ನೀವೆಲ್ಲ
ಸಾಮ್ರಾಜ್ಯದ ಗರ್ಭದ ಹೊರಬಂದು
ನಾವೆಲ್ಲರು ದ್ವಿಜರಾದೆವು ಇಂದು
ಇನ್ನೆಲ್ಲಿಯದಂತ್ಯಜ ದ್ವಿಜಭೇದ?
ಈ ತರುಣರು ಗುರ್ರೆನದವರಾರು?
ಆದೊಡೆ ನಾಯಕರೇ, ನೀವುಂಟು ಇವರುಂಟು.
ನಾವೂ ರಾಜ್ಯವ ಬಿಡುತಿಹೆವೀಗ
ವಿಕಟ ಕವಿ : ರಾಮಚಂದ್ರನಿಗು ಮಿಗಿಲೀ ತ್ಯಾಗ
ರೆಸಿಡೆಂಟ್ : ಪ್ರಭು, ಏನಿದರ ರಹಸ್ಯ?
ದೊರೆ : ಭಾರತ ಪ್ರಾಂತ ಪ್ರಮುಖನ ಪದವಿ
ಬಂದಿದೆ ಮಿತ್ರರೆ ನಮಗೊದವಿ.
ನನ್ನಾರಿಕೆ ಎಂತಾಯಿತೊ ಕಾಣೆ
ಆರು ಹಾಡಿದರೊ ಈ ಸೋಬಾನೆ.
ಇದರ ಗುಟ್ಟನೀ ವಿಕಟನು ಬಲ್ಲ
ಆದೊಡೀತ ಬಾಯನೆ ಬಿಡಲೊಲ್ಲ
ಡಿಲ್ಲಿಗೆ ಜೊತೆಯೊಳು ಬಂದ
ನಮಗುಚ್ಚಾಟನೆ ತಂದ
ರೆಸಿಡೆಂಟ್ : ಧನ್ಯವಾದವರ್ಪಿಸುವೆನು ದೊರೆಯೇ

ಯುದ್ಧವಿಲ್ಲದ ಸ್ವಾತಂತ್ರ್ಯಾಂದೋಲನವು ಯಶಸ್ವಿಯಾಗಿ ಮುಕ್ತಾಯಗೊಂಡದ್ದು ಇಲ್ಲಿಯ ಕೊನೆಯ ಚಿತ್ರ ರಾಜಕೀಯ ಹೊಂಚು–ಸಂಚುಗಳು, ಅನುಕೂಲ–ಪ್ರತಿಕೂಲ ಸಂದರ್ಭಗಳ ತುಲನೆ, ಕಾಲಾನುಗುಣವಾದ ಅಧಿಕಾರ ತ್ಯಾಗ ನಿರ್ಧಾರ ಮುಂತಾದ ಸಂಗತಿಗಳು ಅದಕ್ಕೆ ಹಿನ್ನೆಲೆ. ಭಾರತಕ್ಕೆ ಸ್ವಾತಂತ್ರ್ಯ ಬಂದ ೧೯೪೭ನೇ ಅಗಸ್ಟಿನಲ್ಲೇ ಮೈಸೂರಿನಲ್ಲೂ ಪ್ರಜಾಪ್ರಭುತ್ವ ಪ್ರಾರಂಭವಾಯಿತೆಂಬುದಿಲ್ಲಿ ಕವಿ ಕಲ್ಪನೆ. ಬ್ರಿಟಿಷ್ ಪ್ರತಿನಿಧಿಯಾದ ರೆಸಿಡೆಂಟಿನ ಕಾಲಾನುಗುಣ ಧೋರಣೆ ಅದೇ ರೂಪದ ರಾಜಧೋರಣೆಗೆ ಸರಿಸಮವಾಗಿದೆ. ಕಾಲಕ್ಕೆ ತಕ್ಕ ಹಾಗೆ ಹೊಂದಿಕೊಂಡು ಹೋಗುವ ಅವರ ವಿವೇಕವು ವಿಕಟಕವಿಗೆ ಮಾನ್ಯ. ಸನಾತನಿಗಳ ಪ್ರತಿನಿಧಿಗಳಾದ ಪಂಡಿತರೊಬ್ಬರಿಗೆ ಜಾತ್ಯಾತೀತ ಪ್ರಜಾಪ್ರಭುತ್ವ ಬಂದದ್ದು ಅಸಂತೋಷಕ್ಕೆ ಕಾರಣವಾಯಿತು. ಅವರು ಬ್ರಿಟಿಷರ ಕಾಲದ ಧರ್ಮ ಸ್ವಾತಂತ್ರ್ಯವನ್ನೇ ಕೊಂಡಾಡಿದರು! ಜನತಾ ಚಳುವಳಿಯ ನಾಯಕರ ಸೇವೆ–ತ್ಯಾಗ–ಧೈರ್ಯ–ಸಾಹಸಗಳಿಗೆ ತಕ್ಕ ಫಲ ದೊರಕಿದ್ದು ಅವರಿಗೆ ಸಂತೋಷಕೊಡದೆ

ಉಳಿದೀತೆ? ಅಂತೂ ಇದೊಂದು ಮಂಗಲಾಂತ ನಾಟಕ.

'ಬಾಹ್ಯ ಪ್ರಕೃತಿಯ ನೈಷ್ಠುರ್ಯವನ್ನು ಆದಷ್ಟು ಕಡಿಮೆ ಮಾಡಿ ಅದನ್ನು ನನ್ನ ಒಳಗಿಗೆ ಹೊಂದಿಸಿಕೊಳ್ಳಬೇಕೆಂದು ಈ ನಾಟಕದ ದೊರೆಯನ್ನು ಸೃಷ್ಟಿಸಿದೆ. ನನ್ನ ಆತ್ಮ ತನ್ನ ಆಕ್ರಂದನವನ್ನು ಹತೋಟಿಗೆ ತಂದುಕೊಂಡು ಹೊರಗಿನ ಪರಿಸ್ಥಿತಿಗೆ ಅಭಿಮುಖವಾಗಿ ನಿಲ್ಲುವ ದಾರ್ಢ್ಯವನ್ನ ಪಡೆಯಲು ವಿಕಟ ಕವಿಯನ್ನು ರೂಪಿಸಿದೆ. ಧ್ಯೇಯದ ಉದ್ದೀಪ್ತಿಗಾಗಿ ಗಾಂಧೀಜಿಯಂತಹ ಜನನಾಯಕನೊಬ್ಬನನ್ನು ಈ ಕೃತಕಪ್ರಪಂಚಕ್ಕೆ ತಂದೆ. ಹೀಗೆ ಈ ಧ್ಯೇಯದ ಅವಕಾಶದಲ್ಲಿ ಈ ದೊರೆ ಮತ್ತು ಈ ವಿಕಟಕವಿಯ ನಡುವೆ, ಕಲಾಸ್ವಪ್ನದ ಮೆರುಗನ್ನು ಹೊಂದಿ, ಭಾರತದಲ್ಲಿ ನಡೆದ ಸ್ವಾತಂತ್ರ್ಯ ಸಮಾರಂಭದ ವಿಪ್ಲವ ಒಂದು ದೇಶೀಯ ಸಂಸ್ಥಾನದಲ್ಲಿ ಹೇಗೆ ತೆರೆಯಿಟ್ಟಿತು ಎಂಬ ಇತಿಹಾಸ ಈ ನಾಟಕದಲ್ಲಿ ಹಾದು ಹೋಗಿದೆ ಎಂದಿದ್ದಾರೆ ಶ್ರೀ ನರಸಿಂಹಾಚಾರ್ಯರು. ಸ್ವಾತಂತ್ರ್ಯ ಪ್ರೇಮ, ದೇಶಭಕ್ತಿ, ತ್ಯಾಗಬುದ್ಧಿ ಮುಂತಾದ ಸುಗುಣಗಳ ಪ್ರತ್ಯಕ್ಷವಾಗುತ್ತದೆ ಈ ನಾಟಕದಲ್ಲಿ. ಇಲ್ಲಿ ಕಾಣುವ ಸುಗುಣಗಳು ಸ್ವಾತಂತ್ರ್ಯೋತ್ತರದ ಭಾರತದಲ್ಲಿ ಆಳಿಕೆ ನಡೆಸುವ ಮುಂದಾಳುತನದಲ್ಲೂ ಮುಂಬರಿದು ಸಾಗುವುದು ಎಲ್ಲರೂ ಆಶಿಸುವ ಅಂಶ. ಈ ಆಶೆಯ ಪೂರಯಿಕೆ ಆಗಬೇಕಾದಷ್ಟು ತೀವ್ರಗತಿಯಿಂದ ಆಗದಿರುವುದನ್ನು ಕುರಿತು ಗ್ರಂಥ ಕರ್ತರು–

'ನಮ್ಮ ದೇಶವಾತ್ಸಲ್ಯವೇ ಈಗಿನ ನಮ್ಮ ಅಸಂತುಷ್ಟಿಗೂ ಕಾರಣವೆಂದು ನಾನು ಭಾವಿಸುತ್ತೇನೆ. ಈ ನಾಡಿನ ಮಕ್ಕಳಲ್ಲಿ ಅಸಹನೆ, ಅನೌದಾರ್ಯ, ಅಸೌಂದರ್ಯ ಇತ್ಯಾದಿ ದುರ್ಗುಣಗಳು ತಲೆಯೆತ್ತಿ ತೋರಿದರೆ ಸುಜನರು ಪರಿತಪಿಸುವುದು ಸಹಜ. ಸ್ವಜನವೆಂಬ ಪರಿಗಣನೆಯಿಂದಲ್ಲವೆ ಈ ದುಃಖ?... ಅಸಮೃದ್ಧಿಯೇ ಈ ದುರ್ಗುಣಗಳ ಮೂಲ.' ಎಂದೂ ಉದ್ಗರಿಸಿದ್ದಾರೆ. ರಾಷ್ಟ್ರೀಯ ದುರ್ಗುಣಗಳಿಗೆ ಮೂಲವಾದ ಅಸಮೃದ್ಧಿ ಮಾನಸಿಕವಾದುದು. ಸಮೃದ್ಧ ಮನಸ್ಕರಾದ ಶಾಸಕರ, ಆಡಳಿತಗಾರರ, ಶಿಕ್ಷಕರ, ನಾಯಕರ, ಮಾರ್ಗದರ್ಶಕರ, ಸೇವಾ ಧುರೀಣರ ಕೊರತೆಯೇ ಬಡತನ ಭಾರತದಿಂದ ಇನ್ನೂ ಹೊರಟು ಹೋಗದಿರಲು ಕಾರಣ. ದುಃಶಾಸನರ ಸಂಪತ್ತು ಸಮೃದ್ಧವಾಗುವುದು ಸುಜನರ ಬಡತನಕ್ಕೆ ಸಂಪತ್ತಿನ, ಶಾಂತಿಯ ಅಸಮಾಧಾನ, ಹಿಂಸೆ, ಶೋಷಣೆ, ಪಂಕ್ತಿಭೇದ ಮುಂತಾದವಕ್ಕೆ ಗುರಿ ಪಡಿಸುವುದು ರಾಷ್ಟ್ರೀಯ ದುರ್ಗುಣ. ಪ್ರಜಾಪ್ರತಿನಿಧಿಗಳು ಸತ್ಪ್ರಜೆಗಳ ನಿರೀಕ್ಷೆಯಂತೆ ನಡೆದುಕೊಳ್ಳಲು ಅಸಮರ್ಥರಾದುದೇ ಕೆಲ ಡಿಗ್ರಿಯ ಅಸಂತುಷ್ಟಿ ನಮ್ಮೆಲ್ಲರಲ್ಲಿ ಉಳಿಯಲು ಬೀಜವಾಯಿತು. ನಾವು ನಮ್ಮ ನಿರೀಕ್ಷೆಯಂತೆ ನಡೆದುಕೊಳ್ಳಬಲ್ಲ ಸಮರ್ಥ ನಾಯಕರನ್ನೇ ಪ್ರತಿನಿಧಿಗಳನ್ನಾಗಿ ಆರಿಸುವ ಸದಭ್ಯಾಸವನ್ನು ರೂಢಿಸಿಕೊಳ್ಳುವುದೊಂದೇ ಅದಕ್ಕೆ ಮದ್ದಲ್ಲವೇ? ಅದೇ ನಮಗಿಂದು ಬೇಕಾದ ಪ್ರಜಾಪ್ರಭುತ್ವ ಪದ್ಧತಿಯ ಶಿಕ್ಷಣ. ಪ್ರಸ್ತುತ ನಾಟಕದಲ್ಲಿ ಜನನಾಯಕರು ತೋರುವ ಗುಣಗಳು ನಮಗಾದರ್ಶ; ಇಲ್ಲಿಯ ದೊರೆಯ ತ್ಯಾಗವು ಉಳ್ಳವರು ಇಲ್ಲದವರಿಗಾಗಿ ಮಾಡಬೇಕಾದ ಕಾರ್ಯದ ಮಾದರಿ. ಕಾರ್ಯ ಕಾಲದಲ್ಲಿದ್ದ ಮೇಲೆ ಅದೇ ಪ್ರಮಾಣದಲ್ಲಿ ಉಳಿಯದುದೇ ನಮ್ಮ ದುಃಖಕ್ಕೆ ಕಾರಣ. ಆಗಿದ್ದ ನಮ್ಮ ಸಹಜೀವನದ ಸೋದರಭಾವ ಈಗ ಮಂಕಾಗಿದೆ, ಮಸುಕಾಗಿದೆ,

ಮಸುಳಿಸಿದೆ. ಈ ಅರಿವು ನಮಗಾಗಬೇಕು ಈ ನಾಟಕವೋದಿ! Brotherhood is the tie of Faith that can withstand the storms that would wreck the world- ಪ್ರಪಂಚವನ್ನೇ ಉಧ್ವಸ್ತಗೊಳಿಸುವಂಥ ಬಿರುಗಾಳಿಯನ್ನೂ ಸಹಿಸಿಕೊಳ್ಳಲು ಸಮರ್ಥವಾದ ಶ್ರದ್ಧಾಬಂಧನನ್ನು ಸೌಂದರ್ಯ, ಭ್ರಾತೃಭಾವ ಎನ್ನಲಾಗುತ್ತದೆ. ಅಂಥ ಪರಸ್ಪರ ವಿಶ್ವಾಸ ಬೆಳೆಯುವವರೆಗೆ ನಾವು ಗೌರವಾರ್ಹರೂ, ಸಂಯುಕ್ತರೂ, ಸಂಸ್ಕೃತರೂ, ಸಂಘಟಿತರೂ, ಸಮರ್ಥರೂ ನಿಜವಾದ ಸ್ವತಂತ್ರ ಪ್ರಜೆಗಳೂ ಆಗಲಾರೆವು. 'ಸರ್ವೇ ಜನಾಃ ಸುಖಿನೋ ಭವಂತು' ಎಂಬ ನಮ್ಮ ಸಂಸ್ಕೃತಿಗೆ ಅದೇ ಆದಿ ಬುನಾದಿ. ಸಮತೆ ಹಾಗೂ ಸ್ವಾತಂತ್ರ್ಯ ಎಂಬ ಮೌಲ್ಯಗಳ ಅರ್ಥ ಅದರಿಂದಲೇ ಸ್ಪಷ್ಟವಾಗಬಲ್ಲದು. ಭ್ರಾತೃಭಾವನೆಯಿಲ್ಲದಲ್ಲಿ ಸಮತೆ ಸ್ವಾತಂತ್ರ್ಯಗಳಿಗೆ ಅರ್ಥವಿಲ್ಲ; ನಮ್ಮ ರಾಷ್ಟ್ರೀಯತೆಯೇ ಅರ್ಥಹೀನವಾದೀತು! ಶಾಂತಿ–ಪುಷ್ಟಿ–ತುಷ್ಟಿಗಳೆಲ್ಲಾ ಆಗ ಒಣ ಶಬ್ದಗಳಾದಾವು! ಸಾಮರಸ್ಯವನ್ನಾಧರಿಸಿದ ಸೌಂದರ್ಯಕ್ಕಂತೂ ಅಲ್ಲಿ ಸ್ಥಳವೇ ಇಲ್ಲ!!



# ೭.

# ಹೆಣ್ಣೋ ಹಣ ಹಡೆವ ಯಂತ್ರವೋ?

ನಮ್ಮ ರಾಷ್ಟ್ರೀಯ, ಸಾಮಾಜಿಕ, ಆರ್ಥಿಕ ಸಮಸ್ಯೆಗಳೆಲ್ಲವಕ್ಕೂ ಪರಿಹಾರವಿರುವುದು ಸೌದರ್ಯದ ಸೌಂದರ್ಯದಲ್ಲಿ. ಜಾತಿ, ಲಿಂಗ, ಕುಲ, ಬಲ, ವಿದ್ಯೆ, ಸಂಸ್ಕಾರ, ಅಭಿರುಚಿ, ಅಭಿಪ್ರಾಯಗಳಲ್ಲಿ ಇರುವ ಭೇದಗಳಿಂದ ಉದ್ಭವಿಸುವ ಸರ್ವ ಪ್ರಕರಣದಲ್ಲೂ ನ್ಯಾಯ ಕೊಡಬೇಕಾದರೆ ಹಾಗೂ ತೆಗೆದುಕೊಳ್ಳಬೇಕಾದರೆ ಈ ಕೊಡುವ ಹಾಗೂ ಕೊಳ್ಳುವ ಪಕ್ಷೀಯರ ನಡುವೆ ಸಹೋದರ ಪ್ರೀತಿ ನೆಲೆಸಿರುವುದು ಅನಿವಾರ್ಯ. Comradeship is our refuge from despair- ನಿರಾಶೆಯಿಂದ ನಾವು ಸುರಕ್ಷಿತರಾಗಿ ಬದುಕಬೇಕಾದರೆ ಈ ಬಂಧುಭಾವದ ವಟವೃಕ್ಷದ ಆಶ್ರಯ ನಮಗಿರುವಂತೆ ನೋಡಿಕೊಳ್ಳಬೇಕು. ಈ ಭಾವದ ಅಭಾವದ ದೆಸೆಯಿಂದ ಶ್ರೀ ಕೆ. ಗುಂಡಣ್ಣ ಬರೆದ 'ಕಣ್ಣಿಗೆ ಮಣ್ಣು' ಎಂಬ ನಾಟಕದಲ್ಲಿ ರಾಂಪುರದ ಜೋಡಿದಾರ ರಾಮಣ್ಣ ಮತ್ತು ಲಕ್ಷಾಧಿಪತಿಯಾದ ಬ್ಯಾರಿಸ್ಟರ್ ಭೀಮರಾಯರು ಹಣ-ಹೆಣ್ಣುಗಳ ವಿಷಯದಲ್ಲಿ ಅನುಚಿತ ವ್ಯವಹಾರ ನಡೆಸಿ ಕಷ್ಟ ಪರಂಪರೆಗೀಡಾಗುತ್ತಾರೆ.

ಜೋಡಿದಾರ ರಾಮಣ್ಣ ಜಿಂರವನು. ಹಣ ಸಿಗುವುದಾದರೆ ಯಾರಿಗೆ ಬೇಕಾದರೂ ಮಗಳನ್ನು ಮದುವೆ ಮಾಡಿಕೊಡಲು ಆತ ಸಿದ್ಧ. ಅವಳಲ್ಲಿ ನಿಜವಾದ ಪ್ರಬುದ್ಧ ಪ್ರೀತಿ ಅವನಿಗಿರದುದರಿಂದಲೇ ಅವನು ಅವಳ ಪಾಲಿಗೆ (ಮದುವೆಗೆ ನೆರೆದಾಗ) ತಂದೆಯಾಗದೆ ವ್ಯಾಪಾರಿಯಾಗುತ್ತಾನೆ. ಶಿಶಿನ್ನು ಮುಟ್ಟಿದ ಬ್ಯಾರಿಸ್ಟರ್ ಭೀಮರಾಯನಿಗೆ ಅವಳನ್ನು ಮದುವೆ ಮಾಡಲು ಬಲಾತ್ಕಾರದಿಂದ ಒಪ್ಪಿಸುತ್ತಾನೆ. ಭೀಮರಾಯನಿಗೆ ಐಶ್ವರ್ಯದ ಅಮಲಿನಲ್ಲಿ ತನಗೆ ಮದುವೆ ಅಗತ್ಯವೋ ಅಲ್ಲವೋ ಎಂಬುದನ್ನು ಚೆನ್ನಾಗಿ ಚಿಂತಿಸದೆ ಮದುವೆ ಮಾಡಿಕೊಳ್ಳಲು ಮುಂದೆ ಬರುತ್ತಾನೆ. ಹುಡುಗಿಯ ಸುಖ-ದುಃಖ, ಆಶೆ-ಆಕಾಂಕ್ಷೆಗಳನ್ನು ಗೌರವಿಸದ ಈ ಹಳಬರಿಬ್ಬರ ವರ್ತನೆ ಅತ್ಯಂತ ಅಸಾಮಾಜಿಕ. 'ಆಜ್ಞಾಗುರೂಣಾಂಹ್ಯವಿಚಾರಣೀಯಾ' ಎಂಬ ಜೋಹುಕುಂ ಬುದ್ಧಿಯನ್ನು ಆಶ್ರಿತರಿಗೆ ಧರ್ಮವೆಂದು ಹೇಳಿದ ಸನಾತನತೆ ಇಂದೂ ನಮಗೆ ಸಲ್ಲದು. ಅದು ಸೈನಿಕರಿಗಷ್ಟೇ ಧರ್ಮ-ಅದೂ ಅವರು ಸೈನಿಕರಾಗಿರುವವರೆಗೆ.

ಆದುದರಿಂದ ರಾಮಣ್ಣನ ಮಗ ಬಾಳು ಅವನ ಗೆಳೆಯ ವಿಶ್ವನಾಥ ಮತ್ತು ಭೀಮರಾಯನ ಮಗಳು ವಿಮಲೆ ಏಕಮತದಿಂದ ರಾಮಣ್ಣನ ಮಗಳಾದ ಕಮಲೆಗೆ

ಉಂಟಾದ ಸಂಕಟವನ್ನು ನಿವಾರಿಸಲು ನಿರ್ಧರಿಸುತ್ತಾರೆ. ವಿಶ್ವನಾಥನ ನಟನಾಕೌಶಲ್ಯದ ಮೂಲಕ ಅವರ ಉಪಾಯ ಫಲಿಸುತ್ತದೆ. ಬಾಳು–ವಿಮಲು, ವಿಶ್ವನಾಥ–ಕಮಲು ದಂಪತಿಗಳಾಗುತ್ತಾರೆ. ನಾಟಕಾಂತ್ಯದಲ್ಲಿ.

ಪರಾಭಿರುಚಿಯಂತೆ ನಡೆದುಕೊಳ್ಳುವುದಕ್ಕೆ ದಾಕ್ಷಿಣ್ಯವೆನ್ನುತ್ತಾರೆ. ದಾಕ್ಷಿಣ್ಯ ಪರಸ್ಪರವಾಗಿದ್ದಲ್ಲಿ ಮಾತ್ರ ಪ್ರೀತಿ ಸ್ಥಿರವಾಗಿರಲು ಸಾಧ್ಯ. ದಾಕ್ಷಿಣ್ಯವಿಲ್ಲದಲ್ಲಿ ಭಾರತೀಯತ್ವಕ್ಕೆ ಅರ್ಥವಿಲ್ಲ–ಕುಟುಂಬ ಶಬ್ದಕ್ಕೆ ಅರ್ಥವಿಲ್ಲ! ಅಯೋಗ್ಯರಲ್ಲಿ ಮಾತ್ರ ದಾಕ್ಷಿಣ್ಯ ಅಪಾಯಕರ. ಭಾರತವು ಹಿಂದೆ ಧರ್ಮಯುದ್ಧಕ್ಕೆ ಹೆಸರಾಗಿತ್ತು. ಅಭಾರತೀಯರೊಡನೆಯೂ ಧರ್ಮಯುದ್ಧ ಮಾಡಹೋಗಿ ಅದು ಹಾನಿಗೀಡಾಯಿತು. ಆದರೆ ಈಗ ಭಾರತೀಯರಲ್ಲೇ ಧರ್ಮಯುದ್ಧದ ನೀತಿಯನ್ನು ಅನುಸರಿಸದೆ ದೇಶ ಚರಿತ್ರಹೀನವಾಗುವತ್ತ ಹೊರಟಿದೆ. ಸ್ವಜನರೆಂಬ ಭಾವನೆಯಿಲ್ಲದ ಪ್ರಜೆಗಳಿರುವ ರಾಷ್ಟ್ರ ರಾಷ್ಟ್ರವೇ ಅಲ್ಲ ಎಂಬ ಕಠೋರ ಅಭಿಪ್ರಾಯ ಭೇದವಿದ್ದಾಗಲೂ ನಾವೆಲ್ಲರೂ ಭಾರತೀಯರು ಎಂಬುದನ್ನು ಮರೆಯದಿರುವ ಮನಃಶಕ್ತಿ ರೂಢವಾದಾಗ ಮಾತ್ರ ಭಾರತದ ಐಕ್ಯ ಸಾರ್ಥಕವಾಗಿ ಉಳಿದೀತು. ರಾಜಕೀಯ, ಲೈಂಗಿಕ, ಧಾರ್ಮಿಕ, ಜಾತೀಯ, ಪ್ರಾದೇಶಿಕ, ಭಾಷಾತ್ಮಕ ಪಕ್ಷಪಾತಗಳು ನಡೆಯದಿರಬೇಕಾದರೆ ಈ ಧರ್ಮಯುದ್ಧದ ನೀತಿ ನಮ್ಮಲ್ಲಿ ಪುನಃ ಉದಯಿಸಬೇಕು. ಅತಿಪುರಸ್ಕಾರ, ಅತಿ ತಿರಸ್ಕಾರಗಳು ಯಾವ ವ್ಯಕ್ತಿ–ವಸ್ತು–ತತ್ವಗಳ ವಿಷಯವಾಗಿಯೂ ತರವಲ್ಲ. ಈ ತಾತ್ವಿಕ ಸಮಬುದ್ಧಿಯು ಪರಿಪಕ್ವ ಭಾರತೀಯಮನದ ಲಕ್ಷಣ. ಶುನಿಚೈವಶ್ವಪಾಕೇಚ ಪಂಡಿತಾಃ ಸಮದರ್ಶಿನಃ' ಎಂಬಲ್ಲಿ ಹೇಳಿದ ಸಮದೃಷ್ಟಿಯೆಂದರೆ ಹದವರಿತ ದೃಷ್ಟಿ, ಉಚಿತದೃಷ್ಟಿ ಎಂದರ್ಥ. ಭಾರತೀಯ ಧರ್ಮವುಳ್ಳ ಪ್ರತಿಯೊಂದು ವ್ಯಕ್ತಿಯೂ ಮಾನುಷ ಮಟ್ಟದಲ್ಲಿ ಸಮಾನ ಸ್ವಾತಂತ್ರ್ಯ, ಸಮಾನಗೌರವ, ಸಮಾನ ಅಧಿಕಾರ ಇರುವಂಥದು ಎಂಬ ಶ್ರದ್ಧೆಯು ಕುಟುಂಬದಲ್ಲಿಯೂ ರಾಜ್ಯದಲ್ಲಿಯೂ ದೇಶದಲ್ಲಿಯೂ ನಮಗಿಂದು ಅತ್ಯಗತ್ಯವಾಗಿದೆ. ಆಂತರಿಕ ಶಾಂತಿ–ಸುಖಗಳಿಗೆ ಅದೇ ಮೂಲಾಧಾರ. ಪ್ರಕೃತ ನಾಟಕದಲ್ಲಿ ಯಜಮಾನ ರಾಮಣ್ಣನೂ ಸಿರಿವಂತ ಭೀಮರಾಯನೂ ತಮಗೆ ಆಶ್ರಿತರ ಜೀವನದಲ್ಲಿ ಮನಬಂದಹಾಗೆ ವರ್ತಿಸುವ ಅಧಿಕಾರವಿದೆ; ಆಶ್ರಿತರೆಲ್ಲರೂ ದಾಸರು, ಗುಲಾಮರು, ಮನುಷ್ಯ ಗೌರವಕ್ಕನರ್ಹರು' ಎಂದು ಭಾವಿಸಿದ ಮೂರ್ಖರು. ವಿಶಾಲ ದೃಷ್ಟಿಯಲ್ಲಿ ಭಾರತೀಯರೆಲ್ಲರೂ ಪರಸ್ಪರ ಆಶ್ರೀತರೇ, ಪರಸ್ಪರಾವಲಂಬಿಗಳೇ! ಪರಸ್ಪರಾವಲಂಬನವಿಲ್ಲದ ಜನಸ್ತೋಮವನ್ನು ಸಮಾಜವೆನ್ನಲು ಬರದು, ರಾಷ್ಟ್ರವೆನ್ನಲೂ ಬರಲಾರದು. ಸರ್ವ ದೇಶ–ಕಾಲ–ಸಂದರ್ಭಗಳಲ್ಲೂ ಮನಬಂದಂತೆ ವರ್ತಿಸುವ ಸಾಮರ್ಥ್ಯ ಯಾರಿಗೂ ಇಲ್ಲವೆಂಬುದನ್ನು ಮರೆತು ಸರ್ವಾಧಿಕಾರಿಯಂತೆ ಆಗ್ರಹಿಯಾಗಿ ವರ್ತಿಸುವ ವ್ಯಕ್ತಿಗೆ ಒಂದಲ್ಲ ಒಂದು ಸಂದರ್ಭದಲ್ಲಿ ಸಮಾಜವು ತಕ್ಕ ಪ್ರಾಯಶ್ಚಿತ್ತವನ್ನು ಕೊಡಿಸಿಯೇ ತೀರುವುದು. ಮನುಷ್ಯನು ದೇವನೂ ಆಗಬಲ್ಲ. ಪಿಶಾಚನೂ ಆಗಬಲ್ಲ! ಈ ಎರಡು ಶಕ್ತಿಗಳೂ ಎಲ್ಲರಿಗೂ ಜನ್ಮದತ್ತ! ಆದುದರಿಂದ ಮಿತಿ ಮೀರುವ ಮೊದಲೇ ಬುದ್ಧಿಗಲಿತ ರಾಮಣ್ಣ–ಭೀಮರಾಯರಂತೆ (ಕಾಲಾಂತರದಲ್ಲಾದರೂ) ತಿಳಿಸಿ ಹೇಳಿದಾಗಲಾದರೂ

ತಿದ್ದಿಕೊಂಬ ಸಂಸ್ಕಾರ ಸಂಪನ್ನತೆ ನಮ್ಮಲ್ಲಿ ಉದಯವಾಗಲಿ. ಪಕ್ಷಾಭಿಮಾನ, ಜಾತ್ಯಾಭಿಮಾನ, ಲಿಂಗಾಭಿಮಾನ, ಧರ್ಮಾಭಿಮಾನ, ಪದವ್ಯಭಿಮಾನ ಸಿದ್ಧಾಂತಾಭಿಮಾನ, ಅಧಿಕಾರಾಭಿಮಾನ, ಧನಾಭಿಮಾನ, ಯಶೋಭಿಮಾನಗಳು ಪರಸ್ಪರರಲ್ಲಿ ಸಮಾನಗೌರವಾರ್ಹ ಎಂಬುದು ನಮ್ಮ ಸ್ಥಾಯಿಭಾವವಾಗಲಿ! ಈ ಎಲ್ಲ ಅಭಿಮಾನಗಳ ಘರ್ಷಣಕ್ಕೂ ಭಾರತಾಭಿಮಾನವೇ ಮದ್ದು! ದೇಶಧರ್ಮವೇ ನಮಗೆ ಸ್ವಧರ್ಮ, ದೇಶಾಭಿಮಾನವೇ ನಮಗೆ ಸ್ವಾಭಿಮಾನ, ದೇಶವೇ ನಮ್ಮ ದೇವರು. ಈ ತತ್ವವನ್ನು ಮನ್ನಣೆ ಮಾಡಿದ ಮೇಲೆ, ದೇಶದ ಎಲ್ಲ ಪ್ರಜೆಗಳೂ ಸಮಾನಗೌರವ–ಹಕ್ಕುಗಳುಳ್ಳ ಮನುಷ್ಯರು; ಕಾರ್ಯದ ದೆಸೆಯಿಂದ ಕಾರ್ಯಕಾಲದಲ್ಲಿ ಮಾತ್ರ ವ್ಯಕ್ತಿಗಳ ಅಧಿಕಾರ ಕೆಲ ಡಿಗ್ರಿ ಉಚ್ಚ ಅಥವಾ ನೀಚವಾಗಬಹುದು–ಅದೂ ವ್ಯವಹಾರ ಸೌಲಭ್ಯಕ್ಕಾಗಿ ಎಂಬ ಸ್ಥಾಯಿ ಸಮತೆ, ಯೋಗ (ಭಾವಾದ್ವೈತ) ಸುಲಭ ಸಾಧ್ಯ.



# ೮.

# ಬುದ್ಧ ಬೇಕೋ ಬೊದ್ದ ಬೇಕೋ?

ನಮ್ಮ ನವರಾಷ್ಟ್ರ ಸ್ಫೂರ್ತಿ ಸಂಕೇತವಿರುವುದು ಅಶೋಕ ಚಕ್ರದಲ್ಲಿ. ಶೋಕರಹಿತರಾಗಲು ಬುದ್ಧನ ಪ್ರಬುದ್ಧವಾದ ಯೋಗವನ್ನು ಹಿಡಿಯಬೇಕು. ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು ಬರೆದ 'ಯಶೋಧರಾ' ಎಂಬ ನಾಟಕ ಈ ಸಂದೇಶ ಕೊಡುತ್ತದೆ. ಪ್ರಾಚೀನ ಭಾರತದ ಪ್ರಬುದ್ಧ ಜೀವನದ ಸಂಕೇತವೇ ಬುದ್ಧ, ಸಿದ್ಧಾರ್ಥ. ಅದಕ್ಕಾಗಿ ಹಂಬಲಿಸುವ ನಾವಿಂದು ಯಶೋಧರೆಯರು, ರಾಹುಲನನ್ನೆದುರಿಟ್ಟುಕೊಂಡು ಬುದ್ಧನಿಲ್ಲದುದಕ್ಕಾಗಿ ಯಶೋಧರೆ ಹೀಗೆ ಪರಿತಪಿಸುತ್ತಾಳೆ.

ಬಾಲಕನ ನೋಡಿ ತಣಿಯದೆ ಮನದಿ ತಪಿಸುವೆನು
ನನ್ನೆರೆಯನಾ ರೂಪು ನನ್ನೆರೆಯನಾ ನೋಟ
ನನ್ನ ಮನದಾಣ್ಮನಾ ನಡೆ ಎಲ್ಲ ಇಲ್ಲಿಹವು
ಇವನ ಹಿಡಿದಿರುವಂದು ಅವನಿಲ್ಲದುದ ನೆನೆದು
ನೋಯುವೆನು ಬೇಯುವೆನು; ಅವನಿದ್ದ ಕಾಲದಲಿ
ಚೆನ್ನಾಗಿ ನೋಡದಿದ್ದೆನೆ ಎಂದು ದುಃಖಿಪೆನು
ಬಾಲಕನ ನೋಡಿದೊಡೆ ತಣಿಯದಿರುವ ಬಗೆ ನನಗೆ
ಇಲ್ಲವಾಯಿತು ಅಂಬಿಕೆ.
ಆಣ್ಮ ನನ್ನನು ಬಿಟ್ಟು ಹೊರಟು ಹೋದುದು ತಿಳಿದ
ಕ್ಷಣದಲ್ಲಿ ನನ್ನ ಮನದಲಿ ಹುಟ್ಟಿದಾ ಬೇನೆ
ಕಾವು ನೋವುಗಳು ಮನೆಯನು ಮೊದಲು ತುಂಬಿದವು;
ತುಂಬಿದುವು ನಗರವನು, ಉಪವನೋದ್ಯಾನವನು
ತುಂಬಿದವು ಸಾಗರದ ಕೂಸವನು; ಆಗಸದ
ಆಳವರಿಯದ ಅಂತರಾಳವನು ತುಂಬಿದುವು;
ಸೂರ್ಯಮಂಡಲದಿಂದ ಹೊರಹೊಮ್ಮಿ ಬರುತಿರುವ
ಹೊನ್ನ ಕಿರಣದ ನಡುವೆ ಉಕ್ಕಾಗಿ ಸೇರಿದುವು;
ಲೋಕಕೇ ಶಾಂತಿಯನು ತರುವ ಚಂದ್ರನ ಕಾಂತಿ
ನನ್ನೊಳಗೆ ಬೆಳಗದವೊಲೆನ್ನ ಹೃದಯದ ಮಧ್ಯೆ

ಕತ್ತಲೆಯ ಕೋಟೆಯನು ಕಟ್ಟಿದವು. ಇಷ್ಟು ದಿನ
ಇಂತು ನನ್ನನು ಕವಿದ ದುಃಖ ನಿನ್ನೆಯ ಇರುಳು
ಮರಳಿ ಮಸಗಿತು, ನನ್ನ ಆತ್ಮವನು ಮುಳುಗಿಸಿತು

ಭಾರತಮಾತೆಯ ಕತೆ ಹೀಗೆ ಆಗಿರಬೇಕೆಂದು ತೋರುತ್ತದೆ ಇಂದು. ಅವಳೆದೆಗಿನ್ನು ಅಶೋಕ ಸಂದೇಶ ಮುಟ್ಟಿಲ್ಲ. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ನಮ್ಮ ಬಾಳು ಗಜಿಬಿಜಿಯಾಗಿಯೇ ಸಾಗಿದೆ. ಇನ್ನೂ ಸುವ್ಯವಸ್ಥಿತ ದೆಶೆಯನ್ನು ಸಾಧಿಸಲಾಗಲಿಲ್ಲ. ನಮ್ಮೆಲ್ಲರ ಒಕ್ಕೊರಲದನಿ! ಆತ್ಮ ಭಾರತಮಾತೆಯಲ್ಲವೇ?

ಜಮೀನಿನ ವಿತರಣೆ, ಶಿಕ್ಷಣ ದಾನ, ಉದ್ಯೋಗದಾನ, ಉದ್ಯಮ ಸ್ಥಾಪನೆ, ಕಲೋದ್ಧಾರ, ಕೃಷಿವಿಕಾಸ ಮುಂತಾದ ಎಲ್ಲ ಕಾರ್ಯಗಳನ್ನೂ ನಾವಿಂದು ಭಾರತದಲ್ಲೂ ಕರ್ನಾಟಕದಲ್ಲೂ ಪ್ರಾರಂಭಿಸಿದ್ದೆವಷ್ಟೆ. ಈ (Transition Stage) ಮಧ್ಯಾವಸ್ಥೆಯಲ್ಲಿ ನಿರೀಕ್ಷಿಸಿದ ಮಟ್ಟವನ್ನು ಮುಟ್ಟಲಾರದ ನಮಗೆ ವ್ಯಾಕುಲವಾಗುವುದು ಸಹಜ. ಪ್ರಬುದ್ಧ ವ್ಯವಸ್ಥೆಯಿಂದ ಬಾಳುವ ದಿನ ಬಹಳ ದೂರವಾಯಿತೆಂದು ಮನಸ್ಸು ಹಳ ಹಳಿಸುತ್ತದೆ. ಮೇಲೆ ಹೇಳಿದಂತೆ ಒಂದಿರುಳು ಯಶೋಧರೆಗೆ ಹಳೆಯ ದುಃಖ ಮರುಕಳಿಸಿತು. ಹಾಗಾಗಲು ಅವಳು ಕನಸಿನಲ್ಲಿ ರಾಹುಲನನ್ನು ಕಳೆದುಕೊಂಡದ್ದೇ ಕಾರಣ. ಬುದ್ಧನ ಮರಿಯಂತಿದ್ದ ಗಾಂಧೀಜಿಯನ್ನು ನಾವಿಂದು ಕಳೆದುಕೊಂಡೆವು. ನೆಹರುಗಳೂ ಮುದುಕರಾದರು. ಈ ದೃಷ್ಟಿಯಿಂದಲೇ ಇತ್ತೀಚೆಗೆ "ನೆಹರುಗಳ ನಂತರ ಯಾರು" ಎಂಬ ಪ್ರಶ್ನೆಯನ್ನು ಕೆಲವರೆತ್ತಿದ್ದರು. ಬುದ್ಧಜೀವನದ ಕಲ್ಪನೆಯ ಎತ್ತರದಲ್ಲಿರುವ ನೆಹರುಗಳೊಮ್ಮೆ ಶೋಕ–ಸಂತಾಪಗಳಿಂದ "ನಾವು ದೊಡ್ಡ ದೇಶದಲ್ಲಿರುವ ಚಿಕ್ಕ ಜನ" ಎಂದೂ "ಭಾರತವು ನಾಗರಿಕತೆಯ ಅವಧಿಯಿಂದ ೫೦೦ ವರ್ಷದಷ್ಟು ಹಿಂದುಳಿದಿದೆ" ಎಂದೂ ಉದ್ಗರಿಸಿದ್ದುಂಟು! ತಮ್ಮ ಪ್ರಬುದ್ಧ ದರ್ಶನದಂತೆ ಭಾರತವನ್ನು ಕಟ್ಟಲು ಹೊರಟ ಅವರು ತಂದೆಯನ್ನು ಕರೆತರಲು ಹೊರಟ ರಾಹುಲನಂತೆ ಕಂಡರೆ ತಪ್ಪೇ?

ರಾಜ–
ನಿನ್ನ ಈ ಹತ್ತು ವರುಷದ ಈ ಬಾಲಕನು ತಪವೆ ಮೆಯ್ವೆತ್ತು
ನಿನ್ನಾಣ್ಮನನು ಕರೆಯ ಹೊರಟಂತೆ ಹೊರಟಿಹನು.
ವಿಧಿಯರಿತು ನಡೆವ ಹವನದಲ್ಲಿ ಉದ್ಗಾತೃಗಳು
ಸ್ವರ ಹಿಡಿದು ಸೊಗಸಾಗಿ ನುಡಿವ ಶಕ್ತಿಯ ಮಂತ್ರ
ದೇವರನು ತರುವಂತೆ ನಮ್ಮ ಈ ಬಾಲಕನು
ನಮ್ಮ ಸಿದ್ಧಾರ್ಥನನು ಬಿಡದೆ ತಂದೇತಹನು
ಬಾ ನನ್ನ ಅಣ್ಣಯ್ಯ, ತಾಯಿಗಭಿವಂದಿಸು
ಬಹು ಹಿರಿಯ ಜೀವವಯ್ಯಾ ನಿನ್ನ ತಾಯಿಯದು;
ಬಹು ಕಿರಿಯ ತಪ ಪುಣ್ಯ. ಬೀಳ್ಕೊಳುವ ಮೊದಲಲ್ಲಿ
ಹರಕೆಯನು ಕೊಳು. ಇಲ್ಲಿ ಬಾ ಒಮ್ಮೆ ವಂದಿಸು

ತಾಯ್ತಂದೆಗಳ ಪುಣ್ಯ ನಿನ್ನಲ್ಲಿ ಫಲಿಸಲಿ
ಸಿದ್ಧಾರ್ಥನನು ಕರೆದು ಸಹ ಕಾರ್ಯದಲಿ ನೀನು
ಸಿದ್ಧಾರ್ಥನಪ್ಪಂತೆ ದೇವರ್ಕಳೆಸಗಲಿ

ನೆಹರುಗಳು ಹಿರಿಯಣ್ಣರಾದರೆ ನಾವೆಲ್ಲ ಅವನ ತಮ್ಮಂದಿರು. ಒಟ್ಟು "ರಾಹುಲ ತಂಡ ನಾವೆಂದು ಗ್ರಹಿಸಬಹುದು. ನಾವಿಂದು ಪ್ರಬುದ್ಧ ಭಾರತರಾಷ್ಟ್ರವನ್ನು ಕಟ್ಟಲು ಹೆಣಗುತ್ತಿದ್ದೇವೆ. ಗಾಂಧಿಮಹಾರಾಜನ ಆಶೀರ್ವಾದ ನಮಗಿದೆ. ಬುದ್ಧನು ಭೋಧಿಸಿದ್ದು "ಅಷ್ಟಾಂಗ ಯೋಗ"ವನ್ನು ಅದರಲ್ಲಿ ಹೇಳಿದ ಎಂಟು ಗುಣಗಳು ಧರ್ಮಶಾಸ್ತ್ರದ ಪ್ರಕಾರ ನಮ್ಮ ಆತ್ಮದ ಶಾಶ್ವತ ಗುಣಗಳು ಅಥವಾ ಧರ್ಮಗಳು ಎಂದು ತಾತ್ಪರ್ಯ ಮಾಡಬಹುದು. ದಯೆ (ಅಹಿಂಸೆ) ಕ್ಷಾಂತಿ (ಕ್ಷಮೆ) ಅನಸೂಯೆ (ಹೊಟ್ಟೆ ಕಿಚ್ಚಿಲ್ಲದಿರುವುದು), ಶೌಚ (ಒಳಹೊರ ಶುಚಿತ್ವ) ಅನಾಯಾಸ (ಗಾಬರಿಗೆಡದಿರುವುದು), ಮಾಂಗಲ್ಯ (ಶಿವದೃಷ್ಟಿ), ಅಕಾರ್ಪಣ್ಯ (ಔದಾರ್ಯ) ಮತ್ತು ಅಸ್ಪೃಹೆ (ಅತ್ಯಾಶೆ ಇಲ್ಲದಿರುವುದು) ಎಂಬೀ ಎಂಟು ಆತ್ಮ ಗುಣಗಳು ಅಥವಾ ಕರ್ತವ್ಯಗಳು. ಇವುಗಳಲ್ಲೂ ಅಹಿಂಸೆ ಹಾಗೂ ಸತ್ಯಗಳು ಮತ್ತಷ್ಟು ಮುಖ್ಯ. ಅದರಿಂದಲೇ ಜಿನನೂ ಬಸವಣ್ಣನವರೂ ಅಹಿಂಸೆಯನ್ನು ಧರ್ಮದ ಮೂಲವೆಂದು ಸಾರಿದರು. ಭೀಷ್ಮರೂ ಮಹಾಭಾರತದಲ್ಲಿ ಅಹಿಂಸೆಗೆ ಅಗ್ರಪಟ್ಟ ಕೊಟ್ಟಿದ್ದಾರೆ. ಆದುದರಿಂದ ಭಾರತ ಧರ್ಮಕ್ಕೆ ಅಹಿಂಸೆ–ಸತ್ಯಗಳು ಎರಡು ಕಣ್ಣುಗಳಿದ್ದ ಹಾಗೆ; ಅವೇ ಭಾರತೀಯ ನಾಗರಿಕತೆಯಲ್ಲಿ ಬೆಳಗಬೇಕಾದ ಸೂರ್ಯ–ಚಂದ್ರರು! ಅವುಗಳ ಆಚರಣೆಯೇ ನಮ್ಮ ಸುಖ–ಶಾಂತಿ–ಸಮೃದ್ಧಿಗಳಿಗೆ ಮೂಲ; ಅವುಗಳಿಂದಲೇ ನಮ್ಮ ರಾಷ್ಟ್ರೀಯ ವ್ಯಕ್ತಿತ್ವದ ವಿಕಾಸ ಸಾಧ್ಯ. ಈ ದರ್ಶನವನ್ನು ಈ ಪ್ರಬೋಧನವನ್ನು ಈ ಅಮರ ತತ್ವವನ್ನು ನಮ್ಮ ಹೃದಯದಲ್ಲಿ ನೆಲೆ ನಿಲ್ಲಿಸಿಕೊಳ್ಳಬೇಕಾಗಿದೆ. ಬುದ್ಧನನ್ನು ಕರೆತರುವುದೆಂದರೆ ಅವಕಂಡ ದರ್ಶನವನ್ನು ನಾವು ಕಾಣುವುದು, ನಂಬಿ ನಡೆಯುವುದು ಎಂದಲ್ಲವೇ? ಇದೇ ಪ್ರಬುದ್ಧ ಭಾರತೀಯರ ಇಂದಿನ ಪ್ರತಿಜ್ಞೆ! ನೈರ್ಮಲ್ಯ, ಸೌಂದರ್ಯ, ಶುಭದೃಷ್ಟಿ, ಸತ್ಯ, ದಯೆ– ಎಂಬಿವು ಛಾಯಾ ಮಾತ್ರ ವ್ಯತ್ಯಾಸವುಳ್ಳ (ಸಾರತಃ ಏಕಾರ್ಥಕವಾದ) ತತ್ವಗಳು!

* ನೈರ್ಮಲ್ಯದಲ್ಲಿ ಅಂತಃಕರಣದ ಶುಚಿತ್ವ ಅಡಕವಾಗಿದೆ. ಕಾಮ–ಕ್ರೋಧಾದಿ ಅರಿಷಡ್ವರ್ಗದ ಅಧಾರ್ಮಿಕ ಉಪಟಳದಿಂದ ಮನಮುಕ್ತವಾಗಿರುವುದೇ ಅಂತಃಶುದ್ಧಿ, ಅಂತಃಶುದ್ಧಿಯುಳ್ಳ ಮನಸ್ಸು ಸುಂದರ; ಅದರ ಕಾರ್ಯಗಳು ಆನಂದಕರ, ಮನೋಹರ, ರಂಜಕ, ಅಂಥ ಮನದ ಇಚ್ಛೆ ಯಾವಾಗಲೂ ಶಿವ (ಶುಭ), ಮಂಗಲ, ಸಾತ್ವಿಕ. ಸತ್ವವು ಸ್ಥಾಯಿಭಾವ; ರಜಸ್ಸು–ತಮಸ್ಸುಗಳು ಬಂದು ಹೋಗತಕ್ಕ ಗುಣ ಅಥವಾ ಭಾವಗಳು– ಆದುದರಿಂದ ಅದು ಸ್ಥಿರ ಸತ್ಯ. ಸ್ಥಿರ ಸಾತ್ವಿಕ–ಮನಸ್ಸು ಸ್ವಭಾವತಃ ದಯಾಮಯ, ಅಹಿಂಸಾತ್ಮಕ. ವಿರುದ್ಧವೆಂದು ತೋರುವ ಭಾವಗಳ ಸಮನ್ವಯವೇ ಧರ್ಮ. ಸಮನ್ವಯ, ಸಾಮರಸ್ಯ, ಸಮತ್ವ ಅಥವಾ ನ್ಯಾಯ ಎಂಬುದೇ ಧರ್ಮದ ತಿರುಳು–ಅದೇ ಮೇಲೆ ಹೇಳಿದ ತತ್ವಗಳ ಹುರುಳು. ಆದುದರಿಂದ ಉಕ್ತ ಪಂಚ ತತ್ವಗಳು ಧರ್ಮ ಎಂಬ ಪರಮೇಶ್ವರನ ಪಂಚಮುಖಗಳು! ಅವನು ಯೋಗೇಶ್ವರ!



# ೯.

# ಉಪಾಯವೋ ಪರಾಕ್ರಮವೋ?

ಮೇಲೆ ಹೇಳಿದ ಆದರ್ಶವನ್ನು ಕೈಮರವನ್ನಾಗಿ ಮಾಡಿಕೊಂಡು ಜೀವನ ಸಾರ್ಥಕ್ಯವನ್ನು ಹೊಂದಲು ಪ್ರಯತ್ನಿಸುವವರೇ ಧೀರರು, ಉದಾತ್ತರು. ದುಷ್ಟಶಿಕ್ಷಣ–ಶಿಷ್ಟಪರಿಪಾಲನಗಳನ್ನು ತಮ್ಮ ಕರ್ತವ್ಯವನ್ನಾಗಿ ತೆಗೆದುಕೊಂಡು ಸಮಾಜಹಿತವನ್ನು ಸಂರಕ್ಷಿಸಿದ ಮಹಾವೀರರು ನಮ್ಮ ದೇಶದಲ್ಲಿ ಹಲವಾರು ಜನರು ದೊರಕುತ್ತಾರೆ. ಅಂಥ ಧೀರೋದಾತ್ತ ಮಹಾನಾಯಕರಲ್ಲಿ ಶ್ರೀ ಕಂಠೀರವ ನರಸರಾಜ ಒಡೆಯರೂ ಒಬ್ಬರು. ಆ ರಣಧೀರರನ್ನು ಕಥಾನಾಯಕತ್ವದಲ್ಲಿ ನಿಲ್ಲಿಸಿ ದಿವಗಂತ 'ಸಂಸರು' 'ಮಂತ್ರಶಕ್ತಿ' ಎಂಬ ಐತಿಹಾಸಿಕ ನಾಟಕವನ್ನು ಬರೆದಿದ್ದಾರೆ. ಅದರಲ್ಲಿ ಮೈಸೂರನ್ನು ದಳವಾಯಿ ವಿಕ್ರಮರಾಜಯ್ಯನ ವಿಷಮುಷ್ಟಿಯಿಂದ ವಿಮೋಚನಗೊಳಿಸಿದ ರಣಧೀರ ಕಂಠೀರವ ನರಸರಾಜ ಒಡೆಯರು ತಮಗೆ ದ್ರೋಹವನ್ನು ಚಿಂತಿಸುತ್ತಿದ್ದ ಹಳೆಯಪಯಿಕರನ್ನೂ ತಮ್ಮ ಸಂಹಾರಕ್ಕೆ ಪ್ರಯತ್ನಿಸುತ್ತಿದ್ದ ತಿರುಚನಾಪಳ್ಳಿಯವರನ್ನೂ ತಮ್ಮ ಮಂತ್ರಶಕ್ತಿಯಿಂದ ಹೇಗೆ ಅಡಗಿಸಿದರು ಎಂಬುದನ್ನಲ್ಲದೇ, ದಿಕ್ಕುಗೆಟ್ಟ ಶ್ರೀರಂಗರಾಯನಿಗೆ ಆಶ್ರಯ ಕೊಟ್ಟದ್ದನ್ನೂ ಚಿತ್ರಿಸಲಾಗಿದೆ. ಬಂಗಾರದ ದೊಡ್ಡಮ್ಮನಿಗೂ ರಣಧೀರರಿಗೂ ನಡುವೆ ನಡೆದ ಪ್ರಣಯ ಪ್ರಸಂಗ ಈ ನಾಟಕದ ಸ್ವಾರಸ್ಯವಾದ ಇನ್ನೊಂದು ಅಂಗ.

ಹೊಗೆಯಿದ್ದಲ್ಲಿ ಬೆಂಕಿಯಿರುವಂತೆ ನಿಜವಾದ ವೀರತ್ವವಿದ್ದಲ್ಲಿ ಔದಾರ್ಯವಿದ್ದೇ ಇರುತ್ತದೆ. ಔದಾರ್ಯವೇ ಔದಾತ್ಯ, ದೊಡ್ಡಮನಸ್ಸು. ಮನುಷ್ಯರಲ್ಲಿರುವ ಇತರ ದೋಷಗಳನ್ನು ಅಲಕ್ಷ್ಯ ದಶೆಗಳಿಸಬಲ್ಲ ದೊಡ್ಡಗುಣ ಉದಾತ್ತತೆ. ಅದಕ್ಕೆ ಮಹಾಸತ್ವ ಸಂಪನ್ನತೆಯೇ ಆಕರ. ಮಹಾಸತ್ವರು ಹರ್ಷ–ಶೋಕಗಳಿಂದ ಚಿರಕಾಲ ಬದ್ಧರಾಗಿರುವವರಲ್ಲ; ಅವರವುಗಳದಾಸರಲ್ಲ, ಈಶರು. ಅಂಥ ಮಾದರಿಯ ನಾಯಕರಾಗಿದ್ದರು ನರಸರಾಜ ಒಡೆಯರು. ಅವರ ಉತ್ಸಾಹಶಕ್ತಿ, ಸಾಹಸಿಕತೆಗಳು ಅವರನ್ನು ಜನಪ್ರಿಯರನ್ನಾಗಿ ಮಾಡಿವೆ. ಅವರ ಚರಿತ್ರೆಯೇ ಒಂದು Romance ರಂಜಕ ಸಾಹಸ ಕಥೆ. ಅವರೀ ನಾಟಕದಲ್ಲಿ ನಡೆದುಕೊಂಡ ಬಗೆ ರಾಜ ಕಾರ್ಯದಲ್ಲಿ ಹೊಸಬರಾಗಿರುವ ಇಂದಿನ ನಮ್ಮ ಪ್ರಜಾಪ್ರಭುಗಳಿಗೆ ಒಂದು ಅವಶ್ಯ ಸಂದೇಶವಾಗಬಲ್ಲದು. 'ರಾಜರಿಗೆ ನಿಜವಾದ ಮಿತ್ರರಾರೂ ಇರರು' ಎಂಬುದು ಹಳೆಯಗಾದೆ. ಹೀಗಿರುವುದರಿಂದ ರಾಜಕೀಯ ವ್ಯವಹಾರದಲ್ಲಿ–

ಅದರಲ್ಲೂ ವಿದೇಶೀಯರೊಡನೆ ಮಾಡುವ ವ್ಯವಹಾರದಲ್ಲಿ–ನಾವು ಎಷ್ಟು ಜಾಗೃತರಾಗಿದ್ದರೂ ಕಡಿಮೆಯೇ. 'ಉಪಾಯೇನ ಹಿ ಯಚ್ಛಕ್ಯಂ ನತಚ್ಛಕ್ಯಂ ಪರಾಕ್ರಮೈಃ' ಎಂಬ ಮಾತು ನರಸರಾಜರ ಪರಾಕ್ರಮದ ಮುಖ್ಯ ಲಕ್ಷಣವನ್ನು ಹೇಳುತ್ತದೆ. ಮಂತ್ರ ಅಥವಾ ರಾಜಕೀಯ ಸಮಾಲೋಚನೆ ರಾಜಕಾರಣದ ಪಂಚಪ್ರಾಣ. ಭಾರತದ ರಾಜಧರ್ಮದಲ್ಲಿ ಪ್ರಭು–ಮಂತ್ರ–ಉತ್ಸಾಹಗಳನ್ನು ರಾಜನ ಮೂರು ಶಕ್ತಿಯೆಂದು ಹೇಳಲಾಗಿದೆ. ಮಂತ್ರಶಕ್ತಿಯಿರುವುದು ಜ್ಞಾನದಲ್ಲಿ, ಪ್ರಭು ಶಕ್ತಿಯಿರುವುದು ಕೋಶದಂಡಬಲದಲ್ಲಿ (ಧನಬಲ–ಸೈನ್ಯಬಲಗಳಲ್ಲಿ) ಮತ್ತು ಉತ್ಸಾಹಶಕ್ತಿಯಿರುವುದು ವಿಕ್ರಮಬಲದಲ್ಲಿ (ಪರಾಕ್ರಮದಲ್ಲಿ). ಕಂಠೀರವ ನರಸರಾಜ ಒಡೆಯರಲ್ಲಿ ಈ ಮೂರು ಶಕ್ತಿಗಳಿದ್ದರೂ ಅವುಗಳಲ್ಲಿ ಮಂತ್ರಶಕ್ತಿ ಅವರಲ್ಲಿ ಹೇಗೆ ಪ್ರಭಾವಿಯಾಯಿತೆಂಬುದನ್ನು ಪ್ರಸ್ತುತ ನಾಟಕ ನಿದರ್ಶಿಸುತ್ತದೆ.

ದುರ್ದಶೆಗೀಡಾಗಿದ್ದಾಗ ಬಂದ ವಿಜಯನಗರದ ಅರಸು ಶ್ರೀರಂಗರಾಯನ ಬಾಯಿಂದಲೇ ಶ್ರೀ ರಣಧೀರರ ಪ್ರಶಂಸೆಯನ್ನು ಕೇಳೋಣ:

ಹಾ!... ಸಾಮನ್ತ! – ಸಾಮನ್ತ!... ಅಲ್ಲ, ಮಹಾರಾಜ, ನೀವು ಸಾಮಂತನಲ್ಲ; ನನ್ನ ಹಿರಿಯರ ಅಧಿರಾಜ–ಚಕ್ರವರ್ತಿ–ವೈಭವದ, ಶಕ್ತಿಯ, ಸತ್ವದ, ಐಶ್ವರ್ಯದ, ಭೋಗದ, ಕಟ್ಟಾಳ್ಕೆಯ ನೆಲೆಯ ಎಳ್ತರಕ್ಕೆ ಕಣ್ದರೆಯಿಸಿ ನನಗೆ ಸ್ವರ್ಗದರ್ಶನ ಮಾಡಿಸಿದ ಪರಮಪುಣ್ಯಶ್ಲೋಕನಹುದು... (ಅಶ್ರುಮಿಳಿತಾಕ್ಷನಾಗಿ) ಶ್ರೀ ವೆಂಕಟೇಶ್ವರ ಸ್ವಾಮಿಯು ನಿಮಗಾದರೂ ಚಿರಾಯುರಾರೋಗ್ಯೈಶ್ವರ್ಯ ಕ್ಷೇಮಾಭ್ಯುದಯ ಸುಖ ಸಂತೋಷ ಮಂಗಳೋತ್ಸವಗಳನ್ನು... ಹೀಗೆಯೇ ಇನ್ನು ವಿಶೇಷವಾಗಿ ದಯೆಗೆಯ್ದು ಸಮೃದ್ಧಿ ಮಾಡಿ, ಪೊರೆದು, ಸಂರಕ್ಷಿಸಿಕೊಳ್ಳುತ್ತಿರಲಿ!

ಸಾಮಾನ್ಯ ಸಾಮಂತನೆಂದು ತಿಳಿದು ಬಂದಿದ್ದ ಶ್ರೀರಂಗರಾಯನಿಗೆ ಕಂಠೀರವರ ಪ್ರತ್ಯಕ್ಷ ಪರಿಚಯದಿಂದ ಹಾಗೂ ವ್ಯವಹಾರ ದಕ್ಷತೆಯಿಂದ ಅವರು ಮೇಲೆ ಹೇಳಿದ ಹಾಗೆ ಉನ್ನತಾತ್ಮರಾಗಿ ಕಂಡದ್ದು ಅದ್ಭುತ ರಮ್ಯ. ಕಾಳಿಯ ಕತ್ತಿ ಕಾಳಿದಾಸನ ನೆತ್ತಿಗಭಿಮುಖವಾಗಿ ನೇತಾಡುತ್ತಿದ್ದಂತೆ ರಾಷ್ಟ್ರದ ಅಧಿಕೃತ ಪ್ರಧಾನರ ತಲೆಯ ಮೇಲೆ ಇಂದೂ ರಾಷ್ಟ್ರಸ್ವಾತಂತ್ರ್ಯ ಪ್ರಜಾವಿತ್ತ ಜೀವಿತಗಳಿಗೆ ಯಾವಾಗ ಅಪಾಯ ಬಂದೀತೆಂಬುದನ್ನು ಚಿಂತಿಸುತ್ತಲೇ ಇದ್ದು ಪ್ರಸಂಗಾವಧಾನದಿಂದ ತಮ್ಮ ಮಂತ್ರಶಕ್ತಿಯ ಮೂಲಕ ಅಂಥ ಸಂಭವಗಳನ್ನು ಮೊದಲೇ ತಡೆಹಿಡಿಯಬೇಕಾದ ಹೊಣೆ ನೇತಾಡುತ್ತಿದೆ. ಅಷ್ಟೇ ಅಲ್ಲದೆ, ದೇಶದ ಒಳ ಆಡಳಿತದಲ್ಲಿಯೂ ದಳವಾಯಿ ವಿಕ್ರಮರಾಜಯ್ಯನಂತಹ ಪುಂಡ ಪುಡಾರಿಗಳು ಜನಹಿತ ವಿರೋಧಿಗಳಾಗಿ ಮನಸ್ವಿತನದಿಂದ ವರ್ತಿಸತೊಡಗಿದರೆ, ಅವರ ರಾಜಕೀಯ, ಆರ್ಥಿಕ ಅಥವಾ ಔದ್ಯಮಿಕ ಇಲ್ಲವೆ ಔದ್ಯೋಗಿಕ ದರ್ಪವನ್ನು, ದಬ್ಬಾಳಿಕೆಯನ್ನು, ದುಃಸ್ವಾರ್ಥ ಸಾಧನೆಯ ತಂತ್ರ–ಯೋಜನೆಗಳನ್ನು ಕಾಲಮೀರುವುದರೊಳಗೇ ಕಂಡು ಹಿಡಿದು, ಅವನ್ನು ನಿಲ್ಲಿಸಿ, ಅವರಿಗೆ ತಕ್ಕ ಶಿಕ್ಷೆಯನ್ನು ವಿಧಿಸುವ ಸತತ ಕರ್ತವ್ಯವೂ ನಮ್ಮ ಅಧಿಕೃತ ನಾಯಕರ ಹೆಗಲ ಭಾರವಾಗಿದೆ. ಆದುದರಿಂದ ಹೊಣೆಗಾರಿಕೆಯ ಮುತ್ಸದ್ದಿತನದ, ರಾಜತಾಂತ್ರಿಕ ಕೌಶಲದ, ಕರ್ತವ್ಯ ದಕ್ಷತೆಯ ಮೂರ್ತಿಮಂತ ಉದಾಹರಣೆಯಾಗಿ

ಕಂಠೀರವ ನರಸರಾಜರನ್ನು ರಂಗದಲ್ಲಿ ನಮ್ಮೆದುರಿಡುವ ಪ್ರಕೃತ ಕೃತಿ ಅಪೂರ್ವ ಸ್ಫೂರ್ತಿಯನ್ನು ನಮಗಿಂದು ನೀಡಬಲ್ಲುದಾಗಿದೆ. ವಿಗಡ ವಿಕ್ರಮರಾಯರ ಪಿಡುಗು ನಮ್ಮ ಸಾರ್ವಜನಿಕ ಕ್ಷೇತ್ರಗಳಲ್ಲಿ ಹೆಚ್ಚು ಹೆಚ್ಚಾಗಿ ಕಂಡು ಬರಲಾರಂಭಿಸಿದ ಈ ದಿನಮಾನದಲ್ಲಿ ಪ್ರತಿಯೊಂದು ವ್ಯಕ್ತಿಯೂ ಹೊಣೆಗಾರಿಕೆಯುಳ್ಳವನಾಗಿರಬೇಕಾದ ನಮ್ಮ ಪ್ರಜಾಪ್ರಭುತ್ವದಲ್ಲಿ ಅಂಥ ವಿಗಡರ ಚಟುವಟಿಕೆಯನ್ನು ನಿಲ್ಲಿಸಲು ನಮ್ಮ ನಮ್ಮ ಶಕ್ತಿಗೆ ಅನುಗುಣವಾಗಿ ನಾನಾ ವಿಧದಿಂದ ಪ್ರಯತ್ನಿಸುವ ರಣಧೀರತೆ ನಮ್ಮಲ್ಲಿ ಬೆಳೆಯಬೇಕೆಂದು ನಾಟಕದಿಂದ ನಾವು ತಿಳಿದುಕೊಳ್ಳಬೇಕು.



# ೧೦.

# ಮದುವೆಯೋ ವ್ಯಾಪಾರವೋ?

ಡಾ. ಎಚ್. ಕೆ. ರಂಗನಾಥರ 'ಬ್ರಹ್ಮಲಿಪಿ'ಯ ಕಥಾನಾಯಕ ರಾಮು ದೊಡ್ಡಕೆಲಸ ಸಿಗುವುದೆಂಬ ಆಸೆಯಿಂದ ಕ್ರೈಸ್ತ ಹುಡುಗಿಯೊಬ್ಬಳನ್ನು ಮದುವೆಯಾಗಲು ನಿಶ್ಚಯಿಸಿದ. ಅವನ ಮನೆಯಲ್ಲಿ ಅವನ ಸಂಬಂಧಿಕರಾದ ಹೆಂಗಸರು ಮನೆತನಸ್ಥ ಹುಡುಗಿಯೊಬ್ಬಳನ್ನು ಕರೆತಂದವರೆದುರು ರಾಮುವಿಗೆ ಇಂಗ್ಲೆಂಡಿಗೆ ಹೋಗಲು ದುಡ್ಡುಕೊಟ್ಟರೆ ಆ ಸಂಬಂಧ ಆಗಬಹುದು; ಇಲ್ಲವಾದರೆ ಇಲ್ಲ ಎಂದು ನಿರ್ಧರಿಸಿದರು. ಆದರೆ ರಾಮು ಮಿಸ್ ಈಲಿಯುಟ್ಟಳ ಸಹಿತವಾಗಿ ಅವರೆದುರು ಪ್ರತ್ಯಕ್ಷನಾಗಿ ಅವಳನ್ನು ತಾನು ಮದುವೆಯಾಗುತ್ತೇನೆಂದೊಡನೆಯೇ ಅವನ ತಾಯಿಯೂ ಅವಳ ಬೆಂಬಲಿಗ ಹೆಂಗಸಾದ ಗೌರತ್ತೆಯೂ ಒಂದೇ ಬಾರಿಗೆ ಶಾರದೆಯನ್ನಲ್ಲದೆ ಈಲಿಯಟ್ಟಳನ್ನು ಮದುವೆಯಾದರೆ ಬಾವಿಗೆ ಹಾರಿಕೊಳ್ಳುತ್ತೇವೆಂದು ಹೆದರಿಕೆ ಹಾಕಿದರು. ಆಗ ರಾಮು ಈಲಿಯಟ್ಟಳನ್ನು ಬಿಟ್ಟು ಶಾರದೆಯನ್ನು ವರಿಸಲು ಸಿದ್ಧನಾದ ಇದು ಇಂದಿನ ಒಂದು ಸಾಮಾಜಿಕ ಪ್ರಕರಣದ ಮಾದರಿ. ಮದುವೆಯನ್ನು ಒಂದು ವ್ಯಾಪಾರದ ಮಟ್ಟಕ್ಕೆ ನಮ್ಮ ಜನ ಇಳಿಸಿದ್ದಕ್ಕಿದೊಂದು ಉದಾಹರಣೆ. ದೊಡ್ಡ ಕೆಲಸಕ್ಕಾಗಿ ಎಂಥವಳನ್ನಾದರೂ ಮದುವೆಯಾಗಲು ಮೊದಲು ಸಿದ್ಧನಾದ ರಾಮು ಮತ್ತು ಹಣಕ್ಕಾಗಿ ಯೋಗ್ಯ ಹುಡುಗಿಯನ್ನು ತಿರಸ್ಕರಿಸಿದ ಅವನ ಮನೆಮಂದಿ ನಮ್ಮ ಸಾಮಾನ್ಯ ವರ್ಗದ ಸುಶಿಕ್ಷಿತರೆಂದು ತಿಳಿದುಕೊಂಡ ನಾಗರಿಕರ ನಾಗರಿಕತೆಯನ್ನು ಬಯಲಿಗೆಳೆದಿದ್ದಾರೆ. ಭಾರತೀಯ ಸಂಸ್ಕೃತಿ, ಆಧ್ಯಾತ್ಮಜ್ಞಾನದ ಆಸ್ತಿ, ಧರ್ಮಜ್ಞತೆಯ ಪಾಂಡಿತ್ಯ, ರಸ–ರುಚಿಗಳ ಸಂಪನ್ನತೆ ಮುಂತಾದ ಅಂಶಗಳನ್ನು ಆಗೀಗ ಅಲ್ಲಲ್ಲಿ ಅನೇಕ ಸಲ ನಾವು ಓದಿದ್ದೇವೆ. ಕೇಳಿದ್ದೇವೆ, ಕಂಡಿದ್ದೇವೆ. ಈ ಬಾಯಬ್ರಹ್ಮದ ಬಂಡವಾಳದಿಂದ ಬಹಳ ತೃಪ್ತಿಯ ನಗೆಯನ್ನೂ ನಾವು ಎಷ್ಟೋ ಸಲ ಪ್ರದರ್ಶಿಸಿರಬಹುದು. ಈ ಹಿನ್ನೆಲೆಯಲ್ಲಿ ವ್ಯವಹಾರದಲ್ಲಿ ನಮ್ಮಲ್ಲಿರುವ ಹಲವಾರು ಕೌಟುಂಬಿಕರು ಈ ಪ್ರಕಾರ ವೈಶ್ಯ–ವೇಶ್ಯಾಧಮರನ್ನೂ ಮೀರಿಸುವ ಪವಿತ್ರ ವಿಚಾರವನ್ನು ಪ್ರಕಟಿಸುವ ಸೌಂದರ್ಯ ನಮ್ಮ ಕಣ್ಣನ್ನಿಂದು ತೆರೆಯಿಸಬೇಕಾಗಿದೆ. ಮನದಲ್ಲಿ ಧರ್ಮವಿಲ್ಲದಾಗ ಮನೆಯಲ್ಲಿ ಧರ್ಮವಿರದು. ಮನೆಯಲ್ಲಿ ಧರ್ಮವಿಲ್ಲದಾಗ ಸಮಾಜದಲ್ಲಿ ಧರ್ಮ ಉಳಿಯದು. ಧರ್ಮ, ಸಂಸ್ಕೃತಿ, ಕಲೆ, ನಾಗರಿಕತೆ, ನ್ಯಾಯ, ನೀತಿಗಳ ವಾಗಾಡಂಬರ ದೇಶದಲ್ಲಿಂದು ದಿಲ್ಲಿಯಿಂದ ಹಳ್ಳಿಯವರೆಗೂ ತಾಂಡವವಾಡುತ್ತಿದೆ. ಸದಭಿರುಚಿಯಿಲ್ಲದ ವ್ಯಷ್ಟಿ–ಸಮಷ್ಟಿಗಳುಳ್ಳ ರಾಷ್ಟ್ರಕ್ಕೆ ಚಾರಿತ್ರ ಬಲವೆಲ್ಲಿಂದ ಬಂದೀತು? ಹನಿಗೆ ಹನಿ ಕೂಡಿದರೆ

ಹಳ್ಳ, ತೆನೆಗೆ ತೆನೆ ಕೂಡಿದರೆ ಭತ್ತ. ಒಂದೊಂದು ವ್ಯಕ್ತಿ, ಕುಟುಂಬದವರೇ ಕ್ರಮೇಣ ಇಂಥ ಹಿರಣ್ಯ ಕಶಿಪು (ಬಂಗಾರ ಯಾರಿಗೆ ಅನ್ನವೋ ಅಂಥವನು) ಸಂತಾನದವರಾಗುತ್ತ ಹೋದರೆ, ರಾಷ್ಟ್ರವೇ ಕಾಲಕ್ರಮೇಣ ಆತ್ಮಘಾತಕವಾದ ದೈತ್ಯಸ್ವರೂಪದ್ದಾಗಿ ಹೋಗದಿರದು! ಇಂಥ ದೈತ್ಯಯುಗವನ್ನು ಇತಿಹಾಸಕಾರರು (Dark Age, ಕೃಷ್ಣಯುಗ, ಕಾಳಯುಗ) ಕತ್ತಲಯುಗ ಎನ್ನುತ್ತಾರೆ.

ಹಣವು ಬಾಳಿನ ಸಾಧನವಲ್ಲದೆ ಸಿದ್ಧಿಯಲ್ಲ; ಬಾಳಿನ ಸಿದ್ಧಿ ಸೌಜನ್ಯವಲ್ಲದೆ ತದಿತರ ಸೌಖ್ಯವಲ್ಲ; ಸೌಜನ್ಯವೇ ಸೌಖ್ಯ–ಎಂಬುದನ್ನು ನಾವು ರಕ್ತಗತಮಾಡಿಕೊಳ್ಳದೆ ಹೋದರೆ, ಮೇಲಿನಂತೆ "ವ್ಯಾಪಾರಿ–ಸಂಸಾರಿ"ಗಳಾಗಿ ಹೋದೇವು. ಮನುಷ್ಯತ್ವವನ್ನು ಮಾರಿಕೊಂಡಲ್ಲಿ ನಾಶವು ಶತಸಿದ್ಧ. ಈ ದೂರದೃಷ್ಟಿಯಿಲ್ಲದೆ, ದುರ್ದೃಷ್ಟಿಯಿಂದ ದುಡ್ಡನ್ನು ಪರೋಕ್ಷಾ–ಪರೋಕ್ಷ ಹಿಂಸೆಯಿಂದ ಗಳಿಸುವ ಸಮಾಜವೊಂದು "ಸಮಜ" ಪಶುಕೂಟ! ಮನೆಯ ಸಂಸ್ಕಾರ ದುಃಸ್ವಾರ್ಥ, ದುರ್ವಂಚನೆಗಳಿಗೆಡೆಗೊಡುತ್ತಿರುವುದೂ ನಮ್ಮಲ್ಲಿಂದು ಸರಕಾರಿ ಅಧಿಕಾರಿಗಳಲ್ಲನೇಕರು ಲಂಚಗುಳಿಗಳಾಗುತ್ತಿರುವುದೂ ಪರಸ್ಪರ ಸಂಬಂಧಿಸಿವೆ. ನೈತಿಕ ಅಧಃಪಾತಕ್ಕೆ ಹೆಂಗಸರು, ಗಂಡಸರು, ಬಡವರು–ದೊಡ್ಡವರು, ಗಣ್ಯರು–ಅಗಣ್ಯರು ಈಯೆಲ್ಲರೂ ಸಮಭಾಗಿಗಳು. ಆದುದರಿಂದ ನೈತಿಕ ಮಟ್ಟವನ್ನು ಮೇಲೆತ್ತಲು ಈಯೆಲ್ಲರೂ ಸಮಾನ ಹೊಣೆಗಾರರು. ಕಾಯದೆಯ ಅರಿವಿಲ್ಲವೆಂದು ಹೇಳುವುದು ಹೇಗೆ ಅಕ್ಷಮ್ಯವೋ ಹಾಗೇ ಇಂಥ ಹೊಣೆಯ ಅರಿವಿಲ್ಲವೆಂದು ಹೇಳುವುದೂ ಅಕ್ಷಮ್ಯ ಅಪರಾಧ; ಅಥವಾ ಅವರಿಗಿಂತ ನಮ್ಮ ಹೊಣೆ ಕಡಿಮೆ ಎಂದು ವ್ಯಕ್ತಿ–ವರ್ಗಗಳು ವಾದಿಸುವುದೂ ಅವೈಜ್ಞಾನಿಕ. ನಮ್ಮ ವ್ಯಕ್ತಿತ್ವದ Psycho-physical ಮನೋದೈಹಿಕ ಶಕ್ತಿ–ಉದ್ದೇಶಗಳ ಸ್ಥೂಲವಾದ ಸ್ಥಿತಿ ಹಾಗೂ ಸಿದ್ಧಾಂತಗಳನ್ನಾದರೂ ಧ್ಯಾನಿಸಿ ಕರ್ತವ್ಯ ಜಾಗೃತಿಯನ್ನು ತಾಳದೇ ಹೋಗುವುದಾದರೆ, ನಾವೆಂತು ನಮ್ಮನ್ನು ನಾವೇ ಆಳಿಕೊಳ್ಳಲೆದ್ದ ಪ್ರಜಾಸತ್ತೆಯಲ್ಲಿ ಗೆದ್ದೇವು? ಹೊಣೆಗೇಡಿಗಳು ಮಾತ್ರ ಹಣೆಬರಹದ ಹಾಡುಗಾರರು! ಸ್ವಜ್ಞಾನವಿಹೀನರು ಮೂಢರು!

ದೇಶದ್ರೋಹಿಗಳಾಗುವವರಲ್ಲಿ ಕೋಶಪ್ರಿಯರು ಅಗ್ರಗಣ್ಯರು. ನಮ್ಮ ದೇಶದ ಸ್ವಾತಂತ್ರ್ಯವು ಗಂಡಾಂತರಕ್ಕೀಡಾಗುವಂತಾದಾಗ ಕೂಡ ಹಿರಣ್ಯಾಕ್ಷ (ಬಂಗಾರವನ್ನೇ ಕಣ್ಣಾಗಿ ಉಳ್ಳವನು ಯಾರೋ ಅವನು) ಸಂತಾನದವರು ತಮ್ಮ ಲಾಭಕ್ಕೆ ಅನುಕೂಲವಾದ ಗಾಳಿ ಎತ್ತಲಿಂದ ಬೀಸುವುದೋ ಅತ್ತಲೇ ತೂರಿಕೊಳ್ಳುತ್ತಾರೆ–ಎಂಬುದು ಅಂತರರಾಷ್ಟ್ರೀಯ ಯುದ್ಧ ಪ್ರಕರಣಗಳಲ್ಲಿ ಕಂಡು ಬಂದಿದೆ. ಹಣಕ್ಕಾಗಿ ಮದುವೆ ಮಾಡಿಕೊಂಬವರೂ ಅವರ ಸಂತಾನವೂ ಹಿರಣ್ಯಾಕ್ಷರಾಗಿ ಪರಿಣಮಿಸದೆ ಉಳಿದಾರೇನು? ಎಂದಿಗೂ ಇಲ್ಲ! ಅದರಿಂದಲೇ ವೇದದ ಕಾಲದಿಂದ ನೆಹರುಗಳ ಕಾಲದವರೆಗೆ ನೆನಪಿನಲ್ಲಿ ಉಳಿದ ಮಾತೆಂದರೆ, "ಕೊಬ್ಬಿದ ಕುಬೇರ ಕುಲ ದೇಶದಲ್ಲಿ ಬೆಳೆದು ನಿಲ್ಲದಿರಬೇಕು" ಎಂಬುದು. ಲಕ್ಷ್ಮೀ ಪೂಜೆ ಅಮಲು ಹಿಡಿಸುವಷ್ಟರವರೆಗೆ ಮುಟ್ಟಿದರೆ, ಸ್ವಾತಂತ್ರ್ಯಲಕ್ಷ್ಮೀ ಸಾಮಾಜಿಕ ಸಹಕಾರ ಲಕ್ಷ್ಮೀ, ಸರ್ವೋದಯಲಕ್ಷ್ಮೀ ದೇಶ ಬಿಟ್ಟು ಓಡಿ ಹೋಗುತ್ತಾರೆ. ಆದುದರಿಂದ ಮನೆಹಾಳು ನಾಡಹಾಳುಗಳಿಗೆ ಪ್ರೇರಕವಾದ ಅರ್ಥವಿವಾಹಗಳಿಂದ ನಾವು ದೂರವಿರಬೇಕು. ಹೆಣ್ಣಿಗೂ ತೆರಬೇಡ, ಗಂಡಿಗೂ ತೆರಬೇಡ; ಪ್ರೇಮವೆಂಬುದು ಕೊಂಬ ವಸ್ತುವಲ್ಲ!



# ೧೧.

# ಬಯಲ ಗಡಿಯೋ ಬಗೆಯ ಗಡಿಯೋ?

ಆನಂದಕಂದರು 'ಸಿಮೋಲ್ಲಂಘನ'ದಲ್ಲಿ ಕರ್ನಾಟಕ ಸಾಮ್ರಾಜ್ಯವನ್ನು ಪರಿಪೂರ್ಣಗೊಳಿಸುವ ತನ್ನ ಹಿರಿಯರ ಆಕಾಂಕ್ಷೆಯನ್ನು ಪೂರೈಸ ಹೊರಟ ಕೃಷ್ಣ ದೇವರಾಯನ ಶ್ರದ್ಧೆ, ನಿಷ್ಠೆ, ಉತ್ಸಾಹಗಳ ಚಿತ್ರವನ್ನು ಕೊಟ್ಟಿದ್ದಾರೆ. ಕೃಷ್ಣದೇವರಾಯನು ವಿಜಯನಗರ ಸಾಮ್ರಾಜ್ಯ ಪುರುಷನ ಕಿರೀಟ. ವಿಜಯನಗರವು ಕನ್ನಡಿಗತನಕ್ಕಿಟ್ಟ ಕಿರೀಟ. ಈ ಗತವೈಭವ ಸ್ಮೃತಿಗೆ ಪರಾಕು ಹೇಳುವ ಸ್ತುತಿಪಾಠಕರ ವಾಗ್ವೈಭವವೇ ಸಾಕು:

ಶ್ರೀ ಮದ್ರಾಜಾಧಿರಾಜ ರಾಜಪರಮೇಶ್ವರಾ!
ಕರ್ನಾಟಕ ರಾಜ್ಯರಮಾಹೃತ್ಕಮಲ ಭಾಸ್ಕರಾ!
ಹಿಂದೂರಾಯ ಸಮೂಹ ಸುರತ್ರಾಣಾ!
ಗೋದೇವದ್ವಿಜ ಸಂರಕ್ಷಣ ಧುರೀಣಾ!
ವಿಜಯನಗರ ರತ್ನ ಸಿಂಹಾಸನಾಧೀಶ
ಶ್ರೀ ವೀರ ನರಪತಿ ಕೃಷ್ಣದೇವರಾಜೇಂದ್ರ
ಭೋ! ಪರಾಕು!

ದೇಶಭಕ್ತಿಯ ಪೋಷಣೆಗೆ ಗತವೈಭವದ ಸ್ಮರಣೆ ಪುಷ್ಟಿವರ್ಧಕ ರಸವಾಗಬಲ್ಲುದು. ಹೊಸಗನ್ನಡದ ಕವಿಗಳೂ ನಾಟಕಕಾರರೂ ವಿಜಯನಗರದ ಪ್ರತಿಷ್ಠೆಯನ್ನು ಪ್ರಾತಃಸ್ಮರಣೀಯವನ್ನಾಗಿ ಬಿಂಬಿಸಿದ್ದಾರೆ. ಭಾರತದ ಅಶೋಕ–ಚಂದ್ರಗುಪ್ತ–ಸಮುದ್ರಗುಪ್ತಾದಿಗಳ ಮಹಾವೈಭವವನ್ನೂ ಹೀಗೆ ಎಷ್ಟೋ ಸಾಹಿತ್ಯ ಶಿಲ್ಪಿಗಳು ಮೂರ್ತಿಕರಿಸಿದ್ದಾರೆ. ಆದರೆ ಗತೇತಿಹಾಸದ ಸಿದ್ಧಿಗಳ ಸ್ಮರಣೆ ಕೇವಲ ಸ್ಮರಣೆ–ಪುನಃ ಸ್ಮರಣೆಗಳ ಭಾವಿಕ–ಮಟ್ಟದಲ್ಲಿ ನಿಂತು ಹೋಗುವ ಸಂದರ್ಭವೂ ಉಂಟು. ಆಗ Basking in the reflected glory of the Past- ಹಳೆಯ ಕಾಲದ ವೈಭವದ ಕನ್ನಡಿಯ (ಲ್ಲಿ ಕಾಣುವ) ಗಂಟನ್ನು ಕಾಣುತ್ತ ಬಾಯಿಚಪ್ಪರಿಸಿ ಕಾಲ ಹಾಕುವ ಜಡಭರತ ಬುದ್ಧಿ ಜನರಲ್ಲಿ ಬೆಳೆಯುವ ಸಂಭವವಿದೆ. ಅದು ಸೋಮಾರಿತನದ ಬೀಜ, ಔದಾಸೀನ್ಯದ ಹುಟ್ಟುನೆಲ. ಅಂಥ ಹುಂಬ ಜಂಭ ನಮ್ಮ ಜನತೆಯಲ್ಲಿ ಆಗೀಗ ಉದಯಿಸಿದ್ದುಂಟು.

ಅಪ್ಪನಿಂದ, ಅಣ್ಣನಿಂದ ಅಥವಾ ಮಾವನಿಂದ ದೊಡ್ಡಸ್ತಿಕೆಯನ್ನು ಹೇಳಿಕೊಳ್ಳುವ– ಅವರು ದೊಡ್ಡವರಾಗಿರುವದರಿಂದ ಅವರಿಗೆ ಸಂಬಂಧಿಸಿದ ತಾನೂ ದೊಡ್ಡವನೆಂದುಕೊಂಬ ಹುಡಿ ಹೆಮ್ಮೆಗೂ ಗತಭಾಗ್ಯಭಜನೆಯಷ್ಟನ್ನೇ ಉದ್ಯೋಗವಾಗಿಟ್ಟುಕೊಂಡ ಕಾರ್ಯನೇತೃಗಳ ಉಕ್ಕು–ಸೊಕ್ಕುಗಳಿಗೂ ಯಾವ ಭೇದವೂ ಇಲ್ಲ. ಈ ಠೇಂಕಾರಿಕೆಯ ಸನಾತನತೆ ಇದ್ದಲ್ಲಿ ಅದು ದೂರವಾಗಬೇಕಾಗಿದೆ. ನಾಟಕದ ಕೊನೆಯಲ್ಲಿ ಸೈನ್ಯದ ಕವಾಯಿತು ನಡೆಯುವುದನ್ನು ಸೂಚಿಸಿರುವುದು ಅರ್ಥಪೂರ್ಣವಾಗಿದೆ. ವಿಚಾರ ಹಾಗೂ ವಾಕ್ಯಗಳಿಗೆ ಕಾರ್ಯದ ಅನುಸರಣೆ ಇಲ್ಲವಾದರೆ ಎಲ್ಲವೂ 'ಬರಿಗುಲ್ಲು ನಿದ್ದೆಗೇಡು' ಎನಿಸುವುದು ಸಹಜ. ಮಾತಿನ ಮಥನದಿಂದ ಕೇವಲ ನಾದದ ನವನೀತವನ್ನು ಪಡೆಯುವ ಸಂದರ್ಭಗಳಿಂದು ಬಹಳ ಹೆಚ್ಚಾಗಿವೆ. ಅಲ್ಲಿಯೂ ಕೆಲವೊಮ್ಮೆ ನವನೀತವು ದುರ್ನೀತವಾದದ್ದುಂಟು! ಈ ದೇಶೀಯ ರಾಜಕೀಯ ಆವರಣದಲ್ಲಿ ನಾಟಕ ಧ್ವನಿಸುವುದು ಕಾರ್ಯದ ಮಹತ್ವವನ್ನು ಕರ್ನಾಟಕ ಪ್ರಾಂತ ಕೈಗೂಡಿದ ಇಂದಿನ ಸಮಯದಲ್ಲಿ ಪುನಾರಚನೆಯ ಸಂಘಟಿತ ಪ್ರಯತ್ನವು ಭರದಿಂದ ಸಾಗಬೇಕಾಗಿದೆ. ನಮಗಿಂದು ಅಗತ್ಯವಾದ ಕಾರ್ಯ, ಸಂಘಟನೆ. ಪ್ರಜಾತಂತ್ರದಲ್ಲಿ ಸಂಘಟನೆಯಿಲ್ಲದೆ ಯಾವ ಘಟನೆಯು ಸಂಭವಿಸದು. ಅಸಂಘಟಿತ ಜೀವನದ ಸೀಮೆಯನ್ನು (ಎಲ್ಲೆಯನ್ನು ಗಡಿಯನ್ನು) ನಾವಿಂದು ದಾಟಿಹೋಗಬೇಕಾಗಿದೆ. ಆಗ ಮಾತ್ರ ನಮಗೆ ವಿಜಯ. ಹಳಮೈಸೂರು ಮತ್ತು ವಿಲೀನ ಭಾಗ. ಬ್ರಾಹ್ಮಣ ಮತ್ತು ಬ್ರಾಹ್ಮಣೇತರ, ಒಡೆಯ ಮತ್ತು ಒಕ್ಕಲು, ಕೂಲಿಕಾರ ಮತ್ತು ಕಾರಖಾನೆದಾರ, ಕನ್ನಡ ಮತ್ತು ಕನ್ನಡೇತರ ಭಾಷಿಕ ಕರ್ನಾಟಕಸ್ಥ–ಎಂಬೀ ದ್ವೈತಸಂಪ್ರದಾಯ ವಿಘಟಿತವಾದ ಹೊರತೂ ಕರ್ನಾಟಕಕ್ಕಿಂದು ಸೀಮೋಲ್ಲಂಘನವಿಲ್ಲ, ನಿಜವಾದ ಜೀವನ ಸ್ವಾತಂತ್ರ್ಯವಿಲ್ಲ, ಪ್ರಗತಿಯಿಲ್ಲ, ಪುಷ್ಟಿಯಿಲ್ಲ, ಶಾಂತಿಯಿಲ್ಲ, ಶೀಲವಿಲ್ಲ, ಗೌರವವಿಲ್ಲ, ಗತಿಯಿಲ್ಲ. ನಮ್ಮ ನಮ್ಮ ಮನದಲ್ಲಿರುವ ಸಂಕೋಚ ರಾಜ್ಯದ ಗಡಿಯನ್ನು ಉಲ್ಲಂಘಿಸುವ ವಿಜಯದಶಮಿಗಿದು ಕಾಲವಲ್ಲದೆ, ಸಾಮ್ರಾಜ್ಯಶಾಹಿಗೆ ಕಾಲವಲ್ಲ; ರಾಜ್ಯವಿಸ್ತರಣಕ್ಕಿಲ್ಲಿ ಅರ್ಥವಿಲ್ಲ. ವಿಜಯನಗರದ ವಿಜಯವು ಸ್ಫೂರ್ತಿದಾಯಕವಾಗುವುದು ಪ್ರಜಾಸತ್ತಾತ್ಮಕ ಕರ್ನಾಟಕದಲ್ಲಿ ಮೇಲೆ ಹೇಳಿದ ಪ್ರಕಾರವೇ ಅಲ್ಲವೇ?



# ೧೨.

# ಸಂಸ್ಕೃತರೋ ದುಷ್ಕೃತರೋ?

'ಹೂವಿನ ಆಸೆ' ಶ್ರೀ ಎಂ.ವಿ. ಸೀತಾರಾಮಯ್ಯನವರ ಸಾಮಾಜಿಕ ನಾಟಕ. ಅಲ್ಲಿ ಬಾಲವಿಧವೆ ಸೀತೆಯ ಹೂವಿನ ಆಸೆಯೇ ಪ್ರಧಾನ. ಸೀತೆಯ ತಂದೆ ಪೂರ್ವಾಚಾರಪ್ರಿಯ; ಅವನ ಸೋದರಳಿಯ ಸುಬ್ಬು ವಿದ್ಯಾವಂತ. ಸುಬ್ಬುವಿನ ಗೆಳೆಯ ನಾಣು ಸುಧಾರಕ. ಸುಧಾಕರನ ತಾಯಿಯಾದ ನರಸಕ್ಕ ಪೂರ್ವಾಚಾರದ ಆಧಾರಸ್ತಂಭ. ಈ ಆರು ಪಾತ್ರಗಳಿಂದ ನಾಟಕದ ಮೇಳ ನಡೆಯುತ್ತದೆ. ನಾಟಕ ಮುಗಿಯುವುದು ಸುಬ್ಬು–ಸೀತೆಯರ ವಿವಾಹದಲ್ಲಿ. ಬಾಲ ವಿಧವೆಯರ ಬಗ್ಗೆ ಕಳಕಳಿ ತೋರುವ ಪದ್ಯಗಳೂ, ನಾಟಕಗಳೂ, ಕತೆಗಳೂ, ಕಾದಂಬರಿಗಳೂ ಇಂದು ಸಿಕ್ಕುತ್ತವೆ. ಸಿಗಬೇಕಾಗಿರುವುದು ಗೊತ್ತಿಲ್ಲದೆ ಬಾಲ ಸನ್ಯಾಸ ಸ್ವೀಕರಿಸಿ ತಮ್ಮ ಹಾಗು ಸಮಾಜದ ಜೀವನದಲ್ಲಿ ಶೀಲ ಹಾನಿಗಾಗೀಗ ಎಡೆಗೊಡುತ್ತಿರುವ ಬಾಲಸನ್ಯಾಸಿಗಳ ಬಗ್ಗೆ ಕಳಕಳಿದೋರುವ ನಾಟಕ. ಬಾಲವಿಧವೆಯರ ಸಂಖ್ಯೆಯೇನೋ ಅತ್ಯಲ್ಪ. ಆದರೆ ಅವರ ಮದುವೆ ಇನ್ನೂ ಬ್ರಾಹ್ಮಣ ಸಮಾಜದಲ್ಲಿ ಪ್ರಸಿದ್ಧ ರೂಡಿಯಾಗಿಲ್ಲ. ಅಂದರೆ ಸಾಹಿತ್ಯದ ಸಂದೇಶ ಹೃದಯಕ್ಕೆ ಸರಿಯಾಗಿ ಮುಟ್ಟಲು ಇನ್ನೂ ಕೆಲಕಾಲ ಬೇಕೋ ಏನೋ ಅಂಥ ಪರಂಪರಾಂಧ ಕುಟುಂಬಗಳಲ್ಲಿ! ಶಿಕ್ಷಿತರಲ್ಲಿಯೂ ಅನೇಕರು ಅಜ್ಜಿಯ, ಅಜ್ಜನ ಅಂಕೆಗೆ ಒಳಗಾಗುತ್ತಾರೆ–ಎಷ್ಟೋ ಕಡೆ ಮದುವೆಯ ಸಂದರ್ಭ ಒದಗಿದಾಗ ಅದರಲ್ಲೂ ಆಚಾರನಿಯಮದಲ್ಲಿ! ಶಿಕ್ಷಣದ ಸೋಲಿಗದು ನಿದರ್ಶನ. ಸಾಹಿತ್ಯ–ಶಿಕ್ಷಣಗಳು ಅವಳಿ ಜವಳಿಗಳಲ್ಲವೇ? ಅದರ ಸೋಲು ಇದರ ಸೋಲೂ ಹೌದು. ಸ್ವತಂತ್ರ ವಿಚಾರವನ್ನು ಪ್ರಚೋದಿಸದ, ಮಾನವತೆಯ ಕಳಕಳಿಯ ನೀತಿಯನ್ನು ಕಾರ್ಯರೂಪಕ್ಕಿಳಿಸುವ ಧೈರ್ಯವನ್ನು ಬೆಳೆಯಿಸದ ಸಾಹಿತ್ಯ–ಶಿಕ್ಷಣಗಳು ಸರಸ್ವತಿಯ ಬರಡು ಮೊಲೆಗಳೇ ಸರಿ! ಅಥವಾ ಇನ್ನೊಂದು ದೃಷ್ಟಿಯಿಂದ ನೋಡಿದರೆ ಅಂಥ ಮಟ್ಟದ, ಶಕ್ತಿಯ ಕೃತಿ–ಪದ್ಧತಿಗಳಿಂದ ಪ್ರಯೋಜನ ಪಡೆಯಲೊಲ್ಲದ ಹೃದಯ–ಬುದ್ಧಿಗಳುಳ್ಳ ಶರೀರಗಳು ಕೇವಲ ಪಾಷಾಣ ಫಲಕಗಳಲ್ಲದೆ ಮನುಷ್ಯರೆನ್ನಿಸಿಕೊಳ್ಳಲಾರರು!



# ೧೩.

# ಪೌರಧರ್ಮವೋ ಪ್ರಾಣಿಧರ್ಮವೋ?

ಶ್ರೀ ಎನ್ಕೆ ಕುಲಕರ್ಣಿಗಳು ಬರೆದ 'ನೆರೆಹೊರೆ' ಎಂಬ ನಾಟಕದ ಸರಸ ಸಂವಾದದಲ್ಲಿ ನಮ್ಮ ಪೌರಕರ್ತವ್ಯಗಳ ಬಗ್ಗೆ ಲಕ್ಷ್ಯವನ್ನು ಸೆಳೆಯಲಾಗಿದೆ.

'ಒಂದು ಚಾಳಿನೊಳಗ ಶಾಂತತಾದಿಂದ ಇರಲಿಕ್ಕೆ ಬರೋದಿಲ್ಲಾ, ಇವರೇನೋ ವಿಶ್ವಶಾಂತಿ ಸ್ಥಾಪನಾ ಮಾಡುವವರಂತ' ಎಂಬ ೧ನೇಯ ಸದ್ಗೃಹಸ್ಥನ ಉದ್ಗಾರ ಬಹಳ ಮಟ್ಟಿಗಿಂದು ಸತ್ಯ. ನಾಟಕದಲ್ಲಿ ಬರುವ ಸದ್ಗೃಹಸ್ಥರೂ ಸದ್ಗೃಹಿಣಿಯರೂ ಪ್ರದರ್ಶಿಸುವ ಹಾಸ್ಯಾಸ್ಪದ ಕಾಯದೆಬದ್ಧ ವಾದ-ಪ್ರತಿವಾದಗಳು ಒಣ ಪಾಂಡಿತ್ಯದಿಂದ ತಮ್ಮ ತಮ್ಮ ಅನುದಾರ-ಅನ್ಯಾಯ-ಅಪ್ರಾಮಾಣಿಕ ಪ್ರವೃತ್ತಿಗಳನ್ನು ಸಮರ್ಥಿಸಿಕೊಂಬ 'ಸುಶಿಕ್ಷಿತತೆ'ಗೆ ದೃಷ್ಟಾಂತಗಳಾಗಿವೆ.

೧ನೇಯ ಗೃಹಸ್ಥ- 'ಬರ್ರಿ, ನಿಮ್ಮದೂ ಒಂದು ಸಾಕ್ಷಿ ಇರ್ಲಿ ಇಕಾ ಈ ಇಲಿ ಸತ್ತು ಬಿದ್ರ ಇದು ನಮ್ಮದಲ್ರೆಪಾ ಅಂತ ಹೇಳಿದಿವಿ!

೨ನೇಯ ಗೃಹಸ್ಥ- 'ಹೂಂ! ನಿಮ್ಮ ಮನಿ ಇಲಿಗೆಲ್ಲಾ ಮುದ್ರಿ ಒತ್ತೀರೇನು ನಿಮ್ಮದೇ ಅಂತ ಗೊತ್ತ ಹಿಡೀಲಿಕ್ಕೆ?

ಈ ಸಂವಾದದ ವಿಸಂವಾದವೇ ಸಾಕು. ಸಭ್ಯ ನೆರೆಹೊರೆತನದ ಸುಗುಣ ಅವರಲ್ಲಿ ಎಷ್ಟಿತ್ತೆಂಬುದಕ್ಕೆ! ನಮ್ಮ ಅನೇಕ ಹಳ್ಳಿ ಪಟ್ಟಣಗಳಲ್ಲಿ ಪೌರನೀತಿಯ ಪ್ರಾಮುಖ್ಯವನ್ನರಿತು ಆಚರಿಸುವವರು ವಿರಳ. 'ಹತ್ತು ಮಕ್ಕಳ ತಾಯಿ ಹಾದಿಯಲ್ಲಿ ಬಿದ್ದು ಸತ್ತಳು' ಎಂಬ ಗಾದೆಯಂತೆ ಎಲ್ಲರ ಕರ್ತವ್ಯವೆನಿಸಿದ ಒಂದು ಕಾರ್ಯ ಯಾರದ್ದೂ ಅಲ್ಲ ಎಂದು ತಿಳಿದು ದೂರ ಉಳಿಯುವ ಅಭ್ಯಾಸ ನಮ್ಮಲ್ಲಿ ನೆಲೆನಿಂದ ಅಸಾಮಾಜಿಕತೆಯ ಒಂದು ಕ್ಷುದ್ರ ಮುಖ. ದೇವರಿಗೆ ಕ್ಷೀರಾಭಿಷೇಕವಾಗಬೇಕು; ಎಲ್ಲರೂ ನಿಮ್ಮ ನಿಮ್ಮ ಮನೆಯಿಂದ ಒಂದೊಂದು ತಂಬಿಗೆ ಹಾಲನ್ನು ತಂದು ದೇವಸ್ಥಾನದ ಕೊಳಗದಲ್ಲಿ ಸುರಿಯಿರಿ ಎಂದು ಗುರುಗಳು ಹೇಳಿದಾಗ, ಶಿಷ್ಯರಲ್ಲಿ ಪ್ರತಿಯೊಬ್ಬನೂ 'ಎಲ್ಲರೂ ಹಾಲು ಸುರಿಯುತ್ತಾರೆ. ಅದರಲ್ಲಿ ನನ್ನದೊಂದು ತಂಬಿಗೆ ನೀರು ಸೇರಿದರೆ ಗೊತ್ತಾಗಲಿಕ್ಕಿಲ್ಲ; ಎಂದುಕೊಂಡು ನಸುಗಪ್ಪಿನಲ್ಲಿ (ಸೂರ್ಯೋದಯಕ್ಕೆ ಮೊದಲು) ಎಲ್ಲರೂ ಹೋಗಿ ಮೂಲೆಯಲ್ಲಿದ್ದ

ಕೊಳಗದಲ್ಲಿ ನೀರು ಸುರಿದು ಬಂದರು. ಅನಂತರ ಗುರುಗಳಲ್ಲಿ ಹೋಗಿ ನೋಡಿದಾಗ ಅದರಲ್ಲಿ ಬರಿ ನೀರು ತುಂಬಿತ್ತು! ಈ ಕಥೆ ನಮ್ಮ ಭಾರತೀಯರನೇಕರಲ್ಲಿ ಕಂಡುಬರುವ 'ಬುದ್ಧಿವಂತಿ'ಕೆಗೆ ನಿದರ್ಶನವಾಗಿದೆ. ಇಂಥ ಬುದ್ಧಿವಂತಿಕೆ ಹೆಚ್ಚಾದುದರಿಂದಲೇ ನಮ್ಮ ಅನೇಕ ನಗರಗಳು ಹೊಲಸಿನ ಹೊಂಡಗಳಿಂದ ಹಲವೆಡೆ ಅಲಂಕೃತವಾಗಿವೆ! ಪ್ರಜಾಪ್ರಭುತ್ವದ ಸಹಕಾರಿ ಜೀವನ ತತ್ವಕ್ಕೆ ಪರಮಶತ್ರುವಾದ ಮನಃಪ್ರವೃತ್ತಿ ಉಕ್ತನಾಟಕ ಚಿತ್ರಿಸಿದ ಪಾತ್ರಗಳದು. ಜಗುಲಿಗೆ ಹಾರದೆ ಗಗನಕ್ಕೆ ಹಾರಲಾದೀತೆ? ಮನೆಯನ್ನು ವ್ಯವಸ್ಥೆಗೊಳಿಸಿಕೊಳ್ಳಲಾರದವ ಮಹಾರಾಜ್ಯವನ್ನು ವ್ಯವಸ್ಥಿತಗೊಳಿಸಿಯಾನೇ? ಊರನ್ನು ಉದ್ಧರಿಸಿಕೊಳ್ಳಲಾರದವರು ರಾಜ್ಯವನ್ನು ಉದ್ಧರಿಸಬಲ್ಲರೇ? ಒಂದೊಂದು ಚುನಾವಣೆಯ ಕ್ಷೇತ್ರದ ಪ್ರತಿನಿಧಿಗಳತ್ತ ಮೇಲಿನ ಪ್ರಶ್ನೆಗಳೊಡನೆ ನೋಡಿದರೆ ಏನು ಕಂಡೀತು? ಒಬ್ಬೊಬ್ಬ ನಗರಪಾಲಿಕೆಯ (ಸಭೆಯ) ಸದಸ್ಯನ ಮೋರೆಯನ್ನು ನಿರುಕಿಸಿದರೆ ಯಾವ ಉತ್ತರ ದೊರಕೀತು? ಭಾರತ ಹಾಗೂ ಕರ್ನಾಟಕಗಳ ಕೆಲಗಣ್ಯ ನಗರ–ಪಟ್ಟಣಗಳ ಉದ್ದಗಲ ಸಂಚರಿಸಿದರೆ, ನಾವು ಬಹುಶಃ "ದೇವರೇ ಗತಿ ಎಂಡ್ ಕಂಪನಿ"ಯಲ್ಲಿ ಕೆಲಸ ಮಾಡಲು ನಿಂತ ನಟರತ್ನರೇನೋ! ಎಂದು ಸಂಶಯಬರಲಾರದೇ? ಮೇಲಿನ ನಾಟಕ ಈ ಅಂಶವನ್ನು ಪ್ರೇಕ್ಷಕರ ಹಾಗೂ ಓದುಗರ ಮನಸ್ಸಿನಲ್ಲಿ ಬಿಂಬಿಸಲು ಪ್ರಯತ್ನಿಸುತ್ತದೆ. The city is an epitome of the social world-ನಗರವು ಸಾಮಾಜಿಕ ಪ್ರಪಂಚದ ಒಂದು ಸಾರಸಂಗ್ರಹದ ಸ್ವರೂಪವುಳ್ಳದ್ದು. ಎದುರಿನ ನಾಲ್ಕಾರು ರಾಜಮಾರ್ಗಗಳು ಥಳಥಳಿಸಿದರೆ ಸಾಕೆ? ಅಡ್ಡಗಲ್ಲಿಗಳತ್ತ ಕಣ್ಣು ಹೊರಳಿಸಿದರೆ ಬೆಂಗಳೂರಿನಲ್ಲಿ ಸಹ ತೆರೆಚರಂಡಿಗಳು ಕಂಡು ಬಂದಾವೆಂದು ಹೇಳಿದರೆ ನಮ್ಮ ನೈರ್ಮಲ್ಯ ದೃಷ್ಟಿ, ಕರ್ತವ್ಯದಕ್ಷತೆ, ಸಾರ್ವಜನಿಕ ಹಿತಚಿಂತನೆ ಎಷ್ಟು ಮಂದವಾಗಿ ಸಾಗುತ್ತಿದೆ! ಎಂಬುದು ಹೊಳೆಯದಿರದು.



# ೧೪.

# ಧರ್ಮಯೋಧನೋ ಅಧರ್ಮಯೋಧನೋ?

ಮಾಸ್ತಿಯವರ 'ಶಿವಛತ್ರಪತಿ' ಯಾದರೂ ಶಿವಾಜಿ ಮಹಾರಾಜನ ಮಾತೃಭಕ್ತಿ, ದೇಶಭಕ್ತಿ, ಧರ್ಮನಿಷ್ಠೆ, ಸಾಹಸ, ಕೌಶಲ, ಧೈರ್ಯ ಮುಂತಾದ ಹೃದಯಹಾರಿಯಾದ ಸುಗುಣಗಳನ್ನು ಪ್ರಕಟಪಡಿಸುವ ಕಾರ್ಯಗೌರವವನ್ನು ಬಿಂಬಿಸುವ ಐತಿಹಾಸಿಕ ನಾಟಕವಾಗಿದೆ. ಚಾಣಕ್ಯ–ಚಂದ್ರಗುಪ್ತರ ಜೋಡಿಯಾದ ಬಳಿಕ ಅದಕ್ಕೂ ಒಂದು ದೃಷ್ಟಿಯಿಂದ ಸುಂದರ ತರವೆನಿಸುವ ಜೋಡಿ ರಾಮದಾಸ–ಶಿವಾಜಿಗಳದು. ದೇಶಕ್ಕಾಗಿ ನಾನಾ ವಿಧದ ತ್ಯಾಗಗಳನ್ನು ಮಾಡಬೇಕಾಗಿರುವ ಇಂದಿನ ದಿನಮಾನದಲ್ಲಿ ನಮ್ಮ ಹೃದಯದಲ್ಲಿ ಸೈನಿಕ ಔದಾರ್ಯದ ವ್ಯಕ್ತಿತ್ವವುಳ್ಳ ತೇಜಃಪುಂಜ ಮೂರ್ತಿಗಳಾದ ಶಿವಾಜಿ–ಸುಭಾಷಚಂದ್ರ ಬೋಸರಂಥ ಮಹಾಸತ್ವರ ನೆನಹು ಸದಾ ಜಾಗೃತವಾಗಿರುವುದವಶ್ಯ.

ಭಾರತದ ಇತಿಹಾಸದಲ್ಲಿ ಧರ್ಮಯುದ್ಧದ ಪರಂಪರೆ ಹಿಂದುಯುಗದ ಪೃಥ್ವೀರಾಜ ಜಯಚಂದರ ಕಾಲಕ್ಕೆ ಸಮಾಪ್ತಿ ಹೊಂದಿತೆನ್ನಬಹುದು. ಘಜನಿ–ಘೋರಿಗಳ ಪ್ರವೇಶವು ಧರ್ಮಯುದ್ಧವನ್ನು ಅವ್ಯವಹಾರ್ಯದಶೆಗಿಳಿಸಿತೆನ್ನಬೇಕು. ಅಲ್ಲಿಂದ ಮುಂದೆ ಮಹಾಮದಿಯುಗವೂ ಅಧರ್ಮಯುದ್ಧ ಪದ್ಧತಿಯೂ ಒಟ್ಟೊಟ್ಟಿಗೇ ವೃದ್ಧಿ ಹೊಂದಿದವು. ಅದರಲ್ಲೂ ಅಲ್ಲಾವುದ್ದೀನನ ಆಳಿಕೆ ಅಂಥ ಸ್ವಚ್ಛಂದ ನೀತಿಯ ರಾಜಕೀಯ ವ್ಯವಹಾರದ ತುತ್ತತುದಿಯನ್ನು ತೋರಿಸಿತು. ಅವನ ಬಗ್ಗೆ ಇರುವ ಗಾದೆಯಿದು:

'ಅಲ್ಲಾವದೀನ' ನೃಪತೌ ನಸಂಧಿರ್ನಚ ವಿಗ್ರಹ: ಅಂದು ಅಂತಾರಾಜ್ಯಕೀಯ ಸಂಬಂಧಗಳಲ್ಲಿ 'ವಾರಾಂಗನೇವ ನೃಪನೀತಿರನೇಕರೂಪಾ' ಎಂಬ ತತ್ವ ಜಾರಿಗೆ ಬಂದದ್ದು ಇಂದಿಗೂ ಅನೇಕ ರೂಪಗಳಲ್ಲಿ ಅಮಲಿನಲ್ಲಿರುವುದು ಅನುಭವ ಸಿದ್ಧ ರಾಜನೀತಿಯು 'ರಾಜತಂತ್ರ'ವಾಗಿ ಪರಿಣಮಿಸಿದ ಸಮಾಜದಲ್ಲಿ ಒಳ್ಳೆದರಿಗೆ ಒಳಿತನ್ನೂ ಕೇಡಿಗರಿಗೆ ಕೇಡನ್ನೂ ಮಾಡುವ ರಾಜಸ ನ್ಯಾಯವೊಂದೇ ವ್ಯವಹಾರ್ಯವಾದ ರಾಜನೀತಿಯಲ್ಲವೇ? ಈ ಪಾತ್ರಾಪಾತ್ರ ವಿವೇಕವನ್ನಾಧರಿಸಿದ, ಕಂಟಕವನುತ್ತರಿಸುವುದು ಕಂಟಕದೆ ಅಥವಾ ಮಾಯೆಯನು ಮಾಯೋಪಯೋಗದಲಿ ಪರಿಹರಿಸುವುದು ಎಂಬ ಧೋರಣದ ರಾಜ್ಯಧರ್ಮವೇ ಈಗಲೂ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಬಳಕೆಯಲ್ಲಿಲ್ಲವೇ? ಈ ನೀತಿವೃಕ್ಷದ ಪರಿಪಕ್ವ ಫಲವೆನಿಸಿದ ಶಿವಾಜಿ ಭಾರತದ ಸಹಜ ಧರ್ಮ–ಸಂಸ್ಕೃತಿಗಳ ಪುನರುತ್ಥಾನವನ್ನು

ಯಶಸ್ವಿಯಾಗಿ ನೆರವೇರಿಸಿದ ಉದಾಹರಣೆ ಆಧುನಿಕ ಭಾರತೀಯ ತರುಣ ಸಂತತಿಗೆ ಅತ್ಯುಜ್ವಲ, ಅತ್ಯಾನಂದಕರ ಎನ್ನಿಸದಿರದು. 'ಮಕ್ಕಳಿಗೆ ಹಾಗೂ ದಡ್ಡರಿಗೆ ಮಾತ್ರ ತೊಂದರೆಯೆಂಬುದು ಬ್ರಹ್ಮರಾಕ್ಷಸನಂತೆ ಕಾಣಿಸುತ್ತದೆ. 'ಭಯವೂ ನಾನೂ ಸಹೋದರರು ಆದರೆ ನಾನು ಹಿರಿಯ, ಅದು ಕಿರಿಯ,– ಎಂದು ಸಾರಿದ ಧೀರರು ಜಗತ್ತಿನಲ್ಲೇ ಅತಿ ವಿರಳರು. ಔರಂಗಜೇಬನ ಆಮಂತ್ರಣವನ್ನೊಪ್ಪಿ ದಿಲ್ಲಿಗೆ ಹೋಗಿ, ಸೆರೆಸಿಕ್ಕಿ, ತಪ್ಪಿಸಿಕೊಂಡು ಬಂದ ಶಿವಾಜಿ–ತಂತ್ರ ಶಿವಾಜಿಗೆ ಸಾಧ್ಯ ಎನ್ನುವಂಥದು. ಸೆರೆಯಲ್ಲಿರುವಾಗ ಅವನಿಗೂ ಅವನ ಸಂಗಡಿಗರಿಗೂ ಇದ್ದ ಆತ್ಮ ವಿಶ್ವಾಸ ಹೇಗಿತ್ತು ನೋಡಿ:

ಶಿವಾಜಿ: ಬಾದಷಹ ಇಷ್ಟರಲ್ಲೇ ಒಂದು ದಿನ ಇಲ್ಲಿಗೆ ಬರುತ್ತಾರೆಂತ ರಾಮಸಿಂಹರಾಜರು ಹೇಳಿದರಲ್ಲಾ. ಅವರು ಬಂದಾಗ ಊರಿಗೆ ಹೋಗುವುದಕ್ಕೆ ಅಪ್ಪಣೆ ಕೇಳುವುದು. ಒಪ್ಪಿದರೆ ಸರಿ. ಇಲ್ಲದಿದ್ದರೆ ಏನಾದರೂ ಮಾಡಿ ಹೊರಗೆ ಹೊರಡಬೇಕು.

ಪಿಂಗಳೆ: ಹೇಳದೆ ಹೊರಟು ಹೋಗುವುದಾದರೆ ರಾಮಸಿಂಹರಾಜರು ಹೇಳಿದಂತೆ ಒಂದು ತಿಂಗಳ ಹಿಂದೆಯೇ ಹೋಗಬಹುದಾಗಿತ್ತು. ಅವರು ಎಲ್ಲಾ ಸಹಾಯವನ್ನು ಮಾಡುತ್ತೇವೆಂದರು.

ಶಿವಾಜಿ: ಒಂದು ತಿಂಗಳ ಹಿಂದೆ ಅದು ಸಾಧ್ಯವಾಗಿರಲಿಲ್ಲ. ಈಗ ಸಾಧ್ಯ.

ಪಿಂಗಳೆ: ಹೌದು ಮಹಾಸ್ವಾಮಿ ಅವರು ಮೋಸಮಾಡಿದರೂ ನಾವು ತಪ್ಪಿಸಿಕೊಳ್ಳುವ ಹಾಗಿರಬೇಕು.

ಮೇಲೆ ಹೇಳಿದಂತೆ ಶಿವಾಜಿ ತಪ್ಪಿಸಿಕೊಳ್ಳುತ್ತಾನೆ. ಅವನು 'ಸ್ವಸ್ತಿ ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನ ಶ್ರೀಮನ್ಮಹಾರಾಷ್ಟ್ರ ದೇಶದಲ್ಲಿ ರಾಷ್ಟ್ರಾಭಿಮಾನಿದೇವಿ ಜಗದ್ಧಾತ್ರಿ ಶ್ರೀ ರಾಜರಾಜೇಶ್ವರಿ ಶ್ರೀ ಮದಂಬಾಭವಾನೀಕೃಪಾಪರಿಪೋಷಿತ ಶ್ರೀಮನ್ಮಹಾರಾಜಶ್ರೀ ಶಿವಾಜಿ ಭೋನಸ್ಲೆ ಮಹಾರಾಜ'ನೂ ಆಗುತ್ತಾನೆ. ರಾಮದಾಸರ ಆಜ್ಞೆಯಂತೆ ರಾಜ್ಯವನ್ನು ಆಳುತ್ತಾನೆ: ಧರ್ಮವನ್ನು ಸಲಹುತ್ತಾನೆ.

ಶಿವಾಜಿಯ ಈ ರಾಷ್ಟ್ರಪೌರುಷ ತಾರುಣ್ಯ ಹೀನವಾಗಿರುವ ಇಂದಿನ ಜನತಾಂತರಂಗಕ್ಕೆ ಕಾಯಕಲ್ಪ ಮಾಡಿಸಬಲ್ಲದು. ಈ ದೃಷ್ಟಿಯಿಂದ ಸಾಹಸಿಕ ರಾಷ್ಟ್ರವೀರರ ಚರಿತಾಮೃತ ಯಾವಾಗಲೂ ತಾರುಣ್ಯಕ್ಕೆ ವೇದ, ಮಧ್ಯವಯಸ್ಸಿಗೆ ಉಪನಿಷತ್ತು, ವಾರ್ಧಕ್ಯಕ್ಕೆ ಪುರಾಣ. ಶಿವಾಜಿಯ ದೈವಭಕ್ತಿ ಕೊಟ್ಟ ಪ್ರೇರಣೆಯು ದೇವರಾಜ್ಯ ಸ್ಥಾಪನೆಗೆ! ಆ ರಾಜ್ಯದಲ್ಲಿ ಅತ್ಯುಚ್ಚ ಧರ್ಮನೀತಿಯಂತೆ ನಡೆಯುತ್ತಾ ಸಾಧಿಸಬೇಕಾದ ಅತ್ಯುದಾತ್ತ ಉದ್ದೇಶಕ್ಕೆಂದು ಕಾರ್ಯಪರರಾದ ಅತ್ಯುತ್ತಮರಿಗಾಗಿ ಸಮಾಜ ಸರ್ವ ಸವಲತ್ತುಗಳನ್ನು ಸದಾ ಒದಗಿಸುತ್ತಿರುತ್ತದೆ. ಅಂಥ ಆದರ್ಶವನ್ನು ಕಣ್ಣೆದುರಿಗಿಟ್ಟುಕೊಂಡದ್ದರಿಂದಲೇ ಶಿವಾಜಿ ನಿತ್ಯನಿರ್ಭೀತನಾಗಿ ದುಡಿದ; ಅಪಾಯಗಳಿಗೇ ಅಪಾಯ ಸ್ವರೂಪನಾಗಿ, ಹಿಡಿದ ಕಾರ್ಯವನ್ನು ಸಾಧಿಸಿದ. Ideals are stirrings of mighty impulses against the walls of clay-ಧ್ಯೇಯಗಳೆಂದರೆ ಮಣ್ಣುಗೋಡೆಯಲ್ಲಿ ಮೊಗಚಿ ಒಗೆಯಲೆದ್ದ

ಮಹಾಪ್ರಚೋದನೆಗಳ ಕ್ಷೋಭೆಗಳು! ಸರ್ವಸಿದ್ಧಿಗಳ ಸಾಧನಾಶಕ್ತಿ ಮತ್ತು ಸರ್ವಪ್ರಯತ್ನಗಳ ಆಕರಗಳೆಂದರೆ ಧ್ಯೇಯಗಳೇ! ಧ್ಯೇಯವಿಲ್ಲದ ಬಾಳೇ ಕುರುಡು, ಕತ್ತಲು, ಕೊಳಕು! ಶಿವಾಜಿಯ ಜೀವನ ತೋರಿಸುವುದೀ ಸತ್ಯವನ್ನು!

ಸ್ವಾತಂತ್ರ್ಯ ಬಂದರೂ ನಮ್ಮ ಮೂವತ್ತು ಮೂರುಕೋಟಿ ಏಕೆ ಆರೋಗ್ಯಕರ ಪ್ರಮಾಣದಲ್ಲಿ ಆನಂದಿತವಾಗಿಲ್ಲ, ಉತ್ಸಾಹಯುಕ್ತವಾಗಿಲ್ಲ? 'ಸಪ್ಪೆ ಬಾಳುವೆಗಿಂತ ಉಪ್ಪುನೀರೂಲೇಸು' ಎಂಬದನಿಯನ್ನೇಕೆ ಹಲವು ಕಡೆ ನಾವಿಂದು ಕೇಳುತ್ತೇವೆ? 'ನೀನು ಹೊಡೆದ ಹಾಗೆ ಮಾಡು–ನಾನು ಅತ್ತ ಹಾಗೆ ಮಾಡುತ್ತೇನೆ' ಎಂಬಂತಹ ಕೃತಕ ನಾಟ್ಯ ವ್ಯವಹಾರದಲ್ಲೇಕೆ ಕಾಣುತ್ತದೆ? ನಮ್ಮ ರಾಷ್ಟ್ರೀಯ ಉತ್ಸವಗಳು ಜನರನ್ನೇಕೆ ನ್ಯಾಯವಾದ ಪ್ರಮಾಣದಲ್ಲಿ ಹುರಿದುಂಬಿಸುತ್ತಿಲ್ಲ? ಈ ಪ್ರಶ್ನೆಗಳಿಗಿರುವುದು ಒಂದೇ ಒಂದು ಉತ್ತರ. ನಮ್ಮ ಜನತೆಗಿನ್ನೂ ಧ್ಯೇಯದರ್ಶನವಾಗಿಲ್ಲ! ಶಾಬ್ದಿಕ ಸಂಸ್ಕಾರವಷ್ಟೇ ಆಗಿದೆಯಲ್ಲದೆ ನಮ್ಮ ಹೊಸ ಗಣರಾಜ್ಯದ ಪವಿತ್ರ ಧ್ಯೇಯದ ಸಾಕ್ಷಾತ್ಕಾರವಾಗಿಲ್ಲ; ಸತ್ಯದ, ನ್ಯಾಯದ, ಸಾಹಸದ, ಧರ್ಮದ, ಜ್ಞಾನದ ವೀರಾವೇಶದ ಅಭಿರುಚಿ ಬೆಳೆದಿಲ್ಲ. ಗಾಂಧೀಜಿಯ ಗುರುತ್ವ, ಟಾಗೋರರ ಮಂತ್ರ ಈ ಅಗಲದ ದೇಶಕ್ಕೆ ಸಾಲದಾಯಿತು. ನಮ್ಮ ಧ್ಯೇಯಪ್ರಚಾರವು ಅರ್ಥ ತಿಳಿಯದೇ ಮಂತ್ರ ಹೇಳುವ ಹಾರುವನ ಹಗರಣವಾಯಿತು ಚಾಗದ, ಭೋಗದ, ಅಕ್ಕರದ ಗೊಟ್ಟಿಯ, ಗೇಯದ ಅಲಂಪಿನ ಇಂಪಿನ ದನಿ ಎದೆಯಲ್ಲಿ ಎಚ್ಚತ್ತಿಲ್ಲ. ಅದರಿಂದಲೇ–

'ಏಸೊಂದು ಸೆಣಸ್ಯಾಟ, ಕಾಸಿನ ಕುಣಿಸ್ಯಾಟ
ಸಾಕಾತು ಎಣಿಸ್ಯಾಟ!'

ಎಂಬ ರಗಳೆಯ ಗೊಣಗುದನಿ ಗುಪ್ತವಾಗಿಯೂ ಪ್ರಕಟವಾಗಿಯೂ ಕಿವಿಗೆದುರಾಗುತ್ತಿದೆ ಆಗೀಗ. ಮಧ್ಯಮ ವರ್ಗಕ್ಕೆ ಸಂಶಯ, ಕಾರ್ಮಿಕರಿಗೆ ಭಯ, ರೈತರಿಗೆ ದಿಗ್ಭ್ರಮೆ– ಅಂತೂ ಎಲ್ಲರಿಗೂ ಒಂದು ವಿಧದ ಗಡಿಬಿಡಿ, ಗೊಂದಲ, ದಿಕ್ಕುಗೇಡು! ಏಕೆ? ಈ ಅರಕ್ಷಿತತೆಯ, ಅಸಂತುಷ್ಟಿಯ, ಅವ್ಯಾಪಾರದ ಬೀಜವಿರುವುದು ಧ್ಯೇಯಾಭಾವದಲ್ಲಿ.

ದೇವರಿಲ್ಲದ ಗುಡಿಯು
ಹಾಳು ಬಿದ್ದಂಗಡಿಯು
ಭಾವವಿಲ್ಲದ ಭಕುತಿ ಕುಹಕ ಯುಕುತಿ'

ಎಂಬ ಕನಕ ನೀತಿಯಂತೆ ಭಾರತೀಯ ಹೃದಯ ದೇವಾಲಯದಲ್ಲಿ ಶಬ್ದರೂಪದ ಕಲ್ಲಿನ ಧ್ಯೇಯಮೂರ್ತಿಯಿದೆ. ಅದಕ್ಕೆ ಪ್ರಾಣಪ್ರತಿಷ್ಠೆ ಮಾಡಿದೊಡನೆಯೇ ಭಾರತದ ಜೀವನ ನವಚೇತನೆಯಿಂದ ಜಿಗಿದೇಳುವುದು. ಆ ಬಗ್ಗೆ ಭಾರತಕ್ಕೆ ವೀರಚರಿತಧ್ಯಾನ ಅವಶ್ಯಕ.



# ೧೫.

# ದಾಸಿಯೋ ಗಂಡಸೋ?

ಶ್ರೀ ರಂಗರ 'ಮುಕ್ಕಣ್ಣ ವಿರಾಟ ಪುರುಷ'ದಲ್ಲಿ ವಿವೇಕವೆಂಬ ಮೂರನೇಯ ಕಣ್ಣನ್ನು ತಾಳಿ ಮಾನವನು ಶಿವದೃಷ್ಟಿಯಿಂದ ಸಮಾಜವನ್ನು ರೂಪಿಸಬೇಕೆಂಬ ಕರೆಯಿದೆ. ಅವರೆನ್ನುತ್ತಾರೆ:

"ಸಮಾಜದಲ್ಲಿ ಸ್ತ್ರೀಯರದೊಂದು ಬೇರೆ ಜಾತಿಯೇ ಆದಂತಾಗಿದೆ; ಅವರ ಅಧಿಕಾರ ಬೇರೆ, ಅವರ ಬುದ್ಧಿ ಬೇರೆ, ಅವರ ಕೆಲಸ ಬೇರೆ. ಹೀಗೆ ಸ್ತ್ರೀ ಜಾತಿಯನ್ನು ಬೇರೆ ಮಾಡಿದ್ದಕ್ಕೆ ಗಂಡಸಿಗಿಂತ ಹೆಂಗಸು ಕಡಿಮೆಯೋಗ್ಯತೆಯವಳೆಂಬ ಭಾವನೆಯೇ ಬಲವಾದ ಕಾರಣ... ಪಾಶ್ಚಿಮಾತ್ಯರಲ್ಲಿಯೂ ಕೂಡ ಮೊದಲಿನಿಂದ ಮೊನ್ನಿನವರೆಗೆ ಗಂಡಸು–ಹೆಂಗಸರಲ್ಲಿ ಕೀಳು–ಮೇಲು ಕಲ್ಪಿಸುವ ಪರಿಪಾಠವಿದ್ದಿತು... ಪ್ರಜಾಸತ್ತಾತ್ಮಕ ಫ್ರಾನ್ಸ್ ದೇಶದಲ್ಲಿ ಸ್ತ್ರೀಯರಿಗೆ ಮತಾಧಿಕಾರವಿಲ್ಲ; ಮತಾಧಿಕಾರವನ್ನು ದೊರಕಿಸಿದ ಆಂಗ್ಲ ಸ್ತ್ರೀಯರಿಗೂ ಮದುವೆಯ ಮರು ದಿವಸ ಪರಾವಲಂಬಿಗಳಾಗಲಿಕ್ಕೆ ಕಾಯಿದೆ ಕಾನೂನುಗಳ ಪ್ರೋತ್ಸಾಹವಿದೆ; ಅಮೇರಿಕೆಯಲ್ಲಿ ಗಂಡಸರ ವೇಷ–ಭಾಷಾಚಾರಗಳನ್ನು ಅನುಕರಿಸುವುದೇ ತಮ್ಮ ಸ್ವಾತಂತ್ರ್ಯವೆಂಬ ಕಲ್ಪನೆಯು ಸ್ತ್ರೀಯರಿಗೆ ರೂಢಿಯಾಗಿ ಹೋಗಿದೆ.

"ಇನ್ನು ಸ್ತ್ರೀಯರ ವಿಷಯವಾಗಿ ನಮ್ಮ ದೇಶದಲ್ಲಿಯ ವಿಚಾರಗಳನ್ನು ಸ್ವಲ್ಪದರಲ್ಲಿ ಹೇಳುವುದು ಸುಲಭವಲ್ಲ. ಒಟ್ಟಿನ ಮೇಲೆ 'ನಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂಬುದೇ ಅಂದಿನಿಂದ ಇಂದಿನವರೆಗೆ ನಡೆದು ಬಂದ ಸೂತ್ರ... ಹೀಗೆ ಅಜ್ಞ ಮತ್ತು ಪರಚ್ಛಂದಾನುವರ್ತಿನಿ ಸ್ತ್ರೀ ನಮ್ಮ ಸಮಾಜದಲ್ಲಿ ನೆಲೆಗೊಂಡಳು... ತಮ್ಮ ಮೂರನೇಯ ಕಣ್ಣು ತೆರೆದು ಸ್ತ್ರೀಯಾದರೂ ಮನಸ್ಸು, ಬುದ್ಧಿ, ಸಾಹಸಗಳಿರುವವೆಂಬುದನ್ನು ನೋಡಿದಂತೆಯೇ ತೋರುವುದಿಲ್ಲ... ಒಟ್ಟಿನ ಮೇಲೆ ನಾಟಕದಲ್ಲಿ ಕಲಾವತಿಯು ಹೇಳುವಂತೆ ಪುರುಷನ ದಾಸಿಯಾಗದ ಹೊರತು ಸ್ತ್ರೀಯ ಸ್ತ್ರೀತ್ವಕ್ಕೆ ಮಾನವೇ ಇಲ್ಲ. ನೂರಾರು ವರ್ಷಗಳ ಶಿಕ್ಷಣ–ಸಂಸ್ಕಾರಗಳಿಂದ ಗಂಡಸಿನ ಮನಸ್ಸು ಬೆಳೆದಿದೆ, ವಿಚಾರ ಶಕ್ತಿಯು ಹೆಚ್ಚಿದೆ. ಆದರೆ ಹೆಂಗಸು ಮಾತ್ರ ಬ್ರಾಹ್ಮಣರಂತೆ ಹಿಂದುಳಿದ ಜಾತಿಯಲ್ಲಿ ಸೇರಿದ್ದಾಳೆ...

"ನಿರವಧಿದಾಸ್ಯದಿಂದ ಸ್ತ್ರೀ ತನ್ನ ಸ್ತ್ರೀತ್ವದ ಭಾವನೆಯನ್ನೇ ಮರೆತಿದ್ದಾಳೆ! ಪುರುಷರಂತೆ ತನ್ನ ಶಿಕ್ಷಣ, ಪುರುಷರಂತೆ ತನ್ನ ನಡೆನುಡಿ. ಪುರುಷರಂತೆ ತನ್ನ ಒಪ್ಪು–ತಪ್ಪು, ಪುರುಷನಷ್ಟು

ತನ್ನ ಯೋಗ್ಯತೆ ಇಷ್ಟಾದರೆ ಇವಳಿಗೆ ಸಮಾಧಾನ. ತನಗೆ ಸರಿಯೆನಿಸುವ ಶಿಕ್ಷಣ, ತನಗೆ ಒಪ್ಪಾದ ನಡೆನುಡಿ. ತನ್ನ ವಿಶಿಷ್ಟ ಯೋಗ್ಯತೆ ಈ ತರದ ಸ್ವತಂತ್ರ ವಿಚಾರವೇ ಪಾಪ!– ಅವಳಿಗೆ ಇರುವುದಿಲ್ಲ."

೧. ಕೀಳು ಮೇಲುಗಳ ಕಲ್ಪನೆ ಇದ್ದದ್ದು ಸ್ತ್ರೀ ಪುರುಷರ ನಡುವೆ ಮಾತ್ರವಲ್ಲ; ಪುರುಷ ವರ್ಗಗಳ ನಡುವೆಯೂ ನಡೆದುಕೊಂಡು ಬಂದಿದೆ.

ಮೇಲೆ ಉದ್ಧರಿಸಿದ ಮುನ್ನುಡಿಯೇ ನಾಟಕದ ಸಂದೇಶವಾಗಿದೆ. ಆದರೆ ಪರಿಸ್ಥಿತಿಯಲ್ಲಿ ಕಂಡ ದೋಷದ ಪರಿಹಾರವನ್ನೂ ಗ್ರಂಥಕರ್ತರೇ ಸೂಚಿಸಿದ್ದಾರೆ:

"ಈ ಸ್ಥಿತಿಯನ್ನು ಹೋಗಲಾಡಿಸುವುದಕ್ಕೆ ತಕ್ಕ ಉಪಾಯವೆಂದರೆ ಒಂದೇ ಒಂದು ಸೂತ್ರ– 'ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನೆರೆಮನೆಯವರ ದುಃಖಕ್ಕೆ ಅಳುವರ ಮೆಚ್ಚ ಕೂಡಲ ಸಂಗಮದೇವ'; ಪರೋಪಕಾರದ ಸೋಗನ್ನು ಬಿಟ್ಟು ಬಿಡಬೇಕು; ಪರಮಾರ್ಥದ ಸೋಗನ್ನು ಬಿಟ್ಟು ಬಿಡಬೇಕು. ಸ್ತ್ರೀಯರ ಸ್ವಾತಂತ್ರ್ಯಕ್ಕಾಗಿ ಹೆಣಗಾಡುವೆ. ಬಡವರಿಗೆ ಭಾಗ್ಯವನ್ನು ತರಲು ಬಳಲುವೆ ಅಸ್ಪೃಶ್ಯರ ಉದ್ಧಾರಕ್ಕೆ ಹೋರಾಡುವೆ ಎಂಬ ಬೆಟ್ಟದಂತಹ ಮಾತುಗಳಿಗೆ ಬಲಿ ಬಿಳಕೂಡದು." ಪುರುಷವರ್ಗಗಳಲ್ಲಿರುವ ಉಕ್ತಭಾವ ಹೋಗಲು ಕೀಳ್ತನ ಬೇಡವೆನಿಸಿದ ವರ್ಗವು ಯೋಗ್ಯತಾ ಸಂಪಾದನೆ ಮತ್ತು ಪ್ರತಿಭಟನೆಗಳಿಂದ ಪ್ರಯತ್ನ ಮಾಡುತ್ತ ಹೋಗಬೇಕು. ಮೇಲ್ತನದ ವರ್ಗವಿಂದಿಗೂ ಸ್ವೇಚ್ಛೆಯಿಂದ ಎಲ್ಲೂ ಮೇಲ್ತನವನ್ನು ಬಿಟ್ಟುಕೊಟ್ಟಿಲ್ಲ. ಆದರೆ ಈ ಮಾರ್ಗ ಸ್ತ್ರೀಯರಿಗೆ ಜಯಪ್ರದವಲ್ಲ. ಏಕೆಂದರೆ ದೇಶ ಕಾಲ ಸಂದರ್ಭಗಳಲ್ಲಿ ಅವರು ಪುರುಷವರ್ಗಗಳು ಪರಸ್ಪರ ಇರುವ ಹಾಗೆ ಇರುವಷ್ಟೂ ಪ್ರತ್ಯೇಕತೆಯಿಂದ ಇರಬಲ್ಲವರಲ್ಲ. ಅಲ್ಲದೆ ಅವರ ಸ್ವಾತಂತ್ರ್ಯದ ಕಲ್ಪನೆ ಇಂಥ ಮಾದರಿಯದೇ ಇರಬೇಕೆಂಬುದನ್ನು ಅವರೇ ಹೇಳುವಂತಾಗಬೇಕಲ್ಲದೆ, ಪುರುಷ ಅದನ್ನು ಹೇಳಹೋದರೆ ಶ್ರೀರಂಗರ ಹಾಗೇ ಮತ್ತೊಬ್ಬ ಆಕ್ಷೇಪವೆತ್ತಿಯಾನು. ಅವಳು ಗಂಡಸಿನ ನಕಲಾಗಬಾರದು, ದಾಸಿಯಾಗಬಾರದು. ಅವಳು ಅವಳತನವನ್ನು ಬೆಳೆಸಿಕೊಳ್ಳಬೇಕು ಎಂಬುದು ಶ್ರೀರಂಗರಂತೆಯೇ ಎಲ್ಲ ಗಂಡಸರೂ ಆಗ್ರಹಿಸಬೇಕಾದ ಅಂಶ. ನವಭಾರತೀಯ ರಮಣಿಯರು ಈ ಸ್ತ್ರೀತ್ವ ಧ್ಯೇಯವನ್ನು ಸುಸಂಬದ್ಧವಾಗಿ, ಸಮನ್ವಿತವಾಗಿ, ಸತ್ಯವಾಗಿ ಮೊದಲು ಊಹಿಸಿಕೊಳ್ಳಲಿ!

೨. "ನಸ್ತ್ರೀ ಸ್ವಾತಂತ್ರ್ಯಮರ್ಹತಿ" ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ–ಅಂದರೆ ಯಾವ ಸ್ವಾತಂತ್ರ್ಯವನ್ನು ನಿಷೇದಿಸಿದ್ದಾರೆ, ಯಾವ ಪ್ರಕರಣದಲ್ಲಿ ಈ ಮಾತಿನ ತುಂಡು ಪ್ರಯೋಗವಾಗಿದೆ. ಎಂಬುದನ್ನು ವಿಚಾರಮಾಡಬೇಕು... ಹಿಂದಣ ಶ್ಲೋಕದಲ್ಲಿ ಸ್ವಾತಂತ್ರ್ಯ ಶಬ್ದಕ್ಕೆ ವಿಷಯಾಸಕ್ತಿಯಲ್ಲಿ ಮನಸ್ವೀ ಪ್ರವರ್ತಿಸುವ ಸ್ವಾತಂತ್ರ್ಯವೆಂಬರ್ಥ ಮಾಡಿ ಮುಂದಣ ಶ್ಲೋಕದಲ್ಲಿ ಪ್ರಯೋಗಿಸುವ ಸ್ವಾತಂತ್ರ್ಯ ಶಬ್ದಕ್ಕೂ ಅದೇ ಅರ್ಥವನ್ನೇ ಮಾಡಬೇಕೇ ವಿನಾ ಪೂರ್ವಶಬ್ದಕ್ಕೆ ಏಕದೇಶ ಸ್ವಾತಂತ್ರ್ಯವೆಂದೂ ಪರಶಬ್ದಕ್ಕೆ ಸರ್ವಸ್ವಾತಂತ್ರ್ಯವೆಂದೂ ಅರ್ಥ ಮಾಡಬಾರದು. 'ರಕ್ಷತಿ' ಎಂದು ರಕ್ಷಣಾರ್ಥದ ಕ್ರಿಯಾಪದವನ್ನು

ಪ್ರಯೋಗಿಸಿರುವುದರಿಂದಲೂ ಇದೇ ಅರ್ಥವು ಸ್ಪಷ್ಟವಾಗುತ್ತದೆ... ಈ ವಚನಗಳು ಪ್ರತ್ಯೇಕವಾಗಿಯೂ ಸಮಷ್ಟಿಯಾಗಿಯೂ ರಕ್ಷಣವೆಂದರೆ ಸ್ತ್ರೀಯು ದೂಷಿತಳಾಗದಂತೆ ಕಾಪಾಡಿಕೊಳ್ಳುವುದು ಎಂಬರ್ಥವನ್ನೇ ವ್ಯಕ್ತಪಡಿಸಿವೆ; ಸ್ತ್ರೀಯ ಸರ್ವಸ್ವಾಪಹಾರದ ಪ್ರಸಕ್ತಿಯೇ ಇಲ್ಲ.

:"ಆರ್ಯಧರ್ಮ" ಪುಟ ೧೯೮–೧೭೦

ಗ್ರಂಥಕರ್ತ: ಸಿ.ಎನ್.ಶಾಸ್ತ್ರಿ

ಮೇಲಿನ ಉಪನ್ಯಾಸದ ಮಥಿತಾರ್ಥರೂಪವಾಗಿ ಪ್ರತಿಯೊಂದು ವ್ಯಕ್ತಿಯೂ ತನ್ನನ್ನು ತಾನರಿಯಲು ಮೊದಲು ಹೆಣಗಬೇಕು; ಹೆರವರು ಬರೆದಿಟ್ಟದ್ದಕ್ಕಾಗಿ ತಲೆ ತುರಿಸಕೂಡದು; ತನ್ನ ನಡೆನುಡಿಗಳಿಂದಲೇ ತಾನು ಬದುಕಿ ಬೆಳೆಯುತ್ತೇನೆಂದು ತಿಳಿದುಕೊಳ್ಳಬೇಕು; ತನಗೆ ಸುಖಬೇಕು, ತಾನು ಸುಖದಿಂದ ಬಾಳಬೇಕು; ತನಗೆ ಸುಖ ದೊರಕುವಂತೆ ಮಾಡಿಕೊಳ್ಳಬೇಕು–ಎಂದು ಹೇಳಿ, ಅನಂತರ 'ತನ್ನ ಸುಖಕ್ಕಾಗಿಯೇ ತಾನು ಎರಡನೆಯವರ ಸುಖದುಃಖವನ್ನು ನೋಡುವ ಯಜ್ಞವನ್ನು ಮಾಡಬೇಕು' ಎಂದು ಸಾರಲಾಗಿದೆ. ಈ ಮಾತು ಎಲ್ಲ ಜಾತಿ–ಲಿಂಗ–ವರ್ಣ–ವಿದ್ಯೆಯವರಿಗೂ ಅನ್ವಯಿಸುತ್ತದೆ. ಒಂದೇ ಮಾತಿನಲ್ಲಿ ಉಕ್ತ ಅಭಿಪ್ರಾಯವು ಮಾನವ ಸಂಸ್ಕೃತಿಯ ತಿರುಳನ್ನು ಧ್ವನಿಸುತ್ತದೆ ಎಂದು ಹೇಳಬಹುದು. "ಆತ್ಮ ನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ" ಎಂದ ಯಾಜ್ಞವಲ್ಕ್ಯ ಮುನಿಯ ಮಾತಿಗಿದೇ ಅರ್ಥ. ತಮ್ಮ ಪ್ರಿಯವನ್ನು ಬಹು ಸುಲಭವಾಗಿ ಯಾರಾದರೂ ಅರಿತಾರು. ತಮ್ಮ ಹಿತ (ಚಿರಸುಖ, ಸ್ಥಿರ ಸಮಾಧಾನ, ಸತತ ಮನಸ್ಸಮತೋಲ) ಯಾವುದು? ಹೇಗೆ ಅದನ್ನು ಸಾಧಿಸಿಕೊಳ್ಳಬೇಕು? ಎಂಬುದನ್ನು ಅರಿಯಬಲ್ಲವರು ವಿರಳ. ತಾತ್ಕಾಲಿಕ ಸುಖವೇ ಪ್ರಿಯ; ಕಾಲಾಂತರ ಸ್ಥಾಯಿಯಾದ ಸುಖವೇ ಹಿತ. ಮೊದಲನೆಯದೇ ಪ್ರೇಯಸ್ಸು; ಎರಡನೆಯದೇ ಶ್ರೇಯಸ್ಸು, ಶ್ರೇಯಸ್ಸಿನ ಜ್ಞಾನವೇ ನಿಜವಾದ ಸ್ವಾರ್ಥದ ಜ್ಞಾನ. ಅದನ್ನರಿಯದ ಸ್ವಾರ್ಥಿಕೇವಲ ಪರಾರ್ಥಹಾರಕ.

ನಾಟಕವು ಕವಿ–ಕಲಾವತಿ ಎಂಬಿಬ್ಬರ ಮತ್ತು ಚಂದ್ರಕಾಂತ–ರತ್ನಮ್ಮ ಎಂಬಿಬ್ಬರ ವಿವಾಹದಲ್ಲಿ ಪುರುಷ–ಸ್ತ್ರೀಯರಿಬ್ಬರೂ ಸ್ವತಂತ್ರರೂ ಸ್ವವೈಶಿಷ್ಟ್ಯ ಇಟ್ಟುಕೊಳ್ಳ ಬಲ್ಲವರೂ ಅಲ್ಲದೆ ಏಕಜೀವ–ದೇಹದ್ವಯನ್ಯಾಯದಿಂದ ಬಾಳಬಲ್ಲ ದಂಪತಿಗಳೂ ಆದಾರೆಂದು ಧ್ವನಿಯುಳ್ಳ ಸುಧಾರಣಾ ನಾಂದಿಯನ್ನು ಮಾಡಿ ಮುಗಿಯುತ್ತದೆ. ರಾಮರಾಯ ಧನಿಕ ಜಮೀನುದಾರ ಚಂದ್ರಕಾಂತ ವಿದ್ಯಾರ್ಥಿದಶೆಯಲ್ಲಿರುವ ಮಗ. ರಾಮರಾಯರಲ್ಲಿ ನರ್ತನ–ಗಾಯನ ಕಲಿಸುವ ಬ್ರಾಹ್ಮಣನೇ ಕವಿ. ಕಲಾವತಿಯು ಮನೆಯಲ್ಲಿ ಹಾಡು–ಕುಣಿಯುವ ವೇಶ್ಯೆ. ಧರಮಪ್ಪನ ಮಗಳು ರತ್ನಮ್ಮ. ಈ ನಾಟಕದ ಒಂದನೆಯ ವಿವಾಹ ಬ್ರಾಹ್ಮಣ–ವೇಶ್ಯೆಯರಲ್ಲಿ; ಎರಡನೆಯದು ಬ್ರಾಹ್ಮಣ–ಒಕ್ಕಲಿಗರಲ್ಲಿ. ಅರ್ಥಾತ್ ಅಂತರ್ಜಾತೀಯ ವಿವಾಹವನ್ನು ನಾಟಕವು ಪ್ರತಿಪಾದಿಸಿದೆ ಎಂದ ಹಾಗಾಯಿತು. ಇದು ಜಾತ್ಯತೀತ ಭಾರತದ ಅಜೀರ್ಣ ರೂಪದಲ್ಲಿರುವ ಧ್ಯೇಯ ಅಥವಾ ಅನೇಕರ ಗಂಟಲಲ್ಲೇ ಇನ್ನೂ ಇಳಿಯದಂತಿರುವ ಮಾತು!

ವಿವಾಹ ವಿವಿಧ ಜಾತಿಗಳಲ್ಲಾಗುವ ಮೊದಲು ಊಟೋಪಚಾರಗಳು ಆರಂಭವಾಗಬೇಕು. ಅದಕ್ಕೆ ಉಚ್ಚ ಜಾತಿಯವರಲ್ಲಿರುವ ನೈರ್ಮಲ್ಯಶೀಲದ ಸೂಕ್ಷ್ಮಾಂಶಗಳನ್ನು ಎಲ್ಲರೂ ಆಚರಣೆಯಲ್ಲಿ ತರಲು ಯತ್ನಿಸುವುದಗತ್ಯ. ಶುಚಿಯೇ ರುಚಿಯ ಆಧಾರ. ಗೃಹವ್ಯವಸ್ಥೆಯಲ್ಲಿ ಶುಚಿತ್ವದ ಸಾರ್ವತ್ರಿಕ ನಿಯಮಗಳು ಮೊದಲು ರೂಢಿಗೊಳ್ಳಬೇಕು.

ಎರಡನೆಯದಾಗಿ, ಬೇರೆ ಬೇರೆ ಧರ್ಮೀಯರು ಬೇರೆ ಬೇರೆ ಮತಾಚಾರವನ್ನು ಬಿಡಲು ಧೈರ್ಯ ಮಾಡುವುದು ಮೂಲಭೂತವಾದುದು. ಮತ ಪ್ರಭಾವವಿರುವವರೆಗೆ ಭಾರತೀಯ ಸಾಮಾಜಿಕ–ರಾಜಕೀಯ ಐಕ್ಯವೆಂಬುದು ಕನಸಿನ ಮಂಡಿಗೆ. ಈಗ ರಕ್ತ ಬಿಸಿಯಿದ್ದಾಗ, ಧನ–ಮಾನ–ಅಧಿಕಾರಗಳು ಕೈಯಲ್ಲಿ ತಕ್ಕ ಮಟ್ಟಿಗಾದರೂ ಇರುವಾಗ, ನಾವು ಸಾಹಿತ್ಯ–ಉಪನ್ಯಾಸ–ಹರಟೆ–ಚರ್ಚೆಗಳ ಮೂಲಕ ವಿಶ್ವಧರ್ಮದ ಉದಾರಧೋರಣೆಯನ್ನು ಕೆಲವೊಮ್ಮೆಯಾದರೂ ಹಾಡುತ್ತೇವೆ. ಆದರೆ ೪೦ನ್ನು ದಾಟುತ್ತ ಹೋದ ಹಾಗೆ ಅನೇಕ ಆವೇಶವೀರರು 'ಹಳೆಯ ಗಂಡನ ಪಾದವೇ ಗತಿ' ಎಂಬ ಗಾದೆಗೆ ತುತ್ತಾಗುತ್ತಾರೆ. ಸಾಹಿತಿಗಳಲ್ಲೇ ಶಾಸ್ತ್ರ ಹೇಳಿ ಗಾಳ ಹಾಕದಿರುವವರು ನಮ್ಮ ಸಮಾಜದಲ್ಲಿ ವಿರಳ. ಅದರಿಂದ ಸಮಕಾಲೀನ ಸಾಹಿತ್ಯ ಕೃತಿಗಳೂ ಅವುಗಳ ಗ್ರಂಥಕರ್ತರೂ ಒಟ್ಟಿಗೇ ಕಾಣಸಿಗುವಾಗ ಮತ್ತು ಹಾಗೆ ಕಾಣಸಿಕ್ಕಾಗ ಉಪದೇಶ–ಆಚಾರಗಳಲ್ಲಿ ಅಂತರ ಹೇರಳವಾಗಿ ತೋರಿದಾಗ ಸಾಮಾಜಿಕರ ಮನಸ್ಸಿನ ಮೇಲೆ ಗ್ರಂಥಕರ್ತರು ಉದ್ದೇಶಿಸಿದ ಸತ್ಪರಿಣಾಮ ಕಾಸಿನಷ್ಟಾದರೂ ಆಗುವುದು ಅಸಂಭವ. ಈ ಆಚಾರ ನಿಷ್ಠೆಗೆ ಪರಮಾದರ್ಶ ಸಿಗುವುದು ಅಶೋಕ ಚಕ್ರವರ್ತಿಯ ಜೀವನದಲ್ಲಿ. ಡಾ.ಎಚ್.ಕೆ.ರಂಗನಾಥರ "ರಕ್ಷತಾ" ಎಂಬ ನಾಟಕದ ಭಾಗವನ್ನಿಲ್ಲಿ ಅವಲೋಕಿಸೋಣ. ಈ ನಾಟಕದಲ್ಲಿ ಬರುವ ಅಶೋಕ ಬುದ್ಧನಲ್ಲ; ಆದರ್ಶ ಆಚಾರಶೀಲನಲ್ಲ. ವ್ಯಾಮೋಹಬದ್ಧನಾದ ಸಾಮಾನ್ಯ ಸಂಸಾರಿ ಅಶೋಕ, ಅಪ್ರಬುದ್ಧ ಅಶೋಕ!

ತಾನು ತನ್ನದು ತನ್ನ ಸೂನು ಸತಿಯರೆಂಬ ಹೀನಾಭಿಮಾನವುಳ್ಳ ಅಶೋಕ, ಅಸಾರ್ಥಕನಾಮನಾದ ಅಶೋಕ–ಇಂದಿನ ಶೋಕಹತ ಭಾರತೀಯರ ಪ್ರತೀಕವಾಗಿದ್ದಾನೆ. ನ್ಯಾಯನೈಷ್ಠುರ್ಯದ ಹೆಸರಿನಲ್ಲಿ ನಿರಪರಾಧಿಯಾದ ಜ್ಯೇಷ್ಠ ಪುತ್ರ ಕುನಾಲನನ್ನು ದಮಿಸುವ, ದಂಡಿಸುವ ನಿರ್ಲಜ್ಜ ಅಶೋಕ. ಅಲ್ಲದೆ ಗಂಡು ಜಾತಿಯ ಮೇಲೆ ಸೇಡು ತೀರಿಸಿಕೊಳ್ಳ ಹೊರಟಂತಿರುವ ವಿಷಕನ್ಯೆ ರಕ್ಷತೆ ಅವನ ಸೌಂದರ್ಯ ಪಿಪಾಸೆಯನ್ನು ತೀರಿಸುವ ಕಿರಿಯರಾಣಿ. ಧನ–ದೌಲತ್ತು ಐಷಾರಾಮಗಳು ಯಾರ ಕಣ್ಣನ್ನೂ ಕತ್ತಲಿಸುವುವು. ಆದರೆ ಭಾರತದ ಉಷ್ಣಹವಾಮಾನದಲ್ಲಿ ಹುಟ್ಟಿ ಬೆಳೆದ ಶರೀರ ಮನಸ್ಸುಗಳಿಗೆ ಬೇರೆ ದೇಶದವರಿಗಿಂತ ಕಡಿಮೆ ಪ್ರಮಾಣದ ಸುಖದ ಅಮಲೇ ಸಾಕಾಗುತ್ತದೆ ಮದಕವಿಯಲು, ಇದನ್ನರಿತೇ ಬುದ್ಧನು–

'ಆಶಾಹಿ ಪರಮಂ ದುಃಖಂ ನಿರಾಶಾ ಪರಮಂಸುಖಂ' ಎಂದು ಉದ್ಗರಿಸಿದನು. ಈ ನಿರಾಶಾವಾದದ ಪ್ರತಿಪಾದನೆಯನ್ನು ಪಾಶ್ಚಾತ್ಯ ವಿದ್ವಾಂಸರೂ ಆಧುನಿಕ ಭಾರತೀಯ ವಿದ್ವದ್ರತ್ನರನೇಕರೂ ಬಲವಾಗಿ ಖಂಡಿಸಿದ್ದುಂಟು. ಆಧುನಿಕ ಸಾಹಿತಿಗಳಲ್ಲನೇಕರು

ನಿರಾಶಾವಾದಿ ಎನ್ನಿಸಿಕೊಳ್ಳುವುದು ನಾಚಿಕೆಗೇಡು ಎಂದು ತಿಳಿಯುತ್ತಾರೆ. ಬುದ್ಧನೂ, ಔಪನಿಷಧಿಕ ತತ್ವಜ್ಞಾನಿಗಳೂ, ಗೀತೆಯೂ ಅನಾಸಕ್ತಿಯನ್ನು, ಅಸಂಗವನ್ನು ಪದೇ ಪದೇ ಬೋಧಿಸಿದ್ದು ಹಾಗೂ ದಾಸರೂ ಶಿವಶರಣರೂ ಐಹಿಕ ಜೀವನದ ಬಗ್ಗೆ ಸಾಕಷ್ಟು ವೈರಾಗ್ಯವನ್ನೂ ಪ್ರಚುರ ಮಾಡಿದ್ದು ಭಾರತೀಯ ಸಮಾಜದ ಸಾಮೂಹಿಕ ಕಾರ್ಯದಕ್ಷತೆಯನ್ನು ಪೋಷಿಸಿದೆಯಲ್ಲದೆ ಶೋಷಿಸಿಲ್ಲ ಎಂಬುದು ಅನುಭವಸಿದ್ಧ. ಸಾಮೂಹಿಕ ಸಹಕಾರವಿಲ್ಲದೆ ಭಾರತವು ಇತಿಹಾಸ ಕಾಲದಲ್ಲಿ ಪದೇ ಪದೇ ಪರದೇಶಿಯರ ದಾಸ್ಯಕ್ಕೆ ಆಳಾಗಿ ಬಾಳಬೇಕಾಗಿ ಬಂದುದು ಜನತೆಯ ನಿರಾಶಾಬುದ್ಧಿಯಿಂದಲ್ಲ–ಇಲ್ಲಿದ್ದ ಛಪ್ಪನ್ನೈವತ್ತಾರು 'ಸಮ್ರಾಟರು' ಜನತೆಯನ್ನು ಶೋಷಿಸಿ, ಐಷಾರಾಮದಲ್ಲಿ ಬಿದ್ದು ಪರಸ್ಪರ ಅಸೂಯೆಯಿಂದ ಅಂತಃಕಲಹದಲ್ಲಿ ಆಸಕ್ತರಾದುದರಿಂದ, ಅವರಿಗೆ ಈ ವೈರಾಗ್ಯಬೋಧೆ ತಾಗದುದರಿಂದ, ತಟ್ಟದುದರಿಂದ; ಅವರಲ್ಲೇ ರಾಜಕೀಯ ಪ್ರಭುತ್ವ ಪರಿಸೀಮಿತವಾಗಿರುವ ಕಾಲಧರ್ಮಕ್ಕೆ ಜನ ತಲೆಬಾಗಿ ಕುಳಿತುದರಿಂದ. ಪಾಶ್ಚಾತ್ಯ ಪುಸ್ತಕಗಳನ್ನೋದಿ ಆಶಾವಾದದ ಹೆಸರೆತ್ತಿ (ಅದೇ ಉಸಿರಿನಲ್ಲಿ ಕೆಲವರು ಗೀತೆಯ ಅಸಂಗನೀತಿಯನ್ನೂ ಹೊಗಳಿ!) ದೇಶೀಯ ಸತ್ವದ ಅತ್ಯಂತ ಅಮೂಲ್ಯಾಂಶವಾದ ಅಸಂಗಯೋಗವನ್ನು ನಿಂದಿಸುವುದು ಆತ್ಮ ಘಾತಕ. ವ್ಯಕ್ತಿಸ್ವಾರ್ಥವು ಮಾನವ ಸಮಾಜಕ್ಕೆ ಸಹಜವೆಂಬುದು ನಿಜವಾದರೂ ಅದರಿಂದ ಬಹುಬೇಗ ಅಸಾಮಾಜಿಕ ನಡತೆಗಿಳಿಯುವ ದೌರ್ಬಲ್ಯವು ಉಷ್ಣಹವಾಮಾನದ ಮಾನವರ ಮನೋಧರ್ಮಕ್ಕೆ ವಿಶಿಷ್ಟ. ಆದುದರಿಂದ ಸಮಸ್ಥಿತಿಯ ಸಾಮಾಜಿಕ ಲೋಕಾಸಕ್ತಿ ನಮ್ಮ ಜನರಲ್ಲೂ ಜನನಾಯಕರಲ್ಲೂ ಜನಸೇವಕರಲ್ಲೂ ಸತ್ವಸ್ಥವಾಗಿ ನೆಲೆ ನಿಂತು ಅವರಿಂದ ಲೋಕಕಲ್ಯಾಣ ಕಾರ್ಯಗಳು ನಡೆಯಬೇಕಾದರೆ, ಅವರಲ್ಲಿ ಕೌಟುಂಬಿಕ ಸ್ವಾರ್ಥದ ಅತಿರೇಕ ಕಡಿಮೆಯಾಗುವುದು ಅತ್ಯವಶ್ಯಕ. ಈ ಸಮಾಜ ಹಿತಚಿಂತನದ ದೂರದೃಷ್ಟಿಯಿಂದಲೇ ಪರಲೋಕ, ಪರೋಪಕಾರ, ತ್ಯಾಗ, ಸೇವೆ, ಪುಣ್ಯಾರ್ಜನೆ, ದಾನ, ತಪ, ಯಜ್ಞ, ತೀರ್ಥಯಾತ್ರೆ ಮುಂತಾದ ನಾನಾ ಆಚಾರಗಳ ಮೂಲಕ ವ್ಯಕ್ತಿಯು ಪಾಶವ ಸ್ವಾರ್ಥದ ಮುದ್ದೆಯಾಗುವುದನ್ನು ತಡೆದು, ಅವನನ್ನು 'ಯತಿ'ಯನ್ನಾಗಿ, ವ್ರತಿಯನ್ನಾಗಿ, ಸಂಯಮಿಯನ್ನಾಗಿ, ಶಾಂತನನ್ನಾಗಿ, ದಾಂತನನ್ನಾಗಿ, ಉಪರತನನ್ನಾಗಿ, ತಿತಿಕ್ಷುವನ್ನಾಗಿ ಮಾಡಲು ಭಾರತದ ಧರ್ಮಪುರುಷ ಪುಂಗವರು ಪ್ರಯತ್ನಿಸಿದರು. ಶುದ್ಧರೂ ಬುದ್ಧರೂ ಆದ ಸಮಾಜ ಸೇವಕರೆಂದರೆ ನಮ್ಮ ದೇಶದಲ್ಲಿ ವಿವೇಕಾನಂದರಂಥವರು–ಸನ್ಯಾಸಿಗಳು! ಕಾಮ್ಯಕರ್ಮವನ್ನು ಬಿಟ್ಟು ವೈಯಕ್ತಿಕ ಸುಖಲೋಭವನ್ನು ತ್ಯಜಿಸಿ, ನಿಷ್ಕಾಮ ಧರ್ಮವನ್ನು ಹಿಡಿದ ಧರ್ಮವೀರರೇ ನಮ್ಮ ನಿಜವಾದ ನಾಯಕರು! ಗಾಂಧಿಯವರು ಇಂದಿನ ಯುಗದಲ್ಲಿ ಅಂಥ ಅತ್ಯುಚ್ಚ ಸಮಾಜಸೇವೆ ಮಾಡಿದ ಸಾಧುಗಳು, ಸಂತರು, ದಾಸರು, ಶರಣರು! ಸರ್ವೋದಯದಲ್ಲಿ ಆನಂದಿಸುವ ಮನದ ಮೈತ್ರಿ, ಕರುಣೆ, ಮುದಿತ, ಉಪೇಕ್ಷೆಗಳೇ ಆದರ್ಶ ಭಾರತೀಯನ ಗುಣಗಳು. ಅವನೇ ಗೀತೋಕ್ತಯೋಗಿ 'ತಸ್ಮಾದ್ಯೋಗೀ ಭವಾರ್ಜುನ' ಎಂಬುದೇ ನಮ್ಮ ಸಂಸ್ಕೃತಿಯ ಪರಮೋಚ್ಚ ಸಂದೇಶ.

ಕೆಲವೊಮ್ಮೆ ನಮ್ಮ ನಾಯಕರಿಂದು ಗೊಣಗುತ್ತಾರೆ–

ಜನತೆಗೆ ಬುದ್ಧಿಯಿಲ್ಲ. ಜನಕೆಟ್ಟುಹೋಗಿದೆ' ಎಂದು ಮುಂತಾಗಿ ಆದರೆ ಗಾಂಧಿಯವರನ್ನು 'ಮಹಾತ್ಮ' ಎಂದು ಗುರುತಿಸಿದ್ದು ಜನತೆಯಲ್ಲದೆ ಭಾರತದ ವಿದ್ವದ್ರತ್ನರಲ್ಲ, ತಜ್ಞರಲ್ಲ, ಕಾಯದೆ ಪಂಡಿತರಲ್ಲ. ವಿನೋಬಾ ಭಾವೆಯವರೆದುರು ಬಾಗುವ ಜನರು ಅರ್ಥಶಾಸ್ತ್ರ ವಿಶಾರದರಲ್ಲ, ರಾಜ್ಯಧರ್ಮಪಂಡಿತರಲ್ಲ. ಅಡಿಗೆ ಮಾಡುವವನಿಗಿಂತ ಮಾಡಲು ಬರದ ಉಂಬಾತನೇ ಅಡಿಗೆಯ ರುಚಿಯನ್ನು ಹೇಳಲು ಅರ್ಹನಲ್ಲವೆ? ಹಾಗೆ ತಿಳಿಯದ ಜನರೇ 'ತಿಳಿವಳಿಕೆ ಯಾರಿಗೆ ಜೀರ್ಣವಾಗಿದೆ. ರಕ್ತಗತವಾಗಿದೆ. ಯಾರಿಗೆ ಕೇವಲ ವಾಗ್ಭೂಷಣವಾಗಿದೆ' ಎಂಬುದನ್ನು ಕಂಡು ಹಿಡಿಯುವ ಶಕ್ತಿವಂತರು! ಅಂಥ ನಾಯಕರು ಹೇಳಿದರೆ ಮಾತ್ರ ನಮ್ಮ ಜನ ಕೇಳೀತು–ಅಂಥಿಂಥ ನಾಯಕರ ಮಾತುಗಳಿಗೆ ಅದು ಸೊಪ್ಪು ಹಾಕುವುದಿಲ್ಲ! ಈ ಮಾತು ವೇದದ ಕಾಲದಿಂದ ಇಂದಿನವರೆಗೂ ನಡೆದುಬಂದ ಸತ್ಯ!



# ಹರಕೆ

ಪ್ರೊ.ಬಿ.ಎಚ್.ಶ್ರೀಧರ ಅವರು ಕವಿಗಳು, ವಿಮರ್ಶಕರು, ವಿಡಂಬನಕಾರರು, ವಿಚಾರಿಗಳು, ವಿವೇಕ ಪ್ರತಿಪಾದಕರು ಆಗಿದ್ದಾರೆ. ಇದು ಅವರ ವಿಶೇಷ. ಮನೆಯಿಂದ, ಶಿಕ್ಷಣದಿಂದ, ಹೆಚ್ಚಿನ ಓದಿನಿಂದ ಮತ್ತೆ ಮತ್ತೆ ಮಳ್ಳಿಸಿದ (Boiled) ಮನನದಿಂದ ಅವರು ಕೆಲವು ಕಷಾಯ, ರಸಾಯನ, ಯೋಗಕಲ್ಪನಗಳನ್ನು ಭಟ್ಟಿ ಇಳಿಸಿದ್ದಾರೆ. ಮೊನ್ನೆ ಮೊನ್ನೆ ಕಾವ್ಯದ ಭಾವ, ಅರ್ಥ, ಧ್ವನಿ, ಶಬ್ದ ಇವುಗಳ ಸಂಗ್ರಾಮವನ್ನು ಮುಗಿಸಿ, ಈಗ ಪುರುಷಾರ್ಥ ಯುದ್ಧಕ್ಕೆ ಸಜ್ಜಾಗಿ ನಿಂತಿದ್ದಾರೆ. ಕಾವ್ಯ ವಿಚಾರದಲ್ಲಿಯೂ ಇದರ ಎಳೆ ಇದ್ದೇ ಇತ್ತು. ಹಿಂದಿನ 'ಕಾವ್ಯಸೂತ್ರ'ಕ್ಕೆ ಇಂದಿನ 'ಜ್ಞಾನಸೂತ್ರ' ಹುರಿ ಹಾಕಿಕೊಳ್ಳುತ್ತದೆ. ಅಲ್ಲಿ ವಿಚಾರ ಪ್ರವಾಹಗಳು ವರ್ಷಾಕಾಲದಂತಿದ್ದರೆ, ಇಲ್ಲಿಯದು ಶರತ್‌ಕಾಲದಂತೆ ಸ್ವಲ್ಪ ತಿಳಿಗೊಂಡಿದೆ. ಇವರ ಪ್ರಕಾಶಕ ಸಂಪಾದಕ ಆಪ್ತ ಮಿತ್ರರು ಇವರ ವಿಚಾರಸಾಮರ್ಥ್ಯದಲ್ಲಿ ವಿಶ್ವಾಸ ಉಳ್ಳವರಾಗಿರದಿದ್ದರೆ, ಇಂಥ ಕೃತಿಯನ್ನು ಮುದ್ರಿಸುವುದಕ್ಕೆ ಮುಂದಾಗುತ್ತಿರಲಿಲ್ಲ. ಇಂತಹ ವೈಚಾರಿಕ ಕೃತಿಗಳು ಕನ್ನಡಕ್ಕೆ ಹೊಸವೇನಲ್ಲ. ಡಿ.ವಿ.ಜಿ; ಶ್ರೀನಿವಾಸ (ಲಕ್ಷ್ಮೀಪುರಂ); ಶ್ರೀಕಂಠಶಾಸ್ತ್ರಿ; ಎಸ್.ಕೆ.ರಾಮಚಂದ್ರರಾವ್; ಎಂ.ವಿ.ಕೃಷ್ಣರಾವ್; ಜಿ.ಹನುಮಂತರಾವ್; ರಾಘವೇಂದ್ರ ಆಚಾರ್; ಜ.ಚ.ನಿ; ಶಂ.ಬಾ. ಜೋಶಿ, ಎನ್.ಆರ್. ಕುಲಕರ್ಣಿ; ಡಾ॥ ಕಾರಂತ; ಶ್ರೀರಂಗ–ಇವರೇ ಮೊದಲಾದವರ ಗ್ರಂಥಗಳಲ್ಲಿ ಧರ್ಮಜಿಜ್ಞಾಸೆ, ತತ್ವ ಜಿಜ್ಞಾಸೆ ಮಾಡಿದ್ದಾಗಿದೆ. 'ಮಿಂಚಿನಬಳ್ಳಿ'ಯ ಅನೇಕ ಪ್ರಬಂಧಗಳಲ್ಲಿ ವಿಚಾರ ಪ್ರವಾಹವು ಹರಿಗಡಿಯದೆ ನಡೆದಿದೆ. ಇಂಥ ಗ್ರಂಥಗಳಿಗೆ ವಾಚಕರ ಸಂಖ್ಯೆ ಬಹಳ ಇರಲಿಕ್ಕಿಲ್ಲ. ಆದರೂ ವಿಚಾರಕರನ್ನು ಎದೆಗುಂದಿಸುವಷ್ಟು ಕಡಿಮೆಯೂ ಇಲ್ಲ ಎಂದು ತೋರುತ್ತದೆ. ಆದರೂ ಪ್ರಕಾಶಕರು ಸ್ವಲ್ಪ ಸಾಹಸ ಮಾಡದೆ ಇಂಥ ಕಾರ್ಯ ಬೆಳಕು ಕಾಣಲಾರದು.

ಪ್ರಕೃತೋಚಿತ ವಿಚಾರ ಮಂಥನದಲ್ಲಿ ಹೊಸ ಶಬ್ದ ಸಾಮಗ್ರಿಯನ್ನು ಬಳಕೆಗೆ ತರುವುದು, ಹಳೆಯದನ್ನೇ ತಿಕ್ಕಿ ಮಸೆದು ನವೀನ ಅಸ್ತ್ರವನ್ನಾಗಿ ಮಾಡುವುದು ಅನಿವಾರ್ಯವಾದದ್ದೇ. ಶ್ರೀಧರ ಅವರು ವರ್ತಮಾನ ಪತ್ರಿಕೆಗಳಲ್ಲಿ ತುರ್ತು ಲೇಖಕರು ಆಗಿ ಅನುಭವ ಗಳಿಸಿದ್ದರಿಂದ, ಸಂಸ್ಕೃತ ಸಾಹಿತ್ಯದಷ್ಟೇ ಕನ್ನಡ ಪ್ರಾಚೀನ ಸಾಹಿತ್ಯದಲ್ಲಿಯೂ ಅವರು ಪಳಗಿದವರಾಗಿದ್ದರಿಂದ, ಪಾಶ್ಚಾತ್ಯರ ವಿಚಾರಗಳನ್ನು ಭಾರತೀಯ ತತ್ವ ಪ್ರಣಾಲಿಗೂ ಭಾರತೀಯ ಸಾಂಸ್ಕೃತಿಕ ಸಂಪ್ರದಾಯದ ಸಂದಾಯವನ್ನು ಕನ್ನಡಕ್ಕೂ ಅವರು ಸಾಕಷ್ಟು ಅತ್ಮ ವಿಶ್ವಾಸದಿಂದ ನಿರ್ವಹಿಸುತ್ತಾರೆ. ಸದ್ಯದ ಪ್ರಬಂಧವು ಅವರ ಹಿಂದಿನ ಪ್ರಬಂಧಕ್ಕಿಂತಲೂ ಚಿಕ್ಕದೇ ಆಗಿದ್ದರೂ ಇದರ ವಾಸ್ತು ವಿನ್ಯಾಸವನ್ನು ಒಳ್ಳೆಯ ಮಾಟಾಗಿಯೇ ಮಾಡಿದ್ದಾರೆ.

ವ್ಯಾಸರ ವಿಚಾರ ಸೂತ್ರಗಳನ್ನು ಈ ಪ್ರಬಂಧದಲ್ಲಿ ಸಮಾಸಗೊಳಿಸಿ ಎಂದರೆ ಸಂಗ್ರಹವಾಗಿಯೆ ಲೇಖಕರು ವಿಂಗಡಿಸಿ, ಸಂಗಡಿಸಿ ತಿಳಿಯಪಡಿಸಿದ್ದಾರೆ. ಇದು ಕಷ್ಟದ ಕೆಲಸವೇ. ಈ ಪ್ರಬಂಧದ ವಿಷಯದಲ್ಲಿ ನನ್ನಿಂದ ಯಾವ ಬಗೆಯ ಅಭಿಪ್ರಾಯಬೇಕಾಗಿದೆ? ಎಂದು ಕೇಳಿದಾಗ–'ಪ್ರಕಟಿತ ಪ್ರಬಂಧವೇ ಚಿಕ್ಕದಾಯಿತು' ಎಂದು ಗೊಣಗುಟ್ಟಿದ ಪ್ರಕಾಶಕರಿಗೆ– ಅಭಿಪ್ರಾಯದ ಕ್ಷೇತ್ರದಲ್ಲಿ ಅವರ ಆಕಾಂಕ್ಷೆ ರೂಪಗೊಳ್ಳಲಾರದು ಎಂದು ಏಕೆ ಎನಿಸಲಿಲ್ಲವೋ? ಶ್ರೀ ಕೃಷ್ಣನು ಬಾಯಲ್ಲಿ ಬ್ರಹ್ಮಾಂಡವನ್ನು ಹಿಡಿಯಬಹುದು, ದೇವರಿಗೆ ಅದು ಸಣ್ಣ ತುತ್ತು. ಆದರೆ ಅದನ್ನು ಯಶೋದೆ ತನ್ನ ಸಣ್ಣ ಕಣ್ಣಿನಿಂದ ಹೇಗೆ ಕಂಡಳೋ? ಬಾಯಿ ಏನೆಂದರೂ ದೊಡ್ಡದು; ಕಣ್ಣು ಎಷ್ಟೆಂದರೂ ಚಿಕ್ಕದು. ಆದರೆ ಹಾಗೆ ವರ್ಣಿಸುವುದು ಭಾಗವತಕಾರರ ಚಮತ್ಕಾರವಾಗಿದೆ. ಪ್ರಕಾಶಕರ ಕಣ್ಣಿಗೆ ಬ್ರಹ್ಮಾಂಡವೂ ಸಣ್ಣ ತುತ್ತು. ಇರಲಿ. ಈ ಪ್ರಬಂಧದ ನಿಮಿತ್ತವಾಗಿ ಅದರಲ್ಲಿ ಪ್ರತಿಪಾದಿತವಾದ ನಾಲ್ಕೈದು ವಿಷಯಗಳ ಬಗ್ಗೆ ನನ್ನ ವಿಚಾರ ಸರಣಿಯನ್ನು ಹೇಳುತ್ತೇನೆ. ಅವರ ವಿವೇಕ ತಪ್ಪು, ನನ್ನ ವಿಚಾರ ಸರಿ ಎಂಬ ಅಭಿಪ್ರಾಯವಲ್ಲ. ಯಾವ ವಿಚಾರಕರೂ ಇಲ್ಲಿಯ ಕಬ್ಬಿಣದ ಕಡಲೆಯನ್ನು ತಮ್ಮ ದವಡೆಗೆ ಅಳವಡಿಸಿಕೊಳ್ಳುವಾಗ ತಮ್ಮ ತಮ್ಮ ಎಚ್ಚರದಿಂದಲೆ ಮೆಲುಕಾಡಿಸಬೇಕು. ಒಂದು ಸರಣಿಯಿಂದ ಇನ್ನೊಂದು ಸರಣಿಯನ್ನು ಹೊಂದಿಸಿ, ಬಿಡಿಸಿ ನೋಡಿಕೊಳ್ಳಬೇಕು ಎಂದೇ ಅರ್ಥ.

ಶ್ರೀಧರರು ವ್ಯಾಸರ ಶ್ಲೋಕಗಳನ್ನು ಆಯ್ದು, ಅದಕ್ಕೆ ಒಂದು ಮಾನದಂಡದ ರೂಪವನ್ನು ತಂದಿದ್ದಾರೆ. ಈ ಪ್ರಬಂಧವೆಂದರೆ ಬ್ರಹ್ಮಸೂತ್ರಕ್ಕೆ ಬರೆದ ಟೀಕು ಅಲ್ಲ. ಮಹಾಭಾರತದ ಧರ್ಮವಿಜ್ಞಾನ ಸೂತ್ರ ಇದು ಎಂದು ಶ್ರೀಧರರ ವಿಚಾರ ಸರಣಿ. ಅವರು, ವ್ಯಾಸರು ಶ್ರೀ ಕೃಷ್ಣನಿಂದಾಡಿಸಿದ ಭಗವದ್ಗೀತೆಗೂ ಹಿಗ್ಗಾಮುಗ್ಗಾ ಭಾಷ್ಯ ಬರೆಯುವ ಹವ್ಯಾಸ ಕಟ್ಟಿಕೊಂಡಿಲ್ಲ. ಸದ್ಯದ ಪ್ರಬಂಧವು ವ್ಯಾಸ ವಿಚಾರದ ಬೆಂಬಲದಿಂದ ಸೂತ್ರ ರೂಪಕ್ಕೆ ಇಳಿಸಲಾಗಿದೆ. ಇದು ಶ್ರೀಧರರು ಮಾಡಿದ ಕೌತುಕಾವಹ, ಅಭಿನಂದನೀಯ ಪೌರುಷ ಪ್ರಯತ್ನವೇ ಸರಿ. ಇಂಥ ಅಶ್ವಮೇಧದ ಕುದುರೆ ದಿಗ್ದೇಶದಲ್ಲಿ ಒಂದು ವರ್ಷ ಅಡ್ಡಾಡಬೇಕು. ಯಾರು ಕಟ್ಟುತ್ತಾರೋ ಯಾರು ಬಿಚ್ಚುತ್ತಾರೋ ನೋಡಬೇಕು. ಈ ಪ್ರಬಂಧವು ವಿವೇಕಕ್ಕೆ ಆಮಂತ್ರಣ; ವಿಚಾರಕ್ಕೆ ಆಹ್ವಾನವಲ್ಲ. ಇಂದಿನ ಪ್ರಪಂಚದಲ್ಲಿ ಇಂಥ ವ್ಯವಸಾಯದಲ್ಲಿ ತೊಡಗಿದವರು ಹೆಚ್ಚಾಗಿ ಐರೋಪ್ಯರು ಮತ್ತು ಅಮೇರಿಕನ್ನರು. ಅವರು ಭಾರತೀಯ ತತ್ವಜ್ಞಾನವನ್ನು ತಮಗೆ ತೋಚಿದಂತೆ ಒಮ್ಮೊಮ್ಮೆ ಗೀಚಿ ಎಸೆಯುತ್ತಾರೆ. ಅಷ್ಟೇ ಏಕೆ, ಯಾವುದೇ ತಾತ್ವಿಕ ವಿಚಾರವನ್ನು ಹೇಗೆ ಸುಸಂಬದ್ಧವಾಗಿ ಮಾಡಬೇಕು ಎಂಬ ಜಿಜ್ಞಾಸೆಯನ್ನು ಹುಟ್ಟಿಸಿ, ಅಕಟೋ ವಿಕಟೋ ಹದಿನೆಂಟು ಹಾದಿಗಳನ್ನು ತೆರೆಯುತ್ತಾರೆ. ಅಂತೂ ಅವರಲ್ಲಿ ತತ್ವಜಿಜ್ಞಾಸೆ, ಒಂದು ವೈಚಾರಿಕ ಕ್ರೀಡೆ, ಚಾತುರ್ಯರ ಚದುರಂಗದಾಟ; ನಮ್ಮ ಕಡೆಗೆ ತತ್ವವಾದಗಳು ದಿಗ್ವಿಜಯದ ಸಂಭ್ರಮಗಳು! ದಾಸ್, ರಾಧಾಕೃಷ್ಣನ್ ಇವರ ಪರ್ವತಪ್ರಾಯ ಕೃತಿಗಳು ಅವರಿಗೆ ತಕ್ಕವುಗಳೇ. ಶ್ರೀ ಅರವಿಂದರ ದಿವ್ಯಜೀವನ ವಿಜ್ಞಾನ ಪ್ರಣಾಲಿಯು ತೀರ ನೂತನ ಕುರುಕ್ಷೇತ್ರ. ನಮ್ಮಲ್ಲಿ ಅಂದರೆ ಕರ್ನಾಟಕದಲ್ಲಿ, ತಾತ್ವಿಕವಾದಗಳಿಗೆ ಕೊರತೆ ಇಲ್ಲ. ಒಂದೊಂದು ವಿಚಾರಕ್ಕೂ ಒಂದೊಂದು

ಮತವಿದೆ. ಅನೇಕ ದಾಸರು, ಶರಣರು ಆಗಿ ಹೋಗಿದ್ದಾರೆ. ಕೊರತೆ ಯಾವುದಾದರೂ ಇದ್ದರೆ, ಅದು–ಸಜೀವ ಜಿಜ್ಞಾಸೆಯದು. ಜಿಜ್ಞಾಸೆ ಎಂಬುದು ವಿಚಾರ ವಿವೇಕದ ಆರೋಗ್ಯ. ಆದರೆ, ಸದ್ಯದ ಸಾಮಾಜಿಕ, ರಾಜಕೀಯ ಕ್ರಾಂತಿ, ಭ್ರಾಂತಿ, ಸಂಗ್ರಾಮದಲ್ಲಿ–ಝಟಿತಿ ಪ್ರತಿಕರ್ತವ್ಯಂ, ಪ್ರತಿವಕ್ತವ್ಯಂ ದೇಶೇ ವಿಜೀಗಿಷುಭಿಃ' ಎಂಬ ಬಿರುದಿನ ವಾಕ್ಯ ಉದ್ದೀಪಕವಾಗಿರುವಂತೆ ತೋರುತ್ತದೆ. ಸಾವಧಾನವಿಲ್ಲದೆ ವಿವೇಕವಿಲ್ಲ. ಅವಿಚಾರಿತ ರಮಣೀಯ ಯಾವುದು? ವಿಚಾರದ ಅಂತ್ಯದಲ್ಲಿ ವಿವೇಕದ ನೆಲೆಗೆ ಮುಟ್ಟುವುದು ಯಾವುದು? ಎಂಬುದನ್ನು ಪರಾಮರ್ಶಿಸಲು ತಕ್ಕಷ್ಟು ಸುಶಿಕ್ಷಣ ಬೇಕು. ಸದ್ಯದ ಪ್ರಬಂಧದಂಥ ಗ್ರಂಥಗಳನ್ನು ಕೊಳ್ಳುವವರಿಗಿಂತ ಓದುವವರು ಕಡಿಮೆ. ಆದರೂ, ನಿದ್ರೆ ಹೋದ ಸಮಾಜದಲ್ಲಿ ಗಸ್ತು ಹಾಕುವುದು ಸ್ವಯಂ ವಿಚಾರಕರ ಕರ್ತವ್ಯವೇ ಆಗಿದೆ. ಗ್ರಂಥಾಲಯಗಳಿಂದ, ಸರಕಾರದಿಂದ ಇಂಥ ಗ್ರಂಥ ಪ್ರಕಾಶಕರಿಗೂ ಲೇಖಕರಿಗೂ ಪುರಸ್ಕಾರ ಬೇಕೇ ಬೇಕು.

ಕವಿಸಮಯಗಳಂತೆ ತಾತ್ವಿಕವಾದ ಸಮಯ ಪರಂಪರೆಯೂ ದಾಯಾದಿ ಕಲಹಕ್ಕೆ ಪ್ರೇರೇಪಿಸುತ್ತದೆ. ತಮ್ಮಮತವೇ ವಿಶ್ವಧರ್ಮ ಎಂಬ ಅಹಂಕಾರ ಪ್ರೇರಣೆ, ಹತ್ತುದಿಕ್ಕಿಗೂ ಇದೆ. ಸತ್, ಅಸತ್ ಖ್ಯಾತಿ ಇವುಗಳನ್ನು ವಿಂಗಡಿಸಬಲ್ಲ ವಿವೇಕಖ್ಯಾತಿ, ಪ್ರಜ್ಞೆಯ ತಪಸ್ಸಿಗೆ ಸಾಧ್ಯ. ತಾಪಕ್ಕೆ ಬಾಯ್ಬಿಟ್ಟವನ ತಪ ಹಾಳಾಯಿತು, ಅಷ್ಟೆ. ಅಹಂಕಾರದ ತಲೆಗೆ ಎಲ್ಲೂ ನಾಲ್ಕು ಪೆಟ್ಟು ಹೆಚ್ಚು. ಪೆಟ್ಟು ಕೊಡುವವರು ವಿವೇಕಿಗಳೇ ಇರುತ್ತಾರೆ ಎಂದೇನೂ ಅಲ್ಲ. 'ಸಜೀವತಿ ಮನೋಯಸ್ಯ ಮನನೇನೋಪಜೀವತಿ.' ಮತಭ್ರಾಂತಿಯಿಂದ ಆತ್ಮ ಜಿಜ್ಞಾಸೆ ದಿಗ್ಗೇಡಾಗುವುದು ಅಥವಾ ಅಜ್ಞಾತವಾಸವಾಗುವುದು. ಧೀರನಿಗಲ್ಲದೆ ಕೈವಲ್ಯದ ಹಾದಿ ಬೇರೆಯವರಿಗೆ ಹಿಡಿಸದು. ಲೋಕ ಸಂಗ್ರಹಕ್ಕಾಗಿ ವಿಚಾರ ವಿವೇಕ ಅಳವಡಿಸುವುದು ಅವತಾರಿಯ ಕಾರ್ಯವೆಂದೇ ಹೇಳಬಹುದು. ಲೋಕಾರಾಧನೆ, ಲೋಕಸಂಗ್ರಹ, ಸಕಲ ಜೀವದಯೆ ಇತ್ಯಾದಿಗಳಿಗೆ ಮುಂದಾದವರು ವೈಚಾರಿಕ ಸ್ವರ್ಗಕ್ಕೆ ಎರವಾಗಬೇಕಾಗಿದೆ. ನೆಲದಮೇಲೆ ಬದುಕಬೇಕಾಗಿದ್ದುದು ಅನಿವಾರ್ಯವೆ. ಸಾಯುವುದು ಎಂಥವರಿಗೂ ತಪ್ಪಿಲ್ಲ. ತಾತ್ವಿಕಗ್ರಂಥಗಳು ಪ್ರದರ್ಶನಾಲಯದ ವಸ್ತುಗಳಾಗುತ್ತವೆ. ಆದರೆ, ಇಷ್ಟರಿಂದ ವಿಚಾರವಿವೇಕದ ಹಾದಿಯನ್ನು ಬಿಡಬೇಕೆಂದು ಅರ್ಥವಲ್ಲ. 'ಮನಸ್ಸಿಗೂ, ವಾಕ್ಕಿಗೂ ಅಳವಡದು ತತ್ವವಿವೇಕ' ಎಂದು ಹಿಂಜರಿಯಲಾಗುವುದೆ? ತರ್ಕವಿಲ್ಲದೆ ವಿಚಾರಕ್ಕೆ ಮನ್ನಣೆಯಿಲ್ಲ; ತರ್ಕ ವಿಚಾರಕ್ಕೆ ಒಪ್ಪಿಗೆ ಇಲ್ಲ. ಒಬ್ಬೊಬ್ಬ ಮತೀಯರಿಗೆ ತಮ್ಮ ತಮ್ಮದೇ ಪ್ರಮಾಣಪದ್ಧತಿ. ತನ್ನದು ತರ್ಕ ಇನ್ನೊಬ್ಬರದು ಕುತರ್ಕ ಎಂಬ ಬುದ್ಧಿ. "ಪರಮಾತ್ಮನ ಪರಮಾರ್ಥದ ಪರಮತ್ವವನ್ನು ಗ್ರಹಿಸಿದ ಮೇಲೆ ಮಿಕ್ಕ ಮೌಲ್ಯಗಳ ತಾರತಮ್ಯ ವಿವೇಕವನ್ನು ತರ್ಕಶುದ್ಧವಾಗಿಮಾಡಲು ಸುಲಭವಾಗುತ್ತದೆ." ಈ ಸೌಲಭ್ಯ ಅತ್ಯಂತ ದುರ್ಲಭ. ಆದರೆ, ವಿಚಾರಧೀರರಿಗೆ ಇಲ್ಲಿಯೇ ಆಹ್ವಾನ.

(ಪುಟ ೨೫೧) "ಆರ್ತ, ಜಿಜ್ಞಾಸು, ಅರ್ಥಾರ್ಥಿ ಮತ್ತು ಜ್ಞಾನಿ ಎಂಬ ನಾಲ್ಕು ವರ್ಗಗಳ ದೇವೋಪಾಸಕರಿರುವುದು ವ್ಯಾಸೋಕ್ತ." ಇದು ಮಹಾಭಾರತದೊಳಗಿನ ಉಕ್ತಿ

ಏನೋ ಅಹುದು. ಆದರೆ ಇದು ಭಗವಾನ್ ಶ್ರೀಕೃಷ್ಣನ ಉಕ್ತಿಯಾಗಿದೆ. ಷೇಕ್ಸ್‌ಪಿಯರನ ನಾಟಕಗಳಲ್ಲಿ ಬರುವ ಉಕ್ತಿಗೆ–ಷೇಕ್ಸ್‌ಪಿಯರ ಸಾಮಾನ್ಯ ಕಾರಣ ಮತ್ತು ಆ ಉಕ್ತಿ ಆಡುವ ಪಾತ್ರ ವಿಶೇಷ ಕಾರಣ. ವ್ಯಾಸರ ಅವತಾರಿಕ ವಿಶೇಷಕ್ಕೂ ಶ್ರೀಕೃಷ್ಣನ ಅವತಾರಿಕ ವೈಶಿಷ್ಟ್ಯಕ್ಕೂ ಭೇದವಿದೆ. ಮೇಲಿನ ಉಕ್ತಿಯಲ್ಲಿ ಬರುವ ಜ್ಞಾನಿ ಭಕ್ತನಾದ ಕರ್ಮಯೋಗಿ. ಜ್ಞಾನೀತು ಆತ್ಮೈವ ಮೇಮತಂ' ಈ ಒಂದು ಅರ್ಥಕ್ಕಾಗಿ ಗೀತೆಯನ್ನೇ ಮಥನಿಸಬೇಕಾದೀತು. 'ಅಧಿಯಜ್ಞ ಅಧಿದೈವಗಳು ಅಧ್ಯಾತ್ಮದ ಅಪರಾವತಾರಗಳು.' ಇದು ವಿಚಾರಾರ್ಹವಾಗಿದೆ. ಆಧ್ಯಾತ್ಮವೆಂದರೆ–ಸ್ವಭಾವ; ಅಧಿದೈವವೆಂದರೆ–ಪುರುಷ; ಅಧಿಯಜ್ಞ–ಅಹಮೇವ–ಹೀಗಿದೆ ವಿಚಾರ ವಿನ್ಯಾಸ. ಭೌತಿಕ, ಆತ್ಮಿಕ, ದೈವಿಕ ಇವು ತಾಪಕ್ಕೆ ಈಡಾಗುವವು. ಅಧಿಯಜ್ಞ ಇದು ಕೇಂದ್ರಶಕ್ತಿ. ವಿದ್ಯೆಯಲ್ಲಿ ಅಧ್ಯಾತ್ಮವಿದ್ಯೆ ಏನೋ ಹೆಚ್ಚಿನದು. ಆದರೆ ಅಧಿಯಜ್ಞದ ಸ್ಥಾನ ಬೇರೆ ಭೂಮಿಕೆಯದು. ಹೀಗೆಯೇ ಧರ್ಮವು ಅರ್ಥ ಕಾಮಗಳಿಗಿಂತ ಹೆಚ್ಚಿನದು; ಸುಳ್ಳಲ್ಲ. ಆದರೆ, ಅರ್ಥ ಕಾಮಗಳಿಗೆ ಬಂಧಿಸುವ ಧರ್ಮಯಾವುದು? ಮುಕ್ತ ಭಕ್ತಿಗೆ ಸಂಬಂಧಿಸುವ ಧರ್ಮ ಯಾವುದು? ಇದು ರಣಾಂಗಣ ಕೇಂದ್ರವಾಗಿದೆ. ಪಂಚವಿಧ ಪುರುಷಾರ್ಥದಿಂದ ಈ ಸಂಬಂಧವಿಚಾರ ಮಾಡಬೇಕಾದೀತು!

'ಸಾಂಖ್ಯಯೋಗೌ ಪೃಥಕ್ ಬಾಲಾಃಪ್ರವದಂತಿ' 'ಏಕಂ ಸಾಂಖ್ಯಂಚ ಯೋಗಂಚ,' ಪಂಡಿತಾಃ ಸಮದರ್ಶಿನಾಃ' 'ಸಮತ್ವಂ ಯೋಗಮುಚ್ಯತೇ' 'ಯೋಗಃ ಕರ್ಮಸು ಕೌಶಲಂ' 'ಸಾಂಖ್ಯಂ ಜ್ಞಾನಂ' 'ಸಿದ್ಧಾನಾಂ ಕಪಿಲೋ ಮುನಿಃ' ಈ ಉಕ್ತಿಗಳ ಅನುಸಂಧಾನ ಪೂರ್ವಕವಾಗಿ ಷಷ್ಟಿತಂತ್ರಾದಿ ಮಾರ್ಗದ ವಿಚಾರ ಮಾಡಿದರೆ, ತತ್ವ ವಿವೇಕದಲ್ಲಿ ಸಂಖ್ಯಾಯೋಗದ ಕೆಲಸ ಇನ್ನೂ ಮುಗಿದಿಲ್ಲ ಎಂದೇ ಹೇಳಬೇಕಾಗುತ್ತದೆ. ವಿಶ್ವಕ್ರಿಯೆಯಲ್ಲಿ ಸಂಖ್ಯೆ ವ್ಯವಸ್ಥಾಪಕ ಧರ್ಮವಾಗುತ್ತದೆ; ಗುಣದಲ್ಲಿ ಒಂದು ಗುಣ ಎನಿಸುವುದಿಲ್ಲ. ದ್ರವ್ಯಾದಿ ವಿಚಾರಕ್ಕೆ ಪದಾರ್ಥ–ವಿವೇಕವು ಮೂಲ. ಅಲ್ಲಿ ಸಮ್ಯಕ್ ಸಂಖ್ಯಾಮಾನವು ಮಹತ್ವದ್ದು.

ಇವೇ ಮೊದಲಾದ ವಿಚಾರ ವಿವೇಕಮಾರ್ಗಕ್ಕೆ ಮತ್ತೆ ಪ್ರಚೋದಿಸಿತು ಈ ಪ್ರಬಂಧ. ಬರಿಯ ಹುಡುಗಾಟದಿಂದ ಇಂಥ ಪ್ರಬಂಧ ಬರೆಯಲಾಗುವುದಿಲ್ಲ. ಮತ್ತೆ ಇದೇ ಹಾದಿಯಲ್ಲಿ ಹೆಚ್ಚಿನ ಪ್ರಬಂಧಗಳನ್ನು ಬರೆಯುವ ಶಕ್ತಿ, ಆಯುಷ್ಯ, ಆರೋಗ್ಯ, ಸಂಪತ್, ಭಾಗ್ಯಗಳನ್ನು ಗ್ರಂಥ ಕರ್ತರ ದೈವ ಅವರಿಗೆ ಕರುಣಿಸಲಿ.

ಶ್ರೀಮಾತಾ

ಸಾಧನಕೇರಿ, ಧಾರವಾಡ–೧ **ದ.ರಾ.ಬೇಂದ್ರೆ**

# On Jnana-Sutra

I have gone through the book "JNANA-SUTRA" by Principal. B.H.Shridhar, and have been very much impressed by the encyclopediac contents and the powerful coherent presentation of modern Eastern and Western thought. In the introductory chapter the purpose of this book has been well presented. In the chapter on the development of Western thought, he has rightly covered the History of Western Philosophy from Thomes Hobbes to Bertrand Russell and Logical Positivists.

He has rightly stated that the Purushrthas in Indian Philosophy are complementary to each and they have to be integrated, if our civilization is to survive. The book is full of knowledge and wisdom. It is an intelligent man's guide to Philosophy and to the understanding of culture. I hope it will be useful for the enquiring minds in our society.

**Dr. T.G. Kalghatgi**

M.A.Ph.D.

# ಅರಿಕೆ

ಸ್ವಾತಂತ್ರ್ಯವೆಂದರೆ ಹಕ್ಕು, ಹಕ್ಕೆಂದರೆ ಅಧಿಕಾರ, ಅಧಿಕಾರವೆಂದರೆ ಶಕ್ತಿ. ಬಹಳ ಸಲ ಅಸುರರಿಂದ ಸೋಲನ್ನನುಭವಿಸಿದ ಸುರರು ತಮ್ಮ ಶಕ್ತಿಗಳನ್ನು ವಿಭಾಗಿಸಿ ಅದನ್ನು ತಮ್ಮಲ್ಲಿಯ ಒಬ್ಬನಾದ ಇಂದ್ರನಿಗೆ ಕೊಟ್ಟು ಅವನ ನಾಯಕತ್ವದಲ್ಲಿ ಯುದ್ಧಮಾಡಿ, ಅಸುರರನ್ನು ಗೆದ್ದರು ಎಂಬ ವೈದಿಕ ಕತೆಯು ನಮ್ಮ ರಾಜಕೀಯವೆಂಬ ಸರ್ವ ವ್ಯವಹಾರ ವ್ಯಾಪಕವಾದ ಸಂಸ್ಥೆಯ ಯೋಜನೆಗೆ ಒಂದು ಮಹಾಪಾಠ. ಹಲವು ವ್ಯಕ್ತಿಗಳು ಅಂಶತಃ ತಮ್ಮ ಹಕ್ಕುಗಳನ್ನು ಬಿಟ್ಟು ಕೊಟ್ಟಾಗ ಅವುಗಳಿಂದ ಸುಸಜ್ಜಿತವಾದ ಒಂದು ವ್ಯಕ್ತಿಯು ಪ್ರಜಾಸಮಷ್ಟಿಗೆ ಸಮಾನವಾದ ಭೌತಿಕ ಆರ್ಥಿಕ ಕ್ಷೇತ್ರಗಳಲ್ಲಿ ನ್ಯಾಯವಾದ ಲಾಭ ದೊರಕುವಂತೆ ಮಾಡಬಲ್ಲದೆಂಬುದೇ ಪ್ರಶಾಸನ, ಸರಕಾರ, ರಾಜಶಕ್ತಿ ಎಂಬುದನ್ನಿಟ್ಟುಕೊಳ್ಳುವದರ ಅರ್ಥ. ಅಂಥ ಪರಮಾಧಿಕಾರವುಳ್ಳ ಕಾರ್ಯಪಾಲಕ ವ್ಯಕ್ತಿಯು ಎಲ್ಲರಿಗಿಂತ ಹೆಚ್ಚು ಶ್ರೇಷ್ಠನಾಗಿರಬೇಕೆಂಬ ತತ್ವವನ್ನೂ ಅದೇ ಕತೆ ಹೇಳಿದೆ. ಶ್ರೇಷ್ಠನ ಆಯ್ಕೆಯೊಂದೇ ಪ್ರಜಾಪ್ರಭುತ್ವದ ಮಹತ್ವದ ಸಾಧನೆ.

ವ್ಯಕ್ತಿತ್ವ, ಚಾರಿತ್ರ, ಬುದ್ಧಿಮತ್ತೆಗಳಲ್ಲಿ ಶ್ರೇಷ್ಠನಾಗಿರುವವನೇ ನಿಜವಾಗಿ ಶ್ರೇಷ್ಠ. ಅವುಗಳನ್ನು ಮಾನಸ ಶಾಸ್ತ್ರೀಯ ಪ್ರಯೋಗ ವಿಜ್ಞಾನ ಪದ್ಧತಿಯ ಚಾರಿತ್ರಿಕ ವಿಶ್ಲೇಷಣದ ಮೂಲಕ ಅಳೆದರೆ ಮಾತ್ರ ಜನರಿಗೆ ವ್ಯಕ್ತಿಗಳ ಶ್ರೇಷ್ಠತೆ-ಕನಿಷ್ಠತೆಗಳು ನಿಜವಾಗಿ ಗೊತ್ತಾಗುವುವು. ಬಾಹ್ಯ ವರ್ತನೆಯ ತಾತ್ಕಾಲಿಕ ನೋಟದಿಂದ ಅವುಗಳನ್ನು ಅಂದಾಜು ಮಾಡಿ ಬೆಲೆ ಕಟ್ಟುವ ಆಯ್ಕೆಯ ಅಥವಾ ನಿಯೋಜನದ ಅವೈಜ್ಞಾನಿಕತೆಯು ನಮ್ಮ ಪ್ರಜಾಪ್ರಭುತ್ವದ ಇಂದಿನ ಸೋಲಿನ ಪ್ರಧಾನ ಕಾರಣ. ತೋರಿಕೆಗೆ ಮರುಳಾಗುವ ಪ್ರಜಾಕೋಟಿಗಳು ಎಂದೂ ಪ್ರಬುದ್ಧ ಮತದಾರರಲ್ಲ; ಅವರ ಪ್ರಜಾಪ್ರಭುತ್ವ ಕೇವಲ ತೋರಿಕೆಯದು. ಅದರಿಂದಲೇ ನಮ್ಮ ಆರ್ಥಿಕ ಜೀವನವಿಂದು ನೀರಮೇಲಿನ ಗುಳ್ಳೆಯಂತಾಗಿದೆ. ಸದ್ಯದ ರಾಜಕೀಯ ಕಲಹಗಳು ಅಂಥ ತೋರಿಕೆಯನ್ನು ಎತ್ತಿ ತೋರಿಸುವ ಪ್ರತ್ಯಕ್ಷ ಸಾಕ್ಷಿಗಳು. ರಾಜಕೀಯ ಪ್ರತಿನಿಧಿತ್ವವಿಂದು ಖರ್ಚು ಮಾಡುವ ಶಕ್ತಿಯನ್ನೇ ಪ್ರಧಾನವಾಗಿ ಅವಲಂಬಿಸಿರುವುದು ಅಪಾತ್ರರ ಆಯ್ಕೆಗೆ ಕಾರಣ. ಅಪಾತ್ರರಿಗೆ ಅಧಿಕಾರ ದಾನ ಮಾಡಿದ ಮತದಾರರು ಅಪಾತ್ರರು. ಆದುದರಿಂದ ನಮ್ಮಲ್ಲಿಯ ಮತದಾರರಲ್ಲಿ ಅನೇಕರು ಮತದಾನಾಧಿಕಾರಕ್ಕೆ ಅರ್ಥಾತ್ ಪ್ರಜಾಪ್ರಭುತ್ವಕ್ಕೆ ಅನರ್ಹರು.

ಮೇಲೆ ಹೇಳಿದ ಅಪ್ರಿಯ ಸತ್ಯವು ಗಣ್ಯನಿಂದ ಅಲಕ್ಷಿತವಾದರೆ ಕೆಲವೇ ವರ್ಷಗಳಲ್ಲಿ ಪರೋಕ್ಷವಾಗಿಯಾದರೂ ಭಾರತದ ವ್ಯವಹಾರದ ಮೂಲಗಳು ಪರರಾಷ್ಟ್ರದ(ಗಳ)

ಅಧೀನವಾಗುವುವು. ಇದು ಇಷ್ಟಾಪತ್ತಿಯಲ್ಲವಾದರೆ ಈಗಿನಿಂದಲೇ ನಮ್ಮ ಪ್ರತಿನಿಧಿಗಳ ಆಯ್ಕೆಯ ರೀತಿಗಳನ್ನು ಪೂರ್ಣ ಬದಲಾಯಿಸಬೇಕು. ಪ್ರತಿನಿಧಿಗಳ ಪದವನ್ನು ಬಯಸುವ ಅಭ್ಯರ್ಥಿಗಳಿಗೆ ತಕ್ಕ ಪ್ರಶಿಕ್ಷಣ ವರ್ಗಗಳನ್ನು ತೆರೆಯಬೇಕು. ನಿವೃತ್ತ ಹೈಕೋರ್ಟು ನ್ಯಾಯಾಧೀಶರು ಪ್ರತಿರಾಜ್ಯದಲ್ಲೂ ಅವರ ಗುರುತ್ವವನ್ನು ಒಂದು ವರ್ಷದವರೆಗಾದರೂ ವಹಿಸುವ ವ್ಯವಸ್ಥೆಯಾಗಬೇಕು.

ಪ್ರತಿನಿಧಿಗಳ ಅಪ್ರಶಿಕ್ಷಣದ ದೆಸೆಯಿಂದಲೇ ಅವರಿಗೆ ತಕ್ಕ ಮಂತ್ರಿಗಳನ್ನು ಮುಖ್ಯಸ್ಥಾನಕ್ಕೆ ಆರಿಸುವ, ಆ ಮೂಲಕ ಆಡಳಿತ ನಿಯಮಾವಳಿಗಳನ್ನು ರಚಿಸುವ, ಆಡಳಿತಗಾರರನ್ನು ನಿಯಮಿಸಿಕೊಳ್ಳುವ ಮತ್ತು ಅವರಿಂದ ಪ್ರಜಾಹಿತ ಭಂಗವಾಗದಂತೆ ಎಚ್ಚರಿಕೆಯ ಕ್ರಮಗಳನ್ನು ತೆಗೆದುಕೊಳ್ಳುವ ಯೋಗ್ಯತೆಗೆ ಅನೇಕ ಕಡೆ ಬಹಳ ಕೊರತೆಯಾಗುವಂತಾಗಿದೆ. ಈ ಕೊರತೆಗಿಂತ ಹೆಚ್ಚಿನ ಹಾನಿ ಜನತೆಗೆ ಇನ್ನೊಂದಿಲ್ಲ. ಇದು ಸರ್ವಹಾನಿಗಳ ಮೂಲಕಾರಣ; ಸರ್ವಶತ್ರು, ಸೈತಾನ. ದೇಶದ ಒಳ ಹೊರಗಿನ ಕ್ಷೇಮಕ್ಕಿದು ಸದಾ ಕುಠಾರಪ್ರಾಯ. ಸ್ವರಾಜ್ಯ ಪದಕ್ಕೆ ಅರ್ಥವಿಲ್ಲದಂತೆ ಮಾಡಿದ್ದು ಇದೇ–ಇನ್ನಾವುದೂ ಅಲ್ಲ. ರಾತ್ರಿ ಕಂಡ ಬಾವಿಗೆ ಹಗಲಿನಲ್ಲೇ ಹಾರಬಾರದೆಂದಿದ್ದರೆ ಮತದಾರರು ಇಂಥ ತರಬೇತು ಕೇಂದ್ರಗಳಿಗಾಗಿ ಹಟ ಹಿಡಿಯಬೇಕು. ಪಕ್ಷಗಳ ಅಧಿಕಾರಿಗಳಿಗೆ ಕಟ್ಟು ನಿಟ್ಟಾಗಿ ತಿಳಿಸಿಬಿಡಬೇಕು. ಪ್ರಜೆಗಳ ಸಾರ್ವಜನಿಕ ಹಾನಿಗಳೆಲ್ಲವುಗಳಿಗೂ ಆಳುವ ಪಕ್ಷದ ಪ್ರತಿನಿಧಿಗಳೇ ಹೊಣೆಗಾರರು– ಎಂಬುದನ್ನು ಒಪ್ಪದ ಹುರಿಯಾಳಿಗೆ ಮತ ಹಾಕಬಾರದು. ವಚನಭಂಗ ಮಾಡಿದವರಿಗೂ ಮತ್ತೆ ಮತ್ತೆ ಮತ ಕೊಡುತ್ತ ಹೋಗುವ ಆತ್ಮಘಾತಕ ಪ್ರವೃತ್ತಿಯು ತ್ಯಾಜ್ಯ. ನ್ಯಾಯವಾದುದನ್ನು ಸಮರ್ಥಿಸಲಾರದೆ ಕುಂಟು ನೆವ ಹೇಳುವ ಪ್ರತಿನಿಧಿಗಳನ್ನು ಮತ್ತೆ ಆಯುವುದು ಶತಭೋಳೇತನ. ಅಂಥ ಹುಂಬರ ಪ್ರಜಾಪ್ರಭುತ್ವವು ನಂದುರಾಯನ ಭಂಡಾರ.

ಒಂದು ಗ್ರಾಮದ, ನಗರದ, ಜಿಲ್ಲೆಯ, ರಾಜ್ಯದ ಅಥವಾ ದೇಶದ ಸಾಮಾನ್ಯ ಯೋಗ್ಯತೆಯನ್ನು ತದಿತರರು ನಿರ್ಣಯಿಸುವುದು ಆಯಾ ಘಟಕದ ಜನರ, ಮುಂದಾಳುಗಳ, ನಾಯಕರ, ಪರಮಾಧಿಕಾರಿಗಳ ಯೋಗ್ಯತೆಯ ಮೇಲಿನಿಂದ. ಇದು ಯಾವ "ಇಜಂ"ಇನ ಸರಕಾರದ ಅಂಕೆಯಲ್ಲಿ ಜನ ಬದುಕುತ್ತಿರುವಾಗಲೂ ಸತ್ಯ. ಚಾರಿತ್ರ, ವ್ಯಕ್ತಿತ್ವ, ವಿದ್ವತ್ತೆ, ಚಾತುರ್ಯಗಳಲ್ಲಿ ಸರಾಸರಿಗಿಂತ ಮೇಲು ಮಟ್ಟದವರು ಪ್ರಾತಿನಿಧಿಕ ಉನ್ನತ ಸ್ಥಾನದಲ್ಲಿದ್ದರೆ ಅವರು ತಮ್ಮ ಘಟಕಕ್ಕಾಗಿ ಇತರ ಘಟಕಗಳ ಮುಂದಾಳುಗಳೊಡನೆ ವ್ಯವಹರಿಸುವಾಗ ನ್ಯಾಯವನ್ನು ಪಡೆಯುವಲ್ಲಿ ಸಮರ್ಥರಾಗುವರು. ಇದು ವ್ಯಾವಹಾರಿಕ ಮನಃಶಾಸ್ತ್ರ. ರಾಜಕೀಯ ಕ್ಷೇತ್ರದಲ್ಲಿ ನಾವಿಂದು ಇದನ್ನು ಹೆಚ್ಚಾಗಿ ಮರೆತಿದ್ದೇವೆ. ಯಜಮಾನನ ಯೋಗ್ಯತೆ ಆಳುಗಳನ್ನೂ ಸುಧಾರಿಸುತ್ತದೆ ಎಂಬುದನ್ನು ಆಂತರಿಕ ಆಡಳಿತದಲ್ಲೂ ಕಾಣಬಹುದು. ನಾಯಕನ ಯೋಗ್ಯತೆಗೆ ಅವನ ಆಡಳಿತವೇ ನಿಕಷ.

ನಮ್ಮ ದೇಶದ ಪ್ರಜಾಪ್ರಭುತ್ವವಿಂದು ಅವ್ಯವಸ್ಥಿತ ಆಡಳಿತಕ್ಕೆ ಹೆಸರಾಗಲು ನಾವು ಮಾಡುತ್ತ ಬಂದ ನಾಯಕರ ಆಯ್ಕೆಯಲ್ಲಿಯ ಮಹಾದೋಷವೇ ಕಾರಣ. ದೈನಂದಿನ ಆಡಳಿತದ ಅಸಡ್ಡಾಳತನವು ಯಾರಿಗಾದರೂ ಜುಗುಪ್ಸೆಯುಂಟು ಮಾಡದಿರದು.

ಆಡಳಿತದಲ್ಲಿ ನಿತ್ಯವೂ ಅಶಿಸ್ತನ್ನು ಬೆಳೆಯಿಸುತ್ತ ಬಂದು ಶಿಸ್ತಿನ ಬಗ್ಗೆ ಉಪದೇಶಮಾಡುವ ನಾಯಕರನ್ನು ಉಳಿಸಿಕೊಂಡಿರುವುದು ಪ್ರಜಾಪರಾಧ, ಮಹಾಪಾಪ. ಪಾಪ ಮಾಡುತ್ತಿರುವವರು ಪುಣ್ಯ ಫಲವನ್ನು ಬಯಸಿ ಎಂದು ಕೃತಾರ್ಥರಾದಾರು? ಚುನಾವಣೆಯನ್ನು ದುಡ್ಡಿನ ವ್ಯಯದ ವ್ಯವಹಾರವಾಗಲು ಬಿಟ್ಟ ಮತದಾರಿಕೆ ಹೊಣೆಗೇಡಿತನದ್ದು. ಜಾತೀಯ ಗುಂಪುಗುಳಿತನವಂತೂ ಹೊಲಸು ನಾರುವಷ್ಟಾಗಿದೆ. ಅದು ಪ್ರವೇಶಿಸದ ಕ್ಷೇತ್ರವೊಂದೂ ಉಳಿದಿಲ್ಲ.

ವಿದ್ಯಾವಂತ ತರುಣರಿಂದು ರಾಜ್ಯ ಶಾಸ್ತ್ರೀಯ, ಪ್ರಶಾಸನ ಶಾಸ್ತ್ರೀಯ ಮತ್ತು ಶಿಕ್ಷಣ ಶಾಸ್ತ್ರೀಯ ಸಮಸ್ಯೆಗಳನ್ನು **ತಾತ್ವಿಕವಾಗಿಯೂ ವ್ಯಾವಹಾರಿಕವಾಗಿಯೂ** ಗಂಭೀರವಾಗಿ ಪರ್ಯಾಲೋಚಿಸಬೇಕಾಗಿದೆ; (ನಮ್ಮ ಸಾಂಸ್ಕೃತಿಕ ಪರಂಪರೆಗೆ ಹೊಂದುವ ಆಧುನಿಕತೆಯ ಮಾದರಿಗಳನ್ನು ರೂಪಿಸಲು ಮೂಲಭೂತ ವಿಚಾರ ಮಾಡಬೇಕು.) ಕಾಲೇಜಿನಲ್ಲಿ ತರ್ಕಶಾಸ್ತ್ರ ಓದುವವನಿಗೆ ನಮ್ಮ ತರ್ಕಶಾಸ್ತ್ರದ ಜ್ಞಾನ ಈಗ ಸಿಗುತ್ತಿಲ್ಲ, ತತ್ವಶಾಸ್ತ್ರ ಓದುವವನಿಗೆ **ಭಾರತೀಯ ದರ್ಶನ ಜ್ಞಾನದ** ಹಿನ್ನೆಲೆ ಇರುವುದಿಲ್ಲ. ಭೌತ ವಿಜ್ಞಾನಾಭ್ಯಾಸಿಗೆ ನಮ್ಮ ಪರಮಾಣು ಸಿದ್ಧಾಂತದ ಅರಿವನ್ನು ಮಾಡಿಕೊಡಲಾಗುತ್ತಿಲ್ಲ, ಗಣಿತಾಭ್ಯಾಸಿಗೆ ಭಾಸ್ಕರಾಚಾರ್ಯರ ಗ್ರಂಥದ ಪರಿಚಯ ದೊರಕದು, ಖಗೋಲ ಶಾಸ್ತ್ರಾಭ್ಯಾಸಿಗೆ ನಮ್ಮ ಜ್ಯೋತಿಸ್ತತ್ವ ವಿವೇಕ ಗೊತ್ತಾಗಲು ಸಾಧ್ಯವಿಲ್ಲ. "ಇಂಡಾಲಜಿ" ಎಂದು ಪ್ರತ್ಯೇಕ ಜ್ಞಾನ ವಿಭಾಗವನ್ನು ಕೆಲವು ವಿಶ್ವ ವಿದ್ಯಾಲಯಗಳು ತೆರೆದದ್ದೂ ಸಂಸ್ಕೃತವನ್ನು "ಮಿಸ್ಸಳ" ಅಥವಾ ಚೌ ಚೌ ಮಾಡಿ ಕಲಿಸುವುದೂ ತೀರ ಅಸ್ವಾಭಾವಿಕ. ಭಾರತೀಯ ರಾಜನೀತಿ ಶಾಸ್ತ್ರದ ಅಲ್ಪಜ್ಞಾನ, ಅಜ್ಞಾನ ಮತ್ತು ಅಪಜ್ಞಾನ ರಾಜ್ಯ ಶಾಸ್ತ್ರಾಭ್ಯಾಸಿಗಿರುವ ಸಂನಿವೇಶವು ಅದರ ಅಭ್ಯಾಸ ಯೋಜನೆಯಲ್ಲಿರುವ ಮಹಾದೋಷ. ಸಮಾಜಶಾಸ್ತ್ರಾಭ್ಯಾಸಿಗಿಲ್ಲಿ ಧರ್ಮಶಾಸ್ತ್ರಗಳ ಅಭ್ಯಾಸದ ಹಿನ್ನೆಲೆ ದೊರಕದು, ಸಸ್ಯಶಾಸ್ತ್ರದಲ್ಲಿ ಭಾರತೀಯ ಸಸ್ಯ ಪರಿಚಯದ ಅವಕಾಶ ಅಲ್ಪ ಮತ್ತು ಅಸಮರ್ಪಕ. ಈ ಕಾರಣದಿಂದಲೇ ಮೂಲಭೂತ ಸ್ವತಂತ್ರವಿಚಾರ ನಮ್ಮ ಆಧುನಿಕ ಪಂಡಿತರಲ್ಲಿ ೨೦ ವರ್ಷಗಳಲ್ಲಿ ಎಲ್ಲೂ ಹೊಳೆಯದಂತಾಗಿದೆ. ಪರದಾಸ್ಯದ ಪರಾಕಾಷ್ಠೆಗಿದು ಪರಮೋದಾಹರಣೆ. "ಯೂರೋಪಿಯನಿಜಮ್ಮಿ"ನ ಮುದ್ರಾಧಾರಣೆ ಅಥವಾ ಲಿಂಗಧಾರಣೆ ಚಿಕ್ಕಂದಿನಿಂದಲೇ ನಮ್ಮ ಶಾಲೆ ಕಾಲೇಜುಗಳಲ್ಲಿ ನಡೆಯುತ್ತಿರುವವರೆಗೆ ಅನನ್ಯ ಪ್ರತಿಭಾಸ್ಫುರಣ, ಸ್ವತಂತ್ರ ವಿಚಾರ, ಸಮನ್ವಿತ ಆಧುನಿಕತೆ ಯುವಕರಲ್ಲಿ ರೂಪಿತವಾಗದು. ವಿಕಾಸ, ಇತಿಹಾಸಗಳ ಕ್ರಮಗಳಿಗನುಗುಣವಾಗಿ ಪೂರ್ವಾಪರಗಳನ್ನು ಹೊಂದಿಸಿಕೊಂಡು ಭಾರತೀಯ ಜ್ಞಾನ ನದೀ ಪ್ರವಾಹ ಹರಿಯದಂತೆ ನೋಡಿಕೊಂಡ ಹಿರಿಯತನದ ಯೋಗ್ಯತೆಯು ನಮ್ಮ ಇತಿಹಾಸದಲ್ಲಿ **ಡಾಮರಿನಿಂದ** ಬರೆಯಲ್ಪಡದೆ ಇರಲಾರದು. ಸರ್.ಎಸ್. ರಾಧಾಕೃಷ್ಣರು ಸಮನ್ವಯದ ಬಗ್ಗೆ ಗ್ರಂಥಗಳನ್ನು ಬರೆದು ಬರೆದು ಮುದುಕರಾದರು. "ಸಮನ್ವಯ" ಎಂಬ ಪದವನ್ನೀಗ ಅನೇಕರು ಪಠಿಸಿದರೂ ಅದರ ಯೋಜನಾಬದ್ಧ ವ್ಯಾವಹಾರಿಕ ಪ್ರಯೋಗ ಯಾವ ಕ್ಷೇತ್ರದಲ್ಲೂ ಚೆನ್ನಾಗಿ ಆರಂಭವಾಗಿಲ್ಲ. ಭಾರತೀಯ ಮತದಾರನ ಮತಿಗೆ ಸಂಸ್ಕಾರದ ಸಮನ್ವಿತತೆ ದೊರಕಿಲ್ಲ; ಅವನನ್ನಿಂದು ನಾನಾ ಅಭಾರತೀಯ ವಿಧಾನಗಳ ಮೂಲಕ ದೇಶೀಯ ಸಾಂಸ್ಕೃತಿಕ

ಬೇರುಗಳಿಂದ ವಿಂಗಡಿಸಿ ತಬ್ಬಲಿಯನ್ನಾಗಿ ಮಾಡಲಾಗುತ್ತಿದೆ. ಸಾಂಸ್ಕೃತಿಕ ಹನನವು ರಾಷ್ಟ್ರೀಯತೆಯೆಂಬ ಆತ್ಮದ ಕೊಲೆ. ಅರಾಷ್ಟ್ರೀಯತೆಯು ಅರಾಜಕತೆ, ಅಕ್ಷೇಮ, ಶೋಷಣ, ಅಶಾಂತಿಗಳ ಬೀಜ.

ಪೂರ್ವ–ಅಪರ (ಪೌರಸ್ತ್ಯ–ಪಾಶ್ಚಾತ್ಯ) ವಿಚಾರಗಳ ಪ್ರಾರಂಭಿಕ ಪರಿಚಯ ಸಾಮಾನ್ಯ ಕನ್ನಡ ಮತದಾರ ವಿದ್ಯಾವಂತರಿಗೆ ಉಂಟಾಗಲು ಅಣುಮಾತ್ರ ಸಹಾಯವಾದರೂ ಆಗಲೆಂದು ಈ ಜ್ಞಾನಸೂತ್ರವನ್ನು ಬರೆಯಲಾಗಿದೆ. ಅವುಗಳಲ್ಲಿರುವ ಸಾಮ್ಯ–ವೈಷಮ್ಯಗಳ ಸ್ವರೂಪ ಓದುಗರಿಗೆ ಗೊತ್ತಾದರೆ ಸಾಕು ಎಂಬುದಿಲ್ಲಿ ಬರೆಹದ ಸಂಕಲ್ಪ. ವಿಚಾರ ವೈವಿಧ್ಯ ಒಂದು ಕಡೆ ಸಾಗುತ್ತಿರುವಾಗಲೇ ವಿಚಾರ ಸಾಮಶ್ರುತ್ಯ ಸಾಗುತ್ತಿರುವುದೂ ನಾಗರಿಕತೆಯ ಆರೋಗ್ಯ ಸಾಧನೆಗೆ ಅಗತ್ಯ. **ಜೈನರ ಸಪ್ತಭಂಗಿ ನ್ಯಾಯದ** ಸಮನ್ವಯ ದೃಷ್ಟಿಗಿಂತ ಚೆನ್ನಾಗಿ ಇನ್ನಾವ ಸಿದ್ಧಾಂತವೂ ಈ ಸಮನ್ವಯದ ಲೌಕಿಕ ಮನಃಪ್ರಣಾಲಿಯನ್ನು ಬಿಂಬಿಸದು. (ಜ್ಞಾನಗಳ ಕ್ರೋಢೀಕರಣ ತತ್ವಜ್ಞಾನದ ಒಂದು ದೊಡ್ಡ ಗುರಿ. ಅದ್ವೈತದ ಜ್ಞಾನ ಯೋಜನೆಯ ಅಸ್ಥಿಪಂಜರ ಈ ತತ್ವಕ್ಕೆ ಬುನಾದಿಯಾಗಿದೆ.) ಅದೇ ವ್ಯಾಸ ಸಮಾಸ. ಅಲೆಕ್ಸಿಸ್ ಕೆರೆಲ್ ಮಹಾಶಯನು ವಿಜ್ಞಾನ ಸಿದ್ಧಾಂತಗಳ ಕ್ರೋಢೀಕರಣದ ಬಗ್ಗೆ ಇದೇ ದೃಷ್ಟಿಯನ್ನು ರೂಪಿಸಲು ಸೂಚನೆ ಇತ್ತಿದ್ದಾನೆ. ವ್ಯಾಪಕವಾದ ವಾಸ್ತವಿಕ ಕಲ್ಪನಾ ಸೌಷ್ಠವದ ಚೌಕಟ್ಟಿನಲ್ಲಿ ಮಾನವರಿಗೆ ಶಾಸ್ತ್ರೀಯವಾಗಿ ತಿಳಿದುಬಂದ ಅಂಶಗಳನ್ನು ಜೋಡಿಸಿ ಜಗತ್ತಿನ ರೂಪರೇಖೆಗಳನ್ನು ಹೊಂದಿಸಿಕೊಳ್ಳದೆ ಯಾರೂ ಬೆಲೆಗಳ ನಿರ್ಣಯವನ್ನು ತೆಗೆದುಕೊಳ್ಳುವುದರಲ್ಲಿ ಸಮರ್ಪಕತೆಯನ್ನು ಸಾಧಿಸಿಕೊಳ್ಳಲಾರರು. ಈ ದಿಕ್ಕಿನಲ್ಲಿ ಮಾಡ ಹೋದ ಪ್ರಥಮ ಪ್ರಯತ್ನವಿದು ಎಂದು ಭಾವಿಸಿ ಸಹೃದಯತೆಯಿಂದ ಓದುಗರು ಸ್ವೀಕರಿಸಬೇಕೆಂದು ಲೇಖಕನ ನಮ್ರ ಪ್ರಾರ್ಥನೆ. ಗ್ರಂಥವನ್ನು ಮುದ್ರಿಸಿ ಪ್ರಕಾಶಿಸಿದವರ ಸದುದ್ದೇಶ ಸತ್ ಪ್ರಯತ್ನಗಳ ಬಗ್ಗೆ ಲೇಖಕರ ಋಣಿತ್ವ ಚಿರಸ್ಥಾಯಿ. ಸದಭಿಪ್ರಾಯಗಳಿಂದ ಹರಸಿದ ಹಿರಿಯರಿಗೆ ನಮಸ್ಕಾರ. ಭಾರತದ ಸಂಸ್ಕೃತಿಯ ತಾಯಿಬೇರಾದ ಜ್ಞಾನಕೋಶಕ್ಕೆ ಸಮನ್ವಿತ ವ್ಯಾಸರೇಖೆಯನ್ನೆಳೆದ ವ್ಯಾಸನಿಗೆ ನಿತ್ಯನಮನ.

ಓಂ, ತತ್, ಸತ್!

ಸಿದ್ದಾಪುರ (ಉ.ಕ.) **–ಬಿ.ಎಚ್. ಶ್ರೀಧರ**

೧೦–೧೨–೧೯೬೯

(ಪ್ರಾಚಾರ್ಯ ಮತ್ತು ಸಂಸ್ಕೃತ ಪ್ರಧಾನ ಪ್ರಾಧ್ಯಾಪಕ ಮಹಾತ್ಮಾಗಾಂಧಿ ಶತಾಬ್ದಿ ಆರ್ಟ್ಸ್ ಕಾಲೇಜು)

# ಪರಿವಿಡಿ

**ಹರಕೆ**

**On Jnana-Sutra**

**ಅರಿಕೆ**

**ಪೀಠಿಕೆ**

## ೧. ಸಿದ್ಧಾಂತಗಳ ಮೂಲ ಶೋಧ:

ಉತ್ಥಾನ ಉತ್ಸರ್ಗ, ಅಪವಿವೇಚನೆ, ಮಾನವ ಧರ್ಮದ ಅಧ್ಯಾಸ, ಕೆಲ ಕಲ್ಪನೆಗಳ ಸ್ಪಷ್ಟೀಕರಣ, ಅಲ್ಪ ಜಲ್ಪ, ದ್ವೇಷಮೂಲ ವಾದ, ಅಪತರ್ಕ, ವ್ಯಾವಹಾರಿಕ ವಿಶ್ಲೇಷಣ, ವಿಕಟ ಪ್ರತಾಪ, ಕಾಲಿಂಗ್ ವುಡ್ಡರ ಸಿದ್ಧಾಂತ, ಮಾಯೆ, ಅಮಾಯೆ, ರಾಜಕೀಯ ಸಾಧನ, ಜ್ಞಾನ ಮತ್ತು ಅನುಭವ, ಸಾಧಕ ಧರ್ಮ, ವಿಜ್ಞಾನ ಮತ್ತು ಸಂಸ್ಕೃತಿ, ಸ್ವಸ್ತಿಪಂಥ, ಸೂತ್ರ ಮತ್ತು ಭಾಷ್ಯ, ತತ್ವಜ್ಞಾನದ ಸ್ಥಾನ ಮತ್ತು ಅರ್ಥದ ಅರ್ಥ; ಸತ್ಯ, ಸುಳ್ಳು, ಆಶಾವಾದ; ವ್ಯಾಸನ ಆತ್ಮ, ಪಾಶ್ಚಾತ್ಯ ಆರೋಪ, ವಿಜ್ಞಾನ ಮತ್ತು ವೇದಾಂತ.

## ೨. ಪಾಶ್ಚಾತ್ಯ ಸಿದ್ಧಾಂತ:

ಥಾಮಸ್ ಹಾಬ್ಸ್, ರೆನಿಡಸ್ ಕಾರ್ಟಿಸ್, ಬೆನಿಡಿಕ್ಟ್ ಸ್ಪಿನೋಜ, ಗಾಟ್‌ಫ್ರೆಡ್ ವಿಲ್‌ಹೆಲ್ಮ್ ಲಿಬ್ನಿಜ್, ಜಾನ್ ಲೋಕೆ, ಜಾರ್ಜ್ ಬರ್ಕ್ಲೆ, ಡೇವಿಡ್ ಹ್ಯೂಂ, ಜೀನ್ ಜಾಕ್ಸ್ ರೂಸೋ, ಇಮ್ಯಾನ್ಯುಯೆಲ್ ಕ್ಯಾಂಟ್, ಟಿಪ್ಪಣಿಗಳು, ಜಾರ್ಜ್‌ವಿಲ್‌ಹೆಲ್ಮ್ ಫ್ರೆಡ್ರಿಕ್ ಹೆಗೆಲ್, ಜೆರಿಮಿ ಬೆಂಥ್ಯಾಂ, ಕಾರ್ಲ್‌ಮಾರ್ಕ್ಸ್, ಟಿಪ್ಪಣಿ, ಹೆನ್ರಿಬರ್ಗ್ಸನ್, ವಿಲಿಯಂ ಜೇಮ್ಸ್, ಜಾನ್ ಡ್ಯೂಯಿ, ಬರ್ಟ್ರೆಂಡ್ ರಸೆಲ್, ಟಿಪ್ಪಣಿ, ಆಲ್‌ಫ್ರೆಡ್ ನಾರ್ತ್ ವೈಟ್‌ಹೆಡ್, ಟಿಪ್ಪಣಿಗಳು, ಫ್ರಾನ್ಸಿಸ್ ಹರ್ಬರ್ಟ್ ಬ್ರಾಡ್ಲಿ, ಟಿಪ್ಪಣಿಗಳು, ಹತ್ತು ವಾದ ಪ್ರಕಾರಗಳು.

## ೩. ವ್ಯಾಸಾಯನ:

ಮಾನಸ, ಅತಿಮಾನಸ; ಪ್ರಕೃತಿ, ಶಾಶ್ವತ ಧರ್ಮ, ವರ್ಣಧರ್ಮ, ಪ್ರಜಾಪ್ರಭುತ್ವ.

## ೪. ತಾತ್ವಿಕ ತಳಪಾಯ:

ವ್ಯಾವಹಾರಿಕ ವಸ್ತುಸಾರ, ವಿಜ್ಞಾನ ವಿಚಾರ, ಸಮನ್ವಯ, ಆಕಸ್ಮಿಕತೆಯ ತತ್ವದ ಪರಿಣಾಮ, ವಾದಗಳ ದುರುಪಯೋಗ ಮತ್ತು ಸದುಪಯೋಗ, ಮಹಾಭಾವ–ಮಹಾನುಭಾವ; ಮಾನವನ ಕರ್ತೃತ್ವ; ಪ್ರಾಸ್ಥಾನಿಕ ದೃಷ್ಟಿಕೋನಗಳು, ಕ್ಷಾತ್ರ ಪ್ರಶಿಕ್ಷಣ, ವ್ಯಾಹತಿಗಳು ಮತ್ತು ಅವುಗಳ ಪರಿಹಾರ, ಸಿದ್ಧಾಂತ ದೋಷಗಳು, ಸರ್ವೋದಯದ ಅರ್ಥ, ಫ್ರೂಡ್‌ವಾದದ ವಿಮರ್ಶೆ, ಪ್ರಾಣಿಶಾಸ್ತ್ರದ ನೀತ್ಯಾಧಾರ, ಏಕದೇಶೀಯ ವಿಚಾರ, ವೈಟ್‌ಹೆಡ್ ಸಿದ್ಧಾಂತದ ವಿಶ್ಲೇಷಣೆ, ಓಜ ಸ್ಪಿನೋಜ, ಪರಮಾರ್ಥದ ಪ್ರಾಧಾನ್ಯ, ಆತ್ಮಜ್ಞಾನದ ಅರ್ಥ, ಲೌಕಿಕ ಜ್ಞಾನದ ಸ್ವರೂಪ, ಭಾರತೀಯ ಶಿಕ್ಷಣ ದೃಷ್ಟಿ.

## ೫. ಲೋಕ ಜೀವನ:

ರಾಜಕೀಯ ಆಡಳಿತದ ವ್ಯಾಪ್ತಿ, ರಾಜಪ್ರಭುತ್ವ ಮತ್ತು ಪ್ರಜಾಪ್ರಭುತ್ವ, ರೂಸೋ ವಿಚಾರ, ಗಾಂಧಿ ವಿಚಾರ, ಇಂದಿನ ಭಾರತ, ವ್ಯಾಸ ಪ್ರಶ್ನೆ, ಶೋಷಣೆಯ ಸೂಕ್ಷ್ಮರೂಪಗಳು, ಸಂಶಯ ಮತ್ತು ಧೈರ್ಯ, ವ್ಯಾಸಗ್ರಾಸ, ರಸೆಲ್ಲನಘಟನಾ ಸ್ವರೂಪ, ಜೈವಿಕ ಜ್ಞಾನ, ಮನೋವ್ಯಾಪಾರ ಮತ್ತು ತತ್ವಗ್ರಹಣ, ನಿಗಮನ.

**ಉಪಸಂಹಾರ**

**ಹರಕೆಗಳು**

**ಪಾರಿಭಾಷಿಕ ಶಬ್ದಗಳು**

# ಪೀಠಿಕೆ

Longing for the Infinite is one of the infinite longings of man; the infinite is the most universal of all the concepts of man – ಮನುಷ್ಯನ ಅನಂತ ಆಸೆಗಳಲ್ಲಿ ಅನಂತಕ್ಕಾಗಿ ಮಾಡುವ ಆಸೆಯೂ ಒಂದು; ಮಾನವನ ಕಲ್ಪನೆಗಳಲ್ಲೆಲ್ಲಾ ಅನಂತದ ಕಲ್ಪನೆಯೇ ಅತ್ಯಂತ ವಿಶಾಲವಾದದ್ದು. ಈ ಅನಂತವನ್ನು 'ಸತ್ಯ,' 'ಜ್ಞಾನ' ಎನ್ನುತ್ತವೆ ಉಪನಿಷತ್ತುಗಳು. ಮಾನವನು ವ್ಯಾಪ್ಯನಾದುದರಿಂದ ಸರ್ವವ್ಯಾಪಕವಾದ ಅನಂತವನ್ನವನು ಹೊಂದುವುದೆಂದರೆ ಅದರಲ್ಲಿ ಲೀನವಾಗುವುದೇ.

ಮನುಷ್ಯನ ಅನಂತ ಆಸೆಗಳೇ ಅವನಿಗೆ ತಾನು ಸಾಂತನೆಂಬುದನ್ನು ತಿಳಿಸುತ್ತವೆ. ಸಾಂತನಾದ ಮನುಷ್ಯನಲ್ಲಿ ಅನಂತ ಆಸೆಗಳುಂಟಾಗುವುದೂ ಒಂದೇ, ಇಡಿಯಾದ ಒಂದು ಪೂರ್ಣಾಂಕದ ಬಿಡಿಗಳು ವಿಭಜಿಸುತ್ತ ಹೋದ ಹಾಗೆ ಕೊನೆಯಿಲ್ಲದಂತಾಗುವುದೂ ಒಂದೇ.

ಮಾನವನ ಪ್ರಯೋಗ–ಪರೀಕ್ಷೆಗಳೆಲ್ಲವೂ ಬೌದ್ಧಿಕ; ಅದರಲ್ಲಿ ಪರೀಕ್ಷಕ ಬುದ್ಧಿಯ ಸ್ವರೂಪದ ಅಚಲತೆಯೆಂಬುದು ಕೇವಲ ಗೃಹೀತ: 'ಸರ್ವಂ ಕ್ಷಣಿಕಂ' ಎಂದು ವಿಜ್ಞಾನವು ಹೇಳುವದರಿಂದ. ಜೊತೆಗೆ ಪರೀಕ್ಷ್ಯ–ಪರೀಕ್ಷಕಗಳು ಸರ್ವವೆಂಬ ಜಗತ್ತಿನಲ್ಲಿ ಅಡಕವಾಗಿರುವುದಲ್ಲದೆ, ಪರಸ್ಪರ ವಸ್ತುನಿಷ್ಠ ಪದಾರ್ಥಗಳೆನ್ನಿಸಿಯೂ ತಮ್ಮತಮ್ಮಲ್ಲಿ ತಾವು ವ್ಯಕ್ತಿನಿಷ್ಠ ಪದಾರ್ಥಗಳೆನ್ನಿಸಿಯೂ ಇರುತ್ತವೆ. ಕಾರಣ–ಕಾರ್ಯಗಳಂತೆ ವಸ್ತು–ವ್ಯಕ್ತಿಗಳು ಕೇವಲ ಪ್ರಾಪಂಚಿಕ ಸ್ಥಾನವಾಚಕವಾದ ಅನ್ವರ್ಥ ನಾಮಗಳು– ಯಾವ ವಿಶಿಷ್ಟ ಪದಾರ್ಥದಲ್ಲಿಯೂ ಅವು ಏಕತ್ರ, ಏಕ ಕಾಲದಲ್ಲಿ ಇರಲಾರದವುಗಳೆಂಬುದು ಕೇವಲ ಗೃಹೀತ. ಕ್ರಮಿಕ ಸ್ಥಾನ ಸಂಬಂಧಗಳ ಬಹುತ್ವದ ಕಲ್ಪನೆಗೆ ಆಧಾರವಾದ ನಾನಾತ್ವವು ಪರತಃ ಪ್ರಮಾಣವನ್ನುಳ್ಳದ್ದಲ್ಲ. ಆ ಕಲ್ಪನೆಗೆ ಇಂದ್ರಿಯ ಸಂವೇದನೆ ಒದಗಿಸಿದ ಪ್ರತ್ಯಕ್ಷ ಅನುಭವವೊಂದೇ ಆಕರ. ಪ್ರತ್ಯಕ್ಷವು ಇಂದ್ರಿಯಗಳ ವ್ಯಕ್ತಿಗತ ಬಲಾಬಲಗಳಿಂದ ಪರಿಸೀಮಿತವಾದ ಅನುಭವ.

ಭಾವನಾಂಶವಿಲ್ಲದ ಅನುಭವವು ಅಮೂರ್ತ, ಶುಷ್ಕ, ಪಾಕ್ಷಿಕ; ಭಾವನೆಯು ಪ್ರಾಪಂಚಿಕ ಅಥವಾ ಅಪ್ರಾಪಂಚಿಕ. ಅದಕ್ಕೆ ಬುದ್ಧೀಚ್ಛೆಗಳನ್ನು ಮತ್ತು ಬುದ್ಧಿಗೆ ಭಾವನೇಚ್ಛೆಗಳನ್ನು ಮರೆಯಿಸುವ ಶಕ್ತಿಯಿದೆ. ಆದರೆ ಇಚ್ಛೆಗೆ ಬುದ್ಧಿಯೊಂದನ್ನು ಮಾತ್ರ ಮರೆಯಿಸುವ ಶಕ್ತಿಯಿದೆ. ಇಚ್ಛೆ–ಭಾವನೆಗಳು ಗಂಡಭೇರುಂಡದಂತಿವೆ. ಪ್ರಾಪಂಚಿಕವು ಸಾಪೇಕ್ಷ, ಅಪ್ರಾಪಂಚಿಕವು ನಿರಪೇಕ್ಷ. ಗ್ರಹ, ನಕ್ಷತ್ರ, ನೆಬುಲ, ಕಾಲ, ದೇಶಗಳೆಲ್ಲವೂ

ಪ್ರಾಪಂಚಿಕ, ನೈಸರ್ಗಿಕ. ಕಾಲ–ದೇಶಗಳ ಪ್ರಜ್ಞೆ ಇಲ್ಲದಿರುವುದೇ ಅಪ್ರಾಪಂಚಿಕತೆ, ಶುದ್ಧ ಆತ್ಮಾವಸ್ಥೆ ಅಥವಾ ಬ್ರಹ್ಮಾವಸ್ಥೆ ಇಲ್ಲವೆ ಸಮಾಧಿ, ಮುಕ್ತಿ. ವಸ್ತು ಬಹುತ್ವದ ಆಧಾರ ಕಲ್ಪನೆಗಳು ಕಾಲ–ದೇಶಗಳ ಪ್ರತ್ಯೇಕತೆ ಮತ್ತು ಪ್ರತ್ಯೇಕೀಕರಣ ಶಕ್ತಿಗಳ ರೂಪದವು.

ಭೌತಿಕದ ಸ್ವರೂಪವನ್ನು ಭೌತಿಕದ ಮೂಲಕವಾಗಿ ಭೌತಿಕ ಪರೀಕ್ಷಕನು ಪರೀಕ್ಷಿಸುವ ಕಾರ್ಯದಲ್ಲಿ Objective evidence ವಸ್ತುನಿಷ್ಠ ಸಾಕ್ಷಿ ಎಂದು ಜ್ಞಾನದ ಯಾವ ಪ್ರಮಾಣವನ್ನು ತೆಗೆದುಕೊಳ್ಳಲು ಸಾಧ್ಯ? Mind, Senses, matter and material instruments ಮನ, ಇಂದ್ರಿಯ, ಭೂತದ್ರವ್ಯ ಮತ್ತು ಭೌತಿಕ (ಯಂತ್ರೋಪಕರಣಾದಿ) ಸಾಧನಗಳು ವಿಜ್ಞಾನದ ಪ್ರಕಾರ ಭೌತಿಕೇತರವಲ್ಲ. ಅವುಗಳ ಅಸ್ತಿತ್ವದ ಸತ್ಯತೆಯ ಸ್ವರೂಪದಲ್ಲಿ ವ್ಯತ್ಯಾಸ ಮಾಡಲು ಯಾವ ಕಾರಣವೂ ಇಲ್ಲ. ಹಾಗೇ ಮೂರ್ತಾಮೂರ್ತ ಪದಾರ್ಥಗಳ ಸತ್ಯತೆಯಲ್ಲಿಯೂ ನಮ್ಮ ಸ್ವಯಂಭವ ಬೇಕುಬೇಡಗಳನ್ನು ಬಿಟ್ಟರೆ ಗ್ರಾಹ್ಯ, ತ್ಯಾಜ್ಯ ಎನ್ನಲು ಇನ್ನಾವ ಮಾನದಂಡವಿದೆ? ಪ್ರಾಪಂಚಿಕ ಪದಾರ್ಥಗಳ ಕ್ಷಣ ಭಂಗುರತೆಯು ಪರಿಮಾಣತಃ ಸಾಪೇಕ್ಷವಷ್ಟೇ – ಅದರಲ್ಲಿ ಪ್ರಕಾರಾಂತರವಿಲ್ಲ. ಪ್ರಕಾರವೊಂದೇ ಜಾತಿ (ವರ್ಗ) ಭೇದ ನಿರ್ಣಾಯಕ.

ಕೆಲ ವೈಜ್ಞಾನಿಕರ "Eternal Questions should not be asked ನಿತ್ಯ (ಪದಾರ್ಥಗಳ ಬಗೆಗಿನ) ಪ್ರಶ್ನೆಗಳನ್ನು ಕೇಳಬಾರದು" ಎಂಬ ನಿಷೇಧೋಪದೇಶವು "ನಮಗೆ ಗೊತ್ತಿಲ್ಲದ ಪದಾರ್ಥಗಳ ಬಗ್ಗೆ ಕೇಳಬೇಡ" ಎಂಬ ಅರ್ಥವುಳ್ಳದ್ದು; ಜೊತೆಗೆ, "ನಮಗೆ ಗೊತ್ತಿಲ್ಲದ್ದು ಇನ್ನಾರಿಗೂ ಗೊತ್ತಿಲ್ಲ, ನಾವು ತಿಳಿಯಲು ಹಿಡಿಯುವ ರೀತಿಯೊಂದೇ ಶುದ್ಧ, ಉಳಿದ ರೀತಿಗಳು ಅಶುದ್ಧ, ಎಂದು ನಾವು ಹೇಳುವದರಿಂದ ನೀವು ಕೇಳಬೇಕು" ಎಂಬ ಗೃಹೀತಗಳನ್ನೂ ಒಳಗೊಂಡಿದೆ. "Be content with what I give as truth – ಸತ್ಯವೆಂದು ನಾನು ಹೇಳುವುದನ್ನು ಗ್ರಹಿಸಿ ಸಂತುಷ್ಟನಾಗಿರು" ಎಂಬ ಇಂಗಿತವುಳ್ಳ ವೈಜ್ಞಾನಿಕತೆಯು ವ್ಯಕ್ತಿ ಸ್ವಾತಂತ್ರ್ಯವನ್ನು ಉಳಿಸದ ಬಲಾತ್ಕಾರ, ಆಗ್ರಹ.

ಆದರೆ ವ್ಯಕ್ತಿಯ ವ್ಯಕ್ತಿತ್ವವೇ ಪ್ರಾಪಂಚಿಕ, ಸಾಪೇಕ್ಷ; ಆದುದರಿಂದ ಅವನಿಗೆ ಸ್ವಾತಂತ್ರ್ಯವಿದ್ದರೂ ಅದು ಅಪೂರ್ಣ, ಪರಾವಲಂಬಿ, ಔಪಾಧಿಕ; ಸಾಮಾಜಿಕತೆಯೇ ಅದಕ್ಕೆ ಅವಲಂಬನ, ಆಧಾರ. ಸಮಾಜವು ವ್ಯಕ್ತಿ ಸಾಪೇಕ್ಷವಾದರೂ ಅದು ವ್ಯಾಪಕ, ವ್ಯಕ್ತಿಯು ವ್ಯಾಪ್ಯ– ದೈಹಿಕವಾಗಿ ಮತ್ತು ಮಾನಸಿಕವಾಗಿ.

ಆತ್ಮವು ಸರ್ವಸಾಧಾರಣವಾಗಿರುವುದರಿಂದ ಆತ್ಮೋನ್ಮುಖವಾದ ಮಾನವ ಸಾಧನೆಯು ಅಸಾಮಾಜಿಕವೆಂದು ಭಾರತದಲ್ಲಿ ಗಣಿಸಲ್ಪಟ್ಟಿಲ್ಲ. ಸಂನ್ಯಾಸಿಯು ಸಾಧಕತ್ವದಲ್ಲಿ ಸಮಾಜ ವ್ಯವಹಾರಗಳ ಲೌಕಿಕ ಗೊತ್ತು ಗುರಿಗಳ ಕಕ್ಷೆಯಿಂದ ಹೊರಗಾದರೂ ಸಿದ್ಧತ್ವದಲ್ಲಿ ಸಾರ್ವಜನಿಕವಾಗಿ ಒಳಗೆ. ಅರ್ಥಾತ್ ಕರ್ಮಫಲದಿಂದ ವೈಯಕ್ತಿಕವಾಗಿ ಮುಕ್ತನಾದ ಪರೋಪಕಾರ ಕರ್ಮಿ. ಈ ಅರ್ಥವನ್ನರಿಯದ ಸಾಧಕ ಸಾಧಕನಲ್ಲ, ಸಿದ್ಧ ಸಿದ್ಧನಲ್ಲ, ಸಂನ್ಯಾಸಾರ್ಥಜ್ಞನು ಸಂನ್ಯಾಸಾರ್ಥಜ್ಞನಲ್ಲ. ಜೀವನ್ಮುಕ್ತಿಗಿಂತ ಕಡಿಮೆಯ ಸಿದ್ಧಿ (ಈ ಸಂದರ್ಭದಲ್ಲಿ) ಸಿದ್ಧಿಯಲ್ಲ.

ಜ್ಞಾನಿನಾಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಂ– ಎಂಬ ವಿದ್ಯಾರಣ್ಯ ಸೂತ್ರವು ಸಿದ್ಧನಿಗೆ ಆಚರಣ ಯೋಗ್ಯವಲ್ಲದೆ, ಸಾಧಕನಿಗಲ್ಲ. ಜ್ಞಾನಿ ಇಲ್ಲಿ ಧೀರ– ವಿಕಾರ ಹೇತೌ ಯದಿ ವಿಕ್ರಿಯಂತೇ ಯೇಷಾಂ ನ ಚೇತಾಂಸಿ ತ ಏವ ಧೀರಾಃ! ಜೊತೆಗೆ, ಜ್ಞಾನಿಯೇ ರಾಜ್ಯಾದಿ ಲೌಕಿಕ ಕರ್ತವ್ಯಗಳನ್ನು ನೆರವೇರಿಸಲು ಅತ್ಯಂತ ಸಮರ್ಥ; ಅವನಲ್ಲಿರುವಷ್ಟು ಸಾರ್ವಜನಿಕತೆ ಇತರರಲ್ಲಿರಲಾರದು– ಎಂಬುದು ಸ್ಪಷ್ಟ. ಅಧ್ಯಾತ್ಮ, ರಾಜಧರ್ಮ, ಪ್ರಜಾಧರ್ಮಗಳಿಗಿಂತು ಅತ್ಯುತ್ತಮ ಸಂಬಂಧವಿದೆ: ಪ್ರಜೆಯಲ್ಲಿ ವೈಯಕ್ತಿಕ ಪ್ರಜಾತ್ವವಿದ್ದರೆ, ರಾಜಶಕ್ತಿ ಸಂಪನ್ನರಲ್ಲಿ ಸಾಮೂಹಿಕ ಪ್ರಜಾತ್ವದ ಭಾವವಿರಬೇಕು; ಇದು ರಾಜ ಶಾಸನದ ರಾಷ್ಟ್ರ ಹಿತ ಸಾಧಕತ್ವದ ಸಾಮೂಹಿಕತೆ ಅಥವಾ ಸಾರ್ವಜನಿಕತೆಯಾದರೆ ಜ್ಞಾನಿಯದು ಜಗದ್ಧಿತ ಸಾಧಕತ್ವದ ಸಾರ್ವಜನಿಕತೆ. ಅಯೋಗ್ಯರು ಜ್ಞಾನಿ, ರಾಜ (ಸರಕಾರ), ಪ್ರಜೆಗಳ ಸ್ಥಾನಗಳನ್ನು ಆಕ್ರಮಿಸಿದಾಗ "Incongruity is the soul of humour ಅಸಾಂಗತ್ಯವೇ (ಅಸಮನ್ವಯವೇ) ಹಾಸ್ಯದ ಆತ್ಮ" ಎಂಬ ಗಾದೆಯಂತೆ ಲೋಕಜೀವನದ ವ್ಯವಹಾರಗಳು ಜ್ಞಾನಿಯ ದೃಷ್ಟಿಯಿಂದ ಹಾಸ್ಯಾಸ್ಪದವೆಂದೆನ್ನಿಸುವುವು, ಅರೆಜ್ಞಾನಿಯ ದೃಷ್ಟಿಯಿಂದ ಶೋಕಕರ ಎನ್ನಿಸುವುವು, ಕಾಲುಜ್ಞಾನಿಯ ದೃಷ್ಟಿಯಿಂದ ಅತಿ ಕಷ್ಟಕರ ಅಥವಾ ಅತಿ ಸುಖಕರ ಎನ್ನಿಸುವುವು.

ಅನುಭವದ ಸುಖಕಾರಿತ್ವ– ದುಃಖಕಾರಿತ್ವಗಳು ಜ್ಞಾನಾಧೀನ. ಒಂದು ಅನುಭವವು ಒಬ್ಬನಿಗೆ ಸುಖಕರವೆನ್ನಿಸಿದರೆ ಕೆಲವೊಮ್ಮೆ ಇತರ ಕೆಲವರಿಗೆ ಅಸುಖಕರವೆನ್ನಿಸಬಹುದು. ಅದ್ವೈತವು ಅಸುಖಕರ ಎನ್ನಿಸುವುದು ದ್ವೈತಾದಿ ನಾನಾತ್ವವಾದಗಳ ಅನೈಕಾಂತಿಕತೆ ಸುಖವೆಂದು ತಿಳಿದವರಿಗೆ. ದೈಹಿಕ ಸಂವೇದನೆಗಳಲ್ಲಿರುವಷ್ಟು ಸರ್ವಸಾಧಾರಣತೆಯು, ಮಾನಸಿಕ ಅನುಭವದಲ್ಲಿಲ್ಲ; ಮಾನಸಿಕದಲ್ಲಿರುವಷ್ಟೂ ಆಧ್ಯಾತ್ಮಿಕದಲ್ಲಿಲ್ಲ. ಈ ದೃಷ್ಟಿಯಿಂದ ಅರವಿಂದರು ದರ್ಶನದ ವೈವಿಧ್ಯದ ಸತ್ಯತೆಯನ್ನು ಸಾರಿದರು; ಆದರೆ ಸಮಗ್ರ (ಸಾಕಲ್ಯ) ಯೋಗದ ದೃಷ್ಟಿಯಿಂದ ಪೂರ್ಣತಮವಾದ ಒಂದೇ ಒಂದು ಎನ್ನಿಸಿದ ಸಚ್ಚಿದಾನಂದಾತ್ಮಕತ್ವವು ಸರ್ವದರ್ಶನಾಧಾರವೆಂದು ಘೋಷಿಸಿದರು. ಶಂಕರರು ದರ್ಶನ ವೈವಿಧ್ಯವನ್ನು ಅದರಿಂದಲೇ ಮಾಯಾಕಲ್ಪಿತ ನಾನಾಕಾರವೆಂದರು.

Philosopher-King ಋಷಿರಾಜನು King-philosopher ರಾಜರ್ಷಿಗಿಂತ ಶ್ರೇಷ್ಠನು; ಏಕೆಂದರೆ ಅವನಷ್ಟು ಪೂರ್ಣತೆ ಇವನಿಗಿಲ್ಲ; ಅವನ ಆತ್ಮವ್ಯಾಪ್ತಿ ಇವನಿಗಿಲ್ಲ. ಅಸೀಮದ ವ್ಯಾಪ್ತಿಯು ಸೀಮಿತಕ್ಕೆಲ್ಲಿಂದ ಬಂದೀತು? ಬೆಂಕಿ ಹೊಗೆಗಳಲ್ಲೇ ಬೆಂಕಿಯ ವ್ಯಾಪಕತೆ ಹೊಗೆಗಿಲ್ಲ. ಹೆಚ್ಚು ಹೆಚ್ಚು ಸೀಮಿತವಾದುದು ಹೆಚ್ಚು ಹೆಚ್ಚು ಸಂಕುಚಿತ. ಕಾಲ ದೇಶಾದಿಗಳಿಂದ ಹೆಚ್ಚು ಹೆಚ್ಚು ಸಂಕುಚಿತವಾದುದು ಹೆಚ್ಚು ಹೆಚ್ಚು ಸ್ವಾರ್ಥಿ, ಹೆಚ್ಚು ಹೆಚ್ಚು ಬೇಗ ಪರಿವರ್ತನೀಯ, ಹೆಚ್ಚು ಹೆಚ್ಚು ದುರ್ಬಲ. ಸ್ಥಿತಿಸ್ಥಾಪಕತ್ವವು ಬಲ, ವಿಭೂತಿ, ಐಶ್ವರ್ಯ, ಶ್ರೀ ಅಥವಾ ಊರ್ಜಿತತೆ ಇಲ್ಲವೆ ತೇಜಸ್ಸು. ದೇಹಬಲ, ಮನೋಬಲ, ಆತ್ಮಬಲಗಳಲ್ಲಿ (ಜಡಬಲ, ಜೀವಬಲ, ಪರಮಾತ್ಮಬಲಗಳಲ್ಲಿ) ಮುಂದು ಮುಂದಿನದು ಹೆಚ್ಚೆನ್ನಿಸಲು ಜಡ, ಜೀವ, ಆತ್ಮಗಳ ಉತ್ತರೋತ್ತರ ವ್ಯಾಪಕತ್ವಾಧಿಕ್ಯವೇ ಕಾರಣ.

ಜಡರೂಪದ ಸೂರ್ಯ ಪ್ರಪಂಚದಲ್ಲಿ ಸೂರ್ಯನೇ ಬಲವತ್ತಮ, ದೇಹಪ್ರಧಾನವಾದ ಜೀವ ಪ್ರಪಂಚದಲ್ಲಿ ಆನೆಯಂಥ ಪ್ರಾಣಿಗಳು ಬಲವತ್ತಮ, ಮನಃಪ್ರಧಾನವಾದ ಜೀವಪ್ರಪಂಚದಲ್ಲಿ ಮನುಷ್ಯನೇ ಬಲವತ್ತಮ, ಶುದ್ಧ ಜೀವಗಳಲ್ಲಿ ಆತ್ಮನೇ ಬಲವತ್ತಮ. ಆತ್ಮನು ಸರ್ವಾಂತರ್ಯಾಮಿ ಸರ್ವಬಹಿರ್ಯಾಮಿ. ಅವನ ಒಳಹೊರಗುಗಳ ನಡುವಿರುವ ಜಡ–ಜೀವ–ಮನಃ ಪದಾರ್ಥಗಳೆಲ್ಲವೂ ಮಾಯಾಕಲ್ಪಿತವಾದ ನಾನಾಕಾರಗಳು, ದೇಶ–ಕಾಲಾದಿ ಉಪಾಧಿಗಳಿಂದ ಬದ್ಧವಾದವುಗಳು– ಎಂಬುದು ಮಾಯಾವಾದದ ಭಾಷಾ ವ್ಯವಹಾರದಲ್ಲಿ ಹೇಳುವ ರೀತಿ. ಜಡೇಂದ್ರಿಯಗಳಿಗೆ ಜಡಕಾರ್ಯದ ಮೂಲಕವೇ ಜೀವ–ಆತ್ಮಗಳ ಶಕ್ತಿಯು ಗೋಚರವಾಗುತ್ತದೆ. ಜಡದ ಗೋಚರ ಜಡ ಪ್ರಧಾನವಾದ ಜೀವಕ್ಕಾಗಲು ಆತ್ಮದ ಜ್ಞಾನಶಕ್ತಿಯು ಹಿನ್ನೆಲೆಯಲ್ಲಿರುವುದೇ ಕಾರಣ. ಈಶ್ವರನು ಸರ್ವಕಾರಣನೆಂಬುದು ಈ ಅರ್ಥದಲ್ಲಿ. ವಿಶ್ವದ ಆತ್ಮದ ಜ್ಞಾನಶಕ್ತಿಯು ಜಡಗೋಚರಕ್ಕೆ ಆಧಾರವಾದರೆ, ಅದರ ಜೀವಶಕ್ತಿಯು ಜಡಗಳ ಗುಣ ಕ್ರಿಯೆಗಳು ನಮಗೆ ಗೋಚರವಾಗಲು ಆಧಾರ. ಆತ್ಮದ ಜ್ಞಾನ–ಜೀವ–ಕ್ರಿಯಾಶಕ್ತಿ (ಗುಣವು ಪ್ರಚ್ಛನ್ನ ಕ್ರಿಯೆ, ಕ್ರಿಯೆಯು ಪ್ರಕಟಗುಣ)ಗಳಲ್ಲಿ ಉತ್ತರೋತ್ತರವಾದುದು ಕಡಿಮೆ ಕಡಿಮೆ ವ್ಯಾಪಕತೆಯುಳ್ಳದ್ದು. ಜ್ಞಾನ, ಆತ್ಮ, ಈಶ್ವರ, ಬ್ರಹ್ಮ ಎಂಬುದರಲ್ಲಿ ಸರ್ವಶಕ್ತಿಗಳೂ ಬೀಜರೂಪದಲ್ಲಿರುವುದರಿಂದ ಅದು ಸರ್ವಮೂಲ–ಜನ್ಮಾದ್ಯಸ್ಯಯತಃ! ಮೂಲತಃ ಬೀಜರೂಪದ ಮಾಯೆ ಬ್ರಹ್ಮಲೀನ! ಬ್ರಹ್ಮವು ಸರ್ವಜಡ, ಜೀವ, ಕಲ್ಪನೆಗಳ ಉತ್ಪಾದಕ ಅಥವಾ ಪ್ರದರ್ಶಕ. ಅದಕ್ಕೆ ಉತ್ಪತ್ತಿ–ವಿಲಯನಗಳಿಲ್ಲ, ಪ್ರದರ್ಶನವಿಲ್ಲ. ಮಾಯೆಯು ಪರಿಸೀಮನಾಭಾಸದ ಶಕ್ತಿ; ಪರಿಸೀಮಿತದ ಆಭಾಸಿಕತೆಯು ಬ್ರಹ್ಮದ ದೃಷ್ಟಿಯಿಂದ ಸತ್ಯ. ಅಬ್ರಹ್ಮ ಜಾಗರವುಳ್ಳ ಮಾನವರ ದೃಷ್ಟಿಯಿಂದ ಬ್ರಹ್ಮವಿಲ್ಲ, ಜಗತ್ತಿದೆ. ಅರ್ಧಬ್ರಹ್ಮ–ಅರ್ಧಮಾನವ (ಜಡಪ್ರಧಾನ ಮಾನವ) ಎನ್ನಿಸುವ ದೃಷ್ಟಿಯಿಂದ ಬ್ರಹ್ಮವು ಪಾರಮಾರ್ಥಿಕ ಸತ್ಯ, ಜಗತ್ತು ವ್ಯಾವಹಾರಿಕ ಸತ್ಯ– ಪ್ರಾತಿಭಾಸಿಕವು ವ್ಯವಹಾರಾಂತರ್ಗತ.

ಒಂದು ರಾಷ್ಟ್ರದಲ್ಲಿ ಬ್ರಹ್ಮತೇಜಸ್ಸು ಕ್ಷಾತ್ರತೇಜಸ್ಸಿಗೆ ಆಧಾರವಾದಾಗ ಸುರಾಜ್ಯಸ್ಥಿತಿಯು ಅನುಭವಕ್ಕೆ ಬರುತ್ತದೆ. ಬ್ರಹ್ಮವು ಜ್ಞಾನ, ಸಿದ್ಧಾಂತ, ಮೂಲದ ನಿಗೂಢ ಶಕ್ತಿ; ಅದು ಸರ್ವಪ್ರಜಾವ್ಯಾಪಕ; ಕ್ಷಾತ್ರವು ಕ್ರಿಯೆ (ಕರ್ಮ), ವ್ಯವಹಾರ, ಶಾಖೆಗಳ ಪ್ರಕಟ ಶಕ್ತಿ; ಅದು ಸರಕಾರ ಮಾತ್ರ ವ್ಯಾಪಕ. ಸರಕಾರದ ಪರಮಾಧಿಕಾರಿಗಳು ಪ್ರಜೆಗಳ ಬ್ರಹ್ಮವನ್ನು (ಆತ್ಮವನ್ನು) ಪ್ರತಿನಿಧಿಸಬೇಕು; ಅದೇ ಪ್ರಭುತ್ವರಾಜ ಎನ್ನಿಸಿದ ಪ್ರಜಾಪ್ರಭುತ್ವ; ಪ್ರಜೆಗಳಲ್ಲಿರುವ ಇತರ ದ್ರವ್ಯ, ಗುಣ, ಕರ್ಮಗಳನ್ನು ಪ್ರತಿನಿಧಿಸುವುದು ನಿಜವಾದ ಪ್ರಜಾಪ್ರಭುತ್ವವಲ್ಲ: ರಾಷ್ಟ್ರದ ಸಂಸ್ಕೃತಿಯ ಉಚ್ಚತಮ ಸ್ವರೂಪವೇ ಪ್ರಜೆಗಳ ಆತ್ಮ; ಅದು ಅವರ ಪರಾಪ್ರಕೃತಿ; ಮಿಕ್ಕವುಗಳು ಅಪರಾಪ್ರಕೃತಿ. ಅಂದರೆ ಎಂ.ಎಲ್.ಎ. ಮತ್ತು ಎಂ.ಪಿ.ಗಳು ಜ್ಞಾನಿಗಳಾಗಿರುವುದಗತ್ಯವೆಂದರ್ಥ; ಅರ್ಥಾತ್ ಅವರು ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸಲು ಬೇಕಾದ ಧರ್ಮಮಾರ್ಗಗಳನ್ನು ಬಲ್ಲವರಾಗಿರಬೇಕೆಂದು ಆಶಯ. ಅಂಥವರು ಮಾತ್ರ ಪ್ರಾಮಾಣಿಕ, ಹಾಗೂ ದಕ್ಷ ಸರಕಾರವನ್ನು ರಚಿಸಿ ನಿಯೋಜಿಸಬಲ್ಲರು. ಅವರಿಗೂ "Politics is the last resort of a scoundrel ರಾಜಕೀಯ ಕ್ಷೇತ್ರದ ವ್ಯವಹಾರವು

ನೀಚನ ಕೊನೆಯ ಆಶ್ರಯ" ಎಂಬ ನೀತಿಸೂತ್ರವನ್ನು ಹಿಡಿದವರಿಗೂ ಧ್ರುವಾಂತರದ ವ್ಯತ್ಯಾಸವಿದೆ. ನೀತಿಗಳ ಸಾಪೇಕ್ಷ ವ್ಯಾಪ್ತಿಗಳನ್ನು ಅರಿತು ವಿಧಿರಚನೆ ಮಾಡಬಲ್ಲವರೇ ಧರ್ಮ ಮಾರ್ಗಗಳನ್ನು ಬಲ್ಲವರು. ಸರಕಾರದಲ್ಲೂ ಉಪವಿಧಿ ರಚನಕಾರರು ಹಾಗೇ ಪ್ರಾಜ್ಞರಾಗಿರಬೇಕು. ಅಂಥ ಅರಿವಿನ ಸಾರವೇ ಸರ್ವೋದಯ ಅಥವಾ ಸಮಾಜವಾದೀಯ ಸಮಾಜ ನ್ಯಾಯ. ಈ ಸುಖ ನ್ಯಾಯವನ್ನು ಪ್ರಜೆಗಳ ಅನುಭವಕ್ಕೆ ತಂದು ಕೊಡಲು ಬೇಕಾದ ವ್ಯವಹಾರ ಕ್ರಮಗಳನ್ನು ಯೋಜಿಸುವ ಸಿದ್ಧಾಂತಗಳು ಸಾಂದರ್ಭಿಕ ಔಚಿತ್ಯಗಳನ್ನು ಉಳ್ಳಂಥವುಗಳು.

ವ್ಯಷ್ಟಿತ್ವದ (ವ್ಯಕ್ತಿತ್ವದ) ವಿಕಾಸದ ಪರಾಕಾಷ್ಠೆ ಇರುವುದು ಸಮಷ್ಟಿತ್ವದ (ಸಾರ್ವಜನಿಕತೆಯ, ಸಾಮಾಜಿಕತೆಯ) ಭಾವದಲ್ಲಿ ಸ್ಥಿರ ಜಾಗೃತಿಯನ್ನು ಸಾಧಿಸಿಕೊಳ್ಳುವುದರಲ್ಲೇ ಎಂಬ ಧರ್ಮರಹಸ್ಯವನ್ನರಿಯದವನು ಅಪ್ರಾಜ್ಞ, ಸಾಮಾನ್ಯರಲ್ಲಿ ಸಾರ್ವಜನಿಕತೆಯು (ಸಮಷ್ಟಿತ್ವ) ಕ್ಷಣಿಕ, ವೈಯಕ್ತಿಕತೆಯು ದೈನಿಕ; ನೀಚರಲ್ಲಿ ಒಂದು ಯಾವಾಗಲೂ ಆಭಾಸಿಕ, ಇನ್ನೊಂದು ಯಾವಾಗಲೂ ವಾಸ್ತವಿಕ.

'ಸ್ವ+ಅರ್ಥ=ಸ್ವಾರ್ಥ' ಎಂಬಲ್ಲಿ ಸ್ವಕಾರವು ಮನ, ಬುದ್ಧಿ, ಅಹಂಕಾರ, ಚಿತ್ತ, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚಪ್ರಾಣಗಳಿಂದೊಡಗೂಡಿದ ವೈಯಕ್ತಿಕ ಶರೀರವೊಂದರ ಪ್ರತಿನಿಧಿ. ವ್ಯಷ್ಟಿಯು ವ್ಯಷ್ಟಿ ಮಾತ್ರ ಪ್ರಜ್ಞೆಯಿಂದ ಬಾಳುವುದು ಪಾಪ, ಕೇವಲ ಸ್ವಾರ್ಥಿ, ಪಾಪಿಷ್ಠ–ಎಂಬ Original Sin ಮೂಲಪಾಪದಂಥ ಕಲ್ಪನೆ ಪರಂಪರಾಗತವಾಗಿ ಬರಲು, ಕೇವಲಾದಿತ್ವವು ಕೇವಲಾಘತ್ವವಾಗಲು, ವ್ಯಕ್ತಿ ಕೈವಲ್ಯವೆಂಬುದು ಆತ್ಮದ ಮೂಲರೂಪವಲ್ಲವಾಗಿರುವುದೇ ಕಾರಣ; ಅದು ಅಪರಾ ಪ್ರಕೃತಿಯ [ಕೀಳು (ಆತ್ಮಬಾಹ್ಯ) ಸ್ವಭಾವದ] ದುಷ್ಟತಮವಾದ ಆಸೆ ಎಂದೆನ್ನಿಸಲು Man is fundamentally gregarious ಮನುಷ್ಯನು ಮೂಲತಃ ಸಂಘಜೀವಿ ಎಂಬುದು ದತ್ತವಿಷಯವಾಗಿರುವುದರಿಂದ ಸಾಮೂಹಿಕತೆಯ ಕಲ್ಪನೆಯ ಸಾಂದ್ರತಮ ಸ್ವರೂಪವೇ ಐಕ್ಯ, ಏಕತ್ವ, ಈ ಏಕತ್ವವು ಭಾವದ್ದು (ಇಚ್ಛೆ, ಬುದ್ಧಿ, ಭಾವನೆ, ಆತ್ಮಗಳದ್ದು)– ಶರೀರದ್ದಲ್ಲ. ಶರೀರವು ಜಡ; ಜಡಕ್ಕೆ ಜೀವ–ಜ್ಞಾನಗಳ ಮೌಲ್ಯವನ್ನು ನಿಮಿತ್ತರೂಪದಿಂದ ಮೂಡಿಸುವ ಹಕ್ಕಲ್ಲದೆ, ಸ್ವತಃ ಯಾವ ಮೌಲ್ಯವೂ (ಅರ್ಥಪೂರ್ಣತೆಯೂ) ಇಲ್ಲ. ಜಡವು ದ್ರವ್ಯವಾದರೇನು, ಗುಣವಾದರೇನು, ಕ್ರಿಯೆಯಾದರೇನು, ಘನವಾದರೇನು, ದ್ರವವಾದರೇನು, ಅನಿಲವಾದರೇನು? ಅದು ಕೇವಲ ಶಕ್ತಿಯಾದರೂ ಜೀವನಕ್ಕದು ಕೇವಲ ಗೊಬ್ಬರದಂಥ ಅರ್ಥ (Wealth ದ್ರವ್ಯಸಾಮಗ್ರಿ) ವಲ್ಲದೆ, ವೈಜ್ಞಾನಿಕ ಪದಾರ್ಥತ್ವದ ಅರ್ಥವಲ್ಲದೆ, ಸ್ವತಂತ್ರವಾದ ಯಾವ ಸಾಂಸ್ಕೃತಿಕ ಮೌಲ್ಯವನ್ನೂ ಉಳ್ಳದ್ದಲ್ಲ. ಸಂಸ್ಕೃತ ಜಡಪದಾರ್ಥವೂ ಅದಕ್ಕೆ ಸಂಸ್ಕಾರವನ್ನಿತ್ತ ಜೀವತ್ ಪದಾರ್ಥದ ಸಂಸ್ಕಾರವನ್ನೇ ಧ್ವನಿಸುತ್ತದೆ. ಪ್ರಾಕೃತಿಕ ವಸ್ತುಗಳಲ್ಲಿ ಕೆಲವುಗಳ ಪರಿಷ್ಕೃತತೆಯು ದೇವರ ಸಂಸ್ಕಾರವನ್ನು ಸೂಚಿಸುತ್ತದೆ. ಅಸಂಸ್ಕೃತರಲ್ಲಿ (ಪ್ರಾಕೃತರಲ್ಲಿ) ಆತ್ಮಪ್ರಾಧಾನ್ಯದ ತ್ರಿಕರಣಪೂರ್ವಕ ವಿಶ್ವಾಸವಿಲ್ಲ; ಸಂಸ್ಕೃತರಿಗೆ ಆತ್ಮವೇ ಪ್ರಧಾನ; ಕೇವಲ ನಾಗರಿಕರು ಸಂಸ್ಕೃತರೆಂದೆನ್ನಿಸರು; ಸಂಸ್ಕೃತರು ಧರ್ಮಿಷ್ಠರು, ವ್ಯಾಪಕ

ನ್ಯಾಯಸ್ಥರು. ಆತ್ಮದಷ್ಟು ವ್ಯಾಪಕಪದಾರ್ಥ ಇನ್ನೊಂದಿಲ್ಲದುದರಿಂದ ಆತ್ಮವಂತರ ಸಾಂಸ್ಕೃತಿಕ ಮಟ್ಟವು ಅತುಲ, ಅನುಪಮ; ಆತ್ಮಪ್ರಜ್ಞರು ಹಿರಿಯರೆಲ್ಲರಿಗೂ ಹಿರಿಯರು.

ಧರ್ಮಕ್ಕೆ ಅವಿರುದ್ಧವಾಗಿ ಅರ್ಥ–ಕಾಮಗಳನ್ನು ಅನುಭವಿಸುವುದು ಮೋಕ್ಷೋನ್ಮುಖವಾದ ಮಾರ್ಗ. ಅಂಥ ರೀತಿಯನ್ನು ನೆಲೆ ನಿಲ್ಲಿಸಲು ಬೇಕಾದ ಸಮರ್ಥ ಸರಕಾರದ ಪರಮಾಧಿಕಾರಿ ಋಷಿರಾಜನೇ ಆಗಿರಬೇಕು. ಅಥವಾ ಅವನ ಸಲಹೆಯಂತೆ ನಡೆವ ರಾಜರ್ಷಿಯಾಗಿರಬೇಕು. ವಿಶ್ವಾಮಿತ್ರ ವಸಿಷ್ಠಾದಿಗಳ ಸಲಹೆಯಂತೆ ರಾಮರಾಜ್ಯ ನಡೆಯಿತು. ರಾಮಾದಿಗಳು ನೆಟ್ಟಗಿರಬೇಕಾದರೆ ವಿಶ್ವಾಮಿತ್ರಾದಿಗಳು ಲೋಕಕ್ಕೆ ಅಗತ್ಯ. ನಮಗೆ ಸದ್ಯ: ಮೋಕ್ಷದ ಅಪೇಕ್ಷೆ ಇಲ್ಲದಿದ್ದರೂ ಮುಕ್ತರ ಅಪೇಕ್ಷೆ ಇರುವುದು ಅನಿವಾರ್ಯ. ಲೋಕವನ್ನು ಬಯ್ಯುತ್ತಲೇ ಕುಳಿತುಕೊಂಬುವನು ಮುಕ್ತನಲ್ಲ. ಆದರ್ಶ ಮುಕ್ತನು ಶ್ರೀಕೃಷ್ಣನಂತಿರುತ್ತಾನೆ; ಅವನು ರುಕ್ಮಿಣೀ ಸಹಿತನು–ಕಸ್ತೂರಿ ಬಾ ಸಹಿತರಾದ ಮಹಾತ್ಮಾಗಾಂಧಿಯವರಂತೆ.

ತತ್ವವೆಂದರೆ ಅದುತನ. ಅದೆಂದರೆ ಒಂದು ಕಾರ್ಯಕ್ಕೆ, ಅನುಭವಕ್ಕೆ ನಿಯಾಮಕವಾಗಿರುವ ಸಿದ್ಧಾಂತ ಅಥವಾ ಭಾವಯೋಜನೆ. ಇಷ್ಟವಾದ ಕಾರ್ಯ ಅಥವಾ ಅನುಭವವು ನಿರ್ವಿಘ್ನವಾಗಿ ಸಂಭವಿಸಲು ತತ್ಸಂಬಂಧಿಯಾದ ತತ್ವವನ್ನು ಮೊದಲು ಮಥಿಸಿ ನಿರ್ಣಯಿಸಿಕೊಂಡಿರುವುದು ವಿವೇಕಿಗಳ ರೀತಿ. ಅಂಥ ನಿರ್ಣಯ ಅಥವಾ ಸಿದ್ಧಾಂತವು 'ಜ್ಞಾನ' ವೆಂದು ವಿಶಿಷ್ಟಾರ್ಥದಲ್ಲಿ ಬಳಕೆಗೆ ಬಂದಿದೆ. "ತತ್ವಜ್ಞಾನ" ವೆಂಬ ಸಮಾಸದಲ್ಲಿ "ಜ್ಞಾನ"ದ ಅರ್ಥವು ಸಾಮಾನ್ಯವಾದದ್ದು; "ತತ್ವ"ವೇ ವಿಶಿಷ್ಟಾರ್ಥದ "ಜ್ಞಾನ"ವನ್ನು ಪ್ರತಿನಿಧಿಸುತ್ತದೆ. ತತತ್ವಕ್ಕೆ ಸತ್ಯವನ್ನೂ ಪರ್ಯಾಯವಾಗಿ ಬಳಸಲಾಗುತ್ತದೆ. ಸತ್ಯವೆಂದರೆ ಇರುವಂಥದು. ಎಲ್ಲಿ? ಯಾವಾಗ? ಯಾರು ಹಾಗೂ ಯಾವುದರ ಮಟ್ಟಿಗೆ? ಹೇಗೆ? ಎಂಬ ಪ್ರಶ್ನೆಗಳನ್ನು ಹಾಕಿದಾಗ ಸತ್ಯದ ಅರ್ಥವು ಪರಿಸೀಮಿತ, ಸಂಕುಚಿತ ಸ್ವರೂಪಕ್ಕೆ ತಿರುಗುವುದು.

ವಿಜ್ಞಾತೃವಿನ ದೇಹೇಂದ್ರಿಯಗಳಿಗೆ ಸಂಬಂಧಿಸದಿರುವುದು ವಿಜ್ಞಾನ ಸತ್ಯ ಅಥವಾ ಭೌತಿಕ ಸತ್ಯ. ಅದೊಂದು ಕಾರಣ, ಕಾಯದೆ ಅಥವಾ ಸ್ವಭಾವ ಎಂಬ ಸ್ವರೂಪವುಳ್ಳದ್ದು. ಅದು ವಿಜ್ಞಾತೃ ನಿರಪೇಕ್ಷವಾದುದು. ಪಂಚಭೂತಗಳ ಹೆಚ್ಚು ಹೆಚ್ಚು ಆಳದ ಒಳಗಿನ ಸ್ವಭಾವವನ್ನು ತಿಳಿಯಲು ಪ್ರಯತ್ನಿಸುವುದು ವೈಜ್ಞಾನಿಕ ಸತ್ಯಶೋಧನ. ಪಂಚಭೂತಗಳೆಲ್ಲವೂ ಜಡಗಳೆಂದು ಗೃಹೀತ. ಅದರ ತರ್ಕವು ಸಾಂಖ್ಯರ ಪ್ರಧಾನ ಪರಿಣಾಮವಾದ ಸಮರ್ಥನೆಗಿಂತ ಹೆಚ್ಚು ದೃಢವಾದುದಲ್ಲ. ಸುಖದುಃಖಗಳ ಹೊಸ ಭೌತಿಕ ಸಾಧನಗಳ ನಿರ್ಮಿತಿಗೆ ವಿಜ್ಞಾನದ ಸತ್ಯಗಳು ಈ ವರೆಗೆ ಕಾರಣಗಳಾಗುತ್ತ ಬಂದಿವೆ.

ಯಾರ ತಿಳುವಳಿಕೆಗೂ ಬಾರದ ಇರವು ಇದೆಯೋ ಇಲ್ಲವೋ ಎಂದು ಯಾರೂ ಎಂದೂ ಹೇಳಲಾರರು. ವಿಜ್ಞಾನದಲ್ಲಿ ಪರೋಕ್ಷ ಜ್ಞಾನಕ್ಕೆ ವಸ್ತುನಿಷ್ಠತೆಯ ಸನದನ್ನು ಕೊಡಲಾಗಿದೆ; ಪ್ರತ್ಯಕ್ಷವು ಗೌಣ. ಶುದ್ಧ ತರ್ಕಕ್ಕೆ ಪ್ರತ್ಯಕ್ಷವು ಪ್ರಥಮಾಧಾರ; ಶುದ್ಧ ವಿಜ್ಞಾನಕ್ಕೆ ವ್ಯಕ್ತಿಪರ ಭೌತಿಕ ಸಾಧನಗಳು ಆಧಾರ. ಗಣಿತವು ಅಂಕತರ್ಕ; ತರ್ಕವು ವಾಕ್ಯ ಗಣಿತ. ವಿಜ್ಞಾನಕ್ಕೂ ಪ್ರತ್ಯಕ್ಷವು ಪ್ರಥಮಾಧಾರವಾದರೂ ಕೊನೆಗೆ ಅದಕ್ಕೆ ಗೌಣಸ್ಥಾನವನ್ನು

ಕೊಡಲಾಗುವುದು, ತತ್ವಜ್ಞಾನವೂ ಹಾಗೇ ಮಾಡುವುದು. ಎರಡಕ್ಕೂ Seeing alone is not believing ಕಂಡದ್ದೆಲ್ಲಾ ಸತ್ಯವಲ್ಲ. ಆದರೆ ಒಂದರ ಶೋಧವು ವಸ್ತು ಮಾತ್ರ ಪರಿಸೀಮಿತ; ಇನ್ನೊಂದರದು ವಸ್ತೂತ್ತರವಾದ ಮೌಲ್ಯಶೋಧಕ್ಕೆ ಪರಿಸೀಮಿತ; ವಸ್ತು ಸತ್ಯದ ಭೌತಿಕತೆ ತತ್ವಸತ್ಯದ ಮೌಲ್ಯಭಾವವನ್ನು ಅಲ್ಲಗಳೆಯಲು ಹಕ್ಕುಳ್ಳದ್ದಲ್ಲ.

ವಸ್ತುವಿನಿಂದ ತತ್ವನಿರ್ಣಯವೋ ತತ್ವದಿಂದ ವಸ್ತು ನಿರ್ಣಯವೋ? ಎಂಬುದೇ ಇಂದಿನ ಜಗತ್ತಿನ ಸಮಸ್ಯೆ. ಭೌತಿಕ ಸಾಧನಗಳಿಗಿಂತ ಹೆಚ್ಚು ನಂಬಲರ್ಹವಾದ ಆತ್ಮಿಕ ಸಾಧನಗಳು ಇಲ್ಲವೆಂಬುದು ರಸೆಲ್ಲಾದಿಗಳ ವಾದ. ಈ ವಾದವು ಅವೈಜ್ಞಾನಿಕ. ಆತ್ಮಪ್ರತ್ಯಕ್ಷವು (ಅಪರೋಕ್ಷಾನುಭೂತಿಯು, ಪ್ರಾತಿಭ ಆವಿರ್ಭಾವವು) ಎಷ್ಟು ಅಲ್ಪಸಂಖ್ಯಾತರಿಗೆ ಉಂಟಾದರೂ ಅದು ಉಂಟಾಗಿರುವ Fact ವಸ್ತುಸ್ಥಿತಿಯನ್ನು ಅಲ್ಲಗಳೆಯಲು ಹಠಕ್ಕಿಂತ ಭಿನ್ನವಾದ ಸಾಧನವಿಲ್ಲ. ಒಬ್ಬನಿಗೆ ಇನ್ನೊಬ್ಬನದು ವಸ್ತುಸ್ಥಿತಿ; ಅವನವನಿಗೆ ಅವನವನದು ವ್ಯಕ್ತಿಸ್ಥಿತಿ. ದೇಹಕ್ಕೆ ಆತ್ಮವು ವಸ್ತು, ಆತ್ಮಕ್ಕೆ ದೇಹವು ವಸ್ತು ಒಬ್ಬನಲ್ಲೇ! ಅಪ್ರಾಪಂಚಿಕವಾದ ಶುದ್ಧ ಬುದ್ಧಿಯೇ ಆತ್ಮ, ಚೈತನ್ಯ, ಪ್ರಜ್ಞೆ, ಬುದ್ಧಿರುಪಲಬ್ಧಿರ್ಜ್ಞಾನ ಮಿತ್ಯನರ್ಥಾಂತರಂ, ಇರವಿನ ಅರಿವೇ ಅರಿವು, ಇಲ್ಲದುದರ ಅರಿವು ಇಲ್ಲ. ಭೌತಿಕ ಇರವೊಂದೇ ಇರವಲ್ಲ, ಮಾನಸಿಕ ಇರವೂ ಇರವೇ. ಪ್ರಾಪಂಚಿಕ ಇರವು ಪರಿವರ್ತನದ ಅನುಭವವನ್ನು ಉಂಟುಮಾಡುತ್ತದೆ. ಅಪ್ರಾಪಂಚಿಕ ಇರವು ಅಪರಿವರ್ತನದ ಅನುಭವವನ್ನು ಉಂಟುಮಾಡುತ್ತದೆ. ಪ್ರಪಂಚದಲ್ಲಿ ಸ್ಥಿರತ್ವ–ಚರತ್ವಗಳ ಅನುಭವ ಸಾಪೇಕ್ಷ; ಅಪ್ರಪಂಚದಲ್ಲಿ (ಮನೋಬುದ್ಧ್ಯಹಂಕಾರ ಚಿತ್ತಾತೀತ ನಿಲುಮೆಯಲ್ಲಿ) ಸ್ಥಿರತ್ವದ ಅನುಭವವು ನಿರಪೇಕ್ಷ. ಪ್ರತಿಯೊಂದು ಶಕ್ತಿಕಣವೂ ಜಗತ್ತಿನಲ್ಲಿ ಕ್ಷಣಭಂಗುರವಾದರೂ ಅವುಗಳ ಮೊತ್ತವು ದಿನಭಂಗ, ವರ್ಷಭಂಗ, ಯುಗಭಂಗಗಳೆಂಬ ಭೇದಗಳನ್ನು ಅನುಭವಕ್ಕೆ ತಂದುಕೊಡುತ್ತವೆ. ಸ್ಥಿರತ್ವದ ಈ ಸಾಪೇಕ್ಷ ಅನುಭವವು ಚರತ್ವವನ್ನು ಮೀರಬಲ್ಲುದಾದುದರಿಂದ ಇದನ್ನು ಮೀರುವ ನಿರಪೇಕ್ಷ ಸ್ಥಿರತ್ವವು ಸೂಚಿತವಾಗುತ್ತದೆ. ನಿರಪೇಕ್ಷ ಸ್ಥಿರಪ್ರಜ್ಞೆಯೇ ಸ್ಥಿತಪ್ರಜ್ಞೆ, ಬ್ರಾಹ್ಮೀಸ್ಥಿತಿ, ಮುಕ್ತಿ.

೧) ವ್ಯಕ್ತಿಯ ದೈಹಿಕ ಇರವು, ಭೌತಿಕ ಇರವು → ಅನ್ನಮಯ ಪ್ರಜ್ಞೆ

೨) ದೇಹೇಂದ್ರಿಯಾಧೃತವಾದ ಜೈವಿಕ (ಭಾವನಿಕ) ಇರವು → ಪ್ರಾಣಮಯ ಪ್ರಜ್ಞೆ

೩) ದೇಹೇಂದ್ರಿಯಾಧೃತವಾದ ಮಾನಸಿಕ (ಭೌದ್ಧಿಕ) ಇರವು → ಮನೋಮಯ ಪ್ರಜ್ಞೆ

೪) ಜೀವ–ಜಡಗಳ ಪ್ರತ್ಯೇಕತೆಯನ್ನಾಧರಿಸಿದ ವಿಶ್ಲೇಷಣಶೀಲವುಳ್ಳ (ವೈ) ಬೌದ್ಧಿಕ ಇರವು → ವಿಜ್ಞಾನಮಯ ಪ್ರಜ್ಞೆ

೫) ಜಡಾಸ್ತಮಯವಾದ ಶುದ್ಧ ಚೈತನ್ಯಸ್ವರೂಪದ ನಿರ್ವಿಶೇಷ, ವೈಯಕ್ತಿಕ, ಬೌದ್ಧಿಕ ಇರವು → ಆನಂದಮಯ ಪ್ರಜ್ಞೆ

೬) ಉಕ್ತ ಇರವಿನ ವ್ಯಕ್ತಿನಿಷ್ಠತೆಯು ವಸ್ತುನಿಷ್ಠತೆ
ಯಾಗಿ ಮಾರ್ಪಟ್ಟ ಇರವು → "ಭೂತವಸ್ತು"ಮಯ ಪ್ರಜ್ಞೆ

ಜಡ ವಿಶ್ಲೇಷಣದ ನಾನಾತ್ವವು ಆಧುನಿಕ ವಿಜ್ಞಾನ ಪ್ರಜ್ಞೆ; ಜೀವ (ಚೈತನ್ಯ) ವಿಶ್ಲೇಷಣದ ದ್ವೈತಾದಿ ನಾನಾತ್ವಭಾವಗಳು ಆಧುನಿಕ ಅತಿ ಭೌತವಾದದ ಪ್ರಜ್ಞೆ, ವಿಶ್ಲೇಷಣ ಪ್ರಜ್ಞೆಯ ವಸ್ತುನಿಷ್ಠತೆ ಅಸಂಪೂರ್ಣ; "ಭೂತವಸ್ತು" ಪ್ರಜ್ಞೆಯ ವಸ್ತುನಿಷ್ಠತೆ ಪರಿಪೂರ್ಣ ಮತ್ತು ಅಸಂಪ್ರಜ್ಞಾತ ಸಮಾಧಿಗಮ್ಯ; ಸಂಪ್ರಜ್ಞೆಯು ವಿಜ್ಞಾನ, ಪದಾರ್ಥ ವೈವಿಧ್ಯಜ್ಞಾನ. ಜಾಗರದ ಈ ಷಟ್ ಸ್ಥಲಗಳಲ್ಲಿ ಮೊದಲನೆಯ ಮೂರು ಜ್ಞಾತಪ್ರಜ್ಞಾ ವಿಭಾಗದಲ್ಲಿ ಅಡಕವಾಗುತ್ತವೆ; ೪ನೆಯದು ಅರ್ಧ ಹಾಗೆ, ಅರ್ಧ ಹೀಗೆ ಎನ್ನುವ ಹೊಸ್ತಿಲಿನ ಸ್ಥಾನದಲ್ಲಿದೆ; ೫ನೆಯ ಹಾಗೂ ೬ನೆಯ ಸ್ಥಲಗಳು ಅಜ್ಞಾತಪ್ರಜ್ಞಾ ವಿಭಾಗದಲ್ಲಿ ಅಡಕವಾಗುತ್ತವೆ; ಅವು ಕಾರ್ಲ್ ಜಿ.ಯುಂಗನ ಪ್ರಕಾರ ಆತ್ಮಕೇಂದ್ರ – ಬ್ರಹ್ಮಕೇಂದ್ರಗಳು; ಅಭಿನವ ಗುಪ್ತನ ಪ್ರಕಾರ ತುರೀಯ–ತುರೀಯಾತೀತ ಮಟ್ಟಗಳು; ಅರವಿಂದರ ಪ್ರಕಾರ ಅಕ್ಷರ–ಪುರುಷೋತ್ತಮ ಪ್ರಜ್ಞಾಸ್ತರಗಳು; ಶಂಕರರ ಪ್ರಕಾರ ತುರೀಯ ಸ್ಥಲ; ಪತಂಜಲಿಯಂತೆ ಸಂಪ್ರಜ್ಞಾತ–ಅಸಂಪ್ರಜ್ಞಾತ ಸಮಾಧಿ ಸ್ಥಲಗಳು.




೧. (ಅ) ಬ್ರಹ್ಮ, (ಬ) ಈಶ್ವರ (ವಿಶ್ವಾಧಿಕ, ವಿಶ್ವಮಯ) – Macrocosmic self

೨. (ಅ) ಆತ್ಮ, (ಬ) ಜೀವ (ವಿಶ್ವಮಯ, ಪ್ರತಿಶರೀರಭಿನ್ನ) – Microcosmic self

೩. (ಅ) ಮನ, (ಬ) ಅಹಂ (ಅಧ್ಯಸ್ತಾತ್ಮ ೧) – Smaller self

೪. (ಅ) ಇಂದ್ರಿಯ, (ಬ) ದೇಹ (ಅಧ್ಯಸ್ತಾತ್ಮ ೨) – Cruder self

Self, centre, person, ಪುರುಷಗಳು ಔಪಚಾರಿಕ ಇಲ್ಲವೆ ರೂಪಕಾರ್ಥದ ಕಾಯಗಳನ್ನುಳ್ಳ ಚೈತನ್ಯಸಾಂದ್ರ ಸ್ಥಲಗಳು; ಮಟ್ಟಗಳು, ಸ್ತರಗಳು, ವಿಭಾಗಗಳು ವಿಜ್ಞಾನಬುದ್ಧಿಯ ಅನುಕೂಲ ಸಿಂಧು ನ್ಯಾಯದ, ಕೃತ್ಯಭೇದವನ್ನಾಧರಿಸಿದ ವಿಂಗಡಣೆಗಳು. ವಿಜ್ಞಾನವು ದೇಶ ಕಾಲಾವಚ್ಛಿನ್ನ. ಜಗತ್ತಿಗೆ ದೇಶಕಾಲಗಳಿಗಿಂತ ದೊಡ್ಡ ಅವಚ್ಛೇದಕಗಳಿಲ್ಲ; ಅವು ವಸ್ತುನಿಷ್ಠ ಪ್ರತ್ಯಕ್ಷ ಪದಾರ್ಥಗಳಲ್ಲ; ಅವು ವ್ಯವಹಾರ ಹೇತುಗಳಲ್ಲದೆ, ವ್ಯಾವಹಾರಿಕ ಗುಣಗಳನ್ನುಳ್ಳವುಗಳಲ್ಲ–ದ್ರವ್ಯ, ಗುಣ, ಕರ್ಮಗಳಲ್ಲಿ ಯಾವ ಜಾತಿಗೂ ಅವು ಸೇರವು.

ಅವುಗಳ ಅಳತೆಯು ಯಾವಾಗಲೂ ಕೃತಕವಾಗಿ ಸ್ಥಿರವೆಂದು ಗ್ರಹಿಸಲಾದ ಯಾವುದಾದರೊಂದು ಘಟನೆ (Event = ದ್ರವ್ಯ, ಗುಣ, ಕರ್ಮ) ಯನ್ನು ಆಧರಿಸುತ್ತದೆ. ಅವೂ ಘಟನೆಯೂ ಪರಸ್ಪರಾವಲಂಬಿಗಳಾದ ಕಲ್ಪನೆಗಳು ಅವಳಿ ಜವಳಿಗಳಂತೆ. ಘಟನೆಯಲ್ಲಿ ಇಂದ್ರಿಯಗ್ರಾಹ್ಯ – ಅನಿಂದ್ರಿಯ ಗ್ರಾಹ್ಯಗಳೆಂದು ಎರಡು ವಿಧಗಳಿದ್ದರೆ, ದೇಶಕಾಲಗಳು ಸದಾ ಅನಿಂದ್ರಿಯಗ್ರಾಹ್ಯ. ಅವುಗಳೇ ಘಟನೆಗಳು, ಗುಣಪುಂಜಗಳು ಎಂದು ಹೇಳುವುದು ತಪ್ಪು. ಉದ್ದ, ಅಗಲ, ಎತ್ತರಗಳು ದ್ರವ್ಯದ ಪರಿಮಾಣಗಳು; ದೇಶಕಾಲಗಳು ಸರ್ವಪದಾರ್ಥ ಸಾಧಾರಣ. ಆದುದರಿಂದ ಅವುಗಳ ಪರಿಮಾಣತ್ವವು ಮೊದಲಿನ ಮೂರರ ಪರಿಮಾಣತ್ವದಿಂದ ವ್ಯಾವಹಾರಿಕವಾಗಿ ಭಿನ್ನ. ಮೊದಲಿನವುಗಳಿಗೆ ಎರಡನೆಯವು ಅಧಿಕರಣ, ಆಶ್ರಯ, ಆಧಾರ; ಅವು ದ್ರವ್ಯ ಮಾತ್ರದ ಉಪಾಧಿಕರಣಗಳು. ದೇಶ ಕಾಲಗಳೇ ವ್ಯಾಪ್ತಿ ಕಲ್ಪನೆಗೆ ಆಧಾರ. ಉದ್ದ, ಅಗಲ, ಎತ್ತರಗಳು ವ್ಯಾಪ್ತಿಯ ಅಂಗಕಲ್ಪನೆಗಳು. ದ್ರವ್ಯಾದಿಗಳಿಗೆ ಅಧಿಕರಣಾದಿಗಳು ವ್ಯಾಪಕಗಳು. ಸಾಮಾನ್ಯ, ಸಮವಾಯ, ವಿಶೇಷ, ಅಭಾವಗಳೆಂಬ ಸಂಬಂಧಗಳಿಗೆ ದ್ರವ್ಯಾದಿಗಳು ಉಪಾಧಿಕರಣಗಳು. ಅವ್ಯಕ್ತವು ಶಕ್ತಿ (Energy); ವ್ಯಕ್ತವು ಘಟನೆ. ದ್ರವ್ಯವು ಗುಣಾಶ್ರಯ, ಗುಣವು ಕ್ರಿಯಾಜನಕ. ಗುಣ–ಶಕ್ತಿಗಳ ಭೇದವು ಇಂದ್ರಿಯಗ್ರಾಹ್ಯತ್ವ – ವಿಜ್ಞಾನ ಗ್ರಾಹ್ಯತ್ವಗಳನ್ನವಲಂಬಿಸಿದೆ. ವಿಭುದ್ರವ್ಯವು ವಿಭುಪದಾರ್ಥ; ಅದು ಅದ್ವಿತೀಯ; ದೇಶಕಾಲಗಳು ಅದಕ್ಕೆ ಅವಚ್ಛೇದಕಗಳಲ್ಲ – ಬೇರೆ ಅವಚ್ಛೇದಕಗಳದಕ್ಕಿಲ್ಲ. ಕಾಲದೇಶಗಳು ಸರ್ವಾವಚ್ಛೇದಕಗಳಾಗಿರುವುದರಿಂದ ಅವೆಂದೂ ವಿಭು (ಅನವಚ್ಛಿನ್ನ, ಅಸೀಮ, ಅನಾದ್ಯನಂತ) ಪದಾರ್ಥಗಳೆನ್ನಿಸಲಾರವು. Space, Sky, Direction– ದೇಶ, ಆಕಾಶ, ದಿಕ್ ಎಂಬ ಪದಾರ್ಥಗಳು ಸಾರತಃ ಅಭಿನ್ನ. ದಿಕ್ಕಾಲಗಳು ಆತ್ಮಜ, ಬ್ರಹ್ಮಜಾತ – ಅರ್ಥಾತ್ – ಅಸೀಮದಿಂದ ಹುಟ್ಟಿದ ಸೀಮನ ಮಾಡುವ ಸೀಮಿತ ಪದಾರ್ಥಗಳು ಅಥವಾ ಮಾಯೆ, ಪ್ರಕೃತಿ, ಪ್ರಧಾನ. ಅವುಗಳಿಂದ ಮೊದಲು ಹುಟ್ಟಿದ್ದು ಜಡ, ಅನಂತರ ಇಂದ್ರಿಯ, ಆಮೇಲೆ ಮನ. ಆತ್ಮದ ಆಧಾರ ತಪ್ಪಿದರೆ ಅವು ಶೂನ್ಯವಾಗುವುವು; ಅದು ದೊರೆತರೆ ಆತ್ಮವನ್ನೇ ಶೂನ್ಯವೆನ್ನಿಸುವಷ್ಟು ಸತ್ಯತಾಭಾಸವನ್ನವು ಪ್ರದರ್ಶಿಸುವುವು! ಅವು ಸರ್ವ ಮೂರ್ತತಾಧಾರ, ಭೂತತಾಧಾರ; ಆತ್ಮವೊಂದೇ ವಿಭುತ್ವಾಧಾರ! ವಿಭುವೊಂದೇ ಸರ್ವಾಧಾರ!

ಆಧುನಿಕ ವಿಜ್ಞಾನವು ಸರ್ವಜಗತ್ತೂ ಕ್ರಿಯಾಮಯ ಎಂದಿರುವುದರಿಂದ ಸರ್ವವೂ ಮೂರ್ತತ್ವ ಉಳ್ಳದ್ದೆಂದ ಹಾಗಾಯ್ತು. ಆದರೆ ದೇಶ–ಕಾಲಗಳು ಕ್ರಿಯಾ ಸ್ವರೂಪವಾದವುಗಳಲ್ಲ; ಅವು ಪರಿಮಾಣಗಳು. ಪರಿಮಾಣವೆಂಬುದು ಸಂಬಂಧಸ್ವರೂಪ ಉಳ್ಳದ್ದು ಮತ್ತು ಒಂದಕ್ಕಿಂತ ಹೆಚ್ಚು ಸಂಖ್ಯೆಯದು. ಅದು ಕ್ರಿಯಾವಿಶೇಷಣವಲ್ಲದೆ, ಸಾಕ್ಷಾತ್ ಕ್ರಿಯೆ (ಕರ್ಮ, ಕಾರ್ಯ) ಅಲ್ಲ. ವಿಶೇಷಣವೊಂದು ಧರ್ಮ, ಭಾವ, ಉಪಾಧಿ (Abstract condition). ಆದುದರಿಂದ ಅದು ಜಗತ್ತೇ ಅಲ್ಲದ, ಜಗತ್ತನ್ನು ಅರ್ಥಯಿಸಲು ಬೇಕಾದ, ಜಗತ್ತಿಗನ್ವಯಿಸುವ ಪರಿಸೀಮನದ (ಮೂರ್ತೀಕರಣದ) ಕಲ್ಪನೆ. ಆತ್ಮವೊಂದೇ ಸರ್ವಮೂರ್ತದ್ರವ್ಯ ಸಂಯೋಗಿಯಾಗಿರುವುದರಿಂದ ಅದೊಂದೇ ವಿಭು. ದಿಕ್ಕೆಂಬುದು ಒಂದಕ್ಕಿಂತ

ಹೆಚ್ಚಾಗಿರುವುದರಿಂದ ಕಾಲ್ಪನಿಕವಾಗಿಯೂ ಅದಕ್ಕೆ ವಿಭುತ್ವ (ವಿಶ್ವವ್ಯಾಪಕತ್ವ)ವಿಲ್ಲ. ಆಕಾಶವು ಒಂದೇ ಆದರೂ ಅದು ಶಬ್ದಗುಣ ಉಳ್ಳದ್ದಾದ್ದರಿಂದ ಶಬ್ದಾವಚ್ಛಿನ್ನ. ಅವಚ್ಛೇದಕವು Delimiting factor ಪರಿಸೀಮನದ ಕಾರಕ, ಒಂದು ವಸ್ತುವಿನ ಹೆಸರಿನ ಅರ್ಥಕ್ಕೆ ಎಳೆದ ಗಡಿಗೆರೆ.

ನಮ್ಮ ಅರಿವಿಗೆ ಬರುವ ಇರವು ಅಥವಾ ಅಸ್ತಿತ್ವವು ಮೂರ್ತ ಪದಾರ್ಥಕ್ಕೆ ಮಾತ್ರ ಸೀಮಿತವಾದುದಲ್ಲ; ಅಮೂರ್ತದ (Abstract) ಇರವೂ ಇರವೇ. ಲೋಕದಲ್ಲಿ ಮೂರ್ತಾಮೂರ್ತಗಳು ಪರಸ್ಪರ ಪ್ರಚೋದಕಗಳಾಗಬಲ್ಲವು ಎಂಬುದು ಸ್ಪಷ್ಟ. ಪ್ರಚೋದನೆಯೊಂದು ಕ್ರಿಯೆ, ಆದರದು ಮೂರ್ತಮಾತ್ರದಲ್ಲಿರುವ ಸಾಮಾನ್ಯ ಕ್ರಿಯೆಯಲ್ಲ; ಅದೊಮ್ಮೆ ಕ್ರಿಯಾಭಿನ್ನವಾದ "ಜ್ಞಾನಸಹಜಕ್ರಿಯೆ" ಯಾಗಲೂಬಹುದು. ಅಂದರೆ ಅದು ಆಗ ಕ್ರಿಯಾಶಕ್ತಿಯಿಂದ ಭಿನ್ನವಾದ ಜ್ಞಾನಶಕ್ತಿ ಎಂದರ್ಥ. ಪ್ರಚೋದಕತ್ವ (ಪ್ರೇರಕತ್ವ)ದಂತೆಯೇ ಪ್ರಚೋದ್ಯತ್ವವೂ ಪ್ರೇರ್ಯತ್ವವೂ ತಾತ್ವಿಕವಾಗಿ ಒಂದು ಶಕ್ತಿಯೇ; ಅದನ್ನು ತ್ಯಾಜ್ಯವಾಗಿದ್ದಾಗ ದೌರ್ಬಲ್ಯವೆಂದೂ ಗ್ರಾಹ್ಯವಾಗಿದ್ದಾಗ ಬಲವೆಂದೂ ಹೇಳುವುದು ಲೋಕರೂಢಿ.

ಪ್ರಜ್ಞಾಮಯವಾದುದೆಲ್ಲವೂ ಅಮೂರ್ತವೆಂಬುದು ರೂಢಿ; ಆದರೆ ಮಿದುಳಿನ ಕ್ರಿಯೆಯನ್ನು ಕೆಲವೊಮ್ಮೆ ಆಧರಿಸದೆ ವಿಷಯ ಗ್ರಹಣ ಮಾಡಬಲ್ಲ ಆತ್ಮವೊಂದೇ ನಿಜವಾಗಿ ಅಮೂರ್ತವಾದುದು; ಅದರಿಂದಲೇ ಅದನ್ನು ನಿಷ್ಕ್ರಿಯ (ಆದರೆ ನಿಷ್ಪ್ರಚೋದಕವಲ್ಲ) ಎಂದು ಉಪನಿಷತ್ತು ಹೇಳುತ್ತದೆ. ಮಿಕ್ಕವುಗಳೆಲ್ಲವೂ ಕ್ರಿಯಾಮಯ, ಕ್ರಿಯಾಗತ ಅಥವಾ ಕ್ರಿಯಾತ್ಮಕ. ಶುಷ್ಕಜ್ಞಾನವು ಅಪ್ರಚೋದಕ, ಅಚೇತನ, ಸಾಪೇಕ್ಷ ಚೇತನ. ಪ್ರತ್ಯಕ್ಷ– ಅಪರೋಕ್ಷ ಜ್ಞಾನಗಳು ಪ್ರಚೋದಕಗಳಾಗಬಲ್ಲವು. ಪ್ರತ್ಯಕ್ಷದಲ್ಲಿಯ (ಇಚ್ಛೆ, ಬುದ್ಧಿಗಳ ಜೊತೆಗಿರುವ) ಭಾವನೆ ಅದರ ಪ್ರಚೋದಕ ಶಕ್ತಿಯಾದರೆ, ಅಪರೋಕ್ಷದ (ಪ್ರಾತಿಭ ಪ್ರತ್ಯಕ್ಷದ) ಆನಂದವು (ವಿಭಾವನೆ) ಅದರ ಪ್ರಚೋದಕ ಶಕ್ತಿ. ಬುದ್ಧಿಯನ್ನು ಮನೋಗತವಾದ ಶುಷ್ಕ, ಯಾಂತ್ರಿಕ, ಸರ್ವಮೂರ್ತಗ್ರಹ ಜ್ಞಾನವೆಂಬ ರೂಢಿಯಂತೆ ಚಿತ್ತನ್ನು ಆತ್ಮಗತವಾದ ಅಂಥ ನಿಷ್ಕ್ರಿಯ, ಸರ್ವ ಮೂರ್ತಾಮೂರ್ತಗ್ರಹಜ್ಞಾನ ಎನ್ನಬಹುದು. ಅಪರೋಕ್ಷದ (ಆತ್ಮದ) ಸತ್ತಿನ ಸತ್ತೆಯು ಪ್ರತ್ಯಕ್ಷದ ಸತ್ತಿನ (ಇರುವ ವಸ್ತುವಿನ) ಸತ್ತೆಗೆ ಸದೃಶ. ಭಾವನೆಯು ಪ್ರಾಣಸಾರ ಉಳ್ಳದ್ದಾಗಿರುವಂತೆ ಆನಂದವು ಚೈತನ್ಯ ಸಾರವುಳ್ಳದ್ದಾಗಿದೆ. ಬ್ರಹ್ಮವು ಅಥವಾ ಆತ್ಮವು ಸತ್+ಚಿತ್+ಆನಂದ; ಅಹಂಸೀಮಿತ ಮನ ಅಥವಾ ಜೀವಾತ್ಮನು ಇಚ್ಛೆ+ಬುದ್ಧಿ+ಭಾವನೆ. ಅಧಿಪ್ರಜ್ಞೆ ಬ್ರಹ್ಮಕ್ಕೆ, ಅವ–ಜ್ಞಾತ ಪ್ರಜ್ಞೆಗಳು ಜೀವಾತ್ಮನಿಗೆ ಪರ್ಯಾಯಗಳು.

ಲೋಕದಲ್ಲಿ ಮರುಮರೀಚಿಕೆಯು ಅತ್ಯಂತ ಕನಿಷ್ಠ, ಸಾಪೇಕ್ಷ ಅರ್ಥರಹಿತತೆಯನ್ನುಳ್ಳದ್ದು; ಬ್ರಹ್ಮದಲ್ಲಿ ನಾನಾತ್ವ ಕಲ್ಪನೆ ತತ್ಸಮ. ಅವಪ್ರಜ್ಞೆ–(ಜ್ಞಾತ) ಅಭಿಪ್ರಜ್ಞೆಗಳ ಅವಸ್ಥೆಗಳು ದ್ವಿತ್ವಾದಿ ನಾನಾತ್ವದರ್ಶಕಗಳು; ಅಧಿಪ್ರಜ್ಞೆಗೆ (Genus and species) ಜಾತಿ–ವ್ಯಕ್ತಿಗಳ ಸೋಂಕಿಲ್ಲ; ಅದು ಪ್ರಜ್ಞೆಯ ಅಖಂಡ, ಅಜಾತಿ, ಅಧಿಷ್ಠಾನ (ಆಧಾರ, ನೆಲೆ).

" The task of future philosophy is to clarify men's ideas as the social and moral strifes of their own day" ತಮ್ಮ ಕಾಲದ ಸಾಮಾಜಿಕ ಹಾಗೂ ನೈತಿಕ ಸಂಘರ್ಷಗಳ ಬಗೆಗಿನ ಕಲ್ಪನೆಗಳನ್ನು ಮಾನವರಿಗೆ ಸ್ಪಷ್ಟ ಮಾಡಿಕೊಡುವುದೇ ಬರಲಿರುವ ತತ್ವಶಾಸ್ತ್ರದ ಕರ್ತವ್ಯ" ಎಂದ ಜಾನ್‌ಡ್ಯೂಯಿ. ಇದು ಸಾರ್ವಕಾಲಿಕ ಲೋಕನ್ಯಾಯ. ಸದ್ಯದ ತತ್ವಶಾಸ್ತ್ರ ಕೂಡ ಅದನ್ನೇ ಇಲ್ಲಿ ಮೊದಲು ಮಾಡಬೇಕಾಗಿದೆ. ಸಾಮಾಜಿಕ ಸದಸ್ಯರ ಪರಸ್ಪರ ಸಂಬಂಧಗಳ ಸಾರ್ವಜನಿಕ ಧರ್ಮವೇ ನೀತಿ; ಗೃಹಸ್ಥಾಶ್ರಮವೇ ಹೆಚ್ಚು ಜನಪ್ರಿಯವಾಗಿರುವುದರಿಂದ ಅದು ಗಾರ್ಹಸ್ಥನೀತಿ, ಅಂತಃಕೌಟುಂಬಿಕ ನೀತಿ. ಸಾಮಾಜಿಕವು ವಿಶಾಲಾರ್ಥದಲ್ಲಿ ಅಧಿಕ ಸದಸ್ಯರ ಎಲ್ಲ ಸಾಂಘಿಕ (ಸಮಾಜದ ಮೇಲೆ ಪರಿಣಾಮ ಮಾಡುವ) ಚಟುವಟಿಕೆಗಳನ್ನೂ ಒಳಗೊಳ್ಳುತ್ತದೆ. ಗೃಹಸ್ಥನ ಪುರುಷಾರ್ಥಗಳು ಮೂರು: ಧರ್ಮ, ಅರ್ಥ, ಕಾಮ. ಧರ್ಮವು ಸಮಾಜಕಾರಣ; ಆದ್ದರಿಂದ ಅರ್ಥದಂತೆ ವೈಯಕ್ತಿಕ ಕಾಮದ ನೇರವಾದ ಸಾಧನವಲ್ಲ. ಆದುದರಿಂದ ಅದನ್ನು ನಿರ್ಣಯಿಸುವ ತತ್ವಜ್ಞಾನ ಅಗತ್ಯ. ಲೋಕತತ್ವಗಳ ಸಂಖ್ಯೆ, ವರ್ಗ, ಪ್ರಾಥಮ್ಯಾದಿಗಳ ನ್ಯಾಯದ ನಿರ್ಣಯ ಧರ್ಮಾಧೀನವಾಗಿರುವುದು ಲೋಕಸಂಗ್ರಹ ನಿಯಮ. ಮೋಕ್ಷವು ಧರ್ಮದ ಆತ್ಮ; ಧರ್ಮದ್ದು ಭೇದಾಭೇದ ಸೂತ್ರವಾದರೆ ಮೋಕ್ಷದ್ದು (ಆತ್ಮದ್ದು) ಶುದ್ಧ ಐಕ್ಯಸೂತ್ರ. ಕಾಮ(Sensuous Consciousness), ಅರ್ಥ(Material Consciousness), ಧರ್ಮ (Moral Consciousness) ಮತ್ತು ಮೋಕ್ಷ (Spiritual Consciousness)ಗಳು ಉತ್ತರೋತ್ತರ ಬಲೀಯಸ್ತ್ವ ಉಳ್ಳ ಚರಮ ಮೌಲ್ಯಗಳು. ಮೋಕ್ಷವು ಧರ್ಮದ ತರ್ಕಶುದ್ಧ ಅಂತ್ಯದಶೆ. ವ್ಯಷ್ಟಿ–ಸಮಷ್ಟಿಗಳ ಉಭಯ ಪ್ರಜ್ಞೆಗೆ ಸಮಾನ ಪ್ರಾಧಾನ್ಯ ಕೊಟ್ಟು ಬಾಳುವವರಿಗೆ ಧರ್ಮವೇ ಮೋಕ್ಷ; ಸಮಷ್ಟಿ ಮಾತ್ರ ಪ್ರಧಾನರಿಗೆ ಮೋಕ್ಷವೇ ಧರ್ಮ. ಧರ್ಮ ರಾಜಸ, ಮೋಕ್ಷ ಸಾತ್ವಿಕ; ಕಾಮಾರ್ಥಗಳು ತಾಮಸಮಟ್ಟದ ಉತ್ತರೋತ್ತರ ದುರ್ಬಲತ್ವ ಉಳ್ಳ ಕೊನೆಬೆಲೆಗಳು. ಕಾಮಾರ್ಥಗಳು ಭೇದಪ್ರಧಾನ ಲೋಕಮೌಲ್ಯಗಳು–ವ್ಯಕ್ತಿ ಸ್ವಾರ್ಥಕ್ಕೆ ಅವುಗಳಲ್ಲಿ ಪ್ರಾಥಮ್ಯವಿದೆ. ಆದುದರಿಂದ ಅವು ಧರ್ಮಾಧೀನವಾಗಬೇಕೆಂಬುದು ವ್ಯಾಸಾದಿ ನಾಗರಿಕತಾ ವಕ್ತಾರರ ಆಶಯ. ಮುಕ್ತಿ ಶ್ರದ್ಧೆಯು ಧರ್ಮಶ್ರದ್ಧೆಗೆ ಅದ್ವಿತೀಯ ಎನ್ನಿಸಿದ ಬಲಿಷ್ಠ ಆಧಾರವಾದುದರಿಂದ ಪ್ರಾಚೀನ ಹಿಂದು ಶಾಸ್ತ್ರಗಳು ಮುಕ್ತಿ ವಿವೇಚನೆಗೆ ಬಹಳ ಗ್ರಂಥಗಳನ್ನೂ ಗ್ರಂಥಭಾಗಗಳನ್ನೂ ಮೀಸಲಿರಿಸಿದವು. ವಾನಪ್ರಸ್ಥವು ಸನ್ಯಾಸೋನ್ಮುಖ, ಗಾರ್ಹಸ್ಥವು ವಾನಪ್ರಸ್ಥೋನ್ಮುಖ, ಬ್ರಹ್ಮಚರ್ಯೆಯು ಗಾರ್ಹಸ್ಥೋನ್ಮುಖ ಎನ್ನಿಸಿ ನಡೆಯುವುದೇ ಆಶ್ರಮ ನಿಯಮ. ಅರ್ಥಾರ್ಜನಪರನಾದ ಗೃಹಸ್ಥನು ಅರ್ಥತ್ಯಾಗಪರನಾಗುವ ಕ್ರಮಿಕ ವಿಕಾಸವೇ ಲೋಕದ ಪ್ರಗತಿಗೆ ಕಾರಣ, ಸಂಘರ್ಷ ನಿವಾರಣೆಯ ಉಪಾಯ. ಸಂಘರ್ಷಗಳ ಕಲ್ಪನೆ ಸ್ಪಷ್ಟವಾದರೆ ಸಾಲದು; ಅವುಗಳ ಪರಿಹಾರಕ್ಕೆ ಮಾನವನು ಯೋಚಿಸಬೇಕು. ಅರ್ಥತ್ಯಾಗಮುಖವಿಲ್ಲದವನ ಯಾವ ಯೋಜನೆಯೂ ಸಜ್ಜನರಾದ ಸಹಜೀವಿಗಳ ಮಧ್ಯದಲ್ಲಿ ಸಂಘರ್ಷ ಪರಿಹಾರದ ಸಮರ್ಥತಮ ಮತ್ತು ಸಂಸ್ಕೃತತಮ ಯೋಜನೆಯೆನ್ನಿಸದು. ತೇನತ್ಯಕ್ತೇನ ಭುಂಜೀಥಾ:!

ಸಮಾಜಹಿತ ಮತ್ತು ವ್ಯಕ್ತಿಹಿತ ಎಂಬ ಹಿತಭೇದಗಳನ್ನು ಎಣ್ಣೆ–ಸೀಗೆ ಸಂಬಂಧ ಉಳ್ಳವುಗಳೆಂದು ಗ್ರಹಿಸಿ ಸಮಾಜವಾದ (Socialism) ಮತ್ತು ವ್ಯಕ್ತಿವಾದ (Individualism) ಎಂಬ ವಾದಗಳ ಸಂಘರ್ಷವನ್ನು ಕಲ್ಪಿಸಿಕೊಂಡು, ವಾದ ಪ್ರತಿವಾದಗಳನ್ನು ಹೂಡುವ ಪಾಶ್ಚಾತ್ಯ ಬುದ್ಧಿಯು ವಸ್ತುಜ್ಞಾನ ವಿಮುಖವಾದದ್ದು. ಮಾನವನು ಸಮಾಜಜೀವಿ ಎಂಬ ಮನಃಶಾಸ್ತ್ರವನ್ನು ಒಪ್ಪಿದ ಮೇಲೆ, ಮಾನವವ್ಯಕ್ತಿಗಳ ಸಂಘವೇ ಸಮಾಜವೆಂಬುದನ್ನು ಕಂಡ ಮೇಲೆ, ಸ್ವಾತಂತ್ರ್ಯವೆಂಬುದು ದಾಸ್ಯಸ್ವಾಚ್ಛಂದ್ಯಗಳಿಗಿಂತ ಭಿನ್ನವೆಂದು ನಂಬಿದ ಮೇಲೆ, ಒಬ್ಬನಿಗಿಂತ ಹೆಚ್ಚು ವ್ಯಕ್ತಿಗಳಿಲ್ಲದಾಗ ಧರ್ಮಾಧರ್ಮ ನಿರ್ಣಯದ ಪ್ರಶ್ನೆಯು ಬಹಳ ಮಟ್ಟಿಗೆ ಅರ್ಥಪೂರ್ಣತೆಯನ್ನು ಕಳೆದು ಕೊಳ್ಳುವುದೆಂಬುದು ಗೊತ್ತಾದ ಮೇಲೆ ಕೇವಲ ವ್ಯಕ್ತಿವಾದವು ಅವ್ಯವಹಾರ್ಯವೆಂಬುದನ್ನು ಯಾರಾದರೂ ಒಪ್ಪಲೇಬೇಕು. Crowd behaviour, mass mind ಗುಂಪಿನ ನಡೆ, ಸ್ತೋಮ ಬುದ್ಧಿ ಎಂಬಿವು ಸರಿಯಾದ ನಾಗರಿಕ ನಡತೆಗಳನ್ನುಳ್ಳ ವ್ಯಕ್ತಿಗಳ ಸಾಂದರ್ಭಿಕ ಅನಾಗರಿಕತೆಯನ್ನು ಪ್ರತಿಪಾದಿಸುತ್ತವೆ. ಆದರಿವು ಸಂದರ್ಭಗಳ ಸಾಮಾನ್ಯದ ವ್ಯಾಪ್ತಿಯನ್ನು ಉಳ್ಳವುಗಳಲ್ಲ. ಗುಂಪು ಅಥವಾ ಸ್ತೋಮ ಎಂಬುದರ ಸ್ವರೂಪವು ಸರ್ವಸಂದರ್ಭ ಸಾಧಾರಣವಲ್ಲ; ನಾಗರಿಕ ನಡತೆಯನ್ನೂ ಇದು ಭಿನ್ನ ಸಂದರ್ಭಗಳಲ್ಲಿ (ಸಂನಿವೇಶಗಳಲ್ಲಿ) ಪ್ರದರ್ಶಿಸುತ್ತದೆ. ಸಮಾಜದ ಕ್ರೌರ್ಯ, ದಬ್ಬಾಳಿಕೆ ಎಂದರೆ ಅದರಲ್ಲಿಯ ಹಲಕೆಲ ಬಲಿಷ್ಠರು ಅನಾಗರಿಕವಾಗಿ ಸಹಜೀವಿಗಳನ್ನು ನಡೆಸಿಕೊಳ್ಳುವುದೆಂದಷ್ಟೇ ಅರ್ಥ. ಒಂದು ಇಡಿ ಸಮಾಜದ ಸದಸ್ಯರೆಲ್ಲರೂ ನಾಗರಿಕರಾಗಿದ್ದಾಗ ಆ ಸಮಾಜವು ವ್ಯಕ್ತಿಗಳ (ಸದಸ್ಯರ) ಹಿಂಸೆ–ಶೋಷಣೆಗಳಲ್ಲಿ ತೊಡಗುವುದೆಂಬುದು ಅಸಂಬದ್ಧ. ನಾಗರಿಕರೂ ಗುಂಪಿನಲ್ಲಿ ತಮ್ಮ ಗುರುತು ಸಿಗಲಾರದೆಂದು ಅವಿತು ದುರಾಚಾರಗಳಲ್ಲಿ ಪ್ರವೃತ್ತರಾದರೆಂಬ ವೃತ್ತಾಂತದಲ್ಲಿ ಅಂಥ ನಾಗರಿಕರು ತೋರಿಕೆಯ ನಾಗರಿಕರಷ್ಟೇ ಅಲ್ಲದೆ ಪರಿಪಕ್ವ ಬುದ್ಧಿಯ ನಾಗರಿಕರೆಂದು ಯಾರೂ ಹೇಳಲಾರರು. ತ್ರಿಕರಣ ಶುದ್ಧಿ ಇಲ್ಲದವನೂ ಸಾಮಾಜಿಕ ಕರ್ತವ್ಯಗಳನ್ನರಿಯದವನೂ ಹಾಗೇ ಅರಿತೂ ಮಾಡದವನೂ ನಾಗರಿಕನಲ್ಲ, ಸುಸಂಸ್ಕೃತನಲ್ಲ. ಪೋಲೀಸರೆದುರು ಮಾತ್ರ ಕಳದವನು ಹೇಗೆ ಸಂಭಾವಿತನೆನ್ನಿಸಿಯಾನು? ಹಾಗೇ ಕುಡಿದವನೂ ಕೆಲವೊಮ್ಮೆ ನಾಗರಿಕನಾಗಿ ವರ್ತಿಸಿದ ಮಾತ್ರದಿಂದ ಸರ್ವತ್ರ ನಾಗರಿಕನಾಗಿ ನಡೆದುಕೊಳ್ಳುತ್ತಾನೆ ಎಂದು ನಂಬುವುದು ಮೂಢತನ. ಸಾರ್ವತ್ರಿಕತೆ ಇಲ್ಲದ ನಾಗರಿಕತೆ ನಾಗರಿಕತೆಯಲ್ಲ, ಸಂಸ್ಕೃತಿ ಸಂಸ್ಕೃತಿಯಲ್ಲ. ಇಡಿ ಸಮಾಜವು ಎಲ್ಲ ವ್ಯಕ್ತಿಗಳನ್ನು ಶೋಷಿಸುವುದೂ ಎಲ್ಲ ವ್ಯಕ್ತಿಗಳೂ ಇಡಿ ಸಮಾಜವನ್ನು ಕಡೆಗಣಿಸುವುದೂ ವಿಚಾರಹೀನ ವ್ಯವಹಾರದೂರ. ಒಂದು ಸಮಾಜದಲ್ಲಿ ಬಹುಸಂಖ್ಯರು ಶ್ರೀಮಂತರಾದರೆ ಬಡವರನ್ನೂ ಬಡವರಾದರೆ ಶ್ರೀಮಂತರನ್ನೂ ಶೋಷಿಸುತ್ತಾರೆ ಎಂಬುದೂ ಅಲ್ಪಾಪವಾದವುಳ್ಳ ಉತ್ಸರ್ಗವಲ್ಲ. ದೇಹಬಲ, ಬುದ್ಧಿಬಲ, ದ್ರವ್ಯಬಲ, ಸ್ಥಾನಬಲ, ಸಂಖ್ಯಾಬಲಗಳೆಂದು ಬಲಗಳು ಪಂಚವಿಧ. ಈ ಯಾವಬಲವುಳ್ಳವರೂ ಅಧರ್ಮರಾಜ್ಯದಲ್ಲಿ ಬಲಕಡಿಮೆಯಾದ ಪರರ ಶೋಷಕರಾಗುವ ಸಂಭವವಿದೆ. ಆದುದರಿಂದ ಸ್ವಬುದ್ಧಿ, ಪರಬುದ್ಧಿ, ಪರದಂಡಭಯ ಎಂಬ ಒಂದಲ್ಲ ಒಂದರಿಂದ ಈ ಬಲಗಳು ಧರ್ಮಾಧೀನರಾಗಿ ವರ್ತಿಸುವಂತೆ ಮಾಡುವುದೇ ಧರ್ಮರಾಜ್ಯಭಾರ. ಸಮಾನಗುಣದ ಸಹಜೀವಿಗಳಿಗಿಲ್ಲದ

ದ್ರವ್ಯಗಳನ್ನು ಇಲ್ಲದ ಪರಿಮಾಣ–ಪ್ರಕಾರಗಳಲ್ಲಿ ಇಟ್ಟುಕೊಂಡಿರುವವರು ಶೋಷಕರು. ಶೋಷಣೆ Social Injustice ಸಾಮಾಜಿಕ ಅನ್ಯಾಯ. ಗುಣವಿಲ್ಲಿ ದ್ರವ್ಯೇತರ ಬಲ; ದ್ರವ್ಯವಿಲ್ಲಿ ಭೌತಿಕವಾದ ಬಳಕೆಯ ಸಾಮಗ್ರಿ. ಮಹಾಭಾಗ (Majority) ಅಲ್ಪಭಾಗ (Minority)ರ ಘರ್ಷಣ ಪ್ರಸಂಗದಲ್ಲಿಯೂ ಬಳಕೆಯ ಸಾಮಗ್ರಿ ಹಾಗೂ ಸೌಕರ್ಯಗಳ ಅಸಾಂದರ್ಭಿಕ, ಅಪರ್ಯಾಪ್ತ ವಿತರಣವೇ ಅನ್ಯಾಯ. ಅನ್ಯಾಯಗಾರರು ಅವಮಾನವರಲ್ಲದೆ, ಮಾನವರೆಂಬ ಗೌರವಕ್ಕೆ ಪಾತ್ರರಾಗುವವರಲ್ಲ. ಆದುದರಿಂದ ಭಾರತವು ಸಮಾಜ–ವ್ಯಕ್ತಿಗಳ ದ್ವೈತ, ದ್ವಂದ್ವಗಳನ್ನು ಚರ್ಚಾವಸ್ತುವನ್ನಾಗಿ ತೆಗೆದುಕೊಳ್ಳದೆ ಧರ್ಮ–ಅಧರ್ಮಗಳನ್ನೇ ಯಾವಾಗಲೂ ಚರ್ಚಾವಿಷಯಗಳನ್ನಾಗಿ ತೆಗೆದುಕೊಳ್ಳುತ್ತ ಬಂದಿದೆ. ಅದರಲ್ಲಿ ಬಹುಸಂಖ್ಯ ಸಜ್ಜನರ ಹಿತವೇ ಪರಮಧರ್ಮ; ಸಜ್ಜನರು ಪರಹಿತ ಪ್ರಧಾನರು! ಹಿತವು ಪ್ರಿಯಕ್ಕಿಂತ ಹೆಚ್ಚಿನ ಮೌಲ್ಯ. ಆತ್ಮಹಿತ, ಮನೋಹಿತ, ಇಂದ್ರಿಯಹಿತ, ದೇಹಹಿತಗಳಲ್ಲಿ ಸ್ಪರ್ಧೆ, ವಿರೋಧ ಉಂಟಾದಾಗ ಉತ್ತರೋತ್ತರಹಿತವು ಹೆಚ್ಚು ಅಪ್ರಧಾನವೆನ್ನಿಸಬೇಕು; ಹಾಗೇ ವ್ಯಕ್ತಿ ಹಿತ–ಸಮಾಜಹಿತಗಳಲ್ಲಿ ಪ್ರಥಮೇತರ ಹಿತಗಳಲ್ಲಿ ಘರ್ಷಣವುಂಟಾದಾಗಲೂ ಉತ್ತರೋತ್ತರವು ಗೌಣ; ಪ್ರಥಮಹಿತದಲ್ಲಿ ಸಂಘರ್ಷವು ಅಸಾಧ್ಯ, ಅಸಂಭವ–ಆತ್ಮಹಿತವು ಸಮಾಜಹಿತ ವ್ಯಾಪಿ, ಸಮಾಜಹಿತವು ಸರ್ವವ್ಯಕ್ತಿಹಿತ ವ್ಯಾಪಿಯಾಗಿರುವುದರಿಂದ–ವ್ಯಕ್ತ್ಯಾತ್ಮ–ಸಮಾಜಾತ್ಮಗಳು ಒಂದೇ ಆದುದರಿಂದ!

"A monistic world is for us a dead world; in such a universe we carry out, willy nilly, the parts assigned to us by an omnipotent deity or primeval nebula; and not all our tears can wipe out one word of the eternal script – ಅದ್ವೈತ ಪ್ರಪಂಚವು ನಮಗೆ ಒಂದು ಸತ್ತ ಪ್ರಪಂಚ; ಅಂಥ ಜಗತ್ತಿನಲ್ಲಿ ಸರ್ವಶಕ್ತನಾದ ಭಗವಂತ ಅಥವಾ ಆದಿನೀಹಾರಿಕೆ ಆಜ್ಞಾಪಿಸಿದ ಪಾತ್ರವನ್ನು ನಾವು ಹಾಗೂ ಹೀಗೂ ನಿರ್ವಹಿಸಿಕೊಂಡು ಹೋಗುವೆವು; ಮತ್ತು ನಿತ್ಯಗ್ರಂಥದ ಒಂದು ಪದವನ್ನು ಕೂಡ ನಾವು ಸಾಯುವವರೆಗೆ ಅತ್ತರೂ ಅಳಿಸಲಾರೆವು" ಎಂಬಲ್ಲಿ ಪಾಶ್ಚಾತ್ಯರ ಅಸಂಬದ್ಧ ಅದ್ವೈತ ಎಂಥದೆಂಬುದು ಗೊತ್ತಾಗುತ್ತದೆ. ಇನ್ನು ಅವರ ದ್ವೈತವೋ– The value of a multiverse as compared with a universe lies in this. that where there are cross-currents and warring forces, our own strength and will, may count and help decide the issue, it is a world where nothing is irrevocably settles and all action matters - ಏಕಕಾರಣ ಜಗತ್ತಿನೊಡನೆ ಅನೇಕ ಕಾರಣ ಜಗತ್ತನ್ನು ಹೋಲಿಸಿದರೆ, ೨ನೆಯದರಲ್ಲಿ ವಿರುದ್ಧ ದಿಕ್ಕಿಗೆ ಹರಿಯುವ ಹೊನಲುಗಳೂ ಸೆಣಸುವ ಶಕ್ತಿಗಳೂ ಇವೆ; ನಮ್ಮ ಇಚ್ಛೆ–ಶಕ್ತಿಗಳು ಅಲ್ಲಿ ಗಣ್ಯವಾಗಿ ಪ್ರಕರಣವೊಂದನ್ನು ತೀರ್ಮಾನಿಸಲು ನೆರವಾಗಬಹುದು; ಅಲ್ಲಿ ಯಾವುದೂ ಬದಲಾಯಿಸಲಾರದಂತೆ ಹೊಂದಿಸಿಟ್ಟಿಲ್ಲ ಮತ್ತು ಎಲ್ಲ ಕಾರ್ಯಗಳೂ ಪ್ರಾಧಾನ್ಯ ಉಳ್ಳಂಥವು ("Outlines of philosophy", p.440) "ನಮ್ಮ ಇಚ್ಛೆ–ಶಕ್ತಿಗಳು" ಮಾನವ ಪ್ರಪಂಚದಲ್ಲಿ ವಿರುದ್ಧ ಹಾಗೂ ಭಿನ್ನವಾಗಿರುವುದರಿಂದ ಮಾನವ–ಮಾನವ ಮತ್ತು ಮಾನವ–ಮಾನವೇತರ ಹಾಗೂ ಮಾನವೇತರ+ಮಾನವೇತರ

ಸೃಷ್ಟಿಗಳ ಅಸಮನ್ವಯವನ್ನು ಎಷ್ಟೋ ಕಡೆ ಸರ್ವಮಾನವರಿಗೆ (ಅಥವಾ ಸರ್ವಸಜ್ಜನರಿಗೆ ಸಹ) ಸಮಾಧಾನಕರ ವಾಗುವಂತೆ ಸರಿಪಡಿಸಲು ಈವರೆಗೆ ಮಾನವನಿಗೆ ಸಾಧ್ಯವಾಗದುದನ್ನು ಮರೆತ ಪಾಶ್ಚಾತ್ಯನು ತನ್ನ ಪೂರ್ವಗ್ರಹವನ್ನು ನಾನಾತ್ವ ಪ್ರಾಧಾನ್ಯದತ್ತ ಹರಿಯಿಸಿದ್ದಕ್ಕೆ ಮೇಲಿನದೊಂದು ಉದಾಹರಣೆ. ಅಲ್ಲದೆ, ಭೇದ–ಅಭೇದಗಳೆರಡೂ ಜಗತ್ತಿನಲ್ಲಿದ್ದರೂ ಜಗತ್ತು ಜಗತ್ತಾಗಿ ಉಳಿದಿರಲು ಅಭೇದದ (ಅಭೇದ ಸಂಬಂಧಗಳ) ಸಂಖ್ಯೆಗಿಂತ ವ್ಯಾಪ್ತಿ ಹೆಚ್ಚಾಗಿರುವುದೇ ಕಾರಣ. ಅಥವಾ ಅದರ ಶಕ್ತಿ ಅಧಿಕವಾಗುವುದೇ ಕಾರಣ. ಭೇದದ ಪ್ರಭಾವಿತ್ವವು ಅಭೇದದ ಪ್ರಭಾವಿತ್ವಕ್ಕಿಂತ ಒಟ್ಟಿನಲ್ಲಿ ಕಡಿಮೆಯೆಂಬುದು ಅನುಭವ ಗೋಚರ. ಕ್ಷೇತ್ರಭೇದವೊಂದರಿಂದ ಭೇದವು ಒಟ್ಟಿನಲ್ಲಿ ದುರ್ಬಲ, ಅಲ್ಲಲ್ಲಿ ಪ್ರಬಲ ಎನ್ನಿಸಿಯಾದರೂ ಉಳಿದುಕೊಂಡಿದೆ; ಜಗತ್ತಿನ ಸಾಪೇಕ್ಷತೆಗೆ ಬ್ರಹ್ಮಾವಲಂಬನ, ಅದಕ್ಕೆ ನಿಲ್ಲಲು ಆಧಾರ. ಶುದ್ಧ ಅಭೇದದಲ್ಲಿ ತೀರ್ಮಾನಿಸಬೇಕಾದ ಪ್ರಕರಣಗಳಿಲ್ಲ. ಲೋಕಜೀವನವು ಸಮಾಧಾನಾಂಶ ಹೆಚ್ಚಾಗಿ ಲಭಿಸಿರುವ ರಾಜಸರ ಹಾಗೂ ತಾಮಸರ ದೃಷ್ಟಿಗಳಲ್ಲಿ ಮಾತ್ರ ದಿವ್ಯ ಜೀವನಕ್ಕಿಂತ ಹೆಚ್ಚು ಅಪೇಕ್ಷಣೀಯ. The secular philosophy of the haves can never be the same as that of the have-nots- ಉಳ್ಳವರ ಲೌಕಿಕ ತತ್ವಜ್ಞಾನವೆಂದೂ ಇಲ್ಲದವರ ಲೌಕಿಕ ತತ್ವಜ್ಞಾನಕ್ಕೆ ಸಮನಾಗದು–ಎಂಬುದನ್ನು ವಿಲ್‌ಡ್ಯುರಾಂಟನು ಅರಿಯನು. ಭೇದದ ಬಗ್ಗೆ ಅನುಕೂಲಕರ ಪ್ರವೃತ್ತಿ ಇರುವುದು ಅಸಾಂದ್ರ ಪ್ರೇಮದ ಲಕ್ಷಣ. ಸ್ವದೇಹೇಂದ್ರಿಯ ಮನಸ್ಸುಗಳ ಬಗ್ಗೆ ಉಳಿದೆಲ್ಲವುಗಳ ಮೇಲಿರುವುದಕ್ಕಿಂತ ಅಧಿಕ ಪ್ರೇಮವಿರುವುದು ಅಲ್ಪ ಮಟ್ಟದ ಸ್ವಾರ್ಥ. ಅಲ್ಪಸ್ವಾರ್ಥನಿಷ್ಠನ ಪ್ರಯತ್ನಗಳಿಂದ ಅಲ್ಪಕಾಲಿಕ ಸುಖವೊಮ್ಮೆ ದೊರಕೀತು ಮತ್ತು ಅದರ ಅನಂತರ ದೀರ್ಘಕಾಲಿಕ ದುಃಖ ಬಂದೀತು. ಕೇವಲಾಘೋಭವತಿ ಕೇವಲಾದೀ; ಭುಂಜಂತೇತೇ ತ್ವಘಂ ಪಾಪಾಃ!

ಉಕ್ತ ಸ್ವಾರ್ಥವು ಸರ್ವರಿಂದಲೂ ನಿಂದ್ಯವಾಗಿದೆ; ಅದಕ್ಕಿಂತ ಒಂದು ಡಿಗ್ರಿ ಕಡಿಮೆ ಸ್ವಾರ್ಥವು ಪಾಪವಲ್ಲ ಎಂದು ಮುಂತಾಗಿ ವಾದಗಳೆದ್ದಿರಬಹುದಾದರೂ ಅದರ ಪಾಪಮಯತ್ವದ ಬಗ್ಗೆ ಯಾರಿಂದಲೂ ತಕರಾರಿಲ್ಲ. ಪರರೂ ಪರವಸ್ತುಗಳೂ ಸ್ವಾಧೀನವಾಗಿರಬೇಕೆಂಬುದು ಹೀನ ಮಟ್ಟದ ಪ್ರೇಮವೆಂದು ನೀಟ್ಷೆ ಕೂಡ ಹೇಳಿದ. ಅದರಿಂದ ಭಾರತವು ಜಿತೇಂದ್ರಿಯತೆಯು ಔತ್ತಮ್ಯದ ನಿಕಷವೆಂದಿತು, ಪರಪ್ರಭುತ್ವಕ್ಕಿಂತ ಸ್ವಪ್ರಭುತ್ವ ಶ್ರೇಷ್ಠವೆಂದಿತು. ತನ್ನ ತಾ ಗೆಲ್ಲುವುದು ಭಾರತದ ಮಹೋನ್ನತ ಆದರ್ಶವಾಯಿತು. ಆದರಿಂದು ರಾಷ್ಟ್ರೀಯತೆಯನ್ನೂ ಕಡೆಗಣಿಸುವ ವ್ಯಕ್ತಿ ಸ್ವಾರ್ಥವು ತಾಂಡವಿಸುತ್ತಿದೆ. ಅದರಿಂದ ಭಾರತವು Backward country ಹಿಂದುಳಿದ ದೇಶವೆಂದೆನ್ನಿಸಿದೆ. ಮುಂದುವರಿದ ಆ ಈ ರಾಷ್ಟ್ರಗಳು ಬಾಯಲ್ಲಿ ಭಾರತದ ಆದರ್ಶಗಳಿಗೆ ಭಿನ್ನ ಅಥವಾ ವಿರುದ್ಧವಾದ ಸಿದ್ಧಾಂತಗಳನ್ನು ಹೇಳಿದಂತೆ ತೋರಿದರೂ ವ್ಯವಹಾರದಲ್ಲಿ ನಿಃಸ್ವಾರ್ಥದ ಮೊದಲ ಹೆಜ್ಜೆಯಾದ ರಾಷ್ಟ್ರೀಯತೆಯನ್ನು ಸಮರ್ಥವಾಗಿ ಪರಿಪಾಲಿಸುತ್ತಿರುವುದೇ ಅವುಗಳ ಮುನ್ನಡೆಗೆ ಕಾರಣ ಎಂಬುದನ್ನು ಬಾಯಿಬಲದ ಭಾರತೀಯ ತಕರಾರಿಗಳಿಂದು ಅರಿತುಕೊಳ್ಳುವುದಗತ್ಯ. (ನಿಃಸ್ವಾರ್ಥತೆಯ ಪರಾಕಾಷ್ಠೆಯೇ ಬ್ರಹ್ಮತ್ವ, ಜೀವನ್ಮುಕ್ತಿ, ವಿಶ್ವಮಾನವತೆ. ಅಂಥವನೇ ದೇವಮಾನವ, ಮಹಾಪುರುಷ, ಅವತಾರಪುರುಷ; ಅವನಲ್ಲಿ ಆಭಾಸಿಕ

ಸ್ವಾರ್ಥಪರತೆ ಕೆಲವೊಮ್ಮೆ ಇರಬಹುದು–ಅಷ್ಟೆ.) ಆಭಾಸಿಕವಾಗಿ ಮುಂದುವರಿದ ರಾಷ್ಟ್ರಗಳ ರಾಷ್ಟ್ರೀಯತೆಯು ಆ ದೇಶದ ಜನರ ವಂಚನೆ–ಅಲ್ಪಭಾಗರು ಮಹಾಭಾಗರನ್ನು ಸ್ವಸುಖಕ್ಕಾಗಿ ಆಳಲು ಮಾಡಿದ ಮೋಸ.

ಮಾರ್ಕ್ಸ್ ಮಹಾಶಯನು ಮತಧರ್ಮವೊಂದು ಅಫೀಮು, ಮಾದಕ ಪದಾರ್ಥ, ರಾಜಕೀಯ ಧೂರ್ತರು ಜನರ ವಂಚನೆಗಾಗಿ ಬಳಸುವ ತಲೆಕೆಡಿಸುವ ಅಥವಾ ಮರುಳು ಮಾಡುವ ಮದ್ದು ಎಂದು ಅಭಿಪ್ರಾಯಪಟ್ಟದ್ದಕ್ಕೆ ನಿದರ್ಶನಗಳಿವೆ. ಆದರೆ ಮತಧರ್ಮವೊಂದನ್ನಲ್ಲ–ವ್ಯಾಪಾರ, ಉದ್ಯಮ, ರಾಜಕೀಯ, ಅರ್ಥಯೋಜನೆ, ತತ್ವಪ್ರಚಾರ ಮುಂತಾದ ಪ್ರತಿಯೊಂದನ್ನೂ ಧೂರ್ತರು ಭಾವಿಕರನ್ನು ಮೋಸಗೊಳಿಸಿ ಸ್ವಾರ್ಥವನ್ನು ಸಾಧಿಸಿಕೊಳ್ಳಲು ಬಳಸಿದ್ದುಂಟು. ತಾನು ಅಥವಾ ತನ್ನ ಗುಂಪು ಹೇಳಿದಂತೆ ಇತರರು ಅಥವಾ ಇತರ ಗುಂಪುಗಳು ನಡೆದುಕೊಳ್ಳಬೇಕು–ಎಂಬ ಲಾಲಸೆ ಪ್ರಬಲವಾದಾಗ ಒಬ್ಬ ಅಥವಾ ಒಂದು ಗುಂಪು ಸಾಂದರ್ಭಿಕ ಜ್ಞಾನಸೂತ್ರವನ್ನು ತನ್ನ ಸ್ವಾರ್ಥಸಾಧನೆಗೆ ಅನುಕೂಲವಾಗುವಂತೆ ವ್ಯಾಖ್ಯಾನಿಸಿ ಪ್ರಚುರಪಡಿಸಿದ್ದಕ್ಕೆ ಇತಿಹಾಸವು ಹಲವಾರು ನಿದರ್ಶನಗಳನ್ನು ಕೊಡಬಲ್ಲದು. "ಅಮೇರಿಕಾದ ಜೀವನ ವಿಧಾನ" ಎಂಬುದರ ಪ್ರಚಾರ ಅಂಥ ಪ್ರಯತ್ನಕ್ಕೊಂದು ಆಧುನಿಕ ಉದಾಹರಣೆ. ಆರ್ಥಿಕ ಸಮತಾವಾದದಷ್ಟು ನಿಃಸ್ವಾರ್ಥ ರಾಜಕೀಯ ವ್ಯವಸ್ಥೆ ಲೋಕಜೀವನಕ್ಕೆ ಇನ್ನೊಂದಿಲ್ಲ; ಅದರಲ್ಲಿರುವ ಸರ್ವಭೂತದಯೆ ಇನ್ನೊಂದು ಲೌಕಿಕ ವ್ಯವಸ್ಥೆಯಲ್ಲಿಲ್ಲ. ಇಲ್ಲಿಯು ಸಮತೆ ಅಕ್ಷರಾರ್ಥ ಪ್ರಧಾನವಾದುದಲ್ಲವೆಂಬುದು ಗೃಹೀತ. ಈ ಲೌಕಿಕ ಸಮತ್ವವು ಆಧ್ಯಾತ್ಮಿಕ ಸಮತ್ವದ ಸಾಮೂಹಿಕ ಸಂಕೇತ. "ಶುನಿಚೈವ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ" ಎಂಬುದು ಜೀವಮೌಲ್ಯದ ಮಟ್ಟದಲ್ಲಿ ಸರ್ವತ್ರ ಸತ್ಯ. ಹುಟ್ಟಿದ ಜೀವದ ಪ್ರಾಥಮಿಕ ಅಪೇಕ್ಷೆ ಜೀವನ, ಆತ್ಯಂತಿಕ ಅಪೇಕ್ಷೆ ಮೋಕ್ಷ. ಅರ್ಥತಾರತಮ್ಯದ ಅಲ್ಪತೆಗಿಂತ ಹೆಚ್ಚಿನ ಸಾಮಾಜಿಕ ನ್ಯಾಯ ಇನ್ನೊಂದಿಲ್ಲ; ಏಕೆಂದರೆ, ಸಾಮಾನ್ಯ ಮಹಾಭಾಗರ ಲೌಕಿಕ ಜೀವನದ ಸಾಂಸ್ಕೃತಿಕ ಶಕ್ತಿಯನ್ನು ಅರ್ಥವು ಬಹುವಾಗಿ ನಿಯಂತ್ರಿಸುತ್ತದೆ. ಅರ್ಥವು ಸಂಸ್ಕೃತ ಮಾನವನ ಅನಿವಾರ್ಯ ಸೇವಕ, ಅಸಂಸ್ಕೃತನ ಮೇಲೆ ದಬ್ಬಾಳಿಕೆ ನಡೆಸುವ ಸರ್ವಾಧಿಕಾರಿ. ಆದುದರಿಂದ ಧರ್ಮಾರ್ಥವೇ ಲೌಕಿಕ ಜೀವನ ಸೂತ್ರಗಳ ಸಾರ್ವಭೌಮ; ಧರ್ಮಕಾಮ ಅದರ ಫಲ. ಧರ್ಮವು ಸಮಷ್ಟಿಹಿತ ಪ್ರಧಾನವಾದುದು. ಆತ್ಮವು ವ್ಯಷ್ಟಿ–ಸಮಷ್ಟಿಗಳ ಸಂಪರ್ಕದ ಏಕಮೇವಾದ್ವಿತೀಯ ಸೇತು. ಆತ್ಮಭಾವ (ಬ್ರಹ್ಮಭಾವ)ವೆಂಬುದು ಸರ್ವೋದಯ ಪ್ರಜ್ಞೆ, 'ಸರ್ವೇ ಜೀವಾಃ ಸುಖಿನೋ ಭವಂತು' ಎಂಬ ಪ್ರಾಮಾಣಿಕವಾದ ಪ್ರಯತ್ನಶೀಲ ಹರಕೆ. ಬ್ರಹ್ಮಾಹಮೆಂದರೆ ಸರ್ವೋಽಹಂ. ಸರ್ವಾತ್ಮಕತೆಯನ್ನುಳ್ಳ ಆದರ್ಶ ಮಾನವನ ಜೀವನದಲ್ಲಿ ಮಾತ್ರ––

**"ಬ್ರಹ್ಮಾರ್ಪಣಂ ಬ್ರಹ್ಮಹವಿರ್ ಬ್ರಹ್ಮಾಗ್ನೌ ಬ್ರಹ್ಮಣಾಹುತಂ**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ ಕರ್ಮಸಮಾಧಿನಾ"**

ಎಂಬ ಜ್ಞಾನಸೂತ್ರವು ಸಂಪೂರ್ಣ ಸಾರ್ಥಕವಾಗಿರುತ್ತದೆ, 'ಪರೋಪಕಾರಾರ್ಥ ಮಿದಂ ಶರೀರಂ' ಎಂಬುದು ಫಲಿಸಿರುತ್ತದೆ. ಒಂದು ದೇಶದ ಮಹಾಭಾಗರು (ನೂರಕ್ಕೆ ೫೦ಕ್ಕಿಂತ ಹೆಚ್ಚು ಜನರು) ಈ ಬ್ರಹ್ಮಧರ್ಮವನ್ನು ಅನುಸರಿಸುವುದರಲ್ಲೇ ರಾಮರಾಜ್ಯ ಸ್ಥಾಪನೆ ಇದೆ.

ಸಜ್ಜನರು ಆದರ್ಶ ಮಾನವರು; ಅವರ ಉದಯವು ವಾಖ್ಯಾನಾನಪೇಕ್ಷವಾದುದು. ದುರ್ಜನರು ನೈಸರ್ಗಿಕ ಸ್ವಾರ್ಥಿಗಳು; ಅವರ ಉದಯವು ಅವರಿಗೆ ದೊರಕುವ ಶಿಕ್ಷಣದ ಮೂಲಕವೇ ಆಗಬಲ್ಲದು. ಸಾಮ, ದಾನ, ಭೇದಗಳೆಂಬ ಶಿಕ್ಷಣೋಪಾಯಗಳು ಫಲಿಸದಾದಾಗ ಶಿಕ್ಷೆ (ದಂಡ) ಎಂಬ ಚರಮೋಪಾಯವು ಅವರ ಶಿಕ್ಷಣಕ್ಕೆ ಸಾಧನ. ಅಂಥ ಸಾಧನವು ಹೊರಗೆ ಹಿಂಸೆಯಾಗಿ ಕಂಡರೂ ಒಳಗೆ ಅಹಿಂಸೆಯೇ.

**ದೃಶ್ಯತೇ ಧರ್ಮರೂಪೇಣ ಹ್ಯಧರ್ಮಂ ಪ್ರಾಕೃತಶ್ಚರನ್।**

**ಧರ್ಮಂ ಚಾ ಧರ್ಮರೂಪೇಣ ಕಶ್ಚಿದ ಪ್ರಾಕೃತಶ್ಚರನ್ ॥**

ವ್ಯಾಸ ಇದನ್ನು ಬಲ್ಲ; ಅದರಿಂದಲೇ ಜಗತ್ತಿಗೆ ಸಾರಿದ; ಧರ್ಮಾದರ್ಥಶ್ಚ ಕಾಮಶ್ಚ ಸಕಿಮರ್ಥಂ ನಸೇವ್ಯತೇ? ಎಂದು ಸವಾಲು ಹಾಕಿದ. ಆತನ ದೃಷ್ಟಿಯನ್ನರಿಯದೆ ಧರ್ಮವ್ಯಾಖ್ಯೆಗಿಳಿಯುವ ತತ್ವಜ್ಞಾನಿಗಳು ಪೂರ್ಣ ಸಂಸ್ಕೃತರೆಂದೆನ್ನಿಸರು. ಪೂರ್ಣ ಸಂಸ್ಕೃತಿ ಸಂಪನ್ನತೆಯೇ ಮನುಷ್ಯನ ಪರಮಧ್ಯೇಯ. ಪೂರ್ಣದೃಷ್ಟಿಗೆ ಅಥವಾ ಜೀವನ್ಮುಕ್ತ ದೃಷ್ಟಿಗೆ–

**ಪೂರ್ಣಮಿದಂ ಪೂರ್ಣಮದಃ ಪೂರ್ಣಾತ್ಪೂರ್ಣಮುದಚ್ಯತೇ ।**

**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ ॥**

ಎಂದು ತೋರುತ್ತದೆ!

**ಬಿ.ಎಚ್.ಶ್ರೀಧರ**

# ೧.

# ಸಿದ್ಧಾಂತಗಳ ಮೂಲ ಶೋಧ

ಸಿ.ಇ.ಎಂ. ಜೋಡರಂಥ ಜ್ಞಾನಶಾಸ್ತ್ರಜ್ಞರೆಂದುಕೊಳ್ಳುವ ಜನರು ಭಾರತದಲ್ಲಿಯೂ ಇರುವುದರಿಂದ ಅವರ ನಾನಾತ್ವವಾದದ ವೈಶೇಷಿಕತೆಯ ಮಾನಸ ಶಾಸ್ತ್ರೀಯ ಮೂಲವನ್ನು ಬೆಳಕಿಗೆ ತರಬೇಕಾದುದು ಕರ್ತವ್ಯವಾಗಿದೆ:–

(೧)ಮನುಷ್ಯನು ವಿಜ್ಞಾನ ಸಹಜವಾದ ವಸ್ತುನಿಷ್ಠ ಜ್ಞಾನಸಾಧನವುಳ್ಳವನೆಂದೂ (೨) ಆ ಸಾಧನದ ಮೂಲಕ ಜಗತ್ ಸ್ವರೂಪವನ್ನು ಇಂದು ಮಾತ್ರ ಹೆಚ್ಚು ಸಮರ್ಥನಾಗಿ ಹುಡುಕಬಲ್ಲವನಾದನೆಂದೂ (೩) ಆ ಅನ್ವೇಷಣದ ಫಲವಾಗಿ ಕಣ್ಣಿಗೆ ಕಾಣುವ ಪ್ರಪಂಚವು ಅತ್ಯಲ್ಪಜ್ಞಾತವೆಂಬುದನ್ನೂ ಅದು ತನಗಿಂತ ಸದಾ ಭಿನ್ನವೆಂಬುದನ್ನು ಅರಿತವನೆಂದೂ (೪) ಈ ಅರಿವೇ ಅನುಭವ, (೫) ಈ ಅನುಭವವು ಅಪರಿಚಿತ, ಆದರೂ ಉತ್ಸಾಹ ವರ್ಧಕ ಹಾಗೂ ಮಾನವನ ಕೆಚ್ಚನ್ನು ಕೆರಳಿಸಬಲ್ಲಂಥದು ಮತ್ತು ಅವನನ್ನು ಹೊಸ ಸಾಹಸಗಳಿಗೆ ಪ್ರೇರಿಸಬಲ್ಲದು ಎಂದೂ ಜೋಡರು ಸಾರಿದ್ದಾರೆ. ಇದು ಅವರು ಕಂಡ ಮತಧರ್ಮ, ತತ್ವಜ್ಞಾನ, ವಿಜ್ಞಾನ ಅಥವಾ ಜಗತ್ ಸತ್ಯವಾದ.

೨೭೦ ಪುಟಗಳ ಜೋಡರ "Philosophical aspects of Modern Science" ಎಂಬ ಗ್ರಂಥದಲ್ಲಿ ಎಲ್ಲಿಯೂ ಮನುಷ್ಯ ಜಂತುವಿನ ಲಕ್ಷಣವನ್ನು ಹೇಳಿಲ್ಲ; ಅವರು ಆಧುನಿಕ ವಿಜ್ಞಾನವನ್ನು ಆಧರಿಸಿದವನು ಮಾತ್ರ ಗೌರವಾರ್ಹ ಮನುಷ್ಯ ಎಂದು ಧ್ವನಿಸಿದ್ದಾರೆ. ಮನುಷ್ಯನ ಗೌರವಾರ್ಹತೆ–ಅಗೌರವಾರ್ಹತೆಗಳ ವಿವೇಕವು ವಿಜ್ಞಾನದ ಅಥವಾ ಅದನ್ನಾಧರಿಸಿದ (ಅತಿಭೌತ) ತತ್ವಶಾಸ್ತ್ರದ ಕಕ್ಷೆಯಿಂದ ಹೊರಗೆ. ಮಾನವತ್ವ–ದೇವತ್ವಗಳು ತೀರ ವಿರುದ್ಧ ಧರ್ಮಗಳೆಂಬ ಅವರ ಪ್ರತಿಪಾದನೆಗೆ ಅವರ ಧ್ಯೇಯವಾದ–ಶತ್ರುತ್ವದ ಭಾವೋದ್ರೇಕ ಮಾತ್ರ ಆಧಾರ. ತರ್ಕಾತೀತ ಯೋಗಪ್ರತ್ಯಕ್ಷವನ್ನು ತಾರ್ಕಿಕ ಸಾಮಂಜಸ್ಯಕ್ಕೆ ಒಳಪಡಿಸುವ ಅವರ ಭಾವನಾಪರವಶತೆ ಹಾಸ್ಯಾಸ್ಪದ.

## ಉತ್ತಾನ ಉತ್ಸರ್ಗ

ವಿಜ್ಞಾನ ಸತ್ಯದ ವಸ್ತುನಿಷ್ಠತೆ ಅವಿಜ್ಞಾನ ಸತ್ಯಗಳಿಗೂ ಇದೆಯೆಂಬ ವಾದವು ಕೇವಲ ಹಠ. ಭೌತ ಶಾಸ್ತ್ರದ ಅತ್ಯಾಧುನಿಕ ವಿಚಾರವು ಅನಿಶ್ಚಿತತಾವಾದ (Theory of

Indeterminacy)ವನ್ನು ಮಂಡಿಸಿರುವಾಗ ಪರ್ಯಾಪ್ತವಾದ ಜಗತ್ಸತ್ಯವು ವಿಜ್ಞಾನಕ್ಕೆ ನಿಶ್ಚಯಾತ್ಮಕವಾಗಿ ಗೊತ್ತಾಗಿದೆ ಎಂಬ ಗೃಹೀತವನ್ನಿಟ್ಟುಕೊಳ್ಳುವುದು ಶತ ಅಜ್ಞಾನ. ವೈಜ್ಞಾನಿಕ ಜಗತ್ತೆಂಬುದು ಅನಿಶ್ಚಿತ ಸತ್ಯವನ್ನಾಧರಿಸಿದ್ದು– ಎಂಬುದನ್ನು ರಸೆಲ್ಲಾದಿಗಳು ಸಾರಿದ್ದುಂಟು. ಜ್ಞಾತೃ, ಜ್ಞಾನಸಾಧನ, ಜ್ಞಾನಕ್ರಿಯೆ ಮತ್ತು ಜ್ಞೇಯವಸ್ತುಗಳೆಲ್ಲವೂ ಪ್ರತಿಕ್ಷಣ ಬದಲಾಯಿಸುತ್ತಿರುವುವೆಂಬ ಭೌತ ವಿಜ್ಞಾನವು ಎದುರಿರುವಾಗ, ಜೋಡರ ವೈಶೇಷಿಕತೆಯು ಯಾವುದನ್ನು ಹೇಗೆ ಸತ್ಯವೆಂದು ನಿರ್ದೇಶಿಸಲು ಸಾಧ್ಯ? ಹೀಗೆ ಸಾಧ್ಯವಿಲ್ಲದ ಸಂದರ್ಭದಲ್ಲಿ Agnosticism ಅಜ್ಞೇಯತಾವಾದವನ್ನು ಹೇಗೆ ಟೀಕಿಸಲು ಸಾಧ್ಯ? ಇಂದ್ರಿಯ ಸತ್ಯ, ವಿಚಾರ ಸತ್ಯ, ವಿಜ್ಞಾನ ಸತ್ಯಗಳೆಂದು ಮೂರು ಸತ್ಯಗಳನ್ನು ಹೇಳುವ ಬಾಯಿ Degrees of Reality ಸತ್ಯತೆಯ ಅಂಶ ಪ್ರಮಾಣದ ಸಿದ್ಧಾಂತವನ್ನು ಎಂತು ಖಂಡಿಸಬಲ್ಲದು? ವೈಷಮ್ಯ–ಸಾಮ್ಯಗಳೆಂಬ ಸಂಬಂಧಗಳು ನಿತ್ಯ ಸಾಪೇಕ್ಷಗಳಾಗಿರುವಾಗ ಜ್ಞಾತೃಜ್ಞೇಯಗಳು ಸಂಪೂರ್ಣವಾಗಿ ಪರಸ್ಪರ ವಿಲಕ್ಷಣ ಎಂದು ಹೇಳುವುದು ಎಂಥ ವಿಜ್ಞಾನಶುದ್ಧ ತರ್ಕ? ಕುರುಡನು ಬೆಳಕನ್ನು ವರ್ಣಿಸಿದ ಹಾಗೆ "ಜೋಡ ಮಾನವನು" ಮಾನವೇತರ ಪದಾರ್ಥಗಳನ್ನು ವರ್ಣಿಸಿದರೆ ಅವುಗಳ ಸತ್ಯಜ್ಞಾನ ಅವನಿಗಿದೆ ಎಂದು ಹೇಳಲು ಶಕ್ಯವೆ? ತಿಳಿದು ಕೊಳ್ಳುವ ಕ್ರಿಯೆಯು ತಿಳಿವಳಿಕೆಯಿಂದ ಸಂಪೂರ್ಣ ವಿಲಕ್ಷಣವಾಗಿರುತ್ತದೆ ಎಂಬ ಪೂರ್ವಗ್ರಹಕ್ಕೆ ಅನುಭವದ ಆಧಾರವಿಲ್ಲ; ಇದೆ ಎಂದು ಬಿಟ್ಟರೆ, ಎಂದು ಬರೆದುಬಿಟ್ಟರೆ, ಎಲ್ಲ ಮಹಾಧರ್ಮವಾದಿಗಳ ಸಮರ್ಥನೆ ಇದೆ ಎಂದು ಸಾರಿದರೆ ಸಮರ್ಥನೆ ಇರುವುದು ಸತ್ಯವಾದೀತೇ? ಮನಸ್ಸಿಗೆ ಕಲ್ಪಿಸುವ, ನಿರ್ಮಿಸುವ, ಆರೋಪಿಸುವ ಶಕ್ತಿಯೇ ಇಲ್ಲ ಎಂಬುದು ಯಾವ ಅನುಭವ? ಯಾವ ಮನಃಶಾಸ್ತ್ರ?

ಡಾರ್ವಿನೀಯ ವಿಕಾಸವಾದವು ಸರ್ವಜೀವನ ಕ್ಷೇತ್ರವ್ಯಾಪಕವಾದ ತ್ರಿಕಾಲಾಬಾಧಿತ ಸತ್ಯವೆಂದು ನಂಬುವವರಿಗೆ ವಿಜ್ಞಾನದ ಪ್ರಯೋಗ ಪರೀಕ್ಷೆಯ ಅಚ್ಚುಕಟ್ಟುತನದ ನಿಯಮ ಗೊತ್ತಿದೆಯೇ? ತರ್ಕದ Proof by Analogy ದೃಷ್ಟಾಂತ ನಿಷ್ಠ–ಪ್ರಮಾಣದ ಪ್ರಾಮಾಣ್ಯ ಎಷ್ಟು ದುರ್ಬಲ ಎಂಬುದು ತಿಳಿದಿದೆಯೆ? ಜಗತ್ತು ಸೊನ್ನೆಯಿಂದ ಇಂದಿನ ಮಟ್ಟದವರೆಗೆ ಉತ್ತಮ–ಉತ್ತಮತರವಾಗುತ್ತ ಬಂದಿದೆ ಎಂಬ ನಂಬಿಗೆಯ ಪೌರಾಣಿಕತೆಗೆ ವಿಜ್ಞಾನದ ಪಟ್ಟವನ್ನು ಕಟ್ಟುವ ಮೇಧಾವಿತ್ವಕ್ಕೆ ಯಾವ ದರ?

## ಅಪವಿವೇಚನೆ

ಯೋಗಪ್ರತ್ಯಕ್ಷದ ಅನುಭವವು ಸತ್ಯ, ಅದರ ವರ್ಣನೆ ಸುಳ್ಳು, ಅದು ಅನಿರ್ವಚನೀಯ–ಎಂದು ಹೇಳಿ, ಅದನ್ನು ದೈವಭಕ್ತಿಗೆ ಸಹಜವಾದ ಭಯ, ಗೌರವ, ಆದರಗಳಿಗೆ ಸಮಾನವೆಂದು ಹೇಳುವ ಜೋಡತನಕ್ಕೆ ಯಾವುದು ಜೋಡಿ? ಅಸಂಪ್ರಜ್ಞಾತ ಸಮಾಧಿ ಮಾನವನಿಗೆ ಅಗಮ್ಯವೆಂಬ ಅಯೋಗಿಗೆ ಎದೆಗಳು ಎಂಟೇ? ನೀತಿಯನ್ನು ಹೊರಗಿಟ್ಟು ಭಾವನೆಯನ್ನು ಬೆಲೆ (Value) ಎಂಬ ಬುದ್ಧಿವಂತಿಕೆಯ ಬೆಲೆಯನ್ನು ಕಟ್ಟಲು ಯಾವ ಮನಃಶಾಸ್ತ್ರಕ್ಕೆ ಸಾಧ್ಯ? ನೈತಿಕ ನಿಯಾಮಕತೆಗೆ ಯಾವಾಗಲೂ ಒಳವಲ್ಲದ ಲೌಕಿಕ ಬೆಲೆ ಇದೆ ಎಂಬ ಹಠಕ್ಕೆ ವಿಚಾರವೆಂದು ಹೆಸರಿಸಲು ಪ್ರಾಮಾಣಿಕ ಸೂಕ್ಷ್ಮಜ್ಞನಿಗೆ

ಸಾಧ್ಯವೇ? ಅಜ್ಞಾತ ಪ್ರಜ್ಞೆಯ ಅಸ್ತಿತ್ವವನ್ನು ಒಪ್ಪಿದ ಯಾವನು ಅದಕ್ಕೆ ಜ್ಞಾತಪ್ರಜ್ಞೆಯ ಪರಿಮಿತ ಸಂಖ್ಯೆಯ ಲಕ್ಷಣಗಳನ್ನು ಅನ್ವಯಿಸಿ ಮಹಾ ತಾರ್ಕಿಕನೆನ್ನಿಸಿಯಾನು? ನೀತಿಯು ಭಾವನೆಯೋ ಬುದ್ಧಿಯೋ ಇಚ್ಛೆಯೋ? ಯಾವುದರ ಕಕ್ಷೆಗೆ ಸೇರುವಂಥದು? ಸತ್ಯ–ಸೌಂದರ್ಯಗಳು ಯಾವುದರ ಕ್ಷೇತ್ರದಲ್ಲಿ ಬರುತ್ತವೆ? ಬೆಲೆಯು ನಿಷ್ಕ್ರಿಯ ನಿತ್ಯಪದಾರ್ಥವೆಂಬ ನಿಷ್ಪ್ರಯೋಜನವಾದಿಗೆ ಬೆಲೆಯಿಂದ ತೃಪ್ತಿ ಎಂಬ ಸಕ್ರಿಯ ಮಾನಸಿಕ ಫಲ ದೊರಕಲು ಸಾಧ್ಯವೇ? ನಯತಿ ಇತಿ ನೀತಿಃ, ನೀತಾ ಇತಿ ನೀತಿಃ, ನೀಯತೇ ಇತಿ ನೀತಿಃ– ಮನಸ್ಸಿಗೆ ಕಂಡದ್ದೇ ನೀತಿ ಎಂಬವರಿಗೆ ೨–೩ನೆಯ ನೀತಿ ಲಕ್ಷಣಗಳು ಗ್ರಾಹ್ಯ! ಜಗತ್ತಿನಲ್ಲಿ ಜೀವತ್ ಪದಾರ್ಥವೆನ್ನಿಸಿ ಒಬ್ಬನೇ ಒಬ್ಬ ಮಾನವವ್ಯಕ್ತಿ ಇರುವುದಾದರೆ, ಅವನ ನ್ಯಾಯಕ್ಕೆ, ನೀತಿಗೆ, ಧರ್ಮಕ್ಕೆ ಯಾವ ನಿಶ್ಚಿತ ಸ್ವರೂಪದ ಗ್ರಾಹ್ಯ ಅರ್ಥವಿರಬಲ್ಲದು? ಅವನ ಪ್ರಯೋಗ ವಿಜ್ಞಾನಕ್ಕೆ ಎಷ್ಟು ಬೆಲೆ? ಯಾರು ವಸ್ತುನಿಷ್ಠವಾಗಿ ಅದನ್ನು ಕಟ್ಟಬಲ್ಲರು? ವ್ಯಕ್ತಿವಾದದ ತಾರ್ಕಿಕ ಪರಮಾವಧಿಯು ಅರೋಗ ಮನಸ್ಕತೆಗೆ ಸಹಜವೆನ್ನಿಸೀತೇ? ತನ್ನ ಹೊಸತನದಿಂದ ಪ್ರಭಾವ ಬೀರಬಲ್ಲ ವೈಜ್ಞಾನಿಕವಾದ ಮಾಪಕ ಯಂತ್ರ ಸಾಮಗ್ರಿಗಳಿಗೆ ಮಾರುಹೋದ ಮನವು ವೈಜ್ಞಾನಿಕವಾಗಿ ಉಳಿದೀತೆ? ಕ್ರಮೇಣ ಅದು ಯಂತ್ರದಲ್ಲಿ ಯಂತ್ರವಾಗಿ ಹೋಗದೆ? ಯಂತ್ರದ ನಿರ್ದಯತೆ ನಿಷ್ಪಕ್ಷಪಾತವೇ? ಅಂಥ ಗೊತ್ತುಗುರಿ ಇಲ್ಲದ ಸತ್ಯಾನ್ವೇಷಣಚ್ಛಲಕ್ಕೆ ಜಗತ್ ಸತ್ಯವು ವಿಶ್ಲೇಷಣದಿಂದ ಮತ್ತು ತಜ್ಜನ್ಯ ಅನುಮಾನದಿಂದ ಅಥವಾ ಗಣಿತದಿಂದ ಇಡಿಯಾಗಿ ದೊರಕೀತೇ? ಹಾಗೆ ದೊರಕಿದ್ದಕ್ಕೆ ಸತ್ಯತೆ ಯಾವ ಅರ್ಥದಲ್ಲಿ ಇಡಿ ಎನ್ನಿಸಿ ಇದ್ದೀತು?

ಜ್ಞಾನಕ್ಕೂ ಅದರ ವಿಷಯಕ್ಕೂ ಇರುವ ಸಂಬಂಧವು ಒಂದು ಸೇತುವಿನಂತೆ ನಿತ್ಯವೂ ಸರ್ವಕ್ಷೇತ್ರದಲ್ಲೂ ಮಾಧ್ಯಮಿಕವಾಗಿರುವುದು ಜ್ಞಾನದ "ಪ್ರತ್ಯಕ್ಷ, ಸಾಕ್ಷಾತ್ಕಾರ" ಎನ್ನಿಸುವುದು ಹೇಗೆ? ರಸಾಸ್ವಾದದ "ತಲ್ಲೀನತೆ"ಯನ್ನು ಅಲ್ಲಗಳೆಯುವ ಅನುಭವವು ಅನುಭವವೇ? ಅದು ಕೇವಲ ಅಪೋಹಾಭವವಲ್ಲವೆ? ಶಬ್ದಭವತ್ವವಲ್ಲದೆ ಅರ್ಥಭವತ್ವ ಅದಕ್ಕಿದೆಯೇ? ಸ್ವಲಕ್ಷಣವನ್ನು ಅಪಾರ್ಥ ಮಾಡುವ ಮನಸ್ಸು ಮನಸ್ಸೇ? ಮನಸ್ಸು–ಆತ್ಮಗಳು ಒಂದೇ ಎಂದು ಗ್ರಹಿಸುವ ಮತ್ತು ಆತ್ಮದ ಎಲ್ಲ ಗುಣಗಳನ್ನರಿಯದ ಜನರ ತರ್ಕವು ಎಂಥ ತತ್ವಸಿದ್ಧಾಂತವನ್ನು ನಿಗಮನಿಸೀತು? ಅನುಭಾವ (ಯೋಗಸಮಾಧಿ) ಅತರ್ಕ್ಯ, ಅನಿರ್ವಚನೀಯವೆಂದ ತಲೆ, ಧ್ಯೇಯವಾದದ ಅದ್ವೈತವು ತಲೆಗರಿದಾದ್ದರಿಂದ, ಹೃದಯ ಮಾತ್ರ ಗಮ್ಯವಾದುದರಿಂದ ತ್ಯಾಜ್ಯವೆಂಬುದು ಎಂಥ ತರ್ಕ? ಹೃದ್ಗಮ್ಯ, ಬುದ್ಧ್ಯಗಮ್ಯವೆನ್ನಿಸಿದ ಅನುಭವವಿಲ್ಲದವನು ಅನ್ಯರಿಗೆ ಅಂಥ ಅನುಭವವಾಗಿದೆಯೆಂದೂ ಆದರೆ ಅದು ಅವರು ಹೇಳುವಂತೆ ಇಲ್ಲವೆಂದೂ ಹೇಳುವಾಗ ಅವರಿಗೆ ಅದರ ಪೂರ್ಣ ಸ್ವರೂಪ ಮರೆತು ಹೋಗಿರುತ್ತದೆ ಎಂದೂ ವಾದಿಸುವ ಜೋಡವಾದವೂ ಒಂದು ವಾದವೇ? ಇಂದ್ರಿಯಾನುಭವ ಆತ್ಮಾನುಭವಗಳು ಮಾನಸವೆಂದೂ ಅವುಗಳ ಕ್ರಮ ಒಂದೇ ಬಗೆಯದೆಂದೂ ಆ ಕ್ರಮವು ಜ್ಞಾತೃ–ಜ್ಞೇಯಗಳ ಪ್ರತ್ಯೇಕತೆಯನ್ನು ಯಾವಾಗಲೂ ಉಳ್ಳದ್ದೆಂದೂ ಹೇಳುವ ಹಠವು ಉಪೇಕ್ಷೆಗಲ್ಲದೆ ಇನ್ನಾವುದಕ್ಕೆ ಪಾತ್ರ? ವಿಜ್ಞಾನಿಯ

ಅದ್ವೈತವು ಅವನ ಮನಸ್ಸಿನ ಮಂಡಿಗೆ ಎಂಬವನು ಹಾಗೆಂಬುದು ತನ್ನ ಮನಸ್ಸಿನ ಮಂಡಿಗೆ ಎಂಬುದನ್ನು ಅರಿಯದವನಾದಾಗ ಅವನನ್ನು ಏನೆಂದು ಕರೆಯಬೇಕು. ಯೋಗಿಗಳೆಲ್ಲರೂ ಕ್ಷಣ ಸಮಾಧಿವಂತರೆಂದು ಸಾರುವ ಯೋಗಜ್ಞತೆಯ ಕಿಮ್ಮತ್ತನ್ನು ಕಟ್ಟಲು ಅದನ್ನು ಭ್ರಮೆಯೆಂದು ಆರೋಪಿಸುವ ರಸೆಲ್ಲೀಯರೇ ಬೇಕು. ಅಜ್ಞಜನ ಹೇಳುವವರೆಲ್ಲರೂ ಯೋಗಿಗಳೆಂದು ನಂಬುವ ತತ್ವಜ್ಞಾನದ ದರ ಎಷ್ಟು? ದೇವ-ಮಾನವರಲ್ಲಿ ವಿರುದ್ಧ ಸ್ವಭಾವವಿರುವುದು ಮಾತ್ರ ಭಕ್ತಿಕಾರಕ ಎಂಬುದು ಅನುಭವದ ಒರೆಗಲ್ಲಿಗೆ ಹತ್ತುವುದೇ?

## ಮಾನವ ಧರ್ಮದ ಅಧ್ಯಾಸ

Anthropomorphic ಎಂಬುದಕ್ಕೆ ಮಾನವನ (self) ಸ್ವತ್ವದ ಎಲ್ಲ ಅಂಶಗಳ ಅರ್ಥವನ್ನೂ ಒಳಪಡಿಸಿಕೊಂಡು ಜೋಡರು ತಮ್ಮ ಸ್ವತ್ವದಲ್ಲಿಲ್ಲದ ವಸ್ತುನಿಷ್ಠ ಸತ್ಯವನ್ನು ತಮ್ಮಿಂದ ಹೊರಗೆ ಎಲ್ಲಿ ಮತ್ತು ಹೇಗೆ ಕಾಣಲು ಅಥವಾ ಊಹಿಸಲು ಶಕ್ತರಾದರು? ಹಾಗೆ ಕಾಣುವ ಭ್ರಮೆಯೂ ಅವರ ಯಾವ Temper ಭಾವನಾವೃತ್ತಿ? ಅಂಥ ವೃತ್ತಿ ಯಾವ ತಾರ್ಕಿಕತೆಗೆ ಹೊಂದುವಂಥದು? ತನ್ನಲ್ಲಿ ಇಲ್ಲದ್ದನ್ನು ಅರಿಯುವುದೇ ಮನಸ್ಸು ಹಾಗೂ ಇಂದ್ರಿಯಗಳ ಶಕ್ತಿ ಎಂಬ ಅವರ ವಾದವು ಅನುಭವಕ್ಕೆ ತೀರ ವಿರುದ್ಧವಾದುದು, ವಿಜ್ಞಾನದಿಂದ ಪರಾಸ್ತವಾದುದು. ಬೆಳಕಿನ ಅಂಶ ಗಣ್ಯವಾಗಿ ಇಲ್ಲದ ಕಣ್ಣು ಬೆಳಕನ್ನು ಕಾಣಬಲ್ಲವೇ? ಸದ್ದಿನ ಅಂಶ ಶ್ರವಣೇಂದ್ರಿಯದಲ್ಲಿಲ್ಲದೆ ಅದು ಸದ್ದನ್ನು ಹೇಗೆ ಗುರುತಿಸಬಲ್ಲದು? ಭೌತಿಕ ಪದಾರ್ಥಗಳಿಗೆಲ್ಲ ಗುರುತಿನ ಚುಕ್ಕೆ Identity Mark ಇರುವುದೇನು? ಆ ಚುಕ್ಕೆಗಳ Reckoner ಕೋಷ್ಟಕ ಮನಸ್ಸಿನಲ್ಲಿ ಅಥವಾ ಇಂದ್ರಿಯಗಳಲ್ಲಿ ಯಾರು ಬಯ್ತಿಟ್ಟಿದ್ದಾರೆ? ಆಯಾ ಗುಣವನ್ನು ಆಯಾ ಇಂದ್ರಿಯವೇ ಗ್ರಹಿಸಲು ಅದದರ ವಿಪರೀತ ಧರ್ಮಜ್ಞತೆಯೇ ಕಾರಣವಾಗಿದ್ದರೆ (ವಿಪರೀತತೆಯು ಭಿನ್ನತೆಯ ಒಂದು ಅಂಗವಾಗಿರುವುದರಿಂದ) ಎಲ್ಲ ಇಂದ್ರಿಯ ಪ್ರತ್ಯಕ್ಷಗಳು ಇಂದ್ರಿಯಗಳ ವೈರಿಗಳಾಗುವುದರಿಂದ (ವೈರ-ವಿರೋಧ ಮತ್ತು ಭೇದಗಳನ್ನು ನಿಶ್ಚಿತಗೊಳಿಸಲು ಸಾಧ್ಯವಾಗದುದರಿಂದ) ಯಾವುದಾದರೂ ಇಂದ್ರಿಯವು ಯಾವುದಾದರೂ ಗುಣವನ್ನು ಗ್ರಹಿಸುವ ಸಂದರ್ಭ ಉಂಟಾಗುತ್ತದೆ. ತತ್ಸಾಮ್ಯ ಹೋಗಿ ತದ್ವಿರೋಧ (ತದ್ಭೇದ) ಬರುವುದು ಪ್ರತ್ಯಕ್ಷಾನುಭವದ ಪ್ರಕ್ರಿಯೆಗೆ ಅಸಂಬದ್ಧ. ಪ್ರತ್ಯಕ್ಷದಲ್ಲಿ ಇಂದ್ರಿಯ-ಮನಗಳ ಸಹಕೃತ ಕ್ರಿಯೆ ಇದೆ. ಶುದ್ಧ ಸಂವೇದನೆ ಎಂಬುದು ಅಜ್ಞೇಯ; ಹಾಗೇ ಶುದ್ಧ ಭಾವನೆ-ಶುದ್ಧ ಇಚ್ಛೆಗಳೂ ಅಜ್ಞೇಯ-ಎಲ್ಲ ಜ್ಞಾನವೂ congnitive ಬೌದ್ಧಿಕ ಕ್ರಿಯಾಜನ್ಯವಾಗಿರುವುದರಿಂದ. "ಬುದ್ಧಿನಾಶಾತ್ ಪ್ರಣಶ್ಯತಿ." ಜ್ಞಾತೃ-ಜ್ಞೇಯಗಳ ಆತ್ಯಂತಿಕ ಪ್ರತ್ಯೇಕತೆ ನಿತ್ಯವಾಗಿರುವುದು ಎಂದೂ ಜ್ಞಾನದ ಪೂರ್ಣತೆಯನ್ನು ಸಾಧಿಸಿ ಕೊಡದೆಂಬುದನ್ನು ತರ್ಕದ (ಊಹೆಯ) ಸ್ವಭಾವಗತ ತರ್ಕ ನಿಯಮವನ್ನು ಬಲ್ಲವರಿಗೆ ಬಿಡಿಸಿ ಹೇಳಬೇಕಾಗಿಲ್ಲ. ಅಪೂರ್ಣ ಜ್ಞಾನವು ಅಪೂರ್ಣ ಸತ್ಯ ಅಥವಾ ಸುಳ್ಳು ಇಲ್ಲವೆ ಸತ್ಯಾಂಶ. ಪೂರ್ಣ ಅಸತ್ಯವು ಮಾನವನ ಕಲ್ಪನೆಗೆ (ಊಹೆಗೆ, ತರ್ಕಕ್ಕೆ) ಮೀರಿದ್ದು. ಪೂರ್ಣ ಅಸತ್ಯದ ಅಸ್ತಿತ್ವದ ಪೂರ್ಣತೆ ಅಥವಾ

ಪೂರ್ಣ ಸತ್ಯತ್ವ ಕೇವಲ ಮುಗಿಲ ಹೂವಿನಂಥ ಕಲ್ಪನಾಭಾಸ. ಆದುದರಿಂದ ಪ್ರತಿಯೊಂದು ಸುಳ್ಳೂ (ಅಭಾವವೂ) ಆಂಶಿಕ ಮತ್ತು ಸಾಪೇಕ್ಷ. ಪ್ರತಿಯೊಂದು ನಾನಾತ್ವ ಪರಿಹಿತ ಪದಾರ್ಥವೂ ತರ್ಕಶುದ್ಧವಾಗಿ ಅಪೂರ್ಣ. ಸಾಪೇಕ್ಷ ಪೂರ್ಣತೆಯು ನಿರಪೇಕ್ಷ ಪೂರ್ಣತೆಯಲ್ಲ. (ಕರ್ತೃ–ಕರ್ಮ) ಜ್ಞಾತೃಜ್ಞೇಯಗಳ ತಾದಾತ್ಮ್ಯ ಭಾವ ಕ್ಷಣಿಕವಾಗಿಯಾದರೂ ಆಗಲೇ ಬೇಕೆಂಬುದು ವ್ಯಾವಹಾರಿಕ ಅನುಭವದ ನಿಯಮ. ಪಾರಮಾರ್ಥಿಕ ಅನುಭವವು ಎಲ್ಲರಿಗೂ ಎಲ್ಲ ಅವಧಿಗಳಲ್ಲೂ ಕ್ಷಣಿಕವೆಂದು ಹಟ ಮಾಡುವುದು ಸಿದ್ಧಾಂತವೆನ್ನಿಸದು. ಜೋಡರಂಥ ಅಯೋಗಿಯು ಅದನ್ನು ಬುದ್ಧ್ಯತೀತ, ಶಬ್ದಾತೀತ, ದಿಕ್ಕಾಲಾತೀತ ಎಂದು ಒಪ್ಪಿದ ಮೇಲೆ, ಯೋಗಿಗಳು ಹೇಳಿದ ಅನುಭವ ಅವರಿಗಾಗಿಲ್ಲ ಮತ್ತು ಅವರು ಐಕ್ಯಾನುಭವವೆಂದದ್ದು ಭೇದಾನುಭವ ಎಂಬುದು ಸರ್ವಥಾ ನಿರಾಧಾರವಾದ ಪೂರ್ವಗ್ರಹ. ವಿಜ್ಞಾನಿಯು ಜಲಜನಕವನ್ನು ಅರಿಯುವುದು ಅಪೂರ್ಣಜ್ಞಾನ; ಆ ಜ್ಞಾನಕ್ರಿಯೆಯಲ್ಲಿ ಅವನು (ಆ ಕ್ರಿಯೆಯ ಅವಧಿಯಲ್ಲಿ) ತಲ್ಲೀನನಾದದ್ದು ಅಪೂರ್ಣಾಂಶದ್ದು. ಮಾನವನ ಅರಿವಿನ ಪ್ರತಿಯೊಂದು ಸಾಧನದ ಶಕ್ತಿಯೂ ಅಪೂರ್ಣ; ಅಪೂರ್ಣವು ಪೂರ್ಣವನ್ನು ಪೂರ್ಣವಾಗಿ ಗ್ರಹಿಸಲಾರದೆಂಬುದನ್ನು ಒಪ್ಪಿಕೊಂಡವರು ಮಾನವನ Self-transcendence ಸ್ವಾತೀತತೆಯನ್ನು ಆಧರಿಸದೆ ಪೂರ್ಣಸತ್ಯದ ಸಾಕ್ಷಾತ್ಕಾರದ ಮಾತನ್ನು ಎತ್ತಲು ಅಧಿಕಾರ ಉಳ್ಳವರಾಗಲಾರರು. ವ್ಯಕ್ತಿಯ ಪೂರ್ಣತ್ವವು ಸಾಪೇಕ್ಷ; ಅದು ಪರಮ ಪೂರ್ಣತೆಯೆನ್ನಿಸದು. ಸಾಪೇಕ್ಷ ಅಪೂರ್ಣತೆ–ಸಾಪೇಕ್ಷ ಪೂರ್ಣತೆಗಳು ಸಾಪೇಕ್ಷ ಸತ್ಯ–ಸಾಪೇಕ್ಷ ಸುಳ್ಳುಗಳಂತೆಯೇ ಅಂಶಾಧಿಕ್ಯ–ಅಂಶನ್ಯೂನತೆಗಳಿಂದಷ್ಟೇ ವ್ಯಾವಹಾರಿಕವಾಗಿ ವಿಭಜನೀಯ. ಸಾಮಾನ್ಯಾನುಭವವು ಸಾಮಾನ್ಯವಾಗಿ ಸಾಧ್ಯವಾಗಲು ಸಾಮ್ಯ ಧರ್ಮವೊಂದೇ ಮಾನವ ವ್ಯವಹಾರದಲ್ಲಿ ಆಧಾರ. ವಿರೋಧಕ್ಕೆ ಈ ದೃಷ್ಟಿಯಿಂದ ಸಾಮ್ಯದಷ್ಟು ವ್ಯಾಪಕತ್ವವಿಲ್ಲ. ವಿರುದ್ಧಾನುಭವ ಪ್ರಕಾರಗಳೂ ಹತ್ತು ಜನರಿಗೆ ಏಕಪ್ರಕಾರವಾಗಿ ಆಗುವುದರ ಹಿಂದೆ ಸಾಮ್ಯ ಸೂತ್ರದ ಪಂಚಾಂಗವಿದೆ. ಜಡ–ಜೀವ, ಹಿಂಸೆ–ಅಹಿಂಸೆ, ಒಳಿತು–ಕೆಡಕು, ಉಪಯುಕ್ತ–ನಿರುಪಯುಕ್ತ, ವಿಧಿ–ನಿಷೇಧ (ಅನುಷೇಧ–ನಿಷೇಧ), ಸತ್ಯ–ಅಸತ್ಯ, ಸುಖ–ದುಃಖ, ಲಾಭ–ಅಲಾಭ, ವೃದ್ಧಿ–ಕ್ಷಯಗಳಲ್ಲಿ ಯಾವಾಗಲೂ ಒಟ್ಟಿನಲ್ಲಿ ಈ ಸೃಷ್ಟಿಯು ಜೀವನ ಪರಂಪರಾಸಾತತ್ಯದ ದೃಷ್ಟಿಯಿಂದ ಜೀವನಾನುಕೂಲ ಧರ್ಮಗಳನ್ನು ಜೀವನ ಪ್ರತಿಕೂಲ ಧರ್ಮಗಳಿಗಿಂತ ಸ್ವಲ್ಪವಾದರೂ ಹೆಚ್ಚಂಶ ಉಳ್ಳದ್ದಾಗಿದೆ–ಎಂಬುದು ವ್ಯಾವಹಾರಿಕ.

## ಕೆಲ ಕಲ್ಪನೆಗಳ ಸ್ಪಷ್ಟೀಕರಣ

ವ್ಯಾವಹಾರಿಕವೆಲ್ಲವೂ ಸಾಪೇಕ್ಷವಾದುದರಿಂದ ಅದರ ನಿಯಮಗಳನ್ನಾಧರಿಸಿ ನಿರಪೇಕ್ಷ ಪರಮಸತ್ಯವನ್ನು ಅಳೆಯಹೋಗುವುದು ಅವೈಜ್ಞಾನಿಕ ತರ್ಕ, ಅಸಂಬದ್ಧ ಊಹೆ. Existential condition of experience-sensuous, mental or spiritual ಅನುಭವದ ಅಸ್ತಿತ್ವದ ಅವಧಿಯಲ್ಲಿ ಆ ಅನುಭವ ಐಂದ್ರಿಯ, ಮಾನಸ ಅಥವಾ ಆತ್ಮಿಕವಾಗಿರಬಹುದು–ಅದೆಂದೂ ಜ್ಞಾತೃತ್ವದ ಪ್ರಜ್ಞೆಯನ್ನು ಉಳ್ಳದ್ದಾಗಿರದು; ಆ ಪ್ರಜ್ಞೆಯಿರುವುದು ಆ ಅನುಭವದ ಸಾಪೇಕ್ಷ ಅಪೂರ್ಣತೆಗೆ ಸಾಕ್ಷಿ. ಉಕ್ತಪ್ರಜ್ಞೆಯ ಉದಯವು ಅನುಭವೋತ್ತರ ಕಾಲೀನ.

ನಿತ್ಯಸಮಾಧಿಯಲ್ಲಿ ಪೂರ್ವೋತ್ತರ ಕಾಲಾವಧಿಗಳ ಪ್ರಶ್ನೆಯೇ ಇಲ್ಲ. ಜ್ಞಾತೃ, ಜ್ಞೇಯ, ಜ್ಞಾನಗಳ ಪ್ರತ್ಯೇಕತೆಯನ್ನು ಆತ್ಯಂತಿಕವೆಂದರೆ ಅವು ಮೂರು ಅಪರ್ಯಾಪ್ತ (ಅಪೂರ್ಣ) ಊಹಾವ್ಯಾಪ್ತಿಯನ್ನು ಉಳ್ಳವುಗಳಾಗಿ ಪರಮ ಸತ್ಯತ್ವದ ಅರ್ಥದಿಂದ ದೂರವಾಗಿ ಹೋಗುವುವು.

ಪ್ರಾಧಾನ್ಯವೆಂಬುದಕ್ಕೂ ಅರ್ಥಪೂರ್ಣವೆಂಬುದಕ್ಕೂ ವ್ಯತ್ಯಾಸವಿಲ್ಲ; ಅದು ವ್ಯಕ್ತಿನಿಷ್ಠ ಮೌಲ್ಯ, ಇದು ವಸ್ತುನಿಷ್ಠ– ಎಂದು ವಿಂಗಡಿಸುವ ಜೋಡತನವು ವ್ಯಕ್ತಿ ನಿಷ್ಠ ಪೂರ್ವಗ್ರಹ. ಯಾವುದು ಯಾರಿಗೆ ಯಾವಾಗ ಅರ್ಥಪೂರ್ಣ? ಎಂಬ ಪ್ರಶ್ನೆಯನ್ನೆತ್ತಿದಾಗ ೨ನೆಯದರ ವಸ್ತುನಿಷ್ಠತೆಯ ಟೊಳ್ಳುತನ ಹೊರಗೆ ಬೀಳುತ್ತದೆ. ವ್ಯವಹಾರದಲ್ಲಿ ವ್ಯಕ್ತಿನಿಷ್ಠತೆ–ವಸ್ತುನಿಷ್ಠತೆಗಳೆರಡೂ ಇತರ ದ್ವಂದ್ವಗಳಂತೆಯೇ ಸಾಪೇಕ್ಷ, ಆಂಶಿಕ, ಆಧಿಕ್ಯ ನ್ಯೂನತೆಗಳಿಂದ ಅರ್ಥಯಿಸಲ್ಪಡುವ ಮೌಲ್ಯಗಳು. ವ್ಯವಹಾರವೇ ಅಪೂರ್ಣವಾಗಿರುವಾಗ ಅದರ ಮೌಲ್ಯಗಳು ಪೂರ್ಣ ಎನ್ನಿಸುವುದೆಂತು? ಜಗತ್ತಿನ ಸರ್ವಲಕ್ಷಣಗಳೂ ಅದರ ಮೌಲ್ಯಕಲ್ಪನೆಯಲ್ಲಿರುತ್ತವೆ. ಯಾವ ಮೌಲ್ಯವೂ ಇಲ್ಲಿ ನಿತ್ಯ, ನಿರಪೇಕ್ಷ, ನಿಷ್ಕ್ರಿಯ, ಅಪರಿವರ್ತನೀಯವೆನ್ನಿಸದು. ಇದಕ್ಕೆ ಆತ್ಯಂತಿಕತೆ ಎಂಬುದೇ ಇಲ್ಲ. ಪರಮಾರ್ಥವೊಂದೇ ಆತ್ಯಂತಿಕ–ಅದು ವ್ಯಾವಹಾರಿಕವಲ್ಲ. ಅವ್ಯಾವಹಾರಿಕವೆನ್ನಿಸಿದ ಪರಮಸತ್ಯದ ಮೌಲ್ಯವನ್ನು ವ್ಯಾವಹಾರಿಕ ಬುದ್ಧಿಯು ಸ್ವಪರಂಪರಾನುಸಾರ ಊಹಿಸ ಹೋಗುವುದು ಹಾಸ್ಯಾಸ್ಪದ. Pure otherness ಶುದ್ಧ ಅನ್ಯತೆಯನ್ನು ಋಷಿ ಕೂಡ ಮೀರಲಾರ ಎಂಬ ಅನಾರ್ಷ ಜೋಡತ್ವವು ಶುದ್ಧ ಹುಚ್ಚುತನ; ಅದಕ್ಕೆ ಆರ್ಷ (ಅನುಭಾವಿಕ, ಯೌಗಿಕ) ಪ್ರಜ್ಞೆ, ಅನೂಹ್ಯ–ದುರೂಹ್ಯವಲ್ಲ! ಹಠಾಶ್ಲೇಷಪರವಾದ ದ್ವಂದ್ವಬುದ್ಧಿಯು ದ್ವಂದ್ವಾತೀತವನ್ನು ಕಲ್ಪಿಸಹೋದಾಗ ಅದೆಂತು ಜಯ ಪಡೆದೀತು? ದ್ವಂದ್ವ ಬದ್ಧತೆಯನ್ನು ಬಿಟ್ಟಾಗಲೇ ದ್ವಂದ್ವಾತೀತದ ಕಲ್ಪನೆ ಹೊಳೆದೀತು. ಭೇದದ ಉಪಾಧಿ (ಉಪಾಧಾನ) ಎಂದಾದರೂ ನಿರುಪಾಧಿಕರ ಕಲ್ಪನೆಯನ್ನು ಅಳವಡಿಸಿಕೊಳ್ಳಬಲ್ಲದೇ? "ಅಹಂ ಬ್ರಹ್ಮಾಸ್ಮಿ" ಎಂಬುದು ಸಮಾಧಿ ಭಂಗ ಹೊಂದಿದಾಗ ಹೇಳುವ ಮಾತು. ಸಮಾಧಿಸ್ಥನಿಗೆ ಉಕ್ತಜ್ಞಾನವಿಲ್ಲ. ಬ್ರಹ್ಮವು (ಮುಕ್ತಸ್ಥಿತಿಯು) ಅಹಂ–ತ್ವಂ ಮುಂತಾದ ದ್ವಂದ್ವಗಳಿಂದ ಮುಕ್ತ. "ತತ್ವಮಸಿ"ಯಂತೆಯೇ ಅದು ವ್ಯಕಾವಹಕಾರಿಕ ವರ್ಣನೆ ಬ್ರಹ್ಮ ಸಮಾಧಿಗೆ ಉತ್ತರಕಾಲೀನ. "ನ ಚತ್ವಂ ನ ಚಾಹಂ ನಚಾಯಂ ಪ್ರಪಂಚಃ"– ಎಂಬುದು ಸಾಕ್ಷಾತ್ಕಾರ. ಬ್ರಹ್ಮತ್ವವು ವ್ಯಕ್ತಿತ್ವ–ಅವ್ಯಕ್ತಿತ್ವಗಳ ಕಲ್ಪನೆಗೆ ಮೀರಿದ್ದು. ಅದರ ಈಶ್ವರತ್ವ, ಸರ್ವತ್ವಗಳು ವ್ಯಾವಹಾರಿಕ ಬುದ್ಧಿ ಮಾಡುವ ವರ್ಣನೆಗಳು. ಯೋಗವಾಣಿಯ ಅರ್ಥವನ್ನು ಗ್ರಹಿಸಹೋಗುವ ಅಮುಕ್ತನು ಮೈತುಂಬ ಕಣ್ಣುಗಳನ್ನು ಉಳ್ಳವನಾದರೂ ಸಾಲದು. ಹಾಗಾಗದೆ ಯೋಗಿವಾಕ್ಯ ತಪ್ಪು ಅಥವಾ ಅಯೋಗಿಯೇ ಯೋಗಿ ಎಂದು ಮುಂತಾಗಿ ವಾದಿಸುವುದು ಹಠಾತ್ಕಾರ. ಹಠವು ವಿಜ್ಞಾನವೂ ಅಲ್ಲ ತತ್ವಜ್ಞಾನವೂ ಅಲ್ಲ. ಯೋಗಿಯು ತನ್ನ ಅನುಭವವನ್ನು ಸರಿಯಾಗಿ ಹೇಳಲಾರದವನೆಂಬುದಾದರೆ, ತದ್ವಿರುದ್ಧವಾಗಿ ಯೋಗಿಯ ವಾಕ್ಯವನ್ನು ಸರಿಯಾಗಿ ಅಯೋಗಿ ಅರ್ಥಮಾಡಿಕೊಳ್ಳಲಾರ ಎಂದು ಹೇಳುವುದು ಜಾತ್ಯುತ್ತರ. ಭಾಷೆಯು

ವ್ಯವಹಾರಿಕವಾದುದರಿಂದ ಅದರ ಧ್ವನಿಶಕ್ತಿ ಕೂಡ ಪರಿಸೀಮಿತವಾದುದು; ಅದರ ಅಪೂರ್ಣತೆ ಅದರ ಧ್ವನಿಶಕ್ತಿಯ ಅಪೂರ್ಣತೆಗೆ ಕಾರಣ. ಹೀಗಿರುವಾಗ ಅದನ್ನು ಪೂರ್ಣಗೊಳಿಸುವ ಅಯೋಗಿಯ ಹಠಕ್ಕೆಲ್ಲಾದರೂ ಜಯ ಪ್ರಾಪ್ತಿಯ ಸಂಭವವುಂಟೇ? ಇಂಥ ಹಠಾತ್ಕಾರಕ್ಕಿಂತ ಅನುಭವಕ್ಕೆ ಬಾರದುದನ್ನು ನಾನು ನಂಬೆನೆಂಬ ನಾಸ್ತಿಕ್ಯವು ಉತ್ತಮ. ಪ್ರತ್ಯಕ್ಷಾನುಮಾನೋಪಮಾನ ಶಬ್ದಗಳು ಅನುಭವ ಸಾಧನಗಳು; ಅನ್ಯ ಸಾಧನ ಮಾನವನಿಗಿಲ್ಲ; ವಿಜ್ಞಾನವು ಆನುಮಾನಿಕ–ತತ್ವಜ್ಞಾನದಂತೆಯೇ (Speculative philosophy). ಆದುದರಿಂದ ಮಾನವನಿಗೆ ಮಾನವ ಸಾಧಾರಣವಾದ ವ್ಯಾವಹಾರಿಕ ಜ್ಞಾನವೇ ಲೋಕಯಾತ್ರಾ ಸಾಧನ; ಅತ್ಯುಚ್ಚ (ಅಸಂಪ್ರಜ್ಞಾತ) ಸಾಮಾಧಿಕ ಜ್ಞಾನವೇ ಪರಮಾರ್ಥ, ಪರಮತತ್ವದರ್ಶನ. ಸಾಧನತ್ವವಿರುವವರೆಗೆ ಸಾಧ್ಯತ್ವ; ಸಿದ್ಧಿಯಲ್ಲಿ ಸಾಧನ–ಸಾಧ್ಯಗಳ ಭೇದ ಉಳಿಯದು– ಎಂಬುದು ಪರಮಾರ್ಥದ ಸ್ಥಿತಿ. ವ್ಯವಹಾರಾರ್ಥದಲ್ಲಿ ಹೀಗಿಲ್ಲ; ಧರ್ಮತಾದಾತ್ಮ್ಯ ಅದರಿಂದ ಬಲು ದೂರ. Realisation is not speculation ಅನುಭವವು ಊಹೆಯಲ್ಲ; ಸರ್ವಜ್ಞಾನ ಸಾಧನಗಳ ಸಂತೃಪ್ತಿ, ತನ್ಮಯತೆ, ತಾದಾತ್ಮ್ಯನಿತ್ಯತೆ.

## ಅಲ್ಪ ಜಲ್ಪ

ಪೂರ್ವೋಕ್ತ ಗ್ರಂಥದಲ್ಲಿ ಜೋಡರು ೨೫೪ನೆಯ ಪುಟದಲ್ಲಿ, "The contemptuous dismissal of the mystic's vision as subjective feeling, the babling of men beside themselves with solitude and fasting, exciting as intoxication is exciting, but conveying no information with regard to the object that excites, seems to me to be born of the prejudices of common sense– ಯೋಗಿಯ ದರ್ಶನವೊಂದು ಸ್ವಕಪೋಲಕಲ್ಪಿತವಾದ ವ್ಯಕ್ತಿ ನಿಷ್ಠೆ ಊಹೆ, ಏಕಾಂತದಲ್ಲಿ ಉಪವಾಸವಿದ್ದು ತಮ್ಮಿಂದ ಹೊರತಾಗುವಂತೆ ಆಡಿದ ಹುಡುಗಾಟಿಕೆಯ ಮಾತು, ಹೆಂಡದಂತೆ ಭಾವೋದ್ರೇಕಗೊಳಿಸುವಂಥದು, ಆದರೆ ಆ ಉದ್ರೇಚಕ ವಸ್ತುವಿನ ಬಗ್ಗೆ ಏನನ್ನೂ ತಿಳಿಸಲಾರದುದು–ಎಂದು ನಿಂದಿಸಿ ತ್ಯಜಿಸುವುದು ಮಾನವರ ಸಾಮಾನ್ಯ ವಿವೇಕಕ್ಕೆ ಹಿಡಿದ ಪೂರ್ವಗ್ರಹ" ಎಂದು ಹೇಳಿ, ಆಮೇಲೆ ೨೫೫ನೆಯ ಪುಟದಲ್ಲಿ "As with the frog's world so with the mystic's–ಯೋಗಿಯುದು (ಅನುಭಾವಿಯುದು) ಕೂಪಮಂಡೂಕ ಪ್ರಪಂಚ" ಎಂದು ಉದ್ಗರಿಸಿರುವುದು ಎಂಥ ತರ್ಕಸಮನ್ವಯ–ಎಂಬುದನ್ನು ಬಿಡಿಸಿ ಹೇಳಬೇಕಾದುದು ಅನವಶ್ಯಕ. ಪೂರ್ವವಾದಕ್ಕೂ ಕಾರಣಗಳಿವೆ, ಪಶ್ಚಿಮವಾದಕ್ಕೂ (ಉತ್ತರವಾದಕ್ಕೂ) ಕಾರಣಗಳಿವೆ. ಯಾವುದಕ್ಕೆ ವಕೀಲನಲ್ಲಿ ಕಾರಣಗಳಿಲ್ಲ? ಯೋಗಿಯ ಅನುಭವವು ಅತೀಂದ್ರಿಯ, ಅವರ್ಣನೀಯ ಎಂದು ಹೇಳಿ ಅನಂತರ ಯೋಗಿವಾಣಿಗಳು ವಿಪರೀತಾರ್ಥದ್ಯೋತಕಗಳು ಎಂದು ವಾದಿಸಲೂ ಬರುತ್ತದೆ–ಉಕ್ತ ವಕೀಲವೃತ್ತಿಗೆ! As long as there are lawyers no law is perfect–ವಕೀಲರಿರುವವರೆಗೆ ಯಾವ ಕಾಯದೆಯೂ ಪರಿಪೂರ್ಣವಾದುದೆನ್ನಿಸದು! ಹಾಗೆ Man's brain can misuse or misinterpret everything–ಎಲ್ಲವನ್ನೂ ಮಾನವನ ಮಿದುಳು ದುರುಪಯೋಗ

ಮಾಡಬಲ್ಲದು ಅಥವಾ ಅಪಾರ್ಥ ಮಾಡಬಲ್ಲದು. ಈ "ಹಾಗೆ ಹೀಗೆ ಎಂಬಲ್ಪ ಜಲ್ಪಕರ ಜಂಭ"ವನ್ನು ವಿಜ್ಞಾನದ ತಾತ್ವಿಕ ಮುಖಗಳು ಅವಲಂಬಿಸುವುದಾದರೆ, ಅಂಥ ಜಂಭತತ್ವಜ್ಞತೆಯನ್ನು ಕುರಿತು–

**"ನಾ ತೊಟ್ಟ ದೇಹಗಳ ಲೆಕ್ಕ**

**ಇಡುವರಾ ಸೊಕ್ಕ**

**ಯಮಾ ನೋಡಿ ನಕ್ಕ!"**

ಎಂದು ಹೇಳಬೇಕಾಗುತ್ತದೆ!

Mood of Science–ವಿಜ್ಞಾನಿಯ ಸಂಚಾರಿಭಾವವನ್ನು ಒಪ್ಪಿಕೊಳ್ಳುವುದು ವಿಜ್ಞಾನಶುದ್ಧವಾದರೆ ಅದನ್ನೊಪ್ಪಿದವನು ತದಿತರ ಜ್ಞಾನಿಯ ಸಂಚಾರಿಭಾವವನ್ನು ಅಥವಾ Temper ಭಾವನೋನ್ಮುಖತೆಯನ್ನು ಅನಾದೇಯ ಎನ್ನುವುದು ವಿಜ್ಞಾನ ಶುದ್ಧವಾಗದು. ಜಗತ್ತಿಗೆ ಉದ್ದೇಶವಿದೆ ಎಂಬುದು ಮಾನವೀಯ ದೃಷ್ಟಿಯಾದುದರಿಂದ ಅದು ಅವಸ್ತುನಿಷ್ಠವೆಂದರೆ ಉದ್ದೇಶವಿಲ್ಲ ಎಂಬುದು ಹೇಗೆ ಅಮಾನವೀಯವೂ ವಸ್ತುನಿಷ್ಠವೂ ಆದ ಸಿದ್ಧಾಂತವೆನ್ನಲು ಸಾಧ್ಯ? ಉದ್ದೇಶವಿಲ್ಲವೆಂದು ಪ್ರಚುರಪಡಿಸುವುದಕ್ಕೆ ಅನುಷೇಧ ಪ್ರಮಾಣವಿಲ್ಲದಿರುವಾಗ ಹಾಗೆ ಸಾರುವುದರಲ್ಲಿ ವ್ಯಕ್ತಿನಿಷ್ಠವಾದ ಆಂತರಿಕ ಉದ್ದೇಶವೊಂದು ಇದ್ದೇ ಇರಬೇಕು! ಮಾನವತೆಯು ಸರ್ವತ್ರ ಸರ್ವದಾ ಉದ್ದೇಶ ಪರ್ಯಾಯವೇ? ಹಾಗಾದರೆ ಮಾನವ ದೃಷ್ಟಿ ಅಮಾನವ ದೃಷ್ಟಿಯನ್ನು ಅಳವಡಿಸಿಕೊಂಡು ಏನನ್ನು ಹೇಗೆ ಕಾಣಬಲ್ಲದು? ಪರಿಪೂರ್ಣ ನಿರುಪಯೋಗಿತ್ವದ ಮೇಲೆಯೇ ವಿಜ್ಞಾನ ಶೋಧಕನ ಬುದ್ಧಿ ಪ್ರಯತ್ನ ಅವಲಂಬಿಸಿದೆ ಎಂಬುದು ಪೂರ್ಣ ಸತ್ಯವೇ? ಪರಮಾರ್ಥವೇ? ಏಕಮೇವಾದ್ವಿತೀಯ ಸತ್ಯವೇ? ಅದು ಹೇಗಾದೀತು? ಯಾವ ತರ್ಕದಂತೆ? ಅಜ್ಞಾತ ಪ್ರಜ್ಞಾಸ್ತರದ ಅಸ್ತಿತ್ವವನ್ನು ಒಪ್ಪಿಕೊಂಡ ವಾದಿಗೆ ಹೇಗೆ ವಿಜ್ಞಾನ ಬುದ್ಧಿಯೊಂದೇ ನಿರುದ್ದೇಶ, ನಿಷ್ಪ್ರಯೋಜನ, ನಿಷ್ಕಾರಣ, ಆದುದರಿಂದ ನಿಷ್ಪಕ್ಷಪಾತ, ಅಪೂರ್ವಗ್ರಹಿ–ಎಂದು ಹೇಳಲು ಅಧಿಕಾರ ಬರುತ್ತದೆ? ಸತ್ಯವೂ ಒಂದು ಗುರಿ, ಉದ್ದೇಶ, ಪ್ರಯೋಜನ, ಸಮಾಧಾಯಕ ನೀತಿ. ಲೌಕಿಕರಸಮಾಧಾನಗಳು ಯಾವಾಗಲೂ ಅಶುದ್ಧ, ಸಂಮಿಶ್ರ, ಅಪೂರ್ಣ, ನಶ್ವರ, ಪರಿವರ್ತನೀಯ. ನೈತಿಕ ಅಪೇಕ್ಷಣೀಯತೆಯೂ ವಿಚಾರ ಸಾಮಂಜಸ್ಯವೂ ವಿಜ್ಞಾನಸತ್ಯಕ್ಕೆ ಸಮವಾದ ವಸ್ತು ನಿಷ್ಠತೆಯನ್ನು ಉಳ್ಳವುಗಳಲ್ಲ ಎಂಬುದು ವಸ್ತುನಿಷ್ಠವಲ್ಲ, ಪೂರ್ವಗ್ರಹ ಹಿಡಿದ ವ್ಯಕ್ತಿಯಲ್ಲಿ ಮಾತ್ರ ನಿಷ್ಠ. ನೀತಿಯನ್ನೂ ವಿಚಾರವನ್ನೂ ಅವೈಜ್ಞಾನಿಕವೆನ್ನುವವನ ನೀತಿಯೂ ವಿಚಾರವೂ ಎಷ್ಟರ ಮಟ್ಟಿಗೆ ಗ್ರಾಹ್ಯವಾಗಬಹುದು? ನೀತಿವಿಮುಖ ವಿಜ್ಞಾನಿಯ ಶೋಧವು ಎಷ್ಟು ಪ್ರಾಮಾಣಿಕವಾಗಿರಬಲ್ಲದು? ಎಂಥ ಸದುದ್ದೇಶದಿಂದ ಕೂಡಿರಬಲ್ಲದು? ಉದ್ದೇಶರಹಿತವಾದ ಸತ್ಯವೆಂಬುದರ ಅಸ್ತಿತ್ವಕ್ಕೆ ಪ್ರಮಾಣವನ್ನು ಯಾವ ವಿಜ್ಞಾನಿ ಒದಗಿಸಿಕೊಡಬಲ್ಲ? ಮಾವಿನ ಹಣ್ಣು ಭೂಮಿಗೆ ಬೀಳುವುದು ಮನುಷ್ಯ ತಿನ್ನಲೆಂದೇ ಎಂಬುದು ನಿಸರ್ಗದ ಪರಮೋದ್ದೇಶವಾಗಿರಲಾರದು; ಆದರೆ ಸಂತಾನದಲ್ಲಿ ತಾನು ಅಮರನಾಗಬೇಕೆಂಬ ಮಾವಿನ ನಿಸರ್ಗರೂಪದ ಒಳದನಿ ಅದರ

ಪರಮೋದ್ದೇಶವಾಗಿರಲೇಬೇಕು. ವ್ಯಕ್ತಿ ಪದಾರ್ಥಗಳು ಅನೇಕ, ಅವುಗಳ ಉದ್ದೇಶಗಳು ಅನೇಕ, ಅವುಗಳಲ್ಲಿ ಬರುವ ಸಂಘರ್ಷಅನೇಕ; ಅವುಗಳೆಲ್ಲವುಗಳಲ್ಲೂ ಪ್ರತ್ಯೇಕ ಉದ್ದೇಶವನ್ನಿಟ್ಟ ನಿಸರ್ಗದ ಉದ್ದೇಶವು ವ್ಯಾವಹಾರಿಕವಾಗಿ ನಾನಾತ್ವದ ಆಭಾಸವನ್ನು ಮೆರೆಯಿಸುವುದೇ ಆಗಿದೆ. ಇಚ್ಛಾಶಕ್ತಿ ಹೇಗೋ ಹಾಗೇ ನಿಸರ್ಗ ಪ್ರಕೃತಿ, ಸ್ವಭಾವ ಎಂಬುದು ಉದ್ದೇಶ ಸ್ವಾತಂತ್ರ್ಯದಿಂದ ಕಾರ್ಯ–ಕಾರಣ ಯಂತ್ರನೀತಿಯನ್ನು ಮೀರಿ ನಿಲ್ಲುವಂಥದು. ಮೂಲ ಕಾರಣವಾದ ಮಾಯೆಯು ಪರಾಪ್ರಕೃತಿ; ಅದು ಕಾರಣಾತೀತ, ಪ್ರಶ್ನಾತೀತ, ಲೀಲಾನ್ಯಾಯಕಲ್ಪಿತ–ಎಂಬುದು ತಾದರ್ಥ್ಯ ಸಿದ್ಧ.

## ದ್ವೇಷಮೂಲ ವಾದ

Reverence, (awe) derogation (degradation) grandeur ಭಯ, ಗೌರವ, ಆದರ, ಪ್ರೇಮ, ಕೀಳುತನ, ವೈಭವಸಂಪನ್ನತೆ ಮುಂತಾದ ಭಾವನೆಗಳು ದಿವ್ಯಾನುಭೂತಿಯ ಗ್ರಾಹ್ಯತೆ–ತ್ಯಾಜ್ಯತೆಗಳಿಗೆ ನಿಕಷಗಳೆಂದು ಹೇಳುವ ವಾಕ್ ಪರಾಕ್ರಮಿಯು ವಿಜ್ಞಾನಿಯೂ ಅಲ್ಲ, ತತ್ವಜ್ಞಾನಿಯೂ ಅಲ್ಲ, ತಾರ್ಕಿಕನೂ ಅಲ್ಲ. ಲೋಕಸ್ಥ ವಿಜ್ಞಾನದ ಸತ್ಯವು ಸುಪ್ರಸಿದ್ಧವಾಗಿ ಭಾವನಾತೀತ; ತತ್ವಜ್ಞಾನವು ಲೌಕಿಕಭಾವನಾತೀತ; ತರ್ಕವೂ ವಿಜ್ಞಾನದಂತೆಯೇ ಯಾಂತ್ರಿಕ. ಸಂಚಾರಿಭಾವದಲ್ಲಿ ವೈಜ್ಞಾನಿಕ–ಅವೈಜ್ಞಾನಿಕ ಎಂದು ವಿಂಗಡಿಸುವ ವಿಜ್ಞಾನ ಕಲ್ಪನೆ ಜೋಡ ಕಪೋಲಕಲ್ಪಿತ (ಪುಟ ೨೫೨). ಅದ್ವೈತಿ ವರ್ಗವನ್ನು ಅಕಾರಣವಾಗಿ Malicious ಅಸೂಯಾಪರವೆಂದು ಆರೋಪಿಸುವ ಸಾಂತಾಯನತೆಯು ಮೂಲತಃ ಅಸೂಯಾಪರ; ಅದಕ್ಕೆ ಆ ವರ್ಗದ ಸಿದ್ಧಾಂತದ ಪ್ರಖ್ಯಾತಿಯ ಬಗ್ಗೆ ಸಹನೆಯಿಲ್ಲ. ಮಾಯೆ–ಬ್ರಹ್ಮಗಳು ನಿತ್ಯಪ್ರತ್ಯೇಕತೆಯನ್ನುಳ್ಳ ಎರಡು ಆತ್ಯಂತಿಕ ಪದಾರ್ಥಗಳೆಂದು ಶಂಕರಾದ್ವೈತ ಹೇಳಿದೆ ಎಂಬ ಮಿಥ್ಯಾವಾದಿಯ ಅದ್ವೈತಜ್ಞಾನಕ್ಕೂ ಜೋಡರೇ ಆಧಾರ. ಸೃಷ್ಟಿಗತವಾದ ಜೀವಿಗಳು ಎಂದೋ ಒಂದು ದಿನ ಜೀವ ವಿಕಾಸಕ್ಕಾರಂಭಿಸಿ ಏರುತ್ತ ಏರುತ್ತ ಇಂದಿನ ಉನ್ನತತರ ವಿಜ್ಞಾನಜ್ಞತೆಯ ಮಟ್ಟಕ್ಕೆ ಬಂದು ಮುಟ್ಟಿವೆ ಎಂಬ ಅಪ್ರಮಾಣ ಸಿದ್ಧಾಂತವನ್ನು ನಂಬಿ ವಾದಿಸುವ ನಾನಾತ್ವಪಂಥಿಯು ಆಶ್ರಯಾಸಿದ್ಧ ಹೇತ್ವಾಭಾಸ ಸ್ವರೂಪದವನು. ವಿಜ್ಞಾನಜ್ಞತೆಯ ಮಟ್ಟದ ಅಧಿಕೋನ್ನತಿಯು ಸ್ವರೂಪಾಸಿದ್ಧ ಹೇತ್ವಾಭಾಸ; ಜೀವನವು "ವಿಜ್ಞಾನೈಕ" ತಾರಕತೆಯನ್ನು ಸಾರವನ್ನಾಗಿ ಉಳ್ಳದ್ದಲ್ಲ; ಆಧುನಿಕ ವಿಜ್ಞಾನವಷ್ಟೇ ವಿಜ್ಞಾನವೂ ಅಲ್ಲ; ಭೌತಿಕ ಪ್ರಯೋಗ ಸಿದ್ಧತೆಯೊಂದೇ ವಿಜ್ಞಾನ ಸತ್ಯಕ್ಕೆ ಒರೆಗಲ್ಲೂ ಅಲ್ಲ; ಭೌತಿಕ ಪದಾರ್ಥಕ್ಕೆ ಭೌತಿಕ ಉಪಕರಣ ಧ್ವನಿಸುವ ಅರ್ಥವೊಂದೇ ಸಾರಭೂತ ವಸ್ತುನಿಷ್ಠ ಉನ್ನತತರ ಅರ್ಥವೂ ಅಲ್ಲ. ಭೌತಿಕದ ಅತಿವ್ಯಾಪ್ತಿಯು ಜೀವನ–ಪ್ರಪಂಚಗಳ ತರ್ಕಶುದ್ಧ ಅರ್ಥವನ್ನು ಹೇಳಲಾರದು. ಪ್ರಪಂಚದೊಳಗಿನ ಮಾನವನ ಬುದ್ಧಿಯು ಪ್ರಪಂಚ ತನ್ನಿಂದ ಹೊರಗಿನದು– ಹೊರ ಪ್ರಪಂಚವಷ್ಟೇ ವಸ್ತುನಿಷ್ಠ––ಎಂದು ವಾದಿಸುವುದು ವಾದವಿದ್ಯಾಹೀನರಿಗಷ್ಟೇ ಭೂಷಣ.

**ಅಪತರ್ಕ**

ಉನ್ನತತರವೆನ್ನಿಸಿದ ತರ್ಕಾತೀತ ಜಾಗರಸ್ಥಿತಿಗೆ ತರ್ಕಪ್ರಕ್ರಿಯೆಯು ಒಯ್ದು ಮುಟ್ಟಿಸಬಲ್ಲದೆಂಬ ಛಲವು ತರ್ಕಕ್ಕೆ ಸ್ವರೂಪತಃ ಅಸಿದ್ಧ; ಅದು ಸೂರ್ಯನ ಬೆಳಕಿನ ಸಾಮಾನ್ಯ ಪಾರ್ಥಿವ ನೋಟದ ಮೂಲಕ ಕತ್ತಲಲ್ಲಿ ಮುಳುಗಬಹುದೆಂಬಷ್ಟೇ ತರ್ಕ ಸಮಂಜಸ; ಅಥವಾ ಕಪ್ಪು ಬಣ್ಣವನ್ನು ಗೋಡೆಗೆ ಬಳಿಯುತ್ತ ಹೋದರೆ ಗೋಡೆ ಬೆಳ್ಳಗಾಗುವುದೆಂಬಷ್ಟೇ ಸಮಾಧಾನಕರ. ತರ್ಕಸ್ಥಲ, ತರ್ಕಾತೀತಸ್ಥಲಗಳು ಭಿನ್ನ ತಾರ್ಕಿಕತೆಯೆಂದು ಅತಾರ್ಕಿಕತೆಗೇರಿಸಿ ಬುದ್ಧಿಗೆ ಪ್ರಶಸ್ತಿದಾನವನ್ನು ಮಾಡಬಾರದು. "ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ"–– ಆದ್ದರಿಂದ ಅಸಂಯಮವು ಸಂಯಮಸ್ಥಿತಿಗೊಯ್ದು ಯಾರನ್ನೂ ಮುಟ್ಟಿಸದು; ಅಜ್ಞಾನವೆಂದೂ ಜ್ಞಾನಕ್ಕೆ ಅಸಾಧಾರಣ ಕಾರಣವಾಗದು.

ಐಂದ್ರಿಯಿಕ ಆಕೃತಿ ಸಾಮಂಜಸ್ಯದ ಮೇಲೆ ನಿಂತ ಸೌಂದರ್ಯವು ನಿರಾಕಾರ ಸಾಕ್ಷಾತ್ಕಾರದಲ್ಲಿ ಇಲ್ಲ; ಸಾಕಾರ ಪ್ರಪಂಚದ "ಸತ್ಯತೆ" ನಿರಾಕಾರದ ಅನುಭವದಲ್ಲಿಲ್ಲ; ಆಕಾರಾವಲಂಬಿಯಾದ ಒಳಿತು – ಕೇಡುಗಳು ನಿರಾಕಾರಕ್ಕಿಲ್ಲ. ಆಕಾರದ ಉಪಯುಕ್ತತೆ ನಿರಾಕಾರಕ್ಕಿರದು. ಆಕೃತವು ಪ್ರಮೇಯ, ನಿರಾಕೃತವು ಅಪ್ರಮೇಯ–ಅದನ್ನು ಆಕರಿಸುವವನು ಇದನ್ನು ನಿರಾಕರಿಸಿಯೇ ತೀರುತ್ತಾನೆ. ಆಕಾರ–ಅನಾಕಾರಗಳಲ್ಲಿ ಸಮಸತ್ಯತೆ ಇರುವಂತೆ ಮಾತಾಡುವುದು ಪರಮಾಂಧತೆ. ಅವುಗಳಲ್ಲಿರುವುದು ಮೋಕ್ಷ – ನೀವೀಮೋಕ್ಷಗಳಲ್ಲಿರುವಂಥದೇ ಸಂಬಂಧ!

ಮುಕ್ತಿಯ ಐಕ್ಯ–> ತಲ್ಲಯ –> ವಿನಾಶಗಳು ಕಾರಣ ಕಾರ್ಯ ಸಂಬಂಧ ಉಳ್ಳವುಗಳೆಂಬುದು ಜೋಡವಾದ. ಇಲ್ಲಿ ಐಕ್ಯವನ್ನು ಅನ್ವಯವೆಂದು ಅರ್ಥಮಾಡಿ, ಅನ್ವಯದ ಪ್ರಮಾಣ ಅಧಿಕವಾದರೆ (ಗಡಿಮೀರಿದರೆ) ತಲ್ಲೀನತೆ (ತದಂತರ್ಗತತೆ) ಬರುವುದೆಂದೂ ಅದು ಗಡಿ ಮೀರಿ ಹೆಚ್ಚಾದರೆ ಸಾಧಕನ ಸರ್ವಸ್ವವು ನಾಶವಾಗುವುದೆಂದೂ ಭೌತಿಕ ಘನಪದಾರ್ಥದ ಕಲ್ಪನೆಯನ್ನು ಆಧರಿಸಿ ತರ್ಕಿಸಲಾಗಿದೆ. ಘನಪದಾರ್ಥದ ನ್ಯಾಯವು ಘನತ್ವ–ದ್ರವತ್ವ ಅನಿಲತ್ವಗಳಿಗೆ ನಿರಪೇಕ್ಷವಾದ ಮುಕ್ತಿಗೆ ಅನ್ವಯಿಸುವುದೆಂತು? ಸಾಧಕತ್ವವು ನಾಶವಾಗದೆ ಸಿದ್ಧತ್ವ ಬರುವುದೆಂತು? ಸಿದ್ಧತ್ವ ಬೇಕಾದವನು ಸಾಧಕತ್ವದ ನಾಶವನ್ನು "ಮುಕ್ತಿ" ಎಂಬನಲ್ಲದೆ ನಾಶವೆನ್ನನು. "ನಾಶ"ವಿಲ್ಲದೆ ಹುಟ್ಟು ಇಲ್ಲ, ಆವಿರ್ಭಾವವೂ ಇಲ್ಲ, ಶೋಧಿತತೆಯೂ ಇಲ್ಲ. ಅನುಭವಿಗೆ ಗ್ರಾಹ್ಯದ ನಾಶವು ನಾಶ, ತ್ಯಾಜ್ಯದ ನಾಶವು ನಾಶವಲ್ಲ. ಸಿದ್ಧತ್ವವು ಅಪೇಕ್ಷಣೀಯವಲ್ಲವೆಂಬವನು ಅಸಿದ್ಧ ಸಾಧಕನಿಗಿಂತಲೂ ಕನಿಷ್ಠ. ಬಂಧವನ್ನು ಮೋಕ್ಷವೆಂಬುದೂ ಒಂದೇ, ದ್ವಿತ್ವ–ನಾನಾತ್ವಗಳ ಆತ್ಯಂತಿಕತೆ ಆಧ್ಯಾತ್ಮಿಕ ಪರಮಾನುಭೂತಿ ಎಂಬುದೂ ಒಂದೇ. "ದುನಿಯಾ ಮುಝುಕೋ ಕಹತೀ ಪಾಗಲ್, ಮೈ ಉಸಕೋ ಕಹತೀ ಪಾಗಲ್!"

Scientific, physical and sensuous ವೈಜ್ಞಾನಿಕ, ಭೌತಿಕ ಮತ್ತು ಐಂದ್ರಿಯಕ ಹಾಗೂ Mystic ಯೌಗಿಕ ಸತ್ಯ ಪ್ರಪಂಚಗಳೆಂದು ನಾಲ್ಕು ವಿಭಾಗಗಳನ್ನು ಜೋಡರೇಕೆ

ಮಾಡಿದರು? ಸ್ವಪ್ನ ಪ್ರಪಂಚ, ಉನ್ಮತ್ತ ಪ್ರಪಂಚಗಳಿಗೂ ಸಮಾನವಾದ ವಸ್ತುನಿಷ್ಠ ಸತ್ಯತೆಯನ್ನು ಕೊಡಬಹುದು. ವೈದ್ಯುತ, ವೈಚಾರಿಕ, ಐಂದ್ರಿಯಿಕ, ಯೌಗಿಕ, ಸ್ವಾಪ್ನಿಕ ಮತ್ತು ಔನ್ಮತ್ತಿಕ ಪ್ರಪಂಚಗಳಲ್ಲಿ ಎಲ್ಲವನ್ನೂ ಸಮಾನಸತ್ಯತೆಯನ್ನುಳ್ಳವುಗಳೆನ್ನವುದೂ ಕೆಲವಕ್ಕೆ ಮಾತ್ರ ಸತ್ಯತೆ (ವಸ್ತುನಿಷ್ಠ ನಿತ್ಯಾಸ್ತಿತ್ವ) ಉಂಟೆಂಬುದೂ ಪೂರ್ವಾಪರ ಜ್ಞಾನವಿಲ್ಲದವರ ವಾದ, ಸತ್ಯಾರ್ಥದ ಪರಿವರ್ತನೀಯತೆಯನ್ನು ಕಲ್ಪಿಸಿಕೊಂಡವರ ಪಂಥ. ಪರಿವರ್ತನವು ಭ್ರಮಣ, ಭ್ರಮೆ; ವಿಕಾಸವು ವಿಕಾರ–ಆಕಾರವಲ್ಲ; ಅರಳಿದ್ದು ಮರಳದಿರದು ಏರಿದ್ದು ಇಳಿಯದಿರದು. ದ್ವಂದ್ವಾತೀತಕ್ಕೆ ದ್ವಂದ್ವದ ಕಲ್ಪನೆಯೊಂದೂ ಅನ್ವಯಿಸದು.

ಜಗತ್ತು ಅಪೂರ್ಣವಾಗಿರುವಾಗ ಅದರ ಸತ್ಯವು ಅಪೂರ್ಣ. (ಗುಣ–ಗುಣವತೋರಭೇದಃ) ಗುಣ–ಗುಣಿಗಳು ಅಭಿನ್ನ. ಇದರಲ್ಲಿ ನಾನಾ ಗುಣಿಗಳು ನಾನಾ ಬಗೆಯ ಆನುಷೇಧಿಕ ಸತ್ಯಗಳು. ಅವುಗಳ ಸಾಪೇಕ್ಷ ಪೂರ್ಣಾಂಕದ ಭಿನ್ನರಾಶಿಗಳು ಆಂಶಿಕ ಸತ್ಯಗಳು ಎಂಬುದು ವ್ಯಾವಹಾರಿಕ. ಪರಮಾರ್ಥದ ಅದ್ವೈತಕ್ಕೆ ವ್ಯವಹಾರ ಜಾಗರವಿರದುದರಿಂದ ಅದಕ್ಕೆ ಮಾತ್ರ ಇದಿಲ್ಲವಷ್ಟೇ ಅಲ್ಲದೇ, ವ್ಯವಹಾರದಲ್ಲೂ ಇದಿಲ್ಲವೆಂಬ ಜೋಡತನವು ಮೂಢತನ. ಗ್ರಾಹ್ಯತ್ವ–ತ್ಯಾಜ್ಯತ್ವಗಳೆಂಬ ದ್ವಂದ್ವದಿಂದ ಪರಮಾರ್ಥವು ಅತೀತವಾಗಿದೆ; ಅದು ವಸ್ತುತಂತ್ರ, ಪುರುಷತಂತ್ರವಲ್ಲ–ಪುರುಷೇಚ್ಛಾಧೀನವಲ್ಲ. ಪ್ರಪಂಚದ ವಸ್ತುನಿಷ್ಠತೆ ಸಾಪೇಕ್ಷವೆಂದರೆ ಪುರುಷೇಚ್ಛಾಧೀನವೆಂದರ್ಥ; ವೈಜ್ಞಾನಿಕ ಸತ್ಯವೂ ಅಷ್ಟೇ,ವೈಚಾರಿಕ ಸತ್ಯವೂ ಅಷ್ಟೇ. ಪ್ರತ್ಯಕ್ಷವೂ ಇದಕ್ಕೆ ಹೊರತಲ್ಲ. ಪುರುಷೇಚ್ಛೆಯೊಮ್ಮೆ ಅಜ್ಞಾತವಾಗಿರಬಹುದು, ಒಮ್ಮೆ ಜ್ಞಾತವಾಗಿರಬಹುದು. ತನ್ನ ತನ್ನ ಅಪೂರ್ಣತೆಯ ಅನುಭವವೇ ಮಾನವನಿಗೆ ಜಗತ್ತು ಅಪೂರ್ಣವೆಂದು (ಸಾಪೇಕ್ಷ) ತಿಳಿದುಕೊಳ್ಳಲು ಆಧಾರ. ಮಾನವಾನುಭವದ ಸಾಮಾನ್ಯತೆಯೇ ವಸ್ತು ನಿಷ್ಠತೆಗೆ ಸಾಕ್ಷಿ. ಅದು Inter-subjective commonness of a group ಒಂದು ಗುಂಪಿನ ಅಂತರ್ ವೈಯಕ್ತಿಕ ಸಾಧಾರಣತೆ. ಜಗತ್ತಿನ ೧೨ ಮಹಾಗಣಿತಜ್ಞರಿಗೂ ಸಮರ್ಪಕವಾಗಿ ತಿಳಿಯದೆ ಹೋಗಿದ್ದರೆ, ಆಲ್ಬರ್ಟ್ ಐನ್‌ಸ್ಟೀನನ ಸಾಪೇಕ್ಷತಾವಾದದ ಗಣಿತಾಧಾರವು ಅವಸ್ತುನಿಷ್ಠವೆಂದು ತ್ಯಾಜ್ಯವಾಗುತ್ತಿತ್ತು. ಜಗತ್ತಿನ ಹಾಗೂ ಅದರಲ್ಲಿರುವ ಪದಾರ್ಥಗಳ ವಸ್ತುನಿಷ್ಠತೆಯು ಸಾಪೇಕ್ಷ, ಅಪೂರ್ಣ. ಪೂರ್ಣ ಅವೈಯಕ್ತಿಕತೆಯಾದ ಬ್ರಹ್ಮವು (ಮುಕ್ತಾವಸ್ಥೆ) ಪೂರ್ಣನಿರಪೇಕ್ಷ; ಪೂರ್ಣ ವೈಯಕ್ತಿಕತೆಯಾದ ಸ್ವಾರ್ಥಮಗ್ನತೆಯು ನೂರಕ್ಕೆ ೯೯.೯° ಪುನರಾವೃತ್ತಿಯಷ್ಟು ಅಪೂರ್ಣ ಮತ್ತು ಪರಾವಲಂಬನಾಪೇಕ್ಷ. ನರಪುರುಷತ್ವವು ಸಾಪೇಕ್ಷ, ದೇವ (ಬ್ರಹ್ಮ) ಪುರುಷತ್ವವು ನಿರಪೇಕ್ಷ. ಪುರುಷತ್ವವು ಶಕ್ತಿಕೇಂದ್ರ. ಶಕ್ತಿಯು ಕಾರ್ಯೋತ್ಪಾದಕ ಗುಣ. ಕಾರ್ಯವು ಜಗತ್. ಅಕಾರ್ಯವು ಬ್ರಹ್ಮ. ಶುದ್ಧ ಜಾಗರ ಅಕಾರ್ಯ, ಮಿಶ್ರಜಾಗರ ಕಾರ್ಯ (ಕ್ರಿಯೆ). ಗುಣ, ದ್ರವ್ಯಗಳು ಕಾರ್ಯಕೃತಿಗಳು; ಸಾಮಾನ್ಯ, ವಿಶೇಷ, ಸಮವಾಯ, ಅಭಾವಗಳು ಕಾರ್ಯಸಂಬಂಧಗಳು. ಸರ್ವಕಾರ್ಯಗಳೂ ದೇಶ–ಕಾಲಾವಚ್ಛಿನ್ನ; ಆದುದರಿಂದ ಅಪೂರ್ಣ,ಪರಿಮಿತ, ಪ್ರಮೇಯ, ವ್ಯವಹಾರ ಬುದ್ಧಿನಿಷ್ಕೃಷ್ಟ, ವ್ಯಾವಸಾಯಿಕ. ಅನುಷೇಧ ಕಾರ್ಯಭಾವವು ಕಾರ್ಯೋತ್ಪಾದಕ ಶಕ್ತಿಯುಳ್ಳ ಗುಣ; ನಿಷೇಧ ಕಾರ್ಯಭಾವವು ಅತ್ಯಪೂರ್ಣ (೯೯.೯°) ಅನುಷೇಧಿಕ

ಶಬ್ದಶಕ್ತಿಯುಳ್ಳ ಕಾಲ್ಪನಿಕ ಗುಣ. ಗುಣವು ಪ್ರಚ್ಛನ್ನ ಕಾರ್ಯಶಕ್ತಿ, ಕಾರ್ಯವು ಪ್ರಕಟಗುಣ, ದ್ರವ್ಯವು ಗುಣಸಂಘಾತ. ಪ್ರಪಂಚವು ಗೌಣ; ಬ್ರಹ್ಮವು ಪ್ರಧಾನ ಮತ್ತು ಸರ್ವಪದಾರ್ಥಾಧಾರ; ಅದರ ಪಾರಮಾರ್ಥಿಕ ಏಕಮೇವಾದ್ವಿತೀಯತೆಯು ವ್ಯಾವಹಾರಿಕ ಅನೇಕ ಪದಾರ್ಥಗಳಿಗೆ ಆಧಾರವಾಗಿರುವುದು ಮಾಯೆ, ವಿವೃತಿ, ಅವಿದ್ಯೆ, ಅಜ್ಞಾನ, ಆಭಾಸ, ಜಾದು! ಬ್ರಹ್ಮದೃಷ್ಟಿಯಿಂದ ಇಂದ್ರಿಯ ಸತ್ಯವು ಐಂದ್ರಜಾಲಿಕ, ಮನೋವಶೀಕರಣ ವಿದ್ಯೆಗೊಳಗಾದವರ ಸಾಕ್ಷಾತ್ಕಾರ. ಮಾನವರೆಲ್ಲರೂ ತಾರತಮ್ಯ ಭಾವವುಳ್ಳ ವಶೀಕೃತಮನಸ್ಕತೆಯನ್ನುಳ್ಳವರು. ನಿಸರ್ಗವು (ಮಾಯೆಯು) ವಶೀಕರಣ ವಿದ್ಯಾಪಂಡಿತ. ಅದು ದೇವ(ಈಶ, ಬ್ರಹ್ಮ) ಸ್ವಭಾವ, ಮೂಲಧರ್ಮ. ಅದು ದುರ್ಭೇದ್ಯವಲ್ಲದೆ, ಅಭೇದ್ಯವಲ್ಲ–ಅಪೂರ್ಣವಾದುದರಿಂದ. ಪಾರಮಾರ್ಥಿಕವಾಗಿ ಅಪೂರ್ಣವು ಪೂರ್ಣಕ್ಕೆ ವಿಶೇಷಣವಾಗಿರುವುದು ತಾರ್ಕಿಕ ಅಸಮಂಜಸತೆಯುಳ್ಳದ್ದಾಗಿರುವುದರಿಂದ ಅದನ್ನು ಮಾಯೆ, ಅನಿರ್ವಚನೀಯ ಖ್ಯಾತಿ ಎಂದು ಹೇಳಲಾಗಿದೆ. ಅದೊಂದನ್ನು ಬಿಟ್ಟರೆ ಮಿಕ್ಕ ಎಲ್ಲವೂ ತರ್ಕಶುದ್ಧ. ಅಂದರೆ ದೊಡ್ಡ ಅಸೀಮ ಅತರ್ಕವು ತರ್ಕದ ಮೂಲ. Perfect chaos is the ground of relatively orderly and disorderly appearances; the perfect Irrational is the root of the imperfect Rational and Irrational –ಪೂರ್ಣ ಅಕ್ರಮವು ಸಾಪೇಕ್ಷವಾಗಿ ಪೂರ್ಣಾಪೂರ್ಣವೆನ್ನಿಸಿದ ಆಭಾಸಗಳಿಗೆ ಆಧಾರ; ಪೂರ್ಣ ಅತರ್ಕವು ಸಾಪೇಕ್ಷ ತರ್ಕಾತರ್ಕಾರೂಪಗಳ ಮೂಲ, ಜನಕ, ಆಕರ, ಅನ್ಯತೆ, ಭೇದ,ಗುಣ, ಧರ್ಮ, ಉಪಾಧಿ, ಪರಿಮಿತಿ, ಶರ್ತ, ವಿಶೇಷ, ವಿಶೇಷಣ, ಅಪೇಕ್ಷೆ, ತಾರತಮ್ಯ, ಅಪೂರ್ಣತೆ, ಸಂಬಂಧಗಳು ಏಕಾರ್ಥಕಗಳು–ಪರಮಾರ್ಥ ದೃಷ್ಟಿಯಿಂದ; ಪರಮಾರ್ಥಕ್ಕೆ ಈ ಯಾವುವೂ ಇಲ್ಲ; ವ್ಯವಹಾರರ್ಥಕ್ಕೆ ಇವೆಲ್ಲ ಇವೆ. ಬ್ರಹ್ಮದ ಜಗತ್ತಿಗೂ ಬ್ರಹ್ಮತ್ವಕ್ಕೂ ಸಂಬಂಧ ಗೊತ್ತಾಗದಿರುವುದೇ ತಾತ್ವಿಕ ನಾನಾಖ್ಯಾನಗಳಿಗೆ ಕಾರಣ; ಏಕತ್ವ–ನಾನಾತ್ವಗಳ ನಾನಾಖ್ಯಾನವು ನಾನಾ ಜಗತ್ತಿನ ಸ್ವಭಾವವಾಗಿದೆ. ನಾನೇತರವಾದ ಬ್ರಾಹ್ಮೀಜಾಗರಕ್ಕೆ ಏಕತ್ವದ ಏಕಾಖ್ಯಾನವೊಂದೇ ವಿವರಣೆ– ಅದು ಕೈವಲ್ಯ, ಕೇವಲತ್ವ. ಸಾಕ್ಷೀಭೂತಃ ಕೇವಲೋ ನಿರ್ಗುಣಶ್ಚ!

## ವ್ಯಾವಹಾರಿಕ ವಿಶ್ಲೇಷಣ

ವ್ಯವಹಾರದಲ್ಲಿ Reative disorder is irrelevant ಸಾಪೇಕ್ಷ (ಸಾಂಬಂಧಿಕ) ಅಕ್ರಮವು ತ್ಯಾಜ್ಯ ಮತ್ತು Relative order is relevent ಸಾಪೇಕ್ಷ ಕ್ರಮವು ಗ್ರಾಹ್ಯ. ಪರಮಾರ್ಥವು ಉಭಯಾತೀತ ಮತ್ತು ಉಭಯಾಧಾರ; ಇದು ಪೂರ್ಣ ನಿತ್ಯ, ಅದು ಅಪೂರ್ಣ ನಿತ್ಯ ಹಾಗೂ ಅನಿತ್ಯ.




ಜೈವಿಕ ಅಸ್ತಿತ್ವ=ಅಸ್ತಿತ್ವ ಜಾಗರ; ಅಜಾಗರ ಅಸ್ತಿತ್ವವು ಅರ್ಥಹೀನ. ಜಾಗರವು ಬ್ರಹ್ಮಜಾಗರದ ವಿಶ್ವವ್ಯಾಪಿತ್ವದಿಂದ ಹಿಡಿದು ಅಶ್ಮದ ಅತ್ಯಲ್ಪ ಜಾಗರದವರೆಗಿನದು. ಅಸ್ತಿತ್ವದ ಶುದ್ಧ, ಕೇವಲ ಜಾಗರ (Pure absolute awareness of existence) ಬ್ರಹ್ಮ. ಬ್ರಹ್ಮವು ("ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ") ವ್ಯಾಪಕ; ಜಗತ್ತು (ಗ್ರಹ–ನಕ್ಷತ್ರ–ನೀಹಾರಿಕಾದಿಗಳ ಸಂಘಾತ) ವ್ಯಾಪ್ಯ. ವ್ಯಾಪಕದ ಸತ್ಯತೆ ವ್ಯಾಪ್ಯಕ್ಕಿಲ್ಲ. ವ್ಯಾಪಕವು ಅಖಂಡ, ವ್ಯಾಪ್ಯವು ಖಂಡ; ಖಂಡಸಂಘಾತದ ಅರ್ಥ ಮತ್ತು ಅದಕ್ಕೆ ಅತೀತವಾದ ಅಖಂಡತೆಯ ಅರ್ಥಗಳು ಭಿನ್ನ. ಅಖಂಡತೆಗೆ ಏಕತಾ ಜಾಗರವಿದ್ದರೆ, ಖಂಡಕ್ಕೆ ಮತ್ತು ಖಂಡರಾಶಿಗೆ ಖಂಡತೆಯ ಹಾಗೂ ಖಂಡರಾಶಿಯ ಜಾಗರಗಳಿವೆ. ಖಂಡಗಳನ್ನು (ಅಂಶಗಳನ್ನು) ಒಳಗೊಂಡಿರುವ ಅಥವಾ ಹೊರಗೊಂಡಿರುವ ಅರ್ಥಗಳು ಖಂಡಜಾಗರ ಗ್ರಾಹ್ಯ. ಅಖಂಡ ಜಾಗರಕ್ಕೆ ಅಖಂಡ ಜಾಗರವೊಂದೇ ಗ್ರಾಹ್ಯ. ಅದರ ಅಹಂತ್ವ (ಪುರುಷತ್ವ) ಶುದ್ಧ ಏಕತಾಪರಿಚ್ಛಿನ್ನ; ವ್ಯಕ್ತಿಯ ಅಹಂತ್ವವು ಏಕತ್ವ–ಅನೇಕತ್ವಗಳಿಂದ ಪರಿಚ್ಛಿನ್ನ–ಅವೆರಡೂ ಸಾಪೇಕ್ಷ; ಶುದ್ಧ ಏಕತ್ವವು ಕೇವಲತ್ವ, ಸರ್ವನಿರಪೇಕ್ಷತ್ವ, ಸರ್ವತಂತ್ರ ಸ್ವತಂತ್ರತ್ವ!

ಅಪೂರ್ಣದ ಪೂರ್ಣಜ್ಞಾನವು ಅಪೂರ್ಣ ಜ್ಞಾನ; ಪೂರ್ಣದ ಅಪೂರ್ಣ ಜ್ಞಾನವು ಅಪೂರ್ಣಜ್ಞಾನ. ಅಪೂರ್ಣದ ಪೂರ್ಣಾಪೂರ್ಣಜ್ಞಾನಗಳು ಸಾಪೇಕ್ಷ. ಪೂರ್ಣದ ಪೂರ್ಣಜ್ಞಾನವು ಪೂರ್ಣ, ನಿರಪೇಕ್ಷ. ಪೂರ್ಣವು ಒಳ ಹೊರತನಗಳುಳ್ಳದ್ದೆಂದು ತಿಳಿಯುವುದು ಅಪೂರ್ಣಜ್ಞಾನ–ಅದೇ ವ್ಯವಹಾರಾರಂಭ. ವ್ಯವಹಾರಾರಂಭದ Gestalt ಇಡಿತನದ ಜ್ಞಾನವೂ, ಹಾಗೇ ಸಾಪೇಕ್ಷವಾದ ಬಿಡಿತನದ ಜ್ಞಾನವೂ ವಾಸನಾ ಸಂಸ್ಥಾಪಿತ. ವಾಸನೆಯು ಪರಂಪರಾಗತವಾದ ಆನುವಂಶಿಕ–ಆವರಣಿಕ ಸಂಸ್ಕಾರ. ಬಿಡಿಯ ಕಲ್ಪನೆಯೇ ಇಡಿಗೆ ಸಾಪೇಕ್ಷವಾಗಿರುವುದು ಇಂದ್ರಿಯ ಪ್ರತ್ಯಕ್ಷಸಿದ್ಧವಾದುದು. ಸ್ವಾನುಭವವನ್ನು ವಿಶ್ಲೇಷಿಸಿ ನೋಡದವರಿಗೆ ಏನನ್ನೂ ಯಾರೂ ಸಮರ್ಥಿಸಿ ಸಮಾಧಾನಪಡಿಸಲಾರರು. ಪರಜ್ಞಾನಕ್ಕೆ ಸ್ವಜ್ಞಾನವೇ ಅಸ್ತಿವಾರ. ಸ್ವಜ್ಞಾನ ಬಹಿಷ್ಕಾರದ ಸೋಗನ್ನು ಹಾಕುವ ವಿಜ್ಞಾನ ತರ್ಕಬುದ್ಧಿಯು ಬುದ್ಧಿಯೇ ಅಲ್ಲ–ವಿಕಟ ಬುದ್ಧಿ.

೨.



ಪದಾರ್ಥ
ಅಶೂನ್ಯ (ಅವಿಕಾರ್ಯಭಾವ)
ಶೂನ್ಯ(ಶಾಬ್ದಾರ್ಥಿಕ)
ಸತ್ = ಪರಮಾರ್ಥ
ತ್ಯತ್ = ಭಾಸಾರ್ಥ
ಪ್ರಾತಿಭಾಸಿಕ
ವ್ಯಾವಹಾರಿಕ
ಸ್ವಾಪ್ನಿಕ
ಔನ್ಮತ್ತಿಕ
ಕಾರ್ಯ
ವಿಕಾರ್ಯ(ಭಾವ, ಕಲ್ಪನೆ, ಸಂಬಂಧ)
ಗುಣ
ದ್ರವ್ಯ
ಸಾಮಾನ್ಯ
ಸಮವಾಯ
ವಿಶೇಷ
ಅಭಾವ

## ವಿಕಟ ಪ್ರತಾಪ

ಜಾಗರರಹಿತವಾದ "ನಾಹಮಸ್ಮಿ"ಯಂತಹ ಜೈವಿಕ ಅಸ್ತಿತ್ವವಿರುವುದು ಕಲ್ಪನಾಬಾಹಿರ. ಇದನ್ನು Anthropomorphism ಮಾನವಾನುಕಲ್ಪನೆ ಎಂದು ಬಹಿಷ್ಕರಿಸುವ ಜೋಡತನವು Solipsism ಅಹವಾದಿ ಅಹವಾಂತವಾದದ ತರ್ಕಾಶುದ್ಧಿಗಿಂತಲೂ ಹೆಚ್ಚು ಅಶುದ್ಧವಾದುದು. ಮಾನವತ್ವದ ಐಂದ್ರಿಯ ಅವಸ್ಥೆಯಲ್ಲಿರುವವರು ತಮ್ಮಲ್ಲಿ ಅಮಾನವ್ಯವಾದ ವಸ್ತುನಿಷ್ಠತೆ ಇದೆ ಎಂದು ಕೊಚ್ಚಿಕೊಳ್ಳುವುದು ಧೂರ್ತತನ ಅಥವಾ ಮಂದತನ. ಅಂಥವರ ವಸ್ತುನಿಷ್ಠತೆ, ನಿಷ್ಪಕ್ಷಪಾತತೆ, ವೈಜ್ಞಾನಿಕತೆಗಳು ಅಸಂಬದ್ಧ ಪ್ರಲಾಪಗಳು. ವ್ಯಕ್ತಿ ಬುದ್ಧಿಯಿಂದ ಸಂಪೂರ್ಣಮುಕ್ತವಾದ ಬುದ್ಧಿಯುಳ್ಳ ಲೌಕಿಕ ವ್ಯಕ್ತಿ ಇರಬಲ್ಲನೆಂಬುದು ವಿಕಟಪ್ರತಾಪ. Self-transcendence ಸ್ವಾತೀತತೆಯು ಮಾನವ ಸಹಜ ಮೂಲ ಪ್ರವೃತ್ತಿಗಳ ಸ್ವಶರೀರಮನಃಪೋಷಕ ಪ್ರಜ್ಞೆಯಿಂದ ಮುಕ್ತರಾದ ಯೋಗಿಗಳಿಗೆ ಮಾತ್ರ ಸಾಧ್ಯ. ಆಧುನಿಕ ಪಾಶ್ಚಾತ್ಯ ತತ್ವಜ್ಞಾನಿಗಳಲ್ಲಿ ಯಾವನೂ ಯೋಗಿಯಲ್ಲ; ಭೋಗಿಯ ತರ್ಕವು ಭೋಗತರ್ಕವಲ್ಲದೆ ಯೋಗತರ್ಕವೆಂದೂ ಆಗದು. ಒಬ್ಬನು ಪ್ರಚ್ಛನ್ನ ಭೋಗಿಯಾದರೆ (ಭವಿಯಾದರೆ) ಇನ್ನೊಬ್ಬ ಪ್ರಕಟ ಭೋಗಿ–ಅಷ್ಟೆ!

ಸಾತತ್ಯವುಳ್ಳ ಸತ್ಯತೆಯ ಸ್ವರೂಪವು ಸಂಪೂರ್ಣ ನಿಷ್ಕ್ರಿಯಾತ್ಮಕವಾಗಿರಲೇ ಬೇಕೆಂಬುದು ಕಲ್ಪನಾಶುದ್ಧಿಯ ಪ್ರಜ್ಞೆಗೆ ಗ್ರಾಹ್ಯ. ಆದರೆ ಈಶಾವಾಸ್ಯ ಹೇಳುವಂತೆ ಅದರ ನಿಷ್ಕ್ರಿಯತೆಯು ಸಕ್ರಿಯತೆ ಸಾಧಿಸುವುದಕ್ಕಿಂತ ಹೆಚ್ಚಿನದನ್ನು ಸಾಧಿಸಬಲ್ಲದು– ಏಕೆಂದರೆ, ಅದು ಲೌಕಿಕ ಸಕ್ರಿಯತೆ–ನಿಷ್ಕ್ರಿಯತೆಗಳೆಂಬ ದ್ವಂದ್ವದಿಂದ ಭಿನ್ನವಾದ ನಿರಪೇಕ್ಷ ನೈಷ್ಕರ್ಮ್ಯ. ಅಸಾತತ್ಯವುಳ್ಳ ಸತ್ಯಗಳು ಸಾಪೇಕ್ಷ–ತರತಮಭಾವದ ಸಾತತ್ಯಾವಧಿಗಳನ್ನುಳ್ಳಂಥವು; ಸಂಪೂರ್ಣವಾಗಿ ಸಾತತ್ಯ ಕಲ್ಪನಾಮುಕ್ತವಾದರವು ತಮ್ಮ ಸತ್ ಸ್ವರೂಪವನ್ನು ಕಳೆದುಕೊಳ್ಳುವುವು. ಕೇವಲ ಪೂರ್ಣ ಅಸತ್ತೆಂಬುದು ಪೂರ್ಣವಾಗಿ ಅಸತ್ತು, ಅಸತ್ಯ; ಅದರ ಅಕಲ್ಪನೀಯತೆಯು ಕಲ್ಪನಾ ಗ್ರಾಹ್ಯ. ಎಲ್ಲ ಅನುಷೇಧ ಕಲ್ಪನೆಗಳಿಗೂ ಸಾಪೇಕ್ಷ–ಅಥವಾ ನಿರಪೇಕ್ಷ ಸಾತತ್ಯವೇ ನಿಕಷ. ನಿಷೇಧಕಲ್ಪನೆ ಸತತ ಸಾಪೇಕ್ಷ. ಅದರಿಂದ ಅತಿರೇಕಕ್ಕೆ ತಲುಪಿದ ಕ್ಷಣಭಂಗವಾದದ ಕಲ್ಪನಾತೀತತೆ ಸಿದ್ಧವಾಗುವುದು. ಕಲ್ಪನಾತೀತವನ್ನು ಕಲ್ಪನೀಯವೆಂದು ಗಣಿಸುವುದು ಭ್ರಮಾವಿಲಾಸ. ಕಾಲ್ಪನಿಕ ಅವಲಂಬನೀಯತೆ ಇಲ್ಲದ ಕಲ್ಪನೆಯು ಮರುಮರೀಚಿಕೆ; ಅದೆಂದೂ ತರ್ಕಗ್ರಾಹ್ಯವಲ್ಲ.

## ಕಾಲಿಂಗ್‌ವುಡ್ಡರ ಸಿದ್ಧಾಂತ

There is... no where in their works any suggestion that by continued study of atoms and electrons one becomes oneself electric or even like electricity – ಪ್ರೊ. ಎಡ್ಡಿಂಗ್‌ಟನ್ ಮತ್ತು ಸರ್ ಜೇಮ್ಸ್ ಜೀನ್ಸರ ಕೃತಿಗಳಲ್ಲಿ ಎಲ್ಲಿಯೂ ಅಣು ಮತ್ತು ವಿದ್ಯುತ್ತಿನ ಋಣಕಣಗಳ ಸತತಾಭ್ಯಾಸದಿಂದ ಒಬ್ಬ ಅಭ್ಯಾಸಿಯು ತಾನೇ ವೈದ್ಯುತ ಅಥವಾ ವಿದ್ಯುತ್ ಸದೃಶನಾಗಿ ಬಿಡುವ ಸೂಚನೆ ಕಂಡುಬರುವುದಿಲ್ಲ

(Philosophical Aspects of Modern Science, P.202)" ಎಂದು ಜೋಡರು ಜೋರಾಗಿ Knowledge by identity ಜ್ಞೇಯದಲ್ಲಿ ಜ್ಞಾತೃ ತಾದಾತ್ಮ ಹೊಂದುವ ಜ್ಞಾನಸೂತ್ರವನ್ನು ಅಲ್ಲಗಳೆದು ತಮ್ಮ ನಾನಾತ್ವದ ವೈಶೇಷಿಕತೆಯನ್ನು ಘೋಷಿಸಿದ್ದಾರೆ. "This is the positivistic conception of individuality, the conception according to which the individual is constituted as such by being cut off from everything else by a sharp boundary distinguishing clearly what is within it from what is outside. The inner and the outer are mutualy exclusive. This is the kind ofindividuality which is possessed by a stone or any other material body. It is the primary characteristic of the world of nature, and distinguishes that from the world of mind, where individuality consists not of separateness from environment but of the power to absorb environment to itself – ಇದು ಪಾಶ್ಚಾತ್ಯ ಅನುಷೇಧವಾದಿಗಳು ಹೇಳುವ ವ್ಯಕ್ತಿತ್ವದ ಕಲ್ಪನೆ. ಈ ವ್ಯಕ್ತಿತ್ವವು ಹೊರಗಿನ ಎಲ್ಲ ಪದಾರ್ಥಗಳಿಂದಲೂ ತಾನು ಪ್ರತ್ಯೇಕವೆಂದು ತೋರುವಂತೆ ಸ್ಪಷ್ಟವಾದ ಗಡಿಗೆರೆಯನ್ನು ಹೊಂದಿರುತ್ತದೆ; ಇದರ ಒಳಗು–ಹೊರಗುಗಳು ಪರಸ್ಪರ ವಿನಾಭಾವಿಗಳು. ಇದು ಕಲ್ಲಿನಂಥ ದ್ರವ್ಯಕ್ಕಿರುವ ವ್ಯಕ್ತಿತ್ವ. ಇದು ಜಡಪ್ರಕೃತಿಯ ಪ್ರಾಥಮಿಕ ಲಕ್ಷಣ. ಉಕ್ತಲಕ್ಷಣವು ಜಡಸೃಷ್ಟಿಯನ್ನು (ಜೀವ) ಮನಃಸೃಷ್ಟಿಯಿಂದ ಪ್ರತ್ಯೇಕಿಸುತ್ತದೆ. ಮನಸ್ಸು ಈ ಪ್ರಕಾರ ತನ್ನ ಆವರಣದಿಂದ ಭಿನ್ನವಾಗಿರುವುದಿಲ್ಲ. ಮನಃಪ್ರಪಂಚದಲ್ಲಿ ವ್ಯಕ್ತಿತ್ವವೆಂದರೆ ತನ್ನ ಸುತ್ತಲಿನ ಆವರಣವನ್ನು ತನ್ನೊಳಗೆ ಹೀರಿಕೊಳ್ಳುವ ಶಕ್ತಿಯೆಂದರ್ಥ (The Idea of History by R.G. Collingwood, P.162)– ಎಂಬ ಕಾಲಿಂಗ್‌ವುಡ್ಡರ ಪ್ರತ್ಯುತ್ತರವನ್ನು ಜೋಡರು ನೋಡಿಲ್ಲ. ಟಾಯ್ನಬೀಗಳೂ ಇದೇ ಅಪಕಲ್ಪನೆಯನ್ನು ಆಧರಿಸಿದವರು. ಅವರ ಖಂಡನೆ ಮಾಡುವ ಕಾಲಿಂಗ್‌ವುಡ್ಡರು– He regards history as a mere spectacle, something consisting of facts observed and recorded by the historian, phenomena presented externally, to his gaze, not experiences in to which he must enter and which he must make his own. ಟಾಯ್ನಬೀಗಳು ಇತಿಹಾಸವು ಇತಿಹಾಸಕಾರನು ಕಂಡು ದಾಖಲೆ ಮಾಡಿದ ಸಂಗತಿಗಳ ಬರಿ ಒಂದು ದೃಶ್ಯ, ಅವನ ಕಣ್ಣ ಮೇಲೆ ಬಿದ್ದ ಹೊರಗಿನ ಒಂದು ಘಟನೆ; ಅದೆಂದೂ ಆತ ಒಳಹೊಕ್ಕು ತನ್ನದನ್ನಾಗಿ ಮಾಡಿಕೊಂಡ ಅನುಭವಗಳ ಸ್ವರೂಪದ್ದಲ್ಲ ಎಂದಿದ್ದಾರೆ" ಎಂದು ಉದ್ಗರಿಸಿದ್ದಿಲ್ಲಿ ಸ್ಮರಣೀಯ. ಸಾತ್ಮ್ಯವಾಗದ ಜ್ಞಾನವು ಸರ್ವತ್ರ ಅಪೂರ್ಣ. ಪ್ರತಿಯೊಂದು ಜಡಪದಾರ್ಥಕ್ಕೂ ಅದರ ಭಾವ (Idea, thought) ಎಂಬ ಆತ್ಮವಿದೆ. ಅದನ್ನು ಚೆನ್ನಾಗಿ ಅರಿತುಕೊಳ್ಳಹೋದವನು ಅದರ ಭಾವದಲ್ಲಿ ಐಕ್ಯವಾಗುತ್ತಾನಲ್ಲದೆ ಅದರಲ್ಲಲ್ಲ; ವಿಜ್ಞಾನಿಯಾದರೂ ಅದರ ಭಾವದ ಅಂಶವನ್ನಲ್ಲದೆ ಅದನ್ನು ಅರಿತುಕೊಳ್ಳುವುದಿಲ್ಲ– ಅದು ಅವನ ಮನಸ್ಸಿನಿಂದ ಹೊರಗೇ ಇರುತ್ತದೆ ಮತ್ತು ಅವನ ಮನಸ್ಸು ಅದರಿಂದ ಭಿನ್ನವಾಗಿ ಅವನ ತಲೆಯೊಳಗೇ ಇರುತ್ತದೆ. ಕ್ರಿಯಾದ್ವೈತವು ಅವ್ಯವಹಾರ್ಯ; ಭಾವಾದ್ವೈತವೇ ಜ್ಞಾನಪ್ರಕ್ರಿಯೆಯ ಮೂಲಾಧಾರ. ಆತ್ಮವೊಂದು ಭಾವ, ಬ್ರಹ್ಮವೊಂದು ಭಾವ––ಭಾವತ್ವದ ಸಾಧಾರಣತೆ ಅವುಗಳ ಐಕ್ಯದ ಸಾಧ್ಯತೆಗೆ ಆಧಾರ;

ವಾಸ್ತವಿಕವಾಗಿ, ನಿತ್ಯೈಕ್ಯವುಳ್ಳ ಅವುಗಳ ಭಾವೇತರ ಅಂಶಗಳಲ್ಲಿಯ ಭೇದಗಳಷ್ಟನ್ನೇ ಪರಮ ಸತ್ಯವೆಂದು ಭಾವಿಸಿದ ಮಾನವನು ಆ ತಿಳಿವಳಿಕೆಯನ್ನು ಬಿಟ್ಟು ಅವುಗಳ ಭಾವರೂಪದ ನಿತ್ಯೈಕ್ಯವನ್ನು ಸಹಜ ಸಮಾಧಿ ಶಕ್ತಿಯಿಂದ ಹೀರಿಕೊಳ್ಳುವುದೇ ಮೋಕ್ಷ.

"ವಿಚಾರ ಮಾಡುವ ಕ್ರಿಯೆಯು ವ್ಯಕ್ತಿನಿಷ್ಠವೂ ಹೌದು, ವಸ್ತುನಿಷ್ಠವೂ ಹೌದು. ಅದು ವಿಚಾರಣ (ಆಲೋಚನ) ಕ್ರಿಯೆಯಷ್ಟೇ ಅಲ್ಲ, ವಿಚಾರಣೀಯ ಪದಾರ್ಥವೂ ಆಗಿದೆ. ಆದರೆ ಅದು ಕೇವಲ ವಸ್ತುನಿಷ್ಠವಾಗಿರದುದರಿಂದ ಅದನ್ನು ವಿಶಿಷ್ಟ ರೀತಿಯಿಂದ ವಿಚಾರಕ್ಕೆ ಗುರಿಪಡಿಸಬೇಕಾಗುತ್ತದೆ. ಆ ವೈಶಿಷ್ಟ್ಯ ಅದಕ್ಕೆ ಅನನ್ಯ. ವಿಚಾರಪರವಾದ ಮನಸ್ಸಿನೆದುರು ಸಿದ್ಧರೂಪದಲ್ಲಿ ಅದನ್ನು ತಂದು ನಿಲ್ಲಿಸಲು ಸಾಧ್ಯವಿಲ್ಲ; ಆ ಮನದಿಂದ ಅದು ಪೂರ್ಣ ಸ್ವತಂತ್ರವಾಗಿರುವಂತೆ ಕಂಡು ಹಿಡಿಯಲ್ಪಟ್ಟು ಅಂಥ ಸ್ವಾತಂತ್ರ್ಯದ ಅವಸ್ಥೆಯಲ್ಲಿ ಅದು ಇರುವಂತೆಯೇ ಅದನ್ನು ಅಭ್ಯಸಿಸಲು ಸಾಧ್ಯವಿಲ್ಲ. ವ್ಯಕ್ತಿನಿಷ್ಠತೆಯನ್ನು ಹೊರಗಿಟ್ಟ ವಸ್ತುನಿಷ್ಠತೆಯ ದೃಷ್ಟಿಯಿಂದ ಅದನ್ನೆಂದೂ ಅಭ್ಯಸಿಸಲು ಸಾಧ್ಯವಿಲ್ಲ. ಅದನ್ನು ಅದು ಇರುವಂತೆಯೇ ಒಂದು ಕ್ರಿಯೆ ಎಂದು ತಿಳಿದೇ ಅಭ್ಯಸಿಸಬೇಕಾಗುತ್ತದೆ. ಆ ಕ್ರಿಯೆಯು (ಸಂಪೂರ್ಣವಾಗಿ ಅಲ್ಲದಿದ್ದರೂ) ವ್ಯಕ್ತಿನಿಷ್ಠತೆ ಅಥವಾ ಅನುಭವ ಎನ್ನಿಸಿರುವುದರಿಂದ ಅದನ್ನು ಅದರ ವ್ಯಕ್ತಿನಿಷ್ಠ ಇರವಿನಲ್ಲೇ ಅಭ್ಯಸಿಸಬೇಕಾಗುತ್ತದೆ–ಅಂದರೆ ತನ್ನದೇ ಕ್ರಿಯೆಯಾದ ವಿಚಾರವನ್ನು ವಿಚಾರಿಯು ಅಭ್ಯಸಿಸಬೇಕಾಗುತ್ತದೆ. ಈ ಅಭ್ಯಾಸವು ಕೇವಲ ಅನುಭವ ಅಥವಾ ಜಾಗರ ಇಲ್ಲವೆ ಸ್ವಜಾಗರವಲ್ಲ; ಇದು ಸ್ವಜ್ಞಾನ (Self-knowledge). ಹೀಗೆ ವಿಚಾರಕ್ರಿಯೆಯು ವ್ಯಕ್ತಿನಿಷ್ಠ (ವೈಯಕ್ತಿಕ)ವಾಗುವುದರಲ್ಲಿ ತನ್ನ ವಸ್ತುನಿಷ್ಠತೆಯನ್ನು ಕಳೆದುಕೊಳ್ಳದು; ಇದು ಸ್ವಜ್ಞಾನದ ವಿಷಯ; ಶುದ್ಧ ಜಾಗರದಿಂದ ಇದು ಭಿನ್ನವಾದ ಸ್ವಜಾಗರದಿಂದ ಪ್ರತ್ಯೇಕವಾಗಿರುತ್ತದೆ; ಈ ಸ್ವಜ್ಞಾನವು ಒಬ್ಬನು ತನ್ನ ವಿಚಾರವನ್ನು ವಿಮರ್ಶಿಸಿ ಅರಿತುಕೊಳ್ಳುವುದೇ ಆಗಿದೆ–ಇದೆಂದೂ 'ಇದು ಬರಿ ತನ್ನ ಆಲೋಚನೆ' ಎಂಬಷ್ಟೇ ಮಟ್ಟದ ಜಾಗರವಲ್ಲ"– ಎಂಬ (The Idea of History, P. 292) ವಿವರಣೆಯು Solipsism ಅಹಮಾದಿ ಅಹಮಾಂತವೆಂದು ಮನಃಕ್ರಿಯೆಗಳ ಅಗ್ರಾಹ್ಯತೆಯನ್ನು (ಅವಾಸ್ತವಿಕತೆಯನ್ನು, ಅವೈಜ್ಞಾನಿಕತೆಯನ್ನು) ಸಾರುವ ಆತ್ಮಜ್ಞಾನ ವಿರೋಧಿಗಳಿಗೆ ತಕ್ಕ ಉತ್ತರವಾಗಿದೆ.

## ಮಾಯೆ, ಅಮಾಯೆ

ಒಂದು ವಿಚಾರವು ಶಂಕರಾಚಾರ್ಯರ ತಲೆಯಲ್ಲಿದ್ದಿರಬಹುದು; ಅದೇ ವಿಚಾರವು ನನ್ನ ತಲೆಯುಲ್ಲೂ ಇರಬಲ್ಲದು; ಆವರಣ ಬೇರಾದ್ದರಿಂದ ಆಲೋಚನೆ ಬೇರೆಯಾಗಲೇಬೇಕೆಂಬ ನಿಯಮವಿಲ್ಲ. ಅವರ ಆಲೋಚನೆಯನ್ನು ನಾನು Re-enact ಪುನಃ ರಂಗತಾಲೀಮು ಮಾಡಬಲ್ಲೆ. ಆದುದರಿಂದ ಉಕ್ತ ವಿಚಾರದ ಏಕತ್ವಕ್ಕೆ ಭಂಗ ಉಂಟಾಗದು (cf:I H-P 301). ಹೀಗೆ ಬ್ರಹ್ಮವನ್ನು ಪುನಾರಚಿಸಿಕೊಳ್ಳುವುದೇ ಬ್ರಹ್ಮಸಾಕ್ಷಾತ್ಕಾರವೆಂದರೆ ಏನೆಂಬ ಕಲ್ಪನೆಯನ್ನು ಕೊಡಬಲ್ಲದು. ಸ್ಮೃತಿ–ವಿಸ್ಮೃತಿಗಳ ಮೂಲಕ

ಹರಿದು ಹೋಗುವ ವಿಚಾರವೊಂದು ತನ್ನ ಸ್ವರೂಪೈಕ್ಯವನ್ನು ಉಳಿಸಿಕೊಳ್ಳಬಲ್ಲದು. ಬದ್ಧತ್ವದಲ್ಲಿ ಅಜಾಗರಿತವಾದ ಭೂತವಸ್ತುಸ್ವರೂಪದ ಬ್ರಹ್ಮವನ್ನು ಮುಕ್ತತ್ವದಲ್ಲಿ ಜಾಗರಿಸಿಕೊಳ್ಳಬಹುದು. ಈ ಜಾಗರಣೆ ಕೇವಲ ವಿಚಾರದಲ್ಲಿ, ಜೀವಂತ ವಿಚಾರ ಅರ್ಥಾತ್ ಅವೈಯಕ್ತಿಕ ಭಾವನಾಬಲ ಪರಿಪುಷ್ಟವಾದುದು. ವಿಚಾರದಂತೆಯೇ ವಿಚಾರಯುಕ್ತ ಭಾವನಾತ್ಮಕ ಅನುಭವವನ್ನೂ ಪುನಃ ಅನುಭವಿಸಲು ಬರುವುದರಿಂದ ಅದೂ ಅಮರ. ಜಗದ್ರೂಪದ ಮಾಯಾ ಪ್ರವಾಹವು ಅನಾದಿ, ಅನಂತ; ಬ್ರಹ್ಮವೂ ಅನಾದಿ, ಅನಂತ; ಆದರೆ ಒಂದಕ್ಕೆ ಪರಿವರ್ತನ ಸ್ವರೂಪದ ಪ್ರವಾಹಧರ್ಮವಿದ್ದರೆ, ಇನ್ನೊಂದಕ್ಕೆ ಅಪರಿವರ್ತನ ರೂಪದ ಅಚಲಧರ್ಮವಿದೆ. ಬದ್ಧತೆ ಇರುವುದು ಪರಿವರ್ತನ ಸ್ವರೂಪದಲ್ಲಿ ಲೀನವಾಗಿರುವುದರಲ್ಲಿ; ಮುಕ್ತತೆ ಇರುವುದು ಅಚಲ ಸ್ವರೂಪದಲ್ಲಿ ಒಂದಾಗಿರುವುದರಲ್ಲಿ. ಚಲಸಾತ್ಮ್ಯವು ಅವಲಂಬನೀಯುವಲ್ಲ; ಏಕೆಂದರೆ ಚಲಪದಾರ್ಥವು ರೂಪಾಂತರ, ಅರ್ಥಾಂತರಗಳಿಗೆಡೆಗೊಡುವ ಸ್ವಭಾವವುಳ್ಳದ್ದು– ಅಚಲಪದಾರ್ಥವು ಏಕರೂಪಿ ಮತ್ತು ಏಕಾರ್ಥಕ; ಆದ್ದರಿಂದ ಅದು ಸರ್ವದಾ ಅವಲಂಬನೀಯ. ಮಾಯಾಮಯತೆ ಬೇಡವಾದವರು ಪ್ರಯತ್ನಿಸಿ ಬ್ರಹ್ಮಮಯರಾಗಬಹುದು– ಎಂಬುದೇ ಮಾನವ ಸ್ವಾತಂತ್ರ್ಯದ ಸಾರ– ವ್ಯಕ್ತಿನಿಷ್ಠತೆ ಬೇಡವಾದವರು ವಸ್ತುನಿಷ್ಠತೆಗೆ ಹೇಗೆ ಹೋಗಲು ಸ್ವತಂತ್ರರೋ ಹಾಗೆ: ಇದರ ತಿರುಗು ಮುರುಗೂ ಸುಲಭ ಸಾಧ್ಯ. ಬ್ರಹ್ಮಕ್ಕೆ ಮಾಯೆ ಮಿಥ್ಯೆ, ಅರ್ಥಾತ್ ಅನವಲಂಬನೀಯ, ಅರ್ಥಹೀನ; ಮಾಯೆಗೆ ಬ್ರಹ್ಮವು ಮಿಥ್ಯೆ, ಅಂದರೆ ಅಜ್ಞಾತ, ದುಷ್ಕಲ್ಪನೀಯ. ಮಾಯೆಗೆ ಮಾಯೆ ಅನಿರ್ವಚನೀಯ; ಬ್ರಹ್ಮಕ್ಕೆ ಬ್ರಹ್ಮ ಅನಿರ್ವಚನೀಯವಲ್ಲ. ಮಾಯೆಗೆ ಆತ್ಮವೇ ಇಲ್ಲದುದರಿಂದ ಆತ್ಮಜ್ಞಾನವಿಲ್ಲ; ಬ್ರಹ್ಮವೇ ಆತ್ಮವಾಗಿರುವುದರಿಂದ ಅದಕ್ಕೆ ಆತ್ಮಜ್ಞಾನವಿದೆ. ಬ್ರಹ್ಮದ ಅನೇಕ ಜೀವಾತ್ಮಕತೆಯೂ ಜಡಾತ್ಮಕತೆಯೂ ಮಾಯೆ, ಅಧ್ಯಾಸ, ಆಭಾಸ; ಒಂದೊಂದು ಜೀವದ ಆತ್ಮಾನುಭವವೂ ಬ್ರಹ್ಮಾನುಭವ, ಪರಮಾರ್ಥ, ಪರಮಸತ್ಯ. ಮಾಯೆಯನ್ನು ಬ್ರಹ್ಮವೆಂದೂ ಬ್ರಹ್ಮವನ್ನು ಮಾಯೆಯೆಂದೂ ತಿಳಿಯುವುದು ಶಬ್ದಾರ್ಥಗಳಲ್ಲಿ ಒಂದನ್ನು ಇನ್ನೊಂದೆಂದು ಪರಿಗಣಿಸುವುದಕ್ಕೆ ಸರಿಸಮ. ಬ್ರಹ್ಮಕ್ಕೆ ಮಾಯೆ ಅರ್ಥವಲ್ಲ, ಮಾಯೆಗೆ ಬ್ರಹ್ಮ ಅರ್ಥ (ಪ್ರಯೋಜನ, ಗುರಿ, ಉದ್ದೇಶ, ಜ್ಞೇಯ); ಬ್ರಹ್ಮೇತರವಾದುದೆಲ್ಲ ಮಾಯೆ, ನಿಸರ್ಗ.

ಬ್ರಹ್ಮಾನುಭವರಹಿತವಾದ ಜೀವ ಕೋಟಿಯು ವ್ಯಾವಹಾರಿಕವಾದುದು, ಮಾಯಾಮಯವಾದುದು, ಆ ಮಾಯೆಯಲ್ಲಿ ಬ್ರಹ್ಮಾನುಕೂಲ ಮಾಯೆಯು Progressive ಪ್ರಗತಿಶೀಲ; ಬ್ರಹ್ಮಪ್ರತಿಕೂಲ ಮಾಯೆಯು ಅಪ್ರಗತಿಶೀಲ. ಒಂದು ವಿದ್ಯೆಯಾದರೆ ಇನ್ನೊಂದು ಅವಿದ್ಯೆ. ವಿದ್ಯೆಯಲ್ಲಿ ಮನ, ಬುದ್ಧಿ, ಅಹಂಕಾರ, ಚಿತ್ತ, ಇಂದ್ರಿಯ ವಿಷಯಗಳಾವುವೂ ಆತ್ಮದಂತೆ ಅಪರಿವರ್ತನೀಯವಾದವುಗಳಲ್ಲ ಎಂಬ ಅನುಭವವು ಕ್ರಮಶಃ ತಲೆದೋರುತ್ತ ಹೋಗುತ್ತದೆ. ಅಂಥ ವಿದ್ಯಾಭ್ಯಾಸಕ್ಕೆ ಸಾಧನ ಚತುಷ್ಟಯವು ಬುನಾದಿ ಶಿಕ್ಷಣ, ಪ್ರಾಥಮಿಕ ಶಿಕ್ಷಣ. ಲೋಕದಲ್ಲಿ ಸಾಮಾಜಿಕ, ರಾಜಕೀಯ, ಆರ್ಥಿಕ ನ್ಯಾಯದ ಶಕ್ಯವಿರುವ ಅತ್ಯಧಿಕಾಂಶವು ಅನುಭವಕ್ಕೆ ಬರಬೇಕಾದರೆ ಪ್ರತಿ ವ್ಯಕ್ತಿಯೂ ಉಕ್ತ ನಾಲ್ಕು ಸಾಧನಗಳಲ್ಲಿ

ಪ್ರಥಮವೆನ್ನಿಸಿರುವ ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ, ಸಮಾಧಿ (ಸಮಾಧಾನ)ಗಳೆಂಬ* ಷಡ್ಗುಣಗಳನ್ನು ಅಳವಡಿಸಿಕೊಳ್ಳಲು ಕಲಿಯಬೇಕು. ಇಂಥ ಗುಣಿತ್ವವು ಪ್ರತಿಪ್ರಜೆಯಲ್ಲೂ ಬೆಳೆಯುವಂತೆ ನೋಡಿಕೊಳ್ಳುವುದೇ ಸುರಾಜ್ಯಭಾರ.

## ರಾಜಕೀಯ ಸಾಧನ

ಶಮ ಸಾಧನೆಗೆ ಮಮಕಾರ ಹೋಗಬೇಕು. ಅದಕ್ಕೆ ಆರ್ಥಿಕ ವಿಷಮತೆ ಕಡಿಮೆಯಾಗಬೇಕು– ಅತ್ಯಂತ ದುರ್ವಾರ್ಯ ಕನಿಷ್ಠಾವಸ್ಥೆಗೆ ಅದು ಮುಟ್ಟಬೇಕು. ಹಾಗಾಗಲು ಗಾಂಧಿಯವರ ವಿಶ್ವಸ್ತತೆಯ ಸಿದ್ಧಾಂತವನ್ನು ಕಾಯಿದೆ ಬದ್ಧವಾಗಿ ಜಾರಿಗೆ ತರಬೇಕು. ಅಂತು ಜಾರಿಗೆ ತರಲು ಯೋಗ್ಯವಾದ ಅಸೈನಿಕ ಅಥವಾ ಸೈನಿಕ ಸರ್ವಾಧಿಕಾರಿ ಮಂಡಲ ಅಧಿಕಾರ ವಹಿಸಿಕೊಳ್ಳಬೇಕು; ಹಾಗೆ ಅಧಿಕಾರ ವಹಿಸಿ ಜನರಲ್ಲಿ ಶಮಾದಿಗುಣಗಳು ಬೆಳೆಯುವಂತಹ ವಿಚಾರ–ಆಚಾರಗಳನ್ನು ಸರಿಯಾಗಿ ಇಟ್ಟುಕೊಂಡ ಶಿಕ್ಷಣ ಪ್ರಸಾರ ನಡೆಯಬೇಕು. ಅಂಥ ವ್ಯವಸ್ಥೆಗಾಗಿ ಜನರು ಆಸೆ ಪಡುವಷ್ಟು ಸಾಂಸ್ಕೃತಿಕ ಉನ್ನತಿ (ವಿಚಾರ ಪ್ರಬೋಧ) ಉಂಟಾಗಬೇಕು. ಹಾಗಾಗುವುದು ಈಶ್ವರೇಚ್ಛೆಯಿಂದ. ಅದಕ್ಕಾಗಿ ತತ್ವಜ್ಞರು ಸರ್ವದಾ ಪ್ರಚ್ಛನ್ನವಾಗಿಯೂ ಪ್ರಕಟವಾಗಿಯೂ ಈಶ್ವರ ಪ್ರಾರ್ಥನೆಯನ್ನು ಮಾಡುತ್ತಿರಬೇಕು, ತತ್ವಪ್ರಚಾರ ನಿರತರಾಗಿರಬೇಕು. ತತ್ವಜ್ಞಾನಾನ್ನಿಶ್ರೇಯಸಾಧಿಗಮಃ!

ವ್ಯವಹಾರಕ್ಕೆ ವೇದಾಂತವು ತರ್ಕಾನ್ವಿತ ಆಧಾರವಾದಲ್ಲದೆ ಅದು ಶುದ್ಧವಾಗದು. ವೇದಾಂತವು ಮಾನಸ ಶಾಸ್ತ್ರೀಯ ತರ್ಕವಿಲ್ಲದೆ ಸ್ಪಷ್ಟವಾಗದು. ಅದು ಸ್ಪಷ್ಟವಾದ ಹೊರತು ಅದರಲ್ಲಿ ಶ್ರದ್ಧೆಯುಂಟಾಗದು. ಆ ಶ್ರದ್ಧೆಯಿಲ್ಲದೆ ತದನುಗುಣವಾದ ಆಚಾರಪರತೆ ಬೆಳೆಯದು. ಅಂಥ ಆಚಾರವಂತಿಕೆಯೇ ಧರ್ಮ, ನೀತಿ. ಧರ್ಮದ ಪ್ರಕಾರ ವಿಷಯಭೋಗ ನಡೆಸುವುದೇ ಸರ್ವೋದಯ ಅಥವಾ ಸಮಾಜವಾದೀಯ ಸಮಾಜ. ಅದಕ್ಕಿಂತ ಹೆಚ್ಚಿನ ಸಾಮಾಜಿಕ–ವೈಯಕ್ತಿಕ ನ್ಯಾಯ ಇನ್ನೊಂದಿಲ್ಲ. ಅದೇ ಮಾನವತೆ, ಮಾನವೀಯತೆ, ಆತ್ಮಗುಣ ಪ್ರಧಾನವಾದ ಸರ್ವಭೂತದಯೆ, ಸರ್ವೋದಯಾಕಾಂಕ್ಷೆ. ಸರ್ವೋದಯದ ಮೂಲಕವೇ

---

* ಶಮನ = Appeasing, soothing, conquering, alleniation; calmness; End, stop, destruction; Hurting, destroying=Satisfaction of mind. ದಮನ = Taming; Becoming Passionless; Punishing; killing = self-restraint. ಉಪರತಿ = ceasing; Dying; Freeing from sex-consciousness;l Becoming-unritualistic=Giving up of selfish desires for possessing and using other things and persons at their cost. ತಿತಿಕ್ಷೆ = Endurance; patience; resignation = Forbearance. ಶ್ರದ್ಧೆ = Faith in the possibility of attaining the perfect changeless state. ಸಮಾಧಾನ = Fixing the mind on that state under all circumstances gradually to a greater and greater degree.

ಅಚಲಭಾವವನ್ನು ಅಳವಡಿಸಿಕೊಳ್ಳುತ್ತ ಹೋಗಲು ಚಲ ಪದಾರ್ಥ ಅನವಲಂಬನೀಯವೆಂಬ ಶ್ರದ್ಧೆಬೇಕು; ಅದಕ್ಕೆ ಚಲಪದಾರ್ಥಗಳ ಆತ್ಯಂತಿಕ ಅನವಲಂಬನೀಯತೆಯನ್ನರಿತು ಅವುಗಳ ಬಗ್ಗೆ ಆಸೆ ಕಡಿಮೆಯಾಗಬೇಕು; ಹಾಗಾಗಲು ಅಹಂಕಾರದ ನಿಗ್ರಹವನ್ನು ಕಲಿಯಬೇಕು; ಆ ಕಲಿಕೆಗೆ ಮಮಕಾರವನ್ನು ಬಿಡುವುದು ಅಗತ್ಯ.

ಸ್ಯೋದಯವಾಗಬೇಕೆಂಬವರ ಗಣ್ಯತೆ ಸಮಾಜದಲ್ಲಿ ಹೆಚ್ಚುವುದೇ ಸುಸಂಸ್ಕೃತಿ, ಅತ್ಯುಚ್ಚ ನಾಗರಿಕತೆಯ ಆತ್ಮ. ಆಡಳಿತದ ಚತುರೋಪಾಯಗಳೇ ಸರ್ವ ವ್ಯಕ್ತಿಗಳೂ ಉದಯಾರ್ಹರಾಗುವಂತೆ ಮಾಡಬಲ್ಲದು. ಉಪಾಯೇನ ಹಿ ಯಚ್ಛಕ್ಯಂ ನತಚ್ಛಕ್ಯಂ ಪರಾಕ್ರಮೈಃ!

## ಜ್ಞಾನ ಮತ್ತು ಅನುಭವ

ವ್ಯವಹಾರಪ್ರಪಂಚದಲ್ಲಿ ಮಾನವನಿಗೆ ಇಂದ್ರಿಯ ಪ್ರತ್ಯಕ್ಷವೇ ಜ್ಞಾನಾರಂಭ. ಮಾನವನು ಜ್ಞಾತೃ; ಅವನ ಬಹಿರ್ಮುಖವಾದ ಮನಸ್ಸು, ಇಂದ್ರಿಯಗಳು ಜ್ಞಾನಸಾಧನಗಳು ಮತ್ತು ಅವನಿಂದ ಭಿನ್ನವೆಂದು ಅವನು ತಿಳಿಯುವ ಪದಾರ್ಥಗಳೆಲ್ಲವೂ ಜ್ಞೇಯವಿಷಯಗಳು. ಇದು ಸರ್ವಮಾನವ ಶಿಶುಗಳಿಗೂ ಸಾಧಾರಣ, ಸ್ವಾಭಾವಿಕ. ಸ್ವಭಾವವು ದುರತಿಕ್ರಮ, ಅನತಿಕ್ರಮವಲ್ಲ. ಭೇದವು ಇಂಥ ಜ್ಞಾನಕ್ಕೆ ಮೂಲಾಧಾರ. ಆದರೆ ಭೇದವಿರುವುದು ಜ್ಞಾನಕ್ರಿಯೆಯ ಆದಿಯಲ್ಲಿ; ಅದರ ಪ್ರಕ್ರಿಯಾಂತದ ಕೊನೆಯ ಕ್ಷಣದಲ್ಲಿ ಜ್ಞೇಯದೊಡನೆ ತಾದಾತ್ಮ್ಯಸ್ಪರ್ಶವಾಗುವುದು; ಆಗ ಅದರ ಶಕ್ಯವಾದ ಪೂರ್ಣಜ್ಞಾನ ಲಭಿಸುವುದು. ಉತ್ತರ ಕ್ಷಣದಲ್ಲಿ ಮತ್ತೆ ಜ್ಞಾತೃ–ಜ್ಞೇಯಭೇದ ಉದಯವಾಗಿ ಜ್ಞಾತೃವು ಕೇವಲ ಜ್ಞಾನಸ್ಮೃತಿ ಸಂಪನ್ನವಾದ ಪ್ರತ್ಯೇಕ ವ್ಯಕ್ತಿಯಾದ ಅನುಭವ ಬರುತ್ತದೆ.

ಅನುಭವವು ಅಸ್ತಿತ್ವದ (ಇರವಿನ) ವರ್ತಮಾನಾರ್ಥ ಉಳ್ಳದ್ದು, ಅದರಲ್ಲಿ ಬುದ್ಧಿ–ಭಾವನೆ–ಇಚ್ಛಾಂಶಗಳ ಸಾಮರಸ್ಯವಿರುತ್ತದೆ. ಜ್ಞಾನದ ಕೇವಲ ಭೌದ್ಧಿಕತೆಯು ಭೂತಕಾಲಿಕ ಮತ್ತು ಭವಿಷ್ಯತ್ಕಾಲಿಕವಷ್ಟೇ. ದೇಶ–ಕಾಲಗಳು ಎಲ್ಲ ಪ್ರತ್ಯೇಕತಾಭಾವಗಳಿಗೂ ಆಧಾರಗಳು. ಐಕ್ಯಾನುಭವವು ವಿಷಮಾಧಾನ. ವ್ಯವಹಾರ ಪ್ರಪಂಚದಲ್ಲಿ ಎಲ್ಲವೂ ವಿಷಮಸ್ಥ. ಆದುದರಿಂದ ವ್ಯವಹಾರಿಯು ಯಾವಾಗಲೂ ಸಮಸ್ಥಿತಿಗಾಗಿ ಹೋರಾಡುತ್ತಿರುತ್ತಾನೆ. ಅಪೂರ್ಣವಾದ ವಿಷಮಸ್ಥಿತಿ, ಸಮಸ್ಥಿತಿಗಳಲ್ಲಿ ಅಪೂರ್ಣಜ್ಞಾನಿಯು ಯಾವುದನ್ನಾದರೂ ಯಾವುದಾದರೊಂದು ಕಾರಣದಿಂದ ಸಮಸ್ಥಿತಿಯೆಂದು ಗ್ರಹಿಸುತ್ತಾನೆ, ಅದನ್ನು ಪಡೆಯಲು ಪ್ರಯತ್ನಿಸುತ್ತಾನೆ. ಒಬ್ಬನಿಗೆ ವಿಷಮವೆನ್ನಿಸಿದ್ದು ಕಾರಣಾಂತರಗಳಿಂದ ಇನ್ನೊಬ್ಬನಿಗೆ ಸಮವೆನ್ನಿಸಬಹುದು; ಒಬ್ಬನಿಗೇ ಒಂದು ಅವಸ್ಥೆಯಲ್ಲಿ ಹಾಗೆನ್ನಿಸಿದ್ದು ಅವಸ್ಥಾಂತರದಲ್ಲಿ ಹೀಗೆನ್ನಿಸಬಹುದು. ಸಮಸ್ಥಿತಿಯೇ ಸುಖ, ಸಮಾಧಾನ, ಮುಕ್ತಿ, ಸ್ವಾತಂತ್ರ್ಯ ಎಂಬ ಮೌಲ್ಯ, ಸತ್ಯವೊಂದು ಸಮಸ್ಥಿತಿಯ ವ್ಯವಸ್ಥೆ, ಸೌಂದರ್ಯ–ಒಳಿತು–ಉಪಯುಕ್ತತೆಗಳೂ ಹಾಗೆ. ಸ್ಥಿತಿ ಎಂದರೆ ಇರವು; ಅರಿವಿಲ್ಲದ ಇರವು ಅಪೂರ್ಣ, ಅಪೂರ್ಣದೇಶ–ಅಪೂರ್ಣ ಕಾಲಗಳಲ್ಲಿರುವ ಇರವು ಅಪೂರ್ಣ; ಅನುಭವದ ಸರ್ವಾಂಗಗಳಿಂದ ಸಮನ್ವಿತವಾಗದ ಇರವು ಅಪೂರ್ಣ. ಸಮನ್ವಯವು ಸಾಪೇಕ್ಷ ಪೂರ್ಣ, ಸಾಮರಸ್ಯವು ನಿರಪೇಕ್ಷವಾಗಿ ಪೂರ್ಣ; ಅದು ಸಾಮಶ್ರುತ್ಯಕ್ಕೆ ಪರ್ಯಾಯಾರ್ಥಕ; ಸಾಮಶ್ರುತ್ಯಕ=ಐಕಶ್ರುತ್ಯಗಳು ಅಭಿನ್ನ. ಮೊದಲು ಇದ್ದದ್ದು ಏಕವೋ? ಅನೇಕವೋ? ಕೊನೆಗೆ ನಿಲ್ಲುವುದು ಏಕವೋ ಅನೇಕವೋ–ಎಂಬುದೇ ಚರ್ಚಾವಸ್ತು; ನಿತ್ಯತೆ ಆತ್ಯಂತಿಕವೋ ಅನಿತ್ಯತೆ ಆತ್ಯಂತಿಕವೊ? ಎಂಬುದೂ ಚರ್ಚಾವಿಷಯ.

ನೈಸರ್ಗಿಕ ಮಾನವನ ಇರುವಿನ ಆದಿ–ಅಂತ್ಯಗಳು ನೈಸರ್ಗಿಕವಾಗಿ ಪ್ರತ್ಯಕ್ಷತಃ ಅವನಿಗೆ ಗೊತ್ತಿರುವುದಿಲ್ಲ, ಅವನ ಅನುಭವಕ್ಕೆ ಸೂಚಿತವಾಗಿಯೂ ಬಂದಿರುವುದಿಲ್ಲ. ಮಾನವನ ಅಹಂ ಹೀಗೆ ಮಧ್ಯಸ್ಥವಾದ ದೇಹಾತ್ಮಭಾವ; ಅದು ಅವನ ಸ್ವ, ಜ್ಞಾತೃ, ಅನುಭೋಕ್ತೃ, ಕರ್ತೃ, ಎನ್ನಿಸಿದ ಮನಃಕೇಂದ್ರ. ತನಗೆ ಮನಸ್ಸಿದೆ ಎಂದು ತಿಳಿದುಕೊಳ್ಳುವ ಮನಸ್ಸು ಇದೆ ಅವನಿಗೆ. ಅದಕ್ಕೆ ವಸ್ತುನಿಷ್ಠವಾದ ಪ್ರತ್ಯಕ್ಷ ಪ್ರಮಾಣವಿಲ್ಲ. ಪ್ರಮಾಣ ಅಗತ್ಯ ಪ್ರಮಿತಿಗೆ ಎಂಬ ಜ್ಞಾನವೂ ಹಾಗೇ ಸ್ವತಃಸಿದ್ಧ. ಸತ್ಯವೊಂದು, ಅದಕ್ಕೆ ಸಾಕ್ಷಿ ಇನ್ನೊಂದು–ಎಂಬುದೇ ವ್ಯವಹಾರ. ಸತ್ಯವೇ ಸಾಕ್ಷಿಯಾಗುವುದು ಪರಮಾರ್ಥ–ಸತ್ಯವೇ ಜ್ಞಾನ, ಅನಂತ, ಸತ್, ಚಿತ್, ಆನಂದ. ವ್ಯವಹಾರದಲ್ಲಿ ಜ್ಞಾತೃ, ಜ್ಞೇಯ, ಜ್ಞಾನ ಪ್ರಮಾಣ, ಜ್ಞಾನ ಪ್ರಕ್ರಿಯೆಗಳೆಲ್ಲವೂ ಪ್ರತ್ಯೇಕವೆಂದು ಗಣಿತವಾಗಿವೆ. ಈ ಗಣನೆಯೊಂದು ವ್ಯವಹಾರಕ್ಕೆ ಅನಿವಾರ್ಯವಾದ ಕಲ್ಪನೆ. ಪ್ರತ್ಯೇಕತೆಯ ಅಪೂರ್ಣತೆ (ಸಾಪೇಕ್ಷತೆ)ಯನ್ನು ಅಲಕ್ಷಿಸಿದರೆ ಮಾತ್ರ ವ್ಯವಹಾರವು ಸಾಧ್ಯ, ವ್ಯಾವಹಾರಿಕ ತರ್ಕವು ಸಾಧ್ಯ. ಇಂಥ ಅಲಕ್ಷ್ಯಗಳ ಅನುಕೂಲಸಿಂಧು ನ್ಯಾಯವನ್ನು 'ವ್ಯವಹಾರ', 'ವಿಜ್ಞಾನ' ಎಂದು ಮುಂತಾಗಿ ಕರೆಯುವುದು ಸಂಪ್ರದಾಯ. All knowing or experiencing is selective under natural human conditions– ಸ್ವಾಭಾವಿಕವಾದ ಮಾನುಷ ಸಂನಿವೇಶಗಳಲ್ಲಿ ತಿಳಿಯುವುದು, ಅನುಭವಿಸುವುದು ಎಂಬೀ ಎಲ್ಲವೂ ಆಯ್ಕೆಯನ್ನವಲಂಬಿಸಿದ್ದು. ಆ ಆಯ್ಕೆಯು ಅಜ್ಞಾತ, ಅರ್ಧಜ್ಞಾತ ಅಥವಾ ಪೂರ್ಣಜ್ಞಾತ ಎನ್ನಿಸುವುದು ವ್ಯವಹಾರತರ್ಕದಿಂದ ಸಿದ್ಧ. ಲೌಕಿಕವಾದ ಪ್ರತ್ಯಕ್ಷ–ಪರೋಕ್ಷಜ್ಞಾನಗಳೆರಡನ್ನೂ ಈ ನಿಯಮವು ಬಂಧಿಸಿದೆ. ಜಗತ್ತಿನ ಪ್ರತಿಯೊಂದೂ ಕಾರ್ಯಪುಂಜ ಅಥವಾ ಗುಣಪುಂಜ ಎಂದು ಇಂದಿನ ವಿಜ್ಞಾನ ಹೇಳುವಾಗ ವ್ಯಾಕರಣದ ಪದವರ್ಗಗಳಲ್ಲಿ ಕ್ರಿಯಾಪದ–ವಿಶೇಷಣಗಳನ್ನು ಬಿಟ್ಟರೆ, ಉಳಿದ ಯಾವುದಕ್ಕೂ ಆತ್ಯಂತಿಕ ಲೋಕಸತ್ಯತೆ ಇಲ್ಲವೆಂದಾಯಿತು. ಉಕ್ತ ಕರ್ಮಪುಂಜದ ಅನುಭವವು ಪೂರ್ಣತರ ಭಾವಾತ್ಮಕ, ಜ್ಞಾನವು ಅಪೂರ್ಣತರ. ಭಾವಾತ್ಮಕ (ಅಮೂರ್ತ Abstract) ಜ್ಞಾನದ ದೃಷ್ಟಿಯಿಂದ ಅದನ್ನು ಗುಣಪುಂಜವೆಂದು ಎಣಿಸುವುದು ಹೆಚ್ಚು ಸ್ವಾಭಾವಿಕ. ಅನುಭವದ ಅಥವಾ ಜ್ಞಾನದ ಇಂದ್ರಿಯಾದಿ ಸಾಧನಗಳು ಮೂರ್ತವಿರಲಿ, ಅಮೂರ್ತವಿರಲಿ–ಪರಿಮಿತ ಶಕ್ತಿ ಸಂಪನ್ನವಾಗಿರುವುದರಿಂದ ಅವು ದತ್ತಕಾರ್ಯ ಅಥವಾ ಗುಣಪುಂಜ (Bundle of qualities) ವೊಂದರ ಕೆಲವೇ ಗುಣ ಭಾವಗಳನ್ನು ಗ್ರಹಿಸಬಲ್ಲವಲ್ಲದೆ, ಎಲ್ಲ ಗುಣಭಾವಗಳನ್ನೂ ಅಲ್ಲ. ಈ ನಿಯಮವು ಪ್ರತ್ಯಕ್ಷಜ್ಞಾನದ ಮತ್ತು ಅದನ್ನಾಧರಿಸುವ ಅನುಮಿತಿ–ಉಪಮಿತಿಜ್ಞಾನಗಳ ಅಪೂರ್ಣತೆಯನ್ನು, ಅಸಮಗ್ರತೆಯನ್ನು ಎತ್ತಿ ಹೇಳುತ್ತದೆ. All selection involves exclusion– ಎಲ್ಲ ವಿಧದ ಆಯ್ಕೆಯೂ ಕೆಲ ಅಂಶಗಳನ್ನು ಹೊರಗೆ ತೆಗೆದಿಡುತ್ತದೆ– ಕವಿ, ವಿಜ್ಞಾನಿ, ಸಾಮಾನ್ಯರೆಲ್ಲರ ಜ್ಞಾನ ಪ್ರಕ್ರಿಯೆಯಲ್ಲೂ ಆಯ್ಕೆಯು ಅನಿವಾರ್ಯ ನಿಯಮವೆಂಬುದು ಮಾನಸ ಶಾಸ್ತ್ರೀಯ. ಆದುದರಿಂದ ಲೌಕಿಕನಾವನೂ ಒಂದರಲ್ಲಿ ವ್ಯಾವಹಾರಿಕ ಸತ್ಯವಾಗಿ ಇರುವ ಎಲ್ಲವನ್ನೂ ಹೇಳಲಾರ; ಎಲ್ಲರೂ ಮುಕ್ಕಾಲು ವ್ಯವಹಾರಿಗಳು (Empiricists) ಈ ದೃಷ್ಟಿಯಿಂದ ಪ್ರತ್ಯಕ್ಷಾನುಮಾನಗಳನ್ನಾಧರಿಸಿದ ವಿಚಾರವೆಲ್ಲವೂ 'ಕಾಲಿಲ್ಲದ ಕತೆ'ಯಾಗುತ್ತವೆ. ಅದರಿಂದ

ಕನಕನ ಮುಂಡಿಗೆಯೊಂದರಲ್ಲಿ "ಕಾಲಿಲ್ಲದಾತನು ಮರವನ್ನು ಹತ್ತಿದ ತಂದಾರಽತಾನ" ಎಂದು ಉದ್ಗರಿಸಲಾಗಿದೆ. ಶ್ರೀ ಶಂಕರಾಚಾರ್ಯರು "ತರ್ಕೋಽಪ್ರತಿಷ್ಠಃ" ಎಂದು ಧರ್ಮರಾಯನಂತೆ ಘೋಷಿಸಿದ್ದು ಈ ಅಂಶವನ್ನು ಗಮನಿಸಿಯೇ!

## ಸಾಧಕ ಧರ್ಮ

ಪರಮಾರ್ಥ ವಿಷಯದಲ್ಲಿ ಕಪಟ ಸಂನ್ಯಾಸಿಗಳ ಮಾತಿನಲ್ಲಿ ಶ್ರದ್ಧೆ ಇಡುವವರಂತೆ ಅಪೂರ್ಣಜ್ಞರಾದ ವಿಜ್ಞಾನನಿಷ್ಠ ನಾನಾತ್ವವಾದಿಗಳ ಮಾತಿನಲ್ಲಿ ಶ್ರದ್ಧೆಯಿಡುವುದೂ ಉಚ್ಚ ಸಾಂಸ್ಕೃತಿಕ ಮೌಲ್ಯಗಳ ದೃಷ್ಟಿಯಿಂದ ಅತ್ಯಂತ ಹಾನಿಕರ; ಆದರೆ ಯಾರನ್ನೂ ಯಾವುದರಲ್ಲೂ ನಂಬದ ಸಂಶಯಾತ್ಮಕತೆ ವಿನಾಶಕರ. ಜೊತೆಗೆ, ಲೋಕಜೀವನದ ಸಾಮಾನ್ಯ ವ್ಯವಹಾರ ನಡೆಯಲು ನಾನಾತ್ವದ ವೇದಾಂತಕ್ಕೆ ಅವಿರುದ್ಧವಾದ ನ್ಯಾಯವೈಶೇಷಿಕತೆಯೊಂದೇ ಮಾರ್ಗದರ್ಶಕ. ಆಪ್ತವಾಕ್ಯದ ಪ್ರಾಮಾಣ್ಯವನ್ನು (ಲೋಕಾತೀತ ಸತ್ಯದ ಬಗ್ಗೆ) ಪ್ರಶ್ನಿಸಲು ಬಂದಾಗ ಅವರು ಆ ವಿಷಯದಲ್ಲಿ ಅಪೂರ್ಣಜ್ಞರೆಂದು ತಳ್ಳಿಹಾಕಲೇಬೇಕಾಗುವುದು. ಉಪನಿಷದಾದಿ ಆಪ್ತವಾಕ್ಯಗಳ ಅರ್ಥಸಮನ್ವಯಗಳು ಒಂದಕ್ಕಿಂತ ಹೆಚ್ಚಿರುವುದರಿಂದ ಅವುಗಳ ಪ್ರಾಮಾಣ್ಯವನ್ನೇಕೆ ಪ್ರಶ್ನಿಸಬಾರದು? ಎಂದು ಕೇಳಬಹುದು; "ನೈಕೋ ಋಷಿರ್ಯಸ್ಯ ವಚಃ ಪ್ರಮಾಣಂ" ಎಂದು ಧರ್ಮರಾಯ ಅಂದೇ ಹೇಳಿದ್ದನು. ಇಂಥ ಸಂದರ್ಭದಲ್ಲಿ ಅನುಭವ, ತರ್ಕ, ಮನಃಶಾಸ್ತ್ರಗಳ ಸಹಾಯದಿಂದ ಬುದ್ಧಿವಂತನು ಮೌಲ್ಯ ತಾರತಮ್ಯವನ್ನು ನಿಷ್ಕರ್ಷಿಸಿ ಅರ್ಥಮಾಡಿಕೊಳ್ಳುವುದು ಅವನವನಿಗೇ ಬಿಟ್ಟದ್ದು. ವಿಜ್ಞಾನಕ್ಕೆ ಬೇಕಾದ್ದಕ್ಕಿಂತಲೂ ಹೆಚ್ಚಿನ ಮಟ್ಟದ ಪೂರ್ವಗ್ರಹರಾಹಿತ್ಯ ಇಕ್ಕೆ ಆವಶ್ಯಕ; ಅಸಾಧಕ ಜಿಜ್ಞಾಸುಗಳಿಗೆ ಮಾತ್ರ ಈ ಪ್ರಯತ್ನದಲ್ಲಿ ಸ್ಥಾನವಿಲ್ಲ; ಅವರದೆಲ್ಲ ಒಣಚರ್ಚೆ.

Absolute ಕೇವಲ ಪರಮಪರಿಪೂರ್ಣ ಸತ್ಯವೆಂಬುದಿಲ್ಲವೆನ್ನಲು ಅಂಥ ಸತ್ಯವಿರುವುದು ಅನಗತ್ಯ, ಜಗತ್ತನ್ನರ್ಥಮಾಡಿಕೊಳ್ಳಲು– ಎಂಬ ಅನಿಶಿತ ಮತಿವಂತಿಕೆಯೊಂದೇ ಕಾರಣ. ವಿಜ್ಞಾನವು ಪ್ರಮಾಣಿಸಬಲ್ಲ ಮಟ್ಟದಲ್ಲೇ ನಿಲ್ಲಿಸಿಬಿಟ್ಟು ತೃಪ್ತರಾಗುವ ಸತ್ಯಶೋಧಕರ ಅಕೃತಕೃತ್ಯತೆ ಪುರುಷಾರ್ಥ ವಿವೇಚಕರಾದ ಎಲ್ಲರಿಗೂ ಸಮಾಧಾನಕರವಾಗುವುದೆಂಬುದು ಸುಳ್ಳು. ಅರ್ಧದಿಂದ ಪೂರ್ಣವನ್ನು ಖಂಡಿಸ ಹೋಗುವುದೂ ವಾಮನನು ತ್ರಿವಿಕ್ರಮನು ಇರುವುದೇ ಸುಳ್ಳೆಂಬುದೂ ಒಂದೇ. "Be content with what you have – ಮನಸಿಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ" ಎಂಬುದು ಭೋಗ ಸಾಮಗ್ರೀ ಸಂಚಯದ ಬಗೆಗೆ ಅನ್ವಯಿಸುವ ಗಾದೆಯಲ್ಲದೆ, ಸತ್ಯ ಜಿಜ್ಞಾಸೆಯ ಬಗೆಗೆ ಅನ್ವಯಿಸುವ ಮಾತಲ್ಲ. "ಉ. ಮ. ಹೇ." ಎಂದಿಗೂ ಮಹಾನಾಗರಿಕತೆಯನ್ನು ಕಟ್ಟಲಾರದು. ಶುದ್ಧ ಪ್ರಾಪಂಚಿಕತೆ, ನಾಸ್ತಿಕತೆ, ಭೌತವಾದ, ವ್ಯವಹಾರ ವಾದಗಳಿಂದ ಧ್ಯೇಯ ಸ್ಫೂರ್ತಿಯು ತರ್ಕಶುದ್ಧವಾಗಿ ಯಾರಿಗೂ ದೊರಕಲಾರದು. ಒಂದು ಸಾವಿರದ ಗುರಿಯನ್ನಿಟ್ಟುಕೊಂಡವನು ನೂರನ್ನಾದರೂ ಗಳಿಸಿಯೇ

ತೀರುತ್ತಾನೆ ಎಂಬುದೇ ಧ್ಯೇಯವಾದದ ವ್ಯಾವಹಾರಿಕ ಗುಟ್ಟು. ಧ್ಯೇಯವಾದದ ತತ್ವಶಾಸ್ತ್ರೀಯ ವ್ಯಾಪಕತೆಯು ಜೀವನದ ಮೇಲೆ ಇರುವಷ್ಟು ಇನ್ನಾವ ಶಾಸ್ತ್ರ (ವಿಜ್ಞಾನ)ಕ್ಕೂ ಇಲ್ಲ. ಆದುದರಿಂದಲೇ ಅದರ ಅನ್ವೀಕ್ಷಣ ಶಕ್ತಿಯನ್ನು ಕೌಟಿಲ್ಯ ಕೊಂಡಾಡಿದ್ದಾನೆ. ವಿಜ್ಞಾನದ ಪ್ರಪಂಚದರ್ಶನವು ಪಾಕ್ಷಿಕವೆಂದು ಜೋಡರೇ ಸಾರಿದ್ದಾರೆ. ಹಾಗೇ ತತ್ವೇತರ ಶಾಸ್ತ್ರಗಳೆಲ್ಲವುಗಳ ಪ್ರಪಂಚಾರ್ಥವ್ಯಾಖ್ಯೆಯೂ ಅಂಥ ಪಾಕ್ಷಿಕ ಚಿತ್ರವನ್ನು ಕೊಡುವ ಯಾವುದಾದರೊಂದು ಶಾಸ್ತ್ರವನ್ನೋ ವಿಜ್ಞಾನವನ್ನೋ ಆಧರಿಸಿ ಅದರ ಗುಲಾಮವಾದ ತತ್ವಶಾಸ್ತ್ರವು ತತ್ವಶಾಸ್ತ್ರದ ಬರಿಯ ಆಭಾಸವೇ ಸರಿ. ವಿಜ್ಞಾನದಾಸ ತತ್ವಜ್ಞ ರಸೆಲ್; ಜೋಡರಲ್ಲ. ಜೋಡರು ದಾಸರಾಗದಿದ್ದರೂ ವಿಪರೀತ ವ್ಯಾಖ್ಯಾತೃಗಳಾದರು; ವಿಜ್ಞಾನಿಗಳ ತತ್ವಜ್ಞತೆ ತರ್ಕಶುದ್ಧವಾಗಿಲ್ಲವೆಂದು ತೋರಿಸಹೋಗಿ ಅಯಶಸ್ವಿತೆಗಿಳಿಯುವ ಅತಾರ್ಕಿಕತೆ–ಕುತಾರ್ಕಿಕತೆಗಳನ್ನು ಪ್ರದರ್ಶಿಸಿದ್ದಾರೆ; ತಮ್ಮ ಭಾವನಾಬಲಜನ್ಯವಾದ ಪೂರ್ವಗ್ರಹಗಳನ್ನು ಗ್ರಂಥದಲ್ಲಿ ಅನೇಕ ಕಡೆ ಹೊರಗೆಡಹಿದ್ದಾರೆ. ಅದರಲ್ಲಿ ಹೇಗೋ ಹಾಗೇ ಯೋಗಿಗಳ ತತ್ವಜ್ಞತೆಯನ್ನು ವಿಮರ್ಶಿಸುವುದರಲ್ಲಿ ಇನ್ನಷ್ಟು ಅಪತರ್ಕದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವರ "ದೀಡ್ ಶಾಣ್ಯ" ತನವನ್ನಿಲ್ಲಿ ಖಂಡಿಸಲು ಹೊರಟದ್ದು ಮಹಾಮಲ್ಲನಿಬರ್ಹಣ ನ್ಯಾಯದಂತೆ ಶಂಕರರು ಸಾಂಖ್ಯವನ್ನು ಮೊದಲು ಖಂಡಿಸಲು ಹೊರಟದ್ದನ್ನು ಕಂಡೇ.

## ವಿಜ್ಞಾನ ಮತ್ತು ಸಂಸ್ಕೃತಿ

ವಿಜ್ಞಾನ ಹೇಳುವ ವಸ್ತುಸ್ವರೂಪವು ವೈಜ್ಞಾನಿಕ ನವನಿರ್ಮಿತಿಗಳಿಗೆ ಹೆಚ್ಚಾಗಿ ಉಪಯುಕ್ತ. ಅದರ ಜಡತರ್ಕವು ಸರ್ವಾಂಶತಃ ಜೀವತ್ ಪ್ರಪಂಚಕ್ಕೆ ಅನ್ವಯಿಸದು. ಅದರ ಜಡಾದ್ವೈತವಾದರೂ ಜಡಪ್ರಪಂಚಕ್ಕೆ ಪರಿಸೀಮಿತ, ಜಡದ ಜಾಡ್ಯದ ಯಾಂತ್ರಿಕ ಸ್ವರೂಪ–ರಚನೆಗಳ ಔಪಯೋಗಿಕ ಅರ್ಥವೃತ್ತಿಗಷ್ಟೇ ಕಾರಣ–ವ್ಯವಹಾರ ಪ್ರಪಂಚದಲ್ಲಿ. ಅದರ ಈ ತಾತ್ವಿಕ ಬುನಾದಿಯನ್ನು ಆಧರಿಸುವ ಜೀವಶಾಸ್ತ್ರ, ಮನಃಶಾಸ್ತ್ರ, ತತ್ವಶಾಸ್ತ್ರ, ತರ್ಕಶಾಸ್ತ್ರಗಳೆಲ್ಲವೂ ಜೀವನದ ಮೌಲ್ಯಗಳ ವಿವೇಚನೆಯಲ್ಲಿ ಅಸಮರ್ಥವಾಗುವುವು, ಅಪವ್ಯಾಖ್ಯಾತೃಗಳಾಗುವುವು, ಅಂಧಗಜನ್ಯಾಯ ಪರಾಯಣವಾಗುವುವು. ಅವುಗಳ Physicalism ಭೌತನಿಷ್ಠತೆಯು ಜೀವನದಲ್ಲಿ ಅಲ್ಪವ್ಯಾಪ್ತಿಯುಳ್ಳದ್ದು. ಅದಕ್ಕೆ ಪುರುಷಾರ್ಥಗಳ (Values) ವಿವೇಚನೆಗಿಳಿಯುವ ಹಕ್ಕಿಲ್ಲ. ಅದರ "ಪುರುಷಾರ್ಥಗಳು" ಕೇವಲ ತದ್ಧಿತವಾದ ಪ್ರಯೋಜನ ಪರ್ಯಾಯಗಳು; ಅದರ ಸತ್ಯ, ಸೌಂದರ್ಯ, ಸೌಜನ್ಯಗಳೂ ಹಾಗೇ ಅತ್ಯಂತ ಮರ್ಯಾದಿತ ಕಾರ್ಯಕ್ಷೇತ್ರಕ್ಕೆ ಪರಿಸೀಮಿತ, ಪ್ರತ್ಯಕ್ಷಾನುಮಾನಗಳನ್ನು ಪ್ರಧಾನವನ್ನಾಗಿ ಇಟ್ಟುಕೊಂಡ ಶಾಸ್ತ್ರಗಳು ಲೋಕ ವ್ಯಾವಹಾರವೆಲ್ಲವುಗಳ ಲೌಕಿಕ ಮೌಲ್ಯಗಳ ವಿವೇಚನೆಯ ಹಕ್ಕುಳ್ಳಂಥವುಗಳು. ಧರ್ಮಾರ್ಥಕಾಮಗಳು ಲೌಕಿಕವಾದ ಸಾಂಸ್ಕೃತಿಕ ಮೌಲ್ಯಗಳು. ಧರ್ಮವು (ನೀತಿಯು) ಲೌಕಿಕ–ಅಲೌಕಿಕ ಮೌಲ್ಯಗಳ ಸೇತು; ಅದರ ವ್ಯಾಪ್ತಿ ಮಿಕ್ಕೆರಡು ಲೌಕಿಕ ಮೌಲ್ಯಗಳಿಗಿಂತ ಹೆಚ್ಚು. ಮೋಕ್ಷವು ಲೋಕಕ್ಕೆ ಪ್ರತ್ಯಕ್ಷವಾಗಿ ಅಸಂಬದ್ಧ, ಪರೋಕ್ಷವಾಗಿ

ಪರಾತ್ಪರ ಆಧಾರ. ಮೌಲ್ಯಕಲ್ಪನೆಯ ಮಹಾಪ್ರೇರಕ ನೀತಿ, ಧರ್ಮ. ಅದರ Self-transcendence ಸ್ವಾತೀತತೆಯೇ ಮೋಕ್ಷ!

ಮೌಲ್ಯವು ಮನಃ ಸಮಾಧಾನದ ಒಂದು ಘಟ್ಟ. ಮೌಲ್ಯಗಳ ನಿಃಶ್ರೇಣಿಯಲ್ಲಿ ಮುಕ್ತಿಯದು ಕೊನೆಯ ಮೆಟ್ಟಲು. ಸತ್ಯವು ಅನುಷೇಧಾತ್ಮಕವಾದ ಪ್ರಾಥಮಿಕ ಮೌಲ್ಯ. ಉಳಿದ ಮೌಲ್ಯಗಳೆಲ್ಲವೂ ಅದರ ಅವಿನಾಭಾವಿಗಳು. ವ್ಯಾಪಕಾರ್ಥದ ಮನಸ್ಸು ಇಂದ್ರಿಯ, ಮನ, ಬುದ್ಧಿ, ಚಿತ್ತ, ಅಹಂಕಾರ, ಆತ್ಮಗಳೆಲ್ಲವುಗಳನ್ನು ಒಳಗೊಳ್ಳುತ್ತದೆ––ವಿಜ್ಞಾನ ತಾತ್ವಿಕ ಪ್ರಪಂಚದಲ್ಲಿಂದು; ಆದರೆ ಆತ್ಮ ಇಲ್ಲಿ ಜೀವಾತ್ಮವಲ್ಲದೆ ಪರಮಾತ್ಮನಲ್ಲ– ದೇಹವೇ ಈ ಆತ್ಮನಿಗೆ ಅವಚ್ಛೇದಕ. ಧರ್ಮ ಅಥವಾ ನೀತಿ ಎಂಬ ಮೌಲ್ಯಕ್ಕೆ ಸೌಜನ್ಯ ಎಂಬ ಪಾಶ್ಚಾತ್ಯ ಮೌಲ್ಯವು ಸಮ; ಅರ್ಥಕ್ಕೆ ಪ್ರಯೋಜನ (utility) ಸರಿ; ಕಾಮಕ್ಕೆ* ಸೌಂದರ್ಯ (ರಸ) ಸಮ; ಮೋಕ್ಷಕ್ಕೆ ಸ್ವರ್ಗವಾಸ (ಅಥವಾ ನರಕವಾಸ) ಇಲ್ಲವೆ ಖಾಯಂ ಸ್ಥಿತಿ ಸಮಸ್ಥಾನೀಯ.

"ಭಾರತೀಯ ವೈಚಾರಿಕತೆಯಲ್ಲಿ ಕಂಡು ಬರುವ ನೀತಿಯ ಅಭಾವವು ಅದರ 'ಪ್ರಪಂಚ ಜೀವನ ನಶ್ವರ' ಎಂಬ ತತ್ವದ ತಾರ್ಕಿಕ ಪರಿಣಾಮ; ಅದೇ ಭಾರತದ ಎಲ್ಲ ಸಂಕಟಗಳಿಗೆ ಕಾರಣವಾಗಿದೆ" ಎಂದು ಶ್ವೈಟ್ಜರ್ ಹೇಳಿದ್ದು ಕೆಲ ಪಾಶ್ಚಾತ್ಯ ವಿದ್ವಾಂಸರ ಹಳೆಯ ಅಭಿಪ್ರಾಯದ ಹೊಸ ಶಬ್ದಾಂತರ ಪಾಠ. ಈಗ ಪಾಶ್ಚಾತ್ಯ ವಿಜ್ಞಾನ ಅದೇ ತತ್ವವನ್ನು ತೋರಿಸಿಲ್ಲವೇ? ಆದ್ದರಿಂದ ಪಾಶ್ಚಾತ್ಯರ ಸಮೃದ್ಧ ದೇಶಗಳಲ್ಲಿ ಯಾವುದಾದರೂ ಒಂದಕ್ಕೆ ಸಂಕಟ ಉಂಟಾಗಿದೆಯೆ? ಅಥವಾ ಅದರ ಸಂಕಟಕ್ಕಿಂತ ಹೆಚ್ಚಿನ ಸಂಕಟ ಈಗ ಭಾರತಕ್ಕೆ ಒದಗಿದೆಯೇ? ಭಾರತದಲ್ಲಿ ಎಲ್ಲರೂ ಯಾವಾಗಲಾದರೂ ನಶ್ವರವೆಂದು ಜೀವನವನ್ನು ಸಂನ್ಯಾಸಿಗಳಂತೆ ನಡೆಸಿದ್ದುಂಟೇ? ಮಹಾಭಾಗರಾದರೂ ಹಾಗೆ ಮಾಡಿದರೆ? ನಶ್ವರತ್ವವು ವೈಜ್ಞಾನಿಕ; ಅದರ ತಾರ್ಕಿಕ ನಿಗಮನ ಒಂದಲ್ಲ–ವಿವಿಧ. ಭಾರತ ಇಡಿಯಾಗಿ ಎಂದೂ ಅದರ ಒಂದು ವಿಧದ ತಾರ್ಕಿಕ ಪರಿಣಾಮವಾದ ನಿರಾಶಾವಾದವನ್ನು ಹಿಡಿದದ್ದಿಲ್ಲ. ಪ್ರತ್ಯಕ್ಷ ಅಸತ್ಯಕ್ಕೆ ಉದ್ದದ ಪ್ರತ್ಯುತ್ತರ ಅನಗತ್ಯ. 'ನಿಷ್ಕಾಮ ಕರ್ಮ' ಮತ್ತು 'ನಿವೃತ್ತಿಕರ್ಮ'ಗಳ ಅರ್ಥವನ್ನು ಅರಿಯಲಾರದವರು ಪಾಶ್ಚಾತ್ಯರಷ್ಟೇ ಅಲ್ಲ– ಅನೇಕ ಪೌರಸ್ತ್ಯರೂ ಎಂಬುದೇ ಭಾರತದ ಇಂದಿನ ದಿವಾಳಿ ಬುದ್ಧಿಗೆ ಕಾರಣ. ಅವೆರಡರ ಸಾರವಿರುವುದು ಸಜ್ಜನೋಪಕಾರದಲ್ಲಿ, ಸುಜೀವಸೇವೆಯಲ್ಲಿ, ಸರ್ವೋದಯದಲ್ಲಿ! ಒಂದು ಅಮುಕ್ತನಿಗೆ ಹೇಳಿದ ಶುದ್ಧಿಮಾರ್ಗ, ಇನ್ನೊಂದು ಬ್ರಹ್ಮ ಸಹಜವರ್ತನಾ ನೀತಿ!

---

* ಅಭಿಮಾನಾದ್ ರತಿಃ ಸಾಚ ಪರಿಪೋಷ ಮುಪೇಯುಷೀ
ವ್ಯಭಿಚಾರ್ಯಾದಿ ಸಾಮಾನ್ಯಾ ಚ್ಛೃಂಗಾರ ಇತಿಗೀಯತೆ ॥೪॥
ತದ್ಭೇದಾಃ ಕಾಮಮಿತರೇ ಹಾಸ್ಯಾದ್ಯಾ ಅಪ್ಯನೇಕಶಃ
ಸ್ವಸ್ವಸ್ಥಾಯಿ ವಿಶೇಷೋತ್ಥ ಪರಿಪೋಷ ಸ್ವಲಕ್ಷಣಾಃ ॥೫॥

– ಅಗ್ನಿ ಪುರಾಣದ ೩೩೯ನೆಯ ಅಧ್ಯಾಯ

ಮಹಾದರ್ಶಗಳು ಸರ್ವದಾ ವಂದ್ಯ; ಅವುಗಳು ಮಾನವ ಪ್ರಗತಿಯ ಕೊನೆಯ ಹಂತಗಳು. ಅವುಗಳತ್ತ ಒಯ್ಯುವ ಇತರ ಆದರ್ಶಗಳು ಯಥಾಶಕ್ತಿ ಗ್ರಾಹ್ಯವೆಂಬುದನ್ನೂ ಆಚರಣೀಯವೆಂಬುದನ್ನೂ ಎಲ್ಲ ತತ್ವಜ್ಞಾನಿಯೂ ಇಲ್ಲಿ ಹೇಳುತ್ತ ಬಂದಿದ್ದಾನೆ. ಆಯಾ ಐತಿಹಾಸಿಕ ಅವಧಿಗೆ ತಕ್ಕ ತತ್ವಪರಿಭಾಷೆ ಆಗಾಗ ಅರ್ಥವಿವರಣೆಗಾಗಿ ಬಳಸಲ್ಪಟ್ಟಿದೆ. ಸದ್ಯದ ಕಷ್ಟವು ಭಾರತಕ್ಕೆ ಎಲ್ಲ ಐತಿಹಾಸಿಕ ಅವಧಿಗಳಲ್ಲೂ ಇತ್ತೆಂಬುದು ಸುಳ್ಳು. ಭಾರತದಲ್ಲೇ ಮಾತ್ರವಲ್ಲ–ಯಾವ ದೇಶದಲ್ಲಿಯೂ ಅರಾಜಕೀಯ ತತ್ವಜ್ಞರ ಸಿದ್ಧಾಂತಗಳು (ಸತ್ಪರಿಣಾಮಕವಾಗಿರಲಿ, ದುಷ್ಪರಿಣಾಮಕರವಾಗಿರಲಿ) ದೇಶದಾದ್ಯಂತ ಶೀನಿ–ಕಿಟ್ಟ–ನಾಣಿ ಮತ್ತು ಗಾಂಧಿ–ನೆಹರು–ಸರದಾರರ ಮೇಲೆ ಪ್ರಭಾವ ಬೀರಿ ಪೂರ್ವವನ್ನು ಪಶ್ಚಿಮಗೊಳಿಸಿಯೇ ತೀರುತ್ತದೆ ಎಂಬುದು ಅನೈತಿಹಾಸಿಕ. ಪುರುಷಾರ್ಥಗಳ ಚತುರ್ವಿಧತೆಯನ್ನು ನಿತ್ಯವೂ ಒತ್ತಿ ಹೇಳುತ್ತ ಬಂದ ಭಾರತೀಯ ಪರಂಪರೆಯನ್ನು ಅನೈತಿಹಾಸಿಕವೆಂಬವನು ಕೇವಲ ಅನೃತವಾದಿ. ಪ್ರತಿಯೊಂದು ದೇಶಕ್ಕೂ ಕಷ್ಟಸುಖಗಳ ಅವಧಿಗಳು ಬರುತ್ತವೆ, ಹೋಗುತ್ತವೆ. ಅವುಗಳಿಗೆ ಅನೇಕ ಕಾರಣಗಳಿದ್ದರೂ "ರಾಜಾ ಕಾಲಸ್ಯ ಕಾರಣಂ" ಎಂಬುದು ಗಣ್ಯಕಾರಣದ ಉಲ್ಲೇಖ. ಜೀವನದ ಮಾನವ್ಯವ್ಯವಸ್ಥೆಯ ಪ್ರತ್ಯಕ್ಷಮೂಲ ಸರಕಾರ. ಭಾರತದ ಯಾವ ಸರಕಾರವೂ (ಅಲ್ಲಿ ಇಲ್ಲಿ ಒಂದೆರಡನ್ನು ಬಿಟ್ಟರೆ) "ಧರ್ಮ ಭೋಳೆ" ಆಗಿರಲಿಲ್ಲ. ಭಾರತಕ್ಕೆ ಹಿಂದೆ ಪಾಶ್ಚಾತ್ಯ ಪ್ರಪಂಚಕ್ಕಿರುವುದಕ್ಕಿಂತ ಹೆಚ್ಚಿನ ಕೀರ್ತಿ ಇತ್ತೆಂಬುದನ್ನು ಪ್ರಾಚೀನ ಇತಿಹಾಸವು ಸ್ಪಷ್ಟಪಡಿಸಿದೆ. ಅಂದು ಅತ್ತೆತನವನ್ನು ತೋರಲಿಲ್ಲ ಭಾರತ; ಇಂದು ಪಾಶ್ಚಾತ್ಯಬುದ್ಧಿ ಅತ್ತೆತನದಿಂದ ಮೂದಲಿಸುತ್ತಿದೆ. ಇದೇ ಸಾಕು ಯಾವುದರ ಸಂಸ್ಕೃತಿಯ ಮಟ್ಟ ಎಷ್ಟೆಂಬುದನ್ನು ತಿಳಿಸಲು!

## ಸ್ವಸ್ತಿ ಪಂಥ

ಸೃಷ್ಟಿ–ಸ್ಥಿತಿ–ಲಯಗಳು ಜಗತ್ತಿನಲ್ಲಿ ನಿತ್ಯವೂ ಕಂಡು ಬರುತ್ತವೆ; ಆದರೆ ಈ ಮೂರರಲ್ಲಿ ನಡುವಿನದು ಸಾತತ್ಯದಿಂದ ಸಾಗುತ್ತಿರುವುದು ಪರಮಸತ್ಯದ ಜಾಗತಿಕ ರೂಪಾಂತರದ ನಿಜವಾದ ಅಥವಾ ಅತಿಗಣ್ಯವಾದ ಮುಖವನ್ನು ನಿರ್ದೇಶಿಸುತ್ತದೆ. ಜಗತ್ತು ಇಡಿಯಾಗಿ ಅವಿನಷ್ಟ. Nothing is lost when a candle burns – ಮೇಣದ ಬತ್ತಿ ಉರಿದಾಗ ಏನೂ ನಷ್ಟ ಹೊಂದುವುದಿಲ್ಲ. ಅದೇ ವ್ಯಾವಹಾರಿಕವಾದ ಅಹಿಂಸೆ ಎಂಬ ಸತ್ಯ. ಅದು ಭಾರತದ ಜೀವನ ನೀತಿ. ಅದರ ವ್ಯಾಖ್ಯೆಯನ್ನು ಮಹಾತ್ಮಾ ಗಾಂಧಿಯವರು ಅತ್ಯಂತ ಸ್ಪಷ್ಟವಾಗಿ ವಿವರಿಸಿದ್ದಾರೆ. ಅವರ ವಿವರಣೆ ತೀರ ತರ್ಕಶುದ್ಧ ಮತ್ತು ವ್ಯವಹಾರ್ಯ– ಎಂಬುದು ಸೂಕ್ಷ್ಮಜ್ಞರಿಗೆ ಸುಲಭಗ್ರಾಹ್ಯ. ಅದೆಂದೂ ಧೀರವೃತ್ತಿ ವಿರೋಧಿಯಲ್ಲ, ಧೀರವೃತ್ತಿಗೆ ಅತ್ಯಂತ ಉತ್ತೇಜಕವಾದುದು. ಅಧೀರನು ದಾನವೀರನಲ್ಲ, ದಯಾವೀರನಲ್ಲ, ಧರ್ಮವೀರನಲ್ಲ, ಆಧ್ಯಾತ್ಮಿಕವೀರನಲ್ಲ– ಎಂಬುದು ಭಾರತದ ಪ್ರೌಢ ವಿದ್ಯಾವಂತರೆಲ್ಲರಿಗೂ ತಿಳಿದ ಸಂಗತಿ. ಔದಾರ್ಯವು ಧೀರತೆಯ ಅವಿನಾಭಾವಿ; ಅದೇ ತ್ಯಾಗ, ಪರೋಪಕಾರ, ಸರ್ವೋದಯ, ಜೀವನ ಪೋಷಕ ಆಚಾರ. ಆಧ್ಯಾತ್ಮಿಕತೆಯ ನೀತ್ಯತೀತತೆಯು ಅನೀತಿವಂತಿಕೆಯಲ್ಲ; ನೀತಿಯು ಸಹಜ ಸ್ವಭಾವವಾಗಿ ಬಿಡುವುದೆಂದೇ ಅರ್ಥ ಮುಕ್ತರಲ್ಲಿ.

ಇದೇ ವೇದೋಕ್ತ ಸ್ವಸ್ತಿಪಂಥ; ದುಷ್ಟ ನಿಗ್ರಹ–ಶಿಷ್ಟ ಪರಿಪಾಲನ ಈಶ್ವರನ ಮತ್ತು ಅವನ ಆರಾಧಕರೆಲ್ಲರ ಅನುಲ್ಲಂಘನೀಯ ಧರ್ಮವೆಂದು ಭಾರತ ತಿಳಿದಿತ್ತು, ತಿಳಿದಿದೆ. ಆದರೆ "ಬಲಿಯಸೀ ಕೇವಲಮೀಶ್ವರೇಚ್ಛಾ" ಎಂಬಂತೆ ಐತಿಹಾಸಿಕ ಶಕ್ತಿ–ಅಶಕ್ತಿಗಳು ದೇಶವೊಂದರ ಸಾರ್ವಜನಿಕ ಪರಿಸ್ಥಿತಿಯನ್ನು ಅದರ ನಿಯಾಮಕ ಮುಖಂಡರಲ್ಲಿ ಪ್ರವೇಶಿಸಿ ಬದಲಾಯಿಸಿಬಿಡುತ್ತವೆ. ಇಂಥ ಬದಲಾವಣೆಗೆ ಅದರ ತತ್ವಜ್ಞಾನ ಹೊಣೆಗಾರವಾಗದು. ಆಕಸ್ಮಿಕಗಳೆಲ್ಲವೂ ಮಾನವ ಯೋಜನೆಗೆ ಮೀರಿದಂಥವುಗಳು. ಮಾನವನಲ್ಲಿ ಅವಿಚಾರ–ವಿಚಾರಗಳೆರಡೂ ಅಜ್ಞಾತ–ಜ್ಞಾತಪ್ರಜ್ಞಾಸ್ತರಗಳಲ್ಲಿ ಇರುವುದು ಈಶ್ವರದತ್ತ. ಅಸಾಂದರ್ಭಿಕ ವಿಚಾರವು ಅವಿಚಾರ; ಅದು ಐತಿಹಾಸಿಕ ಅಶಕ್ತಿ; ಪ್ರಭುತ್ವ ಸಂಪನ್ನರಲ್ಲಿ ಕಂಡುಬಂದರೆ! ಈಶ್ವರನೇ ಐತಿಹಾಸಿಕ ನಿಯಾಮಕ–ಅವನನ್ನು ನಿಸರ್ಗವೆಂದರೆ ಅರ್ಥ ಬದಲಾಗದು; ನಿಸರ್ಗವು ಬ್ರಹ್ಮಸ್ವಭಾವ, ಮಾಯೆ. ಜಗತ್ತಿನ ರಾಷ್ಟ್ರಗಳಲ್ಲಿ ಭಾರತವೆಂದೂ ಅತಿಹೆಚ್ಚು ಅದೃಷ್ಟಹೀನವೆನ್ನಿಸಿಲ್ಲ. ಈಗಿನ ತುಲನಾತ್ಮಕವಾದ ದುರ್ದಶೆ ಅಪನಾಯಕತ್ವದ ಫಲ. ಅಪನಾಯಕತ್ವದ ಪರಿಹಾರವೀಗ ಅದೂರಸ್ಥ! ಅಪನಾಯಕರ ಸ್ಥಾನಾಪನ್ನತೆಗೆ ಜನರ ತಾತ್ಕಾಲಿಕ ಮನೋದೈಹಿಕ ಸೋಮಾರಿತನವೇ ಕಾರಣ!

## ಸೂತ್ರ ಮತ್ತು ಭಾಷ್ಯ

ಜಗತ್ತಿನಲ್ಲಿ ಅಪರಿವರ್ತನೀಯವಾದುದಿಲ್ಲ; ಅದಿರುವುದು ಅಜಗತ್ತಿನಲ್ಲಿ. ಜಗತ್ತು ಅಜಗತ್ತಿಗೇರಲು ಬಯಸುವುದೇ ಮುಮುಕ್ಷುತ್ವ. ಮಾನವನು ಜಗಲ್ಲಕ್ಷಣ ಸಂಪನ್ನ. ಜಗತ್ತು ಸಾಪೇಕ್ಷವಾದುದೆಂದರೆ ಅದು ಅಜಗತ್ತಿನೊಡನೆ; ಅದರ ಆಂತರಿಕ ವ್ಯಕ್ತಿಗಳು ಸಾಪೇಕ್ಷವಾಗಿರುವುದು ಪರಸ್ಪರ, ಜಾಗತಿಕ ಮತ್ತು ಅಜಾಗತಿಕ. ಜಗತ್ತು ಅಜಗತ್ತಾಗುವುದು ಅದರ ಪರಿವರ್ತನ ಸ್ವಭಾವದ ಅನಿವಾರ್ಯವಾದ ತಾರ್ಕಿಕ ಪರಿಣಾಮ; ಮಾನವ ಅದರಿಂದಲೇ ಇಲ್ಲಿ ದಿವ್ಯತೆಯ ಆದರ್ಶವನ್ನು ಮೆಚ್ಚಿದ್ದಾನೆ; ಮಾನವನ ದಿವ್ಯೀಕರಣ ಸಾಧ್ಯವೆಂದರು ಅರವಿಂದರು. ಜಗದ್ ಭೋಗದ ತ್ಯಾಗವು ಕೆಲ ವ್ಯಕ್ತಿಗಳಿಗೆ ಕೆಲ ಜೀವನಾವಸ್ಥೆಗಳಲ್ಲಿ ಮಾನಸ ಶಾಸ್ತ್ರೀಯವಾಗಿ ಅಗತ್ಯವಾದ ನೈತಿಕ ತರಬೇತಿನ ಸಾಧನ. ಯಶಸ್ವಿ ವಿಜಿಗೀಷು ಸರ್ವಜಿತ್–ಯಾಗವನ್ನು ಮಾಡಲೇಬೇಕು! ಕಾಳಿದಾಸ ಚಿತ್ರಿಸಿದ ದಿಲೀಪನ ಪಾತ್ರವು ಭಾರತೀಯ ಐಹಿಕ ಜೀವನದ ಅತ್ಯಂತ ತರ್ಕಶುದ್ಧ ಐತಿಹಾಸಿಕ ಆದರ್ಶಚಿತ್ರ. ಭಾರತದ ತತ್ವಜ್ಞಾನದ ತಾರ್ಕಿಕ ಪರಿಣಾಮಕ್ಕೆ ಕಾಳಿದಾಸ ನಿರ್ಮಿಸಿದ ಪಾತ್ರಗಳೇ ತಕ್ಕ ಮಾದರಿಗಳು! ಬ್ರಹ್ಮಸೂತ್ರಕ್ಕೆ ಶಾಂಕರ ಭಾಷ್ಯವಿರುವಂತೆ ಭಾರತೀಯ ನಾಗರಿಕತೆಯ ಸಾಂಸ್ಕೃತಿಕ ತತ್ವಜ್ಞಾನಕ್ಕೆ ಕಾಳಿದಾಸನ ಕೃತಿಗಳೇ ನಿಜವಾದ ಭಾಷ್ಯಗಳು; ವ್ಯಾಸಕೃತಿಯ (ಮಹಾಭಾರತದ) ಭಾಷ್ಯರೂಪವು ಕ್ಲಿಷ್ಟವೆನ್ನಿಸಿದವರು ಕಾಳಿದಾಸನ ಕೃತಿಗಳನ್ನು ಅವಲೋಕಿಸಲಿ! ವಾಲ್ಮೀಕಿ–ವ್ಯಾಸ–ಕಾಳಿದಾಸರ ಸಾಹಿತ್ಯವು ಭಾರತದ ತತ್ವದರ್ಶನದ ಮಹಾಭಾಷ್ಯ! ಅದರ ಸಾಕ್ಷಿಗೆ ವಿರುದ್ಧವಾದುದು ಭಾರತೀಯ ನಾಗರಿಕತೆ–ಸಂಸ್ಕೃತಿ–ತತ್ವಜ್ಞಾನಗಳ ಲಕ್ಷಣವನ್ನುಳ್ಳದ್ದಲ್ಲ!

## ತತ್ವಜ್ಞಾನದ ಸ್ಥಾನ ಮತ್ತು ಅರ್ಥದ ಅರ್ಥ

"It is a little difficult to pass from England to America, and then to Russia, and then to India and China and yet keep one's social plhilosophy unchanged. (Outlines of philosophy by Will Durant, P.416) – ಇಂಗ್ಲೆಂಡಿನಿಂದ ಅಮೇರಿಕಕ್ಕೆ, ಅಲ್ಲಿಂದ ರಶಿಯಕ್ಕೆ, ರಶಿಯದಿಂದ ಭಾರತ–ಚೀನಗಳಿಗೆ ಹೋಗುವುದು ಸ್ವಲ್ಪಕಷ್ಟ; ಹಾಗೆ ಹೋದರೆ ಹೋದಾತನು ತನ್ನ ಸಾಮಾಜಿಕ ತತ್ವಜ್ಞಾನವನ್ನು ಬದಲಾಯಿಸದೆ ಹಾಗೇ ಇಟ್ಟುಕೊಳ್ಳುವುದೂ ಸ್ವಲ್ಪ ಕಷ್ಟ"– ಎಂಬ ವಿಲ್ ಡ್ಯೂರೆಂಟರ ಅಭಿಪ್ರಾಯವು– ತತ್ವಜ್ಞಾನವು ಸಾಮಾಜಿಕ, ಆಯಾ ದೇಶಕಾಲಗಳಲ್ಲಿ ಬದುಕಿನ ಸಮಾಜದ ಸಾಂಸ್ಕೃತಿಕ ಭಾಷೆ– ಎಂದು ಅರ್ಥಮಾಡುತ್ತದೆ. ಅಂದರೆ ತತ್ವಜ್ಞಾನಗಳು ಬಹಳ; ಅವು ಮಾನವೇತಿಹಾಸದಲ್ಲಿ ಬಂದು ಹೋಗುತ್ತಿರುತ್ತವೆ– ಎಂದ ಹಾಗಾಯ್ತು. ಭಾರತದ ಪರಮಾರ್ಥ ದರ್ಶನದ ತತ್ವಜ್ಞಾನವನ್ನು ಯಾರೂ ಇಲ್ಲಿ ಹಾಗೆಂದು ತಿಳಿದದ್ದಿಲ್ಲ. ಹಾಗೆ ತಿಳಿಯುವುದು ತಪ್ಪೆಂದರೆ, ಹಾಗೆ ತಪ್ಪೆನ್ನುವುದು ತಪ್ಪೆನ್ನಬಹುದು. ಏಕೆಂದರೆ, ನಮ್ಮ ಪರಮಾರ್ಥವು (ಮೋಕ್ಷ, ಬ್ರಹ್ಮ) ದಿಕ್ಕಾಲಾದ್ಯನವಚ್ಛನ್ನ–Not bound by space and time – ದೇಶ ಕಾಲಗಳಿಂದ ಸೀಮಿತವಾದುದಲ್ಲ; ಹಾಗೇ ಸಮಾಜ ಸೀಮಿತವೂ ಅಲ್ಲ. ನಮ್ಮ ವ್ಯವಹಾರಾರ್ಥವು ಅಂಥ ಪರಮಾರ್ಥದ ಪಂಚಾಂಗದ ಮೇಲೆ ನಿಂತಿರಬೇಕೆಂಬುದು ಅರ್ಥ–ಕಾಮ–ಧರ್ಮಶಾಸ್ತ್ರಗಳ ನಿಲುಮೆ! ನಿರ್ಗುಣವು ಗುಣಾಧಾರ, ನಿಷ್ಕ್ರಿಯೆ ಕ್ರಿಯಾಧಾರ, ಅದ್ರವ್ಯವು ದ್ರವ್ಯಾಧಾರ! ಹೇಗೆ? ಸೀಮಿತದ ಸೀಮಿತತ್ವವೇ ಅಸೀಮಿತವನ್ನು ಆಧಾರವನ್ನಾಗಿ ತೆಗೆದುಕೊಳ್ಳುವ ತಾರ್ಕಿಕ ಒತ್ತಾಯುವನ್ನು ತರುತ್ತದೆ. ಅಸೀಮಿತವನ್ನು (ಗಡಿಗುರುತುಗಳಿಲ್ಲದ್ದನ್ನು) ಏನೆಂದು ವರ್ಣಿಸಲೂ ಸಾಧ್ಯವಾಗದಾಗ, ಅದನ್ನು ನಿರ್ಗುಣ, ನಿಷ್ಕರ್ಮ, ನಿರ್ದ್ರವ್ಯ ಎನ್ನಬೇಕಾದ್ದು (ನೇತಿ ನೇತೀತಿ ವಾಕ್ಯವ್ಯಂಗ್ಯವನ್ನಾಗಿ ಮಾಡಬೇಕಾದದ್ದು) ಅತ್ಯಂತ ಅನಿವಾರ್ಯವಾಗುವುದು ಅತ್ಯಂತ ಹೆಚ್ಚಿನ ಕಲ್ಪನಾಶಕ್ತಿಯುಳ್ಳ ದೇಶಕ್ಕೆ ಸಹಜ. ವಿಚಾರಕ್ಕೆ ನಿರ್ವಿಚಾರ ಆಧಾರ ಎಂಬಂಥ ತಾರ್ಕಿಕ ವಿರೋಧಗಳಿಂದ ವ್ಯವಹಾರ–ಪರಮಾರ್ಥಗಳನ್ನಿಡುವುದು ತರ್ಕ ಭಾಷೆಗೆ ಅನಿವಾರ್ಯ. ಈ ಅನಿವಾರ್ಯತೆಯು ಅಪಾರ್ಥಕ್ಕೆಡೆಗೊಡದಿರಬೇಕಾದರೆ ಮಾನಸಶಾಸ್ತ್ರದ ಪೂರ್ವೋಪಯುಕ್ತ ಭಾಷೆಯಿಂದ ಪೂರ್ಣಾಪೂರ್ಣ ವಿವರಣೆ ಕೊಡಬೇಕಾಗುತ್ತದೆ. ಅಸೀಮಿತವು ಅರ್ಥಾತೀತ, ಅರ್ಥವು ತನ್ನ ಅರ್ಥತ್ವನ್ನಿಟ್ಟು ಕೊಳ್ಳಬೇಕಾದರೆ ಸೀಮಾರೇಖೆಗಳಿಗೆ ಒಳಪಟ್ಟಿರಬೇಕಾಗುತ್ತದೆ!

"Nature seems, then, to present to our contemplation events of two different kinds, the physical and psychophysical. The former are the events of the inorganic realm, which physical science explains with ever-increasing success in terms of mechanistic causation (the principle of causation that finds the explanation of present events in terms only of the causal influence of antecedent events, without reference of any kind to possible future events). Psycho-physical events, on the other hand, cannot be completely explained in this way; for the explanation of them we have to take into account foresight

of the possible future course of events and striving guided by such foresight. All such events, all foresighted strivings, seems to be instances of a second fundamental type of causation, that type which we call purposive or telelogical – ಭೌತಿಕ ಮತ್ತು ಮಾನಸ ಭೌತಿಕ ಎಂಬ ಇಬ್ಬಗೆಯ ಘಟನೆಗಳನ್ನು ನಿಸರ್ಗವು ನಮ್ಮ ಚಿಂತನೀಯ ವಿಷಯಗಳನ್ನಾಗಿ ಮುಂದಿರಿಸುವಂತೆ ತೋರುತ್ತದೆ. ಮೊದಲನೆಯವು ನಿರವಯ ಪದಾರ್ಥಗಳ ಪ್ರಪಂಚಕ್ಕೆ ಸೇರಿದ್ದು; ಯಾಂತ್ರಿಕ ಕಾರ್ಯಕಾರಣ ನಿಯಮದ ಪ್ರಕಾರ ವಿಜ್ಞಾನವು ಅದನ್ನು ಹೆಚ್ಚು ಹೆಚ್ಚು ಯಶಸ್ವಿಯಾಗಿ ವಿವರಿಸುತ್ತ ಬಂದಿದೆ. (ಆ ನಿಯಮದ ಮೇರೆಗೆ ವರ್ತಮಾನ ಘಟನೆಗಳನ್ನು, ಭವಿಷ್ಯತ್ತಿನಲ್ಲಿ ಸಾಧ್ಯವಾಗಬಹುದಾದ ಯಾವ ಜಾತಿಯ ಘಟನೆಗಳಿಗೂ ಸಂಬಂಧಿಸಿರದಂತೆ, ತತ್ಪೂರ್ವ ಘಟನೆಗಳ ಕಾರಣಿಕ ಪ್ರಭಾವ ಮಾತ್ರದಿಂದ ವಿವರಿಸಲಾಗುತ್ತದೆ.) ತದ್ವಿರುದ್ಧವಾಗಿ, ಮಾನಸ ಭೌತಿಕ ಘಟನೆಗಳನ್ನು ಆ ಪ್ರಕಾರ ವಿವರಿಸಲಾಗುವುದಿಲ್ಲ. ಅವುಗಳ ವಿವರಣೆಗೆ ನಾವು ಆ ಘಟನೆಗಳ ಸಾಧ್ಯವಾದ ಭವಿಷ್ಯತ್ ಪ್ರವಾಹಗತಿಯ ಪೂರ್ವ ದರ್ಶನವನ್ನೂ ಅಂಥ ಪೂರ್ವದರ್ಶನದಿಂದ ನಿರ್ದೇಶಿತವಾದ ಪ್ರಯತ್ನವನ್ನೂ ಗಣನೆಗೆ ತೆಗೆದುಕೊಳ್ಳ ಬೇಕಾಗುತ್ತದೆ. ಅಂಥ ಘಟನೆಗಳೆಲ್ಲವೂ ಪೂರ್ವದರ್ಶನ ನಿರ್ದೇಶಿತವಾದ ಪ್ರಯತ್ನಗಳೆಲ್ಲವೂ–೨ನೆಯ ಮಾದರಿಯ ಕಾರ್ಯ ಕಾರಣ ಸಂಬಂಧ, ಅರ್ಥಾತ್, ಔದ್ದೇಶಿಕ ಅಥವಾ ಧ್ಯೇಯ, ಗುರಿ, ಅಂತ್ಯಕಾರಣ, ಉದ್ದೇಶ, ಮೌಲ್ಯ ಇಲ್ಲವೆ ಒಳಿತು ಎಂಬುದನ್ನು ತಿಳಿಸುವ ಶಾಸ್ತ್ರಕ್ಕೆ ಸಹಜವಾದ ಕಾರಣ–ಕಾರ್ಯಪ್ರಕಾರ–ಎಂಬುದರ ನಿದರ್ಶನಗಳಾಗಿ ತೋರುತ್ತವೆ ("The Energies of Men" by W.Mc Dougal, P. 5)– ಎಂದು ವಿಲಿಯಂ ಮೆಕ್ ಡೂಗಲ್ ಹೇಳಿರುವುದು ಕೇವಲ ಭೌತವಾದೀಯರಾದ ತತ್ತ್ವಶಾಸ್ತ್ರಕಾರರ ಕಣ್ಣುಗಳನ್ನು ತೆರೆಯಿಸದಿದ್ದುದು ಪರಮಾಶ್ಚರ್ಯ. ಕ್ಷುತ್ಪಿಪಾಸಾದಿ ದೈಹಿಕ ಮೂಲಪ್ರವೃತ್ತಿಗಳೂ ಭಯಕ್ರೋಧಾದಿ ಮಾನಸಿಕ ಮೂಲ ಪ್ರವೃತ್ತಿಗಳೂ ಮನುಷ್ಯನಿಗೆ ಹೇಗೆ ಸಹಜವೋ ಹಾಗೇ ಉದ್ದೇಶೋನ್ಮುಖವಾದ ಮನೋದೈಹಿಕ ವರ್ತನೆಯು ಮಾನವ ಪ್ರಾಣಿಗೆ ಸಹಜವಾಗಿರುವಾಗ, ಅವನ ತಿಳಿವಳಿಕೆಯ ಸರ್ವಾಂಶಗಳಲ್ಲೂ ಸರ್ವಸಂದರ್ಭಗಳಲ್ಲೂ (ಆ ತಿಳಿವಳಿಕೆ ಯಾವ ಸಾಧನದ ಮೂಲಕ ಅವನಿಗೆ ಉಂಟಾದರೂ) ಉದ್ದೇಶ ವಿಮುಖತೆಯ ಅತ್ಯಂತಾಭಾವವಿರುವುದು ಅತ್ಯಂತ ಸಂಭವ. ಅವನು 'ಸತ್ಯಕ್ಕಾಗಿ ಸತ್ಯ' ಎಂದು ಶೋಧಿಸಹೊರಟರೂ ನಿರುದ್ದೇಶ ಸತ್ಯವನ್ನವನು ಊಹಿಸುವುದೂ ಕೇವಲ ಅಸ್ವಾಭಾವಿಕವಾದುದು. ಮಾನವನು ಸರ್ವಾವಸ್ಥೆಗಳಲ್ಲೂ ಜಾಗ್ರದಜಾಗ್ರತ್ ಸ್ವರೂಪದ ಉದ್ದೇಶವನ್ನು ಉಳ್ಳವನಾದುದರಿಂದ ಉದ್ದೇಶವಿಲ್ಲದ ಯಾವುದೂ ಅವನಿಗೆ ಅರ್ಥವತ್ತೆನ್ನಿಸಲಾರದು. ಅರ್ಥಹೀನವಾದ ಜಗತ್ತು, ನಿಸರ್ಗ, ಸೃಷ್ಟಿ ಮುಂತಾದ ಕಲ್ಪನೆಗಳು ಅವನ ಪ್ರಕೃತಿಗೆ ವಿರುದ್ಧ, ಅನಾರೋಗ್ಯಕರ, ಅಸತ್ಯ. ನಿರವಯವ ಪದಾರ್ಥ ಪ್ರಪಂಚದ ಯಾಂತ್ರಿಕ ಕಾರ್ಯ ಕಾರಣಭಾವದ ಅಸ್ತಿತ್ವ ಕೂಡ ಅವನಿಗೆ ಅರ್ಥಪೂರ್ಣ (ಅರ್ಥವತ್–Significant) ಎನ್ನಿಸುವುದು ನಿಜವಾದರೆ, ಅದು ತನಗೆ ಸಂಬಂಧಿಸಿದ ಪ್ರತ್ಯಕ್ಷ ಅಥವಾ

ಪರೋಕ್ಷವಾದ ಅರ್ಥವನ್ನು (ಬೆಲೆಯನ್ನು, ಗುರಿಯನ್ನು, ಮೌಲ್ಯವನ್ನು, ಉದ್ದೇಶವನ್ನು, ಆತ್ಯಂತಿಕ ಸಮಾಧಾನಕರ ಮನಃಸ್ಥಿತಿಯನ್ನು ಉಂಟುಮಾಡುವ ಗುಣವನ್ನು) ಹೊಂದಿಯೇ ಇರುತ್ತದೆ– ಎಂಬುದು ಅಭೇದ್ಯಾನುಭವ. ಮಾನವನು ನಿಸರ್ಗದ ಹೊರಗಿನ ಪದಾರ್ಥವಲ್ಲ; ಅದರ ಅಂಕೆಗೊಳಗಾದ ವಿವಿಧ ಪದಾರ್ಥ ಜಾತಿಗಳಲ್ಲಿ ಒಂದು ಪದಾರ್ಥ ಜಾತಿಗೆ ಸೇರಿದವನು. ಅವನದು ಉದ್ದೇಶಯುಕ್ತವಾದ ಪ್ರಪಂಚ; ಅವನು ಉದ್ದೇಶಮಯ. ಅವನನ್ನು ಹಾಗೆ ನಿರ್ಮಿಸಿದ್ದು ನಿಸರ್ಗ, ಪ್ರಕೃತಿ, ಈಶ್ವರ ಸ್ವಭಾವ. ಮನಃಶಾಸ್ತ್ರೋಕ್ತವಾದ ಎಂಟು ಪ್ರಸಿದ್ಧ ಮೂಲಪ್ರವೃತ್ತಿಗಳು ಮಾನವನ ದೇಹ ರಕ್ಷಣೋದ್ದೇಶವನ್ನು ಉಳ್ಳವುಗಳಾಗಿರುವುದು ಅನುಭವಕ್ಕೆ ಬಂದಿರುವುದರಿಂದ, ಹಾಗೇ ಅವನ ಬುದ್ಧಿಯೆಂಬ ಮಾನಸ ಮೂಲಪ್ರವೃತ್ತಿಯೂ ಅವನ ಸ್ವತ್ವದ (ವ್ಯಕ್ತಿತ್ವದ, ಆತ್ಮದ) ಆರೋಗ್ಯವನ್ನು ಕಾಪಾಡುವ ಉದ್ದೇಶವನ್ನೇ ಉಳ್ಳದ್ದಾಗಿದೆ; ಅವುಗಳ ಸಾಪೇಕ್ಷ ಕುರುಡುತನದಂತೆಯೇ ಇದರ ಸಾಪೇಕ್ಷ ಕುರುಡುತನವೂ ಎಷ್ಟೋ ಸಲ ಉದ್ದೇಶ ಹಾನಿಯನ್ನುಂಟು ಮಾಡಿ ಅವನಿಗೆ ಅರಕ್ಷಿತತೆಯನ್ನು ತಂದೊಡ್ಡುತ್ತದೆ. ಆದುದರಿಂದ ಮಾನವ ವಿಭಾಗದಲ್ಲಿ ಸೋದ್ದೇಶವಾದ ಸೃಷ್ಟಿಯು ಜಡವಿಭಾಗದಲ್ಲಿ ನಿರುದ್ದೇಶವಾಗಿರುವುದು ಆ ಈ ಮನುಷ್ಯ ಬುದ್ಧಿಗೆ ತೋರುವ ಆಭಾಸವೋ ನಿಜವೋ? ಯಾರು ನೈಸರ್ಗಿಕವಗಿ ನಿರ್ಣಯಿಸಬಲ್ಲರು? ಅನಿರ್ಣೀತವು ನಂಬಲರ್ಹವಾದ ಸತ್ಯವಲ್ಲ. ಜೊತೆಗೆ, ಉದ್ದೇಶಮಯ ದೃಷ್ಟಿಗೆ ಉದ್ದೇಶವನ್ನು ತನ್ನ ಹೊರಗೆ ಕಾಣುವುದು ಎಷ್ಟು ಸ್ವಾಭಾವಿಕವೋ ನಿರುದ್ದೇಶವನ್ನು ಕಾಣುವುದು ಅಷ್ಟೇ ಅಸ್ವಾಭಾವಿಕ. ವಿಚಾರ ಜೀವಿಯಾದ ಮಾನವನ ವಿಚಾರದ ಆದಿ–ಅಂತಗಳು ಉದ್ದೇಶವನ್ನು ಆಧರಿಸಿರುತ್ತವೆ. ಆದುದರಿಂದ ಸೃಷ್ಟಿ ವಿಚಾರವು ಸೃಷ್ಟಿಯು ನಿರ್ವಿಚಾರವೆಂದು ತೀರ್ಮಾನಿಸುವುದೂ ವಿಚಾರ ಮಾಡುವುದು ಪ್ರಯೋಜನವಿಲ್ಲವೆಂದು ವಿಚಾರಿಸಿ ನಿಗಮನಿಸುವುದೂ ಒಂದೇ. ಜೀವತ್ ಪದಾರ್ಥಕ್ಕೆ ಉದ್ದೇಶಯುಕ್ತ ವರ್ತನೆ ಇರುವುದಾದರೆ, ಸಂಪೂರ್ಣ ಜೀವಶಕ್ತಿ ಸಂಪರ್ಕ ಇಲ್ಲವೇ ಇಲ್ಲವೆಂದು ನಿರ್ಣಯಿಸಿ ಹೇಳಲು ತಕ್ಕ ಜಡಪದಾರ್ಥವು ಅಲಭ್ಯ. ವಿಚಾರವು ಜೀವಸಾಪೇಕ್ಷ. ಪ್ರಾಣಿಗಳಲ್ಲಿ ವಿಚಾರಶಕ್ತಿ ಅಲ್ಪಾಂಶವೂ ಇಲ್ಲವೆಂಬುದು ಪ್ರತ್ಯಕ್ಷ ವಿರುದ್ಧವಾದ ಅಸಂಬದ್ಧ ಪ್ರಲಾಪ, ಆಭಾಸಿಕ ವಿಜ್ಞಾನ. ಆದುದರಿಂದ ಎಲ್ಲವೂ ಜೀವಶಕ್ತಿಮಯ, ಆತ್ಮಸಾರವತ್, ಆನಂದವನ್ನು (ಮುಕ್ತಿಯನ್ನು) ಪರಮೋದ್ದೇಶವನ್ನಾಗಿ ಉಳ್ಳದ್ದು– ಎನ್ನುತ್ತದೆ ವ್ಯಾಸಭಾರತ, ಔಪನಿಷದಿಕ ಪ್ರಪಂಚ!

> **"ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ**
> **ಆನಂದೇನ ಜಾತಾನಿ ಜೀವಂತಿ**
> **ಆನಂದಂ ಪ್ರಯಂತ್ಯಭಿಸಂವಿಶಂತಿ!"**

## ಸತ್ಯ, ಸುಳ್ಳು, ಆಶಾವಾದ

ನಿರುದ್ದೇಶವೂ ಒಂದು ಉದ್ದೇಶವೆಂಬುದೂ ಸಂಪೂರ್ಣ ಪೂರ್ವಗ್ರಹರಹಿತವಾದ ಸತ್ಯಶೋಧನವೆಂಬುದೂ ಒಂದೇ. ಮಾನವ ಬುದ್ಧಿಯೊಂದು ಪೂರ್ವಗ್ರಹ, ಸಹಜಪ್ರವೃತ್ತಿ,

ಮೂಲಪ್ರವೃತ್ತಿ, ಅದು ಸ್ವತಃಪ್ರಮಾಣಸಿದ್ಧ; ಅದಕ್ಕೆ ಪರತಃ ಪ್ರಮಾಣವಿಲ್ಲ– ಅವನವನ ದೃಷ್ಟಿಯಿಂದ ಅದು ವ್ಯಕ್ತಿನಿಷ್ಠ–ರಸೆಲ್ಲಾದಿಗಳ ವಿಚಾರಸರಣಿಯನ್ನನುಸರಿಸಿದರೆ. ಆಗ ಅವನವನು ಕಂಡದ್ದು ಅವನವನಿಗೇ ಸತ್ಯವೆನ್ನಬೇಕಾಗಿ ಬಂದು ತತ್ವವಿಚಾರದ ವಿಮರ್ಶೆ ಅರ್ಥಹೀನವಾಗಿ ಹೋಗುವುದು. ಬಹು ಮನುಷ್ಯ ಸಾಮಾನ್ಯವಾದ ಅನುಭವಗಳಿರುವವರಿಗೆ ಹಾಗೆ ಹೇಳುವುದು ಅವಾಸ್ತವಿಕವಾಗುತ್ತದೆ. ಆತ್ಮಾನುಭವ ಸಂಪನ್ನನು ಜಗತ್ತಿನಲ್ಲಿ ಒಬ್ಬನೇ ಒಬ್ಬನು ಆಗಿಹೋಗಿದ್ದರೆ ಹಾಗೂ ಹೇಳಬಹುದಾಗಿತ್ತು. ಬಹುವಚನ ವೇದ್ಯವಾದ ಆತ್ಮಜ್ಞರ ಆಪ್ತವಾಕ್ಯಗಳು ಆತ್ಮಸತ್ಯತೆಯನ್ನು ಸಾರುವಾಗ ಅದನ್ನು ವಸ್ತುನಿಷ್ಠ (ಅಥವಾ ಉಳಿದೆಲ್ಲವುಗಳಂತೆ ಅಂತರ್ ವೈಯಕ್ತಿಕ) ಎನ್ನಲು ಯಾವ ಅಭ್ಯಂತರವೂ ಇಲ್ಲ. ಕಲ್ಪನೆಗಳಲ್ಲಿ ಹೇಗೋ ಹಾಗೇ ಆಪ್ತವಾಕ್ಯಗತ ಆತ್ಮಾನುಭವಗಳಲ್ಲೂ ಸತ್ಯಾಸತ್ಯತೆಗಳಿರುವುದು ಮನುಷ್ಯ (ಸತ್ಯಶೋಧಕ) ಕಲ್ಪಿಸಿಕೊಂಡ ಸತ್ಯದ ಲಕ್ಷಣವನ್ನು ಆಧರಿಸಿರುತ್ತದೆ. ಪ್ರಮಾಣಶಾಸ್ತ್ರವು ಸತ್ಯದ ಒಂದಕ್ಕಿಂತ ಹೆಚ್ಚಿನ ಲಕ್ಷಣಗಳನ್ನು ಕೊಟ್ಟಿರುವುದು ಈ ಮಾತಿಗೆ ಸಾಕ್ಷಿ. ಸ್ವಪ್ನಸತ್ಯದಂಥ ಕೆಲಸಕ್ಕೆ ಬಾರದ ಅನುಭವ, ಘಟನೆ, ವಿಷಯ ಎಂಬುದನ್ನು ಜಗತ್ತಿನ ಆಧಾರ ಸತ್ಯವೆಂದು ಹೇಗೆ ಒಪ್ಪುವುದಿಲ್ಲವೋ ಹಾಗೇ ವಿಜ್ಞಾನೋಪಕರಣಕ್ಕಷ್ಟೇ ಗೋಚರವಾಗುವ ಭೌತಿಕತೆ ಎಂಬ ಸತ್ಯವನ್ನು ಅಥವಾ ಶುಷ್ಕ ಬುದ್ಧಿಗೆ ಮಾತ್ರ ಗೋಚರವಾಗುವ ವೈಚಾರಿಕತೆ, ಗಾಣಿತಿಕತೆ (ತಾರ್ಕಿಕತೆ) ಎಂಬ ಸತ್ಯಭಾವವನ್ನೂ ಭಾರತವು ಜಗದಾಧಾರ ಸತ್ಯದ ಲಕ್ಷ್ಯತಾವಚ್ಛೇದಕವೆಂದು ಒಪ್ಪಿಕೊಳ್ಳುವುದಿಲ್ಲ. ಸತ್ಯಪ್ರಪಂಚಗಳು ೩ರೆಂಬ ಜೋಡವಾದದಂತೆ ೩ಕ್ಕೂ ಹೆಚ್ಚಿನ ಸತ್ಯ ಜಾತಿಗಳನ್ನು ಹೇಳಬಹುದು. ಆಗ ಸುಳ್ಳೂ ಒಂದು ಜಾತಿಯ ಸತ್ಯವೇ ಆಗಬೇಕಾಗಿ ಬರುವುದು.* ವಿಚಾರದ ಈ ದುರವಸ್ಥೆಯನ್ನು ಪರಿಹರಿಸಿಕೊಳ್ಳಲು ಜಗಾದಾಧಾರ ಸತ್ಯವು ಒಂದೇ ಎಲ್ಲ ಕೆಲಸಕ್ಕೆ ಬರುವ ಮೂಲ ಸತ್ಯ; ಉಳಿದವುಗಳು ಸಾಪೇಕ್ಷವಾಗಿ ಆಭಾಸಿಕವಾದ ಸತ್ಯಗಳು ಎಂದು ವೇದಾಂತವು ವರ್ಣಿಸ ಹೊರಟದ್ದು!

ಪರಮಾತ್ಮನು ಜಗತ್ತನ್ನು ತನ್ನ ಲೀಲೆಗಾಗಿ ನಿರ್ಮಿಸಿದನೆಂಬ ನಂಬಿಗೆಗೆ ಎದುರಾಗಿ ಮನುಷ್ಯರನ್ನೂ ಇತರ ಜೀವಿಗಳನ್ನೂ ಆತನು ಆಟಿಗೆಯ ಸಾಮಾನುಗಳಂತೆ ಅವರ ಸುಖದುಃಖಗಳನ್ನು ಗಣಿಸದೆ ಬೇಕು ಬೇಕಾದ ಹಾಗೆ ನಡೆಸಿಕೊಳ್ಳುವುದರ ಮೂಲಕ ಗೋಳು ಹೊಯ್ದುಕೊಳ್ಳುತ್ತಾನೆ – ಅವನೆಂಥ ದೇವರು? ಎಂಬ ಪ್ರಶ್ನೆ ಬಂದದ್ದುಂಟು. “ನಿಷ್ಕರ್ಮಿ”ಗಳಾದ ಮುಕ್ತರ ಕರ್ಮದಂತೆ, “ನಿರ್ಗುಣಿ”ಗಳ ಗುಣವಂತಿಕೆಯಂತೆ, “ನಿಸ್ಪೃಹರ” ಲೋಕಹಿತೇಚ್ಛೆಯಂತೆ ಪರಮಾತ್ಮನ ಲೀಲೆಯಾದ ಸೃಷ್ಟಿ–ಸ್ಥಿತಿ–ಲಯಗಳಾದರೂ ಸ್ವಸ್ತಿಪಂಥವೆಂದೇ ಭಾವಿಸಲರ್ಹ. ಅಧಿಷ್ಠಾನ, ಕರ್ತೃ, ಕರಣ, ಕರ್ಮ ಮತ್ತು ದೈವೇಚ್ಛೆಗಳೆಂಬ ಐದು ಕಾರಣ ಸಾಮಗ್ರಿಗಳಿಂದ ಪ್ರಪಂಚದ ಅವಸ್ಥೆಗಳು ಸಂಭವಿಸುವುವೆಂದಾಗ ದೈವೇಚ್ಛೆಯ ಕಾರಣತ್ವ ಐದನೆಯ ಒಂದು; ಉಳಿದ ನಾಲ್ಕು ಅಂಶಗಳು ದೇವರ ಇಚ್ಛೆಯ ಜಾತಿಗೆ ಸೇರದ ಸ್ವಭಾವ ರೂಪದವುಗಳು. ಮಾಯಾತ್ಮಕ ಸ್ವಭಾವದ ಜಾಲದಿಂದ ಮುಕ್ತರಾಗಲು ಮನುಷ್ಯರು ದೇವರಿತ್ತ ಇಚ್ಛಾಶಕ್ತಿಯ ಬಲದಿಂದ ದೈವೇಚ್ಛೆಯನ್ನು ಅನುಕೂಲಿಸಿಕೊಂಡು

---

* “Lie is the first step towards truth.”

ಜಡದ ಕಾರ್ಯಜಾಲದಿಂದ ಮುಕ್ತರಾಗಬಹುದೆಂಬುದು ಲೀಲಾ ವಾದದಿಂದ ನಿಮಗನಿಸಲಾದ ನಿರಾಶಾವಾದಕ್ಕೆ ಉತ್ತರ. ವಿಜ್ಞಾನವು ಜಗತ್ತಿನ "ಏಕೆ"ಗೆ ಉತ್ತರ ಕೊಡಲಾರದೆ "ಹೇಗೆ"ಗೆ ಉತ್ತರ ಕೊಡ ಹೋದರೂ ಸಂಪೂರ್ಣ ಯಶಸ್ವಿಯಾಗಿಲ್ಲ. ಆದುದರಿಂದ ಪಾರಿಶೇಷಿಕ ನ್ಯಾಯದಂತೆ ವಿದಗ್ಧನಿಗುಳಿದದ್ದು ಕಾರ್ಯಕಾರಣಧರ್ಮಕ್ಕೆ ವಿರುದ್ಧವಾದ ಇಚ್ಛಾಶಕ್ತಿಯ ರಕ್ಷಣೆಯೊಂದೇ. ಅದೇ ಆಶಾವಾದದ ಅನಿವಾರ್ಯ ಆಧಾರ.

## ವ್ಯಾಸನ ಆತ್ಮ

ಈ ಬಗೆಯ ಮೂಲಭೂತ ಆಶಾವಾದವು ಭಾರತದ ತತ್ವಜ್ಞಾನದ ಒಳದನಿಯಾಗಿರುವಾಗ "ಟ್ರಾಜೆಡಿ" ಪ್ರಿಯರಾದ (ಆ ಪ್ರಿಯತೆಯಲ್ಲಡಗಿದ ನಿರಾಶಾವಾದವನ್ನು ಮುಚ್ಚಿಕೊಂಡ) ಪಾಶ್ಚಾತ್ಯರು ಭಾರತ ನಿರಾಶಾವಾದಿ, ನಿಷ್ಕ್ರಿಯವಾದಿ ಎಂದೂ ಪಶ್ಚಿಮಾರ್ಧ ಗೋಲದವರು ಆಶಾವಾದಿ, ಕ್ರಿಯಾವಾದಿಗಳೆಂದೂ ಹೇಗೆ ಹೇಳುವರೋ ಅವರಿಗೇ ಗೊತ್ತು. ನಿರಾಶಾಸ್ಥಿತಿಯು, ಜಗತ್ತುಚ್ಛ ಬುದ್ಧಿಯು, ಭೋಗಜಿಹಾಸೆಯು ಸಾಧಕನ ಸಾಧನದ ಒಂದು ಮುಖ್ಯ ಹಂತ, ಅವಸ್ಥೆ; ಅದು ಸಾಧಕನ ಸರ್ವಾವಸ್ಥೆಗಳಿಗೆ ಸಾಧಾರಣವೂ ಅಲ್ಲ, ಅಂತ್ಯಾವಸ್ಥೆಯೂ ಅಲ್ಲ. ಪೂರ್ಣತ್ವವೇ ಸಿದ್ಧಿ. ಪೂರ್ಣತೆ, ಮುಕ್ತಿ, ಬ್ರಹ್ಮತ್ವ, ಆತ್ಮಸಾಕ್ಷಾತ್ಕಾರ Absolute perfection of spiritual personality ಎಂಬಿವು ಪರ್ಯಾಯಾರ್ಥಕ ಪದಗಳು. ರಮಣರೂ ಅರವಿಂದರೂ ಈ ಶತಮಾನದ ಪೂರ್ಣಾತ್ಮರು–ವ್ಯಾಸಧರ್ಮಪ್ರಭರು, ಭಾರತದ ಮತ್ತು ಜಗತ್ತಿನ ಆದರ್ಶಮಾನವರು. ದಾನವ, ಮಾನವ, ದೇವರುಗಳು ನಿತ್ಯಪದಾರ್ಥದ ದೃಷ್ಟಿಯಿಂದ ಜಾತ್ಯಾಭಿನ್ನರಲ್ಲ; ಅವರಿಗೆ ಆತ್ಮವು ಸಾಧಾರಣ; ಆತ್ಮಕ್ಕೆ ಹೊದಿಕೆಯಂತಿರುವ ತಾಮಸ, ರಾಜಸ, ಸಾತ್ವಿಕಗುಣಗಳು ಅವರ ಪ್ರತ್ಯೇಕತೆಗೆ ಅವಚ್ಛೇದಕಗಳು. ಆದುದರಿಂದ ಮಾನವ ಕಲ್ಪಿತ ನಿರಾಕಾರ ಬ್ರಹ್ಮನೂ Anthropomorphic ಮಾನವಾದ್ಯತ ಕಲ್ಪನೆಯಿಂದ ಕಲ್ಪಿತವಾದ ಆಕಾರವೆಂಬ ವಾದದಲ್ಲಿ ಹುರುಳಿಲ್ಲ. ಮಾನವ್ಯ ಕಲ್ಪನಾಚ್ಛಾಯೆ ಅದರಲ್ಲೂ ಇದೆಯೆಂಬುದಾದರೆ, ಮಾನವನಿಗೆ ಅಂಥ ಮಾನವೀಯ ಛಾಯಾಂಶ ಕೂಡ ಇಲ್ಲದ ಅಮಾನವತೆಯನ್ನು ಕಲ್ಪಿಸಲು ಅಸಾಧ್ಯವೆಂದು ಕಠೋರವಾಗಿ ಪ್ರತ್ಯುತ್ತರ ಕೊಡಬೇಕಾದೀತು; ಆಗ ವಿಜ್ಞಾನದ ಭೌತಿಕತೆಯುಳ್ಳ ಪ್ರಾಥಮಿಕ ಗುಣಪುಂಜಗಳಲ್ಲೂ ಮಾನವೀಯ ಕಲ್ಪನೆ ಹುದುಗಿದೆ ಎಂದು ಮಾರುತ್ತರ ಕೊಡಬಹುದು. ಮಾನವತ್ವದಲ್ಲಿ ಅವನ ಶರೀರದ ಜಡಾಂಶವಿದೆ; ಅದು ಸರ್ವವಸ್ತು ಸಾಧಾರಣ; ಹಾಗೇ ಅದರಲ್ಲಿ ಆತ್ಮಭಾವವಿದೆ; ಅದೂ ಸರ್ವವಸ್ತುಸಾಧಾರಣ. ಹೀಗಿರುವಾಗ ವಿಶಿಷ್ಟ ಮಾನವೀಯತೆ ಎಂದರೆ ಏನು? ಅದೆಲ್ಲಿದೆ? ವ್ಯವಹಾರ ಮಾನವನು ಭೋಗಾಸಕ್ತ; ಅವನಷ್ಟೇ ಸರ್ವಮಾನವ ಪ್ರತಿನಿಧಿಯೆಂದು ಒಪ್ಪುವುದು ಪ್ರತ್ಯಕ್ಷ ವಿರುದ್ಧ; ಹಾಗೆಂದು ತಿಳಿದ ಅಲ್ಪವ್ಯಾಪ್ತಿಯ ಪ್ರತ್ಯಕ್ಷಕ್ಕೆ ಅವನು ರಾಜಸ. ತಾಮಸತ್ವ, ರಾಜಸತ್ವ, ಸಾತ್ವಿಕತ್ವಗಳು ಆತ್ಮವಿಕಾಸದ ಮೂರು ಅವಸ್ಥೆಗಳು. ಮಾನವತ್ವವು ಆತ್ಮದ ಅಳತೆಯ ಮೂಲ ಘಟಕವಲ್ಲ. ಆತ್ಮವೇ ಸರ್ವಮೂಲ. ಆತ್ಮವು

ಸಾತ್ವಿಕತೆಯನ್ನೂ ಮೀರಿ ನಿಂತ ಸ್ವಸ್ತಿಪಂಥದ ಬ್ರಹ್ಮ ಎಂದು ಕೂಡ ವರ್ಣಿತವಾಗಿರುವಾಗ, ಈಶ್ವರಕಲ್ಪನೆಯ ದೇವತ್ವಕ್ಕೂ ಅದೇ ಮೂಲಾಧಾರವೆಂದಿರುವಾಗ, ಅದೆಂದೂ ಈಶ್ವರನಷ್ಟೂ ಅತ್ಯಲ್ಪಾಂಶ ಮಾನವೀಯ ಕಲ್ಪನೆಯಿಂದ ಪರಿಸೀಮಿತವಾದುದಲ್ಲ. ಆದುದರಿಂದ ವ್ಯಾಸನ ಆತ್ಮದ ವ್ಯಾಸವು (Diameter) ಪರಿಧಿರಹಿತವಾದದ್ದು!

## ಪಾಶ್ಚಾತ್ಯ ಆರೋಪ

ಹಿಂದುಗಳ ಅನುಭಾವ (ಯೋಗ) ಸಿದ್ಧಾಂತವು ವಿಧಿವಾದಕ್ಕೊಯ್ದು ಮುಟ್ಟಿಸುವುದು, ಅದನ್ನು ನಾವು ಸ್ವೀಕರಿಸೆವು, ಜೀವನ ಅದನ್ನು ಅಲಕ್ಷಿಸಿ ಕಟ್ಟೆ ಕಡಿದು ಮುಂದೆ ಹರಿದು ಹೋಗುತ್ತದೆ– ಎಂಬ ಅಭಿಪ್ರಾಯ ವಿಲಿಯಂ ಜೇಮ್ಸ್ ಎಂಬ ಅಮೇರಿಕಾದ 'ತತ್ವಜ್ಞಾನಿ'ಯದೆಂದು outlines of philosophy (p. 438) ಹೇಳಲು, ತತ್ವಜ್ಞಾನವು ಆತ್ಯಂತಿಕ ಸತ್ಯ, ಒಂದೇ ಒಂದೆಂದು ಹೇಳಕೂಡದು, ಅದು ನಮ್ಮ ಅತಿಪ್ರಿಯ ಆಸೆಗಳನ್ನೂ ಹೃದಯಗತ ಪ್ರತ್ಯಾಶೆಗಳನ್ನೂ ನಿರಾಶೆಗೀಡು ಮಾಡುವಂತಿರಬಾರದು ಎಂದು ಹೇಳುವ ಹುಕುಂಶಾಹಿ ತರ್ಕವೇ ಕಾರಣ. ಇಂಥ ಅಭಿಪ್ರಾಯಗಳೂ ಖಂಡನ ತರ್ಕಗಳಾಗಬಹುದಾದರೆ ಹಟಮಾರಿ ಮಗುವಿನ ಅವಿಧೇಯತೆ ಕೂಡ ಮಹಾತತ್ವಜ್ಞಾನ ಸಮರ್ಥಿತವಾಗಬಹುದು! ಆದರೆ ಹಿಂದುಗಳಲ್ಲಿ ಹಲವರ ಹಿಂದು ತತ್ವಜ್ಞಾನವಿಂದು ಜೇಮ್ಸ್ ಹೇಳಿದಂತೆಯೇ ಇರುವುದೇನೋ ನಿಜ; ಹಾಗೇ ಜೇಮ್ಸ್‌ನಂಥ ವಾದಿಗಳೂ ಇಂದು ಹಿಂದುಗಳಲ್ಲಿ ಹುಟ್ಟಿದ್ದಾರೆ! ಹಿಂದುಗಳಲ್ಲಿ ಯಾರನ್ನಾದರೂ ಎತ್ತಿ ಹಿಡಿದು ಅವರು ಮಾಡಿದ ಉಪನ್ಯಾಸ ಅಥವಾ ಜ್ಞಾನಲವದುರ್ವಿದಗ್ಧನಾದ ಯಾವನಾದರೂ ಪಾಶ್ಚಾತ್ಯ ಹಿಂದು ಧರ್ಮಜ್ಞ ಹೇಳಿದ ವಿವರಣೆ ಸಾಕೆಂದು, ಅದನ್ನಾಧರಿಸಿ ಹಿಂದು ತತ್ವಜ್ಞಾನ ಹಾಗಿದೆ, ಹೀಗಿದೆ ಎನ್ನಲು ಪಾಶ್ಚಾತ್ಯರೂ ಅವರ ಅಂಧಾನುಯಾಯಿಗಳಾದ ಪೌರಸ್ತ್ಯರೂ ಭಾರತದ ಬ್ರಿಟಿಷ್ ಆಡಳಿತದ ಅವಧಿಯಿಂದ ಪ್ರಚಾರ ಮಾಡಲಾರಂಭಿಸಿದ್ದು ಎಲ್ಲರಿಗೂ ತಿಳಿದ ಸಂಗತಿ. ಇಂಥ ಮಿಶನರಿ ಬುದ್ಧಿಗೆ ಮ್ಯಾಕ್ಸ್‌ಮುಲ್ಲರ ಕೂಡ ಹೊರತಾಗಿಲ್ಲ (ಅವನ Chips from the German workshop ಸಂಪುಟಗಳನ್ನೋದಿರಿ). ಸಾಂಸ್ಕೃತಿಕ ಕೃತಿಗಳ ತೂಕದ ತಾರತಮ್ಯವನ್ನರಿಯದೆ ಅಥವಾ ಅವುಗಳ ವಿವಿಧ ಭಾಷ್ಯ–ವ್ಯಾಖ್ಯಾನಾದಿಗಳ ಸಾಪೇಕ್ಷ ಸತ್ಯಾಂಶಗಳ ಆಧಿಕ್ಯವನ್ನು ಅರಿಯಲಾರದೆ ಒಂದು ದೇಶದ ಸಂಸ್ಕೃತಿ–ನಾಗರಿಕತೆಗಳ ಚರಿತ್ರೆ ಬರೆಯ ಹೊರಡುವ ಅಧಿಕ ಪ್ರಸಂಗವನ್ನು ಪಾಶ್ಚಾತ್ಯರಲ್ಲಿ ಮಾಡಿದಷ್ಟು ಜನರು ಪೌರಸ್ತ್ಯರಲ್ಲಿ ಸಿಗಲಿಕ್ಕಿಲ್ಲ. ವಿಧಿವಾದ ದಾಸ್ಯ ಪೌರಾಣಿಕತೆಗಳು ಬಹು ಸಂಖ್ಯಾತ ಹಿಂದುಗಳನ್ನು ಅಹಿಂದುಗಳನ್ನಾಗಿ ಮಾಡಿರುವುದೀಗ ದುರ್ದೈವದ ಸಂಗತಿ; ಹಾಗೇ 'ನಿಸರ್ಗ'ದ ಅರ್ಥವ್ಯಾಪ್ತಿಯನ್ನು ಸಂಪೂರ್ಣವಾಗಿ ಅರಿಯದೆ ನಿಸರ್ಗವನ್ನಾಳುವ ಗಂಡುತನ ಮಾನವನಲ್ಲಿದೆ ಎಂದು ಮುಂತಾಗಿ ಕೊಚ್ಚುವ, ನಿಸರ್ಗ ಪರಿಹಾಸಕ್ಕೀಡಾದ, ಭೋಗದಾಸ ಪಾಶ್ಚಾತ್ಯರ ಅನುಯಾಯಿಗಳಾಗ ಹೊರಟ ಹಿಂದುಗಳ ಪೌರುಷಾಭಾಸವೂ ಕರುಣಾಸ್ಪದ! "When we have learnt to reverence liberty as well as wealth, we too shall have our

Renaissance– ಸ್ವಾತಂತ್ರ್ಯವನ್ನೂ ಐಶ್ವರ್ಯವನ್ನೂ ಗೌರವ ಪ್ರೀತಿಗಳಿಂದ (ಭಯಭಕ್ತಿಗಳಿಂದ) ನೋಡಲು ಕಲಿತಾಗ ನಮಗೂ ಒಂದು ಪುನರುಜ್ಜೀವನದ ಕಾಲ ಬಂದೇ ಬರುವುದು" ಎಂದ ವಿಲ್‌ಡ್ಯೂರಂಟನೂ ಒಬ್ಬ ತತ್ವಜ್ಞಾನಿ, ತತ್ವಜ್ಞಾನದ ಇತಿಹಾಸಕಾರ! ಭಾರತದ ಬುದ್ಧಿವಂತ ಇದನ್ನು ನಂಬಬೇಕು– ಆಧುನಿಕನೆನ್ನಿಸಬೇಕಾದರೆ! ಏಕೆ? ಇತ್ತೀಚಿನ ಗತಚರಿತ್ರಾವಧಿಯಲ್ಲಿ ೩೦೦ ವರ್ಷಗಳ ಹಿಂದೆ ಯೂರೋಪಿನಲ್ಲಿದ್ದ ವಿಜ್ಞಾನ ವಿಮುಖತೆ ಭಾರತದಲ್ಲೂ ಇದ್ದುದಲ್ಲದೆ, ಅದಕ್ಕಿಂತ ಅತಿಮಂದಗತಿಯಿಂದಲೇ ಈಗಲೂ ಐಹಿಕ ಜೀವನದ ಪ್ರಗತಿಗೆ ಹೇತುವಾದ ವಿಜ್ಞಾನಾಭ್ಯಾಸ ಭಾರತದಲ್ಲಿ ನಡೆಯುತ್ತಿರುವುದು ಕಾರಣ.

## ವಿಜ್ಞಾನ ಮತ್ತು ವೇದಾಂತ

ವಿಜ್ಞಾನ ವೇದಾಂತಗಳು ಪ್ರತ್ಯಕ್ಷ–ಅಪರೋಕ್ಷ ಅನುಭವಗಳಿರುವಂತೆ– ಅಮುಕ್ತ ಜಿಜ್ಞಾಸುವಿನ ದೃಷ್ಟಿಯಲ್ಲಿ. ಅವು ಪರಸ್ಪರ ಎಂದೂ ಎಣ್ಣೆ–ಸೀಗೆ ಸ್ನೇಹ ಉಳ್ಳವುಗಳಲ್ಲ; ಒಂದರ ಜ್ಞಾನ ಪ್ರಮಾಣಗಳೇ ಬೇರೆ, ಇನ್ನೊಂದರ ಜ್ಞಾನ ಪ್ರಮಾಣಗಳೇ ಬೇರೆ. ಭಿನ್ನ ಪ್ರಮಾಣಗಳನ್ನು ಆಧರಿಸಿದ ಎರಡು ಶಾಸ್ತ್ರಗಳಲ್ಲಿ ಒಂದನ್ನಿನ್ನೊಂದು ಖಂಡಿಸಲಾರದು. ಅಮುಕ್ತನಿಗೆ ಎರಡೂ ಅನಿವಾರ್ಯ ಪ್ರಯೋಜನಕಾರಿಗಳು– ದೇಹ ಆತ್ಮಗಳಂತೆ, ಪ್ರಪಂಚ–ಪರಮಾತ್ಮರಂತೆ, ವಾಸ್ತವ–ಆದರ್ಶಗಳಂತೆ. ಮುಕ್ತನಿಗೆ ಕೂಡ ಅಮುಕ್ತನ ದೃಷ್ಟಿಯಿಂದ ಎರಡೂ ಕರ್ಮಸಾಧನಗಳು; ಸ್ವದೃಷ್ಟಿಯಿಂದ ಮಾತ್ರ ಅವನಿಗೆ ವೇದಾಂತಾನುಭವವೊಂದೇ ಪರಮಾರ್ಥ, ಪರಮ ಪ್ರಯೋಜನ, ಪರಮಸತ್ಯ. ಆದುದರಿಂದ Science without philosophy is blind and philosophy without science is lame– ವೇದಾಂತರಹಿತ ವಿಜ್ಞಾನವು ಕುರುಡು, ವಿಜ್ಞಾನರಹಿತ ವೇದಾಂತವು ಕುಂಟು ಎನ್ನಬಹುದು, ಪ್ರಾಪಂಚಿಕರು! ಸಿದ್ಧಾಂತರಹಿತ ವ್ಯವಹಾರವು ಹೀನಾರ್ಥ, ವ್ಯವಹಾರ ರಹಿತ ಸಿದ್ಧಾಂತವು ಅರ್ಥಹೀನ ಹತ್ತು ಸಮಸ್ತರಿಗೆ! ಅನುಭವಕ್ಕೆ ಬರುವವರೆಗೆ ವೇದಾಂತವೊಂದು ಸಿದ್ಧಾಂತ!

ಮನುಷ್ಯರು ಮತ್ತು ಅವರ ಜೀವನ ಸೂತ್ರಗಳು – ಎಂಬೆರಡರಲ್ಲಿ ಮನುಷ್ಯರೇ ಪ್ರಧಾನರು. ಏಕೆಂದರೆ ಜೀವನ ಸೂತ್ರಗಳನ್ನು ಕಂಡು ಹಿಡಿಯುವವರೂ ಅವರೇ, ಅವುಗಳನ್ನು ಆಯ್ದೋ ಹಾಗೆಯೋ ಅನುಸರಿಸುವವರೂ ಬಿಡುವವರೂ ಅವರೇ; ಮೌಲ್ಯಗಳೆಂದು ಯಾವುವನ್ನಾದರೂ ಗುರುತಿಸುವವರೂ ಅವರೇ, ಅವುಗಳನ್ನು ನಂಬಿ ಅವುಗಳನ್ನು ಸಾಧಿಸಲು ಯತ್ನಿಸುವವರೂ ಬಿಡುವವರೂ ಅವರೇ. ಅಂಥ ಮನುಷ್ಯರಿಗೆ ಸ್ವಜ್ಞಾನ–ಆತ್ಮಜ್ಞಾನಗಳಿಲ್ಲದೆ ಹೋದರೆ ಅವರ ಪರಜ್ಞಾನ ಒಮ್ಮೆ ವೈಜ್ಞಾನಿಕವೆಂದು ಗ್ರಹಿಸಿದರೂ ಪರವಾದ ಸುತ್ತಲಿನ ಜೀವ–ಜಡ ಜಗತ್ತಿನೊಡನೆ ಅವರು ಸಂಪೂರ್ಣ ಸಮಾಧಾನಕರವಾಗಿ ಹೊಂದಿಕೊಂಡು ಹೋಗಲು ಶಕ್ತರಾಗುತ್ತಾರೆಯೇ? ಪಾಶ್ಚಾತ್ಯರೀಗ ತಮ್ಮನ್ನು Extroverts ಬಹಿರ್ಮುಖರೆಂದುಕೊಂಡು ಆತ್ಮಜ್ಞಾನ ವಿಮುಖರಾಗಿ ತತ್ವಜ್ಞಾನ ಹೇಳಹೊರಟಿರುವುದು ಶುದ್ಧ ಅವೈಜ್ಞಾನಿಕ. ಪ್ರಪಂಚದಲ್ಲಿಯ ತಾವೂ ಇತರರಿಗೆ ತಮಗಿತರರು ಹೇಗೋ ಹಾಗೇ ವಸ್ತುನಿಷ್ಠ ಪದಾರ್ಥಗಳಾಗಬಲ್ಲರೆಂಬುದನ್ನು ಮರೆತ ಅವರ ವಿಚಾರಕ್ಕೂ

ಜೀವನೋಪಯೋಗಿಯಾದ ಆಚಾರಕ್ಕೂ ಸರಿಯಾದ ಸಂಬಂಧವಿಲ್ಲ. ಅವರ ಉತ್ಕರ್ಷ ಏನಾದರೂ ಲೌಕಿಕವಾಗಿ ಕಂಡುಬಂದರದು ಅವರು ಹೇಳುವುದು ಶಾಸ್ತ್ರ, ಹಾಕುವುದು ಗಾಳ ಎಂಬಂತೆ ನಡೆದುಕೊಂಡಿರುವುದರಿಂದಲೇ. Introverts ಅಂತರ್ಮುಖರಾದ ಪೌರಸ್ತ್ಯರು ಆತ್ಮಜ್ಞಾನವಾಗುವವರೆಗೆ ಪರಜ್ಞಾನ ಗೌಣವೆಂದು ಮಧ್ಯಯುಗದಿಂದ ಈವರೆಗೆ ತಿಳಿದು ನಡೆದುಕೊಂಡದ್ದು ಹಾನಿಕರ. ಸ್ವಪರ–ಜ್ಞಾನಗಳೆರಡೂ ಒಟ್ಟೊಟ್ಟಿಗೇ ಆಗುತ್ತ ಹೋಗುವುದೇ ಆರೋಗ್ಯಕರ, ಸ್ವಾಭಾವಿಕ. ಸ್ವ–ಪರತ್ವಗಳು ಸಾಪೇಕ್ಷ, ಅನಿತ್ಯ; ಭೂತವಸ್ತುವಾದ ಬ್ರಹ್ಮ (ಆತ್ಮ) ಎರಡಕ್ಕೂ ಅತೀತ ಮತ್ತು ಆಧಾರ. ಪ್ರಾಚೀನ ಪಾಶ್ಚಾತ್ಯತೆಗೆ ಇದರ ಅಂಶ ಗೊತ್ತಿತ್ತು. ಆದುದರಿಂದ ಭಾರತದಂತೆಯೇ ಪಾಶ್ಚಾತ್ಯ ಪ್ರಪಂಚವೂ ತನ್ನ ಪ್ರಾಚೀನ ನಾಗರಿಕತೆಯನ್ನು ಸಮ ಸಮ ಔನ್ನತ್ಯಕ್ಕೆ ಒಯ್ದು ಮುಟ್ಟಿಸಲು ಸಮರ್ಥವಾಯಿತು.

ವಿಜ್ಞಾನವು ಸ್ವೇತರ ಶಾಸ್ತ್ರಗಳನ್ನು ಅಪ್ರಾಮಾಣಿಕವೆಂದುದನ್ನು ಡಾ.ರಾಧಾಕೃಷ್ಣರು ಹೀಗೆ ಖಂಡಿಸಿದ್ದಾರೆ: Any metaphysical theory can be verified indirectly by the adequacy to account for the observed facts. Speculative Metaphysics is a tenable enquiry with a field of its own. Empirical adequacy and logical consistency govern the Indian theory of Reality. `Reality is what is ideally intelligible. What may be, if it must be, it is'... ... ... ... Nature and human existence are not self-explanatory...... There is a fundamental principle standing behind and beyond the world process which inspires and informs the process which is steadily manifesting new values...... Science reveals to us that there is a spiritual presence greater than man. The end of man is to place himself in harmony with this presence........ A tennis ball is an object but man is both subject and object to himself.... Man becomes aware of his finitude because he has infinite longings ––ದೃಗ್ಗೋಚರವಾದ ಸಂಗತಿಗಳಿಗೆ ತಕ್ಕ ವಿವರಣೆಯನ್ನು ಕೊಡುವ ಶಕ್ತಿಯೆಂಬ ಪರೋಕ್ಷ ಪರೀಕ್ಷೆಯಿಂದ ಯಾವ ಅತಿಭೌತಶಾಸ್ತ್ರೀಯ ಸಿದ್ಧಾಂತವನ್ನೂ ಪರೀಕ್ಷಿಸಿ ಸರಿಯೋ ತಪ್ಪೋ ಎಂದು ನಿರ್ಧರಿಸಬಹುದು. ತನ್ನದೇ ಆದ ಕ್ಷೇತ್ರವುಳ್ಳ ಊಹಾಪ್ರಧಾನ ಅತಿಭೌತ ಶಾಸ್ತ್ರವು ಗ್ರಾಹ್ಯವೆನ್ನಿಸುತ್ತದೆ. ಸತ್ಯದ ಭಾರತೀಯ ಸಿದ್ಧಾಂತಕ್ಕೆ ಐಹಿಕ ಪರಿಪೂರ್ಣತೆ ಮತ್ತು ತಾರ್ಕಿಕ ಸಾಮಂಜಸ್ಯಗಳು ನಿಯಾಮಕಗಳಾಗಿವೆ. 'ಧ್ಯೇಯವಾದೀಯವಾಗಿ ತಿಳಿಯುವುದೇ ಸತ್ಯಪದಾರ್ಥ. ಇರಬಹುದಾದದ್ದು, ಅದು ಇರಲೇ ಬೇಕಾದುದಾದರೆ, ಇದ್ದೇ ಇದೆ'... ... ...ನಿಸರ್ಗವೂ ಮಾನವ ಜೀವನವೂ ತಮಗೆ ತಾವೇ ವಿವರಣೆಯನ್ನು ಕೊಡಲಾರದಂಥವು. ಜಗತ್ ಪ್ರವಾಹದ ಹಿನ್ನೆಲೆಯಲ್ಲಿ ಒಂದು ಮೂಲಭೂತ ತತ್ವವಿದೆ; ಅದು ಕ್ರಮಶಃ ಹೊಸ ಹೊಸ ಮೌಲ್ಯಗಳನ್ನು ಹೊಳೆಯಿಸುತ್ತದೆ... ...ಮನುಷ್ಯನಿಗಿಂತ ಹಿರಿಯದಾದ ಆಧ್ಯಾತ್ಮಿಕ

ಇರವೊಂದು* ಇದೆ ಎಂಬುದನ್ನು ವಿಜ್ಞಾನ ಹೊರಗೆಡಹುತ್ತದೆ... ...ಈ ಇರವಿನೊಡನೆ ಸಾಮಶ್ರುತ್ಯವನ್ನು ಸಾಧಿಸಿಕೊಳ್ಳುವುದೇ ಮಾನವನ ಗುರಿ. ಟೆನಿಸ್ ಚಂಡೊಂದು ವಸ್ತು, ವಿಷಯ; ಮನುಷ್ಯನು ತನಗೆ ತಾನೇ ಜ್ಞಾತೃ ಮತ್ತು ಜ್ಞೇಯ (ವಸ್ತು)... ... ... ಅಪ್ರಮಿತ ಆಸೆಗಳಿರುವುದರಿಂದಲೇ ಮನುಷ್ಯನಿಗೆ ತನ್ನ ಪರಿಮಿತಿಯ ಜಾಗರ ಉಂಟಾಗುವುದು!



---

* ಅಕ್ಷರಂ ಪರಮಂ ಬ್ರಹ್ಮ
ಸನಾತನಮಮಲಂ ವಿಭುಂ ।'
ವೇದಾಂತೇಷು ವದಂತ್ಯೇಕಂ
ಚೈತನ್ಯಂ ಜ್ಯೋತಿರೀಶ್ವರಂ ॥೧॥
ಆನಂದ: ಸಹಜಸ್ತಸ್ಯ
ವ್ಯಜ್ಯತೇ ಸ ಕದಾಚನ ।
ವ್ಯಕ್ತಿಃ ಸಾತಸ್ಯ ಚೈತನ್ಯ–
ಚಮತ್ಕಾರರ ಸಾಹ್ವಯಾ ॥೨॥
ಆದ್ಯಸ್ತಸ್ಯ ವಿಕಾರೋಯ:
ಸೋಽಹಂಕಾರ ಇತಿಸ್ಮೃತಃ
ತತೋಽಭಿಮಾನಸ್ತತ್ರೇದಂ
ಸಮಾಪ್ತಂ ಭುವನತ್ರಯಂ ॥೩॥

– ಅಗ್ನಿಪುರಾಣದ ೩೩೯ನೆಯ ಅಧ್ಯಾಯ

# ೨

# ಪಾಶ್ಚಾತ್ಯ ಸಿದ್ಧಾಂತ

## ಥಾಮಸ್ ಹಾಬ್ಸ್ (೧೫೮೮–೧೬೭೯)

ಹುಟ್ಟಿನಿಂದಲೂ ಪರಿಣಾಮಗಳಿಂದಲೂ ಎಲ್ಲ ಜ್ಞಾನವೂ ವ್ಯಾವಹಾರಿಕ (Emperical). ಕಾರಣಗಳಿಂದ ಕಾರ್ಯಗಳನ್ನೂ ಕಾರ್ಯಗಳಿಂದ ಕಾರಣಗಳನ್ನೂ ತರ್ಕಿಸಿ ನಿರ್ಣಯಿಸುವುದೇ ತತ್ವಜ್ಞಾನ. ನಮ್ಮ ಎಲ್ಲ ಪ್ರತ್ಯಕ್ಷ ಜ್ಞಾನಗಳಿಗೂ ಅತ್ಯಂತ ಕನಿಷ್ಠವಾದ ಸರ್ವಸಾಧಾರಣ ಅಭಿದಾಯಕಗಳೆಂದರೆ (Denominators) ಭೌತ ಪದಾರ್ಥ (Matter) ಮತ್ತು ಚಲನ. ಕೇವಲ ಕಾಯಗಳೂ ಅವುಗಳ ಚಲನವಲನಗಳೂ ತತ್ವಜ್ಞಾನದ ವಿಷಯಗಳು. ತನ್ನ ಸಂವೇದನಾತ್ಮಕ ಮತ್ತು ಜ್ಞಾನಾತ್ಮಕ ಅವಸ್ಥೆಗಳಲ್ಲಿ ಪ್ರಜ್ಞೆಯು (Consciousness) ನರಮಂಡಲದ ಒಂದು ಅಪಸ್ವರ (Jarring) ಅಥವಾ ಘರ್ಷಣ; ತನ್ನ ಭಾವನಾತ್ಮಕ, ಇಚ್ಛಾತ್ಮಕ ಮತ್ತು ಸಂದೇಶವಾಹಕ ಕರ್ಮೇಂದ್ರಿಯ ಕ್ರಿಯಾವಸ್ಥೆಗಳಲ್ಲಿ ಅದು ಒಂದು ಹಿಂದೊದೆತ. ಭೌತಿಕ ಮತ್ತು ಮಾನಸಿಕ ಘಟನೆಗಳೆಲ್ಲವನ್ನೂ ತತ್ವಜ್ಞಾನದ ೪ ವಿಭಾಗಗಳು ತಮ್ಮಲ್ಲಿ ಅಡಕಗೊಳಿಸಿಕೊಳ್ಳುತ್ತವೆ: ಜ್ಯಾಮಿತಿಯು ಕಾಯಗಳ ದೇಶಿಕ ಚಲನವಲನಗಳನ್ನು ವರ್ಣಿಸುತ್ತದೆ; ಭೌತಶಾಸ್ತ್ರವು ಚಲಕಾಯಗಳು ಪರಸ್ಪರ ಉಂಟುಮಾಡುವ ಪರಿಣಾಮಗಳನ್ನು ಹೇಳುತ್ತದೆ; ನೀತಿಶಾಸ್ತ್ರವು ನರಮಂಡಲಗಳ ಚಲನಗಳನ್ನು ವಿವರಿಸುತ್ತದೆ: ರಾಜ್ಯಶಾಸ್ತ್ರವು ನರಮಂಡಲಗಳು ಪರಸ್ಪರ ಉಂಟುಮಾಡುವ ಪರಿಣಾಮಗಳನ್ನು ಬಣ್ಣಿಸುತ್ತದೆ. ನ್ಯೂಟನ್ನನ ಪ್ರಥಮ ಚಲನ ವಿಧಿಯು ಮನುಷ್ಯನಲ್ಲಿ ಆತ್ಮಸಂಗೋಪನ, ಆತ್ಮಾಸ್ತಿತ್ವ ಸಮರ್ಥನಗಳ ರೂಪದಲ್ಲಿ ವ್ಯಕ್ತವಾಗುತ್ತದೆ. ಆದುದರಿಂದ ಸಾವಯವ–ನಿರವಯವ (ಸೇಂದ್ರಿಯ–ನಿರಿಂದ್ರಿಯ, ಜೀವ–ಜಡ) ಕಾಯಗಳೆಲ್ಲವುಗಳ ಪ್ರಾಥಮಿಕ ಸ್ಥಿತಿಯೂ ಘರ್ಷಣ, ಸಂಘಟ್ಟನ ಮತ್ತು ಯುದ್ಧ. ದ್ವಿತೀಯ ಚಲನ ವಿಧಿಯು– ತನ್ನ ಜೀವಕ್ಷೇತ್ರೀಯ ಅನ್ವಯದಲ್ಲಿ– ತಮ್ಮ ಸ್ವಾಭಾವಿಕ ಹಕ್ಕಾದ ಆತ್ಮಾಸ್ತಿತ್ವ ಸಮರ್ಥನೆಯಲ್ಲಿ ಅಲ್ಪಾಂಶವನ್ನು ಪರಸ್ಪರಾನುಕೂಲಕ್ಕಾಗಿ ಬಿಡಬೇಕೆಂದು ಮಾನವರನ್ನು ಪ್ರೇರಿಸುತ್ತದೆ. ಈ ಪ್ರಕಾರ ಪರಸ್ಪರ ವಿರುದ್ಧವಾದ ವೈಯಕ್ತಿಕ ಹಕ್ಕುಗಳ ಹಾಗೂ ಇಚ್ಛಾಶಕ್ತಿಗಳ ಬಲಗಳ ಒಂದು ಅಂಗಿಯು ಸ್ಥಾಪಿತವಾಯ್ತು, ಒಂದು ಸಂಮಿಶ್ರ ಕಾಯವು ಸಿದ್ಧವಾಯ್ತು. ಅದು ಸಾಮಾಜಿಕ ಒಪ್ಪಂದದ ರೂಪದಲ್ಲಿ ಮೈದಳೆಯಿತು. ಅದೊಂದು ಶಾಂತಿ ಸಂಧಿ. ಅದೇ ರಾಜ್ಯದ ಅಸ್ತಿವಾರ. ಸಂಮತಿಸಲಾದ ಈ ಸಾಮಾಜಿಕ

ಸಂಧಿಯನ್ನು ದ್ವಿತೀಯ ಚಲನ ವಿಧಿಯ ಒತ್ತಾಯದ ಪ್ರಕಾರ ಜಾರಿಗೆ ತರಲು ಪ್ರಥಮ ಚಲನ ವಿಧಿಗೆ ವಿಧೇಯರಾಗಿ ಸ್ವಭಾವತಃ ಯುದ್ಧ ಮಗ್ನರಾದ ವ್ಯಕ್ತಿಗಳು ಸಾರ್ವಭೌಮತ್ವವನ್ನು ಸ್ಥಾಪಿಸಿ ಸರಕಾರದ ಮೂಲಕ ಅದನ್ನು ಆಚರಣೆಗೆ ತರಬೇಕಾಗುತ್ತದೆ. ಯಾವ ಗಾತ್ರದ ಸಮಾಜದಲ್ಲೇ ಆಗಲಿ ಸಾರ್ವಭೌಮತ್ವವನ್ನು ಕೆಲ ಜನರಿಗೆ ವಹಿಸಿಕೊಡಲೇ ಬೇಕಾಗುತ್ತದೆ. ಆದರೆ ಅದನ್ನು ಒಬ್ಬನೇ ಒಬ್ಬನಿಗೆ ವಹಿಸಿಕೊಟ್ಟು ಅವನನ್ನು ಪರಿಪೂರ್ಣ ಏಕೈಕ ಪ್ರಭುವನ್ನಾಗಿ ಮಾಡಿದರೆ ಲಭ್ಯವಾಗುವಷ್ಟು ದಕ್ಷತೆಯು ಒಂದು ಗುಂಪಿಗಾಗಲಿ, ಪಾರ್ಲಿಮೆಂಟಿಗಾಗಲಿ ವಹಿಸಿಕೊಟ್ಟರೆ ಲಭ್ಯವಾಗದು.

## ರೆನಿ ಡೆಸ್‌ಕಾರ್ಟಿಸ್ (೧೫೯೬–೧೬೫೦)

ಡೆಸ್ ಕಾರ್ಟೀಸನು ಯೋರೋಪೀಯ ಪ್ರಮಾಣಶಾಸ್ತ್ರದ ಒಬ್ಬ ಸಂಸ್ಥಾಪಕ. ಕಲ್ಪನೆಗಳ (Ideas) ಸ್ಪಷ್ಟತೆ ಮತ್ತು ಪ್ರತ್ಯೇಕತೆಗಳು ಅವನ ಪ್ರಕಾರ ಸತ್ಯಕ್ಕೆ ನಿಕಷ. ಈ ಒರೆಗಲ್ಲಿಗೆ ಹತ್ತುವ ಎಲ್ಲವೂ ಸ್ವಯಂ ಸ್ಪಷ್ಟ. ಸ್ವಯಂಸ್ಪಷ್ಟ ಸತ್ಯಗಳಿಂದ ಇತರ ಸತ್ಯಗಳನ್ನು ಅವನು ತರ್ಕದಿಂದ ಅನುಮಾನಿಸಿ ಹೊರದೆಗೆದನು. ಕಲ್ಪನೆಗಳಲ್ಲಿ ಮೂರು ಬಗೆಗಳು: (೧) ಸಹಜ ಅಥವಾ ವಸ್ತುಗಳನ್ನೂ ವಿಚಾರಗಳನ್ನೂ ಆಲೋಚಿಸುವ ಮಾನಸಶಕ್ತಿ; (೨) ಆನುಷಂಗಿಕ ಅಥವಾ ಮನುಷ್ಯನಿಗೆ ಹೊರಗಿನಿಂದ ಬರುವಂಥವು; (೩) ಸಾಂಗತಿಕ ಅಥವಾ ಅವನ ಮನಸ್ಸಿನಲ್ಲಿಯೇ ಉತ್ಪನ್ನವಾದಂಥವು. “ನಾನು ಆಲೋಚಿಸುತ್ತೇನೆ, ಆದುದರಿಂದ ನಾನು ಇದ್ದೇನೆ” ಎಂದು ಘೋಷಿಸಿ ಅವನು ತನ್ನ ಕ್ರಮದ ಪ್ರಕಾರ ವಿಚಾರಾತ್ಮನನ್ನು ಕಂಡು ಹಿಡಿದನು. ಇದೊಂದು ಪ್ರಾತಿಭ ಪ್ರತ್ಯಕ್ಷ. ದೇವರೆಂಬ ಅತ್ಯುನ್ನತ ಅಸ್ತಿತ್ವ ಸಂಪನ್ನ ಪದಾರ್ಥವು ಅವನಿಗೆ ಸ್ಪಷ್ಟವಾದ ಎರಡನೆಯ ಸತ್ಯ. ಇದು ಪ್ರಾತಿಭವೂ ಹೌದು ತರ್ಕಸಿದ್ಧವೂ ಹೌದು– ಅವನ ಪ್ರಕಾರ. ಮಾನಸೇತರವಾದ ಕಾಯವುಳ್ಳ ಪ್ರಪಂಚದ ಬಗೆಗೆ ಮೊದಲು ಅವನಿಗೆ ಸ್ಪಷ್ಟ ಕಲ್ಪನೆಗಳು ಉಂಟಾಗಲಿಲ್ಲ. ಅದರ ಅಸ್ತಿತ್ವವನ್ನವನು ಕೇವಲ ಶಂಕಿಸಿದನು; ಆದರೆ ಕೊನೆಯಲ್ಲಿ ಆನುಷಂಗಿಕ ಕಲ್ಪನೆಗಳಿಗೆ ಅವು ಕಾರಣಗಳಾದುದರಿಂದ ಸ್ವಮಾನಸೇತರ ಕಾಯಗಳು ಇರುವುದೆಂದು ಅವನು ಸಿದ್ಧಮಾಡಿಕೊಂಡ. ದ್ರವ್ಯಗಳ ಬಗೆಗಳು ಮೂರು: (೧) ಸೃಷ್ಟಜೀವಗಳು, ಮಾನವರ ಪರಿಸೀಮಿತವಾದ ಜೀವಾತ್ಮಗಳು; ಈ ಜೀವಗಳು ಅಭೌತಿಕ ಕರ್ತಾರರು, ಇವು ಜೈವಿಕ ಕ್ರಿಯೆಗಳನ್ನು ಮಾಡಬಲ್ಲವು–– ಕಾಯಗಳೊಂದಿಗೆ ಸಡಿಲವಾಗಿ ಕೂಡಿಕೊಂಡಿರುವುದರಿಂದ; ಆಲೋಚನೆ ಅಥವಾ ವಿಚಾರವು ಅವುಗಳ ಸಾರವಾಗಿರುವುದರಿಂದ ಅವುಗಳಿಗೆ ವಿಸ್ತಾರವಿಲ್ಲ; (೨) ಅಸೃಷ್ಟ ಆತ್ಮ ಅಥವಾ ದೇವರು; ಈತನು ದೇಶ ಕಾಲಾತೀತ, ನಿರ್ದೋಷಾಶೇಷ ಸದ್ಗುಣ ಮತ್ತು ಸರ್ವಶಕ್ತ; ಈತನ ಅಸ್ತಿತ್ವವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬಹುದಾದರೂ ಸ್ವಭಾವವನ್ನು ಭೂವಾಸಿಗಳಾದ ಮನುಷ್ಯರು ಚೆನ್ನಾಗಿ ತಿಳಿದುಕೊಳ್ಳಲಾರರು––ಅವನೇ ಕ್ರೈಸ್ತರ ದೇವ, ಸೃಷ್ಟಿಕರ್ತ, ವಿಧಿವಿಧಾತನಾದ ಪರಮೇಶ್ವರ, ಜಗತ್ತಿನ ಆತ್ಯಂತಿಕ ಕಾರಣ; (೩) ಕಾಯಗಳು––ಸೃಷ್ಟವಾದ ಭೌತಪದಾರ್ಥಗಳು ಅವು ಮಾನವ ವಿಚಾರ ನಿರಪೇಕ್ಷವಾಗಿರುತ್ತವೆ; ವಿಸ್ತರಣ ಶೀಲವು (ವ್ಯಾಪಕತೆಯು) ಅವುಗಳ ಮುಖ್ಯವಾದ

ವಿಶೇಷಣ (ಧರ್ಮ, ಗುಣ). ಸದೃಶ ಪದಾರ್ಥಗಳ ಒಂದು ಗುಂಪಿನ ಸಮಾನ ಮಟ್ಟದ ಚಲನಗಳಿಂದ ಕೇಂದ್ರದ ಸುತ್ತ ಆದ ವರ್ತುಲಗಳಿಂದ ಕಾಯಗಳುಂಟಾದವೆಂಬುದು ಕಾರ್ಟೀಸಿಯನ್ ಭೌತಶಾಸ್ತ್ರದ ಒಂದು ಸಿದ್ಧಾಂತ. ವಿಭಾಜ್ಯತೆ, ಆಕೃತಿರೇಖಾಗಮ್ಯತೆ ಮತ್ತು ಚಲತ್ವಗಳು ವ್ಯಾಪಕತ್ವದ ಲಕ್ಷಣಗಳು. ಅದು ಜ್ಯಾಮಿತೀಯ ದೇಶ, ಸ್ಥಳ, ಅವಕಾಶ. ಭೌತಪ್ರಪಂಚದೊಳಗಿನ ಎಲ್ಲ ಚಲನಗಳಿಗೂ ದೇವರೇ ಪ್ರಥಮ ಕಾರಣ. ಈ ಭೌತ ಪ್ರಪಂಚ (ವಿಶ್ವ) ವೆಂಬುದು ದೇವರು ನಡೆಯಿಸುವ ಒಂದು ಯಾಂತ್ರಿಕ ಮಂಡಲ. ಪ್ರಾಣಿಶರೀರಗಳೂ ಸ್ವಯಂಚಲ ಯಂತ್ರಗಳು. ಸಂವೇದನೆಯು ಜೀವಾತ್ಮ ನಡೆಯಿಸುವ ಒಂದು ಕೃತ್ಯ. ಮನಸ್ಸು ಮತ್ತು ಭೌತಪದಾರ್ಥಗಳ ಮಧ್ಯದಲ್ಲಿ ಪ್ರಾಣಿ ಭೌತಕಣಗಳೆಂಬ ಅತಿ ಸೂಕ್ಷ್ಮ ಪದಾರ್ಥಗಳಿರುತ್ತವೆ. ಅವೇ "ಪ್ರಾಣಿ ಚೈತನ್ಯಗಳು" (Animal Spirits). ಅವು ವಿಚಾರಕ್ಕೂ ವಿಸ್ತಾರಕ್ಕೂ (Thought and extension) ಸ್ವಭಾವದಲ್ಲಿ ಮಧ್ಯವರ್ತಿಯಾಗಿದೆ. ಮನುಷ್ಯನ ನಿರ್ಣಯಗಳು ಸ್ವತಂತ್ರ ಇಚ್ಛಾಶಕ್ತಿಯ ಕ್ರಿಯೆಗಳು. ಇಚ್ಛಾಶಕ್ತಿಯು ಬುದ್ಧಿಯನ್ನು ಮೀರಿ ನಿಂತಾಗ ನಿರ್ಣಯವು ತಪ್ಪಾದುದೆನ್ನಿಸೀತು. ವಿವೇಕ ಮತ್ತು ಮಿತಭೋಗಗಳು ನಡತೆಯ ನಿಯಾಮಕಗಳು. ತಾನು ಆಯ್ದುಕೊಳ್ಳುವ ಕರ್ಮಮಾರ್ಗಕ್ಕಾಗಿ ಮಾನವನು ಆತ್ಯಂತಿಕವಾಗಿ ದೇವರಿಗೆ ಹೊಣೆಗಾರನು. ಮನುಷ್ಯನ ಭಾವೋದ್ರೇಕಗಳಿಗೂ ವಿಚಾರ ವಿವೇಕಗಳಿಗೂ ಸಂಘರ್ಷ ಉಂಟಾಗುತ್ತದೆ. ಸರಿಯಾದುದು ಯಾವುದೆಂಬ ತಿಳಿವಳಿಕೆ ಮತ್ತು ಅದರ ಪ್ರಕಾರ ಮನುಷ್ಯ ಸ್ವಭಾವದ ಕೀಳು ಪ್ರವೃತ್ತಿಗಳನ್ನು ನಿಯಂತ್ರಿಸಿಕೊಳ್ಳುವುದು ಸೌಗುಣ್ಯದ ಜೀವನವನ್ನು ನಡೆಯಿಸಲು ಮನುಷ್ಯನಿಗೆ ಶಕ್ಯವಾಗುವಂತೆ ಮಾಡುವುವು. ಪ್ರಾಥಮಿಕ ಭಾವೋದ್ರೇಕಗಳು ಆರು: (೧) ಆಶ್ಚರ್ಯ, (೨) ಪ್ರೇಮ, (೩) ದ್ವೇಷ, (೪) ಆಸೆ, (೫) ಸುಖ ಮತ್ತು (೬) ದುಃಖ. ಇವು ಪ್ರಜ್ಞೆಯ ನಿಷ್ಕ್ರಿಯ ಸ್ಥಿತಿಗಳು; ಜೀವಾತ್ಮನೂ ಪ್ರಾಣಿ ಚೈತನ್ಯಗಳ ಮೂಲಕ ವರ್ತಿಸುವ ಶರೀರವೂ ಸಹಕರಿಸಿ ಇವುಗಳನ್ನು ಉಂಟುಮಾಡುತ್ತವೆ. ವಿಚಾರ–ವಿವೇಕಗಳ ನಿಯಂತ್ರಣದಲ್ಲಿದ್ದಾಗ ಇವು ಶರೀರಕ್ಕೆ ಒಳಿತಾಗುವಂತೆ ಪ್ರಯತ್ನಿಸಲು ಜೀವಾತ್ಮಕ್ಕೆ ನೆರವೀಯುತ್ತವೆ. ಮಾನಸಿಕ ಶಕ್ತಿಗಳಾವುವೂ ಜೀವಾತ್ಮನಿಂದ ಭಿನ್ನವಾದವುಗಳಲ್ಲ.

## ಬೆನಿಡಿಕ್ಟ್ ಸ್ಪಿನೋಜ (೧೬೩೨–೧೬೭೭)

ಬೆನಿಡಿಕ್ಟ್ ಸ್ಪಿನೋಜನದು ಹೆಗೆಲ್ಲನ ಪ್ರಕಾರ ದ್ರವ್ಯವಾದ. ಅವನು ದ್ರವ್ಯನಾನಾತ್ವವನ್ನೊಪ್ಪನು. ಪೂರ್ಣಸತ್ಯವೊಂದೇ ಒಂದು ದ್ರವ್ಯ. ಅವನ ಸಿದ್ಧಾಂತವನ್ನು ಅದ್ವೈತಕ್ಕೆ ಸಮಾನವಾದುದೆನ್ನುವುದುಂಟು. ಎಲ್ಲ ಜ್ಞಾನವೂ ಜಾಮಿತೀಯ ಅಚ್ಚುಕಟ್ಟುತನವುಳ್ಳದ್ದಾಗಿರಬೇಕು. ವಿಜ್ಞಾನ–ತತ್ವಜ್ಞಾನಗಳಿಗೆ ಸಾರಭೂತವೂ ಸಮನ್ವಿತವೂ ಕ್ರಮಬದ್ಧವೂ ಆದ ಅಭಿವ್ಯಕ್ತಿ–ವಾಕ್ಯಗಳಿರಬೇಕು–ಎನ್ನುತ್ತಾನೆ ಸ್ಪಿನೋಜ. ಸರ್ವಕಾರಣವಾದ ಆತ್ಯಂತಿಕ ಸತ್ಯವು ಸರ್ವಗ್ರಹವಾದುದು. ಕಾರ್ಯಕಾರಣಭಾವವು ಅಂತರ್ಯಾಮಿತ್ವವುಳ್ಳದ್ದು. ಪ್ರತಿಯೊಂದು ಅಸ್ತಿತ್ವಸಂಪನ್ನ ವ್ಯಕ್ತಿಯೂ ಏಕಮೇವ ದ್ರವ್ಯವಾದ ಆತ್ಯಂತಿಕ ಸತ್ಯದ ಕಕ್ಷೆಯೊಳಗೇ ಇರುವಂಥದು. ಆ ದ್ರವ್ಯವನ್ನು ದೇವರು ಅಥವಾ ನಿಸರ್ಗವೆನ್ನಬಹುದು.

ಪರಿಸೀಮಿತವಾದ ಯಾವುದೂ ಸ್ವತಂತ್ರಾಸ್ತಿತ್ವವುಳ್ಳದ್ದಲ್ಲ. ಆಲೋಚನೆ ಅಥವಾ ವಿಚಾರ ಮತ್ತು ವ್ಯಾಪಕತ್ವಗಳು ದೇವರ ಲಕ್ಷಣಗಳು. ಅವನಿಗೆ ಇನ್ನೂ ಇತರ ಅಸಂಖ್ಯಾತ ಲಕ್ಷಣ (ಧರ್ಮ, ಗುಣ)ಗಳಿವೆ. ಅವನು ಎಲ್ಲ ದೃಷ್ಟಿಯಿಂದಲೂ ಅಪ್ರಮೇಯ (Infinite), ಅಸೀಮ. ಆದರೆ ಆ ಇತರ ಲಕ್ಷಣಗಳು ನಮಗೆ ಅಜ್ಞಾತ. ವೈಯಕ್ತಿಕ ಜೀವಾತ್ಮಗಳೂ ಪ್ರತ್ಯೇಕವಾದ ಜಡಪದಾರ್ಥಗಳೂ ದೇವರಿಗೆ ವಿಶೇಷಣಗಳು. ಅವು ದ್ರವ್ಯಗಳಲ್ಲ– ದಿವ್ಯವಾದ ಸರ್ವತಂತ್ರ ಸ್ವತಂತ್ರ ಪದಾರ್ಥದ (ದೇವರ) ವಿವಿಧ ಧರ್ಮಗಳು, ಅಂಶಗಳು, ಉಪಾಧಿಗಳು. ಕ್ರೈಸ್ತರ ವೈಯಕ್ತಿಕ ಅಮರತ್ವವೆಂಬುದು ಇಲ್ಲ; ಅವೈಯಕ್ತಿಕವಾದ, ದೇವರಲ್ಲಿ ಹೆಚ್ಚು ಹೆಚ್ಚಾಗಿ ಐಕ್ಯ ಹೊಂದುವ ಬಗೆಯ ಅಮರತ್ವವೊಂದೇ ಇರುವಂಥದು. ಪ್ರಮಿತ (ಪರಿಮಿತ, ಸೀಮಿತ, ಪ್ರಮೇಯ) ಪದಾರ್ಥಗಳೆಲ್ಲವುಗಳಿಗೂ ಗಡಿಮಿತಿಗಳಿವೆ. ಆ ಗಡಿಗಳು ಭೌತಿಕವಾಗಿರಬಹುದು ಇಲ್ಲವೆ ತಾರ್ಕಿಕವಾಗಿರಬಹುದು. ಅವುಗಳಿಗೆ ಅವುಗಳಲ್ಲದ ಇತರ ಪದಾರ್ಥಗಳೇ ಗಡಿಗಳು. ಎಲ್ಲ ನಿಶ್ಚಯಕರಣವೂ (Determination) ನಿಷೇಧಕರಣ (Negation). ಸಂಪೂರ್ಣ ಅನುಷೇಧವುಳ್ಳ ಅಸ್ತಿತ್ವದಿಂದ ಕೂಡಿ ಪದಾರ್ಥ ಒಂದೇ ಒಂದು ಇರಬಲ್ಲದು. ಅದು ಸಂಪೂರ್ಣವಾಗಿ ಅಪ್ರಮೇಯವಾಗಿರಬೇಕು. ಈ ವಾದವನ್ನು "(Pantheism) ಸರ್ವಗ್ರಹ ದೇವತಾವಾದ"ವೆಂದು ವರ್ಣಿಸಿದ್ದು ಇದೆ. ಏಕೆಂದರೆ ಇದರಲ್ಲಿ ಪರಮಾರ್ಥೇತರವಾದುದೆಲ್ಲವೂ ಆ ಪರಮಸತ್ಯದ ಅಂಶಗಳು, ಪ್ರಕಾರಗಳು, ವಿಸ್ತಾರಗಳು ಅಥವಾ ವಿಶೇಷಣಗಳು.

ಮನುಷ್ಯರ ಮಾನಸ ಪ್ರಪಂಚದಲ್ಲಿ ಮುಕ್ತ ಇಚ್ಛಾಶಕ್ತಿ ಎಂಬುದಿಲ್ಲ; ಹಾಗೇ ಭೌತಪ್ರಪಂಚದಲ್ಲಿ ಆಕಸ್ಮಿಕತೆ ಅಥವಾ ಕಾದಾಚಿತ್ಕತೆ ಎಂಬುದಿಲ್ಲ. ನಡೆಯುವ ಪ್ರತಿಯೊಂದು ಘಟನೆಯೂ ದೇವರ ಅಜ್ಞೇಯವಾದ ಸ್ವಭಾವದ ಆವಿರ್ಭಾವ; ಯಾವ ಘಟನೆಯೂ ಹೀಗಲ್ಲದೆ ತರ್ಕಶುದ್ಧವಾಗಿ ಬೇರೆ ರೀತಿಯಲ್ಲಿ ಸಂಭವಿಸದು. ದುಷ್ಟತನ–ಪಾಪಗಳು ಹಾಗೆ ಕಾಣಿಸುವುದು ಪ್ರಮೇಯವಾದ ಪ್ರಾಣಿಗಳ ದೃಷ್ಟಿಯಲ್ಲಿ; ಅವುಗಳಲ್ಲಿ ಅನುಷೇಧಕರ (Positive)ವಾದ ಅಂಶವು ಸದಂಶ, ನಿಷೇಧಕರ (Negative)ವಾದ ಅಂಶವು ದುರಂಶ. ಪೂರ್ಣ ಸತ್ಯಸ್ವರೂಪನಾದ ದೇವರಲ್ಲಿ ನಿಷೇಧವಿಲ್ಲವೇ ಇಲ್ಲ. ಆದುದರಿಂದ ಪಾಪಗಳೆಂದು ನಮಗೆ ತೋರುವ ಘಟನೆಗಳನ್ನು ಆತನ ಇಡಿತನದ ಅಂಗವೆಂದು ಗ್ರಹಿಸಿದಾಗ ಅವು ಇಲ್ಲವಾಗುವುವು. ವಿಶ್ವದ ಎಲ್ಲ ಭಾಗಗಳೂ ತರ್ಕಶುದ್ಧ ಸಂಬಂಧವುಳ್ಳಂಥವುಗಳು. ಮಾನವನ ಮನದಲ್ಲಿ ದೇವರ ನಿತ್ಯವೂ ಅಪ್ರಮೇಯವೂ ಆದ ಜ್ಞಾನ ಸಾಕಷ್ಟಿದೆ. ಭಾವೋದ್ರೇಕಗಳು (Passions) ನಮ್ಮ ಬೌದ್ಧಿಕ ಸ್ವರೂಪದ ಪೂರ್ಣತಾ ದರ್ಶನವನ್ನು ಅಸ್ಪಷ್ಟಗೊಳಿಸುತ್ತವೆ. ತನ್ನಲ್ಲಿಯೇ ತಾನಿರುವಾಗ ಪ್ರತಿಯೊಂದೂ ತನ್ನ ಇರವನ್ನು ಮುಂಬರಿಸಿಕೊಂಡು ಹೋಗಲು ಪ್ರಯತ್ನಿಸುತ್ತದೆ. ಆದುದರಿಂದ ರಾಗ, ದ್ವೇಷ, ಹೋರಾಟಗಳು ಹುಟ್ಟುತ್ತವೆ. ಮಾಡಿದಂತೆ ಮಾಡುವುದರಿಂದ ದ್ವೇಷ ಹೆಚ್ಚುತ್ತದೆ; ಪ್ರೇಮದಿಂದ ದ್ವೇಷವನ್ನು ನಾಶಮಾಡಬಹುದು. ಭಾವೋದ್ರೇಕಗಳಿಗೆ ಆತ್ಮಸಂಗೋಪನವೇ ಮೂಲಭೂತ ಧ್ಯೇಯ. ನಮ್ಮಲ್ಲಿರುವ ಸತ್ಯವೂ ಅನುಷೇಧಕರವೂ ಆದುದು ನಮ್ಮನ್ನು ಇಡಿಯೊಡನೆ ಏಕೀಕರಿಸುವ ಪದಾರ್ಥ–ಎಂಬುದನ್ನು

ಸಾಕ್ಷಾತ್ಕರಿಸಿಕೊಂಡಾಗ ಆತ್ಮಸಂಗೋಪನದ ಸ್ವರೂಪವೇ ಬದಲಾಗುವುದು–ನಮ್ಮಲ್ಲಿರುವ ಪ್ರತ್ಯೇಕತೆ ಎಂದು ತೋರುವುದನ್ನು ಉಳಿಸಿಕೊಡುವ ಪದಾರ್ಥದಿಂದ ಅಂಥ ಬದಲಾವಣೆಯಾಗದು ಎಂಬುದು ಆ ಸಾಕ್ಷಾತ್ಕಾರದ ಅಂಗ.

ಹೊರಗಿನ ಕಾರಣಗಳಿಂದ ನಮ್ಮ ಆಗುಹೋಗುಗಳು ಎಷ್ಟರಮಟ್ಟಿಗೆ ನಿರ್ಧರಿಸಲ್ಪಡುವುವೋ ಅಷ್ಟರ ಮಟ್ಟಿಗೆ ನಾವು ಬದ್ಧರು ಎನ್ನಿಸುತ್ತೇವೆ; ಅವು ಎಷ್ಟರ ಮಟ್ಟಿಗೆ ನಮ್ಮ ನಿರ್ಧಾರದಿಂದಲೇ ಸಂಭವಿಸುವುವೋ ಅಷ್ಟರಮಟ್ಟಿಗೆ ನಾವು ಮುಕ್ತರು (ಸ್ವತಂತ್ರರು). ಅಪಕಾರ್ಯಗಳೆಲ್ಲವೂ ಬುದ್ಧಿ ದೋಷಗಳಿಂದಾಗುವಂಥವು. ತನ್ನ ಪರಿಸ್ಥಿತಿಯನ್ನು ಸಮರ್ಪಕವಾಗಿ ತಿಳಿದುಕೊಂಡವನು ವಿವೇಕದಿಂದ ಕರ್ಮ ಮಾಡುವನು ಮತ್ತು ಇನ್ನೊಬ್ಬನ ದೃಷ್ಟಿಯಲ್ಲಿ ದುಃಖವೆಂದು ತೋರುವ ಪರಿಸ್ಥಿತಿಯಲ್ಲೂ ಅವನು ಸುಖವಾಗಿರುವನು. ದೇವರ ಜ್ಞಾನವೇ ಮನಸ್ಸಿಗೆ ಲಭ್ಯವಾದ ಅತಿ ದೊಡ್ಡ ಒಳಿತು; ದೇವರನ್ನು ತಿಳಿಯುವುದೇ ಮನಸ್ಸಿಗಿರಬೇಕಾದ ಅತಿ ದೊಡ್ಡ ಸುಗುಣ. ಅಸಮರ್ಪಕ, ಅಪೂರ್ಣಕಲ್ಪನೆಗಳಿಂದ ಹುಟ್ಟುವ ಭಾವನೆಗಳೇ ಭಾವೋದ್ರೇಕಗಳು. ವಿವಿಧ ಮಾನವರಲ್ಲಿಯ ಭಾವೋದ್ರೇಕಗಳು ಸಂಘಟ್ಟಿಸಬಹುದು. ವಿವೇಕಾನುಗುಣವಾಗಿ ವರ್ತಿಸುವವರೆಲ್ಲರೂ ಒಮ್ಮತಕ್ಕೆ ಬರುವರು. ಸ್ವಸ್ವರೂಪದಲ್ಲಿ ಸುಖವು ಒಳಿತು. ಭಯ–ಪ್ರತ್ಯಾಶೆಗಳು ಹಾಳು; ದೈನ್ಯ–ಪಶ್ಚಾತ್ತಾಪಗಳೂ ಹಾಗೇ. ಕಾಲವು ಮಿಥ್ಯೆ. ಆದುದರಿಂದ ಭೂತ–ಭವಿಷ್ಯಗಳಿಗೆ ಸಾರತಃ ಸಂಬಂಧಿಸಿದ ಭಾವನೆಗಳೆಲ್ಲವೂ ವಿವೇಕಾನುಗುಣವಾದವುಗಳಲ್ಲ. ಭೂತದಷ್ಟೇ ಭವಿಷ್ಯವೂ ಅಪರಿವರ್ತನೀಯ. ದೇವರ ಪ್ರಪಂಚ ದರ್ಶನದಂಥ ದರ್ಶನವನ್ನು ನಾವು ಪಡೆದಾಗ ನಮಗೆ ಜಗತ್ತಿನಲ್ಲಿಯ ಎಲ್ಲವೂ ಇಡಿಯೊಂದರ ಬಿಡಿಭಾಗಗಳಾಗಿ ತೋರುತ್ತವೆ; ಅವು ಇಡಿಯ ಒಳಿತಿಗೆ ಅಗತ್ಯವೆಂದೂ ತೋರುತ್ತವೆ. ಆದುದರಿಂದ ದುಷ್ಟತನದ ಜ್ಞಾನವು ಅಪರಿಪೂರ್ಣ ಜ್ಞಾನ. ದೇವರಿಗೆ ದುಷ್ಟತನದ ಅರಿವಿಲ್ಲ; ಏಕೆಂದರೆ, ತಿಳಿದುಕೊಳ್ಳಬೇಕಾದ ದುಷ್ಟತನವೆಂಬುದು ಆತನಿಗೆ ಇಲ್ಲವೇ ಇಲ್ಲ. ಜಗತ್ತಿನ ಬಿಡಿಭಾಗಗಳು ಸ್ವಾಧೀನ ಅವಲಂಬನ ಉಳ್ಳವುಗಳೆಂದು ತಿಳಿದುಕೊಳ್ಳುವುದರಿಂದ ದುಷ್ಟತನದ ಆಭಾಸ ಉಂಟಾಗುತ್ತದೆ. ಅಭಯಸಿದ್ಧಿಯೇ ಪರಮಸಿದ್ಧಿ. ಇಡಿ ಜಗತ್ತಿಗೆ ಯಾವ ಯಾವ ಕೇಡು ಉಂಟಾಗದು. ಏಕೆಂದರೆ ಅದು ಅದರ ಹೊರಗಿನ ಯಾವ ಕಾರಣಕ್ಕೂ ಅಧೀನವಾಗಿಲ್ಲ. ತನಗಿಂತ ವಿಶಾಲತರವಾದ ಇಡಿಗೆ ಒಳಪಟ್ಟು ಬಾಳಲೊಲ್ಲದವನು ಬದ್ಧನು; ಇಡಿಯ ಪೂರ್ಣ ಸತ್ಯವನ್ನು ಅವನು ಅರಿತಾಗ ಅವನು ಮುಕ್ತನು. ಎಲ್ಲ ಭಾವನೆಗಳೂ ಹಾಳಲ್ಲ; ಭಾವೋದ್ರೇಕಗಳಷ್ಟೇ ಹಾಳು. ಏಕೆಂದರೆ ಅವು ನಮಗೆ ನಾವು ಬಾಹ್ಯಶಕ್ತಿಗಳೆದುರು ನಿಷ್ಕ್ರಿಯರೆಂದು ತೋರಿಸುವುವು. ಅದರ ಸ್ಪಷ್ಟವೂ ಪ್ರತ್ಯೇಕವೂ ಆದ ಸ್ವರೂಪ ನಮಗೆ ಗೊತ್ತಾದೊಡನೆಯೇ ಒಂದು ಭಾವನೆಯ ಉದ್ರಿಕ್ತ ಸ್ವರೂಪವು ನಷ್ಟವಾಗಿ ಬಿಡುವುದು. ಸರ್ವವೂ ಅಗತ್ಯ ಎಂಬುದನ್ನು ಅರಿತಾಗ ನಮ್ಮ ಭಾವನೆಗಳ ಮೇಲೆ ನಮಗೆ ಪ್ರಭುತ್ವ ದೊರೆಯುವುದು. ತನ್ನನ್ನೂ ತನ್ನ ಭಾವನೆಗಳನ್ನೂ ಸ್ಪಷ್ಟವಾಗಿಯೂ ಪ್ರತ್ಯೇಕವಾಗಿಯೂ ತಿಳಿದುಕೊಂಡವನು ದೇವರನ್ನು ಪ್ರೀತಿಸುವನು; ಆ ಪ್ರಕಾರ ಹೆಚ್ಚು ಹೆಚ್ಚು ತಿಳಿದುಕೊಂಡ

ಹಾಗೆ ದೇವರಲ್ಲಿಯ ಅವನ ಪ್ರೀತಿಯು ಹೆಚ್ಚುತ್ತ ಹೋಗುವುದು. ದೇವರನ್ನು ಭೌದ್ಧಿಕವಾಗಿ ಪ್ರೀತಿಸುವುದೇ ವಿವೇಕ. ಆ ಪ್ರೀತಿಯಲ್ಲಿ ವಿಚಾರ–ಭಾವನೆಗಳ ಏಕೀಕರಣವಿದೆ. ಅದು ನಿಜವಾದ ವಿಚಾರ. ಅದರಲ್ಲಿ ಸತ್ಯಜ್ಞಾನದ ಆನಂದವಿದೆ. ನಿಜ ವಿಚಾರದಲ್ಲಿ ಪಡುವ ಆನಂದವೆಲ್ಲವೂ ಭೌದ್ಧಿಕವಾಗಿ ಮಾಡುವ ದೇವಭಕ್ತಿ (ದೇವ–ಪ್ರೇಮ)ಯ ಅಂಶ. ಏಕೆಂದರೆ, ಅದರಲ್ಲಿ ನಿಷೇಧಾಂಶವಾವುದೂ ಇಲ್ಲ– ಆದುದರಿಂದ ಅದು ನಿಜವಾಗಿಯೂ ಇಡಿಯ ಭಾಗ. ದೇವರು ಅನ್ಯರನ್ನು ಪ್ರೀತಿಸಲಾರ; ಅವನು ತನ್ನನ್ನು ಮಾತ್ರ ಪ್ರೀತಿಸುವನು. ಏಕೆಂದರೆ, ಅವನಿಗೆ ಅನ್ಯರೆಂಬವರೇ ಇಲ್ಲ; ಅವನು ಐಕಾತ್ಮ್ಯ ಪ್ರತ್ಯಯವುಳ್ಳವನು. ಅವನದು ಅಪ್ರಮೇಯವಾದ ಬೌದ್ಧಿಕ ಪ್ರೀತಿ.

## ಗಾಟ್‌ಫ್ರೈಡ್ ವಿಲ್‌ಹೆಲ್ಮ್ ಲಿಬ್ನಿಜ್ (೧೬೪೬–೧೭೧೬)

ವ್ಯಾಪಕತ್ವವು ದ್ರವ್ಯಧರ್ಮವಾಗಲಾರದು; ಏಕೆಂದರೆ, ಅದರಲ್ಲಿ ನಾನಾತ್ವ ಅಡಗಿದೆ; ಆದುದರಿಂದ ಅದು ದ್ರವ್ಯರಾಶಿಯಲ್ಲಿ ಮಾತ್ರ ಇರಬಲ್ಲದು. ಪ್ರತಿಯೊಂದು ದ್ರವ್ಯವೂ ಅವ್ಯಾಪಕ (Unextended). ದ್ರವ್ಯಗಳು ಅಸಂಖ್ಯಾತ. ಅವುಗಳು ಪರಮಾಣು ಸ್ವರೂಪದವು. ಅಮೂರ್ತ ದೃಷ್ಟಿಯಿಂದ ನೋಡಿದಾಗ ಅವುಗಳಲ್ಲಿ ಪ್ರತಿಯೊಂದಕ್ಕೂ ಒಂದೊಂದು ಭೌತಬಿಂದುವಿನ ಧರ್ಮವಿದೆ. ಪ್ರತಿಯೊಂದು ಅಣುವೂ ಒಂದು ಜೀವ. ವಿಚಾರವೊಂದೇ ದ್ರವ್ಯಧರ್ಮ. ಭೌತಪದಾರ್ಥಗಳೆಲ್ಲವೂ ಅಸತ್ಯ. ಜೀವಾತ್ಮಗಳು ಅಸಂಖ್ಯಾತವಾದ ಅಣುದ್ರವ್ಯಗಳು.

ದ್ರವ್ಯಗಳು ಪರಸ್ಪರ ಕ್ರಿಯೆ–ಪ್ರತಿಕ್ರಿಯೆಗಳನ್ನು ತೋರಿಸಲಾರವು. ಯಾವ ಎರಡು ಅಣುಗಳ (Monads) ನಡುವೆಯೂ ಪರಸ್ಪರವಾದ ಕಾರ್ಯ ಕಾರಣ ಸಂಬಂಧವಿರಲಾರದು; ಇದ್ದಂತೆ ಕೆಲವೊಮ್ಮೆ ತೋರಿದರೆ ಅದು ಕೇವಲ ಆಭಾಸ. ಅಣುಗಳು ದ್ವಾರರಹಿತ ಪದಾರ್ಥಗಳು (Windowless). ದೇವರು ಕೊಟ್ಟ ಸ್ವಾಭಾವಿಕ ಶಕ್ತಿಯಿಂದ ಪ್ರತಿಯೊಂದು ಅಣುವೂ ವಿಶ್ವವನ್ನು ಪ್ರತಿಬಿಂಬಿಸುತ್ತದೆ. ಭಿನ್ನ ಅಣುಗಳಲ್ಲಿ ಉಂಟಾಗುವ ಬದಲಾವಣೆಗಳಲ್ಲಿ ದೇವರಿಂದಾದ ಪೂರ್ವಸಿದ್ಧವಾದ ಸಾಮಶ್ರುತ್ಯ (Harmony)ವಿದೆ; ಅದು ಅವುಗಳಲ್ಲಿ ಪರಸ್ಪರ ಕ್ರಿಯೆ–ಪ್ರತಿಕ್ರಿಯೆಗಳಿರುವ ಆಭಾಸವನ್ನು ಉಂಟು ಮಾಡುತ್ತದೆ.

ಅಣುಗಳದೊಂದು ತರತಮ ಭಾವವುಳ್ಳ ನಿಃಶ್ರೇಣಿ. ವಿಶ್ವವನ್ನು ಸ್ಪಷ್ಟವಾಗಿಯೂ ಪ್ರತ್ಯೇಕವಾಗಿಯೂ ಪ್ರತಿಬಿಂಬಿಸುವುದರಲ್ಲಿ ಕೆಲವು ಅಣುಗಳು ಉಳಿದವುಗಳಿಂದ ಉತ್ತಮ. ಆ ಎಲ್ಲವುಗಳಲ್ಲೂ ಪ್ರತ್ಯಕ್ಷದಲ್ಲಿ ಕೆಲವಂಶ ಗಲಿಬಿಲಿಯಿದೆ. ಆಯಾ ಅಣ್ವಾತ್ಮದ ಗಾಂಭೀರ್ಯಕ್ಕೆ ಅದದರ ಗಲಿಬಿಲಿಯ ಪ್ರಮಾಣ ಅನುಗುಣವಾಗಿರುತ್ತದೆ. ಮಾನವ ಶರೀರದ ತುಂಬ ಅಣುಗಳಿವೆ; ಅದರಲ್ಲಿ ಪ್ರತಿಯೊಂದೂ ಒಂದೊಂದು ಜೀವಾತ್ಮ. ಪ್ರತಿಯೊಂದು ಜೀವಾತ್ಮವೂ ಅಮರ; ಆದರೆ ಶರೀರಗತವಾದ ಅನೇಕಾತ್ಮಗಳಲ್ಲಿ ಒಂದೇ ಒಂದು ಹೆಚ್ಚು ಪ್ರಧಾನವಾಗಿರುತ್ತದೆ. ಅದನ್ನೇ ಮಾನವನು ತನ್ನ ಆತ್ಮವೆಂದು ಹೇಳಿಕೊಳ್ಳುತ್ತಾನೆ. ಇದರ ಪ್ರತ್ಯಕ್ಷಾನುಭವವು ಸ್ಪಷ್ಟತರವಾಗಿರುತ್ತದೆ; ಮಾನವ ಶರೀರದಲ್ಲಿಯ ಬದಲಾವಣೆಗಳು ಸಾಮಾನ್ಯವಾಗಿ

ಇದಕ್ಕಾಗಿಯೇ ಸಂಭವಿಸುತ್ತಿರುತ್ತವೆ. ಇದನ್ನು ಮನಸ್ಸೆಂದು ಕರೆಯಬಹುದು. ಇಚ್ಛಾಶಕ್ತಿಯಿಂದ ಇದು ತಾನಿರುವ ಶರೀರದ ಮೇಲೆ ಪ್ರಭುತ್ವವನ್ನು ನಡೆಯಿಸುತ್ತದೆ ಎಂದು ಹೇಳಬಹುದು.

ಭೌತಶಾಸ್ತ್ರ ಹೇಳುವ ಹಾಗೂ ಇಂದ್ರಿಯಗಳಿಗೆ ತೋರುವ ದೇಶ (ಸ್ಥಳ, ಅವಕಾಶ) ಎಂಬುದು ಮಿಥ್ಯೆ. ಆದರೆ ಅದಕ್ಕೆ ಬದಲಾಗಿ ಮೂರು ವಿಧದ ಅಳತೆಯಲ್ಲಿ ಅವವುಗಳ ವಿಶ್ವವನ್ನು ಕನ್ನಡಿಸುವ ದೃಷ್ಟಿಗನುಗುಣವಾಗಿ ಅಣುಗಳ ಕ್ರಮಬದ್ಧವಾದ ವ್ಯವಸ್ಥೆಯಿದೆ. ಪ್ರತಿಯೊಂದು ಅಣುವೂ ತನಗೆ ವಿಶಿಷ್ಟವಾದ ದೃಷ್ಟಿಯಿಂದ ಜಗತ್ತನ್ನು ನೋಡುತ್ತದೆ. ಇದನ್ನೇ ನಾವು ಅಣುವಿಗೆ ಇರುವ ದೇಶಿಕಸ್ಥಾನವೆಂದು ಸ್ಥೂಲವಾಗಿ ಹೇಳಬಹುದು. ಖಾಲಿಸ್ಥಳವೆಂಬುದು ಇಲ್ಲವೇ ಇಲ್ಲ. ಶಕ್ಯವಿದ್ದ ಎಲ್ಲ ದೃಷ್ಟಿಕೋನವನ್ನು ಒಂದೇ ಒಂದು ನಿಜವಾದ ಅಣುವು ತುಂಬಿಕೊಂಡಿರುತ್ತದೆ. ಯಾವ ಎರಡು ಅಣುಗಳೂ ಸರಿಯಾಗಿ ಒಂದನ್ನೊಂದು ಹೋಲುವುದಿಲ್ಲ. ಇದೇ ಅಜ್ಞೇಯ ಪದಾರ್ಥಗಳ ಗುರುತಿನ ತತ್ವ (Identity of indiscernibles).

"ಸಾಕಷ್ಟು (ಸಮರ್ಪಕವಾದಷ್ಟು) ಕಾರಣ ಬದ್ಧತೆ"ಯ ತತ್ವದ ಪ್ರಕಾರವಾಗಿ ಹೋದರೆ ಕಾರಣವಿಲ್ಲದೆ ಯಾವುದೂ ಘಟಿಸದು. ಆದರೆ ಮಾನವರಂಥ ಇಚ್ಛಾಶಕ್ತಿ ಸಂಪನ್ನ ಪ್ರಾಣಿಗಳ ಕಾರ್ಯಗಳಿಗೆ ಇಂಥ ತಾರ್ಕಿಕ ನಿಯಮ ಅನ್ವಯಿಸದು. ದೇವರ ಕಾರ್ಯಗಳಿಗೂ ಅದೇ ತರಹದ ಕಾರಣ ಮುಕ್ತತೆಯಿದೆ. ಅತ್ಯುತ್ತಮ ಪರಿಣಾಮಕ್ಕಾಗಿಯೇ ಅವನು ಸದಾ ಕಾರ್ಯ ಮಾಡುತ್ತಾನೆ; ಆದರೆ ಅವನಿಗೆ ಹಾಗೆ ಮಾಡಲು ಯಾವ ತಾರ್ಕಿಕ ಅಗತ್ಯದ ಒತ್ತಾಯವೂ ಇಲ್ಲ. ದೇವರು ತರ್ಕವಿಧಿಗಳಿಗೆ ವಿರುದ್ಧವಾಗಿ ನಡೆದುಕೊಳ್ಳಲಾರನು. ಆದರವನು ತಾರ್ಕಿಕ ಶಕ್ಯತೆಯುಳ್ಳ ಕಾರ್ಯಗಳು ನಡೆಯುವಂತೆ ವಿಧಿಸಬಲ್ಲ. ಇದರಲ್ಲಿ ಅವನಿಗೆ ಬೇಕಾದಷ್ಟು ಆಯ್ಕೆಯ ಸ್ವಾತಂತ್ರ್ಯ ಸಿಗುತ್ತದೆ. ಅವನು ವಿಶ್ವೋತ್ತರನಾದ ವಿಶ್ವಕಾರಣನು.

## ಜಾನ್ ಲೋಕೆ (೧೬೩೨–೧೭೦೪)

ಜಾನ್ ಲೋಕೆಯು ಮೊದಲನೆಯ ದೊಡ್ಡ ಬ್ರಿಟಿಷ್ ವ್ಯವಹಾರವಾದಿ (Empiricist). ಅವನ ಪ್ರಕಾರ ಸಹಜ ಕಲ್ಪನೆಗಳು (Innate ideas), ಪದಾರ್ಥಗಳು (Categories) ಮತ್ತು ನೈತಿಕ ತತ್ವಗಳು ಇಲ್ಲ. ಹುಟ್ಟುವಾಗ ಮನಸ್ಸೊಂದು ಖಾಲಿವಸ್ತು; ಅದರ ಹೂರಣವೆಲ್ಲವೂ ಸಂವೇದನಾಜನ್ಯ, ಸಂವೇದನೆಗಳಿಂದ ತರ್ಕಿಸಿ ಗ್ರಹಿಸಿದ್ದು. ತರ್ಕವು (ಅನುಮಾನವು) ಸ್ಮೃತಿನಿಷ್ಠ ಮತ್ತು ಧ್ಯಾನ, ಪ್ರತ್ಯೇಕೀಕರಣ, ಸಾದೃಶ್ಯ–ಅಸಾದೃಶ್ಯಗಳ ಹೋಲಿಕೆ ಮಾಡುವುದು ಮತ್ತು ಕಲ್ಪನಾಶಕ್ತಿಯಿಂದ ಪುನಾರಚಿಸುವುದು ಮುಂತಾದ ಚಟುವಟಿಕೆಗಳನ್ನಾಧರಿಸಿದ್ದು. ಅನಂತತೆ (Infinity), ಶಕ್ತಿ (Power), ಕಾರಣ–ಕಾರ್ಯ, ದ್ರವ್ಯ ಮತ್ತು ವ್ಯಕ್ತಿತ್ವದ ಗುರುತು ಮುಂತಾದ ಬಹಳ ಅಮೂರ್ತವಾದ ಕಲ್ಪನೆಗಳು ಸಹ ಅನುಭವಜನ್ಯವಲ್ಲವೆಂದು ತೋರುತ್ತವೆ; ಇವು ಕೂಡ ಮೇಲಿನ ನಿಯಮಕ್ಕೆ

ಹೊರತಾದವುಗಳಲ್ಲ. ಈ ಪ್ರಕಾರ, ಅನಂತತೆಯು ನಮ್ಮ ಸಂವೇದನೆಗಳ ದೇಶಿಕ–ಕಾಲಿಕ ವ್ಯಾಪಕತೆಯನ್ನು ವಾಸ್ತವಿಕವಾಗಿ ಅಥವಾ ಕಾಲ್ಪನಿಕವಾಗಿ ಪರಿಸೀಮನಗೊಳಿಸಲು ಸಾಧ್ಯವಾಗದುದರ ಸಾಕ್ಷಿ; ಗುಣಗಳು ಪ್ರತ್ಯೇಕ ಗುಂಪುಗಳಾಗುವುದು ಏಕೆ ಎಂಬುದನ್ನು ಪ್ರತ್ಯಕ್ಷೀಕರಿಸಿಕೊಳ್ಳಲು ಅಥವಾ ತಿಳಿದುಕೊಳ್ಳಲು ಸಾಧ್ಯವಾಗದುದಕ್ಕೆ ಪ್ರಮಾಣ. ಈ ಗುಂಪುಗಳು ಹೇಗೆ ಮತ್ತು ಏಕೆ ಒಂದನ್ನೊಂದು ಅನುಸರಿಸಿ ಬರುವುವು ಮತ್ತು ಆಭಾಸಿಕವಾಗಿ ಜನ್ಯ–ಜನಕಗಳಾಗುವುವು– ಅಲ್ಲದೆ, ಹೇಗೆ ನಮ್ಮ ಇಚ್ಛಾ ಪ್ರಯತ್ನಗಳು ಅವುಗಳನ್ನು ಫಲರೂಪದಲ್ಲಿಡುವಂತೆ ಮಾಡುವ ಚಲನಗಳನ್ನು ಉಂಟುಮಾಡುವುವು– ಎಂಬುದನ್ನರಿಯಲಾಗದುದಕ್ಕೆ ಶಕ್ತಿ ಹಾಗೂ ಕಾರಣ ಕಾರ್ಯಗಳನ್ನು ಕಲ್ಪಿಸಿಕೊಂಡದ್ದು ಸಾಕ್ಷಿ. ಬಿಡುಗಡೆಯೆಂದರೆ ಸ್ವಾತಂತ್ರ್ಯ. ಅದು ಸಾಕಷ್ಟು ಉದ್ದೇಶಪ್ರೇರ್ಯವಾದ ಆಯ್ಕೆಯ ಸ್ವಾತಂತ್ರ್ಯವಲ್ಲ–ಆಯ್ಕೆಗೆ ಅನುಗುಣವಾದ ಕಾರ್ಯದ ಸ್ವಾತಂತ್ರ್ಯ. ವಸ್ತುಗಳ (Things) ವ್ಯಕ್ತಿತ್ವದ ಗುರುತು ಸಂವೇದನಾ ಸಂಘಾತಗಳ ಹೂರಣದ ದೇಶಿಕ–ಕಾಲಿಕ ಸಾತತ್ಯ (Continuity)ದಿಂದ ಜನ್ಯವಾದದ್ದು. ರಚನೆಯ ಪ್ರತ್ಯೇಕತೆಯ ಗುರುತು ಬದಲಾಗುವ ಹೂರಣದ ಕ್ರಮವಿನ್ಯಾಸದ ಸಾತತ್ಯದಿಂದ ಲಭ್ಯವಾದದ್ದು. ವ್ಯಕ್ತಿಯ ಪ್ರತ್ಯೇಕತೆಯ ಗುರುತು ಸ್ಮೃತಿಯ ಮೂಲಕ ಪ್ರಜ್ಞೆಯು ಸತತವಾಗುವುದರಿಂದ ಅನುಮೇಯ; ಅದರಿಂದ ಒಂದೇ ಶರೀರದಲ್ಲಿ ಭಿನ್ನವ್ಯಕ್ತಿತ್ವಗಳು ಒಂದಾದ ಮೇಲೊಂದರಂತೆ ಬಂದು ಹೋಗಬಹುದು ಮತ್ತು ಒಂದೇ ಒಂದು ವ್ಯಕ್ತಿತ್ವವು (Personality) ಒಂದರಿಂದ ಇನ್ನೊಂದು ಶರೀರಕ್ಕೆ ಸ್ಥಳಾಂತರ ಹೊಂದಬಹುದು.

ಇಂಥ ಪರಿಸ್ಥಿತಿಯಲ್ಲಿ ನಿಜಜ್ಞಾನವು ಬಹಳ ಪರಿಮಿತವಾಗಿ ಹೋಗಿದೆ. ಸಾಮಾನ್ಯಗಳು (Univerals) ಮೇಲು ಮೇಲಿನ ಸಾದೃಶ್ಯಗಳಷ್ಟನ್ನು ಗ್ರಹಿಸುತ್ತವೆ; ವಸ್ತುಗಳ ನಿಜ ಸಾರವನ್ನವು ಗ್ರಹಿಸುವುದಿಲ್ಲ. ಏಕತ್ವ, ನಾನಾತ್ವ, ಸಂಬಂಧಗಳು, ಸಹ–ಅಸ್ತಿತ್ವಗಳು, ವಸ್ತುಸಾರದಲ್ಲಿಯ ಆವಶ್ಯಕ ಸೂತ್ರಬದ್ಧತೆಗಳು ನೇರವಾಗಿ ಅನುಭವದ (Intution) ಪ್ರಾತಿಭ ಪ್ರತ್ಯಕ್ಷದ ಫಲಗಳು; ಅನುಭವವು ಸ್ಮೃತಿ ಸಹಾಯದಿಂದ ಇವುಗಳಿಗೆ ಸಂಬಂಧಿಸಿದ ಕಲ್ಪನೆಗಳ ಸಾಂಗತ್ಯ–ಅಸಾಂಗತ್ಯಗಳನ್ನು ಅರಿತುಕೊಳ್ಳುವುದು. ನಮ್ಮ ಅನುಭವವು ನಮ್ಮ ಹೊರಗಿನಿಂದ ಬರುವುದೆಂಬುದು ನೇರವಾಗಿ ನಮ್ಮ ಸಂವೇದನೆಗೆ (Sensation) ಗೊತ್ತಾಗುತ್ತದೆ. ರುಚಿ, ವಾಸನೆ, ಬಣ್ಣ, ಶಬ್ದ ಮುಂತಾದವು ನಮ್ಮ ಒಳಗಿರುವ ದ್ವಿತೀಯ ಶ್ರೇಣಿಯ (ಗೌಣ)ಗುಣಗಳು; ವ್ಯಾಪಕತೆ, ಆಕಾರ, ವಿಶ್ರಾಂತಿ, ಚಲನ, ವಸ್ತುವೊಂದರ ಆವಯವಿಕ ಹೊಂದಿಕೆಯಿಂದ ಲಭ್ಯವಾಗುವ ಸ್ವರೂಪನಿಷ್ಠ ಏಕತ್ವ ಮತ್ತು ವಸ್ತುನಾನಾತ್ವ ಎಂಬ ಪ್ರಾಥಮಿಕ (ಮೂಲಭೂತ) ಗುಣಗಳು ಪ್ರಾಣಿಪ್ರತ್ಯಕ್ಷಕ್ಕೆ ನಿರಪೇಕ್ಷವಾಗಿ ಹೊರಗಿನ ಜಗತ್ತಿನಲ್ಲಿ ಸಮವೇತ (Inherent) ವಾಗಿರುವಂತೆ ತೋರುತ್ತವೆ. ದೇವರ ಅಸ್ತಿತ್ವವನ್ನು ನಿರ್ಧರಿಸಬಲ್ಲ ನೈದರ್ಶನಿಕ (Demonstrative) ಜ್ಞಾನವು ನಮಗಿದೆ. ದೇವರಿಂದ ಭಿನ್ನವಾದ ವಸ್ತುಗಳ ಬಗೆಗೆ ಸಂವೇದನಾಜನ್ಯವೂ ಸಂವೇದನಾ ಪರಿಸೀಮಿತವೂ ಆದ ಜ್ಞಾನವನ್ನು ಬಿಟ್ಟರೆ ಬೇರೆ ಬಗೆಯ ಜ್ಞಾನವಿಲ್ಲ.

ಇಂಗ್ಲೆಂಡಿಗೆ ವಿಶಿಷ್ಟವಾದ Divine right of kings– ರಾಜರ ದೇವದತ್ತಾಧಿಕಾರದ ವಿರುದ್ಧವಾಗಿ ಲೋಕೆ ವಾದಿಸಿದನು; ಬೈಬಲ್ಲು–ಚರ್ಚುಗಳ ಪ್ರಾಧಿಕಾರವನ್ನವನು ಧಿಕ್ಕರಿಸಿ ತರ್ಕಿಸಿದನು. ಅವನ ಪ್ರಕಾರ, ರಾಜಕೀಯ ಸಾರ್ವಭೌಮಾಧಿಕಾರವು ಪ್ರಜೆಗಳ ಸಂಮತಿಯನ್ನವಲಂಬಿಸಿದೆ. ಮತಧಾರ್ಮಿಕ ಪ್ರಾಧಿಕಾರವು ವಿವೇಕ–ವಿಚಾರಗಳನ್ನು ಆಧರಿಸಿದಂಥದು. ವಿಚಾರ–ವಾಕ್ ಸ್ವಾತಂತ್ರ್ಯಗಳ (ವಿಚಾರವನ್ನು ಪ್ರಕಟವಾಗಿ ಮಾಡುವ ಮತ್ತು ಅಭಿಪ್ರಾಯವನ್ನು ಹೇಳುವ ಹಕ್ಕುಗಳ) ಸಮರ್ಥನೆಯನ್ನು ಲೋಕೆ ಚೆನ್ನಾಗಿ ಮಾಡಿದನು.

ಕಾಯದಿಂದ ಪ್ರತ್ಯೇಕಿಸಲಾಗದಂತಹ ಗುಣಗಳು ಪ್ರಾಥಮಿಕ; ಅವುಗಳ ಪರ್ಯಾಯಗಳು– ಘನತ್ವ, ವ್ಯಾಪಕತ್ವ, ಆಕೃತಿ, ಚಲನ ಅಥವಾ ವಿಶ್ರಾಂತಿ ಮತ್ತು ಸಂಖ್ಯೆ– ಎಂಬುದಾಗಿವೆ; ನಾನಾತ್ವವು ಸಂಖ್ಯೆ, ಏಕತ್ವವು ಘನತ್ವ, ವ್ಯಾಪಕತ್ವವು ವಿಸ್ತಾರ್ಯತೆ. ವಸ್ತುಗಳ ಪ್ರಾಥಮಿಕ ಗುಣಗಳು ಅವುಗಳ ಕಾಯಗಳಲ್ಲಿವೆ; ಅವುಗಳ ಗೌಣ ಗುಣಗಳು ಗ್ರಹಣಕರ್ತನಲ್ಲಿರುತ್ತವೆ. ಪ್ರತ್ಯಕ್ಷವೇ ಪರಮ ಪ್ರಮಾಣ. ಅತಿಭೌತ ಶಾಸ್ತ್ರವು ಪ್ರಪಂಚದ ಬಗೆಗೆ ಹೇಳುವುದೆಲ್ಲವೂ ಶಾಬ್ದಿಕಜ್ಞಾನ. ವಸ್ತುಗಳಿಗೆ ಸಾರವಿರಬಹುದು; ಅವು ನಮಗರಿಯವು; ಅತಿಭೌತಶಾಸ್ತ್ರ ಹೇಳುವ ವಸ್ತುಸಾರವು ಕೇವಲ ಶಾಬ್ದಿಕ. ವಸ್ತು–ಪ್ರಾಣಿಗಳನ್ನು ವರ್ಗೀಕರಿಸಲು ಮನುಷ್ಯ ಹಿಡಿಯುವ ಪರಿಸೀಮನ ತತ್ವವು ಮನುಷ್ಯ ಕೃತಕ. ಅವನವನ ಮನಸ್ಸಿನಲ್ಲಿರುವುದು ಅವನವನ ಜ್ಞಾನ. ಕಲ್ಪನೆಗಳೆರಡು ಅಸಂಗತ ಅಥವಾ ಸುಸಂಗತ ಎಂದು ಪ್ರತ್ಯಕ್ಷವಾಗುವುದೇ ಜ್ಞಾನ. ನಮಗಿರುವ ನಮ್ಮ ಜ್ಞಾನವು ಪ್ರಾತಿಭ (Intuitive); ನಮಗಿರುವ ದೇವಜ್ಞಾನವು ನೈದರ್ಶನಿಕ (Demonstrative) ಇಂದ್ರಿಯಗೋಚರವಾಗುವ ಬಾಹ್ಯವಸ್ತುಗಳ ಜ್ಞಾನವು ಐಂದ್ರಿಯಿಕ. ಸರಳ ಕಲ್ಪನೆಗಳು ಅವುಗಳು ನಿರ್ದೇಶಿಸುವ ವಸ್ತುಗಳೊಡನೆ ಸಂಗತವಾಗಿರುತ್ತವೆ. ಬಾಹ್ಯ ವಸ್ತುಗಳು ಸ್ವಾಭಾವಿಕವಾಗಿ ಮನಸ್ಸಿನ ಮೇಲೆ ಮಾಡುವ ಪರಿಣಾಮಗಳೇ ವಸ್ತು ಕಲ್ಪನೆಗಳು. ಜ್ಞಾನ ಮಾರ್ಗಗಳು ಮೂರು: (೧) ಪ್ರತಿಭೆ (Intuition), (೨) ವಿಚಾರ ತರ್ಕ ಕಲ್ಪನೆಗಳೆರಡರ ಸಾಂಗತ್ಯ–ಅಸಾಂಗತ್ಯಗಳ ಪರಿಶೀಲನೆ; (೩) ಸಂವೇದನೆ ಪ್ರತ್ಯೇಕವಾದ ಬಾಹ್ಯ ವಸ್ತುಗಳ ಪ್ರತ್ಯಕ್ಷೀಕರಣ.

ಸುಖಕರವಾದದ್ದು ಒಳ್ಳೆಯದು; ದುಃಖಕರವಾದದ್ದು ಕೆಟ್ಟದ್ದು. ಸುಖವೊಂದೇ ಇಚ್ಛಾ ಪ್ರೇರಕ. ನಮಗೆ ಅನುಭವಿಸಲು ಶಕ್ಯವಾಗುವ ಸಂತೋಷದ ಪರಮಾವಧಿಯೇ ಸುಖ. ನಿಜಸುಖವನ್ನು ಅನುಸರಿಸಿ ಕೊಂಡು ಹೋಗುವ ಅಗತ್ಯವೇ ಸ್ವಾತಂತ್ರ್ಯದ ಬುನಾದಿ, ಒಳಿತನ್ನು ಬಿಟ್ಟು ಕೇಡನ್ನಿಟ್ಟುಕೊಳ್ಳುವುದು ಪ್ರಕಟವಾದ ಅಪನಿರ್ಣಯ. ಭಾವೋದ್ರೇಕಗಳನ್ನು ನಿಯಂತ್ರಿಸಿಕೊಳ್ಳುವುದೇ ಸ್ವಾತಂತ್ರ್ಯದ ನ್ಯಾಯವಾದ ಸುಧಾರಣೆ. ವೈಯಕ್ತಿಕ ಹಾಗೂ ಸಾರ್ವಜನಿಕ ಹಿತಾರ್ಥಗಳೆರಡೂ ದೀರ್ಘ ಕಾಲದ ನಂತರ ಅಂತ್ಯದಲ್ಲಿ ಒಂದೇ. ಜಾಗ್ರತೆ ವಹಿಸಿ ನಡೆದುಕೊಳ್ಳುವುದು ಮತ್ತು ಧಾರ್ಮಿಕತೆಗಳಿರುವೆಡೆ ಮಾತ್ರ ಕಾಯದೆ ಬದ್ಧವಾದ ಸ್ವಾತಂತ್ರ್ಯವಿರಬಲ್ಲದು. ಯಾವ ಸರಕಾರವೂ ಯಾರಿಗೂ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಡಲಾರದು. ಆಸ್ತಿವಂತಿಕೆಯು ಸರಕಾರದ ಅಗತ್ಯದ ಮೂಲಾಧಾರ.

ಸರಕಾರವು ವ್ಯಕ್ತಿಗಳ ಹಕ್ಕುಗಳ ರಕ್ಷಕ. ಅದೊಂದು ಲೌಕಿಕ ವಿಷಯ. ಅದೊಂದು ಸರಕಾರ–ಪ್ರಜೆಗಳಲ್ಲಾದ ಸಾಮಾಜಿಕ ಒಪ್ಪಂದ. ಸಾರ್ವಜನಿಕ ಹಿತಕ್ಕಾಗಿ ಕಾಯಿದೆ ಮಾಡುವುದು ಸರಕಾರದ ಹಕ್ಕು. ಸರಕಾರವು ನಿರಂಕುಶವಾಗಿರಕೂಡದು. ಬಹುಸಂಖ್ಯಾತರ ಮತವೇ ಕೊನೆಯದಾಗಿ ನಿರ್ಣಾಯಕವಾಗಿರಬೇಕು. ವ್ಯಕ್ತಿಯ ಆಸ್ತಿಯ ಮೇಲಿನ ಹಕ್ಕನ್ನು ಸರಕಾರ ಕಸಿದುಕೊಳ್ಳಲಾರದು; ಅದು ಹಾಗೆ ಮಾಡುವುದು ಅದರ ಅಧಿಕಾರಕ್ಕೆ ಮೀರಿದ್ದು. ಆಯಾ ಮನುಷ್ಯನಿಗೆ ವ್ಯವಸಾಯ ಮಾಡಲು (ಮಾಡಿಸಲು ಅಲ್ಲ) ಸಾಧ್ಯವಾಗುವಷ್ಟು ಭೂಮಿ ಅವನ ಆಸ್ತಿ. ಸರಕಾರದ ಕಾರ್ಯಾಂಗ, ನ್ಯಾಯಾಂಗ, ಶಾಸನಾಂಗಗಳ ಅಧಿಕಾರಗಳು ಪ್ರತ್ಯೇಕವಾಗಿರಬೇಕು.

## ಜಾರ್ಜ್ ಬರ್ಕ್ಲೇ (೧೬೮೫–೧೭೫೩)

ಜಾರ್ಜ್ ಬರ್ಕ್ಲೆಯು ನಾನಾತ್ವೀಯ ಧ್ಯೇಯವಾದಿ. ದೂರ, ಗಾತ್ರ, ಸನ್ನಿವೇಶಗಳೆಂಬ ಧರ್ಮಗಳು ಅನುಭವಿಯಾದ ಮಾನವನ ಪ್ರಜ್ಞೆಯಲ್ಲದೆ ಹೊರಗಿಲ್ಲ. ವಿಶ್ವಮನವೆಂಬುದೇ ದೇವರು. ವಾಸ್ತವಿಕ ಪ್ರಪಂಚವೆಂದು ಕರೆಯಲ್ಪಡುವ ಪದಾರ್ಥ ಅದರ ಹೂರಣ. ಪರಿಮಿತ ಜೀವಗಳನ್ನು ದೇವರು ಸೃಷ್ಟಿಸಿದ್ದಾನೆ. ಅವುಗಳ ವಿವಿಧ ಅನುಭವಗಳು ಅವನು ಅವರಿಗೆ ಕೊಟ್ಟ ಸಂದೇಶಗಳು. ಆ ಸಂದೇಶಗಳು ಅವರವರ ಗ್ರಹಣ ಶಕ್ತಿಗೆ ಪರಿಸೀಮಿತ; ಅವು ಆತನ ದಿವ್ಯಾನುಭವಗಳಿಂದ ಬಂದಂಥವು. ಜಗತ್ತಿನ ಭೌತಿಕಾಂಶಗಳೆಲ್ಲವನ್ನೂ ಮಾನಸಿಕ ಘಟನೆಗಳನ್ನಾಗಿ ಪರಿವರ್ತಿಸಬಹುದು. ಭೌತ ಪದಾರ್ಥವು ಮಿಥ್ಯೆ; ಅದಕ್ಕೆ ಅಸ್ತಿತ್ವವಿಲ್ಲ. ಪ್ರತ್ಯಕ್ಷವಾಗುವ ಪ್ರಾಥಮಿಕ–ಗೌಣ ಗುಣಗಳು ಮನೋಮೂಲ; ಅವುಗಳಿಗೆ ಹೊರಗಿನ ಆಶ್ರಯ ದ್ರವ್ಯವಿಲ್ಲ. ಅಹಮ್ಮೊಂದು ದ್ರವ್ಯ. ಕೆಲ ಜೈವಿಕ ಪದಾರ್ಥಗಳು ಅಪ್ರತ್ಯಕ್ಷವಾಗಿರುತ್ತವೆ. ಮನ ಮತ್ತು ಅದರಲ್ಲಿಯ ಘಟನೆಗಳಿಗಷ್ಟೇ ಅಸ್ತಿತ್ವರೂಪದ ಸತ್ಯತೆಯಿದೆ.

## ಡೇವಿಡ್ ಹ್ಯೂಂ (೧೭೧೧–೧೭೭೬)

ಸಂವೇದನೆ ಮತ್ತು ಆಲೋಚನೆಗಳೇ ತಿಳಿವಳಿಕೆ (Cognition) ಎಂಬುದರ ಮೂಲ. ಸರಳ ಕಲ್ಪನೆಗಳೆಲ್ಲವೂ ಸರಳ ಭಾವಪ್ರಕಾರಗಳ (Impression) ಪಡಿಯಚ್ಚುಗಳು. ಜಟಿಲ ಕಲ್ಪನೆಗಳು ಜಟಿಲ ಭಾವಪ್ರಕಾರಗಳ ಪಡಿಯಚ್ಚುಗಳಾಗಿರಬಹುದು ಅಥವಾ ಸರಳ ಕಲ್ಪನೆಗಳ ಕಾಲ್ಪನಿಕ ಸಂಯೋಗಗಳಿಂದ ಉಂಟಾಗಿರಲೂ ಬಹುದು. ಕಲ್ಪನೆಗಳ ತುಲನೆಯಿಂದ ಜ್ಞಾನ ಲಭಿಸುವುದು; ಅವುಗಳ ಅಂತರ್ಗತವಾದ ಸಹಜ ಹೋಲಿಕೆಯೇ ಅದರ ಹೂರಣ. ಹೋಲುವ ಕಲ್ಪನೆ (Idea)ಗಳನ್ನು ಮೀರಿ ಹೋಲಿಕೆ ಎಂಬುದಿಲ್ಲ; ಅಮೂರ್ತ ಸಾಮಾನ್ಯ ಕಲ್ಪನೆಗಳೆಂಬವು ಇಲ್ಲವೇ ಇಲ್ಲ. ಕಲ್ಪನೆಗಳ ಸಾಮಾನ್ಯತೆಯನ್ನೂ (Generality) ಪ್ರಾತಿನಿಧಿಕ ಕಲ್ಪನೆಗಳಂತಿರುವ ಎಲ್ಲ ಕಲ್ಪನೆಗಳನ್ನೂ ಭಾವಪ್ರಕಾರಗಳನ್ನೂ ಪದೇಪದೇ ಬಳಸುವುದು ನಿರ್ಧರಿಸುತ್ತದೆ. ಹೋಲಿಕೆಯ ಮೇಲೆ ನಿಂತ ಕಲ್ಪನೆಗಳ ಸಂಬಂಧಗಳೇ ಜ್ಞಾನ. ಬೇರೆ ಬೇರೆ ಇರವುಗಳ ನಡುವಿನ ಒಂದೇ ಒಂದು ಸಂಬಂಧವೆಂದರೆ ಕಾರ್ಯ–ಕಾರಣ ಸಂಬಂಧ; ಅದರಿಂದಲೇ ಒಂದರಿಂದ ಇನ್ನೊಂದನ್ನು ಅನುಮಾನಿಸಲು (Infer) ಸಾಧ್ಯ. ಕಾರ್ಯ

ಕಾರಣಗಳ ನಡುವೆ ಸಾದೃಶ್ಯವಿರಲೇಬೇಕೆಂಬ ನಿಯಮವಿಲ್ಲ. ಆದುದರಿಂದ ಕಾರಣನಿಷ್ಠವಾದ ಅನುಮಾನವು ಪ್ರತ್ಯಾಕ್ಷಾನುಭವದ ದೃಷ್ಟಿಯಿಂದ ಅಥವಾ ತರ್ಕಶಾಸ್ತ್ರೀಯ ಔಪಚಾರಿಕತೆಯ ದೃಷ್ಟಿಯಿಂದ ಖಾತ್ರಿಯಾದುದೆಂದು ಹೇಳಲು ಬರಲಾರದು. ಕಾರಣ–ಕಾರ್ಯಗಳ ಪೌರ್ವಾಪರ್ಯಸಂತಾನ ಮತ್ತು ಕಾಲ–ದೇಶಿಕ ಸಾತತ್ಯಗಳು ಅನಿವಾರ್ಯ ಸಂಬಂಧವಾವುದನ್ನೂ ಸೂಚಿಸುವುದಿಲ್ಲ. ಈ ಸಂಬಂಧದ ಸ್ಥಿರತೆಯು (Constancy) ಕೇವಲ ಪುನರಾವೃತ್ತಿಯಾಗಿರುವುದರಿಂದ ಯಾವ ಹೊಸ ಕಲ್ಪನೆಯನ್ನೂ ಇದು ಒದಗಿಸಕೊಡದು. ಆದುದರಿಂದ ಕಾರಣ ಸಂಬಂಧದ ಅನಿವಾರ್ಯತೆಯನ್ನು ಮಾನಸಶಾಸ್ತ್ರದ ದೃಷ್ಟಿಯಿಂದಲೇ ವಿವರಿಸಬೇಕಾಗುತ್ತದೆ. ಹೀಗೆ ಆಲೋಚನೆಯ ಭಾವಪ್ರಕಾರವು (ಸಂಸ್ಕಾರವು)–ಅಂದರೆ, ಸಾಹಿತ್ಯದ (Association) ಭಾವನಾನುಭವಿಕ ಬಲವು ಸಂಯುಕ್ತ ಭಾವಪ್ರಕಾರಗಳ ಅನೇಕ ಸಲದ ಪುನರಾವೃತ್ತಿಗಳ ಅನಂತರ ಉತ್ಪನ್ನವಾಗುವದರಿಂದ– ಅನಿವಾರ್ಯತೆಯ (ಆವಶ್ಯಕತೆಯ) ಕಲ್ಪನೆಗೆ ಆಕರವಾಗುತ್ತದೆ. ಆರಂಭ ಇರುವ ಎಲ್ಲವುದಕ್ಕೂ ಕಾರಣ ಇದ್ದೇ ಇರಬೇಕು ಮತ್ತು ಸದೃಶ ಕಾರಣಗಳಿಂದ ಸದೃಶ ಕಾರ್ಯಗಳು ಸಂಭವಿಸಬೇಕು ಎಂಬ ಭಾವನಾಂಶವು (Feeling) ಅಭ್ಯಾಸ ಅಥವಾ ರೂಢಿಯಿಂದ ಲಭ್ಯವಾದದ್ದೆಂಬುದು ತಕ್ಕ ವಿವರಣೆಯಗುತ್ತದೆ. ಭಿನ್ನ ಇರವುಗಳ (Existences) ನಡುವೆ ತಾರ್ಕಿಕವಾಗಿ ಆವಶ್ಯಕವೆನ್ನಿಸುವ ಸಂಬಂಧವಿದೆಯೆಂದು ಪ್ರಾತಿಭವಾಗಿ (Intuitively) ಅಥವಾ ನ್ಯಾಯವಾಕ್ಯ ಪದ್ಧತಿಯ ಪ್ರಕಾರ (Demonstratively) ಗ್ರಹಿಸಲು ಸಾಧ್ಯವಿಲ್ಲ. ಪ್ರತ್ಯಕ್ಷದ ಕ್ರಿಯಾನುಕ್ರಮ ತಲೆಹಾಕುವ ಅವಧಿಗಳಲ್ಲಿ ಸ್ವತಂತ್ರವೂ ಸಾತತ್ಯವುಳ್ಳದ್ದೂ ಎಂದು ತೋರುವ ಹಾಗೆ ಪ್ರತ್ಯಕ್ಷಾನುಭವದ ಜಾಲಗಳಲ್ಲಿರುವ ನಟಿಸುವ ಪ್ರವೃತ್ತಿಯೇ ಬಾಹ್ಯ ವಸ್ತುಗಳು ಇವೆ ಎಂದು ನಾವು ನಂಬಲು ಕಾರಣ. ಈ ಪ್ರವೃತ್ತಿಯು (Propensity) ಕೆಲವು ಪ್ರತ್ಯಾಕ್ಷಾನುಭವ ಜಾಲಗಳು ತೋರಿಸುವ ಸ್ಥಿರತೆ ಮತ್ತು ಸಾಂಗತ್ಯ (Coherence)ಗಳಿಂದ ಹಾಗೂ ಜ್ಞಾನ ಮತ್ತು ಸಾಮಾನ್ಯವಾದ ಕಾರಣಗತ ನಂಬಿಗೆಗಳ ಗಡಿಗಳನ್ನು ಮೀರಿ ಹೋಗುವ ಕಲ್ಪನಾ ಶಕ್ತಿಯ ಸಕರ್ಮಕತೆಯ ಬಲದಿಂದ ನಿಷ್ಕೃಷ್ಟವಾಗುತ್ತದೆ. ದೈವಭಕ್ತಿಗೂ ನೀತಿವಂತಿಕೆಗೂ ಯಾವ ಸಂಬಂಧವೂ ಇಲ್ಲ. ನೀತಿವಂತಿಕೆಯು ಅಭ್ಯಾಸ ರೂಢಿಗಳನ್ನು ಆಧರಿಸಿದ್ದು; ಅದಕ್ಕೆ ತಾರ್ಕಿಕ ಅನಿವಾರ್ಯತೆಯ ತಳಪಾಯವಿಲ್ಲ. ಸ್ವಾರ್ಥ ಮತ್ತು ಪರಹಿತದ ಬಗೆಗಿನ ಸಹಾನುಭೂತಿಗಳೇ ನೀತಿವಂತಿಕೆಯ ಮೂಲ. ಅನುಭವದಿಂದಲೂ ನಿರೀಕ್ಷಣೆಯಿಂದಲೂ ನಾವು ಏನನ್ನೂ ಹೊಸದಾಗಿ ಕಲಿತುಕೊಳ್ಳಲಾರೆವು. ಯಾವ ನಂಬಿಗೆಗೂ ತರ್ಕದ (Reason) ಆಧಾರವಿಲ್ಲ.

## ಜೀನ ಜಾಕ್ಸ್ ರೂಸೋ (೧೭೧೨–೧೭೭೮)

ಮನುಷ್ಯನು ಸ್ವಾಭಾವಿಕವಾಗಿ ಒಳ್ಳೆಯವನು. ಸಂಸ್ಥೆಗಳು ಅವನನ್ನು ಕೆಟ್ಟವನ್ನಾಗಿ ಮಾಡಿವೆ. ಪ್ರಾಣಿ ಸಹಜವಾದ ನೈಸರ್ಗಿಕ ಬಾಳು ಎಂಬುದು ಮನುಷ್ಯರಲ್ಲಿ ಬಹುಶಃ ಎಂದೂ ಇದ್ದಿಲ್ಲ, ಇನ್ನೆಂದೂ ಉಂಟಾಗಲಾರದು. ಮನುಷ್ಯರಲ್ಲಿ ನಿಸರ್ಗ ಸಹಜವಾದ ವಿಷಮತೆ ಇದೆ; ವಯಸ್ಸು, ಆರೋಗ್ಯ ಬುದ್ಧಿಮತ್ತೆ ಮುಂತಾದವುಗಳಲ್ಲಿ ಅವರು ಅಸಮಾನರು.

ಆದರೆ ಪರಂಪರಾಗತವಾದ ಹಕ್ಕುಗಳಲ್ಲಿ ವೈಷಮ್ಯವಿರುವುದು ಅಸಾಧು. ವೈಯಕ್ತಿಕ (ಖಾಸಗಿ) ಆಸ್ತಿವಂತಿಕೆಯೇ ಸಾಮಾಜಿಕ ವಿಷಮತೆಗೆ ಕಾರಣ. "ನಾಗರಿಕತೆ"ಯನ್ನು ಬಿಟ್ಟು ಸರಳ ಜೀವನವನ್ನು ಹಿಡಿಯುವುದೇ ಅದಕ್ಕೆ ಪರಿಹಾರ; ತಾಪಸ ಸೌಗುಣ್ಯವೇ ತಾರಕ ಮಾರ್ಗ. ಪ್ರಜಾಪ್ರಭುತ್ವವು ಗ್ರಾಹ್ಯ; ರಾಜರಿಗೆ ಆಳಲು ದೈವದತ್ತ ಅಧಿಕಾರವಿಲ್ಲ. ಮಾನವನಲ್ಲಿಯ ಗೌರವಪೂರ್ಣ ಭಯ ಅಥವಾ ಅದ್ಭುತಾನುಭವ, ಸರಿ–ತಪ್ಪುಗಳ ಕಲ್ಪನೆ, ಮಹಾತ್ವಾಕಾಂಕ್ಷೆಯ ಭಾವನಾಂಶ ಮುಂತಾದವು ದೈವಶ್ರದ್ಧೆಗೆ ಮೂಲಾಧಾರ. ಮನಃಸಾಕ್ಷಿಯು ನ್ಯಾಯವಾದ ಕರ್ತವ್ಯವನ್ನು ಪ್ರೇರಿಸುವ ಅಭೇದ್ಯವಾದ ಸಾಧನ. ನಮ್ಮ ಸ್ವಾಭಾವಿಕ ಪ್ರವೃತ್ತಿಗಳು ಸಾರ್ವಜನಿಕ ಹಿತಗಳಿಗಾಗಿ ದುಡಿಯಲು ಪ್ರೇರಿಸುತ್ತವೆ; ಆದರೆ ನಮ್ಮ ವಿಚಾರ ಶಕ್ತಿಯು ಸ್ವಾರ್ಥ ಸಾಧನೆಯನ್ನು ಹಿಡಿಯೆಂದು ಒತ್ತಾಯಿಸುತ್ತದೆ. ಸುಗುಣಿಗಳಾಗಬೇಕಾದರೆ ನಾವು ಭಾವನಾನುಯಾಯಿಗಳಾಗಬೇಕು. ತರ್ಕಬುದ್ಧಿಯ ಅನುಯಾಯಿಗಳಾಗಬಾರದು. ನೈಸರ್ಗಿಕ ಧರ್ಮಕ್ಕೆ ಶ್ರುತಿಗಳ ಆಧಾರ ಬೇಕಾಗಿಲ್ಲ. ದೇವರು ಹೃದಯಕ್ಕೆ ಕೊಟ್ಟ ಸಂದೇಶವನ್ನು ಕೇಳಿದ್ದರೆ ಜಗತ್ತಿನಲ್ಲಿ ಒಂದೇ ಒಂದು ಮತ ಧರ್ಮವಿರುತ್ತಿತ್ತು; ಅದೇ ಸ್ವಾಭಾವಿಕ ಮತ ಧರ್ಮ; ಅದು ನಿತ್ಯ ಅಭೇದ್ಯ. ಶಾಬ್ದಜ್ಞಾನವು ಯಾವಾಗಲೂ ಭೇದ್ಯ (Fallible). ಶ್ರುತಿಗಳ ನರಕವೂ ಸ್ವರ್ಗವೂ ಅಗ್ರಾಹ್ಯ ಶ್ರದ್ಧಾವಸ್ತುಗಳು. ಇವುಗಳಿಂದ ಮುಕ್ತನಾದ "ಅನಾಗರಿಕನು" ಒಳ್ಳೆಯ ಗಂಡ ಮತ್ತು ದಯಾವಂತ ತಂದೆ. ಅವನಿಗೆ ಲೋಭವಿಲ್ಲ. ನೈಸರ್ಗಿಕ ದಯಾವಂತಿಕೆಯೇ ಅವನ ಮತಧರ್ಮ. ಸರ್ವಾಧಿಕಾರಿ ಪ್ರಭುತ್ವಕ್ಕೆ ಸಮೀಪವರ್ತಿಯಾದದ್ದೇ ಆದರ್ಶಪ್ರಭುತ್ವ: ಸಣ್ಣರಾಜ್ಯಗಳಿಗೆ ಪ್ರಜಾಪ್ರಭುತ್ವ ಉತ್ತಮ, ಮಧ್ಯಮ ಗಾತ್ರದ ರಾಜ್ಯಗಳಿಗೆ ಕುಬೇರಪ್ರಭುತ್ವ (Aristocracy) ಉತ್ತಮ, ದೊಡ್ಡ ರಾಜ್ಯಗಳಿಗೆ ರಾಜಪ್ರಭುತ್ವವೇ ಉಚಿತ. ಒಮ್ಮೆ ಸ್ವಾತಂತ್ರ್ಯ ಹೋದರೂ ಚಿಂತೆಯಿಲ್ಲ, ಸಮತೆಯನ್ನು ಕಳೆದುಕೊಳ್ಳಬಾರದು. ಹಾಬ್ಸ್ ಹೇಳಿದ್ದಕ್ಕೆ ಸದೃಶವಾದ ಸಾಮಾಜಿಕ ಒಪ್ಪಂದದ ಸಿದ್ಧಾಂತವು ಗ್ರಾಹ್ಯ. ಸಮಷ್ಟಿಯು ವ್ಯಷ್ಟಿಯನ್ನು ಕಾಯಬೇಕು. ಸರ್ವರೊಡನೆ ಒಂದಾಗಿಯೂ ವ್ಯಕ್ತಿಯು ತನಗಷ್ಟೇ ತಾನು ವಿಧೇಯನಾಗಿರುವ ಸ್ವಾತಂತ್ರ್ಯವನ್ನು ಇಟ್ಟುಕೊಳ್ಳಬಲ್ಲ. ವ್ಯಕ್ತಿಯ ಹಕ್ಕುಗಳೂ ಸ್ವಾತಂತ್ರ್ಯವೂ ಅಮುಖ್ಯ. ಅವರಿಗಿರುವುದು ನೈಸರ್ಗಿಕ ಹಕ್ಕುಗಳಷ್ಟೇ. ಸಮಾಜಕ್ಕೆ ಅಹಿತವಾಗುವಂಥ ಯಾವ ಬಂಧನವನ್ನೂ ಸಾರ್ವಭೌಮಾಧಿಕಾರವು ವ್ಯಕ್ತಿಯ ಮೇಲೆ ಹೇರಲಾರದು. ಆದರದೇ ಸಮಾಜದ ಹಿತಾ–ಹಿತಗಳಾವುವವೆಂಬುದನ್ನು ನಿರ್ಧರಿಸಬಲ್ಲದು. 'ಸಾರ್ವಭೌಮ' ಎಂದರಿಲ್ಲಿ ಸಾಮೂಹಿಕವಾಗಿ ಕಾಯಿದೆ ಮಾಡಬಲ್ಲ ಸಮಾಜ ಅಥವಾ ಸಮುದಾಯವೆಂದರ್ಥ. ಸಾರ್ವಭೌಮದ ಸಂಕಲ್ಪವು ಯಾವಾಗಲೂ ನ್ಯಾಯವಾದುದು. ಏಕೆಂದರೆ ಅದು ಸಾರ್ವಜನಿಕ ಸಂಕಲ್ಪ ಶಕ್ತಿ. ವ್ಯಕ್ತಿಗಳದ್ದೆಲ್ಲವೂ ರಾಜ್ಯದ ಆಸ್ತಿ. ಪೂರ್ವಭಾವಿಯಾಗಿ ಮಾತಾಡಿಕೊಳ್ಳದೆ ವಿಷಯಜ್ಞಾನ ಚೆನ್ನಾಗಿ ಉಳ್ಳ ಜನರು ಚರ್ಚಿಸಿದರೆ ಯಾವಾಗಲೂ ಒಳ್ಳೆಯ ನಿರ್ಣಯವನ್ನೇ ಅವರು ತೆಗೆದುಕೊಳ್ಳಬಲ್ಲರು. ಸ್ವಾರ್ಥದಲ್ಲಿ ವ್ಯಷ್ಟ್ಯರ್ಥ ಮತ್ತು ಸಮಷ್ಟ್ಯರ್ಥಗಳೆರಡೂ ಅಡಕವಾಗುತ್ತವೆ. ಭಿನ್ನ ವ್ಯಷ್ಟ್ಯರ್ಥಗಳಲ್ಲಿ ಸಂಘರ್ಷ ಚೆನ್ನಾಗಿ ಆದರೆ ಅವು ನಿಷ್ಕ್ರಿಯವಾಗಿ ಹೋಗಿ ಸಮಷ್ಟ್ಯರ್ಥವು ಸಾರ್ವಜನಿಕ ಸಂಕಲ್ಪ ರೂಪದಲ್ಲಿ ಉಳಿಯುವುದು. ಒಂದು ರಾಜ್ಯದೊಳಗೆ ರಾಜ್ಯದಂಥ ಇತರ ಅಧೀನ

ಸಂಘಗಳಿರಬಾರದು; ಇದ್ದರೆ ಸಾರ್ವಜನಿಕ ಸಂಕಲ್ಪವು ಅನೇಕ ಮತ್ತು ಭಿನ್ನವಾಗಿ ಪರಸ್ಪರ ಸಂಘರ್ಷದಿಂದ ನಿಷ್ಕ್ರಿಯವಾಗುವುದು. ಆದುದರಿಂದ ಹೀಗೆ ವ್ಯಕ್ತಿಯ ಮತದಾನದ ಹಕ್ಕು ನಿಃಸಾರವಾಗಿ ಸಂಘಗಳ ಮತದಾರಿಕೆಯಷ್ಟೇ ಉಳಿಯುವುದು ತಪ್ಪಬೇಕಾದರೆ ಮೆಕಿಯವೆಲ್ಲಿ ಹೇಳಿದಂತೆ ಪಾಕ್ಷಿಕ ಸಮಾಜಗಳೆನ್ನಿಸಬಹುದಾದ ಪಾರ್ಟಿಗಳು ಒಂದು ರಾಜ್ಯದಲ್ಲಿರಬಾರದು – ಅಂಥ ಪಾರ್ಟಿ ರಾಜಕೀಯುವಾದದ್ದಾಗಿರಲಿ, ಆರ್ಥಿಕವಾದದ್ದಾಗಿರಲಿ, ಮತಧಾರ್ಮಿಕವಾದದ್ದಾಗಿರಲಿ ಅಥವಾ ಇನ್ನಾವ ಬಗೆಯದಾದರೂ ಆಗಿರಲಿ. ಒಮ್ಮೆ ಅಂಥ ಪಕ್ಷಗಳಿರುವುದಾದರೆ ಅವು ಅನೇಕವಾಗಿರುವುದುತ್ತಮ. ಸರಕಾರಿ ಅಧಿಕಾರಿಯಲ್ಲಿ ಸ್ವಾರ್ಥ, ಸರಕಾರಾರ್ಥ ಮತ್ತು ಸಾಮಾಜಿಕ ಅರ್ಥಗಳ ಬಗೆಗಿನ ೩ ಸಂಕಲ್ಪಗಳಿರುತ್ತವೆ. ಪ್ರಜಾಪ್ರಭುತ್ವ (ಆಯ್ದ ಕುಬೇರರ ಪ್ರಭುತ್ವ) ಜಯಪ್ರದವಾಗಬೇಕಾದರೆ (೧) ಹವೆ ಅತ್ಯುಷ್ಣ ಅಥವಾ ಅತಿಶೀತವಾಗಿರಬಾರದು, (೨) ರಾಜ್ಯದ ಅವಶ್ಯಕತೆಗಿಂತ ಬಹಳ ಹೆಚ್ಚಿನ ಉತ್ಪಾದನೆ ಇರಬಾರದು–ಇದ್ದರೆ ಅನೇಕರು ಐಷಾರಾಮಿಗಳಿದು ರಾಜ್ಯಘಾತಕರಾಗುವರು: ಆಗ ರಾಜ್ಯವು ರಾಜಪ್ರಭುತ್ವಕ್ಕಿಂತ ಬಹಳ ಕನಿಷ್ಠದಶೆಗಿಳಿಯುವುದು– ಅದರಲ್ಲಿ ಇದ್ದರೆ ಅವನೂ ಅವನ ಅರಮನೆಯ ಕಂಪನಿ ಅಷ್ಟೇ ಐಷಾರಾಮದಿಂದ ಸ್ವಪರ ಹಾನಿಗಿಳಿಯುವ ಸಂಭವವಿದೆ.

## ಇಮ್ಯಾನ್ಯುಯೆಲ್ ಕ್ಯಾಂಟ್ (೧೭೨೪–೧೮೦೪)

ಕ್ಯಾಂಟ್ ಹೇಳಿದ್ದು ವೈಮರ್ಶಿಕ ತತ್ವಜ್ಞಾನ, ವಿಮರ್ಶೆ, ಅತೀಂದ್ರಿಯ (ಅತಿಮಾನಸ) ತತ್ವವಾದ ಅಥವಾ ಅತೀಂದ್ರಿಯ ಧ್ಯೇಯವಾದ (Transcendental Idealism). ಅದರ ಪ್ರಕಾರ ಪ್ರತ್ಯಕ್ಷಾನುಭವವನ್ನು ಸಮನ್ವಯ ಮಾಡುವುದೇ ತರ್ಕದ ಕೆಲಸ. ಕಾರಣ–ಕಾರ್ಯಭಾವ ಮುಂತಾದ ಕೆಲವು ಕಲ್ಪನೆಗಳನ್ನು ಗೃಹೀತವೆಂದಿಟ್ಟುಕೊಳ್ಳುವುದು ಅದಕ್ಕೆ ಅಗತ್ಯ. ಕಾರ್ಯ–ಕಾರಣ ಸಂಬಂಧವು ವ್ಯಷ್ಟಿಪರಾಮರ್ಶೆಯ ಸ್ವಾರ್ಥಾನುಮಾನದಿಂದ ಲಭ್ಯವಾದ ಸಾಮಾನ್ಯತತ್ವಗಳಿಂದ ಸಿದ್ಧವಾಗುವಂಥದಲ್ಲ. ಅನುಭವವೊಂದು ಬಿಡಿಗಳಿಂದ ಸಮನ್ವಿತವಾದ ಇಡಿಯೆಂದು ಭಾವಿಸುವುದು ಅಗತ್ಯ; ಅದು ಅರ್ಥಪೂರ್ಣವೆಂದು ಗ್ರಹಿಸುವುದೂ ಆವಶ್ಯಕ. ಅಗತ್ಯವಾದ ಸಮನ್ವಯ ತತ್ವಗಳು ಸಂವೇದನಾನಿಷ್ಠವಾದ ಪ್ರತ್ಯಕ್ಷದಿಂದ ಪಡೆಯಲು ಸಾಧ್ಯವಾಗದಿದ್ದರೆ, ಆಗ ಅವು ಸಂಬಂಧಿಸಿದ ಪದಾರ್ಥಗಳ ಸೃಷ್ಟಿಗಿಂತ ಹಿಂದೆಯೇ ಇದ್ದವೆಂದು ತಿಳಿಯಬೇಕು. ಅವು 'ಅತೀಂದ್ರಿಯ, ಅತಿಮಾನಸ' ಎಂದು ಕರೆಯಲ್ಪಟ್ಟಿವೆ. ಅವುಗಳೇನೂ ಅನುಭವಾತೀತವಾದವುಗಳಲ್ಲ. ಸುಸಂಬದ್ಧವಾದ ಬಿಡಿಗಳಿಂದ ಕೂಡಿದ ಇಡಿ ಅನುಭವದ ಕಕ್ಷೆಯಲ್ಲೇ ಅವು ಬರುತ್ತವೆ. ಆಕರದಲ್ಲಿಯೂ ಸ್ಥಾನದಲ್ಲಿಯೂ ಅವು ಸಂವೇದನಾಜ್ಞಾನಗಳಿಗೆ ಮೀರಿದಂಥವು ಅಥವಾ ಭಿನ್ನ–ಅಷ್ಟೆ.

ಸಂವೇದ್ಯತೆಯ ಪ್ರಾತಿಭಜ್ಞಾನದ ಎರಡು ರೂಪಗಳೂ ಅತೀಂದ್ರಿಯ: ದೇಶ ಮತ್ತು ಕಾಲ ಸಂವೇದಿಸಿದ (ಪ್ರತ್ಯಕ್ಷವಾದ) ನಿಸರ್ಗಜ್ಞಾನವು ಯಾವಾಗಲೂ ದೇಶಕಾಲಾವಚ್ಛಿನ್ನ; ಅದು ಯಾವುದಾದರೂ ಒಂದು ಪದಾರ್ಥದ ಅನುಭವ. ಅಂಥ ಪ್ರತಿಯೊಂದು

ಜ್ಞಾನಕ್ಕೂ ಅವು ಅವಚ್ಛೇದಕಗಳಾಗಿರುವುದರಿಂದ ಅವೆಂದೂ ವಸ್ತುಮಾತ್ರಗಳ (Things-in-themselves) ಸಹಜಗುಣಗಳೆನ್ನಿಸಲಾರವು–ತಾರ್ಕಿಕ ವಿಚಾರದ ಔಪಚಾರಿಕ ಬೇಡಿಕೆಗಳಷ್ಟೇ ಆದಾವು. ದೇಶ–ಕಾಲಗಳು ವ್ಯಾವಹಾರಿಕ ಸತ್ಯಗಳು. ಏಕೆಂದರೆ, ಅವು ಸಾಕ್ಷಾತ್ತಾದ ಅನುಭವದಲ್ಲಿ ಬರುತ್ತವೆ. ಆದರೆ ಅವು ಅತೀಂದ್ರಿಯವಾದ ಧ್ಯೇಯಗಳು (Ideals)–ಅವುಗಳಿಗೆ ಪ್ರತ್ಯಕ್ಷ ದರ್ಶನದ ಮೇಲೆ ಮನಸ್ಸು ಹೇರುವ ಆಕಾರಗಳಿರುವುದರಿಂದ.

ಪದಾರ್ಥಗಳು (Categories) ತಿಳಿವಳಿಕೆಯ ಸಮನ್ವಿತ ಆಕೃತಿಗಳು, ಶುದ್ಧತತ್ವಗಳು. ಅವು ಹನ್ನೆರಡು.* ಪರಿಮಾಣ, ಗುಣ, ಸಂಬಂಧ ಮತ್ತು ರೀತಿಭಾವ (Modality) ಎಂಬ ನಾಲ್ಕರಲ್ಲಿ ಅವು ವರ್ಗೀಕರಿಸಲ್ಪಡುತ್ತವೆ. ಸಂವೇದ್ಯತೆಯ ಆಕೃತಿಗಳಲ್ಲಿ ಅಡಕವಾಗುವ ಸಂವೇದನಾ ದ್ರವ್ಯಗಳೇ (Sensuous materials) ಪ್ರತ್ಯಕ್ಷದ ಪ್ರತಿಮೆಗಳು. ವಿಚಾರಶಕ್ತಿಯು (Reason) ತಿಳಿವಳಿಕೆಯ ಮೂಲಕ (understanding) ಆ ಪ್ರತಿಮೆಗಳನ್ನು ತಕ್ಕ ಕಲ್ಪನೆ (Concepts) ಮತ್ತು ತತ್ವಗಳನ್ನು (Principles) ತಂದು ಅರ್ಥವತ್ತಾದ ನಿಸರ್ಗನಿರ್ಣಯ (Judgements of Nature) ಗಳನ್ನಾಗಿ ಸಮನ್ವಯಿಸುತ್ತದೆ. ಈ ರೂಪಕ್ಕೆ ತರದೆ ಹೋದರೆ ಮಾನವನಿಗೆ ನಿಸರ್ಗದ ಯಾವ ಜ್ಞಾನ ಅಥವಾ ಅನುಭವವೂ ಉಂಟಾಗದು. ಆದರೆ ದೇವರು, ಅಮರ ಆತ್ಮ ಮತ್ತು ಸಾರ್ವರೂಪದ ಪ್ರಪಂಚ ಎಂಬಂಥ ಅತಿಭೌತಶಾಸ್ತ್ರೀಯ ಪದಾರ್ಥಗಳನ್ನು ಲಕ್ಷಣಿಸಿ ಹೇಳಲು ಸಂವೇದ್ಯತೆಯ ಹಾಗೂ ತಿಳಿವಳಿಕೆಯ ಆಕೃತಿಗಳಾವುವೂ ಉಪಯುಕ್ತವಾಗುವುದಿಲ್ಲ. ಲೋಕಾನುಭವದ ಅವಶ್ಯ ಉಪಾಧಿಗಳಾಗಿರುವ (Necessary conditions) ಕಾರಣದಿಂದ ಉಕ್ತ ಆಕೃತಿಗಳು ಅನುಭವದಲ್ಲಿ ಸತ್ಯವಾಗಿ ತೋರಿದರೂ ಅವುಗಳನ್ನು ಅನುಭವಾತೀತವಾದ ಪದಾರ್ಥಗಳಿಗೆ ಅನ್ವಯಿಸಬಹುದೋ ಬಾರದೋ ಎಂಬುದನ್ನು ನಿರ್ಣಯಿಸಲು ಯಾವ ದಾರಿಯೂ ಇಲ್ಲ. ಹೀಗೆ ಅತಿಭೌತಶಾಸ್ತ್ರದ ನಿರ್ಣಯಗಳು ಪ್ರತ್ಯಕ್ಷನಿಷ್ಠ ತರ್ಕದಿಂದ ಸಮರ್ಥಿಸಲು ಬಾರದಂಥವುಗಳಾದರೂ ತೀರ ನಿರುಪಯುಕ್ತಗಳೆನ್ನಿಸುವುದಿಲ್ಲ. ಶುದ್ಧ ವಿಚಾರದ (Pure reason) ಕಲ್ಪನೆಗಳು ನಿಯಾಮಕತೆಯ ಶಕ್ತಿಯಿಂದ ಉಪಯುಕ್ತಗಳಾಗುತ್ತವೆ; ಅಂದರೆ ಅವು ತಾವು ಭಾಗಿಗಳಾಗಿರಲಾರದ ಸಾಮಾನ್ಯ ಪದಾರ್ಥಗಳನ್ನು ಸೂಚಿಸಬಲ್ಲವು. ಸೈದ್ಧಾಂತಿಕ ಜ್ಞಾನವು ಅನುಭವ ಕ್ಷೇತ್ರಕ್ಕೆ ಪರಿಸೀಮಿತವಾದದ್ದು; ಈ ಕ್ಷೇತ್ರದಲ್ಲಿ ನಾವು ವಸ್ತು ಮಾತ್ರಗಳ (ಕೇವಲ ಪದಾರ್ಥಗಳ) ಜ್ಞಾನವನ್ನು ಪಡೆಯಲಾರೆವು. ನಮಗೆ ತಿಳಿಯುವುದು ವಿಚಾರಶಕ್ತಿಯ ತರ್ಕಪೂರ್ವ (a priori), ಪ್ರಾತಿಭ ಆಕೃತಿಗಳ ಮೂಲಕ ವಸ್ತುಗಳು ತೋರುವ ರೀತಿಯಷ್ಟನ್ನೇ. ಅಂಥ ತೋರಿಕೆಗಳೇ ಘಟನೆಗಳು.

ಆದರೆ ವಿಚಾರಶಕ್ತಿಯು (ತರ್ಕಶಕ್ತಿಯು) ಕೇವಲ ಸೈದ್ಧಾಂತಿಕ ಪ್ರಯೋಜನಕ್ಕಷ್ಟೇ ಪರಿಸೀಮಿತವಾಗಿಲ್ಲ. ಪ್ರತ್ಯಕ್ಷಜ್ಞಾನ, ಆಲೋಚನೆಗಳ ವಸ್ತುಗಳಂತೆಯೇ (objects ವಿಷಯಗಳಂತೆಯೇ) ಇಚ್ಛಾಶಕ್ತಿ ಮತ್ತು ಭಾವನಾಂಶಗಳ (will and feeling) ವಿಷಯಗಳೂ

* (೧) ಏಕತ್ವ, ನಾನಾತ್ವ, ಸಾಕಲ್ಯ; (೨) ಸತ್ಯತೆ, ನಿಷೇಧ, ಪರಿಮಿತಿ;
(೩) ದ್ರವ್ಯ–ಆಕಸ್ಮಿಕಧರ್ಮ, ಕಾರಣ–ಕಾರ್ಯ, ಪಾರಸ್ಪರಿಕತೆ; (೪) ಸಾಧ್ಯತೆ, ಅಸ್ತಿತ್ವ, ಆವಶ್ಯಕತೆ.

ಇವೆ. ಸೈದ್ಧಾಂತಿಕ ಉಪಯುಕ್ತತೆಯಲ್ಲಿಯೂ ವಿಚಾರಶಕ್ತಿಯು ನಿಸರ್ಗಕ್ಕೆ ನಿಯಮಗಳನ್ನು ಹಾಕಿಕೊಡುವ ಕರ್ತ. ಅದರಿಂದ ಸಂವೇದನೆಗಳು ಸಂವೇದ್ಯತೆ ಮತ್ತು ತಿಳಿವಳಿಕೆಗಳ ಆಕೃತಿಗಳಿಗೆ ಹೊಂದುವಂತಾಗುತ್ತದೆ. ಇಲ್ಲವಾದರೆ, ನಿಸರ್ಗದ (ಸೃಷ್ಟಿಯ) ಅರ್ಥ ಯಾರಿಗೂ ಆಗದು. ಆದರೆ ನೈತಿಕ ಅನುಭವದ ಕ್ಷೇತ್ರದಲ್ಲಿ ವಿಚಾರವಂತನ ಇಚ್ಛಾಶಕ್ತಿಯು ಸ್ವಾಯತ್ತವಾಗಿರುತ್ತದೆ–ಅದಕ್ಕದೇ ನಿಯಮವಾಗಿರುತ್ತದೆ. ಆದರೆ ನಿರುಪಾಧಿಕವಾದ (unconditional) ನೀತಿ ನಿಯಮ ಅಥವಾ ಕರ್ತವ್ಯವು ಸಾಧ್ಯವಾಗುವುದು ಇಚ್ಛಾಶಕ್ತಿಯು ನಿಜವಾಗಿ ಸ್ವತಂತ್ರ ಎಂಬ ನಂಬಿಗೆಯಿಂದ ಮಾತ್ರ, ನಮ್ಮ ಘಟನಾ ಸಂತಾನ ಸ್ವರೂಪದ ದೆಸೆಯಿಂದ ನಾವು ನಿಸರ್ಗ–ವಿಚಾರಶಕ್ತಿಗಳೆರಡರ ನಿಯಮಗಳಿಗೂ ಬದ್ಧರು; ಆದರೆ ನಮ್ಮ ಶುದ್ಧ ವೈಚಾರಿಕ ಇಚ್ಛಾಶಕ್ತಿಗಳ ಸ್ವರೂಪದಲ್ಲಿ ನಾವು ಸ್ವತಂತ್ರವೂ ಜ್ಞಾನಮಯವೂ ಆದ (ಗ್ರಾಹ್ಯವಾದ ಅರ್ಥವುಳ್ಳ) ಕ್ಷೇತ್ರದಲ್ಲಿ ಸಂಚರಿಸುವೆವು. ಅದರಲ್ಲಿ ಮಾನವ ಕುಲವನ್ನು ಕೇವಲ ಸಾಧನವನ್ನಾಗಿ ಅಲ್ಲದೆ ಸಿದ್ಧಿಯನ್ನಾಗಿಯೂ ತಿಳಿದು ನಡೆದುಕೊಳ್ಳುವಂಥ ಸ್ವಯಮಾರೋಪಿತವಾದ ವಿಚಾರಯುಕ್ತ ನಿಯಮದಿಂದ ಮಾತ್ರ ನಾವು ಬದ್ಧರು.

ದೇವರ ಸತ್ಯತೆ ಮತ್ತು ಜೀವಾತ್ಮಗಳ ನಿತ್ಯತೆಗಳು ತರ್ಕ ಸಮರ್ಥನೆಗೆ ಮೀರಿದವುಗಳಾದರೂ ವ್ಯಾವಹಾರಿಕ ವಿಚಾರ–ವಿವೇಕಗಳಿಗೆ ಆಧಾರ ತತ್ವಗಳಾಗುತ್ತವೆ. ಸೌಜನ್ಯಕ್ಕೆ ಸುಖ ಮತ್ತು ದೌರ್ಜನ್ಯಕ್ಕೆ ದುಃಖ ಉಂಟಾಗುವಂತೆ ಜಗತ್ತನ್ನು ನೈತಿಕವಾಗಿ ನಡೆಯಿಸಿಕೊಂಡು ಹೋಗಲು ದೇವರು ಆಧಾರ. ಮಾನವನ ಐಹಿಕ ಜೀವನದಾಚೆಗೂ ನೈತಿಕವಾಗಿ ಪೂರ್ಣತೆಯನ್ನು ಪಡೆಯುವ ಪ್ರಯತ್ನವು ಮುಂದುವರಿಯಲು ಆತ್ಮದ ಅಮರತ್ವವು ಆಧಾರ. ಈ ಆಧಾರ ತತ್ವಗಳು, ನೈತಿಕ ಸ್ವಾತಂತ್ರ್ಯ ಮತ್ತು ಜನಪ್ರಿಯ ಹಕ್ಕುಗಳು–ಕ್ಯಾಂಟನು ವ್ಯಾವಹಾರಿಕ ವಿಚಾರ–ವಿವೇಕಗಳಿಗೆ ಪ್ರಥಮ ಪ್ರಾಶಸ್ತ್ಯವನ್ನು ಕೊಡಲು–ಬುನಾದಿಯಾಗಿವೆ.

ರಸಾಸ್ವಾದದ ಮತ್ತು ಸ್ವಾಭಾವಿಕ ಉದ್ದೇಶವಂತಿಕೆಗಳಲ್ಲಿ ಬುದ್ಧಿ–ಇಚ್ಛಾಶಕ್ತಿಗಳನ್ನು ಸಂಬಂಧಿಸುವಂತೆ ಮಾಡಲಾಗಿದೆ. ರಸಾಸ್ವಾದವು ಜ್ಞಾನಾಕೃತಿಗಳಲ್ಲಿ ಇಂದ್ರಿಯಗ್ರಾಹ್ಯ ವಸ್ತುವೊಂದು ಸಾಮಶ್ರುತ್ಯ (Harmony) ಹೊಂದುವುದರಿಂದ ಉಂಟಾಗುತ್ತದೆ. ಆಗ ನಿಸರ್ಗ–ಸ್ವಾತಂತ್ರ್ಯಗಳಲ್ಲಿ ಸಂಪೂರ್ಣ ಹೊಂದಿಕೆಯುಂಟಾದಂತಾಗುವುದು. ಪ್ರತಿಭೆಯಲ್ಲಿ ಅದಕ್ಕೆ ದೃಷ್ಟಾಂತ ದೊರಕುವುದು. ತದ್ವಿರುದ್ಧವಾಗಿ, ಸ್ವಾಭಾವಿಕ ಉದ್ದೇಶವಂತಿಕೆ ಎಂಬುದು ಯಾವಾಗಲೂ ನಿಸರ್ಗಕ್ಕೆ ವಿಶೇಷಣವಾಗಿರುತ್ತದೆ ಎಂಬ ನಿಯಮವಿಲ್ಲ; ಅದೊಂದು ತರ್ಕಪೂರ್ವದ ಸಂಶೋಧಕ ತತ್ವ, ಅಪ್ರತಿಹತವಾದ ಸಂಭಾವ್ಯ ಊಹೆ; ಅದರ ಮೂಲಕವೇ ನಾವು ನಿಸರ್ಗವನ್ನು ಅದರ ವೈಯಕ್ತಿಕ ಹೂರಣಗಳಿಗೆ (contents) ಅರ್ಥವನ್ನೂ ಪ್ರಾಧಾನ್ಯವನ್ನೂ ಕೊಡುವ ಅತ್ಯುನ್ನತ ಗುರಿ, ದಿವ್ಯಾಕೃತಿ ಎಂದು ಭಾವಿಸುವೆವು.

ಜಗತ್ತಿನಲ್ಲಿ ಸಂಯುಕ್ತವಾದ ರಾಷ್ಟ್ರಗಳ ಸಂಘವಿರಬೇಕು. ಪ್ರಜಾರಾಜ್ಯದ ಸ್ವರೂಪ ಅದಕ್ಕಿರಬೇಕು. ಪ್ರಜಾಪ್ರಭುತ್ವದ ಬಹುಸಂಖ್ಯರ ಪ್ರತಿನಿಧಿಗಳ ಆಳಿಕೆಯಲ್ಲಿ ನಿರಂಕುಶತೆ ಬರುವುದರಿಂದ ಅದರಲ್ಲಿ ಸರ್ವಪ್ರಜೆಗಳ ಇಚ್ಛೆಯೆಂಬುದು ತನ್ನಲ್ಲೇ ತಾನು ವ್ಯಾಹತಿಯ

ಆಘಾತಕ್ಕೆ ತುತ್ತಾಗಬೇಕಾಗುವುದು; ಸ್ವಾತಂತ್ರ್ಯದ ತತ್ವಕ್ಕೂ ಅದು ವಿರುದ್ಧವಾಗಿ ವರ್ತಿಸುವಂತಾಗುವುದು. ಆದುದರಿಂದ ರಾಜಪ್ರಭುತ್ವದಲ್ಲಿ ಪರಿಪೂರ್ಣ ಸರಕಾರದ ರಚನೆ ಸುಲಭ ಸಾಧ್ಯ.

## ಟಿಪ್ಪಣಿಗಳು

ಕ್ಯಾಂಟನ ಅತೀಂದ್ರಿಯತೆ ಅಥವಾ ಅತಿಮಾನಸಿಕತೆಯು ಪ್ರಮಾಣ ಶಾಸ್ತ್ರೀಯ (Epistemological). ಜ್ಞಾನಶಾಸ್ತ್ರೀಯ (The Theory of knowledge), ಅಂದರೆ ಜ್ಞಾನ ಕ್ರಿಯೆ ಕಂಡ ಒಂದು ಪದಾರ್ಥವು ವ್ಯಾವಹಾರಿಕವಾಗಿಯೂ ಇರಬಹುದು, ಹಾಗಿಲ್ಲದೆಯೂ ಇರಬಹುದು– ಎಂದರ್ಥ. ಭ್ರಾಂತಿ (Illusion) ಮತ್ತು ಮಾಯೆ (Hallucination)ಗಳೂ ತಾರ್ಕಿಕ ಆವಶ್ಯಕತೆಯಿಂದಾದ ಕಾಲ್ಪನಿಕ ಭಾವಗಳೂ ಹೊರಗಿನ ವ್ಯವಹಾರ ಜಗತ್ತಿನ ಆಚೆಗಿನವು ಎನ್ನಿಸಿಕೊಳ್ಳುತ್ತವೆ, ಅದರಿಂದ ಭಿನ್ನವಾಗಿರುತ್ತವೆ. ಗಣ್ಯವಾಗಿ ವ್ಯವಹಾರವು ವಸ್ತುಸತ್ಯನಿಷ್ಠ, ವಿಚಾರವು ಜ್ಞಾನಸತ್ಯನಿಷ್ಠ. ಈ ಸತ್ಯಗಳ ಪೂರ್ಣ ಸಾದೃಶ್ಯವು ವ್ಯವಹಾರದ ಪ್ರಾಮಾಣಿಕತೆಗೆ ಅಗತ್ಯ. ಜ್ಞಾನವೆಂದರೆ ಗೊತ್ತಾದ ವಸ್ತುಸಂಬಂಧಗಳು, ಭಾವಸಂಬಂಧಗಳು; ಬುದ್ಧಿಗತವಾದ ಸತ್ಯ; ಅಭಿಪ್ರಾಯಕ್ಕೆ ವಿರುದ್ಧವಾದುದು; ನಿಶ್ಚಿತ ಜ್ಞಾನವು ಅಭಿಪ್ರಾಯವನ್ನು ಮೀರಿದ್ದು–ಆದರೆ ಸತ್ಯಕ್ಕಿಂತ ಸ್ವಲ್ಪ ಕೆಳಮಟ್ಟದ್ದು; ವಿಧೇಯ–ಉದ್ದೇಶಗಳ ನಡುವಿನ (ಕರ್ಮ–ಕರ್ತೃಗಳ ಮಧ್ಯದ) ಸಂಬಂಧ. ಜ್ಞಾನ ಸತ್ಯಗಳ ಸ್ವಭಾವವನ್ನು ಅರಿಯಲು ಅಗತ್ಯವಾದ ಪ್ರಮಾಣಗಳ ಸ್ವರೂಪವನ್ನು ತಿಳಿಸುವುದು ಪ್ರಮಾಣಶಾಸ್ತ್ರ; ಜ್ಞಾನದ ಸತ್ಯತೆಯ ಲಕ್ಷಣಗಳನ್ನು ಗುರುತಿಸುವ ತತ್ವಗಳನ್ನು ಹೇಳುವ ಶಾಸ್ತ್ರವು ಜ್ಞಾನಶಾಸ್ತ್ರ– ಎರಡಕ್ಕೂ ಜ್ಞಾನಕ್ರಿಯೆಯು ಸಾಧಾರಣಧರ್ಮ; ಎರಡೂ ವಿವೇಚನೀಯ ಜ್ಞಾನಾಂತರ್ಗತವಾದುದರಿಂದ ಅಭಿನ್ನವೆಂದು ಗ್ರಹಿಸಲ್ಪಟ್ಟಿವೆ.

೧) ಜ್ಞಾನದ ಶಕ್ಯತೆ, ೨) ಜ್ಞಾನದ ಸೀಮಾರೇಖೆಗಳು, ೩) ಜ್ಞಾನದ ಆಕರ, ೪) ಜ್ಞಾನಾರ್ಜನೆಯ ಮಾರ್ಗಗಳು, ೫) ತರ್ಕಪೂರ್ವದ ಜ್ಞಾನ, ೬) ಮುಖ್ಯವಾದ ಜ್ಞಾನ ಜಾತಿಗಳನ್ನು ವಿಂಗಡಿಸುವುದು, ೭) ಜ್ಞಾನ–ಸನ್ನಿವೇಶದ ರಚನಾವಿಧಾನ; ೮) ಸತ್ಯದ ಸ್ವರೂಪ– ಎಂಬ ವಿಷಯಗಳ ಚರ್ಚೆ–ನಿರ್ಧಾರಗಳು ಪ್ರಮಾಣಶಾಸ್ತ್ರ (ಜ್ಞಾನಶಾಸ್ತ್ರ) ವೆಂಬುದರಲ್ಲಿ ಬರತಕ್ಕಂಥವು.

ಬಾಹ್ಯಪ್ರಪಂಚದ ಸತ್ಯವಾದ ಪೂರ್ಣಜ್ಞಾನವು ಮಾನವನಿಗೆ ಅಶಕ್ಯವೆಂಬವರಲ್ಲಿ (ಅ) Sensory Sceptics ಇಂದ್ರಿಯಗಳ ಸಾಪೇಕ್ಷತೆಯನ್ನಾಧರಿಸಿ ಅವು ಅನವಲಂಬನೀಯವೆಂಬವರು, (ಬ) Rational Sceptics ಬಹಳ ಸಲ ವ್ಯಾಹತಗ್ರಸ್ತವಾಗುವುದರಿಂದ ವಿಚಾರಶಕ್ತಿಯು ಅನವಲಂಬನೀಯವೆಂಬವರು– ಎಂಬ ಎರಡು ಬಗೆಯವರಿದ್ದಾರೆ; ಇಬ್ಬಗೆಯವರನ್ನೂ Solipsists or Ego-centricists ಅಹಂಮೂಲ ಜ್ಞಾನಾರಂಭವಾದಿಗಳು ಅಥವಾ ಅಹಂಕೇಂದ್ರ ಜ್ಞಾನವಾದಿಗಳು ಎಂದು ಹೇಳುವ ರೂಢಿಯಿದೆ. Subjectivist ವ್ಯಕ್ತಿ (ಸ್ವ, ಕರ್ತೃ) ನಿಷ್ಠಜ್ಞಾನವಾದಿಯು– ವ್ಯಕ್ತಿಯ

ಕ್ರಿಯಾತ್ರಯ ಸಹಿತವಾದ ಮನಸ್ಸಿಗಷ್ಟೇ ಪ್ರತ್ಯಕ್ಷಜ್ಞಾನವು ಪರಿಸೀಮಿತ; ಬಾಹ್ಯ ಪ್ರಪಂಚದ ಜ್ಞಾನವು ಅಂಥ ಮನಸ್ಸಿನ ವಿವಿಧ ವ್ಯಕ್ತಿನಿಷ್ಠ ಅವಸ್ಥೆಗಳಿಂದ ಅನುಮೇಯವಾದ ಪರೋಕ್ಷ ಜ್ಞಾನ–ಎನ್ನುತ್ತಾನೆ. ಈತನೂ ಮೇಲಿನವರ ಸಾಲಿಗೇ ಸೇರುತ್ತಾನೆ ಎಂಬುದು ವಸ್ತುನಿಷ್ಠ ಜ್ಞಾನವಾದಿಗಳ ಮತ. ನಮಗೆ ಪ್ರತ್ಯಕ್ಷವಾಗಿ ಗೊತ್ತಾಗುವ ಎಲ್ಲ ಸಂಗತಿಗಳೂ ನಮಗಧೀನವಾಗದ, ನಮ್ಮ ಗ್ರಹಣಾಗ್ರಹಣಗಳಿಂದ ಸ್ವತಂತ್ರವಾದ ಅಥವಾ ಅವುಗಳಿಗೆ ನಿರಪೇಕ್ಷವಾದ ವಸ್ತುಸತ್ಯತೆಯನ್ನು ಉಳ್ಳಂಥವುಗಳೆಂಬುದು Objectivism ವಸ್ತುನಿಷ್ಠಜ್ಞಾನವಾದ.

ಜ್ಞಾನದ ಗಡಿಮಿತಿಗಳನ್ನು ನಿರ್ಧರಿಸಲು ಅತಿರೇಕಕ್ಕೆ ಹುಟ್ಟಿದ ಅನವಲಂಬಿನೀಯತಾವಾದ (Agnosticism) ವನ್ನು ಬಿಡಬೇಕಾಗುತ್ತದೆ. ಹಾಗೆ ಬಿಟ್ಟ ಕ್ಯಾಂಟನು ಜ್ಞಾನವನ್ನು Noumenon ಶುದ್ಧಜ್ಞಾನ ಮತ್ತು Phenomenon ಬಾಹ್ಯ ಸಂಗತಿಗಳ ಜ್ಞಾನ ಎಂದು ಎರಡು ವಿಧವಾಗಿ ವರ್ಗೀಕರಿಸಿದ್ದಾನೆ. ಇತ್ತೀಚಿನ Positivists ಅನುಷೇಧವಾದಿಗಳೂ Radical Empiricists ಮೂಲಭೂತ ವ್ಯವಹಾರವಾದಿಗಳೂ– ಜ್ಞಾನವೆಂದರೆ "ಅರ್ಥ"ಪೂರ್ಣವೂ ಪರೀಕ್ಷಣೀಯವೂ ಆದದ್ದು ಜ್ಞೇಯ–ಎನ್ನುತ್ತಾರೆ. ಇಲ್ಲಿ ಪರೀಕ್ಷಣೀಯತೆಯು ವೈಜ್ಞಾನಿಕ ಪ್ರಯೋಗವನ್ನು ಮಾತ್ರ ಆಧರಿಸಿದ್ದು; ಭೌತಶಾಸ್ತ್ರ, ರಸಾಯನಶಾಸ್ತ್ರ ಮತ್ತು ಕೆಲಮಟ್ಟಿಗೆ ಜೀವಶಾಸ್ತ್ರ ಗಣಿತ ಹಾಗೂ ಖಗೋಲಶಾಸ್ತ್ರಗಳು ಮಾತ್ರ ಆಧಾರಭೂತ ವಿಜ್ಞಾನ ಶಾಸ್ತ್ರಗಳು–ಅಂದರೆ ಘನ, ದ್ರವ, ವಾಯು ಮತ್ತು ಶಕ್ತಿಗಳ ಅವಸ್ಥೆಯಲ್ಲಿರುವ ಬಾಹ್ಯ ನಿರ್ಜೀವ ವಸ್ತುಗಳಷ್ಟೇ ಆಧಾರ ಸತ್ಯವಾದಂಥವುಗಳು. ಮಿಕ್ಕವು ಅಸತ್ಯಗಳು ಅಥವಾ ಸತ್ಯಾಭಾಸಗಳು ಇಲ್ಲವೆ ಅಹಂಕೇಂದ್ರೀಯವಾದ ಅಲ್ಪಕಾಲಿಕವಾದ, ವ್ಯಕ್ತಿನಿಷ್ಠವಾದ ವಿಶಿಷ್ಟ (Particular) ಸತ್ಯಗಳು. ಘನಾದಿ "ದ್ರವ್ಯ"ಗಳ ಹಾಗೂ ಶಕ್ತಿರೂಪಗಳ ಅಳತೆಗಳೇ ಚರಮ ಸತ್ಯಗಳು ಎಂಬುದು ವೈಜ್ಞಾನಿಕ ವ್ಯವಹಾರವಾದ; ಬಾಹ್ಯ ಜಗತ್ತಿನ ನಮ್ಮ ಜ್ಞಾನದ ಸತ್ಯತೆಯ ಚರಮ ಸ್ವರೂಪವು ಅಮೂರ್ತ ಹಾಗೂ ಗಣಿತ ಸಂಕೇತಾತ್ಮಕ–ಎಂಬುದು ಅದರ ತಾತ್ಪರ್ಯ: ದ್ರವ್ಯಕ್ಕೆ ದ್ರವ್ಯತ್ವವೆಂಬುದಿಲ್ಲ– ಎಲ್ಲವೂ ಗುಣಪುಂಜ ಅಥವಾ ಘಟನೆಗಳು– ಎಂಬುದು ರಸೆಲ್ಲೀಯ ವೈಜ್ಞಾನಿಕ ತರ್ಕ.

ವಿಚಾರಶಕ್ತಿ (Reason) ನಿಜವಾದ ಜ್ಞಾನದ ಆಕರ ಎಂಬವರು ಡೆಸ್ಕಾರ್ಟಿಸ್, ಸ್ಪಿನೋಜ, ಲಿಬ್ನಿಜ್ಜರಂಥ ವಿಚಾರವಾದಿಗಳು. ಪ್ರತ್ಯಕ್ಷಾನುಭವವೊಂದೇ ಅದರ ಆಕರ ಎಂಬವರು ಲೋಕೇ, ಬರ್ಕ್ಲೆ ಮತ್ತು ಹ್ಯೂಮರಂಥ ವ್ಯವಹಾರವಾದಿಗಳು. ಸಂಕುಚಿತ ವ್ಯವಹಾರವಾದದ ಪ್ರಕಾರ ಇಂದ್ರಿಯ ಸಂವೇದನೆಗಳಷ್ಟೇ ಜ್ಞಾನಕ್ಕೆ ಆಕರ. ಪ್ರತ್ಯಕ್ಷಾನುಮಾನಗಳೆರಡಕ್ಕೂ ತಕ್ಕ ಸ್ಥಾನಗಳನ್ನು ಕೊಟ್ಟು ವ್ಯವಹಾರವಾದ (Empiricism) ಮತ್ತು ವಿಚಾರವಾದ (Rationalism)ಗಳನ್ನು ಸಮನ್ವಯಿಸಿದವನು ಕ್ಯಾಂಟ್.

Deductive and demonstrative procedures ಪರಾರ್ಥಾನುಮಾನ ಮತ್ತು ನೈದರ್ಶನಿಕ ಮಾರ್ಗಗಳನ್ನು ವಿಚಾರವಾದಿಗಳು ಜ್ಞಾನಸಾಧನಗಳೆಂದರೆ, ವಿಶಿಷ್ಟ ವೈಯಕ್ತಿಕ ದೃಷ್ಟಾಂತ ಸಂಗ್ರಹ (Induction) ಮತ್ತು ಸಂಭಾವ್ಯ ಊಹೆ (Hypothesis)ಗಳನ್ನು

ಜ್ಞಾನಸಾಧನಗಳೆಂದು ವ್ಯವಹಾರವಾದಿಗಳು ಸ್ವೀಕರಿಸಿದ್ದಾರೆ. ಕ್ಯಾಂಟ್ ಮತ್ತು ಹೆಗೆಲ್ಲರ ಅತೀಂದ್ರಿಯ ಮಾರ್ಗ ಮತ್ತು Dialectical method ತರ್ಕಸಮನ್ವಯ ಮಾರ್ಗಗಳು ನಿಸರ್ಗವಿಜ್ಞಾನಗಳ (ವ್ಯವಹಾರವಾದದ) ವೈಯಕ್ತಿಕ ದೃಷ್ಟಾಂತ ಸಂಗ್ರಹದ ಮಾರ್ಗಕ್ಕೆ ಹಾಗೂ ಗಣಿತಶಾಸ್ತ್ರದ ನೈದರ್ಶನಿಕ ಮಾರ್ಗಕ್ಕೆ ಇಳಿಸಲಾಗದಂಥವುಗಳು. ಕ್ಯಾಂಟ್ ಮತ್ತು ಹೆಗೆಲ್ಲರ ಮಾರ್ಗಗಳ ತರ್ಕಶುದ್ಧತೆ ಮತ್ತು ಉಕ್ತ ಮಾರ್ಗದ್ವಯಕ್ಕೆ ಇಳಿಸಲಾಗದಿರುವಿಕೆಗಳನ್ನು ಕೆಲವರು ಪ್ರಶ್ನಿಸಿದ್ದಾರೆ. Pragmatism ವ್ಯಾಪಾರ ಸತ್ಯತಾವಾದ, operationalism ಕ್ರಿಯಾನುಕ್ರಮವಾದ, Phenomenology ಘಟನಾವಿಜ್ಞಾನವಾದ ಮುಂತಾದವುಗಳ ಕೆಲ ಅಂಶಗಳಿಂದ ಪ್ರಮಾಣ ಶಾಸ್ತ್ರೀಯ ಮಾರ್ಗಗಳ ಬೆಲೆಯನ್ನು ಇತ್ತೀಚೆಗೆ ನಿರ್ಧರಿಸಲು ಪ್ರಾರಂಭಿಸಲಾಗಿದೆ.

ತರ್ಕಪೂರ್ವಜ್ಞಾನದ ಬಗ್ಗೆ ೩ ಸಿದ್ಧಾಂತಗಳಿವೆ: (೧) ತರ್ಕಶಾಸ್ತ್ರ, ಗಣಿತ ಶಾಸ್ತ್ರ, ನಿಸರ್ಗವಿಜ್ಞಾನಗಳು ಮತ್ತು ತತ್ವಜ್ಞಾನಗಳ ಮೂಲ ತತ್ವಗಳು ಸ್ವತಃ ಪ್ರಮಾಣವಾದಂಥವುಗಳೆಂಬುದೊಂದು; ಆ ತತ್ವಗಳ ಸ್ಪಷ್ಟತೆ ಮತ್ತು ಕಲ್ಪನಾಗತ ಪ್ರತ್ಯೇಕತೆಗಳು ಅವುಗಳ ಸ್ವತಃಸಿದ್ಧತೆಯ ಲಕ್ಷಣಗಳು–ಎಂಬುದು ವಿಚಾರವಾದೀಯ; (೨) ತರ್ಕಪೂರ್ವ ಸತ್ಯಗಳ ಪ್ರಯತ್ನನಿಷ್ಠ ನಿರಾಕರಣೆಯ ಅಥವಾ ಅವುಗಳು ಅನುಭವಕ್ಕೆ ಬರಬಹುದಾದ ಸಾಧ್ಯತೆಯ ಬಲದಿಂದ ಅವುಗಳನ್ನು ತರ್ಕಸಿದ್ಧವೆಂಬುದು ಲಿಬ್ನಿಜ್–ಕ್ಯಾಂಟರಂಥವರ ೨ನೆಯ ವಾದ; (೩) ಅವು ಔಪಚಾರಿಕ ಪರಾರ್ಥಾನುಮಾನ ರಚನೆಗಳಲ್ಲಿ ನಿರಂಕುಶವಾಗಿ ಕಲ್ಪಿಸಿಕೊಂಡ ನಿಯಮಗಳೆಂಬುದು ನಿಯಮ ಕಲ್ಪನಾವಾದ; ಗಣಿತಶಾಸ್ತ್ರೀಯ ನಿಯಮ ತಂತ್ರಗಳಿಂದ ಈ ವಾದವನ್ನು ಸಮರ್ಥಿಸಲಾಗಿದೆ.

(೧) ಪ್ರತ್ಯಕ್ಷ, ಸ್ಮೃತಿ ಮೊದಲಾದವುಗಳಿಂದ ಅನುಮಾನೇತರ ಕ್ರಮಗಳಿಂದ ಮಾಡಿಕೊಳ್ಳುವ ವಸ್ತುಜ್ಞಾನ; ಇದನ್ನು ಪರಿಚಯ ನಿಷ್ಠಜ್ಞಾನವೆಂದು ಗಣಿಸಲಾಗಿದೆ: (೨) ಅನುಮಾನ (Inference) ಬಲದಿಂದ ಅಪ್ರತ್ಯಕ್ಷವಾದ ವಸ್ತುಗಳ ಜ್ಞಾನವನ್ನು ಪಡೆದರೆ ಅದು ಆನುಮಾನಿಕ ಜ್ಞಾನವಾಗುತ್ತದೆ; ಇದನ್ನು ವರ್ಣನಾನಿಷ್ಠ ಜ್ಞಾನವೆಂದು ಎಣಿಸಲಾಗಿದೆ. ಪರಿಚಯವು ದ್ವಿವಿಧ: (೧) ಬಾಹ್ಯ ವಸ್ತುಗಳ ಪ್ರತ್ಯಕ್ಷೀಕರಣ ಮತ್ತು (೨) ಅಂತರ್ ನಿರೀಕ್ಷಣೆ (ಅಂತರ್ಮುಖವಾದ ಆತ್ಮಪರಿಶೀಲನೆ). ಅನುಮಾನದಿಂದ ಲಬ್ಧವಾದ ಅನುಮಿತಿ ಎಂಬ ಜ್ಞಾನದಲ್ಲಿ ಇತರ ಜೀವಾತ್ಮಗಳ ಜ್ಞಾನ ಹಾಗೂ ಐತಿಹಾಸಿಕ ಜ್ಞಾನಗಳು ಅಡಕವಾಗುತ್ತವೆ. ಕೆಲವೊಮ್ಮೆ ಇತರ ಜೀವಾತ್ಮಗಳ ಜ್ಞಾನವು ಪ್ರತ್ಯಕ್ಷದಿಂದಲೂ ಲಭಿಸಬಹುದು. ಸಂಕುಚಿತಾರ್ಥದ ಚಾರಿತ್ರಿಕ, ಖಗೋಲಶಾಸ್ತ್ರೀಯ, ಜೀವಶಾಸ್ತ್ರೀಯ, ಮಾನವಶಾಸ್ತ್ರೀಯ, ಭೂಗರ್ಭಶಾಸ್ತ್ರೀಯ ಮತ್ತು ಸೃಷ್ಟಿಶಾಸ್ತ್ರೀಯ ಜ್ಞಾನಗಳೂ ವಿಶಾಲಾರ್ಥದ ಐತಿಹಾಸಿಕ ಜ್ಞಾನದಲ್ಲಿ ಸೇರುತ್ತವೆ. ಭೂತಕಾಲೀನ ಅನುಭವದ ಪುನಾರಚನೆ ಎನ್ನಿಸುವ ಐತಿಹಾಸಿಕ ಜ್ಞಾನದಲ್ಲಿ ವಿಜ್ಞಾನದ ಅನುಮಾನಲಬ್ಧ ಮತ್ತು ನಿರೀಕ್ಷಣಾ(Observation) ಲಬ್ಧ ಜ್ಞಾನಗಳನ್ನೂ ಸೇರಿಸುವುದುಂಟು.

ಜ್ಞಾನ ಸನ್ನಿವೇಶದ ರಚನೆಯ ವಿಷಯದಲ್ಲಿ ಎರಡು ವಾದಗಳಿವೆ: (೧) ಜ್ಞಾನಕ್ಕೆ

ವಿಷಯ (ವಸ್ತು)ವಾದುದರ ಚಿತ್ರವನ್ನು ಜ್ಞಾತೃವಿನಲ್ಲಿ ದೂರದರ್ಶನ ಯಂತ್ರದಂತೆ ಮುದ್ರಿಸುತ್ತದೆ ಎಂಬುದು ವ್ಯಕ್ತಿನಿಷ್ಠವಾದ; (೨) ಪ್ರತ್ಯಕ್ಷ–ಪರೋಕ್ಷಗಳಿಂದ ಗೊತ್ತಾದ ಗುಣಗಳೆಲ್ಲವೂ ವಸ್ತುನಿಷ್ಠವೆನ್ನುವುದು ಸಾರ್ವವಸ್ತುನಿಷ್ಠವಾದ. ಈ ವಾದಗಳ ಅತಿರೇಕ ಸ್ವರೂಪಗಳಲ್ಲಿ ರಾಜಿ ಮಾಡಿಸ ಹೋದ ಪ್ರಾತಿನಿಧಿಕ ಪ್ರತ್ಯಕ್ಷ ಸಿದ್ಧಾಂತವು ವಸ್ತುಗಳ ಪ್ರಾಥಮಿಕ ಗುಣಗಳನ್ನು ವಸ್ತುನಿಷ್ಠವೆಂದೂ ಗೌಣ ಗುಣಗಳನ್ನು ವ್ಯಕ್ತಿನಿಷ್ಠವೆಂದೂ ಹೇಳುತ್ತದೆ. ಸಂವೇದನಾ ಜ್ಞಾನ ಮತ್ತು ವಸ್ತುಗಳು ಒಂದೇ ಎಂಬುದು ಪ್ರಮಾಣಶಾಸ್ತ್ರೀಯ ಅದ್ವೈತವಾದ; ಅವು ಸಂಖ್ಯಾತ್ಮಕವಾಗಿ ಪ್ರತ್ಯೇಕ ಎಂಬುದು ಪ್ರಮಾಣಶಾಸ್ತ್ರೀಯ ದ್ವೈತವಾದ; ಜ್ಞಾತೃ ನಿರಪೇಕ್ಷವಾಗಿ ವಸ್ತುವಿರುತ್ತದೆ ಎಂಬುದು ಪ್ರಮಾಣಶಾಸ್ತ್ರೀಯ ಧ್ಯೇಯವಾದ; ಜ್ಞೇಯವಸ್ತುವು ಜ್ಞಾತೃವಿಗೆ ಅಧೀನ ಎಂಬುದು ಪ್ರಮಾಣಶಾಸ್ತ್ರೀಯ ವಾಸ್ತವತಾವಾದ.

ಸತ್ಯದ ನಿಕಷ ಸೂತ್ರಗಳು ಮೂರು: (೧) ಸಾದೃಶ್ಯ ಸಿದ್ಧಾಂತ: ವಸ್ತುವಿಗೂ ಅದರ ಭಾವಕ್ಕೂ (ಕಲ್ಪನೆಗೂ) ನಡುವೆ ಒಂದಕ್ಕೊಂದು ಎಂಬಂಥ ಸಾಧಾರಣವಾದ ಚೈತ್ರಿಕ ಅಥವಾ ಅನುಪಾತಿಕ ಸಂಬಂಧ (ಬಿಂಬ–ಪ್ರತಿಬಿಂಬಭಾವ)ವಿರುವುದು ಭಾವವಾಚಕ ಪ್ರಮೇಯ ವಾಕ್ಯದ ಸತ್ಯತೆಗೆ ನಿಕಷ. (೨) ಸಾಂಗತ್ಯ ಸಿದ್ಧಾಂತ: ಒಂದು ಪ್ರಮೇಯ ವಾಕ್ಯದ ತಾರ್ಕಿಕ ಸಾಂಗತ್ಯವು ಇನ್ನೊಂದು ವಿಶಾಲತರವಾದ ಪ್ರಮೇಯ ವಾಕ್ಯಮಾಲೆಯೊಡನೆ ಇರುವುದು ಅದರ ಸತ್ಯತೆಗೆ ನಿಕಷ: ಸತ್ಯವು ಒಂದು ವ್ಯಾಪಕವಾದ ಸಂಗತ ಪ್ರಮೇಯವಾಕ್ಯಗಳ ಅವಿಭಾಜ್ಯಗುಣ ಮತ್ತು ಅವುಗಳ ಇಡಿಗೆ ಸೇರಿದಂತಿರುವ ಪ್ರತಿಯೊಂದು ಬಿಡಿ ವಾಕ್ಯಕ್ಕೂ ಅದೇ ಅವಿಭಾಜ್ಯ ಗುಣ (Property): ಬಿಡಿಗಳಿಂದ ಕೂಡಿದ ಇಡಿಯ ಕ್ರಮಬದ್ಧವಾದ ಸಾಂಗತ್ಯದ (Coherence) ಪರಿಪೂರ್ಣತೆಗೆ ತಕ್ಕ ಅನುಪಾತದಲ್ಲಿ ಅದಕ್ಕೆ ಸೇರಿದ ಬಿಡಿಯ (ಬಿಡಿವಾಕ್ಯದ) ಸತ್ಯದ ಡಿಗ್ರಿ (ಅಂಶ) ಇರುತ್ತದೆ. (೩) ಅಂತರ್ಗತ ಮೌಲ್ಯ ಸಿದ್ಧಾಂತ: ಬಿಡಿಗಳಿಗೂ ಇಡಿಗೂ ಅಂತರ್ಗತವಾದ ಸಂಬಂಧವಿರುವುದು ಒಂದು ಪ್ರಮೇಯ ವಾಕ್ಯದಲ್ಲಿ ಕಂಡು ಬಂದರೆ ಸತ್ಯವು ಅದರ ಅಂತರ್ಗತ ಅವಿಭಾಜ್ಯ ಗುಣವೆನ್ನಿಸುವುದು; ಆಯಾ ಪ್ರಮೇಯ ವಾಕ್ಯದ ಸತ್ಯತೆ ಅದದಕ್ಕೇ ಸಲ್ಲುತ್ತದೆ: ವಾಚ್ಯ–ವಾಚಕಗಳ ಅಂತರ್ಗತ ಮೌಲ್ಯ ಒಂದೇ ಆಗಿರಬೇಕು ಮತ್ತು ಆ ಪ್ರಮೇಯ ವಾಕ್ಯದ ಪ್ರಯೋಗಸಿದ್ಧ ವ್ಯಾಪಾರ ಕ್ಷಮತೆ ಅಥವಾ ತೃಪ್ತಿಕರತ್ವ ತನ್ನಿಷ್ಠವಾಗಿರಬೇಕು– ಎಂಬ ವ್ಯಾಪಾರವಾದೀಯ ಸತ್ಯಸಿದ್ಧಾಂತವೂ ಇಲ್ಲಿ ಗೃಹೀತ: ಅರ್ಥ ಕ್ರಿಯಾಕಾರಿತ್ವವು ಇದರ ಸಾರ.

## ಜಾರ್ಜ ವಿಲ್ ಹೆಲ್ಮ್ ಫ್ರೆಡ್ರಿಕ್ ಹೆಗೆಲ್ (೧೭೭೦–೧೮೩೧)

ಹೆಗೆಲ್ಲನ್ನದು ತ್ರಿಪಾದ ಪದ್ಧತಿಯ ತರ್ಕಸಮನ್ವಯ ಸಿದ್ಧಾಂತ; ಅದರಲ್ಲಿ ಅನ್ವಯ, ಪ್ರತ್ಯನ್ವಯ ಮತ್ತು ಸಮನ್ವಯಗಳು ತ್ರಿಪಾದಗಳು. ಈ ಸಿದ್ಧಾಂತವನ್ನು Absolute Idealism ಪೂರ್ಣ ಧ್ಯೇಯವಾದ ಎಂದೂ ಕರೆಯಲಾಗುತ್ತದೆ. ಪರಮಾತ್ಮ ಅಥವಾ ಪರಮ ಕಲ್ಪನೆ ಎಂಬುದೇ ಈ ಸಿದ್ಧಾಂತದಲ್ಲಿ ಪರಾಕಾಷ್ಠೆ.

ಬಿಡಿಯಾದ ಪ್ರಮಿತ ಪದಾರ್ಥಗಳ ಪ್ರತ್ಯೇಕತೆಯೊಂದು "ಭ್ರಮೆ". ಇಡಿಯಾದ ಒಂದೇ ಒಂದು ಪೂರ್ಣಸತ್ಯ. ಆದರದು ಸರಳವಾದ ಒಂದು ದ್ರವ್ಯವಲ್ಲ; ಆವಯವಿಕ ಸ್ವರೂಪದ ಒಂದು ಜಟಿಲ ಜಾಲ. ಪ್ರಪಂಚದ ಬಿಡಿಗಳು ಸಂಪೂರ್ಣವಾಗಿ ಭ್ರಮಾತ್ಮಕ ಪದಾರ್ಥಗಳಲ್ಲ; ಅವೆಲ್ಲವೂ ಸತ್ಯದ ವಿವಿಧ ಡಿಗ್ರಿ (ಅಂಶ)ಗಳನ್ನುಳ್ಳಂಥವು. ನಿಜದೃಷ್ಟಿಯಿಂದ ನೋಡಿದಾಗ ಅವುಗಳ ಇಡಿತನದ ಏಕಮೇವಾದ್ವಿತೀಯ ಮುಖ ಗೋಚರವಾಗುವುದು. ದೇಶ–ಕಾಲಗಳು ಆತ್ಯಂತಿಕ ಸತ್ಯಗಳಲ್ಲ; ಅವು ಹಾಗಿದ್ದರೆ ಪದಾರ್ಥಗಳ ಪ್ರತ್ಯೇಕತೆಯೂ ನಾನಾತ್ವವೂ ನಿತ್ಯವಾಗಬೇಕಾಗುತ್ತದೆ.

ಸತ್ಯವು ವಿಚಾರ ಬದ್ಧ, ವಿಚಾರಬದ್ಧವಾದುದು ಸತ್ಯ. ವ್ಯಾವಹಾರಿಕನು ಕಾಣುವ ಸತ್ಯವು ವಿಚಾರ ಬದ್ಧವಲ್ಲ. ವ್ಯಾವಹಾರಿಕ ಪದಾರ್ಥಗಳ ನಾನಾತ್ವವು ಆಭಾಸಿಕ. ಇಡಿಯ ಬಿಡಿಮುಖಗಳೆಂದು ತೋರಿದಾಗ ಮಾತ್ರ ಪದಾರ್ಥಗಳಲ್ಲಿ ಸತ್ಯತೆಗೆಡೆಯಿದೆ. ವಿಚಾರಬದ್ಧವೆನ್ನಿಸಿದ ಪರಮಸತ್ಯವು ಇದ್ದದ್ದೆಲ್ಲವೂ ನ್ಯಾಯ್ಯವೆಂಬ ಸಮಾಧಾನ ಬುದ್ಧಿಗೆ ಎಡೆಗೊಡುವುದು–ಎನ್ನುತ್ತಾನೆ ರಸೆಲ್. ಆದರೆ ಸತ್ಯ–ನ್ಯಾಯಗಳು ಅವಿನಾಭಾವಿ ಪರ್ಯಾಯಗಳಾದಾಗ, ಪದಾರ್ಥ, ಸಂಗತ, ಸಂನ್ನಿವೇಶಗಳಲ್ಲಿ ಸತ್ಯವು ಭಿನ್ನಾಂಶಗಳಲ್ಲಿರುವುದನ್ನೊಪ್ಪಿಕೊಂಡಾಗ–ಅವುಗಳಲ್ಲಿರುವ ನ್ಯಾಯವೂ ಭಿನ್ನ ಪ್ರಮಾಣಗಳಲ್ಲಿರುವುದೆಂಬುದು ಸರಿಯಾದ ನಿಗಮನವಾಗುತ್ತದೆ. ಪರಮ ಸತ್ಯವು ಪರಿಪೂರ್ಣವಾದುದು. ಅದು ಆಧ್ಯಾತ್ಮಿಕ; ಆದರದಕ್ಕೆ ಸ್ಪಿನೋಜ ಹೇಳಿದ ವ್ಯಾಪಕತ್ವ ಮತ್ತು ವಿಚಾರ (ಆಲೋಚನಾ) ಶಕ್ತಿ ಎಂಬ ಧರ್ಮಗಳಿಲ್ಲ–ಎಂಬುದು ಹೆಗೆಲ್ ಮತ. ಹೆಗೆಲ್ಲನ ಪ್ರಕಾರ ಸ್ವಯಂವ್ಯಾಹತವಾಗಿರದುದು ಸತ್ಯ. ತರ್ಕಶಾಸ್ತ್ರ, ಅತಿಭೌತಶಾಸ್ತ್ರಗಳಲ್ಲಿ ಅವನಿಗೆ ಭೇದವಿಲ್ಲ. ಯಾವ ಸಾಮಾನ್ಯ ವಿಧೇಯವು (Predicate) ಇಡಿ (ಪೂರ್ಣ) ಸತ್ಯದ ಧರ್ಮವಾಗದು; ಏಕೆಂದರೆ, ಅದು ಆಗ ಸ್ವಯಂ ವ್ಯಾಹತವಾಗುವುದು: ಹಾಗಾಗಲು ಅದರ ಪರಿಮಿತತ್ವವೇ ಕಾರಣ. ಹೆಗೆಲ್ಲನ ತ್ರಿಪಾದ ಪದ್ಧತಿಯ ತರ್ಕಕ್ಕೆ ಉದಾಹರಣೆ:

ಪೂರ್ಣ ಸತ್ಯವು ಶುದ್ಧವಾದ ಇರವು–ಅನ್ವಯ (Thesis)

(The Absolute is a Pure Being)

ಆದರೆ ನಿರ್ಗುಣವಾದ ಶುದ್ಧ ಇರವೆಂಬುದು ಶೂನ್ಯ.

ಆದುದರಿಂದ–

ಪೂರ್ಣ ಸತ್ಯವೆಂಬುದು ಶೂನ್ಯ–ಪ್ರತ್ಯನ್ವಯ (Antithesis)

ಇರುವ ಬರಿದುಗಳ ಐಕ್ಯವೇ ಆಗುವಿಕೆ–ಸಮನ್ವಯ (Synthesis)

ಆದುದರಿಂದ–

ಪೂರ್ಣ ಸತ್ಯವೆಂದರೆ ಆಗುವಿಕೆ.

[ಆಗುವಿಕೆಗೊಂದು ಕರ್ತೃ ಬೇಕು; ಅದು ಪೂರ್ಣವಾಗಿರಬೇಕು;

ಅದೇ ಪೂರ್ಣಸತ್ಯ (ಪರಮಾತ್ಮ, ಪರಮಕಲ್ಪನೆ)]

ಇಡಿ ಜ್ಞಾನಕ್ರಿಯೆಯು ತ್ರಿಪಾದಚಾರಿ. ಇಂದ್ರಿಯ ಸಂವೇದನೆಯಿಂದ ಅದು ಆರಂಭವಾಗುತ್ತದೆ. ವಿಶ್ವಾಸವಿಡದ ಪ್ರಾಶ್ನಿಕನ ತರ್ಕವನ್ನು ಅದರೆದುರೊಡ್ಡಿದಾಗ ಸಂವೇದನೆಗೆ (ಪ್ರತ್ಯಕ್ಷಕ್ಕೆ) ಜ್ಞಾನಪ್ರಾಮಾಣ್ಯ ಹೊರಟು ಹೋಗಿ ಜ್ಞಾನದ ಸ್ವರೂಪವು ವ್ಯಕ್ತಿನಿಷ್ಠವೆಂದೆನ್ನಿಸಬೇಕಾಗುತ್ತದೆ. ಮುಂದಿನ ತರ್ಕಪರಿಷ್ಕಾರದಿಂದ ಅದು ಸ್ವಜ್ಞಾನ (ಆತ್ಮಜ್ಞಾನ Self-Consciousness) ಮಾತ್ರ ಜ್ಞಾನ ಎಂಬ ಮಟ್ಟಕ್ಕೆ ಬರುತ್ತದೆ. ಸ್ವಜ್ಞಾನದಲ್ಲಿ ಜ್ಞಾತೃ–ಜ್ಞೇಯಗಳ ಭೇದ ಅಳಿದು ಹೋಗುತ್ತದೆ. ತಿಳಿದುಕೊಳ್ಳುವುದರಲ್ಲಿ ಪರಿಮಿತ ಶಕ್ತಿಯುಳ್ಳ ಮಾನವನ ಆತ್ಮಜ್ಞಾನವು ಪರಿಮಿತ; ಅಪರಿಮಿತ ಶಕ್ತಿಯುಳ್ಳ ಪೂರ್ಣಸತ್ಯದ ಸ್ವಜ್ಞಾನವು ಅಪರಿಮಿತ ಅಥವಾ ಪೂರ್ಣ. ಸತ್ಯ, ಸುಳ್ಳುಗಳು ಸಂಪೂರ್ಣ ವಿರುದ್ಧವಾದವುಗಳಲ್ಲ. ನಮ್ಮ ಯಾವ ಜ್ಞೇಯವೂ ಪೂರ್ಣ ಸುಳ್ಳೂ ಅಲ್ಲ, ಪೂರ್ಣ ಸತ್ಯವೂ ಅಲ್ಲ. ನಾವು ಜಗತ್ತನ್ನು ತಿಳಿದುಕೊಳ್ಳುವ ರೀತಿಯು ತಪ್ಪಾಗಲು ಯಾವುದಾದರೊಂದು ತಿಳಿವಳಿಕೆಯ ತುಣುಕಿಗೆ ಪೂರ್ಣ ಸತ್ಯತೆ ಇದೆಯೆಂದು ನಂಬುವುದು ಕಾರಣ. ಯಾವ ಬಿಡಿಯೂ ಪೂರ್ಣ ಸತ್ಯವಲ್ಲ. ತತ್ವಜ್ಞಾನದ ಪ್ರಕಾರ ಇಡಿಯೊಂದೇ ಪೂರ್ಣ ಸತ್ಯ. ವಿಚಾರವಂತಿಕೆಯ ಡಿಗ್ರಿ ಹೆಚ್ಚಾದ ಹಾಗೆ ಪ್ರತಿಯೊಬ್ಬನೂ ಪರಮಸತ್ಯದಲ್ಲಿ ಹೆಚ್ಚು ಹೆಚ್ಚು ಭಾಗವಹಿಸುತ್ತ ಹೋಗುವುದರಿಂದ ಪೂರ್ಣತರನಾಗುತ್ತ ಹೋಗುವನು.

ಇಡಿ ಆಲೋಚನೆಯು ತನ್ನನ್ನೇ ಕುರಿತು ಆಲೋಚಿಸುತ್ತಿರುವುದು ಪೂರ್ಣಸತ್ಯದ ಸ್ವರೂಪ. ಪೂರ್ಣಸತ್ಯವು ತನ್ನನ್ನಲ್ಲದೆ ಇನ್ನೊಂದನ್ನೆಂದೂ ಆಲೋಚಿಸಲಾರದು. ಏಕೆಂದರೆ ಅದು ಏಕಮೇವಾದ್ವಿತೀಯ. ಅದರಲ್ಲಿ ವ್ಯಕ್ತಿನಿಷ್ಠತೆ, ವಸ್ತುನಿಷ್ಠತೆಗಳ ಐಕ್ಯವಿದೆ. ಆ ಐಕ್ಯವು ಎಲ್ಲ ಗುಣಗಳನ್ನೂ (ಧರ್ಮಗಳನ್ನೂ, ಲಕ್ಷಣಗಳನ್ನೂ, ಉಪಾಧಿಗಳನ್ನೂ) ಒಳಗೊಂಡಿರುತ್ತದೆ. ಪೂರ್ಣಸತ್ಯವು ಕಾಲಾತೀತ. ಕಾಲವೊಂದು ಭ್ರಮೆ, ಮಾಯೆ. ಇಡಿಯನ್ನು ತಿಳಿಯಲಾರದ ನಮ್ಮ ದೌರ್ಬಲ್ಯದಿಂದ ಅದು ಹುಟ್ಟುತ್ತದೆ. ಆದರೂ ತರ್ಕಸಮನ್ವಯದ ಶುದ್ಧತಾರ್ಕಿಕ ಕ್ರಿಯಾನುಕ್ರಮಕ್ಕೂ ಕಾಲದ ಕ್ರಿಯಾನುಕ್ರಮಕ್ಕೂ ನಿಕಟವಾದ ಸಂಬಂಧವಿದೆ. ವಿಚಾರಶಕ್ತಿಯು ಜಗತ್ತಿನ ಸಾರ. ಅದೇ ಪೂರ್ಣ ಕಲ್ಪನೆ; ಅದು ನಿತ್ಯ, ಸತ್ಯ, ಸರ್ವಶಕ್ತ. ಅದೇ ಆತ್ಮ, ಸರ್ವಸ್ವ. ಇರವು ಪರಮ ಸತ್ಯ, ಅದರ ಆಗುವಿಕೆಯೇ ಜಗತ್ತು. ಇರವು ಶುದ್ಧ, ಅದರ ಅಶುದ್ಧ ರೂಪವೇ ಜಗತ್ತು; ಅದು ಅನಂತ, ಇದು ಸಾಂತ (Infinite, finite). ಅದರ ಕೇವಲಾಸ್ತಿತ್ವ ಮತ್ತು ಇದರ ನಿತ್ಯಪರಿಣಾಮತ್ವಗಳು ಧ್ರುವಾಂತರ ವಿರುದ್ಧ ಸಂಬಂಧ ಉಳ್ಳಂಥವು. ಅದರದು ಆತ್ಮಸ್ವರೂಪ, ಇದರದು ಜಡಪ್ರಕೃತಿ (Matter) ಸ್ವರೂಪ. ಮುಕ್ತತೆಯು ಆತ್ಮದ ಸಾರ, ಗುರುತ್ವವು ಪ್ರಕೃತಿಸಾರ. ಜಡಪ್ರಕೃತಿ ತನ್ನ ಹೊರಗಿದೆ, ಆತ್ಮದ (ಚೈತನ್ಯದ) ಕೇಂದ್ರ ಅದರಲ್ಲೇ ಇದೆ– ಆತ್ಮದ ಅನುಭವವು ಆತ್ಮಗತ–ಆತ್ಮವು ಶುದ್ಧ ಏಕತ್ವ (Identity); ಆ ಏಕತ್ವವು ಅಭೇದ್ಯ, ಅನಂತ ಮತ್ತು ಏಕಜಾತೀಯ. ಮೌಲ್ಯವಿರುವುದು ಇಡಿಯಲ್ಲಿ, ಬಿಡಿಯಲ್ಲಲ್ಲ.

## ಜೆರಿಮಿ ಬೆಂಥ್ಯಾಂ (೧೭೪೮–೧೮೩೨)

ತತ್ವಜ್ಞಾನದಲ್ಲಿ ಆಂಗ್ಲ ಪ್ರಯೋಜನ ಪ್ರಸ್ಥಾನವೆಂದಿದೆ. ಅದರ ಸಂಸ್ಥಾಪಕ ಜೆರಿಮಿ ಬೆಂಥ್ಯಾಂ. ಅವನ ಪ್ರಕಾರ ಅತ್ಯಧಿಕ ಸಂಖ್ಯಾತರ ಅತ್ಯಧಿಕ ಸುಖವು ವೈಯಕ್ತಿಕ ಮಾನವರ ಮತ್ತು ಮಾನವ ಸಮಾಜದ ಅತ್ಯುನ್ನತ ನೈತಿಕ ಧ್ಯೇಯ. ಮಾನವರ ಕಾರ್ಯಗಳ ನೈತಿಕತೆಗೆ ಪ್ರಯೋಜನವು ಪ್ರಾಯೋಗಿಕವಾಗಿ ಮೌಲ್ಯ ನಿರ್ಧಾರ ಮಾಡಬಲ್ಲ ನಿಕಷ. ಒಂದು ಕಾರ್ಯದ ಸುಖೋತ್ಪಾದಕ ಶಕ್ತಿಯೇ ಪ್ರಯೋಜನ. ಬೆಂಥ್ಯಾಮನ ಸಂಯೋಗ (Association) ತತ್ವವು ಪಾವ್‌ಲೋವನ ಆಧುನಿಕ "ಉಪಾಹಿತ ಕ್ಷೇಪ" (Conditioned Reflex) ಸಿದ್ಧಾಂತಕ್ಕೆ ಸರಿಸಮವಾದುದು.

ಸಾಮಾನ್ಯಸುಖವೇ ಸರ್ವೋಚ್ಚ ಹಿತ. ಭಾವನಾತ್ಮಕ ಮತ್ತು ತಾಪಸ ನೀತಿನಡತೆಗಳು ಆಳುವವರ ಹಿತಾರ್ಥಗಳನ್ನು ಕಾಯುವುವು. ತ್ಯಾಗ ಬೋಧಕರು ತಮಗಾಗಿ ಮಂದಿ ತ್ಯಾಗ ಮಾಡಬೇಕೆಂಬ ಆಶೆಯನ್ನು ಒಳಗಿಟ್ಟುಕೊಂಡಿರುತ್ತಾರೆ. ಹಿತಾರ್ಥಗಳ ಸಮತೋಲದಿಂದಲೇ ನೈತಿಕ ಕ್ರಮಬದ್ಧತೆಯುಂಟಾಗುವುದು. ಪ್ರಶಾಸಕರು ತಮ್ಮ ಹಾಗೂ ಪ್ರಶಾಸ್ಯರ ಹಿತಾರ್ಥಗಳು ಒಂದೇ ಆಗಿವೆ ಎಂದು ಹೇಳುತ್ತಾರೆ; ಆದರೆ ಸುಧಾರಕರು ಅಂಥ ಐಕ್ಯ ಆಗಲೇ ಸಾಧಿಸಲ್ಪಟ್ಟಿಲ್ಲ ಎಂದು ತೋರಿಸಿಕೊಟ್ಟು ಅದನ್ನು ಸಾಧಿಸಲು ಪ್ರಯತ್ನಿಸುತ್ತಾರೆ. ನೀತಿಗೂ ಶಾಸನವಿಧಿಗೂ (ಕಾಯಿದೆಗೂ) ಪ್ರಯೋಜನವೇ ಒರೆಗಲ್ಲು; ಅದೇ ಸಮಾಜಶಾಸ್ತ್ರಕ್ಕೆ ತಳಹದಿಯನ್ನು ಹಾಕಿಕೊಡುತ್ತದೆ. ಜೇಮ್ಸ್ ಮಿಲ್, ಜಾನ್ ಸ್ಟೂಅರ್ಟ್ ಮಿಲ್ ಮುಂತಾದವರೂ ಇಂಥ ಪ್ರಯೋಜನವಾದಿಗಳು.

## ಕಾರ್ಲ್ ಮಾರ್ಕ್ಸ್ (೧೮೧೮–೧೮೮೩)

"ತರ್ಕಸಮನ್ವಯದ ಭೌತವಾದ"ವನ್ನು ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡ್ರಿಕ್ ಎಂಗಲ್ಸ್ ಸಂಸ್ಥಾಪಿಸಿದರು. ವ್ಯವಹಾರವಾದದ ಪ್ರಮಾಣಪದ್ಧತಿಯನ್ನದು ಅನುಸರಿಸುತ್ತದೆ. ಪುರುಷಾರ್ಥ ಶಾಸ್ತ್ರ (Axiology) ದಂತೆ ಅದು ಅನೇಕ ಕಡೆಗಳಲ್ಲಿ ದಯಾಧರ್ಮದ ಬಣ್ಣವನ್ನುಳ್ಳ ಒಂದು ಹಿತಾರ್ಥ ಮೌಲ್ಯ ಸಿದ್ಧಾಂತವನ್ನು ಹಿಡಿಯುತ್ತದೆ. ಉಕ್ತ ಭೌತವಾದದ ಸಮಾಜ ಸಿದ್ಧಾಂತವು ಮೂಲಭೂತವಾದ ಅರ್ಥ ಶಾಸ್ತ್ರೀಯ ಪೂರ್ವ ನಿಷ್ಕರ್ಷವಾದ (Determinism)ವನ್ನು ಕೆಲಮಟ್ಟಿಗೆ ಆಧರಿಸುತ್ತದೆ; ಹಾಗೇ ಸಮಾಜವು ವರ್ಗಮಯವೆಂಬುದನ್ನೂ ಗ್ರಹಿಸುತ್ತದೆ. ಅರ್ಥಶಾಸ್ತ್ರದಲ್ಲಿ ಅದು ಮೌಲ್ಯದ ಶ್ರಮಸಿದ್ಧಾಂತಕ್ಕೆ ಅಂಟಿಕೊಂಡಿದೆ; ಬಂಡವಾಳ ಶಾಹಿಯ ಉಳಿಕೆ (Surplus) ಬೆಲೆಯ ಕಲ್ಪನೆ ಅದರಲ್ಲಿ ಅಡಕವಾಗಿದೆ. ಬಂಡವಾಳ ಶಾಹಿಯು ಅನ್ಯಾಯ. ಸಮಾಜವಾದವು ಅದನ್ನು ಮೆಟ್ಟಬೇಕು. ಶ್ರಮಜೀವಿಗಳ ಕ್ರಾಂತಿಯಿಂದ ಅದಕ್ಕೆ ಆ ಶಕ್ತಿ ಬರುತ್ತದೆ. ಆಗ (ಪ್ರಾಲಿಟೇರಿಯಟ್ಟಿನ) ಸಾಮಾನ್ಯರ ಸರ್ವಾಧಿಕಾರ ಸ್ಥಾಪನೆಯಾಗಿ ಸಮಾಜವಾದದ ಸಂಸ್ಥಾಪನೆಯಾಗುವದು. ಅದು ಕ್ರಮೇಣ ರಾಜ್ಯದ ಪ್ರಭುತ್ವವೇ ಅಳಿದು ವರ್ಗರಹಿತ ಸಮಾಜ ರೂಪಿತವಾಗಿ ಸಾಮುದಾಯಿಕ ಅರ್ಥನೀತಿ ಅಮಲಿನಲ್ಲಿ ಬಂದು ರಾಜಕೀಯದಲ್ಲಿ ಸ್ವಯಂನಿಯಾಮಕವಾಗುವುದು.

ಜ್ಞಾನಾರ್ಜನೆಯಲ್ಲಿ ಜ್ಞಾತೃವಷ್ಟೇ ಅಲ್ಲ, ಜ್ಞೇಯವೂ ಬದಲಾಯಿಸುವ ಸ್ವಭಾವವುಳ್ಳದ್ದು; ಅವು ಪರಸ್ಪರವಾಗಿ ಹೊಂದಿಕೊಳ್ಳಲು ಸತತ ಪ್ರಯತ್ನ ಮಾಡುತ್ತಿರುತ್ತವೆ. ಈ ಪ್ರಯತ್ನದ ಕ್ರಿಯಾನುಕ್ರಮವು ಎಂದೂ ಪೂರ್ಣವಾಗುವಂಥದಲ್ಲವಾದ್ದರಿಂದ ತರ್ಕಸಮನ್ವಯ ನಿಷ್ಫವೆಂದೆನ್ನಿಸಿದೆ. ಸಂವೇದನೆಯೊಂದು ಕ್ರಿಯೆ ಚಟುವಟಿಕೆ. ವಸ್ತುಗಳು ಜಗತ್ತಿನ ಸತತಕಾರ್ಯಗತಿಯ ಅಂಗಗಳು. ಕ್ರಿಯೆ ಅಥವಾ ಕಾರ್ಯ ಎಂಬುದನ್ನು ಮರೆತ ಸಿದ್ಧಾಂತಗಳೆಲ್ಲವೂ ದುರ್ಮಾರ್ಗದರ್ಶಕಗಳಾದ ಕಲ್ಪನಾವಿಲಾಸಗಳು. ಜಡವಲ್ಲದೆ, ಜೀವವೆಂದೂ ಪ್ರಚೋದಕಶಕ್ತಿಯೆನ್ನಿಸದು; ಜಡದೊಡನೆ ಮಾನವನಿಗಿರುವ ಸಂಬಂಧವೇ ಪೂರ್ಣಾರ್ಥದಲ್ಲಿ ಸರ್ವಮಾನವರಿಗೂ ಪ್ರಚೋದಕವಾದ ಶಕ್ತಿ; ಮಾರ್ಕ್ಸನ ಈ ಜಡ ಪ್ರಕೃತಿವಾದವು ವ್ಯವಹಾರದಲ್ಲಿ ಅರ್ಥನೀತಿಯಾಗಿಬಿಡುವುದು. ವಿತರಣಕ್ಕಿಂತ ಹೆಚ್ಚಾಗಿ ಉತ್ಪಾದನ ಕ್ರಮಗಳೇ ಒಂದು ಯುಗದ ರಾಜಕೀಯ, ಮತಧರ್ಮ, ತತ್ವಜ್ಞಾನ ಮತ್ತು ಕಲೆಗಳ ಸ್ಥೂಲ ರೂಪರೇಖೆಗಳನ್ನು ಹಡೆಯುವಂಥವುಗಳು.

## ಟಿಪ್ಪಣಿ

"ಅರಿಸ್ಟಾಟಲನವರೆಗಿನ ಗ್ರೀಕ್ ತತ್ವಜ್ಞಾನವು ನಗರ ರಾಜ್ಯಕ್ಕೆ ಅನುಗುಣವಾದ ಮನಃಸ್ಥಿತಿಯನ್ನು ವ್ಯಕ್ತಪಡಿಸುತ್ತದೆ. ವಿಶ್ವಜನೀನವಾದ ನಿರಂಕುಶ ಪ್ರಭುತ್ವಕ್ಕೆ ಸಮತ್ವದ ತತ್ವಜ್ಞಾನವು (Stoicism) ತಕ್ಕ ಅಭಿವ್ಯಕ್ತಿ. ಪ್ರಾಸ್ಥಾನಿಕ (Scholastic) ತತ್ವಜ್ಞಾನವು ಸಂಘಟಿತವಾದ ಚರ್ಚಿನ ಬೌದ್ಧಿಕ ಅವತಾರ. ಡೆಸ್ಕಾರ್ಟಿಸ್ ಮತ್ತು ಲೋಕೆಗಳ ಕಾಲದಿಂದ ಮಾರ್ಕ್ಸನ ಕಾಲದವರೆಗಿನ ತತ್ವಜ್ಞಾನವು ವ್ಯಾಪಾರಿ ಮಧ್ಯಮವರ್ಗದವರ ಪೂರ್ವಗ್ರಹಗಳ ಸಾರ. ಮಾರ್ಕ್ಸ್ ಮತ್ತು ಫ್ಯಾಸಿಸ್ಟ್ ವಾದಗಳು ಆಧುನಿಕ ಉದ್ಯಮಪ್ರಧಾನ ರಾಜ್ಯಕ್ಕೆ ತಕ್ಕಂಥವುಗಳು"– ಎಂಬ ರಸೆಲ್ಲನ ಪ್ರಕಾರ ಉಕ್ತ ಪ್ರಸ್ಥಾನಗಳೆಲ್ಲವೂ ವ್ಯಕ್ತಿನಿಷ್ಠ ಮತ್ತು ತನ್ನ ತರ್ಕವಿಶ್ಲೇಷಣ ಪದ್ಧತಿಯನ್ನಾಧರಿಸಿದ ಜಡಪ್ರಕೃತಿವಾದವೊಂದೇ ವಸ್ತುನಿಷ್ಠ. ಇದು ರಸೆಲ್ಲನ ಪೂರ್ವಾಗ್ರಹಕ್ಕೆ ಅತಿದೊಡ್ಡ ಉದಾಹರಣೆ; ಏಕೆಂದರೆ, ಭೌತಶಾಸ್ತ್ರ ಇತ್ತೀಚೆಗೆ ಪರಿಪೂರ್ಣ ವಸ್ತುನಿಷ್ಠ ಜ್ಞಾನವೆಂಬುದು ಮಾನವನಿಗಸಾಧ್ಯವೆಂಬುದನ್ನು ತೋರಿಸಿಕೊಟ್ಟಿದೆ. ಅವನ ತತ್ವಜ್ಞಾನವು ಕೇವಲ ಭೌತಶಾಸ್ತ್ರೀಯ ತರ್ಕದಿಂದ ಬದ್ಧವಾದ ಅಲ್ಪದರ್ಶನವೆಂಬುದು ಸರ್ವವಿದಿತವಾಗಿದೆ. ತನ್ನ ತಾನರಿಯದವನಿಗೆ ಅನ್ಯತೆಯ ನಾನಾತ್ವವನ್ನು ಆಧರಿಸಿದ ವಸ್ತುನಿಷ್ಠವಾದವು ಯಾವಾಗಲೂ ಪ್ರಿಯ; ಅಹಂಕಾರದ ವ್ಯಕ್ತಿವೈವಿಧ್ಯಗಳಿರುವಷ್ಟು ತತ್ವಜ್ಞಾನದ ವಸ್ತುವೈವಿಧ್ಯಗಳಿರಬಹುದು. ಲೌಕಿಕವಾದ ಸಂಕುಚಿತ ವ್ಯಕ್ತಿತ್ವವಿರುವವರೆಗೆ ಮುಕ್ತತ್ವವಿಲ್ಲದುದರಿಂದ ಅಂಥ ವ್ಯಕ್ತಿತ್ವವುಳ್ಳ ರಸೆಲ್ ಸದೃಶರ ಚಾರ್ವಾಕತನ ಎಲ್ಲ ಕಾಲದಲ್ಲೂ ಇದ್ದದ್ದೇ. ಜಡಾದ್ವೈತ–ಜೀವಾದ್ವೈತಗಳು ಪರಸ್ಪರ ಸಮಾನತೆಯಲ್ಲಿದ್ದರೆ ಅವು ಸದಾ ಪರಸ್ಪರ ಪೂರ್ವಗ್ರಹಗಳೇ; ಪೂರ್ವಗ್ರಹ–ಉತ್ತರಗ್ರಹಗಳ ಸಂಬಂಧವೂ ಅದೇ ಚಕ್ರಗತಿಯ ಮಾನವೇತಿಹಾಸದಲ್ಲಿ!

## ಹೆನ್ರಿ ಬರ್ಗ್ಸನ್ (೧೮೫೯–೧೯೪೧)

ಬರ್ಗ್ಸನ್ನನ ತತ್ವಜ್ಞಾನವು ಆಧುನಿಕ ಕಾಲವಾದ. ಇದು ಯಾಂತ್ರಿಕತಾವಾದದ ವಿರೋಧಿಯಾದ ಅಧ್ಯಾತ್ಮನಿಷ್ಠ ಅತಿಭೌತಶಾಸ್ತ್ರ. ಹಠಪ್ರಧಾನವಾದ ಒರಟು ನಿಸರ್ಗವಾದ ಬರ್ಗ್ಸನ್ನನಿಗೆ ಹಿಡಿಸದು. ಯಾಂತ್ರಿಕವೂ ನಿಷ್ಕ್ರಿಯಾತ್ಮಕವೂ ಆದ ಜಡಪ್ರಕೃತಿ ವಾದವನ್ನವನು ಒಪ್ಪನು.

ಪ್ರತಿಭೆಗಿಂತ ಕಾಲಾವಧಿಯ ದೀರ್ಘತೆಯೇ ಬರ್ಗ್ಸನ್ನನ ಸಿದ್ಧಾಂತದ ಕೇಂದ್ರಬಿಂದು. ತಾಳಿಕೆಯೇ ಬಾಳಿಕೆ. ಅದು ತತ್ವ ಅಥವಾ ಮೂಲ ಪದಾರ್ಥ, ಮೂಲದ್ರವ್ಯ. ತಾಳಿಕೆ (Duration) ಪ್ರತ್ಯಕ್ಷಾನುಭವದಲ್ಲಿ ಆವಿರ್ಭವಿಸುತ್ತದೆ. ಪ್ರಜ್ಞೆ, ಜಡಪ್ರಕೃತಿ, ಕಾಲ, ವಿಕಾಸ ಅಥವಾ ಪರಿಣಾಮ, ಚಲನ ಮತ್ತು ಪೂರ್ಣವಾದ ಸರ್ವನಿರಪೇಕ್ಷ ಸತ್ಯ ಎಂಬೀ ಎಲ್ಲವು ತಾಳಿಕೆಯ ಬಿಗಿತದ (tensional)– ವಿಶಿಷ್ಟ ರೂಪಗಳು. ಮೂಲತಃ ಒಂದು (Life force)–ಚೈತನ್ಯಶಕ್ತಿ ಇದೆ. ಅದು ಅಭಿವೃದ್ಧವಾದ ವೈಯಕ್ತಿಕ ರೂಪಗಳ (ಆಕಾರಗಳ) ಮೂಲಕ ಜೀವಿಗಳ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಹರಿಯುತ್ತ ಬಂದಿದೆ; ಈ ರೂಪಗಳೇ ಒಂದು ತಲೆಮಾರಿಗೂ ಇನ್ನೊಂದಕ್ಕೂ ಸೇತುವೆಗಳು. ಎಲ್ಲ ಜೀವಿಗಳನ್ನೂ ತಲೆಮಾರಿಂದ ಅನುಕ್ರಮವಾಗಿ ವಿಕಾಸ ಹೊಂದುತ್ತ ಬಂದವುಗಳೆಂದು ಸರಪಳಿ ಹೆಣೆಯುವ ಡಾರ್ವಿನೀಯತೆ ಕೇವಲ ಕಲ್ಪನಾ ವಿಲಾಸ. ನಿಜವಾದ ಸರ್ಜನಾತ್ಮಕ (Creative)– ವಿಕಾಸವು (Evolution) ಬಹು ಪರಿಮಾಣಿಕ (Pluri-dimensional). ಜೀವಿಗಳ ಪ್ರತಿಯೊಂದು ದಿಕ್ಕಿನ ವಿಕಾಸದಲ್ಲಿಯೂ ಜೀವಚೈತನ್ಯವು ಸಂರಕ್ಷಿತವಾಗಿದೆ. ಅದು ಬಹುರೂಪ ನಿರ್ಮಾಪಕ, ಬಹುನವೋನವ ಜಾತಿಗಳ ನಿರ್ಮಾಪಕ; ತನ್ನ ಉತ್ಕ್ರಾಂತಿಯಲ್ಲದು ನಾನಾ ವಿಧವಾಗಿ ವಿಭಕ್ತವಾಗುತ್ತ ಹೋಗುತ್ತದೆ. ಅದಕ್ಕೆ ಪೂರ್ವನಿರ್ದಿಷ್ಟವಾದ, ಖಚಿತವಾದ ಮತ್ತು ಕೊನೆಯದಾದ ಮುಟ್ಟುವ ಸ್ಥಾನವೆಂಬುದಿಲ್ಲ. ಆದುದರಿಂದ ಅದರಲ್ಲೇ ಅವರ ಅಂತರ್ಯಾಮಿಯಾದ ಉದ್ದೇಶ ಸಿದ್ಧಾಂತ ಅಡಗಿದೆ, ಮೌಲ್ಯವಿವೇಕ ತಲೆಮರೆಸಿಕೊಂಡಿದೆ.

ಬರ್ಗ್ಸನ್ನನ ಪ್ರಕಾರ ಪ್ರತಿಭೆಯು (Intuition) ಜೀವಶಾಸ್ತ್ರೀಯ, ಜನನಶಾಸ್ತ್ರೀಯ ಉತ್‌ಕ್ರಿಯಾವಂತಿಕೆಯುಳ್ಳದ್ದು. ಪ್ರಾತಿಭಜ್ಞಾನವು ವಿಚಾರ ಮಾಡಬಲ್ಲ ಎಲ್ಲ ಮನಸ್ಸುಗಳ ಸಾಮಾನ್ಯ ಹುಟ್ಟುಗುಣ. ಅದು ಆಯಾ ವ್ಯಕ್ತಿಯ ಮನಸ್ಸು ತನ್ನ ಒಡಲ ನೂಲಿನಿಂದ ನೇಯ್ದ ಜೇಡನ ಜಾಲವಲ್ಲ. ಅದರಲ್ಲಿ ವೈಜ್ಞಾನಿಕ ವಸ್ತುನಿಷ್ಠತೆಯೂ ಇದೆ, ಕಲಾತ್ಮಕವಾದ ಪ್ರತ್ಯಕ್ಷತೆಯೂ ಇದೆ.

ಅಚಲ (Static) ಜಡಪ್ರಕೃತಿವಾದ ಮತ್ತು ನ್ಯೂಟನ್ನನು ಕಂಡ ನಿಸರ್ಗವನ್ನು ದೇಶರೂಪಕ್ಕೆ (form of space) ತಿರುಗಿಸುವುದು– ಬರ್ಗ್ಸನ್ನನ ಪ್ರಕಾರ ಅಪಬುದ್ಧಿವಾದಗಳು. ಯಾಂತ್ರಿಕತಾವಾದದ ಮತ್ತು ಜಡಪ್ರಕೃತಿವಾದವನ್ನು ಹಿಡಿದ ವಿಜ್ಞಾನದ ಸರ್ವಜ್ಞತೆಯು ಅವನಿಗೆ ಅಮಾನ್ಯ. ಅತ್ಯುನ್ನತ ವಿಚಾರಪರರ ಧ್ಯೇಯದೊಡನೆ ಸಾಮಶ್ರುತ್ಯ

ಹೊಂದುವುದಕ್ಕಾಗಿ ವಿಚಾರಶಕ್ತಿಗೆ ತನ್ನನ್ನೇ ತಾನು ಮೀರಲು ಅವನು ಹೇಳಿದನು. ಮುಖ್ಯವಾಗಿ ಸತ್ಯವು ಉತ್ಕ್ರಿಯಾತ್ಮಕ, ನಿಷ್ಕ್ರಿಯಾತ್ಮಕವಲ್ಲ. ವಿಚಾರ, ಆಲೋಚನೆ, ತರ್ಕಗಳನ್ನು ಬರ್ಗ್ಸನ್ನನ ತತ್ವಜ್ಞಾನವು ಸದಾ ಪರಾಮರ್ಶೆಗೆ ಗುರಿಪಡಿಸುತ್ತಿರುತ್ತದೆ. ಅವನ ಸಿದ್ಧಾಂತವು ಕ್ಯಾಂಟನ ಸಂಪ್ರದಾಯಕ್ಕೆ ಸೇರಿದ್ದು. ಅವನ ಪ್ರತಿಭೆಯ ಕಲ್ಪನೆ ಸ್ಪಿನೋಜನ ಪ್ರತಿಭಾ ಕಲ್ಪನೆಗೆ ಸದೃಶವಾದುದು. ಅವನದು ವಿಚಾರ ವಿಮುಖತೆಯಲ್ಲ, ವಿಚಾರವನ್ನು ಪೂರ್ಣಗೊಳಿಸುವ ಕ್ರಮ– ಎಂದು ಹೇಳಿರುವುದು ಅತೀಂದ್ರಿಯ ಪದಾರ್ಥದ ಬಗೆಗಿನ ಪ್ರಸಿದ್ಧ ತರ್ಕೋತ್ತರ ಧ್ಯೇಯವಾದಗಳೆಲ್ಲವುಗಳಿಗೂ ತಕ್ಕ ಸಮರ್ಥನೆಯಾಗುತ್ತದೆ. ಜೀವಶಕ್ತಿಯು (ದೇವಶಕ್ತಿಯಂತೆ?) ಒಬ್ಬ ಅಮರ ಕಲೆಗಾರ; ಜಗತ್ತಿನ ಸೃಷ್ಟಿಸ್ಥಿತಿಲಯಗಳ ಪ್ರವಾಹವು ಅವನ ಸ್ಫೂರ್ತಕಲಾಕೃತಿ. ಈ ಕಲೆಗಾರಿಕೆಗೆ ಅಂತವಿಲ್ಲ, ಪಾರವಿಲ್ಲ–ಎಂಬುದು ಬರ್ಗ್ಸನ್ನನ ಸರ್ಜನಾತ್ಮಕ ವಿಕಾಸವಾದ, ಭೇದಜನಕವಾದ ಬುದ್ಧಿಯು ದೇಶದೊಡನೆ ನಿತ್ಯಸಂಬಂಧವುಳ್ಳದ್ದು, ಅಭೇದ ಜನಕವಾದ ಮೂಲ ಪ್ರವೃತ್ತಿ ಅಥವಾ ಪ್ರತಿಭೆಯು ಕಾಲದೊಡನೆ ನಿತ್ಯಸಂಬಂಧವುಳ್ಳದ್ದು. ಬರ್ಗ್ಸನ್ನನ "ಕಾಲವು" ಪ್ರತ್ಯೇಕವಾದ ಮುಹೂರ್ತಗಳ (ಕ್ಷಣಗಳ) ಸಜಾತೀಯ ಸಮೂಹವಲ್ಲದೆ, ಗಣಿತ ಶಾಸ್ತ್ರೋಕ್ತವಾದ ಕಾಲವಲ್ಲ. ಗಾಣಿತಿಕ ಕಾಲವು ದೇಶದ್ದೇ ಒಂದು ವಿಶಿಷ್ಟ ರೂಪ. ತಾಳಿಕೆ ಅಥವಾ ಕಾಲಸಾತತ್ಯವು ಜೀವಶಕ್ತಿಯ ಸಾರ. ಜೀವನವೆಂದರೆ ಒಡೆದು ಹಾರಿದ ಗುಂಡಿನ ಚೂರುಗಳು ಪುನಃ ಚಿಕ್ಕ ಚಿಕ್ಕ ಗುಂಡುಗಳೇ ಆಗಿ ಪರಿಣಮಿಸುವ ಕ್ರಿಯೆ ಅನಂತಕಾಲದವರೆಗೆ ನಿರುದ್ದೇಶದಿಂದ ನಡೆಯುತ್ತ ಹೋಗುವುದು. ಕಾರ್ಯಕ್ಕೆ ಕಾರ್ಯವೇ ಉದ್ದೇಶ. ಇದೊಂದು ಕರ್ಮಪ್ರವಾಹ ಸಿದ್ಧಾಂತ. ಆ ಪ್ರವಾಹಕ್ಕೆ ಆದಿಯಿಲ್ಲ, ಅಂತವಿಲ್ಲ. ಕ್ರಿಯೆ, ಕಾರ್ಯ, ಬದಲಾವಣೆ, ಉತ್ಕ್ರಿಯೆ– ಎಂಬ ಯಾವ ಹೆಸರಿಟ್ಟರೂ ಜೀವನದ ಅರ್ಥ ಕರ್ಮಸಂತಾನವೆಂದೇ ಆಗುತ್ತದೆ. ಈ ಕರ್ಮಸಾತತ್ಯರೂಪದ ಜೀವನದ ತಾಳಿಕೆಯ ಲಕ್ಷಣ ಹೀಗಿದೆ: ನಮ್ಮ ಜಾಗ್ರತ ಅವಸ್ಥೆಗಳು ತಾಳುವ ರೂಪವೇ ತಾಳಿಕೆ; ಅವು ಅಂಥ ರೂಪವನ್ನು ತಾಳುವುದು ನಮ್ಮ ಅಹಂಕಾರವು ತನ್ನನ್ನು ತಾನೇ ಬದುಕಲು ಬಿಟ್ಟಾಗ– ಅಂದರೆ ಅದು ತನ್ನ ವರ್ತಮಾನ ಅವಸ್ಥೆಯನ್ನು ಭೂತಕಾಲದ ಅವಸ್ಥೆಗಳಿಂದ ಪ್ರತ್ಯೇಕವಾಗದಂತೆ ನಿಯಂತ್ರಿಸಿದಾಗ; ಅದು ಭೂತ–ವರ್ತಮಾನಗಳನ್ನು ಒಂದೇ ಒಂದು ಅಂಗರೂಪದ (ಆವಯವಿಕ) ಇಡಿಯನ್ನಾಗಿ ಮಾಡುತ್ತದೆ– ಅದರಲ್ಲಿ ಪರಸ್ಪರ ಚಂಚು ಪ್ರವೇಶವಿದೆ, ಪ್ರತ್ಯೇಕತೆಯನ್ನು ಹೊಂದದ ಉತ್ತರೋತ್ತರ ಕ್ರಿಯಾ ತರಂಗಮಾಲೆಯಿದೆ. ನಮ್ಮ ಅಹಂಕಾರದ ವಲಯದೊಳಗೆ ಪರಸ್ಪರ ಬಾಹ್ಯತೆಯಿಲ್ಲದ ಉತ್ತರೋತ್ತರ ತರಂಗಿತತೆಯಿದೆ; ಅಹಂಕಾರಪ್ರಜ್ಞೆಯ ಹೊರಗೆ ಇರುವುದು ಶುದ್ಧ ದೇಶ–ಅದರಲ್ಲಿ ಉತ್ತರೋತ್ತರತ್ವರಹಿತವಾದ ಪರಸ್ಪರ ಬಾಹ್ಯತೆ ಇದೆ, ಪ್ರತ್ಯೇಕತೆ ಇದೆ. ಕರ್ತೃ–ಕರ್ಮಗಳ ಪ್ರತ್ಯೇಕತೆ–ಏಕತೆಗಳು ಕಾಲಸಂಬಂಧವುಳ್ಳವುಗಳಲ್ಲದೆ, ದೇಶ ಸಂಬಂಧವುಳ್ಳವುಗಳಲ್ಲ. ನಾವು ಕಾರ್ಯ ಮಾಡುತ್ತಿರುವುದನ್ನು ವೀಕ್ಷಿಸುವ ತಾಳಿಕೆಯ ಅವಧಿಯಲ್ಲಿ ಭಿನ್ನ ಅಂಗಗಳಿರುತ್ತವೆ; ಆದರೆ ನಾವು ಕಾರ್ಯ ಮಾಡುತ್ತಿರುವ ತಾಳಿಕೆಯ ಅವಧಿಯಲ್ಲಿ ನಮ್ಮ ಅವಸ್ಥೆಗಳು (States) ಒಂದರಲ್ಲಿ ಒಂದು ಕರಗಿ ಹೋಗಿ ಬಿಡುತ್ತವೆ. ಶುದ್ಧವಾದ ತಾಳಿಕೆಯ ಅವಧಿಯು ಬಾಹ್ಯತೆಯಿಂದ ಬಹುದೂರವಾಗಿರುತ್ತದೆ, ಬಾಹ್ಯತೆ

ಅತ್ಯಲ್ಪ ಅಂಶದಿಂದ ಅದರಲ್ಲಿ ಪ್ರವೇಶಿಸಿರುತ್ತದೆ ಎಂದು ಕೂಡ ಹೇಳಲು ಬಾರದು: ಅದರಲ್ಲಿ ಭೂತ ಕಾಲವು ದೊಡ್ಡದು, ಅದರೊಡನೆ ತೀರ ಹೊಸದಾದ ಸಣ್ಣ ವರ್ತಮಾನವು ಅನುಸ್ಯೂತವಾಗಿರುತ್ತದೆ. ಆದರೆ ಈ ತಾಳಿಕೆಯನ್ನು ಸಾಧಿಸುವ ಯತ್ನದಲ್ಲಿ ನಮ್ಮ ಇಚ್ಛಾಶಕ್ತಿ ಬಹಳ ಕಷ್ಟಪಟ್ಟು ಪ್ರಯತ್ನಿಸುತ್ತಿರಬೇಕಾಗುತ್ತದೆ. ಜಾರಿಹೋಗುತ್ತಿರುವ ಭೂತಕಾಲದ ಕರ್ಮವನ್ನು ನಾವು ಜಗ್ಗಿ ಹಿಡಿದುಕೊಳ್ಳಬೇಕಾಗುತ್ತದೆ; ಅದನ್ನು ಇಡಿಯಾಗಿ ವರ್ತಮಾನದಲ್ಲಿ ತುರುಕಬೇಕಾಗುತ್ತದೆ. ಅಂಥ ವೇಳೆಯಲ್ಲೇ ನಾವು ನಿಜವಾಗಿ ಸ್ವಾಧೀನರಾಗಿರುತ್ತೇವೆ. ಆದರೆ ಅಂಥ ವೇಳೆಗಳು ವಿರಳ. ಆಳಿಕೆಯು ಸತ್ಯದ ಸಾರ, ಅದು ನಿತ್ಯಪರಿಣಾಮಿ, ಅದನ್ನೆಂದೂ ಯಾರೂ ಮಾಡುವುದಿಲ್ಲ. ಅದೇ ಆಗುತ್ತ ಹೋಗುತ್ತದೆ. ಸ್ಮೃತಿಯಲ್ಲಿ ಜಡಪ್ರಕೃತಿಯನ್ನು ಮನಸ್ಸು ಊಹಿಸಿದ ರೀತಿಯಲ್ಲಿ ಅಭಿನಯಿಸಬೇಕಾಗುತ್ತದೆ; ಹಾಗೆ ಮಾಡುವುದು ಬುದ್ಧಿಯ ಕೆಲಸ ಅಲ್ಲವೇ ಅಲ್ಲ. ಸ್ಮೃತಿಯು ಜಡಪ್ರಕೃತಿಯ ಅಭಿವ್ಯಕ್ತಿಯಲ್ಲ, ಅವತಾರವಲ್ಲ; ಅದು ಸ್ವತಂತ್ರ. ತಾಳಿಕೆಯು ಆತ್ಮಪ್ರದರ್ಶನ ಮಾಡುವುದು ಸ್ಮೃತಿಯಲ್ಲಿ– ಆದರೆ ಯಾಂತ್ರಿಕ ಸ್ಮೃತಿಯಲ್ಲಲ್ಲ, ಭೂತಕಾಲಕರ್ಮಜ್ಞಾನವುಳ್ಳ ಸ್ಮೃತಿಯಲ್ಲಿ. ಸ್ಮೃತಿಯಲ್ಲಿಯೇ ನಮಗೆ ಚೇತನೆಯ (Spirit) ಸ್ಪರ್ಶವಾಗುವುದು.

## ವಿಲಿಯಂ ಜೇಮ್ಸ್ (೧೮೪೨–೧೯೧೦)

ಜೇಮ್ಸನದು ಮೂಲಭೂತ ವ್ಯವಹಾರವಾದ. ಅದರ ಪ್ರಕಾರ ಕರ್ತೃ–ಕರ್ಮ ಸಂಬಂಧವು ಮೂಲಭೂತವಾದುದಲ್ಲ; ಸ್ವಜ್ಞಾನವೊಂದನ್ನುಳಿದರೆ ಮಿಕ್ಕ ಜ್ಞಾನಗಳೆಲ್ಲವೂ ಜ್ಞಾತೃ–ಜ್ಞೇಯಭೇದ ಉಳ್ಳಂಥವು ಎಂಬುದು ಮೂಲತಃ ಸತ್ಯವಲ್ಲ. ಪ್ರಜ್ಞೆ (Consciousness) ಎಂಬುದು ಒಂದು ಅಭಾವ ದ್ರವ್ಯ; ಅದಕ್ಕೆ ಆದಿತತ್ವವೆಂಬ ಸ್ಥಾನವಿಲ್ಲ. ನಮ್ಮ ಆಲೋಚನೆಗಳ ಹೂರಣವಾದ ಜಡ ಪ್ರಕೃತಿಯ ವಸ್ತುಗಳಿಗೆ ವಿರುದ್ಧವಾದ ಮೂಲಭೂತ ಇರುವಿಕೆಯ ಗುಣ ಅಥವಾ ದ್ರವ್ಯ ಎಂಬುದಿಲ್ಲ. ಪ್ರಜ್ಞೆಯು ದ್ರವ್ಯವಲ್ಲ, ಒಂದು ವಸ್ತುವಲ್ಲ. ಜಗತ್ತಿನ ಎಲ್ಲದರ ಸಾರಾಂಶವೂ ಒಂದೇ ಒಂದು ಮೂಲ ಪದಾರ್ಥದ ಸ್ವರೂಪವುಳ್ಳದ್ದು. ಆ ಪದಾರ್ಥದ ಹೆಸರು 'ಶುದ್ಧ ಅನುಭವ' ಎಂದು. ಶುದ್ಧ ಅನುಭವದ ಎರಡು ಚೂರುಗಳ ನಡುವಿನ ವಿಶಿಷ್ಟ ಸಂಬಂಧವೇ ತಿಳಿವಳಿಕೆ. ಜ್ಞಾತೃ–ಜ್ಞೇಯ (ಕರ್ತೃ–ಕರ್ಮ) ಸಂಬಂಧವು ಜನ್ಯ. ಅನುಭವಕ್ಕೆ ಅಂಥ ಒಳ ಕಾಪಟ್ಯವಿಲ್ಲ. ಒಂದು ಸಂದರ್ಭದಲ್ಲಿ ಜ್ಞಾತೃವಾದದ್ದು ಇನ್ನೊಂದರಲ್ಲಿ ಜ್ಞೇಯವಾಗಬಹುದು. ಅನಂತರದ ಆಲೋಚನೆಗೆ ವಸ್ತುವನ್ನು (ಸಾಮಗ್ರಿಯನ್ನು) ಒದಗಿಸಿಕೊಡುವ ಸದ್ಯದ ಜೀವತ್ ಕ್ರಿಯಾಸಂತಾನವೇ ಶುದ್ಧ ಅನುಭವ.

ಮನಸ್ಸು ಮತ್ತು ಜಡಪ್ರಕೃತಿಗಳಲ್ಲಿ ಭೇದವಿಲ್ಲ. ಅವು ಒಂದೇ ಕ್ರಿಯಾಸಂತಾನದ ಎರಡು ಬಗೆಯ ಮುಖಗಳು. ಇದೊಂದು ತಟಸ್ಥ ಅದ್ವೈತ. ಇದರ ಪ್ರಕಾರ ಜಗದ್ವಸ್ತುವು ಮಾನಸವೂ ಅಲ್ಲ, ಜಡಪ್ರಕೃತಿಯೂ ಅಲ್ಲ; ಇವೆರಡಕ್ಕೂ ಮೂಲವಾದ ಒಂದು ಪದಾರ್ಥ. ಜೇಮ್ಸನ ಶುದ್ಧಾನುಭವವು ಬರ್ಕ್ಲೆಯ ಧ್ಯೇಯವಾದಕ್ಕೆ ಸದೃಶ. ನಮ್ಮಲ್ಲಿ ಯಾವುದಾದರೂ ಅಭ್ಯಾಸವನ್ನು ಉಂಟುಮಾಡಬಲ್ಲದ್ದು ಅನುಭವ. ಸ್ಮೃತಿಯು ಒಂದು ವಿಧದ ಅನುಭವ.

ಅನುಭವದ ವ್ಯಾಪ್ತಿಯು ಜೀವನದ ಮೂಲ ಪದಾರ್ಥದಷ್ಟಿಲ್ಲವೆಂಬುದನ್ನು ಜೇಮ್ಸ್ ಒಪ್ಪಿಕೊಂಡಿಲ್ಲ. 'ಸತ್ಯವನ್ನು ನಂಬು, ಅಸತ್ಯವನ್ನು ಬಿಡು' ಎಂಬುದು ಜೇಮ್ಸ್ ಹೇಳಿದ ನೀತಿ ತತ್ವ. ವಿರುದ್ಧ ಸಾಕ್ಷಿ ಸಿಗುವವರೆಗೆ ಯಾವುದನ್ನಾದರೂ ನಂಬಬೇಕು ಎನ್ನುತ್ತಾನವ. ಅವನು ಸಂಭಾವ್ಯತೆಯನ್ನೂ ಹೇಳಿಲ್ಲ. ಒಂದರಲ್ಲಿ ಪೂರ್ಣವಿಶ್ವಾಸ ಅಥವಾ ಪೂರ್ಣ ಅವಿಶ್ವಾಸ– ಎಂಬ ಎರಡೇ ವಿಕಲ್ಪಗಳನ್ನವನು ಒಪ್ಪುತ್ತಾನೆ. ಜನರನ್ನು ಗುಣವಂತರನ್ನಾಗಿಯೂ ಸುಖಿಗಳನ್ನಾಗಿಯೂ ಮಾಡುವ ಯಾವ ಮಾತಿದ್ದರೂ ಅದು ಅವನ ಪ್ರಕಾರ ಸತ್ಯ. ತಾತ್ವಿಕ ಸಿದ್ಧಾಂತಗಳೆಲ್ಲವನ್ನೂ ಅವರವರ ಮೇಲಾಗುವ ಪರಿಣಾಮಗಳಿಂದ ಅಳೆದು, ಸತ್ಯತೆಯನ್ನು ನಿರ್ಧರಿಸಬೇಕೆಂಬುದು ಅವನ Pragmatism ಕಾರ್ಯಾರ್ಥವಾದ; ಅವುಗಳೆಲ್ಲವೂ ಪರಣಾಮ ಸಾಧನಗಳಲ್ಲದೆ ಒಗಟುಗಳ ಉತ್ತರಗಳಲ್ಲ. ನಮಗೆ ಲಾಭಕರವಾಗುವ ಕಲ್ಪನೆಗಳೆಲ್ಲವೂ ಸತ್ಯ. ಸತ್ಯವೆಂಬುದು ಒಂದು ತರಹದ ಒಳಿತು; ಅದೊಂದು ಪ್ರತ್ಯೇಕ ಪದಾರ್ಥವಲ್ಲ. ಈ ಮಾತನ್ನು ಸತ್ಯದ ಲಕ್ಷಣವನ್ನು ಖಡಾಖಂಡಿತವಾಗಿ ಸರ್ವಗ್ರಹವಾಗಿ ಕೊಡದುದರಿಂದ ರಸೆಲ್ಲನಂಥವರು ಆಕ್ಷೇಪಿಸುತ್ತಾರೆ. ಸತ್ಯದ ಜ್ಞಾನವು ಒಂದಲ್ಲ ಒಂದು ವಿಧದ ತೃಪ್ತಿಗೆ ಕಾರಣವಾಗದಿದ್ದರೆ ಅದು ಸತ್ಯವೆನ್ನಿಸಬಲ್ಲುದೇ? ಎಂಬುದು ಮರುಸವಾಲು.

## ಜಾನ್ ಡ್ಯೂಯಿ (೧೮೫೯–೧೯೫೨)

ಡ್ಯೂಯಿಗೆ ಜ್ಞಾನಶಾಸ್ತ್ರೀಯವಾಗಿ ಸತ್ಯ ಮುಖ್ಯವಲ್ಲ, 'ಶೋಧ' (Inquiry) ಮುಖ್ಯ. ಸತ್ಯವು ಈತನಿಗೆ ನಿತ್ಯವಲ್ಲ, ನಿಷ್ಕ್ರಿಯ, ಅಚಲ ಅಲ್ಲ. ಮಗ್ಗಿ ಕೊಷ್ಟಕವೇ ಸತ್ಯದ ಅತ್ಯುತ್ತಮ ಮಾದರಿ. ಡ್ಯೂಯಿಗೆ ಜೀವಶಾಸ್ತ್ರವು ಗಣಿತಶಾಸ್ತ್ರಕ್ಕಿಂತ ಹೆಚ್ಚು ಗಣ್ಯ. ವಿಚಾರವೊಂದು ವಿಕಾಸದ ಕ್ರಿಯಾನುಕ್ರಮ. ಯಾವ ಜ್ಞಾನಾಂಶವೂ ಕಟ್ಟಕಡೆಯದಲ್ಲ. ಪೂರ್ಣ ಸತ್ಯ ಹಾಗೂ ಅದರ ನಿತ್ಯಪ್ರಪಂಚಗಳು ಡ್ಯೂಯಿಯ ವಿಚಾರ ಕ್ಷೇತ್ರದಲ್ಲಿಲ್ಲ. ಮನುಷ್ಯನ ಜ್ಞಾನವು ಆವಯವಿಕ; ಅವನ ತಿಳಿವಳಿಕೆ ಕ್ರಮೇಣ ಬೆಳೆಯುವಂಥದು; ಅದು ಇಡಿಯಾಗಿ ಪೂರ್ಣವಾದಾಗ ಮಾತ್ರ ಪೂರ್ಣ; ಬಿಡಿಭಾಗಗಳಲ್ಲಿ ಅದು ಅಪೂರ್ಣ. ಮನಸ್ಸು ಮತ್ತು ದೇಹಗಳು ಒಟ್ಟು ಒಂದು ಅವಯವಿ, ಅಂಗಿ, ಇಡಿ. ಸತ್ಯ–ಸುಳ್ಳುಗಳೆರಡೂ ಅಪೂರ್ಣ; ಕೇವಲ ಪೂರ್ಣತೆ ಅವುಗಳಿಗಿಲ್ಲ. ಅವಯವಿಯೊಂದು ಆವರಣದೊಡನೆ ಮಾಡಿಕೊಂಡ ಹೊಂದಿಕೆಯು 'ಶೋಧ'. ಒಂದು ನಡತೆಯ ಬಗೆಯನ್ನು ಒಬ್ಬನಲ್ಲಿ ಪ್ರೇರಿಸಬಲ್ಲ ಘಟನೆಯೇ ಅದನ್ನು ಹೇಳಿದ ವಾಕ್ಯದ ಅರ್ಥವತ್ತೆ (Significance). ಅಂಥ ಘಟನೆ ನಡೆಯದಿದ್ದಾಗ ಆ ವಾಕ್ಯದ ಅರ್ಥವತ್ತೆ ಸುಳ್ಳು, ನಡೆದಾಗ ಸತ್ಯ. ಅರ್ಥವತ್ತೆ ಅಥವಾ ಅರ್ಥಪೂರ್ಣತೆಯು ವಾಕ್ಯದ ಭಾಷಾರಚನೆಯನ್ನು ಅವಲಂಬಿಸುತ್ತದೆ. ಹೀಗೆ ಅರ್ಥವತ್ತೆ ಎಂದರೆ ಅರ್ಥಕ್ರಿಯಾಕಾರಿತ್ವ. ಶೋಧವೆಂದರೆ ಒಂದು ಅನಿಷ್ಕೃಷ್ಟ ಸನ್ನಿವೇಶವನ್ನು– ಅದರ ಅಂಗಗಳೆಲ್ಲವೂ ಏಕೀಕೃತ ಇಡಿಯಾಗುವಂತೆ– ತನ್ನ ಆಂಗಿಕ ಪ್ರತ್ಯೇಕತೆಗಳನ್ನೂ ಸಂಬಂಧಗಳನ್ನೂ ನಿಷ್ಕೃಷ್ಟಗೊಳಿಸಿಕೊಳ್ಳಲು ತಕ್ಕ ಹಾಗೆ ನಿಯಂತ್ರಿತ ಅಥವಾ ನಿರ್ದೇಶಿತ ಪರಿವರ್ತನಕ್ಕೆ ಗುರಿಪಡಿಸುವುದೇ ಆಗಿದೆ. ಶೋಧವು ಯಾವಾಗಲೂ ವಸ್ತುನಿಷ್ಠವಾದ ವಸ್ತು ಸಂಗತಿಯ ವಸ್ತುನಿಷ್ಠ ಪರಿವರ್ತನೆಗೇ ಸಂಬಂಧ ಪಟ್ಟಿರುತ್ತದೆ.

ಅನಿಷ್ಕೃಷ್ಟ ಸನ್ನಿವೇಶದ ಅಸ್ತವ್ಯಸ್ತತೆಯು ಆಭಾಸಿಕ; ಅದರ ಕ್ರಮಬದ್ಧವಿನ್ಯಾಸವು ಅದರ ನಿತ್ಯ ಸತ್ಯ ಸ್ವರೂಪ. ಇಲ್ಲಿ ಹೆಗೆಲ್ಲನ ಆಭಾಸ–ಸತ್ಯಗಳ ಕಲ್ಪನೆ ಅಡಕವಾಗಿದೆ; ಅದರ ಪ್ರಕಾರ ಅವಯವಿತ್ವವು ಸತ್ಯಸ್ವರೂಪಕ್ಕೆ ಅತ್ಯಗತ್ಯ. ಸತ್ಯಶೋಧಕರೆಲ್ಲರೂ ಕೊನೆಯದಾಗಿ ಒಪ್ಪಿಕೊಳ್ಳುವುದೇ ಸತ್ಯ. ಒಂದು ವಸ್ತುವಿನ ನಿತ್ಯ ಸತ್ಯತೆ ಬರುವುದು ಆ ಅವಯವಿಯ ಹಾಗೂ ಸಂನಿವೇಶದ ಅತೃಪ್ತಿಕರ ಸಂಬಂಧಗಳನ್ನು ಅದಕ್ಕೇ ಹೆಚ್ಚಾಗಿ ಅನುಗುಣವಾಗುವಂತೆ ಹೊಂದಿಸಿದಾಗ. ಹೀಗೆ ಹೊಂದಿಸುವ ಕ್ರಿಯಾಕ್ರಮವೇ 'ಶೋಧ'. ಅದರಿಂದ ಅವುಗಳ ನಡುವಿನ ಸಂಬಂಧಗಳು ಅವಯವಿಗೆ ತೃಪ್ತಿಕರವಾಗುವುವು. ಹಾಗೆ ಹೊಂದಿಸುವುದೆಂದೂ ಪೂರ್ಣವಾಗಿ ಅದಕ್ಕೆ ಅಥವಾ ಇದಕ್ಕೆ ಅನುಗುಣವಾಗಿ ಅಲ್ಲ.

ಪರಿಣಾಮಗಳಿಂದ ನಂಬಿಗೆಯ ಬೆಲೆಯನ್ನು ನಿರ್ಧರಿಸುವುದು ಡ್ಯೂಯಿಯ ಕ್ರಮ; ಭೂತಕಾಲಕ್ಕೆ ಸಂಬಂಧಿಸಿದ ನಂಬಿಗೆಯ ಬೆಲೆಯನ್ನು ಅದರ ಕಾರಣಗಳಿಂದ ನಿರ್ಧರಿಸುವುದು ರಸೆಲ್ಲನ ಕ್ರಮ. ಸತ್ಯವು ಡ್ಯೂಯಿಗೆ Warranted Assertability ಅಧಿಕೃತ ವಚನಾರ್ಹತೆ ಅಥವಾ ಉಲ್ಲೇಖಾರ್ಹತೆ. ಅಂಥ ಉಲ್ಲೇಖಾರ್ಹತೆಯು ಒಂದು ನಂಬಿಗೆಯ ಪರಿಣಾಮಗಳಿಂದ ಲಬ್ಧವಾಗುವ ಬೆಲೆ. ಅದು ಭೂತಕಾಲಕ್ಕಷ್ಟೇ ಅಲ್ಲ, ಭವಿಷ್ಯತ್ಕಾಲಕ್ಕೂ ವ್ಯಾಪಿಸಿದೆ; ಅಂದರೆ ಭೂತಕಾಲೀನ ಘಟನೆಗಳನ್ನಷ್ಟೇ ಅಲ್ಲದೆ ಭವಿಷ್ಯತ್ಕಾಲದ ಘಟನೆಗಳನ್ನೂ ಅವಲಂಬಿಸಿದೆ.

ಡ್ಯೂಯಿಯ ತತ್ವಜ್ಞಾನವು ಅಮೇರಿಕದ ಉದ್ಯಮವಾದದ ಸಂಸ್ಕಾರದಿಂದ ಹುಟ್ಟಿತೆಂದು ರಸೆಲ್ಲನದು ಇಂಗ್ಲೆಂಡಿನ ಜಮೀನುದಾರಿ ಕುಬೇರ ಪ್ರಭುತ್ವವಾದದ ಸಂಸ್ಕಾರದಿಂದ ಹುಟ್ಟಿತೆಂದೂ ಹೇಳುವುದುಂಟು.

ಡ್ಯೂಯಿಯದು ಮಾನವಪ್ರಪಂಚ; ಗ್ರಹ, ತಾರೆ, ಸೂರ್ಯ, ನೀಹಾರಿಕೆಗಳಲ್ಲಿ ಗಣ್ಯವಲ್ಲ. ಅವನದು ಬೆಲೆಯುಳ್ಳದ್ದೆಂದು ಅನುಭವಕ್ಕೆ ಬಂದ Power Philosophy ಸಾಮುದಾಯಿಕ ಶಕ್ತಿ ತತ್ವಜ್ಞಾನ. ಅದನ್ನಾತ Philosophy of Instrumentalism 'ಕರಣವಾದದ ತತ್ವಜ್ಞಾನ' ಎಂದು ಹೇಳಿದ್ದಾನೆ. ಅದರ ಪ್ರಕಾರ ನಿಸರ್ಗದ ಕೆಲ ಚಲನಗಳನ್ನು ನಿಯಂತ್ರಿಸಬಲ್ಲವನಾದ ಮಾನವನು ಅಧಿಕನೆಂಬ ಭಾವನೆಯುಂಟಾಗುವುದು.

## ಬರ್ಟ್ರೆಂಡ್ ರಸೆಲ್ (೧೮೭೨–....)

ಪ್ರಯೋಗ ವಿಜ್ಞಾನ ಒದಗಿಸಿದ ಸಂಗತಿಗಳ ತಾರ್ಕಿಕ ಪರಾಮರ್ಶೆಯೇ ತತ್ವಜ್ಞಾನ. ಅವನ ತತ್ವಜ್ಞಾನವನ್ನವನು "ತಾರ್ಕಿಕ ವಿಶ್ಲೇಷಣವಾದ" ಎಂದು ಕರೆದುಕೊಂಡಿದ್ದಾನೆ. ಗಣಿತವು ತರ್ಕದ ದೀರ್ಘೀಕೃತ ಅಥವಾ ವಿಸ್ತೃತ ವಿವರಣೆ. ವಾಕ್ಯರಚನೆಯ ವಿಶಿಷ್ಟತೆಯಿಂದ ತಾತ್ವಿಕ ಸತ್ಯತೆಯನ್ನು ನಿರ್ಧರಿಸಬಹುದು. ವಾಕ್ಯರಚನೆಯ ವಿಶ್ಲೇಷಣವೆಂದರೆ ಲಿಂಗ ಪರಾಮರ್ಶೆ; ಅದರಿಂದ ಹೇತ್ವಾಭಾಸಗಳಿದ್ದರೆ ಅವು ಹೊರಬೀಳುವುವು– ಎಂಬುದು ತಾತ್ಪರ್ಯ. ತನ್ನ ಈ ಅಭಿಪ್ರಾಯಕ್ಕೆ "ಅಸಿದ್ಧ" ಹೇತ್ವಾಭಾಸದ ಉದಾಹರಣೆಗಳನ್ನು ಕೊಟ್ಟು ತನ್ನ ಹಿಂದಿನ ತತ್ವಜ್ಞಾನಿಗಳೆಲ್ಲರೂ ಒಂದಲ್ಲ ಒಂದು ದೊಡ್ಡ ಹೇತ್ವಾಭಾಸವನ್ನು ತಮ್ಮ

ತರ್ಕ ಸಮರ್ಥನೆಯಲ್ಲಿ ಉಳಿಯಗೊಟ್ಟಿದ್ದಾರೆ ಎಂದು ವಾದ ಹೂಡಿದ್ದಾನೆ. ರಸೆಲ್ ಉಳಿಸಿದ (fallacy) ಹೇತ್ವಾಭಾಸ ಇಂತಿದೆ:

ಸಾವಿರದವರೆಗೆ ಸಾವಿರ ಅಂಕೆಗಳಿವೆ;

ದಶಲಕ್ಷದವರೆಗೆ ದಶಲಕ್ಷ ಅಂಕೆಗಳಿವೆ;

ಯಾವ ಪ್ರಮಿತಾಂಕವನ್ನು (finite number) ಯಾರು ಹೇಳಿದರೂ ಒಂದರಿಂದ ಅದರವರೆಗಿನ ಅಂಕೆಗಳನ್ನು ಎಣಿಸಿದ ಮೇಲೆ ಮುಂದೆಯೂ ಹೆಚ್ಚಿನ ಅಂಕೆಗಳು ಉಳಿಯುತ್ತವೆ.

ಆದುದರಿಂದ ಪ್ರಮಿತ ಪೂರ್ಣಾಂಕಗಳ ಸಂಖ್ಯೆ ಅಪರಿಮಿತ (Infinite). ಈ ನ್ಯಾಯ ವಾಕ್ಯದಲ್ಲಿ (Syllogism) ಎಣಿಸಲು ಬೇಕಾದ ಕಾಲಕ್ರಮಗಳು ಮಾನವ ಶಕ್ತಿಯಲ್ಲೂ ಯಂತ್ರಶಕ್ತಿಯಲ್ಲೂ ಪರಿಮಿತ ಪ್ರಮಾಣದಲ್ಲಿವೆಯೆಂಬ ಗೃಹೀತಾಂಶವು ಅಡಗಿದೆ. ಇದನ್ನು ಗೃಹೀತವನ್ನಾಗಿ ಇಟ್ಟುಕೊಳ್ಳಲು ಯಾರು ಹೇಳಿದರೂ ಅದು ತರ್ಕ ನೀತಿಗೆ ಗ್ರಾಹ್ಯವಾಗದು. ಸೂರ್ಯನ ಹತ್ತಿರ ಯಾವನಿಗೂ ಯಾವ ಯಂತ್ರಕ್ಕೂ ಹೋಗಿ ಅವನನ್ನು ಮುಟ್ಟಿ ರೂಪಾಂತರ ಹೊಂದದೆ ಹಿಂಬರಲು ಸಾಧ್ಯವಿಲ್ಲವೆಂದಾಕ್ಷಣ ಭೂಮಿಗೂ ಸೂರ್ಯನಿಗೂ ಇರುವ ದೂರ ಅಪ್ರಮೇಯ ಎಂದರೆ ಅಂಥ ಹೇತ್ವಾಭಾಸವನ್ನು ಉಳಿಯಗೊಟ್ಟಂತೆಯೇ ಅಗುವುದು. ಇದನ್ನು "ವ್ಯಾಪ್ಯತ್ವಾಸಿದ್ಧ" ಹೇತ್ವಾಭಾಸವೆಂಬುದು ಭಾರತೀಯ ರೂಢಿ.

ಪೂರ್ಣ ಸಂಖ್ಯೆಗಳು ಅಪ್ರಮೇಯ – (ಪ್ರತಿಜ್ಞಾವಾಕ್ಯ)

ಎಣಿಸಲು ಸಾಧ್ಯವಾಗದುದರಿಂದ – (ಹೇತುವಾಕ್ಯ)

ಯಾವ ಯಾವುದು ಅಸಂಖ್ಯೇಯವೋ ಅದೆಲ್ಲವೂ ಅಪ್ರಮೇಯ:

ಒಟ್ಟು ಮಾನವರೆಲ್ಲರ ತಲೆಕೂದಲುಗಳ ಹಾಗೆ – (ಉದಾಹರಣವಾಕ್ಯ)

ಇವೂ ಅವುಗಳಂತೆಯೇ ಇವೆ – (ಉಪನಯವಾಕ್ಯ)

ಆದುದರಿಂದ ಪೂರ್ಣಾಂಕಗಳು ಅಪ್ರಮೇಯ – (ನಿಗಮನವಾಕ್ಯ)

ಎಣಿಸಲಸಾಧ್ಯವೆಂಬುದು ನಿಜವಾಗಬೇಕಾದರೆ ಪ್ರಯೋಗವಿಜ್ಞಾನವು ಹೆಚ್ಚು ಹೆಚ್ಚು ಶಕ್ತಿಯುಳ್ಳ ಹಾಗೂ ವೇಗವುಳ್ಳ ಎಣಿಕೆಯ ಯಂತ್ರಗಳನ್ನು ಕೊನೆಯೇ ಇರದಂತೆ ರಚಿಸುತ್ತ ಹೋಗಬೇಕಾಗುವುದು. ಹಾಗೆ ಮಾಡಿ ಅದು ಅದನ್ನು ಸಿದ್ಧಮಾಡಿದ ಮೇಲೆ ಅಸಂಖ್ಯೇಯತೆಗೆ– ಅಪ್ರಮೇಯತೆಗೆ (ಅಪ್ರಮಿತತೆಗೆ) ತಕ್ಕ ವ್ಯಾಪ್ತಿಯು ಉಂಟಾಗುತ್ತದೆ. ಅಲ್ಲಿಯವರೆಗೆ ಅದರ ವ್ಯಾಪ್ತಿಯು ಅಸಿದ್ಧ (Unproved). ಹಾಗೆ ಸಿದ್ಧ ಮಾಡಬೇಕಾದ ಕೆಲಸ ಉಳಿದಿರುವುದೊಂದು ಉಪಾಧಿ. ಆದುದರಿಂದ ಎಣಿಸಲಸಾಧ್ಯವೆಂಬುದು ವ್ಯಾಪ್ಯತ್ವಾಸಿದ್ಧವಾದ ಹೇತು. ತ್ರೈಕಾಲಿಕವಾದ ಆನುಭವಿಕ ಸಾಧ್ಯತೆ–ಅಸಾಧ್ಯತೆಗಳನ್ನು ಉಪಾಧಿಯನ್ನಾಗಿ ಹಿಡಿಯುವುದು ಪರಾರ್ಥಾನುಮಾನದಲ್ಲಿಲ್ಲದಿದ್ದರೂ ರಸೆಲ್ಲನ ಮೂಲ ನ್ಯಾಯವಾಕ್ಯವು ಅದನ್ನಾಧರಿಸಿದ್ದರಿಂದ ಅದಕ್ಕೆ ಜಾತ್ಯುತ್ತರವೆಂದು ಅದನ್ನಿಲ್ಲಿ ಉಪಾಧಿಯೆಂದು ಗ್ರಹಿಸಲೇಬೇಕಾಗಿ ಬರುತ್ತದೆ.

ಆಲ್ಬರ್ಟ್ ಐನ್‌ಸ್ಟೀನನ ಪ್ರಕಾರ (Space) ದೇಶವೆಂಬುದು ಪ್ರಮೇಯ. ಅದರಲ್ಲಿ ಎಷ್ಟು ಪೂರ್ಣಾಂಕಗಳನ್ನು ತುಂಬಿದರೂ ಅದು ಪ್ರಮೇಯವೆಂಬುದನ್ನು ಯಾರೂ ಸುಲಭವಾಗಿ ತಿಳಿದುಕೊಳ್ಳಬಹುದು. ಏಕೆಂದರೆ, ಪ್ರಮೇಯದಲ್ಲಿ ಅಪ್ರಮೇಯ ಹಿಡಿಸುವುದೆಂಬುದು ಅನೂಹ್ಯ. ಅದರಿಂದಲೇ ಗಣಿತಶಾಸ್ತ್ರಕಾರರು Infinity ಅಪ್ರಮೇಯವನ್ನು ಅಂಕೆಯೆಂದು ಗಣಿಸುವುದಿಲ್ಲವೆಂದು ತೋರುತ್ತದೆ. ಇದನ್ನು ಗಣಿತಶಾಸ್ತ್ರಜ್ಞರು ಪರಾಮರ್ಶಿಸಲಿ.

ಭೌತಶಾಸ್ತ್ರವೂ ಗಣಿತಶಾಸ್ತ್ರವೂ ತಾರ್ಕಿಕ ವಿಶ್ಲೇಷಣವಾದಕ್ಕೆ ವಿಷಯಗಳನ್ನು ಒದಗಿಸಿಕೊಟ್ಟಿವೆ ಎಂದು ರಸೆಲ್ ಹೇಳಿದಾಗ ಇತರ ಶಾಸ್ತ್ರಗಳ ವಿಷಯಗಳು ಅವುಗಳ ವಿಷಯಗಳಷ್ಟು ವಿಶ್ಲೇಷಣಾರ್ಹವಲ್ಲ ಎಂಬ ಧ್ವನಿ ಹೊರಡುತ್ತದೆ. ಈ ಧ್ವನಿಯು ಸ್ವಕಪೋಲಕಲ್ಪಿತ ಸಿದ್ಧಾಂತ, ಆತನ ಮನಸ್ಸು ತಿಂದ ಮಂಡಿಗೆ, ಮತ್ತೇನೂ ಅಲ್ಲ. ಐನ್‌ಸ್ಟೀನ್ ಹೇಳಿದ ಘಟನೆಗಳು (Events) ಭೌತಿಕ ಮಾತ್ರ. ಅದರಿಂದ ಇತರ ಘಟನೆಗಳು ವಿಚಾರಾನರ್ಹವೆಂದಾಗದು, ಸತ್ಯರಹಿತವೆಂದಾಗದು. ಭೌತಘಟನೆಗಳಿಗೆ ಸಹಜಗುಣ (Properties) ಗಳಿರುವುವೆನ್ನುತ್ತಾನೆ ರಸೆಲ್. ಅಂದರೆ ಅವನ ಪ್ರಕಾರ (ಭೌತ) ಕ್ರಿಯೆಯು ಧರ್ಮಕ್ಕೆ (ಸಹಜ ಗುಣಗಳಿಗೆ) ಆಶ್ರಯವಾಗಬಲ್ಲದು; ದ್ರವ್ಯವೆಂದರೆ ಘಟನಾಸಮೂಹ. ಭೌತ ಅಣುವಿನಲ್ಲಿ ಕೆಲಕಾಲ ಒಂದು ಸ್ಥಿತಿಯಿದ್ದು ಕೂಡಲೇ ಭಿನ್ನಸ್ಥಿತಿಯುಂಟಾಗುವುದು ಕಂಡುಬಂದುದರಿಂದ ಚಲನವು (Motion) ಯಾವಾಗಲೂ ಸತತ (Continuous) ಎಂಬ ನಂಬಿಕೆಯನ್ನು ಬಿಡಬೇಕು– ಎಂಬುದೂ ರಸೆಲ್ಲನ ಮತ. ಮನಃಸ್ಥಿತಿಗಳೆಲ್ಲವೂ ಆತ್ಯಂತಿಕವಾಗಿ Conditioned Reflexes ಉಪಾಹಿತ ಕ್ಷೇಪಗಳೆಂಬುದೂ ಅವನ ನಂಬಿಗೆ. ಅದರ ಪ್ರಕಾರ ಜೇಮ್ಸ್ ಹೇಳಿದ ತರಸ್ಥಾದ್ವೈತ ಸಿದ್ಧಿಸುತ್ತದೆ–ಅಂದರೆ ಭೌತವೂ ಮಾನಸವೂ ಸಾರತಃ ಒಂದೇ ಜಾತಿಗೆ ಸೇರಿದಂಥವು: ಕೆಲ ಘಟನೆಗಳು ಕೇವಲ ಭೌತಿಕವಾದರೆ ಉಳಿದ ಘಟನೆಗಳು ಭೌತ–ಮಾನಸ ಸ್ವರೂಪದವುಗಳು. ಇದರಿಂದ ಶುದ್ಧವಾದ ಮಾನಸಿಕ ಘಟನೆಗಳಿಗೆ ಸತ್ಯಮೌಲ್ಯವಿಲ್ಲವೆಂದು ಧ್ವನಿತವಾಗುವುದು. ಮತ್ತೆ ಅವನು ಸತ್ಯದ ಕ್ಷೇತ್ರದ ವ್ಯಾಪ್ತಿಯನ್ನು ಹೀಗೆ ನಿರ್ದಿಷ್ಟಗೊಳಿಸುತ್ತಾನೆ: ಸೂರ್ಯಚಂದ್ರರು ಭಿನ್ನ. ಸಾಮಾನ್ಯನು ಕಾಣುವ ಸೂರ್ಯನು ಖಗೋಲ ಶಾಸ್ತ್ರಜ್ಞ ತಿಳಿದ ಸೂರ್ಯನಿಂದ ಭಿನ್ನ; ಹಾಗೇ ಅವನಿಗೆ ಕಾಣಿಸಿದ ಚಂದ್ರನು ಇವನು ತಿಳಿದ ಚಂದ್ರನಿಂದ ಭಿನ್ನ. ಹೀಗೆ ಪ್ರತ್ಯಕ್ಷ–ವಿಜ್ಞಾನಗಳ ಬಲದಿಂದ ತಿಳಿದ ರಚನಾಗತವಾದ ಅಮೂರ್ತ ಧರ್ಮಗಳ ಮೇಲಿನಿಂದ ಭೇದ ಚತುಷ್ಟಯ (ಅವನ ಸೂರ್ಯ–ಚಂದ್ರ+ಇವನ ಸೂರ್ಯ–ಚಂದ್ರ=೪) ಲಭ್ಯವಾಗುತ್ತದೆ.

ಪ್ರತ್ಯಕ್ಷ ಸೂರ್ಯ –> ಪ್ರತ್ಯಕ್ಷ ಚಂದ್ರ

ವಿಜ್ಞಾನ ಸೂರ್ಯ –> ವಿಜ್ಞಾನ ಚಂದ್ರ

ಒಂದರ್ಥದಲ್ಲಿ ಸೂರ್ಯನು ದುಂಡಾಗಿದ್ದಾನೆ ಎನ್ನಬಹುದು; ಆದರೆ ಆ ದುಂಡುತನವು ಪ್ರತ್ಯಕ್ಷದಲ್ಲಿ ಕಾಣುವ ಅವನ ದುಂಡುತನಕ್ಕೆ ತೀರ ಹೊಂದುವಂಥದಲ್ಲ. ಆದರೆ ಅದು

ಪ್ರಕಾಶಮಾನವಾಗಿದೆ ಅಥವಾ ಬೆಚ್ಚಗಿದೆ ಎಂದು ನಂಬಲು ನಮಗೆ ಅಧಿಕಾರವಿಲ್ಲ. ಏಕೆಂದರೆ ಭೌತಶಾಸ್ತ್ರವು ಬೆಳಕು–ಬಿಸಿಗಳು ಆಭಾಸಿಕ ಎಂದು ತೋರಿಸಿಕೊಡಬಲ್ಲದು. ಈ ಉದಾಹರಣೆಯಿಂದ ರಸೆಲ್ ನಂಬುವ ಸತ್ಯದ ಲಕ್ಷಣವು ತೀರ ಸ್ಪಷ್ಟವಾಗುತ್ತದೆ. ಭೌತಿಕವೊಂದನ್ನುಳಿದು ಇನ್ನಾವ "ಸತ್ಯ"ವನ್ನೂ ಸತ್ಯವೆಂದು ಹೇಳಲು ರಸೆಲ್ ನಮಗೆ ಅಧಿಕಾರ ಕೊಡನು! ಭೌತಿಕ ಸತ್ಯಗಳು ಏಕವಲ್ಲ, ನಿತ್ಯವಲ್ಲ, ಪೂರ್ಣವಲ್ಲ, ನಿರಪೇಕ್ಷವಲ್ಲ, ಆತ್ಯಂತಿಕವಲ್ಲ–ಭಾರತೀಯ ವೇದಾಂತದ ಪ್ರಕಾರ; ಹಾಗೇ ಅವು ವ್ಯಾವಹಾರಿಕವೂ ಅಲ್ಲ– ಪ್ರತ್ಯಕ್ಷವಾದರೆ ಮಾತ್ರ ಅವು ವ್ಯಾವಹಾರಿಕ ನಶ್ವರ ಸತ್ಯಗಳೆನ್ನಿಸಬಲ್ಲವು: ಆದುದರಿಂದ ಅವುಗಳನ್ನು ಪ್ರತ್ಯಕ್ಷಾತೀತ ಅನುಮಾನಿಕ ಸತ್ಯಗಳೆನ್ನಬಹುದಾಗಿ ತೋರುತ್ತದೆ.

## ಟಿಪ್ಪಣಿ

ರಸೆಲ್ ಲಕ್ಷಣಿಸಿದ ಸತ್ಯಜಾತಿಗಿಂತ ಭಿನ್ನವಾದವುಗಳೆಲ್ಲವೂ Deep seated prejudices ಜನರಲ್ಲಿ ಆಳವಾಗಿ ಬೇರೂರಿದ ಪೂರ್ವಗ್ರಹಗಳೆಂದು ಅವನು ಘೋಷಿಸಿದ್ದಾನೆ. ಆದುದರಿಂದ ಅವುಗಳನ್ನಷ್ಟೇ ಆಧರಿಸುವವರು ಆತನು ಹೇಳುವ ಜಾತಿಯ ಸತ್ಯವು ಅವನಲ್ಲಿ ಆಳವಾಗಿ ಬೇರೂರಿದ ಪೂರ್ವಗ್ರಹವೆಂದು ಸಾರಬಹುದು. ಏಕೆಂದರೆ, ಸತ್ಯದ ಭೌತಿಕತೆ, ಘಟನಾತ್ಮಕತೆ ಅಥವಾ ಜಡಶಕ್ತಿ ಚಲನಸ್ವರೂಪವು ಮಾತ್ರ ಆಧೇಯವೆಂದು ಹೇಳಲು ಅವನು ಯಾವ ಸಮರ್ಥನೆಯನ್ನೂ ಕೊಡಲಿಲ್ಲ. ಕ್ರಿಯೆ (ಘಟನೆ, ಚಲನೆ) ದ್ರವ್ಯಾಭಾಸವನ್ನು ತೋರಿಸುವುದೆಂದಾದರೆ ಎಲ್ಲ ಕ್ರಿಯೆಗಳೂ ಯಾವಾಗಲೂ ಹಾಗೇಕೆ ತೋರಿಸುವುದಿಲ್ಲ? ಕ್ರಿಯೆಗಳಲ್ಲಿ ಎಷ್ಟು ಜಾತಿಗಳಿವೆ? ದ್ರವ್ಯಾಭಾಸಕ್ಕೆ ಕ್ರಿಯೆ ಆಶ್ರಯವಾಗಬಹುದಾದರೆ ಕ್ರಿಯೆಗೆ ಯಾವುದಾದರೂ ಆಶ್ರಯ ಬೇಡವೆ? ಕ್ರಿಯೆಯು ಸಾಪೇಕ್ಷ ಚಂಚಲವೋ ನಿರಪೇಕ್ಷ ಚಂಚಲವೊ? ಅದು ಸಾಪೇಕ್ಷವಾದರೆ ಯಾವುದಕ್ಕೆ? ಪರಸ್ಪರ ಸಾಪೇಕ್ಷತೆ ಕ್ರಿಯೆಗಳಲ್ಲಿದೆಯೆಂದರೆ ಅಂಥ ಕ್ರಿಯೆಗಳು ಅಸಂಖ್ಯೇಯವೋ (ಅಪ್ರಮೇಯವೋ) ಸಂಖ್ಯೇಯವೋ (ಪ್ರಮೇಯವೋ)? ಅವುಗಳಲ್ಲಿ ಕಾರ್ಯಕಾರಣ ಭಾವವಿದೆಯೋ ಅಕಸ್ಮಾತ್ತಾದ ಸಂಪರ್ಕವಿದೆಯೋ? ಕಾರ್ಯಕಾರಣ ಸಂಬಂಧವಿದ್ದರೆ ಯಾವ ಕ್ರಿಯೆ ಆದಿ ಕಾರಣ? ಆಕಸ್ಮಿಕತೆ ಸಂಬಂಧದಲ್ಲಿದೆಯೆಂಬುದು ತರ್ಕಬಾಹಿರ ವಿಚಾರ! ಕ್ರಿಯಾಶಕ್ತಿ ಗುರುವಾದ ರಸೆಲ್ಲನು ಈ ಎಲ್ಲ ಪ್ರಶ್ನೆಗಳಿಗಲ್ಲದೆ ಇನ್ನೂ ಅನೇಕ ಪ್ರಶ್ನೆಗಳಿಗೆ ತರ್ಕಶುದ್ಧವಾದ ಉತ್ತರವನ್ನು ಕೊಡುವವರೆಗೆ ಅವನ ಪರಾವಲಂಬಿ ಸಿದ್ಧಾಂತವು ಸ್ವೀಕಾರಾನರ್ಹ: ಭೌತಶಾಸ್ತ್ರದ ನಿಗಮನವೇನಾದರೂ ಬದಲಾದರೆ ಕೂಡಲೇ ಅವನ ಸಿದ್ಧಾಂತವೂ ಸತ್ಯಲಕ್ಷಣ–ಸತ್ಯಸ್ವರೂಪಗಳೂ ಬದಲಾಗಬೇಕಾಗುತ್ತವೆ. ಕ್ರಿಯಾನಿರಾಶ್ರಯತೆಯ, ಕ್ರಿಯೆಯ ಹೂರಣ ರಹಿತತೆಯ, ಕ್ರಿಯಾಽಸಂಖ್ಯೇಯತೆಯ (ಅಪ್ರಮೇಯಕತೆಯ), ಕ್ರಿಯಾ ಜಾತ್ಯೈಕ್ಯದ, ಕ್ರಿಯಾಭೌತಿಕೈಕತೆಯ, ಕ್ರಿಯಾ ಮಾತ್ರ ಸತ್ಯತೆಯ ನಿಗಮನಗಳೆಲ್ಲವೂ ಅಸಿದ್ಧಗಳಾಗಿವೆ. ಪ್ರತ್ಯಕ್ಷವು ಐಂದ್ರಿಯಿಕ ಆಭಾಸವಾದರೆ ವೈಜ್ಞಾನಿಕ ತಿಳಿವಳಿಕೆಯು ಬೌದ್ಧಿಕ ಆಭಾಸ ಹೇಗಲ್ಲ? ಬುದ್ಧಿಯೆಂಬ ಭೌತಕ್ರಿಯೆ ಉಳಿದ ಭೌತಕ್ರಿಯೆಗಳ "ಜ್ಞಾನವನ್ನು" (ಅಥವಾ ಕ್ರಿಯೆಯನ್ನೋ!) ಹೇಗೆ ಮಾಡಿಕೊಳ್ಳಲು ಸಮರ್ಥವಾಯಿತು? ಅದು

ಮಾಡಿಕೊಂಡ ಅರ್ಥ ನಿಜವೆನ್ನಲು ಅದರ ವೈಜ್ಞಾನಿಕ ಸಾಧನರೂಪದ ಕ್ರಿಯೆಯ ಸತ್ಯತೆ ಮೊದಲು ಸಿದ್ಧವಾಗಿರಬೇಡವೆ? ಅದರ ಸತ್ಯತೆ ಪ್ರತ್ಯಕ್ಷಾನುಮಾನ ಉಪಮಾನ ಶಬ್ದಗಳಲ್ಲಿ ಯಾವುದರಿಂದಲಾದರೂ ಸಿದ್ಧವಾದದ್ದುಂಟೇ? ಉಪಮಾನ-ಶಬ್ದ ಮತ್ತು ಪ್ರತ್ಯಕ್ಷನಿಷ್ಠ ಅನುಮಾನಗಳನ್ನು ಒಪ್ಪದೆ ಬಿಟ್ಟ ಮೇಲೆ ಅದರ ಸತ್ಯತೆ ಸ್ವತಃ ಪ್ರಮಾಣವೆಂದು ಹೇಳಬೇಕೆ? ಇದು ಯಾವ Heaven-sent intuition ದಿವ್ಯಪ್ರತಿಭಾವತಾರ? ಬೌದ್ಧಿಕವಾದ ವಿಜ್ಞಾನಜನ್ಯಜ್ಞಾನವು ಬುದ್ಧಿಕ್ರಿಯಾರಹಿತವಾಗಿ ಹುಟ್ಟಿತೆ? ಅದರ ಬುದ್ಧಿಸಾತ್ಮ್ಯಭಾವ ಅದರ ವೈಜ್ಞಾನಿಕತೆಯನ್ನು ಉಳಿಯಗೊಡುವುದೇ? ಬುದ್ಧಿಯು ಜಡಪ್ರಕೃತಿಗಿಂತ (ಭೌತದ್ರವ್ಯಕ್ಕಿಂತ) ಭಿನ್ನವಲ್ಲವಾದಾಗ ಅದೂ ಅದರಲ್ಲಿಯ "ಜ್ಞಾನ"ವೂ ಕ್ರಿಯೆಯೇ ಆಗಬೇಕಾಯಿತಲ್ಲ? ಅಂದರೆ ಕ್ರಿಯೆಯೂ "ಜ್ಞಾನ"ವೂ ಕ್ರಿಯಾತ್ಮಕವಾಗಬೇಕಾಯಿತು! ಹೌದೇ? ವಿಜ್ಞಾನವು ಅಬೌದ್ಧಿಕ ಕ್ರಿಯೆಯೋ? ವೈಜ್ಞಾನಿಕ ಜಡವೂ ಬೌದ್ಧಿಕ ಜಡವೂ ಬೇರೆ ಎಂದು ಜಡಾದ್ವೈತಿಯು ಗಣಿಸಿದ್ದು ಹೇಗೆ? ಹಾಗೆ ಗಣಿಸಿ ಶುದ್ಧ ಬೌದ್ಧಿಕ ಜಡಕ್ರಿಯಾತ್ಮಕ ಜ್ಞಾನವು ಅಸತ್ ಪದಾರ್ಥವೆನ್ನಲು ಪ್ರಮಾಣವೆಲ್ಲಿದೆ?

ಶಾಸ್ತ್ರಜಾಲಂ ಮಹಾರಣ್ಯಂ ಬುದ್ಧಿಭ್ರಮಣ ಕಾರಿಣೀ।
ವಾಗ್ವೈಖರೀ ಶಬ್ದಝರೀ ಭುಕ್ತಯೇ ನ ತು ಮುಕ್ತಯೇ ॥

ಎಂದು ತೋರುವ ತಾರ್ಕಿಕ ವಿಶ್ಲೇಷಣವಾದ, ಹಾಗೇ ಅದಕ್ಕೆ ಸಂಬಂಧಿಸಿದ Logical positivism ತಾರ್ಕಿಕ ಅನುಷೇಧವಾದ– ಆಧುನಿಕ ಯೌರೋಪೀಯ ಪೂರ್ವಗ್ರಹಗಳು– ಕೇವಲ ಭೌತಿಕತೆಯ ಕ್ರಿಯಾತ್ಮಕ ಸ್ವರೂಪವುಳ್ಳದ್ದಷ್ಟೇ ಸತ್ಯ ಎಂಬುದೇ ಅವುಗಳಿಗೆ ಮೂಲಾಧಾರ.

ಕ್ರಿಯೆ ಚಲನಾತ್ಮಕ, ಪರಿವರ್ತನಾತ್ಮಕ. ಅದಕ್ಕೆ ಆಶ್ರಯವಾಗಿ ದೇಶ-ಕಾಲ ದಿಕ್ಕುಗಳು ಬೇಕು ಮತ್ತು ಕರ್ತೃ ಒಂದು ಅವಶ್ಯಕ. ದೇಶಕಾಲಗಳ ನಾಲ್ಕು ಅಳತೆಗಳು ಅದನ್ನು ಪರಿಸೀಮಿಸುವುದೆಂದು ಭೌತಶಾಸ್ತ್ರ ಹೇಳಿದರೆ, ಅದರಿಂದ ಅದೊಂದು ಘಟನೆ (Event) ಸಂಗತಿ(Fact) ಎಂದಾದರೆ, ಭೌತಿಕವಾದ ಜ್ಞಾತೃ-ಜ್ಞೇಯ-ಜ್ಞಾನಗಳೇ ಸತ್ಯತಾರ್ಹವೆಂದು ಏಕೆ ಹೇಳಬೇಕು? ಭೌತಿಕತೆ ಎಂದರೇನು? ವೈಜ್ಞಾನಿಕ ಸಾಧನರೂಪದ ಭೌತಿಕತೆಗೆ ಮಾತ್ರ ಸತ್ಯನಿಷ್ಕರ್ಷೆಯ ಅಧಿಕಾರ ಹೇಗೆ ಬಂದಿತು? ಎಲ್ಲವೂ ಭೌತಿಕವೆಂದು ಹೇಳಿದಾಗ ಉಳಿದ ಭೌತಿಕ ಸಾಧನಗಳಿಗೇಕೆ ಅಂಥ ಅಧಿಕಾರವಿಲ್ಲ? ಕರ್ತೃವಿಲ್ಲದ ಕ್ರಿಯೆಯು ಯಾವಾಗ ಕರ್ತೃಸ್ಥಾನದಲ್ಲಿರುತ್ತದೆ, ಯಾವಾಗ ಕರ್ಮಸ್ಥಾನದಲ್ಲಿರುತ್ತದೆ ಮತ್ತು ಯಾವಾಗ ಕ್ರಿಯಾಸ್ಥಾನದಲ್ಲಿರುತ್ತದೆ? ಯಾವ ಜಡಕ್ರಿಯೆ ಅದರ ದೇಶ-ಕಾಲ-ಸ್ಥಾನಗಳನ್ನೂ ಪರಿಮಿತ ಸಾತತ್ಯವನ್ನೂ ನಿರ್ದಿಷ್ಟಗೊಳಿಸುತ್ತದೆ? ಈ ಎಲ್ಲ ಶಕ್ತಿಗಳನ್ನು ಭಿನ್ನಭಿನ್ನವಾಗಿ ಕ್ರಿಯಾಪುಂಜಗಳಲ್ಲಿ ಹೇಗೆ ಯಾವಾಗ ಯಾರು ನೆಲೆಗೊಳಿಸಿದರು? "ನಿಸರ್ಗ"ವೆಂದು ಹೇಳಿದರೆ ಅದೂ "ಭೌತ"ದಂತೆಯೇ ಅಲಕ್ಷಣಿತ (undefined) ಪದ – ಅಜ್ಞಾತಕ್ಕೆ ಪರ್ಯಾಯ! ಭೌತಿಕ ಧರ್ಮಗಳ ಭೌತಿಕತೆಯಂತೆಯೇ ನಿಸರ್ಗಚಲನಗಳ ನೈಸರ್ಗಿಕತೆ ಲಂಗುಲಗಾಮಿಲ್ಲದ, ಗಡಿ-ಮಿತಿಗಳಿಲ್ಲದ, ಅರ್ಥರೂಪದ(?) ಕಟ್ಟೆಯಿಲ್ಲದ ತಟ್ಟೆ! Finiteness

ಪ್ರಮೇಯತ್ವವಿಲ್ಲದಲ್ಲಿ Definiteness ನಿಶ್ಚಿತತೆ, ನಿಷ್ಕೃಷ್ಟತೆ ಇರದು–ಎಂಬುದು ಪರಿಮಿತ ದೇಶಾವಕಾಶವುಳ್ಳ ವಿಶ್ವದಲ್ಲಿ ಅಭೇದ್ಯ, ಅಪ್ರತಿಹತ ಸತ್ಯ. ತನ್ನದೇ ಆದ ವಿಷಯ ಮತ್ತು ತಾರ್ಕಿಕ ಕ್ರಮಗಳಿಂದ ಯಾವುದಾದರೂ ಜಡಸತ್ಯವು ಸ್ಪಷ್ಟವಾಗದೆ ಹೋದರೆ ಆ ಪ್ರಕರಣವನ್ನು ಅನಾಮತ್ತಾಗಿ ಅನಿಶ್ಚತತೆಯಲ್ಲೇ ಇಟ್ಟಿರಬೇಕು– ಎಂದಿದ್ದಾನೆ ರಸೆಲ್, ಇಂಥ ಅನಿಶ್ಚಿತತೆಗಳನ್ನಿಟ್ಟುಕೊಂಡೇ ಧೈರ್ಯದಿಂದ ಕಾರ್ಯಪ್ರವೃತ್ತನಾಗುವವ ನಿಜವಾದ ತತ್ವಜ್ಞಾನಿಯಂತೆ! ಅನಿಶ್ಚಿತತೆಯು ಅದಾರ್ಢ್ಯಕ್ಕೆ ಕಾರಣವಾಗುವುದರಿಂದ ರಸೆಲ್ ಬಯಸದಿರುವ ವಿಧಿವಾದ (Law of Chance) ವನ್ನು ಹಿಡಿದಂತಾಗುವುದೆಂಬುದನ್ನು ಆತ ಕಂಡುಕೊಂಡಿಲ್ಲ!

## ಆಲ್‌ಫ್ರೆಡ್ ನಾರ್ತ್ ವೈಟ್‌ಹೆಡ್ (೧೮೬೧ – ೧೯೪೭)

ಭೌತಶಾಸ್ತ್ರದ ಸಾಪೇಕ್ಷತಾವಾದವು ಅತಿಭೌತಶಾಸ್ತ್ರ ಸಂಪುಟದ ಬಾಯಿಯನ್ನು ತೆರೆಯುವ ಕೀಲಿಕೈ. ವಿಜ್ಞಾನದ ಅತ್ಯಮೂರ್ತ ಕಲ್ಪನೆಗಳನ್ನು ವಾಸ್ತವಿಕ ಸತ್ಯಪದಾರ್ಥಗಳೆಂದು ತಿಳಿಯಬಾರದು. ನಿಜವಸ್ತುವು ಒಂದೇ ಒಂದು. ಪ್ರತ್ಯಕ್ಷಜ್ಞಾನದಲ್ಲಿ ತೋರುವುದೆಲ್ಲಾ ಸತ್ಯ. ಕರ್ತೃರೂಪದ ವ್ಯಕ್ತಿಗಳು ಪಡೆಯುವ ಅನುಭವಗಳೆಲ್ಲವೂ ವಾಸ್ತವಿಕ. ಆ ಅನುಭವಗಳನ್ನು ಬಿಟ್ಟರೆ ಬೇರೆ ಯಾವುದೂ ಸತ್ಯವಲ್ಲ. ನಿಷ್ಕ್ರಿಯವಾದ ಕಲ್ಪನೆಗಳಾಗಲಿ, ದ್ರವ್ಯಗಳಾಗಲಿ, ಜಗತ್ತಿನಲ್ಲಿ ಇಲ್ಲ; ಅಲ್ಲಿರುವುದು ಘಟನೆಗಳ ಜಾಲ ಮಾತ್ರ. ಅಂಥ ಘಟನೆಗಳೆಲ್ಲವೂ ದೇಶ–ಕಾಲಿಕ ಏಕರೂಪಗಳ ನಿಜವಾದ ವಿಸ್ತಾರಗಳು, ವ್ಯಾಪಕ ಸ್ವರೂಪಗಳು. ತನ್ನ ತತ್ವಪ್ರಸ್ಥಾನವನ್ನು ವೈಟ್‌ಹೆಡ್ಡನು "ಆವಯವಿಕತೆಯ ತತ್ವಜ್ಞಾನ (The Philosophy of Organism)" ಎಂದು ಕರೆದುಕೊಂಡಿದ್ದಾನೆ. ಅದರ ಪ್ರಕಾರ ಘಟನೆಗಳು ಸಂಭವಿಸುವುದರಲ್ಲಿ ಪ್ರಾಕಾರಿಕ ಕ್ರಿಯಾನುಕ್ರಮ (Patterned Process)ವಿದೆ. ಎಲ್ಲ ಘಟನೆಗಳೂ(ಪದಾರ್ಥಗಳೂ) ತಮ್ಮಿಂದ ಭಿನ್ನವಾದ ಮಿಕ್ಕ ಪದಾರ್ಥಗಳೆಲ್ಲವುಗಳ ಬಗೆಗೂ Sensitive ಉನ್ಮುಖೇಂದ್ರಿಯವುಳ್ಳಂತಿರುತ್ತವೆ. ಅವುಗಳಲ್ಲಿಯ ಪರಸ್ಪರ ಸಂಬಂಧವು ಒಂದು ವಿಧದ Feeling ಭಾವನಾಂಶದಂತಿರುತ್ತದೆ. ಪ್ರತಿಯೊಂದು ವಾಸ್ತವಿಕ ಪದಾರ್ಥವೂ ಒಂದು Prehensive occassion–ತಾನು ಪ್ರವೇಶಿಸುವ ಅಂಥ ಇತರ ಪದಾರ್ಥಗಳೊಡನೆ ಎಲ್ಲ ಕಾರ್ಯಮಯ ಸಂಬಂಧಗಳನ್ನೂ ಉಳ್ಳದ್ದಾಗಿರುತ್ತದೆ. Negative prehension ನೈಷೇಧಿಕ ಕಾರ್ಯಮಯ ಸಂಬಂಧದಿಂದ ವಾಸ್ತವಿಕ ಪದಾರ್ಥವೊಂದರ ಅಸ್ತಿತ್ವವನ್ನು ಇನ್ನೂ ಚೆನ್ನಾಗಿ ನಿಶ್ಚಯಿಸಬಹುದು; ಅಂದರೆ ಆ ಪದಾರ್ಥವಲ್ಲದ ಎಲ್ಲವನ್ನೂ ಅದರಿಂದ ದೂರವೆಂದು ಭಾವಿಸುವುದು. ಹೀಗೆ ಪ್ರತಿಯೊಂದು ಭಾವನಾಂಶವೂ ಒಂದೊಂದು ಅನುಷೇಧಾತ್ಮಕ (ಆನುಷೇಧಿಕ) ಕಾರ್ಯಮಯ ಸಂಬಂಧ; ಪ್ರತಿಯೊಂದು ಅಮೂರ್ತಪದಾರ್ಥವೂ (Abstraction) ಒಂದೊಂದು ನೈಷೇಧಿಕ ಕಾರ್ಯಮಯಸಂಬಂಧ. ನಾಶ ಹೊಂದಿದಾಗ ಪ್ರತಿಯೊಂದು ವಾಸ್ತವಿಕ ಪದಾರ್ಥವೂ ತನ್ನ ವೈಯಕ್ತಿಕತೆಯನ್ನು ಕಳೆದುಕೊಳ್ಳುತ್ತದೆ; ಆದರೆ ವಿಶ್ವದ ಸೀಮಿತ ಯೋಜನಾ ಜಾಲದಲ್ಲಿ (Frame work) ಉಳಿದ ಪದಾರ್ಥಗಳೊಡನಿರುವ ತನ್ನ ಸಂಬಂಧಗಳ ಮೂಲಕ ಸಂರಕ್ಷಿತವಾಗಿರುತ್ತದೆ. ಸಂಭವಿಸಿದ

ಘಟನೆಯೆಲ್ಲವೂ ಕೇವಲ ಸಂಗತಿ (Absolute fact)ಗಳಾಗಿ ಉಳಿದಿರುತ್ತವೆ. ಇದೊಂದನ್ನುಳಿದರೆ ವಾಸ್ತವಿಕ ಪದಾರ್ಥಗಳೆಲ್ಲವೂ ವಿಶ್ವದ Flux ಆಣವಿಕ ಪ್ರವಾಹದಲ್ಲಿ ಸಿಲುಕಿಕೊಂಡಿರುತ್ತವೆ. ಆ ಪ್ರವಾಹದಲ್ಲಿ ಸಾಧ್ಯತೆಗಳ (Possibilities) ರಾಜ್ಯದಿಂದ ನಿತ್ಯಪದಾರ್ಥಗಳ ಅಂತಃಪ್ರವೇಶವು (Ingression) ಆ ಅಣುಪ್ರವಾಹದಲ್ಲಿ ಆಗುವುದು. ನಿತ್ಯಪದಾರ್ಥಗಳೆಲ್ಲವೂ Universals ಸಾಮಾನ್ಯಧರ್ಮಗಳು. ವಾಸ್ತವಿಕ ಪದಾರ್ಥಗಳಿಗೆ (Entities) ಅವುಗಳ ಆಯ್ಕೆಯು ಅಗತ್ಯ. ಈ ಪ್ರಕಾರವಾಗಿ ವಾಸ್ತವಿಕ ಪ್ರಪಂಚವೆಂಬುದೊಂದು ನಿತ್ಯವಸ್ತುಗಳಿಂದ ಆಯ್ದು ತೆಗೆದ ಕೆಲವು ಅಂಶಗಳು. ದೇವರು ಮೂರ್ತೀಕರಣದ (Concretion) ತತ್ವ. ಆ ತತ್ವವು ಉಕ್ತ ಆಯ್ಕೆಯನ್ನು ನಿರ್ಧರಿಸುತ್ತದೆ. ವಾಸ್ತವಿಕತೆಯು ಹೊಸತನದತ್ತ ಮುಂಬರಿಯುವಾಗ ಸಾಧ್ಯತೆಗಳನ್ನಾಯುವ ಕೆಲಸವು ದೇವರ Creativity ಸರ್ಜನಶೀಲಕ್ಕೆ ಮೀಸಲು. ಅದೇ ಜಗತ್ತಿನ ಆದಿಕಾರಣ. ಈ ಚಲನವನ್ನು (Movement) ದೇವರ ಪಾರಿಣಾಮಿಕ ಸ್ವಭಾವವೆಂದು ಹೇಳಬಹುದು. ನಿತ್ಯವಸ್ತುಗಳ (Eternal objcts) ಶುದ್ಧವಾದ ಸಾಧ್ಯತೆಯನ್ನು ಅವನ ಮೂಲ ಸ್ವಭಾವ (ಮೂಲ ಪ್ರಕೃತಿ) ಎಂದು ಕರೆಯಬಹುದು.

## ಟಿಪ್ಪಣಿಗಳು

ವೈಟ್‌ಹೆಡ್ಡನ ತತ್ವಜ್ಞಾನದಲ್ಲಿ ಬರುವ ನಿತ್ಯಪದಾರ್ಥಗಳ ಸಾಮಾನ್ಯತೆಗಳು ಪರಮಾವಧಿಕ ಅಥವಾ ಪೂರ್ಣ ಸ್ವರೂಪದವುಗಳಲ್ಲ. ಅವು Finite universals ಪರಿಮಿತ ವ್ಯಾಪ್ತಿಗಳನ್ನುಳ್ಳ ಸಾಮಾನ್ಯತೆಗಳು ಅಥವಾ ಜಾತಿಗಳು. ಏಕೆಂದರೆ, "Kant's transcendental dialectic has proved that the forms of sensibility and understanding cannot be emlployed beyond the experience (of the empirical world) in order to define the nature of metaphysical entities – ಕ್ಯಾಂಟನ ಅತೀಂದ್ರಿಯ ತರ್ಕಸಮರ್ಥನ ಶಾಸ್ತ್ರವು–ಇಂದ್ರಿಯಪ್ರತ್ಯಕ್ಷದ ಮತ್ತು ತಿಳಿವಳಿಕೆಯ ರೂಪ(ಆಕಾರ)ಗಳನ್ನು ವ್ಯಾವಹಾರಿಕ ಜಗತ್ತಿನ ಆಚೆಗೆ ಅತಿಭೌತ ಪದಾರ್ಥಗಳನ್ನು ಲಕ್ಷಣಿಸುವುದಕ್ಕೆ ಬಳಸಲು ಸಾಧ್ಯವಿಲ್ಲವೆಂದು ಸಿದ್ಧಮಾಡಿದೆ". ಅದರ ಪ್ರಕಾರ ಅತೀಂದ್ರಿಯ ಲೋಕದಲ್ಲಿ ನಾನಾತ್ವವನ್ನು ಕಲ್ಪಿಸುವುದು ಕೇವಲ ಕಲ್ಪನಾವಿಲಾಸವಾಗಿ ಬಿಡುತ್ತದೆ. ಹಾಗೇ ಕೇವಲವೆನ್ನಿಸಿದೆಲ್ಲವೂ ನಿತ್ಯ ಅಸ್ತಿತ್ವವುಳ್ಳದ್ದಾಗದು; ಅದರ ನಿತ್ಯತೆ ಕಲ್ಪನೆ (Concept)ಯ ಅಥವಾ ಭಾವದ ರೂಪದಲ್ಲಿ ಎಲ್ಲಾದರೂ ಒಂದೆಡೆ ಅಭಿಜ್ಞಾತವಾಗಿಯೋ ಅನಭಿಜ್ಞಾತವಾಗಿಯೋ ಉಳಿದೀತೆಂಬ ಹಾರಯಿಕೆಯಷ್ಟೆ. ಕೈವಲ್ಯವು ತನ್ನತನ, ಅದುತನ; ತತ್ವ, ಅದರ ಭಾವ. ನಿತ್ಯತೆಯು ಅಸೀಮ, ಅಪ್ರಮೇಯ, ಅಪೂರ್ಣವಾಗಿ ಕಲ್ಪನೀಯ, ಅಂಗಾಂಗಿ ಭಾವರಹಿತ. ನಿತ್ಯತೆಗಳೆಂದಾಗ ಅವು ವೈಟ್‌ಹೆಡ್ಡನ ಸಾಮಾನ್ಯತೆಗಳಂತೆಯೇ ಪರಿಮಿತ ಕಾಲವಿಭಾಗಗಳಾಗಿ ಬಿಡುತ್ತವೆ. ಆದುದರಿಂದ ಭಾರತೀಯ ಪರಮಸತ್ಯವು "ಏಕಂ ನಿತ್ಯಂ ಸರ್ವದಾ ಸಾಕ್ಷಿಭೂತಂ"– ಏಕವೂ ನಿತ್ಯವೂ ಮತ್ತು ಮಿಂಕೋವಸ್ಕಿ ಹೇಳಿದಂತೆ ದೇಶ–ಕಾಲಗಳ ಏಕೀಕೃತ ಕಲ್ಪನೆ ಇರುವ ಮಟ್ಟದಲ್ಲಿ ಮೂಲ ಸತ್ಯವು (ಜಡ ಕೂಡ) ನಿಷ್ಕ್ರಿಯ, ಅಚಲ,

ಸಾಕ್ಷಿಭೂತ. ದೇಶ–ಕಾಲಗಳ ಕಲ್ಪನೆಗಳು ಪ್ರತ್ಯೇಕವಾದಾಗ ಮಾತ್ರ ಚಲ ಘಟನೆಗಳು ಜಗತ್ತಿನಲ್ಲಿ ಉದಯಿಸುತ್ತವೆ. ದೇಶ ಕಾಲೈಕ್ಯದಲ್ಲಿ ಯಾವ ಘಟನೆಯೂ ಘಟಿಸದು: ಅದು ದೇಶ–ಕಾಲಗಳು ಭಿನ್ನವೆಂದು ತೋರಿದಾಗ ಘಟಿಸುವ ಘಟನೆಗಳೆಲ್ಲವುಗಳ ಹಿನ್ನೆಲೆಯ ಮೂಲ ರೂಪ. ಪ್ರತ್ಯಕ್ಷ ಹಾಗೂ ತಿಳಿವಳಿಕೆಗಳ ಪ್ರತಿಮೆಗಳೆಲ್ಲವೂ ಪ್ರಮೇಯಗಳು; ವ್ಯಾವಹಾರಿಕ (Empirical, Phenomenal) ಘಟನೆಗಳೂ ಹಾಗೇ ಪರಿಮಿತತೆಗಳನ್ನು ಉಳ್ಳಂಥವುಗಳು. ಪರಿಮಿತತೆ ನಿಶ್ಚಿತತೆಗೆ, ಸ್ಪಷ್ಟತೆಗೆ, ನಶ್ವರತೆಗೆ, ಸಕ್ರಿಯತೆಗೆ, ರೂಪಾಂತರೀಕರಣಕ್ಕೆ ಮತ್ತು ಚಲತ್ವಕ್ಕೆ ಕಾರಣ. ಅಪರಿಮಿತತೆ ಇದ್ದಲ್ಲಿ ಉಕ್ತಭಾವಗಳೊಂದೂ ಇರುವುದಿಲ್ಲ. ದೇವರ ಸಾರ್ವಭೌಮನಿಯಾಮಕತ್ವವನ್ನು ವೈಟ್‌ಹೆಡ್ ಒಪ್ಪಿರುವುದರಿಂದ ಅವನು ಹೇಳುವ ನಿತ್ಯ "ಸಾಧ್ಯತೆಗಳು" ದೇವರ ಸರ್ಜನಾತ್ಮಕವಾದ ಶಕ್ತಿ, ಮಾಯೆ, ಪ್ರಕೃತಿ ಎನ್ನಬಹುದು. ಮಾಯೆಯಿಂದ ದೂರವಿರುವ ದೇವರ ಕಲ್ಪನೆ ನಿರ್ಗುಣಾಧೃತ; ಅದನ್ನು ಬಳಸುವ ದೇವರ ಕಲ್ಪನೆ ಸಗುಣಾತ್ಮಕ, ಈಶ್ವರಾತ್ಮಕ. ದೇವರೊಡನೆ ಇತರ ನಿತ್ಯಪದಾರ್ಥಗಳನ್ನು ಒಪ್ಪುವುದು ಆಭಾಸಿಕವೇ ಆದ ದ್ವೈತವಾದ ಅಥವಾ ನಾನಾತ್ವವಾದ. ಅದು ಕ್ಯಾಂಟ್ ಖಂಡಿತವಾಗಿದೆ. ನಾನಾತ್ವದಲ್ಲಿ ತೋರುವ ಏಕತ್ವವು ನಿತ್ಯ; ನಾನಾತ್ವವು ಅನಿತ್ಯ ಅಥವಾ ಪರಿಣಾಮಿ ನಿತ್ಯ. ಹಾಗಲ್ಲವಾದರೆ ಏಕತ್ವ–ನಾನಾತ್ವಗಳ ಸ್ವರೂಪಭೇದವು ಅಕಲ್ಪನೀಯವಾಗುತ್ತದೆ. ಅನಿತ್ಯ ಏಕತ್ವಗಳ ಗುಂಪೇ ನಾನಾತ್ವ; ನಾನಾತ್ವವು ನಿತ್ಯ ಏಕತ್ವದಲ್ಲಿ ಕಲ್ಪನೀಯವಲ್ಲದೆ (ಅದು ಅಪ್ರಮೇಯವಾದುದರಿಂದ), ಅದರಲ್ಲಿ ಇದಿದೆ ಎನ್ನುವುದು ಕಲ್ಪನಾದೋಷ; ನಾನಾತ್ವವು ವ್ಯಾಪ್ಯ, ನಿತ್ಯ ಏಕತ್ವವು ವ್ಯಾಪಕ. ಕಲ್ಪನಾ ಸ್ವಾಚ್ಛಂದ್ಯವು ಅಸಂಬದ್ಧ ಪ್ರಲಾಪ.

ಹಾಗೇ ಜಡಪ್ರಕೃತಿಯ ಭೌತವು ಸರ್ವಮೂಲವೆಂದು ಹೊರಡುವುದು ಕಲ್ಪನಾ ಸ್ವಾಚ್ಛಂದ್ಯವಾಗುತ್ತದೆ. ಜೀವ–ಜ್ಞಾನಕ್ಕೆ ಇರುವ ವ್ಯಾಪಕತೆ ಜಡಶಕ್ತಿಗಿಲ್ಲ. ಅದು ವ್ಯಾಪಕ, ಇದು ವ್ಯಾಪ್ಯ. ಹೀಗಿರುವಾಗ ಜೀವ–ಜ್ಞಾನ (ಚೈತನ್ಯ) ಶಕ್ತಿಯು ಜಡಕ್ರಿಯೆಯ ವಿಕಾಸವೆಂದು ಹೇಳುವುದು ಅಸಂಬದ್ಧ, ಅಸಂಗತ. ಘನ, ದ್ರವ, ಅನಿಲರೂಪಗಳಾಗಲಿ, ಕ್ರಿಯಾರೂಪಗಳಾಗಲಿ, ಶಕ್ತಿರೂಪಗಳಾಗಲಿ, ಚೈತನ್ಯದಷ್ಟು (ಜೀವಶಕ್ತಿಜ್ಞಾನ ಅಥವಾ ಪ್ರಜ್ಞಾಶಕ್ತಿಯಷ್ಟು) ಸೂಕ್ಷ್ಮವೂ ಅದರಿಂದಲೇ ವ್ಯಾಪಕವೂ ಅಲ್ಲ. ಆದುದರಿಂದಲೇ ಭಾರತೀಯ ವೇದಾಂತವು ಬ್ರಹ್ಮನೆಂಬ ಅಥವಾ ಆತ್ಮವೆಂಬ ಶುದ್ಧ ಚೈತನ್ಯವನ್ನೇ ಸರ್ವಮೂಲವೆಂದು ಹೊರಡುತ್ತದೆ. ಈ ಔಚಿತ್ಯವನ್ನು ಚಾರ್ವಾಕರಾಗಲಿ, ಪಾಶ್ಚಾತ್ಯ ನಿರೀಶ್ವರ ದ್ರವ್ಯ–ಕ್ರಿಯಾವಾದಿಗಳಾಗಲಿ ಕಂಡುಕೊಳ್ಳಲಿಲ್ಲ. ವ್ಯಾಪ್ತಿ ಕಲ್ಪನೆಯ ಶುದ್ಧತೆಯನ್ನೇ ತರ್ಕಶುದ್ಧತೆ ಅವಲಂಬಿಸಿದೆ. ತರ್ಕದ ಸ್ವರೂಪವೇ ಊಹೆ(Imagination). (Incoherent) ಪರಸ್ಪರ ಹೊಂದಿಕೆ ಇಲ್ಲದ ಊಹೆಗೆ ತನ್ನನ್ನೇ ತಾನು ನಂಬಲಾರದ ಗತಿಯು ಪ್ರಾಪ್ತವಾಗುತ್ತದೆ. ಗರ್ಭಶಾಸ್ತ್ರ(Embryology)ದಲ್ಲಿ ಏಕೈಕವಾದ ಶುಕ್ಲ–ಶೋಣಿತ ಕಣವು ಸಾವಿರಾರು ವಿಧದ ಗುಣ–ಶಕ್ತಿಗಳನ್ನುಳ್ಳ ಕಣಗಳನ್ನು ಹಡೆಯುವ ಕಾರಣ–ಕಾರ್ಯಸಂಬಂಧವು ಮಾಯಾಶಕ್ತಿಗೆ (ಅಧ್ಯಾಸೋತ್ಪಾದಕ ಶಕ್ತಿಗೆ) ಸರಿಸಮವಾಗಿದೆ. ನಾನಾ ಕಾರಣಗಳಿಂದ ಏಕಕಾರ್ಯ

ಉಂಟಾಗುವುದು ಇಂದ್ರಿಯದ ಬಾಹ್ಯಪ್ರತ್ಯಕ್ಷಕ್ಕೆ ಗೋಚರ. ಏಕಕಾರಣದಿಂದ ನಾನಾ ಕಾರ್ಯರೂಪಗಳು ಉತ್ಪನ್ನವಾಗುವುದು ಗರ್ಭೋತ್ಪತ್ತಿ–ವಿಕಾಸಗಳ ಶಾಸ್ತ್ರಕ್ಕೆ ಗೋಚರ. ಕಾರಣದಲ್ಲಿ ತೋರದ (ಶುದ್ಧ ಚೈತನ್ಯದಲ್ಲಿಲ್ಲದ) ಗುಣಧರ್ಮಗಳು ಕಾರ್ಯದಲ್ಲಿ (ವಿಶ್ವದಲ್ಲಿ) ತೋರಿ ಬರುವುದರಿಂದಲೇ ವೇದಾಂತವು ಈ ಅದ್ಭುತ ಕಾರ್ಯಕಾರಣಭಾವವನ್ನು ವಿವರ್ತವೆಂದು ಹೇಳಿದೆ.

"ಸಾಪೇಕ್ಷತ್ವಾದನಾದಿತ್ವಾದ್ವೈಚಿತ್ರ್ಯಾದ್ ವಿಶ್ವವೃತ್ತಿತ:
ಪ್ರತ್ಯಾತ್ಮ ನಿಯಮಾದ್ ಭುಕ್ತೇರಸ್ತಿಹೇತುರಲೌಕಿಕಃ"

ಎಂದು ಉದಯನಾಚಾರ್ಯನು ತನ್ನ ನ್ಯಾಯಕುಸುಮಾಂಜಲಿಯಲ್ಲಿ ವಿಶ್ವದ ಮೂಲ (ಆತ್ಯಂತಿಕ, ಆದಿ) ಕಾರಣವು ಅಲೌಕಿಕ, (Transcendental) ಅತೀಂದ್ರಿಯ, ಅತಿಮಾನಸ, ಅತಿಭೌದ್ಧಿಕ ಎಂದು ಸಿದ್ಧ ಮಾಡಿದ್ದಾನೆ. ಇಂದ್ರಿಯ, ವಿಜ್ಞಾನಸಾಧನ, ಭೌದ್ಧಿಕವೆನ್ನಿಸಿರುವ ತರ್ಕ ಮುಂತಾದ ಪ್ರತಿಯೊಂದೂ ಪರಿಮಿತ ಶಕ್ತಿಸಂಪನ್ನ ಪದಾರ್ಥಗಳಾಗಿರಲು ವಿಶ್ವದ ಪರಿಮಿತತೆಯೇ ಕಾರಣ; ಅವೆಲ್ಲವೂ ವಿಶ್ವಾಂತರ್ಗತ, ವಿಶ್ವವನ್ನು ಒಳಹೊರಗಿಂದ ವ್ಯಾಪಿಸಲು ಶಕ್ತವಾದವುಗಳಲ್ಲ. ಜ್ಞಾನದ ಸಾಮಾನ್ಯ ಸಾಧನವಾದ ಹೋಲಿಕೆ (Comparison, analogy) ಕೂಡ ವಿಶ್ವಾಂತರ್ಗತ. ಅದರಿಂದಲೇ ಎಲ್ಲ ಧರ್ಮಗಳ ದೇವರೂ ವಿಶ್ವದಲ್ಲಿಯ ಒಂದಲ್ಲ ಒಂದು ಪದಾರ್ಥವನ್ನೋ ಗುಣಪುಂಜವನ್ನೋ ಪರಮ ಪ್ರಮಾಣದಲ್ಲಿ ಹೊಂದಿರುವಂತೆ ಕಲ್ಪಿತನಾದದ್ದು. ವಿಶ್ವೋತ್ತರ ಪದಾರ್ಥದ ಕಲ್ಪನೆ ತರ್ಕ (ಊಹಾ) ಶಕ್ತಿಗೆ ಅರ್ಧ ನಿಲುಕುತ್ತದೆ, ಪೂರ್ಣ ನಿಲುಕದು. ಅದರಿಂದಲೇ ಅದನ್ನು ಉಕ್ತ ಸಾಧನಗಳೆಲ್ಲವುಗಳಿಂದಲೂ ಭಿನ್ನವಾದ ಪ್ರತಿಭೆ (ಆತ್ಮಿಕ ಶಕ್ತಿ)ಯಿಂದ (Intuition) ಸಾಕ್ಷಾತ್ಕರಿಸಿಕೊಳ್ಳಬೇಕೆಂದು ವೇದಾಂತವು ಹೇಳಬೇಕಾಯಿತು. ಆದರೆ ವಿಶ್ವವನ್ನು ಒಳ ಹೊರಗೆ ಒಂದು ಪದಾರ್ಥ ವ್ಯಾಪಿಸಿದರೆ ವಿಶ್ವವೆಂಬ ಭಿನ್ನ ಪದಾರ್ಥಕ್ಕೆ ಎಲ್ಲಾದರೂ ಉಳಿದಿರಲು ಜಾಗವನ್ನು ಕಲ್ಪಿಸಲು ಸಾಧ್ಯವೇ? ಅದರಿಂದಲೇ ವಿಶ್ವವೊಂದು appearance ಆಭಾಸ, ಅದಕ್ಕೆ ವಿಶ್ವೋತ್ತರ ನಿತ್ಯಸತ್ಯವಾದ ಶುದ್ಧ ಚೈತನ್ಯವೊಂದೇ ಆಧಾರ ಎಂದು ಕಲ್ಪನಾ ಸಾಂಗತ್ಯವನ್ನು ತರುವ ಒತ್ತಾಯ ಉಂಟಾಯಿತು.

## ಫ್ರಾನ್ಸಿಸ್ ಹರ್ಬರ್ಟ್ ಬ್ರಾಡ್ಲಿ (೧೮೪೬–೧೯೨೪)

ಮೇಲೆ ಹೇಳಿದ ಕಾರಣದಿಂದ ಬ್ರಿಟಿಷ್ ತತ್ವಜ್ಞಾನಿಯಾದ ಬ್ರಾಡ್ಲಿಯು ವ್ಯವಹಾರವಾದದಲ್ಲಿಯ ಸಂವೇದನಾವಾದದ ಹಾಗೂ ಪ್ರಯೋಜನವಾದದ ಅತಿರೇಕಗಳನ್ನು ತೊಳೆದು ಶುದ್ಧಮಾಡಲೆಂದು Absolute Idealism ಕೇವಲ ಧ್ಯೇಯವಾದವನ್ನು ಮಂಡಿಸಿದನು. ಅದರಲ್ಲಿ Degrees of Truth ಸತ್ಯದ ಅಂಶಗಳು ಅಥವಾ ಸತ್ಯವು ವಿವಿಧ ಆಂಶಿಕತೆಯಿಂದ ಕೂಡಿದ್ದು ಎಂಬ ಸಿದ್ಧಾಂತವನ್ನು ಸಾರಲಾಗಿದೆ; ಆ ಮೂಲಕ ಬ್ರಾಡ್ಲಿಯು ಕೊನೆಯಲ್ಲಿ Platonic Mysticism ಪ್ಲೇಟೋ ಯೋಗಸಮಾಧಿವಾದಕ್ಕೆ ಬಂದು ಮುಟ್ಟಿದನು. ಅದನ್ನು Impersonalistic Monism ಅವೈಯಕ್ತಿಕ ಅದ್ವೈತವೆಂದೂ

ಹೇಳುವುದುಂಟು. ಯೋಗ ಅಥವಾ ಅನುಭಾವವು ನೇರವಾದ ದೇವನಿಷ್ಠ ಸಾತ್ಮ್ಯಸಂಪರ್ಕ (Direct Communion with God)ದಿಂದ ಲಕ್ಷಣಿಸಲ್ಪಟ್ಟಿದೆ.

**ಟಿಪ್ಪಣಿಗಳು**

ಶ್ರೀ ರಮಣರು ಆಂಶಿಕ ಸತ್ಯತೆಯ ವಾದವನ್ನು ಒಪ್ಪರು. ಏಕೆಂದರೆ ಪರಮ ಸತ್ಯವು ಅಖಂಡ, ಅವಿಭಾಜ್ಯ, ಏಕಮೇವಾದ್ವಿತೀಯ ಎಂಬ ಅನುಭವಕ್ಕೆ ಅದು ವಿರುದ್ಧವಾಗುತ್ತದೆ. ಈ ಪ್ರಕಾರ ಧ್ಯೇಯವಾದೀಯ ತತ್ವಜ್ಞಾನದಲ್ಲಿ ಯಾವಾಗಲೂ ದೃಷ್ಟಿದ್ವಯವಿರುತ್ತದೆ. ಶ್ರೀರಮಣರದು ಸಿದ್ಧರ ದೃಷ್ಟಿ; ಜಗತ್ತಿಗೆ ಒಂದಲ್ಲ ಒಂದು ತರದ ಸತ್ಯತೆಯನ್ನು ಅನ್ವಯಿಸುವವರದು ಸಾಧಕರ ದೃಷ್ಟಿ. ಆಯಾ ದೃಷ್ಟಿ ಅವರವರಿಗೆ ಅನಿವಾರ್ಯ, ಅತ್ಯಾಜ್ಯ ಎಂಬುದನ್ನು ಗಮನಿಸಿದರೆ ದೃಷ್ಟಿವಿರೋಧ ಎಂದೂ ನಿತ್ಯವಲ್ಲ, ಅವಸ್ಥಾಭೇದವನ್ನು ಆಧರಿಸಿದ್ದು ಮತ್ತು ಸಾಧಕನು ಸಿದ್ಧನಾದ ಮೇಲೆ ಮಾತ್ರ ರಮಣವಾದವು ಅಖಂಡನೀಯ ಸತ್ಯ ಎಂಬುದು ಗೊತ್ತಾಗುತ್ತದೆ. ಅಂಶಿ–ಅಂಶ (ಇಡಿ–ಬಿಡಿ) ಭಾವವು ವಿಶ್ವಗತವಾದ ಬುದ್ಧಿಗೆ ಅವಿನಾಭಾವಿಯಾದದ್ದು; ಅದಿಲ್ಲದೆ ಅದು ಏನನ್ನೂ ಕಲ್ಪಿಸಲಾರದು. ಆದುದರಿಂದಲೇ ಕೇವಲಾದ್ವೈತ ವಿದ್ವಾಂಸರೂ ಭಾರತದಲ್ಲಿ ವ್ಯಾವಹಾರಿಕ ಸಂದರ್ಭಗಳಲ್ಲಿ ಪಾರಮಾರ್ಥಿಕ ದೇವರ ಅವತಾರ, ಅಂಶ, ಶಕ್ತಿ, ಭಾಗ ಎಂದು ಮುಂತಾಗಿ ನಾನಾತ್ವ ಬೋಧಕ ಪದಗಳನ್ನು ಬಳಸುತ್ತಾರೆ.

ವ್ಯಾಸವಾದಿಗಳಾದ ಶ್ರೀಶಂಕರರ ಪ್ರಕಾರ ಕೂಡ ವಿಶ್ವದ (ಅಜ್ಞಾನಿಗಳ) ದೃಷ್ಟಿಯಲ್ಲಿ ಬ್ರಹ್ಮನು ಸಗುಣ, ಈಶ್ವರ, ದೇವ, ವ್ಯಕ್ತಿತ್ವ ಸಂಪನ್ನವಾದ ಶಕ್ತಿ. ಅವರ ಧ್ಯೇಯವಾದವಾದರೋ ಸಂಪೂರ್ಣವೂ ಕೇವಲವೂ ಆದ ಬ್ರಹ್ಮವೆಂಬ ಆತ್ಮಸಾರವುಳ್ಳ ಐಕಾಂತಿಕ ಸತ್ಯದ ವಾದ. ಬ್ರಹ್ಮವು ಅವೈಯಕ್ತಿಕ (Impersonal). ಆದರೆ ಬ್ರಹ್ಮಸಾತ್ಮ್ಯ (ಸಾಯುಜ್ಯ) ಲಭಿಸುವವರೆಗೆ ಸಾಧಕನು ವೇದಾಂತದ ಪರಮಸತ್ಯದ ಬಗೆಗೂ ವ್ಯಾವಹಾರಿಕ ಕಲ್ಪನೆಯ ಪರಿಭಾಷೆಯನ್ನಲ್ಲದೆ ಇನ್ನಾವುದನ್ನೂ ಬಳಸಲಾರ. ಬ್ರಾಡ್ಲಿಯಾದರೂ ಮೊದಲು ಅಂಶಸತ್ಯ ಸಿದ್ಧಾಂತವನ್ನು ಹೇಳಿದ; ಕೊನೆಯಲ್ಲಿ ಯೋಗಸಮಾಧಿವಾದದಲ್ಲಿ ಮುಗಿತಾಯವನ್ನು ಕಂಡನು. ನಿರ್ಗುಣ ಬ್ರಹ್ಮರೂಪದ ಪರಾತ್ಪರ ದೇವರಲ್ಲಿ ಐಕಾತ್ಮ್ಯಭಾವವನ್ನು ಅನುಭವಿಸುವುದೇ ಯೋಗ ಸಮಾಧಿಯ ಪರಾಕಾಷ್ಠೆ.

ಅಸೀಮವಾದ ಪರಮಸತ್ಯಕ್ಕೂ ಪರಿಸೀಮಿತವಾದ ವಿಶ್ವಸತ್ಯಕ್ಕೂ ಒಂದೇ ಸ್ವರೂಪದ ನಿಕಷವಿದ್ದರೆ ಅಂಥ ಭೇದವನ್ನು ಮಾಡಲು ನಮಗೆ ಅಧಿಕಾರವಿಲ್ಲ. ನಿಕಷಗಳು (ಅಥವಾ ಮಾನದಂಡಗಳು) ಭಿನ್ನಸ್ವರೂಪದವುಗಳಾಗಿರುವುದರಿಂದಲೇ ನಿತ್ಯ (ಪರಮ) ಸತ್ಯ ಬೇರೆ, ಅನಿತ್ಯ (ಪರಿಣಾಮಿ ನಿತ್ಯ) ಸತ್ಯ ಬೇರೆ ಎಂದು ವಿಭಾಗಿಸಲು ನಮಗೆ ಅಧಿಕಾರ ಬರುತ್ತದೆ. ಅನಿತ್ಯಸತ್ಯವನ್ನು ನಿತ್ಯಸತ್ಯದ ಸ್ವರೂಪದಿಂದ ತೀರ ಭಿನ್ನವಾದ ಸ್ವರೂಪವುಳ್ಳದ್ದೆಂದು ತಿಳಿದ ಮೇಲೆ ಅದನ್ನು ಆಭಾಸ (Appearance) ಎಂದು ಕರೆಯುವ ಅಗತ್ಯವುಂಟಾಯಿತು. ಆಭಾಸ (ಅವಿದ್ಯೆ, ಮಾಯೆ, ವಿವರ್ತ)ವನ್ನು ಸತ್ಯವೆನ್ನುವುದರಲ್ಲಿ ಔಚಿತ್ಯವನ್ನು ಕಾಣದವರು

ಅದನ್ನು ಅಸತ್, ಅಸತ್ಯ ಎಂದರು; ಇತರರು ವ್ಯಾವಹಾರಿಕ ಪ್ರಾತಿಭಾಸಿಕ ಸತ್ಯವೆಂದೇ ಹೇಳಿದರು. ಆಭಾಸವು ಒಂದು ತರಹದ ವಿಕೃತ ಪ್ರತಿಬಿಂಬ; ಜಗತ್ತು ಬ್ರಹ್ಮದ ವಿಕೃತ ಪ್ರತಿಬಿಂಬ. ಅದರಿಂದಲೇ ಸತ್ಯದ ದೃಷ್ಟಿಯಿಂದ ಹೆಸರಿಸುವುದರಲ್ಲಿ ಕೆಲಮಟ್ಟಿನ ಗೊಂದಲ ಉಂಟಾದದ್ದು. ತಾತ್ಪರ್ಯಗ್ರಹಣ ಮಾಡಬಲ್ಲವರಿಗೆ ಇದರಿಂದ ಗೊಂದಲವುಂಟಾಗದು. ನಾಮ, ರೂಪ (ಆಕಾರ), ದೇಶ, ಕಾಲ ಬಣ್ಣ ಮುಂತಾದ ಗುಣಗಳು ಇಂದ್ರಿಯ ಪ್ರತ್ಯಕ್ಷದ ಕಕ್ಷೆಯಲ್ಲಿ ಮತ್ತು ತನ್ನಿಷ್ಠ ಅನುಮಿತಿಯ ಕಕ್ಷೆಯಲ್ಲಿ ಬರುತ್ತವೆ. ಇವೇ ಪರಿಸೀಮನದ ಕಾರಕಗಳು. ಸತ್, ಚಿತ್, ಆನಂದ, ಸತ್ಯ, ಜ್ಞಾನ, ಅನಂತ ಮುಂತಾದವುಗಳನ್ನು ಧರ್ಮ, ಗುಣ, ಉಪಾಧಿ, ವಿಶೇಷಣಗಳ ಕಕ್ಷೆಯಿಂದ ಹೊರಗಿಟ್ಟದ್ದು ಅನಿವಾರ್ಯತೆಯಿಂದ, ವ್ಯಾವಹಾರಿಕತೆ ಕೊಟ್ಟ ಅಸಹಾಯಕತೆಯಿಂದ. ಈ ಪರಂಪರೆಯನ್ನು ಪ್ರಶ್ನಿಸುವುದು ಒಣ ತರ್ಕವೆನ್ನಿಸುತ್ತದೆ. ಸತ್ವ, ರಜಸ್ಸು, ತಮಸ್ಸುಗಳೆಂಬ ದ್ರವ್ಯ–ಗುಣ–ಜ್ಞಾನ–ಕ್ರಿಯಾಸಾರಗಳು ಸಾಂಖ್ಯರು ಹೇಳುವಂತೆ ಜಡಪ್ರಕೃತಿಯ ಕಕ್ಷೆಯಲ್ಲಿ ಬರುವುವೆಂಬುದು ವೈಜ್ಞಾನಿಕವಾದರೂ "ಶುದ್ಧ ಸತ್ವ", "ಶುದ್ಧ ಬುದ್ಧಿ" ಎಂಬ ಪದಗಳಿಂದ ಶುದ್ಧ ಆತ್ಮ (ಪ್ರಪಂಚವನ್ನವಲಂಬಿಸದ ಚೈತನ್ಯ)ವನ್ನು ವರ್ಣಿಸಲು ಕೆಲವರು ಹೊರಟದ್ದು, "ಸಿಹಿಯನು ತಿಂದಿಹ ಮೂಕನವೊಲು ಇದೆ ಗಹನವು ಅದರ ವಿಚಾರ" ಎಂಬಂಥ ವಾಗ್ಬಂಧನಕಾರಕ ಅನುಭವದ ಹಿಡಿತದಲ್ಲಿ ಸಿಕ್ಕಿದ ಕಾರಣದಿಂದ. ಪರಮ ಸಮಾಧಿಯನ್ನು ಯೋಗವು ಅಸಂಪ್ರಜ್ಞಾತ (Not known clearly) ಎಂದು ಕರೆದಿರುವುದು "ಮೌನಂ ವ್ಯಾಖ್ಯಾನಂ" ಎಂಬ ಪ್ರಸಿದ್ಧಿಗೆ ಕಾರಣ. "Mysticism, East and West" ಎಂಬ ಗ್ರಂಥದಲ್ಲಿ ರುಡೋಲ್ಫ್ ಒಟ್ಟೊ ಕೊಟ್ಟ ಅನುಭಾವ (ಯೋಗ) ವರ್ಣನೆಗಳನ್ನು ಓದುವುದು ಈ ಸಂದರ್ಭದಲ್ಲಿ ಹೆಚ್ಚು ಬೆಳಕನ್ನು ಬೀರಬಲ್ಲದಾಗಿದೆ.

"All problems of existence are essentially problems of harmony – ಬದುಕಿನ ಎಲ್ಲ ಸಮಸ್ಯೆಗಳೂ ಸಾರತಃ ಸಾಮಶ್ರುತ್ಯದ ಸಮಸ್ಯೆಗಳು" ಎಂದರು ಶ್ರೀ ಅರವಿಂದರು. ಭೌತಿಕವು (Matter ಜಡಪ್ರಕೃತಿ) ಜೀವದ (Life) ಒಂದು ಪ್ರಚ್ಛನ್ನ ರೂಪ; ಜೀವವು ಪ್ರಚ್ಛನ್ನ ಪ್ರಜ್ಞೆಯ ಒಂದು ರೂಪ. "The attempt to deny or stifle a truth because it is yet obscure in its outward workings and too often represented by obscurantise superstition or a crude faith, is itself a kind of obscurantism –ಒಂದು ಸತ್ಯವು ತನ್ನ ಬಾಹ್ಯ ಕ್ರಿಯಾರೂಪದಲ್ಲಿ ಇನ್ನೂ ಅಸ್ಪಷ್ಟವಾಗಿದೆ ಅಥವಾ ಅನೇಕ ವೇಳೆ ಅಸ್ಪಷ್ಟತಾವಾದಿತ್ವದ ಕುರುಡು ನಂಬಿಗೆಯ ಅಥವಾ ಅಸಂಸ್ಕೃತ ಶ್ರದ್ಧೆಯ ಮೂಲಕ ಪಡಿಮೂಡಿದೆ– ಎಂಬಷ್ಟೇ ಕಾರಣದಿಂದ ಅದನ್ನು ಇಲ್ಲವೆನ್ನುವುದು ಅಥವಾ ಪ್ರಕಟವಾಗದಂತೆ ದಮನ ಮಾಡುವುದೂ ಒಂದು ವಿಧದ ಅಸ್ಪಷ್ಟತಾವಾದಿತ್ವವೇ ಆಗುವುದು" ಎಂದು ಕೊಟ್ಟ ಎಚ್ಚರಿಕೆಯು ಶ್ರೀ ಅರವಿಂದರದೇ. ಅವರೇ ಮುಂಬರಿಸಿದ್ದಾರೆ:

"ಭೌತನಿಸರ್ಗದಲ್ಲಿ ವಿಕಾಸವಿರುವುದು ನಿಜವಾದರೆ ಮತ್ತು ಆ ವಿಕಾಸವು ಅರಿವು ಉಳ್ಳ ಜೀವದ ಇರವಿನದಾದರೆ (ಅರಿವು ಅಥವಾ ಪ್ರಜ್ಞೆ ಮತ್ತು ಜೀವಶಕ್ತಿ ಎಂಬೆರಡು ಆ

ಇರವಿನ ಕೇಂದ್ರಬಿಂದುಗಳೂ ಸಾಮರ್ಥ್ಯಗಳೂ ಆಗಿರುವುದರಿಂದ), ಈ ಇರವಿನ, ಅರಿವಿನ, ಜೀವದ ಪೂರ್ಣತೆಯೆಂಬುದೇ ನಮ್ಮ ಅಭಿವೃದ್ಧಿಯ ಗುರಿಯಾಗಿರಬೇಕು. ಆ ಗುರಿಯತ್ತ ನಾವು ಒಲೆದಿದ್ದೇವೆ. ನಮ್ಮ ಭವಿತವ್ಯದ ಪೂರ್ವದ ಅಥವಾ ಉತ್ತರಾವಧಿಯ ಅವಸ್ಥೆಯಲ್ಲಿ ಆ ಗುರಿಯು (ಧ್ಯೇಯವು, ಸತ್ಯವು) ಮೈದೋರಿಯೇ ತೀರುವುದು ಜೀವದ ಹಾಗೂ ಜಡದ ಮೊಟ್ಟ ಮೊದಲಿನ ಅಜ್ಞಾನಾವಸ್ಥೆಯಿಂದ ಹೊರಟು ಮೈದೋರಲಾರಂಭಿಸಿದ ಆತ್ಮ, ಚೈತನ್ಯ, ಸತ್ಯ ಎಂಬುದು ತನ್ನ ಇರವು ಅರಿವುಗಳ ಸಂಪೂರ್ಣ ಸತ್ಯವನ್ನು ಜೀವ–ಜಡಗಳಲ್ಲಿ ವಿಕಾಸಗೊಳಿಸುತ್ತದೆ. ಅದು ತನ್ನನ್ನೇ ತಾನು ಸೇರಬಹುದು– ಅಥವಾ ಅದರ ಗುರಿಯು ತನ್ನ ಪರಬ್ರಹ್ಮಪದವನ್ನು ಸೇರುವುದೇ ಆದರೆ, ಅದು ಹಾಗೆ ಹಿಂದಿರುಗಲೂಬಹುದು– ಆದರೆ ಆ ನಿವರ್ತನವು ಜೀವನದಲ್ಲಿ ನಿರಾಶೆಗೀಡಾಗಿ ಅಲ್ಲ, ಜೀವನದಲ್ಲಿಯ ತನ್ನ ಆಧ್ಯಾತ್ಮಿಕ (ಚೈತನಿಕ) ಪೂರ್ಣತೆಯ ಮೂಲಕವೇ. ಅಜ್ಞಾನಾವರಣದಲ್ಲಿ ನಡೆವ ನಮ್ಮ ವಿಕಾಸದಲ್ಲಿ ಆಗೀಗ ನಮಗೆ ಸುಖ–ದುಃಖಗಳುಂಟಾಗುತ್ತಿರುತ್ತವೆ. ಯಾವುದರಿಂದ? ಸ್ವಸ್ವರೂಪದ ಆವಿಷ್ಕಾರ ಮತ್ತು ಜಗತ್ ಸ್ವರೂಪದ ಆವಿಷ್ಕಾರಗಳಿಂದ, ಆ ವಿಕಾಸದ ಅರೆ–ಬೆರಕೆ ಸಿದ್ಧಿಗಳಿಂದ, ಅದರ ಸತತವಾದ ಶೋಧಕಾರ್ಯ ಮತ್ತು (ಶೋಧನೀಯ ಪದಾರ್ಥವು) ಕಣ್ಮರೆಯಾಗುವ ಸಂದರ್ಭಗಳಿಂದ. ಇದು ನಮ್ಮ ಮೊಟ್ಟ ಮೊದಲಿನ ಸ್ಥಿತಿ. ಇದು ಅನಿವಾರ್ಯವಾಗಿ ನಮ್ಮನ್ನು (ಪರಬ್ರಹ್ಮ) ಜ್ಞಾನದವರೆಗೆ ವಿಕಾಸಕ್ರಮದಿಂದ ಒಯ್ದೇ ತೀರಬೇಕು. ಆ ಜ್ಞಾನವೆಂದರೆ, ಆತ್ಮದ ಸ್ವಶೋಧ ಮತ್ತು ಸ್ವ–ಆವಿಷ್ಕಾರ, ನಮಗಿನ್ನೂ ಅತಿನಿಸರ್ಗವಾಗಿಯೇ ಉಳಿದಿರುವ ನಿಸರ್ಗದಲ್ಲಿರುವ (ಪರಾಪ್ರಕೃತಿಯಲ್ಲಿರುವ) ತನ್ನ ನಿಜವಾದ ಶಕ್ತಿಯಲ್ಲಡಗಿರುವ ದೇವತ್ವ (ದಿವ್ಯತೆ)ದ "ಆತ್ಮಾವಿಷ್ಕಾರ". ಅಂದರೆ ಆತ್ಮದ (ಶುದ್ಧ ಜೀವದ) ಸ್ವ–ಸ್ವರೂಪ ಜ್ಞಾನವು ಒಂದು ಮುಕ್ತಿ; ಪರಬ್ರಹ್ಮನಲ್ಲಿ ಆತ್ಮವು ಲೀನವಾಗುವುದು ಇನ್ನೊಂದು ವಿಧದ ಮುಕ್ತಿ. ಒಂದನ್ನು ಮೊದಲನೆಯ ಹಂತವೆನ್ನಬಹುದು, ಇನ್ನೊಂದನ್ನು ಕೊನೆಯ ಹಂತವೆನ್ನಬಹುದು. ಹೇಗೆಂದರೆ, ಜೀವಾತ್ಮನ ಮುಕ್ತಿಯು Higher supramental status ಉನ್ನತತರ ಅತಿಮಾನಸ ಸ್ಥಾನವೆನ್ನಲಾಗಿದೆ; ಅದು Highest ಅತ್ಯುನ್ನತ ಮಟ್ಟದ್ದಾದಾಗ ಬ್ರಹ್ಮೈಕ್ಯ ಹೊಂದಬಹುದು. ಮುಕ್ತಸ್ಥಿತಿಯೊಂದು ದಿವ್ಯಜೀವನ, ದೇವಸ್ಥ ಜೀವನ; ಅದರಲ್ಲಿ ಭೌತಿಕ ನಿಸರ್ಗದಲ್ಲಿ ಮೈದೋರಿದ ದಿವ್ಯದೃಷ್ಟಿ, ದಿವ್ಯಶಕ್ತಿ, ದಿವ್ಯಸುಖ ಇರುತ್ತವೆ. ಮುಕ್ತರು ದಿವ್ಯಮಾನವರು, ಅತಿಮಾನವರು; ಅವರು ಆತ್ಮಜ್ಞಾನಿಗಳು ಚೈತನಿಕ ಆತ್ಮವನ್ನು ಬೆಳೆಯಿಸಿ ಕೊಂಡವರು– ಆತ್ಮದ ಉತ್ಕಟತೆಯನ್ನೂ, ಒತ್ತಡವನ್ನೂ ಸಾಧಿಸಿಕೊಂಡವರು– ಅದರ ಮುಕ್ತಿಯನ್ನೂ ಅದರ ಸಾರ್ವಭೌಮವಾದ ಬೆಳಕು–ಶಕ್ತಿ–ಸೌಂದರ್ಯಗಳನ್ನು ಸಾಧಿಸಿಕೊಂಡವರು. ಮಾನವತೆಯ ಮೇಲಿನ, ಅದಕ್ಕೂ ಹೆಚ್ಚು ವ್ಯಾಪಕವಾದ ಧರ್ಮವೇ ಅತಿಮಾನವತೆ– ಅಲ್ಪವ್ಯಾಪ್ತಿಯ ಜೀವಾತ್ಮನು ಪರಮ ಮಹದ್ವ್ಯಾಪ್ತಿಯನ್ನು ಹೊಂದುವ ಜ್ಞಾನಿಜೀವನಕ್ರಮ– ಸುಖ–ದುಃಖಗಳಿಲ್ಲದ ಪರಮಾನಂದ ಸ್ಥಿತಿ, ಸಂಪೂರ್ಣ ಸಮಶ್ರುತಿಯ ಜೀವನ.

## ಹತ್ತು ವಾದ ಪ್ರಕಾರಗಳು

**೧. ಧ್ಯೇಯವಾದ:** ಆದರ್ಶವು ಯಾವ ಸಿದ್ಧಾಂತಕ್ಕೆ ಮೂಲಭೂತ ಮಾನದಂಡವೋ ಅದು ಧ್ಯೇಯವಾದ; ಮನಸ್ಸು, ಆತ್ಮ ಚೈತನ್ಯ, ಜೀವ ಅಥವಾ ಅವುಗಳಿಗೆ ಅತಿಮುಖ್ಯವೆನಿಸಿದ ಮೌಲ್ಯ–ಇವುಗಳನ್ನು ಒತ್ತಿಹೇಳುವ ಸಿದ್ಧಾಂತ. ಭೌತ (ಜಡಪ್ರಕೃತಿ)ವಾದಕ್ಕಿದು ವಿರುದ್ಧವಾದುದು. ಭೌತವಾದವು ದೇಶ, ಚಿತ್ರ, ಕಾಯ, ಇಂದ್ರಿಯ, ಮೌಲ್ಯಮಾಪನ ವಿಮುಖತೆ, ವಸ್ತುಸಂಗತಿ ಮತ್ತು ಯಂತ್ರಗಳಿಗೆ ಸಂಬಂಧಿಸಿದ ಅರ್ಥಗಳನ್ನು ಗಣ್ಯವೆನ್ನುತ್ತದೆ. ಧ್ಯೇಯವಾದವು ಅದೇಶ, ಅತಿದೇಶ, ಅಚಿತ್ರ, ಅಕಾಯ, ಅತೀಂದ್ರಿಯ, ಮಾನದಂಡ ಅಥವಾ ಮೌಲ್ಯಮಾಪನ ಮತ್ತು ಉದ್ದೇಶ, ಗುರಿ, ಪರಮಾರ್ಥ, ಆತ್ಯಂತಿಕ ಕಾರಣ, ಬೆಲೆ, ಒಳಿತು ಮುಂತಾದವುಗಳಿಗೆ ಸಂಬಂಧಿಸಿದ ಅರ್ಥಗಳನ್ನು ಪ್ರಧಾನವಾಗಿ ತೆಗೆದುಕೊಳ್ಳುತ್ತದೆ. ಕಲ್ಪನೆ ಅಥವಾ ಭಾವ, ಮನಸ್ಸು, ಚೈತನ್ಯ, ಪುರುಷ ಮುಂತಾದವುಗಳ ಅರ್ಥವಿಸ್ತಾರವನ್ನದು ಒಳಗೊಳ್ಳುತ್ತದೆ. ಪ್ಲೇಟೋವಿನ, ಪುರುಷನಿಷ್ಠ, ವಸ್ತುನಿಷ್ಠ, ನೈತಿಕ ಮುಂತಾದ ಧ್ಯೇಯವಾದಗಳು ಪಾಶ್ಚಾತ್ಯರಲ್ಲಿ ಪ್ರಸಿದ್ಧ.

**೨. ವಾಸ್ತವತಾವಾದ:** ಅಮೂರ್ತ ಅಥವಾ ಸಾಮಾನ್ಯ ಪದಗಳ ಅಥವಾ ಜಾತಿಗಳ ವಾಸ್ತವಿಕತೆಯನ್ನು ಎತ್ತಿ ಹಿಡಿಯುವ ಸಿದ್ಧಾಂತವೇ ವಾಸ್ತವತಾವಾದ. ಅವುಗಳ ವಾಸ್ತವಿಕತೆ ಕೆಲವು ಸಲ ಸಾಕ್ಷಾತ್ತಾದ ಭೌತಿಕ ಬಿಡಿವಸ್ತುಗಳ ವಾಸ್ತುವಿಕತೆಗಿಂತ ಹೆಚ್ಚಿನದೆಂದು ತಿಳಿದುಕೊಳ್ಳಲಾಗುತ್ತದೆ. ಸಾಮಾನ್ಯ ಧರ್ಮಗಳು ವಿಶಿಷ್ಟ ವಸ್ತುಗಳಿಗಿಂತ ಮೊದಲೇ ಇದ್ದಂಥವು. ನಾಮವಾದವು ಇವಕ್ಕೆ ವಿರುದ್ಧವಾದುದು. ಅದರ ಪ್ರಕಾರ ಬಿಡಿವಸ್ತುಗಳನ್ನಾಧರಿಸಿಯೇ ಸಾಮಾನ್ಯಧರ್ಮಗಳ ಅಸ್ತಿತ್ವವಿದೆ. ಶುದ್ಧಾಸ್ತಿತ್ವವಾದದ ಪ್ರಕಾರ (ಮೂಲಭೂತ ತತ್ವಗಳ, ವಸ್ತುಸಾರವಿಜ್ಞಾನದ, ಆತ್ಯಂತಿಕ ಪದಾರ್ಥಗಳ ಶಾಸ್ತ್ರದ ಪ್ರಕಾರ) (೧) ಸಾಮಾನ್ಯಧರ್ಮಗಳ ವಾಸ್ತುವಿಕತೆಯನ್ನು (ಸತ್ಯತೆಯನ್ನು) ಕೆಳಗಿಳಿಸುವುದು ತಪ್ಪು; ಅವುಗಳದು ಸಾರಗಳ ರಾಜ್ಯ; ಅವು ಸಾಧ್ಯವಾದ ಸಾಮಾನ್ಯಗಳು; ಬಿಡಿವಸ್ತುಗಳ ಅಸ್ತಿತ್ವದಷ್ಟೇ ಆದರೂ ಸತ್ಯತೆ ಅವುಗಳಿಗಿವೆ. (೨) ಪ್ರಮಾಣಶಾಸ್ತ್ರದ ಪ್ರಕಾರ ಇಂದ್ರಿಯ ಪ್ರತ್ಯಕ್ಷವು ಪರಿಮಿತವಾಗಿಯಾದರೂ ವಸ್ತುಗಳ ಸತತವಾದ ಸತ್ಯಚಿತ್ರಗಳನ್ನು ಕೊಡುತ್ತದೆ. ವಸ್ತುಪ್ರಪಂಚದ ನೇರವೂ ಅನುಗುಣಾತ್ಮಕವೂ ಆದ ಜ್ಞಾನವನ್ನು ಪಡೆಯುವುದು ಸಾಧ್ಯ. ಪ್ಲೇಟೋ–ಅರಿಸ್ಟಾಟಲರದು ಒಂದೊಂದು ವಿಧದ ವಾಸ್ತವತಾವಾದಗಳು. ವೈಟ್‌ಹೆಡ್, ಹಾರ್ಟ್ಮನ್ ಮತ್ತು ಅಲೆಕ್ಸಾಂಡರರದು ಆಧುನಿಕ ವಾಸ್ತವತಾವಾದಗಳು.

**೩. ವಿಚಾರವಾದ:** ವಿಚಾರದಲ್ಲಿ ಬೌದ್ಧಿಕ ಮತ್ತು ಆನುಮಾನಿಕ ಪ್ರಮಾಣಗಳಲ್ಲದೆ ಇಂದ್ರಿಯ ಪ್ರತ್ಯಕ್ಷವು ಸತ್ಯದ ನಿಕಷವಲ್ಲ. ಗಣಿತಶಾಸ್ತ್ರೀಯ ಕ್ರಮಗಳನ್ನು ತತ್ವಶಾಸ್ತ್ರದಲ್ಲಿಂದು ಅನುಪ್ರವೇಶ ಮಾಡಿದೆ. ಎಲಿಯಾಟಿಕ್ಕರು, ಪೈತಾಗೋರಿಯನ್ನರು. ನವಪ್ಲೇಟೋವಾದಿಗಳು, ಡೆಸ್ ಕಾರ್ಟಿಸ್, ಲಿಬ್ನಿಜ್, ಸ್ಪಿನೋಜ ಮತ್ತು ಧ್ಯೇಯವಾದಿಗಳು ವಿಚಾರವಾದದ ಪುರಸ್ಕೃತರು. ಇವರಲ್ಲಿ ನವಪ್ಲೇಟೋವಾದಿಗಳೂ ಧ್ಯೇಯವಾದಿಗಳೂ ಪ್ಲೇಟೋ ಹೇಳಿದ ವಿಚಾರದ (ತರ್ಕದ, ಅನುಮಾನದ) ಸ್ವಯಂಪೂರ್ಣತಾ ತತ್ವವನ್ನು ಸ್ವೀಕರಿಸಿದಂಥವರು.

**೪. ಜಡಪ್ರಕೃತಿವಾದ, ಭೌತವಾದ:** (೧) ಭೌತಪದಾರ್ಥ ಮಾತ್ರ ಇದೆ, ಅದಷ್ಟೇ ಸತ್ಯ. ಭೌತಪದಾರ್ಥವೇ ವಿಶ್ವದ ಮೂಲಭೂತ ಅಂಶ. ವಿಶ್ವವಸ್ತುವನ್ನು ಪರಮಾಣುಗಳನ್ನಾಗಿ ವಿಂಗಡಿಸಬಹುದು. ಇಂದ್ರಿಯ ಪ್ರತ್ಯಕ್ಷಕ್ಕೆ ಗೋಚರವಾಗುವ ಪದಾರ್ಥಗಳು, ಕ್ರಿಯಾನುಕ್ರಮಗಳು ಅಥವಾ ಹೂರಣಗಳು ಮಾತ್ರ ಸತ್ಯ. ಬುದ್ಧಿ, ಉದ್ದೇಶ ಅಥವಾ ಆತ್ಯಂತಿಕ ಕಾರಣಗಳಿಂದ ಜಗತ್ತು ನಿಯಂತ್ರಿಸಲ್ಪಟ್ಟಿಲ್ಲ. ಪ್ರತಿಯೊಂದೂ ನಿರ್ಜೀವವೂ ಅಮಾನಸವೂ ಪ್ರಾಥಮಿಕ ಭೌತಿಕ ಶಕ್ತಿಗಳನ್ನುಳ್ಳವುಗಳೂ ಆದ ಭೌತಿಕ (ಜಡಪ್ರಾಕೃತಿಕ) ಕ್ರಿಯಾನುಕ್ರಮ ಹಾಗೂ ಯಾಂತ್ರಿಕ ಪದಾರ್ಥಗಳಿಂದಾದುದು. ಮಾನಸಿಕ ಪದಾರ್ಥಗಳೂ ಕ್ರಿಯಾನುಕ್ರಮಗಳೂ ಘಟನೆಗಳೂ ಭೌತಿಕ ಪದಾರ್ಥ–ಕ್ರಿಯಾನುಕ್ರಮ–ಘಟನೆಗಳಿಂದಲೇ ಸಂಭವಿಸಿದಂಥವು; ಸ್ವತಃ ಅವುಗಳಿಗೆ ಕಾರಣಿಕ ಪರಿಣಾಮವಿಲ್ಲ. ಇದೇ Epiphenomenalism ನಿರ್ವೀರ್ಯ ಘಟನಾವಾದ ಅಥವಾ Mechanism ಯಾಂತ್ರಿಕತಾವಾದ. ಅತಿಪ್ರಾಕೃತಿಕವಾದ ಯಾವುದೂ ಇಲ್ಲ. ಇದು ನಿಸರ್ಗವಾದ. ಮಾನಸಿಕವಾದ ಯಾವುದೂ ಇಲ್ಲ. (೨) ಚಲ ಭೌತಪದಾರ್ಥ ಅಥವಾ ಭೌತಪದಾರ್ಥ ಮತ್ತು ಶಕ್ತಿ ಅಥವಾ ಕೇವಲ ಭೌತಪದಾರ್ಥ ಎಂಬುದರ ಮೂಲಕ ಎಲ್ಲವುಗಳ ವಿವರಣೆಯನ್ನೂ ಕೊಡಲು ಸಾಧ್ಯ. ಇದು ಭೌತಿಕ ಪದಾರ್ಥವೆಂದರೇನೆಂದು ಯಾರು ಹೇಗೆ ಕಲ್ಪಿಸಿಕೊಳ್ಳುತ್ತಾರೆ ಎಂಬುದನ್ನು ಅವಲಂಬಿಸಿದೆ. ಎಲ್ಲ ಗುಣ (Qualitative) ಭೇದಗಳನ್ನೂ ಪಾರಿಮಾಣಿಕ (Quantitative) ಭೇದಗಳನ್ನಾಗಿ ಪರಿವರ್ತಿಸಿ ಇಳಿಸಬಹುದು. ವಿಜ್ಞಾನವು ಶೋಧವಮಾಡಬಹುದಾದ ವಸ್ತುಗಳೆಂದರೆ ಸಾರ್ವಜನಿಕವೂ ಹೊಂದಿಸಬಲ್ಲವುಗಳೂ ಅಮಾನಸವೂ ನೈಸರ್ಗಿಕವೂ ಅಥವಾ ಇಂದ್ರಿಯಗ್ರಾಹ್ಯವೂ ಆದ ವಸ್ತುಗಳು ಮಾತ್ರ. (೩) ಐಶ್ವರ್ಯ, ದೈಹಿಕ ತೃಪ್ತಿಗಳು, ಐಂದ್ರಿಯ ಸುಖಗಳು ಮುಂತಾದವುಗಳಷ್ಟೇ ಮನುಷ್ಯ ಬಯಸುವ ಅಥವಾ ಸಾಧಿಸಿಕೊಳ್ಳಬಲ್ಲ ಅತಿಹೆಚ್ಚಿನ ಪುರುಷಾರ್ಥಗಳು (ಬೆಲೆಗಳು). (೪) ಮಾನವಕಾರ್ಯಗಳೂ ಸಾಂಸ್ಕೃತಿಕ ಪರಿವರ್ತನವೂ ಆರ್ಥಿಕ ಕಾರಕಗಳಿಂದಲೇ ನಿಷ್ಕೃಷ್ಟವಾಗುತ್ತವೆ. ಇದೇ ಆರ್ಥಿಕ ನಿಷ್ಕೃಷ್ಟತಾವಾದ (Economic Determinism). (೫) ಮೇಲಿನ ಯಾವುದಾದರೂ ಒಂದು ಪ್ರಮೇಯಕ್ಕೆ ತಾಳುವ ಅನುಕೂಲ ಪ್ರವೃತ್ತಿ ಮನಃಪ್ರಣಾಲಿ, ತತ್ವಸೂತ್ರ, ಸಂಭಾವ್ಯಸಿದ್ಧಾಂತ, ಘೋಷ ಅಥವಾ ಗೃಹೀತಕರಣ (Assumption) ಭೌತವಾದಾಂಶವೆನ್ನಿಸುತ್ತದೆ. ಭೌತಿಕ ಆವರಣದಿಂದ ಇಲ್ಲವೆ ಸಂಸ್ಕೃತಿಯ ಭೌತಿಕ ಅಂಶಗಳಿಂದ ಪರಿಸೀಮಿತವಾಗಿ ಅವುಗಳನ್ನು ಮೀರಲಾರದ, ಪರಿಹರಿಸಿಕೊಳ್ಳಲಾರದ ಅಥವಾ ಅವುಗಳಿಗೆ ಚೆನ್ನಾಗಿ ಹೊಂದಿಕೊಳ್ಳಲಾರದ ಸ್ಥಿತಿಯೂ ಅದರ ಕಕ್ಷೆಯಲ್ಲಿಯೇ ಬರುತ್ತದೆ. ಅಮಾನಸವೂ ಅನಾತ್ಮಿಕವೂ ಆದ ಕೆಳಮಟ್ಟದ ದೈಹಿಕ ಮೌಲ್ಯಗಳಿಗೆ ಗುಲಾಮರಾಗಿರುವ ಅಥವಾ ಅವುಗಳಲ್ಲೇ ಲಂಪಟರಾಗಿರುವ ಸ್ಥಿತಿಯನ್ನೂ ಭೌತವಾದವೆಂದು ಹೇಳುವುದುಂಟು.

**೫. ಆಧ್ಯಾತ್ಮಿಕತಾವಾದ:** (೧) ಆತ್ಮವು ಜಗತ್ತಿನಲ್ಲಿ ಆತ್ಯಂತಿಕ ಸತ್ಯ. ಅದು ಜೀವಾತ್ಮನಂತಹದೇ ಆದ ಒಂದು ಅತಿಮಾನಸ (Overmind); ಆದರದು ಇಡಿ ಜಗತ್ತಿನ

ತುಂಬ ಅದರ ಆಧಾರವೂ ವಿವರಣೆಯೂ ಆಗಿ ಹಬ್ಬಿಕೊಂಡಿದೆ. ಈ ವಾದವು ಭೌತವಾದಕ್ಕೆ ವಿರುದ್ಧವಾದುದು. (೨) ಆತ್ಮ–ಪರಮಾತ್ಮರಷ್ಟೇ ಸತ್ಯ; ಇಂದ್ರಿಯ ಪ್ರತ್ಯಕ್ಷದ ಪ್ರಪಂಚವು ಬರಿಯ ಕಲ್ಪನೆ (Idea) (೩) ಆತ್ಮನ ಮೇಲೆ ಪರಮಾತ್ಮನ ಪ್ರಭಾವವಿದೆ. ಪೂಜೆಯೆಂದರೆ ಆತ್ಮ–ಪರಮಾತ್ಮರ ಪತ್ರವ್ಯವಹಾರವಿದ್ದ ಹಾಗೆ. (೪) ಸತ್ತಾತ್ಮಗಳು ಜೀವಂತವಾಗಿರುವವರ ಮೈ ಮೇಲೆ ಆಳಿ ಬರುವುದು ಎಂಬ ಭೂತಾವೇಶವಾದ (Spiritism).

**೬. ವ್ಯವಹಾರವಾದ:** (೧) ಅನುಭವವೇ ಜ್ಞಾನದ ಆಕರ. ಅನುಭವವಿಲ್ಲದೆ ಇರವಿನ ಜ್ಞಾನವು ಇಲ್ಲ ಅಥವಾ ಅಸಾಧ್ಯ. ಪ್ರತ್ಯಕ್ಷವೊಂದೇ ಅನುಭವ. ಪ್ರತ್ಯಕ್ಷಾನುಮಾನಗಳಿಗೆ ಪೂರ್ವದಲ್ಲಿ ಯಾರಿಗೂ ಇರುವ ಯಾವುದರ ಜ್ಞಾನವೂ ಉಂಟಾಗದು; ಅಂದರೆ ಸಾಮಾನ್ಯವೂ ಅವಶ್ಯಕವೂ ಆದ ಸತ್ಯಗಳಿಲ್ಲ; ಭೂತ, ಭವಿಷ್ಯತ್, ವರ್ತಮಾನಗಳಲ್ಲಿ ಉಂಟಾದ ಅನುಭವವನ್ನು ಮೀರಿದ ಜ್ಞಾನವಿಲ್ಲ; ಹುಟ್ಟುತ್ತಲೇ ಬರುವ ಜ್ಞಾನವೆಂಬುದಿಲ್ಲ; ಸ್ವಾಭಾವಿಕ ತರ್ಕಕ್ಕೆ ಒಪ್ಪುವ ಸ್ಪಷ್ಟತೆ ಅಥವಾ ಸ್ವತಃ ಪ್ರಾಮಾಣ್ಯ ಎಂಬುದು ಸತ್ಯಕ್ಕೆ ನಿಕಷವಲ್ಲ. ಒಂದರ ವಿರುದ್ಧ ಪದಾರ್ಥದ ಅಕಲ್ಪನೀಯತೆಯ ದೆಸೆಯಿಂದ ಅದು ಸಿಕ್ಕಿದಾಕ್ಷಣ ಅದರ ನಿಶ್ಚಿತಜ್ಞಾನ ನಮಗಾಯಿತೆನ್ನಲು ಶಕ್ಯವಿಲ್ಲ. ನಿಶ್ಚಿತವಾಗಿ ಗೊತ್ತಾದ ಒಂದರ ಅಥವಾ ಎಲ್ಲ ಜ್ಞಾನದ ಅವಶ್ಯಕ ಪೂರ್ವಗೃಹೀತತೆ ಇದೆಯೆನ್ನಲು ಬರದು. ಯಾವುದಾದರೊಂದನ್ನು ಇಲ್ಲವೆಂದು ಹೇಳುವುದರಿಂದ ಅದರ ಪುನರ್ ದೃಢೀಕರಣವಾಗದು. ಸಾಂಪ್ರದಾಯಕ ಅಥವಾ ಸ್ವಕಪೋಲಕಲ್ಪಿತ ಲಕ್ಷಣಗಳಾಗಲಿ, ಗೃಹೀತಾಂಶಗಳಾಗಲಿ, ಜ್ಞಾನಕಾರಕಗಳಾದಾವೆಂದು ಒಪ್ಪುವುದಿಲ್ಲ. (೨) ಭಾವ, ಕಲ್ಪನೆ, ಸಾಮಾನ್ಯಗಳಲ್ಲಿ ವಾಸ್ತವಿಕ ಅಸ್ತಿತ್ವ ಉಳ್ಳಂಥವುಗಳು ಅನುಭವದ ಅಥವಾ ಅದರ ಅರ್ಥಪೂರ್ಣ ಅಂಶಗಳಿಂದಲೇ ಹುಟ್ಟಿರುತ್ತವೆ. (೩) ಭಾವ, ಕಲ್ಪನೆ–ಸಾಮಾನ್ಯಗಳೆಲ್ಲವೂ ನೇರವಾಗಿ ಪ್ರತ್ಯಕ್ಷಾನುಭವಕ್ಕೆ ಸಂಬಂಧಿಸಿರುತ್ತವೆ; ಅಥವಾ ಅರ್ಥ, ಭಾವ, ಕಲ್ಪನೆ, ಸಾಮಾನ್ಯಗಳು ಪ್ರಥಮತಃ ಅನುಭವದ ಹೂರಣಕ್ಕೆ ಸಂಬಂಧಿಸಿಯೇ ಇರತಕ್ಕಂಥವು; ಅಥವಾ ಒಂದು ಪದದ ಅರ್ಥವು ಅದರ ಅನುಭವದ ಸಾಧ್ಯವಾದ ಪರಿಣಾಮಗಳ ಮೊತ್ತವಷ್ಟೇ ಆಗಿರುತ್ತದೆ; ಅಥವ ಎರಡು ಪ್ರಮೇಯಗಳ (Propositions) ಸಾಧ್ಯ ಆನುಭವಿಕ ಪರಿಣಾಮಗಳೆಲ್ಲವೂ ಏಕರೂಪದವುಗಳಾಗಿದದಾಗ ಅವುಗಳ ಅರ್ಥಗಳೂ ಒಂದೇ ಅಗಿರುತ್ತವೆ. ೪) ಸಾಧ್ಯವಾದ ಪ್ರತಿಯೊಂದು ಉಕ್ತ ಪದಾರ್ಥವೂ (Referent) ತನಗೆ ನೇರ ಪರಿಚಯ ಉಳ್ಳದ್ದು ಅಥವಾ ನಿರ್ವಿಶೇಷವಾಗಿ ಪರಿಚಿತ ಪದಾರ್ಥಗಳಿಂದ ಕೂಡಿದ್ದಾಗಿರುತ್ತದೆ; ಅಥವಾ ಅನುಭವದ ಸದ್ಯದ ಹೂರಣವನ್ನಷ್ಟೇ ಯಾವನಾದರೂ ಅರಿತುಕೊಳ್ಳಬಲ್ಲ. ಅಥವಾ ತನ್ನ ಅಥವಾ ಇತರ ಎಲ್ಲರ ಅನುಭವ ಕ್ಷೇತ್ರದ ಹೊರಗಿರುವ ಪದಾರ್ಥಗಳ ಅನುಭವ ಒಬ್ಬನಿಗಿದ್ದರದು ಯಾವಗಲೂ ಅನಿಶ್ಚಿತ; ಏಕೆಂದರೆ ಅದನ್ನವನು ಅನುಭವದ ಮೂಲಕ ಪಡೆದುದಲ್ಲ. (೫) ಅನುಭವ ಮತ್ತು ಸತ್ಯಗಳ ನಡುವಿನ ಯಾವುದಾದರೊಂದು ಸಂಬಂಧವು ಸತ್ಯದ ಸ್ವರೂಪದ ಅಥವಾ ಅದರ ಗುರುತು ಹಿಡಿಯುವ ಸಾಧನದ ಲಕ್ಷಣವಾಗಿರುತ್ತದೆ. (೬) ಅನುಭವವೊಂದೇ ಅಸ್ತಿತ್ವ–ಸತ್ಯತೆಗಳಲ್ಲಿ ಒಂದನ್ನೋ ಎರಡನ್ನೋ ಉಳ್ಳದ್ದು; ಅಥವಾ

ನಿಸರ್ಗವೊಂದು ಆನುಮಾನಿಕ ಕ್ರಿಯಾನುಕ್ರಮ, ಸಂಪೂರ್ಣ ವಿಚಾರಯುಕ್ತ ಎಂಬುದು ಸುಳ್ಳು; ಅಥವಾ ಸಾಮಾನ್ಯಕ್ಕಿಂತ ಬದಲಾಗುವ ವಿಶಿಷ್ಟವಾದ, ವಿಕಲ್ಪನೀಯ, ಆಕಸ್ಮಿಕ ಎನ್ನಿಸಿದ್ದು ವಸ್ತು ಹೃದಯಕ್ಕೆ ಸಾಮಾನ್ಯ, ಬದಲಾಗದ ಮತ್ತು ಅವಶ್ಯಕವೆನ್ನಿಸುವ ಪದಾರ್ಥಕ್ಕಿಂತ ನಿಕಟವರ್ತಿಯಾದುದು. (೭) ಮೇಲಿನ ಪ್ರಮೇಯಗಳಲ್ಲಿ ಎರಡು–ಮೂರರ ಸಂಯೋಗ, ಅವುಗಳಿಗೆ ಅರ್ಥದಲ್ಲಿ ಹತ್ತಿರವಾದ ವಾಕ್ಯಗಳ ಸಂಯೋಗ, ಆಯಾ ಪ್ರಮೇಯವಾಕ್ಯಗಳ ಸದ್ಯದ ಧ್ವನಿತಗಳ ಸಂಯೋಗ ಅಥವಾ ಅವುಗಳನ್ನು ಒಟ್ಟಿಗೆ ತೆಗೆದುಕೊಂಡಾಗ ಇಲ್ಲವೆ ಅವುಗಳ ನ್ಯಾಯವಾಕ್ಯಗತವಾದ ನಿಗಮನೇತರ ಸಹವಾಕ್ಯಗಳೊಡನೆ ತೆಗೆದುಕೊಂಡಾಗ ಉಂಟಾಗುವ ಸಂಯೋಗ ವ್ಯವಹಾರ ಗ್ರಾಹ್ಯ. (೮) ನೇರವಾದ ನಿರೀಕ್ಷಣೆ ಅಥವಾ ಸದ್ಯದ ಅನುಭವ ಅವಲಂಬನೀಯ; ಅದರ ವಿಶ್ಲೇಷಣ–ವಿಚಾರಣಗಳನ್ನು ಹೊರತುಪಡಿಸಬೇಕು; ಕೇವಲ ಚರ್ಚಾತ್ಮಕವೂ ಆನುಮಾನಿಕವೂ, ಊಹಾತ್ಮಕವೂ ಅತೀಂದ್ರಿಯವೂ ತರ್ಕ ಸಮರ್ಥನಯುಕ್ತವೂ ಆದ ಕ್ರಮಗಳನ್ನು ಬಿಟ್ಟು ಪ್ರಯೋಗ ಅಥವಾ ಪದ್ಧತಿಯಾಗಿ ರೂಪಿತವಾದ ವಿಶಿಷ್ಟ ನಿದರ್ಶನ ಲಬ್ಧವಾದ ಪ್ರಮಾಣದಿಂದ ತೀರ್ಮಾನಿಸಿದ ಸಿದ್ಧಾಂತ (Induction)ವನ್ನು ಬಳಸುವುದು ನಿಯಮ; ಅಥವಾ ಒಂದು ಶೋಧದಲ್ಲಿ ತೊಡಗಿದ ಮನಸ್ಸಿನ ಸರ್ವರೀತಿಗಳನ್ನೂ ಅವಲಂಬಿಸುವುದು (ಲೆಕ್ಕಕ್ಕೆ ತೆಗೆದುಕೊಳ್ಳುವುದು)ಅಗತ್ಯ. (೯) ಮೇಲಿನ ಯಾವುದಾದರೊಂದು ಪ್ರಮೇಯದ, ಆಚಾರದ, ಕ್ರಮದ ಅಥವಾ ಕ್ರಮಶಾಸ್ತ್ರದ ಬಗ್ಗೆ ಅನುಕೂಲವಾಗಿರುವ ಹೇಳಿಕೆ, ನಂಬಿಗೆ, ಸಂಭಾವ್ಯಾನುಮಿತಿ, ಗೃಹೀತಕರಣ (Assumption) ತತ್ವಸೂತ್ರೀಕರಣ (Postulation) ಅಥವಾ ಮನಃಪ್ರಣಾಲಿ ಗ್ರಾಹ್ಯ; ಅಥವಾ ಬುದ್ಧಿಗಿಂತ ಇಂದ್ರಿಯದ ಮೇಲೆ ಹೆಚ್ಚು ಅವಲಂಬಿಸುವ ಮನಃಪ್ರಣಾಲಿ; ಅಥವಾ ಕಾಲ್ಪನಿಕ ಸಂಗತಿಗಳಿಗಿಂತ ವಾಸ್ತವಿಕ ಸಂಗತಿಗಳೇ ಬೇಕೆಂಬುದು, ವಾಸ್ತವಿಕ ಸಂಗತಿಗಳು ಅವುಗಳ ಅನುಮಿತಾರ್ಥಗಳಿಗಿಂತ ಲೇಸೆಂಬುದು; ಅಥವಾ ಶೋಧಕ್ಕೆ ವೈಜ್ಞಾನಿಕ ಮನಃಪ್ರಣಾಲಿ ಅಗತ್ಯವೆಂಬುದು; ಅಥವಾ ಸಾಮಾನ್ಯ ವಿವೇಕ ಹಾಗೂ ವ್ಯಾವಹಾರಿಕತೆಗಳಿಗೆ ನಿಕಟವಾದ ಮನೋಧರ್ಮಯೋಗ್ಯವೆಂಬುದು– ಇಲ್ಲವೆ, ಭೋಳೆತನದಿಂದ ಮುಕ್ತವಾಗಿರುವುದು ಅಥವಾ ವಸ್ತುಗಳಲ್ಲಿ ಗೋಚರವಾದುದನ್ನೇ ಗಣ್ಯವಾಗಿ ನಂಬುವುದು ವ್ಯವಹಾರವಾದದ ಗುರುತುಗಳು.

**೭ ಅನುಷೇಧವಾದ:** ಇಂದ್ರಿಯ ಸಂವೇದನೆಗಳ ಸರಳ ವರ್ಣನೆಯೇ ಜ್ಞಾನದ ಅತ್ಯುನ್ನತ ರೂಪ. ಗಣಿತದ ತುಲಾಬಂಧ (Formulas)ಗಳಿಂದ ಮಾತ್ರ ಆನುಷೇಧಿಕ ವರ್ಣನೆ ಲಭ್ಯ–ಅಂತರ್ ನಿರೀಕ್ಷಣೆಯನ್ನಾಧರಿಸಿದ ಮನಃಶಾಸ್ತ್ರದಿಂದ ಅಲಭ್ಯ; ಶುದ್ಧ ಕಾಯಿದೆ (ವಿಧಿ) ತನ್ನಿಂದ ಭಿನ್ನವಾದ ಯಾವ ಹೆಚ್ಚಿನ ಕಾಯಿದೆ (ನಿಯಮ) ಯನ್ನೂ ಒಳಗೆ ಸೇರಿಸ ಕೂಡದು– ಎಂಬುದು ಅನುಷೇಧ.

**೮. ಅಭಿವ್ಯಕ್ತಿವಾದ:** ಕಲಾತ್ಮಕ ನಿರ್ಮಿತಿಯೊಂದು ಅಭಿವ್ಯಕ್ತಿ. ಅದು ಕಲೆಗಾರನ ಅನಿಸಿಕೆ (Impression), ಭಾವನೆ, ಪ್ರಾತಿಭ ಸ್ಫೂರ್ತಿ (Intuition) ಮತ್ತು

ಮನಃಪ್ರಣಾಲಿಗಳನ್ನು ಸ್ಪಷ್ಟಪಡಿಸುವ ಒಂದು ಕ್ರಿಯಾನುಕ್ರಮ. ಕಲೆಗಾರನ ಅನುಭವ–ಭಾವನೆಗಳೇ ಅವನ ಕಲಾಕೃತಿಗಳ ಮೂಲಾಧಾರ. ಅವನ ಕೃತಿಯು ಅವನ ಆತ್ಮಕ್ಕೆ ಅವನು ಬರೆದ ಭಾಷ್ಯ; ಬಾಹ್ಯ ಜಗತ್ತಿನ ವ್ಯಾಖ್ಯಾನ ಅದೆಂದೂ ಅಲ್ಲ. ಇಂಥ ಸರ್ಜನ ಚೈತನ್ಯದ ಹೊಸತನ ಮತ್ತು ವ್ಯಕ್ತಿ ವೈಶಿಷ್ಟ್ಯಗಳನ್ನೇ ಅವನ ಕೃತಿಯ ಬೆಲೆ ಆಧರಿಸಿರುತ್ತದೆ. ಬಲವಾಗಿಯೂ ಸ್ಪಷ್ಟವಾಗಿಯೂ ಭಾವಿಸು (ಭಾವನಿಸು)ವವನೇ ಕಲೆಗಾರ. ಅವನ ಕಲೆ ಅವನು ಭಾವಿಸದ್ದರ ಒಂದು ಅಭಿಲೇಖ (ದಾಖಲೆ). ವಾಸ್ತವಿಕತೆಗೆ ಕಲೆಗಾರ ಯಾವ ಗೌರವವನ್ನೂ ಕೊಡಬೇಕಾಗಿಲ್ಲ; ಅವನು ಯಾವ ಸಭಿಕರನ್ನೂ ಸಂತೋಷ ಪಡಿಸಬೇಕಾಗಿಲ್ಲ. ಈ ವಾದದ ಪ್ರಕಾರ ಪ್ರಾಮಾಣಿಕತೆ (ಅವನಿಗೆ ಅವನು), ಭಾವನೋದ್ರೇಕ ಮತ್ತು ಅನನ್ಯತೆಗಳೇ ಸೌಂದರ್ಯ.

೯. **ಅಂತಃಪ್ರಭಾವವಾದ:** ಕಲೆಯು ಒಂದು ವಸ್ತುವನ್ನು, ದೃಶ್ಯವನ್ನು ಅಥವಾ ಘಟನೆಯನ್ನು ಭಾವಿಸಿ(ಭಾವನಿಸಿ) ಕಂಡ ಗುಣವನ್ನು ಪ್ರಕಟಿಸಬೇಕು; ಅದು ಕಲೆಗಾರನಲ್ಲಿ ಉಂಟುಮಾಡಿದ ಒಟ್ಟಿನ ಮೇಲಿನ ಪರಿಣಾಮವನ್ನು ಪ್ರಕಾಶಪಡಿಸಬೇಕು. ಒಂದು ವಸ್ತುವಿನ ಭೌತಿಕ ರಚನೆಗೆ ನಿರಪೇಕ್ಷವಾಗಿ, ಅದರಿಂದ ಮನಸ್ಸಿಗಾದ ಅರ್ಥವನ್ನು ಹೊರತುಪಡಿಸಿ, ಅದರ ಸದ್ಯದ (Immediate) ಇಂದ್ರಿಯ ಪ್ರತ್ಯಕ್ಷವಷ್ಟನ್ನು ಪಡಿಮೂಡಿಸುವುದು ಗ್ರಾಹ್ಯ; ಉದ್ದೀಪನ ವಿಭಾವಗಳ ಆವರಣದಲ್ಲಿ ತೋರುವ ಒಂದು ವಸ್ತುವಿನ (ಅಥವಾ ವ್ಯಕ್ತಿಯ) ತಾತ್ಕಾಲಿಕವಾದ ಬಾಹ್ಯ ಲಕ್ಷಣಗಳನ್ನು ಪ್ರತಿಬಿಂಬಿಸುವುದಿಲ್ಲಿ ಮುಖ್ಯ– ಈ ಬದಲಾವಣೆಗಳಿಗೆ ಒಳಗಾದ ಮತ್ತು ಲಕ್ಷಣಗಳಿಗೆ ಆಧಾರಭೂತವಾದ ಕಲ್ಪಿತ (Supposed) ನಿಜವಸ್ತು (ನಿಜವ್ಯಕ್ತಿ) ಯಾವುದಾದರೂ ಇದ್ದರೆ ಅದನ್ನು ಗಮನಿಸತಕ್ಕದ್ದೇ ಅಲ್ಲ.

೧೦. **ಅಸ್ತಿವಾದ:** ಪ್ರಜ್ಞೆಯು ಕೊಡುವ ಶುದ್ಧವಾದ ದತ್ತಗಳು (Data) ಇಲ್ಲಿ ಮುಖ್ಯ. ಅದರಲ್ಲಿರುವ ಜೀವಶಾಸ್ತ್ರೀಯ ಮೌಲ್ಯವು ಜ್ಞಾನವೊಂದರ ಯೋಗ್ಯತೆಗೆ ನಿಕಷ. ಆದರೆ ಉಕ್ತದತ್ತಗಳು ಭಾವನೆ, ಇಚ್ಛಾ ಪ್ರಯತ್ನ (ಸಂಕಲ್ಪ ಶಕ್ತಿ) ಮತ್ತು ಸಾಮಾಜಿಕ ಪೂರ್ವಗ್ರಹಗಳಿಂದ ಮುಕ್ತವಾಗಿರಬೇಕು. ಜ್ಞಾನದ ಆಕರ ಮತ್ತು ಅಂಗ (ಅಂಶ)ಗಳೆರಡೂ ನಮ್ಮ ಪ್ರಜ್ಞೆ (Consciousness) ಯಲ್ಲಿರುವ ಸ್ವರೂಪದ ಸಂವೇದನೆಗಳು. ಒಳ–ಹೊರ ಜಗತ್ತುಗಳಲ್ಲಿ ಯಾವ ಭೇದವೂ ಇಲ್ಲ; ಏಕೆಂದರೆ, ಮಾನಸಶಾಸ್ತ್ರೀಯವಾಗಿ ಪರೀಕ್ಷಿಸಲಾರದ ಯಾವ ನೈಸರ್ಗಿಕ ಘಟನೆಯೂ ಇಲ್ಲ. ಆಯೆಲ್ಲವುದಕ್ಕೂ ಮನಸ್ಸಿನ ಸ್ಥಿತಿಗಳಲ್ಲಿ ಅಸ್ತಿತ್ವವಿದೆ. ಅಸ್ತಿತ್ವವಿಲ್ಲಿ ಸಾರ (Essence)ವಲ್ಲ. ಪ್ರಜ್ಞೆಯ ಮೇಲೆ ನರಮಂಡಲ, ಪೌಷ್ಟಿಕ ಆಹಾರ ಮತ್ತು ಆವರಣಗಳು ಪ್ರಭಾವ ಬೀರುತ್ತವೆ. ಇವೇ ನಮ್ಮ ಅನುಭವದ ಕಾರಕಗಳು. ಇರವು, ಸಮಾನತೆ, ಸಾದೃಶ್ಯ, ಪ್ರತ್ಯಕ್ಷ, ಪ್ರತಿನಿಹಿತತೆ ಮುಂತಾದವುಗಳಿಗೆ ತಾರ್ಕಿಕ ಅಥವಾ ಸತ್ಯಾತ್ಮಕವಾದ ಮೌಲ್ಯವಿಲ್ಲ; ಅವು ಕೇವಲ ಜೀವಶಾಸ್ತ್ರೀಯ ಲಕ್ಷಣಗಳು. ಭೌತಿಕ ಹಾಗೂ ಮಾನಸಶಾಸ್ತ್ರೀಯ ಎಂದು ಗ್ರಹಿಸುವ ಭೇದವು ಅಗ್ರಾಹ್ಯ. ತನ್ನ ಕರ್ತೃವಿನ ಅಸ್ತಿತ್ವವನ್ನು ನೇರವಾಗಿ ಹೇಳುವ ಪ್ರಮೇಯವೆಂದರೆ ಇಲ್ಲಿ "ಒಳಿತು ಇದೆ" ಎಂಬಂತಹದು. "ಎಲ್ಲ

ಮಾನವರೂ ಮರ್ತ್ಯರು" ಎಂಬುದನ್ನು "ಅಮರರಿಗೆ ಅಸ್ತಿತ್ವವಿಲ್ಲ" ಎಂದು ರೂಪಾಂತರಿಸಿ ಹೇಳುವುದು ಈ ಸಂಪ್ರದಾಯದ ಇನ್ನೊಂದು ಉದಾಹರಣೆ. ಇದರ ಮನಃಶಾಸ್ತ್ರದ ಪ್ರಕಾರ ಪ್ರತಿಮಾರಹಿತವಾದ ಆಲೋಚನೆ ಎಂಬುದಿಲ್ಲ; ವ್ಯಕ್ತಿಯ ಮನದ ಅನುಭವಗಳನ್ನು ಅಸ್ತಿತ್ವಗಳು (Existences) ಎಂದು ಗ್ರಹಿಸಿ, ಅಂತರ್ ನಿರೀಕ್ಷಣಾ ಪದ್ಧತಿಯಿಂದ ಗೊತ್ತಾದ ಅದರ ಆ ಅನುಭವಗಳ ವರ್ಣನೆ, ವಿಶ್ಲೇಷಣ ಮತ್ತು ವರ್ಗೀಕರಣಗಳನ್ನು ಮಾಡುವುದು ಇಲ್ಲಿ ಮನಃಶಾಸ್ತ್ರದ ಕೆಲಸ.



# ೩

# ವ್ಯಾಸಾಯನ

ವ್ಯಾಸನ ಮಹಾಭಾರತವು ಒಳಗೊಂಡಿರುವುದು ಕ್ರಿಸ್ತಪೂರ್ವ ೧॥ ಅಥವಾ ೨ ಸಾವಿರಕ್ಕೂ ಹಿಂದೆ ನಡೆದ ಕೆಲವು ಗಣ್ಯವಾದ ಐತಿಹಾಸಿಕ ಘಟನೆಗಳನ್ನು– ಎಂಬುದು ಅನೇಕ ವಿದ್ವಾಂಸರ ಮತ. ಅವುಗಳಲ್ಲಿ ಪರಸ್ಪರ ಪೌರ್ವಾಪರ್ಯವಿದ್ದರೂ ಅದರ ಅಳತೆ ಬಹಳ ದುರೂಹ್ಯವಾಯಿತು. ಉಕ್ತ ಗ್ರಂಥದ ರಚನಾವಧಿ ಕ್ರಿ.ಪೂ.೪೦೦ ರಿಂದ ೪೦೦ರ ವರೆಗೆ ಎಂಬುದು ಪ್ರಸಿದ್ಧ ಸಂಶೋಧಕರಲ್ಲಿ ಕೆಲ ಗಣ್ಯರ ಮತ. ಅದು ಶತಸಹಸ್ರ ಪದ್ಯಗಳಿಂದ ಕೂಡಿದ್ದೆಂದು ಪರಂಪರೆಯಲ್ಲಿ ನಡೆದು ಬಂದ ನಂಬಿಗೆ ದೃಷ್ಟಾಂತಸಿದ್ಧವಾಗಿದೆ.

ಮಹಾಭಾರತ ತೋರಿಸುವ ಭಾರತೀಯ ಜನಜೀವನದ ಚಿತ್ರವು ಅಸಂಸ್ಕೃತ (ಅಪ್ರಬುದ್ಧ) ಎಂದು ಸಂಶೋಧಕ–ವಿಮರ್ಶಕರಾರಿಗೂ ಎನ್ನಿಸಿಲ್ಲ. ಕಡತಂದ,[1] ಅಥವಾ ಅಲ್ಲಿ ಇಲ್ಲಿ ಸ್ವತಃ ತಯಾರಿಸಿದ ಕೆಲ ವೈಜ್ಞಾನಿಕ ಸಾಧನಗಳ ಸಂಪತ್ತನ್ನು ಬಿಟ್ಟರೆ ಮಿಕ್ಕ ಸಾಂಸ್ಕೃತಿಕ ಸಂಪದ್ವಿಭಾಗಗಳು ನವಭಾರತದ ಸಮಷ್ಟಿ ಜನತೆಯಲ್ಲಿ ಮೂಲಭೂತವಾಗಿ ಅಪೂರ್ವ ನವತ್ವವನ್ನು ಹೊಂದಿದ ಸ್ವರೂಪಗಳನ್ನು ತಾಳಿವೆ ಎಂದು ನಾಗರಿಕೆಯ ಇತಿಹಾಸಕಾರ ಹೇಳಲಾರ.

ವೃಕ್ಷ ಹೊಸದಾದರೆ ಅದರ ಬೀಜ ಅದಕ್ಕಿಂತ ಹಳೆಯದಾಗಿರುವಂತೆ ಭಾರತದ ನವತ್ವ ಇರಬಲ್ಲುದು, ಇರಬೇಕು– ಬಹುಸಂಖ್ಯರಿಲ್ಲಿ ಹಿಂದು ಸಂಸ್ಕೃತಿಗೆ ಸೇರಿರುವವರೆಗೆ. 'ಹಿಂದು' ಎಂಬುದು "ಇಸ್ಲಾಂ", "ಕ್ರೈಸ್ತ" ಎಂಬ ಮತಗಳಂತೆ "ಮತ"ವಿಲ್ಲ; ಅದೊಂದು ಧರ್ಮ ಅಥವಾ ಸಂಸ್ಕೃತಿ, ನಾಗರಿಕತೆ; ಮತವೆಂದು ಇದನ್ನು ಕರೆಯುವವರು ಮಧ್ಯಪೂರ್ವದ ನಾಗರಿಕತೆಯನ್ನು ಇಸ್ಲಾಮಿಯವೆಂದೂ ಪಾಶ್ಚಾತ್ಯ ನಾಗರಿಕತೆಯನ್ನು ಕ್ರಿಸ್ತೀಯವೆಂದೂ ಒಪ್ಪಿಕೊಳ್ಳಬೇಕಾಗುತ್ತದೆ. ಆಗ ಮತವನ್ನು ಸಂಸ್ಕೃತಿ–ನಾಗರಿಕತೆಗಳಷ್ಟು ವ್ಯಾಪಕಾರ್ಥವುಳ್ಳ ಧರ್ಮವೆಂದು ಅರ್ಥಮಾಡಬೇಕಾಗುತ್ತದೆ. ಪಾಶ್ಚಾತ್ಯವೆಲ್ಲವನ್ನೂ "ಆಧುನಿಕ" ಎಂದು ತಿಳಿದುಕೊಂಡದ್ದು ಸರಿಯಲ್ಲವೆಂದು ಮೊದಲು ತೋರಿಸಿ

---

1 ಕಡವಲ್ಲದಿದ್ದರೆ, ಸಾಲವಲ್ಲದಿದ್ದರೆ, ಕ್ರಯವೂ ಅಲ್ಲದಿದ್ದರೆ ದಾನ ಹಿಡಿದ ಸಾಧನಗಳೆಂಬುದಿಲ್ಲಿ ಗೃಹೀತ. ಓದಿದ ಅಲ್ಪಸಂಖ್ಯಾತರಲ್ಲಿ ಅಲ್ಪರ ಆಧುನಿಕತೆಯು ಕೇವಲ ಪಾಶ್ಚಾತ್ಯತೆ; ಅದು ಕೂಡ ಸಾಮಾಜಿಕ ಆವರಣದಲ್ಲಿ ಜೀರ್ಣವಾಗಿ ರಕ್ತಗತವೆನ್ನಿಸಿಲ್ಲ.

ಕೊಟ್ಟವರು ದಿವಂಗತ ರವೀಂದ್ರನಾಥ ಠಾಕೂರರು. ಅದು ಪಾಶ್ಚಾತ್ಯ ಅಥವಾ ಕ್ರೈಸ್ತ–ಸಾಂಸ್ಕೃತಿಕವಾಗಿ.

ಜೀವ, ಜ್ಞಾನ ಮುಂತಾದ ಎಲ್ಲವೂ ಜಡವಾದ ನಿಸರ್ಗವೆಂಬ ಊಹ್ಯ ವಸ್ತುವಿನಿಂದ ಹುಟ್ಟಿದ್ದೆಂಬ ತರ್ಕಾಭಾಸವು ಹಿಂದೆ ಹೇಳಿದಂತೆ ಆಧುನಿಕ ವೈಜ್ಞಾನಿಕತೆಯ ಮೂಲಾಧಾರ. ಈ ಆಧಾರವು ಪ್ರಯೋಗ ಪರೀಕ್ಷೆಗೆ ಅತೀತವಾದುದು. ಇಂಥ ಅತೀತತ್ವದಲ್ಲಿದು ಭಾರತ ಹೇಳಿದ ಮನೋವಾಗತೀತ ಬ್ರಹ್ಮ ಚೈತನ್ಯಕ್ಕೆ ಸರಿದೊರೆ. ಮಾನವತ್ವವು ಈ ನಿಸರ್ಗ ಅಥವಾ ಪ್ರಕೃತಿ ಎಂಬ ಅನವಚ್ಛಿನ್ನ ಪದಾರ್ಥದ ಅರ್ಥವ್ಯಾಪ್ತಿಯ ಹೊರಗಿನದಾಗಿಲ್ಲ– ನಿಸರ್ಗವಿಕಾಸವಾದದ ಪ್ರಕಾರ. ಹಿಂದು ಅಥವಾ ಭಾರತೀಯ ಧರ್ಮದಲ್ಲಿ ಬ್ರಹ್ಮ ಚೈತನ್ಯವೇ ಸರ್ವಮೂಲ. ಒಬ್ಬನು ಉತ್ತರ ಧ್ರುವದಿಂದ ದಕ್ಷಿಣಕ್ಕೆ ಹೊರಟರೆ, ಇನ್ನೊಬ್ಬನು ದಕ್ಷಿಣದಿಂದ ಉತ್ತರಕ್ಕೆ ಹೊರಡುತ್ತಾನೆ. ಆದರೆ ಈ ಇಬ್ಬರು ಪ್ರಯಾಣಿಕರೂ ದೇಶ ಕಾಲಗಳಿಂದ ಅವಚ್ಛಿನ್ನವಾದ ಇಂದ್ರಿಯಾನುಭವದ ಈ ವಿಶ್ವದಲ್ಲಿ ಸಂಧಿಸುತ್ತಾರೆ. ಇಹಜೀವನ ಇಬ್ಬರಿಗೂ ಸಾಧಾರಣ. ವಿಜ್ಞಾನದ ಕಕ್ಷೆಯ ಹೊರಗಿನ ನೀತಿಶಾಸ್ತ್ರವೂ ಮೂಲತತ್ವಗಳಲ್ಲಿ ವ್ಯಾವಹಾರಿಕವಾಗಿ ಸಾಧಾರಣ. ಭಾರತದ ಅಹಿಂಸಾದಿ ಪಂಚಮಹಾಧರ್ಮಗಳ ಆದರ್ಶವು ವಿಶ್ವಸಾಮಾನ್ಯ; ಅವುಗಳ ಆಚರಣೆಯ ವ್ಯಾಪ್ತಿ, ಅಂಶ, ಕ್ಷೇತ್ರ–ಪಾತ್ರಪ್ರಕಾರಗಳು ಮಾತ್ರ ಭಿನ್ನ; ರಾಜಕೀಯ ಸರಕಾರದ ವಿಧಿಗಳ ಮೂಲಕ ಅವುಗಳನ್ನು ಸಾರ್ವತ್ರಿಕ ವ್ಯಹಾರಕ್ಕಿಳಿಸುವುದರಲ್ಲಿಯೂ ಆ ಬಗೆಯ ಭೇದವಿದೆ.

## ಮಾನಸ, ಅತಿಮಾನಸ

ವಿಜ್ಞಾನದ ಸಂಶೋಧನ–ನವನಿರ್ಮಾಣಗಳೆಲ್ಲವೂ ಬುದ್ಧಿಮೂಲವಾದವುಗಳು. ಕಾರ್ಲ್‌ಜಿ, ಯುಂಗ್ ಮಹಾಶಯನ ಪ್ರಕಾರ ಬುದ್ಧಿಯು ಮಾಡುವ ಆಲೋಚನೆ ಎಂಬ ಕಾರ್ಯವು ಕೇವಲ ಒಂದು ಸಮೀಕ್ರಿಯೆ, ಅದರಲ್ಲಿ ನಾವು ಹಾಕಿದ್ದಷ್ಟು ಮಾತ್ರ ನಮಗೆ ಸಿಗುತ್ತದೆ– ಬುದ್ಧಿಯ ಕ್ರಿಯೆಯೇ ಅಂಥದು; ಆ ಬಗೆಯ ತಿಳುವಳಿಕೆ ಮಾತ್ರ ನಮಗೆ ಲಭ್ಯ. ವಿಚಾರ, ಆಲೋಚನೆ, ಚಿಂತನ ಎಂಬ ಮನೋವ್ಯಾಪಾರವು ಆರ್ಥಿಕ ವ್ಯಾಪಾರಕ್ಕೆ ಸರಿದೊರೆ; ಅಥವಾ ಅದಕ್ಕೂ ಕಡಿಮೆ ಲಾಭದಾಯಕ: ಏಕೆಂದರೆ ಸಾಮಂತ ಅಥವಾ ಬಂಡವಾಳ ಪದ್ಧತಿಯು ತಾನು ಹಾಕಿದ್ದಕ್ಕಿಂತ ಹೆಚ್ಚನ್ನು ಹಾಕಿದವನಿಗೆ ಕೊಡಿಸುತ್ತದೆ! ಬುದ್ಧಿರುತ್ಪದ್ಯತೇ ಕಾರ್ಯಾತ್' ಎಂಬ ವ್ಯಾಸವಾಣಿಗೆ ಉಕ್ತ ಅರ್ಥವ್ಯಾಪ್ತಿ ಇದೆ. ಮನಸ್ಸಿನ ಕ್ರಿಯೆ ಅಥವಾ ಕಾರ್ಯವೆಂದರೆ ಇಚ್ಛಾಮೂಲವಾದ ಭಾವನೆ. ಇಚ್ಛೆ ಭಾವನೆಗಳು ಅವಿನಾಭಾವಿಗಳು ಮತ್ತು ಪರಸ್ಪರ ಪ್ರೇರಕಗಳು. ಅವೇ ಬುದ್ಧಿಯ ಬುಡ–ತಲೆಗಳು. ಅವು ಅಬೌದ್ಧಿಕ ಪ್ರಜ್ಞೆಗಳು. ಬುದ್ಧಿಯು ಅವುಗಳ ಸೇವಕ, ಹೆಚ್ಚೆಂದರೆ ಸಾರಥಿ ಅಥವಾ ಮಂತ್ರಿ. ಈ ಮೂರರ ಒಟ್ಟಿನ ಹೆಸರು ಜಾಗ್ರತ ಮನಸ್ಸು ಎಂದು. ಅಹಂಕಾರ–ಮಮಕಾರಗಳು ಇದರ ವೇಷಾಂತರಗಳೆಂಬುದು ವೈಯಕ್ತಿಕ ಮನದ ಪಾಶ್ಚಾತ್ಯ ವ್ಯಾಖ್ಯೆ[2].

2 The Dictionary of philosophy, page 198.

ಮನಸ್ಸುಗಳ ಮನಸ್ಸುತನವೆಂಬುದು ಅತಿ ಭೌತವಾದ ಆತ್ಮ, ಜೀವಾತ್ಮ ಅಥವಾ ಅಹಂಕಾರ ತಾಳಬಲ್ಲ, ದೇಹಾತ್ಮಭಾವ ಉಳ್ಳ ವಿಜ್ಞಾತೃ, ಅನುಭವ ಭೋಕ್ತೃ–ಎಂಬುದು ಮಹಾಭಾರತ. ಮಾನಸ ಸಂವೇದನೆ, ಸ್ಮೃತಿ, ಕಲ್ಪನೆ, ಭಾವನೆ, ಊಹನೆ, ತರ್ಕ, ಮಾನಸಿಕ ಪ್ರಯತ್ನ ಮುಂತಾದವುಗಳಿಗೆ ಮನಸ್ಸು ಕರ್ತೃ ಎಂಬುದು ಮನಃಶಾಸ್ತ್ರದ ಪಾಶ್ಚಾತ್ಯ ವಿವರಣೆ. ಆದುದರಿಂದ ಈ ಮನಸ್ಸು ಭಾರತದ ಜೀವಾತ್ಮನ ಅರ್ಥವನ್ನು ಒಳಗೊಂಡದ್ದಾಗಿದೆ. ಇಂಥ ಮನೋವಂತ ದೇಹವೇ ವ್ಯಕ್ತಿ. ಮನಸ್ಸು ದೇಹದ ಕೃತ್ಯ ಎಂಬುದಕ್ಕೆ ಅರಿಸ್ಟಾಟಲ, ಹಾಬ್ಸ, ಹೆಗೆಲ್ ಮತ್ತು ವರ್ತನಾವಾದಿ ಮನಃಶಾಸ್ತ್ರಜ್ಞರ ಸಹಿಯಿದೆ; ಅದು ದೇಹದ ಮಾನಸಿಕ ಆಭಾಸ ಎಂಬುದಕ್ಕೆ ಬರ್ಕ್ಲಿ, ಲಿಬ್ನಿಜ್, ಷೋಪೆನ್ ಹೋರರ ರುಜುವಿದೆ.

ಶಿರಸಿಯ ಈ ವರ್ಷದ ಹೋಳಿಹಬ್ಬದ ಬೀದಿ ಪ್ರದರ್ಶನಗಳಿಗೂ ಅಲಾಬಿ ಹಬ್ಬದ ನೃತ್ಯಾದಿ ಪ್ರದರ್ಶನಗಳಿಗೂ ವ್ಯತ್ಯಾಸ ಬಹಳ ಕಾಣದಿರುವುದು ಲೌಕಿಕತೆಯ ವಿಜಯವೆಂದು ಭಾವಿಸುವಷ್ಟರಲ್ಲಿ ಹುಬ್ಬಳ್ಳಿಯಲ್ಲಿ ತದ್ವಿರುದ್ಧವಾದ ಗಲಭೆ ನಡೆದ ಪತ್ರಿಕಾ ವರದಿಯನ್ನೋದಿ "ಈಶ್ವರ ಅಲ್ಲ ತೇರೇ ನಾಮ– ನಿನ್ನ ಹೆಸರು ಈಶ್ವರನಲ್ಲ" ಎಂದು ಭಾಸವಾಯ್ತು! "ಎಲೆಲೇ ರಸ್ತೆ ಏನು ಅವ್ಯವಸ್ಥೆ! ಕುಡಿದಿದ್ದೀಯಾ ನೀನು?" ಎಂಬ ಯಂಡ್ಕುಡ್ಕರತ್ನನ ಭವಿಷ್ಯವಾದ ಖರೆಯಾಗಿ ಪರಿಣಮಿಸಿದ ಈ ಕಾಲದಲ್ಲಿ Reason ತರ್ಕವು ವ್ಯವಹಾರದಲ್ಲಿ ಎಂದಾದರೂ ಬಂದೀತೇ? ಇನ್ನು Rhyme ಅಂತೂ ನವ್ಯಕವಿಗಳ ಹಾವಳಿಯಲ್ಲಿ ತಲೆಮರೆಸಿಕೊಂಡಿದೆ! ಅಂದಮೇಲೆ ಕೇಳಬೇಕೇ?

''ನಮ್ಮ ಊರಿನ ರಸಿಕ''ರಲ್ಲಿ ಪ್ರಸಿದ್ಧನಾದ ನಾಣಿ ಪುನರ್ಜನ್ಮವನ್ನು ನಂಬಿದವನಾದುದರಿಂದ ಅವ್ಯವಸ್ಥೆಯಲ್ಲಿಯೂ ಒಂದು ವ್ಯವಸ್ಥಿತ ಪ್ರಾಸವನ್ನು ಕಾಣಬಲ್ಲ ಪೋಲೀಸ್ ಇನ್ಸ್‌ಪೆಕ್ಟರನಾಗಿ ಈಗ ಹುಟ್ಟಿದ್ದು ಬ್ಯಾನರ್ಜಿ ಅವರ ರಾಜಸ್ಥಾನದ ಪ್ರಯೋಗಶಾಲೆಯಲ್ಲಿ ಮೊನ್ನೆ ಬೆಳಕಿಗೆ ಬಂದಿತು. ಅವನಿಗೆ ಹಿಂದಿನ ಜನ್ಮದಲ್ಲಿ ನೀನು ಯಾರಾಗಿದ್ದೆ? ಎಂಬ ಪ್ರಶ್ನೆಯನ್ನು ಹಾಕಿದ ಕೂಡಲೇ–

**ಶಾಲು ಸಾಬಿಯು ಬೊಮ್ಮನೆಂದೆನ್ನುತಿದ್ದ**
**ಜೋಯಿಸರು ಎಲೆ ನಾಣಿ ಶೂದ್ರನೀ ಸಿದ್ಧ–**
**ಜನಿವಾರ ವಿಲ್ಲದವ ಹೋಗೊ ಹೋಗೆಂದು**
**ಬೈದಾಗ ನಕ್ಕೆ ನಾ ಮರವೇರಿ ನಿಂದು!**

ಎಂದು ತನ್ನ ಪೂರ್ವ ವೃತ್ತಾಂತವನ್ನು ಕವಯಿಸಿಬಿಟ್ಟನು. ಜಾತೀಯ ಗಲಭೆಗಳನ್ನು ನಿಲ್ಲಿಸಲು "ಕಣ್ಣೀರು ಗಾಳಿ"ಯನ್ನು ಮೊನ್ನೆ ಛೂಬಿಟ್ಟಾಗ ಅದೇಕೆ ವಿಫಲವಾಯ್ತೆಂದು ಅವನನ್ನು ಕೇಳಿದಾಗ–

**ಅರ್ಧನಾರೀಶ್ವರನ ಭಕ್ತನಾಗಿದ್ದೆ**
**ಹಿಂದು–ಮುಸ್ಲಿಂ ಯೋಗ ಹಿಡಿದು ನಿಂತಿದ್ದೆ;**
**ಉಸಿರ ಬಿಗಿ ಹಿಡದಾಗ ಬಂದೂಕಿನಿಂದ**
**ಗಾಳಿ ಹೊರಬರುವುದೇ ಹೇಳಿ ಒಳಗಿಂದ?**

ಎಂದು ಪ್ರಾಸಯಿಸಿ ಬಿಟ್ಟ. ಅನಂತರ ಬ್ಯಾನರ್ಜಿಯವರು ಬೆಂಕಿ ಹಿಡಿದ ಮನೆಯಿಂದ ಹಿಂದುಗಳನ್ನು ತಪ್ಪಿಸಲು ಮುಸಲ್ಮಾನನಾದ ನೀನು ಹೇಗೆ ಹೋದೆ? ಎಂದು ಕೇಳಿದರು. ಅದಕ್ಕಾತನು–

**ಗಡ್ಡವಿಲ್ಲದೆ ಹುಟ್ಟಿದುದು ಗೊತ್ತು ನನಗೆ ಮಹಮದ್**
**ಆಮೇಲೆ ಗಡ್ಡ ಬಿಟ್ಟುದು ನವ್ಯ ಕಾವ್ಯದ ಷರತ್**
**ಇನ್‌ಸ್ಪೆಕ್ಟರಿಕೆ ಬರುವ ಮೊದಲು ನಾನಿದ್ದೆ ಮುಸ್ಲಿಂ**
**ಆಮೇಲೆ ನಾನರಿತೆ ಶಾಂತಿಗೇ ಎಂಬರಿಸ್ಲಾಂ!**

"ನೀನು ವಿಚಿತ್ರ ಮುಸಲ್ಮಾನನಾಗಿ ತೋರುವೆ" ಆದುದರಿಂದ ನಿನ್ನ ನಾಣಿತ್ವಕ್ಕೂ ಹಿಂದೆ ಏನಾಗಿದ್ದೆ? ಹೇಳು!" ಎಂದು ಬ್ಯಾನರ್ಜಿಯವರು ಕೇಳಿದಾಗ–

**"ಇಂಗ್ಲೆಂಡಿನಲ್ಲಿ ನಾ ಕ್ರೈಸ್ತನಾಗಿದ್ದೆ**
**ಬಂಗ್ಲೆ ಕಟ್ಟಿಸಿಕೊಂಡು ಮಾಡಿದ್ದೆ ನಿದ್ದೆ**
**ಯೇಹೂದ್ಯೆಯೊಬ್ಬಳನು ಮದುವೆಯಾಗಿದ್ದೆ**
**ಸುಳ್ಳು ಹೇಳದೆ ಇರುವ ವ್ರತವ ಹಿಡಿದಿದ್ದೆ**

ಬ್ಯಾನರ್ಜಿ– "ಸುಳ್ಳು ಹೇಳಿದರೆ ಪಾಪ ಬರುತ್ತದೆ ಎಂದು ಹೆದರಿದ್ದೆಯ?"

ಇನ್ಸ್‌ಪೆಕ್ಟರ್– **ಸುಳ್ಳನ್ನು ಹೇಳಿದರೆ ಹೇಳುವಾತನ ಇರವು**
**ಸುಳ್ಳಾಗದಿರದು ಒಂದಲ್ಲ ಒಂದು ದಿನ**
**ಅಲ್ಲಾನ ಆಣೆಗೆರಡಿಲ್ಲ!**

ಬ್ಯಾನರ್ಜಿ– ಅಲ್ಲಾ ನಿನ್ನನ್ನು ಕಂಡು ಎಂದು ಆಜ್ಞೆ ಕೊಟ್ಟ?

ಇನ್ಸ್‌ಪೆಕ್ಟರ್– **ಎಲ್ಲರನ್ನೂ ಕಂಡು ಎಂದೋ ಕೊಟ್ಟಿದ್ದನವ**
**ಇಲ್ಲ ನೆನಪಿಟ್ಟು ಕೊಂಡವರು ಬಹಳ ಜನ–**
**ದೊಳ್ಳು ಕಣ್ಗಡ್ಡ ಬಂತಲ್ಲ!"**

ಈ ಸಂವಾದವು ಅತಿಮಾನಸ ಮನಃಶಾಸ್ತ್ರ ಪ್ರಸ್ಥಾನದ ಉದಾಹರಣೆ. ಸ್ಪಿನೋಜನೂ ತಟಸ್ಥ ಏಕಮೂಲವಾದಿಗಳೂ ದೇಹ–ಮನಸ್ಸುಗಳು ಅವೆರಡಕ್ಕೂ ಅತೀತವಾದ ೩ನೆಯ ಪದಾರ್ಥದ ಅಭಿವ್ಯಕ್ತಿಗಳೆನ್ನುತ್ತಾರೆ. ಆ ಪದಾರ್ಥವು ದೈಹಿಕವೂ ಅಲ್ಲ, ಮಾನಸಿಕವೂ ಅಲ್ಲ– ಭಾರತ ಹೇಳುವಂತೆ ಅವೆರಡಕ್ಕೂ ಮೂಲವಾದ ಆತ್ಮರೂಪದ ಆಧಾರ– ಆ ಆಧಾರವು ಅತಿಮಾನಸ.

ದೇಹಪ್ರಜ್ಞೆ–ಮನಃಪ್ರಜ್ಞೆಗಳು ಪರಸ್ಪರ ಪ್ರೇರಕಗಳೆಂಬುದು ಡೆಸ್ಕಾರ್ಟಿಸ್ಸನ ಮತ. ಕ್ಲಿಫರ್ಡ್, ಹಕ್ಸ್ಲಿ, ಹಾಡ್ಗ್‌ಸನ್ ಮುಂತಾದವರು ಪ್ರಜ್ಞೆಯು ಮೂಲಭೂತವಾದ (ದೈಹಿಕ) ಕ್ರಿಯಾಸಂತಾನದ ಆನುಷಂಗಿಕ ಫಲವೆನ್ನುತ್ತಾರೆ. ಇಂದ್ರಿಯ ಸಂವೇದನೆಗಳಿಂದ ಸ್ವತಂತ್ರವಾದ ಮನಸ್ಸೆಂಬುದು ಒಂದು ಮಾಯೆ ಅಥವಾ ಅವಿದ್ಯೆ ಎನ್ನುತ್ತಾನೆ ರಸೆಲ್; ಅದರ ಕ್ರಿಯೆಗಳು ಮುಗಿಲ ಹೂಗಳು!

## ಪ್ರಕೃತಿ

ಮಹಾಭಾರತದಲ್ಲಿ–ಬ್ರಹ್ಮದಲ್ಲಿ ಅವ್ಯಕ್ತವೂ ಅವ್ಯಕ್ತದಲ್ಲಿ ಮಹತ್ತೂ ಮಹತ್ತಿನಲ್ಲಿ ಬುದ್ಧಿಯೂ ಬುದ್ಧಿಯಲ್ಲಿ ಮನಸ್ಸೂ ಮನಸ್ಸಿನಲ್ಲಿ ಇಂದ್ರಿಯಗಳೂ ವ್ಯಾಪ್ಯಗಳಾಗಿವೆ. ಬ್ರಹ್ಮವು ವಿಶ್ವದ ಒಳಹೊರಗಿರುವ ಅನಂತ ಚೈತನ್ಯ ಶಕ್ತಿ. ಅವ್ಯಕ್ತ ಅಥವಾ ಪ್ರಕೃತಿಯು ಅದರ ಹೊರ ಸ್ವಭಾವ. ಮಹತ್ತು ದೇಹಿಗಳ ಒಳಗಿನ ಅತಿಮಾನಸ ಕರ್ತೃವಾದ ಜೀವಾತ್ಮ; ಬುದ್ಧಿ ಅದರ ಸಾಧನ. ಮನಸ್ಸು ಸಂಕಲ್ಪ–ವಿಕಲ್ಪಾತ್ಮಕ; ಇಂದ್ರಿಯಗಳು ಅದರ ಮಂತ್ರಿಗಳು! ಸತ್ವ–ರಜಸ್ತಮಗಳ ಒಂದು ಮೊತ್ತವೇ ಪ್ರಕೃತಿ. ಸತ್ವವೆಂದರೆ ನಿಶ್ಚಿತ ಜ್ಞಾನ, ಅದರ ಧಾರಣೆ, ಸ್ಮೃತಿ ಮತ್ತು ಸಂತೋಷ. ರಜಸ್ಸೆಂದರೆ ಅತ್ಯಾಶೆ, ಸಿಟ್ಟು, ಅತಿಕಾಮ, ಭಯ, ಸುಸ್ತು ಅಥವಾ ಮಾನಸಿಕ ಶ್ರಮ ಮತ್ತು ಅನವಧಾನ. ತಮಸ್ಸೆಂದರೆ ದುಃಖ, ನೋವು, ವಂಚನೆ, ಜಂಭ ಮತ್ತು ಕ್ರೌರ್ಯ. ಮೊದಲನೆಯದು ಬ್ರಾಹ್ಮ, ಎರಡನೆಯದು ಕ್ಷಾತ್ರ, ಮೂರನೆಯದು ವೈಶ್ಯ. ದುಃಖವು ಅಸಂತೋಷ.

ಸಾಮಾಜಿಕ ಗುಂಪುಗಳ ಸಾಧನ, ರೂಢಿ ಮತ್ತು ಸಂಸ್ಥೆಗಳನ್ನು ಸಂಸ್ಕೃತಿ ಎಂದು ಹೇಳಿದವನು ಸ್ಪೆಂಗ್ಲರ್. ವಿಶ್ವದ ಮತ್ತು ಸಮಾಜದ ಹಕ್ಕು, ಸುಗುಣ, ಕರ್ತವ್ಯ, ಬಳಕೆ (ರೂಢಿ), ಕಾಯಿದೆ (ವಿಧಿ)ಗಳನ್ನು ಧರ್ಮವೆಂದು ಸಾರಿದ್ದು ಮಹಾಭಾರತ. ಸಮಾಜವೆಂದರೊಂದು ಭೌತಿಕ ಪದಾರ್ಥ, ಅವಯವಿ (ಅದರಲ್ಲೂ ಜಟಿಲ ಅಂಗಿ), ವಿವಿಧ ವಂಶೀಯರ ಸಂಘರ್ಷದಿಂದ ಹುಟ್ಟಿದ ರಚನೆ ಹಾಗೂ ಸಂಸ್ಥೆಗಳ ಒಂದು ಘಟನೆ, ಸಜಾತೀಯತೆಯ ಪ್ರಜ್ಞೆ, ವಿವಿಧ ಮಾನವ ಗುಂಪುಗಳ ಸಂಬಂಧಗಳ ವ್ಯಾವಹಾರಿಕತೆ (ವಾಸ್ತವಿಕತೆ), ಸಾಂಘಿಕ ಮನ ಎಂದಿರುವುದು ಪಾಶ್ಚಾತ್ಯ. ವೃತ್ತಿವಿಭಾಗಗಳನ್ನು ವರ್ಣಗಳೆಂದು ಹೇಳಿದ್ದು ಮಹಾಭಾರತ. ವರ್ಣಗಳ ವ್ಯವಸ್ಥಿತವಾದ ಸಣ್ಣ ಅಥವಾ ದೊಡ್ಡ ಗುಂಪಿಲ್ಲಿ ಸಮಾಜ. ಭಾರತೀಯ ಸಮಾಜ ಶಾಸ್ತ್ರದಲ್ಲಿ ವರ್ಣವು ಬಣ್ಣವಲ್ಲ. ವೃತ್ತವು ವೃತ್ತಿಪ್ರಭಾವಿತ; ಶೀಲವು ನೀತಿಜನಿತ, ನೀತಿಯು ಸಾಮಾಜಿಕ ಸಂಬಂಧ, ಸಂಸ್ಕೃತಿಯು ಅದರ ಫಲ. ಸಂಬಂಧವು ಸುಸಂಬಂಧ ಅಥವಾ ಸಮನ್ವಿತ ಜೀವನಮಾರ್ಗ, ನೀತಿಯು ವಂಶಪಾರಂಪರಿಕ; ವೃತ್ತವು ಪ್ರಭಾವಿ ಮನಃಪ್ರವೃತ್ತಿಗೆ ಸಹಜವಾಗಿ ಆಯ್ದುಕೊಂಡ ಕರ್ಮಾಭ್ಯಾಸದ ಫಲ. ಒಂದು ಮಾನವ ಜನ್ಮಸಹಜ; ಇನ್ನೊಂದು ಆವರಣ ಸಂಸ್ಕಾರಜನ್ಯ.

## ಶಾಶ್ವತ ಧರ್ಮ

"ಸುಪ್ರಜ್ಞಮಪಿ ಚೇಚ್ಛೂರಂ ಬುದ್ಧಿರ್ಮೋಹಯತೇನರಂ– ಶೂರ ವಿದ್ವಾಂಸನನ್ನೂ ಸಿರಿಯು ಅಜ್ಞಾನ, ಅಹಂಕಾರ ಕಾಮಕ್ರೋಧಗಳಿಗೆ ಯಜಮಾನಿಕೆ ವಹಿಸಿಕೊಟ್ಟು ಆ ಮೂಲಕ ಅದನ್ನು ಪಾಪ(ಪರಹಿಂಸೆ ಪರ ಶೋಷಣೆ) ಮಾಡಲು ಕಾರಣವಾಗುತ್ತದೆ– ಎಂಬ ನಿತ್ಯನೂತನ ಎಚ್ಚರಿಕೆ ಕೊಟ್ಟದ್ದು ಮಹಾಭಾರತ. ಇಂಥ ಎಚ್ಚರಿಕೆಗಳೇ ನಿಜವಾದ ಸಮಾಜ ಶಿಕ್ಷಣ.

**ಪ್ರಣಷ್ಟಃ ಶಾಶ್ವತೋ ಧರ್ಮಃ ಸದಾಚಾರೇಣ ಮೋಹಿತಃ।**
**ತೇನ ವೈದ್ಯಸ್ತಪಸ್ವೀವಾ ಬಲವಾನ್ ವಾ ವಿಮುಹ್ಯತೇ॥**

ನಿಷ್ಕೃಷ್ಟವೃತ್ತಿಗಳುಳ್ಳ ವರ್ಣಿಗಳಿಗೂ ಅನಿಷ್ಕೃಷ್ಟ ವೃತ್ತಿಗಳುಳ್ಳ ಅವರ್ಣಿ (ಲಿಂಗಿ)ಗಳಿಗೂ ಸಾಮಾನ್ಯವಾದ ಅಹಿಂಸಾದಿ ಧರ್ಮಗಳ ವ್ಯಾವಹಾರಿಕ ಅಭಿವ್ಯಕ್ತಿಯನ್ನು ಗುರುತಿಸುವ ಶಕ್ತಿಯನ್ನು ಜನರು ಇತಿಹಾಸದ ಅಂಧಕಾರ ಯುಗದಲ್ಲಿ ಕಳೆದುಕೊಳ್ಳುತ್ತಾರೆ; ವಿದ್ಯಾವಂತರೂ ತಪಸ್ವಿಗಳೂ (ಸಂಶೋಧಕರೂ) ಪೌರುಷಬಲ ಸಂಪನ್ನರೂ ಒಮ್ಮೆ ಅಂಥ ಅಜ್ಞಾನಕ್ಕೆ ಆಗ ಇಳಿಯುವುದುಂಟು. ವಿಜ್ಞಾನಿಗಳಿದಕ್ಕೆ ಹೊರತಲ್ಲ. "ವಿಜ್ಞಾನವು" ಜ್ಞಾನ (ಸಮನ್ವಿತ ಜೀವನ ಜ್ಞಾನ)ವಲ್ಲ.

ಕ್ರೈಸ್ತ ಹೇಳಿದಂತೆ ಯೆಹೂದ್ಯಮತದಿಂದ ಪ್ರವಾದಿಗಳನ್ನೂ ಉತ್ತರ ಕಾಲೀನ ಪ್ರಕ್ಷೇಪಗಳನ್ನೂ ಕಿತ್ತೆಸೆದರೆ ಅದು ಜಗತ್ತಿನ ಮನುಕುಲದ ಎಲ್ಲ ಸಂಕಟಗಳನ್ನೂ ಪರಿಹರಿಸಬಲ್ಲ ಉಪದೇಶಗಳಿಂದ ಕೂಡಿದ ಧರ್ಮವೆನ್ನಿಸುತ್ತದೆ– ಎಂದು ಹೇಳಿದ್ದು ಆಲ್ಬರ್ಟ್ ಐನ್‌ಸ್ಟೀನ್– ೧೯೩೪ರಲ್ಲಿ. ಇಂಥ ಮಾತನ್ನು ಮಹಾಭಾರತಕ್ಕೆ ಇನ್ನೂ ಹೆಚ್ಚಾಗಿ ಅನ್ವಯಿಸಿ ಹೇಳಬಹುದು. ಅದರ ಮತೀಯ ಹಾಗೂ ತಾತ್ಕಾಲಿಕ ಹಿತಾರ್ಥಾಂಶಗಳನ್ನು ಬದಿಗಿಟ್ಟು ನೋಡಿದಾಗ ಅದರಲ್ಲಿರುವ ಉಪದೇಶಗಳು ತಮ್ಮ ವಿಶ್ವವ್ಯಾಪಕತೆಯಲ್ಲಿ ಅಪ್ರತಿಮವಾಗಿ ತೋರದಿರಲಾರವು. ಮಾನವ ನಾಗರಿಕತೆಯ ಉಳಿವು, ಅದು ನಿರ್ಮಿಸುವ ನೈತಿಕ ಶಕ್ತಿಯನ್ನೇ ಹೆಚ್ಚಾಗಿ ಅವಲಂಬಿಸಿದೆ– ಎಂದು ಅಭಿಪ್ರಾಯ ಪಟ್ಟದ್ದು ಉಕ್ತ ಜ್ಞಾನವೃದ್ಧನೇ. "ಯತೋ ಧರ್ಮಸ್ತತೋ ಜಯಃ"[3] ಎಂದದ್ದು ಮಹಾಭಾರತ; "ಧರ್ಮಾದರ್ಥಶ್ಚ ಕಾಮಶ್ಚ ಸಕಿಮರ್ಥಂ ನ ಸೇವ್ಯತೇ[4] ಎಂದದ್ದೂ ಅದರ ದ್ರಷ್ಟಾರನೇ. ಆದರೆ ವಿಶ್ವವ್ಯಾಪಕ ಧರ್ಮಸೂತ್ರಗಳ ಪ್ರಭಾವವನ್ನು ಅಡಗಿಸುವ ಹಾಗೆ ಅಲ್ಪವ್ಯಾಪ್ತಿಯ ಸೂತ್ರಗಳನ್ನು ಪ್ರಚುರಪಡಿಸುತ್ತ ಬಂದುದರಿಂದ ಹಿಂದು ಧರ್ಮವು ಇತರ ಧರ್ಮಗಳಂತೆಯೇ ಪರಕೀಯರಿಗೆ ಒಂದು ಮತವಾಗಿ ತೋರಿತು. ಸಾರ್ವನೈತಿಕ ಸೂತ್ರಗಳಿಗೆ ವಿರುದ್ಧವಾಗಿ ಪರಿಣಮಿಸುವ ಸದಾಚಾರ, ಶಿಷ್ಟಾಚಾರಗಳು ಒಂದು ಧರ್ಮವನ್ನು ಮತದ ಸಂಕುಚಿತತೆಗೆ ಇಳಿಸುತ್ತವೆ. ದೇಶ (ಅವಕಾಶ), ಕಾಲಗಳು ವ್ಯಾಪ್ತಿಯ ಸೀಮಾ ರೇಖೆಗಳು. ಅವುಗಳನ್ನು ಬಹಳ ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡುತ್ತ ಹೋದುದೇ ಅನವಶ್ಯಕ ಜಾತಿಸ್ತರಗಳ ನಿರ್ಮಾಣ ಭಾರತದಲ್ಲಿ ಆಗುವಂತಾಯ್ತು; "ಭೇದವು ಭಯಾವಹ" ಎಂಬ ಯಾಜ್ಞವಲ್ಕ್ಯೋಕ್ತಿಯಂತೆ ಜಾತಿಭೇದಗಳನ್ನು ರಾಜಶಕ್ತಿಯು ಜನಶೋಷಣೆಗೆ ಉಪಾಯವನ್ನಾಗಿ ಮಾಡಿದ ಭಯಂಕರ ಸನ್ನಿವೇಶವು ಉಂಟಾಯಿತು. ಅಧಿಕಾರ ಬಲಸಂಪನ್ನರಲ್ಲಿ ಅನೇಕರಿಲ್ಲಿ ಇತಿಹಾಸದ ವಿವಿಧ ಅವಧಿಗಳಲ್ಲಿ ಜಾತಿಗಳಲ್ಲಿ ಒಡಕನ್ನು ಎಚ್ಚರಿಸಿ, ಸ್ವಾಧಿಕಾರ ಪ್ರಮತ್ತರಾಗಿ ವರ್ತಿಸಿದರು. ಆದುದರಿಂದ ಹಿಂದುವಿಂದು ಜಾತ್ಯತೀತನಾಗಲು ಯೋಜಿಸುವುದು ಕ್ರಮಪ್ರಾಪ್ತ; ಆದರೆ ಅದಕ್ಕೆ ಬೇಕಾದದ್ದು

3 ಧರ್ಮವಿದ್ದಲ್ಲಿ ಜಯವಿದೆ; ಶಾಶ್ವತಧರ್ಮಾನುಕೂಲ ಆಚರಣೆಯಿಂದಲೇ ಅಂತ್ಯ ಜಯ.

4 ಅರ್ಥ–ಕಾಮಗಳನ್ನು ಧರ್ಮಾನುಗುಣವಾಗಿ ಏಕೆ ಅನುಭವಿಸಬಾರದು? ಅಲ್ಪವ್ಯಾಪ್ತಿಯುಳ್ಳ ನೀತಿಯು ಮಹಾವ್ಯಾಪ್ತಿಯ ನೀತಿಗೆ ಅವಿರುದ್ಧವಾಗಿಯೂ ಅರ್ಥಕಾಮಗಳ ಅರ್ಜನೆ, ಭೋಗಗಳು ಹಾಗೇ ಧರ್ಮಕ್ಕೆ ಅವಿರುದ್ಧವಾಗಿಯೂ ಇರುವಂತೆ ನಡೆದುಕೊಳ್ಳಬಾರದೇಕೆ?

ಪಂಚವಾರ್ಷಿಕ ಯೋಜನೆಯಲ್ಲ ಶತವಾರ್ಷಿಕ ಯೋಜನೆ; ಉಪಜಾತಿಭೇದಗಳಿಂದ ಮುಕ್ತನಾಗಲು ದಶವಾರ್ಷಿಕ ಯೋಜನೆಯೊಂದು ಸಾಕು. ಶಾಸ್ತ್ರವಿಧಿಯಂತೆ (ಅಂದರೆ ಯೋಜನಾ ಬದ್ಧವಾಗಿ) ಮಾಡಹೋದರೆ ಮಾತ್ರ ಸುಧಾರಣೆ ಚಿರಸ್ಥಾಯಿಯಾದೀತು. ದ್ವೇಷವೆಂದೂ ಐಕ್ಯವನ್ನು ಸಾಧಿಸಿಕೊಡದು; ತಿರಸ್ಕಾರವೆಂದೂ ಪುರಸ್ಕಾರವನ್ನು ಗಳಿಸಿಕೊಡದು; ಕಾಲಕ್ರಮಣಕ್ಕೆ ಅವಕಾಶ ಕೊಡದೆ ಯಾವುದೂ ಸಿದ್ಧಿಸದು. ಜಾತಿಭೇದ ನಿರಸನವು ಸಾಂಸ್ಕೃತಿಕ ಮಟ್ಟಗಳ ಅವನತಿಗೆ ಕಾರಣವಾಗುವಂತೆ ವರ್ತಿಸುವುದು ನರಕಕ್ಕೆ ಬರಲು ಆಮಂತ್ರಣ ಕೊಟ್ಟಂತೆಯೇ ಸರಿ; ಸಾಂಸ್ಕೃತಿಕ ಅಧಃಪತನವು ಸಮಾಜವನ್ನು ಜೀವಚ್ಛವದ ದರ್ಜೆಗೆ ಇಳಿಸುತ್ತದೆ. ಹಾಗೇ ತಜ್ಞರಲ್ಲಿ ನಿರಾಶಾಜನಕವಾಗುವಷ್ಟು ಅಭಿಪ್ರಾಯ ಭೇದಗಳು ಆ ಈ ವಿಷಯದ ಬಗ್ಗೆ ಉಂಟಾಗುವುದೂ ಅಧಃಪತನ ಹೇತು.

ಜೀವನನಿರ್ವಾಹದ ಅರ್ಥಾರ್ಜನೆಗೆ ನೇರವಾಗಿ ಸಂಬಂಧಿಸದ ಕೆಲಸಗಳು ಸಾಂಸ್ಕೃತಿಕವೆಂದದ್ದು ಐನಸ್ಟೀನ್ ಮಹಾಶಯನೇ. ಜ್ಞಾನಿಗಳಿಂದ ಭಿನ್ನರಾದ ಕರ್ಮಿಗಳು (ಜ್ಞಾನಕರ್ಮಿಗಳಲ್ಲದ ಕರ್ಮಜ್ಞಾನಸಂಪನ್ನ ಕರ್ಮಿಗಳು) ಯಾವಾಗಲೂ ಬಹುಸಂಖ್ಯಾತರು. ಅವರು ತಮ್ಮ ಸಂತಾನದ ಕ್ರಮಿಕ ಸಾಂಸ್ಕೃತಿಕ ವಿಕಾಸಕ್ಕಾಗಿ ಅಲ್ಪಸಂಖ್ಯಾತ ಜ್ಞಾನಿಗಳನ್ನು ಪೋಷಿಸಿಕೊಂಡು ಬರುವುದು ಸರ್ವಮಾನವ ಸಾಧಾರಣ. ವೇದವ್ಯಾಸನು ಅಂಥ ಜ್ಞಾನಿ; ಆಳುವವರೂ ಉಳುವವರೂ ಇತರ ಐಹಿಕ ಸಾಧನೋತ್ಪಾದಕರು ಕೊಡು–ಕೊಳ್ಳುವ ವ್ಯವಹಾರ ನಿರ್ವಾಹಕರೂ ಕರ್ಮಿಗಳು, ಮತವಿರೋಧಗಳು ಜ್ಞಾನಿಗಳನ್ನು ಜನರು ಸಮಾನಪೂಜ್ಯರೆಂದು ಗಣಿಸಲು ವಿಘ್ನಕಾರಿಯಾಗುತ್ತವೆ. ಜ್ಞಾನಿಮಾನಿಗಳೊರೆದ ಮರಣೋತ್ತರ ಕಾಲೀನ ಅವಸ್ಥೆಗಳ ಬಗೆಗಿನ ಭಿನ್ನಾಭಿಪ್ರಾಯಗಳು ಅಂಥ ವಿಘ್ನಕಾರತ್ವಕ್ಕೆ ಒಂದು ದೃಷ್ಟಾಂತ. ಹಲವು ಸಲ ಅಭಿಪ್ರಾಯ ಭೇದಗಳು ಶಬ್ದಭೇದ, ವಿಚಾರಕ್ರಮಭೇದ, ಕಲ್ಪನಾಪ್ರಕಾರ ಭೇದಗಳಿಂದ ಅನವಶ್ಯಕವಾಗಿಯೂ ಉಂಟಾಗುತ್ತವೆ; ಅನಂತರ, ಅಪತರ್ಕ, ಅಪೂರ್ಣ ತರ್ಕ, ಅಸಮನ್ವಯದೃಷ್ಟಿಯ ತರ್ಕ, ಕಲ್ಪನಾಪೋಢತರ್ಕ, ಕಲ್ಪನಾ ದರಿದ್ರತರ್ಕ ಮುಂತಾದವುಗಳ ದೆಸೆಯಿಂದ ಮೋಕ್ಷೇತರ ಪುರುಷಾರ್ಥಗಳ ಬಗೆಗೂ ನಿರುಪಯುಕ್ತವಾಗುವ ವಾದವಿವಾದಗಳು ನಡೆಯುತ್ತವೆ. ಇವೂ ಸಾಂಸ್ಕೃತಿಕ ಪ್ರಗತಿಗೆ ಕಂಟಕಗಳಾಗಬಲ್ಲವು. ಮುಳ್ಳಿಲ್ಲದ ಗುಲಾಬಿ ಇಲ್ಲವಂತೆ. ಈ ಜಗತ್ತು ಇಂಥದೇ! ಮೋಕ್ಷವೊಂದೇ (ಸ್ವರ್ಗವಲ್ಲ) ಮುಳ್ಳಿಲ್ಲದ ಗುಲಾಬಿ– ಎಂಬುದು ಮಹಾಭಾರತೀಯ ಸಿದ್ಧಾಂತ. ಅದನ್ನು ವ್ಯಾಸನು ಕರ್ಮಿಗಳಾದ ಲೌಕಿಕರ ಮೇಲೆ ಹೇರಲಿಲ್ಲ; ಅವನು ಹೇರಹೊರಟದ್ದು ಧರ್ಮವೊಂದನ್ನೇ. ಅದು ಸಾಮಾಜಿಕ ಆರೋಗ್ಯಕ್ಕೆ ಅಗತ್ಯವಾದ ಪೌಷ್ಟಿಕ ರಸಾಯನ. ಪ್ರತಿಯೊಬ್ಬ ವ್ಯಕ್ತಿಯಲ್ಲೂ ಸಮಾಜಾಂಶ–ವ್ಯಕ್ತಿ ವಿಶಿಷ್ಟಾಂಶಗಳಿರುತ್ತವೆ. ಸಮಾಜ ಸಾಧಾರಣಾಂಶವೆಂಬುದು ಯಾವಾಗಲೂ ವ್ಯಕ್ತಿಯ ತಾತ್ಕಾಲಿಕ ಲಾಭಾಲಾಭ. ಜಯಾಪಜಯ, ಸುಖದುಃಖಗಳಲ್ಲಿ ವ್ಯಕ್ತಿವಿಶಿಷ್ಟಾಂಶಗಳಿಗಿಂತ ಸಂಘರ್ಷ ಸಂದರ್ಭಗಳೆಲ್ಲವುಗಳಲ್ಲೂ ಬಲವತ್ತರವೆಂದು ಭಾವಿಸಬೇಕಾದುದೇ ಸಾಮಾನ್ಯ ಧರ್ಮದ ಆತ್ಮ, ಶಾಶ್ವತ ಧರ್ಮದ ಸಾರ. ಸಂಘರ್ಷ ಸಂದರ್ಭ (ಅವಿರೋಧ ಸಂದರ್ಭ) ಗಳಲ್ಲೂ ವ್ಯಕ್ತಿಭೋಗ್ಯವನ್ನು ಬಹಿಷ್ಕರಿಸಲು

ಭಾರತಧರ್ಮವು ಮುಂದಾಗದು. ಸಂಘರ್ಷ–ಸಂಘರ್ಷಾಭಾಸಗಳು ಉಂಟಾಗುವ ಸನ್ನಿವೇಶವನ್ನು ದೃಷ್ಟಿಯಲ್ಲಿಟ್ಟುಕೊಂಡೇ–

**'ದೃಶ್ಯತೇಹಿ ಧರ್ಮರೂಪೇಣಾ ಧರ್ಮಂ ಪ್ರಾಕೃತಶ್ಚರನ್**

**ಧರ್ಮಂಚಾಧರ್ಮರೂಪೇಣ ಕಶ್ಚಿದಪ್ರಾಕೃತಶ್ಚರನ್'–**

ಪ್ರಾಕೃತನ (ಅಸಂಸ್ಕೃತನ, ಅನಾಗರಿಕನ) ಅಧರ್ಮಾಚರಣೆ (ಎಷ್ಟೋ ಸಲ) ಧರ್ಮವೆಂದು ತೋರುತ್ತದೆ; ಅಪ್ರಾಕೃತನ ಧರ್ಮಾಚರಣೆ ಹಾಗೇ ಅಧರ್ಮವೆಂದು ಕಾಣುತ್ತದೆ' ಎಂದು ಮಹಾಭಾರತದಲ್ಲಿ ಹೇಳಲಾಗಿದೆ. ಇರುವಿಕೆಯಂತೆ ತೋರಿಸುವುದೂ ಇಲ್ಲದ್ದನ್ನು ಇರುವಂತೆ ತೋರಿಸುವುದೂ ಮನುಷ್ಯರ ಸಮೂಹಗಳಲ್ಲಿ ಕಂಡುಬರುವ ಸಂದರ್ಭಗಳು ಅನೇಕಸಲ ತಪ್ಪಾಗಿ ಗ್ರಹಿಸಲ್ಪಡುವ ಉದಾಹರಣೆಗಳಿರುವುದರಿಂದ ಜೀವನದ ಬಗೆಗಿನ ವೇದವಾದಗಳಂತೆಯೆ ವಿಜ್ಞಾನವಾದಗಳೂ ಅನೇಕವಾಗಿವೆ; ವಿಶ್ವದ–ಸೃಷ್ಟಿ–ಲಯಗಳ ಬಗೆಗಿನ ಅನೇಕ ಉಭಯ ಜಾತಿಯವಾದಗಳೂ ಪೌರಾಣಿಕವಾಗಿರುವುದು ನಿದರ್ಶನ. ಜೀವನವು ಸ್ಥಿತಿಯೆಂಬ ಅವಸ್ಥೆ. ಅದಕ್ಕೆ ಅಸ್ಮಿತಾ ಜ್ಞಾನವು ಪ್ರಧಾನ ಕೇಂದ್ರ. ಅಂಥ ಜ್ಞಾನವು ಪಂಚವಿಧ: ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ. ಇವುಗಳಲ್ಲಿ ಇಂದ್ರಿಯ ಗ್ರಾಹ್ಯವಾದ ಅನ್ನಮಯ (ಶಾರೀರಿಕ) ಅಸ್ತಿತ್ವಜ್ಞಾನವು ಸಾರ್ವಜನಿಕವಾದ ಆಂಶಿಕಸತ್ಯ (ಸಾಪೇಕ್ಷ ಸತ್ಯ); ಮಿಕ್ಕ ನಾಲ್ಕು ಇದಕ್ಕಿಂತ ಕಡಿಮೆ ವ್ಯಾಪ್ತಿಗಳನ್ನುಳ್ಳವುಗಳಾಗಿರುವುದು ಅಸ್ಮಿತಾಪ್ರಜ್ಞೆಯುಳ್ಳ ಜೀವಿಗಳ ಸಂಖ್ಯಾಮಾನದಿಂದ.

ವ್ಯಕ್ತಿನಿಷ್ಠ ಮತ್ತು ವ್ಯಕ್ತಿಯು ವಸ್ತುನಿಷ್ಠ ಎಂದು ಗ್ರಹಿಸುವ ಗುಣಗಳೆರಡನ್ನೂ ವ್ಯಾವಹಾರಿಕ ಸತ್ಯವೆಂಬುದು ಮಾನವ ಸಾಧಾರಣ. ಮಹಾಭಾರತ ಇದಕ್ಕೆ ಎರಡಾಡದು. ಅದರ ಧರ್ಮೋಪನ್ಯಾಸ ಈ ಸ್ವಪರ–ಭೇದವನ್ನು ಮರೆತಿಲ್ಲ. ಮಾನವರ ಸಾಮಾಜಿಕ ಸಂಬಂಧಗಳಿಗೆ ಸತ್ಯದ ಈ ಸ್ವರೂಪವೇ ನೆಲೆ, ಆಧಾರ, ಅಡಿಗಲ್ಲು; ಅಂಥ ಸಂಬಂಧಗಳಿಂದ ಸುಖ, ತೃಪ್ತಿ, ಸಂತೋಷ ಉಂಟಾಗಬೇಕೆಂಬುದೇ ಅವನ ಬಯಕೆ. ಅಂಥ ಸುಖವು ಹೆಚ್ಚು ಹೆಚ್ಚು ಸಾತತ್ಯ ಉಳ್ಳಂತಾಗುವುದು ಅಪೇಕ್ಷಿತ. ಅದಕ್ಕೇನು ಮಾಡಬೇಕೆಂಬುದೇ ಧರ್ಮವು ಪರಿಹರಿಸಲು ಎತ್ತಿಕೊಳ್ಳುವ ಪ್ರಶ್ನೆ. ಅದು ನಿತ್ಯವಾಗಬೇಕಾದರೆ ತನ್ನ ಸ್ವರೂಪವನ್ನು ಬದಲಾಯಿಸಿಕೊಂಡು ಆನಂದತ್ವವನ್ನು ಹೊಂದಬೇಕಾಗುತ್ತದೆ. ಆನಂದವೇ ಮೋಕ್ಷ, ಸಂಪೂರ್ಣಾರ್ಥದ ಬಿಡುಗಡೆ.

## ವರ್ಣಧರ್ಮ

"ಪಾಶ್ಚಾತ್ಯ ರಾಜನೈತಿಕ ತತ್ವಜ್ಞಾನಿಗಳು" ಎಂಬ ಗ್ರಂಥದ ಮುನ್ನುಡಿಯಲ್ಲಿ ಮಾರಿಸ್ ಕ್ರಾನ್ಸ್ಟನ್ನನು ಪೌರಸ್ತ್ಯ ತತ್ವಜ್ಞಾನಿಗಳು ಐಹಿಕ ಮುಕ್ತತೆಗೆ (ರಾಜಕೀಯ ಸ್ವಾತಂತ್ರ್ಯಕ್ಕೆ) ವಿಶೇಷ ಮಹತ್ವವನ್ನು ಕೊಟ್ಟಿಲ್ಲವೆಂಬ ಆರೋಪವನ್ನು ಮಾಡಿದ್ದಾನೆ. ಪೌರಸ್ತ್ಯಜೀವನ ಧರ್ಮಶಾಸ್ತ್ರವಾದ ಮಹಾಭಾರತವು ಕರ್ತವ್ಯಾರ್ಥದ ಧರ್ಮವನ್ನು ಹೇಳುವಾಗ ಜೀವನ ಸ್ವಾತಂತ್ರ್ಯವನ್ನು ಹೇಳಿದೆ ಎಂಬುದನ್ನವನರಿಯ. ವೃತ್ತಿವರ್ಣ (ವರ್ಗ)ಗಳ ಕರ್ತವ್ಯದಲ್ಲಿ

ಸ್ವಾತಂತ್ರ್ಯದ ಕಲ್ಪನೆ ಬಂದಿದೆ. ಹಾಗೆ ಬಂದಿರುವದು ಸಮಾಜಾಧಿಕ್ಯ–ವ್ಯಕ್ತ್ಯಾಧಿಕ್ಯಗಳೆಂಬ ಅತಿವಾದಗಳ ಘರ್ಷಣೆಗೆ ಅವಕಾಶವಿಲ್ಲದಂತೆ ಮಾಡಿದೆ. ವೃತ್ತಿನಿಷ್ಠವಾದ ನಾಲ್ಕು ವರ್ಣಗಳು ತಮ್ಮ ತಮ್ಮ ವೃತ್ತಿನಿಯಮಗಳಂತೆ ನಡೆದುಕೊಂಡರೆ ಒಂದು ರಾಜಕೀಯ ಸರಕಾರದ ಆಳಿಕೆಗೆ ಒಳಪಟ್ಟ ಪ್ರತಿಯೊಬ್ಬನೂ ಸ್ವತಂತ್ರತೆಯನ್ನು (ಸ್ವಾಚ್ಛಂದ್ಯವನ್ನಲ್ಲ) ಅನುಭವಿಸುವುದು ಸಹಜವಾಗುತ್ತದೆ. ವೃತ್ತಿಯು ವ್ಯಕ್ತಿಲಾಭ–ಸಮಾಜೋಪಕಾರಗಳೆರಡನ್ನೂ ಸಾಧಿಸುವಂತಹ ನಿಯಮಗಳಿಂದ ಬದ್ಧವಾಗಿರುವುದು ನಾಗರಿಕವಾದುದು. ಅದರ ಆ ನಾಗರಿಕತೆಯು ಅನ್ಯೂನವಾಗುವಂತೆ ನೋಡಿಕೊಳ್ಳುವುದು ಪ್ರಭುಶಕ್ತಿ, ಪ್ರಶಾಸನ ಕರ್ತವ್ಯನಿಷ್ಠೆ. ಅಧ್ಯಯನ, ಅಧ್ಯಾಪನ, ಯಜನ, ದಾನ, ಪ್ರತಿಗ್ರಹವೆಂಬ ಕೆಲಸಗಳನ್ನು ಮಾಡುವುದು ಬ್ರಾಹ್ಮವರ್ಗ. ಸತ್‌ಪರಂಪರಾಗತವಾದ ವೃತ್ತಿನಿಯಮಗಳನ್ನು ದಕ್ಷತೆಯಿಂದ ಪಾಲಿಸುವಂತೆ ನೋಡಿಕೊಳ್ಳುವುದು ಕ್ಷಾತ್ರಧರ್ಮ. ಕೃಷಿ, ಗೋರಕ್ಷೆ, ವಾಣಿಜ್ಯಗಳೆಂಬ ಉತ್ಪಾದನ–ವಿತರಣ ಕಾರ್ಯಗಳನ್ನು ಸದಾಚಾರದ ಮಟ್ಟಗಳಂತೆ ನಡೆಸಿಕೊಂಡು ಹೋಗುವುದು ವೈಶ್ಯಧರ್ಮ. ಅಧಿಕಾರಿ, ನೌಕರ, ಸೇವಕ ಮುಂತಾದವರ ಕೆಲಸಗಳನ್ನು ಪ್ರತಿಫಲರೂಪದ ವೇತನಗಳನ್ನು ಪಡೆದು ಆಯಾ ನಿಯಮಗಳಂತೆ ಪ್ರಭುಶಕ್ತಿಯ ಕೈಂಕರ್ಯವನ್ನು ಯಥಾವಿಧಿ ಮಾಡುವುದು ಶೂದ್ರಧರ್ಮ. ಕುಲಕಸಬುದಾರಿಕೆಯ ಪರಂಪರೆ ಶತಮಾನಗಟ್ಟಲೆ ನಡೆಯುತ್ತ ಬಂದುದೇ ಸಾಮಾಜಿಕ ಮೇಲು ಕೀಳುತನಗಳ ಕಲ್ಪನೆಗೆ ಕಾರಣವಾಯ್ತು. ಅದಿಂದು ಸೌಕರ್ಯಬಲದಿಂದ ತ್ಯಜಿಸಲ್ಪಡುತ್ತ ಹೋಗಿದೆ; ಆದರೆ ಪ್ರಶಾಸನಶಕ್ತಿ ಮಾತ್ರ ಇಂದು ರೋಗಗ್ರಸ್ತವಾಗಿದೆ. ತತ್ಫಲವಾಗಿ ಪ್ರಜಾರಾಜರ ಕಣ್ಣೆದುರೇ ಅವರ ಆಜ್ಞಾಭಂಗ (ವಿಧಿಭಂಗ) ಸಕಲ ವರ್ಗಗಳಿಂದಲೂ ಮಿತಿಮೀರಿ ನಡೆಯಲಾರಂಭಿಸಿದೆ.

## ಪ್ರಜಾಪ್ರಭುತ್ವ

ಜಾನ್ ಸ್ಟೂಅರ್ಟ್ ಮಿಲ್ಲನು ಬಲಾತ್ಕಾರವು ಸ್ವಾತಂತ್ರ್ಯಕ್ಕೆ ವಿರುದ್ಧವಾದದ್ದೆಂದು ಸಾರಿ ಪ್ರಜಾಶಕ್ತಿ ಪದ್ಧತಿಯ ಮಹಾವಕ್ತಾರನಾದನು. ವ್ಯಕ್ತಿ, ಸಂಘ, ಪಕ್ಷಗಳ ವಾಕ್ ಸ್ವಾತಂತ್ರ್ಯವನ್ನು ಅವನು ಅದ್ವಿತೀಯವಾಗಿ ಸಮರ್ಥಿಸಿದನು; ಖಂಡನೆ–ಮಂಡನೆಗಳ ಹೋರಾಟವು ಆರೋಗ್ಯಕರವಾದ ವ್ಯವಹಾರ ಸತ್ಯಗಳ ಚಿರಸ್ಥಾಯಿತ್ವವನ್ನು ಸಾಧಿಸಿಕೊಡುತ್ತದೆ– ಎಂದ. ಆದರೆ ಅವುಗಳ ಆಭಾಸಗಳನ್ನೇ ಮಾಡುತ್ತ ಹೋಗುವ ವಿದ್ಯಾವಂತಿಕೆ ಒಂದು ಜನತೆಯ ವಿವಿಧ ವರ್ಗಗಳಲ್ಲಿ ಅತಿಯಾದಾಗ? ಕೇವಲ ಗೊಂದಲವನ್ನಷ್ಟೇ ಕೇಳುವಂತಾಗುತ್ತದೆ. ಅದರ ಫಲವನ್ನು ಒಡೆದಾಳುವ ರಾಜಶಕ್ತಿ–ವೈಶ್ಯಶಕ್ತಿಗಳು ಚೆನ್ನಾಗಿ ಬಳಸಿಕೊಂಡು ಪ್ರಜಾಶೋಷಣೆ (ಪರಹಿಂಸೆ)ಯನ್ನು ಸಮರ್ಥವಾಗಿ ಮಾಡುತ್ತವೆ. ಪ್ರಜೆಗಳ ಪ್ರಜಾಧರ್ಮಜ್ಞಾನ–ಪ್ರಜಾಧರ್ಮನಿಷ್ಠೆಗಳೂ ಪ್ರತಿನಿಧಿತ್ವ ಸಂಪಾದಕನ ಸಂಪಾದನ ಧರ್ಮವೂ ಕೇವಲ ಬಾಹ್ಯ ಸೌಂದರ್ಯ ಪ್ರದರ್ಶಕವಾದಾಗ ವ್ಯವಹಾರ–ಆಡಳಿತಗಳ ಉದಾರನೀತಿಯು ಬಲಿಷ್ಠ ಉದರ ನೀತಿಗೆ ಅತ್ಯಧಿಕ ಅವಕಾಶ ಕೊಟ್ಟು, ರಾಜ್ಯಭಾರವನ್ನು ವಿವಿಧ ಭ್ರಷ್ಟಾಚಾರಗಳಿಗಿಳಿಸಿ, ಶೋಷಣೆ (ಹಿಂಸೆ) ಬಹು–ಸಂಖ್ಯಾತ ಪ್ರಜೆಗಳಿಗೆ ನಾನಾ ರೂಪಗಳಲ್ಲಿ

ಬಂದೊದಗುವುದು. ಅಲ್ಪಸಂಖ್ಯಾತ ಲೋಭಿಗಳಿಗಷ್ಟೇ ಸ್ವಾತಂತ್ರ್ಯ ದೊರಕಿ ಆಗ ಬಹುಸಂಖ್ಯಾತರಿಗೆ ಗುಲಾಮಗಿರಿ ಲಭಿಸುತ್ತದೆ.

"ಭೇದೇ ಗಣಾ ವಿನಶ್ಯುರ್ಹಿ ಭಿನ್ನಾಸ್ತು ಸುಜಯಾ: ಪರೈಃ–ಭೇದ (ಒಡಕು) ಉಂಟಾದರೆ ಗಣರಾಜ್ಯಗಳು ನಾಶವಾಗುತ್ತವೆ; ಒಡಕುಗಳಿಂದ ತುಂಬಿದ ಗಣಪ್ರಭುತ್ವಗಳು ಸುಲಭವಾಗಿ ಶತ್ರುಗಳಿಂದ ಪರಾಜಯ ಹೊಂದುತ್ತವೆ" ಎಂದಿದೆ ಮಹಾಭಾರತ. ವ್ಯಕ್ತಿಗಳ ಗುಂಪುಗಳ, ಜಾತಿಗಳ, ಮತಗಳ, ಕುಲಗಳ, ಪಕ್ಷಗಳ, ಪ್ರಾದೇಶಿಕತೆಗಳ (ಅವುಗಳಲ್ಲಿ ಒಂದರ ಅಥವಾ ಒಂದಕ್ಕಿಂತ ಹೆಚ್ಚು ಕಾರಕಗಳ) ದೆಸೆಯಿಂದ ಪ್ರಜೆಗಳಲ್ಲಿ ಪರಿಹರಿಸಲು ಸಾಧ್ಯವಾಗದ ಒಡಕು ಸ್ವಾರ್ಥದೃಷ್ಟಿಯಿಂದ ಉಂಟಾದರೆ, ಸರ್ವಹಿತಕ್ಕೆ (ಸರ್ವೋದಯಕ್ಕೆ) ಧಕ್ಕೆಯನ್ನುಂಟು ಮಾಡುವ ಸ್ವರಾಜ್ಯದ ಅಥವಾ ಪರರಾಜ್ಯದ ಶತ್ರುಗಳು ಒಂದು ಗಣರಾಜ್ಯದ ಪ್ರಭುತ್ವವನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಕಸಿದುಕೊಂಡು ಹೋಗುವುದು ಖಂಡಿತ. ಸದ್ಯದ ರಾಜಕೀಯ ಪಕ್ಷಗಳ ಪರಸ್ಪರ ವಿರೋಧವು ಕ್ರಮೇಣ ಹೊರಗಿನ ವೈರಿಗಳೊಡನೆ ಒಳಸಂಚು ಮಾಡುವವರೆಗೆ ಹೋಗಬಹುದು; ಇಲ್ಲವೇ ಅಧಿಕಾರಾರೂಢ ಪಕ್ಷವು ತನ್ನ ಸದಸ್ಯರ ಪರಸ್ಪರ ಪಾಪ ಸ್ಪರ್ಧೆಯನ್ನು ನಿಲ್ಲಿಸಲಾರದೆ, ಒಕ್ಕಟ್ಟಿನಿಂದ, ಜನವಂಚನೆಯ ನಾನಾ ಉಪಾಯಗಳನ್ನು ಹಿಡಿದು, ಪರಪಕ್ಷೀಯರಲ್ಲಿಯ ಗಣ್ಯರನ್ನು ಆಮಿಷಗಳಿಂದ ತಟಸ್ಥಗೊಳಿಸಿ, ತನ್ನ ಸ್ಥಾನವನ್ನು ಭದ್ರ ಮಾಡಿಕೊಂಡು, ಜನರಲ್ಲಿ ಬಹುಸಂಖ್ಯಾತರ ರಕ್ತವನ್ನು ನಯವಾಗಿ, ಪ್ರಚ್ಛನ್ನವಾಗಿ ಚಿರಕಾಲ ಹೀರುತ್ತ ಹೋಗಬಹುದು. ಜ್ಞಾನಿಗಳ ಸತ್ಯಪ್ರಚಾರ ಶಕ್ತಿಯನ್ನೂ ಅಂಥ ರೂಢ ಮೂಲ ಪಕ್ಷವು ಮಿಲ್ ಮಹಾಶಯನ ವಕೀಲಿಯನ್ನು ಯಾರಿಂದಲಾದರೂ ಪಡೆದರೂ ಅಮೇರಿಕದ ಸಂಯುಕ್ತ ರಾಜ್ಯದಲ್ಲಿ ಒಮ್ಮೆ ಮಾಡಿದಂತೆ[5] ಸಂಪೂರ್ಣ ಅಹಿಂಸಾತ್ಮಕವೆಂದು ತೋರುವ ಕ್ರಮಗಳಿಂದ ನಿಷ್ಫಲಗೊಳಿಸಬಹುದು.

"ಕಾಯಿದೆಗಳು ನಮ್ಮ ಹಕ್ಕುಗಳನ್ನು ಪರಿಚ್ಛೇದಿಸಿ ನಿರ್ಣಯಿಸಿಟ್ಟಿವೆ; ಅವುಗಳಷ್ಟೇ ನಮ್ಮ ಹಕ್ಕುಗಳು" ಎಂಬದು ನೋಯಲ್ ಅನ್ನನ್ನನ ಅಭಿಪ್ರಾಯ. ಆಗ ರಾಜ್ಯಶಕ್ತಿಯು ಅಲ್ಪಬಲದ ವ್ಯಕ್ತಿಯ ಅಥವಾ ಗುಂಪಿನ ಶೋಷಣೆಗಾಗಿ ಕಾಯಿದೆ ಮಾಡಿ, ಅದನ್ನು ಆಚರಣೆಗೆ ತಂದರೂ ಅದನ್ನು ನ್ಯಾಯವೆನ್ನಬೇಕಾಗುವುದು. ಆತ್ಮ, ಆತ್ಮಸಾಕ್ಷಿ, ಶೌರ್ಯ, ಮಾನ, ಮಾನವೀಯತೆಯ ಮರ್ಯಾದೆಗಳಲ್ಲಿ ನಂಬಿಗೆಯಿಲ್ಲದ ಅಥವಾ ನಂಬಿಗೆ ಇದ್ದರೂ ಶರೀರ ಮನಗಳಿಗೆ ಬರುವ ಶಿಕ್ಷೆಗಳನ್ನು ಸಹಿಸಿಕೊಳ್ಳಲಾರದ ವ್ಯಕ್ತಿಗಳಷ್ಟೇ ಮನಸ್ಸಿಲ್ಲದ ಮನಸ್ಸಿನಿಂದ ಅಥವಾ ವಂಚನಾಹಿತ ಸಮಾಧಾನಗಳ ದೆಸೆಯಿಂದ ಸ್ಪಷ್ಟವಾಗಿ ಅನ್ಯಾಯವೆಂದು ಗೊತ್ತಾದ ಯೋಜನೆಯನ್ನು ಅಥವಾ ಅದರ ಆಚರಣೆಯನ್ನು ಪ್ರತಿಭಟಿಸದೆ ಉಳಿದಾರು!

---

5 ಕ್ರಿ.ಶ.೧೯೪೭–೫೧ರ ನಡುವೆ ಹೆನ್ರಿವ್ಯಾಲೇಸ್ ಎಂಬ ಹೊಸ ನಾಯಕನು ಮೂರನೇಯ ರಾಜಕೀಯ ಪಕ್ಷವೊಂದನ್ನು ನಿರ್ಮಿಸ ಹೊರಟಾಗ ಆಗಲೇ ಅಸ್ತಿತ್ವದಲ್ಲಿದ್ದ ಎರಡು ಪಕ್ಷಗಳೂ ಒಳಸಂಚಿನಿಂದ ಅವನನ್ನೂ ಅವನ ರಾಜನೀತಿಯನ್ನೂ ವಂಚನಾ ವಿಧಾನದಿಂದ ಹೇಳಹೆಸರಿಲ್ಲದಂತೆ ಮಾಡಿದವು.

ಮಹಾಭಾರತವು ಆತ್ಮಕ್ಕೆ ಶರೀರದ ಇತರ ಎಲ್ಲ ಅಂಗಗಳಿಗಿಂತಲೂ ಅಧಿಕ ಬೆಲೆ ಕೊಡುತ್ತದೆ. ಸ್ಪಷ್ಟವಾಗಿ ಅನ್ಯಾಯವೆಂದು ಆತ್ಮಸಾಕ್ಷಿಯಾಗಿ ಗೊತ್ತಾದುದನ್ನು ಒಪ್ಪುವ ಅಥವಾ ಒಪ್ಪದಿದ್ದರೂ ನಿಷ್ಕ್ರಿಯ ತಾಟಸ್ಥ್ಯವನ್ನು ವಹಿಸುವ ನಾಗರಿಕತ್ವವು ನಾಗರಿಕತೆಯಲ್ಲ, ಅಸಹಾಯಕತೆ ಅಥವಾ ನಿರ್ಲಜ್ಜತೆ. ಆದುದರಿಂದಲೇ ರಾಜನಿಗಿಂತಲೂ ರಾಜಗುರು ಶ್ರೇಷ್ಠನೆಂಬ ತಿಳಿವಳಿಕೆ ಪ್ರಚಲಿತವಾಗಿದ್ದ ಅವಧಿಯಲ್ಲಿಯೂ–

**"ಗುರೋರಪ್ಯವಲಿಪ್ತ ಸ್ಯ ಕಾರ್ಯಾಕಾರ್ಯಾಮಜಾನತಃ**

**ಉತ್ಪಥಪ್ರತಿಪನ್ನಸ್ಯ ದಂಡೋಭವತಿ ಶಾಶ್ವತಃ"**

"ಗರ್ವಿಷ್ಠನೂ ಅವಿವೇಕಿಯೂ ದುರ್ಮಾರ್ಗಗಾಮಿಯೂ ಆದ ಗುರು (ಅಥವಾ ಹಿರಿಯ) ಯಾವಾಗಲೂ ಶಿಕ್ಷಾರ್ಹನು"– ಎಂಬುದು ವ್ಯಾಸ ಸಿದ್ಧಾಂತ. ರಾಜಶಕ್ತಿಸಂಪನ್ನನು (ಅಥವಾ ಸಂಪನ್ನರು) ಹಾಗಾದಾಗ ಅವನಿಗೂ ಈ ನ್ಯಾಯವೇ ಅನ್ವಯಿಸುವುದರಿಂದ ಬ್ರಿಟಿಷರ ವಿರುದ್ಧವಾಗಿ ಭಾರತ ನಡೆಸಿದ ಸತ್ಯಾಗ್ರಹ–ಯುದ್ಧ ಮುಂತಾದವು ರಾಜದ್ರೋಹವೆಂಬ ಅಧರ್ಮಸ್ವರೂಪದ್ದೆನ್ನಿಸಲಿಲ್ಲ. ಮನು ಕೂಡ ಪ್ರಜಾಕ್ರೋಶದಿಂದ ವೇನಾದಿ ದೊರೆಗಳು ಹತರಾದುದನ್ನು ಉಲ್ಲೇಖಿಸಿದ್ದಾನೆ. ದುರುಪಯುಕ್ತವಾದಾಗ ರಾಜಶಕ್ತಿಯನ್ನು (ಪ್ರಭುತ್ವಸಂಪನ್ನರನ್ನು) ಎಲ್ಲ ಪ್ರಜೆಗಳೂ ಪ್ರತಿಭಟಿಸುವ ಸಾಮರ್ಥ್ಯವನ್ನು ಸಂಪಾದಿಸಿಕೊಂಡಿರುವುದೇ ಸ್ವರಾಜ್ಯ– ಎಂದು ಗಾಂಧಿಯವರು ಹೇಳಿದ್ದು ಮಹಾಭಾರತೀಯ. ಮಾನವ ಮನದ ಅಜ್ಞಾತ ಪ್ರಜ್ಞಾಸ್ತರದಲ್ಲಿ ವಿಶ್ವಾತ್ಮಕೇಂದ್ರ (ವಿಶ್ವೇಶ್ವರ ಕೇಂದ್ರ)ದಿಂದ ಬರುವ ಒತ್ತಡವೇ ಆತ್ಮಸಾಕ್ಷಿ ಅಥವಾ ದಿವ್ಯವಾಣಿ ಎನ್ನುತ್ತಾನೆ ಯೂಂಗ್.

"ವ್ಯಕ್ತಿತ್ವ ಸಮನ್ವಯ" ಎಂಬ ಮಹಾಗ್ರಂಥದಲ್ಲಿ ಯೂಂಗ್ ಮಹಾಶಯನು "ಸೈಕೆ", ವಿಶ್ವಮನ, ವಿಶ್ವಾತ್ಮ, ಅಜ್ಞಾತಪ್ರಜ್ಞೆಗಳ ಸಮಾನಾರ್ಥಕತೆಯನ್ನು ಹೇಳಿದ್ದಾನೆ.

ವಿಶ್ವಾತ್ಮ (ಅಜ್ಞಾತಮನ ಅಥವಾ ಅಜ್ಞಾತಪ್ರಜ್ಞೆ)

| ಜೀವಾತ್ಮ (ವಿಶ್ವಜೀವಶಕ್ತಿ) | ಪರಮಾತ್ಮ |
|---|---|
| (ಭಾವನೋನ್ಮುಖ ಜಟಿಲ ಜಾಲಗಳಿಂದ ಕೂಡಿದ್ದು) | (ಮೂಲ ಪ್ರಜ್ಞೆಯ ಬಿಲ್ಲೆಗಳಿಂದ ಈಶ ಶಕ್ತಿಯುಳ್ಳದ್ದು) |


ವಿಜ್ಞಾತ ಮನ (ಜಾಗ್ರತ್ತಾದ ಮನಸ್ಸು)
ಅಹಂಕಾರ(ವೈಯಕ್ತಿಕ ಜೀವಾತ್ಮ)
(ವಿಜ್ಞಾತಮನಸ್ಸಿನ ಒಳಮುಖ)
ಮಮಕಾರ(ವೈಯಕ್ತಿಕ ಸ್ವಾರ್ಥಶೀಲ)
(ವಿಜ್ಞಾತ ಮನಸ್ಸಿನ ಹೊರಮುಖ)
ಅಜ್ಞಾತಮನ + ವಿಜ್ಞಾತ ಮನ = (ಪ್ರಜ್ಞೆ)
ಭಾವನಾತತ್ವ ಬುದ್ಧಿತತ್ವ
(ಮೂಲಪ್ರವೃತ್ತಿಜನ್ಯ)
ದೇವಧರ್ಮ
(ದೈವೀಸಂಪತ್ತು)
ದೈತ್ಯಧರ್ಮ
(ಆಸುರೀ ಸಂಪತ್ತು)
ವಿಜ್ಞಾತ ಮನ (ಪ್ರಜ್ಞೆ)
ಇಂದ್ರಿಯ ಸಂವೇದನೆ
ವಿಚಾರ(ಆಲೋಚನೆ)
ಭಾವನೆ
ಪ್ರತಿಭಾಫಲನ
ಪ್ರಜ್ಞೆ ಅಥವಾ ಮನ (ಆತ್ಮ)
ಅವಿಜ್ಞಾತ(ಅಧಿಪ್ರಜ್ಞೆ)
(ಸುಷುಪ್ತ)
ಅರ್ಧವಿಜ್ಞಾತ(ಅವಪ್ರಜ್ಞೆ)
(ಸ್ವಪ್ನಮಯ)
ವಿಜ್ಞಾತ(ಪುರಃಪ್ರಜ್ಞೆ)
(ಜಾಗರಿತ)
ಕೇರಳಾದ್ವೈತ
ತುರೀಯ
ಸುಷುಪ್ತ
(ಪ್ರಾಜ್ಞ)
ಸ್ವಪ್ನಮಯ
(ತೈಜಸ)
ಜಾಗರಿತ
(ವಿಶ್ವ)
ಕಾಶ್ಮೀರಾದ್ವೈತ
ತುರೀಯಾತೀತ
ತುರೀಯ
ಸುಷುಪ್ತ
ಸ್ವಪ್ನಮಯ
ಜಾಗೃತ್

ಅಜ್ಞಾತ ಪ್ರಜ್ಞೆಯಲ್ಲಿರುವ ವಿಶ್ವಾತ್ಮ ಪ್ರಜ್ಞೆಯೆಂದರೆ ದೇವರು, ಪರಮಾತ್ಮ (ಅಥವಾ ಕ್ರೈಸ್ತ ಪರಿಭಾಷೆಯಲ್ಲಿ ತಂದೆ); ಆತ್ಮಪ್ರಜ್ಞೆಯೆಂದರೆ (ಕ್ರೈಸ್ತನಂಥ, ಕೃಷ್ಣನಂಥ) ಅವತಾರಪುರುಷ ಸಹಜವಾದ ಪ್ರಜ್ಞೆ, ಮೊದಲನೆಯದರದು ದಿವ್ಯವಾಣಿ, ಎರಡನೆಯದರದು ಅಂತರ್ವಾಣಿ; ಒಂದನೆಯದರಂತೆ ನಡೆದುಕೊಂಡವರು ರಮಣ ಮಹರ್ಷಿಗಳಂಥವರಾದರೆ ಎರಡನೆಯದರಂತೆ ನಡೆದುಕೊಂಡವರು ಗಾಂಧಿಯವರಂಥವರು. ಜ್ಞಾತಪ್ರಜ್ಞೆಯ ಮಧ್ಯಬಿಂದು (ಕೇಂದ್ರ) ಅಹಂಕಾರ; ಪರಿಧಿಪ್ರಜ್ಞೆ (ಹೊರವಲಯದ ಪ್ರಣಾಲಿ) ಮಮಕಾರ: ಕ್ರೈಸ್ತ ಪರಿಭಾಷೆಯಲ್ಲಿ ಒಂದನೆಯದು ಪವಿತ್ರ ಆತ್ಮ (ದೆವ್ವ=ದೇವತೆ), ಎರಡನೆಯದು ಸೈತಾನ! ದಿವ್ಯವಾಣಿ ಆತ್ಮಸಾಕ್ಷಿಯಾದರೆ ಅಂತರ್ವಾಣಿ ಮನಃಸಾಕ್ಷಿ; ಒಂದು ನೈತಿಕವಾದರೆ, ಇನ್ನೊಂದು ನ್ಯಾಯಿಕವಾದುದು; ಒಂದು ವೇದೋಕ್ತಿಯಂತಾದರೆ. ಇನ್ನೊಂದು ನ್ಯಾಯಾಧೀಶೋಕ್ತಿಯಂತೆ. ಎರಡು ವೇದೋಕ್ತಿಗಳಲ್ಲಿ ವಿರೋಧ ಉಂಟಾದಾಗ ನ್ಯಾಯಬುದ್ಧಿ ಯಾವ ನಿರ್ಣಯವನ್ನೂ ಕೊಡಲಾರದು. ಅಂಥ ಸಂದರ್ಭದಲ್ಲಿ ಉಪನಿಷತ್ತಿನ ಮಹಾವಾಕ್ಯದಂಥ ಪೂರ್ಣ ಪ್ರಜ್ಞೆಯ ಸ್ಫೂರ್ತಿಯೊಂದೇ ನಿರ್ಣಯ ಕೊಡಬಲ್ಲದು.

ಬಯಕೆಯ ಬೀಜವಾದ ಮೂಲಪ್ರವೃತ್ತಿ, ಪ್ರತಿಭೆ, ಭಾವನೆಗಳು ಜಾಗ್ರತ ಪ್ರಜ್ಞೆಯಲ್ಲಿ ಮೂಡುವುವಲ್ಲದೆ, ಅಲ್ಲೇ ಹೊಸದಾಗಿ ಹುಟ್ಟುವಂಥವುಗಳಲ್ಲ. ಬುದ್ಧಿಯ ಮೂಲವೂ ಅಜ್ಞಾತ ಪ್ರಜ್ಞಾಸ್ತರವೇ ಆದರೂ ಅದರ ಜ್ಞಾತತ್ವದ ಮಟ್ಟದಲ್ಲಿ ಅನೇಕೀಕೃತವಾಗುವುದರಿಂದ ಅಲ್ಲೇ ಅದು ವಿವೇಚಿಸುವ, ವಿಭಜಿಸುವ, ವಿಶ್ಲೇಷಿಸುವ, ಪೃಥಕ್ಕರಿಸುವ, ಪ್ರತ್ಯೇಕೀಕರಿಸುವ ಜಾಗ್ರತೆಯುಳ್ಳದ್ದಾಗಿರುತ್ತದೆ. ಭಾವನೆಗಳು ಏಕತ್ವೋನ್ಮುಖ, ಅವುಗಳ ಐಕ್ಯವು ಅಜ್ಞಾತಪ್ರಜ್ಞಾಸ್ತರದಲ್ಲಿ. ಬುದ್ಧಿಯೇ ಅವುಗಳನ್ನು ಅನೇಕೀಕರಿಸುವ ಪದಾರ್ಥ. ನವರಸಗಳೂ ಸತ್ವೋದ್ರೇಕದಿಂದ ವಿಕಾಸ ಹೊಂದುವಂಥವು. ಸತ್ವವು ಅಜ್ಞಾತ ಪ್ರಜ್ಞಾಸ್ತರದಲ್ಲಿರುವ ಪರಾಪ್ರಕೃತಿ, ಶುದ್ಧವಾದ ವಿಶ್ವಜೀವಪ್ರಜ್ಞೆ, ಚೈತನ್ಯ. ಅಪರಾ ಪ್ರಕೃತಿರೂಪದ ರಜಸ್ತಮಸ್ಸುಗಳು ಬುದ್ಧಿ ಪ್ರಪಂಚಕ್ಕೆ ಸೇರಿದಂಥವುಗಳು. ಸತ್ವದಿಂದ ಜ್ಞಾನ, ಸತ್ವೇತರ ಪದಾರ್ಥಗಳಿಂದ "ಸೈನ್ಸ್", "ನಾಲೆಜ್", ವಿಜ್ಞಾನ, ವ್ಯಾವಹಾರಿಕ ಜ್ಞಾನ ಮುಂತಾದವುಗಳೆಲ್ಲವುಗಳ ಪ್ರಕಾಶನ. ಆದುದರಿಂದ ಶುದ್ಧ ಶ್ರದ್ಧೆಯೇ ಜ್ಞಾನ, ಏಕಾತ್ಮಕತೆ. ಅದರ ದಾರ್ಢ್ಯವು ಶುದ್ಧ ವಿಚಾರ, ವಿಜ್ಞಾನಗಳಿಗಿಲ್ಲ. ಅಂಧಶ್ರದ್ಧೆಯು ಶ್ರದ್ಧಾಭಾಸ; ಅದನ್ನು ವಿಚಾರ–ವಿಜ್ಞಾನಗಳು ನಿರುತ್ತರಗೊಳಿಸಬಲ್ಲವಲ್ಲದೆ, ಜ್ಞಾತ ಪ್ರಜ್ಞಾಸ್ತರದಿಂದ ಓಡಿಸಬಲ್ಲವು; ಆದರೆ ಅಜ್ಞಾತ ಪ್ರಜ್ಞಾಸ್ತರದಿಂದ ಅದನ್ನೋಡಿಸಲು ಶುದ್ಧ ಶ್ರದ್ಧೆಯ ಸಾಕ್ಷಾತ್ಕಾರ ಮಾತ್ರ ಸಮರ್ಥ. ಶ್ರದ್ಧೆಯು ಸರ್ವಭಾವನಾಮೂಲವಾದ ವಿಶ್ವಾತ್ಮಕತೆಯುಳ್ಳದ್ದು; ಅದು ವಿಜ್ಞಾತಕ್ಕೆ ಅವಿಜ್ಞಾತ.[6]



6 ಓದಿರಿ: Collected works of C.G.Jung. Vol 10: Civilisation in Transition-Ch. A psychological view of Conscience.

# ೪

# ತಾತ್ವಿಕ ತಳಪಾಯ

"ನಮಗೆ ತೋರುವ ಗುಣಗಳ ಆಧಾರವಾಗಿ ವಸ್ತುವೊಂದರಲ್ಲಿರುವ ಸಾರವೇ ಸತ್ಯ" ಎಂಬುದು ಲೋಕೆಯ ಮತ. ಸಕ್ರಿಯ ಪೂರ್ವಗೃಹೀತ ಭಾವ (ಕಲ್ಪನೆ)ಗಳು ಒಂದು ಮೂರ್ತಸ್ವರೂಪಕ್ಕೆ ಬಂದಾಗ ಕಂಡು ಬರುವ ಐಕ್ಯವೆಂಬುದೇ ಮನಸ್ಸು ಎಂದನವ. ವಸ್ತುವೊಂದರ ಸರಳ ಭಾವಗಳ ಸಾಹಚರ್ಯದ ನಿತ್ಯತೆಯನ್ನು ಇಂದ್ರಿಯಗಳು ಸಮನ್ವಯಗೊಳಿಸಿದಾಗ ಆ ಜಟಿಲ ಭಾವವನ್ನು ವಸ್ತು ಅಥವಾ ದ್ರವ್ಯವೆಂದು ಮನಸ್ಸು ಅರ್ಥಮಾಡಿಕೊಳ್ಳುತ್ತದೆ.

ಸಂವೇದನೆಗಳೆಲ್ಲವೂ ಭಾವನಾತ್ಮಕವಾಗಿರುವುದರಿಂದ ವಸ್ತುಗುಣಗಳೆಲ್ಲವೂ ಭಾವನಾಧರ್ಮಗಳು, ವಸ್ತುಗತ ಧರ್ಮಗಳಲ್ಲ- ಎಂಬ ಆಧುನಿಕತೆ ಲೋಕೆಗಿದ್ದಿಲ್ಲ. ಆವಯವಿಕ ತತ್ವಪ್ರಸ್ಥಾನಕ್ಕೆ ಅವನ ವಿಚಾರವು ಹತ್ತಿರವಾಗಿತ್ತು. ಭಾವ ಅಥವಾ ಕಲ್ಪನೆಗಳೆಲ್ಲವೂ ಸಾಮಾನ್ಯತೆಯನ್ನು (ಸರ್ವಸಾಧಾರಣತೆಯನ್ನು) ಉಳ್ಳಂಥವು; ಉಕ್ತ ಸರಳ ಭಾವಗಳ ಸಾಧಾರಣ ಧರ್ಮಕ್ಕೆ ಆಧಾರವಾದ ಬಾಹ್ಯವಸ್ತುವಿಗೆ ವಸ್ತುನಿಷ್ಠ ಸತ್ಯತೆ ಇದೆ ಎಂದ ಡೆಸ್ಕಾರ್ಟಿಸ್. ಭಾವನೆ ವಸ್ತುವಿನ ಜಾತಿಧರ್ಮವನ್ನಲ್ಲದೆ, ವ್ಯಕ್ತಿಧರ್ಮವನ್ನೂ ಗ್ರಹಿಸಬಲ್ಲದು. ಭಾವನೆಯ ಉದಯ-ಅಸ್ತಿತ್ವಗಳೆರಡಕ್ಕೂ ವಸ್ತುವಿನ ವೈಯಕ್ತಿಕತೆ ಅಥವಾ ವಿಶೇಷಧರ್ಮವೇ ಆಧಾರ.

ಪ್ರಾವಾಹಿಕವಾದ ಉತ್ತರೋತ್ತರ ಕ್ಷಣಿಕ ಭಾವಕಣಗಳು ಸಂವೇದನಾ ರೂಪದಲ್ಲಿ ಮನಃಸ್ಥಿತಿಯನ್ನು ಹೊಂದುತ್ತವೆ; ಆದರೆ ಅವು ಪರಸ್ಪರ ಭಿನ್ನವಾದಂತವು ಎಂಬುದು ಆವಯವಿಕ ಪ್ರಸ್ಥಾನ. ಲೋಕೆಯ ಬಾಹ್ಯ ವಸ್ತುವು ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳದೆ ಬದಲಾಗುತ್ತ ಹೋಗುತ್ತದೆ. ಇದು ಬೌದ್ಧರ ಕ್ಷಣಭಂಗವಾದವನ್ನು ಅಂಶತಃ ಹೋಲುತ್ತದೆ; ಅದರ ಕುರ್ವದ್ರೂಪದ ಕಲ್ಪನೆಯನ್ನು ಸರಿಗಟ್ಟುತ್ತದೆ.

## ವ್ಯಾವಹಾರಿಕ ವಸ್ತುಸಾರ

ಆವಯವಿಕ ಪ್ರಸ್ಥಾನದಲ್ಲಿ ವಸ್ತುನಿರಪೇಕ್ಷವಾದ ಮನಸ್ಸೆಂಬುದಿಲ್ಲ. ಮಾನಸಕ್ರಿಯೆಯು ಮೂಲತಃ ಭಾವನಾತ್ಮಕ; ಕೆಲವೇ ಸತ್‌ಪದಾರ್ಥಗಳಲ್ಲದು ಭೌದ್ಧಿಕತೆಯನ್ನು ಮುಟ್ಟುತ್ತದೆ.

ಪ್ರತಿಯೊಂದು ವಸ್ತುವೂ ತನ್ನತನವನ್ನು ಕಳೆದುಕೊಳ್ಳದ ಮೂರ್ತೀಕರಣ. ವಿಕಾಸದ ಐಕ್ಯಸಿದ್ಧಿ. ಇಂಥ ಮೂರ್ತವಸ್ತುಗಳ ಸಮಾಹಾರವೇ ಪ್ರಪಂಚ, ವಿಶ್ವ. ಲೋಕೆಯೂ ಹ್ಯೂಮನೂ ಸಂವೇದನಾತ್ಮಕ ಭೌತವಾದಿಗಳು. ಪ್ರತ್ಯಕ್ಷ ಭಾವದ ಬದಲಾಯಿಸುವ ಸಾಧ್ಯತೆಯನ್ನು ಲೋಕೆ 'ಶಕ್ತಿ' ಎಂದು ಕರೆಯುತ್ತಾನೆ. ಕರಗಿಸುವ ಶಕ್ತಿ ಒಂದಕ್ಕಿದ್ದರೆ ಕರಗುವ ಶಕ್ತಿ ಇನ್ನೊಂದಕ್ಕಿರುತ್ತದೆ; ಗೆಲ್ಲುವ ಶಕ್ತಿ ಒಬ್ಬನಿಗಿದ್ದರೆ ಸೋಲುವ ಶಕ್ತಿ ಇನ್ನೊಬ್ಬನಿಗಿರುತ್ತದೆ; ಶಕ್ತಿಯು ಇಂದ್ರಿಯ ಗ್ರಾಹ್ಯ ವಸ್ತುಗಳ ಬದಲಾವಣೆಗೆ ಸಂಬಂಧಿಸಿದ್ದು: ಒಂದು ಸಕ್ರಿಯ ಶಕ್ತಿ, ಇನ್ನೊಂದು ನಿಷ್ಕ್ರಿಯ ಶಕ್ತಿ. ಅವು ಪರಸ್ಪರ ಸಾಪೇಕ್ಷ. ವಸ್ತುಸಾರ ಮತ್ತು ಶಬ್ದಸಾರಗಳು ಭಿನ್ನ; ಶಬ್ದ ಕೇವಲ ನಾಮ.

ಜಡ (ಜೀವೇತರ) ಜಗತ್ತಿನ ಮೂಲಭೂತ ಶಕ್ತಿಯ ಸೂಕ್ಷ್ಮತಮ ಕಣಗಳನ್ನು ಭೌತಶಾಸ್ತ್ರವು ೨೨ ಬಗೆಯಾಗಿ ವಿಂಗಡಿಸಿದೆ: (೧) Proton, Antiproton, Neutron, Antinutron, Lambda, Chi, Sigma, Antisigma, Neutral Sigma ಎಂಬ ಗುರು ಅಥವಾ ಭಾರವತ್ತಾದ ಕಣಗಳು; (೨) Pion, Antipion, Neutral pion,K-meson, Anti-K-meson, Neutral-K-meson, ಎಂಬ ಮಧ್ಯಮ ಭಾರದ ಕಣಗಳು; ಮತ್ತು (೩) Electron, Positron, Muon, Anti-muon ಎಂಬ ಲಘು ಕಣಗಳು; (೪) ಕೊನೆಯದಾಗಿ, Photon, Neutrino, Anti-Neutrino ಎಂಬ ಭಾರರಹಿತ ಕಣಗಳು.*

ಏಕೀಕೃತ ದೇಶ–ಕಾಲದ ಅಚಲ ಹಿನ್ನೆಲೆಯ ಮೇಲೆ ಚಂಚಲಿಸುವ ಮೂಲಶಕ್ತಿಯ ಜಡ ಪ್ರಕಾರಗಳು ೨೨. ಅಣುವಿಶ್ಲೇಷಣದಲ್ಲಿ ಈ ೨೨ ವಿಧಗಳು ಕಂಡು ಬಂದಿವೆ. ಹಾಗೇ ದ್ರವ್ಯವು ಗುಣಜಾಲವೆಂದೂ ಗುಣಜಾಲವು ಕ್ರಿಯಾಸಂತಾನವೆಂದೂ ಕಂಡು ಹಿಡಿಯಲಾಗಿದೆ; ಒಂದೊಂದು ಘಟಿತವಾದ, ಸಾಪೇಕ್ಷವಾಗಿ ಪ್ರತ್ಯೇಕೀಕೃತವಾದ, ತನ್ನತನದ ಐಕಾತ್ಮ್ಯವನ್ನು ಸಮನ್ವಯಿಸಿಕೊಂಡು ತತ್ಕಾಲದಲ್ಲಿ ಅತ್ಯವಿಭಜನೀಯವಾದ ಘನ ಪದಾರ್ಥವೇ ದ್ರವ್ಯ; ಅದರ ಅಂಶಗಳ ಚಂಚಲತೆ ಮತ್ತು ಅದರ (ಇಡಿಯ) ಚಂಚಲತೆಗಳ ನಿಯತಾವಧಿಕ ಸಮತೋಲವು ಅದನ್ನು ಇಂದ್ರಿಯಗ್ರಾಹ್ಯ ಎನ್ನಿಸುವುದು. ಘನತೆ, ವಿಸ್ತಾರ, ಆಕಾರ, ಚಲನ, ವಿಶ್ರಾಂತಿ, ಸಂಖ್ಯೆ ಎಂಬೀ ಆರು ಅವಯವಗಳ ಅವಿನಾಭಾವಿಯಾದ ಸಹಜ ಗುಣಗಳು; ಇವುಗಳನ್ನೇ ಪ್ರಧಾನ ಅಥವಾ ಪ್ರಾಥಮಿಕ ಗುಣಗಳೆಂದು ಕರೆಯಲಾಗಿದೆ. ವಿಜ್ಞಾನಗ್ರಾಹ್ಯವಾದ, ಇವುಗಳಿಗಿಂತ ಭಿನ್ನವಾದ, ಇಂದ್ರಿಯಗ್ರಾಹ್ಯ ಗುಣಗಳು–ರೂಪ, ರಸ, ಗಂಧ, ಶಬ್ದ, ಸ್ಪರ್ಶ ಮುಂತಾದವುಗಳು; ಇವು ಮಾನುಷ ಪ್ರಜ್ಞೆಯಲ್ಲಿ (ವಿಜ್ಞಾತಮನದಲ್ಲಿ) ಬಹಳ ಬದಲಾವಣೆಗೆ ಒಳವಾದಂಥವುಗಳೂ ಕಡಿಮೆ ಸ್ಥಿರತೆ (ಸಾತತ್ಯ) ಉಳ್ಳಂಥವೂ, ವಿವಿಧ ನಮೂನೆಗಳಲ್ಲಿ ಗೋಚರವಾಗತಕ್ಕಂಥವುಗಳೂ ಆದ ಗೌಣ ಅಥವಾ ದ್ವಿತೀಯ ವರ್ಗದ ಗುಣಗಳು.

---

* (೧) ಧನ ವಿದ್ಯುತ್ಕಣ, ಪ್ರತಿಧನ...ತಟಸ್ಥ..., ಪ್ರತಿತಟಸ್ಥ..., ಲಂಬ್ದ..., ಚಿ..., ಸಿಗ್ಮ..., ತಟಸ್ಥ ಸಿಗ್ಮ..., ಪ್ರತಿಸಿಗ್ಮ..., (೨) ಪೀಯನ್ನು..., ಪ್ರತಿಪೀಯನ್ನು..., ತಟಸ್ಥಪೀಯನ್ನು..., ಕೇಮೆಸನ್ನು..., ಪ್ರತಿಕೇಮಸನ್ನು..., ತಟಸ್ಥಕೇಮೆಸನ್ನು..., (೩) ಋಣ ವಿದ್ಯುತ್ಕಣ, ಅತಿಧನ..., ಮ್ಯೂವನ್ನು..., ಪ್ರತಿಮ್ಯೂವನ್ನು; (೪) ಜ್ಯೋತಿರ್ವಿದ್ಯುತ್ಕಣ, ಉಪತಟಸ್ಥ..., ಪ್ರತ್ಯುಪತಟಸ್ಥ...

ವಿಜ್ಞಾನಗ್ರಾಹ್ಯವಾದ ಗುಣಗಳು ಎಂದರೆ ಪ್ರಯೋಗ ಸಿದ್ಧ ಅಥವಾ ಪ್ರಯೋಗವನ್ನಾಧರಿಸಿ ವಸ್ತುನಿಷ್ಠವೆಂದು ಅನುಮಾನಿಸಿ ಸಮರ್ಥಿಸಲಾಗುವ ಸ್ಥಿರತರ ಗುಣಗಳೆಂದು ಅರ್ಥ. ಇವುಗಳನ್ನು ಮೂಲಭೂತ ಅಥವಾ ಪ್ರಧಾನ ಎಂಬವರು ಭಾವನೇಚ್ಛಾಸ್ಪರ್ಶವಿಮುಖರಾದ ಶುದ್ಧ ಭೌದ್ಧಿಕ ಜಾಗ್ರತ್ ಪ್ರಜ್ಞಾಪರರಾದ ವೈಜ್ಞಾನಿಕ ಭೌತವಾದಿಗಳು, ತಾರ್ಕಿಕ ವಿಶ್ಲೇಷಣಾವಾದಿಗಳು ಮತ್ತು ತಾರ್ಕಿಕ ವಿಭಾವವಾದಿಗಳು; ಇವರಾರೂ ಆವಯವಿಕ ತತ್ವಪ್ರಸ್ಥಾನಕ್ಕೆ ಸೇರಿದವರಲ್ಲ. ರಸೆಲ್ಲನು ತಾರ್ಕಿಕ ವಿಶ್ಲೇಷಣವಾದಿ; ವೈಟ್‌ಹೆಡ್ಡ್‌ನು ಅವಯವ ಸಂಘಟನವಾದಿ (ಆವಯವಿಕ ತತ್ವಪ್ರಸ್ಥಾನವಾದಿ). ವ್ಯಾಸದೃಷ್ಟಿಯಲ್ಲಿ ದೇಶ–ಕಾಲೈಕ್ಯದ ಅಚಲಜಡಕ್ಕೆ ಪೂರ್ಣಚೈತನ್ಯ ರೂಪದ ಪರಬ್ರಹ್ಮವೇ ಆಧಾರ; ಈ ಅಚಲ ಹಾಗೂ ಈಶ್ವರೇಚ್ಛೆಯಂತೆ ಚಲ ಎನ್ನಿಸುವ ಜಡವೇ ಅವ್ಯಕ್ತವಾದ ಶಕ್ತಿ, ಅಪರಾಪ್ರಕೃತಿ, ಪ್ರಧಾನ, ಮಾಯೆ. ಸತ್ವರಜಸ್ತಮಗಳ ಸಮತೋಲದ ರೂಪದ ನಿಷ್ಕ್ರಿಯ ಜಡಪ್ರಧಾನದ ಚಲನವು ಪುರುಷ (ಶುದ್ಧ ಚೈತನ್ಯಾತ್ಮ) ದೃಷ್ಟಿಪಾತದಿಂದ ಆರಂಭವಾಗುವುದೆಂಬ ಸಾಂಖ್ಯ ವಿಚಾರದಂತೆ, ದೇಶ–ಕಾಲಗಳ ಪ್ರತ್ಯೇಕತೆಯನ್ನು ನಂಬಿದ ಮೇಲೆ ನಮ್ಮ ಜಾಗ್ರತ್ ಪ್ರಜ್ಞೆಯು ಗ್ರಹಿಸಲಾರಂಭಿಸುವ ೨೪ ನ್ಯಾಯವೈಶೇಷಿಕ ಗುಣಗಳು ಜಗತ್ತಿನ ಇಂದ್ರಿಯಾಧೃತ ಪ್ರತ್ಯಕ್ಷ ಅನುಮತಿಗಳೆನ್ನಿಸುವ ವ್ಯಾವಹಾರಿಕ ಸತ್ಯದಲ್ಲಿ ನಿಷ್ಠವಾದವುಗಳು.

## ವಿಜ್ಞಾನ ವಿಚಾರ

ಆವಯವಿಕ ಪ್ರಸ್ಥಾನದಲ್ಲಿ ದೇಶ, ಕಾಲ ಮತ್ತು ಈಶ್ವರ ಎಂಬ ಮೂರು ಪದಾರ್ಥಗಳನ್ನು ಮೌಲಿಕವೆಂದು ಗ್ರಹಿಸಲಾಗುತ್ತದೆ. ವ್ಯಕ್ತ ಪ್ರಕೃತಿಯು ಪ್ರತ್ಯಕ್ಷಗ್ರಾಹ್ಯವಾದ ಘಟನೆಗಳ ಆದಿಮಧ್ಯಾಂತ ಸಹಿತವಾದ ಮಹಾಪ್ರಕ್ರಿಯಾ ಪ್ರವಾಹ. ಅದರ ಮಧ್ಯವು ದೇಶಿಕ ಮತ್ತು ಕಾಲಿಕ ವರ್ತಮಾನ, ಆದ್ಯಂತಗಳು ಭೂತಭವಿಷ್ಯತ್ತುಗಳು ಅವ್ಯಕ್ತವು ಅಚಲ ಪ್ರಕೃತಿ, ಅವಿಕಾರಿ ಪ್ರಕೃತಿ, ವ್ಯಕ್ತಪ್ರಕೃತಿಯ ಮೂಲಾಧಾರ. ಪ್ರತ್ಯಕ್ಷ ಪ್ರಕೃತಿ=ದೇಶ+ಕಾಲ+ಕಾರ್ಯ; ಪ್ರತ್ಯಕ್ಷ=ಸಂವೇದನೆ+ಸ್ಮಾರ್ತ ವಿಚಾರ. ದ್ವಂದ್ವಗಳಾದ ವಸ್ತುನಿಷ್ಠತೆ–ವ್ಯಕ್ತಿನಿಷ್ಠತೆಗಳು ದೃಷ್ಟಿಕೋನದಿಂದ ಉಪಾಹಿತವಾದಂಥವು.

ವಸ್ತುನಿಷ್ಠ ವಿಚಾರ ಪ್ರಣಾಲಿಯು ದ್ರವ್ಯದಲ್ಲಿ ಗುಣಕ್ರಿಯೆಗಳೆಂಬ ಭಿನ್ನ ಪದಾರ್ಥಗಳಿರುವುದೆಂಬ ಕಲ್ಪನೆಯನ್ನು ಶುದ್ಧೀಕರಿಸಿ ವಿಜ್ಞಾನ ಎಂದು ದ್ರವ್ಯ=ಗುಣ=ಕರ್ಮ ಎಂದೆನ್ನಿಸುತ್ತದೆ. ವಸ್ತುನಿಷ್ಠತೆ ವ್ಯಕ್ತಿನಿಷ್ಠತೆಗಳು ಅಪೂರ್ಣ, ಸಾಪೇಕ್ಷ. ನಿಸರ್ಗದ ಕರ್ಮಸಾಗರದಿಂದ ಒಂದು ಕರ್ಮ (ವಸ್ತು)ವನ್ನು ಆಯ್ದುಕೊಳ್ಳುವ ಕ್ರಿಯೆಯೊಂದು ಅಮೂರ್ತೀಕರಣ (ಭಾವಮಾತ್ರಗ್ರಹಣ). ತರ್ಕದ ವಸ್ತುವಿನ ನಿಜಸ್ವರೂಪವು ವ್ಯಾಕರಣ ಕರ್ಮ. ವ್ಯಾಕರಣದ ಕರ್ತೃವು ಒಮ್ಮೆ ಕರಣವಾದರೆ ಇನ್ನೊಮ್ಮೆ ಕರ್ಮವಾಗಬಲ್ಲದು. ವಸ್ತುವಿನ ಕಾರಕ–ಕಾರಕೇತರ ಸಂಬಂಧಗಳೂ ಜಡತ್ವ–ಸಚೇತನತೆಗಳೂ ಅಧಮ–ಮಧ್ಯಮ–ಉತ್ತಮ ಪುರುಷತ್ವಗಳೂ ಪರಿವರ್ತನೀಯ; ಅದರ ಸ್ಥಾಯಿತ್ವದ ಅವಧಿ ವಿವಿಧ ದೇಶಕಾಲ–

ಸ್ವರೂಪಗಳಲ್ಲಿ ವಿವಿಧ. ಅಂದರೆ ಸ್ಥಾನ, ಸಂಬಂಧ, ಗುಣಗಳೆಲ್ಲವೂ ರೂಪಾಂತರ ಹೊಂದುವಂಥವು. ಈ ಭೇದಗಳೂ ಪರಿಮಾಣ ಮೂಲವಾದಂಥವು; ಸಂಖ್ಯೆಯು ಪರಿಮಾಣಾಂತರ್ಗತ. ಕಾಲಪರಿಮಾಣ ದೇಶಪರಿಮಾಣಗಳೆರಡೂ ಸಂಕೋಚ ವಿಸ್ತಾರ ಸ್ವರೂಪಗಳಿಂದ ಭಾಸವಾಗುತ್ತವೆ.

## ಸಮನ್ವಯ

ಅಚಲ, ನಿಷ್ಕ್ರಿಯ, ಏಕಪ್ರಕೃತಿಯ ಗೀತೋಕ್ತ ಅಕ್ಷರ ಪುರುಷ+ಅವ್ಯಕ್ತ ಪ್ರಕೃತಿ; ಚಲ, ಸಕ್ರಿಯ, ಅನೇಕೀಕಾರಕ ಪ್ರಕೃತಿಯು ಕ್ಷರಪುರುಷ+ವ್ಯಕ್ತಪ್ರಕೃತಿ. ಪ್ರಕೃತಿಯಿಂದ ಅದರ ಪ್ರೇರಕ ಶಕ್ತಿಯನ್ನು ಮಾನಸಿಕವಾಗಿ ಅಮೂರ್ತಿಕರಿಸಿ ಹೊರದೆಗೆದರೆ, ಆ ಹೊರದೆಗೆದ ಪದಾರ್ಥವೇ ಪುರುಷ. ಗೀತೆಯ ಉತ್ತಮ ಪುರುಷನು ಈ ಇರುವಿಕೆ ಆಗುವಿಕೆಗಳ (ಅಕ್ಷರಗಳ) ನಿಯಾಮಕವಾದ ಈಶ್ವರಶಕ್ತಿ ಅಥವಾ ನಿಸರ್ಗನಿಯಮಗಳು!

ಸತ್ವವು ಅವ್ಯಕ್ತ, ನಿಷ್ಕ್ರಿಯ ಪ್ರಕೃತಿಭಾವ; ರಜಸ್ತಮಸ್ಸುಗಳು ವ್ಯಕ್ತ, ಕ್ರಿಯಾಪದ, ಪ್ರಕೃತಿಭಾವ; ಪುರುಷತ್ವವು ಆತ್ಮತ್ವ, ಅಹಂತ್ವ, ಕರ್ತೃತ್ವ–ಭೋಕ್ತೃತ್ವ, ಕೇಂದ್ರೀಭೂತತ್ವ, ಇರುವಿಕೆ–ಆಗುವಿಕೆಗಳ ಅಪರಿಹಾರ್ಯ ಅವಿನಾಭಾವವುಳ್ಳ ವ್ಯಕ್ತಿತ್ವಪ್ರಜ್ಞೆ, ಈ ಪಟ್ಟಿಯಿಂದ ಭೋಕ್ತೃತ್ವವನ್ನು ತೆಗೆದರೆ ಈಶ್ವರತ್ವದ ಕಲ್ಪನೆ ಬರುತ್ತದೆ; ಅದರ ಜೊತೆಗೆ ವ್ಯಕ್ತಿತ್ವದ ಕಲ್ಪನೆಯನ್ನೂ ತೆಗೆದರೆ ಪರಬ್ರಹ್ಮತ್ವದ ಕಲ್ಪನೆ ಬರುತ್ತದೆ.

ಭಾವನೇಚ್ಛಾತ್ಮಕ ತಿಳಿವಳಿಕೆಯೇ ಬೌದ್ಧಿಕ ತಿಳುವಳಿಕೆಯ ಮೂಲ. ಅವೆರಡಕ್ಕೂ ಸತ್ವದಜ್ಞಾನವು ಮೂಲ; ಸತ್ವಕ್ಕೆ ಪುರುಷತ್ವ ಸೇರಿಸಿದರೆ ಈಶ್ವರತ್ವವಾಗುತ್ತದೆ; ಸತ್ವಜ್ಞಾನವಾಗುತ್ತದೆ; ಅದಕ್ಕೆ ಪರಬ್ರಹ್ಮಪ್ರಜ್ಞೆ ಆಧಾರ.

ಶುದ್ಧ ಪ್ರಜ್ಞೆಯಷ್ಟೇ ಶಾಶ್ವತವೆಂದು ತಿಳಿದು, ಅದನ್ನು (ಪ್ರಜ್ಞೆಯನ್ನು) ಮಾನಸಿಕ ಸಂಬಂಧಗಳಿಂದ ಪ್ರತ್ಯೇಕಿಸಿ ತೆಗೆದ ಆ ಮೂರ್ತೀಕರಣದ ಕೌಶಲವೇ ಗೀತೋಕ್ತ ಆತ್ಮಜ್ಞಾನಯೋಗ, ಬ್ರಹ್ಮ ಜ್ಞಾನಯೋಗ. ಅದು ಭಾವನೆ, ಇಚ್ಛೆ, ಬುದ್ಧಿಗಳೆಲ್ಲವನ್ನು ವ್ಯಾಪಿಸಿದ್ದು ಅವುಗಳಿಂದ ಸ್ವತಂತ್ರವಾಗಿರುವ ದೃಢಾನುಭಾವವನ್ನು ಹೊಂದುವದೇ ಸಾಕ್ಷಾತ್ಕಾರ. ಅಪರೋಕ್ಷಾನುಭೂತಿ. ಜಾಗ್ರತಪ್ರಜ್ಞೆಯ ಜಗಜ್ಞಾನವೆಲ್ಲವೂ ಸಂಬಂಧಾತ್ಮಕ ಅಥವಾ ವಿಶೇಷಣಾತ್ಮಕ ಸಂಬಂಧಗಳೆಲ್ಲವೂ ಸೀಮಾಕರಣಜನ್ಯ; ಅವುಗಳ ಅಸೀಮಾಕರಣವೇ ಬ್ರಹ್ಮತ್ವದ ಸಾಕ್ಷಾತ್ಕಾರ, ಮೋಕ್ಷ, ಸ್ಥಿತಪ್ರಜ್ಞತೆ, ಬ್ರಾಹ್ಮೀಪ್ರಜ್ಞೆ, ಭಾವನೇಚ್ಛೆಗಳನ್ನೊಳಗೊಳ್ಳದ ಅಮೂರ್ತೀಕರಣವು ಕಲ್ಪನಾ ವಿಲಾಸ, ಶುಷ್ಕವೇದಾಂತ, ಶಾಬ್ಧಿಕ ಅರ್ಥಜ್ಞಾನ, ಪ್ರತೀಕಾತ್ಮಕ (ಸಂಕೇತಾತ್ಮಕ, ಗಣಿತಾತ್ಮಕ, ತರ್ಕಾತ್ಮಕ, ಊಹಾತ್ಮಕ, ಅನುಮಿತ್ಯಾತ್ಮಕ, ಪರೋಕ್ಷಾನುಭವ). ಬುದ್ಧಿ–ಭಾವನೆ–ಇಚ್ಛೆಗಳ ವಿಶ್ವಪ್ರಮಾಣದ ವಿಸ್ತರಣವು ವಿಶ್ವಾತ್ಮಕತ್ವ ಅಥವಾ ಈಶ್ವರತ್ವ; ಇದನ್ನು ದಿವ್ಯೀಕರಣವೆನ್ನಬಹುದು; ವಿಶ್ವೋತ್ತರತ್ವವು ಬ್ರಾಹ್ಮೀಕರಣ ಜನ್ಯವಾದ ಅಸೀಮತ್ವ, ಅನಂತತ್ವ, ಕೇವಲ ಪೂರ್ಣಸತ್ಯತ್ವ, ಆನಂದಮಯತ್ವ.

## ಆಕಸ್ಮಿಕತೆಯ ತತ್ವದ ಪರಿಣಾಮ

ಕಾರಣವಿಲ್ಲದೆ ಕಾರ್ಯವಿಲ್ಲ ಎಂಬುದು ಬುದ್ಧಿಯ ಸಹಜಗುಣ. ಅದನ್ನು ಬಿಟ್ಟರೆ ಚಿಂತನ, ವಿಚಾರ, ತರ್ಕ ಎಂಬುದಕ್ಕೆ ಅರ್ಥವಿಲ್ಲ; ವಿಜ್ಞಾನವು ಅಜ್ಞಾನವಾಗುವದು; ಆದುದರಿಂದ ಅನಂತಕಾರಣ ಪರಂಪರೆ ದುರೂಹ್ಯವಾಗುವುದರಿಂದ ಮತ್ತು ಯಾವ ವಿಜ್ಞಾನ ನಿಸರ್ಗನಿಯಮವೂ ಜಗತ್ತಿನ ಎಲ್ಲ ಕಾರ್ಯಗಳಿಗೂ ಕಾರಣವಾಗಬಲ್ಲದೆಂದು ಹೇಳಲು ಸಾಧ್ಯವಿಲ್ಲವೆಂಬುದನ್ನು ಭೌತಶಾಸ್ತ್ರದ ಅನಿಶ್ಚಿತತಾ (ಕಾದಾಚಿತ್ಕತಾ) ಸಿದ್ಧಾಂತವು ಸಾರಿರುವುದರಿಂದಲೂ ಅನಂತ, ಅಸೀಮ, ಅವ್ಯಯ, ಅದ್ವಿತೀಯ, ಸರ್ವಧಾರಿಯಾದ ಒಂದು ಪದಾರ್ಥವನ್ನು ಕಲ್ಪಿಸಿಯೇ ಚಿಂತಕನು ವಿರಮಿಸಬೇಕಾಗುತ್ತದೆ. ನಿತ್ಯಪ್ರಶ್ನೆಯೆಂದು ಮೂಲಕಾರಣದ ಬಗ್ಗೆ ಕೇಳಬಾರದೆಂಬುದು ದೇಶದ (Space) ಆಚೆಗೆ ಏನಿದೆ? ಎಂದು ಕೇಳಬೇಡಿರಿ– ಎಂದು ಐನ್‌ಸ್ಟೀನ್ ಹೇಳಿದ ಹಾಗಾಗುತ್ತದೆ. ಪ್ರತಿಯೊಂದು ತಲೆಮಾರಿನಲ್ಲೂ ವಿಶ್ವದ ವಿಜ್ಞಾನವು ಪರಮ ಸತ್ಯದ ಹತ್ತಿರ ಹತ್ತಿರಕ್ಕೆ ಹೋಗುತ್ತಿದೆ ಎಂಬ ರಸೆಲ್ಲನ ಪೂರ್ವಗ್ರಹವು ಪ್ರಮಾಣಸಿದ್ಧವಲ್ಲ–Law of chance– ಯದೃಚ್ಛೆಯ ಸೂತ್ರವನ್ನು ವಿಜ್ಞಾನ ಘೋಷಿಸಿದ ಮೇಲೆ ಖಗೋಲ ಶಾಸ್ತ್ರ ಜೀವಶಾಸ್ತ್ರಗಳು ಕಾವ್ಯಮಯವಾಗುತ್ತ ಹೋದಮೇಲೆ!

ಅಚಲವಾದ ದೇಶವು (ಅವಕಾಶವು) ಪರಿಸೀಮಿತವೆಂದು ಸಾರಿದ ಮೇಲೆ ಅದಕ್ಕೆ ಅದಕ್ಕಿಂತ ಹೆಚ್ಚು ವ್ಯಾಪಕವಾದ ಆಧಾರ ಅಥವಾ ಹಿನ್ನೆಲೆ ಬೇಕಾಯಿತು. ಅದೇ ವ್ಯಾಸೋಕ್ತ ಬ್ರಹ್ಮ (ಪರಬ್ರಹ್ಮ). ಅದನ್ನು ಅಜ್ಞಾತವೆನ್ನಿರಿ, ಊಹ್ಯ ವ್ಯಾಪ್ತಿಗೆ ಒಳಪಡದ ನಿಸರ್ಗವೆನ್ನಿರಿ, ಕಾದಾಚಿತ್ಕ ಶಕ್ತಿಯೆನ್ನೀರಿ–ಏನೆಂದರೂ ಸರ್ವನಿರಪೇಕ್ಷ ಪದಾರ್ಥವೊಂದು ಸರ್ವಸಾಪೇಕ್ಷಗಳಿಗೂ ಮೂಲವಾಗಿರಬೇಕಾದುದು ವೈಚಾರಿಕ ಅವಶ್ಯಕತೆ. ಪರಿಮಿತ ಪದಾರ್ಥಗಳ ಪರಸ್ಪರ ಸಾಪೇಕ್ಷತೆ ವಿವಿಧವಾಗಿರುವುದರಿಂದ, ಅಲ್ಪವ್ಯಾಪ್ತಿ ಸಂಪನ್ನವಾಗಿರುವುದರಿಂದ, ಅದನ್ನು ಏಕಮೇವಾದ್ವಿತೀಯವಾದ ವಿಶ್ವಾಧಾರ ರೂಪದ ಮೂಲ ಸಂಬಂಧ ಎಂದು ಊಹಿಸಲು ಬರುವುದಿಲ್ಲ. ಅಜ್ಞಾತವನ್ನು 'ಅ' ಎಂದು ಇಟ್ಟುಕೊಂಡರೂ ಒಂದೇ 'ಬ' ಎಂದು ಇಟ್ಟುಕೊಂಡರೂ ಒಂದೇ. ಅದರ ಸರ್ವಾಧಾರತ್ವವೊಂದನ್ನು ಗ್ರಹಿಸಿದರೆ ಸಾಕು. ವೈಟ್‌ಹೆಡ್ಡನು ಅದನ್ನು ದೈವವೆಂದರೆ ಪರವಾಯಿಲ್ಲ; ರಸೆಲ್ಲನು ಅಜ್ಞಾತವೆಂದರೆ ಬೇಸರವಿಲ್ಲ. ಗಣಿತವು ಅನಂತವೆಂದರೆ ದುಃಖವಿಲ್ಲ; ತರ್ಕವು ಅತರ್ಕ್ಯವೆಂದರೆ ತೊಂದರೆ ಇಲ್ಲ.

ಶ್ರದ್ಧಾರಹಿತವಾದ ವಿಜ್ಞಾನ ಬುದ್ಧಿಯು ಕ್ಷಣಭಂಗಶೀಲವುಳ್ಳದ್ದು; ತನ್ನ ಪದಶ್ರದ್ಧೆ, ಅರ್ಥಶ್ರದ್ಧೆಗಳಿಗದು ವೈಜ್ಞಾನಿಕ ಪ್ರಮಾಣಗಳನ್ನು ಕೊಡಲಾರದು. ಅತಿಚಂಚಲವು ಅವ್ಯವಹಾರ್ಯ; ಅದರ ಸಾಪೇಕ್ಷ ಸ್ಥೈರ್ಯದ ಪರಮಾವಧಿಯೇ (ನಿರಪೇಕ್ಷ ಮಟ್ಟವೇ) ಶಾಶ್ವತವಾದ ಅಸೀಮ ಪದಾರ್ಥ. ಮೂರ್ತೀಕೃತವಾದುದೆಲ್ಲವೂ ಸೀಮಿತವಾಗಿರುವುದರಿಂದ, ಪರಮಮಹತ್ ಪ್ರಮಾಣವು ಯಾವ ನಿಯಮಕ್ಕೂ ಇಲ್ಲದಿರುವುದರಿಂದ, ಅದ್ವಿತೀಯ ಸರ್ವಧಾರಿಯೊಂದನ್ನು ಆಧಾರವನ್ನಾಗಿ ಇಟ್ಟುಕೊಂಡು ತರ್ಕಿಸುವ, ವಿಜ್ಞಾನಿಸುವ ಸುವ್ಯವಸ್ಥೆಗೆ ವಿರುದ್ಧವಾಗಿ ಲಂಗರಿಲ್ಲದ ಹಡಗಿನ ಸಂಚಾರದಂಥ ವಿಜ್ಞಾನ, ವಿಚಾರ,

ಊಹೆಗಳು ಯಾವ ದೃಷ್ಟಿಯಿಂದಲೂ ಅರ್ಥಪೂರ್ಣವಾಗವು. "ಊರ್ಧ್ವಮೂಲಂ ಅಧಃಶಾಖಂ" ಎಂಬುದು ಜೀವನ ವೃಕ್ಷದ ಸರಿಯಾದ ವರ್ಣನೆಯೆಂಬುದನ್ನು ವಿವಿಧ ಖಗೋಲ ಶಾಸ್ತ್ರವಾದಗಳೂ ಸಮರ್ಥಿಸಿವೆ. ಜಡಮೂಲವು ಅಧೋಮೂಲವಾದ; ಚೈತನ್ಯ ಮೂಲವಾದವು ಊರ್ಧ್ವಮೂಲವಾದ. ಈ ವಿಷಯದಲ್ಲಿ ನ್ಯೂಟನ್ನನ ಯೋಗ್ಯತೆ ಮುಂದಿನ ಯಾವ ವಿಜ್ಞಾನಿಗೂ ಬರಲಾರದು. ದೇವರು ನಿಸರ್ಗನಿಯಮಗಳನ್ನು ರಚಿಸಿ ಕಾರ್ಯ ಪರಂಪರೆ ಅವುಗಳಂತೆ ನಡೆಯುವ ಹಾಗೆ ಮಾಡಿ ಸುಮ್ಮನೆ ಕುಳಿತು ಬಿಟ್ಟನು– ಎಂಬುದು ಬಹಳ ಅರ್ಥಪೂರ್ಣವಾದ ಮಾತು. ಅದರಿಂದ ವೈಜ್ಞಾನಿಕ ಶೋಧದ ಪ್ರಗತಿಗೆ ಯಾವ ವಿಘ್ನವೂ ಉಂಟಾಗದು. ನಮ್ಮ ವ್ಯಕ್ತಿತ್ವ–ಚಾರಿತ್ರಗಳ ದಾರ್ಢ್ಯ ಹೆಚ್ಚುತ್ತಲೇ ಹೋಗಲು ಅದು (ಅದರ ಪ್ರಜ್ಞೆ) ಬಲಿಷ್ಠ ಕಾರಣವಾಗುವುದು. ಅವುಗಳ ವ್ಯಾಪಕತೆ ಹೆಚ್ಚುತ್ತ ಹೋಗುವುದೇ ದಾರ್ಢ್ಯವೃದ್ಧಿ.

## ವಾದಗಳ ದುರುಪಯೋಗ ಮತ್ತು ಸದುಪಯೋಗ

ದೈವಭಕ್ತಿಯು ಅಂಧಶ್ರದ್ಧೆಗೆ ಎಂದೂ ಒಂದೇ ಒಂದು ಪ್ರಧಾನ ಕಾರಣವಾದದ್ದು ಸುಳ್ಳು. ಅದರ ದುರುಪಯೋಗದಂತೆಯೇ ಪ್ರತಿಯೊಂದನ್ನೂ (ಪ್ರತಿಯೊಂದು ವಾದವನ್ನೂ ಸಿದ್ಧಾಂತವನ್ನೂ) ದುರುಪಯೋಗ ಮಾಡಲು (ಮಾಡಿಕೊಳ್ಳಲು) ಸಾಧ್ಯವಿದೆ. ಸರ್ವೋದಯವೇ ಅವುಗಳ ಸದುಪಯೋಗಕ್ಕೆ ನಿಕಷ. ಅರ್ಧದಲ್ಲಿ ಸಮರ್ಥಾಸಮರ್ಥರ ಸ್ಪರ್ಧೆ ಅನಿವಾರ್ಯವಾದರೆ ಸರ್ವೋದಯವೆಂದೂ ಸಾಧ್ಯವಾಗದು. "ಶರೀರ ಮಾದ್ಯಂ ಖಲು ಧರ್ಮಸಾಧನಂ" ಆಗಿರುವಂತೆ ಸ್ವಾರ್ಥದ ವಿಸ್ತಾರಣವು ಸರ್ವವನ್ನೂ ಒಳಗೊಂಡರೆ ಅದು ನಿಜವಾಗಿ ವಿಸ್ತರಣಶೀಲ ವಿಶ್ವ. ಯುಕ್ತಾಹಾರ–ವಿಹಾರಗಳನ್ನು ಯೋಗಸಾಧನೆಗೆ ಅಗತ್ಯವೆಂದು ಹೇಳುವ ಭಗವದ್ಗೀತೆ ಹುಚ್ಚು ನಿಃಸ್ವಾರ್ಥತೆಯನ್ನು ಸಮರ್ಥಿಸದು. ಸ್ವಶರೀರಕ್ಕೆ ಸುಖಿರಾಜ್ಯಕ್ಕೆ ಸರಾಸರಿಯಾದ ಕನಿಷ್ಠಾವಧಿಕ ಸೌಕರ್ಯವನ್ನು ದೊರಕಿಸಿಕೊಳ್ಳಲು ಅಸುಖಿ ಪರಶರೀರಕ್ಕೆ ಅದು ಸಿಗಲೆಂದು ಹೋರಾಡುವುದೇ ವ್ಯಾಸಸಹಜ ಬುದ್ಧಿಮತ್ತೆ. ಜ್ಯೋತಿರ್ಗೋಲಗಳು ಕೇಂದ್ರದಿಂದ ದೂರ ದೂರ ಸರಿಯುತ್ತ ಹೋಗುವುವು– ಎಂಬ ವಿಶ್ವವಿಸ್ತರಣವಾದವೊಂದು ಕಲ್ಪನೆಯ ಹಾರುಂಬಸಿ (Flying Saucer). ಪಂಚವಾರ್ಷಿಕ ಯೋಜನೆಗಳು "ಪಂಚವಾರ್ಷಿಕ ಪರೋಪಕಾರ ಯೋಜನೆಗಳಾ"ಗದೆ, "ಪಂಚವಾರ್ಷಿಕ ಪಳಾರ ಯೋಜನೆ"ಯಾಗುತ್ತ ಹೋದದ್ದೇ ಭಾರತೀಯ ಸಂಸ್ಕೃತಿಯ ಅವನತಿಯ ಪ್ರಧಾನ ಕಾರಣ.

ತತ್ವವಿಲ್ಲದ ನೀತಿ, ನೀತಿಯಿಲ್ಲದ ತತ್ವಗಳು ವಿಚಾರವಿಲ್ಲದ ಆಚಾರ, ಆಚಾರವಿಲ್ಲದ ವಿಚಾರಗಳಂತೆ ಸಮಾಜಘಾತಕ. ತ್ರೈಕರಣಿಕ ಅನುಭವವೇ ಲೋಕಗತವಾದ "ಪೂರ್ಣಾ"ನುಭವ. ದೇಶ ಕಾಲಗಳ ನಿಷ್ಕ್ರಿಯ ಸರ್ವಕ್ರಿಯಾಧಾರ ಸ್ವರೂಪವು ಪ್ರತ್ಯಕ್ಷವಲ್ಲ, ಪರೋಕ್ಷ. ಅವುಗಳ ಪೂರ್ಣ ಅಳತೆಯನ್ನೂ ಖಂಡಿಸಿದಂತೆ ತೋರಿಸುವ ಕಾರಕವೆಂದರೆ ಪ್ರಮೇಯವಾದ ಘಟನೆಗಳು, ಗುಣಗಳೂ, "ದ್ರವ್ಯಗಳು". ಕರ್ಮಾಭಾವದಲ್ಲಿ ದೇಶಕಾಲಗಳು

ಅನೂಹ್ಯ, ಅನನುಮೇಯ, ಅಪ್ರಯೋಜಕ ಎನ್ನಿಸುತ್ತವೆ. ಅವುಗಳ ಅಣ್ವೀಕರಣವು (ವಿಭಜನೆಯು) ಕೇವಲ ಮಾನಸಿಕ, ಅಮೌರ್ತಿಕ, ಘಟನಾ ಪರಂಪರಾಪ್ರಮಾಣ ನಿಯಂತ್ರಿತ. ಅವುಗಳಿಗೆ ಸಂಬಂಧಿಸಿದ ಮಾನಸ ಕ್ರಿಯೆಗಳು ಸಂವೇದನಾ ಧೃತ. "ದ್ರವ್ಯ"ದ ಶುದ್ಧ ವೈಚಾರಿಕ ಸ್ವರೂಪದಂತೆಯೇ ದೇಶ–ಕಾಲಗಳ ಅಥವಾ ಅವುಗಳ ನಿಷ್ಕ್ರಿಯ ಐಕ್ಯವೂ ಕೇವಲ ವೈಚಾರಿಕ–ವೈಶೇಷಿಕರ ವಿಶೇಷಗಳ ಕಲ್ಪನೆಯಂತೆ. ವಸ್ತು ಸಮಭಾವಗಳಂತೆಯೇ ವಸ್ತ್ವರ್ಥಗ್ರಹಣಕ್ಕೆ ಅಗತ್ಯವಾದ ಕಾಲ್ಪನಿಕ (ತಾರ್ಕಿಕ) ಪದಸತ್ಯವೂ ವಿಚಾರ ವ್ಯವಹಾರಕ್ಕೆ ಸಂಕೇತ ರೂಪದಲ್ಲಿ ಕೆಲವೊಮ್ಮೆ ಅಗತ್ಯವಾಗುತ್ತದೆ.

## ಮಹಾಭಾವ–ಮಹಾನುಭಾವ

ಜಾಗ್ರತ ಜೀವನದ ಕಾರ್ಯಗಳಿಗೆ ಶುದ್ಧ ಮಾನಸಿಕ ವಿಚಾರಗಳೂ (ಹಗಲು–ರಾತ್ರಿಗಳಲ್ಲಿ ಕಾಣುವ) ಕನಸುಗಳೂ ಅಂತರ್ವಾಣಿಗಳೂ ಈಶ್ವರೇಚ್ಛೆಗಳೂ (Historical forces) ಕಾರಕ–ಪ್ರೇರಕಗಳಾಗುವುವು ಎಂಬುದನ್ನು ಅವಿಜ್ಞಾತಮನದ ವಿಶ್ಲೇಷಣವು ತಿಳಿಯಪಡಿಸುತ್ತದೆ. ಪರಹಿತ ವಿಮುಖರಾದ ವ್ಯಕ್ತಿ ಸ್ವಾರ್ಥ ಪರಾಯಣರ ಕೈಯಲ್ಲಿ ಯಾವ ಶಾಸ್ತ್ರ, ವಾದ, ಸಿದ್ಧಾಂತ ಸಿಕ್ಕಿದರೂ ಅದನ್ನು ಅವರು ಸ್ವಾರ್ಥಾನುಕೂಲವ್ಯಾಖ್ಯೆಗೆ ಒಳಪಡಿಸುತ್ತಾರೆ. ಆದುದರಿಂದ ಅಹಂಕಾರ–ಮಮಕಾರರಹಿತತೆಯು ಸರ್ವದುಃಸಾಧ್ಯ. ಅದನ್ನು ಸಾಧಿಸಿದವರು–

**"ವಿಮುಕ್ತಂ ಸರ್ವಸಂಗೇಭ್ಯೋ ಮುನಿಮಾಕಾಶವತ್ ಸ್ಥಿತಂ**
**ಅಸ್ವಮೇಕಚರಂ ಶಾಂತಂ ತಂದೇವಾ ಬ್ರಾಹ್ಮಣಂ ವಿದು":–**

ಸಂಗ ವಿಮುಕ್ತತೆ ಎಂದರೆ ಇತರರೊಡನೆ ಸ್ವಾರ್ಥಕ್ಕಾಗಿ (ಸ್ವಶರೀರೇಂದ್ರಿಯಾರ್ಥಗಳಿಗಾಗಿ ಮಾತ್ರ ಇರುವ) ಆಸಕ್ತಿಯಿಂದ ಬಿಡುಗಡೆ; ಆಕಾಶದಂಥ ಮನಃಸ್ಥಿತಿಯನ್ನು ಹೊಂದುವುದೆಂದರೆ ರಸೆಲ್ಲನಿಗಿಂತಲೂ ಹೆಚ್ಚು ಪೂರ್ವಗ್ರಹ ರಹಿತನಾಗುವುದು, ಬಾಲ್ಯದ ಅಪಸಂಸ್ಕಾರಗಳಿಗೆ ಅಂಟಿಕೊಳ್ಳದಿರುವುದು; ತನ್ನ ಆಸ್ತಿಯನ್ನು ಪ್ರಾಣಕ್ಕಿಂತ ಪ್ರಿಯವೆಂದು ಅದರ ಕಾವಲಿಗೆ ನಿತ್ಯವೂ ಗುರ್ಖನಂತೆ ವರ್ತಿಸುವ ಶೀಲವನ್ನು ಬಿಟ್ಟವನು ಅಸ್ವನು. ಶಾಂತತೆಯೆಂದರೆ ಸಮತೋಲ ಬುದ್ಧಿಯನ್ನು ಇಟ್ಟುಕೊಂಡಿರುವುದು, ಭಾವೋದ್ರೇಕಗಳಿಂದ ಮುಕ್ತನಾಗಿರುವುದು: ಇಂಥವನು ಬ್ರಾಹ್ಮಣ, ಪೂರ್ಣಮಾನವ.

**'ಸರ್ವೇ ದೇವಾ ಮರ್ತ್ಯಸಂಜ್ಞಾ ವಿಶಿಷ್ಟಾಃ**
**ಸರ್ವೇ ಮರ್ತ್ಯಾ ದೇವಸಂಜ್ಞಾ ವಿಶಿಷ್ಟಾಃ,**

ಎಲ್ಲ ದೇವರೂ (ಪ್ರಕಾರಶೀಲರೂ) ಮರ್ತ್ಯಸಂಕೇತ ಉಳ್ಳವರು;

ಎಲ್ಲ ಮರ್ತ್ಯರೂ (ಮರಣಶೀಲರೂ) ದೇವಸಂಕೇತ ಉಳ್ಳವರು–

ಎಂಬ ಮಾತಿನಲ್ಲಿ ವ್ಯಾಸನು ಶಬ್ದಗಳೆಲ್ಲವೂ ಪ್ರತೀಕ ಸ್ವರೂಪದವುಗಳೆಂದೂ ಮನುಷ್ಯರ ಲೌಕಿಕ ತಿಳಿವಳಿಕೆಯಲ್ಲಿ ಮರ್ತ್ಯತ್ವ–ಅಮರರ್ತ್ಯತ್ವಗಳೆಲ್ಲವೂ ಸಾಂಕೇತಿಕವೆಂದೂ ಹೇಳಿದ್ದು

ರಸೆಲ್ಲನ–ಈ ಜಗತ್ತಿನ ಜ್ಞಾನವೆಲ್ಲವೂ ಸಾಂಕೇತಿಕ ಮತ್ತು ಗಾಣಿತಿಕ ಅಮೂರ್ತ ಸ್ವರೂಪದವು– ಎಂದ ಉದ್ಗಾರಕ್ಕೆ ಸರಿದೊರೆಯಾಗಿದೆ. ಮೂರ್ತತ್ವವು ಕ್ರಿಯಾತ್ವವು; ಜ್ಞಾನಕ್ಕೆ ಕ್ರಿಯಾಸ್ವರೂಪವಿಲ್ಲ. ಮೂರ್ತವಾವುದೂ ನಿಷ್ಕ್ರಿಯವಾಗಿರಲಾರದು. ಕ್ರಿಯೆಯು ಪರಿವರ್ತನಕಾರಕ. ಪರಿವರ್ತನ ಹೊಂದುವವು ಗುಣಗಳು, ಗುಣಸಂಘಾತಗಳು; ಗುಣಗಳು ದ್ರವ್ಯಸ್ಥವೆಂದು ಕೇವಲ ವಿಚಾರವು ಗ್ರಹಿಸುತ್ತದೆ. ದ್ರವ್ಯವು ವಿಚಾರರೂಪದ ಗುಣಾಧಾರ. ಅದು ಗುಣಜಾತದ ಪ್ರತಿಬಿಂಬವಾಗಿರಬಹುದು ಅಥವಾ ಪ್ರತಿಬಿಂಬರಹಿತವಾಗಿ ಕೇವಲ ಭಾವಪ್ರತೀಕ ರೂಪದ್ದಾಗಿರಬಹುದು. ಅಪ್ರತೀಕ ಸ್ವರೂಪದ ಭಾವ (ಕಲ್ಪನೆ) ಎಂಬುದು ಇಂದ್ರಿಯಾರೂಢ ಮನದಲ್ಲಿಲ್ಲ. ಪ್ರತಿಮೆಗಳಾಗಲಿ, ಪ್ರತೀಕಗಳಾಗಲಿ ಭೌತ, ಬಾಹ್ಯ ಜಗತ್ತಿನ ಘಟನಾ ಘಟಕ (ವಸ್ತು)ಗಳನ್ನು ಸಂಬಂಧಿಸಿಯೇ ಇರುತ್ತವೆ.

ಮುಕ್ತತೆಯು ನಿಃಸ್ವಾರ್ಥವಾದ ಪ್ರತೀಕ ಸತ್ಯನಿಷ್ಠತೆ, ಪೂರ್ವಗ್ರಹದ ಸಾಪೇಕ್ಷರಹಿತತೆ, ವೈರಾಗ್ಯ, ಶುದ್ಧವಾದ ದ್ವಂದ್ವಾತೀತ ವಸ್ತುನಿಷ್ಠತೆ; ಮದ್ಧಿತ ಭಿನ್ನವಾದ ತದ್ಧಿತ. ತಲ್ಲಯದಿಂದ ತದ್ಧಿತಸಾಧನೆ ಸಾಧ್ಯ. ತ್ವಲ್ಲಯ–ತಲ್ಲಯಗಳು ಪರಿಣಾಮತಃ ಒಂದೇ. ಇದೇ ವ್ಯಕ್ತಿತ್ವದ ಬ್ರಾಹ್ಮೀಕರಣ, ಬ್ರಹ್ಮದೃಷ್ಟಿಸಂಪನ್ನತೆ. ಅಂಥ ಸಂಪತ್ತನ್ನುಳ್ಳವರೇ ರಾಜಗುರುಗಳಾಗಬಲ್ಲರೆಂಬುದು ಭಾರತೀಯ ಸಾಮಾಜಿಕ–ರಾಜಕೀಯ ಅನುಭವ. ಈ ವ್ಯಕ್ತಿತ್ವ ಸಿದ್ಧಿಯನ್ನೇ ಪದೇ ಪದೇ ಮಹಾಭಾರತ ಎತ್ತಿ ಹಿಡಿಯಲು ಅದಕ್ಕಿಂತ ಕಡಿಮೆ ಮಟ್ಟದ ಯಾರೂ ಸ್ಥಿರವಾದ ಸರ್ವೋದಯ ಪ್ರಶಾಸನವನ್ನು ಯೋಜಿಸಿ ನಡೆಯಿಸಿ ಕೊಡಲಾರರು ಎಂಬುದೇ ಕಾರಣ.

ಕಾಯದೆ ನಿರ್ಮಾಪಕರೇ ಕಾಯದೆ ಭಂಗ ಮಾಡುವ, ಹಾಗೆ ಮಾಡುವವರನ್ನು ಚೆನ್ನಾಗಿ ಶಿಕ್ಷಿಸದ ಅಥವಾ ಕಂಡು ಅಲಕ್ಷಿಸುವ ಇಲ್ಲವೆ ಪುರಸ್ಕರಿಸುವ ಅನೀತಿವಂತಿಕೆ ಇರುವಲ್ಲಿ ಯಾವ ರಾಜ್ಯಧರ್ಮ, ಸರಕಾರ ಪದ್ಧತಿ, ಪ್ರಶಾಸನ ಧೋರಣೆ ಯಶಸ್ವಿಯಾದೀತು? "ಯಥಾ ರಾಜಾ ತಥಾ ಪ್ರಜಾಃ"– ರಾಜನ ನಿತ್ಯ–ನೈಮಿತ್ತಿಕ ವ್ಯವಹಾರವರ್ತನೆಗಳು ಅನಿವಾರ್ಯವಾಗಿ ಸಾಮಾನ್ಯರಿಂದ ಅನುಕರಿಸಲ್ಪಡುವುದು ಸಾರ್ವತ್ರಿಕ. ಆದುದರಿಂದ ಜನತೆಯ ನಡತೆಯು ರಾಜ್ಯಕಾಧಿಕಾರಿಗಳ ನಡತೆಗೆ ಕಾರಣವಾಗುವ ಅಂಶಕ್ಕಿಂತ ರಾಜ್ಯಶಕ್ತಿವಂತರ ವರ್ತನೆ ಜನತೆಗೆ ಅನುಕರಣೀಯವಾಗುವ ಅಂಶವೇ ಬಹಳ ಹೆಚ್ಚು. ಅಧಿಕಾರಿಗಳ ಶೀಲದ ನಿಯಂತ್ರಣಕ್ಕಿರುವ ಆದ್ಯತೆ ಜನತಾಶೀಲ ನಿಯಂತ್ರಣಕ್ಕಿಲ್ಲ. ರಾಜ್ಯಧರ್ಮಗಳಲ್ಲಿ ಪ್ರಜಾಪ್ರತಿನಿಧಿ ಪ್ರಭುತ್ವವು ಕಾಲಿಕವಾದ ಸಾಮಾಜಿಕ ಮನಸ್ಥಿತಿಯ ಅಭಿರುಚಿಯನ್ನಷ್ಟೇ ಆಧರಿಸಿದೆ. ಪ್ರತಿಯೊಂದು ರಾಜ್ಯಪದ್ಧತಿಯಲ್ಲಿ ಗುಣಗಳೂ ಇವೆ ದೋಷಗಳೂ ಇವೆ. ದೋಷಸಂಖ್ಯೆ ಕಡಿಮೆಯಾಗಲು ಚಾರಿತ್ರ ಪಾವಿತ್ರ್ಯ ರಾಜಶಕ್ತಿವಂತರಲ್ಲಿ ಚೆನ್ನಾಗಿರುವಂತೆ ನೋಡಿಕೊಳ್ಳುವುದು ಮೊದಲು ಮಾಡತಕ್ಕ ಕರ್ತವ್ಯ. ರಾಜಶಕ್ತಿವಂತರು ತಮ್ಮ ಸದಸ್ವರ್ತನೆಗಳೆಲ್ಲವನ್ನೂ ಅನಿವಾರ್ಯವೆಂದೋ ನ್ಯಾಯವೆಂದೋ ಸಮರ್ಥಿಸಿಕೊಳ್ಳುವ ಬಲಾತ್ಕಾರ ಭಾರತದಲ್ಲಿಂದು ಅಸಹ್ಯ ಮಟ್ಟಕ್ಕಿಳಿದಿದೆ.

**ಜ್ಞಾನಾಧಿಷ್ಠಾನ ಮಜ್ಞಾನಂ ತ್ರೀಂಲ್ಲೋಕಾನಧಿತಿಷ್ಠತಿ**
**ವಿಜ್ಞಾನಾನುಗತಂ ಜ್ಞಾನಂ ಅಜ್ಞಾನೇನಾಪಕೃಷ್ಯತೆ**

ಅಜ್ಞಾನಕ್ಕೆ ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳಲ್ಲೂ ಜ್ಞಾನವೇ ಆಧಾರ; ಅದು ಹಿನ್ನೆಲೆಯಲ್ಲಿದ್ದು ಆಧಾರವಾದದ್ದು; ಆದ್ದರಿಂದ ಅದು ಪ್ರಕಾಶಕ್ಕೆ ಬರುವುದಿಲ್ಲ. ವಿಜ್ಞಾನವನ್ನು (ವಿಶ್ಲೇಷಣಾತ್ಮಕ ಬುದ್ಧಿಯನ್ನು) ಅನುಸರಿಸುವ ಜ್ಞಾನವು ಅಜ್ಞಾನದಿಂದ ಅಧೋಗತಿಗಿಳಿಸಲ್ಪಡುತ್ತದೆ ಎಂಬ ಎಚ್ಚರಿಕೆ ಕೊಟ್ಟ ವ್ಯಾಸನು ಚಾರಿತ್ರವಂತಿಕೆಯ ಬೆಲೆಯನ್ನು ಚೆನ್ನಾಗಿ ಬಲ್ಲ. ಎಲ್ಲ ತರಹದ ದೌರ್ಜನ್ಯವೂ ಅವಿವೇಕದಿಂದ ಹುಟ್ಟಿದ್ದೆಂಬುದು ಸ್ಪಷ್ಟ. ಅಜ್ಞಾನ, ಅವಿವೇಕಗಳು ಪೂರ್ವಾಪರ ಕಾರಣ–ಪರಿಣಾಮ, ಸ್ಥಾಯಿತ್ವ–ಅಸ್ಥಾಯಿತ್ವ, ಬಹುಹಿತ–ಅಲ್ಪಹಿತ, ಸುಜನಾರ್ಥ–ದುರ್ಜನಾರ್ಥ, ಆತ್ಯಂತಿಕ ಸ್ವಾರ್ಥ, ತಾತ್ಕಾಲಿಕ ಸ್ವಾರ್ಥ ಮುಂತಾದವುಗಳನ್ನು ಸರಿಯಾಗಿ ವಿಂಗಡಿಸಿ ತಿಳಿದುಕೊಳ್ಳದಂತೆ ಅಧಿಕಾರಾರೂಢರ ಕಣ್ಣುಗಳನ್ನು, ಬಹಳ ಸಲ, ಕಟ್ಟುವುವು. ಅಂಥ ಸಂದರ್ಭಗಳಲ್ಲಿ ರಾಜ್ಯಶಾಸ್ತ್ರಗಳಲ್ಲ, ಧರ್ಮಶಾಸ್ತ್ರಗಳೂ ದುರುಪಯೋಗಕ್ಕೆ ಪಕ್ಕಾಗುತ್ತವೆ– ಎಂಬುದು ತಾತ್ಪರ್ಯ.

## ಮಾನವನ ಕರ್ತೃತ್ವ

**"ಕರ್ತೃತ್ವಾದೇವ ಪುರುಷಃ ಕರ್ಮಸಿದ್ಧೌ ಪ್ರಶಸ್ಯತೇ,**
**ಅಸಿದ್ಧೌ ನಿಂದ್ಯತೇ ಚಾಪಿ ಕರ್ಮನಾಶಾತ್ ಕಥಂತ್ವಿಹ".**

–ಕರ್ತೃತ್ವ ಶಕ್ತಿಯಿದ್ದವನೇ ಮಾನವನು; ಕರ್ಮವು ಫಲಿಸುವುದರಲ್ಲಿ ಕರ್ತೃತ್ವವೇ ಪ್ರಶಸ್ತ; ಕರ್ಮವು ನಾಶವಾಗಿ ಫಲಿಸದಾದಾಗ ಮನುಷ್ಯನು ಅನ್ಯರನ್ನು ಹೇಗೆ ನಿಂದಿಸಬಲ್ಲನು?" ಇದು ವ್ಯಾಸನ ವ್ಯವಹಾರೋಪದೇಶ. ಕೇವಲ ಸರಕಾರವನ್ನೇ ಪ್ರಜೆ ಯಾವಾಗಲೂ ನಂಬಿಕೊಂಡು ಕುಳಿತಿರಲಾರನು– ಎಂದು ನಂಬಿದ ಜಾನ್ ಡ್ಯೂಯಿ ಅಧಿಕಾರ ವಿಕೇಂದ್ರೀಕರಣವನ್ನು ಬೋಧಿಸುವಾಗ ಕರ್ತೃತ್ವಶಾಲಿಗಳಾಗಿರುವ ಪ್ರಜೆಗಳ ಮೇಲೆ ಹೆಚ್ಚಿನ ನಂಬಿಗೆಯನ್ನು ವ್ಯಕ್ತಪಡಿಸಿದನು. ಸ್ವಯಂಪ್ರೇರಿತ ಜನಸ್ತೋಮಗಳ, ಜನಸಂಘಗಳ ವೃತ್ತವು ರಾಜ್ಯಶಕ್ತಿಯ ಲಕ್ಷ್ಮಣರೇಖೆಯೊಡನೆ ಏಕತ್ವವನ್ನು ಹೊಂದದು– ಎಂದು ಅವನು ವಾದಿಸಿದ್ದು ಅವನ ವ್ಯಾಸದೃಷ್ಟಿಗೆ ನಿದರ್ಶನ. ರಾಜ್ಯಶಕ್ತಿಯ ಕಕ್ಷೆಯ ಹೊರಗೂ ಪ್ರಜಾಶಕ್ತಿ ಇರುವುದು ಕೆಟ್ಟ ಸರಕಾರ ಬಂದಾಗ ಅದನ್ನು ಕಿತ್ತೊಗೆವ ಅನುಕೂಲಕ್ಕೆ ಆಧಾರ. ನದಿ, ಗುಡ್ಡ, ಭೂಮಿ, ಆಕಾಶಗಳಂತೆ ಸರಕಾರ, ನಗರ, ಮನೆ ಮುಂತಾದವು ದೇವ ನಿರ್ಮಿತಗಳಲ್ಲ. ಅಂಥ ವ್ಯವಸ್ಥೆಗಳ ಜವಾಬುದಾರಿ ಸಂಪೂರ್ಣವಾಗಿ ಮನುಷ್ಯನ ಪಾಲಿಗೆ ಸೇರಿದ್ದು; ಗಣಿತಜ್ಞರ ಸಂಘ, ರಸಾಯನಶಾಸ್ತ್ರಜ್ಞರ ಬಳಗ, ಖಗೋಲ ಶಾಸ್ತ್ರಜ್ಞರ ಕೂಟ, ವ್ಯಾಪಾರ ನಿಗಮ, ಮತಮಾನ್ಯಗಳು ಅತಿರಾಷ್ಟ್ರೀಯವಾಗಿರಬೇಕೆಂದು ಡ್ಯೂಯಿ ಹೇಳಿದ್ದು ಮಹಾಭಾರತದ ಅವಧಿಯ ನಾಗರಿಕತೆಯನ್ನು ಲಕ್ಷಣಿಸುತ್ತದೆ. ಆದರಿದು ಡ್ಯೂಯಿಯ ಕಾಲದಲ್ಲೇ ಅಮೇರಿಕದಲ್ಲಿ ಪೂರ್ಣದಶೆಯಲ್ಲಿ ಅಲಭ್ಯವಾಯಿತು; ಅಣುವಿಜ್ಞಾನಿಗಳ ಸ್ವಾತಂತ್ರ್ಯವನ್ನು ಮೊಟಕುಗೊಳಿಸಲಾಯಿತು; ಪತ್ರಗಳ ಗುಪ್ತ ಪರಿಶೋಧನ

ಅವರ ಸ್ವಾತಂತ್ರ್ಯಕ್ಕೆ ಅಡ್ಡಬಂದಿತು. ಏಕೆ? ಅದು ಭಾರತದ ಮಹಾಭಾರತದ ನಾಗರಿಕತೆಯಲ್ಲ; ಆದರೆ ಆ ನಾಗರಿಕತೆಯನ್ನು ಉಕ್ತ ಲಕ್ಷಣದಲ್ಲಿ ಬದಲಾಯಿಸಿ ಸದ್ಯದ ಅಮೇರಿಕದ (ಸಂಯುಕ್ತ ರಾಜ್ಯದ) ರಕ್ಷಣಾವಿಧಿಯನ್ನು ಉಗ್ರವಾಗಿ ಭಾರತ ಜಾರಿಗೆ ತರಬೇಕಾಗಿತ್ತು; ಆದರೆ ವ್ಯವಹಾರತಃ ಹಾಗೆ ಮಾಡಿಲ್ಲ. ಅಸಹಾಯಕತೆಯನ್ನು ಅಹಿಂಸೆಯೆಂದು ಭಾರತವೀಗ ಜಪಿಸುತ್ತಿದೆ; ಬಲಿಷ್ಠ ರಾಷ್ಟ್ರಗಳು ಒಳಗೊಳಗೇ ನಗುತ್ತಿವೆ!

## ಪ್ರಾಸ್ಥಾನಿಕ ದೃಷ್ಟಿಕೋನಗಳು

ವೈಟ್‌ಹೆಡ್ಡನಂತೆಯೇ ಮಾನವಜ್ಞಾನವನ್ನು ಹೆಗೆಲ್ ಒಂದು ಆವಯವಿಕ ಇಡಿ ಎಂದು ತಿಳಿಯುತ್ತಾನೆ. ಅದು ಕ್ರಮೇಣ ಬೆಳೆಯುತ್ತದೆ; ತನ್ನ ಯಾವ ಅಂಗದಲ್ಲಿಯೂ ಅದು ಪರಿಪೂರ್ಣವಲ್ಲ. ಕಟ್ಟಕಡೆಗೆ ಅದು ಇಡಿಯಾಗಿ ಪರಿಪೂರ್ಣತೆಯನ್ನು ಹೊಂದುತ್ತದೆ. ಈ ಕ್ರಮವೃದ್ಧಿಯಲ್ಲಿ ಪ್ರತಿಯೊಂದು ಅಂಶಜ್ಞಾನವೂ ಆತ್ಯಂತಿಕವೆಂದು ನಂಬಲಾಗಿದೆ.

ಡ್ಯೂಯಿಯ ಪ್ರಕಾರ ವಾಕ್ಯಗಳ ಸತ್ಯತೆಯು ಅವುಗಳ ಅರ್ಥವತ್ತೆಯನ್ನು ಆದರಿಸಿದೆ. ಆ ಅರ್ಥವತ್ತೆಯು ಬಳಸಲಾದ ಭಾಷೆಯನ್ನು ಅವಲಂಬಿಸಿರುತ್ತದೆ. ವಾಕ್ಯದ ಅರ್ಥವೆಂದರೆ ನಂಬಿಗೆ. ಅದು ಪೂರ್ಣ ಅಥವಾ ಅರೆಸತ್ಯ ಇಲ್ಲವೆ ಅರೆಸುಳ್ಳಾಗಿರಬಹುದು. ಅನುಭವಗಳ ಹೊಂದಿಕೆಯ ಅಭಾವವು ಅಸತ್ಯ. ಅಸತ್ಯಕ್ಕೆ ಕೊನೆಯಲ್ಲಿ ಬರುವ ಆಶ್ಚರ್ಯವೇ ಅನೇಕ ಬಾರಿ ನಿಕಷ. ಈ ತತ್ವವಿವೇಚಕನ ಪ್ರಕಾರ ಸುಳ್ಳು ಸತ್ಯಗಳೆರಡೂ ಸಾಪೇಕ್ಷ; ಅರ್ಥಪೂರ್ಣವಾಗಿ ಅಚರಿಸಿದಾಗ ಒಂದು ಘಟನೆಯು ವರ್ತನೆಯನ್ನು ಪ್ರೇರಿಸುವ ಆವಯವಿಕ ಅವಸ್ಥೆ. ಆ ಘಟನೆಯೇ ಉಕ್ತ ನಂಬಿಗೆಯ ಅರ್ಥಪೂರ್ಣತೆ. ಕೆಲಸಕ್ಕೆ ಬರುವುದೆಲ್ಲ ಸತ್ಯ ಎಂದ ಡ್ಯೂಯಿ ಒಂದು ದೃಷ್ಟಿಯಲ್ಲಿ ವ್ಯಾಪಕಾರ್ಥದ ಪ್ರಯೋಜನವಾದಿಯಾಗುತ್ತಾನೆ. ಈ ವ್ಯಾಪ್ತಿಯಲ್ಲದು ಸತ್ಯ, ಸೌಂದರ್ಯ, ಸಾಧುತ್ವಗಳೆಲ್ಲವನ್ನೂ ಒಳಗೊಳ್ಳುತ್ತದೆ. ಧರ್ಮಾರ್ಥ ಕಾಮ ಮೋಕ್ಷಗಳೆಲ್ಲವೂ ಈ ಮಹಾವ್ಯಾಪ್ತಿಯಲ್ಲಿ ಪ್ರಯೋಜನಗಳೇ!

ಪ್ರಯೋಜನ ಪ್ರಸ್ಥಾನವೆಂಬ ಪ್ರತ್ಯೇಕ ಪ್ರಸ್ಥಾನವೊಂದು ಇದೆ. ಬೆಂಥ್ಯಾಮನು ಈ ಪ್ರಸ್ಥಾನದ ದೊಡ್ಡ ವಕ್ತಾರ. ಅವನ ತತ್ವಗಳೆರಡು ಸಂಪರ್ಕ ತತ್ವ ಮತ್ತು ಅತಿ ಹೆಚ್ಚಿನ ಸುಖದ ತತ್ವ. ಹಾರ್ಟ್ಲಿಯು ಸಂಪರ್ಕಸೂತ್ರವನ್ನು ಹಿಂದೆಯೇ ಎತ್ತಿ ಹಿಡಿದಿದ್ದನು. ಸಂಪರ್ಕವು ಇಲ್ಲಿ ಪರಸ್ಪರವಾಗಿ ಭಾವಗಳದು, ಕಲ್ಪನೆಗಳದು, ಭಾಷೆಯದು. ಇದರ ಪ್ರಕಾರ ಮಾನಸಿಕ ಘಟನೆಗಳೆಲ್ಲವೂ ವಿಧಿವಿಹಿತ ಅಥವಾ ಉಪಾಹಿತ ಕ್ಷೇಪಕ್ಕೆ ಸದೃಶ. ಒಂದು ಮಾನಸಿಕ, ಇನ್ನೊಂದು ಶಾರೀರಿಕ–ಅಷ್ಟೇ ವ್ಯತ್ಯಾಸ. ಬೆಂಥ್ಯಾಮನ ಪ್ರಕಾರ ಸಾಧುತ್ವ, ಒಳಿತು ಎಂಬುದೇ ಶಿವ, ಶುಭ, ಮಂಗಲ (ನೈತಿಕ ಪರಮಾದರ್ಶ). ಅವನ ಮಾನಸ ಶಾಸ್ತ್ರೀಯ ಪೂರ್ವ ನಿಶ್ಚಿತತಾವಾದವು ಸ್ವಾಭಾವಿಕವಾಗಿ ಸಾಮಾಜಿಕರನ್ನು ಸಾಧುತ್ವ ಭಾವದರನ್ನಾಗಿ ಮಾರ್ಪಡಿಸುವ ಗುರಿಯುಳ್ಳದ್ದಾಗಿತ್ತು. ಭಾರತದ ದೈವಕರ್ಮವಾದಗಳ ಗುರಿ ಇದೇ ಆಗಿತ್ತು. ಆದರೆ ಅವುಗಳ ಸಾಕ್ಷಾತ್ ಪರಿಣಾಮ ಅನೇಕ ಕಡೆ ಸೋಮಾರಿತನದ ಅಸಹ್ಯ ಅಭಿವೃದ್ಧಿ!

## ಕ್ಷಾತ್ರಪ್ರಶಿಕ್ಷಣ

ಸಾಧುತ್ವವೇ ಸುಖ, ಅಸಾಧುತ್ವವೇ ದುಃಖ– ಎಂದ ಬೆಂಥ್ಯಾಮನ ಕಲ್ಪನೆಯು "ಯತೋಧರ್ಮಃ, ತತೋಜಯಃ" ಎಂಬ ಧರ್ಮ ಸಾರ್ವಭೌಮತೆಯ ವ್ಯಾಸ ಸಿದ್ಧಾಂತವನ್ನು ಹೋಲುತ್ತದೆ. ಧಾರ್ಮಿಕರಾದ ಪಾಂಡವರು ಅಲ್ಪಸಂಖ್ಯರಾದರೂ ಅವರಷ್ಟೇ ಮಹಾಭಾರತ ಯುದ್ಧಾನಂತರ ಉಳಿದದ್ದು ಅವರ ಧರ್ಮ ಪ್ರಾಧಾನ್ಯದಿಂದ. ಅಧರ್ಮಪ್ರಧಾನರೂ ಅಲ್ಪ ಧರ್ಮಪ್ರಧಾನರೂ ಬಹುಸಂಖ್ಯರಾದರೂ ಉಳಿಯಲು ಅನರ್ಹರು– ಎಂಬುದೇ ವ್ಯಾಸದರ್ಶನ. ಅದೇ ಧರ್ಮಸಂಸ್ಥಾಪನೆ. ಅದಕ್ಕೆ ಸಂಖ್ಯೆ (ಪ್ರಜಾಪ್ರಭುತ್ವದ ಇಂದಿನ ರೂಪದಲ್ಲಿರುವಂತೆ) ಗಣ್ಯವಲ್ಲ. ಸಂಖ್ಯಾಮಾನವು ಸತ್ಯಕ್ಕೆ, ಒಳಿತಿಗೆ ನಿಕಷವಲ್ಲ. ಈ ಸೂತ್ರವು ಮತ ಸಂಖ್ಯಾ ಮೂಲದ ಪ್ರಜಾಪ್ರಭುತ್ವದ ವ್ಯವಹಾರಕ್ಕೆ ವಿರುದ್ಧ. ರಶಿಯದ ಪ್ರಜಾಸತ್ತೆಯು ಸಂಖ್ಯಾಬಲವನ್ನು ಸತ್ಯಾಪಲಾಪಕ್ಕೆಡೆಗೊಡದಂತೆ ತಡೆಯಲು ಏಕಪಕ್ಷೀಯ, ಉಪಶಿಕ್ಷಿತ ಅಲ್ಪಸಂಖ್ಯರ ಬಹುಮತವನ್ನು ರಾಜ್ಯಶಕ್ತಿ ನಿರ್ಣಾಯಕವೆಂಬ ತತ್ವವನ್ನು ಹಿಡಿದಿದೆ.

ಬಹುಸಂಖ್ಯರ ಪ್ರಾತಿನಿಧ್ಯವನ್ನು ವ್ಯಾಸ ಹೇಳಿದಂತೆ "ಸತ್ಯಂ ದಮಸ್ತಪೋ ದಾನಮಹಿಂಸಾ ಧರ್ಮ ನಿತ್ಯತಾ–ಸತ್ಯಸಂಧತೆ, ಭಾವನಾ ನಿಯಂತ್ರಣಶಕ್ತಿ, ಸಂಶೋಧಕ ಬುದ್ಧಿ, ಸ್ವಾರ್ಥತ್ಯಾಗಶೀಲ, ದಯೆ, ವಿಧಿವದ್ ವ್ಯವಹಾರ ಪ್ರವೃತ್ತಿಗಳು" ಇರುವ ವ್ಯಕ್ತಿಗಳು ಮಾತ್ರ ವಹಿಸುವಂತಾದರೆ, ಯಾವ ಪ್ರಭುತ್ವದಲ್ಲೇ ಆಗಲಿ, ಜನಹಿತ ಸಾಧ್ಯವಾದೀತು. ಪ್ಲೇಟೋವಿನಿಂದ ಹಿಡಿದು ರಶಿಯನಿಜಮ್ಮಿನವರೆಗೆ ಪ್ರಭುತ್ವ ನಿರ್ವಾಹಕರ ಬಗ್ಗೆ ಬರೆದ ರಾಜನೀತಿ ಶಾಸ್ತ್ರಜ್ಞರಾರೂ ದುರಾತ್ಮ ದುರ್ಬಲಾತ್ಮರನ್ನು ಅಧಿಕಾರ ನಿರ್ವಹಣಕ್ಕಾಗಿ ನಿಯಮಿಸಬೇಕೆಂದು ಹೇಳಿದ್ದಿಲ್ಲ. ಆದುದರಿಂದ ಈ ವಿಷಯದಲ್ಲಿ "great minds think alike" ಮಹಾತ್ಮರು ಆಲೋಚಿಸುವುದು ಸದೃಶ ರೀತಿಯಿಂದ ಎಂಬ ಹಾಗೆ ಮನು, ವ್ಯಾಸ, ಕೌಟಿಲ್ಯ, ಶುಕ್ರ, ಬೃಹಸ್ಪತಿ, ಶೌನಕ, ಕಾಮಂದಕ ಮುಂತಾದ ಎಲ್ಲರೂ ರಾಜ(ಆಳುವವ) ಧರ್ಮವನ್ನು ಹೇಳುವಾಗ– ರಾಜಾರ್ಥವಿರುವುದು ಪ್ರಜಾಹಿತದಲ್ಲಿ– ಎಂದು ಹೇಳಿರುವುದರಿಂದ, ಪ್ರಜಾಹಿತೈಷಿತ್ವದ ಗುಣ, ನಡತೆ, ಸಂಸ್ಕಾರಗಳು ಚಿಕ್ಕಂದಿನ ಅವಧಿಯಿಂದಲೇ ದೊರಕುವಂತೆ ಭಾವಿ ಪ್ರಜಾಪ್ರತಿನಿಧಿಗಳಿಗಾಗಿ ತಕ್ಕ ಯೋಜನೆ ಮಾಡುವುದು ಪ್ರಬುದ್ಧತೆಯ ಲಕ್ಷಣ. ಸುರಾಜ್ಯ ಸ್ಥಾಪನೆಗೆ ಯಾವ ರಾಜನೀತಿ ಶಾಸ್ತ್ರವೂ ಬೇರೆ ಉತ್ತಮತರ ಸಾಧನವನ್ನು ಸೂಚಿಸಲಾರದು. ಇಂದಿನ ಎಂ.ಎಲ್.ಎ. ಭವನ ಹಾಗೂ ಸಚಿವಾಲಯಗಳ "ಪಾರ್ಟಿ"ಗಳನ್ನು ಕಂಡವರಿಗೆ ಇದರ ಅರ್ಥ ಚೆನ್ನಾಗಿ ಆಗುತ್ತದೆ.

"Control of sub-conscious drives by the conscious and super-conscious factors– ಅವಪ್ರಜ್ಞೆಯ ಮೇಲೆ ವಿಜ್ಞಾತ ಪ್ರಜ್ಞೆ ಹಾಗೂ ಅತಿಮಾನಸ ಪ್ರಜ್ಞೆಗಳ ನಿಯಂತ್ರಣವಿರುವುದೇ ಅಂಥ ಸಂಸ್ಕರಣವು ಕೊಡಬೇಕಾದ ಫಲ– ಎಂಬುದು "ಮಾನವತೆಯ ಪುನಾರಚನೆ"ಯೆಂಬ ಗ್ರಂಥದಿಂದ ತಿಳಿದು ಬರುತ್ತದೆ. ಅತಿಮಾನಸವು

ಅವಿಜ್ಞಾತವಾಗಿರುವಾಗ, ಅದರ ಅಸ್ತಿತ್ವವನ್ನೇ ನಂಬದ ವಿಜ್ಞಾನ ಮತವು ಪ್ರಚುರವಾಗಿರುವಾಗ ಏನು ಮಾಡಬೇಕು? ಜೊತೆಗೆ ಅದನ್ನು ನಂಬಿದಂತೆ ನಟಿಸುವ ಕಪಟಿಗಳ ಕೈಯನ್ನು ಹೇಗೆ ಕಟ್ಟಬೇಕು? ಮಾನಸಶಾಸ್ತ್ರದ ಪ್ರಯೋಗ ಪರೀಕ್ಷಾ ಕೇಂದ್ರಗಳನ್ನು ಸ್ಥಾಪಿಸಿ, ವಾಟ್ಸನ್ ಮತ್ತು ಫ್ರೂಡ್ ಮುಂತಾದವರ ಅಪರಿಪೂರ್ಣವ್ಯಾಪ್ತಿಯ ಸಿದ್ಧಾಂತಗಳನ್ನು ಸರಿಪಡಿಸಿ ವ್ಯಾಸ–ಸೊರೋಕಿನ್ನರ ಸಿದ್ಧಾಂತಗಳ ಸಮರ್ಥನೆಯನ್ನು ಪ್ರಯೋಗ ವಿಜ್ಞಾನರೀತ್ಯಾ ನಡೆಯಿಸಬೇಕು.

## ವ್ಯಾಹತಿಗಳು ಮತ್ತು ಅವುಗಳ ಪರಿಹಾರ

ಅವಪ್ರಜ್ಞಾಧೀನನು ಅವಮಾನವ (Subman); ಜಾಗರದ ಪ್ರಜ್ಞೆ ಅದನ್ನಾಶ್ರಯಿಸಿದರೆ ಅಧಃಪಾತ ಎಂಬುದು ಸಹಜವಾದರೂ ಆಧುನಿಕ ಪಾಶ್ಚಾತ್ಯರಲ್ಲಿ ಹಲವರು ಅದನ್ನು (Animal instincts ಪ್ರಾಣಿಸಾಮಾನ್ಯ ಮೂಲ ಪ್ರವೃತ್ತಿಗಳನ್ನು) ಜಾಗ್ರತಪ್ರಜ್ಞೆಯ ಮೂಲಾಧಿಷ್ಠಾನವೆಂದು ಆಗ್ರಹಿಸಿ ತಮ್ಮ "ಮಾನವಾವಾದ"ವನ್ನು ವೈಚಾರಿಕವಾಗಿ ಅದರ ತಳಪಾಯದ ಮೇಲೆ ಕಟ್ಟಲು ಪ್ರಯತ್ನಿಸುತ್ತಿರುವುದು ವದ ತೋ ವ್ಯಾಘಾತ. ಅವಿಚಾರವು ವಿಚಾರದ ಮೂಲವಾಗುವುದು, ಅನೀತಿಯು ನೀತಿಯ ವಿಕಾಸಕ್ಕೆ ಜನಕವಾಗುವುದು, ದೇಹಾತ್ಮಭಾವದ ಅವಪ್ರಜ್ಞೆಯು ಜಾಗರದ (ಜಾಗ್ರತ) ಪ್ರಜ್ಞೆಯ ಆಧಾರವೆನ್ನುವುದು, ಜಡಪ್ರಕೃತಿಯು ಜೀವತ್ ಪ್ರಕೃತಿಯ ಜನನಿಯೆನ್ನುವುದು ಅಲ್ಪವು ಮಹತ್ತಿನ ಬೀಜವೆಂಬಷ್ಟು ವ್ಯಾಪ್ತಿದೋಷವುಳ್ಳ ಊಹೆ. ಸುಳ್ಳು ಸತ್ಯವನ್ನು ಹಡೆಯುವುದು, ನಿರಪೇಕ್ಷವು ಸಾಪೇಕ್ಷದ ಮೇಲೆ ನಿಂತಿರುವುದು, ಸ್ವತಂತ್ರವು ಪರತಂತ್ರವನ್ನಾಶ್ರಯಿಸಿರುವುದು, ಪ್ರೀತಿಯು ದ್ವೇಷಮೂಲವಾಗಿರುವುದು, ಪವಿತ್ರ ಪ್ರೇಮವು ಅಪವಿತ್ರ ಕಾಮಜವೆನ್ನುವುದು, ಜ್ಞಾನವು ಅಜ್ಞಾನ ಪ್ರತಿಷ್ಠಿತವೆನ್ನುವುದು ಮತ್ತು ಮಾನವನು ಚತುಷ್ಪಾದ ಪ್ರಾಣಿಯ ವಿಕಾಸವೆನ್ನುವುದು ಅಧೋಮೂಲ ಊರ್ಧ್ವಶಾಖವೆಂಬ ಜೀವನಚಿತ್ರ. ಇಂಥ ಅಪ್ರಮಾಣಿತ ಊಹೆ, ಆಭಾಸಿಕ ಪ್ರಮಾಣಗಳ ಮೇಲೆ ನಿಂತ ಕಲ್ಪನೆ, ವಿಜ್ಞಾನ(ವಿಕಟಜ್ಞಾನ)ಕ್ಕಂಟಿಸುವ ವಿಪರೀತ ಬುದ್ಧಿವಿಲಾಸ–Analogy ಸಾದೃಶ್ಯವೆಂಬ ಅತ್ಯಂತ ದುರ್ಬಲವಾದ ಜ್ಞಾನಪ್ರಮಾಣವನ್ನು ಅನುಸರಿಸಿ ಮಾಡಿದ ಅಪತರ್ಕ; ಕೆಸರಿಂದ ಕಮಲವೆಂಬುದು ಚಮತ್ಕಾರವಾಗಿ ಕಾಣಬಹುದು; ಸ್ಥೂಲಸತ್ಯವಾಗಿಯೂ ತೋರಬಹುದು. ಆದರೆ ಕ್ಷೇತ್ರಗುಣವು ಬೀಜಗುಣದ ಜಾತಿಮತ್ತೆಯನ್ನು ಬದಲಾಯಿಸಲಾರದೆಂಬ ನಿಷ್ಠುರ ಸತ್ಯವನ್ನು ಅಲ್ಲಗಳೆಯಲಾರದು. ಆದುದರಿಂದ The unknown ಅವಿಜ್ಞಾತವಾದ Super conscious ಅತೀಂದ್ರಿಯ, ಸೂಕ್ಷ್ಮ, ಅನಂತ, ಆದ್ಯ ಎನ್ನಿಸಿರುವ ಅತಿಮಾನಸದ ಊರ್ಧ್ವಮೂಲ ಅಧಃಶಾಖ ಸ್ವರೂಪದ ಜೀವನ ಚಿತ್ರ (The picture of the tree of life ಜೀವನ ವೃಕ್ಷ ಚಿತ್ರ)ವನ್ನು ಕೊಡುವ ವ್ಯಾಸ ಪದ್ಧತಿಯೇ ಹೆಚ್ಚು ಸಮಂಜಸವೆಂದು ತೋರುತ್ತದೆ. The descent and the ascent of the Divine ದಿವ್ಯದ (ಅತಿಮಾನಸದ) ಅವಕಾಶ–ವಿಳಾಸಗಳ, ಅವತರಣ–ಉತ್ಪಥಗಮನಗಳ, ವಿಕಾರ–ಆಕಾರ ಪರಿಣಾಮಗಳ ಕ್ರಿಯಾಸಂತಾನ ಸ್ವರೂಪಕ್ಕೆ ಇಂಥ ದ್ವಂದ್ವಗಳಿಗೆ–ಅತೀತವಾದ ಶಕ್ತಿಯೇ ಮೂಲ ಕಾರಣವೆಂಬ ಭಾರತೀಯ ಶ್ರುತಿಯು

ಉಪಾದೇಯವಾಗುವುದು ಭಾರತೀಯ ಸಂಸ್ಕಾರ ಸಂಪನ್ನರಿಗೆ ಸಹಜ; ಸಹಜವಾದುದೇ ಸ್ವಧರ್ಮ. ಇದನ್ನೇ "ಸ್ವಧರ್ಮೇ ನಿಧನಂ ಶ್ರೇಯಃ" ಎಂಬ ವ್ಯಾಸವಾಣಿ ಸಮರ್ಥಿಸಿದೆ. ವಿಚಾರಹೀನವಾದುದು ಅಂಧಶ್ರದ್ಧೆಯಾದೀತಲ್ಲದೆ ವಿಚಾರಾತೀತವಾದ ಉನ್ನತ ಕಲ್ಪನೆ ಅಂಧಶ್ರದ್ಧೆಯಾಗದು. ಅವಿಚಾರ (The Irrational)ದಿಂದ ವಿಚಾರ (The Rational) ವಿಕಸಿತವಾಯ್ತೆಂಬುದು ವಿಚಾರಹೀನವಾದುದು–ಅಶಕ್ತಿಯಿಂದ ಶಕ್ತಿ ಲಭ್ಯವಾಯ್ತೆನ್ನುವ ಹಾಗೆ!

**"ಸಾಪೇಕ್ಷತ್ವಾದನಾದಿತ್ವಾದ್ವೈಚಿತ್ರ್ಯಾದ್ವಿಶ್ವವೃತ್ತಿತಃ**
**ಪ್ರತ್ಯಾತ್ಮನಿಯಮಾದ್ ಭುಕ್ತೇರಸ್ತಿಹೇತುರಲೌಕಿಕಃ"–**

ಪ್ರಪಂಚದ ಪದಾರ್ಥಗಳು ಪರಸ್ಪರ ಸಾಪೇಕ್ಷ; ಅದರ ಕ್ರಿಯಾಸಂತಾನವು ಅನಾದಿ; ಅದು ವೈವಿಧ್ಯಮಯ; ಅದು ವಿಶ್ವದೆಲ್ಲೆಡೆಯಲ್ಲೂ ಹಾಗಿದೆ; ಪ್ರತಿಯೊಬ್ಬನ ಅನುಭವವೂ ಅವನವನಿಗೆ ಪರಿಸೀಮಿತ–ಆದುದರಿಂದ ಇಷ್ಟಾಗಲು ಲೌಕಿಕ (ಪ್ರಾಪಂಚಿಕ) ಕಾರಣವಾವುದೂ ಸಾಲದು; ಪ್ರಪಂಚಾತೀತವಾದ ಕಾರಣ ಬೇಕೇ ಬೇಕು– ಎಂದ ಉದಯನಾಚಾರ್ಯನ ತರ್ಕವನ್ನು ಮಹಾ ತಾರ್ಕಿಕಮಾನಿಯಾದ ರಸೆಲ್ಲನ ಯಾವ ವಾದವೂ ಖಂಡಿಸಿಲ್ಲ; ಮಹಾವಿಜ್ಞಾನಿಯಾದ ಐನ್‌ಸ್ಟೀನನ ಯಾವ ಗಣಿತ ಸೂತ್ರವೂ ಖಂಡಿಸಲಾರದು.

## ಸಿದ್ಧಾಂತ ದೋಷಗಳು

ಸ್ಪೆಂಗ್ಲರ್, ಕ್ರೀಬರ್, ನಾರ್‌ತ್ರಾಪ್, ಟಾಯ್ನ್‌ಬೀ ಮುಂತಾದ ವಿಚಾರವಾದಿಗಳು ಹೇಳುವ ಸಾಂಸ್ಕೃತಿಕ ಸಿದ್ಧಾಂತಗಳಲ್ಲಿ ಕೆಲವು ಗಣ್ಯವಾದ ದೋಷಗಳಿವೆ:

ಒಂದು ಸಂಸ್ಕೃತಿಯ ಎಷ್ಟು ಭಾಗ ಸಮನ್ವಯ ಹೊಂದಿದೆ, ಎಷ್ಟು ಹೊಂದಿಲ್ಲ– ಎಂಬುದನ್ನು ಅವರ ಸಿದ್ಧಾಂತಗಳು ಕಡೆಗಾಣಿಸಿಲ್ಲ. ಅವರು ಚೀನೀಯ, ಆರ್ಯ, ಐಗುಪ್ತ, ಗ್ರೀಕ್–ರೋಮಿಯ, ಪಾಶ್ಚಾತ್ಯ ಅಥವಾ ಇತರ ಯಾವುದಾದರೊಂದು ಸಂಸ್ಕೃತಿಯ ಸಮನ್ವಿತವಾಗಿದೆ ಎನ್ನುತ್ತಾರೆ. ಅದರ ಸಮನ್ವಿತತೆಯು ಅಪೂರ್ಣ, ಏಕದೇಶೀಯ, ಅಸಮಗ್ರ ಎಂಬುದನ್ನವರು ಅರಿಯರು. ಮಹಾ ಸಂಸ್ಕೃತಿಯೊಂದರಲ್ಲಿ ಕೂಡ ಅದರ ಕೇಂದ್ರಭಾಗ ಮಾತ್ರ ಮುಖ್ಯವಾದ ಹಾಗೂ ಅರ್ಥಪೂರ್ಣವಾದ ಒಂದು ಕಾರ್ಯಕಾರಣ ಪದ್ಧತಿಗೆ ಒಳಪಟ್ಟಿರುತ್ತದೆ; ಮಿಕ್ಕ ಪರಿಸರ ಭಾಗಗಳು ಅಸಮನ್ವಿತವಾಗಿರುತ್ತವೆ ಅಥವಾ ಅದರೊಟ್ಟಿಗೇ ಭಿನ್ನ ಭಿನ್ನವಾಗಿ ವಿವಿಧ ಗುಂಪುಗಳಲ್ಲಿ ಸಮನ್ವಿತವಾಗಿರುತ್ತವೆ. ಸ್ಪೆಂಗ್ಲರ್– ಟಾಯ್ನಬೀಗಳ ಆವಯವಿಕ ಸಿದ್ಧಾಂತ (organic theory)ದ ಪ್ರಕಾರ ಪ್ರತಿಯೊಂದು ಗಣ್ಯ ಸಂಸ್ಕೃತಿಯೂ ಹುಟ್ಟಿ, ಬೆಳೆದು ನಾಶ ಹೊಂದುತ್ತದೆ. ಇದು ಶುದ್ಧ ಸುಳ್ಳು. ಮಹಾ ಸಂಸ್ಕೃತಿಯೊಂದೂ ಉಕ್ತ ಜೀವಾವಯವಿಕ (Bio-organismic) ಪಥವನ್ನು ಹಿಡಿಯುವುದಿಲ್ಲ. ಅದರ ಬದಲು ಹುಟ್ಟಿದ (ಮೂಡಿದ) ಬಳಿಕ ಅದು ಒಂದು ಅನಿಶ್ಚಿತ ಅವಧಿಯವರೆಗೆ ಮುಂದುವರಿಯುತ್ತದೆ; ಹಾಗೆ ಮುಂದುವರಿಯುವಾಗ ಭಿನ್ನ ಭಿನ್ನ

ಪ್ರಭಾವಿ ಸಾಂಸ್ಕೃತಿಕ ಪದ್ಧತಿಗಳತ್ತ ಹೊರಳುತ್ತಿರುತ್ತದೆ; ಒಂದು Ideational ಧ್ಯೇಯ ಕಾಲ್ಪನಿಕ, Idealistic ಧ್ಯೇಯವಾದೀಯ ಅಥವಾ Sensate ಇಂದ್ರಿಯ ಪ್ರಾತ್ಯಕ್ಷಿಕ ಪದ್ಧತಿಯಿಂದ ಇನ್ನೊಂದಕ್ಕೆ ಅದು ಹೊರಳುತ್ತಿರುತ್ತದೆ. ಮುಖ್ಯವಾದ ಸಂಸ್ಕೃತಿಗಳ ಚರಿತ್ರೆಯಲ್ಲಿ ಅಂಥ ಹೊರಳಾಟಗಳು ಮುಖ್ಯವಾದ ಪರಿವೃತ್ತಿಬಿಂದು (Turning Point)ಗಳಾಗಿರುತ್ತವೆ. ಸ್ಪೆಂಗ್ಲರ್, ಟಾಯ್ನಬೀ, ನಾರ್ತ್ರಾಪರ ಭಿನ್ನ ಸಾಂಸ್ಕೃತಿಕ ಮಾದರಿಗಳೆಲ್ಲವೂ ಕೆಲ ಸಾಮಾನ್ಯ ಮಾದರಿಗಳ ಉಪವಿಭಾಗಗಳು. ಅವರು ಆಯಾ ಸಂಸ್ಕೃತಿಯ ಸಾರಭೂತ ಗುಣದಲ್ಲಿ ಒಂದೊಂದು ಅಪರಿವರ್ತನೀಯ ಚಾರಿತ್ರವಿದೆ ಎಂದು ಹೇಳುತ್ತಾರೆ. ಪೌರಸ್ತ್ಯ ಸಂಸ್ಕೃತಿಗೆ ಮತಧಾರ್ಮಿಕ, ಪ್ರಾತಿಭ ಅಥವಾ ರಸಾತ್ಮಕ ಚಾರಿತ್ರ (Character) ಇದೆಯೆಂದೂ ಪಾಶ್ಚಾತ್ಯ ಸಂಸ್ಕೃತಿಗೆ ವೈಜ್ಞಾನಿಕ ಚರಿತ್ರವಿದೆಯೆಂದೂ ಹೇಳುವುದು ಶುದ್ಧ ಸುಳ್ಳು. ಮಧ್ಯಯುಗದ ಪಾಶ್ಚಾತ್ಯ ಸಂಸ್ಕೃತಿಯು ಮತಧಾರ್ಮಿಕ, ಪ್ರಾತಿಭ ಅಥವಾ ರಸಾತ್ಮಕವಾಗಿದ್ದುದು ಅಭೇದ್ಯ ಸತ್ಯ; ೧೩ನೆಯ ಶತಮಾನ ಕಳೆದ ಬಳಿಕ ಅದು ವೈಜ್ಞಾನಿಕವಾಯ್ತು. ವೈಜ್ಞಾನಿಕವೆಂದರೆ ಸೈದ್ಧಾಂತಿಕ (Theoritic). ತದ್ವಿರುದ್ಧವಾಗಿ, ಪೌರಸ್ತ್ಯ ಸಂಸ್ಕೃತಿಗಳಲ್ಲೂ ವೈಜ್ಞಾನಿಕ ಯುಗಗಳಿದ್ದವು. ಈ ವಿಷಯದಲ್ಲಿ ಪ್ರತಿಯೊಂದು ಸಂಸ್ಕೃತಿಯನ್ನೂ ನಿಷ್ಕ್ರಿಯಾತ್ಮಕವೆಂದು ಗಣಿಸುವುದು ಅಸಂಬದ್ಧ, ಅವಾಸ್ತವಿಕ. ಯಾವುದಾದರೂ ಮೇಲು ಮೇಲಿನ ಅಂಶವೊಂದು ಬದಲಾದರೆ ತತ್ಸದೃಶವಾದ ಬದಲಾವಣೆಯು ಒಂದು ಸಂಸ್ಕೃತಿಯ ಇತರ ಅಂಶಗಳಲ್ಲಿ ಉಂಟಾಗುವುದಿಲ್ಲ; ಅದರ ಸಾರಭೂತವಾದ ಮುಖ್ಯಾಂಶವೊಂದು ಬದಲಾದರೆ, ಅದು ಇಡಿಯಾಗಿ ಬದಲಾವಣೆ ಹೊಂದುತ್ತದೆ; ಇಂಥ ಬದಲಾವಣೆಗಳಲ್ಲಿ ಹೆಚ್ಚು ಅಪೇಕ್ಷಣೀಯ, ಕಡಿಮೆ ಅಪೇಕ್ಷಣೀಯ ಎಂಬ ತಾರತಮ್ಯವಿರುತ್ತದೆ; ಈ ತಾರತಮ್ಯಕ್ಕೆ ದೀರ್ಘಕಾಲಿಕವಾದ ಸರ್ವೋದಯವೇ ನಿಕಷ.

## ಸರ್ವೋದಯದ ಅರ್ಥ

ಮಹಾಭಾರತದ ಯುದ್ಧದಿಂದಾದುದೇ ಸರ್ವೋದಯ: ಅತಿ ಹೆಚ್ಚು (ಎಂಥೆಂಥವರಾದ) ಜನರ ಅತಿ ಹೆಚ್ಚಾದ ಭೌತಿಕ ಸಂಪದಭಿವೃದ್ಧಿಯು ಸರ್ವೋದಯವಲ್ಲ. ನ್ಯಾಯವಾದ ಶಾಂತಿಗೆ ಕಾರಣವಾಗದ ಭೌತಿಕ ಸಂಪದಭಿವೃದ್ಧಿಯು ವ್ಯರ್ಥ. ಅಶಾಂತರು ಅತೃಪ್ತರು, ಅತೃಪ್ತರು ಅಸುಖಿಗಳು. ಅನ್ಯಾಯದ ಶಾಂತಿಯು ಆಭಾಸಿಕ, ನಿರ್ವೀರ್ಯತಾ ಪೋಷಕ. ಭೌತಿಕಸುಖ ಸಾಧನಗಳ ನ್ಯಾಯವಿರುವುದು Each according to the capaciy ತನ್ನ ಶಕ್ತಿಗೆ ತಕ್ಕಷ್ಟು ಕೆಲಸ ಮಾಡಿದಾಗ ಪ್ರತಿಯೊಬ್ಬನಿಗೂ ತನ್ನ Each according to his need ಅವಶ್ಯಕತೆಗೆ ತಕ್ಕಷ್ಟು ಸೌಕರ್ಯ ದೊರಕುವುದರಲ್ಲಿಯೇ. ವ್ಯಕ್ತಿಯ ಶಕ್ತಿಯೂ ಭೌತಿಕ ಅವಶ್ಯಕತೆಗಳೂ ವೃತ್ತಿ, ವಯಸ್ಸು, ಆರೋಗ್ಯಗಳಿಂದ ಉಪಾಹಿತ; ಈ ಉಪಾಧಾನಗಳೇ ಪಾತ್ರತ್ವ ನಿರ್ಣಾಯಕ. "ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ?" ಎಂಬ ವ್ಯಾಸ ಪ್ರಶ್ನೆಯಲ್ಲಿ ಉಕ್ತ ವ್ಯವಸ್ಥೆ ಅಡಕವಾಗಿದೆ. ದುಷ್ಟ ಶಿಕ್ಷಣ–ಶಿಷ್ಟ ರಕ್ಷಣವೇ ಧರ್ಮಸಂಸ್ಥಾಪನೆ ಅಥವಾ ಸರ್ವೋದಯ. ಸತ್‌ಪಾತ್ರರೆನ್ನಿಸಿದ ಪರರಿಗಾಗಿ

ಬಳಸದ ಧನಸಂಚಯ ಉಳ್ಳವರು ದುಷ್ಟರೆಂಬುದು ಗಾಂಧಿಯವರ ವಿಶ್ವಸ್ತಿಕೆಯ ಸಿದ್ಧಾಂತ. ನ್ಯಾಯಾವಲಂಬಿಯಾದ ತ್ರಯಸ್ಥ ದೃಷ್ಟಿಯೇ ದುಷ್ಟ–ಶಿಷ್ಟ ವಿಭಾಜಕ. ವೃತ್ತಿಗಳ ಪ್ರಯೋಜನವು ಆಯಾ ನಾಗರಿಕತೆಗಳಿಂದ ಉಪಾಹಿತ (Conditioned, governed). ಭಾರತೀಯ ವೃತ್ತಿಗಳ ಉಪಯುಕ್ತತೆಗೆ ನಿರ್ಣಾಯಕ.

## ಫ್ರೂಡ್ ವಾದದ ವಿಮರ್ಶೆ

ಫ್ರೂಡ್ ಮಹಾಶಯನ ಮನಃಶಾಸ್ತ್ರ ಪ್ರಸ್ಥಾನದ ಅನೇಕ ಅಂಶಗಳೀಗ ಖಂಡಿಸಲ್ಪಟ್ಟಿರುವುದನ್ನು ಬಹಳ ಜನ ಭಾರತೀಯರು ಗಮನಿಸಿಲ್ಲ. ಆತನ "ಇದ್" ಮತ್ತು "ಸಬ್‌ಕಾನ್ಷಸ್" ಎಂಬ ಕಲ್ಪನೆಗಳು ಏಕದೇಶೀಯ. ಅವನ "ಇದ್" ಮೂಲ ಪ್ರವೃತ್ತಿಗಳ ಜನಕ; ಅದು ಶುದ್ಧ ಸ್ವಾರ್ಥಿ; ಅದನ್ನವನು ಅಜ್ಞಾತ (ಅವಿಜ್ಞಾತ) ಪ್ರಜ್ಞೆಗೆ ಸರಿದೊರೆ ಮಾಡಿದ್ದಾನೆ. ಅವನ "ಸಬ್‌ಕಾನ್ಷಸ್ಸು" ಬಾಲ್ಯದ ಪ್ರವೃತ್ತಿದಮನಗಳ ಮೊತ್ತವೆಂಬ "ಅನ್‌ಕಾನ್ಷಸ್ಸಿ"ನ ಅಂಗ; ಒಂದು ವ್ಯಕ್ತಿಯ ಲಕ್ಷ್ಯಕ್ಕೆ ಗ್ರಾಹ್ಯವಾದರೆ ಇನ್ನೊಂದು ವಿಶಿಷ್ಟ ತಾಂತ್ರಿಕ ಪ್ರಯತ್ನಕ್ಕಷ್ಟೇ ಜ್ಞೇಯ. ಅವನ ಅಹಂ ಮತ್ತು ಅತ್ಯಹಂ (Ego and superego)ಗಳು ಅಸ್ಫುಟ, ಕಲ್ಪನಾದುಷ್ಟ; ಮೂಲ ಪ್ರವೃತ್ತಿಗಳ ಜನಕವು ವಸ್ತು ಸತ್ಯದೊಡನೆ ಸಂಪೃಕ್ತವಾದಾಗ ರೂಪಾಂತರ ಹೊಂದಿ ಅಹಂ ಆಗುತ್ತದೆ. ಈ ಅಹಮ್ಮೇ ಜಾಗರಿತವಾದ ಪೂರ್ಣವ್ಯಕ್ತಿತ್ವ. ಹೊರಜಗತ್ತಿನಲ್ಲಿ ತಂದೆ ತಾಯಿಗಳೂ ಪ್ರಾಧಿಕಾರಿಗಳೂ ವಹಿಸುವ ವಿಧಿ–ನಿಷೇಧ ವಿಧಾನದ ಕೆಲಸವನ್ನು ನಿರ್ವಹಿಸುವ ಅಹಮ್ಮಿನ ಭಾಗವು ಅತ್ಯಹಂ. ಅದರ ಕಾರ್ಯವು ಸಾಮಾನ್ಯವಾಗಿ ಅಜ್ಞಾತ (ಅವಿಜ್ಞಾತ); ವಿಜ್ಞಾತವಾದಾಗ ಅದು "ಸಾಕ್ಷಿ" ಎನ್ನಿಸುತ್ತದೆ; ಸಾಕ್ಷಿಯು ಮನಃಸಾಕ್ಷಿ ಅಥವಾ ಆತ್ಮಸಾಕ್ಷಿ. "ಇಡಿಪಸ್ ಕಾಂಪ್ಲೆಕ್ಸು" ಅದರ ಜನಕ. "ಇಡಿಪಸ್ ಕಾಂಪ್ಲೆಕ್ಸ್"ಎಂದರೆ ಮಗನ ಪಿತೃದ್ವೇಷಗ್ರಹ. ಅದು ಅಹಮ್ಮನ್ನು ಶಿಕ್ಷಿಸುವ ಕಾರಕ. ಅದರ ಶಿಕ್ಷೆ ಕಾಹಿಲೆಯ ರೂಪದ್ದು. ಇಂಥ ಸ್ವಕಪೋಲ ಕಲ್ಪಿತ ಪದಾರ್ಥಗಳನ್ನಾಧರಿಸಿದ ಸಮಾಜೋತ್ಪತ್ತಿ, ಸಂಸ್ಕೃತಿ ಜನನ ಮತ್ತು ನಾಗರಿಕತೆಯ ಸ್ವಭಾವ ಮುಂತಾದವು ಅಸಂಬದ್ಧ ಪ್ರಲಾಪಗಳು.

ನಾಗರಿಕರಲ್ಲಿ ಕಂಡುಬರುವ ಆತ್ಮಿಕ ನರದೌರ್ಬಲ್ಯ (Psycho-Nuerosis) ಮತ್ತು ಇತರ ಮನೋರೋಗಗಳಿಗೆ ಮನುಷ್ಯನ (Libid) (ಲಿಂಗ) ಕಾಮಶಕ್ತಿಯನ್ನೂ ವಿನಾಶಕ ಪ್ರವೃತ್ತಿಗಳನ್ನೂ ದಮಿಸುವುದೇ ಕಾರಣವೆಂಬ ಫ್ರೂಡೀಯ ಹೇಳಿಕೆಯು ಮೂರ್ಖೋದ್ಗಾರ. ನಾಗರಿಕತೆಯಲ್ಲಿರುವ ಮೌಲ್ಯ, ಮಟ್ಟ ಮತ್ತು ಬೇಡಿಕೆಗಳ ಒತ್ತಾಯವೇ ಅಂಥ ರೋಗಗಳ ಜನಕ. ಆ ರೋಗಗಳು ಅಶಾಂತಿಜನಕಗಳು. ಅತಿಯಾದ ಭೇದಕರಣ ಮತ್ತು ಸ್ತರಕಲ್ಪನೆಗಳೇ ಇತ್ತೀಚಿನ ಆತ್ಮಿಕ ನರದೌರ್ಬಲ್ಯಗಳಿಗೆ ಕಾರಣ. ಅವು ಕಾಮಪ್ರವೃತ್ತಿಯ ಅಥವಾ ಮರಣಪ್ರವೃತ್ತಿಯ ಅತ್ಯಹಮ್ಮಿನ ಬಂಧವಿರದ ವಿಮೋಚನೆ ಮಾಡುವುದರಿಂದ ಪರಿಹಾರ ಪಡೆಯುವುವು ಎಂಬುದು ಅನುಭವ ವಿರುದ್ಧವಾಗಿದೆ. ಹಾಗೇ ಅತ್ಯಹಮ್ಮಿನ ಬೇಡಿಕೆಗಳಿಗನುಗುಣವಾಗಿ ಉಕ್ತವಿನಾಶಕ ಪ್ರವೃತ್ತಿಗಳ ಉದಾತ್ತೀಕರಣ ಆ ರೋಗಗಳಿಗೆ ಪರಿಹಾರಕ ಎಂಬದೂ ಅಪ್ರಾಮಾಣಿಕ. ಫ್ರೂಡನ ಜನನ ನಿಯಂತ್ರಣ

ಮುಂತಾದವುಗಳಿಂದೊಡಗೂಡಿದ ಸುಲಭ ವಿಚ್ಛೇದ್ಯ ವಿವಾಹ ಮತ್ತು ಕಾಮಸ್ವಾತಂತ್ರ್ಯ (ಸ್ವಾಚ್ಛಂದ್ಯ) ಪ್ರಚಾರಗಳು, ತಲೆಹಿಡಿಕತನದವುಗಳು, ವಿಕೃತಕಾಮ ಹಿಡಿದ ಮನಸ್ಸಿನ ಹಗಲುಗನಸುಗಳು!

ಅನ್ಯಾಯವಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ಆತ್ಮರಿಪುಗಳೆಂದ ವ್ಯಾಸಸಿದ್ಧಾಂತವು ಅಪ್ರತಿಹತ, ಅಭೇದ್ಯ, ಅನುಲ್ಲಂಘನೀಯ. ಏಕೆಂದರೆ ಅವು ಮನಃಕ್ಷೋಭೆಯನ್ನು ನಿಷ್ಪ್ರತೀಕಾರವಾಗಿ, ನಿರಂತರವಾಗಿ ಉತ್ತರೋತ್ತರ ಉಜ್ವಲವಾಗಿ ಉಂಟುಮಾಡುವುವು. ಕ್ಷುಬ್ಧಮನಕ್ಕೆ ಶಾಂತಿಯಿಲ್ಲ.

ಬಿಗಿಯಾದ ಕರ್ತವ್ಯಬುದ್ಧಿಯನ್ನು ಬೆಳೆಸಿಕೊಂಡ ಹಾಗೂ ದೇವದಂಡಭಯ ಹಿಡಿದ ವ್ಯಕ್ತಿಯು ಗರಹಿಡಿದವನೆಂದು ಹೇಳುವ ಮನಃಶಾಸ್ತ್ರವೂ ಅಸಂಬದ್ಧ. ಹಲ್ಲಿ ತಿಂದೆನೆಂದು ಗ್ರಹಿಸಿದವನ ಮನಃಸ್ಥಿತಿಯನ್ನು ಗರಹಿಡಿದ ಮಾದರಿ (Obsessional Type)ಯೆಂದು ಗ್ರಹಿಸುವುದು ಅನುಭವ ವಿರುದ್ಧವಾದುದು. ಗರಹಿಡಿದವನೊಬ್ಬ ಸಂಶಯಾತ್ಮ, ಅವನು ವಿನಾಶೋನ್ಮುಖ; ದೇವ ಶಿಕ್ಷಾಭಯವು "ಸಾಕ್ಷಿ" ಸಂಸ್ಕಾರವನ್ನು ಬೆಳೆಯಿಸಿ ಕೊಂಡವನಿಗಿರುತ್ತದೆ. ಸಾಕ್ಷಿಮತ್ತೆಯು ಸಮಾಜ ಹಿತಕಾರಕ ಗುಣ. ಅದು ಅನಾರೋಗ್ಯಕರವೆಂಬದು ಅನಾರೋಗ್ಯಕರವಾದ ಮಿದುಳನ್ನು ಬೆಳೆಯಿಸಿಕೊಂಡವನಿಗೆ ಮಾತ್ರ ಸಹಜ. ಇಂಥ ಅಜ್ಞಾನವನ್ನು ವಿಜ್ಞಾನದ ಹೆಸರಿನಲ್ಲಿ ತೂರಿಬಿಡುವ ಪಾಶ್ಚಾತ್ಯತೆಯ ಅನುಕರಣ ಅಂಧಾಚಾರ.

## ಪ್ರಾಣಿಶಾಸ್ತ್ರದ ನೀತ್ಯಾಧಾರ

ಪ್ರಾಣಿಶಾಸ್ತ್ರದಿಂದ ಸಂಕುಚಿತ ವ್ಯಕ್ತಿಸ್ವಾರ್ಥದ ನೀತಿನಡತೆಗಳನ್ನು ನಿಗಮನಿಸುವವರು ಮಾತ್ಸ್ಯನ್ಯಾಯವಾದಿಗಳು. ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧದ ನಾಯಕರನ್ನು ನಾಟ್ಯಶಾಸ್ತ್ರ ಹೇಳುತ್ತದೆ. ಅನೇಕರಲ್ಲಿ (ಸಜ್ಜನರಲ್ಲಿ) ಸಮಾನುರಾಗ ಉಳ್ಳವನು ದಕ್ಷಿಣ ನಾಯಕ; ತಪ್ಪು ಮಾಡಿಯೂ ತಾನು ಸಂಭಾವಿತನೆಂದು ನಿರ್ಲಜ್ಜವಾಗಿ ತಪ್ಪನ್ನು ಕಂಡವರೆದುರು ನಟಿಸುವವನು ಧೃಷ್ಟನಾಯಕನು; ಒಬ್ಬರಿಗಷ್ಟೇ ಅನುಕೂಲನಾಗಿರುವವನು ಅನುಕೂಲ ನಾಯಕನು; ಒಬ್ಬರಿಗೆ ಅನುಕೂಲನಾಗಿ ಅನೇಕರಿಗೆ ಸಮಾನಾನುರಾಗವುಳ್ಳವನೆಂದು ತೋರಿಸಿಕೊಂಡು, ತನಗೆ ಬೇಕಾದ ಒಬ್ಬರನ್ನುಳಿದು ಮಿಕ್ಕವರಿಗೆ ಗುಪ್ತವಾಗಿ ಅಪ್ರಿಯವನ್ನುಂಟು ಮಾಡುವವನು ಶಠನಾಯಕನು. ಮಾತ್ಸ್ಯನ್ಯಾಯವಾದಿಗಳು ಧೃಷ್ಟವರ್ಗಕ್ಕೆ ಸೇರುತ್ತಾರೆ. ಅಥವಾ ಶಠಜಾತಿಗೆ ಸೇರುತ್ತಾರೆ ಇಲ್ಲವೆ ಅನುಕೂಲರೆನ್ನಿಸುತ್ತಾರೆ; ಅಂತೂ ಅವರು ದಕ್ಷಿಣರೆನ್ನಿಸರು. ಪೌರಸ್ತ್ಯರದು ದಕ್ಷಿಣಾಚಾರ, ಪ್ರಾಣಿ ದೇವರದು ವಾಮಾಚಾರ. ವಾಮಾಚಾರ ವರ್ತನೆ ಸಮಾಜ ಕಂಟಕ; ಅದಕ್ಕೆ ಧರ್ಮಜ್ಞರಾದ ಹತ್ತು ಸಮಸ್ತರ ಮತ ಎಂದೂ ಸಿಗಲಾರದು. ಡಾರ್ವಿನೀಯ ನೀತಿವಾದವು ಪ್ರಮಾದವಾದ. ಅದು ಭಾರತೀಯ ವ್ಯಾಸದ ತುದಿಗಳಿಂದ ಹೊರಗೆ. ವ್ಯಾಸವಾದವು ವ್ಯಸ್ತವಲ್ಲ, ಸಮಸ್ತ.

ಔದಾತ್ಯ, ಲಾಲಿತ್ಯ, ಶಾಂತಿಮತ್ತೆ, ಔದ್ಧತ್ಯಗಳೂ ನಾಯಕ ಸ್ವಭಾವ ಭೇದಗಳನ್ನು ಹೇಳುತ್ತವೆ. ಸ್ವಪರಾಕ್ರಮಜಲ್ಪನ, ಅಕ್ಷಮಾಶೀಲ, ಅಗಾಂಭೀರ್ಯ, ಅಲ್ಪಸತ್ವತೆ, ಅಸ್ಥೇಯತೆ, ಪ್ರಕಟಕೋಪ, ಅದೃಢ ವ್ರತಗಳು ಅನುದಾತ್ತ ಲಕ್ಷಣಗಳು; ಚಿಂತಾತುರ, ಕಠಿನ, ಕಲಾವಿಮುಖ ಎನ್ನಿಸಿದವನು ಅಲಲಿತ; ದುರ್ಗುಣಿಯು ಅಶಾಂತ; ಅವಂಚಕತೆ, ಅನುಗ್ರತೆ, ಅಚಾಪಲ್ಯ, ನಿರಹಂಕಾರ, ದರ್ಪರಾಹಿತ್ಯ, ಆತ್ಮಶ್ಲಾಘಾವಿಮುಖತೆ ಅನುದ್ಧತನ ಲಕ್ಷಣಗಳು. ಅನುದಾತ್ತ, ಅಲಲಿತ, ಅಶಾಂತ, ಉದ್ಧತ ಸ್ವಭಾವದವರು ಮಾಡುವ ತರ್ಕಗಳೆಲ್ಲವೂ ಆಯಾ ಗುಣಗಳಿಂದ ಪ್ರೇರಿತವಾದಂಥವು. ಅವರ ನಿಷ್ಪಕ್ಷಪಾತತೆಯೆಂದೂ ನಂಬಲರ್ಹವಲ್ಲ. ಸಂಕುಚಿತ ವ್ಯಕ್ತಿಸ್ವಾರ್ಥದ ಆಸೆ, ಭಾವನೆಗಳಿಂದ ಸಂಪೂರ್ಣ ಮುಕ್ತವಾದ ಬೌದ್ಧಿಕ ಪ್ರಾಮಾಣಿಕೆ ಅವರಲ್ಲೆಂದೂ ಕಂಡು ಬರಲಾರದು. ಅಂಥವರು ವಿಜ್ಞಾನಿಗಳೆಂದುಕೊಂಡರೂ ಒಂದೇ, ಗಣಿತಜ್ಞರೆಂದುಕೊಂಡರೂ ಒಂದೇ! ಹೃದಯ ಸೌಂದರ್ಯವಿಲ್ಲದ ಬುದ್ಧಿಸೌಂದರ್ಯವು ಭ್ರಮಾತ್ಮಕ; ಆಡಿದಂತೆ ಆಚರಿಸದವನ ನುಡಿಬೆಡಗು ಅನವಲಂಬನೀಯ. ಶಮದಮಾದಿ ಸಾಧನ ಸಂಪತ್ತಿಯಿಲ್ಲದವರ ವಾದಪಾಂಡಿತ್ಯವು ಅಪ್ರಮಾತ್ಮಕ. ಅದರಿಂದ ಪುರುಷಾರ್ಥ ಸಾಧನೆ ಅಸಾಧ್ಯ. ಅಧಾರ್ಮಿಕ ಸತ್ಯವು ಸತ್ಯಾಭಾಸ, ಏಕದೇಶೀಯ ಪ್ರತಿಪಾದನೆ. ತ್ರೈಕರಣಿಕ ಅಪಾವಿತ್ರ್ಯವು ಒಬ್ಬನ ನೂರು ವರ್ಷಗಳ ಆಯುರ್ದಾಯದಲ್ಲಿ ಅನೇಕ ಸಲ ಮಾಡಿ ಮುಳುಗಬಹುದು; ಅವನ ತ್ರೈಕರಣಿಕ ಪಾವಿತ್ರ್ಯ–ಅಪಾವಿತ್ರ್ಯಗಳ ಪರಸ್ಪರ ಆನಂತರ್ಯ–ಉದಯಾಸ್ತಗಳ ದೆಸೆಯಿಂದ ವಾದದ ಪ್ರಾಮಾಣಿಕತೆ ಅನಿಗಮನೀಯವಾಗುತ್ತದೆ. ಅಂಥ ವಾದವು ತ್ಯಾಜ್ಯ–ಹಾನಿಕರವಾದುದರಿಂದ. ಬೌದ್ಧಿಕ ಕತ್ತರಿಯ ಹರಿತವು ಜೀವನದ ಮೂಲ ಸತ್ಯವನ್ನು ಪರಿಚ್ಛೇದಿಸಿ ಹೇಳಲಾರದು– ಆ ಕತ್ತರಿಯು ಜೀವನಾಂತರ್ಗತವಾದುದರಿಂದ.

## ಏಕದೇಶೀಯ ವಿಚಾರ

**"ಚಿತ್ತಮಿಂದ್ರಿಯಸಂಘಾತಂ ಮನೋಬುದ್ಧಿಸ್ತಥಾಷ್ಟಮೀ**
**ಅಷ್ಟಾ ಜ್ಞಾನೇಂದ್ರಿಯಾಣ್ಯಾಹು ರೇತಾನ್ಯಧ್ಯಾತ್ಮಚಿಂತಕಾಃ**

ಭಾವನಾತ್ಮಕ ಮನಸ್ಸು,* ಇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ; ಚರ್ಮ=ಮಾಂಸಲತಾಸಂವೇದನೆ, ಭಾರ ಸಂವೇದನೆ, ಆಕಾರ ಸಂವೇದನೆ ಮತ್ತು ಮೃದುತ್ವ–ಕಠಿನತ್ವ ಸಂವೇದನೆ ಎಂಬ ೪ ಚಾರ್ಮಣ ಪ್ರತ್ಯಕ್ಷಗಳ ಕರಣ), ಇಚ್ಛಾತ್ಮಕ ಮನಸ್ಸು ಬುಧ್ಯಾತ್ಮಕ ಮನಸ್ಸು–ಎಂಬೀ ಎಂಟೂ" ಪ್ರಪಂಚದ ಕ್ರಿಯಾಸಂತಾನರೂಪದ ಜೀವನದಿಂದ ವ್ಯಾಪ್ತವಾಗಿವೆ. ಜೆ. ಕೃಷ್ಣಮೂರ್ತಿ ಹೇಳಿದಂತೆ–Most of us are not individuals, but merely the expression of a collective system of traditions, fears and ideals–– ಬಹುಜನರು ಪರಂಪರೆಗಳ ಸಾಮೂಹಿಕ ಪದ್ಧತಿಯ, ಭಯಗಳ ಮತ್ತು ಧ್ಯೇಯಗಳ ಅಭಿವ್ಯಕ್ತಿಗಳು–ತತ್ವಜ್ಞಾನಿ–ಮಾನಿಗಳನೇಕರು ಇದಕ್ಕೆ ಹೊರತಲ್ಲ.

* Emotion, Five Sense organs, Conation, Cognition (Intellect)=8,; Eight sensation Centres=4 Sense organs+ 4 types of sensation Centres in the Skin.

ಪ್ರಾಣಿಶಾಸ್ತ್ರದ್ದೊಂದು ಶ್ರದ್ಧಾಪರಂಪರೆ, ಮನಃಶಾಸ್ತ್ರದ್ದೊಂದು ಶ್ರದ್ಧಾಪರಂಪರೆ– ಅವುಗಳನ್ನು

**"ಕೇವಲಂ ಶಾಸ್ತ್ರಮಾಶ್ರಿತ್ಯ ನಕರ್ತವ್ಯೋ ವಿನಿರ್ಣಯಃ**
**ಯುಕ್ತಿಹೀನ ವಿಚಾರೇತು ಧರ್ಮಹಾನಿಃ ಪ್ರಜಾಯತೇ"**

ಎಂಬ ಎಚ್ಚರಿಕೆಯನ್ನು ಮರೆತು ಅಥವಾ ಕುಯುಕ್ತಿಗಳನ್ನು ಬಳಸಿ ಅರ್ಥಯಿಸಿ ಸರ್ವಶಾಸ್ತ್ರಾರ್ಥಗಳನ್ನು ವ್ಯಾಪಿಸಿ ಅವುಗಳನ್ನು ಮೀರಿ ನಿಂತ ಜೀವನ ಮೂಲಸತ್ಯ ವ್ಯಾಖ್ಯೆಗೆ ಏಕ ಶಾಸ್ತ್ರವನ್ನವಲಂಬಿಸಿ ಪ್ರತ್ಯೇಕವಾಗಿ ಪ್ರಯತ್ನಿಸುವುದು ಒಂದು ಮನೋರೋಗ. ಜೀವನವು ಏಕಶಾಸ್ತ್ರೀಯವಲ್ಲ. ತತ್ವಜ್ಞಾನವು ಸರ್ವಶಾಸ್ತ್ರಗಳ ಆತ್ಯಂತಿಕ ಮೂಲ ಸಿದ್ಧಾಂತಗಳ ಸಮನ್ವಿತ ಸ್ವರೂಪವುಳ್ಳದ್ದು. ಪ್ರಾಣಿಶಾಸ್ತ್ರವು "ಜೀವೋ ಜೀವಸ್ಯ ಜೀವನಂ" ಎಂದು ಹೇಳಬಹುದು. ಆದರೆ ಅದರಲ್ಲೇ ಒಂದು ಜಾತಿಯ ಮೀನು ಮತ್ಸ್ಯನ್ಯಾಯವನ್ನು ಮುರಿದು ತನ್ನ ಮರಿಗಳನ್ನು ರಕ್ಷಿಸಲು ನುಂಗಿಟ್ಟುಕೊಂಡು ಜೀವಂತವಾಗಿ ಉಗುಳುವ ನಿದರ್ಶನವೂ ಇರುವುದರಿಂದ ಹಿಂಸೆ ಅಹಿಂಸೆಗಳೆರಡೂ ಜೀವನದಲ್ಲಿ ಓತಪ್ರೋತವಾಗಿವೆ ಎನ್ನಬೇಕಾಗುತ್ತದೆ. ಫ್ರೂಡನು ಮನುಷ್ಯನಲ್ಲಿ Life instinct ಜೀವನ ಪ್ರವೃತ್ತಿ ಮತ್ತು Death Instinct ಮರಣ ಪ್ರವೃತ್ತಿಗಳೆರಡೂ ಇರುವುವೆಂದು ಹೇಳಿರುವುದಿಲ್ಲಿ ಮನನೀಯ. ಆದರೆ ಸಂಸ್ಕೃತಿ ಇರುವುದು ಸಮ್ಯಗ್ ಜೀವನ ಪೋಷಕತೆಯಲ್ಲಿ. ಸಮ್ಯಕ್ತ್ವವು ಮಾನವ ಜೀವಿತದಲ್ಲಿ Supreme Social Justice ಸಾಮಾಜಿಕವಾದ ಪರಮ ನ್ಯಾಯವನ್ನು ಆಧರಿಸಿದೆ. ವ್ಯಾಸ ವ್ಯಾಖ್ಯೆಯಲ್ಲಿ ಅದು ಧರ್ಮದ ಮೂಲಸ್ವರೂಪ. ಅತ್ಯುಚ್ಚ ಸಾಂಸ್ಕೃತಿಕ ಆದರ್ಶಗಳ ಸಾಧನೆಗೆ ಅನುಕೂಲಿಸುವ ಸಂಬಂಧಗಳನ್ನಿಟ್ಟುಕೊಂಡ (ಸಮಾಜದ) ಸಾಮಾಜಿಕತೆಯೇ ನ್ಯಾಯ ಪಾರಮ್ಯಕ್ಕೆ ತಳಹದಿ. ಶರೀರೈಕ ಸಂಗೋಪನವಾದವು ಸಂಸ್ಕೃತ ಸಾಮಾಜಿಕತೆಯಲ್ಲ. ಪ್ರಾಪಂಚಿಕ ಪ್ರಾಣಿ ಜೀವನವು ಶರೀರಾದಿ ಮಾನಸಾಂತ. ಮಾನುಷತ್ವವು ಸ್ವಲ್ಪ ಸುಧಾರಿಸಿದ ಪ್ರಾಣಿತ್ವ. ಅದರಿಂದಲೇ ಸಮ್ಯಕ್ತ್ವವು ಮಾನಸಾದಿ ಆತ್ಮಾಂತವಾದ ದಿವ್ಯತೆಯಲ್ಲಿ ವರ್ಗೀಕೃತವಾಗಿದೆ. ಆದರೆ ಈ ಘಟ್ಟವು ಅಪವ್ಯಾಸರೂಪಕ್ಕಿಳಿದಾಗ ಸಾಮಾಜಿಕವಾಗಿ ಪೂರ್ವಘಟ್ಟಕ್ಕೆ ವಿರುದ್ಧವಾಗುತ್ತದೆ. ಇದು ಸನಾತತೆಯ ಹೆಸರಿನಲ್ಲಿ ನಡೆದ ಅಪಸನಾತನತೆ.

## ವೈಟ್‌ಹೆಡ್ ಸಿದ್ಧಾಂತದ ವಿಶ್ಲೇಷಣೆ

ವೈಟ್‌ಹೆಡ್ಡನ Doctrine of organism ಆವಯವಿಕ ಸಿದ್ಧಾಂತವು ವ್ಯಕ್ತಿಯ ಸಾದಿತ್ವ– ಸಾಂತತ್ವಗಳನ್ನು ಸಾರುತ್ತದೆ. ಇಲ್ಲಿಯ ವ್ಯಕ್ತಿಯು ಪ್ರಾಪಂಚಿಕ ಮಾನಸಾಂತಿಕ– ಆಧ್ಯಾತ್ಮಿಕನಲ್ಲ. ಆದುದರಿಂದ ಇದು ನಿತ್ಯವೂ ತನ್ನ ವೈಯಕ್ತಿಕ ಪೂರ್ಣತೆಯನ್ನು ಕಳೆದುಕೊಳ್ಳುತ್ತಿರುತ್ತದೆ. ಹಾಗೆ ಕಳೆದುಕೊಳ್ಳುವುದೇ 'ವಾಸ್ತವಿಕ, ವಸ್ತುನಿಷ್ಠ ಅಮರತ್ವ ಎಂದು ವರ್ಣಿಸಲಾಗಿದೆ. ಸೃಷ್ಟಿಯಾಗುವದು ಅತೀಂದ್ರಿಯವಾದ ವಸ್ತುನಿಷ್ಠ ಜಟಿಲ ಸಾರಬೀಜದಿಂದ ಭಿನ್ನವ್ಯಕ್ತಿ ಪದಾರ್ಥಗಳ ರೂಪದಲ್ಲಿ. ಸೃಷ್ಟತೆಯೇ ವ್ಯಕ್ತಿತ್ವದ ವಾಸ್ತವಿಕತೆ, ಪ್ರಾಪಂಚಿಕತೆ. ಆದರಿಲ್ಲಿ, ಸೃಷ್ಟತೆ– ನಷ್ಟತೆಗಳು ಪೂರ್ವೋತ್ತರಕಾಲೀನ ಅವಿನಾಭಾವಿಗಳಾಗಿರುವುದರಿಂದ ಪ್ರಾಪಂಚಿಕ ವ್ಯಕ್ತಿತ್ವಾರ್ಥದ ಅನಂತತೆ, ಅಮರತೆ ಅಸಂಭವ; ಪ್ರಪಂಚೋತ್ತರ (ಅತಿಭೌತ, ಅತಿಮಾನಸ)

ಐಕಾತ್ಮ್ಯದ ಸ್ವರೂಪದಲ್ಲಿ ಮಾತ್ರ ಅಮರತ್ವ ಹೊಂದಬಹುದು– ಅಲ್ಲಿ ವೈಯಕ್ತಿಕತೆರ ಅಸಂಭವ, ಇಲ್ಲಿಯ ವಾಸ್ತವಿಕತೆ ವಸ್ತುನಿಷ್ಠತೆಗಳು ಅಲ್ಲಿ ಅವಾಸ್ತವಿಕ, ಅವಸ್ತುನಿಷ್ಠ–ಪ್ರಜ್ಞಾಸ್ವರೂಪದಲ್ಲಿ. ಭೌತಮಾನಸ–ಅತಿಭೌತ ಮಾನಸಗಳ ಸಂಮಿಶ್ರಣದ ದ್ವೈತ. ಸಮ್ಯಕ್ತ್ವವು ಶಬ್ದಸಾರವಷ್ಟೇ, ಅರ್ಥಸಾರವಹದು. ಸಾಪೇಕ್ಷ ಐನ್‌ಸ್ಟೀನನ ಸತ್ಯವು ಮಧ್ಯಾವಸ್ಥೆ – ನಿರಪೇಕ್ಷ ಮಿಂಕೋವ್ಸ್ಕಿಯದು ಆದ್ಯಂತಾವಸ್ಥೆ– ಎಂಬುದು ವ್ಯಾಸದೃಷ್ಟಿಯ ಭೌತಮುಖ.

ಭೌತ–ಮಾನಸ ಪ್ರಪಂಚವು ಚಲಾಚಲ; ;ಅಚಲೋನ್ಮುಖವಾಗುವುದು ಅಪೇಕ್ಷಣೀಯ, ಚಲೋನ್ಮುಖವಾಗುವುದು ಅನಪೇಕ್ಷಣೀಯ. ಅಚಲತ್ವ ರಹಿತವಾದ ಅಮರತೆಗೆ ಅರ್ಥವಿಲ್ಲ. ಚಲವು ನಾನಾತ್ವ ಸಮವೇತ. ಪ್ರಜ್ಞಾಚಲತ್ವವು ವ್ಯಾಸೋಕ್ತಮುಕ್ತಿ, ಅಪ್ರಜ್ಞಾಚಲತ್ವವು ಮಿಂಕೋವ್ಸ್ಕಿಯ ಜಡಮುಕ್ತಿ. ಪ್ರಜ್ಞಾಪೂರ್ಣತೆಯಲ್ಲಿ ಅಪ್ರಜ್ಞಾಂಶವಿಲ್ಲ; ಅಪ್ರಜ್ಞೆಗೆ ಪೂರ್ಣತೆಯಿಲ್ಲ. ಪೂರ್ಣತೆಯು ಸಿದ್ಧವಾದ ಪ್ರಾಜ್ಞ ಏಕತ್ವ. ಅಪೂರ್ಣತೆ ಅಥವಾ ಅಸಮ್ಯಕ್ತ್ವವು ಸಾಪೇಕ್ಷ ಪ್ರಜ್ಞಾಪ್ರಜ್ಞಾದಿ ವಿವಿಧ ಸಾದಿ–ಸಾಂತ ಜೀವನ ಕ್ಷಣಗಳ ಸಂತತಿ. ಭೇದಾಭೇದಗಳೆರಡೂ ಪ್ರಾಜ್ಞಿಕ, ಪ್ರಾಜ್ಞೇಯ. ಅಪ್ರಾಜ್ಞೇಯವು ಅನಿರ್ವಚನೀಯ (The unconscious is un-analysable indescribable); ಏಕೆಂದರೆ, ಅದೇ ಸಾಪೇಕ್ಷವಾಗಿ ವ್ಯಾಕೃತ ವರ್ಣಿತ – ನಾನಾಕೃತಿಗಳ ದೆಸೆಯಿಂದ. ನಿತ್ಯತ್ವ–ನಾನಾತ್ವಗಳು ಅಸಂಗತವೆಂಬುದನ್ನು ವೈಟ್‌ಹೆಡ್ ಅರಿತುಕೊಳ್ಳಲಿಲ್ಲ. ಅಥವಾ ಅವನದು ಪರಿಣಾಮಿನಿತ್ಯತ್ವ; ಅಪರಿಣಾಮಿನಿತ್ಯತ್ವವು ಎಂದೂ ಅನೇಕತ್ವದೊಡನೆ ಅವಿನಾಭಾವಿಯಲ್ಲ.

## ೦೫ ಸ್ಪಿನೋಜ

ಅತಿಹೆಚ್ಚು ವ್ಯಾಪಕವಾದ ವ್ಯಾಸದೃಷ್ಟಿಯ ಪಾಶ್ಚಾತ್ಯ ತತ್ವಜ್ಞಾನಿಯೆಂದರೆ ಸ್ಪಿನೋಜ; ಆತನ ಆಧುನಿಕತೆ ರಸೆಲ್ಲನಿಗೂ ಇಲ್ಲ. “ Facts have to be discovered by observation, not by reasoning–ನಿರೀಕ್ಷಣೆಯಿಂದ ಸಂಗತಿಗಳನ್ನು ಹುಡುಕಿ ತೆಗೆಯಬೇಕಲ್ಲದೆ, ತರ್ಕದಿಂದಲ್ಲ” ಎಂದು ಸ್ಪಿನೋಜನಿಗಿದಿರಾಡಿದ್ದಾನೆ ರಸೆಲ್. ನಿತರಾಂ ಈಕ್ಷಣಂ–ಬಹಳವಾಗಿ ನೋಡುವುದು, ವೈಜ್ಞಾನಿಕ ಸಾಧನಗಳ ಮೂಲಕ ಬುದ್ಧಿಗತ ಮಾಡಿಕೊಳ್ಳುವುದು–ಇಂದ್ರಿಯದ ವರದಿಗಳನ್ನು ಬುದ್ಧಿಯಿಂದ ದೂರ ಇಡುವುದು–ಎಂಬುದು ರಸೆಲ್ ನಿರೀಕ್ಷಿಸುವ ಅರ್ಥ. ಆತನಿಗೆ ಬುದ್ಧಿಗತವಾದುದೆಲ್ಲವೂ ಅಮೂರ್ತ ಮತ್ತು ಮಾನಸದ ಜೀವಿತಾವಧಿಯವರೆಗೆ ಮಾತ್ರ ಉಳಿಯುವ ವ್ಯಕ್ತಿನಿಷ್ಠ ಸತ್ಯ ಎಂಬ ತುಚ್ಛಭಾವವೂ ಇದೆ. ಬುದ್ಧಿಯನ್ನು ಅಂಗವಾಗಿ ಉಳ್ಳ ಮಾನಸವು ಆತನಿಗೆ ವಸ್ತುನಿಷ್ಠ (ವಾಸ್ತವಿಕ) ಸತ್ಯಪದಾರ್ಥವಲ್ಲ! ಇಂಥವನ “Facts” ವಸ್ತುಸಂಗತಿಗಳ” ವರ್ಣನೆಯ ತರ್ಕಶುದ್ಧತೆಯೂ ಅನುಭವ ಪ್ರಾಮಾಣಿಕತೆಯೂ ಸತ್ಯದಿಂದ ಎಷ್ಟು ದೂರ ಮತ್ತು ಪರಸ್ಪರ ವ್ಯಾಹತ ಎಂಬುದು ಸುಲಭವೇದ್ಯವಾಗಿದೆ. ಈ ಮನುಷ್ಯನ ಕೇವಲ ಕಾಲಿಕ (ಉತ್ತರ ಕಾಲೀನತೆಯ) ಆಧುನಿಕತೆಗೆ ತತ್ವಶಾಸ್ತ್ರದಲ್ಲಿ ಬಹಳ ಬೆಲೆ ಬಾರದು. ಆದರೂ ಆತನಿಂದು ಡಾರ್ವಿನ್ ಮತ್ತು ಫ್ರೂಡರಂತೆ ವೈಚಾರಿಕ “ದಿಲ್ಲಿ ರೆಡಿಮೇಡ್ ಫ್ಯಾಸನ್ನು”ಗಳ

ನಿರ್ಮಾಪಕನಾಗಿದ್ದಾನೆ. ಅವರಷ್ಟೇ ಶಾಠ್ಯವು ಅವನಲ್ಲಿದೆ. ಬುದ್ಧಿಯು ವೈಯಕ್ತಿಕ, ವ್ಯಕ್ತಿನಿಷ್ಠ– ಅದು ವಸ್ತುನಿಷ್ಠವೆಂದು ವಿಜ್ಞಾನದಿಂದ ಸ್ವೀಕರಿಸಿದ್ದು ಸ್ವೀಕೃತವಾದ ಕ್ಷಣದಲ್ಲಿ ವ್ಯಕ್ತಿನಿಷ್ಠ; ಹಾಗೇ ವಿಜ್ಞಾನದ ಕಾಣ್ಕೆಯಲ್ಲೂ ತರ್ಕ–ಗಣಿತಗಳ (ಬುದ್ಧಿಯ) ಕಾಣ್ಕೆಯಂತೆ ಸರಿ–ತಪ್ಪುಗಳಿರುತ್ತವೆ–ಎಂಬುದನ್ನು ಗ್ರಹಿಸದ ಶಾಠ್ಯವು ಇತರರ ವೈಯಕ್ತಿಕ ಜೀವನ ಚಾರಿತ್ರಗಳ ನಿಂದೆಯನ್ನು ಬಿಸಾತಿಲ್ಲದೆ ಮಾಡುವ ಬಹುಪತ್ನಿ ಪತಿಯಾದ ರಸೆಲ್ ಮಹಾಶಯನಿಗೆ ವಿಶಿಷ್ಟವಾದುದು.

ಜ್ಞಾತೃ–ಜ್ಞಾನಗಳ ಪ್ರತ್ಯೇಕತೆಯ ಡಿಗ್ರಿಹೆಚ್ಚಿದ್ದಷ್ಟೂ ಅಜ್ಞಾನಗಳ ಸತ್ಯತೆ ಅದೃಢವೂ ಭೇದ್ಯವೂ ಆದುದೆಂಬ ಜ್ಞಾನಶಾಸ್ತ್ರೀಯ ಅನುಭವವು ಇಲ್ಲದಾಗ ಪ್ರತಿಯೊಬ್ಬವಾದಿಯೂ ಅವ್ಯಾಸ ಹವ್ಯಾಸದಿಂದ ಪ್ರಾಪಂಚಿಕ ವಸ್ತುನಿಷ್ಠತೆಯನ್ನು ಜ್ಞೇಯ ಪರಮಾರ್ಥವೆಂದು ಗ್ರಹಿಸುತ್ತಾನೆ. ಅಂಥವರೆಲ್ಲರೂ ನಾನಾತ್ವದ ಪುರಸ್ಕರ್ತರು. ವ್ಯವಹಾರ ಸತ್ಯಕ್ಕಿಂತ ಹೆಚ್ಚಿನ ಮೌಲಿಕ ಸತ್ಯ ಅವರಿಗೆ ಹೊಳೆಯದು– ಅದು ಸ್ಥೂಲವಾಗಿ ಅವರಿಗೆ ತಿಳಿದಿರುತ್ತದೆ. ವೈಜ್ಞಾನಿಕ ಸತ್ಯತೆ ಅದರಿಂದಲೂ ಅಪೇತವಾದ ವಿಚಿತ್ರ ಅಸಂಬದ್ಧ ಕಲ್ಪನೆ–ಅದೇ ಪರಮಾರ್ಥವೆಂದು ಗ್ರಹಿಸಿದಾಗ.

ವ್ಯವಹಾರವು ಇಚ್ಛೆ, ಭಾವನೆ, ಬುದ್ಧಿಗಳೆಲ್ಲವುಗಳಲ್ಲೂ ದ್ವಂದ್ವಗಳಿಂದ ತುಂಬಿದೆ. ಇಂದ್ರಿಯಗಳ ಕಾರ್ಯವಿಲ್ಲದೆ ವ್ಯವಹಾರವಿಲ್ಲ. ಭೇದ, ದ್ವೈತ, ನಾನಾತ್ವ, ಕುರೂಪ, ಹಿಂಸೆ, ಕೇಡು, ಪಾಪ, ದುರುಪಯೋಗ ಅಥವಾ ಅಪಕಾರ, ತಪ್ಪು, ಶೋಕ, ಮೋಹಗಳ ಏಕವರ್ಗೀಯತೆ ಅನುಭವವೇದ್ಯ. ಇವುಗಳಿಗೆ ವಿರುದ್ಧವಾದ ಕಲ್ಪನೆಗಳು ಇನ್ನೊಂದು ಸವರ್ಗೀಯ ಮಾಲಿಕೆಯಾಗುತ್ತವೆ. ಭೇದಾದಿಗಳು ಅತ್ಯಂತಿಕವಾದರೆ ಅಭೇದಾದಿಗಳ ಬಗ್ಗೆ ಮಾನವ ಪ್ರಯತ್ನಿಸುವುದು ಅವ್ಯವಹಾರವೆನ್ನಿಸಬೇಕಾಗುತ್ತದೆ. ಬಂಧ–ಮೋಕ್ಷಗಳೆರಡರಲ್ಲೂ ವೈಯಕ್ತಿಕ ಸ್ವಾರ್ಥವು ಆಗ ಬಲವತ್ತರವಾದ ಸೂತ್ರವೆನ್ನಿಸಿ ಜೀವ–ಜಡ ವ್ಯಕ್ತಿಗಳೆಲ್ಲರೂ ಪರಸ್ಪರ ಅವಿಶ್ವಾಸ್ಯರೂ ಅಪ್ರಿಯರೂ ಘಾತಕರೂ ಆಗಬೇಕಾಗುತ್ತದೆ. ಈ "ಪರಮಾರ್ಥ"ವನ್ನಾಧರಿಸುವ ಜೀವನ, ಮರಣೋತ್ತರ ಅಸ್ತಿತ್ವಗಳು ಬೌದ್ಧಿಕವಾಗಿ, ವೈಜ್ಞಾನಿಕವಾಗಿ ಕೂಡ ಹಿತಕರವೆಂದು ಹುಚ್ಚರಲ್ಲದ ಯಾರಿಗೂ ಅನ್ನಿಸಲಾರದು. ಪ್ರಪಂಚವು ಅಪೂರ್ಣವಾದುದರಿಂದ ಅದರ ಅಭೇದಾದಿಗಳೂ ಭೇದಾದಿಗಳಂತೆಯೇ ಅಪೂರ್ಣವಾಗಿವೆ; ಅವುಗಳ ಪೂರ್ಣತೆಯೇ ಅತ್ಯಂತಿಕ ಹಿತ, ಮೋಕ್ಷ, ಆನಂದ, ಶಾಂತಿ, ಸತ್ಯ, ಸೌಂದರ್ಯ, ಸಮಾಧಾನ, ಸೌಜನ್ಯ, ಸದುಪಯೋಗ–ಭೇದಾದಿಗಳ ಪೂರ್ಣತೆಯಲ್ಲ. ಪೂರ್ಣಕ್ಕೆ ಭೇದವಿಲ್ಲ, ಭೇದಕ್ಕೆ ಪೂರ್ಣವಿಲ್ಲ. ಪೂರ್ಣತೆಯ ಪೂರ್ಣಕಲ್ಪನೆಯಿಲ್ಲದವರಿಗೆ ನಿತ್ಯ ಪದಾರ್ಥಗಳು ಅನೇಕವಾಗಿರಬಹುದೆನ್ನಿಸುತ್ತದೆ. "ದ್ವಿತ್ವಾದಿಕಂ ಸರ್ವತ್ರಮನಿತ್ಯಮೇವ" ಎಂದ ಅನ್ನಂಭಟ್ಟೋಕ್ತಿ ಅವರಿಗರ್ಥವಾಗಿಲ್ಲ. ಗಣಿತದ ಗುಣಿತತೆಯು (Multiplicity) ಗೌಣ, ಕೇವಲ ವ್ಯಾವಹಾರಿಕ–ಪಾರಮಾರ್ಥಿಕವಲ್ಲ. ಪರಮಾರ್ಥದ ದೃಷ್ಟಿಯಿಂದ ಅನಿತ್ಯವಾದ ಅದು ಅಮೂರ್ತಸದೃಶವಾದ ಅಲ್ಪದಾರ್ಢ್ಯ, ಅಲ್ಪಸ್ಥೈರ್ಯ, ಅಲ್ಪಬಲವುಳ್ಳದ್ದು. ದೇಶ–ಕಾಲೀನ (ಮಾನಸಿಕ–ಭೌತಿಕ) ಪರಿಮಿತತೆಯುಳ್ಳ

ಕಲ್ಪನೆ, ಕಲ್ಪನಾನುಗುಣವಾದ ಘಟನೆ, ಗುಣರಾಶಿ, ಪದಾರ್ಥ–ಎಲ್ಲವೂ ನಶ್ವರ, ವಿವಿಧ ಮತ್ತು ಸಾಪೇಕ್ಷ. ಯಾವ ವಿಜ್ಞಾನವೂ ಈ ನಿಯಮಕ್ಕೆ ಅಪವಾದವನ್ನು ಉದಾಹರಿಸಲಾರದು.

## ಪರಮಾರ್ಥದ ಪ್ರಾಧಾನ್ಯ

ಪರಮಾರ್ಥಸದೃಶವಾದ ಅಪೂರ್ಣ ಲೌಕಿಕ ಅಭೇದಾಧಿಗಳು ವ್ಯವಹಾರದಲ್ಲಿ ಮೇಲ್ಪಂಕ್ತಿಯಲ್ಲಿರುವುದು ಸಹಜವಲ್ಲದೆ ಪರಮಾರ್ಥ ವಿರುದ್ಧವಾದ ಭೇದಾದಿಗಳು ಅನುಕರಣೀಯವಾಗುವುದು ಅಸಹಜ. ಸ್ಪಿನೋಜನ ದ್ರವ್ಯದ ಕಲ್ಪನೆಯನ್ನಿಂದು ವಿಜ್ಞಾನ–ತತ್ವಜ್ಞಾನಗಳು ಸ್ವೀಕರಿಸಲಾರವೆಂದು ಎದೆತಟ್ಟಿ ಹೇಳುವ ರಸೆಲ್ಲನು ಅದಕ್ಕೆ ಬದಲಾಗಿ ಕೊಡುವ ಘಟನೆ (Event) ಮತ್ತು ಗುಣರಾಶಿ (Bundle of qualities) ಎಂಬ ವಸ್ತುವರ್ಣನಾತ್ಮಕ ಪದಗಳು ಯಾವ ಹೊರಜ್ಞಾನವನ್ನು ಕೊಡಬಲ್ಲವು? ದ್ರವ್ಯ, ಗುಣ, ಕರ್ಮಗಳೆಂಬ ಪ್ರಾಪಂಚಿಕ ಕಲ್ಪನೆಗಳಿಂದ ಸೂಚಿತವಾಗುವ ಪದಾರ್ಥಗಳೆಲ್ಲವೂ ನಶ್ವರ; ಆದರೆ ಅವುಗಳ ಸಾತತ್ಯದ ಸಾಪೇಕ್ಷ ಡಿಗ್ರಿಗಳು ವ್ಯವಹಾರಕ್ಕೆ ಅಗತ್ಯವೆಂಬುದನ್ನು ಹುಚ್ಚರಲ್ಲದ ಯಾರೂ ಅಲ್ಲಗಳೆಯಲಾರರು. ವ್ಯವಹಾರ ಸತ್ಯ–ಪರಮಾರ್ಥ ಸತ್ಯಗಳ ನಡುವೆ ವಿಜ್ಞಾನಸತ್ಯ, ಪ್ರತಿಭಾಸಸತ್ಯ, ಕಲಾಸತ್ಯ, ಅಸತ್ಯಗಳೆಂಬ ನಾಲ್ಕು ಸತ್ಯಗಳನ್ನಲ್ಲ, ಇನ್ನೂ ಹೆಚ್ಚು ಸತ್ಯಗಳನ್ನು ಕಲ್ಪಿಸಬಹುದು. ಅವುಗಳಲ್ಲಿ ವ್ಯವಹಾರಕ್ಕೆ ಉಪಯುಕ್ತವಾದಷ್ಟನ್ನು ವ್ಯವಹಾರದಲ್ಲಿ ಉಪಯುಕ್ತವಾಗುವಷ್ಟು ಕಾಲ ವ್ಯವಹಾರಸ್ಥರು ಇಟ್ಟುಕೊಳ್ಳಬಹುದು, ಅನುಸರಿಸಬಹುದು ಅಷ್ಟೆ. ಅದು ಅವರವರ ಹಿತಾರ್ಥದ ಅಲ್ಪಕಾಲಿಕ, ದೀರ್ಘಕಾಲಿಕ, ಅನಂತಕಾಲಿಕ ಸ್ವರೂಪಗಳಿಂದ ನಿರ್ಧರಿಸಲ್ಪಡುತ್ತದೆ. ದ್ರವ್ಯವನ್ನು ಗುಣಗಣವೆಂದು ವರ್ಣಿಸಿದಾಕ್ಷಣ ಅಥವಾ ಘಟನೆಯೆಂದು ಹೇಳಿದಾಕ್ಷಣ ಅದರ ಸ್ವರೂಪ ಬದಲಾಗುವುದಿಲ್ಲ. ಘನ, ದ್ರವ, ವಾಯು ಎಂಬ ಮೂರು ರೂಪಗಳಲ್ಲಿರುವುದೂ ನೀರೇ ಆಗಿರುವ ಹಾಗೆ ದ್ರವ್ಯ, ಗುಣ, ಕರ್ಮ ರೂಪಗಳಲ್ಲಿರುವ ಸಾಪೇಕ್ಷ ಚಂಚಲ ಪದಾರ್ಥವನ್ನು ಅಚಂಚಲವೆಂದು ಯಾರೂ ತಿಳಿದುಕೊಂಡಿಲ್ಲ–ನಿರಪೇಕ್ಷಚಂಚಲವೆಂದು ಯಾರೂ ಗ್ರಹಿಸಿಲ್ಲ. ಚಂಚಲತ್ವಕ್ಕೆ ಶೂನ್ಯಕ್ಕೆ ಹೇಗೋ ಹಾಗೇ ನಿರಪೇಕ್ಷತೆ ಅಥವಾ ಪೂರ್ಣತೆ ಇಲ್ಲವೇ ಇಲ್ಲ. ಸಾಪೇಕ್ಷವು ನಿರಪೇಕ್ಷಕ್ಕೆ ಸಾಪೇಕ್ಷ; ನಿರಪೇಕ್ಷವು ಸಾಪೇಕ್ಷಕ್ಕೆ ನಿರಪೇಕ್ಷ ಎಂಬುದು ಹೊಳೆಯದಂಥ ಬುದ್ಧಿಯು ಸಾಪೇಕ್ಷ ಬುದ್ಧಿ, ಭಿನ್ನಬುದ್ಧಿ, ಅಬುದ್ಧಿ. ಭ್ರಮೆಯನ್ನು ಅದರ ವಿವಿಧ ಭೇದಗಳನ್ನು ಪ್ರಮೆಯೆಂದುಕೊಳ್ಳುವವರಿಗೆ ಪ್ರಮೆ ಭ್ರಮೆಯೆನ್ನಿಸುವುದು ಸಹಜ. ಭ್ರಮೆಗಳಲ್ಲಿ ತಾರತಮ್ಯವಿದೆ, ಪ್ರಮೆ ಏಕಮೇವಾದ್ವಿತೀಯ. ಅಬುದ್ಧಿಯ (ಅಲ್ಪಬುದ್ಧಿಯ) ಭೇದಗಳು ಅನೇಕ, ಅವುಗಳ ಸಿದ್ಧಾಂತಗಳೂ ಅನೇಕ; ಅವುಗಳ ಸಂಬಂಧಗಳು ತರ–ತಮಭಾವನಿಷ್ಠ.

"In so far as a man is an unwilling part of a larger whole, he is in bondage; but in so far as, through the understanding, he has grasped the sole reality of the whole, he is free–ಮಾನವನು ತನಗಿಂತ ವಿಸ್ತಾರವಾದ ಇಡಿಯ ಒಲ್ಲದ ಅಂಗವಾಗಿರುವವರೆಗೆ ಬದ್ಧನಾಗಿರುತ್ತಾನೆ; ಆದರೆ ಅವನು ಇಡಿಯ ಒಂದೇ ಒಂದಾದ ಸತ್ಯತೆಯನ್ನು ತನ್ನ ಪ್ರಜ್ಞೆಯ ಮೂಲಕ ತಿಳಿದುಕೊಂಡರೆ ಮುಕ್ತನಾಗುವನು"

ಎಂಬುದು ಸ್ಪಿನೋಜ ಸಿದ್ಧಾಂತ. ಅಂಗಾಂಗಿತ್ವದ ಭಾವ ಅಥವಾ ಭೇದಭಾವ ಬಿಡಿಗಿರುವಾಗ (ವ್ಯಕ್ತಿಗಿರುವಾಗ) ಇಡಿಯನ್ನು ಅದು ಪ್ರಾಮಾಣಿಕವಾಗಿ ಒಪ್ಪಲಾರದು, ಬಿಡಿಯಲ್ಲಿ ಇಡಿ ಹಿಡಿಸದು. ಬಿಡಿಯ ಬಿಡಿತನದ ಭಾವ(Thought and feeling) ಇಡಿಯ ಇಡಿತನದಲ್ಲಿ ಲಯ ಹೊಂದುವುದು ಬಂಧ ಮೋಕ್ಷ. ಭಾವವಲ್ಲದ್ದು ಜ್ಞಾನವಲ್ಲ; ಜ್ಞಾನವಿಲ್ಲದ್ದಕ್ಕೆ ಭಾವ (ಅಸ್ತಿತ್ವದ ಕಲ್ಪನೆ) ಅದರ ದೃಷ್ಟಿಯಿಂದ (ದೃಷ್ಟಿ ಇದ್ದಿದ್ದರೆ) ಇಲ್ಲ. ಆದುದರಿಂದ ನಾವು ಅದು ಇದೆ ಎಂದರೆ ಇದೆ, ಇಲ್ಲವೆಂದರೆ ಇಲ್ಲ. ಅದಕ್ಕೆ ತಾನಿದ್ದದ್ದು ಗೊತ್ತಿಲ್ಲದಿರುವಾಗ ನಾವು 'ಅದು ಇದೆ' ಎಂಬುದು ಒಂದು ವಿಧದ ಭ್ರಮೆ. ಅಂಥ ಭ್ರಮೆಯನ್ನು ನಿತ್ಯವೆಂದು ನಂಬಿ ಜೀವನ ನಡೆಸುವುದು ಶೋಕಜನಕ. ಆದುದರಿಂದ ಅದು (ಜಡ) ಆಧಾರವಲ್ಲವೆಂದು ತಿಳಿದಾಗ–ಜಡವೇ ಜೀವಕ್ಕೆ ಪರಿಸೀಮನಕಾರಿಯಾದುದರಿಂದ–ವ್ಯಕ್ತಿಯ ಜೀವಕ್ಕೆ ಇಡಿತನದಲ್ಲಿ ವ್ಯಾಪ್ತಿ ಸಿಕ್ಕಿ ಬಂಧಮುಕ್ತವಾಗುವುದು. ಜೀವವಿಲ್ಲಿ ಚೈತನ್ಯ (ಜೀವಶಕ್ತಿ+ಜ್ಞಾನಶಕ್ತಿ). ಅದರ ಬಂಧವಿರುವುದು ಗೃಹೀತವಾದ ಜಡವಿತ್ತ ವೈಯಕ್ತಿಕತೆಯ ಜ್ಞಾನದ ಪರಿಸೀಮನದಲ್ಲಿ.

## ಆತ್ಮಜ್ಞಾನದ ಅರ್ಥ

ಐಕ್ಯಜ್ಞಾನವು ಬೌದ್ಧಿಕ; ಪ್ರೇಮವು ಅದರ ಭಾವನಾ ರೂಪ; ಬೌದ್ಧಿಕವು ಭಾವನಾಸಾತ್ ಆಗುವುದೇ ಸಾಕ್ಷಾತ್ಕಾರ. ಈ ಬುದ್ಧಿ–ಭಾವನೆಗಳು ಪ್ರಪಂಚೋತ್ತರ ಅದರಿಂದ ಅತಿಮಾನಸ, ಅತೀಂದ್ರಿಯ ಎನ್ನಿಸುತ್ತದೆ; ಮನ (ಇಚ್ಛೆ+ಬುದ್ಧಿ+ಭಾವನೆ)–ಇಂದ್ರಿಯಗಳಿಗೆ ಪ್ರಪಂಚಲಕ್ಷ್ಯವಾಗದುದರಿಂದ ಅವುಗಳ ಪ್ರಪಂಚಾತೀತ ಸ್ವರೂಪವನ್ನು ಆತ್ಮ ಎಂದು ಕರೆಯಲಾಗುತ್ತದೆ. ಅದರ ಇಡಿ ಸ್ವರೂಪ ಬ್ರಹ್ಮ, ಬಿಡಿಸ್ವರೂಪ ವೈಯಕ್ತಿಕ ಜೀವ (ಪ್ರಾಪಂಚಿಕ ಮನಸ್ಸಿನ ಅಂತಃಸ್ಥಚೈತನ್ಯ). "ಅಹಂ ಜಡಾತ್ಮಕಃ" ಎಂಬುದು ಬಂಧಕಾರಕ ತಿಳಿವಳಿಕೆ, ಅನುಭವ; "ಅಹಂ ಚೈತನ್ಯಾತ್ಮಕಃ" ಎಂಬುದು ಮೋಕ್ಷಕಾರಕ ಸಾಕ್ಷಾತ್ಕಾರ. ಮುಕ್ತಿಯು Perfect freedom from limitations ಪರಿಸೀಮನಕಾರಕಗಳಿಂದ ಸಂಪೂರ್ಣ ಸ್ವತಂತ್ರನಾದ ಅನುಭವವನ್ನು ಹೊಂದುವುದು. ಪರಿಸೀಮನಕಾರಕವಾದ ಭಾವಗಳೆಲ್ಲವೂ ಜಡನಿಷ್ಠ, ಭೌತ ಪ್ರತಿಷ್ಠಿತ. ಅಪರಿಸೀಮನಕಾರಕವಾದ ಭಾವವು ಬ್ರಹ್ಮಪ್ರತಿಷ್ಠಿತ. ಬ್ರಹ್ಮನಿಗೆ ಬ್ರಹ್ಮಜ್ಞಾನವಿದೆ, ಜಡೋಽ ಹಂಭಾವಿಕನಿಗೆ ಜಡಜ್ಞಾನವಿದೆ. ವಿನಾಶಭಯವಿರುವ ಭಾವವು ಜಡಾಧಾರನಿಷ್ಠ; ಅವಿನಾಶ ಶ್ರದ್ಧೆಯಿರುವ ಭಾವವು ಚೈತನ್ಯಾ (ಆತ್ಮ, ಬ್ರಹ್ಮ) ಧಾರ ನಿಷ್ಠ. ವಿನಾಶವು ಭೌತಿಕ ಬದಲಾವಣೆ; ಅವಿನಾಶವು ಅದರ ಪ್ರೇರಣೆಗಳಿಂದ ಮುಕ್ತವಾದ ಸ್ಥಿತಿ. ಅವಿನಾಶ ಪ್ರಜ್ಞೆಯೇ ಅಮರತ್ವ; ಅಮರತ್ವಾನುಭವ (Thought and Feeling) ಆನಂದ. ವಿನಾಶ್ಯಗಳ ಸಂಬಂಧಗಳಲ್ಲಿ ನಿಷ್ಠೆಯನ್ನು ತ್ಯಜಿಸುವುದು ಅವಿನಾಶ್ಯದಲ್ಲಿ ನಿಷ್ಠೆ ಬಲಗೊಳ್ಳಲು ಕಾರಣ. ಅವಿನಾಶ್ಯವು ಅಮೃತ, ಅಮರ, ದೇವ, ಪ್ರಭು, ಅಂಥ ಪ್ರಭುತ್ವಸಂಪನ್ನತೆಯೇ ಆದರ್ಶ ವ್ಯಕ್ತಿತ್ವ, ಜೀವನ್ಮುಕ್ತತೆ. ಅದನ್ನುಳ್ಳವನು ಸ್ಥಿತಿಪ್ರಜ್ಞನು. ಸ್ಥಿತಪ್ರಜ್ಞನಿಂದಾಗುವಷ್ಟು ಜಗದ್ಧಿತ ಇತರ ಯಾರಿಂದಲೂ ಆಗದು. ಅದರಿಂದ ಸ್ಥಿತ ಪ್ರಜ್ಞತೆ ಮಾನವನ ಪರಮಾದರ್ಶ. ಅದು ನಿರ್ಮಮ, ನಿರಹಂಕಾರ, ನಿಃಸಂಕೋಚ, ನಿರಲ್ಪ, ನಿರ್ಲಿಪ್ತ, ಆಕಾಶಸದೃಶ ವ್ಯಾಪ್ತಿಯುಕ್ತ. ಅದು Motionless consciousness – ಅಚಲ ಚೈತನ್ಯ

(ಜೀವಶಕ್ತಿ+ಜ್ಞಾನಶಕ್ತಿ+ಭಾವನಾಶಕ್ತಿ). ಅದರ ಚಂಚಲತೆ ಜಡಾನುಕರಣ, ಜಡಾತ್ಮೀಕರಣಗಳಿಂದ ಉಂಟಾದದ್ದು. ಅದು ಸ್ಥಿರವೆಂದೆನ್ನಿಸಿರುವವರೆಗೆ ಬ್ರಹ್ಮವು ಮನುಷ್ಯನಿಗೆ ಅಸ್ಥಿರ, ಅನವಲಂಬನೀಯ. ಜಡವು ಸಿಪ್ಪೆ, ಚೈತನ್ಯವು ತಿರುಳು; ಒಂದರ ಭಾವವು ಅತ್ಯಲ್ಪ, ಇನ್ನೊಂದರದು ಅತಿಮಹತ್ತಾದುದು. ಅಲ್ಪಭಾವವು ಮಾಯೆ, ಆಭಾಸ; ಮಹಾಭಾವವು ಸತ್ಯ, ಆಭಾಸಾಶ್ರಯ. ಅಲ್ಪತ್ವದಲ್ಲಿ ಮಹತ್ವ ಕಾಲ್ಪನಿಕ; ಮಹತ್ವದಲ್ಲಿ ಅಲ್ಪತ್ವ ಆಭಾಸಿಕವಾಗಿರುತ್ತದೆ. ಪ್ರಪಂಚವು ಆರ್ತ, ಅಲ್ಪ, ತುಚ್ಛ, ತ್ಯತ್–ಔಪನಿಷಧಿಕವಾಗಿ; ಉಪನಿಷತ್ತುಗಳ ಸಾರವು ಮಹಾಭಾರತದ ಹೃದಯವಾದ ಭಗವದ್ಗೀತೆ. ಕಲ್ಪನೆಯು ಬೌದ್ಧಿಕ, ಆಭಾಸವು ಐಂದ್ರಿಯಿಕ. ಪ್ರಪಂಚನಿಷೇಧವಿಲ್ಲಿ ಕೇವಲ ಶರೀರೋಹಂಭಾವದ ನಿಷೇಧ, ಅಹಂಕಾರ–ಮಮಕಾರಗಳ ನಿಷೇಧ–ಪರಿಪೂರ್ಣ ನಿಃಸ್ವಾರ್ಥತೆಯ ಅನುಷೇಧ, ವಿಶ್ವ ಕುಟುಂಬಿತ್ವಕ್ಕೂ ಹೆಚ್ಚಿನ (ಭುವೈಕ್ಯ) ಐಕ್ಯಭಾವ ಎಂಬುದರ ಪ್ರತಿಷ್ಠಾಪನೆ.

## ಲೌಕಿಕ ಜ್ಞಾನದ ಸ್ವರೂಪ

ಡಾ.ಬಿ.ಎಲ್. ಆತ್ರೇಯರೆನ್ನುತ್ತಾರೆ. "All our Knowledge is limited and relative– ನಮ್ಮ ಎಲ್ಲ (ಪ್ರಾಪಂಚಿಕ, ಪ್ರಾಪಂಚಿಕ ಮೂಲ) ಜ್ಞಾನವೂ ಪರಿಮಿತ ಮತ್ತು ಸಾಪೇಕ್ಷ" ಎಂದು. ಸಾಮಾನ್ಯವಾದ ಪರಿಮಿತ ವಿಧಾಯಕಗಳು: (೧) ಜಾತಿ (Species)ಜ್ಞಾನ, ವ್ಯಕ್ತಿ (Its individual member). ಜ್ಞಾನಗಳನ್ನು ಪ್ರತ್ಯೇಕಿಸದೆ ಎದುರಿಸುವ ಪದಾರ್ಥವನ್ನು ಗ್ರಹಿಸುವ ಪ್ರವೃತ್ತಿ; (೨) ಕೇವಲ ಜಾತಿಲಕ್ಷಣ ಗ್ರಹಣದ ಪ್ರವೃತ್ತಿ; (೩) ಕೇವಲ ವ್ಯಕ್ತಿ ಲಕ್ಷಣ ಗ್ರಹಣದ ಪ್ರವೃತ್ತಿ; (೪) ಕೇವಲ ವರ್ತಮಾನ ನಿಷ್ಠೆಯಿಂದ ವಿಷಯವನ್ನು ಅರ್ಥಮಾಡಿಕೊಳ್ಳುವ ಪ್ರವೃತ್ತಿ; (೫) ಹೇಳಿಕೆಯ ಅಕ್ಷರಾರ್ಥವನ್ನೇ ಪ್ರಧಾನವೆಂದು ಆ ಮೂಲಕ ಮಾತ್ರ ಉಕ್ತ ಪದಾರ್ಥದ ಅರ್ಥವನ್ನು ತಿಳಿದುಕೊಳ್ಳುವ ಪ್ರವೃತ್ತಿ; (೬) ಶಬ್ದದ ವ್ಯುತ್ಪತ್ತಿಯನ್ನೇ ಕಡೆಯ ತನಕ ಆಧರಿಸಿ ಶಬ್ದೋಕ್ತ ಪದಾರ್ಥವನ್ನು ಅರ್ಥಮಾಡಿಕೊಳ್ಳುವ ಪ್ರವೃತ್ತಿ; (೭) ವ್ಯಕ್ತಿಯನ್ನು ಅಥವಾ ವಸ್ತುವನ್ನು ಅದರ ಸದ್ಯದ (ಕರ್ತವ್ಯ) ಕೃತ್ಯದ ಮೂಲಕವಷ್ಟೇ ಅರ್ಥಮಾಡಿಕೊಳ್ಳುವ "ಪ್ರಾಗ್ಮ್ಯಾಟಿಕ್" ಪ್ರವೃತ್ತಿ. ದೇಶ, ಕಾಲ, ಸನ್ನಿವೇಶ, ವ್ಯಕ್ತಿಸಂಸ್ಕಾರ, ವ್ಯಕ್ತಿಯ ಮನೋವೃತ್ತಿ ಮತ್ತು ಮನಃಪ್ರಣಾಳಿಗಳೂ ವ್ಯಕ್ತಿಯೊಬ್ಬನ ಜ್ಞಾನಸಂಗ್ರಹಪ್ರಕ್ರಮಕ್ಕೆ ಇತಿಮಿತಿಗಳಾಗುತ್ತವೆ; ಹಾಗೇ ಲಭ್ಯವಾದ ವೈಜ್ಞಾನಿಕ ಯಂತ್ರೋಪಕರಣಗಳು, ಇಂದ್ರಿಯಗಳ ಶಕ್ತಿ; ಪ್ರಮಾಣ, ಅವಕಾಶಲಭ್ಯತೆ, ಮನೋಧರ್ಮ ಅಥವಾ ಒಲವು, ತರ್ಕಿಸುವ ಅಭ್ಯಾಸ ಮನೋಗತವಾದ ಉದ್ದೇಶ, ಜ್ಞೇಯದ ಬಗೆಗಿನ ಅರ್ಜಿತಜ್ಞಾನ, ಬುದ್ಧಿಶಕ್ತಿ ಪ್ರಮಾಣ, ಭಾವನಾಶಕ್ತಿ ಪ್ರಮಾಣ, ಇಚ್ಛಾದಾರ್ಢ್ಯ ಎಂಬ ೧೬ ಪರಿ ಸೀಮನ ಕಾರಕಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಮೊದಲನೆಯ ಏಳು ಮತ್ತು ಎರಡನೆಯ ಹದಿನಾರು ಅಲ್ಲದೆ ಇನ್ನೂ ಇತರ ಕಾರಕಗಳು ತಿಳಿವಳಿಕೆಯ ದಿಕ್ಕನ್ನೂ ವೇಗವನ್ನೂ ವ್ಯಾಪ್ತಿಯನ್ನೂ ಪರಿಸೀಮನಗೊಳಿಸಬಹುದಾಗಿದೆ. ಈ ಕಾರಕಗಳೆಲ್ಲವುಗಳಿಗೂ ಒಂದೇ ಒಂದಾದ ವ್ಯಾಸನಾಮವೆಂದರೆ ಅವಿದ್ಯೆ. ಅವಿದ್ಯೆಯಿಂದ ಕಾಮ, ಕಾಮದಿಂದ ಜ್ಞಾನಸಂಗ್ರಹಾದಿ ಕರ್ಮಗಳು ಪ್ರಪಂಚಮಯ ಮನಸ್ಕರಲ್ಲಿ ಸಾಗುತ್ತವೆ.

ಆದುದರಿಂದ ಅತೀಂದ್ರಿಯ (ಅತಿಮಾನಸ) ಪ್ರತ್ಯಕ್ಷಕ್ಕೆ ಅಂಥ ಆತ್ಮವೇ ಸಾಧನವೆಂದು ವ್ಯಾಸ ಸಾರುತ್ತಾನೆ; ಆತ್ಮನನ್ನು ಆತ್ಮನಿಂದ ಆತ್ಮನು ಸಾಕ್ಷಾತ್ಕರಿಸಿಕೊಳ್ಳಬಲ್ಲ!

## ಭಾರತೀಯ ಶಿಕ್ಷಣದೃಷ್ಟಿ

ಈ ಆತ್ಮವೆಂಬ ಪರಮಾರ್ಥಜ್ಞಾನ ಸಾಧನವನ್ನು ಪಡೆಯಲು ತಪಸ್ಸು, ಯಜ್ಞ, ದಾನ, ಕರ್ಮ, ಯೋಗ ಮುಂತಾದ ಆಚಾರ ಮಾರ್ಗಗಳನ್ನು ಹೇಳಲಾಗಿದೆ. ನಾವು ಮಾನಸವೆಂದು ವ್ಯಾಪಕಾರ್ಥದಲ್ಲಿ ಬಳಸುವ ಪದದ ಶುದ್ಧೀಕರಣ ಆ ಮಾರ್ಗಗಳಿಂದ ಸಾಧ್ಯ. ಅದರ ತಿರುಳೇ ಆತ್ಮ; ಅದು ತಿಳಿಯುವವರೆಗೆ ಅದರ ಸುತ್ತಲೂ ಸುತ್ತಿಕೊಂಡ ದ್ವಂದ್ವಪ್ರೇರಿತ ಸಂಸ್ಕಾರಗಳ ಪ್ರಭಾವಿತ್ವವನ್ನು ನಿರ್ವೀರ್ಯಗೊಳಿಸಲು ಮನೋವಾಕ್ಕಾಯಕರ್ಮಗಳಿಂದ ಶ್ರಮಿಸಬೇಕೆಂಬುದು ವ್ಯಾಸೋಕ್ತಧರ್ಮ ಸಾರ. ಅಧಾರ್ಮಿಕರ ಬ್ರಹ್ಮಜ್ಞಾನ ಸಂಗ್ರಹ ಪ್ರಯತ್ನವು ಕೇವಲ Speculation-Scientific or rational ವೈಜ್ಞಾನಿಕ ಅಥವಾ ವೈಚಾರಿಕ ಊಹೆ. ಭಾರತೀಯ ಶಿಕ್ಷಣವು ಈ ಧಾರ್ಮಿಕತೆಯನ್ನು ಅಳವಡಿಸಿಕೊಳ್ಳದುದರಿಂದಲೇ ಅದರಿಂದ ತರಬೇತಾದ ಜನರು ಭ್ರಷ್ಟಾಚಾರದ ಆಮಿಷಕ್ಕೆ ಹೆಚ್ಚು ಹೆಚ್ಚು ತುತ್ತಾಗುತ್ತ ಹೋಗುತ್ತಿದ್ದಾರೆ. ಈ ಧಾರ್ಮಿಕತೆಯು ಸಂಕುಚಿತ ಮತಧಾರ್ಮಿಕತೆಯಲ್ಲ, ಅಂಧಸನಾತನತೆಯಲ್ಲ, ಅಂಧ ವೈಜ್ಞಾನಿಕತೆಯೂ ಅಲ್ಲ, ಶುಷ್ಕವೈಚಾರಿಕತೆಯೂ ಅಲ್ಲ. ಇದರ ಸಾರವಿರುವುದು ೮ ಆತ್ಮಗುಣಗಳ ಸಿದ್ಧಿಯಲ್ಲಿ. ಅವಾವುವೆಂದರೆ (೧) ಸರ್ವಭೂತದಯೆ, (೨) ಕ್ಷಾಂತಿ, (೩) ಅನಸೂಯೆ, (೪)ಶೌಚ, (೫) ಅನಾಯಾಸ, (೬) ಮಾಂಗಲ್ಯ, (೭) ಅಕಾರ್ಪಣ್ಯ, (೮) ಅಸ್ಪೃಹೆ.

ಮೇಲೆ ಹೇಳಿದ ಮಾರ್ಗಗಳಿಂದ ಈ ಗುಣಗಳು ಸಿದ್ಧಿಸುವಂತಾಗಬೇಕು; ಅಂದರೆ ಶುದ್ಧಬುದ್ಧಿ ಸ್ವರೂಪದ ಆತ್ಮಸಾಧನವು ಪರಮ ಸತ್ಯದ ಜ್ಞಾನದ ಸಾಧನೆಗೆ ಒದಗುವಂತಾಗುತ್ತದೆ. ಇದು ಭಾರತದಲ್ಲಿ ವ್ಯಕ್ತಿಗೆ ನಾಗರಿಕ, ಸಾಮಾಜಿಕ, ಸರ್ವೋದಯ ಪ್ರವೃತ್ತಿಯನ್ನು ದೃಢವಾಗಿ ನೆಲೆ ನಿಲ್ಲುವಂತೆ ಬೆಳೆಯಿಸಲು ಕಂಡು ಹಿಡಿದ ಉಪಾಯ. ಇದರ ವಿಶ್ವ ಜನೀನತೆಯು ಸ್ವತಃ ಸಿದ್ಧ. Man and the System ಮನುಷ್ಯ ಮತ್ತು ಅವನ ವ್ಯವಹಾರ ಪದ್ಧತಿಗಳಲ್ಲಿ ಮನುಷ್ಯನ ಸಂಸ್ಕರಣಕ್ಕೇ ಹೆಚ್ಚಿನ ಪ್ರಾಧಾನ್ಯವಿದೆಯೆಂಬುದು ವ್ಯಾಸಧ್ವನಿ. ಮೊದಲು ಅದಿದ್ದರೆ ಇತರ ವಾದ ("ಇಜಂ")ಗಳಿಂದ ರೂಪಿತವಾದ ರಾಜಕೀಯಾದಿ ವ್ಯವಹಾರ ಪದ್ಧತಿಗಳು ಅನುಕೂಲ ಬದಲಾವಣೆಗಳ ಮೂಲಕ ಸರ್ವೋದಯಕಾರಿಯಾದಾವು. ಆದುದರಿಂದ ವ್ಯಾವಹಾರಿಕ ವಾದಗಳನ್ನು ರೂಪಿಸಿ ಚರ್ಚಿಸುವ ಕೆಲಸಕ್ಕಿಂತ ಮೊದಲು ಪ್ರತಿಯೊಬ್ಬ ಪ್ರಜೆಯೂ ವ್ಯಾಸ ದೀಕ್ಷಿತನಾಗುವುದು ಅಗತ್ಯ.



೫

# ಲೋಕ ಜೀವನ

ಹಾಬ್ಸ್ ಮಹಾಶಯನು ರಾಜ್ಯತತ್ವವೆಂದು ಎತ್ತರದಲ್ಲಿಟ್ಟು ತೋರಿಸಿದ್ದು ನಿರಂಕುಶ ಪ್ರಭುತ್ವವನ್ನು. ಸಾರ್ವಭೌಮನು ಸಾರ್ವಜನಿಕರ ಮನಃ ಸಾಕ್ಷಿ ಎಂದನವ. ಮಹಾಭಾರತದ ಯಾವ ರಾಜನೂ ಇಂಥ ಅಧಿಕಾರವನ್ನು ಘೋಷಿಸಲಿಲ್ಲ; ಭಾರತದ ಯಾವ ರಾಜನೀತಿಶಾಸ್ತ್ರವೂ ಧರ್ಮಕ್ಕಿಂತ ರಾಜ ಮೇಲಿನವನೆಂದಿಲ್ಲ. ಮಹಾಭಾರತವು ಗಣರಾಜ್ಯದ ಮೂಲನೀತಿಯನ್ನು ಕೂಡ ಹೇಳಿದೆ. ರಾಜಧರ್ಮವೆಂದರೆ ಅದರ ಪ್ರಕಾರ ಸರಕಾರದ ಕರ್ತವ್ಯ. ಲೋಕೇ ಮಹಾಶಯನು ಹಾಬ್ಸನಂತೆ ಕೇವಲ ಅರಾಜಕತೆಯ ಭಯದಿಂದ ಸರಕಾರದ ಸಾರ್ವಭೌಮಾಧಿಕಾರವನ್ನು ಸಮರ್ಥಿಸಲಿಲ್ಲ; ಅವನು ವ್ಯಕ್ತಿಯ ಸ್ವಾತಂತ್ರ್ಯದ ಪ್ರತಿಪಾದನೆಯನ್ನೂ ಮಾಡಿದನು.

**"ದಂಡಃ ಸಂರಕ್ಷತೇ ಧರ್ಮಂ ತಥೈವಾರ್ಥಂ ಜನಾಧಿಪ**
**ಕಾಮಂ ಸಂರಕ್ಷತೇ ದಂಡಸ್ತ್ರಿವರ್ಗೋ ದಂಡ ಉಚ್ಯತೇ–**

ಧರ್ಮವನ್ನು, ಹಾಗೇ ಅರ್ಥವನ್ನು ಮತ್ತು ಕಾಮವನ್ನು ಪ್ರಶಾಸನ ಶಕ್ತಿಯು ರಕ್ಷಿಸುತ್ತದೆ; ಆದುದರಿಂದ (ಎಲೈ ಅರಸನೇ,) ಪ್ರಶಾಸನ ಶಕ್ತಿಯು (ಸರಕಾರವು) ಮೂರು ಪುರುಷಾರ್ಥಗಳಿಗೂ ಅನಿವಾರ್ಯವಾಗಿ ಆಧಾರಭೂತವಾದುದು" ಎಂಬ ವ್ಯಾಸೋಕ್ತಿಯು ಪ್ರಜೆಯ ನೈತಿಕಸಿದ್ಧಿ, ಆರ್ಥಿಕಸಿದ್ಧಿ ಮತ್ತು ಭೋಗೋಪಕರಣಸಿದ್ಧಿಗಳು ನಿರಾತಂಕವಾಗಿ ಲಭ್ಯವಾಗಲು ರಾಜ್ಯಶಾಸನ ಅಗತ್ಯವೆಂಬುದನ್ನು ಸಾರುತ್ತದೆ. ಮಹಾಭಾರತದ ಭಾಷೆಯಲ್ಲಿ ಧರ್ಮವು ವ್ಯಕ್ತಿಸ್ವಾತಂತ್ರ್ಯವನ್ನು ಒಳಗೊಳ್ಳುತ್ತದೆ; ಅದು ವ್ಯಕ್ತಿಯ ವಿಚಾರ, ಉಚ್ಚಾರ, ಆಚಾರಗಳ ನ್ಯಾಯವಾದ ಅನಿರ್ಬದ್ಧತೆಯನ್ನು ಅಡಕಗೊಳಿಸಿಕೊಂಡಿದೆ. ಸ್ವಾತಂತ್ರ್ಯವು ನೈತಿಕ ಸಿದ್ಧಿ–ಬರಿ ಆರ್ಥಿಕವೂ ಅಲ್ಲ, ಕೇವಲ ಸ್ಥೂಲವಾದ ಕಾಮೋಪಭೋಗ–ಸಾಧನವರ್ಗದ್ದೂ ಅಲ್ಲ. ಧರ್ಮವೆಂದರೆ ಪುಣ್ಯ, ಸುಗುಣ, ಸತ್ಕಾರ್ಯ, ಕರ್ತವ್ಯ, ಹಕ್ಕು, ನ್ಯಾಯ, ನೀತಿ, ಔಚಿತ್ಯ, ಹಕ್ಕು, ಅಧಿಕಾರ, ಸ್ವಾತಂತ್ರ್ಯ ಎಂಬುದು ನೈತಿಕ ಸ್ವರೂಪವುಳ್ಳದ್ದು; ಕರ್ತವ್ಯವೂ ಹಾಗೇ. ನೀತಿಗೆ ಕಾಯಿದೆಯೂ ವ್ಯಾಪ್ಯ. ಆದುದರಿಂದ ತ್ರಿವರ್ಗ ಸಾಧನೆಗೆ ರಕ್ಷಣೆ ಪಡೆಯುವುದೆಂದರೆ ಅದಕ್ಕೆ ಬೇಕಾದ ಸ್ವಾತಂತ್ರ್ಯವನ್ನು ಪಡೆಯುವುದೆಂಬುದೇ ತಾತ್ಪರ್ಯ. ರಕ್ಷಣೆಯು ರಾಜ್ಯಧರ್ಮ.

## ರಾಜಕೀಯ ಆಡಳಿತದ ವ್ಯಾಪ್ತಿ

**"ರಾಜೈವ ಕರ್ತಾ ಭೂತಾನಾಂ ರಾಜೈವಚ ವಿನಾಶಕಃ**

**ಧರ್ಮಾತ್ಮಾ ಯಃ ಸ ಕರ್ತಾ ಸ್ಯಾದಧರ್ಮಾತ್ಮಾ ವಿನಾಶಕಃ**

ಜೀವಿಗಳಿಗೆ ರಾಜನೇ ಯಜಮಾನ–ರಕ್ಷಕನೂ ಅವನೇ (ಸರಕಾರವೇ), ಭಕ್ಷಕನೂ ಅವನೇ; ಅವನು ಧರ್ಮಾತ್ಮನಾದರೆ, ಧರ್ಮದಂತೆ ರಾಜ್ಯಭಾರ ಮಾಡಿದರೆ, ರಕ್ಷಕನೆನ್ನಿಸುವನು; ಹಾಗಲ್ಲದೆ ಅಧರ್ಮಕ್ಕಿಳಿದರೆ, ಭಕ್ಷಕನೆನ್ನಿಸುವನು" ಎಂದಿದೆ ಮಹಾಭಾರತ. ಉತ್ತಮ ರಾಜ್ಯಭಾರಕ್ಕೆ ಭಾರತ ಕೊಡುತ್ತ ಬಂದ ಮಹತ್ವ ಇದರಿಂದ ಗೊತ್ತಾಗುತ್ತದೆ.

ವೇದ, ಸ್ಮೃತಿ, ಸದಾಚಾರ, ಆತ್ಮಜ್ಞಾನಿಗಳು ಧರ್ಮಾಧಿಕಾರಿಗಳಲ್ಲದೆ ರಾಜನಲ್ಲ, ಸರಕಾರವಲ್ಲ–ಅಂದು! ಅವೇ ವಿಧಿ–ನಿಷೇಧಗಳ ಆಕರಗಳು. ವೇದವು ಪ್ರಧಾನತಃ ತ್ಯಾಗಧರ್ಮಬೋಧಕ; ತ್ಯಾಗವು (ಯಜ್ಞ) ವ್ಯಕ್ತಿಯ ದೃಷ್ಟಿಯಿಂದ ಪರ(ಸಮಾಜ) ಹಿತಕ್ಕಾಗಿ. ಪ್ರತಿಯೊಬ್ಬ ಪ್ರಜೆಯೂ ಸಹಜೀವಿಗೆ ಅನುಕೂಲವಾಗಿ ವರ್ತಿಸುವುದು ಅವನವನ ಸ್ವಾತಂತ್ರ್ಯಸಿದ್ಧಿಗೆ ಕಾರಣ. ಈ ಪರಸ್ಪರಭಾವವಿಲ್ಲದಾಗ ತ್ಯಾಗಧರ್ಮವು ಲೌಕಿಕವಾಗಿ ಸಮಾಜಕ್ಕೆಸಗಿದ ಒಂದು ನೈತಿಕ ಅಪರಾಧ. ಅಸಮಾಜವಾದೀಯ ಸಮಾಜದಲ್ಲಿ ತ್ಯಾಗ–ದಾನಗಳಿಗೆ ಪಾತ್ರಾಪಾತ್ರ ವಿವೇಕ ಅತ್ಯಂತ ಪ್ರಧಾನ. ಈ ಪ್ರಾಧಾನ್ಯವನ್ನು ವಿದುರ ಎತ್ತಿ ಹೇಳಿದ್ದು ವ್ಯಾಸೋಕ್ತವಾಗಿದೆ. ಪರಸ್ಪರಾನುಕೂಲವಾಗಿ ತ್ರಿಕರಣಗಳಿಂದ ಜನರು ನಡೆದುಕೊಳ್ಳುವಂತೆ ಪ್ರಶಾಸನ ಮಾಡುವುದು ರಾಜಧರ್ಮದ ಸಾರ. ಈ ಧರ್ಮಕ್ಕೆ ಅವಿರುದ್ಧವಾಗಿಯೇ ಅರ್ಥಸ್ವಾತಂತ್ರ್ಯ, ಕಾಮಸ್ವಾತಂತ್ರ್ಯಗಳ ಆಚರಣೆ ನಾಗರಿಕನಿಗಿರುವಂತೆ ನೋಡಿಕೊಳ್ಳುವ ಕರ್ತವ್ಯ ಸರಕಾರದ್ದು.

ಸ್ಮೃತಿಗಳು ವೇದಧರ್ಮದ ಆಧಾರವನ್ನು ತೆಗೆದುಕೊಂಡು ಜನ ಹಿತೈಷಿಗಳು ನೆನಪಿನಲ್ಲಿಟ್ಟುಕೊಂಡ ಆಚಾರ ನಿಯಮಗಳು. ಸದಾಚಾರ ಅಂಥವರು ಮಾಡಿದ ಪೂರ್ವಾಚಾರ. ಆತ್ಮಜ್ಞಾನಿಗಳು ಐತಿಹಾಸಿಕ ಸಂದರ್ಭ ದರ್ಶನದಿಂದ ಆಚಾರದ ದಿಕ್ಕನ್ನು ತೋರಿಸಿಕೊಡುವ ವಿಚಾರವಂತರು. ಅವರ ಸ್ವಾತಂತ್ರ್ಯ ರಾಜಾಧೀನವಲ್ಲ. ಅವರು ದಿವ್ಯವಾಣಿ–ಅಂತರ್ವಾಣಿಗಳಿಂದ ರಾಜಾದಿಗಳಿಗೆ ಮಾರ್ಗದರ್ಶನವನ್ನು ವಿಪತ್ಕಾಲದಲ್ಲಿ ಮಾಡಿ ಉಪಕರಿಸುವ ಗುರೂತ್ತಮರು. ಮಹಾಭಾರತವೇ ಒಂದು ಮಹಾಸ್ಮೃತಿ. ವೇದವ್ಯಾಸನು ಆತ್ಮಜ್ಞಾನಿ, ಸದಾಚಾರ ನಿದರ್ಶಕ, ಆದರ್ಶ ರಾಜಗುರು–ಪ್ರಜಾಗುರು.

**"ದಂಡೇನ ರಕ್ಷ್ಯತೇ ಧಾನ್ಯಂ ಧನಂ ದಂಡೇನ ರಕ್ಷ್ಯತೇ**

**ಏವಂ ವಿದ್ವನ್ನುಪಾಧತ್ಸ್ವ ಭಾವಂ ಪಶ್ಯಸ್ವಲೌಕಿಕಂ–**

ಆಡಳಿತವೇ ಧಾನ್ಯವನ್ನೂ ಧನವನ್ನೂ ಕಾಪಾಡುತ್ತದೆ; ಲೌಕಿಕ ವ್ಯವಹಾರ ನಡೆಯುವ ಬಗೆ ಹೀಗೆ" ಎಂದು ವ್ಯಾಸ ಆಡಿದ ಮಾತನ್ನು ನೆನೆದರೆ, ಯಾವ ರಾಜ್ಯಘಟನೆ(ಸಂವಿಧಾನ) ಎಂಥ ಹಕ್ಕುಗಳನ್ನು ಪ್ರಜೆಗಳಿಗೆ ದಯಪಾಲಿಸಿದರೂ ಅವುಗಳ ಅನುಭವವು ಪ್ರತಿ ಪ್ರಜೆಗೂ ನ್ಯಾಯವಾಗಿ ದೊರಕಬೇಕಾದರೆ ಸರಕಾರದ ಪ್ರಶಾಸನ ದಕ್ಷವಾಗಿರುವುದಗತ್ಯ ಎಂಬುದನ್ನು

ಭಾರತದ ರಾಜನೀತಿಜ್ಞರು ಚೆನ್ನಾಗಿ ಅರಿತಿದ್ದರೆಂಬುದು ಗೊತ್ತಾಗುತ್ತದೆ. ಯುದ್ಧವೊಂದೇ ಅಲ್ಲ, ಕಾಯದೆಯೂ ಬಲಾತ್ಕಾರ ಮಾಡುವ ಸಾಧನವೇ ಎಂಬುದನ್ನು ಎಲ್ಲರೂ ಬಲ್ಲರು. ಪಂಡಿತ ಜವಾಹರಲಾಲರೂ ತಮ್ಮ ಆತ್ಮ ಚರಿತ್ರೆಯಲ್ಲಿ ಈ ಅಂಶವನ್ನು ಪ್ರತಿಪಾದಿಸಿದ್ದಾರೆ. ಭಯಪ್ರಧಾನವಾದ ಆಡಳಿತಕ್ಕಿಂತ ಪ್ರೀತಿ–ಔದಾರ್ಯ ಪ್ರಧಾನವಾದ ಆಡಳಿತ ಒಳಿತೆಂಬುದು ಸರಕಾರವು ಅನ್ಯಾಯವೆನ್ನಿಸುವಷ್ಟು ಉಗ್ರರೂಪದ ಆಡಳಿತವನ್ನು ಜಾರಿಗೆ ತಂದಾಗ ಮಾತ್ರ; ಹಾಗಲ್ಲದೆ, ಅದು ಅನ್ಯಾಯವೆನ್ನಿಸುವಷ್ಟು ಬಲಹೀನತೆಯನ್ನು ಕಾಯದೆಯಂತೆ ನಡೆದುಕೊಳ್ಳದವರೆದುರು ತೋರಿಸುತ್ತ ಹೋದರೆ, ಪ್ರಾಮಾಣಿಕ ಪ್ರಜೆಗಳಿಗೆ ಜೀವನವು, ನರಕಪ್ರಾಯವಾಗಿ ಪರಿಣಮಿಸದಿರದು. ಉಗ್ರದಂಡ–ಶಿಥಿಲದಂಡ ಪದ್ಧತಿಗಳೆರಡೂ ಅನ್ಯಾಯ, ಅದರಿಂದಲೇ ವ್ಯಾಸನು–

> **"ರಾಜ್ಞಃ ಪ್ರಮಾದದೋಷೇಣ ದಸ್ಯುಭಿಃ ಪರಿಮುಷ್ಯತಾಂ**
> **ಅಶರಣ್ಯಃ ಪ್ರಜಾನಾಂ ಯಃ ಸ ರಾಜಾ ಕಲಿರುಚ್ಯತೇ–**

ರಾಜನ (ಸರಕಾರದ, ಮಂತ್ರಿಗಳ) ತಪ್ಪುಗಳ ಫಲವಾಗಿ ಪ್ರಜೆಗಳ ವಿತ್ತಜೀವಿತಗಳಿಗೆ ನ್ಯಾಯವಾದ ರಕ್ಷಣೆ ದೊರಕದಂತಾದಾಗ ಅಂಥ ರಾಜನು ಪಾಪಿ"ಎಂದಿದ್ದಾನೆ. ದೋಷಯುಕ್ತವಾದ ಕಾಯದೆಗಳು; ಕಾಯದೆಗಳ ದೋಷಯುಕ್ತವಾದ ಆಚರಣೆ; ಅದಕ್ಷ ಅಥವಾ ದುಷ್ಟ ನೌಕರರ ನಿಯೋಜನ; ಲಂಚ, ವಂಚನೆ, ಕಳ್ಳಪೇಟೆ, ವಿಲಂಬ, ದರದ ಏರಿಕೆ, ಅತಿಪ್ರಸರಣ ಮುಂತಾದವುಗಳಿಗೆ ಅವಕಾಶ ದೊರಕುವಂತಾಗುವುದು–ಈ ಎಲ್ಲವೂ "ರಾಜಪ್ರಮಾದ"ದ ಅಥವಾ ಪ್ರಶಾಸನದ ಅದಕ್ಷತೆಯ ಫಲಗಳು ಎನ್ನಿಸಿಕೊಳ್ಳುತ್ತವೆ. ಅದಕ್ಷ ಸರಕಾರವು ಪ್ರಜಾಪ್ರಭುತ್ವದ ಯಾವ ಪಕ್ಷದ ಮೂಲಕ ಲಭ್ಯವಾದರೆ ಸ್ವೀಕಾರಾರ್ಹ ಎನ್ನಲು ಸಾಧ್ಯ?

> **"ಯಸ್ಮಿನ್ ಕ್ಷಮಾಚ ಕ್ರೋಧಶ್ಚ ದಾನಾದಾನೇ ಭಯಾಭಯೇ।**
> **ನಿಗ್ರಹಾನುಗ್ರಹೌಚೋಭೌ ಸವ್ಯೆ ಧರ್ಮವಿದುಚ್ಯತೇ–**

ಪ್ರಶಾಸಕನಿಗೆ ಕ್ಷಮೆ–ಅಕ್ಷಮೆ, ದಾನ–ಅದಾನ, ಭಯ–ಅಭಯ, ನಿಗ್ರಹ–ಅನುಗ್ರಹಗಳನ್ನು ನ್ಯಾಯವಾಗಿ ಆಚರಿಸಲು ತಿಳಿದಿದ್ದರೆ ಆಗ ಮಾತ್ರ ಅವನು ರಾಜಧರ್ಮಜ್ಞ (ರಾಜನೀತಿಜ್ಞ)"–ಎಂಬ ವ್ಯಾಸೋಕ್ತಿಯು ಆಡಳಿತದ ದಕ್ಷತೆಯ ಅಗತ್ಯವನ್ನು ಒತ್ತಿ ಹೇಳಿದೆ.

## ರಾಜಪ್ರಭುತ್ವ ಮತ್ತು ಪ್ರಜಾಪ್ರಭುತ್ವ

ಆಳುವವನು ಅಥವಾ ಆಳುವವರು ಆನುವಂಶಿಕಪದ್ಧತಿಯ ಪ್ರಕಾರ ಪ್ರಶಾಸನಾಧಿಕಾರ ಪಡೆಯುತ್ತಿದ್ದಾಗ, ಜಗತ್ತಿನ ವಿವಿಧ ರಾಷ್ಟ್ರಗಳ (ರಾಜ್ಯಗಳ) ಜನರು ಅನುಭವಿಸಿದ ಸುಖದುಃಖಗಳ ಗುಣ–ಪರಿಮಾಣಗಳು ಕಾಲಾವಧಿಗಳ ದೃಷ್ಟಿಯಿಂದ ಪ್ರಜಾಪ್ರಭುತ್ವೀನ ಪದ್ದತಿಯಂತೆ ಚುನಾಯಿತರಾಗಿ ಬಂದವರ ಆಳ್ವಿಕೆಯಲ್ಲಿ ಅನುಭವಿಸುತ್ತ ಬಂದ ಸುಖದುಃಖಗಳಿಗಿಂತ ಬಹಳ ಅಧಿಕವಾಗದೆಂಬುದು ಇತಿಹಾಸಪ್ರಸಿದ್ಧ. ಆದರೆ ಆಧುನಿಕ ಯುಗದಲ್ಲಿ ಅನುವಂಶಿಕತೆಯ ಬಗ್ಗೆ ಶ್ರದ್ಧೆ ಹೊರಟುಹೋಗಿ ಆಯ್ದ ಪ್ರತಿನಿಧಿಗಳ

ಪ್ರಶಾಸನವನ್ನೇ ಆಧರಿಸಲಾಗುತ್ತದೆ. ಕಾಲಭೇದವೊಂದರಿಂದ ರಾಜಪ್ರಭುತ್ವಕ್ಕಿಂತ ಪ್ರಜಾಪ್ರಭುತ್ವ ಮೇಲೆಂಬ ಇಂದಿನ ದಿನಮಾನಕ್ಕಿಂತ ಒಂದೇ ಕಾಲಾವಧಿಯಲ್ಲಿ ಭಾರತದ ವಿವಿಧ ಭಾಗಗಳಲ್ಲಿ ವಿವಿಧ ಪ್ರಭುತ್ವಗಳಿದ್ದುದರ ಪಾಠವು ಜಗತ್ತಿಗಿಂದೂ ಉಪಾದೇಯವಾಗಿದೆ. ಪ್ರಜೆಗಳ ಸಾಮಾಜಿಕ ಮನೋಧರ್ಮಕ್ಕೆ ತಕ್ಕಂಥ ಸಂವಿಧಾನವು ಆಯಾ ಪ್ರಜಾಸ್ತೋಮ ನೆಲೆಸಿದ ಪ್ರದೇಶ–ದೇಶಗಳಲ್ಲಿ ಇರತಕ್ಕದ್ದು ಮಾತ್ರ ಆರೋಗ್ಯಕರವಾದೀತಲ್ಲದೆ, ಸರ್ವತ್ರ ಯಾವುದಾದರೂ ಒಂದು ಮಾದರಿಯ ಪ್ರಭುತ್ವ ಒಂದು ಖಂಡದಲ್ಲೋ ದೇಶದಲ್ಲೋ ಇರುವುದು ಎಂದೂ ಸರ್ವ ಪ್ರಜೆಗಳ ದೇಹ–ಮನಗಳ ಆರೋಗ್ಯಾಭಿವೃದ್ಧಿಗೆ ಕಾರಣವಾಗದು. ಪ್ರಜಾಪ್ರಭುತ್ವದಲ್ಲಿಯೇ ಇಂದು ಸಾಮ್ಯವಾದ, ಸಮಾಜವಾದ, ಬಂಡವಾಳವಾದ ಎಂದು ಮುಂತಾಗಿ ಅನೇಕ ಪ್ರಕಾರಗಳಿವೆ. ಎಲ್ಲ ವಿಧದ ಪ್ರಜಾಪ್ರಭುತ್ವಗಳಿಗೂ ಬೇಕಾದ "ಗಣವೃತ್ತ" ಮಹಾಭಾರತದಲ್ಲಿ ಬಂದಿದೆ:

ಲೋಭ–ಕ್ರೋಧಗಳು ಒಡಕಿನ ಬೀಜಗಳು. ಒಡಕು ಪ್ರಜಾರಾಜ್ಯವನ್ನು ಉದ್ದೇಶಮಾರಕವನ್ನಾಗಿ ರೂಪಿಸುತ್ತದೆ; ಅಂತಃಶತ್ರುಗಳೂ ಬಹಿಃಶತ್ರುಗಳೂ ಆಗ ಪ್ರಜೆಗಳನ್ನು ಒಡೆದು ಬಹು ಸಂಖ್ಯಾತರನ್ನು ವಿನಾಶಕ್ಕೀಡು ಮಾಡುತ್ತಾರೆ. ಸಂಘಶಕ್ತಿ ಅಥವಾ ಐಕ್ಯವೊಂದೇ ಗಣರಾಜ್ಯಗಳ ಯಶಸ್ಸಿಗೆ ಆಧಾರ. ಅದರಿಂದಲೇ ಪರಸ್ಪರ ಸಹಕಾರ ಸಾಧ್ಯ. "ಅಭಿಸಂಧಾನ" ಮನಸ್ಕತೆಯ ಶಿಕ್ಷಣ ಅದಕ್ಕೆ ಅಗತ್ಯ. ಅಭಿಸಂಧಾನ (=ವಿಚಾರ, ವಿಮರ್ಶೆ, ನಿರ್ಣಯ, ಆಚಾರ) (ಸಂವಿಧಾನಾಧಾರವನ್ನು) ಶಾಸ್ತ್ರಾಧಾರವನ್ನು ನಂಬಿದರೆ ಮಾತ್ರ ಸಫಲವಾಗುತ್ತದೆ. ಶಾಸ್ತ್ರವಿಲ್ಲದೆ ಧರ್ಮ (ನ್ಯಾಯ) ನಿರ್ಣಯವಾಗದು. ಇದ್ದದ್ದನ್ನು ಇದ್ದ ಹಾಗೆಯೇ ಗ್ರಹಿಸುವ ಶಕ್ತಿ ಬುದ್ಧಿಗಿದ್ದರೆ ಮಾತ್ರ ಶಾಸ್ತ್ರಾಧಾರದ ಪ್ರಕಾರ ವ್ಯವಹಾರಗಳನ್ನು ಏಕಮತದಿಂದ ನಿರ್ಣಯಿಸಲು ಸಾಧ್ಯ. ಪುತ್ರರನ್ನೂ ಭ್ರಾತೃಗಳನ್ನೂ ನಿಗ್ರಹಿಸಿ ವಿನಯವಂತರನ್ನಾಗಿ ಇಡುವ ಹಿರಿಯತನ (ನೇತೃತ್ವ) ಜನನಾಯಕರಲ್ಲಿರುವುದು ವಾಸ್ತವವನ್ನು ವಾಸ್ತವವನ್ನಾಗಿಯೇ ನೋಡುವ ದೃಷ್ಟಿಯನ್ನು ವ್ಯವಹಾರದಲ್ಲಿ ತರಲು ಅಗತ್ಯ. ಅದಕ್ಕೆ ಜನನಾಯಕರು ಪ್ರಾಜ್ಞರನ್ನೂ ಶೂರರನ್ನೂ ಮಹೋತ್ಸಾಹಿಗಳನ್ನೂ ಕರ್ಮವೀರರನ್ನೂ ಪೌರುಷವಂತರನ್ನೂ ಹೃತ್ಪೂರ್ವಕವಾಗಿ ಗೌರವಿಸುವ ನೀತಿಯನ್ನು ಹಿಡಿಯುವುದು ಅನಿವಾರ್ಯ, ಕ್ರೋಧ, ಭೇದ, ಭಯ, ದಂಡ, ಕರ್ಷಣ, ನಿಗ್ರಹ, ವಧಗಳು ಅನ್ಯಾಯವಾಗಿ ಆಡಳಿತದಲ್ಲಿ ಪ್ರವೇಶಿಸಿದರೆ ಪ್ರಜಾಪ್ರಭುತ್ವವು ಶತ್ರುಗಳ ಪಾಲಾಗುವುದು; ಹಾಗೆ ಶತ್ರುಗಳ ಪಾಲಾಗುವುದರ ಮುನ್‌ಸೂಚನೆಯೆಂದರೆ ಆರ್ಥಿಕ ಅಸ್ತವ್ಯಸ್ತತೆ. ಅರ್ಥವೈಷಮ್ಯದಿಂದ ಪರಸ್ಪರವೈಷಮ್ಯ ನಾಯಕರಲ್ಲೂ ಅನುಯಾಯಿಗಳಲ್ಲೂ ಉಂಟಾಗಿ ರಾಜ್ಯವು ದುರ್ಬಲವಾಗುವುದು. ಆಗ ಸಾಂಸ್ಕೃತಿಕ ಔನ್ನತ್ಯವನ್ನು ನಾಶಮಾಡಲಾಗುತ್ತದೆ. ಅಂತಃ ಶತ್ರುಗಳು ಬಹಿಃ ಶತ್ರುಗಳಿಂದ ಹೆಚ್ಚಿನ ಹಾಗೂ ಮೊದಲಿನ ರಾಜ್ಯಶಕ್ತಿ ಮಾರಕರು; ಅದು ಮೂಲಕ್ಕೇ ಕೊಡಲಿ. ಕ್ರೋಧ, ಮೋಹ, ಲೋಭಗಳು ದುಡ್ಡು, ಅಧಿಕಾರ, ಸ್ಥಾನಮಾನಗಳ ಬಗ್ಗೆ ಉಂಟಾಗುವಂತಹ ಶಿಕ್ಷಣ–ಪ್ರಶಾಸನಗಳು ಅಂತಃಶತ್ರು ನಿರ್ಮಾಪಕಗಳು. ಯಾವ ಜನಾಂಗದವರೂ ಎಂದೂ ಮತ ಜಾತಿಗಳಲ್ಲಿ, ಆನುವಂಶಿಕ ಹಿನ್ನಲೆಯಲ್ಲಿ, ಉದ್ಯೋಗ–ವೃತ್ತಿಗಳಲ್ಲಿ, ಬುದ್ಧಿ–ರೂಪ–ದ್ರವ್ಯಸಂಪಾದನೆಗಳಲ್ಲಿ ಎಲ್ಲಿಯೂ ನೂರಕ್ಕೆ ನೂರು ಸಮಾನತೆಯನ್ನು ಹೊಂದಿರರು.

ಈ ಅಂಶಗಳನ್ನು ಹಿಡಿದೇ ಅಂತಃಶತ್ರುಗಳು ಪ್ರಜೆಗಳನ್ನು ಒಡೆದು ಅಳಲು ಯತ್ನಿಸುತ್ತಾರೆ; ನಾನಾ ವಿಧದ ಆಮಿಷಗಳನ್ನೊಡ್ಡಿ ಅವರಲ್ಲಿ ಘರ್ಷಣೆಯನ್ನು ತಂದು ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಾರೆ!

ಪ್ರಜಾಪ್ರಭುತ್ವದ ಯಾವ ವಿಧವಾದರೂ ಉಕ್ತ ಗುಣ–ದೋಷಗಳಿಂದಲೇ ಸಫಲತೆ–ನಿಷ್ಫಲತೆಗಳಿಗಿಳಿಯುವುದು ಎಂಬುದು ಸ್ವಯಂ ಸ್ಪಷ್ಟ. ಅಭಿಸಂಧಾನಕ್ಕೆ ಮತ–ಜಾತಿ–ವಂಶ–ಉದ್ಯೋಗ–ಬುದ್ಧಿ–ರೂಪ (ಬಣ್ಣ), ದ್ರವ್ಯಾರ್ಜನಾದಕ್ಷತೆಗಳಲ್ಲಿ ಯಾವುದೂ–ವ್ಯವಹಾರಗಳಲ್ಲಿ ಮತ್ತು ಆಡಳಿತ ನೀತಿಯಲ್ಲಿ "ಕಾಯದೆಯೆದುರು ಎಲ್ಲರೂ ಸಮಾನರು" ಎಂಬ ತತ್ವಕ್ಕೆ ವ್ಯವಹಾರತಃ ಭಂಗತಾರದಂತೆ ನೋಡಿಕೊಳ್ಳಬಲ್ಲ ಜನತೆಯಲ್ಲಿ ಮಾತ್ರ ಪ್ರಜಾಪ್ರಭುತ್ವವು ಸಫಲವಾಗುತ್ತದೆ ಎಂಬ ಅಭಿಪ್ರಾಯಕ್ಕೆ ಎದುರಾಡಲು ಸಾಧ್ಯವೇ?

## ರೂಸೋ ವಿಚಾರ

ರೂಸೋ ಸಾಮಾಜಿಕ ವಿಕಾಸದ ಮೊದಲನೆಯ ವಕ್ತಾರ. ಆತನು ಸಾಮಾಜಿಕತೆಯ ಉತ್ತರೋತ್ತರಾಭಿವೃದ್ಧಿಯ ದೃಷ್ಟಾರ. ಸಮಾಜವಿಕಾಸವೊಂದು ನಿಯತ ಪ್ರಕ್ರಿಯೆಯೆಂದೂ ಕುಚೋದ್ಯದ ಪಾಂಡಿತ್ಯದ ಪ್ರಶಂಸೆ ಹಾಗೂ ಸರ್ವೋದಯ ಶೀಲದ ನಿಂದೆಗಳನ್ನು ಖಂಡನೀಯವೆಂದೂ ಆತನು ಸಾರಿದನು. ಅರಾಜಕವಾದ ಮೂಲಸ್ಥಿತಿ ಮತ್ತು ಸಮಾಜ–ಪ್ರಭುತ್ವಗಳ ಒಪ್ಪಂದ (ಕರಾರು) ಹಾಬ್ಸ್ ಮತ್ತು ಲೋಕೇಗಳವಾದದ ಮೂಲ. ಅದರ ಮುಂದಿನ ಆಲೋಚನೆ ರೂಸೋವಿನದು; ಪ್ರಜೆಯೇ ಕಾಯಿದೆ ಮಾಡುವವನಾಗಿರಬೇಕು–ಎಂದು ಪ್ರಜಾಪ್ರಭುತ್ವದ ಬೀಜವನ್ನು ಯೂರೋಪಿನಲ್ಲಿ ಬಿತ್ತಿದನು. "ಪ್ರಜೆ"ಯು "ನಾಗರಿಕ" ಎನ್ನಿಸಿದ್ದು ಅವನ ಸಿದ್ಧಾಂತದಲ್ಲಿ. ಪ್ರಜೆಗಳು, ಜನರು ಅಥವಾ ನಾಗರಿಕರು ಧರ್ಮಮೂಲವೆಂದ ಅವನ ಮಾತೇ ಇಂದು ದೇಶ ವಿದೇಶಗಳಲ್ಲಿ ಆ ಈ ಸಂವಿಧಾನಗಳನ್ನು ರಚಿಸುವ ರೂಢಿಗೆ ಕಾರಣವಾಯ್ತು; ಜನತೆ ಜನಾರ್ದನನಾದದ್ದು ಅಲ್ಲಿ ಅವನಿಂದ. ಅರ್ದನವೆಂದರೆ ನೋವು, ತೊಂದರೆ, ಉತ್ಕಂಠೆ, ಉದ್ವೇಗ, ಆಂದೋಲನ, ಅಶಾಂತಿ, ಅತೃಪ್ತಿ. ರಾಜ, ಮಹಾರಾಜ, ಚಕ್ರವರ್ತಿಗಳಲ್ಲಿ ಕೆಲವೊಮ್ಮೆ ಕೆಲವರು ತಮ್ಮಲ್ಲಿ ತಾವೇ ಆರೋಪಿಸಿಕೊಂಡ ತಮ್ಮ ಸರ್ವಾಧಿಕಾರ (ನಿರಂಕುಶ ಪ್ರಭುತ್ವ)ವನ್ನು ಜನರಿಗೆ ತಡೆಯಲಾರದಂಥ ತೊಂದರೆಗಳುಂಟಾಗುವಂತೆ ನಡೆಯಿಸಿದ್ದೇ ಜನತೆ ಜನಾರ್ದನನೆಂಬ ಸಿದ್ಧಾಂತವೆದ್ದು ಪೃಥಿವೀಪತಿಯ ವಿಷ್ಣುತ್ವಕ್ಕೆ[೭] ಚ್ಯುತಿಯನ್ನು ತಂದಿತು.

ಹೀಗಾದದ್ದು ಪಾಶ್ಚಾತ್ಯರಲ್ಲಿ ಮೊದಲು ಎಂಬುದೀಗ ಪ್ರಚಾರವಾಗಿದೆ. ಗ್ರೀಸಿನ ನಾಗರಿಕತೆಗೆ ಸಮಕಾಲೀನವಾದ ಭಾರತದ ಜೈನ–ಬೌದ್ಧಯುಗಗಳ ಆರಂಭಕಾಲದಲ್ಲಿ

---

೭. ಈ ವಿಷ್ಣುತ್ವವು ಪಾಶ್ಚಾತ್ಯರ ದೇವದತ್ತ ರಾಜ್ಯಾಧಿಕಾರ ಸಿದ್ಧಾಂತವಲ್ಲ. ಇದು ರಾಜನ ಶರೀರದಲ್ಲಿ ಇಂದ್ರ, ಅನಿಲ, ಯಮ, ಅರ್ಕ, ಅಗ್ನಿ, ವರುಣ, ಚಂದ್ರ, ಕುಬೇರರ ಅಂಶವಿದೆಯೆಂದು ರಾಜನ ಧರ್ಮಶಾಸನಕ್ಕೆ ಪ್ರಜೆಗಳು ತಲೆಬಾಗಿಸಬೇಕೆಂಬ ಪ್ರಚಾರದ ಉದ್ದೇಶ ಉಳ್ಳದ್ದು. ಭಾರತದ ರಾಜರು ಸಾಂಕುಶಪ್ರಭುಗಳು, ಧರ್ಮಸ್ಮೃತಿಗಳ ಅಧೀನರು. ಕಾಯಿದೆಗಳ ರಚನೆಗಾರರಲ್ಲ. ಅವರ ರಾಜಾಜ್ಞೆಗಳು ಅವರ (ಆಯಾ ವೈಯಕ್ತಿಕ ರಾಜರ) ಆಳ್ವಿಕೆಯಲ್ಲಷ್ಟೇ ಆಚರಣೀಯ.

ಗಣರಾಜ್ಯಗಳಿದ್ದದ್ದು ಉಕ್ತ ಪ್ರಚಾರದ ಅನೈತಿಹಾಸಕತೆಯನ್ನು ಸಿದ್ಧಮಾಡುತ್ತದೆ. ಅದಕ್ಕೂ ಹಿಂದೆ (ಎಂದರೆ, ವೇದದ ಆದಿಕಾಲದಿಂದ) ಗಣರಾಜ್ಯಪದ್ಧತಿ ಭಾರತದಲ್ಲಿ ಇತ್ತು–ಎಂಬುದನ್ನೂ ಡಾ. ಶ್ರೀಕಂಠಶಾಸ್ತ್ರಿಗಳು ತಮ್ಮ "ಭಾರತೀಯ ಸಂಸ್ಕೃತಿ"ಯಲ್ಲಿ ಸಾಧಾರವಾಗಿ ಸ್ಪಷ್ಟಪಡಿಸಿದ್ದಾರೆ ('ಭಾರತೀಯ ಸಂಸ್ಕೃತಿ,' ಪುಟ ೨೨೮ರಿಂದ ೨೩೩ರವರೆಗೆ). ಆದುದರಿಂದ ಭಾರತದಲ್ಲಿ ರಾಜಪ್ರಭುತ್ವ–ಪ್ರಜಾಪ್ರಭುತ್ವಗಳು ಘರ್ಷಣಜನ್ಯಗಳಲ್ಲ. ರಾಜರೂ 'ಜನಾರ್ದನ'ರಾದಾರು, ಜನರ ಪ್ರತಿನಿಧಿಗಳೂ 'ಜನಾರ್ದನ'ರಾದಾರು! 'ಚಲಿಸು, ಚಲಿಸಲ್ಪಡು' ಎಂಬ ಅರ್ಥಗಳೂ 'ಅರ್ದ್' ಎಂಬ ಧಾತುವಿಗಿರುವುದರಿಂದ, ಒಳ್ಳೆಯ ಅರ್ಥದಲ್ಲೂ ರಾಜ (ಏಕಸ್ವಾಮಿ) ಅಥವಾ ಪ್ರಜಾಪ್ರತಿನಿಧಿ ಜನರನ್ನು ಕರ್ತವ್ಯಗಳಲ್ಲಿ ಉದ್ಯುಕ್ತರಾಗುವಂತೆ ಮಾಡುವ 'ಜನಾರ್ದನ'ನೆನ್ನಿಸಬಹುದು!

ಸಾಮಾಜಿಕ ಒಪ್ಪಂದದ ಪದ್ಧತಿ ಬಹಳ ಜನಸಂಖ್ಯೆಯುಳ್ಳ ರಾಜ್ಯದಲ್ಲಿ ಪ್ರಜಾಪ್ರಭುತ್ವಕ್ಕೊಯ್ದು ಮುಟ್ಟಿಸುವುದರ ಬದಲು ರಾಜ್ಯವನ್ನು ಅತ್ಯಲ್ಪಸಂಖ್ಯರ ಅಥವಾ ಏಕಮೇವಾದ್ವಿತೀಯನ ಸರ್ವಾಧಿಕಾರಕ್ಕೆ ಮುಟ್ಟಿಸಬಹುದೆಂದು ರೂಸೋ ಊಹಿಸದನೆನ್ನಲಾಗಿದೆ. ಅದು ಭಾರತದಲ್ಲಿಂದು ನಿಜವಾಗಿ ಪರಿಣಮಿಸಿದೆ. ಜನರಲ್ಲಿ ಒಡಕುಂಟಾದರೆ ಜನರಿಗೆ (ಪ್ರಜಾರಾಜ್ಯದಲ್ಲಿ) ನಾಶ; ಹಾಗೇ ಜನಾರ್ದನರಲ್ಲಿ ಒಡಕುಂಟಾದರೂ ಬಹು ಸಂಖ್ಯಾತ ಜನರಿಗೆ ನಾಶ (ಶೋಷಣೆ, ಹಿಂಸೆ, ನಷ್ಟ, ಅಪಜಯ, ಅಪಮಾನ, ಸಾವು ಇತ್ಯಾದಿ); ಏಕೆಂದರೆ, ಆಗ 'ಸಮದಂಡ' ಉಳಿಯದು, 'ಶಿಥಿಲ–ಉಗ್ರದಂಡ'ಗಳು ಜನರ ಅನುಭವಕ್ಕೆ ಬರುವುವು–ಅಥವಾ ಭ್ರಷ್ಟಾಚಾರ ವ್ಯಾಪಿಸತೊಡಗುವುದೆಂದು (ನವ ಪರಿಭಾಷೆಯಲ್ಲಿ) ವರ್ಣಿಸಬಹುದು.

## ಗಾಂಧಿ ವಿಚಾರ

ಹೇಗೆ ದುರಭಿಮಾನ–ನಿರಭಿಮಾನಗಳಿಂದ ತಮ್ಮ ಅಥವಾ ಇತರರ ಸ್ವಾಭಿಮಾನವನ್ನು ಬಹಳ ಜನರು ಭಿನ್ನವಾಗಿ ಅನುಭವತಃ ಗುರುತಿಸಲಾರರೋ ಹಾಗೇ ಒಡಕು–ಅಭಿಪ್ರಾಯಭೇದಗಳನ್ನೂ ವಿಂಗಡಿಸಿ ತಿಳಿದುಕೊಳ್ಳಲಾರರು. ಆದುದರಿಂದ ಪರೇಂಗಿತಜ್ಞತೆಯ ಪ್ರಾಮಾಣಿಕ ಕೌಶಲವನ್ನು ಬೆಳೆಸಿಕೊಂಡ ಜನರ ಸಂಖ್ಯೆ ಸರಕಾರದಲ್ಲಿ ಹೆಚ್ಚಾದಾಗ ಮಾತ್ರ ಜನಹಿತಕರವಾದ ಸಾರ್ವನ್ಯಾಯಪಥದ ಮೂಲಕ ಸರ್ವೋದಯ (=ಸರ್ವಸಭ್ಯೋದಯ; ಅಸಭ್ಯರಿಗೆ ಶಿಕ್ಷಣಾರ್ಥವಾಗಿ ಹೇರುವ ಅಸ್ತಂಗತಿಯೇ ಉದಯ) ಸಿದ್ಧಿಸುವುದು. ಬಹು ಸಂಖ್ಯಾತರ ಅತಿ ಹೆಚ್ಚಿನ ಲಾಭವೆಂಬುದು ಭಾರತದ ಸರ್ವೋದಯ (ಸರ್ವಭೂತಹಿತ) ದಷ್ಟು ನ್ಯಾಯವ್ಯಾಪ್ತಿಯುಳ್ಳ ಧ್ಯೇಯವಲ್ಲ. ಬಹು ಸಂಖ್ಯಾತರು (ನೂರಕ್ಕೆ ೫೧ರಷ್ಟು ಜನರು) ಅಲ್ಪ ಸಂಖ್ಯಾತರನ್ನು (ನೂರಕ್ಕೆ ೪೯ರಷ್ಟು ಜನರನ್ನು) ದಣಿಸುವ ಯೋಜನೆ ಹೋಗಲಿ; ೯೯ ಜನರು ೧೦೦ನೇಯವನಾದ ಒಬ್ಬನನ್ನೂ–ಅವನು ತ್ರಯಸ್ಥರ ದೃಷ್ಟಿಯಿಂದ ನಿರಪರಾಧಿಯಾಗಿದ್ದರೆ– ದಣಿಸಕೂಡದೆಂಬುದೇ ಸರ್ವೋದಯದ ಕೇಂದ್ರಬಿಂದು; ಜೀವ ಜಾತಿಗಳೆಲ್ಲವುಗಳಿಗೂ ಈ ನ್ಯಾಯವನ್ನು ಅನ್ವಯಿಸುವುದು ಅದರ ಪೂರ್ಣಾರ್ಥ. ಬಹಳಜನ ಶ್ರೀಮಂತರಿಗೆ ಪುಣ್ಯದಲ್ಲಿ

ವಿಶ್ವಾಸವಿದ್ದಾಗ ದಾನದಿಂದ ಅರ್ಥಸಾಮ್ಯ ಸಾಧ್ಯವಾಯಿತು. ಅದು ಮಹಾಭಾರತದ ಯುಗ; ಪುಣ್ಯಶ್ರದ್ಧೆ ಇಲ್ಲದವರಿಗೆ ಕಾಯಿದೆಯ ಬಲಾತ್ಕಾರವೊಂದೇ ಮದ್ದು; ಅಂಥ ಕಾಯದೆಯ ರಚನೆ ಆಗ್ರಹ, ಬಲಾತ್ಕಾರ, ಬಲಪ್ರಯೋಗಗಳ ನಾನಾ ವಿಧ ಮತ್ತು ಮಟ್ಟಗಳಿಂದ ಮಾತ್ರ ಸಾಧ್ಯವೆಂಬುದನ್ನು ಜಗತ್ತೀಗ ಅರಿತಿದೆ; ಉಪದೇಶಶಕ್ತಿ ಚೆನ್ನಾಗಿ ಇದ್ದ ವೃದ್ಧ ವಯಸ್ಸಿನ ಗಾಂಧಿಯವರಂಥವರಿಲ್ಲದ ರಾಜ್ಯ(ರಾಷ್ಟ್ರ)ದಲ್ಲಿ ಅಥವಾ ಕಾಲದಲ್ಲಿ ಅನ್ಯಮಾರ್ಗವಿಲ್ಲ. ಭೀಷ್ಮ, ದ್ರೋಣ, ಕೃಪ, ವಿದುರ, ಧೃತರಾಷ್ಟ್ರ, ಕೃಷ್ಣ, ಗಾಂಧಾರಿಯರಲ್ಲಿ ಯಾರೂ ಕೌರವರಿಗೆ ಉಪದೇಶಮಾಡಿ ಅವರಲ್ಲಿ ಮನಃ ಪರಿವರ್ತನೆಯನ್ನುಂಟುಮಾಡಲು ಸಮರ್ಥರಾಗದುದರಿಂದಲೇ ಮಹಾಭಾರತಯುದ್ಧವು ಪಾಂಡವರಿಗೆ ಅನಿವಾರ್ಯವೂ ಪವಿತ್ರ ಕರ್ತವ್ಯವೂ ಆಯಿತು! ಇದು ಮಹಾಭಾರತದ ಸಾಮ–ದಾನ–ಭೇದ–ದಂಡಗಳ ಅನುಕ್ರಮಿಕ ನ್ಯಾಯದಿಂದ ಸಿದ್ಧ. ಸೈನಿಕ ಕ್ರಮಗಳಿಗಂಜುವ ಭಾರತೀಯತೆಯನ್ನು ಗಾಂಧಿಯವರೂ ಸ್ತುತ್ಯವೆಂದಿಲ್ಲ; ಹೇಡಿತನಕ್ಕಿಂತ ಧರ್ಮ್ಯವಾದ ಹಿಂಸೆಯೇ ಮೇಲೆಂದರವರು! ಭಾರತದಲ್ಲಿ ಅಹಿಂಸಾವೀರರು ಜಿನ, ಬುದ್ಧರ ಅನಂತರ ಗಾಂಧಿಯವರೊಬ್ಬರೇ; ಮಿಕ್ಕ ವೀರರು ಧರ್ಮ್ಯವಾದ ಯುದ್ಧಗಳನ್ನು ಪಾಂಡವರಂತೆಯೋ ಅಧರ್ಮ್ಯವಾದ ಯುದ್ಧಗಳನ್ನು ಕೌರವರಂತೆಯೋ ಮಾಡಿಯೇ ಮಡಿದವರು. ರಾಜದ್ರೋಹಕ್ಕೆ ಯಾವ ಶಿಕ್ಷೆ ಯೋಗ್ಯವೋ ಪ್ರಜಾದ್ರೋಹಕ್ಕೂ ಅದೇ ಶಿಕ್ಷೆಯೋಗ್ಯ ಎಂಬುದು ವ್ಯಾಸ–ಮನುಗಳ ಸಿದ್ಧಾಂತಸಾರ. ಆಪದ್ಧರ್ಮವನ್ನು ನಿತ್ಯ ಧರ್ಮವೆಂದು ತಿಳಿದು ಆಚರಿಸಬಾರದೆಂದಕೂಡಲೇ ಆಪತ್ಕಾಲದಲ್ಲಿಯೂ ಆದನ್ನಾಚರಿಸಬಾರದೆಂಬಂತಹ ಮನೋಧರ್ಮವು ಜನತೆಯಲ್ಲಿ ಬೆಳೆಯುವುದು ಅತ್ಯಂತ ಜುಗುಪ್ಸಾಜನಕವಾದ ಗತಿ. ದುರ್ಬುದ್ಧಿಗೆ ವಶರಾಗುವ ಆತ–ತಾಯಿಗಳು ಪ್ರಜೆಗಳಲ್ಲಿ ಮಾತ್ರ ಸಿಕ್ಕುತ್ತಾರೆ ಎಂಬುದು ಸುಳ್ಳು; ರಾಜ, ಮಂತ್ರಿ, ರಾಜಪುರುಷ, ಸೇವಕಾದಿ ಸರ್ವವರ್ಗಗಳಲ್ಲೂ ಕೆಲದೇಶ ಕಾಲ ಸಂದರ್ಭಗಳಲ್ಲಿ ಸಿಗಬಹುದಾದುರಿಂದ ಬ್ರಹ್ಮಹತ್ಯೆ ದೋಷವೆಂದಿದ್ದ ಕಾಲದಲ್ಲೂ ದ್ರೋಣಹತ್ಯೆ ಅನಿವಾರ್ಯವಾಗಿ ನಡೆಯಿತು. ಭೀಷ್ಮ–ದ್ರೋಣರ ಕೌರವವಿಧೇಯತೆಯು ತಪ್ಪೆಂಬುದು ಅವರಿಗೆ ಮರಣ ಉಂಟಾಗುವಂತಹ ಯುದ್ಧವನ್ನು ನಡೆಯಿಸಿದ ವ್ಯಾಸ–ಕೃಷ್ಣರ ಸಿದ್ಧಾಂತ. ಕರ್ಮ–ಗುಣಗಳಿಂದ ಜಾತಿನಿರ್ಣಯವೆಂಬ ಸೂತ್ರಕ್ಕೂ ಇದೇ ಉದಾಹರಣೆ. ಇದು "ಗುಣಾಃ ಪೂಜಾಸ್ಥಾನಂ ಗುಣಿಷು ನಚಲಿಂಗಂ ನಚವಯಃ" ಎಂಬ ತತ್ವದ ವಿಸ್ತರಣೆ. ಆದರೂ ಸಾಮಾನ್ಯವಾಗಿ ರಾಷ್ಟ್ರಾಭಿವೃದ್ಧಿಗೆ ಅನುಕೂಲವಾಗಿದ್ದ ಆನುವಂಶಿಕ ಜಾತಿಪದ್ದತಿ ಹಿಂದಿನಂತೆ ಆ ಮೇಲೂ ಪ್ರಬಲವಾಗಿಯೇ ಉಳಿದುಕೊಂಡು ಬಂದು ಕ್ರಮೇಣ ಅಸಂಖ್ಯ ವಿಕೃತ ಉಪಜಾತಿಗಳಾಗಿ ಬ್ರಿಟಿಷರ ಒಡೆದಾಳು ಕುಟಿಲನೀತಿಗೆ ಅನುಕೂಲವೊದಗಿದ ದುರಂತಕ್ಕೆ ಐತಿಹಾಸಿಕ ಶಕ್ತಿಗಳು ಅಥವಾ ಈಶ್ವರೇಚ್ಛೆ ಕಾರಣವೆಂದು ಹೇಳದೆ ಬೇರೆ ವಿಕಲ್ಪವಿಲ್ಲ. ಅಪದ್ಧರ್ಮ–ನಿತ್ಯಧರ್ಮಗಳಲ್ಲಿ ಹೇಗೋ ಹಾಗೇ ಅಪವಾದ ಉತ್ಸರ್ಗಗಳಲ್ಲೂ ಅಪಾನ್ವಯವಾದಾಗ ವರ್ಣಧರ್ಮ–ಜಾತಿಧರ್ಮಗಳು ರಾಷ್ಟ್ರಮಾರಕಗಳಾದವು. ಅಪಾನ್ವಯ, ಅಪಸಮರ್ಥನೆಗಳು ಯಾವ ಸಂವಿಧಾನವನ್ನೂ ದುಷ್ಫಲದಾಯಕವಾಗಿ ಪರಿಣಮಿಸುವಂತೆ ಮಾಡುವುದು ಬುದ್ಧಿ ವಿಕಾರ; ಬುದ್ಧಿವಿಕಾರದಂತೆಯೇ ಬುದ್ಧಿ–ಆಕಾರವೂ ದೈವದಿಂದಲೇ ಲಭ್ಯವೆಂದು ವಿದುರನ

ಮೂಲಕ ವ್ಯಾಸ ತಿಳಿಸುತ್ತಾನೆ. ಆದುದರಿಂದ ರಾಜಪ್ರಭುತ್ವ–ಪ್ರಭುತ್ವಾದಿ ವಿವಿಧ ಪ್ರಭುತ್ವಗಳ ಲಾಭಾಲಾಭ ಜಯಾಪಜಯಗಳ ವಿಮರ್ಶೆಗಿಂತ ಮಾನವ ಮಾನವನಾಗಿ ವರ್ತಿಸುವ ಯೋಜನೆ ಮಾನವಜೀನದ ರಾಜಕೀಯ, ಆರ್ಥಿಕ, ಸಾಮಾಜಿಕ, ಕ್ಷೇತ್ರಗಳೆಲ್ಲವುಗಳ ಸರ್ವಹಿತ ಸಿದ್ಧಿಗೂ ಅಗತ್ಯವೆಂಬುದೇ ಮುಖ್ಯ ತತ್ವ. ಶಿಕ್ಷಣ–ಆಡಳಿತ ವಾಣಿಜ್ಯಾದಿ ವ್ಯವಹಾರಗಳಲ್ಲಿಯೇ ಅಂಥ "ಸಮದಂಡ" ಯೋಜನೆ ಇರುವುದು. ಸರ್ವಹಿತಕ್ಕೆ ಸಾಧನವಾಗದ ಪ್ರಭುತ್ವವಾದವು ವಿಮರ್ಶಬಾಹಿರ; ಅದಕ್ಕೆ ಅನುಕೂಲವಾದ ಪ್ರಭುತ್ವವಾದಗಳು ಐತಿಹಾಸಿಕ ಅವಧಿಗಳ ವಿವಿಧ ಸಾಮಾಜಿಕ ಮನೋಧರ್ಮಗಳಿಗೆ ಪೋಷಕವಾಗಿವೆ ಎನ್ನಿಸಿಕೊಳ್ಳಬೇಕಾದರೆ, ರಾಷ್ಟ್ರೀಯ ಸಮಾಜಮನೋವಿಜ್ಞಾನದ ಐತಿಹಾಸಿಕ ಬೆಳವಣಿಗೆಗೆ ಶಿಕ್ಷಣಪದ್ದತಿ–ವ್ಯವಹಾರ ಪದ್ಧತಿಗಳು ಹೊಂದುವಂತೆ ರೂಪಿತವಾಗಬೇಕು. ಪ್ರಜಾ ಸಂಸ್ಕಾರಸಿದ್ಧಿಯು ತಾತ್ಕಾಲಕ ಮನೋದೋಷಗಳ ಜೊತೆಗೇ ಐತಿಹಾಸಿಕವಾಗಿ ಉಳಿದುಕೊಂಡು ಬಂದ ಮನೋದೋಷಗಳ ಪರಿಹಾರಕ್ಕೂ ತಕ್ಕ ಶೈಕ್ಷಣಿಕ–ವ್ಯಾವಹಾರಿಕ ಪದ್ಧತಿಗಳನ್ನು ಹುಡುಕಿ ಆಚರಣೆಗೆ ತರುವುದರಿಂದ ಮಾತ್ರ ಸಾಧ್ಯ. ಶಿಕ್ಷಣ–ವ್ಯವಹಾರಗಳು ಪರಸ್ಪರ ವಿರುದ್ಧ, ಭಿನ್ನ ಎನ್ನಿಸಿದಾಗ ಪ್ರಗತಿಗೆ ನೂರಾರು ವಿಘ್ನಗಳು ಉಂಟಾಗುವುವು.

## ಇಂದಿನ ಭಾರತ

ಸರಕಾರ ಅಥವಾ ಅತ್ಯುಚ್ಚ ಪ್ರಶಾಸಕ ಮಂಡಲ ಬಹುಸಂಖ್ಯರಿಂದ ಕೂಡಿರುವುದು ಅದರ ಶಕ್ತಿಹ್ರಾಸಕ್ಕೆ ಕಾರಣ ಮತ್ತು ಅಧಿಕೃತ ಆಡಳಿತದ ವಿಷಯಗಳ ಸಂಖ್ಯೆ ಬಹಳ ಹೆಚ್ಚಾದರೆ ದಕ್ಷತೆ ಇಳಿದು ಹೋಗುತ್ತದೆ ಎಂಬ ರೂಸೋವಾದಕ್ಕೆ ಇಂದಿನ ಭಾರತ ದೃಷ್ಟಾಂತವಾಗಿದೆ. ರಾಜ ಪ್ರಭುತ್ವದಲ್ಲಿ ಈ ಸಂನಿವೇಶಗಳಲ್ಲಿ ಮೊದಲಿನದು ಸಂಭವಿಸುವುದು ರಾಜನು ಹೆಸರಿಗೆ ಮಾತ್ರ ರಾಜನಾಗಿದ್ದಾಗ ಮಾತ್ರ; ಎರಡನೆಯದು ಅವನು ಸ್ವಯಂ ಸರ್ವಾಧಿಕಾರಿ (ನಿರಕುಂಶಪ್ರಭು) ಯಾದಾಗ. ವ್ಯಕ್ತಿ ಸ್ವಾತಂತ್ರ್ಯವೂ ವಿಸ್ತಾರವಾಗಿರಬೇಕು; ಸರಕಾರವೂ ಬಲಿಷ್ಠವಾಗಿರಬೇಕು–ಎಂಬ ಧ್ಯೇಯವನ್ನು ಸಾಧಿಸಬೇಕಾದರೆ, ಪ್ಲೇಟೋವ್ಯಾಸರ ತತ್ವಜ್ಞಾನಿ–ಪ್ರಶಾಸಕರ, ಋಷಿರಾಜರ (ರಾಜರ್ಷಿಗಳ) ಅಥವಾ ವಿಶಿಷ್ಟ ರಾಜಧಾರ್ಮಿಕ ಶಿಕ್ಷಣಪಡೆದ ಪ್ರತಿನಿಧಿಗಳ ತರಬೇತು, ಆಯ್ಕೆಗಳಿಗೆ ಅಗತ್ಯವಾದ ಕಾಯದೆಬದ್ಧ ಯೋಜನೆ–ಆಚರಣೆಗಳು ಮಾತ್ರ ಸಾಧನಗಳಾದಾವು; ಬೇರೆ ಮಾರ್ಗ ಇಲ್ಲವೇ ಇಲ್ಲ. ಅಂಥ ಸಮತ್ವನೀತಿಜ್ಞರು ರಾಜ್ಯಭಾರದ ಸೂತ್ರವನ್ನು ಹಿಡಿದು ಜನಜೀವನವನ್ನು ತೃಪ್ತಿಕರವಾಗಿ ರೂಪಿಸಿದಾಗ ಸರ್ವಹಿತಸಾಧಕವಾದ ವಿವಿಧ ಪಕ್ಷ, ತತ್ವ, ವಾದ, ಸಿದ್ಧಾಂತಗಳಲ್ಲಿ ತಾರತಮ್ಯ ಚರ್ಚೆ ಸಾಂದರ್ಭಿಕವಾದೀತು–ದಶಕ, ದಶಕ ಕಳೆದ ಹಾಗೆ!

**'ನಹಿ ಶೌರ್ಯಾತ್ ಪರಂಕಿಂಚಿತ್ ತ್ರಿಷುಲೋಕೇಷು ವಿದ್ಯತೇ**

**ಶೂರಃ ಸರ್ವಂ ಪಾಲಯತಿ ಸರ್ವಂ ಶೂರೇ ಪ್ರತಿಷ್ಠಿತಂ–**

ಶೌರ್ಯಕ್ಕಿಂತ ಹೆಚ್ಚಿನದು ಮೂರು ಲೋಕಗಳಲ್ಲೂ ಇಲ್ಲ; ಎಲ್ಲವನ್ನೂ ಶೂರ ಮಾತ್ರ ಪಾಲಿಸಬಲ್ಲ; ಶೂರನೇ ಸರ್ವಾಧಾರ' ಎಂಬ ವ್ಯಾಸ ಘೋಷವು ಅರ್ಜುನ ದೃಷ್ಟಾಂತದಿಂದ

ಸಮರ್ಥಿತವಾಗುವುದು ಸ್ಪಷ್ಟ. ಅರ್ಜುನನು ನಿಜವಾದ ನರ, ಮಾನವ, ದ್ರೋಣ–ಕೃಷ್ಣರು ಅವನ ನಿಜವಾದ ಶಿಕ್ಷಕರು; ಒಬ್ಬನು ವ್ಯಾವಹಾರಿಕ ಗುರು, ಇನ್ನೊಬ್ಬನು ಸೈದ್ಧಾಂತಿಕ ಗುರು. ನಾರಾಯಣೋನ್ಮುಖ ನರರು ರಾಜ್ಯಾಧಿಕಾರ ಪಡೆಯುವ ಸರ್ವೋದಯ ಯೋಜನೆ ಗಾಂಧಿಯವರಿಗಿದ್ದ ಭಾರತೀಯ ಬಯಕೆ. ಎಂಗೆಲ್ಸ್–ಮಾರ್ಕ್ಸ್‌ರ ಬಯಕೆ ಈ ವ್ಯಾಸ–ಗಾಂಧಿಗಳ ಸುರಾಜ್ಯದ ಬಯಕೆಗಿಂತ ಬಹಳ ಭಿನ್ನವಲ್ಲ; ಅವುಗಳನ್ನು ದೊರಕಿಸಿಕೊಳ್ಳುವ ಸಾಧನಗಳ ಬಗೆಗಿನ ವ್ಯವಹಾರ ಪದ್ಧತಿಗಳ ಸಿದ್ಧಾಂತಪ್ರಣಾಲಿಗಳು ಭಿನ್ನ. ಮಾರ್ಕ್ಸ್‌ನ ಜನತಾಸರ್ವಾಧಿಕಾರ ಪದ್ಧತಿ ಮತ್ತು ಆ ಪದ್ಧತಿಯನ್ನು ಒಂದು ಜನ ಪಡೆಯಬೇಕಾದರೆ ಹಿಡಿಯಬೇಕಾದ ಮಾರ್ಗ–ಇವುಗಳಲ್ಲಿ ೨ನೆಯದರ ವಾದಗ್ರಸ್ತತೆ ಒಂದನೆಯದಕ್ಕಿಲ್ಲ. ಈ ಮಾರ್ಗಭೇದಗಳು ಆಯಾ ದೇಶದ ಐತಿಹಾಸಿಕ ಶಕ್ತಿಗಳಿಗಧೀನ; ಅವು ಶುದ್ಧ ವ್ಯವಹಾರಗಳು; ಅವುಗಳ ಸೈದ್ಧಾಂತಿಕ ಭಾಗ ತೀರ ಭೌಮ, ಭೌತಿಕ–ಅನುಕೂಲಸಿಂಧುನ್ಯಾಯ ಮತ್ತು ಅಪದ್ಧರ್ಮನ್ಯಾಯಗಳಿಂದ ಬದ್ಧವಾದಂಥವು. ರಾಜಕೀಯ ಗುರಿಗಳ ರಾಷ್ಟ್ರೀಯ ಸಾಧನಪ್ರಯತ್ನದಲ್ಲಿ ಒಬ್ಬರು ಆಪದ್ಧರ್ಮವೆಂಬುದನ್ನು ಅಧಿಕಾರ ಗಿಟ್ಟಿಸಿಕೊಂಡಿರುವ ಇನ್ನೊಬ್ಬರು ಅಧರ್ಮವೆಂದಾರು!

## ವ್ಯಾಸಪ್ರಶ್ನೆ

**"ಊರ್ಧ್ವಬಾಹುರ್ವಿರೌಮ್ಯೇಷ ನಚ ಕಶ್ಚಿತ್ ಶೃಣೋತಿಮೇ**

**ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನಸೇವ್ಯತೇ?"**

ಎಂಬ ವ್ಯಾಸಪ್ರಶ್ನೆ ಜಗತ್ತಿನಲ್ಲಿ ಹಾಗೇ ಉಳಿದುಕೊಂಡು ಬಂದುದರಿಂದ ಮಾರ್ಕ್ಸಾವತಾರವನ್ನು ಇತಿಹಾಸ ಮಾಡಿಸಿತು. ವ್ಯಾಸೋಕ್ತವೂ ಗಾಂಧಿಯವರ ವಿಶ್ವಸ್ತತೆಯ ಅರ್ಥವ್ಯವಸ್ಥಾ ನೀತಿಯೂ ಒಂದೇ. ಅವರ ಕನಸು ನನಸಾಗದಾದಾಗ, "ತತೋ ಯುದ್ಧಾಯ ಯುಜ್ಯಸ್ವ" ಎಂಬ ವ್ಯಾಸೋಪದೇಶವಿದ್ದೇ ಇದೆ. ಅದೇ ಸಾಮ್ಯವಾದದ ಅನುಯಾಯಿಗಳ ಆಪದ್ಧರ್ಮ. ಆಪತ್ಕಾಲವಾವುದೆಂಬುದನ್ನು ಆಪತ್ತೇ ನಿರ್ಣಯಿಸುತ್ತದೆ; ಅದು ಒಬ್ಬಿಬ್ಬರ (ಅಧಿಕೃತಾನಧಿಕೃತರ) ಘೋಷಣೆಯನ್ನವಲಂಬಿಸಿರದು.

ಅಂಥ ಯೋಧರ ತರಬೇತಿಗೂ ಗೀತೋತ್ತರ ಸಂದರ್ಭದ ಅರ್ಜುನನೇ ಆದರ್ಶ. ಕೇವಲ ಸಂಬಳದಾಳುಗಳು ಯೋಧರಲ್ಲ, ಯೋಧ ಸಹಾಯಕ ವಿಜ್ಞಾನಿಗಳೂ ಅಲ್ಲ–ಅವರ ಪದವಿಗಳು ನೂರಿದ್ದರೂ ಒಂದೇ, ಸಾವಿರವಿದ್ದರೂ ಒಂದೇ. ಕೇವಲ ಅಪಿತೃತ್ವವು ಬ್ರಹ್ಮಚರ್ಯೆಯಲ್ಲ; ಪಿತೃ ಬ್ರಹ್ಮಚಾರಿತ್ವದ ಔಪನಿಷದಿಕ ಸತ್ಯವನ್ನು ಕೃಷ್ಣನಂತೆ, ಗಾಂಧಿಯವರಂತೆ ಪಾಲಿಸಬಲ್ಲ ಅರ್ಜುನತೆಯೊಂದೇ ಆಭಾಸ ಭಾರತವನ್ನು ವ್ಯಾಸ ಭಾರತದ ಉಚ್ಚ ಸಾಂಸ್ಕೃತಿಕ ಪಕ್ಷದ ಮಟ್ಟಕ್ಕೇರಿಸಬಲ್ಲುದು.

ಅಲಸದೇರ್ ಮೆಕ್‌ಇಂಟೈರರಂಥವರು ಬಂಡವಾದದ ಲಾಭಲೋಭದ ಅತಿರೇಕವು ಶೋಷಣೆಗಿಳಿದಾಗ ವಿಜ್ಞಾನ ತಾಂತ್ರಿಕ ನವನಿರ್ಮಾಣಗಳಿಂದ ಮತ್ತು ಯೋಗಕ್ಷೇಮ ಸರಕಾರ ಪದ್ಧತಿಗಳಿಂದ ಅಂಥ ಅತಿರೇಕವನ್ನು ಪರಿಹರಿಸಬಹುದೆಂದು ಹೇಳಿದ್ದು

ದೃಷ್ಟಾಂತರಹಿತವಾದ ಸಾಮಾನ್ಯೋದ್ಗಾರ. ಅತಿರೇಕ, ಶೋಷಣೆ, ಪರಿಹಾರಗಳೆಂಬ ಪದಗಳ ಅರ್ಥಗಳು ಅಧಿಕಾರಪಟ್ಟದಲ್ಲಿರುವ ಆಯಾ ವಾದಿಗಳ ಸ್ವಕಪೋಲಕಲ್ಪನೆಗಳನ್ನು ಅವಲಂಬಿಸಿದ ವಾಸ್ತವಿಕತೆಯು ಆ ಈ ದೇಶಗಳಲ್ಲಿ ಕಂಡು ಬರುವುದು ಅದಕ್ಕೆ ಸಾಕ್ಷಿ. ಹಾಗೇ ಭಾರತದಲ್ಲಿರುವ ಅರೆಬಂಡವಾದವು (ಸಮಾಜವಾದೀಯ ಸಮಾಜ ರಚನೆಯ ಮಿಶ್ರ ಆರ್ಥಿಕ ಸಿದ್ಧಾಂತವು) ಸಾಮ್ಯವಾದದ (ಅಥವಾ ಸಮಾಜವಾದದ) ವೈಫಲ್ಯವನ್ನು ತೋರಿಸಲೆಂದೇ ಹೂಡಿದ ಮಾಯಾನಾಟಕವಾಗಿ ಪರಿಣಮಿಸಿದೆ. ಮಾಯಾಸತ್ಯವು ಯಾವಾಗಲೂ ಒಂದು ಸತ್ಯಮಾಯೆ.

**"ಅದ್ರೋಹೇಣೈವ ಭೂತಾನಾಮಲ್ಪದ್ರೋಹೇಣವಾ ಪುನಃ**

**ಯಾ ವೃತ್ತಿಃ ಸ ಪರೋ ಧರ್ಮಸ್ತೇನ ಜೀವಾಮಿ ಜಾಜಲೇ–**

ಸಹಜೀವಿಗಳಿಗೆ ದ್ರೋಹ (ಮೋಸ, ಮಾಯೆ, ಕಪಟ, ವಂಚನೆಗಳ ಮೂಲಕ ಮಾಡುವ ಹಿಂಸೆ, ಪಾಪ, ಶೋಷಣೆ) ಮಾಡದೆ ಅಥವಾ ಅತ್ಯಲ್ಪ ಸಂಖ್ಯ ಸಂದರ್ಭಗಳಲ್ಲಿ ಆಪದ್ಧರ್ಮವಾಗಿ ಅತ್ಯಲ್ಪ ದ್ರೋಹ ಮಾಡಿ ಬದುಕುವ ವೃತ್ತಿಯು ಧರ್ಮ" ಎಂಬ ಅಭಿಪ್ರಾಯ ತಳೆದ ತುಲಾಧಾರ ಪಾತ್ರದ ಮೂಲಕ ವ್ಯಾಸನು ಸಾರ್ವಜನಿಕರನ್ನು ಮೋಸಗೊಳಿಸುವ ರಾಜಕೀಯಾದಿ ಸರ್ವವೃತ್ತಿಗಳೂ ಹೇಯವೆಂದಿರುವುದು ಸ್ಪಷ್ಟ.

ಪ್ರಚಾರ ಸಾಧನಗಳ ಮೇಲೆ ಕಾಯಿದೆಯ, ದುಡ್ಡಿನ ಅಥವಾ ಎರಡರ ಮೂಲಕ ಪ್ರಭುತ್ವವನ್ನು ಪಡೆದ ಅಲ್ಪ ಸಂಖ್ಯ ಜನರು ಬಹು ಸಂಖ್ಯರನ್ನು–ಅವಾಸ್ತವವನ್ನು ವಾಸ್ತವವೆಂದು ಚಿರಕಾಲ ನಂಬಿಸಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳಬಹುದಾಗಿದೆ. ಪ್ರಭುಗಳ ಮಾಯಾಪ್ರಚಾರ ಬಲಕ್ಕೆ ಯಾವ ರಾಜನೀತಿಶಾಸ್ತ್ರವೂ ಮದ್ದನ್ನು ಹೇಳಿಲ್ಲ. ಅದಕ್ಕೇ ಮಹಾಭಾರತವು ಧರ್ಮಸಂಸ್ಕಾರವನ್ನು ಪದೇ ಪದೇ ಒತ್ತಿ ಹೇಳಿದೆ. ಕೆಲ ಪಾಶ್ಚಾತ್ಯರು ಧರ್ಮದ ಆತ್ಮವಾದ ನೀತಿಯನ್ನು ಕಾಯಿದೆಗಿಂತ ಬಹಳ ಕಡಿಮೆ ಬೆಲೆಯದೆಂದು ವಾದಿಸಿದ್ದನ್ನು ಅಕ್ಷರಶಃ ನಂಬುವ ಶಿಕ್ಷಿತತೆ ಭಾರತದಲ್ಲಿ ರಾಷ್ಟ್ರಘಾತಕವಾದುದು. ಅದರಿಂದ ತ್ರಿಕರಣ ಶುದ್ಧಿ ಈಗ ದೇಶದಲ್ಲಿ ಬಹಳ ಕೆಳಮಟ್ಟಕ್ಕಿಳಿದು, ಅಧಿಕಾರ ಅಧಿಕ–ಅಲ್ಪ ಇರುವ ಎಲ್ಲ ವರ್ಗಗಳಲ್ಲೂ ವಂಚನಾವಿದಗ್ಧರು ಶೋಷಕರಾಗುತ್ತಿದ್ದಾರೆ. ವಕೀಲರ ವಾದಬಲವನ್ನೇ ಅವಲಂಬಿಸಿದ ಕಾಯದೆಯು ದುಷ್ಟ ಶಿಕ್ಷೆಗೆ ಮತ್ತು ಶಿಷ್ಟ ರಕ್ಷಣೆಗೆ ಸರ್ವದಾ ಸಮರ್ಥವೆನ್ನಿಸಲಿಲ್ಲ. ಸಾಕ್ಷಿಗಳೂ ವಕೀಲರೂ ಪೋಲೀಸರೂ ನೌಕರರೂ ಅಧಿಕಾರಿಗಳೂ ಕಾರಕೂನರೂ ಕಾರ್ಯದರ್ಶಿಗಳೂ ಅಧಿಕ ಪ್ರಮಾಣದಲ್ಲಿ ಧನವಶ್ಯರಾದಾಗ ಕಾಯದೆಯನ್ನು ಯಾರು ಕಾಯುವವರು? ಇದು ಕಾಯದೆಬದ್ಧ ವ್ಯವಹಾರದ ಮಾಯೆ, ಆಭಾಸ, ತೋರಿಕೆ. ಧರ್ಮವು ಆತ್ಮಸಾಕ್ಷಿಯಾಗಿ ನಿಲ್ಲುವಂತಹ ಸಂಸ್ಕಾರವು ರಾಷ್ಟ್ರದಾದ್ಯಂತ ಎಲ್ಲರಿಗೂ ದೊರಕುವಂತಹ ಆಚಾರ ವ್ಯವಹಾರ, ಭಾಷಣ, ಲೇಖನ, ಶಿಕ್ಷಣ, ಆಡಳಿತ, ಕೊಡು–ಕೊಳ್ಳು, ಉತ್ಪಾದನೆ–ವಿತರಣೆಗಳು ನಡೆಯುವಂತೆ ಯೋಚಿಸುವುದೊಂದೇ ಸರ್ವತ್ರ ತರಣೋಪಾಯ, ರಾಜಧರ್ಮದ ತಳಪಾಯ, ರಾಷ್ಟ್ರಶಕ್ತಿಯ ಆದಿ ಬುನಾದಿ–ಎಂಬುದು ವ್ಯಾಸದರ್ಶನ. ಅಂಥ ಸಂಸ್ಕಾರವು ಶಿಥಿಲವಾದರೆ ಎಲ್ಲರ ಉಳಿದ ಎಲ್ಲ ಪ್ರಯತ್ನಗಳೂ

ರಾಷ್ಟ್ರಕ್ಕೆ ರಾಷ್ಟ್ರತ್ವವನ್ನೂ ಪ್ರಜೆಗಳಿಗೆ ಶಾಂತಿ ಸುಖಗಳನ್ನೂ ದೊರಕಿಸುವಲ್ಲಿ ಬಹು ಬೇಗ ನಿಷ್ಫಲವಾಗುವುವು. ಧರ್ಮವೆಂಬ ಹೆಸರಿನ ವ್ಯಾಪಕಾರ್ಥ ಅಂಥ ಯೋಜನೆಗಲ್ಲದೆ ಇನ್ನಾವುದಕ್ಕೂ ಹೊಂದದು. ಅದು ಮಹಾಭಾರತದ ಸತ್ಯ. ಅದಕ್ಕೆ ವ್ಯಾಸನ ಪ್ರಕಾರ– ಅವ್ಯಯಪ್ರಜ್ಞೆ, ಸಮತ್ವ, ದಮ, ಸಂಯಮ, ಕ್ಷಮೆ, ನಾಚಿಕೆ (ತನ್ನ ತಪ್ಪನ್ನು ತಾನೇ ಕಂಡುಕೊಂಡು ಸಂಕೊಚಪಟ್ಟುಕೊಳ್ಳುವುದು), ಸಹನೆ, ಅನಸೂಯೆ, ರಾಗ ದ್ವೇಷರಹಿತತೆ, ಪರೋಪಕಾರಶೀಲ, ಧೃತಿ, ದಯೆ, ಅಹಿಂಸೆಗಳೆಂಬ ೧೩ ಮುಖಗಳು. ಲೌಕಿಕ ಕಾರಣವಿಲ್ಲದೆ ನಾಶದ ಭಯ ನಾಶವಾಗುವುದು, ನಿಷ್ಪಕ್ಷಪಾತತೆ, ಇಂದ್ರಿಯನಿಗ್ರಹ, ಭಾವಾವೇಶವಿಮುಖತೆ, ಪರರ ಅಲ್ಪದೋಷವನ್ನು ಮಹತ್ತೆಂದು ಗ್ರಹಿಸದಿರುವಿಕೆ, ಆತ್ಮ ವಿಮರ್ಶಶೀಲ, ಸಹಿಷ್ಣುತೆ, ನಿರ್ಮತ್ಸರ, ನ್ಯಾಯಪರತೆ, ಸಾಮಾಜಿಕತೆ, ಸ್ಥಿರತೆ, ಅನುಕಂಪ, ಶೋಷಣ ವಿಮುಖತೆಗಳು ಮನಸ್ಸನ್ನು ಸಂಸ್ಕರಿಸಿದರೆ (ಉಪಾಹಿತಗೊಳಿಸಿದರೆ) ಅಂಥ ಮನಸ್ಸುಗಳ್ಳವರಿಂದ ಅಳಿಸಿಕೊಳ್ಳುವುದು ಲೋಕಜೀವನದ ಪರಮೋಚ್ಚ ಯೋಜನೆಯನ್ನಬಹುದು.

## ಶೋಷಣೆಯ ಸೂಕ್ಷ್ಮರೂಪಗಳು

ಯುದ್ಧ, ಪೋಲೀಸು ಪ್ರಯೋಗಗಳು ಮಾತ್ರ ಬಲಾತ್ಕಾರ ಸಾಧನಗಳಲ್ಲ, ಸರಕಾರದ ದೇಣಿಗೆ ಪಡೆದ ಪತ್ರಿಕೆಗಳನ್ನೇ ಜನರು ಓದುವಂತಾಗುವುದೂ ಅಸಹನೀಯ ಶೋಷಣೆ– ಎಂಬುದು ಬರ್ಟ್ರೆಂಡ್ ರಸಲ್ಲನ ಅನುಭವಕ್ಕೆ ಬಂದ ಅಂಶ. ಸರಕಾರಿಬಲಾತ್ಕಾರದ ವಿಶ್ವರೂಪ ದರ್ಶನಕ್ಕೆ ಸಾವಕಾರಿಬಲಾತ್ಕಾರದ ವಿಶ್ವರೂಪದರ್ಶನ ಹೊಯ್ ಕೈ ಆಗಿರುವುದರ. ಬಿಸಿಯು ರಸೆಲ್ಲನ ಅನುಭವಕ್ಕೆ ಸಾಕಷ್ಟು ಬಂದಂತಿಲ್ಲ. ಪತ್ರಿಕೆಯೊಂದೇ ಅಂಥ ಸಾರ್ವಜನಿಕಾಭಿಪ್ರಾಯವನ್ನು ಒಂದು ಗುಂಪಿಗೆ ಬೇಕಾದಂತೆ ರೂಪಿಸಿಕೊಳ್ಳುವ ಸಾಧನವಲ್ಲ. ಅಧಿಕೃತ ರಾಜಕೀಯ ಸ್ವಾರ್ಥಿಗಳು ಹೇಳಿಬರೆಯಿಸುವ ಮತ್ತು ಹೇರಲಾಗುವ ಪಠ್ಯಗಳು, ಬರೆದು ಮಾರಿಸಲಾಗುವ ಪುಸ್ತಕಗಳು, ಮಾಡಿಸಲಾಗುವ ಸಾರ್ವಜನಿಕ ಭಾಷಣಗಳು, ಮತ್ತು ಹೇರಲಾಗುವ ಕಾಯಿದೆ, ಸಂಸ್ಥೆ, ನಿಯಮ ಮುಂತಾದವು ಬಹುಸಂಖ್ಯ ಮುಗ್ಧರನ್ನು ರಾಜಕೀಯ ವಶೀಕರಣಕ್ಕೆ ತುತ್ತಾಗಿ ಮಾಡುವ ಅಭ್ಯಾಸ ಎಂದಿನಿಂದಲೂ ನಡೆದು ಬಂದುದು; ಆದರಿಂದು ಅದು ಅತಿಯಾಗಿ ರೂಢಿಯಲ್ಲಿರುತ್ತದೆ. ಅಜ್ಞಪ್ರತಾರಣವನ್ನು ತಿಳಿದೋ ತಿಳಿಯದೆಯೋ ವಿಜ್ಞಾನಿಗಳೂ ಮಾಡುತ್ತಾರೆ, ಎಂಜಿನಿಯರರೂ ಮಾಡುತ್ತಾರೆ, ವೈಜ್ಞಾನಿಕ ತತ್ವಜ್ಞಾನಿಗಳೆಂಬವರೂ ಮಾಡುತ್ತಿದ್ದಾರೆ–ಎಂಬುದು ಸಿ.ಇ.ಎಂ. ಜೋಡನ "ಆಧುನಿಕ ವಿಜ್ಞಾನದ ತಾತ್ವಿಕ ಮುಖಗಳು" ಎಂಬ ಗ್ರಂಥದಲ್ಲಿ ಸ್ಪಷ್ಟವಾಗಿ ತೋರಿಸಲ್ಪಟ್ಟಿದೆ. ಜಾತಿಬಹಿಷ್ಕಾರ, ವ್ಯಕ್ತಿ–ಗೌರವ, ಗ್ರಂಥಗೌರವಗಳು ಕೇವಲ ಧಾರ್ಮಿಕ, ಮತೀಯ, ಪೌರಾಣಿಕಪ್ರಪಂಚಕ್ಕಷ್ಟೇ ಮೀಸಲಾಗಿಲ್ಲ. ಅಧಿಕೃತಾನಧಿಕೃತ ಸಾರ್ವತ್ರಿಕತೆ ಬಂಡವಾದೀಯ– ಸಾಮ್ಯವಾದೀಯ ರಾಷ್ಟ್ರಗಳೆರಡರಲ್ಲೂ ಬಲಿಷ್ಠ ಅಲ್ಪರ ಸ್ವಾರ್ಥಕ್ಕಾಗಿ ಅಪಸತ್ಯ, ಅಪಸೂತ್ರ, ಅಪಸಿದ್ಧಾಂತಗಳನ್ನೋ–ಅಧಿಕೃತ ಅಲ್ಪಸಂಖ್ಯರ ಸ್ವಾರ್ಥಕ್ಕೆ ಅನುಕೂಲವಾಗುವ ವ್ಯಾಖ್ಯಾನದ ಮೂಲಕ ಸತ್ಯ, ಸುಸೂತ್ರ, ಸುಸಿದ್ಧಾಂತಗಳನ್ನೋ–ಸಂಸ್ಥೆ ಹಾಗೂ ವ್ಯಕ್ತಿಗಳ ಮೂಲಕ ಪ್ರಚುರಪಡಿಸುವ ಪ್ರಯೋಗವು ಅಹಿಂಸಾತ್ಮಕ, ನಾಗರಿಕ, ಸುಸಂಸ್ಕೃತ ಪದ್ಧತಿ ಎಂದು

ವ್ಯಾಸಭಾರತ ಒಪ್ಪದು. ಅನ್ಯಾಯ–ನ್ಯಾಯ, ಸತ್ಯ–ಅಸತ್ಯ, ಉಪಕಾರ–ಅಪಕಾರಗಳನ್ನು ನಿರ್ಣಯಿಸುವ ಮಾನವಪರಂಪರಾಗತವಾದ ಮೂಲಭೂತವಿಶ್ವಸಾಮಾನ್ಯ ಧರ್ಮಗಳನ್ನೂ ಯದ್ವಾ ತದ್ವಾ ಪ್ರಶ್ನಿಸುವ ಅಪವೈಜ್ಞಾನಿಕತೆ ಆತ್ಮಜ್ಞಾನ ರಹಿತವೂ ಜನರಲ್ಲಿ ಆತ್ಮನಾಶಬುದ್ಧಿಯನ್ನು ಬಿತ್ತುವಂಥದೂ ಆಗಿದೆ.

## ಸಂಶಯ ಮತ್ತು ಧೈರ್ಯ

"ನಿತ್ಯಸಂಶಯಧನರಾಗಿಯೂ ಜನರು ಪ್ರಾಮಾಣಿಕ ವೀರತೆಯಿಂದ ಜೀವನದ ಸಮಸ್ಯೆಗಳನ್ನು (ಪಲಾಯನ ಸೂತ್ರವನ್ನು ಪಠಿಸದೆ) ಎದುರಿಸಬೇಕು" ಎಂಬಂಥ ಸಂದೇಶಗಳನ್ನು ಜಗತ್ತಿಗೆ ಸಾರುವ ರಸೆಲ್ಲನು ಗಣಿತಜ್ಞರಷ್ಟೇ ಆಗಿರಬಲ್ಲರಲ್ಲದೆ, ಜೀವನ ಸತ್ಯಜ್ಞರಾಗಿರಲಾರರು. ಸಂಶಯವು ಧೃತಿಹೀನತೆಯ ಲಕ್ಷಣ. ಧೃತಿಯು ಧೈರ್ಯಮೂಲ. ಧೈರ್ಯವು ತ್ರಿಕರಣಗಳ ಸರ್ವವ್ಯಾಪಾರಗಳಿಗೂ ಪ್ರೇರಕವಾದ ಉತ್ಸಾಹ, ಕಾರ್ಯಶಕ್ತಿ. ಹೃದ್‌ಬುದ್ಧಿಗಳ ವ್ಯಾಪಾರಗಳ ಪ್ರತ್ಯೇಕೀಕರಣವು ಜೀವನದಲ್ಲಿ ಎಂದೂ ಪರಿಪೂರ್ಣತೆಯನ್ನು ಆದ್ಯಂತವಾಗಿ ಕಾಣಲಾರದು; ಕಂಡೀತೆಂಬ ಸಾಧ್ಯತೆಯ ಕಲ್ಪನೆಯೊಂದು ಮೊಲದ ಕೊಂಬು–ಎಂಬುದನ್ನು ವಿಲ್‌ಡ್ಯೂರಾ ತೋರಿಸಿದ್ದಾನೆ.

ವಿಚಾರಾತೀತವಾದದ್ದೇ ವಿಚಾರ–ಅವಿಚಾರಗಳ ತಂದೆ, ಜೀವ–ಜಡಗಳಿಗೆ ಮೀರಿದ್ದೇ ಜೀವ–ಜಡಗಳ ಜನಕ, ಸದಸತ್ತುಗಳನ್ನು ಒಳಹೊರಗೂ ವ್ಯಾಪಿಸಿರುವ ಪದಾರ್ಥವೇ ಸದಸದ್‌ಭಾವಗಳು ನಮ್ಮ ಪ್ರತ್ಯಕ್ಷ, ಅನುಮತಿ, ಉಪಮಿತಿ, ಶಾಬ್ದ ಎಂಬ ಚತುರ್ವಿಧ ಅನುಭವಕ್ಕೆ ಗೋಚರವಾಗುವಂತೆ ಮಾಡುವ ಮೂಲ–ಎಂಬುದನ್ನು ಜೀವನವೇ ಪ್ರಮಾಣಿಸಿ ತೋರಿಸುತ್ತದೆ. ಮನೋವಿಜ್ಞಾನದ ಅತ್ಯಾಧುನಿಕ ಮಹಾವಕ್ತಾರನಾದ ಕಾರ್ಲ ಜಿ. ಯುಂಗ್ ಇದಕ್ಕೆ ಸಾವಿರ ತರ್ಕಸಮರ್ಥನೆಗಳನ್ನೂ ಪ್ರಯೋಗವೈಜ್ಞಾನಿಕ ನಿದರ್ಶನ ಸಿದ್ಧವಾದ ಸಾಕ್ಷಿಗಳನ್ನೂ ತನ್ನ ಗ್ರಂಥಗಳಲ್ಲಿ ವಿಸ್ತಾರವಾಗಿ ಬರೆದಿದ್ದಾನೆ.

ಬುದ್ಧಿಯು ಮುಂಮಿದುಳಿನ ಕೃತ್ಯವೆಂಬಷ್ಟೇ ಅರ್ಥವನ್ನು ಅಧರಿಸುವವರ ಅರ್ಥವು ಆ ಮಿದುಳಿನ ಕೃತ್ಯಗಳಷ್ಟೇ ನಶ್ವರ, ತಾತ್ಕಾಲಿಕ, ಕಾಲ್ಪನಿಕ–ಆದ್ದರಿಂದ ಚಿರಸ್ಥಾಯಿಯಾದ ಯಾವ ಕಾರ್ಯ, ಮೌಲ್ಯ, ಅನುಭವಗಳ ಬಗೆಗೂ ಅದು (ಸಮವ್ಯಾಪ್ತಿ ಹೀನತೆಯ ದೆಸೆಯಿಂದ) ತೀರ್ಮಾನ ಕೊಡಲಾರದು. ಅವಿಚಾರ, ಜಡ, ಅಸತ್ ಎಂಬ ಗುಣಗಳನ್ನುಳ್ಳ ಪದಾರ್ಥಗಳು (ದ್ರವ್ಯಗಳಲ್ಲವಾಗಿರಬಹುದು) ಲೋಕದಲ್ಲಿರುವುದು ಪ್ರತ್ಯಕ್ಷ–ವಿಜ್ಞಾನಗಳೆರಡಕ್ಕೂ ಗೊತ್ತಿರುವ ಸಂಗತಿ. ಹಾಗೇ ಅವೆಲ್ಲವನ್ನೂ ಸಂಪೂರ್ಣವಾಗಿ ಅಪಕಾರಿಗಳೆಂದು ತ್ಯಜಿಸಲೂ ಬರುವುದಿಲ್ಲ–ಎಂಬುದೂ ಇಂದ್ರಿಯ–ವಿಜ್ಞಾನ ಪ್ರಧಾನರಿಬ್ಬರಿಗೂ ಗೊತ್ತಿದೆ. ತದಿತರರಾದ ವ್ಯಾಸವಾದಿಗಳಿಗೆ ಅವೆಲ್ಲವೂ ಸರ್ವತ್ರ ಸದಾ ಉಪಕಾರಿಗಳೆಂದು ಗ್ರಹಿಸಲು ಸಾಧ್ಯವಿಲ್ಲವೆಂಬುದರಂತೆಯೇ ವಿಶಿಷ್ಟ ದೇಶ–ಕಾಲ–ಸಂದರ್ಭಗಳಲ್ಲಿ ಉಪಯುಕ್ತ ಅತ್ಯುಪಯುಕ್ತ ಎಂಬುದು ಗೊತ್ತು; ಅಷ್ಟೇ ಅಲ್ಲ; ವಿಚಾರ, ಜೀವ, ಸತ್ ಪದಾರ್ಥಗಳೂ ಅವುಗಳ ಕಲ್ಪನೆಗಳೂ ವಿಶಿಷ್ಟ ದೇಶ–ಕಾಲ–ಸಂದರ್ಭಗಳಲ್ಲಿ ನಿರುಪಯುಕ್ತವಾದದ್ದುಂಟು!

## ವ್ಯಾಸಗ್ರಾಸ

ವ್ಯಾಸಗ್ರಾಸವಾಗಿರುವ ಆಧುನಿಕ ತತ್ವಜ್ಞಾನಿಗಳಲ್ಲಿ ಬರ್ಟ್ರೆಂಡ್ ರಸೆಲ್ ಒಬ್ಬ. ಆತನ ಪೂರ್ವಗ್ರಹಗಳನ್ನು ಮೊದಲು ಹೇಳಿದರೆ ಇತರರ ಆಧುನಿಕ ಪೂರ್ವಗ್ರಹಗಳ ವಿಸ್ತಾರವನ್ನಿಲ್ಲಿ ಕಡಿಮೆ ಮಾಡಬಹುದು. ಭೌತಶಾಸ್ತ್ರೀಯ ಗಣಿತ ಮತ್ತು ಶರೀರಶಾಸ್ತ್ರಗಳ ಆಧುನಿಕ ನಿಗಮನಗಳು ಆತನ ಶ್ರುತಿ. ಮೊದಲನೆಯದರ ಮೂಲ ಕಲ್ಪನೆ "ದೇಶ–ಕಾಲ" ಎಂಬುದು. ಅದು ಅಮೂರ್ತ ಹಾಗೂ ಪ್ರತೀಕ ಲಕ್ಷ್ಯವೆಂಬುದೇ ರಸೆಲ್ಲನ ನಂಬಿಗೆ. ಮನುಷ್ಯರಿಗಾಗುವ ಬಾಹ್ಯಪ್ರಪಂಚದ ಜ್ಞಾನವೆಲ್ಲವೂ ಅಂಥದೇ ಎಂದಿದ್ದಾನವ. ಅಂದರೆ ಬಾಹ್ಯ ಪ್ರಪಂಚದ ಇಂದ್ರಿಯ ಗ್ರಾಹ್ಯತೆಗೆ ಬೆಲೆ ಬಹಳ ಕಡಿಮೆ, ಭೌತಶಾಸ್ತ್ರೀಯ ಗಣಿತ ಗ್ರಾಹ್ಯತೆಗೆ ಬಹಳ ಬೆಲೆ ಹೆಚ್ಚು ಅದೇ ಪರಮ ಸತ್ಯ–ಬಯಕೆ, ಭಾವನೆಗಳಿಗೆ ಸಂಬಂಧಿಸದ, ಆದುದರಿಂದಲೇ ಶುದ್ಧವಾದ, ಜ್ಞಾನ. ದೇಶ (ಅಥವಾ ಅವಕಾಶ)ವೂ ಕಾಲವೂ ಪಾರಿಮಾಣಿಕ (ಅಳತೆಯ ಜಾತಿಗೆ ಸೇರಿದಂಥವು). ದೇಶಕ್ಕೆ ಉದ್ದ, ಅಗಲ, ಎತ್ತರಗಳೆಂಬ ಮೂರು ಜಾತಿಯ ಅಳತೆಗಳಿದ್ದರೆ, ಕಾಲವೆಂಬುದಕ್ಕೆ ಒಂದೇ ಒಂದು ಅಳತೆ ಇದೆ; ಜಗತ್ತಿಗಿರುವುದು, ಹೀಗೆ, ನಾಲ್ಕು ಅಳತೆಗಳು, ಮಿಂಕೊವ್‌ಸ್ಕಿ, ಆಮೇಲೆ ಐನ್‌ಸ್ಟೀನ್, ಉಕ್ತ ವಿಚಾರದ ಜನಕರು.

ದೇಶದಲ್ಲಿ ಘಟನೆಗಳೂ ವಸ್ತುಗಳೂ ಇವೆ, ಕಾಲದಲ್ಲಿ ಬದಲಾವಣೆಗಳೂ ಚಲನಗಳೂ ಇವೆ. ದೇಶ–ಕಾಲವೆಂಬುದೊಂದು ಸಾಮಾನ್ಯರಚನೆ. ನಾಲ್ಕು ಅಳತೆಗಳನ್ನುಳ್ಳ ಈ ಜಗತ್ತಿನ ಘಟನೆಗಳ ಸಂಬಂಧದಿಂದ ಅದು ನಿಷ್ಕೃಷ್ಟವಾಗುತ್ತದೆ. ದೇಶ–ಕಾಲಗಳ ಒಂದುತನದ ದೆಸೆಯಿಂದ ಜಗತ್ತು ಮೂಲತಃ ಸ್ಥಾವರ–ಚಲಿಸದು, ಬದಲಾಯಿಸದು. ಅವು ಭಿನ್ನವೆಂದು ಎಣಿಸುವುದರಿಂದ (ಅಮೂರ್ತಕಲ್ಪನೆ ಮಾಡುವುದರಿಂದ) ಪದಾರ್ಥಗಳು ಚಲಿಸುವಂತೆಯೂ ಬದಲಾಯಿಸುವಂತೆಯೂ ತೋರುತ್ತವೆ.

ರಸೆಲ್‌ಉವಾಚದ ಪ್ರಕಾರ ಈ ಜಗತ್ತು ಸಾರತಃ ಘಟನಾಮಯ; ಅಂದರೆ ದ್ರವ್ಯ, ಗುಣಗಳಿಗಿಂತ ಕರ್ಮವು ಹೆಚ್ಚು ಮೂಲಭೂತ. ದ್ರವ್ಯವು ಕರ್ಮಸಂಘಾತಧರ್ಮ, ಕರ್ಮಗಳ ಸಮಾಹರಣದ ರೀತಿ. ಕರ್ಮಸಮಾಹಾರವೊಂದಕ್ಕೆ ಭೌತಿಕ ಗುಣಗಳಿವೆ. ಅವು ನಮ್ಮ ಲಕ್ಷ್ಯವನ್ನು ಸೆಳೆಯುತ್ತವೆ. ಅಂಥ ಕರ್ಮ ಸಮಾಹಾರಗಳನ್ನು ಮನುಷ್ಯನು ಪ್ರತ್ಯೇಕಿಸಿ ಗ್ರಹಿಸುವುದು ಕೇವಲ ಇಷ್ಟಾನುಸಾರ.

ಮಾನವನ ಮನಸ್ಸು ಕಲ್ಪನಾ ಜಾಲದ ಸ್ವರೂಪ ಉಳ್ಳದ್ದು. ಅದಕ್ಕೆ ಭೌತಿಕವಾದ ಮುಮ್ಮಿದುಳೇ ಆದಿ–ಮಧ್ಯ–ಅಂತ. ದ್ರವ್ಯ ಮತ್ತು ಮನಗಳ ಭೇದಗ್ರಹಣವು ಕೇವಲ ಅನುಕೂಲಸಿಂಧು ನ್ಯಾಯಕ್ಕೆ ಸೇರಿದ್ದು. ಆದುದರಿಂದ ಅವೆರಡೂ ಸಾರತಃ ಒಂದೇ. ಇದಕ್ಕೆ "ತಟಸ್ಥಾದ್ವೈತ"ವೆಂದು ವಿಲಿಯಂಜೇಮ್ಸ್ ಹೇಳಿದ ಹೆಸರು ಒಪ್ಪುತ್ತದೆ.

ಜಗತ್ತು ಕರ್ತೃ, ಕರಣ, ಅಧಿಕರಣಗಳಿಲ್ಲದ ಕರ್ಮಮಯ ಎಂಬ ಪದದ ಅರ್ಥ– ಎಂದು ರಸೆಲ್ ವಿವರಿಸುವುದು ಅವನ ಪ್ರಕಾರ ತತ್ವಜ್ಞಾನ ಅಥವಾ ಮೂಲಸತ್ಯಜ್ಞಾನ. ಇತರ ವಿವರಣೆಗಳು ಅವನ ಪ್ರಕಾರ (ಭೌತಶೋಧನಿಷ್ಠ) ಶುದ್ಧ ತಾರ್ಕಿಕವಲ್ಲ; ತರ್ಕಕ್ಕಿಂತ

ಹೆಚ್ಚಿನ ಜ್ಞಾನ ಸಾಧನವು ಮನುಷ್ಯಜಾತಿಗಿಲ್ಲ. ಈ ಅಂಶಗಳು ಮೂಲಸತ್ಯಕ್ಕೆ ಇತ್ತೀಚೆಗೆ ಹೋದ ಅತಿ ನಿಕಟವರ್ತಿಯಾದ ಹೆಜ್ಜೆ; ಮುಂದೆ ವಿಜ್ಞಾನವು ನಿಕಟತರವಾದ ಹೆಜ್ಜೆಯನ್ನು ಇದೇ ತರ್ಕಾನುಸಾರ ಇಡಬಹುದು!

ತನ್ನ ಸತ್ಯಶೋಧವು ಬಯಕೆ–ಭಾವನೆಗಳಿಂದ ತುಂಬಿದ ವ್ಯವಹಾರಗಳಿಗೆ ಅತೀತವೆಂದೂ ಅದೇ ತತ್ವಶೋಧದ ನ್ಯಾಯವಾದ ಗುರಿಯೆಂದೂ ರಸೆಲ್ ಹೇಳುತ್ತಾನೆ. ಸತ್ಯಶೋಧದ ಬಯಕೆಯೊಂದೇ ತತ್ವಶೋಧಕನಿಗೆ ಗ್ರಾಹ್ಯವಾದದ್ದೆಂದು ಪಟ್ಟು ಹಿಡಿದಿದ್ದಾನೆ.

ಈ ಹೇಳಿಕೆಗಳಲ್ಲಿಯ ತರ್ಕದೋಷಗಳು ಇಂತಿವೆ: ದೇಶ–ಕಾಲಗಳು ಬೇರೆಯೆಂದು ತಿಳಿಯುವುದು ತಪ್ಪೆನ್ನುತ್ತದೆ ಸಾಪೇಕ್ಷತಾವಾದ. ಅವು ಒಂದೆಂದರೆ ಜಗತ್ತು ತಟಸ್ಥ, ನಿಷ್ಕರ್ಮ, ನಿರ್ವಿಕಾರದ ಜಡ ಎಂಬ ಸಂಕೇತ ಗ್ರಾಹ್ಯ (ಪ್ರತೀಕ ವೇದ್ಯ) ಪದಾರ್ಥ. ರಸೆಲ್ಲನ ಹೂರಣ ಅದು. ಅದಕ್ಕೆ ಗುಣಿಸಿ ಭಾಗಿಸಿ ಕೂಡಿಸಿ ಕಳೆದು ತರ್ಕಮಾಡಲು ಬರುತ್ತದೆ. ಆ ತರ್ಕಕ್ಕೂ ಬಯಕೆ–ಭಾವನೆಗಳ ಅವಿಚಾರನಿಷ್ಠವರ್ತನೆಗೂ ಸಂಬಂಧವಿಲ್ಲ. ಆದರೆ ಅವನಿಗೆ ಐಚ್ಛಿಕವಾದರೂ ಚಂಚಲವಾದರೂ ವ್ಯವಹಾರ ನೀತಿನಿಷ್ಠವಾದ ಮಾನವತಾವಾದವು ಬಿಡಲಾರದ ಧರ್ಮ.

ಮಾನವ ವ್ಯವಹಾರವು ಸರ್ವಜನ ಸಾಧಾರಣವಾದ ಇಂದ್ರಿಯನಿಷ್ಠವಾದ ಮನೋದೈಹಿಕ ವ್ಯಾಪಾರ, ಸುಖ ದುಃಖ ಫಲದಾಯಕ, ಅದಕ್ಕೆ ರಸೆಲ್ಲನ ಜಡಾದ್ವೈತದ ಸಂಬಂಧ ಏನೂ ಇಲ್ಲ! ಜಡಾದ್ವೈತ ಜ್ಞಾನದ ಕುತೂಹಲವೆಂಬ ಭಾವನೆಗೆ ಅದು ತೃಪ್ತಿಯನ್ನುಂಟು ಮಾಡುತ್ತದೆ. ಇಂಥ ತೃಪ್ತಿಯು ಮನುಷ್ಯ ಜಾತಿಗೆ ಸರ್ವಸಾಧಾರಣವಾಗಿಲ್ಲ. ಅಂದಮೇಲೆ ರಸೆಲ್ಲನಂತಹ ಕುತೂಹಲಿಗಳಿಗಷ್ಟೇ ಅದು ಪ್ರಾಪಣೀಯ. ಜಾತಿಗಳೆಲ್ಲವೂ ಇರುವಾಗ ಅವುಗಳೆಲ್ಲವನ್ನೂ ಬಿಟ್ಟೆವೆಂದು ಹೇಳಿಕೊಂಡು ತಿರುಗುವವರ ಹೊಸ ಜಾತಿಗೇ ಪಂಥ ಸರಿಸಮ. ಮೋಕ್ಷ (ಅಸೀಮ ಸ್ವಾತಂತ್ರ್ಯ) ರಸೆಲ್ಲನ ಗುರಿಯಲ್ಲ. ಹೀಗಿರುವಾಗ "ವಿಶಿಷ್ಟ ಸತ್ಯಕ್ಕಾಗಿ ವಿಶಿಷ್ಟ ಸತ್ಯ" ಎಂಬ ಪಂಥವನ್ನವ ಹಿಡಿದ ಹಾಗಾಗುತ್ತದೆ. ಅದೊಂದು ಕುರುಡ ಹಿಡಿದ ಬಡಿಗೆ, ತಾನು ಕಂಡದ್ದಕ್ಕೆ ಮೂರೇ ಕೋಡು ಎಂಬಂತಹ ಹಠ ಅಥವಾ ಅಂಧವಾದ, ಅವ್ಯವಹಾರ ವಿಚಾರ ಪ್ರಣಾಲಿ. ಏಕೆಂದರೆ, ಸ್ವದೇಹೇಂದ್ರಿಯಗಳ ಅನುಭವಗಳನ್ನವ ಕಃಪದಾರ್ಥವೆಂದೂ ಭಾವಿಸುವ ಶಕ್ತಿಯನ್ನು ಜೀವನದಲ್ಲಿ ತೋರಿಸಿಲ್ಲ. ಆದುದರಿಂದ ಅವನದು "ಭೃಂಗದ ಬೆನ್ನೇರಿಬಂದ ಕಲ್ಪನಾ ವಿಲಾಸ"ವೆನ್ನಿಸುತ್ತದೆ– ವೇದಾಂತಿಗಳಿಗೂ ವ್ಯವಹಾರಸ್ಥರಿಗೂ!

## ರಸೆಲ್ಲನ ಘಟನಾ ಸ್ವರೂಪ

ಕಾಲದ ಅಳತೆಯು ಘಟನಾವಧಿಕ. ಜಗತ್ತು ಘಟನಾ (ಕರ್ಮ)ಮಯವಾದರೆ ಮತ್ತು ಘಟನೆಗಳ ವಿಂಗಡಣೆ ವ್ಯಕ್ತ್ಯಧೀನವಾದರೆ, ವ್ಯಕ್ತಿಗಳು ಭಿನ್ನರಾಗಿರುವಾಗ ಅವರಲ್ಲಿ ಘಟನೆಗಳ ವರ್ಗೀಕರಣದ ಬಗ್ಗೆ ಐಕಮತ್ಯವೆಂದೂ ಸಿದ್ಧಿಸದು. ರಸೆಲ್ಲನೊಂದು ಪ್ರತ್ಯೇಕ ಘಟನೆಯಾದುದರಿಂದ ಅವನು ಇತರ ಮಾನವರಿಂದ ಸಂಪೂರ್ಣವಾಗಿ

ವಿಶಿಷ್ಟನಾಗಬೇಕಾಯ್ತು. ವಿಶಿಷ್ಟನು ಸಾಮಾನ್ಯವೆಂದು ತನ್ನ ವಿಚಾರವನ್ನು ಹೇಳಲು ತರ್ಕಶುದ್ಧವಾಗಿ ಅನರ್ಹ. ಅವನ ಸಜೀವ ಚಟುವಟಿಕೆಗಳನ್ನು ಬೇಕಾದರೆ ಗ್ರಹಿಸಬಹುದು, ಬೇಡವಾದರೆ ಬಿಡಬಹುದು.

ಕಾಲ–ದೇಶಗಳು ವ್ಯವಹಾರತಃ ಭಿನ್ನ; ವ್ಯವಹಾರಾತೀತವಾದ ಗಾಣಿತಿಕ ಕಾಲದೇಶೈಕ್ಯದ ಘಟನಾತ್ಮಕ ಲೌಕಿಕಜ್ಞಾನವು ವ್ಯವಹಾರಕ್ಕೆ ಪ್ರತ್ಯಕ್ಷಾನುಭವದ ಮೌಲ್ಯಗಳ ದೃಷ್ಟಿಯಿಂದ ನಿರುಪಯೋಗಿ. ಅವ್ಯಾವಹಾರಿಕತೆಯನ್ನು ಲೌಕಿಕ ತತ್ವಜ್ಞಾನಕ್ಕೆ ಭೂಷಣವೆಂಬುದು ಅವ್ಯಾವಹಾರಿಕ. ವ್ಯವಹಾರಕ್ಕೆ ಅವ್ಯವಹಾರವು ಮೂಲಾಧಾರವಾದರೆ ತರ್ಕಕ್ಕೆ ಅಪತರ್ಕವು ಮೂಲಾಧಾರವಾಗಬೇಕಾಯ್ತು. ವ್ಯವಹಾರಾತೀತ ತರ್ಕವೂ ಅದರ ಸಿದ್ಧಾಂತವೂ ಅವ್ಯಾವಹಾರಿಕ. ಕಾಲ–ದೇಶಗಳ ಏಕವೆಂಬ ಕಲ್ಪನೆ ಗಣಿತ ಶಾಸ್ತ್ರೀಯ; ಅವುಗಳ ಅವಿನಾಭಾವಿತ್ವವು ಅವುಗಳ ಐಕ್ಯವನ್ನು ಸಾಧಿಸಲಾರದು. ನಿದ್ರೆ, ಸ್ವಪ್ನ, ಜಾಗರಗಳು ಪ್ರತ್ಯಕ್ಷ ನಿಷ್ಠ ತರ್ಕಸಿದ್ಧ ಸಾಮಾನ್ಯ ವ್ಯವಹಾರ ಸತ್ಯಗಳು. ಅವೆಲ್ಲವೂ ಯಥೇಷ್ಟವಾಗಿ ವ್ಯಕ್ತಿಯು ಪುರುಷತಂತ್ರದಿಂದ ವಿಭಜಿಸಿಕೊಂಡ ಕರ್ಮಸಾಮಾಹಾರಗಳಾದರೆ, ಇಷ್ಟಾಂತರವನ್ನು ತಾಳಿ ಆತನು ಅವುಗಳ ಏಕತ್ವವನ್ನು ಸಾಧಿಸಿಕೊಳ್ಳಬಹುದೆಂದಾಗುತ್ತದೆ. ಅಂಥ ಸಿದ್ಧಿ ರಸೆಲ್ಲನಿಗೇ ಆಗಿಲ್ಲ! ಉಳಿದವರಿಗೆ?

ಕಾಲ–ದೇಶಗಳಿಗೆ ಇಂದ್ರಿಯ ಗ್ರಾಹ್ಯತೆ ಇಲ್ಲ. ಅವು ಇಂದ್ರಿಯ ದೃಷ್ಟ ಘಟನಾ ಸಮುದಾಯಗಳಲ್ಲಿ ಮಾನವ ಮನಸ್ಸು ಕಲ್ಪಿಸಿಕೊಳ್ಳುವ ಕಲ್ಪನೆಗಳು. ಅವುಗಳ ಸಂಬಂಧಗಳೂ ಕಲ್ಪನಾವೇದ್ಯ. (ಕಲ್ಪನಾಶಕ್ತಿಯು ಕಲ್ಪಿಸಿದ ಸಾಮಾನ್ಯ ಭಾವಾಭಾಸ). ಕಲ್ಪನಾಶಕ್ತಿಯು ಜಗತ್ತೆಂಬ ಇಡಿ ಕರ್ಮವೊಂದನ್ನು ವಿಂಗಡಿಸದಿರೇನೇ ಅದಕ್ಕೆ ಕಾರ್ಯಕಾರಣಗಳ ಭೇದ ಸಂಬಂಧ ಅವಗತವಾಗಿ ಜೀವನ ವ್ಯವಹಾರ ಸುಗಮವಾಗುವುದು. ದೇಶ ಕಾಲಗಳು ಕಾರಣ, ಘಟನೆಯು ಕಾರ್ಯ. ಕಾರ್ಯ ಕಾರಣಾದ್ವೈತವು ಕಾರ್ಯ–ಕಾರಣಗಳೂ ಯಥೇಷ್ಟವಾಗಿ ವ್ಯಕ್ತಿಯು ವಿಂಗಡಿಸಿಕೊಂಡ ಪದಾರ್ಥಗಳಾದುದರಿಂದ ಲೋಕಪ್ರಜ್ಞೆಗೆ ಕಾಲ್ಪನಿಕ; ಆದುದರಿಂದ ರಸೆಲ್ಲನು ಕಾಲ–ದೇಶ ಸಮನ್ವಿತವಾದ ಘಟನೆ (Event) ಜಗತ್ಸಾರ (world stuff) ಎಂದು ನಿರ್ಧರಿಸಿರುವುದು ಅವನ ಜಡಾದ್ವೈತ ಕಲ್ಪನೆಯೊಡನೆ ಹೊಂದದು: ಸಮನ್ವಯವು ಅಭೇದವಲ್ಲ, ಅದ್ವೈತವಲ್ಲ. ಜ್ಞಾತೃ, ಜ್ಞಾನ, ಜ್ಞೇಯಗಳೆಲ್ಲವೂ ಬೇಕಾದರೆ ವಿಂಗಡಿಸಿಕೊಳ್ಳಬಹುದಾದ ಬೇಡವಾದರೆ ಬಿಡಬಹುದಾದ ಘಟನೆಗಳು, ಕಾರ್ಯಗಳು, ಬದಲಾವಣೆಗಳು, ಚಲನಗಳು! ಯಾವ ಘಟನೆಯೂ ವೈಯಕ್ತಿಕವಲ್ಲ, ವ್ಯಕ್ತಿಜ್ಞಾನ ನೀರಪೇಕ್ಷ, ಅವೈಯಕ್ತಿಕ, ಜಡ, ವಿಕಾಸಶೀಲ–ಎಂದಾಗ ಮತ್ತು ವಿಜ್ಞಾನದತ್ತವಾದ ರಚನಾಗುಣಗಳಾದ ಘನತ್ವ, ವಿಸ್ತರಣಶೀಲ, ಆಕಾರ, ಚಲನ, ವಿಶ್ರಾಂತಿ, ಸಂಖ್ಯೆಗಳು ವಸ್ತುಗಳ (ಘಟನೆಗಳ ಅಲ್ಲ) ಗುಣಗಳೆಂದಾಗ, ವಸ್ತುಗಳೆಲ್ಲವೂ ಘಟನಾ ಸ್ವರೂಪದವುಗಳಿರುವಾಗ ಅವು ಕರ್ಮಗುಣಗಳಾದಾವಲ್ಲದೆ ವಸ್ತುಗುಣಗಳಾಗಲಾರವು. ಕರ್ಮಕ್ಕೆ (ಇಡಿಗಾಗಲಿ, ಬಿಡಿಗಳಿಗಾಗಲಿ) ಘನತ್ವಾದಿ ಗುಣಗಳಿವೆ ಎಂಬುದು ಅದರ ಸ್ಥಿರತೆಯ ಕಲ್ಪನೆಯನ್ನಾಧರಿಸುತ್ತದೆ; ಆದರೆ ರಸೆಲ್ಲನ ಪ್ರಕಾರ ಒಂದು ಕರ್ಮಸಂಘಾತವು ಪ್ರತಿಕ್ಷಣ ಪರಿವರ್ತಿ. ಈಗ ಇದ್ದದ್ದು ಇನ್ನೊಂದು ಸೆಕೆಂಡಿನ ಅತಿ ಚಿಕ್ಕ ಭಿನ್ನರಾಶಿ ಕಾಲಾವಧಿಯಲ್ಲಿ

ಇನ್ನೊಂದಾಗುತ್ತದೆ! ಇದು ವಚನೀಯವಾದ ಅನಿರ್ವಚನೀಯತಾವಾದ; ಅನರ್ಥಕ ಅಥವಾ ವ್ಯರ್ಥಕ ಎನ್ನಿಸುವ ವಾಗ್ವಾದ! ಆದುದರಿಂದ ಜಾನ್ ಡ್ಯೂಯಿ ಹೇಳಿದಂತೆ ಅದು ಲಾರ್ಡ್ ಮನೆತನದವರ ಸೋಮಾರಿ ಕಲ್ಪನಾ ವಿಲಾಸವಲ್ಲದೆ ತತ್ವಶಾಸ್ತ್ರೀಯವಾದ ಸತ್ಯ ಸಂಸ್ಥಾಪನೆಯಲ್ಲ–ಆ ದಿಕ್ಕಿನಲ್ಲಿ ಮಾಡಿದ ಯೋಗ್ಯ ಪ್ರಯತ್ನವೂ ಅಲ್ಲ! ರಸೆಲ್ಲನ ಪ್ರಕಾರ ಕಾರ್ಯವು ಜ್ಞಾನವಲ್ಲ, ಜ್ಞಾನವು ಕಾರ್ಯವಲ್ಲ, ಕಾರ್ಯಜ್ಞಾನವು ನೇರವಾಗಿ ಕಾರ್ಯಕಾರಿಯಲ್ಲ; ಜೊತೆಗೆ ಕಾವ್ಯ ಮತ್ತು ಅದರ ಜ್ಞಾನ ಎಂಬೆರಡೂ ಕ್ಷಣಭಂಗುರವಾದ ಮಾನವ ಮನಗಳಿಂದೊಡಗೂಡಿದ ಜಗದ್ರೂಪದ ಕ್ರಿಯಾ ಸಂತಾನದ ಏಕಮೇವಾದ್ವಿತೀಯ "ಘಟನೆ"! ಸಂಖ್ಯೆಗಳಲ್ಲಿ ಒಂದನ್ನು ಇನ್ನೊಂದರಿಂದ ಗುಣಿಸಿ ಮೊದಲಿನ ಒಂದನ್ನು ಪಡೆವ ವಿಚಿತ್ರ ಪ್ರಯತ್ನವಿದು. ಇದರ ಯಾಂತ್ರಿಕತೆ, ನಿರ್ಜೀವತೆ, ಅಕಾರ್ಯ ಕಾರಿತ್ವಗಳು ಸ್ವಯಂ ಸ್ಪಷ್ಟ! ಈ ಗಣಿತವನ್ನು ಮುಂದಿನ ಗಣಿತವು ಖಂಡಿಸದೆ ಮುಂದುವರಿಸಿಕೊಂಡು ಹೋಗಿ ಜಗನ್ಮೂಲ ಸೂತ್ರವನ್ನು ಪತ್ತೆ ಹಚ್ಚುವುದೆಂಬುದು ದೃಷ್ಟಾಂತವಿಲ್ಲದ ಇಚ್ಛಾಚೋದಿತವಾದ ನಿರಾಧಾರ ಕಲ್ಪನಾಮೋಸ. ಇದನ್ನು ನಂಬಿ ಮಾನವನು ಮಾನವೀಯತೆಯನ್ನು ಅಳವಡಿಸಿಕೊಳ್ಳಲಾರ. ಇದರ ಅಮಾನವೀಯತೆಯು ದೈವಿಕತೆಯ ಪ್ರಕಾಶವುಳ್ಳದ್ದಲ್ಲ. ಅಪ್ರಕಾಶ ಸ್ವರೂಪದ ಅಮಾನವೀಯ ವಾದವು ಕಷ್ಟ, ನಷ್ಟ, ಅನ್ಯಾಯಗಳಲ್ಲಿ ತೊಳಲುತ್ತಿರುವ ಜಗದ ಬಹುಸಂಖ್ಯಾತ ಜನರಿಗೆ ಯಾವ ಪರಿಹಾರವನ್ನೂ ಸೂಚಿಸದು. ಇದು ಸತ್ಯದ ಒಂದು ಅಭಾಸ; ಇದರ ಸೌಂದರ್ಯ–ಉಪಯೋಗ–ಒಳಿತುಗಳು ಸಂದಿಗ್ಧ.

## ಜೈವಿಕ ಜ್ಞಾನ

ಜಗತ್ತು ಚಲನಾತ್ಮಕ, ಕ್ಷಣಭಂಗುರ, ಕರ್ಮಮಯ ಎಂದು ಹೇಳಿದರೆ ಆ ಚಲನಕ್ಕೊಂದು ಕಾರಣಬೇಕಾಯ್ತು. ಕಾರಣ ಹೇಳದಾಗ ಅದು ಸ್ವಾಭಾವಿಕ ಎನ್ನಬೇಕಾಯ್ತು. ಸ್ವಾಭಾವಿಕವಾಗಿ ಮೂಲತಃ ಒಂದೇ ಒಂದಾದ 'ಜಗತ್ತು' ಚಲನಾತ್ಮಕವೆಂದು ತೋರುತ್ತದೆ; ನಿಜವಾಗಿ ಅದು ಅಚಲ ಎಂದಾಗ ಅದರ ಸತ್ಯ ಮತ್ತು ಅದರ ಆಭಾಸ ಎಂಬೆರಡನ್ನು ವ್ಯವಹಾರಿ ವಿಂಗಡಿಸಿ ತಿಳಿದುಕೊಳ್ಳಬೇಕಾಯ್ತು. ಆಭಾಸಕ್ಕೆ ಜ್ಞಾತೃವಿನ ಮನಸ್ಸು ಮತ್ತು ಅದರ ನೆರವಿಗರಾದ ಪಂಚೇಂದ್ರಿಯಗಳು ಕಾರಣವೆಂದರೆ ಈ ಮನಃ ಪರಿವಾರವನ್ನೂ ಇತರ ಬಾಹ್ಯ ಜಗತ್ತಿನಿಂದ ಪ್ರತ್ಯೇಕಿಸಿದ್ದೂ ಅದೇ ಪರಿವಾರ ಎನ್ನಲಾಯ್ತು. ಒಂದನ್ನು ಹಲವೆಂದು ತಿಳಿದುಕೊಳ್ಳಲು ಕಾರಣವಾವುದು? ಆ ಕಾರಣವು ಭ್ರಮೆಯೋ ಕರ್ತೃ (ಜ್ಞಾತೃವು) ಭ್ರಮೆಯೋ ಜ್ಞಾನರೂಪದ ಜಗತ್ತಿನ ವೈವಿಧ್ಯವು ಭ್ರಮೆಯೋ ಜಗತ್ತಿನ ಮೂಲ ರೂಪವಾದ ಜಡಾದ್ವೈತವು ಭ್ರಮೆಯೋ? ಜ್ಞಾತೃವೇ ಭ್ರಮೆಯಾದರೆ ಜಡಾದ್ವೈತವಾದಕ್ಕೆ ಕೊನೆಯ ತಿಲತರ್ಪಣ ಬಿಡಬೇಕಾಗುತ್ತದೆ! ವೈವಿಧ್ಯ ಜ್ಞಾನಕಾರಣ (ಮನಃಪರಿವಾರ) ಭ್ರಮೆಯಾದರೂ ಹಾಗೆ! ಎಲ್ಲವೂ ವಿಕಾರ್ಯವಾದಾಗ ಅದದರ ಸತ್ಯತೆಯ ಕ್ಷಣಿಕತೆಗಳನ್ನು ವಿಭಜಿಸಿ ತಿಳಿದುಕೊಳ್ಳುವುದು ಭ್ರಮೆಯಾಗಿ ಹೋಗುತ್ತದೆ. ಈ ಕ್ಷಣಿಕ ಭ್ರಮೆ ತರಂಗಸಂತಾನದ "ವಿಜ್ಞಾನಗಳ" ಬೌದ್ಧತೆಯು ಇಂದ್ರಿಯ ಸಾಕ್ಷಿಗೆ ವಿರುದ್ಧ. ಜ್ಞಾತೃಜ್ಞಾನ–ಜ್ಞೇಯಗಳ ಐಕ್ಯಸ್ವರೂಪವು ಪ್ರತ್ಯಕ್ಷದಿಂದ ಬಾಧಿತ. ಪ್ರತ್ಯಕ್ಷವನ್ನಾಧರಿಸುವ

ತರ್ಕ (ಅನುಮಿತಿ) ಕೇವಲ ಕಲ್ಪನಾವಿಲಾಸ. ಆದುದರಿಂದ ದೇಶ–ಕಾಲಾದ್ವೈತದ ಅಚಲ ಜಡಸ್ವರೂಪವು ಜಾಗ್ರತ್–ಸ್ವಪ್ನ–ಸುಷುಪ್ತ ಮನಸ್ಸಿಗೆ (ಪ್ರಜ್ಞೆಗೆ) ಗೋಚರವಾಗುವುದಿಲ್ಲ. ಇನ್ನು ತುರೀಯವಾದ ಯೋಗಪ್ರಜ್ಞೆ ರಸೆಲ್ಲನ ಪ್ರಕಾರ ತರ್ಕಬಾಹಿರ. ಅಂದ ಮೇಲೆ ಗಣಿತ ತರ್ಕವು ಕೇವಲ ಗಾಣಿತಿಕ ಸತ್ಯ. ಅನುಭವದ ಸಾರಭಾಗವಿರುವುದು ಚೇತನಕ್ರಿಯೆಯಲ್ಲಿ; ಚೇತನವು ಕೇವಲ ಕಲ್ಪನಾಮಯವಲ್ಲ; ಹಾಗಾಗಿದ್ದರೆ ಸುಖದುಃಖಗಳ ಬಗ್ಗೆ ಮನುಷ್ಯ ಅನುಕೂಲ–ಪ್ರತಿಕೂಲ ಅನುಕ್ರಿಯೆಗಳನ್ನು ತೋರಿಸುತ್ತಿದ್ದಿಲ್ಲ. ತರ್ಕಪ್ರಜ್ಞಾವ್ಯಾಪೃತನಾದ ಮನುಷ್ಯನು ತನ್ನ ಪ್ರಾಣಶಕ್ತಿಯ ಫಲವಾದ ಭಾವನಾತರಂಗಗಳ ಸತ್ಯತೆಯ ಪ್ರಾಧಾನ್ಯವನ್ನೊಪ್ಪಿಕೊಂಡಲ್ಲದೆ ಅವನಿಗೆ ಜಗತ್ತಿಗೆ ಮಾನವತಾವಾದಾದಿ ಯಾವ ನೀತಿಯನ್ನು ಹೇಳಲೂ ಕಾರಣ ದೊರಕದು. ಬುದ್ಧಿಸತ್ಯ–ಭಾವನಾಸತ್ಯಗಳಿಗೆ ಸಂಬಂಧವಿಲ್ಲವೆಂಬ ವಾದವು ಐನ್‌ಸ್ಟೀನನ ಸರ್ವಸಾಪೇಕ್ಷತಾ ವಾದವನ್ನು ತತ್ವಶಾಸ್ತ್ರೀಯವಾಗಿ ಒಪ್ಪಿಕೊಂಡವನಿಗೆ ವಿರುದ್ಧವಾಗುತ್ತದೆ! ಅಂಥ ಇಲ್ಲದ ಸಂಬಂಧಗಳನ್ನು ಕಲ್ಪಿಸಿ ಜಗತ್ತಿನ ಸತ್ಯದ ಬಗ್ಗೆ ಪ್ರಾಚೀನ ಮಧ್ಯಯುಗೀನ ಯೂರೋಪಿಯ ತತ್ವಜ್ಞಾನಿಗಳೆಲ್ಲರೂ ಅಪತರ್ಕಮಾಡಿದರೆಂಬ ರಸೆಲ್ಲನ ಧಾರ್ಷ್ಟ್ಯವು ಅವನ ಇಚ್ಛಾವಿಲಾಸವಷ್ಟೇ ಆಗುತ್ತದೆ. ಈ "ಹಂ ಕರೇ ಸೋ ಕಾಯದಾ"ವನ್ನು ನಂಬಿದ ಆಧುನಿಕತೆಯ ವೈಜ್ಞಾನಿಕತೆ–ವಸ್ತುನಿಷ್ಠತೆಗಳ ಶಪಥಗಳ ದಾರ್ಢ್ಯ ಇಷ್ಟೇ. ಇದೊಂದು ಹೊಸಬಗೆಯ "ಆಣೆಹಾಕಿ" ಹೇಳುವ ರೀತಿ–ಅಷ್ಟೆ.

ವ್ಯಾಸನ ಚೈತನ್ಯಾದ್ವೈತವು ಚೈತನ್ಯಕ್ಕೆ (೧) ಕಾರ್ಯ ಕಾರಣ (೨) ಅಕಾರ್ಯ ಕಾರಣ, (೩) ಅಕಾರಣ ಕಾರ್ಯಗಳನ್ನು ತೋರಿಸುವ ಸಂಕಲ್ಪ ಶಕ್ತಿಯನ್ನು ಆಧರಿಸಿರುವುದರಿಂದ ಅದು ವಿವಿಧ ಮಾದರಿಗಳ ಉಪಾಹಿತ ಸ್ಥಿತಿಗಳಲ್ಲಿ ಮಾನವ ಪ್ರಜ್ಞೆ(ಮನಃಪರಿವಾದ)ಯ ವ್ಯವಸ್ಥೆಗಳನ್ನು ವಿವಿಧ ದೇಶಕಾಲಾವಧಿಗಳ ಅವಚ್ಛೇದಕ ನಿರ್ಮಾಣದಿಂದ ಅವುಗಳಲ್ಲಿಡಲು ಸಮರ್ಥವೆನ್ನುತ್ತದೆ. ಜಡ, ಜಡತರ, ಜಡತಮ ಹಾಗೂ ಸಚೇತನ ಜಡ, ಸಚೇತನತರ ಜಡ, ಸಚೇತನತಮ ಜಡ ಎಂದು ಮುಂತಾಗಿ ಮಾನವಾನುಭವವನ್ನು ವಿಂಗಡಿಸುವ ಸಂಕಲ್ಪಶಕ್ತಿಯು ಮಾನವನಿಗೆ ಆ ಚೈತನ್ಯ ಕೊಟ್ಟಿದೆ ಎಂಬುದನ್ನು ಹೇಳುವುದು ತರ್ಕಶುದ್ಧವಾಗುತ್ತದೆ. ಹಾಗೇ ಚೈತನ್ಯವು ಸಂಕಲ್ಪಶಕ್ತಿಯುಕ್ತವೆನ್ನುವುದು ಪ್ರತ್ಯಕ್ಷ ನಿದರ್ಶನಗಳಿಂದ ಸಿದ್ಧ; ಜಡಕ್ಕೆ ಸಂಕಲ್ಪಶಕ್ತಿ ಇರುವುದು ಪ್ರತ್ಯಕ್ಷಬಾಧಿತ. ಪ್ರತ್ಯಕ್ಷ (ಇಂದ್ರಿಯಗೃಹೀತ ಸಂವೇದನೆ+ಸ್ಮೃತಿ+ಬುದ್ಧಿಕ್ರಿಯೆ) ದಂತೆಯೇ ಪರೋಕ್ಷ, ಅಪರೋಕ್ಷಗಳೂ ಮಾನವರಲ್ಲಿ ವಿವಿಧ ಸ್ಮೃತಿ (ಸಂಸ್ಕಾರ) ಉಳ್ಳವರಿಗೆ ವಿವಿಧವಾಗುವುದರ (ದ್ವೈತಾದ್ವೈತ ವಿಶಿಷ್ಟಾದ್ವೈತಗಳ) ಕಾರಣವು ಪರಬ್ರಹ್ಮವೆಂಬ ಚೈತನ್ಯದ ಅದ್ವಿತೀಯವಾದ ಮೂಲ ಸಂಕಲ್ಪಶಕ್ತಿಯಿಂದಲೇ ಎಂಬುದು ಕೂಡ ಸುಸಮನ್ವಿತ. ಜಗತ್ತಿನ ಅನುಭವಕ್ಕೆ ಕಾಲಪ್ರಜ್ಞೆ, ದೇಶಪ್ರಜ್ಞೆಗಳು ಅನಿವಾರ್ಯವಾದ(ಉಪಾಹಿತ) ಕಾಲ್ಪನಿಕ ಅವಚ್ಛೇದಕಗಳು. ಇವುಗಳ ಕಲ್ಪನಾಭೇದವು ಜೀವಿಗಳಲ್ಲಿ ವ್ಯಕ್ತಿವಿಶಿಷ್ಟವಾದ ವ್ಯಕ್ತಿನಿಷ್ಠವೂ ಸರ್ವವ್ಯಕ್ತಿಗಳಿಗೆ ಸಾಧಾರಣವಾದಾಗ ವಸ್ತುನಿಷ್ಠವೂ ಆಗುತ್ತದೆ. ವಸ್ತುನಿಷ್ಠತೆಗಿರುವ ಅನುಭವಿಕ ದಾರ್ಢ್ಯವು ವ್ಯವಹಾರದಲ್ಲಿ ವ್ಯಕ್ತಿನಿಷ್ಠತೆಗಿಲ್ಲವೆಂಬುದು ಅಬಾಧಿತ ಸಾಮಾನ್ಯಾನುಭವ.

## ಮನೋವ್ಯಾಪಾರ ಮತ್ತು ತತ್ವಗ್ರಹಣ

ಇಚ್ಛೆ, ಭಾವನೆಗಳು ಅತ್ಯಂತ ಶೂನ್ಯಬುದ್ಧಿ (ಶೂನ್ಯಗ್ರಹಣ ಶಕ್ತಿ)ಯುಳ್ಳವುಗಳೆಂಬುದು ಮಾನಸಶಾಸ್ತ್ರ ಮತ್ತು ಅನುಭವ ಹಾಗೂ ಸಾಪೇಕ್ಷತಾ ತರ್ಕಗಳಿಗೆ ವಿರುದ್ಧ. ತಾರ್ಕಿಕ ಸತ್ಯತೆಯು ತರ್ಕಾನುಕೂಲಕ್ಕಾಗಿ ಮಾತ್ರ–ಎಂಬುದನ್ನು ವೈಶೇಷಿಕರ "ವಿಶೇಷ" ಪದಾರ್ಥದ ಕಲ್ಪನೆಯು ತೋರಿಸಿಕೊಟ್ಟಿದೆ. ಮನಸ್ಸಿನ ಕೃತ್ಯತ್ರಯವಿಭಾಗವು ತರ್ಕದ ಅನುಕೂಲ ಸಿಂಧುನ್ಯಾಯವನ್ನಷ್ಟೇ ಆಶ್ರಯಿಸಿದೆ. ಸರ್ವತಂತ್ರ ಸ್ವತಂತ್ರವಾದ (ಸರ್ವಾರ್ಥತಃ ಪರಿಪೂರ್ಣವಾದ ನಿರುಪಾಧಿಕ ವ್ಯಾಪ್ತಿಯುಳ್ಳ) ಇಚ್ಛೆ, ಭಾವನೆ. ಬುದ್ಧಿಗಳ ಪದಾರ್ಥತ್ರಯದ ಕಲ್ಪನೆ ಕೇವಲ ತರ್ಕೋಪಕಾರಕ, ಜೀವನೋಪಕಾರಕವಲ್ಲ. ಎಲ್ಲ ತರ್ಕವೂ "ಪದಸ್ಯ ಅರ್ಥಃ ಪದಾರ್ಥಃ" ಎಂದೂ "ಅಭಿಧೇಯತ್ವಂ ಪದಾರ್ಥತ್ವಂ" ಎಂದೂ ಪ್ರಾರಂಭವಾಗುವುದರಿಂದ ಅದರ ಪದಸತ್ಯತೆ ಅತಿರೇಕಕ್ಕೆ ಹೋದಾಗ "ವಂಧ್ಯಾಪುತ್ರ" ದಂಥ ಆಶ್ರಯಾಸಿದ್ಧ ಊಹೆಗಳಿಗೆಡೆಗೊಡುತ್ತದೆ. ಸರ್ವತಂತ್ರ ಸ್ವತಂತ್ರ ಸಂಕಲ್ಪಶಕ್ತಿಯುಳ್ಳ ಬ್ರಹ್ಮಚೈತನ್ಯದ ಆಶ್ರಯತ್ವವು ತರ್ಕಸಿದ್ಧವಲ್ಲ; ಆದರೆ ಅದನ್ನು ಬಿಟ್ಟು ಮಾಡುವ ತರ್ಕನಿರ್ಣಯಗಳು ಬಹಳವಾಗುವುದರಿಂದ ತ್ರಿಕರಣಗಳಲ್ಲಿ ಅರಾಜಕತೆಯು ಅವ್ಯವಸ್ಥೆಯುಂಟಾಗಿ ಅರ್ಜುನ ವಿಷಾದಯೋಗವೆಂಬ ಅತ್ಯಂತ ಹಾನಿಕರವಾದ ಮನೋವ್ಯಾಧಿಗೆ ಮಾನವ ತುತ್ತಾಗುವುದನ್ನು ತೀವ್ರವಾದ ಆಪತ್ಕಾಲಗಳು ಅವನಿಗೆ ಸಾಕ್ಷಾತ್ಕರಿಸಿ ಕೊಡುತ್ತವೆ. ಆಪತ್ತಿಲ್ಲದಾಗ ಎಲ್ಲರೂ ಕಲ್ಪನಾಸಂಪನ್ನರಾಗಿ "ಊಹೆ ಕೂಡಾ ಊಹಿಸಿಯೂ ತನ್ನ ತಾನೇ ನಂಬದು" ಎಂಬ ಗೀತವನ್ನು ವಾದವೆಂದು ಚಲಾಯಿಸಬಹುದು. ಸಮಗ್ರ ಮನುಷ್ಯ ವ್ಯಕ್ತಿಗೆ (ಮನ, ಇಂದ್ರಿಯ ಸಮೇತವಾದ ದೇಹತ್ವವುಳ್ಳ ಅಹಂಕಾರಿಗೆ) ಅವುಗಳು ಅಸ್ತ–ವ್ಯಸ್ತವಾಗುವಂತೆಸಗುವ ಆಘಾತ ಉಂಟಾದಾಗ ಅವನ ಊಹೆಗಳ ಔದಾರ್ಯ, ವಿಸ್ತಾರ, ಜಟಿಲತೆ ಅಥವಾ ಸರಳತೆ, ಸಂಕೀರ್ಣತೆಗಳ ಪ್ರಚಾರಸತ್ಯವನ್ನು ಅವನೇ ಬಿಟ್ಟುಬಿಡಬೇಕಾಗುತ್ತದೆ!

ಪ್ರಪಂಚದಲ್ಲಿ–ಅತಿ ಅರ್ಥವೈಷಮ್ಯದ ದೆಸೆಯಿಂದ ಉಳ್ಳವರು, ಇಲ್ಲದವರೆಂಬ ವರ್ಗಗಳಿರುವವರೆಗೆ ಮಾರ್ಕ್ಸ್‌ವಾದದ ಸಾರ ಭೂತಾಂಶವು ಅಬಾಧಿತ; ಹಾಗೇ ಭೌತಿಕ ಆವರಣಗತವಾದ ಶಕ್ತಿಗಳ ಕೃಪೆಗೆ ಪಾತ್ರರಾದವರು, ಆಗದವರು ಎಂಬೆರಡು ವರ್ಗಗಳಿರುವವರೆಗೆ ಕಾಕದಂತಗವೇಷಣ ತರ್ಕ ಮತ್ತು ವಾಸ್ತವಿಕ ತರ್ಕ ಎಂಬೆರಡೂ ಪ್ರಸ್ಥಾನಗಳು ನಿತ್ಯ ಶತ್ರುಗಳಾಗಿ ಉಳಿಯುವುದೆಂಬ ದೇವಾಸುರ ಸಂಪದ್ವಿಭಾಗದ ಗೀತಾವಾದವು ಅಬಾಧಿತ.

## ನಿಗಮನ

ಸಮಾಜವ್ಯವಸ್ಥೆ, ರಾಜ್ಯವ್ಯವಸ್ಥೆ ಮತ್ತು ಲೋಕಸತ್ಯಗಳ ಬಗೆಗೆ ಹಿಂದಿನಿಂದ ಈ ವರೆಗೆ ನಡೆದ ವಿಚಾರ ಮಂಥನದಿಂದ ಕಂಡು ಬರುವ ಅಂಶಗಳನ್ನು ಸಂಗ್ರಹಿಸಿ ಚರ್ಚಿಸುವ ಹಾಗೂ ನಿಗಮನಿಸುವ ಪ್ರಯತ್ನವು ಭಾರತದಲ್ಲೀಗ ಕಾಲೋಚಿತವೆಂದು

ತಿಳಿಯಬಹುದು. ಇದು ನಮ್ಮ ವರ್ತಮಾನ ಸ್ಥಿತಿಗಳಿಗೆ ಆಧಾರವಾದ ಸದ್ಯೋಭೂತದ ಅವಲೋಕನ. ಈ ವರ್ತಮಾನವು ನಮ್ಮ ಮುಂದಿನ (ಭವಿಷ್ಯ) ಸ್ಥಿತಿಗೆ ಆಧಾರವಾಗುತ್ತದೆ. ಭೂತ–ಕೃತದ ಭೋಗವು ವರ್ತಮಾನಕ್ಕಾದರೆ, ವರ್ತಮಾನ ಕೃತದ ಭೋಗವು ಭವಿಷ್ಯತ್ಕಾಲಕ್ಕೆ. ದೇಶ ವಿದೇಶಗಳ ಮಹಾಚಿಂತಕರ ವಿಚಾರಗಳು ಆಯಾ ದೇಶ ಕಾಲಗಳಿಗೆ ಪರಿಸೀಮಿತವಾಗಿರುವುದೇ ಹೆಚ್ಚಾದರೂ ಅವುಗಳಲ್ಲಿ ಕೆಲವು ಸಾರ್ವದೇಶಿಕ, ಸಾರ್ವಕಾಲಿಕವಾಗಬಲ್ಲ ಬೀಜರೂಪದಲ್ಲಿರುವುದರಿಂದ ಅಂಥವುಗಳ ಪರಾಮರ್ಶೆಯು ವರ್ತಮಾನಕ್ಕೆ ಪ್ರಯೋಜನಕರ. ದೇಶಕಾಲಗಳ ಸ್ಥಿತಿಗತಿಗಳ ಪೂರ್ವಾಪರ ದರ್ಶನವು ಲೋಕ ಜೀವನದ ಆರೋಗ್ಯ ಲಾಭಕ್ಕೆ ಕಾರಣವಾಗದಿರದು. ಚಿಂತನೆಗಳ ಹೋಲಿಕೆ, ವಿರೋಧಗಳು ಭಾರತದ ದೃಷ್ಟಿಯಿಂದ ಲಾಭಾಲಾಭ ಸೂತ್ರಾನುಸಾರವಾಗಿ ವಿಮರ್ಶೆಗೆ ತುತ್ತಾಗುವುದು ಉಚಿತ.

ವರ್ಣಧರ್ಮವು ಜಾತಿಧರ್ಮವಾಗಿ ಮತ್ತು ರಾಜಪ್ರಭುತ್ವವು ಪ್ರಜಾಪ್ರಭುತ್ವವಾಗಿ ಪರಿಣಮಿಸಿದ್ದೂ ಆರ್ಯ ಸಂಸ್ಕೃತಿಯ ಜೊತೆಗೆ ಇಸ್ಲಾಂ ಮತ್ತು ಕ್ರೈಸ್ತ ಸಂಸ್ಕೃತಿಗಳು ಬಂದು ಸೇರಿಕೊಂಡದ್ದೂ ಪೌರಾಣಿಕತೆಗೆ ವಿರುದ್ಧವಾಗಿ ವೈಜ್ಞಾನಿಕತೆ ಹೋರಾಡಲು ನಿಂತದ್ದೂ ಭಾರತದಲ್ಲೀಗ ಎದ್ದು ಕಾಣುವ ದೃಶ್ಯಗಳು. ಭಾರತದ ಇತಿಹಾಸವು ಇಸ್ಲಾಂ ಪ್ರವೇಶಿಸುವವರೆಗೆ ಪರಸಂಸ್ಕೃತಿಯ ಪಿತ್ರಾರ್ಜಿತಗಳೊಡನೆ ಇಲ್ಲಿಗೆ ಬಂದವರನ್ನು ಸಾಂಸ್ಕೃತಿಕವಾಗಿ ಸಾತ್ಮ್ಯಗೊಳಿಸಿಕೊಳ್ಳಲು ಶಕ್ತವಾಯಿತು. ಆದರೆ ಕ್ರಿ.ಶ ೭೧೨ರಲ್ಲಿ ರಾಜ್ಯಶಕ್ತಿಯನ್ನು ಇಸ್ಲಾಮಿಲ್ಲಿ ಪಡೆದ ಬಳಿಕ ಇಸ್ಲಾಂ ಸಂಸ್ಕೃತಿಯು ಸಹಜೀವಿಯಾಯಿತು. ಆಮೇಲೆ ೧೫೧೦ರಷ್ಟು ಹೊತ್ತಿಗೆ ಹೆಚ್ಚಾಗಿ ವ್ಯಾಪಿಸತೊಡಗಿದ ಕ್ರೈಸ್ತ ಸಂಸ್ಕೃತಿಯೂ ರಾಜ್ಯಶಕ್ತಿಯನ್ನು ಪಡೆದು ತನ್ನ ಪ್ರತ್ಯೇಕತೆಯಿಂದ ಸಹಜೀವಿಯಾಯಿತು.

ಭಾರತದ ಇಂದಿನ ಸಂಸ್ಕೃತಿ ಹೀಗೆ ತ್ರಿವರ್ಣ ಉಳ್ಳದ್ದಾಗಿದೆ. ಈ ವರ್ಣಗಳು ಪರಸ್ಪರವಾಗಿ ಕೊಡುಕೊಳ್ಳುವುಗಳ ಮೂಲಕ ಒಂದಾಗಲು ಒಂದೇ ಒಂದು ಪ್ರಕಾರದಲ್ಲಿ ಸಮನ್ವಿತವಾಗಲು ಪ್ರಯತ್ನಿಸುತ್ತ ಬಂದವು; ಆದರೆ ಅವುಗಳಿಗೆ ಪರಿಪೂರ್ಣತೆ ಈ ಪ್ರಯತ್ನದಲ್ಲಿ ಇನ್ನೂ ಸಿದ್ಧಿಸಲಿಲ್ಲ. ಬ್ರಿಟಿಷ್‌ಯುಗದಿಂದ ನಡೆದು ಬಂದ ಉದಾರ ಶಿಕ್ಷಣ ನೀತಿಯು ಈ ಪ್ರಯತ್ನಕ್ಕೆ ಕೆಲಮಟ್ಟಿಗೆ ಪೋಷಣೆಕೊಟ್ಟಿತು. ಆದರೂ ಈ ವಿಶಾಲವೂ ವಿವಿಧವೂ ಆದ ಭೌಗೋಳಿಕ ಐತಿಹಾಸಿಕ ಅಂಶಗಳಿಂದ ಕೂಡಿದ ಮಹಾದೇಶದಲ್ಲಿ ಎಣಿಸಿದ ಮಟ್ಟದ ಧರ್ಮ (ಸಂಸ್ಕೃತಿ) ಸಮನ್ವಯವನ್ನದು ಸಾಕಷ್ಟು ಸಮರ್ಥವಾಗಿಯೂ ತೀವ್ರಗತಿಯಿಂದಲೂ ಸಾಧಿಸಿಕೊಡಲಿಲ್ಲ. ದಿವಂಗತ ಮಹಾತ್ಮಾ ಗಾಂಧಿಯವರು ಭಗವದ್ಗೀತೆ, ಕುರಾನ್ ಮತ್ತು ಬೈಬಲ್ಲುಗಳ ಸಾಧಾರಣಾಂಶಗಳನ್ನು ಪ್ರಚುರ ಪಡಿಸುವಲ್ಲಿ ಮುಂದಾದರು. ಅನಂತರ ಅಂಥ ಪ್ರಯತ್ನವಿಲ್ಲಿ ಆ ಪ್ರಕಾರ ಮುಂದುವರಿಯಲಿಲ್ಲ. ಮುಖಂಡರಲ್ಲಿ ಕೆಲವರು ಆಗೀಗ ಭಾವೈಕ್ಯದ ಕರೆಕೊಟ್ಟು ನೋಡಿದರು. ಆದರೆ ಅದು ಸಫಲವಾದುದು ಸಾಕಷ್ಟು ತೃಪ್ತಿಕರವಾಗಲಿಲ್ಲ.

ಪ್ರಜ್ಞಾವಂತ ಭಾರತೀಯರಿಂದು ಮರಣೋತ್ತರ ಜೀವನದ ಬಗೆಗಿನ ಭಿನ್ನಸಿದ್ಧಾಂತಗಳಿಗೆ ಅತಿಮಹತ್ವವನ್ನು ಕೊಡುವ ಪ್ರದರ್ಶನಬುದ್ಧಿಯನ್ನು ತ್ಯಜಿಸಿದರೆ, ಅದು ಆಯಾವ್ಯಕ್ತಿಯ ಖಾಸಗಿ ವಿಷಯವೆಂದು ಬಿಟ್ಟುಕೊಟ್ಟು ಚಿಂತನಕ್ಕಾರಂಭಿಸಿದರೆ, ಲೋಕಜೀವನವಿಲ್ಲಿ ಸ್ನೇಹ–ಸಹಕಾರಗಳ ಭದ್ರವಾದ ತಳಪಾಯದ ಮೇಲೆ ರಾಷ್ಟ್ರೀಯವಾಗಿ ಸಾಗಲು ಯಾವ ವಿಘ್ನವೂ ಉಂಟಾಗದು. "ಮೋಕ್ಷ–ಸ್ವರ್ಗಗಳ ಪ್ರಾಪ್ತಿ ಇಹ ಜೀವನವು ನ್ಯಾಯ ನೀತಿಗಳಿಂದ ಸಾಗಿದಾಗ ಮಾತ್ರ" ಎಂಬ ಅಂಶವು ಸರ್ವ ಸಂಸ್ಕೃತಿ ಸಾಧಾರಣವಾಗಿರುವಾಗ, ಮತೀಯ ಹಾಗೂ ಜಾತೀಯ ಗುಂಪುಗುಳಿತನವು ಹಿಂದುಳಿಯುವಿಕೆಯ ಲಕ್ಷಣ. ಮತೀಯ ಹಾಗೂ ಜಾತೀಯ ವ್ಯವಹಾರಗಳಲ್ಲಿ ಭಿನ್ನ ಭಿನ್ನ ಗುಂಪುಗಳಾಗಿರುವ ಭಾರತೀಯರು ಸಾಮಾಜಿಕ, ರಾಜಕೀಯ, ಆರ್ಥಿಕ ವ್ಯವಹಾರಗಳಲ್ಲಿ ಶುದ್ಧ ರಾಷ್ಟ್ರೀಯರಾಗಲು ಕಲಿಯಬೇಕಾಗಿದೆ. ಮತಸಂಬಂಧವೂ ಜಾತಿಸಂಬಂಧವೂ ರಾಷ್ಟ್ರಸಂಬಂಧಕ್ಕೆ ವಿರುದ್ಧವಾಗದಂತೆ ನಡೆದುಕೊಳ್ಳಲು ಸಂಕಲ್ಪಿಸಲು ನಮ್ಮ ಧರ್ಮ ಶಾಸ್ತ್ರಗಳೂ ರಾಜನೀತಿಶಾಸ್ತ್ರಗಳೂ "ವರ್ಣಿಗಳಿಗೂ ಲಿಂಗಿಗಳಿಗೂ (ಹಿಂದು ಹಾಗೂ ಇತರ ಎಲ್ಲರಿಗೂ) ಸಾಮಾನ್ಯ" ಎಂದು ಹೇಳಿದ ಶಾಶ್ವತ ನೀತಿಸೂತ್ರಗಳ ಅಥವಾ ಆತ್ಮಗುಣಗಳ ಜಾಗತಿಕತೆಯನ್ನು ಚೆನ್ನಾಗಿ ಮಂದಟ್ಟುಮಾಡಿಕೊಳ್ಳುವುದಗತ್ಯ; ಅವೇ ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹಗಳು. ಮಹಾಭಾರತ ಇವುಗಳನ್ನು–

**"ಧೃತಿಃ ಕ್ಷಮಾದಮೋಸ್ತೇಯಂ ಶೌಚಮಿಂದ್ರಿಯನಿಗ್ರಹಃ**

**ಧೀರ್ವಿದ್ಯಾಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ–**

ಧೃತಿ, ಕ್ಷಮೆ, ದಮ, ಕಳದಿರುವಿಕೆ, ಒಳಹೊರ ಶುಚಿತ್ವ, ಪಂಚೇಂದ್ರಿಯಗಳ ಹಸಿವುಗಳನ್ನು ಹಿಡಿತದಲ್ಲಿಟ್ಟುಕೊಳ್ಳುವುದು, ವಿಶಾಲ ಬುದ್ಧಿಯನ್ನು ತಾಳುವುದು, ವಿದ್ಯಾಸಂಪತ್ತನ್ನು ಹೆಚ್ಚಿಸಿಕೊಳ್ಳುವುದು, ಸತ್ಯವನ್ನು ತ್ರಿಕರಣಗಳಿಂದ ಪಾಲಿಸುವುದು, ಕೋಪಾವೇಶವಶರಾಗದಿರುವುದು–ಎಂದು ಹತ್ತು ಮಾಡಿ ಹೇಳಿದೆ. ಮತೀಯ ಅಥವಾ ಜಾತೀಯ ಆಚಾರಗಳಲ್ಲಿ ವಿರೋಧ ಕಂಡುಬಂದಲ್ಲೆಲ್ಲಾ ಉಕ್ತ ಪಂಚಮಹಾಶೀಲಗಳಿಗೆ ಎಲ್ಲೂ ಎಂದೂ ಭಂಗ ಬಾರದಂತೆ ನಡೆದುಕೊಂಡಾಗ ಭಾರತೀಯ ಸಂಸ್ಕೃತಿಯು ಮೂರು ಒಳ ಪ್ರಕಾರಗಳನ್ನುಳ್ಳ ಒಂದೇ ಒಂದು ಮಹಾಪ್ರಕಾರ ಲಕ್ಷಣದ್ದೆನ್ನಿಸುವುದು.

ಆಧ್ಯಾತ್ಮಿಕ ಮೂಲವುಳ್ಳ (ಅಧಿಯಜ್ಞ–ಅಧಿದೈವಗಳು ಅಧ್ಯಾತ್ಮದ ಅಪರಾವತಾರಗಳು) ಈ ಮಹಾಶೀಲಗಳ ಗಡಿಗೆರೆಯೊಳಗೇ ವಿವಿಧ ಭಾರತೀಯ ವೃತ್ತಗಳು ತಮ್ಮ ಅಂತರ್ಮತೀಯ, ಅಂತರ್ ಜಾತೀಯ, ಅಂತಃ ಸಾಮಾಜಿಕ, ಅಂತರಾರ್ಥಿಕ ಮತ್ತು ಅಂತಾರಾಜಕೀಯ ವ್ಯವಹಾರಗಳನ್ನು ನಡೆಸಿಕೊಂಡು ಹೋಗಬೇಕೆಂಬುದೇ ಈ ರಾಷ್ಟ್ರದ ಲೌಕಿಕತೆಯ ಸಾರಭೂತವಾದ ಅಂಶ. ನಮ್ಮ ಕಾಯದೆಗಳೂ ಕೋರ್ಟು ಕಚೇರಿಗಳೂ ಹೋಗಲು ಯತ್ನಿಸುತ್ತಿರುವುದು ಈ ಹಾದಿಯಲ್ಲಿ ಎಂಬುದನ್ನು ಬಹಳ ಜನರು ಇನ್ನೂ ಚೆನ್ನಾಗಿ ಅರಿತು ಅರಗಿಸಿಕೊಂಡು ತಮ್ಮ ವೈಯಕ್ತಿಕ ಹಾಗೂ ಸಾಮೂಹಿಕ ಚಟುವಟಿಕೆಗಳ ಸ್ವರೂಪಗಳನ್ನು ತಿದ್ದಿಕೊಳ್ಳಬೇಕಾಗಿದೆ.

ಲೋಕಸತ್ಯದ ಮೂರು ಪ್ರಧಾನವಾದ ಅಂಗಗಳೆಂದರೆ ಸಾಮಾಜಿಕ ಸಾರ್ವಜನಿಕತೆ, ರಾಜಕೀಯ ಸಾರ್ವಜನಿಕತೆ ಮತ್ತು ಇಂದ್ರಿಯ ಪ್ರತ್ಯಕ್ಷದ ಸಾರ್ವಜನಿಕತೆ. ಈ ಮೂರು ಸಾರ್ವಜನಿಕತೆ (ಭಾರತೀಯತೆ)ಯನ್ನು ಕಾಯಲು ಉಕ್ತ ಪಂಚಮಹಾಶೀಲಗಳು ಅನುಲ್ಲಂಘನೀಯವಾದ ತಾರಕಶ್ರುತಿಗಳೆಂದು ಎಲ್ಲರೂ ಭಾವಿಸಬೇಕು. ಪುನರ್ಜನ್ಮ, ಪರಲೋಕ, ದೇವರುಗಳ ಬಗೆಗಿನ ನಂಬಿಗೆಗಳಿಗೆ ಖಾಸಗಿತನವಿರುವುದು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಅವುಗಳಿಗೂ ಉಕ್ತ ೩ ಸಾರ್ವಜನಿಕತೆಗಳಿಗೂ ಯಾವ ಘರ್ಷಣಕ್ಕೂ ಆಸ್ಪದವಿಲ್ಲ. ಈ ನಂಬಿಗೆಗಳು ಪ್ರತ್ಯಕ್ಷಾತೀತವಾಗಿರುವುದು ಲೋಕ ಜೀವನದಲ್ಲಿ ಅವುಗಳ ವೈಯಕ್ತಿಕತೆ–ಖಾಸಗಿತನಗಳನ್ನು ಸ್ಥಾಪಿಸುತ್ತದೆ. ಜೊತೆಗೆ ಎಲ್ಲ ಮತಗಳಲ್ಲೂ ದೇವರು ಮಹತ್ತಮ ವ್ಯಾಪ್ತಿಯುಳ್ಳವನೆಂಬುದನ್ನು ಒಪ್ಪಿರುವುದರಿಂದ ವ್ಯಕ್ತಿಯು ತನ್ನ ವೈಯಕ್ತಿಕ ವರ್ತನೆಯನ್ನು ಯಾವಾಗಲೂ ಮಹತ್ತರ–ಮಹತ್ತಮ ವ್ಯಾಪ್ತಿಯುಳ್ಳ ಸಾರ್ವಜನಿಕವರ್ತನೆಗೆ ಅವಿರುದ್ಧವಾಗಿರುವಂತೆ ನೋಡಿಕೊಳ್ಳುವ ಆದರ್ಶಶೀಲವು ಸರ್ವಗ್ರಾಹ್ಯವಾಗುತ್ತದೆ. ಈ ಆದರ್ಶದ ಆಚರಣೆಯೇ ಇಹದಲ್ಲಿ ನಮ್ಮ ಸತ್ಯದರ್ಶನ, ಶುಭದರ್ಶನ, ಸೌಂದರ್ಯದರ್ಶನ ಮತ್ತು ಉಪಯುಕ್ತತೆಯ ದರ್ಶನ. ಲೋಕದಲ್ಲಿ ಕೇವಲ ವಸ್ತುನಿಷ್ಠ ಅಸ್ತಿತ್ವದ ದೃಷ್ಟಿಯಿಂದ ಒಂದು ಪದಾರ್ಥವನ್ನು ನೋಡುವ ಮನಃಪ್ರಣಾಲಿಯು ಸತ್ಯ; ಅದನ್ನು ಕೇವಲ ಕಲಾದೃಷ್ಟಿಯಿಂದ ನೋಡುವ ಮನಃಪ್ರಣಾಲಿಯು ಸೌಂದರ್ಯ, ಪರೋಪಕಾರ ದೃಷ್ಟಿಯಿಂದ ನೋಡುವುದು ಶುಭ, ಶಿವ, ಸತ್ ಮತ್ತು ಭೌತಿಕ ಅವಯವಗಳ ಬಳಕೆಯ ಸಾಧನತ್ವವನ್ನು ಅನ್ವಯಿಸಿ ನೋಡುವುದು ಉಪಯುಕ್ತತೆ. ಇಹ ಜೀವನದ ಈ ಚತುರ್ಮುಖಗಳಲ್ಲಿ ಯಾವುದೂ ಶುದ್ಧವಲ್ಲ, ಕೇವಲವಲ್ಲ, ಪರಿಪೂರ್ಣವಾಗಿಲ್ಲ, ಪರಸ್ಪರ ನಿರಪೇಕ್ಷವಾಗಿಲ್ಲ; ಇಂಥ ಪಾಶ್ಚಾತ್ಯ ವಿಂಗಡಣೆ ಅನುಕೂಲಸಿಂಧು ನ್ಯಾಯವನ್ನು ಆಧರಿಸಿದೆ; ಆಯಾ ಮುಖದ ಸಾಪೇಕ್ಷ ಪ್ರಾಧಾನ್ಯವನ್ನು ಸಂದರ್ಭಾನುಸಾರವಾಗಿ ಎತ್ತಿ ಹಿಡಿಯುತ್ತದೆ–ಆದರೀನಾಲ್ಕೂ ಸಾರ್ವಜನಿಕತೆಯ ಮಟ್ಟದಲ್ಲಿ ಸಮರ್ಥವಾಗುವಷ್ಟು ವೈಯಕ್ತಿಕತೆಯ ಮಟ್ಟದಲ್ಲಿ ಸಮರ್ಥವಾಗಲಾರವು. ಹಾಗೇ ತಮ್ಮ ಪರಿಪೂರ್ಣಮಟ್ಟದಲ್ಲಿ ಅವು ನಾಲ್ಕು ಹೋಗಿ ಒಂದೇ ಆಗಿ ಅತೀಂದ್ರಿಯತ್ವದಲ್ಲಿರುವುದು ಎಂಬುದು ಅತಿಭೌತ ತತ್ವಜ್ಞಾನ.

ದೇವರು ಅಥವಾ ಅವಿಜ್ಞಾತವಾದ ನಿತ್ಯಾಧಾರ:–

i) ಲೋಕಸತ್ಯ (ಸತ್ಯ)

ii) ಕಲಾಸತ್ಯ (ಸೌಂದರ್ಯ)

iii) ಸಮಾಜಸತ್ಯ (ಶಿವ,ಶುಭ)

iv) ಭೌತಲಾಭಸತ್ಯ (ಪ್ರಯೋಜನ, ಉಪಯೋಗ).

ಈ ನಾಲ್ಕನ್ನು ಧರ್ಮಾರ್ಥಕಾಮಗಳೆಂದು ಮೂರರಲ್ಲಿಯೇ ಅಡಕಗೊಳಿಸಿ ಹೇಳುವುದು ನಡೆದು ಬಂದ ಭಾರತೀಯ ದಾರಿ.

# ಉಪಸಂಹಾರ

"ಯೋಗಸ್ಥಃ ಕುರು ಕರ್ಮಾಣಿ" ಎಂಬುದು ವ್ಯಾಸನ ಕರ್ಮಸಂದೇಶ, ಕೈಲಾಸವನ್ನು ಭೂಮಿಯಲ್ಲಿ ತೋರಿಸುವ ಕಾಯಕಧರ್ಮ. ಯೋಗವೆಂದರೆ ಸುಖ–ದುಃಖಗಳಿಗೆ ಸಮಪ್ರಾಧಾನ್ಯವನ್ನು ಕೊಡುವ ಬುದ್ಧಿ. ಸುಖ–ದುಃಖಗಳು ದೇಹೇಂದ್ರಿಯಮನಸ್ಸುಗಳಲ್ಲಿ ಉಂಟಾಗುವ ವಿಕಾರಗಳು. ಭೇದ ಮೂಲವಾದ ಪ್ರಪಂಚದಲ್ಲಿ ವಿಕಾರ–ವಿಕಾರ್ಯ–ವಿಕಾರಿಗಳಿರುವುದು ಸಹಜ. "ಅಪ್ಯರ್ಥ ಕಾಮೌ ತಸ್ಯಾಸ್ತಾಂ ಧರ್ಮಏವ ಮನೀಷಿಣಃ" ಎಂಬುದು ಯೋಗ ಮನಸ್ಕತೆಯ ಕಾಳಿದಾಸವಿವರಣೆ. ಧಾರ್ಮಿಕತೆಯ ನಿಜವಾದ ಅರ್ಥವೆಂದರೆ ಸುಪ್ರೀಂ ಕೋರ್ಟಿನ ಮುಖ್ಯನ್ಯಾಯಾಧೀಶನ ಮನೋಧರ್ಮ, ಪ್ರತಿಕ್ಷಣವೂ ಆದರ್ಶ ನಿಷ್ಪಕ್ಷಪಾತ ಬುದ್ಧಿಯಿಂದ ಪರರಿಗೆ ನ್ಯಾಯವಾಗುವಂತೆ ನಡೆದುಕೊಳ್ಳುವ ಮನಃ ಪ್ರಣಾಳಿ. ಇದರ ಮುಂದೆ ಯಾವ ವೈಜ್ಞಾನಿಕ ವಸ್ತುನಿಷ್ಠತೆಯೂ ಅಧಿಕ ಮೌಲ್ಯವುಳ್ಳದ್ದೆನ್ನಿಸದು. ಏಕೆಂದರೆ, ಇದೇ ಸಮ್ಯಕ್+ನ್ಯಸ್ತ+ಬುದ್ಧಿ–ಸಂನ್ಯಸ್ತಬುದ್ಧಿ; ಸುಖ ದುಃಖಗಳ ಸಮನ್ಯಾಸವೇ ಸಂನ್ಯಾಸ; ಅದು ನಿಷ್ಕಾಮನಿಗೆ ಮಾತ್ರ ಸಾಧ್ಯ.

ದೇವರ್ಷಿ ಪಿತೃಋಣಗಳ ಮೂರ್ತಿಯೇ ಮಾನವನೆಂಬುದು ವ್ಯಾಸ ದೃಷ್ಟಿ. ಅವುಗಳನ್ನು ಮೀರಿದ ಸ್ವತಂತ್ರಾಂಶ ಮಾನವನಲ್ಲಿಲ್ಲ. ಮನಸ್ಸು ಬುದ್ಧಿ, ಜೀವಶಕ್ತಿ, ಚಿತ್ತ, ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳನ್ನು ತುಂಬಿಕೊಂಡಿರುವ ಶರೀರದ ಅಹಂಕಾರವೇ ಮಾನವ. ಈ ಆರೂ ದೇವರ್ಷಿ ಪಿತೃಗಳಿಂದಲೇ ಉಂಟಾದಂಥವುಗಳು. ಜೀವಶಕ್ತಿಯು ದೇವದತ್ತ, ಜ್ಞಾನಶಕ್ತಿಯು ಋಷಿದತ್ತ ಮತ್ತು ಮಿಕ್ಕ (ಸಂಸ್ಕೃತ) ಜಡಶಕ್ತಿ ಪ್ರಕಾರಗಳೆಲ್ಲವೂ ಪಿತೃದತ್ತ. ಸತ್ತವರಷ್ಟೇ ಪಿತೃಗಳಲ್ಲ–ನಮಗಿಂತ ಮೊದಲು ಹುಟ್ಟಿದ ಸಹಜೀವಿಗಳೆಲ್ಲರೂ ಪಿತೃಪ್ರತೀಕದಿಂದ ಗೃಹೀತರು–ಅವರ ಮೊತ್ತವೇ ಪಾರಂಪರಿಕ ಸಮಾಜ. ದೇವರ್ಷಿಪಿತೃದಾನಗಳ ಪರಿಮಾಣ–ಪ್ರಕಾರಗಳು ವ್ಯಕ್ತಿಯ ಜ್ಞಾತಾಜ್ಞಾತವಾದ ಭೂತಕಾಲೀನ ಕರ್ಮದ ಫಲಕ್ಕೆ ತಕ್ಕಂಥವು. ಸಂಪೂರ್ಣವಾಗಿ ಅಹಂಕಾರವಿಲ್ಲದವನಿಗಷ್ಟೇ ಕರ್ಮ ಫಲ ಭೋಕ್ತೃತ್ವವಿಲ್ಲ; ನಿರಹಂಕಾರಿಯು ಜೀವನ್ಮುಕ್ತ. ಕರ್ಮವು ವಿಕಲ್ಪ, ವಿಕಾರ, ಪರಿಣಾಮ, ಪರಿವರ್ತನ, ಭೇದಮೂಲ, ಕಾಲದೇಶಾಧೀನ ಕಾರಣ–ಕಾರ್ಯ–ಫಲಗಳೆಂದು ತ್ರಿಧಾ ವಿಭಕ್ತ, ಮೂರ್ತದ್ರವ್ಯಾವಲಂಬಿ (ಸಾಕಾರಸ್ಥ) ಮತ್ತು ಕರ್ತ್ರಾದಿ ಕಾರಕ ಸಂಬಂಧಗಳನ್ನೂ ಸ್ವ–ಸ್ವಾಮಿ ಭಾವಾದಿ ಶೇಷಸಂಬಂಧಗಳನ್ನೂ ಉಳ್ಳದ್ದು. ಅಹಂಕಾರವೇ ಅದರ ಕರ್ತೃ; ನಾನೊಬ್ಬ ಪ್ರತ್ಯೇಕ ಜೀವನೆಂಬ ಪ್ರಜ್ಞೆಯೇ ಅಹಂಕಾರ. ಅದಕ್ಕೆ ಸ್ವಾತಂತ್ರ್ಯದ (ಕರ್ತೃತ್ವದ) ಆಭಾಸವು ಸಕಾಮಕರ್ಮದ ಅವಧಿಯಲ್ಲಿ ವ್ಯಾಪಕವಾಗಿರುತ್ತದೆ; ಅದೇ ಅವಿದ್ಯೆ. ಕರ್ಮವು

ಅನಿತ್ಯ; ಅದರಲ್ಲಿ ಲೀನತೆ ಹೊಂದುವ ಅಹಂಕಾರಕ್ಕೆ ನಿತ್ಯತೆಯೆಂದೂ ಸಿದ್ಧಿಸದು; ನಿತ್ಯ ವಸ್ತುವಾದ ಆತ್ಮ(ಬ್ರಹ್ಮ)ದಲ್ಲಿ ಲೀನಹೊಂದುವುದೊಂದೇ ಅದಕ್ಕೆ ನಿತ್ಯತೆಯನ್ನು ಅನುಭವಕ್ಕೆ ತಂದುಕೊಡಬಲ್ಲದು.

ಸಕಾಮು ಕರ್ಮದಲ್ಲಿ ಪ್ರತಿಕ್ಷಣವೂ ಕರ್ತೃಪ್ರಜ್ಞೆಯು ತಲ್ಲೀನವಾಗಿದ್ದರೆ (ಕರ್ಮಲೀನವಾಗಿದ್ದರೆ) ಮಾತ್ರ ಅದು ಯಶಸ್ವಿಯಾಗುವುದು. ನಿಷ್ಕಾಮ ಕರ್ಮದಲ್ಲಿ ಅಥವ ನಿವೃತ್ತಕರ್ಮದಲ್ಲಿ ವೈಯಕ್ತಿಕ ಕರ್ತೃತ್ವದ ಪ್ರಜ್ಞೆ ಜಾಗರಿತವಾಗಿರುವುದೇ ಇಲ್ಲ. Impersonalism ಅವೈಯಕ್ತಿಕತೆ ಎಂದು ಹೇಳಬಹುದಾದ ಭಾವದಿಂದ ವ್ಯಕ್ತಿಯು ಏನುಮಾಡಿದರೂ ಅದು ಪರಕರ್ಮ, ಹರಿಕರ್ಮ, ಬ್ರಹ್ಮಕರ್ಮ, ಆತ್ಮಕರ್ಮ, ಸರ್ವಕರ್ಮ, ಸಮಷ್ಟಿ ಕರ್ಮ ಎಂಬ ಫಲಿತ ಸ್ವರೂಪವನ್ನು ತಾಳುತ್ತದೆ. ಇದು ಯೋಗ ಅಥವಾ ಕರ್ಮದಲ್ಲಿ ಮಾನವ ತೋರಿಸಬೇಕಾದ ಕೌಶಲ. ಇಂಥ ಕರ್ಮಕೌಶಲವೆಂದರೇನೆಂಬುದನ್ನು ತಿಳಿಯದವರೂ ತಿಳಿದುಕೊಳ್ಳಲು ಬಯಸದವರೂ ತಿಳಿದ ಮೇಲೂ ಆಚರಣೆಯಲ್ಲಿ ತಂದು ಕೊಳ್ಳದವರೂ ವೇದಾಂತವನ್ನು ಬರೆದಿಟ್ಟು ಅಥವಾ ಇಡಬಹುದಾದ ಹಾಳೆಗಳಿಗೆ ಸಮಾನರು. ಅರಸಿಕರಲ್ಲಿ ಕವಿತ್ವವನ್ನು ನಿವೇದಿಸುವುದೂ ಒಂದೇ, ಅಹಂಕಾರ ರಸಿಕ (ಪ್ರಿಯ)ರಲ್ಲಿ ವೇದಾಂತವನ್ನು ನಿವೇದಿಸುವುದೂ ಒಂದೇ.

ಅಮುಕ್ತನ ನಿರಹಂಕಾರ ಸಾಧನೆಗೆ ಅನನ್ಯವಾದ ಬ್ರಹ್ಮ(ಆತ್ಮ) ಚಿಂತನವು ಅನಿವಾರ್ಯ ಸಾಧನ. ಬ್ರಹ್ಮಧ್ಯಾನಿಗಳಿಗಷ್ಟೇ Missionary Spirit ಸಮರ್ಪಣಭಾವದಿಂದ ದೇಶಸೇವೆ ಮಾಡಲು ಸಾಧ್ಯ; ಅವರಿಗೇ ನಿಷ್ಕಾಮಕರ್ಮವನ್ನು ದಕ್ಷತೆಯಿಂದ ಮಾಡಲು ಶಕ್ಯ. ಬ್ರಹ್ಮಜ್ಞಾನಿಗಳಿಗಂತೂ ಅದು ನೀರುಕುಡಿದ ಹಾಗೆ. ವಿವೇಕಾನಂದ–ಪರಮಹಂಸ ಮುಂತಾದವರು ದೃಷ್ಟಾಂತಗಳಾಗಿದ್ದಾರೆ. ಅನೇಕ ಭಕ್ತಿ–ಕರ್ಮಸಾಧಕರು ದೈವಕರ್ತೃತ್ವ ಭಾವದಿಂದ ಲೋಕೋಪಕಾರ ಮಾಡಿದ್ದಾರೆ; ಆ ಮೂಲಕ ಶುದ್ಧಬುದ್ಧಿಯನ್ನು ಹೊಂದಿ ಕ್ರಮಶಃ ಬ್ರಾಹ್ಮೀಸ್ಥಿತಿಯನ್ನು ಸಾಧಿಸಿಕೊಂಡಿದ್ದಾರೆ. ಅಂಥವರನ್ನು ಆದ್ಯಂತವಾಗಿ ಹೊರಗಿಟ್ಟು ಆಲಕ್ಷಿಸಿ ರಾಜಕೀಯ, ಆರ್ಥಿಕ, ಶೈಕ್ಷಣಿಕ ವ್ಯವಹಾರಗಳನ್ನು ನಡೆಯಿಸುವ ನೇತೃತ್ವವುಳ್ಳ ದೇಶವು ಅಂತಃಕಲಹಗಳ ದೆಸೆಯಿಂದಲೇ ಅಂತಾರಾಷ್ಟ್ರೀಯ ಹಾಗೂ ಅಂತಾರಾಜ್ಯಕೀಯ ಸಂಬಂಧಗಳಲ್ಲಿ ಸೋಲುತ್ತದೆ, ನಷ್ಟ ಅನುಭವಿಸುತ್ತದೆ, ಪ್ರಜೆಗಳು ಅಪ್ರಗತಿಮುಖರಾಗುವುದು ಸಾಂಸ್ಕೃತಿಕವಾಗಿ ಕಂಡುಬರಲು ಕಾರಣವಾಗುತ್ತದೆ. "ವನೌಕಸೋಽಪಿ ಸಂತೋ ಲೌಕಿಕಜ್ಞಾವಯಂ" ಎಂದೂ "ನ ಖಲು ಕಶ್ಚಿದವಿಷಯೋನಾಮ ಧೀಮತಾಂ" ಎಂದೂ ಕಾಳಿದಾಸನು ವ್ಯಾಸಮತವನ್ನು ಅನುವಾದಿಸಿದ್ದಾರೆ.

ಆರ್ತ, ಜಿಜ್ಞಾಸು, ಅರ್ಥಾರ್ಥಿ ಮತ್ತು ಜ್ಞಾನಿ ಎಂಬ ನಾಲ್ಕು ವರ್ಗಗಳ ದೇವೋಪಾಸಕರಿರುವುದು ವ್ಯಾಸೋಕ್ತ. ಆದರೆ ಈ ನಾಲ್ಕು ವರ್ಗಗಳಲ್ಲಿ ೪ನೆಯ ವರ್ಗದವರ ದೇವೋಪಾಸನೆಯೊಂದೇ ಸಂಪೂರ್ಣ ಸಾರ್ಥಕವಾದುದು. ಜ್ಞಾನಿಯ ದೇವರು ನಿರಾಕಾರ, ಇತರರ ದೇವರು ಸಾಕಾರ; ಒಬ್ಬ ಪರ, ಇನ್ನೊಬ್ಬ ಅಪರ; ಒಬ್ಬ ಗುಣೋತ್ತರ, ಇನ್ನೊಬ್ಬ ಗುಣಮಯ, ಗುಣಗಳು ಉಪಾಧಿಗಳು, ಅವಚ್ಛೇಧಕಗಳು–Qualities qualify or delimit

a thing, abstract or concrete. ಗುಣೋತ್ತರನು ಗುಣಾತೀತ, ಆದರೆ ಗುಣಾಧಾರ. ಗುಣಗಳು ತಮ್ಮ ಭಿನ್ನಗುಣತ್ವದ ಪ್ರಕಾರ ಅವಚ್ಛಿನ್ನವಾದ ಸಾದಿ–ಸಾಂತ ಪದಾರ್ಥಗಳು. ಆದುದರಿಂದ ಗುಣಾತೀತ ಬ್ರಹ್ಮನೊಬ್ಬನೇ ಅನಾದ್ಯನಂತ, ಅನಶ್ವರ, ನಿತ್ಯ ಅಥವಾ ಕಾಲಾತೀತ. ಬ್ರಹ್ಮೋಪಾಸನೆಯು ಜೀವಾತ್ಮನ ಬ್ರಹ್ಮಾತ್ಮಕತೆಯ ಜಾಗರದ ಸಾಧನ; ಉಪಾಸನೆ ಇಲ್ಲಿ ನಿಧಿಧ್ಯಾಸ.

ಪರಬ್ರಹ್ಮನನ್ನಾಧರಿಸಿದ, ತದಂತರ್ಗತವಾದ ಅಪರಬ್ರಹ್ಮನು ಗುಣಮಯವಾದ ಪ್ರಪಂಚದ ಗುಣೇಶ್ವರ. ಗುಣವು ಕಾರ್ಯದ ಸುಪ್ತಶಕ್ತಿ, ಕಾರ್ಯವು ಗುಣದ ಪ್ರಕಟರೂಪ, ದ್ರವ್ಯ ಅದರ ಕಲ್ಪಿತಾಧಾರ; ಕ್ಲಪ್ತಿಯು ಅವಚ್ಛಿನ್ನತೆ, ಭಿನ್ನತೆ, ವಿಭಕ್ತತೆ, ಪ್ರತ್ಯೇಕತೆ–ಎಂಬುದು ವಿಜ್ಞಾನಸಿದ್ಧ, ಗಣಿತ ಸಿದ್ಧ, ತರ್ಕಸಿದ್ಧ, ಅನುಭವ ಸಿದ್ಧ. ಕ್ಲಪ್ತಿ ಅಥವಾ ಕಲ್ಪನೆ ಅಮೂರ್ತ; ಅಮೂರ್ತವು ಅಮಾನಸಿಕವಾದಾಗ ಅನವಚ್ಛಿನ್ನ. ಮಾನಸಿಕವು ಸ್ಪಷ್ಟ, ಖಚಿತ, ಸೀಮಿತ, ಅವಚ್ಛಿನ್ನ; ಅಪೂರ್ಣ ಮಾನಸಿಕವು ಅವ್ಯಾವಹಾರಿಕ ಮತ್ತು ಅಪಾರಮಾರ್ಥಿಕ–ಅರ್ಥಾತ್ ಪ್ರಾತಿಭಾಸಿಕ. ದೇಶಕಾಲಗಳೇ ಮೂಲ ಕಲ್ಪಕಗಳು, ಅವೇ ವ್ಯಷ್ಟಿಯ ಅವಿದ್ಯೆ, ಸಮಷ್ಟಿಯ ಮಾಯೆ. ಗುಣೇಶ್ವರನೇ ಮಾಯೇಶ್ವರ. ಮಾಯೆಯೇ world stuff ಜಗತ್ಪದಾರ್ಥ ಅಥವಾ ತ್ಯತ್. ತದ್ರೂಪದ (ಸದ್ರೂಪದ) ದೇವರು ನಿತ್ಯ, ತ್ಯದ್ರೂಪದ ದೇವರು ಅನಿತ್ಯ. ತ್ಯತ್ತೇ "ಆರ್ತ", ತುಚ್ಛ" "ಪ್ರಕೃತಿ". ಅನಿತ್ಯಫಲಾಶಿಗಳು ಮಾಡುವುದು ಅನಿತ್ಯ ದೇವಾರಾಧನೆ, ನಿತ್ಯಫಲಾಶಿಗಳು ಮಾಡುವುದು ನಿತ್ಯದೇವಾರಾಧನೆ. ಆರ್ತನಲ್ಲಿ ಮಾನಸ ಐಶ್ವರ್ಯದ ಕೊರತೆ, ಜಿಜ್ಞಾಸುವಿನಲ್ಲಿ ಜ್ಞಾನವೆಂಬ ಐಶ್ವರ್ಯದ ಕೊರತೆ, ಅರ್ಥಾರ್ಥಿಯಲ್ಲಿ ಭೌತಿಕ ಐಶ್ವರ್ಯದ ಕೊರತೆ ಇರುತ್ತವೆ. ಜ್ಞಾನಿಯಲ್ಲಿ ಜ್ಞಾನದ ಕೊರತೆಯಿಲ್ಲ, ಮಾನಸಿಕ–ಭೌತಿಕ ಕೊರತೆಗಳು ಅವನಿಗೆ ಅಲಕ್ಷ–ಅವು ಅವನಿಗೆ ಅಸಂಪ್ರಜ್ಞಾತ. ಅವನೇ ದೇವ, ಅವನ ಉಪಾಸನೆಯು ಆತ್ಮಪ್ರಜ್ಞಾಜಾಗರ, ಬ್ರಹ್ಮಾತ್ಮಕತೆಯ ಎಚ್ಚರ. ನಿತ್ಯಕ್ಕೆ ಕಾರ್ಯ, ಕಾರಣ, ಫಲಗಳೆಲ್ಲವೂ ಒಂದೇ–ಅವಿಕಾರ್ಯತೆಯ ದೆಸೆಯಿಂದ.

ಉಕ್ತ ಐಶ್ವರ್ಯಾರ್ಥಿಗಳು ವ್ಯಕ್ತಿ ಭೇದವಾದಿಗಳು, ವ್ಯಕ್ತಿ ಸ್ವಾರ್ಥ ಪ್ರಧಾನರು; ವ್ಯಕ್ತಿತ್ವವು ವ್ಯಕ್ತತೆ, ಸ್ಪಷ್ಟತೆ, ಅವಚ್ಛಿನ್ನತೆ, ಆದಿ ಮಧ್ಯಾಂತವಂತಿಕೆ. ಬ್ರಹ್ಮಾಹಂಕಾರವೆಂಬುದು ಸ್ವಯಂವ್ಯಾಹತವಾದುದು–ಅನುಭವ ಕಾಲದಲ್ಲಿ; ಆದರೆ ವ್ಯಕ್ತ್ಯಹಂಕಾರ ಹಾಗಲ್ಲ; ಅಹಂಪರಿಬಂಧವೇ ವ್ಯಕ್ತಿತ್ವದ ಅವಚ್ಛೇದಕ, ಪರಿಸೀಮಕ. ಅಹಂಮುಕ್ತತೆ (ಅಹಮಸ್ಮಿ ಎಂಬ ಜ್ಞಾನದಿಂದ ಮುಕ್ತತೆ) ಎಂದರೇ ವ್ಯಕ್ತಿತ್ವದಿಂದ ಮುಕ್ತತೆ, ಬ್ರಹ್ಮ ಜಾಗರ. ಬ್ರಹ್ಮಸ್ಥಲ, ಬ್ರಹ್ಮಕೇಂದ್ರ ಎಂಬಿವೂ ಬ್ರಹ್ಮಾಹಂಕಾರದಂತೆಯೇ ಬ್ರಹ್ಮೇತರಬುದ್ಧಿಯು ಬಳಸುವ ವರ್ಣನಾತ್ಮಕವಾದ ಮಾತು. ದೇಶ ಕಾಲಗಳಿಗೆ ಸಂಬಂಧಿಸಿದ ಯಾವ ಮಾತೂ ಬ್ರಹ್ಮತ್ವಕ್ಕನ್ವಯಿಸದು. ಬ್ರಹ್ಮೇತರ ಅಭಿಧೇಯಗಳೆಲ್ಲವೂ (ವಾಸ್ತವಿಕ–ಕಾಲ್ಪನಿಕ ರೂಪಗಳೆರಡರಲ್ಲೂ ದೇಶಕಾಲ ಪರಿಬದ್ಧ. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾಸಹ" ಮತ್ತು "ನೈಷಾ ತರ್ಕೇಣ ಮತಿರಾಪನೇಯಾ"!

ಮಾನವನ ಸುಷುಪ್ತಾವಸ್ಥೆಯಲ್ಲಿ ಮತ್ತು ತುರೀಯಾವಸ್ಥೆಯಲ್ಲಿ ದೇಶ–ಕಾಲಗಳ ಪರಿಸೀಮಕತೆಯಿಲ್ಲ. ಆದರೆ ಒಂದು ಜಡ ಬ್ರಹ್ಮ ಪ್ರಜ್ಞೆಯ ಅವಸ್ಥೆಯಾದರೆ, ಇನ್ನೊಂದು ಜೀವದ್‌ಬ್ರಹ್ಮ ಪ್ರಜ್ಞೆಯ ಅವಸ್ಥೆ. ಅಹಂಕಾರಾಭಾವವು ಜಡಬ್ರಹ್ಮತ್ವ–ಜೀವದ್‌ಬ್ರಹ್ಮತ್ವಗಳೆರಡಕ್ಕೂ ಸಾಧಾರಣ. ಆದರೆ ಒಂದಕ್ಕೆ ಜಾಗರಾಂಶ ಶೂನ್ಯಸಮ, ಇನ್ನೊಂದಕ್ಕೆ ಜಾಗರವು ಪೂರ್ಣ; ಸ್ಥೂಲವಾಗಿ ಒಂದು ಅಪ್ರಜ್ಞಾತಸಮಾಧಿ, ಇನ್ನೊಂದು ಅಸಂಪ್ರಜ್ಞಾತ ಸಮಾದಿ.

ಜೀವ–ಜ್ಞಾನಮಯವಾದ ಚೈತನ್ಯದ ಅಪೂರ್ಣತೆಯು ಜಡದ ನಾನಾತ್ವದಲ್ಲಿ ಕಂಡು ಬರುವುದು ಜಡ ಸಾಧನದಿಂದ ನೋಡುವ ಮನುಷ್ಯ ಮತಿಗೆ. ವಿಜ್ಞಾನೋಕ್ತ (Scientific) ಸರ್ವಜ್ಞಾನ ಸಾಧನಗಳೂ (ಯಂತ್ರ–ತರ್ಕ ಗಣಿತಗಳನ್ನವಲಂಬಿಸುವ ಎಲ್ಲ ಬುದ್ಧಿ ಪ್ರಕಾರಗಳೂ) ಜಡಾವಚ್ಛಿನ್ನ ಪದಾರ್ಥಗಳು. ಜಡವು ದೇಶಕಾಲವಚ್ಛಿನ್ನ; ದೇಶಕಾಲಗಳು ಜಡಾವಚ್ಛಿನ್ನ ಮಾನಸಬುದ್ಧಿಯಿಂದ ಆಧೃತ, ಪರಿಚ್ಛಿನ್ನ, ಸ್ಪಷ್ಟೀಕೃತ. ಮಾನಸ–ಮಾನಸೇತರ ಪದಾರ್ಥಗಳು ಜಡ; ಅವು ಪರಸ್ಪರ ಅವಚ್ಛೇದಕಗಳು, ಪರಿಸೀಮಕಗಳು. ಅಪೂರ್ಣತೆಯೆಂಬ ಕಲ್ಪನೆಯು ಅವೆಲ್ಲವುಗಳ ಪರಿಬಂಧ. ಪರಿಪೂರ್ಣವು ಅಪರಿಬದ್ಧ. ಅದರ ಪರಿಬಂಧಕವಾದ ಅಪೂರ್ಣತೆಯು (Finitude) ಆಭಾಸಿಕವಲ್ಲದಿದ್ದರೆ ಪರಿಪೂರ್ಣವು (ಬ್ರಹ್ಮವು) ಕಲ್ಪನಾತೀತ ಅಥವಾ ಪರಿಪೂರ್ಣ (ಸರ್ವತಂತ್ರ ಸ್ವತಂತ್ರ) ಶೂನ್ಯಸ್ವರೂಪಿ ಎನ್ನಿಸಬೇಕಾಗುತ್ತದೆ; ಅಂಥ ಶೂನ್ಯವು ಯಾವುದಕ್ಕೂ ಆಧಾರವಾಗಲಾರದು. ಆಗ ಜಗತ್ತು ಸ್ವಾಧಾರವಾಗಬೇಕಾಗುತ್ತದೆ. ಅದರ ಆಧಾರತ್ವವು ಅಪೂರ್ಣತಾವಚ್ಛಿನ್ನ. ಅಪೂರ್ಣಾಧಾರದ ಮೇಲೆ ಅಪೂರ್ಣವು ನಿಲ್ಲುವುದು ಅಪೂರ್ಣವಾಗಿಯೇ. ಆದರೆ ಪರಿಣಾಮ ಪ್ರವಾಹ ರೂಪದ ಜಗತ್ತು ಪೂರ್ಣ ಪರಿಣಾಮ ನಿತ್ಯತೆಯನ್ನುಳ್ಳದ್ದಾಗಿದೆ; ಅದರ ಅಂಗಗಳ ಅನಿತ್ಯತೆ ಅಂಗಿಯಾದ ಅದರ ನಿತ್ಯತೆಗೆ ಬಾಧಕವಾಗಿಲ್ಲ. ಅದರ ಸಾಪೇಕ್ಷ ಇಡಿಯ ಆದಿ ಮಧ್ಯಾಂತಗಳು ಪೌರಾಣಿಕ (Mythological)–ಭೌತ ವಾಸ್ತವಿಕವೂ ಅಲ್ಲ, ಅತಿ ಭೌತವಾಸ್ತವಿಕವೂ ಅಲ್ಲ; ಬಿಡಿಗಳ ಆದಿ ಮಧ್ಯಾಂತಗಳು ಸಾಪೇಕ್ಷವಾಗಿ ಭೌತವಾಸ್ತವಿಕ (Physically objective). ಜನ್ಮ–ಸ್ಥಿತಿ–ಭಂಗಗಳನ್ನು ಆಭಾಸ, ಅಧ್ಯಸ್ತ, ಮಾಯಾಕೃತ, ವೈವರ್ತವೆಂದು ವೇದಾಂತ ಹೇಳಿದಾಗ ಅಂಥ ಅವಸ್ಥೆಗಳಿಗೀಡಾದ್ದೆಂದು ತೋರುವ ಜಗತ್ತೂ ಅಂಥದೇ ಎಂದು ಹೇಳಿದೆ. ಭೌತವು ವಾಸ್ತವಿಕವಾದರೆ ಅತಿಭೌತವು ಅವಾಸ್ತವಿಕ; ಅತಿಭೌತವು (Metaphysical entity) ವಾಸ್ತವಿಕವಾದರೆ ಭೌತವು ಅವಾಸ್ತವಿಕ! ಒಂದು ಸತ್, ಇನ್ನೊಂದು ತ್ಯತ್; ಸತ್ಯವು ತ್ಯತ್ತಲ್ಲ–ಸತ್ತಿನ ಭಾವವಲ್ಲದೆ, ತ್ಯತ್ತಿನ ಭಾವವಲ್ಲ!

ಪರಿಣಾಮವು Transformotion ರೂಪಾಂತರ ಹೊಂದುವಿಕೆ–ಶೂನ್ಯವಾಗುವುದಲ್ಲ. ಅದು Perpetual becoming ನಿತ್ಯವೂ ಆಗುತ್ತಹೋಗುವುದು. ಅದರದು ಕ್ರಿಯಾನಿತ್ಯತೆ, ಭಾವ (Being) ನಿತ್ಯತೆಯಲ್ಲ. ಕ್ರಿಯೆಯು ಅಪೂರ್ಣಾಶ್ರಿತ; ಆದ್ದರಿಂದ ಅದು ಅಪೂರ್ಣ (Imperfect) ಪ್ರಮೇಯ (Knowable) ಮತ್ತು ಸಸೀಮ (finite) ಎನ್ನಲುಬಾರದು. ಅಪೂರ್ಣತ್ವ–ಕ್ರಿಯಾತ್ವಗಳು ಸಮಕಾಲಿಕ ಸಮವಾಯದ ಸಾಹಚರ್ಯ ಉಳ್ಳ ಧರ್ಮಗಳು–ಜೀವ–ಜ್ಞಾನಗಳಂತೆ (The subject and object of a "u" proposition) ಅಪೂರ್ಣತ್ವದ

ನಿತ್ಯತೆ ಆಭಾಸಿಕವಾದಾಗ ಕ್ರಿಯಾ ನಿತ್ಯತೆಯೂ ಆಭಾಸಿಕವಾಗುವುದು. ಬ್ರಹ್ಮವು ಭಾಸ, ಪ್ರಪಂಚವು ಆಭಾಸ, ಭಾಸಸತ್ಯ, ಆಭಾಸ ಸತ್ಯಗಳಲ್ಲಿ ಜಾತ್ಯೈಕ್ಯವಿಲ್ಲ–ಆದುದರಿಂದ ಅರ್ಥೈಕ್ಯವಿಲ್ಲ. ಔಚಿತ್ಯ, ಸತ್ಯ, ನ್ಯಾಯಗಳು ಪಾರಮ್ಯಾವಸ್ಥೆಯಲ್ಲಿ ಒಂದೇ; ಅಪಾರಮ್ಯದಲ್ಲಿ ಹಲವು; ಆದರೂ ಅನೌಚಿತ್ಯ, ಅಸತ್ಯ, ಅನ್ಯಾಯಗಳು ಇನ್ನೂ ಹೆಚ್ಚು ಸಂಖ್ಯಾತವಾಗಿದೆ–ಆದರೆ ಅಸಂಖ್ಯಾತವಲ್ಲ (ಅಸಂಖ್ಯೆಯವಲ್ಲ). ಭಿನ್ನರಾಶಿಗಳ ಆನಂತ್ಯವು ಅಸೀಮಕಾಲ್ಪನಿಕ. ಕಲ್ಪನೆಯೇ ಜಗತ್ತಿನಲ್ಲಿ ಸಾಂತವಾಗಿರುವಾಗ, ಸೀಮಿತವಾಗಿರುವಾಗ ಕಲ್ಪನಾ ಜನ್ಯವು ಹೇಗೆ ಅನಂತವೆನ್ನಿಸೀತು? ಅಕಲ್ಪನೀಯಕ್ಕೆ ಕಾಲ್ಪನಿಕ ಅಸ್ತಿತ್ವೂ ಇಲ್ಲ! ಕಲ್ಪಕ ಶಕ್ತಿಯೂ ಅದರ ಲೌಕಿಕ ಆಕರವೂ ಪ್ರಮಿತವಾಗಿರುವಾಗ ಕಲ್ಪನೆ ಅಪ್ರಮೇಯವಾಗಲಾರದು! ಸಮಾನಂತರತ್ವವು ಎರಡು ರೇಖೆಗಳಿಗೆ ಸರ್ವತ್ರ ಸತತವೂ ಇದ್ದರೆ ಅವೆಂದೂ ಸಂಧಿಸಲಾರವು.

"ಭೇದಗಳನ್ನು ಕೂಡಿಸುವ ಅಭೇದವನ್ನು (ಅಭೇದ ಸೂತ್ರವನ್ನು) ತೋರಿಸುವ ವಿರೋಧ ಸಮನ್ವಯದ ತರ್ಕಪ್ರಕ್ರಿಯೆಯನ್ನು ಅರಿತುಕೊಳ್ಳುವುದಕ್ಕೆ ಮನಸ್ಸು ಅನಿವಾರ್ಯವಾದ ಅವಯವ. ಭೇದರಾಶಿಯಲ್ಲಿ ಗುಪ್ತವಾಗಿರುವ ಅಭೇದ (ಐಕ್ಯ)ಸೂತ್ರವನ್ನು ಕಂಡುಹಿಡಿಯುವುದೇ ನಮ್ಮ ಮನಸ್ಸಿನ ಹಾಗೂ ತತ್ವಶಾಸ್ತ್ರದ ದೊಡ್ಡ ಕರ್ತವ್ಯ. ಚಾರಿತ್ರವನ್ನೂ ಆಚಾರವನ್ನೂ ಏಕೀಕರಿಸುವುದು ನೀತಿ (ಧರ್ಮ) ಶಾಸ್ತ್ರದ ಕರ್ತವ್ಯ. ವ್ಯಕ್ತಿಗಳನ್ನು ರಾಜ್ಯವನ್ನಾಗಿ ಕೂಡಿಸುವುದು ರಾಜನೀತಿಶಾಸ್ತ್ರದ ಕೆಲಸ. ಎಲ್ಲ ವಿರೋಧಗಳೂ (ಸಮನ್ವಿತವಾಗುವ) ಏಕೀಕೃತವಾಗುವ, ಭೌತಪದಾರ್ಥ–ಮನಸ್ಸು, ಕರ್ತ–ಕರ್ಮ(=ವ್ಯಕ್ತಿ–ವಸ್ತು), ಒಳಿತು–ಕೇಡುಗಳೆಲ್ಲವೂ ಒಂದಾಗುವ ಮತ್ತು ಅಸ್ತಿತ್ವದ ಆತ್ಯಂತಿಕಮೊತ್ತವಾದ ಕೇವಲ (Absolute)ವನ್ನು ಮುಟ್ಟಿ ಅನುಭವಕ್ಕೆ ತಂದುಕೊಳ್ಳುವುದು ಮತಧರ್ಮದ ಕಷ್ಟಕಾರ್ಯ. ದೇವರೆಂದರೆ ಎಲ್ಲ ಪದಾರ್ಥಗಳೂ ಚಲಿಸಲು, ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಮತ್ತು ಅರ್ಥಪೂರ್ಣತೆಯನ್ನು ಪಡೆಯಲು ಆಧಾರವಾಗಿರುವ ಪರಮ ಪದಾರ್ಥ (ಕೇವಲ). ಮನುಷ್ಯನಲ್ಲಿ ಕೇವಲನಾದ ದೇವರು ಅಸ್ಮಿತಾಭಾವವನ್ನು ಏರಿ ಕೇವಲ ಭಾವ, ಕಲ್ಪನೆ ಅಥವಾ ಆಲೋಚನೆ (Absolute Idea) ಆಗುತ್ತಾನೆ. ಆಲೋಚನೆಯು ತನ್ನನ್ನೇ ತಾನು ಕೇವಲಾಂಶವೆಂದು ಅರಿತುಕೊಳ್ಳುತ್ತದೆ; ಅಂದರೆ ಅದು ಅವನ ವೈಯಕ್ತಿಕ ಇತಿಮಿತಿಗಳನ್ನೂ ಉದ್ದೇಶಗಳನ್ನೂ ಮೀರುತ್ತದೆ ಮತ್ತು ಸಾರ್ವಜೀವನದ ಅಡಿಯಲ್ಲಿ ಎಲ್ಲವುಗಳ ಗುಪ್ತಸಾಮರಸ್ಯ (ಸಾಮಶ್ರುತ್ಯ)ವನ್ನು ಗ್ರಹಿಸುತ್ತದೆ. ವಿಚಾರವು ವಿಶ್ವದ ಸಾರ,... ಪ್ರಪಂಚದ ನಕ್ಷೆಯು ಪೂರ್ಣವಾಗಿ ವಿಚಾರಬದ್ಧವಾದುದು"–ಎಂಬ ಹೆಗೆಲ್ಲುಕ್ತಿಯು ವಿಚಾರದ ಭಾಷೆಯಲ್ಲಿ ಅತ್ಯಂತ ಕಡಿಮೆ ನಿರ್ದುಷ್ಟವಾಗಿ ವರ್ಣಿಸಬಹುದಾದ ದೇವ–ಮಾನವ–ಪ್ರಪಂಚಗಳ ಸಂಬಂಧ ಎನ್ನಬಹುದು. The Relative is relatively related to the Absolute–ಸಾಪೇಕ್ಷವು ಸಾಪೇಕ್ಷವಾಗಿ ನಿರಪೇಕ್ಷಕೇವಲಕ್ಕೆ ಸಂಬಂಧಿಸಿದೆ; ಆದರೆ The Absolute is absolutely independent of the Relative–ಕೇವಲವು ಕೇವಲವಾಗಿ ಸಾಪೇಕ್ಷ ಪದಾರ್ಥದಿಂದ ಸ್ವತಂತ್ರ!

ಪರಮಾತ್ಮನ ಪರಮಾರ್ಥದ ಪರಮತ್ವವನ್ನು ಗ್ರಹಿಸಿದ ಮೇಲೆ ಮಿಕ್ಕ ಮೌಲ್ಯಗಳ

ತಾರತಮ್ಯ ವಿವೇಕವನ್ನು ತರ್ಕಶುದ್ಧವಾಗಿ ಮಾಡಲು ಸುಲಭವಾಗುತ್ತದೆ. ಅದರಿಂದಲೇ ಸೈದ್ಧಾಂತಿಕವಾಗಿ ಬ್ರಹ್ಮಸ್ಥಾಪನೆಗೆ ಭಾರತವು ಪ್ರಥಮಪ್ರಾಶಸ್ತ್ಯ ಕೊಟ್ಟಿತು. ಸಾಪೇಕ್ಷಗಳ ಸಾಪೇಕ್ಷತೆಯು ನಿರಪೇಕ್ಷದ ನಿರಪೇಕ್ಷತೆಯನ್ನು ಅರ್ಥತಃ ಆಧರಿಸಿದೆ. ಸಾಪೇಕ್ಷಗಳ ಪರಸ್ಪರ ಸಾಪೇಕ್ಷತೆ ಎಂಬುದು ಸಾಪೇಕ್ಷ–ಸಂಪೂರ್ಣವಲ್ಲ, ಸರ್ವತಂತ್ರ ಸ್ವತಂತ್ರವಲ್ಲ. ದೇವ ಜೀವನದ ಹಿನ್ನೆಲೆಯು ಮಾನವ ಜೀವನದ ಸಾರ್ಥಕತೆಯನ್ನು ಅಳೆಯಲು ಅಗತ್ಯ; ಅದರ ಉಪಮಾನತ್ವವು ಇದರ ಉಪಮೇಯತ್ವಕ್ಕೆ ಆಧಾರ. ಪರಮಾರ್ಥದೊಡನೆ ತುಲನೆಮಾಡಿದಲ್ಲದೆ ವ್ಯವಹಾರಾರ್ಥದ ಮೌಲ್ಯ ನಿರ್ಣಯ ಸಮರ್ಪಕವಾಗಿ ಆಗದು. ಕೇವಲತ್ವ ಅಥವಾ ಪೂರ್ಣನಿತ್ಯತೆಯು ಅಪೂರ್ಣ ನಿತ್ಯತೆಗಳ (ಸಾತತ್ಯಗಳ) ಕಲ್ಪನೆಗೆ ಆಧಾರ. ಕೇವಲ ಅನಿತ್ಯತೆಯೆಂಬುದು ಕಾಕದಂತ–ಯಾವ ಕ್ಷಣಭಂಗವಾದದಿಂದಲೂ ಅದು ಸಿದ್ಧವಾಗದು. ಆದುದರಿಂದ ಮೋಕ್ಷಕ್ಕೆ ಅವಿರುದ್ಧವಾದುದು ಧರ್ಮ, ಧರ್ಮಕ್ಕೆ ಅವಿರುದ್ಧವಾದವುಗಳು ಅರ್ಥ–ಕಾಮಗಳು. ಅರ್ಥಸಂಚಯ–ಕಾಮೋಪಭೋಗಗಳು ವೈಯಕ್ತಿಕವಾಗಿಯಾಗಲಿ, ಸಾಮೂಹಿಕವಾಗಿಯಾಗಲಿ–ಧರ್ಮವಿರುದ್ಧವಾಗಿ ಸಾಗಿದರೆ, ಅಂಥ ನಾಗರಿಕತೆಯ ನಾಶ ಬಹುಬೇಗ ಆಗುವುದು. ಅರ್ಥಕಾಮ ಪ್ರಧಾನವಾದ ವಾದಗಳು ಜಗತ್ತಿನ ಸಾರ್ವಧರ್ಮವನ್ನು ನಿರ್ಣಯಿಸಲಾರವು. ಮಾನವಧರ್ಮವು ಸಾರ್ವಜೀವನ ಧರ್ಮವನ್ನು ಆಧರಿಸಿದಾಗಲೇ ಮಾನವ ನಾಗರಿಕತೆಯ ಚಿರಂಜೀವಿತ್ವಕ್ಕೆ ಕಾರಣವಾಗುವುದು.

ಪ್ರಪಂಚದ ವಿಸ್ತಾರವನ್ನೂ ಅದರ ಇತಿಹಾಸದ ದೈರ್ಘ್ಯವನ್ನೂ ಮರೆತ ವಿಚಾರವಾದಗಳು ನಾಗರಿಕತೆಯ ಅಸ್ಥಾಯಿತ್ವಕ್ಕೆ ಕಾರಣಗಳಾದುದಕ್ಕೆ ಭಾರತೇತರ ರಾಷ್ಟ್ರಗಳೆಲ್ಲವೂ ನಿದರ್ಶನಗಳಾಗಿವೆ–ಎಂಬುದನ್ನು ಭಾರತೀಯ ಅರಿತರೆ, ಪಾಶ್ಚಾತ್ಯರ ಸಮಾಜವಾದೀಯ ಪ್ರಜಾಪ್ರಭುತ್ವವನ್ನು ಅವರಿಗಿಂತ ಚೆನ್ನಾಗಿಯೂ ಧೃಡವಾಗಿಯೂ ಇಲ್ಲಿ ಸ್ಥಾಪಿಸಬಲ್ಲವನಾಗುತ್ತಾನೆ. ಪೂರ್ವವು ಆಧಾರ, ಪಶ್ಚಿಮವು ಆಧೇಯ; ಆಧಾರದ ಪ್ರಾಧಾನ್ಯ ಆಧೇಯಕ್ಕಿಲ್ಲ. ಆದರೆ ಆಧಾರದ ಅಗಲ–ಆಳಗಳ ಅದ್ಭುತ ಪರಿಮಾಣಗಳ ದೆಸೆಯಿಂದ ಅದು ಬಹಳ ಸಲ ಮರೆತು ಹೋಗುವುದು ಕಂಡುಬಂದಿದೆ, ಅರ್ಥವಾಗದಂತಾದುದು ಅನುಭವಕ್ಕೆ ಬಂದಿದೆ. ಅದನ್ನೇ ಗೀತೆ "ಧರ್ಮ ಗ್ಲಾನಿ" ಎಂದು ಕರೆದಿದೆ. ಧರ್ಮಗ್ಲಾನಿಗೆ ದೇಶ ಉನ್ಮುಖವಾದ ಕೂಡಲೇ ಪ್ರಬುದ್ಧ ಭಾರತೀಯರು ಜನಜಾಗ್ರತಿಯುನ್ನು ಮಾಡುತ್ತ ಬಂದಿದ್ದಾರೆ; ಆದರದು ಇನ್ನೂ ಹೆಚ್ಚು ಯೋಜನಾಬದ್ಧವಾಗಿಯೂ ಸಮರ್ಥತರ ಕ್ರಮದಿಂದಲೂ ನಡೆಯುವಂತೆ ಮಾಡಬಲ್ಲ ಶಕ್ತಿಯು ವರ್ತಮಾನಕಾಲಕ್ಕಿದೆ; ಕಣ್ಣು ತೆರೆದರೆ ಗೊತ್ತಾಗುತ್ತದೆ.

"ಪರೋಪಕಾರ: ಪುಣ್ಯಾಯ" ಎಂದುದನ್ನು "ಪರೋಪಕಾರೋ ವಿಧಿಬದ್ಧ ಕರ್ತವ್ಯಂ" ಎಂದು ನಮ್ಮ ದೇಶದ ಸಂವಿಧಾನೋಕ್ತ ಕಾಯಿದೆಯು ಸಾರಿ ಜಾರಿಗೆ ತರುವುದೇ ಇಂದಿನ ಪರಮಕರ್ತವ್ಯ. ಪರನು ನಮಗಿಂತ ನೈತಿಕವಾಗಿ ಹೆಚ್ಚು ಶ್ರೇಷ್ಠನು. ನಮಗಿಂತ ನೈತಿಕವಾಗಿ ಕೀಳಾದ ಪರನಿಗೆ ಮಾಡುವ ಉಪಕಾರವು ಶಿಕ್ಷಣೋದ್ದೇಶವುಳ್ಳ ಶಿಕ್ಷೆಯ

ಸ್ವರೂಪವುಳ್ಳದ್ದು. ಸರ್ವೋದಯದಲ್ಲಿರುವ ಸುಖವು ಸ್ವಾರ್ಥೋದಯದಲ್ಲಿಲ್ಲ ಎಂಬುದನ್ನು ಒಪ್ಪುವ ಸಂಸ್ಕೃತಿಯು ಪರಸುಖ ವಿಮುಖವಾದ ಸ್ವಸುಖ ಸಾಧನೆಯನ್ನು ಎಂದೂ ಎತ್ತಿಹಿಡಿಯದು. "ತೇನ ತ್ಯಕ್ತೇನ ಭುಂಜೀಥಾ:" ಎಂಬುದು "Live and let live–ಬದುಕು ಮತ್ತು ಬದುಕಗೊಡು" ಎಂಬ ಧ್ಯೇಯಕ್ಕಿಂತ ಹೆಚ್ಚು ಮಾನವೀಯವಾದುದು. ಅದು ಭಾರತೀಯ ಪರಮಾರ್ಥಸಂಸ್ಕೃತಿಯ ಸಾರ. ಅದೇ ಧರ್ಮಾರ್ಥ ಸಾಧನ, ಮೋಕ್ಷೋನ್ಮುಖತೆ. ತದ್ವಿಪರೀತ ಪ್ರವೃತ್ತಿಗಳು ಅಪಭಾರತೀಯ, ಅನುದಾತ್ತ, ಅದಿವ್ಯ. ಉಕ್ತಧ್ಯೇಯವು ಪಾತ್ರಾಪಾತ್ರ ವಿವೇಕದ ಮಾನದಂಡದಿಂದ ಮಾತ್ರ ಆಚರಣೀಯ ಎಂಬುದನ್ನು ಆಲಕ್ಷಿಸಿದರೂ ಅಪ–ಭಾರತೀಯ ಧರ್ಮವನ್ನು ಹಿಡಿದಂತಾಗುವುದು. ಈ ದೋಷದ ಫಲವಾಗಿಯೇ ಭಾರತೀಯ ಆಧ್ಯಾತ್ಮಿಕತೆ ಹಲವೆಡೆ Effeminate ಸ್ತ್ರೈಣ, Pessimistic ನಿರಾಶೋನ್ಮುಖ, Superstitious ಅಂಧ ಶ್ರದ್ಧಾಮಯ ಜನರನ್ನು ತಯಾರು ಮಾಡಿತು; ಅವರಿಂದ ಅಪ–ಆಧ್ಯಾತ್ಮಿಕತೆ ಪ್ರಚುರವಾಗಿ ತನ್ಮೂಲಕ ಅವೈಜ್ಞಾನಿಕತೆ, ಪೌರುಷಹೀನತೆ, ಸ್ವಾಭಿಮಾನ ಶೂನ್ಯತೆ, ಧೀರತಾಭಾಸಗಳನ್ನು ನಾಯಕರಲ್ಲಿ ಬೆಳೆಯಿಸಿ ವಿವಿಧ ರಾಜಕೀಯ, ಆರ್ಥಿಕ, ಸಾಮಾಜಿಕ ಹಾನಿಗಳನ್ನು ಶತಮಾನ ಗಟ್ಟಲೆಯಾಗಿ ಜನರು ಅನುಭವಿಸಬೇಕಾಗಿ ಬಂತು. ವ್ಯಾಸ ಸೃಷ್ಟನಾದ ವಿದುರನ ಮಹಾಸೂತ್ರವೇ ಪಾತ್ರಾಪಾತ್ರವಿವೇಕ ಅಥವಾ ಇಂದಿನ ಮಾತಿನಲ್ಲಿ ಒಲವಿನ ಪರೀಕ್ಷೆ (Aptitude Test); ಇನ್ನೊಂದು ಮಾತಿನಲ್ಲಿ ಅದೇ ಅರ್ಹತಾಪರೀಕ್ಷೆ. ಜೀವನದ ಭೌತಿಕ ಅವಶ್ಯಕತೆಗಳಲ್ಲಿ ಅನ್ವಿತವಾಗುವ ಸಾಮ್ಯವಾದವು ಅರ್ಹತಾವರ್ಗಭೇದ ಅನ್ವಯವಾಗುವ ತದಿತರ ಸಂದರ್ಭಗಳಿಗೆ ಅನ್ವಯಿಸದು. ಕ್ಷೇತ್ರ ಪ್ರತ್ಯೇಕತೆಯ ದೆಸೆಯಿಂದ ಅವುಗಳಲ್ಲಿ ಪರಸ್ಪರ ಸಂಘರ್ಷಕ್ಕೆ ಅವಕಾಶವೇ ಇಲ್ಲ. ಪಾಶ್ಚಾತ್ಯ ವ್ಯಷ್ಟಿವಾದಿ (Individualist) ಮತ್ತು ಸಮಷ್ಟಿವಾದಿ (Socialist)ಗಳು ಈ ಅಂಶವನ್ನು ಗಮನಿಸದುದರಿಂದಲೇ ಅಮೇರಿಕದ ಸಂಯುಕ್ತ ರಾಜ್ಯ ಮತ್ತು ರಶಿಯದ ಒಕ್ಕೂಟಗಳು ತತ್ವಭೇದನಿಷ್ಠ ಪ್ರತ್ಯೇಕ ಬಣಗಳೆಂದು ತಮ್ಮನ್ನು ತಾವು ತಿಳಿದುಕೊಂಡಿರುವಂತಾಗಿದೆ. ಹಾಗೇ ಪಾಶ್ಚಾತ್ಯ ವೈಜ್ಞಾನಿಕ ವಾದಿಗಳೂ ಅನುಭಾವ (ಯೋಗ) ವಾದಿಗಳೂ ತಮ್ಮನ್ನು ತಾವು ಹುಲಿಹಸುಗಳೆಂದು ತಿಳಿದುಕೊಂಡದ್ದು. ವೈಜ್ಞಾನಿಕತೆ–ಯೋಗೋನ್ಮುಖತೆಗಳು ಪರಸ್ಪರ ವಿರುದ್ಧ ಪ್ರವೃತ್ತಿಗಳಲ್ಲವೆಂಬುದನ್ನು ಭಾರತೀಯ ವ್ಯಾಸಧರ್ಮ ಸಾರಿಹೇಳುತ್ತದೆ. ಕರ್ಮತ್ಯಾಗ–ಕರ್ಮಫಲ ತ್ಯಾಗ–ಕರ್ಮಕರ್ತೃತ್ವದ ಅಹಂಕಾರತ್ಯಾಗಗಳಲ್ಲಿ ಮೊದಲನೆಯದನ್ನು ವ್ಯಾಸ ಎಲ್ಲಿಯೂ ಸಿದ್ಧಾಂತವೆಂದು ಹೇಳಿಲ್ಲ. ತಾತ್ಪರ್ಯ ಗ್ರಹಣದಲ್ಲಿ ಅಸಮರ್ಥರಾದ ವ್ಯಾಖ್ಯಾತೃಗಳ ದೆಸೆಯಿಂದ ೨–೩ನೆಯವುಗಳ ಸ್ವರೂಪವು ಮೊದಲನೆಯದೆಂದು ತಿಳಿದು ಅನೇಕರು ಸ್ವಹಾನಿ–ಪರಹಾನಿಗಳಿಗೆ ಕಾರಣರಾಗಿರಬಹುದು. "ನಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್!"

ಭೌತಿಕವಾದ ಕರ್ಮತ್ಯಾಗವು ಬ್ರಹ್ಮನಿಗೂ ಅಸಾಧ್ಯ. ಬ್ರಹ್ಮನಿಗೆ ಭೌತಿಕದೃಷ್ಟಿಯಿಂದ ನಿತ್ಯವೂ ಮಾಯಾಸ್ಪರ್ಶವಿದೆ; ಅವನ ದೃಷ್ಟಿಯಿಂದ ಮಾತ್ರ ಇಲ್ಲ–ಅಷ್ಟೆ. ಭೌತಿಕ ವ್ಯವಹಾರದ ಅನಂತ್ಯವು ಶಂಕರೋಕ್ತ. ಕರ್ಮಯಾರನ್ನೂಬಿಡದು; ಅದು ಹಿಡಿದುಕೊಂಡಿರುವಾಗಲೇ ಅದನ್ನು "ಬುದ್ಧಿವಂತರು" ಬಿಟ್ಟವರಾಗಿರಬಹುದು–ಎಂಬುದೇ ಜ್ಞಾನಯೋಗದ ನಿಜವಾದ

ಮರ್ಮ. ಈ ಒಗಟನ್ನು ವಿವರಿಸಹೊರಟು ಕರ್ಮವಾದ ಜ್ಞಾನವಾದಗಳ ಪ್ರತ್ಯೇಕತೆ ಜನರಲ್ಲಿ ಪ್ರಚುರವಾಗುವಂತೆ ಮಾಡಿದ ವ್ಯಾಖ್ಯಾತೃತ್ವವು ಸಾಂಸ್ಕೃತಿಕ ದ್ರೋಹ, ಐತಿಹಾಸಿಕ ಅಪರಾದ. ವ್ಯಾಸ ನಿರ್ಮಿಸಿದ ತುಲಾಧಾರನ ಪಾತ್ರವು ಅವ ನಿಲ್ಲಿಸಿದ ಕೃಷ್ಣಪಾತ್ರದಂತೆಯೇ ಅವನಿಗೆ ಪ್ರಿಯವಾದ ಅತ್ಯುನ್ನತ ಆದರ್ಶ ಪಾತ್ರ. ಅದು ಜೀವನ್ಮುಕ್ತ ಜೀವನ (ದಿವ್ಯಜೀವನ) ಎಂದರೇನೆಂಬುದನ್ನು ವ್ಯಾವಹಾರಿಕವಾಗಿ ನಮ್ಮ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದೆ, ನಿದರ್ಶಿಸಿದೆ, ಸ್ಪಷ್ಟೀಕರಿಸಿದೆ. ವೈದಿಕ ಜೀವನದ ಪರಮಾದರ್ಶ ಅದು. ಅದು ನಿಷ್ಪೌರುಷ ಜೀವನವಲ್ಲ, ನಿರಾಶಾಮಯ ಜೀವನವಲ್ಲ, ವೈಯಕ್ತಿಕ ಸ್ವಾರ್ಥದ ಜೀವನವಲ್ಲ, ಅಂಧ ಶ್ರದ್ಧೆಯ ಜೀವನಲ್ಲ, ಅಕ್ಷರಾರ್ಥದ ನಿಷ್ಕರ್ಮ ಜೀವನವಲ್ಲ, ದೈವದಾಸಪಂಥದ ಜೀವನವಲ್ಲ, ದೈವವಿರುದ್ಧ ಜೀವನವಲ್ಲ, ಭಿಕಾರಿ ಜೀವನವಲ್ಲ, ಅಸಾಮಾಜಿಕ ಜೀವನವಲ್ಲ–ಜ್ಞಾನ, ಭಕ್ತಿ, ಕರ್ಮ, ವೈರಾಗ್ಯಗಳ ಅಂತಃಸಾರವನ್ನು ಸಮನ್ವಯಿಸಿಕೊಂಡು ಬಾಳಿದ ಸಮಗ್ರಯೋಗ (Integral Mysticism) ಜೀವನ. ಉಕ್ತಜೀವನ ನಡೆಸುವವರೇ ಆರ್ಯರು (Perfect gentlemen) ಅಥವಾ ಶಿಷ್ಟರು ಇಲ್ಲವೇ ಸಾಧುಗಳು, ವಿದೇಹ ಜನಕರು, ವಿದ್ಯಾರಣ್ಯರು, ಜಗನ್ನಾಗರಿಕರು, ಬ್ರಹ್ಮರು, Individual's Universalism ವ್ಯಕ್ತಿಯ ವಿಶ್ವಾತ್ಮಕತೆ ಎಂಬ ವಿರೋಧಾಭಾಸದಿಂದ ಅಂಥ ಜೀವನಸಿದ್ಧಾಂತವನ್ನು ವರ್ಣಿಸಬಹುದು; ಅಥವಾ Person's Impersonalism ಶರೀರಿಯ ಅಶಾರೀರಿಕ ಭಾವಮಯತೆ ಎಂದು ಕರೆಯಬಹುದು. ಈ ಆರ್ಷತೆಯು ಸ್ವಶರೀರದ ಆರೋಗ್ಯಕ್ಕೆ ಶತ್ರುವಾದ ದೇಹಶೋಷಣೈಕನಿಷ್ಠವಾದ ತಾಪಸಿಕತೆಯಲ್ಲ; ಹಾಗೇ ದೇಹಪೋಷಣೈಕನಿಷ್ಠವಾದ ಬಾಯಬ್ರಹ್ಮದ ವೇದಾಂತಿಯ ಜೀವನವೂ ಅಲ್ಲ. "ತುಲಾ ಮೇ ಸರ್ವಭೂತೇಷು ಸಮಾ ತಿಷ್ಠತಿ ಜಾಜಲೇ!" ಎಂದ ಆತ್ಮಯಾಜಿಯಾದ ತುಲಾಧಾರನ ಜೀವನ ಕರ್ಮಠವಾಗಿದ್ದಿಲ್ಲ, ಪಕ್ಷಪಾತದ್ದಾಗಿದ್ದಲ್ಲ, ಪಾತ್ರಾ ಪಾತ್ರ ವಿವೇಕವಿಮುಖವಾದ ಜಡಸಾಮ್ಯವಾದಿಯದಾಗಿದ್ದಿಲ್ಲ, ಸರ್ವ ತಾರತಮ್ಯಮಯವಾದ ನಾನಾತ್ವವಾದಿಯ ಅತ್ಯಂತಿಕ ಸ್ವಾರ್ಥಾಗ್ರಹಶೀಲದ್ದಾಗಿದ್ದಿಲ್ಲ; ಬ್ರಹ್ಮನಂತೆ ಅದರದು ನೇತಿ ವಾಕ್ಯಗಳಿಂದ ವ್ಯಂಜನೀಯವಾದ ಆದರೆ ಜೀವನೀಯವಾದ ಮಹಾಬುದ್ಧಿ ಸೂತ್ರ, ಮಹಾಜ್ಞಾನಸೂತ್ರ. ಆದುದರಿಂದ ಪಾಶ್ಚಾತ್ಯರಿಗೇ ಏಕೆ? ಪೌರಸ್ತ್ಯರಲ್ಲೇ ಎಷ್ಟೋ ಜನ ವಿದ್ವಾಂಸರಿಗೆ ಅಪಾರ್ಥಕ್ಕೆಡೆಗೊಡದಂತೆ ಅದನ್ನು ಜನರೆದುರಿಡಲು ಸಾಧ್ಯವಾಗದಾಯಿತು; ಪ್ರಸ್ತುತ ಲೇಖಕನಿಗೆ ಉಕ್ತಕಾರ್ಯವು ಸಾಧ್ಯವಾಗಿದೆ ಎಂಬ ನಂಬಿಗೆಯಿಲ್ಲ. "ಗುರೋಸ್ತು ಮೌನಂ ವ್ಯಾಖ್ಯಾನಂ" ಎಂಬುದಕ್ಕೆ "ಮೌನದಲ್ಲಿಯು ಕೂಡ ಮಾತಿನ ಧ್ವನಿಯಿರಲಿ" ಎಂಬಂತಹ ಪ್ರಯತ್ನ ಸಮರ್ಥನೆಯಿದೆ ಎಂದು ನಂಬಿದ್ದೇ ಇಂಥ ವಿಷಯವನ್ನು ಚರ್ಚಿಸಲು ವಿವರಿಸಲು, ಸಮರ್ಥಿಸಲು ಹೊರಟದ್ದಕ್ಕೆ ಆಧಾರ.

# ಪಾರಿಭಾಷಿಕ ಶಬ್ದಗಳು

| | |
|---|---|
| ಅಲಕ್ಷಣಿತ | Undefined |
| ಅರ್ಥವತ್ತೆ, ಅರ್ಥಪೂರ್ಣತೆ | The state of being significant |
| ಅದ್ವೈತ | Monism |
| ಅಸ್ತಿತ್ವ | Existence |
| ಅಪ್ರಮೇಯ | The Immeasurable, Infinite |
| ಅಪ್ರಮೇಯತೆ, ಅನಂತತೆ | Infinity |
| ಅಪರಿಮಿತ, ಅಸೀಮ | Limitless, Infinite |
| ಅಜ್ಞೇಯ | Unknowable |
| ಅನುಷೇಧ | The Positive |
| ಅಧಿಕೃತ ವಚನಾರ್ಹತೆ | Warranted assertability |
| ಅವಲಂಬನೀಯ | Dependable, reliable |
| ಅಂತರ್‌ನಿರೀಕ್ಷಣೆ | Introspection |
| ಅರ್ಥಕ್ರಿಯಾಕಾರಿ | Promoting activity |
| ಅನ್ವಯ | Thesis |
| ಅರ್ಥವತ್ತೆ | Significance |
| ಅಸಿದ್ಧ | Unproved. unestablished |
| ಅಭಿಧಾಯಕ | Denominator |
| ಅಪಸ್ವರ | Jarrying |
| ಅಂಗ, ಅಂಶ | Element; degree |
| ಅಂಗ, ಅವಯವ, ಬಿಡಿ | Part |
| ಅಪರಿವರ್ತನೀಯ | Immutable |
| ಅಮೂರ್ತ | Abstract |
| ಅತಿಭೌತ | Metaphysical |
| ಅಭೇದ್ಯ | Infallible |

| | |
|---|---|
| ಅತೀಂದ್ರಿಯ | Transcendental |
| ಅಸಂಖ್ಯೇಯ | uncountable |
| ಅಸಂಖ್ಯಾತ | Uncounted, countless |
| ಅವೈಯಕ್ತಿಕ ಅದ್ವೈತ | Impersonalistic monism |
| ಅಸಂಪ್ರಜ್ಞಾತ | Not known clearly |
| ಅಸ್ಪಷ್ಟತಾವಾದ | Obscurantism |
| ಅತಿಮಾನಸ | Supramental |
| ಅನುಷೇಧವಾದ | Positivism |
| ಅಭಿವ್ಯಕ್ತಿವಾದ | Expressionism |
| ಅಂತಃಪ್ರಭಾವವಾದ | Impressionism |
| ಅಸ್ತಿವಾದ | Existentialism |
| ಅಕಾಯ | Incorporeal |
| ಆಧೇಯ, ಗ್ರಾಹ್ಯ | Acceptable |
| ಆತ್ಯಂತಿಕ | Final |
| ಆತ್ಮಪ್ರದರ್ಶನ | Self-exhibition |
| ಆತ್ಮಾಸ್ತಿತ್ವ | Self-existence |
| ಆನುಷಂಗಿಕ | Accidental |
| ಆವಿರ್ಭಾವ, ಮೈದೋರುವಿಕೆ, ಅಭಿವ್ಯಕ್ತಿ | Manifestation, revelation |
| ಆಕರ | Source |
| ಅನುಪಾತಿಕ | Proportionate, in proper ratio |
| ಆತ್ಮಜ್ಞಾನ | Self-consciouseness |
| ಆಭಾಸ | Appearance |
| ಆತ್ಮಸಂಗೋಪನ, ಆತ್ಮ ಸಂರಕ್ಷಣ | Self-preservation |
| ಆವಯವಿಕ | Organic |
| ಆನುಭವಿಕ | Experiential |
| ಆನುಮಾನಿಕ | Deductive, inferential |
| ಆತ್ಮ, ಚೈತನ್ಯ | Spirit |

| | |
|---|---|
| ಆಕಾರ, ಆಕೃತಿ, ರೂಪ | Figure, outline, shape |
| ಆವಯವಿಕತೆಯ ತತ್ವಜ್ಞಾನ | Philosophy of organism |
| ಆಣವಿಕ ಪ್ರವಾಹ | Flux |
| ಆಧ್ಯಾತ್ಮಿಕ, ಚೈತನಿಕ | Spiritual |
| ಆಧ್ಯಾತ್ಮಿಕವಾದ | Spiritualism |
| ಆವಿಷ್ಕಾರ | Revelation |
| ಇಚ್ಛಾಪ್ರಯತ್ನ, ಇಚ್ಛಾಶಕ್ತಿ, ಸಂಕಲ್ಪಶಕ್ತಿ | Volition, will |
| ಇರವು, ಅಸ್ತಿತ್ವ | Being; existence |
| ಇಡಿ | Whole |
| ಉತ್ಕ್ರಿಯಾತ್ಮಕ | Dynamic |
| ಉಪಾಧಿ | Condition, attribute |
| ಉದ್ದೇಶ್ಯ | Subject |
| ಉಪಾಹಿತಕ್ಷೇಪ | Conditioned reflex |
| ಉಪಯುಕ್ತತೆ, ಪ್ರಯೋಜನ | Utility |
| ಉದಾಹರಣವಾಕ್ಯ | The universal proposition |
| ಉಪನಯವಾಕ್ಯ | Sentence bringing to proximity |
| ಉನ್ಮುಖೇಂದ್ರಿಯ | Sensitive |
| ಊಹೆ, ಕಲ್ಪನಾಶಕ್ತಿ | Imagination |
| ಐಕಾತ್ಮ್ಯ | Union, identity |
| ಐಂದ್ರಿಯ | Sensuous |
| ಒಲೆ | To tend, lean |
| ಒಪ್ಪಂದ | Contract |
| ಒಳಿತು | Good |
| ಔಪಚಾರಿಕ | Formal |
| ಕಲ್ಪನೆ, ಭಾವ | Idea |
| ಕ್ರಮ | Method |
| ಕರಣವಾದದ ತತ್ವಜ್ಞಾನ | Philosophy of Instrumentation |

| | |
|---|---|
| ಕಲ್ಪನಾವಿಲಾಸ | Fiction, fancy |
| ಕಾದಾಚಿತ್ಕತೆ ಆಕಸ್ಮಿಕತೆ | Accidence |
| ಕಾರ್ಯಾರ್ಥವಾದ, ವ್ಯಾಪಾರಸತ್ಯತಾವಾದ | Pragmatism |
| ಕಾಯ | Body |
| ಕಾರ್ಯಮಯ ಸಂಬಂಧ | Prehensive occasion |
| ಕಾರಕ | Factor |
| ಕುಬೇರ ಪ್ರಭುತ್ವ | Aristocracy |
| ಕ್ಷೇತ್ರ | Field, area |
| ಕೇವಲ, ಶುದ್ಧ, ಪೂರ್ಣ | Absolute |
| ಗರ್ಭಶಾಸ್ತ್ರ | Embryology |
| ಗೌಣ | Qualitative |
| ಗೃಹೀತಕರಣ | Assumption |
| ಘಟನೆ | Event, phenomenon |
| ಘಟನಾವಿಜ್ಞಾನವಾದ | Phenomenology |
| ಚಲನ | Motion, movement |
| ಚಲನ ವಿಧಿ | Law of motion |
| ಚೈತ್ರಿಕ | Picturesque |
| ಜಟಿಲ | Complex |
| ಜ್ಯಾಮಿತಿ | Geometry |
| ಜೀವಶಾಸ್ತ್ರ | Biology |
| ಜೀವ, ಜೀವಾತ್ಮ | Soul |
| ಜ್ಞೇಯ | Knowable |
| ತರ್ಕಸಮನ್ವಯ ಮಾರ್ಗ | Dialectical method |
| ತರ್ಕ | Reason |
| ತರ್ಕಸಮರ್ಥನೆ ಅಥವಾ ತರ್ಕಸಮನ್ವಯ | Dialectics |
| ತತ್ವಸೂತ್ರೀಕರಣ | Postulation |

| | |
|---|---|
| ತರ್ಕಪೂರ್ವ | A priori |
| ತಾರ್ಕಿಕ | Logical |
| ತಾಳಿಕೆ | Duration |
| ತಿಳಿವಳಿಕೆ | understanding; cognition |
| ತ್ರಿಪಾದ ಪದ್ಧತಿ | Three-stepped system |
| ದ್ರವ್ಯ | Substance |
| ದತ್ತ | Datum |
| ಧರ್ಮ, ಸಹಜಗುಣ | Property |
| ಧ್ಯೇಯವಾದ | Idealism |
| ನ್ಯಾಯವಾಕ್ಯ | Syllogism |
| ನಿಷ್ಕ್ರಿಯ, ಅಚಲ | Static |
| ನಿಷೇಧ | The negative |
| ನಿತ್ಯಪರಿಣಾಮಿ, ಪರಿಣಾಮಿ ನಿತ್ಯ | Eternally changing |
| ನಿಕಷ | Criterion |
| ನಿರ್ವೀರ್ಯ ಘಟನಾವಾದ | Epiphenomenalism |
| ನಿಷ್ಕೃಷ್ಟ | Certain |
| ನಿಗಮನ | Conclusion |
| ನಿರಪೇಕ್ಷ | Independent. absolute |
| ನಿತ್ಯವಸ್ತು | Eternal object |
| ನಿರುಪಾಧಿಕ | Unconditional |
| ನೈದರ್ಶನಿಕ | Demonstrative |
| ಪ್ರಕಾರ | Pattern, way |
| ಪ್ರತ್ಯಾಶೆ | Hope |
| ಪರಮಾರ್ಥ | Ultimate value |
| ಪ್ರಮಾಣ ಶಾಸ್ತ್ರ | Epistemology |
| ಪ್ರತ್ಯೇಕತೆ | Distinction |
| ಪ್ರಮೇಯ, | Praposition, Finite |

| | |
|---|---|
| ಪ್ರಮಿತ, ಪರಿಸೀಮಿತ | Limited |
| ಪರಾರ್ಥಾನುಮಾನ | Deductive inference |
| ಪ್ರಯೋಗ | Experiment, experimentation |
| ಪ್ರತ್ಯನ್ವಯ | Antithesis |
| ಪ್ರಮಿತಾಂಕ | Finite number |
| ಪ್ರಜ್ಞೆ | Consciousness |
| ಪದಾರ್ಥ | Category, entity, thing |
| ಪ್ರತಿಭೆ | Intuition |
| ಪ್ರವೃತ್ತಿ | Propensity, tendency |
| ಪ್ರತಿಮೆ | Image |
| ಪ್ರಮೇಯ, ಪ್ರತಿಜ್ಞಾವಾಕ್ಯ | Proposition |
| ಪರಬ್ರಹ್ಮ, ಪರಮಾತ್ಮ | The Absolute |
| ಪ್ರತಿನಿಹಿತತೆ | The state of being represented |
| ಪರಿಮಾಣ | Measure |
| ಪರಮಾರ್ಥ | Highest value |
| ಪರಬ್ರಹ್ಮ, ನಿರ್ಗುಣಬ್ರಹ್ಮ | The Absolute |
| ಪ್ರಾಣಿಚೈತನ್ಯ | Animal spirit |
| ಪಾರಸ್ಪರಿಕ | Mutual |
| ಪ್ರಾಸ್ಥಾನಿಕ | Scholostic |
| ಪ್ರಾಥಮಿಕ | Primary |
| ಪ್ರಾಧಿಕಾರ | Authority |
| ಪ್ರಾಕಾರಿಕ ಕ್ರಿಯಾನುಕ್ರಮ | Patterned process |
| ಪಾರಿಮಾಣಿಕ | Quantitative |
| ಪುರುಷಾರ್ಥ | Ultimate value |
| ಪೂರ್ಣಾಂಕ | Integer, full number |
| ಪೂರ್ವನಿಷ್ಕರ್ಷವಾದ | Determinism |
| ಬಲ | Force |

| | |
|---|---|
| ಭಾವೋದ್ರೇಕ | Passion |
| ಭ್ರಾಂತಿ | Illusion |
| ಭಾವವಾಚಕ | Abstract |
| ಭಾವಪ್ರಕಾರ | Impression |
| ಭಾವನೆ | Emotion |
| ಭಾವನಾಂಶ | Feeling |
| ಭಾವನೋದ್ರೇಕ, ಭಾವೋದ್ರೇಕ | Passion |
| ಭಾವಿಸು, ಭಾವನಿಸು | Feel |
| ಭೇದ್ಯ | Fallible |
| ಭೌತ ಪದಾರ್ಥ | Matter |
| ಭೌತಶಾಸ್ತ್ರ | Physics |
| ಭೌತಿಕ | Physical |
| ಭೌತವಾದ ಅಥವಾ ಜಡಪ್ರಕೃತಿವಾದ | Materialism |
| ಮನಃ ಪ್ರಣಾಲಿ | Attitude |
| ಮಾಯೆ | Hallucination |
| ಮುಕ್ತ | One who leads the divine life |
| ಮೂರ್ತ | Concrete |
| ಮೂರ್ತೀಕರಣ | Concretion |
| ಯೋಗಸಮಾಧಿವಾದ, ಅನುಭಾವವಾದ | Mysticism |
| ರಾಜ್ಯಶಾಸ್ತ್ರ | Politics |
| ರೀತಿಭಾವ | Modality |
| ರೂಪ | Colour |
| ರೂಪ, ಆಕಾರ | Figure, outline |
| ಲಕ್ಷಣ | Definition, mark |
| ಲಕ್ಷಣಿಸು | Define |
| ವ್ಯಷ್ಟಿ, ವ್ಯಕ್ತಿ | Individual |

| | |
|---|---|
| ವಸ್ತು, ಕರ್ಮ, ಜ್ಞೇಯ | Object of knowing |
| ವಸ್ತು | Thing |
| ವ್ಯವಹಾರವಾದ | Empiricism |
| ವ್ಯಾವಹಾರಿಕ | Empirical |
| ವಾಸ್ತವತಾವಾದ | Realism |
| ವಾಸ್ತವಿಕತೆ, ಸತ್ಯತೆ, | Reality, the state of being true, a true thing |
| ವ್ಯಾಪ್ಯತ್ವಾಸಿದ್ಧತೆ | The quality of a reason whose con-comitant invariability is un proved or unestablished |
| ವ್ಯಾವಹಾರಿಕ, ಘಟನಾತ್ಮಕ | Empirical, Phenomenal |
| ವ್ಯಾಪಕ | Extensive |
| ವಿಕೃತ ಪ್ರತಿಬಿಂಬ | Refracted image |
| ವಿಧಿವಾದ | Law of chance |
| ವಿಚಾರ, ಆಲೋಚನೆ | Thought |
| ವಿಸ್ತಾರ | Extension |
| ವಿಶೇಷಣ, ಗುಣ | Quality, attribute |
| ವಿಶೇಷ | The particular |
| ವಿಶಿಷ್ಟ ವೈಯಕ್ತಿಕ ದೃಷ್ಟಾಂತ ಸಂಗ್ರಹ | Induction |
| ವಿಧೇಯ | Predicate |
| ವಿಚಾರವಾದ | Rationalism |
| ವಿಶ್ಲೇಷಣ | Analysis |
| ವಿಶಿಷ್ಟನಿದರ್ಶನ ಲಬ್ಧವಾದ ಪ್ರಮಾಣದಿಂದ ತೀರ್ಮಾನಿಸಿದ ಸಿದ್ಧಾಂತ | Induction |
| ವೈಚಾರಿಕ | Rational |
| ಶಕ್ತಿ | Energy, Power |

| | |
|---|---|
| ಶಕ್ಯತೆ, ಸಾಧ್ಯತೆ | Possibility |
| ಶ್ರುತಿ | The Revealed, scripture |
| ಶೋಧ | Inquiry |
| ಸಮರ್ಥನೆ | Argumentation |
| ಸತ್ಯ | True, truth, a true thing |
| ಸರ್ವಗ್ರಹ | All-inclusive |
| ಸಮುದಾಯ | Community |
| ಸಮಷ್ಟಿ | The Collective |
| ಸಂಧಿ, ಒಪ್ಪಂದ | Contract |
| ಸ್ವಯಂನಿಯಾಮಕ | Self-regulating |
| ಸಂಘಟ್ಟನ | Clash |
| ಸಂಘರ್ಷ, ಘರ್ಷಣೆ | Conflict |
| ಸಂಧಿ | Peace |
| ಸಹಜ | Natural, innate |
| ಸ್ವಯಂ ಸ್ಪಷ್ಟ | Self-evident |
| ಸರ್ವಗ್ರಹ ದೇವತಾವಾದ | Pantheism |
| ಸತ್ಯಾಭಾಸ | Apparent reality |
| ಸ್ವತಃಸಿದ್ಧ | Self-evident |
| ಸಮನ್ವಯ | Synthesis |
| ಸಂಯೋಗ | Association |
| ಸರ್ಜನಾತ್ಮಕ | Creative |
| ಸಂವೇದನೆ | Sensation |
| ಸಮವೇತ | Inherent |
| ಸಂವೇದ್ಯತೆ | Sensibility |
| ಸಂಭಾವ್ಯ | Probable |
| ಸಂಗತಿ | Fact |
| ಸರ್ಜನಶೀಲ | Creativity |

| | |
|---|---|
| ಸಂಪ್ರದಾಯ | Convention |
| ಸದ್ಯದ | Immediate |
| ಸಗುಣಬ್ರಹ್ಮ, ದೇವ, ಈಶ್ವರ | God |
| ಸಂಭಾವ್ಯ ಸಿದ್ಧಾಂತ | Hypothesis |
| ಸತ್ಯತೆ | Reality, the state of being true |
| ಸಾಧನ | Instrument |
| ಸಾಮಾನ್ಯರ ಸಮೂಹ | Proletariat |
| ಸಾರ | Essence |
| ಸಾಕಲ್ಯ | Totality |
| ಸಾಮಾನ್ಯತೆ | Generality |
| ಸಾಮಾನ್ಯ,ಜಾತಿ | Universal |
| ಸಾವಯವ, ಅವಯವಿ | Organism |
| ಸಾಮುದಾಯಿಕ ಶಕ್ತಿ ತತ್ವಜ್ಞಾನ | Communal power Philosphy |
| ಸಾಮಶ್ರುತ್ಯ | Harmony |
| ಸಾತತ್ಯ | Continuity |
| ಸಾತ್ಮ್ಯಸಂಪರ್ಕ | Communion |
| ಸಾಪೇಕ್ಷ | Relative |
| ಸಾಮಾನ್ಯತೆ, ಸಾಮಾನ್ಯಧರ್ಮ | Generality |
| ಸಾಮಾನ್ಯಪದ | General term |
| ಸಾಂಗತ್ಯ | Coherence |
| ಸಿದ್ಧಿ | Attainment |
| ಸೈದ್ಧಾಂತಿಕ | Theoretical |
| ಹಿತಾರ್ಥ | Interest |
| ಹೂರಣ | Content |
| ಹೇತುವಾಕ್ಯ | Sentence embodying reason |
| ಹೇತ್ವಾಭಾಸ | Fallacy |
| ಹೋಲಿಕೆ | Comparison, analogy |

# ನಾಲ್ಕು ಮಾತು

ಮನನಶಕ್ತಿಯುಳ್ಳ 'ಮನಸ್' ಇರುವುದರಿಂದಲೇ ನಾವೆಲ್ಲ ಮನುಷ್ಯರು. ಅಂಥ ಮನಸ್ಸೆಂಬ ಕನ್ನಡಿಯ ಮೇಲೆ ಪ್ರತಿಬಿಂಬಿಸಿದ್ದೇ ನಮಗೆ ಗೊತ್ತಾಗುವ ಪ್ರಪಂಚ. ಪ್ರಪಂಚವನ್ನು ನಾವು ಅರಿಯುವ ಕಾರ್ಯವು ವೈಜ್ಞಾನಿಕವೋ ಅಲ್ಲವೋ ಎಂಬುದನ್ನರಿಯಲು ಅಂಥ ಅರಿವಿಗೆ ಏಕಮೇವ ಸಾಧನವಾದ ಮನಸ್ಸಾದರೋ ಕೈಗೆ ಸಿಕ್ಕದ್ದು, ಕಣ್ಣಿಗೆ ಕಾಣದ್ದು; ಅಂಥ ಮಾಯಾಮೃಗವದು. ಆದರದನ್ನು ಬೆನ್ನಟ್ಟಿ ಹೋಗದೆ ಗತ್ಯಂತರವಿಲ್ಲ. ಅದರ ಮಾರೀಚತನವನ್ನು ಬಯಲಿಗೆಳೆಯದೆ ಮುಕ್ತಿಯಿಲ್ಲ. ಆದುದರಿಂದ ವಿಜ್ಞಾನಿಗಳನೇಕರು ಅದರ ಬೆನ್ನುಹತ್ತಿ ಹೋಗಿ ದಶರಥನ ಶಬ್ದ ವೇಧಿಯಂತಹ ಶರಗಳ ರೂಪದ ಪ್ರಯೋಗಾಸ್ತ್ರಗಳನ್ನು ಅದರ ಮೇಲೆ ಬಿಟ್ಟಿದ್ದಾರೆ. ಸಿಗ್ಮಂಡ್ ಫ್ರಾಯ್ಡ ನಂಥವರು ಮನಸ್ಸಿಗೆ ಜ್ಞಾತಪ್ರಜ್ಞೆ, ಅವಪ್ರಜ್ಞೆ ಮತ್ತು ಅಜ್ಞಾತಪ್ರಜ್ಞೆ ಎಂಬ ಮೂರು ಭಾಗಗಳಿವೆಯೆಂದು ಹೇಳಿದ್ದುಂಟು. ಪ್ರಸ್ತುತ ಪುಸ್ತಕವು ಹೆಚ್ಚಾಗಿ ಜ್ಞಾತ ಪ್ರಜ್ಞೆ–ಅವಪ್ರಜ್ಞೆ ಎಂಬ ಭಾಗಗಳಿಗೆ ಸಂಬಂಧಿಸಿದ ಅಂಶಗಳನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದೆ. ಅಜ್ಞಾತಪ್ರಜ್ಞೆ ಅವನವನಿಗೆ ಸಾಮಾನ್ಯವಾಗಿ ಯಾವಾಗಲೂ ಅಜ್ಞಾತವೇ. ಅದರದೇ ಎಂದು ಮನಸ್ಸಿಗೆ ಯಾವ ಕಾರ್ಯಜಾಲವನ್ನೂ ನಿರ್ದಿಷ್ಟವಾಗಿ ಹಾಗೂ ಕೊನೆಯದಾಗಿ ಹೇಳುವುದು ಕಷ್ಟ. ಮಾನಸ ಶಾಸ್ತ್ರವಿನ್ನೂ ಬಾಲ್ಯಾವಸ್ಥೆಯಲ್ಲಿದೆ ಎನ್ನುವುದು ರೂಢಿ. ಬಹುಶಃ ಮಾನವನ ಆತ್ಮಜ್ಞಾನವು ಬಾಲ್ಯಾವಸ್ಥೆಯಲ್ಲಿರುವ ತನಕ ಮನಃಶಾಸ್ತ್ರವೂ ಬಾಲ್ಯಾವಸ್ಥೆಯಲ್ಲೇ ಇರುವುದು ಸಹಜವೆಂದು ತೋರುತ್ತದೆ. ಇನ್ನು ಮಾನವನ ಮನಸ್ಸಿನ ಜ್ಞಾನವು ಬಾಲ್ಯಾವಸ್ಥೆಯಲ್ಲಿರುವ ತನಕ ಅವನು ಮಾಡಿಕೊಂಬ ಪ್ರಪಂಚ ಜ್ಞಾನವೂ ಬಾಲ್ಯಾವಸ್ಥೆಯಲ್ಲಿಯೇ ಇರಬೇಕಾಯಿತಲ್ಲವೆ?

ಆದರೆ ಯತ್ನ ಶೀಲವು ಮಾನವನಿಗೆ ಸ್ವಾಭಾವಿಕ. ಅದಕ್ಕನುಸಾರವಾಗಿ ಪ್ರಯೋಗವಿಜ್ಞಾನಕ್ರಮವನ್ನು ಹಿಡಿದು ಅನೇಕ ಪಾಶ್ಚಾತ್ಯ ಹಾಗೂ ಕೆಲ ಪೌರಸ್ತ್ಯ ವಿದ್ವಾಂಸರು ಈವರೆಗೆ ಮನಸ್ಸಿನ ಲಕ್ಷಣಗಳನ್ನು ನಿಷ್ಕೃಷ್ಟವಾಗಿ ಕಂಡುಹಿಡಿದು ಅದರ ಕಾರ್ಯ ವೈವಿಧ್ಯದ ನಿಯಮಗಳನ್ನು ನಿರ್ಧರಿಸಲು ಹೆಣಗಿದ್ದಾರೆ. ಈ ಪ್ರಯೋಗ ವಿಜ್ಞಾನದಲ್ಲಿ ಅವರಿಗೆ ಈವರೆಗೆ ಮನಸ್ಸು ಕೇವಲ ಕೃತ್ಯಸ್ವರೂಪದ್ದೆಂದೂ ಅದು ಶರೀರಾಧಿಷ್ಠಿತವೆಂದೂ ಕಂಡುಬಂದಿದೆ. ಸಾಂಗೋಪಾಂಗವಾದ ಶರೀರವೆಲ್ಲಿದೆಯೋ ಅಲ್ಲಿ ಸಮಸ್ಥಿತಿಯ ಮನಸ್ಸಿದೆ; ಅಂಥ ಶರೀರವಿಲ್ಲದಲ್ಲಿ ಸಮಸ್ಥಿತಿಯ, ಸಹಜವಾದ ಮನಸ್ಸಿಲ್ಲ. ಆದುದರಿಂದ ಶರೀರ ಶಾಸ್ತ್ರವನ್ನಲವಲಂಬಿಸಿಯೇ ಪ್ರಸ್ತುತ ಗ್ರಂಥವು ಮನಸ್ಸಿನ ಬಿಡಿ ಬಿಡಿ ಅಂಗ ಪ್ರತ್ಯಂಗಗಳ ಕಾರ್ಯಗಳನ್ನು ವಿವೇಚಿಸುತ್ತ ಹೋಗಿದೆ. ಸ್ಥೂಲದಿಂದ ಸೂಕ್ಷ್ಮಕ್ಕೆ. ಮೂರ್ತದಿಂದ

ಅಮೂರ್ತಕ್ಕೆ ಸಾಗುವ ಅರಿವಿನ ಬಗೆಯೇ ಪ್ರಯೋಗವಿಜ್ಞಾನದ ನೀತಿಯಲ್ಲವೇ? ಶರೀರಾವಯವಗಳ ಪರಸ್ಪರ ಕೃತ್ಯ ಪ್ರತಿಕೃತ್ಯಗಳ ಹಾಗೂ ಆವರಣಜನ್ಯ ಘಟನೆಗಳ ಮತ್ತು ಅವುಗಳ ಪರಸ್ಪರ ಪ್ರೇರಣಾನುಕ್ರಿಯೆಗಳ, ಕ್ರಿಯೆ–ಪ್ರತಿಕ್ರಿಯೆಗಳ ಕಾರ್ಯ–ಕಾರಣ ಸಂಬಂಧಗಳನ್ನು ಅರ್ಥ ಮಾಡಿಕೊಳ್ಳುವ ದೃಷ್ಟಿಯಿಂದ ನರಮಂಡಲ, ಅಂತರವಯವ, ಮಿದುಳು ಮುಂತಾದವುಗಳ ಮಾನಸಚೈತನಿಕ ಅಥವಾ ಚಲನಾತ್ಮಕ ಪ್ರಕ್ರಿಯೆಗಳ ಸ್ಥೂಲಾವಲೋಕನವನ್ನು ಇಲ್ಲಿ ಸಾಮಾನ್ಯನಿಗಾಗಿ ಮಾಡಿಕೊಡಲು ಯತ್ನಿಸಲಾಗಿದೆ. ಇಲ್ಲಿ ಕೊಟ್ಟ ಪ್ರಯೋಗ ಪ್ರಮಾಣಗಳೆಲ್ಲವೂ ಅನ್ಯಕೃತವಾದುದರಿಂದ ಆಯಾ ಗ್ರಂಥಕರ್ತರ ಗ್ರಂಥಋಣವನ್ನು ಕೊನೆಯಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ.

ಹೊಸಗನ್ನಡದಲ್ಲಿ ಇಂಥ ಶಾಸ್ತ್ರವಾಙ್ಮಯ ವಿರಳ. ಸ್ವತಂತ್ರಭಾರತದ ಸ್ವಾಯತ್ತ ಪ್ರಾಂತ ಅಥವಾ ರಾಜ್ಯಗಳಲ್ಲಿ ಆಯಾ ಪ್ರಾದೇಶಿಕ ಭಾಷಾ ಮಾಧ್ಯಮದ ಮೂಲಕ ಜ್ಞಾನಪ್ರಸಾರ ಆರಂಭವಾಗಿದೆ. ಈ ಸಂದರ್ಭದಲ್ಲಿ ವಿಸ್ತಾರವಾದ ಮತ್ತು ವಿವಿಧ ಪ್ರಸಿದ್ಧ ಪ್ರಸ್ಥಾನಗಳುಳ್ಳ ಮನಃಶಾಸ್ತ್ರದ ಆಂಗ್ಲ ಗ್ರಂಥಗಳಿಂದ ಮನಃಶಾಸ್ತ್ರದ ಪ್ರಾಥಮಿಕ ಪರಿಚಯವನ್ನು ಮಾಡಿಕೊಡಲೆದ್ದರೂ ಎದುರಾಗುವ ಕಷ್ಟಗಳು ಬಹಳ. ಈ ಶಾಸ್ತ್ರವೇ ಕನ್ನಡಕ್ಕೆ ಹೊಸತಾದುದರಿಂದ ಶುದ್ಧ ಪಾರಿಭಾಷಿಕ ಪದಗಳಷ್ಟೇ ಅಲ್ಲದೆ, ಇಂಗ್ಲೀಷಿನಲ್ಲಿ ಸಾಮಾನ್ಯವಾದ ಎಷ್ಟೋ ಅರ್ಥಭೇದ ಪ್ರಕಾಶಕ ಪದಗಳು ಕೂಡ ಅನುವಾದ ಮಾಡಿದಾಗ ಹೊಸವಾಗಿ ಕಾಣಬಹುದು. ಹೀಗಿದ್ದರೂ ಆದಷ್ಟು ಮಟ್ಟಿಗೆ ಕನ್ನಡ ಸಾಹಿತ್ಯದಲ್ಲಿ ಆಗಲೇ ಬಳಕೆಯಲ್ಲಿರುವ ಸುಲಭ ಪದಗಳ ಬಳಕೆಯನ್ನು ಸಾಕಷ್ಟು ಮಾಡಿ, ಅನಿವಾರ್ಯ ಪ್ರಸಂಗಗಳಲ್ಲಿ ಮಾತ್ರ ದೇಶ್ಯ ಹಾಗೂ ತತ್ಸಮಗಳ ನೆರವಿನಿಂದ ಹೊಸಪದ–ಪದಸಂಹತಿಗಳನ್ನು ನಿರ್ಮಿಸಿಕೊಳ್ಳಲಾಗಿದೆ. ಅರ್ಥಶುದ್ಧಿಯ ದೃಷ್ಟಿಯಿಂದ ಕೆಲ ಬಳಕೆಯ ಪದಗಳನ್ನು ಬಿಟ್ಟು ಬಿಡುವ ಸ್ವಾತಂತ್ರ್ಯವನ್ನು ವಹಿಸಲಾಗಿದೆ. ಜೊತೆಗೆ, ಬಳಕೆಯ ಪದಗಳಿದ್ದರೂ ಅವುಗಳನ್ನು ನಿರ್ದಿಷ್ಟಾರ್ಥದಲ್ಲಷ್ಟೇ ಬಳಸುವ ವೈಜ್ಞಾನಿಕತೆಯನ್ನು ಉದ್ದಕ್ಕೂ ಪಾಲಿಸಿಕೊಂಡು ಬರಲಾಗಿದೆ. ಕೊನೆಯಲ್ಲಿ ಕೊಟ್ಟಿರುವ ಪದಾರ್ಥಕೋಶವು ಈ ಅಂಶಗಳನ್ನು ಒಡಮೂಡಿಸುವ ಸೂತ್ರದ ಪ್ರಕಾರ ನಿರ್ಮಿಸಲ್ಪಟ್ಟಿದೆ. ಅದರಲ್ಲಿಯ ಪ್ರತಿಯೊಂದು ಪದ ಅಥವಾ ಪದಸಂಹತಿಯು ಪುಸ್ತಕದಲ್ಲಿ ಎಷ್ಟು ಸಲ ಪ್ರಯುಕ್ತವಾಗಿದ್ದರೂ ಅದರ ಅರ್ಥ–ಅರ್ಥಾಂಶಗಳು ಒಂದೇ ಬಗೆಯುವಾಗಿರುವಂತೆ ನೋಡಿಕೊಳ್ಳಲಾಗಿದೆ. ವಿದ್ವಾಂಸರಾರಿಗಾದರೂ ಉಚಿತತರ ಪದ–ಪದಸಂಹತಿಗಳು ಹೊಳೆದರೆ ಅವನ್ನು ನಮಗೆ ಬರೆದು ತಿಳಿಸಿ ಉಪಕರಿಸಬೇಕು. ಎರಡನೆಯ ಮುದ್ರಣದಲ್ಲಿ ನಾವು ಅಂಥ ಗ್ರಾಹ್ಯ ಸೂಚನೆಗಳನ್ನು ಬಳಸಿಕೊಳ್ಳಲು ಅನುಕೂಲವಾದೀತು.

ಪುಸ್ತಕದಲ್ಲಿ ಕೊಟ್ಟ ಪ್ರಯೋಗ–ಪ್ರಮಾಣಗಳನ್ನುಳಿದರೆ, ಅವುಗಳನ್ನಾಧರಿಸಿ ನಿಮಗನಿಸಿದ ವಿಚಾರಗಳೆಲ್ಲವೂ ನಮ್ಮವು. ಅಥವಾ ನಮಗೆ ಸಮ್ಮತವಾದಂಥವು. ಅಂಥ ನಿರ್ಣಯಗಳಲ್ಲಿ ಸ್ಖಾಲಿತ್ಯಾಂಶಗಳೆಲ್ಲಾದರೂ ಉಳಿದದ್ದು ವಿದ್ವಾಂಸರಿಗೆ ಕಂಡುಬಂದರೆ ಅವನ್ನು ಬರೆದು

ಕಳಿಸಿ ಉಪಕರಿಸಬೇಕೆಂದು ನಮ್ಮ ನಮ್ರ ಪ್ರಾರ್ಥನೆ. ಅದರಿಂದ ಗ್ರಾಹ್ಯಸಂದರ್ಭಗಳಲ್ಲಿ ತಿದ್ದುಪಡಿ ಮಾಡಲು ಸಹಾಯವಾದೀತು.

ಶುದ್ಧ ಭಾರತೀಯ ವಾಙ್ಮಯದಲ್ಲಿ ಮನಃಶಾಸ್ತ್ರವೆಂಬ ಪ್ರತ್ಯೇಕವಾದ ಶಾಸ್ತ್ರಪರಂಪರೆ ಬೆಳೆದುಬಂದಿಲ್ಲವಾದರೂ ತತ್ವಜ್ಞಾನ, ಶರೀರಶಾಸ್ತ್ರ, ಆಯುರ್ವೇದ ಚಿಕಿತ್ಸಾಶಾಸ್ತ್ರ ಮುಂತಾದವುಗಳ ಅಂಗವಾಗಿ ಅಲ್ಲಲ್ಲಿ ಆತ್ಮ, ಮನಸ್ಸು, ಬುದ್ಧಿ ಇತ್ಯಾದಿ ಪದಾರ್ಥಗಳನ್ನು ಕೆಲಮಟ್ಟಿಗೆ ವಿವೇಚಿಸಿ ಹೇಳಿದ್ದುಂಟು. ಆಯುರ್ವೇದೀಯ ದೃಷ್ಟಿಯಿಂದ ವಿವೃತವಾದ ಮನೋವಿಜ್ಞಾನದ ಮುಖ್ಯ ಅಂಶಗಳನ್ನು ಸಾಕಷ್ಟು ಸಂಕ್ಷಿಪ್ತವಾಗಿ ಅನುಬಂಧಿಸಲಾಗಿದೆ. ಆದರೆ ಹೊಸಹಳ ಮನಃಶಾಸ್ತ್ರಗಳ ಬೋಧಗಳನ್ನು ಹೋಲಿಸಿ ಒರೆಗೆ ಹಚ್ಚುವ ಹೊಣೆಯನ್ನು ನಾವು ಹೊತ್ತುಕೊಳ್ಳದೆ, ಅದನ್ನು ವಿಮರ್ಶ ಚತುರರಾದ ಓದುಗರಿಗೇ ಬಿಟ್ಟು ಬಿಟ್ಟಿದ್ದೇವೆ.

ಸಾಮಾನ್ಯ ಮನಃಶಾಸ್ತ್ರದ ಸ್ಥೂಲ ಪರಿಚಯವನ್ನು ಮಾಡಿಕೊಡುವ ಉದ್ದೇಶದಿಂದ ಬರೆಯಲಾದ ಈ ಪುಸ್ತಕವು ಕನ್ನಡ ನಾಡಿನ ಸಾಹಿತ್ಯ ವಿಮರ್ಶಕರಿಂದ, ಮನಃಶಾಸ್ತ್ರಜ್ಞರಿಂದ ಹಾಗೂ ವಿಚಾರಪರರಾದ ಸಾಮಾನ್ಯ ಓದುಗರಿಂದ ಸ್ವಾಗತಿಸಲ್ಪಟ್ಟೀತೆಂದು ಹಾರಯಿಸಿ, ಈ ಎಲ್ಲರ ಸಹಾನುಭೂತಿಯನ್ನೂ ಹೃತ್ಪೂರ್ವಕವಾಗಿ ಹಾರಯಿಸುತ್ತೇವೆ. ಗ್ರಂಥಕ್ಕೆ ಅಗತ್ಯವಾದ ನಕ್ಷೆಗಳನ್ನು (ಚಿತ್ರಗಳನ್ನು) ಬರೆದುಕೊಟ್ಟ ಶ್ರೀ ಆರ್. ಎಸ್. ಶೇಟಿಯ Sr. B.Sc. ಇವರನ್ನು ಇಲ್ಲಿ ಸ್ಮರಿಸದೆ ಇರಲಾರೆವು.

**–ಗ್ರಂಥಕರ್ತರು.**

# ಅನುಕ್ರಮಣಿಕೆ

# ಅಧ್ಯಾಯ ಒಂದು

# ಪೀಠಿಕೆ

**ಮನಃಶಾಸ್ತ್ರದ ಪ್ರಯೋಜನ:** 'ಮಾನವನ ಬಂಧಕ್ಕೂ–ಮೋಕ್ಷಕ್ಕೂ ಮನಸ್ಸೇ ಕಾರಣ' ಎಂಬ ಗೀತಾವಾಕ್ಯವು ಭಾರತೀಯನಿಗೆ ಅಪರಿಚಿತವಲ್ಲ. ಭಾರತೀಯ ತತ್ತ್ವಜ್ಞಾನದ ಆಧುನಿಕ ಅಭ್ಯಾಸಿಗಳು ಅದರ ವಿಷಯವನ್ನು ಮನಃಶಾಸ್ತ್ರ, ಅತಿಭೌತಶಾಸ್ತ್ರ, ಸೃಷ್ಟಿಕ್ರಮ ವಿವರಣದ ಶಾಸ್ತ್ರ ಮತ್ತು ಮರಣೋತ್ತರ ಜೀವನದ ಶಾಸ್ತ್ರ ಎಂದು ಸಾಮಾನ್ಯವಾಗಿ ನಾಲ್ಕು ವಿಭಾಗಗಳನ್ನು ಮಾಡುವುದುಂಟು. ಇದರಿಂದ ಭಾರತದ ಹಿಂದಿನ ವಿಚಾರ ಜೀವಿಗಳು ಮನಸ್ಸಿನ ಕಾರಭಾರಗಳಿಗೆ ಸ್ಥಾನವಿತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಪ್ರತಿ ಒಬ್ಬನಿಗೂ ತನಗೆ ಒಂದು ದೇಹ ಮತ್ತು ಒಂದು ಮನಸ್ಸು ಇವೆ ಎಂಬುದು ಗೊತ್ತು; ತನ್ನ ಜಾಗೃತ ಜೀವನವಾದರೂ ಮನಸ್ಸಿನ ಕಾರ್ಯಗಳ ಮೂಲಕ ನಡೆಯುತ್ತದೆ ಎಂಬುದರ ಅರಿವು ಉಂಟು. ಆದರಿಂದು ಭಾರತವು ಪಾಶ್ಚಾತ್ಯ ನಾಗರಿಕತೆಯ ಸಂಪರ್ಕವನ್ನು ಪಡೆದು ಶಿಕ್ಷಣ ಕ್ಷೇತ್ರದಲ್ಲಿ ಮನಃಶಾಸ್ತ್ರಕ್ಕೆ ವಿಶಿಷ್ಟ ಸ್ಥಾನವನ್ನು ಕೊಟ್ಟಿದೆ.

ಮನಃಶಾಸ್ತ್ರವನ್ನು ಕಲಿಯದೆ ಮನುಷ್ಯ ಬದುಕಲಾರನೆ? ಎಂದು ಯಾರಾದರೂ ಕೇಳಬಹುದು. ಯಾವ ಶಾಸ್ತ್ರವನ್ನೂ ಕಲಿಯದೆ ಎಷ್ಟೋ ಜನ ಬದುಕಿರಬಹುದು. ಆದರೆ ಅನುಭವದಿಂದ ಪಾಠ ಕಲಿತು ಪ್ರಗತಿ ಹೊಂದಬೇಕೆಂಬ ಯಾವನೂ ಶಾಸ್ತ್ರಜ್ಞಾನವನ್ನು ಉಪೇಕ್ಷಿಸಲಾರ. ಶಾಸ್ತ್ರವು ಅನುಭವದ ವೈಜ್ಞಾನಿಕವಾದ ಸಂಗ್ರಹ. ಎಲ್ಲ ಶಾಸ್ತ್ರಗಳಲ್ಲೂ ವಿಚಾರದ ಪಾತ್ರ ಪ್ರಮುಖವಾಗಿದೆ. ಅಂಥ ವಿಚಾರದ ಸಾಧನವೆಂದರೆ ಮನಸ್ಸು. ಮನಃಶಾಸ್ತ್ರ ಹೇಳುವುದು ಮನಸ್ಸಿನ ಕಾರ್ಯಜಾಲವನ್ನು. ಹೀಗಿರುವಾಗ ಮನಃಶಾಸ್ತ್ರದ ಪ್ರಾಧಾನ್ಯ ಎಷ್ಟೆಂಬುದನ್ನು ಹೊಸದಾಗಿ ಹೇಳಬೇಕೆ?

ಶರೀರಶಾಸ್ತ್ರ, ರಸಾಯನಶಾಸ್ತ್ರ ಮತ್ತು ಭೌತಶಾಸ್ತ್ರಗಳನ್ನು ಶುದ್ಧ ವೈಜ್ಞಾನಿಕ ಶಾಸ್ತ್ರಗಳೆನ್ನುತ್ತಾರೆ. ಏಕೆಂದರೆ ಅವು ಪ್ರತ್ಯಕ್ಷವಾದ ಪ್ರಯೋಗ, ವಿಜ್ಞಾನದ ಸಂಶೋಧನ ಮಾರ್ಗವನ್ನು ಚಾಚೂ ತಪ್ಪದೆ ಹಿಡಿದಿವೆ. ಆದುದರಿಂದ ಈ ವಿಜ್ಞಾನಯುಗದಲ್ಲಿ ಮನಃಶಾಸ್ತ್ರವಾದರೂ ಪ್ರಯೋಗ–ವಿಜ್ಞಾನದ ಪ್ರತ್ಯಕ್ಷವನ್ನೇ ಪರಮಪ್ರಮಾಣವೆಂದು ಗ್ರಹಿಸಿ ಮುನ್ನಡೆಯಲಾರಂಭಿಸಿತು. ಎರಡನೆಯ ಜಾಗತಿಕ ಮಹಾಯುದ್ಧದ ಅವಧಿಯಲ್ಲಿ ಅಂದಿನವರೆಗೆ ಗೊತ್ತಿದ್ದ ಮನಃಶಾಸ್ತ್ರಜ್ಞಾನವನ್ನು ಬಳಸಿ ಅನೇಕ ಸೈನಿಕ ಸಮಸ್ಯೆಗಳನ್ನು

ಪರಿಹರಿಸಿಕೊಳ್ಳಲು ಅನುಕೂಲವಾಯಿತು. ಸೈನ್ಯಕ್ಕೆ ಜನರನ್ನು ಸೇರಿಸಿಕೊಳ್ಳುವಾಗ ಆಯಾ ವ್ಯಕ್ತಿಯ ಶಕ್ತಿ–ಆಸಕ್ತಿಗಳನ್ನು ಅರಿತುಕೊಳ್ಳಲು ಅದು ನೆರವಾಯಿತು. ರಣರಂಗದ ವಿವಿಧ ಕಾರ್ಯಗಳ ದಕ್ಷ ನಿರ್ವಹಣೆಗೆ ಎಂಥ ಶಕ್ತಿ ಸಂಪನ್ನತೆ–ಆಸಕ್ತಿಮತ್ತೆಗಳು ಬೇಕು ಎಂಬುದನ್ನು ವಿಶ್ಲೇಷಿಸಿ ನಿರ್ಣಯಕ್ಕೆ ಬರಲು ಅದರಿಂದ ಸಾಧ್ಯವಾಯಿತು. ಯುಕ್ತಕಾರ್ಯದಲ್ಲಿ ಯುಕ್ತನನ್ನು ನಿಯಮಿಸುವುದರಲ್ಲೂ ಹಾಗೆ ನಿಯಮಿಸಲ್ಪಟ್ಟವನಿಗೆ ಯುಕ್ತ ತರಬೇತನ್ನು ಕೊಡುವ ಕ್ರಮವನ್ನು ನಿರ್ಣಯಿಸುವುದರಲ್ಲೂ ಮನಃಶಾಸ್ತ್ರ ಅಪಾರ ಸಹಾಯಮಾಡಿತು. ವ್ಯಕ್ತಿಯ ಭಾವಸ್ಥೈರ್ಯ–ಕಷ್ಟಸಹಿಷ್ಣುತೆಗಳನ್ನು ಅಳೆಯಲು ಶಕ್ಯವಾಯಿತು. ಅದೇ ಮೇರೆಗೆ ಶಾಂತಿಕಾಲದಲ್ಲಾದರೂ ವ್ಯಕ್ತಿಯ ಬಲಾಬಲ ವಿವೇಕವನ್ನರಿತು ತಕ್ಕ ಕಾರ್ಯಕ್ಷೇತ್ರದಲ್ಲಿ ಅವನಿಗೆ ಪ್ರವೇಶ ಕೊಟ್ಟರೆ ಕಾರ್ಯದಕ್ಷತೆ ಹೆಚ್ಚುವುದೆಂಬುದು ಹೆಚ್ಚುಹೆಚ್ಚಾಗಿ ಅನುಭವಕ್ಕೆ ಬರತೊಡಗಿತು.

ಉದ್ಯಮ, ಆಡಳಿತ, ಶಾಂತ್ಯರ್ಥವಾದ ಜಾಗತಿಕ ಸಂಘಟನೆ ಮುಂತಾದ ಯಾವ ಕ್ಷೇತ್ರವನ್ನು ತೆಗೆದುಕೊಂಡರೂ ಅದರಲ್ಲಿ ದುಡಿಯುವ ಮನುಷ್ಯರ ಕೌಶಲ ಹಾಗೂ ಸಂಕಲ್ಪಶಕ್ತಿಗಳೇ ಆಯಾ ಕ್ಷೇತ್ರದ ಸಿದ್ಧಿಗೆ ಮುಖ್ಯ ಕಾರಣಗಳೆಂಬುದು ಸುಸ್ಪಷ್ಟ. ಆದುದರಿಂದ ನಮ್ಮ ಜೀವನದ ವಿವಿಧ ರಂಗಗಳಲ್ಲಿ ದಕ್ಷವಾದ ಕಾರ್ಯನಿರ್ವಾಹ ಸಿದ್ಧಿಸಬೇಕಾದರೆ ಮಾನವನ ಮನೋದೈಹಿಕ ವರ್ತನಾ ವೈವಿಧ್ಯವನ್ನು ವಿವೇಚಿಸುವ ಪ್ರಾಯೋಗಿಕ ಮನಃಶಾಸ್ತ್ರದ ಅಭ್ಯಾಸ–ಅನ್ವಯಗಳು ಅತ್ಯವಶ್ಯಕ ಎಂಬುದಿಂದು ನಿರ್ವಿವಾದವಾದ ಸಂಗತಿಯಾಗಿದೆ.

ಮನಃಶಾಸ್ತ್ರದ ಲಕ್ಷಣ ಮತ್ತು ಗುರಿ: ಐತಿಹಾಸಿಕ ಕ್ರಮದಿಂದ ನಾವೀಗ ಮನಃಶಾಸ್ತ್ರದ ಬೇರೆ ಬೇರೆ ಲಕ್ಷಣಗಳನ್ನು ಅವಲೋಕಿಸೋಣ. ಮೊದಲನೆಯದಾಗಿ, ಮನಃಶಾಸ್ತ್ರವೆಂದರೆ ಆತ್ಮವಿಜ್ಞಾನ ಎಂದು ಹೇಳುವ ಪ್ರಾಚೀನತಮ ಲಕ್ಷಣ ನಮಗೆದುರಾಗುತ್ತದೆ. ಆತ್ಮವೆಂಬ ಪದಕ್ಕೊಂದು ಧಾರ್ಮಿಕ ಬಣ್ಣವಿರುವುದರಿಂದ ಅದನ್ನು ಸ್ವೀಕರಿಸುವುದು ವೈಜ್ಞಾನಿಕವಾಗಲಾರದು. ಅಲ್ಲದೆ ಆತ್ಮಪದದ ಅರ್ಥ ಅಸ್ಪಷ್ಟ. ಅದು ಎಲ್ಲಿದೆ ಎಂಬುದಾಗಲಿ, ಅದರ ಸತ್ಯಸ್ವರೂಪ ಎಂಥದೆಂಬುದಾಗಲಿ ತಿಳಿಯದು.

ಮನಃಶಾಸ್ತ್ರವೆಂದರೆ ಮನೋವಿಜ್ಞಾನ ಎಂಬುದು ಎರಡನೆಯ ಲಕ್ಷಣ. ಮನಸ್ಸು ಎಂಬ ಪದಕ್ಕೆ ವಿಶಿಷ್ಟವಾದ ಧಾರ್ಮಿಕ ಅಥವಾ ದೈವವಿಜ್ಞಾನದ ಬಣ್ಣ ಹತ್ತಿಕೊಂಡಿಲ್ಲವಾದರೂ ಈ ಲಕ್ಷಣ ಅಷ್ಟೇನೂ ಸಮರ್ಪಕವೆನಿಸಲಿಲ್ಲ. ಏಕೆಂದರೆ ಈ ಲಕ್ಷಣದ ಪ್ರಕಾರ ಮನಃಶಾಸ್ತ್ರವೆಂಬುದು ಒಂದು ಯಾಂತ್ರಿಕ ಸ್ವರೂಪವುಳ್ಳ ಶಾಸ್ತ್ರ ಎಂದು ಧ್ವನಿತವಾಗುತ್ತದೆ. ಮನಸ್ಸು ಎಂಬ ಒಂದು ದೃಶ್ಯ–ಸ್ಪೃಶ್ಯವಸ್ತು ಎಲ್ಲಿಯೂ ಇಲ್ಲ. ಅದು ಬರಿ ಒಂದು ಕೃತ್ಯ (Function) ಅಷ್ಟೇ. ಮನಃಶಾಸ್ತ್ರದ ವಿಷಯವು ಕಾರ್ಯಜಾಲವಲ್ಲದೆ ವಸ್ತು ಜಾಲವಲ್ಲ. ಮಿದುಳು ಬೇರೆ, ಮನಸ್ಸು ಬೇರೆ. ದೃಶ್ಯ–ಸ್ಪೃಶ್ಯವಾದ ಮಿದುಳು ಮನಃಕೃತ್ಯದ ಶಾರೀರಿಕ ಸಾಧನ.

ಮೂರನೆಯದಾಗಿ, ಮನಃಶಾಸ್ತ್ರವು ಮಾನಸಿಕ ಜೀವನದ ವಿಜ್ಞಾನ ಎಂಬ ಲಕ್ಷಣ

ಹುಟ್ಟಿತು. ಇದು ಮೊದಲಿನೆರಡು ಲಕ್ಷಣಗಳಿಗಿಂತ ಹೆಚ್ಚು ತೃಪ್ತಿಕರ ಎಂಬುದೇನೋ ನಿಜ. ಏಕೆಂದರೆ, "ಮಾನಸಿಕ ಜೀವನ" ಎಂಬ ಪದದಲ್ಲಿ ಕಾರ್ಯ ಹಾಗೂ ವರ್ತನೆಗಳ ಕಲ್ಪನೆಗಳು ಅಡಕವಾಗುತ್ತವೆ; ಅವು ಮನಃಶಾಸ್ತ್ರದಲ್ಲಿ ಮುಖ್ಯವಾದಂಥವು. ಆದರೆ ಈ ಲಕ್ಷಣವು ಬಹಳ ಮೊಟಕಾಯಿತೆಂಬ ಟೀಕೆಗೆ ಎಡೆಯುಂಟಾಯಿತು. ಲಕ್ಷಣದಲ್ಲಿ ಮಾನಸಿಕ ಜೀವನದ ಏನಾದರೊಂದು ಕುರುಹು ಸೂಚಿತವಾಗಬೇಕಾದುದು ಅಗತ್ಯ.

ಅದೊಂದು ಪ್ರಜ್ಞಾವಿಜ್ಞಾನವೆಂಬುದು ನಾಲ್ಕನೆಯ ಲಕ್ಷಣ. ಮನಃ ಶಾಸ್ತ್ರವು ಮಾನವ್ಯ ಪ್ರಜ್ಞೆಯ ಎಲ್ಲ ಮುಖಗಳನ್ನೂ ಪರಿಶೀಲಿಸುತ್ತದೆ. ಸಾಮಾನ್ಯ ಮನುಷ್ಯನು ತನಗೇನಾಗುವುದೆಂದು ತಿಳಿದುಕೊಳ್ಳುವನೋ ಅವೆಲ್ಲವೂ ಮನಃಶಾಸ್ತ್ರದ ಕಕ್ಷೆಯಲ್ಲಿ ಬರುತ್ತವೆ. ಆದರೆ ಈ ಲಕ್ಷಣ ಸಾಕಷ್ಟು ವ್ಯಾಪಕವಾಗಿಲ್ಲ, ಅವ್ಯಾಪ್ತಿದೋಷದಿಂದ ಕೂಡಿದೆ. ಏಕೆಂದರೆ, ಇದರಲ್ಲಿ ನಮ್ಮ ಬಾಳಿನ ಅಜ್ಞಾತಪ್ರಜ್ಞೆಯ ಅಂಶಗಳು ಗೃಹೀತವಾಗಿಲ್ಲ; ನಮ್ಮ ಮೂಡಿ ಮುಳುಗುವ ಕನಸುಗಳನ್ನೂ ನಮ್ಮ ವರ್ತನೆಯ ಹಿನ್ನೆಲೆಯಲ್ಲಿಯ ಪರೋಕ್ಷ ಪ್ರಚೋದನೆಗಳನ್ನೂ ಮನೋವಿಶ್ಲೇಷಕನು ಗಣ್ಯವೆಂದು ಗ್ರಹಿಸುತ್ತಾನೆ.

ಮಾನವವ್ಯಕ್ತಿಯ ಜ್ಞಾತಪ್ರಜ್ಞೆ–ಅವಪ್ರಜ್ಞೆ ಕಾರ್ಯಗಳ ವಿಜ್ಞಾನವನ್ನು ಮನಃಶಾಸ್ತ್ರವೆಂಬುದು ಐದನೆಯ ಲಕ್ಷಣ. ವುಡ್‌ವರ್ತ್ ಮಹಾಶಯನ ಉಕ್ತಲಕ್ಷಣ ಅತ್ಯಂತ ಸಮರ್ಪಕ ಲಕ್ಷಣಗಳಲ್ಲೊಂದೆನ್ನಬಹುದು. ಅದು ಮಾನಸಿಕ ಜೀವನದ ಎಲ್ಲ ಅಂಶಗಳನ್ನೂ ಒಳಗೊಳ್ಳುತ್ತದೆ. ಆದರೆ ಅದಕ್ಕೂ ಅವ್ಯಾಪ್ತಿ ದೋಷ ಅಂಟಿಕೊಂಡಿದೆ. ಏಕೆಂದರೆ, ಅದು ಪ್ರಾಣಿ–ಮನಃಶಾಸ್ತ್ರವನ್ನೂ ನಮ್ಮ ಸಾಮಾಜಿಕ ಕಾರ್ಯಜಾಲವನ್ನೂ ತನ್ನ ಕಕ್ಷೆಯಿಂದ ಹೊರಗೆ ಅಟ್ಟಿದೆ.

ಕೊನೆಯದಾಗಿ, ಅದೊಂದು ವರ್ತನಾವಿಜ್ಞಾನ ಎಂಬ ಲಕ್ಷಣ ಇಂದು ರೂಢಿಗೆ ಬಂದಿದೆ. ಈ ಲಕ್ಷಣದಲ್ಲಿ ಪ್ರಾಣಿಮನಃಶಾಸ್ತ್ರವು ಅಳವಟ್ಟಿದೆ. ಪ್ರಾಣಿಗಳಿಗೆ ಪ್ರಜ್ಞೆ ಇದೆಯೋ ಇಲ್ಲವೋ ಎಂಬ ಪ್ರಶ್ನೆ ಬೇರೆ. ಅವುಗಳ ವರ್ತನೆಯಂತೂ ಪ್ರತ್ಯಕ್ಷ ಸಿದ್ಧ. ಪ್ರಾಣಿಮನಃಶಾಸ್ತ್ರಕಾರರೂ ವರ್ತನಾವಾದಿಗಳೆಂಬ ಮನಃಶಾಸ್ತ್ರ ಪ್ರಸ್ಥಾನದವರೂ ಈ ಲಕ್ಷಣವನ್ನು ಸೂಚಿಸಿದವರು. ಪ್ರಜ್ಞಾವತ್ತೆಯು ಕೇವಲ ಖಾಸಗಿಯ ವಿಷಯವಾದುದರಿಂದ ಮನಃಶಾಸ್ತ್ರವನ್ನು ಶುದ್ಧವಿಜ್ಞಾನವನ್ನಾಗಿ ಮಾಡುವ ಲವಲವಿಕೆಯುಳ್ಳ ವರ್ತನಾವಾದಿಯು ಪ್ರಜ್ಞೆಯನ್ನು ಹೊರಗಿಟ್ಟು, ಇಂಥ ಪರತಃಪ್ರಮಾಣದಿಂದ ಸಿದ್ಧವಾದ ವಾಸ್ತವ ಲಕ್ಷಣವನ್ನು ಎದುರಿಟ್ಟಿದ್ದಾನೆ. ವರ್ತನಾವಾದದ ಸಂಸ್ಥಾಪಕನಾದ ಜೆ.ಬಿ. ವಾಟ್ಸನ್ ಮಹೋದಯನು ಮನಃಶಾಸ್ತ್ರದ ಕರ್ತವ್ಯವನ್ನು ಹೀಗೆ ವಿವರಿಸಿದ್ದಾನೆ:

"ವೈಜ್ಞಾನಿಕರೆಲ್ಲರಿಗೂ ಆಸಕ್ತಿ ಹುಟ್ಟಿಸತಕ್ಕ ಮನಃಶಾಸ್ತ್ರವು ಮನುಷ್ಯರೂ ಪ್ರಾಣಿಗಳೂ ತಮ್ಮ ಆವರಣದೊಡನೆ ಹೊಂದಿಕೊಂಬ ಪ್ರತ್ಯಕ್ಷ ಸಂಗತಿಯನ್ನು ತನ್ನ ಬೀಜವನ್ನಾಗಿ ಆಯ್ದುಕೊಳ್ಳುತ್ತದೆ. ಇಂಥ ಹೊಂದಿಕೆಗಳು ಸಾಕಷ್ಟು ಇರಬಹುದು. ಇಲ್ಲವೆ ಒಂದು ಪಿಂಡದ ಕೇವಲ ಅಸ್ತಿತ್ವಕ್ಕೆ ಆವಶ್ಯಕವೆನಿಸುವಷ್ಟು ಕನಿಷ್ಠಾವಧಿಕವಾಗಿಯೂ ಇರಬಹುದು. ಎರಡನೆಯದಾಗಿ ಕೆಲ ಪ್ರೇರಣೆಗಳು ಪಿಂಡಗಳನ್ನು ಅನುಕ್ರಿಯೆಯೆಸಗುವಂತೆ ಮಾಡುತ್ತವೆ.

ಪೂರ್ಣಾವಸ್ಥೆಯನ್ನು ಮುಟ್ಟಿದ ಮನಃಶಾಸ್ತ್ರ ಪದ್ಧತಿಯಲ್ಲಿ ಪ್ರೇರಣೆಯನ್ನು ಕೊಟ್ಟಾಗ ಅನುಕ್ರಿಯೆಯನ್ನೂ, ಅನುಕ್ರಿಯೆಯನ್ನು ಕೊಟ್ಟಾಗ ಪ್ರೇರಣೆಯನ್ನೂ ಊಹಿಸಬಹುದು."

ಜೆ.ಬಿ. ವಾಟ್ಸನ್ನನ ಪರತಃಪ್ರಾಮಾಣ್ಯದ ಅತಿದೃಷ್ಟಿಗೆ ವಿರುದ್ಧವಾಗಿ ಜಾರ್ಜ್ ಟಿ. ಲ್ಯಾಡನು ಪ್ರಜ್ಞೆಯ ಘಟನೆಯನ್ನು ಇದ್ದ ಹಾಗೇ ಪದ್ಧತಿ ಪ್ರಕಾರ ವರ್ಣಿಸುವುದೂ ವಿವರಿಸುವುದೂ ಮನಃಶಾಸ್ತ್ರವೆನಿಸುತ್ತದೆ ಎಂದು ಲಕ್ಷಣಿಸಿದ್ದಾನೆ. ಮೆಕ್‌ಡೂಗಲ್ಲನ ಪ್ರಕಾರ ನಮ್ಮನ್ನು ನಾವು ಹೆಚ್ಚು ವಿವೇಕದಿಂದ ನಿಯಂತ್ರಿಸಿಕೊಳ್ಳಲು ಮತ್ತು ಹೆಚ್ಚು ಪರಿಣಾಮಕರವಾಗಿ ನಮ್ಮ ಸಹಜೀವಿಗಳ ಮೇಲೆ ಪ್ರಭಾವ ಬೀರಲು ತಕ್ಕ ಹಾಗೆ ಮಾನವನ ಸ್ವಭಾವದ ಜ್ಞಾನವನ್ನು ಹೆಚ್ಚು ನಿಷ್ಕೃಷ್ಟ ಹಾಗೂ ಕ್ರಮಬದ್ಧ ಮಾಡುವುದೇ ಮನಃ ಶಾಸ್ತ್ರದ ಗುರಿ. ಮನುಷ್ಯ ಸ್ವಭಾವದ ಮನೋಮುಖಕ್ಕಷ್ಟೇ ಮನಃಶಾಸ್ತ್ರದ ಸ್ಪಷ್ಟವಾಗಿ ಸಂಬಂಧಿಸಿದೆ ಎನ್ನುತ್ತಾನವ–ಅದು ಮಾನವ್ಯ ಮನದ ವೈಧಿಕ ಹಾಗೂ ಪ್ರಯೋಗವೈಜ್ಞಾನಿಕ ಸ್ವರೂಪದ ಶಾಸ್ತ್ರ ಎಂಬುದವನ ಮತ. 'ಒಂದು ನಯವಾದ ಅಭಿರುಚಿ ಇಲ್ಲವೆ ಹೊಂದಿಕೆ ಅಥವಾ ವಿವೇಕದೃಷ್ಟಿಯ ನೋಟ' ಎಂಬ ಅರ್ಥದಲ್ಲಿ 'ಸೈಕಾಲಾಜಿಕಲ್' (ಮನಃಶಾಸ್ತ್ರೀಯ, ಮನೋಧಾರ್ಮಿಕ) ಎಂಬ ಪದವನ್ನು ಜನಪ್ರಿಯ ಸಾಹಿತ್ಯದಲ್ಲಿ ಬಳಸುತ್ತಿರುವುದನ್ನು ನೈಟ್‌ಡನ್‌ಲ್ಯಾಪ್ ಎತ್ತಿ ತೋರಿಸಿದ್ದಾನೆ. 'ಸೈಕಾಲಾಜಿಕಲ್ ಮೋಮೆಂಟ್' ಎಂದರೆ ಮೇಲಿನ ಅರ್ಥದ ಪ್ರಕಾರ ಒಂದು ಕಾರ್ಯ ನಡೆಯಲು ಬೇಕಾದ ಅತ್ಯಂತ ಉಚಿತ ಕ್ಷಣ ಎಂದಾಗುತ್ತದೆ.

ಸರ್ವಗ್ರಾಹ್ಯವಾದ ಇಂದಿನ ಲಕ್ಷಣ ಇಂತಿದೆ: ಮನಃಶಾಸ್ತ್ರವೆಂದರೆ ಮಾನವನ ಹಾಗೂ ಪ್ರಾಣಿಯ, ಸಮ–ವಿಷಮಾವಸ್ಥೆಗಳ, ವ್ಯಕ್ತಿಯ ಮತ್ತು ಸಮಾಜದ ವಿಚಾರ ಮತ್ತು ವರ್ತನೆಗಳ ಕ್ರಮವಾದ ಅಭ್ಯಾಸ.

ಬೇರೆ ಬೇರೆ ಕ್ಷೇತ್ರಗಳಲ್ಲಿ ಯಶಸ್ವಿಯಾದ ವಿವಿಧ ವೈಜ್ಞಾನಿಕ ಸಂಶೋಧನ ಕ್ರಮಗಳನ್ನು ಮಾನಸಿಕ ಜೀವನ ಮತ್ತು ಅದಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ಅನ್ವಯಿಸಲು ಆಧುನಿಕ ಮನಃಶಾಸ್ತ್ರ ಪ್ರಯತ್ನಿಸುತ್ತದೆ–ಎನ್ನುತ್ತಾನೆ ಟಿಚ್ನರ್. ಮಾನಸಿಕ ಜೀವನವು ಮಾನವ್ಯ ಕಾರ್ಯಜಾಲದಲ್ಲಿ ಪ್ರಕಟವಾಗುತ್ತದೆ; ಆದುದರಿಂದ ವ್ಯಕ್ತಿಯ ಚಟುವಟಿಕೆಗಳ ವೈಜ್ಞಾನಿಕ ಅಭ್ಯಾಸವೇ ಮನಃಶಾಸ್ತ್ರ ಎಂಬುದು ಅವನ ಹೇಳಿಕೆ. ಜೀವ ಹೋದಮೇಲೆ ಒಬ್ಬನಲ್ಲಿ ಸಂಭವಿಸುವ ಯಾವ ಕಾರ್ಯವೂ ಸಜೀವ ಕಾರ್ಯವಲ್ಲ; ಅವನ ಹೆಣದಲ್ಲಿ ಆಗುವುದು ಜಡಕ್ರಿಯೆ. ಆದರೆ ಜೀವವನ್ನಾಧರಿಸಿ ನಡೆವ ಪ್ರತಿಯೊಂದು ಕಾರ್ಯವೂ ಜೈವಿಕ ಅಥವಾ ಚೈತನಿಕವಾದ ಕಾರ್ಯ; ಆದುದರಿಂದ ಮಾತನಾಡುವುದು ಓಡುವುದು ಮಾತ್ರವಲ್ಲದೆ ಕಲಿಯುವುದೂ ಸುಖ–ದುಃಖಗಳನ್ನು ಅನುಭವಿಸುವುದೂ ಚೈತನಿಕ ಕಾರ್ಯಗಳೇ–ಸಚೇತನ ವ್ಯಕ್ತಿಯ ವ್ಯಾಪಾರಗಳೇ. ವ್ಯಕ್ತಿಗಳಲ್ಲಿರುವ ಭೇದ ಮತ್ತು ಸಮಕಾರ್ಯಶೀಲಗಳನ್ನು ಮನಃ ಶಾಸ್ತ್ರವು ಹುಡುಕಲು ಯತ್ನಿಸುತ್ತದೆ. ಮಾನವರ ಸಾಮಾನ್ಯ ವ್ಯಾಪಾರಗಳಾದ ಕಲಿಯುವುದು, ವಿಚಾರ ಮಾಡುವುದು, ಭಾವಿಸುವುದು, ಚಲಿಸುವುದು ಮುಂತಾದವುಗಳಿಗೆ ಆಧಾರಭೂತವಾದ ಸಾಮಾನ್ಯ ವಿಧಿಗಳನ್ನು (ಉತ್ಸರ್ಗ

ನಿಯಮಗಳನ್ನು) ಕಂಡುಹಿಡಿಯಲು ಮನಃಶಾಸ್ತ್ರ ಪ್ರಯತ್ನ ಮಾಡುತ್ತದೆ. ಶವಗಳಲ್ಲಾಗಲಿ, ಮರಣೋತ್ತರ ಜೀವಗಳಲ್ಲಾಗಲಿ ಅದು ಆಸಕ್ತಿವಹಿಸದು; ಶರೀರವುಳ್ಳ, ಬದುಕಿರುವ, ಕ್ರಿಯಾಮಯ ವ್ಯಕ್ತಿಗಳಿಗಷ್ಟೇ ಅದರ ಆಸಕ್ತಿ ಪರಿಮಿತ–ಅರ್ಥಾತ್ ಅದೊಂದು ಸಜೀವ ವ್ಯಕ್ತಿಯ ಕೃತ್ಯರೂಪದ ಮನದ ವರ್ತನೆಗಳ ಮೀಮಾಂಸೆಯಲ್ಲಿ ನಿಷ್ಠವಾದ ಶಾಸ್ತ್ರ. ವರ್ತನೆಗಳನ್ನಿಲ್ಲಿ ಪ್ರಯೋಗ ವೈಜ್ಞಾನಿಕ ಪ್ರತ್ಯಕ್ಷಕ್ಕೆ ಗೋಚರಿಸತಕ್ಕವೆಂದು ಗಣಿಸಿರುವುದು ಗಮನೀಯ; ಅವು ಮನಃಕೃತ್ಯದ ಆವಿರ್ಭಾವಗಳು, ಪ್ರಕಟಸ್ವರೂಪಗಳು.

ಮೇಲಿನ ಮಾತುಗಳಿಂದ ಮನಃಶಾಸ್ತ್ರದ ಗುರಿ ಆತ್ಮಸಂಶೋಧಕವಲ್ಲ–ಮನಃಶೋಧ ಎಂಬುದು ಸ್ಪಷ್ಟವಾಗುತ್ತದೆ. Function ಅಥವಾ ಕೃತ್ಯದ ಸ್ವರೂಪವುಳ್ಳ ಮನಸ್ಸು ಜೀವಂತ ಶರೀರದಲ್ಲಿ ಮನೋದೈಹಿಕ ವರ್ತನೆಗಳ ರೂಪದಲ್ಲಿ ವ್ಯಕ್ತವಾಗುತ್ತದೆಂದು ನಂಬಿ, ಆ ವರ್ತನೆಗಳನ್ನು ಪರಿಶೀಲಿಸಿ, ತನ್ಮೂಲಕ ಒಂದು ಜೀವಂತವ್ಯಕ್ತಿಯ ಕಷ್ಟಸಹಿಷ್ಣುತೆ, ಕಾರ್ಯದಕ್ಷತೆ, ಮೇಧಾವಿತ್ವ, ಕೌಶಲ ಮುಂತಾದ ಗುಣಗಳನ್ನು ವೈಜ್ಞಾನಿಕವಾಗಿ ನಿರ್ಣಯಿಸಿ, ಜೀವನದಲ್ಲಿ ಅನ್ವಯಾನುಕೂಲವನ್ನು ಕಲ್ಪಿಸಿಕೊಡುವುದು ಮನಃಶಾಸ್ತ್ರದ ಮಹೋದ್ದೇಶ. ಇದರಿಂದ ಪ್ರಸ್ತುತ ಶಾಸ್ತ್ರದ ವೈಜ್ಞಾನಿಕತೆಯ ಜೊತೆಗೇ ಅದರ ಸಿದ್ಧಾಂತಗಳ ವ್ಯವಹಾರ್ಯತೆಯೂ ವಿದಿತವಾಗುತ್ತದೆ.

## ಮನಃಶಾಸ್ತ್ರದ ಶಾಖೆಗಳು

೧. ಶಾರೀರಿಕ ಮನಃಶಾಸ್ತ್ರ: ಇದರಲ್ಲಿ ನಮ್ಮ ಮಾನಸಿಕ ಜೀವನಕ್ಕೆ ನಿಕಟವಾಗಿ ಹೊಂದಿಕೊಂಡಿರುವ ಮಿದುಳಿನ ಶರೀರಶಾಸ್ತ್ರ, ನರಮಂಡಲ, ಇಂದ್ರಿಯಗಳು ಮತ್ತು ನಿರ್ನಾಳಗ್ರಂಥಿಗಳು ಮುಂತಾದ ಶರೀರದ ವಿವಿಧ ಅಂಗಗಳ ಅಭ್ಯಾಸ ಸೇರಿದೆ.

೨. **ತಾತ್ವಿಕ ಮನಃಶಾಸ್ತ್ರ:** ಮನಸ್ಸು ಮತ್ತು ಆತ್ಮಗಳ ಸ್ವಭಾವ, ಮನಸ್ಸು ಮತ್ತು ಶರೀರಗಳ ಸಂಬಂಧ ಹಾಗೂ ಪ್ರಾಚೀನವಾದ ಸಂಕಲ್ಪ ಸ್ವಾತಂತ್ರ್ಯ ಮತ್ತು ನಿಯತಿವಾದಗಳ ಪ್ರಶ್ನೆ ಮುಂತಾದ ಮೂಲಭೂತ ಸಮಸ್ಯೆಗಳ ವಿವೇಚನೆ ಇದರಲ್ಲಿ ಬರುತ್ತದೆ. ಇಲ್ಲಿ ನಿರೀಕ್ಷಣೆಗೂ ಪ್ರಯೋಗಕ್ಕೂ ಸ್ಥಾನವಿಲ್ಲ. ಉಳಿದ ವಿಜ್ಞಾನಗಳಲ್ಲಿ ಹೇಗೋ ಹಾಗೇ ಇದರಲ್ಲಾದರೂ ಮೌಲಿಕ ಕಲ್ಪನೆಗಳ ಮತ್ತು ಅವುಗಳ ಹಿನ್ನೆಲೆಯಲ್ಲಿರುವ ಗೃಹೀತ ಜ್ಞಾನಗಳ ಸ್ಪಷ್ಟೀಕರಣವೇ ಮುಖ್ಯ.

೩. **ಅಭಿಜ್ಞಾಮನಃಶಾಸ್ತ್ರ:** ಈ ಶಾಖೆಯಲ್ಲಿ ಭಾವನೆ ಮತ್ತು ಬಯಕೆಗಳಿಂದ ಭಿನ್ನವಾದ, ಕೇವಲ ಜ್ಞಾನಕ್ಕೆ ಸಂಬಂಧಿಸಿದ ಇಂದ್ರಿಯಪ್ರತ್ಯಕ್ಷ, ಉನ್ಮುಖತೆ, ಜ್ಞಾನಾರ್ಜನೆ, ಸ್ಮೃತಿ ಮತ್ತು ತರ್ಕ ಮುಂತಾದ ಮಾನಸಿಕ ಕಾರ್ಯಗಳು ಅಡಕವಾಗುತ್ತವೆ.

೪. **ಮಾನಸ–ಮಾನಶಾಸ್ತ್ರ:** ಮಾನಸ–ಮಾನಶಾಸ್ತ್ರವು ಮಾನಸಿಕ ಗುಣಗಳನ್ನು ಅಳೆಯುತ್ತದೆ. ಇದರಲ್ಲಿ ಹೆಚ್ಚು ಪ್ರವರ್ಧಮಾನಕ್ಕೆ ಬಂದ ವಿಭಾಗ ಎಂದರೆ

ಬುದ್ಧಿ ಪರೀಕ್ಷಣ; ಆದರೆ "ವಿಶಿಷ್ಟ ಶಕ್ತಿಗಳು" ಎನ್ನಿಸಿಕೊಂಡ ಯಾಂತ್ರಿಕ ಶಕ್ತಿ ಅಥವಾ ಸಾಂಗೀತಿಕ ಶಕ್ತಿ ಮುಂತಾದವನ್ನು ಸಾಕಷ್ಟು ಸರಿಯಾಗಿ ಅಳೆಯಲು ಸದ್ಯಃ ಸಾಧ್ಯವಾಗಿದೆ; ಅಲ್ಲದೆ ಮನಃಪ್ರಣಾಲಿಗಳನ್ನು ಮತ್ತು ವ್ಯಕ್ತಿತ್ವದ ಲಕ್ಷಣಗಳನ್ನು ಅಳೆಯುವಲ್ಲಿ ಪ್ರಯೋಗ ಮುಂದುವರಿಯುತ್ತಿದೆ.

೫. **ಪ್ರಾಣಿಮನಃಶಾಸ್ತ್ರ:** ಪ್ರಾಣಿಗಳ ಮೂಲಪ್ರವೃತ್ತಿ, ಕಲಿಯುವ ವಿಧಾನ ಮತ್ತು ಅವಕ್ಕೆ ಬುದ್ಧಿ ಇವೆ ಎಂದು ಹೇಳಬಹುದಾದ ಅರ್ಥ–ಇವುಗಳಿಗೆ ಸಂಬಂಧಿಸಿದ ಮುಖ್ಯವಾದ ಮಾನಸಶಾಸ್ತ್ರೀಯ ಸಮಸ್ಯೆಗಳ ವಿವೇಚನೆ ಇಲ್ಲಿದೆ. ಪ್ರಾಣಿಗಳ ಮೇಲೆ ಮಾಡಿದ ಪ್ರಯೋಗಗಳಿಂದ ಮಿದುಳು ಮತ್ತು ನರಮಂಡಲಗಳ ಕೃತ್ಯಗಳ ಜ್ಞಾನವು ನಮಗೆ ಹೆಚ್ಚಾಗಿ ಲಭಿಸಿದೆ.

೬. **ಸಾಮಾಜಿಕ ಮನಃಶಾಸ್ತ್ರ:** ಮನಃಶಾಸ್ತ್ರದ ಶಾಖೆಯಲ್ಲಿ ವ್ಯಕ್ತಿಗಳ ವಿಚಾರ ಮತ್ತು ವರ್ತನೆಗಳ ಮೇಲೆ ಅವರು ಇತರರೊಡನೆ ಇಟ್ಟುಕೊಂಡ ಸಂಬಂಧಗಳ ಹಾಗೂ ಅವರು ಸೇರಿರುವ ವಿವಿಧ ಸಾಮಾಜಿಕ ಗುಂಪುಗಳ ರಚನೆ, ಸಂಸ್ಥೆಗಳು, ಸಂಪ್ರದಾಯ ಮತ್ತು ಉತ್ಕ್ರಿಯಾತ್ಮಕ ಶಕ್ತಿಗಳ ಪ್ರಭಾವ ಹೇಗೆ ಬೀಳುತ್ತದೆ ಎಂಬುದರ ಪ್ರತಿಪಾದನೆ ಇಲ್ಲಿದೆ.

೭. **ಉತ್ಕ್ರಿಯಾ ಮನಃಶಾಸ್ತ್ರ:** ಇದು ಮೂಲಪ್ರವೃತ್ತಿ, ಭಾವನೆ ಮತ್ತು ಇತರ ಜ್ಞಾತ–ಅಜ್ಞಾತ ಪ್ರಜ್ಞೆಗಳ ಉತ್ಕ್ರಿಯಾತ್ಮಕ ಶಕ್ತಿಗಳು ಹೇಗೆ ನಮ್ಮನ್ನು ಕಾರ್ಯದಲ್ಲಿ ಪ್ರವರ್ತಿಸುತ್ತವೆ ಎಂಬುದನ್ನು ಚರ್ಚಿಸುತ್ತದೆ.

ಇನ್ನೊಂದು ವಿಧದಿಂದ ಮನಃಶಾಸ್ತ್ರವನ್ನು ವಿಭಜಿಸುವುದೂ ಉಂಟು. ಆ ಪ್ರಕಾರ ಮನಃಶಾಸ್ತ್ರದಲ್ಲಿ ಶುದ್ಧ ಮತ್ತು ಅನ್ವಿತ ಎಂದು ಎರಡು ಬಗೆ. ಮನಃ ಶಾಸ್ತ್ರೀಯ ಜ್ಞಾನವನ್ನು ಹೆಚ್ಚಿಸಿಕೊಂಬುದು ಶುದ್ಧ ಮನಃಶಾಸ್ತ್ರದ ಕೆಲಸ. ಮನೋರೋಗಗಳು ಬಾರದಂತೆ ಮುಂಜಾಗ್ರತೆ ವಹಿಸುವ ಮತ್ತು ಅವನ್ನು ಗುಣಪಡಿಸುವ ಹಾಗೂ ಶಿಕ್ಷಣ, ಉದ್ಯಮ, ಮಕ್ಕಳ ಸಾಕಣೆ, ಉದ್ಯೋಗದ ಆಯ್ಕೆ ಮುಂತಾದ ವ್ಯಾವಹಾರಿಕ ಸಮಸ್ಯೆಗಳನ್ನು ಪರಿಹರಿಸುವ ಕಾರ್ಯಗಳಲ್ಲಿ ಮನಃಶಾಸ್ತ್ರದ ಜ್ಞಾನವನ್ನು ಅನ್ವಯಿಸುವುದು ಅನ್ವಿತ ಮನಃಶಾಸ್ತ್ರಜ್ಞನ ಕೆಲಸ. ಮನಃಶಾಸ್ತ್ರಕ್ಕೆ ಮೊದಲು ಸ್ವತಂತ್ರ ಜ್ಞಾನಶಾಖೆ ಎಂಬ ಮನ್ನಣೆ ದೊರೆತ ೧೯ನೆಯ ಶತಮಾನದಲ್ಲಿ ಶುದ್ಧ ಮನಃಶಾಸ್ತ್ರವೇ ಗಣ್ಯವಾಗಿತ್ತು–ಅದರಲ್ಲೂ ಮನಃಶಾಸ್ತ್ರಜ್ಞರ ಲಕ್ಷ್ಯ ತಾತ್ವಿಕ ಮನಃಶಾಸ್ತ್ರ ಮತ್ತು ಅಭಿಜ್ಞಾ ಮನಃಶಾಸ್ತ್ರಗಳ ಮೇಲೆಯೇ. ಆದರೆ ಇಂದು ಪ್ರಾಧಾನ್ಯ ಕೊಡುವುದರಲ್ಲಿ ದೃಷ್ಟಿ ಬದಲಾಗಿದೆ. ಅನ್ವಿತಮನಃಶಾಸ್ತ್ರವು ತಕ್ಕ ಪ್ರಾಧಾನ್ಯವನ್ನು ಪಡೆದಿದೆ; ತಾತ್ವಿಕ ಮನಃಶಾಸ್ತ್ರ ಮತ್ತು ಅಭಿಜ್ಞಾಮನಃಶಾಸ್ತ್ರಗಳ ಪ್ರಾಮುಖ್ಯಕ್ಕೆ ಸಾಕಷ್ಟು ಮನ್ನಣೆ ದೊರೆತಿದ್ದರೂ ಇತರ ಶಾಖೆಗಳ–ಅದರಲ್ಲೂ ಉತ್ಕ್ರಿಯಾತ್ಮಕ, ಸಾಮಾಜಿಕ ಮನಃಶಾಸ್ತ್ರ ಹಾಗೂ ಮಾನಸ–ಮಾನಶಾಸ್ತ್ರಗಳ–ತೀವ್ರಗತಿಯ ಬೆಳವಣಿಗೆಯಿಂದ ಕೆಲಮಟ್ಟಿಗೆ ಅವುಗಳ ಪ್ರಾಮುಖ್ಯವು ಮಸುಕಾಗಿದೆ. ಈ ವ್ಯತ್ಯಾಸದ ದೆಸೆಯಿಂದ ತಂತ್ರದಲ್ಲಿ ಹೆಚ್ಚಿನ ಪ್ರಗತಿಯಾಗಿದೆ. ಸ್ಥೂಲವಾಗಿ ಹೇಳುವುದಾದರೆ, ಕಳೆದ ೬೦–೭೦ ವರ್ಷಗಳಲ್ಲಿ ಅಂತರ್

ನಿರೀಕ್ಷಣೆ ಮತ್ತು ಕಥನಕ್ರಮಗಳಿಂದ ಮನಃಶಾಸ್ತ್ರವು ನಿಯಂತ್ರಿತ ನಿರೀಕ್ಷಣೆ ಮತ್ತು ಪ್ರಯೋಗಗಳೆಡೆಗೆ ಮುಂದುವರಿದಿದೆ.

ಮತ್ತೂ ಒಂದು ವಿಧವಾಗಿ ಮನಃಶಾಸ್ತ್ರದ ಶಾಖೆಗಳನ್ನು ವಿಸ್ತರಿಸಿ ವಿಭಜಿಸುವುದೂ ಉಂಟು. ಅದರ ಪ್ರಕಾರ ಸಾಮಾನ್ಯ ಮನಃಶಾಸ್ತ್ರ, ತುಲನಾತ್ಮಕ ಮನಃಶಾಸ್ತ್ರ, ವಿಷಮ ಮನಶಾಸ್ತ್ರ, ಶೈಕ್ಷಣಿಕ ಮನಃಶಾಸ್ತ್ರ, ಔದ್ಯಮಿಕ ಮನಃಶಾಸ್ತ್ರ, ಔದ್ಯೋಗಿಕ ಸಲಹೆಯ ಮನಃಶಾಸ್ತ್ರ ಎಂಬವನ್ನು ಹಿಂದೆ ಹೇಳಿದ ಪಟ್ಟಿಗೆ ಸೇರಿಸಬೇಕಾಗುತ್ತದೆ.

೧. ಸಾಮಾನ್ಯ ಮನಃಶಾಸ್ತ್ರಕ್ಕೆ ಪ್ರಸ್ಥಾನ ಭೇದವಿಲ್ಲ. ವಿವಿಧ ಪ್ರಸ್ಥಾನ ಹಾಗೂ ಶಾಖೆಗಳ ಸಂಶೋಧನೆಯ ಫಲಿತಾಂಶಗಳನ್ನು ಬಳಸಿಕೊಂಡು ಸಮಸ್ಥಿತಿಯ ಮಾನವನ ಮಾನಸಿಕ ಜೀವನದ ಬಗೆಯನ್ನದು ವಿವರಿಸುತ್ತದೆ. ಬಾಲಮನಃಶಾಸ್ತ್ರ, ಗೆಸ್ಟಾಲ್ಟ್ ಪ್ರಸ್ಥಾನ ಅಥವಾ ವರ್ತನಾವಾದ ಮುಂತಾದ ಯಾವ ವಿಭಾಗಗಳಿಂದ ಬೇಕಾದರೂ ಅವಶ್ಯಕ ಸಿದ್ಧಾಂತಗಳನ್ನು ಅದು ಸ್ವೀಕರಿಸುತ್ತದೆ; ಮತ್ತು ಮನಃಶಾಸ್ತ್ರದ ಅಡಿಗಲ್ಲೆನಿಸುವ ಮೂಲಭೂತ ತತ್ವಗಳು ಅದರ ವಿಷಯವೆನಿಸಿವೆ.

೨. ಬಾಲಮನಃಶಾಸ್ತ್ರ, ಹಿಂದೆ ಹೇಳಿದ ಪ್ರಾಣಿಮನಃಶಾಸ್ತ್ರ ಮತ್ತು ಆದಿಮಾನವ–ಮನಃಶಾಸ್ತ್ರ ಎಂಬಿವು ತುಲನಾತ್ಮಕ ಮನಃಶಾಸ್ತ್ರದ ಮೂರು ಉಪಶಾಖೆಗಳು. ಭಾಷಾಶಾಸ್ತ್ರ ಮತ್ತು ಶರೀರರಚನಾ ಶಾಸ್ತ್ರಗಳು ತುಲನಾತ್ಮಕ ಮನಃಶಾಸ್ತ್ರವನ್ನು ಯಶಸ್ವಿಯಾಗಿ ಬಳಸಿಕೊಂಡಿವೆ. ಮಕ್ಕಳ, ಪ್ರಾಣಿಗಳ ಹಾಗೂ ಪ್ರೌಢರ ವರ್ತನೆಗಳ ತುಲನೆಯಿಂದ ಮಾನವಮನದ ಕಾರ್ಯ ವೈವಿಧ್ಯದ ಮೇಲೆ ಬಹಳಮಟ್ಟಿಗೆ ಬೆಳಕು ಬೀಳುವಂತಾಗಿದೆ. ಪ್ರೌಢ ನಾಗರಿಕ ಜನತೆಯ ವರ್ತನೆಯನ್ನು ಆದಿಮಾನವರ ವರ್ತನೆಯೊಡನೆ ಹೋಲಿಸಬಹುದು. ಸಂಸ್ಕೃತಿ–ಪ್ರಗತಿಗಳ ವಿವಿಧ ಮಟ್ಟಗಳಲ್ಲಿ ಬೇರೆ ಬೇರೆ ಕುಲದವರ ಪುರಾಣ, ನಂಬಿಗೆ ಹಾಗೂ ರಾಷ್ಟ್ರೀಯ ಕತೆಗಳನ್ನು ಜೋಡಿಸಿ ನೋಡಬಹುದು.

೩. ವಿಷಮಮನಃಶಾಸ್ತ್ರದಲ್ಲಿ ಮಾನಸಿಕ ಆರೋಗ್ಯ, ಮಾನಸ ಚಿಕಿತ್ಸೆ ಮತ್ತು ಮನೋರೋಗನಿದಾನ ಎಂಬ ಮೂರು ಒಳವಿಭಾಗಗಳಿವೆ. ಮಾನಸಿಕ ಆರೋಗ್ಯಶಾಸ್ತ್ರವು ಮನೋರೋಗ ಬರದಂತೆ ಮುಂಜಾಗ್ರತೆ ವಹಿಸುವ ಮತ್ತು ಮಾನಸಿಕ ಆರೋಗ್ಯವನ್ನು ಕಾಯ್ದುಕೊಂಬ ಬಗೆಯನ್ನು ಹೇಳುತ್ತದೆ. ಮಾನಸಿಕ ಹಾಗೂ ನರಮಂಡಲದ ರೋಗಗಳನ್ನು ಗುಣಪಡಿಸುವ ಬಗೆಯನ್ನು ಮಾನಸ–ಚಿಕಿತ್ಸಾಶಾಸ್ತ್ರ ವಿವರಿಸುತ್ತದೆ. ಅದರ ಗುಣಪಡಿಸುವ ಪದ್ಧತಿಯಲ್ಲಿ ಔಷಧೋಪಚಾರವಿಲ್ಲ; ಮನಃಶಾಸ್ತ್ರೀಯ ವಿಧಾನಗಳಿವೆ. ಮನೋವಶೀಕರಣ, ಸೂಚನೆ, ಸ್ವಯಂಸೂಚನೆ ಮತ್ತು ಮನೋವಿಶ್ಲೇಷಣಗಳು ಅಂಥ ಕೆಲವು ವಿಧಾನಗಳು. ರೋಗನಿದಾನಶಾಸ್ತ್ರದ ಕೆಲಸವು ಶಾರೀರಿಕ ರೋಗದ ಪದ್ಧತಿ ಪ್ರಕಾರವಾದ ಶೋಧನೆ. ಮನೋರೋಗನಿದಾನಕ್ಕೂ ಮಾನಸಚಿಕಿತ್ಸೆಗೂ ಇರುವ

ಸಂಬಂಧವೆಂಬುದು ರೋಗನಿದಾನಕ್ಕೂ ಔಷಧೋಪಚಾರಕ್ಕೂ ಇರುವ ಸಂಬಂಧಕ್ಕೆಣೆಯಾದುದು. ಮನೋರೋಗ ನಿದಾನವು ಮನುಷ್ಯನ ಮನಸ್ಸಿನ ಹಾಗೂ ನರಗಳ ವಿಷಮಾವಸ್ಥೆಯನ್ನು ಪದ್ಧತಿ ಪ್ರಕಾರ ಶೋಧ ಮಾಡುತ್ತದೆ. ಮನೋರೋಗವನ್ನು ಗುಣಪಡಿಸಲು ಹೋಗುವ ಮೊದಲು ಅಂಥ ರೋಗಗಳ ವಿವಿಧ ಪ್ರಕಾರಗಳನ್ನೂ ಅವುಗಳ ಪ್ರಕಟ ಚಿಹ್ನಗಳನ್ನೂ ನಾವು ಅರಿತುಕೊಳ್ಳಬೇಕಾಗುತ್ತದೆ.

೪. ಶೈಕ್ಷಣಿಕ ಮನಃಶಾಸ್ತ್ರವು ಮನಃಶಾಸ್ತ್ರೀಯ ಶೋಧಗಳನ್ನು ಶಿಕ್ಷಣ ತಂತ್ರಕ್ಕೆ ಹಾಗೂ ಮಕ್ಕಳ ಸಮಸ್ಯೆಗಳಿಗೆ ಅನ್ವಯಿಸಲು ಹವಣಿಸುತ್ತದೆ. ಕಲಿಯುವ ಹಾಗೂ ಉನ್ಮುಖವಾಗುವ ಪ್ರಕ್ರಿಯೆಗಳ ಮನಃಶಾಸ್ತ್ರೀಯ ವಿಶ್ಲೇಷಣವು ಶಿಕ್ಷಣತಜ್ಞರಿಗೆ ಬಹಳ ಉಪಕಾರ ಮಾಡಿದೆ. ಬುದ್ಧಿಮಾಪನವಂತೂ ಶಿಕ್ಷಕರಿಗೆ ದೊಡ್ಡ ವರವಾಗಿಬಿಟ್ಟಿದೆ.

೫. ಔದ್ಯಮಿಕ ಮನಃಶಾಸ್ತ್ರದಲ್ಲಿ ಉನ್ಮುಖತೆಯ ಪ್ರಕ್ರಿಯೆ ಯಾವ ಸ್ವರೂಪದ್ದೆಂಬುದರ ಜ್ಞಾನ ಬಹಳ ಉಪಯುಕ್ತವಾಗಿದೆ. ಜನರ ಮನಸ್ಸನ್ನು ಆಕರ್ಷಿಸಿ ಹಿಡಿಯುವ ವಿವಿಧ ರೀತಿಗಳ ಶೋಧ ಅದರಿಂದಾಗಿದೆ. ಜಾಹೀರಾತಿನ ಕ್ರಮಗಳಲ್ಲಿ ಅದರಿಂದ ಸುಧಾರಣೆ ಮಾಡಲು ಸಾಧ್ಯವಾಗಿದೆ. ಸುಸ್ತಾಗುವ ಬಗೆಯ ಅಭ್ಯಾಸದಿಂದ ಒಂದು ಕೆಲಸದಲ್ಲಿ ಅನವಶ್ಯಕ ಚಲನವಲನಗಳನ್ನು ಕಡಿಮೆ ಮಾಡಲು ಅನುಕೂಲವೊದಗಿದೆ. ಕೆಲಸಗಾರರನ್ನು ಸುಖ ಸಂತೃಪ್ತಿಗಳಲ್ಲಿಡುವ ಹಾಗೂ ಉತ್ಪಾದನೆಯನ್ನು ಹೆಚ್ಚಿಸುವುದಕ್ಕಾಗಿ ಸ್ಪರ್ಧಾಲುತ್ವವನ್ನು ಬಳಸುವ ಸಮಸ್ಯೆಗಳನ್ನು ಮನಃಶಾಸ್ತ್ರೀಯವಾಗಿ ವಿವೇಚಿಸಿ ಬಹಳ ಪ್ರಯೋಜನವನ್ನು ಪಡೆಯಲಾಗುತ್ತಿದೆ.

೬. ಔದ್ಯೋಗಿಕ ಸಲಹೆಯ ಮನಃಶಾಸ್ತ್ರದ ಕೆಲಸ ಇಬ್ಬಗೆಯದು: ಒಂದು ಉದ್ಯೋಗದಲ್ಲಿ ಜಯಸಂಪಾದಿಸಲು ಬೇಕಾಗುವ ಸಾಧನಗಳನ್ನು ವಿಶ್ಲೇಷಿಸುವುದು ಹಾಗೂ ಒಂದು ಕೆಲಸಕ್ಕೆ ಯಾರು ಅರ್ಹರೆಂಬುದನ್ನು ವಿವಿಧ ಪರೀಕ್ಷೆಗಳ ಮೂಲಕ ಕಂಡುಹಿಡಿಯುವುದು. ಔದ್ಯೋಗಿಕ ಅನರ್ಹರನ್ನು ತೆಗೆದುಹಾಕುವುದೇ ಈ ಶಾಸ್ತ್ರದ ಗುರಿ. ಮಾನವ್ಯ ಶಕ್ತಿಗಳ ಹಾಗೂ ಮನೋಧರ್ಮದ ಪರಿಚಯ ಮಾನಸಶಾಸ್ತ್ರೀಯ ಅಭ್ಯಾಸಗಳಿಂದ ನಮಗಾಗುತ್ತದೆ. ಮೊದಲಿಗಿಂತ ಈಗ ಉಮೇದುವಾರರ ನಡುವಣ ವೈಯಕ್ತಿಕ ವ್ಯತ್ಯಾಸಗಳನ್ನು ಹೆಚ್ಚು ಸಮರ್ಪಕವಾಗಿ ಅಳೆಯಲು ಸಾಧ್ಯವಾಗಿದೆ. ಬೇರೆ ಬೇರೆ ಬಗೆಯ ಕೆಲಸಗಳಲ್ಲಿ ಯಶಸ್ಸನ್ನು ಸಂಪಾದಿಸಲು ಬೇಕಾದ ಲಕ್ಷಣಗಳನ್ನು ಅಳೆಯುವ ಪರೀಕ್ಷಾಕ್ರಮಗಳೂ ಈಗ ಬಹಳವಾಗಿವೆ.

**ಮನಃಶಾಸ್ತ್ರದ ಕ್ರಮಗಳು:** ೧. ಅಂತರ್ನಿರೀಕ್ಷಣೆ: ಅಂತರ್ನಿರೀಕ್ಷಣೆ ಎಂದರೆ ತನ್ನ ಮನಸ್ಸಿನ ಅವಸ್ಥೆಗಳ ಒಳನೋಟ. ಅದೊಂದು ಆತ್ಮನಿರೀಕ್ಷಣೆ, ಅದರ ಪ್ರಕಾರ ನೇರವಾಗಿ ತನ್ನ ಸ್ಮೃತಿಯ ನೆರವಿನಿಂದ ಒಬ್ಬ ತನ್ನ ಮಾನಸಿಕ ಅವಸ್ಥೆಗಳನ್ನು ನಿರೀಕ್ಷಿಸುತ್ತಾನೆ. ಒಂದು

ಕೆಲಸ ಮಾಡಿದ ಬಳಿಕ ಆ ಕೆಲಸ ಮಾಡುತ್ತಿದ್ದಾಗ ತನ್ನ ಮನಸ್ಸಿನಲ್ಲಿ ಏನು ನಡೆಯಿತೆಂಬುದನ್ನು ಯೋಜ್ಯನು (Subject) ನೆನಪುಮಾಡಿಕೊಳ್ಳಲು ಯತ್ನಿಸುತ್ತಾನೆ. ಜಾಗರೂಕತೆಯಿಂದ ಕ್ರಮಬದ್ಧವಾಗಿ ಅಂತರ್ನಿರೀಕ್ಷಣೆ ಮಾಡಿಕೊಳ್ಳುವುದರಿಂದ ನಮ್ಮ ಜ್ಞಾತ–ಪ್ರಜ್ಞಾ ಜೀವನದ ಬಗ್ಗೆ ಉಪಯುಕ್ತವಾದ ಬಹಳ ಸಂಗತಿಗಳನ್ನು ತಿಳಿದುಕೊಳ್ಳಬಹುದು.

ಅಂತರ್ನಿರೀಕ್ಷಣೆಯ ಪ್ರಕ್ರಿಯೆಯ ವಿಕಾಸದಲ್ಲಿ ಸ್ಟೌಟನು ಮೂರು ಅವಸ್ಥೆಗಳನ್ನು ಉಲ್ಲೇಖಿಸುತ್ತಾನೆ:

೧. ಪರತಃಪ್ರಾಮಾಣ್ಯ ದೃಷ್ಟಿಯಿಂದ ಸ್ವತಃ ಪ್ರಾಮಾಣ್ಯ ದೃಷ್ಟಿಗೆ ಮುಟ್ಟುವ ನಡುವಿನ ಅವಸ್ಥೆ ಮೊದಲನೆಯದು. ಇಲ್ಲಿ ಬೇರೆ ಯಾವುದೋ ಒಂದನ್ನು ಮೊದಲು ನೋಡುತ್ತಿದ್ದವನು ತಾನು ಅದನ್ನು ನೋಡುತ್ತಿದ್ದೇನೆ ಎಂಬುದನ್ನು ನೋಡಲಾರಂಭಿಸುತ್ತಾನೆ. ಒಂದು ವಸ್ತುವಿನ ಧ್ಯಾನದಲ್ಲಿರುವ ಬದಲು ಅವನೀಗ ತನ್ನ ಮನಸ್ಸು ಅದನ್ನು ನೋಡುತ್ತಿದೆ ಎಂಬುದನ್ನು ತಿಳಿಯತೊಡಗುತ್ತಾನೆ. ಅವನ ಉನ್ಮುಖತೆ ಈಗ ವಸ್ತುವಿನ ನಿರೀಕ್ಷಣೆ ಮತ್ತು ಮಾನಸಿಕ ಅವಸ್ಥೆಗಳ ನಿರೀಕ್ಷಣೆ ಎಂದು ಎರಡು ವಿಧವಾಗಿ ವಿಭಾಗವಾಗುತ್ತದೆ; ಅವನ ಆತ್ಮಪ್ರಜ್ಞೆಯು ಮೆಲ್ಲಮೆಲ್ಲನೆ ಎಚ್ಚರ ಹೊಂದುತ್ತದೆ. ಇದು ಅವನ ಪ್ರಕಟ ಆತ್ಮಪ್ರಜ್ಞೆಯ ಮೂಲ ಅವಸ್ಥೆ.

೨. **ಚಿಂತನಾವಸ್ಥೆ:** ಇಲ್ಲಿ ಯೋಜ್ಯನು ತನ್ನ ಮಾನಸಿಕ ಅವಸ್ಥೆಗಳನ್ನು ನಿರೀಕ್ಷಿಸುವುದಲ್ಲದೆ ಅವುಗಳ ಸ್ವಭಾವ ಮತ್ತು ಸತ್ಯತೆಗಳ ಬಗ್ಗೆ ಪ್ರಶ್ನಿಸಲು ಆರಂಭಿಸುತ್ತಾನೆ; ತನ್ನ ಮನಸ್ಸಿನ ಕಾರ್ಯಗಳ ಬಗ್ಗೆ ಹೆಚ್ಚು ಆಸ್ಥೆಯನ್ನು ತಾಳಿ, ತಾನು ನಿಜವಾಗಿಯೂ ಆ ವಸ್ತುವನ್ನು ನೋಡುತ್ತಿದ್ದೇನೆಯೇ ಅಥವಾ ಕನಸು ಕಾಣುತ್ತಿದ್ದೇನೆಯೇ? ಎಂಬಂಥ ಪ್ರಶ್ನೆಗಳನ್ನು ತನಗೆ ತಾನೇ ಹಾಕಿಕೊಳ್ಳುತ್ತಾನೆ.

೩. **ವೈಜ್ಞಾನಿಕ ಅವಸ್ಥೆ:** ಇಲ್ಲಿ ಯೋಜ್ಯನು ನಿರೀಕ್ಷಣೆಯನ್ನು ಸಂಪೂರ್ಣ ವೈಜ್ಞಾನಿಕ ಕ್ರಮವನ್ನಾಗಿ ಬಳಸಿಕೊಳ್ಳುತ್ತಾನೆ; ತನ್ನ ಮನಸ್ಸನ್ನು ನಿರೀಕ್ಷಿಸುವುದರ ಮೂಲಕ ಅದರ ಸಾಮಾನ್ಯ ನಿಯಮಗಳನ್ನು ನಿರ್ಣಯಿಸುತ್ತಾನೆ. "ನಾನು ಏಕಕಾಲದಲ್ಲಿ ಎರಡು ವಸ್ತುಗಳ ಬಗ್ಗೆ ಉನ್ಮುಖನಾಗಬಲ್ಲೆನೆ?" ಎಂಬಂಥ ಪ್ರಶ್ನೆಗಳನ್ನು ಅವನು ಇಲ್ಲಿ ತನಗೆ ತಾನೇ ಹಾಕಿಕೊಳ್ಳುತ್ತಾನೆ.

**ಅಂತರ್ನಿರೀಕ್ಷಣೆಯಲ್ಲಿರುವ ದೋಷಗಳು:** ಮನಃಶಾಸ್ತ್ರದ ಬೆಳವಣಿಗೆಯ ಪ್ರಥಮಾವಸ್ಥೆಯಲ್ಲಿ ಅಂತರ್ನಿರೀಕ್ಷಣೆ ಮನಸ್ಸಿನ ಬಗ್ಗೆ ತಿಳಿವಳಿಕೆ ಕೊಡುವ ಅತಿ ಮುಖ್ಯವಾದ ಸಾಧನವಾಗಿತ್ತು. ಆದರೆ ಕ್ರಮೇಣ ಅನುಭವದಿಂದ ಅಲ್ಲಿರುವ ದೋಷಗಳು ವ್ಯಕ್ತವಾಗುತ್ತ ಬಂದವು. ಮನುಷ್ಯ ಸ್ವಭಾವದ ಕುತೂಹಲಜನಕವಾದ ಅನೇಕ ಮುಖ್ಯ ಅನುಭವಗಳನ್ನು ನಮಗೆ ಬೇಕಾದಾಗ ಬರಿಸಿಕೊಂಡು ವಿರಾಮವಾಗಿ ಅವನ್ನು ಅಭ್ಯಾಸ ಮಾಡಲು ಸಾಧ್ಯವಾಗಲಾರದು. ಏಕೆಂದರೆ, ಅಂಥ ಒಂದು ಅನುಭವವನ್ನು ಪಡೆಯುತ್ತಿರುವಾಗ

ಅದು ನಮ್ಮನ್ನು ತನ್ಮಯಗೊಳಿಸುವುದರಿಂದ ನಮಗೆ ಅಂತರ್ನಿರೀಕ್ಷಣೆಯ ಅವಕಾಶವೇ ಇರುವುದಿಲ್ಲ. ಉದಾಹರಣೆಗಾಗಿ, ನಾವು ನಮ್ಮ ಸ್ನೇಹಿತನ ಅಥವಾ ಸಂಬಂಧಿಕನ ಸಾವಿನ ಸನ್ನಿವೇಶದ ಭಾವನೆಯನ್ನು ಈಗ ಬರಿಸಿಕೊಳ್ಳುವುದಕ್ಕಾಗುವುದಿಲ್ಲ. ಏಕೆಂದರೆ, ಆ ಪ್ರೇರಣೆಯು ಈಗ ಇಲ್ಲ. ಆ ಸನ್ನಿವೇಶವು ವಾಸ್ತವಿಕವಾಗಿ ಒದಗಿದ್ದಾಗ, ನಾವು ದುಃಖದ ಆವೇಗದಲ್ಲಿ ತಲ್ಲೀನರಾಗಿದ್ದುದರಿಂದ ಇನ್ನಾವುದನ್ನೂ ವಿಚಾರ ಮಾಡಲಿಕ್ಕೆ ಆಗಲಿಲ್ಲ.

ಅಂತರ್ನಿರೀಕ್ಷಣೆಯ ಅಭ್ಯಾಸವು ಸ್ವಲ್ಪ ಮಟ್ಟಿಗೆ ಅಸ್ವಾಭಾವಿಕವಾದುದರಿಂದ ಅದನ್ನು ಸುಲಭವಾಗಿ ಕಲಿಯುವುದಕ್ಕಾಗುವುದಿಲ್ಲ. ನುರಿತ ಅಂತರ್ನಿರೀಕ್ಷಕನಾಗಬೇಕಾದರೆ ಸಾಕಷ್ಟು ತಾಳ್ಮೆ ಮತ್ತು ಅಭ್ಯಾಸ ಬೇಕಾಗುತ್ತದೆ. ಮನುಷ್ಯನ ಮನಸ್ಸಿನ ಸ್ವಾಭಾವಿಕ ಪ್ರವೃತ್ತಿಯು ಒಂದು ಕೆಲಸದಿಂದ ಮತ್ತೊಂದಕ್ಕೆ ಮುಂದುವರಿಯುವುದೇ ಹೊರತು ಹಿಂದಕ್ಕೆ ತಿರುಗುವುದಿಲ್ಲ. ಆದುದರಿಂದ ಅಂತರ್ನಿರೀಕ್ಷಕನು ಉದ್ದೇಶಪೂರ್ವಕವಾಗಿ ತನ್ನ ಮನಸ್ಸಿನ ಗತವಸ್ತುಗಳನ್ನು ಪುನಃ ಪ್ರತ್ಯಕ್ಷ ಮಾಡಿಕೊಳ್ಳುವುದನ್ನು ಕಲಿಯಬೇಕು. ಇದು ಬಹಳ ಕಠಿನ. ಆದುದರಿಂದ ಅಂತರ್ನಿರೀಕ್ಷಣೆ ಬಹಳ ಜನರಿಗೆ ಅಸಾಧ್ಯವಾಗಿದೆ.

ಆಗಲೇ ಹೇಳಿರುವಂತೆ ಉನ್ಮುಖತೆಯು ಅಂತರ್ನಿರೀಕ್ಷಣೆಯಲ್ಲಿ ವಿಭಾಗವಾಗುತ್ತದೆ. ಅದರಿಂದ ಉನ್ಮುಖತೆಯ ಓಲಾಟ ಪ್ರಾರಂಭವಾಗುತ್ತದೆ. ಈ ಓಲಾಟ ಬಹಳ ಜನರಿಗೆ ಅಸಹನೀಯವಾಗುತ್ತದೆ; ಆ ಮೂಲಕ ತಪ್ಪು ಹೆಚ್ಚುತ್ತದೆ. ಆದರೆ ಅಭ್ಯಾಸಬಲದಿಂದ ಅಂಥ ತಪ್ಪುಗಳನ್ನು ಕಡಿಮೆ ಮಾಡಿಕೊಳ್ಳುತ್ತಹೋಗಬಹುದು. ಅಂತರ್ನಿರೀಕ್ಷಣೆಯ ಅನುಭವಗಳ ವಿನಿಮಯದಲ್ಲಿ ಭಾಷೆಗೆ ಸಂಬಂಧಿಸಿದ ತೊಂದರೆಗಳು ಉದ್ಭವಿಸುತ್ತವೆ. ಅತಿ ಸೂಕ್ಷ್ಮ ಮತ್ತು ಕ್ಷಣಿಕವಾದ ಭಾವನೆ ಮತ್ತು ಭಾವನಾಂಶಗಳು ನಿಷ್ಕೃಷ್ಟಾರ್ಥವುಳ್ಳ ಪದಗಳಿಗೆ ಎಟಕುವುದಿಲ್ಲ. ಎಷ್ಟೋ ವೇಳೆ ಒಂದೇ ಪದವನ್ನು ಇಬ್ಬರು, ಭಿನ್ನಭಾವನಾಂಶಗಳನ್ನು ಹೇಳಲು ಬಳಸಬಹುದು. ಇದರಿಂದಲೂ ಅಂತರ್ನಿರೀಕ್ಷಣೆಯನ್ನು ತಪ್ಪಾಗಿ ಅರ್ಥಮಾಡಿಕೊಳ್ಳುವ ಸಂಭವವಿದೆ. ನಮ್ಮ ಸಂವೇದನೆಗಳನ್ನು ಮತ್ತು ಇತರ ಅಭಿಜ್ಞಾ ಪ್ರಕ್ರಿಯೆಗಳನ್ನು ಬಹಳ ಸುಲಭವಾಗಿ ಅಂತರ್ ನಿರೀಕ್ಷಣೆಗೆ ಒಳಪಡಿಸಬಹುದು. ಆದರೆ ನಮ್ಮ ಭಾವನೆಗಳನ್ನು ಮತ್ತು ಪ್ರಚೋದನೆಗಳನ್ನು ಹಾಗೆ ನಿರೀಕ್ಷಿಸುವುದು ಸುಲಭವಲ್ಲ. ನಾವು ಒಂದು ಬಲಿಷ್ಠ ಭಾವನೆಯ ಅಂಕೆಗೆ ಒಳಗಾದಾಗ (ಉದಾ: ಕ್ರೋಧ ಅಥವಾ ಭಯದಲ್ಲಿ ಇದ್ದಾಗ) ನಮಗೆ ನಮ್ಮ ಅನುಭವವನ್ನು ಪರಿಶೀಲಿಸಿ ವರದಿ ಮಾಡಲು ಸಾಧ್ಯವಾಗದು. ಅಷ್ಟೇ ಏಕೆ, ಸೌಮ್ಯ ಭಾವನೆಗಳನ್ನು ನಾವು ಅನುಭವಿಸುತ್ತ ಇರುವಾಗ ಕೂಡ ಅವನ್ನು ಚೆನ್ನಾಗಿ ನಿರೀಕ್ಷಿಸಲು ಶಕ್ಯವಾಗದು. ಏಕೆಂದರೆ, ಒಂದು ಭಾವನೆಯನ್ನು ಪರೀಕ್ಷಿಸಿ ನೋಡಲು ತೊಡಗುವ ಕಾರ್ಯವೇ ಆ ಭಾವನೆಯನ್ನು ಬದಲಾಯಿಸುತ್ತದೆ. ಹೀಗೆ ಭಾವನೆಯ ಅಂತರ್ನಿರೀಕ್ಷಣೆ ಎಂದು ಹೇಳಲಾಗುವ ಕ್ರಮವು ವಸ್ತುತಃ ಪ್ರಾಙ್ನಿರೀಕ್ಷಣೆ. ಇನ್ನು ನಮ್ಮ ಪ್ರಚೋದನೆಗಳನ್ನು ಎತ್ತಿಕೊಂಡರೆ, ಅವನ್ನು ನಿಷ್ಪಕ್ಷಪಾತವಾಗಿ ಪರೀಕ್ಷಿಸುವುದಂತೂ ಮತ್ತಷ್ಟು ಕಷ್ಟ. ಏಕೆಂದರೆ, ಕೆಲವು ಪ್ರಚೋದನೆಗಳು ಅವಪ್ರಜ್ಞೆಯಿಂದ

ಬಂದಿರುತ್ತವೆ; ಅವುಗಳ ಪರೀಕ್ಷೆ ಸಂಪೂರ್ಣವಾಗಿ ಅಸಾಧ್ಯ. ಅದೂ ಅಲ್ಲದೆ ಅಭಿಜ್ಞೆಯಲ್ಲಿ ಸಹ ಅಂತರ್ನಿರೀಕ್ಷಣೆಯಿಂದ ಲಭಿಸುವ ಮೂಲ ಜ್ಞಾನವು ಅಷ್ಟೇನೂ ಸರಿ ಎಂದು ಹೇಳಲು ಬರುವುದಿಲ್ಲ. ಸೂಜಿ ಚುಚ್ಚಿದ್ದರಿಂದಾದ ನೋವಿಗಿಂತ ಸುಟ್ಟಗಾಯದ ಉರಿ ಹೆಚ್ಚೆಂದು ನೀವು ಹೇಳಬಹುದು; ಅಥವಾ ಗುಲಾಬಿಯ ದೃಶ್ಯ ಪ್ರತಿಮೆಯು ನಮಗೆ ತಿಳಿಯುವ ಅದರ ವಾಸನಾ ಪ್ರತಿಮೆಗಿಂತ ಸ್ಪಷ್ಟತರ ಎಂದು ಹೇಳಲು ಸಾಧ್ಯವಾಗಬಹುದು: ಆದರೆ ಈ ಸಂವೇದನೆಗಳ ಅಥವಾ ಪ್ರತಿಮೆಗಳ ತೀವ್ರತೆಯನ್ನು ಅಂಕಿಸಂಖ್ಯೆಗಳ ಮೂಲಕ ಹೇಳಲು ಬರದು; ಅಥವಾ ಒಂದು ಮತ್ತೊಂದಕ್ಕಿಂತ ಇಂತಿಷ್ಟು ಸಲ ಹೆಚ್ಚು ಪ್ರಖರ ಎಂದು ತಿಳಿಸಲು ಸಾಧ್ಯವಿಲ್ಲ. ಕೊನೆಯದಾಗಿ ಅಂತರ್ನಿರೀಕ್ಷಣೆಯಿಂದ ಲಭ್ಯವಾಗುವ ಮೂಲಜ್ಞಾನವು ನಿರೀಕ್ಷಕನಿಗೆ ಖಾಸಗಿಯದಾದುದರಿಂದ ಅದು ಅಗ್ರಾಹ್ಯ ಎಂಬುದು ಅಂತರ್ನಿರೀಕ್ಷಣೆಯ ಮೇಲೆ ಎತ್ತಿದ ಅತ್ಯಂತ ದೊಡ್ಡ ಆಕ್ಷೇಪ. ಒಂದು ಸಂವೇದನೆ ಅಥವಾ ಪ್ರತಿಮೆಯನ್ನು ಸರಿಯಾಗಿ ಅಳೆಯಲಾರೆವೆಂಬುದಷ್ಟೇ ಅಲ್ಲದೆ, ನಮಗೆ ನಮ್ಮವನ್ನು ಬಿಟ್ಟು ಇನ್ನೊಬ್ಬರ ಸಂವೇದನೆ–ಪ್ರತಿಮೆಗಳನ್ನು ಎಂದಿಗೂ ಅಳೆಯುವುದಕ್ಕೆ ಸಾಧ್ಯವಾಗುವುದಿಲ್ಲ. ಆದುದರಿಂದ ಜೆ.ಬಿ.ವಾಟ್ಸನ್ನನೇ ಮೊದಲಾದ ವರ್ತನಾವಾದಿಗಳು ಮನಃಶಾಸ್ತ್ರದಲ್ಲಿ ಅಂತರ್ನಿರೀಕ್ಷಣೆಯನ್ನು ಬಳಸಲೇಬಾರದೆನ್ನುತ್ತಾರೆ. ಅವರ ಪ್ರಕಾರ ಒಂದು ಶಾಸ್ತ್ರದ ಮುಖ್ಯ ಕೆಲಸವೆಂದರೆ ಸಂಗತಿಗಳನ್ನು ತೂಗಿ, ಅಳೆದು ನೋಡುವುದು; ಸ್ವತಃಪ್ರಾಮಾಣ್ಯ ಮಾತ್ರ ಉಳ್ಳ ಅಂತರ್ನಿರೀಕ್ಷಣೆಯ ಜ್ಞಾನವು ವಿಜ್ಞಾನರೂಪದ ಮನಃಶಾಸ್ತ್ರದಲ್ಲಿ ಪ್ರಮಾಣವೆನಿಸದು. ಅಂತರ್ ನಿರೀಕ್ಷಣೆಯಲ್ಲಿ ಯುಕ್ತನಾದ ಮನುಷ್ಯನು ತಿಳಿದೋ ತಿಳಿಯದೆಯೋ ತಪ್ಪು ವರದಿ ಮಾಡುವ ಸಂಭವವುಂಟು. ಅದರಲ್ಲಿ ವಿಜ್ಞಾನಿಯು ಅವನು ಹೇಳಿದ್ದನ್ನು ಕೇಳಬೇಕಲ್ಲದೆ ಮತ್ತೇನನ್ನೂ ಮಾಡಲಾರ; ವಿಜ್ಞಾನಿ ಇದಕ್ಕೆ ಒಪ್ಪನು.

**ಅಂತರ್ನಿರೀಕ್ಷಣೆಯ ಗುಣಗಳು:** ಬಹಿರ್ ನಿರೀಕ್ಷಣೆ ಸರ್ವಶಾಸ್ತ್ರಗಳಿಗೂ ಸಾಧಾರಣ. ಆದರೆ ಮನಃಶಾಸ್ತ್ರವು ಅದರ ಜೊತೆಗೆ ಅಂತರ್ನಿರೀಕ್ಷಣೆಯನ್ನು ಹೆಚ್ಚಾಗಿ ಬಳಸುವುದು ವಿಶೇಷ. ಅಂತರ್ನಿರೀಕ್ಷಣೆಯು ನಮ್ಮ ಮನಸ್ಸಿನ ಕಾರ್ಯಗಳ ಪರಿಚಯವನ್ನು ಸ್ವಲ್ಪವೂ ಮಾಡಿಕೊಡುವುದಿಲ್ಲ ಎಂಬುದು ಸುಳ್ಳು. ಸಾಕಷ್ಟು ಎಚ್ಚರಿಕೆ ತೆಗೆದುಕೊಂಡು ಅಂತರ್ನಿರೀಕ್ಷಣೆಯಿಂದ ದೊರಕುವ ಸಂಗತಿಗಳನ್ನು ಬಳಸಿಕೊಂಡರೆ ತಪ್ಪೇನಿದೆ? ಸಾಧ್ಯವಾದಷ್ಟು ಮಟ್ಟಿಗೆ ಅಂತರ್ನಿರೀಕ್ಷಣೆಯಿಂದ ಲಭಿಸುವ ಜ್ಞಾನವು ಬಹಿರ್‌ನಿರೀಕ್ಷಣೆಯಿಂದ ಸಿದ್ಧವಾಗಬೇಕು. ನಾವು ಅದರಿಂದ ಬಹಳ ಸಹಾಯವನ್ನು ಅಪೇಕ್ಷಿಸಬಾರದು; ಅಲ್ಲದೆ ಅಂಥ ಜ್ಞಾನವನ್ನು ನಾವು ಅಂತರ್ನಿರೀಕ್ಷಣೆಯ ತಂತ್ರದಲ್ಲಿ ತಕ್ಕ ಮಟ್ಟಿಗೆ ಪಳಗಿದವರಿಂದಲೇ ಸ್ವೀಕರಿಸಬೇಕು.

ಮನಃಶಾಸ್ತ್ರದಂತೆಯೇ ಔಷಧಶಾಸ್ತ್ರವಾದರೂ ಅಂತರ್ನಿರೀಕ್ಷಣೆಯಿಂದ ಲಬ್ಧವಾದ ಮೂಲಜ್ಞಾನವನ್ನು ಅನೇಕ ವೇಳೆ ಬಳಸಿಕೊಳ್ಳುತ್ತದೆ. ಈ ಅನುಕೂಲ ಪಶುವೈದ್ಯನಿಗೆ ಇಲ್ಲ. ಅವನು ತನ್ನ ರೋಗಿಯನ್ನು ಕುರಿತು "ನಿನಗೆ ಎಲ್ಲಿ ನೋಯುತ್ತದೆ ಅಥವಾ ನಿನಗೆ ಕಾಯಿಲೆ ಆಗಿದೆಯೆ?" ಎಂದು ಪ್ರಶ್ನಿಸಿ ಉತ್ತರ ಪಡೆಯಲಾರ. ಆದರೆ ಅಂಥ

ನೋವು ಎಷ್ಟರಮಟ್ಟಿಗೆ ಇದೆ ಎಂಬುದನ್ನು ರೋಗಿಯು ಲೆಕ್ಕಾಚಾರದಂತೆ ಹೇಳಲಾರನಾದರೂ ಅವನಿಗೆ ಹೇಳಲಿಕ್ಕೆ ಶಕ್ಯವಾದಷ್ಟನ್ನಾದರೂ ಕೇಳಿ ಪ್ರಯೋಜನ ಪಡೆಯುವ ಅನುಕೂಲ ವೈದ್ಯನಿಗಿದೆ. ವೈದ್ಯನೇನೋ ರೋಗಿ ಹೇಳುವ ರೋಗ ಚಿಹ್ನೆಗಳ ಮೇಲೆಯೇ ಅವಲಂಬಿಸುವುದಿಲ್ಲ; ಆದರೆ ಬಹಿರ್ ನಿರೀಕ್ಷಣೆಯ ತಂತ್ರಗಳಿಂದ ಲಬ್ಧವಾದ ಜ್ಞಾನಕ್ಕೆ ಪೂರಕವಾಗಿ ಅವನು ವಿವೇಕದಿಂದ ಅದನ್ನು ಬಳಸಿಕೊಳ್ಳಬಹುದು. ಅಂತರ್‌ನಿರೀಕ್ಷಣೆಯ ಮಹತ್ತರವಾದ ಉಪಯೋಗವು ಕಂಡುಬರುವುದು ಪ್ರತಿಕ್ರಿಯಾಕಾಲವನ್ನು ಅಳೆಯುವ ಪ್ರಯೋಗದಲ್ಲಿ. ಈ ಪ್ರಯೋಗದಲ್ಲಿ ಸದ್ದು ಮಾಡಿದಾಗ ಅಥವಾ ಬೆಳಕು ತೋರಿಸಿದಾಗ ಕೀಲಿಯೊತ್ತುವಂಥ ಅನುಕ್ರಿಯೆಯನ್ನು ತೋರಿಸಲು ಯೋಜ್ಯನಿಗೆ ಹೇಳಲಾಗುವುದು. ಸಂಜ್ಞೆ ಮಾಡಿದ ಕೂಡಲೇ ವಿದ್ಯುತ್ತಿನ ಒಂದು ಆವರ್ತ ಮುಗಿಯುವುದು ಮತ್ತು ಆ ಆವರ್ತವು ನಡುವೆ ಯೋಜ್ಯನ ಪ್ರತಿಕ್ರಿಯೆಯಿಂದ ಭಂಗವಾಗುತ್ತದೆ. ಆಗ ಸೆಕಂದಿನ ಸಹಸ್ರತಮಾಂಶದ ಮಾನದಲ್ಲಿ ಆವರ್ತದ ನಡುವಿಟ್ಟ ಕಾಲಮಾಪಕಯಂತ್ರವು ಪ್ರೇರಣೆ ಹಾಗೂ ಅನುಕ್ರಿಯೆಗಳ ನಡುವೆ ಕಳೆದ ವೇಳೆಯನ್ನು ಅಳೆದು ತೋರಿಸುತ್ತದೆ.

ನಾವು ಈ ಪ್ರಯೋಗದ ಕೆಲಸವು ವರ್ತನೆಯನ್ನು ಅಳೆಯುವುದಷ್ಟೇ ಎಂದೂ ಅಂತರ್ನಿರೀಕ್ಷಣೆಯಿಂದ ಲಭಿಸುವ ಮೂಲಜ್ಞಾನವು ಅನವಶ್ಯಕವೆಂದೂ ಭಾವಿಸಬಹುದು. ಆದರೆ ಹೀಗೆ ತಿಳಿಯುವುದು ತಪ್ಪಾಗುತ್ತದೆ. ಏಕೆಂದರೆ, ಪ್ರತಿಯೊಬ್ಬ ಯೋಜ್ಯನ ಪ್ರತಿಕ್ರಿಯಾಕಾಲವೂ ಕೆಲ ನಿಶ್ಚಿತ ಪರಿಮಿತಿಗಳೊಳಗೆ ಬದಲಾಗುತ್ತದೆ; ಮತ್ತು ಈ ಬದಲಾವಣೆಯ ಹಿಂದಿನ ಮುಖ್ಯ ಕಾರಣಗಳಲ್ಲಿ ಒಂದಾದ–ಯೋಜ್ಯನು ಸಂಜ್ಞೆಗಾಗಿ ಕಾದಿರುವಾಗ ಅದಕ್ಕೆ ಉನ್ಮುಖನಾಗುವ ದಿಶೆಯನ್ನು–ಹೊರಗೆಡಹುತ್ತದೆ. ಅವನು ಮಾಡಲಿರುವ ಅನುಕ್ರಿಯೆಯ ಮೇಲೆಯೇ ಅವನು ಉನ್ಮುಖನಾಗಿದ್ದರೆ ಅವನ ಪ್ರತಿಕ್ರಿಯೆ ಸಾಮಾನ್ಯವಾಗಿ ಬೇಗನೆ ಉಂಟಾಗುತ್ತದೆ; ಹಾಗಲ್ಲದೆ ಅವನು ಪ್ರೇರಣೆಗೇ ಉನ್ಮುಖನಾಗಿದ್ದರೆ ಅವನ ಪ್ರತಿಕ್ರಿಯೆ ತಡವಾಗಿ ಉಂಟಾಗುತ್ತದೆ.

ಈ ವಿಷಯವನ್ನು ವಿಸ್ತರಿಸಿ ಹೇಳುವುದು ಅನವಶ್ಯಕ. ಏಕೆಂದರೆ, ಅಂತರ್ ನಿರೀಕ್ಷಾವಾದಿಗಳಿಗೂ ವರ್ತನಾವಾದಿಗಳಿಗೂ ಇದ್ದ ವಿರೋಧವು ಇಂದು ಅಡಗಿಹೋಗಿದೆ. ಶುದ್ಧ ಅಂತರ್ನಿರೀಕ್ಷಣಾ ದೃಷ್ಟಿಯನ್ನು ಇಂದು ಬಿಟ್ಟುಕೊಡಲಾಗಿದೆ. ಹಾಗೆಯೇ ಅತಿವರ್ತನಾವಾದವನ್ನು ಇಂದು ಬಹಳ ಜನ ಅನುಸರಿಸುವುದಿಲ್ಲ. ಅಂತರ್ನಿರೀಕ್ಷಣೆ ಮತ್ತು ವರ್ತನಾಭ್ಯಾಸಗಳೆರಡಲ್ಲೂ ಅದರದರ ಗುಣಗಳೂ ಇವೆ, ದೋಷಗಳೂ ಇವೆ. ಆದುದರಿಂದ ವೈಜ್ಞಾನಿಕವಾದ ಮನಃಶಾಸ್ತ್ರವು ಸಂದರ್ಭದ ಔಚಿತ್ಯವನ್ನು ಅರಿತು ಒಂದರ ದೋಷವನ್ನು ಇನ್ನೊಂದು ಪರಿಹರಿಸುವಂತೆ ಎರಡನ್ನೂ ಬಳಸಿಕೊಳ್ಳುತ್ತದೆ.

**ಬಹಿರ್ ನಿರೀಕ್ಷಣೆ:** ಅಂತರ್ನಿರೀಕ್ಷಣೆಯ ಮೇಲೆ ಎದ್ದ ದಾಳಿಯ ಫಲವಾಗಿ ಮನಃಶಾಸ್ತ್ರದ ಇನ್ನೊಂದು ಕ್ರಮವೆನಿಸಿದ ಬಹಿರ್ ನಿರೀಕ್ಷಣೆಯ ಪ್ರಾಧಾನ್ಯ ಹೆಚ್ಚಾಯಿತು. ಬಹಿರ್ ನಿರೀಕ್ಷಣೆಯಲ್ಲಿ ನಮ್ಮ ಉನ್ಮುಖತೆಯು ಯೋಜ್ಯನ ಪ್ರಜ್ಞಾವಸ್ಥೆಗಳ ಮೇಲೆ ಕೇಂದ್ರೀಕೃತವಾಗದೆ ಅವನ ಸನ್ನೆ, ವರ್ತನೆ, ಸಾಮಾಜಿಕ ಹೊದಿಕೆ ಮತ್ತು ಶಾರೀರಿಕ

ಬದಲಾವಣೆಗಳ ಮೇಲೆಯೇ ಕೇಂದ್ರೀಕೃತವಾಗುತ್ತದೆ. ನಾವು ಬೇರೆ ಬೇರೆ ಸನ್ನಿವೇಶಗಳಲ್ಲಿ ಸಿಕ್ಕಿದ ಬೇರೆ ಬೇರೆ ಮನುಷ್ಯರ ವರ್ತನೆಯನ್ನು ನಿರೀಕ್ಷಿಸಬಹುದು. ಇಲ್ಲವೇ ಬೇರೆ ಬೇರೆಯವರನ್ನು ಒಂದೇ ತರದ ಸನ್ನಿವೇಶದಲ್ಲಿ ತಂದೊಡ್ಡಿ ಅವರಲ್ಲಿ ಪ್ರತಿಯೊಬ್ಬನೂ ಹೇಗೆ ಬೇರೆ ಬೇರೆ ರೀತಿಯ ಪ್ರತಿಕ್ರಿಯೆಯನ್ನು ತೋರಿಸುತ್ತಾನೆ ಎಂಬುದನ್ನು ನೋಡಬಹುದು. ಅಂತರ್ನಿರೀಕ್ಷಣೆಯಲ್ಲಿ ಯೋಜ್ಯನ ಅಂತಃಕರಣಕ್ಕೆ ಪ್ರಾಧಾನ್ಯವಿದ್ದರೆ ಬಹಿರ್‌ನಿರೀಕ್ಷಣೆಯಲ್ಲಿ ಆ ಪ್ರಾಧಾನ್ಯವು ಯೋಜ್ಯನಿಗೆ ಬಂದಿದೆ. ಅಂದರೆ ಮೊದಲಿನದರಲ್ಲಿ ಒಬ್ಬನು ತನ್ನನ್ನು ತಾನೇ ನೋಡಿಕೊಳ್ಳುವುದಕ್ಕೆ ಬೆಲೆ; ಎರಡನೆಯದರಲ್ಲಿ ಅವನನ್ನು ನಾವು ನಿರೀಕ್ಷಿಸುವುದಕ್ಕೇ ಬೆಲೆ. ಮೊದಲನೆಯವರಲ್ಲಿ ನಿರೀಕ್ಷ್ಯ–ನಿರೀಕ್ಷಕ ಧರ್ಮಗಳು ಒಬ್ಬನಲ್ಲೇ ಇದ್ದರೆ, ಎರಡನೆಯದರಲ್ಲಿ ಆ ಇಬ್ಬಗೆಯ ಧರ್ಮಗಳೂ ಬೇರೆ ಬೇರೆ ವ್ಯಕ್ತಿಗಳಲ್ಲಿ ಇರುತ್ತವೆ. ಇತರ ಅನೇಕ ವಿಜ್ಞಾನಗಳಲ್ಲಿ ಈ ಒಂದೇ ಕ್ರಮವನ್ನು ಬಳಸುತ್ತಿರುವುದರಿಂದ ಮನಃಶಾಸ್ತ್ರವನ್ನು ವಿಜ್ಞಾನವನ್ನಾಗಿ ಮಾಡಲು ನಡೆದ ಚಳವಳಿಯೊಡನೆ ಈ ಬಹಿರ್ನಿರೀಕ್ಷಣೆಯ ಅಭ್ಯಾಸದ ಪ್ರಗತಿ ಕೂಡಿಕೊಂಡಿತು.

ಪ್ರಾಣಿಗಳ ಮತ್ತು ಮಕ್ಕಳ ಮನಃಶಾಸ್ತ್ರದಲ್ಲಿ ಬಹಳಮಟ್ಟಿಗೆ ಯಶಸ್ವಿಯಾಗಿ ಬಹಿರ್ನಿರೀಕ್ಷಣಾಕ್ರಮವನ್ನು ಬಳಸಲಾಗಿದೆ. ಪ್ರಾಣಿಮನಃಶಾಸ್ತ್ರದಲ್ಲಂತೂ ಪ್ರಾಣಿಗಳಿಗೆ ಮಾತನಾಡಲು ಬರದೆ ಇರುವುದರಿಂದ ಅಂತರ್ನಿರೀಕ್ಷಣೆ ಅಲ್ಲಿ ಸಾಧ್ಯವೇ ಇಲ್ಲ. ಮಕ್ಕಳೇನೋ ಕೆಲಮಟ್ಟದ ಅಂತರ್ನಿರೀಕ್ಷಣೆಯನ್ನು ಮಾಡಬಲ್ಲವೆಂಬುದು ನಿಜ. ಆದರೆ ಅದು ಸುಸಂಬದ್ಧವೂ ಅಲ್ಲ, ಅವಲಂಬನೀಯವೂ ಅಲ್ಲ. ಇಂಥ ಸಂದರ್ಭಗಳಲ್ಲಿ ಮನಃಶಾಸ್ತ್ರಜ್ಞನಿಗೆ ಯೋಜ್ಯರ ವರ್ತನೆಯ ಸರಿಯಾದ, ಸೂಕ್ಷ್ಮವಾದ ನಿರೀಕ್ಷಣೆಯನ್ನು ಹಿಡಿಯದೆ ಗತ್ಯಂತರವಿಲ್ಲ. ಮಕ್ಕಳನ್ನು ಒಂದು ವಿಶಿಷ್ಟ ರೀತಿಯ ವಿಶಾಲವಾದ ಗಾಜಿನ ಪೆಟ್ಟಿಗೆಯಲ್ಲಿ ಇರಿಸಿದಾಗ ಅವರು ನಮಗೆ ಕಾಣುತ್ತಾರೆ; ಆದರೆ ಅವರಿಗೆ ನಾವು ಕಾಣಿಸುವುದಿಲ್ಲ. ಇಂಥ ವ್ಯವಸ್ಥೆ ಮಾಡಿ ಮನಃಶಾಸ್ತ್ರಜ್ಞರು ಕ್ಲಪ್ತಾವಧಿಗಳಲ್ಲಿ ಮಕ್ಕಳ ಚಟುವಟಿಕೆಗಳ ವಿವರಗಳನ್ನು ನಿರೀಕ್ಷಿಸಿ ದಾಖಲೆ ಮಾಡಿದ್ದಾರೆ. ಇಲಿ–ಬೆಕ್ಕುಗಳಂಥ ಪ್ರಾಣಿಗಳನ್ನು ಗಲಿಬಿಲಿ ಪೆಟ್ಟಿಗೆ ಮತ್ತು ಒಗಟಿನ ಪೆಟ್ಟಿಗೆಗಳಲ್ಲಿ (Mazes and Puzzle boxes): ಇಟ್ಟು ಅವುಗಳ ವರ್ತನೆಯನ್ನು ಸರಿಯಾಗಿ ಎಚ್ಚರಿಕೆಯಿಂದ ಅಭ್ಯಾಸ ಮಾಡಲಾಗಿದೆ. ಮಕ್ಕಳಿಗೆ ಹಾಗೂ ಪ್ರಾಣಿಗಳಿಗೆ ಅನ್ವಯಿಸಲಾದ ಅಂಥ ಬಹಿರ್ನಿರೀಕ್ಷಣ ಕ್ರಮಗಳಿಂದ ಮನಃಶಾಸ್ತ್ರಕ್ಕೆ ಅತ್ಯಂತ ಮುಖ್ಯವೆನಿಸುವ ಅನೇಕ ಶೋಧಗಳನ್ನು ಮಾಡಲಾಗಿದೆ. ಅಂಥ ಶೋಧಗಳಲ್ಲಿ ಪಾವಲಫ್ ಕಂಡುಹಿಡಿದ ಉಪಾಹಿತ ಕ್ಷೇಪಕ್ರಿಯೆ ಮತ್ತು ಥಾರನ್‌ಡೈಕ್ ಕಂಡುಹಿಡಿದ "ಮರಳಿ ಯತ್ನವ ಮಾಡಿ" ಕಲಿಯುವ ಬಗೆಗಳು ಮುಖ್ಯವೆನಿಸಿವೆ.

ಬಹಿರ್ನಿರೀಕ್ಷಣೆಯ ಕ್ಷೇತ್ರದಲ್ಲಿ ಇನ್ನೊಂದು ಲಾಭಕರವಾದ ಅಭ್ಯಾಸಾವಕಾಶವಿದೆ. ನಾವು ಹೆದರಿಕೆ, ಸಿಟ್ಟು ಮತ್ತು ಕಡುಕೋಪಗಳ ಅವಸ್ಥೆಗಳಲ್ಲಿ ಇದ್ದಾಗ ನಮ್ಮ ಶರೀರದಲ್ಲಿ ಉಂಟಾಗುವ ಬದಲಾವಣೆಗಳ ಬಹಿರ್ನಿರೀಕ್ಷಣೆ ಅತ್ಯಂತ ಉಪಯುಕ್ತವಾದುದು. ಇಂಥ ಘಟನೆಗಳ ವಿಸ್ತಾರವಾದ ಅಭ್ಯಾಸವನ್ನು ಡಬ್ಲ್ಯೂ. ಬಿ.ಕ್ಯಾನನ್ ಮಾಡಿದ್ದಾನೆ. ಅದರಿಂದ

ಈಗ ತೀವ್ರವಾದ ಭಾವನೋದ್ರೇಕದ ಅವಸ್ಥೆಗಳು ನಮ್ಮ ಜೀರ್ಣದ, ರಕ್ತಚಲನೆಯ ಮತ್ತು ಶ್ವಾಸೋಚ್ಛ್ವಾಸದ ಕೋಶಗಳ ಮೇಲೆ ಪರಿಣಾಮವಾಗುತ್ತದೆ ಎಂಬುದು ತಿಳಿದುಬಂದಿದೆ. ಈ ಅವಸ್ಥೆಗಳಲ್ಲಿ ನಮ್ಮ ಶರೀರದಲ್ಲಿ ಇರುವ ನಿರ್ನಾಳ ಗ್ರಂಥಿಗಳು ಚುರುಕಾಗಿ ರಸೋತ್ಪಾದನೆಗೆ ಆರಂಭಿಸುತ್ತವೆ. ಸೂಕ್ಷ್ಮ ಯಂತ್ರೋಪಕರಣಗಳ ಸಹಾಯದಿಂದ ಇಂಥ ಕೆಲ ಬದಲಾವಣೆಗಳನ್ನು ಸರಿಯಾಗಿ ಅಳೆಯಲು ಶಕ್ಯವಾಗಿದೆ.

ಅಂಥ ಯಂತ್ರೋಪಕರಣಗಳಲ್ಲಿ ಸೈಕೋಗ್ಯಾಲ್ವನೋ ಮೀಟರ್ ಅಥವಾ ನಮ್ಮ ಚರ್ಮದ ಮೇಲೆ ಹರಿಯುವ ವಿದ್ಯುಚ್ಛಕ್ತಿಯ ವ್ಯತ್ಯಾಸಗಳನ್ನು ವರದಿ ಮಾಡುವ ಉಪಕರಣ ಒಂದು; ಶ್ವಾಸೋಚ್ಛ್ವಾಸದ ಬದಲಾವಣೆಗಳನ್ನು ಬೆರಳು, ಹಸ್ತ ಅಥವಾ ಇತರ ಶರೀರಾವಯವಗಳ ಗಾತ್ರವು ರಕ್ತದ ಪೂರೈಕೆಯಿಂದ ಬದಲಾಯಿಸುವುದನ್ನು ಅನುಕ್ರಮವಾಗಿ ವರದಿ ಮಾಡುವ ನ್ಯೂಮೋ ಗ್ರಾಫ್ ಮತ್ತು ಪ್ಲಿಥಿಸ್‌ಮೋಗ್ರಾಫ್ ಎಂಬ ಯಂತ್ರಗಳು ಮುಖ್ಯವಾಗಿವೆ.

**ಪ್ರಯೋಗ:** ಒಂದು ಪ್ರಯೋಗದ ಸಾರವಿರುವುದು ಒಂದು ಘಟನೆಯು ಸಂಭವಿಸುವ ಸನ್ನಿವೇಶವನ್ನು ಬದಲಾಯಿಸುತ್ತ ಹೋಗಿ, ಫಲಿತಾಂಶಗಳನ್ನು ಸಂಗ್ರಹಿಸುವುದರಲ್ಲಿ. ಪ್ರಯೋಗದಲ್ಲಿ ಘಟನೆಗಳನ್ನು ಇದ್ದ ಹಾಗೆಯೇ ಗ್ರಹಿಸಿದರೆ ಸಾಲದು. ನಾವು ಅವುಗಳ ಒಳಗೆ ಕೈಹಾಕಿ ನಮಗೆ ಬೇಕಾದ ಹಾಗೆ ಅವನ್ನು ವ್ಯವಸ್ಥೆಗೊಳಿಸಿ, ಏನಾಗುತ್ತದೆ ಎಂಬುದನ್ನು ನೋಡುತ್ತೇವೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಪ್ರಯೋಗವೆಂದರೆ ನಾವು ನಿಸರ್ಗವನ್ನು ಪ್ರಶ್ನಿಸುವುದು.

ನಾವು ಪರೀಕ್ಷೆಗೂ ಪ್ರಯೋಗಕ್ಕೂ ಇರುವ ವ್ಯತ್ಯಾಸವನ್ನು ಮನಗಾಣಬೇಕು. ಪ್ರಯೋಗದಲ್ಲಿ ನಾವು ಕೆಲವೇ ಜನರನ್ನು ಪ್ರಯೋಗಶಾಲೆಗೆ ಬರಮಾಡಿಕೊಂಡು, ಅವರು ನಡೆದುಕೊಳ್ಳುವ ಸನ್ನಿವೇಶವನ್ನು ಉದ್ದೇಶಪೂರ್ವಕವಾಗಿ ಬದಲಾಯಿಸುವೆವು. ಪರೀಕ್ಷೆಯಲ್ಲಾದರೋ ನಾವೇ ಸ್ವತಃ ಹೊರ ಜಗತ್ತಿನಲ್ಲಿ ಹೊಕ್ಕು ಒಂದು ನಿರ್ದಿಷ್ಟ ಪರಿಸ್ಥಿತಿಯಲ್ಲಿ ಅನೇಕರನ್ನು ಪರಿಶೀಲಿಸುತ್ತೇವೆ. ವೈಜ್ಞಾನಿಕ ಮಾರ್ಗದ ಉತ್ತಮ ಕ್ರಮವೆನಿಸಿದ ಪ್ರಯೋಗ ಪದ್ಧತಿಯಿಂದ ಆಗುವ ಲಾಭಗಳು ಇಂತಿವೆ: (೧) ಸಂಗತಿಗಳು ನಿಮ್ಮೆಡೆಗೆ ಬರುತ್ತವೆ; (೨) ನಿಯಂತ್ರಣದಲ್ಲಿ ಇರುವುದರಿಂದ ಈ ಸಂಗತಿಗಳನ್ನು ಪರಾಮರ್ಶಿಸಲು ಬರುತ್ತದೆ; (೩) ಬರುವ ಫಲಿತಾಂಶಗಳು ನಿಷ್ಕೃಷ್ಟವಾಗಿರುತ್ತವೆ ಮತ್ತು ಪರಿಣಾಮವತಃ ಲೆಕ್ಕಾಚಾರ ಮಾಡಲು ಬರುತ್ತದೆ.

೧೮೭೯ರಲ್ಲಿ ವೂಂಟ್ ಮಹಾಶಯನು ಜರ್ಮನಿಯ ಲೀಪ್‌ಸಿಗ್ಗಿನಲ್ಲಿ ಮೊಟ್ಟಮೊದಲನೆಯದಾಗಿ ಮನಃಶಾಸ್ತ್ರೀಯ ಪ್ರಯೋಗಶಾಲೆಯನ್ನು ಸ್ಥಾಪಿಸಿದನು. ಅಂದಿನಿಂದ ಪ್ರಯೋಗದ ಪ್ರಾಮುಖ್ಯವು ಮನಃಶಾಸ್ತ್ರದ ಕ್ಷೇತ್ರದಲ್ಲಿ ಹೆಚ್ಚುತ್ತ ಬಂದಿದೆ.

ಅವಶ್ಯಕವಾದ ಯಂತ್ರಸಾಮಗ್ರಿಗಳಲ್ಲದೆ ಮನಃಶಾಸ್ತ್ರೀಯ ಪ್ರಯೋಗಕ್ಕೆ ಇಬ್ಬರು ಬೇಕು; ಯಾರ ಮೇಲೆ ಪ್ರಯೋಗವನ್ನು ಮಾಡಲಾಗುವುದೋ ಅಂಥ ಯೋಜ್ಯನೆಂಬ

ವ್ಯಕ್ತಿ ಮತ್ತು ಸನ್ನಿವೇಶಗಳನ್ನು ಬದಲಾಯಿಸಿ ಯೋಜ್ಯನ ಮೇಲೆ ಆಗುವ ಪರಿಣಾಮವನ್ನು ಗ್ರಹಿಸುವ ಪ್ರಯೋಜಕ. ಒಬ್ಬ ಮನುಷ್ಯನ ಕಾರ್ಯಶಕ್ತಿಯನ್ನು ಕೆಡಿಸಲು ಮಾಡುವ ಗೊಂದಲದ ಪರಿಣಾಮಗಳನ್ನು ಅಭ್ಯಾಸ ಮಾಡುವ ಪ್ರಯತ್ನವು ಆಧುನಿಕ ಮನಃಶಾಸ್ತ್ರೀಯ ಪ್ರಯೋಗಕ್ಕೆ ಒಳ್ಳೆಯ ಉದಾಹರಣೆ. ಯೋಜ್ಯನನ್ನು ಹೊರಗಿನ ಶಬ್ದವನ್ನು ಹೊರಗೇ ಇಡಬಲ್ಲ ಶಬ್ದಾವರೋಧಶಾಲೆಯಲ್ಲಿ (Sound-proof Room) ಕುಳ್ಳಿರಿಸಲಾಗುವುದು. ಅನಂತರ ಬಾಗಿಲು ಬಡಿಯಲು ಅಥವಾ ಚೌಕಮನೆಯ ಕಾಗದದಲ್ಲಿ ಚುಕ್ಕೆಗಳನ್ನು ಇಡಲು ಹೇಳಲಾಗುವುದು. ಮೊದಲು ಯಾವ ಗೊಂದಲವೂ ಇಲ್ಲದೆ ಅವನನ್ನು ಕೆಲಸ ಮಾಡಲು ಬಿಡಲಾಗುವುದು. ಅನಂತರ ಪ್ರಗತಿಯ ಪ್ರಮಾಣವನ್ನು ಗ್ರಹಿಸಲಾಗುವುದು. ತಂಬಟೆ ಬಡಿಯುವುದು, ಮೈಗೆ ಮುಳ್ಳು ಚುಚ್ಚುವುದು ಮುಂತಾದ ತೊಂದರೆಗಳನ್ನು ನಡು ನಡುವೆ ಉಂಟುಮಾಡಿ, ಅವನ ಕಾರ್ಯವೇಗದಲ್ಲಿ ಉಂಟಾಗುವ ವ್ಯತ್ಯಾಸಗಳನ್ನು ನಿರೀಕ್ಷಿಸುವುದು. ಈ ಫಲಿತಾಂಶಗಳ ತುಲನೆಯಿಂದ ವ್ಯಕ್ತಿಯ ಕಾರ್ಯಶಕ್ತಿಯ ಮೇಲೆ ವಿಘ್ನವು ಉಂಟುಮಾಡುವ ಪರಿಣಾಮಗಳನ್ನು ಪರಿಮಾಣತಃ ಅಥವಾ ಸಂಖ್ಯಾಶಾಸ್ತ್ರೀಯ ರೀತಿಯಲ್ಲಿ ನಿರ್ಣಯಿಸಲಾಗುತ್ತದೆ.

ಅಂತರ್ನಿರೀಕ್ಷಣೆಯನ್ನು ಮನಃಶಾಸ್ತ್ರೀಯ ಪ್ರಯೋಗಗಳಲ್ಲಿ ಇಟ್ಟುಕೊಳ್ಳುವುದು ಅವಶ್ಯಕ. ಏಕೆಂದರೆ, ಕೆಲವು ಘಟನೆಗಳು ನಿಸರ್ಗತಃ ಬಹಿರ್ನಿರೀಕ್ಷಣೆಗೆ ಯೋಗ್ಯವಾಗಿದ್ದರೂ ಯೋಜ್ಯನ ಪ್ರಜ್ಞೆಗೆ ಮನವಿ ಮಾಡಿಕೊಳ್ಳದೆ ಅಭ್ಯಾಸ ಮಾಡಲು ಸಾಧ್ಯವಾಗುವುದಿಲ್ಲ. ಅದಕ್ಕೆ ಉತ್ತರ ಪ್ರತಿಮೆಯು ಉದಾಹರಣೆ. ಯಾವುದಾದರೂ ಒಂದು ವಸ್ತುವನ್ನು ಬಹಳ ಕಾಲ ಗುರಿಯಿಟ್ಟು ನೋಡಿ, ಅನಂತರ ಆ ವಸ್ತುವನ್ನು ಆಚೆಗೆ ಒಯ್ದಾಗ ನಮ್ಮ ತೆರೆದ ಕಣ್ಣಿಗೆ ಅದರ ಪ್ರತಿಮೆ ಭಾಸವಾದರೆ ಅದಕ್ಕೆ ಉತ್ತರಪ್ರತಿಮೆ ಎಂದು ಹೆಸರು. ಬೇರೆ ವಿಜ್ಞಾನಗಳಲ್ಲಿರುವಂತೆ ಪ್ರಯೋಗಗಳ ಬಳಕೆ ಮನಃ ಶಾಸ್ತ್ರದಲ್ಲಿ ಸುಲಭವಲ್ಲ. ಏಕೆಂದರೆ, ಹೊರಗಿನ ಸನ್ನಿವೇಶವನ್ನು ನಿಯಂತ್ರಿಸಿದರೂ ಪ್ರಯೋಗದ ಒಂದು ಅಂಗವಾದ ಯೋಜ್ಯನ ಮನಸ್ಸನ್ನು ಅಷ್ಟು ಸುಲಭವಾಗಿ ನಿಯಂತ್ರಿಸಲಾಗುವುದಿಲ್ಲ; ಯೋಜ್ಯನ ಸಂಚಾರಿ ಭಾವಗಳು ಪ್ರಯೋಜಕನ ಕಟ್ಟಿಗೆ ಒಳಪಡುವುದಿಲ್ಲ. ಹೀಗಿದ್ದರೂ ಅವು ಯೋಜ್ಯನು ಮಾಡುವ ಪ್ರಯೋಗದಲ್ಲಿ ಬಹಳಮಟ್ಟಿಗೆ ಪ್ರಭಾವಿಗಳಾಗುವ ಸಂಭವವಿದೆ.

ಈ ಮೂರು ಕ್ರಮಗಳಲ್ಲದೆ, ಜನನಶಾಸ್ತ್ರೀಯಕ್ರಮ, ಕಥನಕ್ರಮ, ಪ್ರಕರಣೇತಿಹಾಸಕ್ರಮ, ಸಂಖ್ಯಾಶಾಸ್ತ್ರೀಯಕ್ರಮ ಮತ್ತು ಕ್ಷೇತ್ರಾವೇಕ್ಷಣ ಕ್ರಮ ಮುಂತಾದ ಹಲವು ಶಾಸ್ತ್ರೀಯ ಕ್ರಮಗಳಿವೆ. ಪ್ರಸ್ತುತ ಅವಾವುವೂ ಗಣ್ಯವಲ್ಲವಾದುದರಿಂದ ಅವುಗಳನ್ನಿಲ್ಲಿ ವಿವರಿಸಲಾಗಿಲ್ಲ.

✱

## ಅಧ್ಯಾಯ ಎರಡು

# ನರಮಂಡಲ

ಮಾನವ ಶರೀರದಲ್ಲಿಯ ನರಮಂಡಲವನ್ನು ವಿಸ್ತಾರವಾದ ಟೆಲಿಫೋನ್ ಪದ್ಧತಿಗೆ ಹೋಲಿಸುವುದುಂಟು. ನರಮಂಡಲದ ಯಾವ ನಕ್ಷೆಯೂ ಅದರ ಜಟಿಲಜಾಲದ ಕಲ್ಪನೆಯನ್ನು ಸಾಕಷ್ಟು ಚೆನ್ನಾಗಿ ಮಾಡಿಕೊಡಲಾರದು. ಈ ಒಂದನೆಯ ನಕ್ಷೆಯು ಮುಖ್ಯವಾದ ನರಪಥಗಳಷ್ಟನ್ನೇ ತೋರಿಸುತ್ತದೆ. ಅದರಲ್ಲಿ ಕೈಕಾಲು–ಮುಂಡಗಳಿಂದ ನರಗಳು ಬೆನ್ನುಹುರಿಯತ್ತ ಹರಿದಂತೆಯೂ ಅಲ್ಲಿಂದ ಮುಂದೆ ನೇರವಾಗಿ ಮಿದುಳಿನತ್ತ ಹೋದಂತೆಯೂ ತೋರುತ್ತದೆ.

ಬೆನ್ನುಹುರಿಯು ನರಗಳೆಂಬ ಸ್ನಾಯುಗಳನ್ನು ಹೊಸೆದು ಮಾಡಿದ ಹಗ್ಗದಂತಿದೆ. ಬೆನ್ನೆಲುಬೆನಿಸಿದ ಮೂಳೆಗಳ ಸಮುದಾಯದ ಮೂಲಕ ಹರಿದು ಅದು ಮೇಲಕ್ಕೆ ಹೋಗುತ್ತದೆ. ಮಿದುಳು–ಬೆನ್ನುಹುರಿಗಳು ಒಟ್ಟಿಗೆ ಟೆಲಿಫೋನಿನ ವಿನಿಮಯಸಾಮಗ್ರಿ ಎನ್ನಬಹುದು. ಅವನ್ನು ಕೇಂದ್ರನರಮಂಡಲವೆನ್ನುತ್ತಾರೆ; ಅವುಗಳ ಸುತ್ತುಮುತ್ತಲಿನ ನರಗಳನ್ನು ಪರಿನರಮಂಡಲವೆನ್ನಬಹುದು.

### ಕ್ಷೇಪಕ್ರಿಯೆ

ನರಮಂಡಲದ ಕಾರ್ಯವನ್ನು ಕ್ಷೇಪಕ್ರಿಯೆಯಿಂದ ಬಹಳ ಚೆನ್ನಾಗಿ ತಿಳಿದುಕೊಳ್ಳಬಹುದು. ಯಾವುದಾದರೂ ಒಂದು ಪ್ರೇರಣೆ ಬಂದಾಗ ನಮಗೆ ತಿಳಿಯದಂತೆಯೇ ಎಷ್ಟೋ ಸಲ ನಮ್ಮ ಶರೀರದ ಅವಯವಗಳು ಅದಕ್ಕೆ ತಕ್ಕ ಅನುಕ್ರಿಯೆಯನ್ನು ಮಾಡಿಬಿಡುತ್ತವೆ. ಇಂಥ ಅನುಕ್ರಿಯೆಗಳು ಆಕಸ್ಮಿಕವೆಂಬಂತೆ ನಡೆದುಹೋಗುತ್ತವೆ. ಅವು ನಡೆದುಹೋದ ಮೇಲೆ ಒಂದು ವೇಳೆ ನಾವು ವಿಚಾರ ಮಾಡುತ್ತೇವಲ್ಲದೆ, ಅವು ನಡೆಯುವಾಗ ನಾವು ವಿಚಾರ ಮಾಡುವುದಿಲ್ಲ. ಅಕಸ್ಮಾತ್ತಾಗಿ ಒಂದು ಮುಳ್ಳು ಚುಚ್ಚಿದರೆ ನಮ್ಮ ಕಾಲು ಸರಕ್ಕನೆ ಹಿಂಜರಿಯುತ್ತದೆ. ಹಾಗೇ ಅನಿರೀಕ್ಷಿತವಾಗಿ ಒಂದು ದೊಡ್ಡ ಸದ್ದಾದರೆ ನಾವು ಬೆಚ್ಚಿಬೀಳುತ್ತೇವೆ. ಅದೇ ರೀತಿಯಲ್ಲಿ ಬಹಳ ಉಜ್ವಲವಾದ ಬೆಳಕನ್ನು ಕಂಡರೆ ನಮ್ಮ ಕಣ್ಣು ಜೋರು ಜೋರಾಗಿ ಮಿಟುಕುತ್ತದೆ; ವಿಲಕ್ಷಣವಾದ ವಾಸನೆ ಯಾವುದಾದರೊಂದು ಮೂಗಿನ ಒಳಹೊಕ್ಕಾಗ ಅದು ಸೀನಲಾರಂಭಿಸುತ್ತದೆ.

ಇವೆಲ್ಲ ಮಾಂಸದ ಕ್ಷೇಪಕ್ರಿಯೆಗಳು. ಗ್ರಂಥಿಗಳು ಕೂಡ ಕ್ಷೇಪಕ್ರಿಯೆ ಎಸಗುತ್ತವೆ. ಆಹಾರದ ವಾಸನೆ ಅಥವಾ ರುಚಿಯ ಪ್ರೇರಣೆ ಬಂದಾಗ ಲಾಲಾಗ್ರಂಥಿಗಳು ರಸೋತ್ಪಾದನೆ ಮಾಡುವುದು ಅನುಭವಸಿದ್ಧ. ಹಾಗೇ ಕಣ್ಣಿಗೆ ಏನಾದರೂ ತೊಂದರೆಯಾದರೆ ಕಣ್ಣೀರು ಬರುವುದು ಎಲ್ಲರಿಗೂ ತಿಳಿದ ವಿಷಯ.

ಈಗ ನಮ್ಮ ಕಾಲಿಗೆ ಒಂದು ಮುಳ್ಳು ಚುಚ್ಚಿತು ಎಂದು ಕೊಳ್ಳೋಣ. ಆಗ ಆ ಮುಳ್ಳು ತಾನು ಚುಚ್ಚಿದ ಜಾಗದ ಸುತ್ತುಮುತ್ತಲಿನ ಜ್ಞಾನವಾಹಿನರಗಳ ತುದಿಯನ್ನು ಪ್ರೇರಿಸುತ್ತದೆ; ಆ ಮೂಲಕ ಅದು ಒಂದು ಸಂದೇಶವನ್ನು ಅರ್ಥಾತ್ ನರಪ್ರವಾಹವನ್ನು ನರಗಳ ಮೂಲಕ ಬೆನ್ನುಹುರಿಗೆ ಕಳಿಸುತ್ತದೆ. ಅಲ್ಲಿ ಅದನ್ನು ಉಚಿತ ಕ್ರಿಯಾವಾಹಿ ನರಗಳಿಗೆ ಮುಟ್ಟಿಸಲಾಗುತ್ತದೆ. ಆಗ ಕೆಳತನಕ ಹರಿದಿರುವ ಕ್ರಿಯಾವಾಹಿಗಳು ಉಕ್ತಜಾಗದಲ್ಲಿಯ ಮಾಂಸಗಳು ಸಂಕೋಚಗೊಳ್ಳುವಂತೆ ಮಾಡುತ್ತವೆ.

## ನರ ಮತ್ತು ನರಪ್ರವಾಹ

ನರಗಳು ಅಥವಾ ನರಘಟಕಗಳು ಬಹಳ ವಿಧವಾಗಿವೆ. ಪರಿನರಮಂಡಲದಲ್ಲಿ ಜ್ಞಾನವಾಹಿ ನರಗಳೆಂದೂ ಕ್ರಿಯಾವಾಹಿನರಗಳೆಂದೂ ಎರಡು ಬಗೆಯ ನರಗಳಿವೆ. ಜ್ಞಾನವಾಹಿಗಳು ಚೋದನೆಗಳನ್ನು ಇಂದ್ರಿಯಗಳಿಂದ ವಿನಿಮಯ ಕೇಂದ್ರಕ್ಕೆ ಒಯ್ಯುತ್ತವೆ ಮತ್ತು ಕ್ರಿಯಾವಾಹಿಗಳು ಆ ಕೇಂದ್ರದಿಂದ ಅವನ್ನು ಮಾಂಸಖಂಡಗಳಿಗೆ ಒಯ್ಯುತ್ತವೆ. ಎರಡನೆಯ ಚಿತ್ರದಲ್ಲಿ ಈ ಎರಡು ಬಗೆಯ ನರಪಥಗಳನ್ನೂ ಕಾಣಬಹುದು.

ನರದ ರವೆ (Cell-body) ಮತ್ತು ಅದರ ಬೀಜಗಳು (Nucleus) ಉಳಿದ ಎಲ್ಲವೂ ಹೊರಡುವ ಮೂಲ ಭಾಗ. ನರದ ಹುರಿಯೇ ನರತಂತು. ಕೆಲವೆಡೆ ಅದು ಅನೇಕ ಅಡಿಗಳಷ್ಟು ಉದ್ದವಾಗಿರುತ್ತದೆ. ನರದ ಕುಡಿಗಳು ತೆಳ್ಳಗೆ ಕುಂಬಳ ಬಳ್ಳಿಯ ದಾಂಗುಡಿಗಳಂತಿವೆ. ಈ ಎರಡು ವಿಧದ ನರಗಳಲ್ಲಿಯ ನರದ ರವೆಗಳು ಬೇರೆಬೇರೆಯಾಗಿವೆ. ಚಿತ್ರ ೩. ಜ್ಞಾನವಾಹಿಗಳ ನರದ ಕುಡಿಗಳು ಸಾಕಷ್ಟು ಬೆಳವಣಿಗೆ ಹೊಂದಿರುವುದಿಲ್ಲ. ನರದ ಹುರಿ ಎಷ್ಟೋ ವೇಳೆ ಶಾಖೋಪಶಾಖೆಯಾಗಿ ಒಡೆದಿರುತ್ತದೆ. ಅಥವಾ ಅದರಿಂದ ಎಷ್ಟೋ ಉಪನರಗಳು ಹೊರಟಿರುತ್ತವೆ. ನರಪುಟವು (Nerve-cell) ಒಂದು ಸಂಪೂರ್ಣ ಘಟಕ. ಅದರಲ್ಲಿ ನರದ ರವೆ, ನರದ ಹುರಿ ಮತ್ತು ನರದ ಕುಡಿಗಳಿವೆ. ಮನುಷ್ಯನ ಶರೀರದಲ್ಲಿ ಸುಮಾರು ೧೦,೦೦೦,೦೦೦,೦೦೦ ನರಗಳಿವೆ ಎಂದು ಅಂದಾಜು ಮಾಡಲಾಗಿದೆ.

ಶರೀರದ ಇತರ ಭಾಗಗಳನ್ನು ವಿನಿಮಯ ಕೇಂದ್ರದೊಡನೆ ಸಂಬಂಧಿಸುವ ಜ್ಞಾನವಾಹಿ–ಕ್ರಿಯಾವಾಹಿ ನರಗಳಲ್ಲದೆ ಸಂಪರ್ಕನರಗಳೆಂಬ ಇನ್ನೊಂದು ಜಾತಿಯ ನರಗಳು ಅಸಂಖ್ಯವಾಗಿವೆ. ಅವು ಕೇಂದ್ರ ನರಮಂಡಲದಲ್ಲಿ ಇವೆ. ಈ ಸಂಪರ್ಕನರಗಳಲ್ಲಿ ಅನೇಕ ಬಗೆಗಳಿವೆ. ನಾಲ್ಕನೆಯ ನಕ್ಷೆಯಲ್ಲಿ ಮೂರು ಬಗೆಗಳನ್ನು ತೋರಿಸಲಾಗಿದೆ. ಸಂಪರ್ಕನರಗಳು ವಿನಿಮಯದ ಅಥವಾ ಒತ್ತುಗುಂಡಿ–ಹಲಗೆಯ (Switch Board) ಕೆಲಸವನ್ನು ಮಾಡುವ

ಕೇಂದ್ರ ನರಮಂಡಲದ ಕೃತ್ಯಕ್ಕೆ ನೆರವಾಗುತ್ತವೆ. ಹೇಗೆಂದರೆ ಅವು ಅಲ್ಲಿ ಒಳಬರುವ ಮತ್ತು ಹೊರಹೊರಡುವ ಚೋದನೆಗಳಲ್ಲಿ ಅನೇಕ ವಿಧದ ಸಂಪರ್ಕವನ್ನುಂಟು ಮಾಡಿಕೊಡುತ್ತವೆ. ಜ್ಞಾನವಾಹಿ ಇರಲಿ, ಕ್ರಿಯಾವಾಹಿ ಇರಲಿ ಸಂಪರ್ಕವಾಹಿ ಇರಲಿ– ಪ್ರತಿಯೊಂದು ನರವೂ ಒಂದು ಸಾಂಗವಾದ ಪರಿಪೂರ್ಣ ಘಟಕ. ಎರಡು ನರಗಳು ಎಂದೂ ಒಂದರೊಳಗೊಂದು ಪ್ರವೇಶಿಸುವುದಿಲ್ಲ. ಆದರೆ ಒಂದು ನರದ ತುದಿಯು ಇನ್ನೊಂದು ನರದ ಕುಡಿ ಅಥವಾ ರವೆಯೊಡನೆ ಸಂಪರ್ಕ ಬೆಳೆಸುತ್ತದೆ ಮತ್ತು ನರಪ್ರವಾಹವು ಅವುಗಳ ನಡುವಿನ ವಿಸಂಧಿಯನ್ನು ದಾಟಿ ವಿದ್ಯುದಾವರ್ತದಲ್ಲಿ ಒಂದು ಕಿಡಿಯು ಹಾರುವಂತೆ ಹಾರುತ್ತದೆ.

ನರ ಕಳಿಸುವ ಪ್ರವಾಹದ ನಿಜಸ್ವರೂಪವು ಇನ್ನೂ ಗೊತ್ತಾಗಿಲ್ಲ. ಅದು ಖಂಡಿತವಾಗಿಯೂ ವಿದ್ಯುತ್ತಿನ ಸ್ವಭಾವವುಳ್ಳದ್ದು. ಆದರೆ ಅದು ತಂತಿಗಳ ಮೂಲಕ ಕಳಿಸಲಾಗುವ ಸಾಮಾನ್ಯ ವಿದ್ಯುತ್ ಪ್ರವಾಹದಿಂದ ಅನೇಕ ರೀತಿಯಲ್ಲಿ ಭಿನ್ನವಾಗಿದೆ. ನರಪ್ರವಾಹವು ವಿದ್ಯುತ್ ಪ್ರವಾಹಕ್ಕಿಂತ ಬಹಳ ಮಂದಗತಿಯಲ್ಲಿ ಸಾಗುತ್ತದೆ ಮತ್ತು ನರದ ಹುರಿಯ ಮೂಲಕ ಹೋಗುವ ಅದರ ಗತಿಯು ಶೀತ ಮತ್ತು ಒತ್ತಡ ಮುಂತಾದವುಗಳಿಂದ ಕುಂಠಿತವಾಗುತ್ತದೆ. ಆದರೆ ವಿದ್ಯುತ್ ಪ್ರವಾಹದ ಗತಿಗೆ ಇಂಥ ಅಡೆತಡೆಗಳಿಲ್ಲ. ನರಪ್ರವಾಹದಲ್ಲಿ ವಿದ್ಯುದ್ ರಾಸಾಯನಿಕ ಅಲೆಗಳಿವೆ ಎಂದು ಅನೇಕರು ನಂಬುತ್ತಾರೆ. ಈ ನಂಬಿಕೆಯ ಪ್ರಕಾರ ನರದ ಹುರಿಯಲ್ಲಿ ಒಂದು ಪ್ರೇರಣೆಯು ರಾಸಾಯನಿಕ ಪರಿವರ್ತನಮಾಲೆಯನ್ನು ಉಂಟುಮಾಡುತ್ತದೆ ಮತ್ತು ಈ ಬದಲಾವಣೆಗಳು ಅನಂತರ ವಿದ್ಯುತ್ ಪರಿವರ್ತನೆಗಳನ್ನು ಉಂಟುಮಾಡುತ್ತವೆ. ಆದರೆ ಇದರ ವಿಷಯದಲ್ಲಿ ತಿಳಿಯಬೇಕಾದದ್ದು ಬಹಳವಿದೆ. ಒಂದು ನರಪ್ರವಾಹವೆಂದರೇನು? ಎಂಬುದಕ್ಕೆ ತಕ್ಕ ಉತ್ತರವನ್ನು ಕೊಡಲು ನಾವು ಸಮರ್ಥರಾದಾಗ ಜೀವವಸ್ತುವಿನ ಸ್ವಭಾವದ ಮೂಲಪ್ರಶ್ನೆಯನ್ನು ಬಿಡಿಸಲು ಶಕ್ತರಾಗುತ್ತೇವೆ.

ಕ್ಷೇಪಕ್ರಿಯೆಯ ತಂತ್ರವನ್ನು ಐದನೆಯ ನಕ್ಷೆಯಲ್ಲಿ ಇರುವಂತೆಯೇ ಕೊಡುವುದು ರೂಢಿ. ಅದರಲ್ಲಿ ಜ್ಞಾನವಾಹಿಯು ಚೋದನೆಯು ವಿಸಂಧಿಯನ್ನು ದಾಟಿ, ಕ್ರಿಯಾವಾಹಿಯನ್ನು ಪ್ರಚೋದಿಸುವುದನ್ನು ಕಾಣಬಹುದು. ಆದರೆ ಎರಡು ದೃಷ್ಟಿಯಿಂದ ಇದು ಅತಿಸಂಕ್ಷೇಪದ ದೋಷಕ್ಕೆ ಗುರಿಯಾಗುತ್ತದೆ. ಮೊದಲನೆಯದಾಗಿ, ಕೆಲ ಅತ್ಯಂತ ಸರಳವಾದ ಕ್ಷೇಪಕ್ರಿಯೆಗಳಲ್ಲಿ ಮಾತ್ರ ಜ್ಞಾನವಾಹಿ–ಕ್ರಿಯಾವಾಹಿಗಳು ನೇರವಾಗಿ ಒಂದರೊಡನೊಂದು ಸಂಪರ್ಕ ಇಟ್ಟುಕೊಳ್ಳುತ್ತವೆ; ಸಾಮಾನ್ಯವಾಗಿ ಅವು ಸಂಪರ್ಕನರಗಳಿಂದ ಸಂಬಂಧಿಸಲ್ಪಟ್ಟಿರುತ್ತವೆ. ಎರಡನೆಯದಾಗಿ, ಒಂದು ಅತಿಸರಳವಾದ ಅನುಕ್ರಿಯೆಯಲ್ಲಿಯೂ ಒಂದಕ್ಕಿಂತ ಹೆಚ್ಚು ಸಂಖ್ಯೆಯ ಮತ್ತು ಜಾತಿಯ ನರಗಳ ಕಾರ್ಯವಿರುತ್ತದೆ. ಯಾವ ನರವೂ ಒಂಟಿಯಾಗಿ ಕೆಲಸ ಮಾಡುವುದಿಲ್ಲ; ಕೆಲಸ ಮಾಡುವುದು ನರಗಳ ಗುಂಪು. ಆದರೆ ಈ ಸಂಗತಿಯು ಚೊಕ್ಕವಾದ ನಕ್ಷೆಯನ್ನು ತಯಾರಿಸಲು ತೊಂದರೆ ಕೊಡುವುದರಿಂದ ಅದನ್ನು ನಕ್ಷೆಯಲ್ಲಿ ಗೌಣಗೊಳಿಸಲಾಗಿದೆ.

**ವಿಸಂಧಿಯ ಅವರೋಧ:** ನರದ ಮೂಲಕ ಚೋದನೆ ಹರಿಯುವಾಗ ಯಾವಾಗಲೂ ವಿಸಂಧಿಯು ಒಂದು ತರಹದ ಅವರೋಧವನ್ನು, ಅಡ್ಡಿಯನ್ನು ಉಂಟುಮಾಡುತ್ತದೆ. ಆದ್ದರಿಂದ ಬಹುಶಃ ಒಂದು ಜ್ಞಾನವಾಹಿಯ ಚೋದನೆ ಎಂದೂ ಅದನ್ನು ಗೆಲ್ಲಲು ಶಕ್ಯವಾಗದು. ಸಾಮಾನ್ಯವಾಗಿ ಅನೇಕ ಜ್ಞಾನವಾಹಿಗಳಿಂದ ಏಕಕಾಲದಲ್ಲಿ ಚೋದನೆಗಳು ಬಂದರೆ ಆಗ ಅವು ವಿಸಂಧಿಯನ್ನು ದಾಟಿ ಕ್ರಿಯಾವಾಹಿಯನ್ನು ಪ್ರಚೋದಿಸಬಲ್ಲವು. ಇದರ ಮುಖ್ಯವಾದ ಫಲಿತಾಂಶವೆಂದರೆ ಒಟ್ಟಿಗೆ ಉಂಟಾಗುವ ಅನೇಕ ಪ್ರೇರಣೆಗಳ ಫಲವು ಅವುಗಳ ಪ್ರತ್ಯೇಕ ಫಲಗಳ ಮೊತ್ತಕ್ಕೆ ಯಾವಾಗಲೂ ಸರಿಗಟ್ಟಬೇಕೆಂದು ಹೇಳಲು ಬರುವುದಿಲ್ಲ.

## ಮಿದುಳಿನ ವಿಕಾಸ

ವನಸ್ಪತಿಯಂತಿರುವ ಒಂದು ತರದ ಕಡಲ ಮೀನಿನಲ್ಲಿ ಅಥವಾ ಲೋಳೆ ಮೀನಿನಲ್ಲಿ ಕಂಡುಬರುವ ನರಮಂಡಲವು ಸರಳವಾದ ಅತ್ಯಂತ ಪ್ರಾಚೀನ ನರಮಂಡಲದ ಒಂದು ಮಾದರಿ. ಅದು ಇಡೀ ದೇಹದಲ್ಲಿ ಹೆಚ್ಚು–ಕಡಿಮೆ ಒಂದೇ ಸಮನಾಗಿ ಹರಡಿರುತ್ತದೆ. ಈ ಪ್ರಾಣಿಗಳಿಗೆ ಕೇಂದ್ರ ನರಮಂಡಲವಿಲ್ಲ. ಇವುಗಳ ಜ್ಞಾನವಾಹಿ–ಕ್ರಿಯಾವಾಹಿ ನರಗಳು ನೇರವಾಗಿ ಕೂಡಿರುತ್ತವಲ್ಲದೆ, ಸಂಪರ್ಕನರಗಳಿಂದ ಸಂಬಂಧಿಸಲ್ಪಟ್ಟಿರುವುದಿಲ್ಲ. ಆದುದರಿಂದ ಅವುಗಳ ಪ್ರಕ್ರಿಯೆಗಳು ಕಡಿಮೆ ಮತ್ತು ಅತ್ಯಂತ ಏಕತಾನವುಳ್ಳವು. ಮೇಲ್ಜಾತಿಯ ಪ್ರಾಣಿಗಳಲ್ಲಿ ಕಂಡುಬರುವ ಪ್ರತಿಕ್ರಿಯಾವೈವಿಧ್ಯ ಮತ್ತು ಹೊಂದಿಕೆಯ ರೀತಿಗಳು ಕೇಂದ್ರ ನರಮಂಡಲದ ಜಟಿಲ ರಚನೆಯಿಂದ ಸಂಭವಿಸುತ್ತವೆ. ಕೇಂದ್ರ ನರಮಂಡಲವಿಲ್ಲದ ಪ್ರಾಣಿಗಳು ಕೆಲವು ನಿರ್ದಿಷ್ಟ ಯಾಂತ್ರಿಕ ಅನುಕ್ರಿಯೆಗಳನ್ನು ಮಾತ್ರ ಪ್ರೇರಣೆಗಳಿಗೆ ಪ್ರತಿಯಾಗಿ ಮಾಡಬಲ್ಲವು; ಅಲ್ಲದೆ ಅವುಗಳ ಶರೀರದ ವಿವಿಧ ಭಾಗಗಳಲ್ಲಿ ಗಣ್ಯಾಂಶದ ಸ್ವಾಯತ್ತತೆ ಇರುತ್ತದೆ. ಮೇಲೆ ಹೇಳಿದ ಕಡಲ ಮೀನಿನ ತೆವಳುಗಾಲು ಉಚಿತ ಪ್ರೇರಣೆ ಕೊಟ್ಟಾಗ ಅದು ಆ ಪ್ರಾಣಿಯ ಶರೀರದಿಂದ ಬೇರ್ಪಟ್ಟಿದ್ದರೂ ತೆವಳುತ್ತಲೇ ಹೋಗುವುದು. ಇಲ್ಲಿ ಪ್ರೇರಣೆ ಹಾಗೂ ಅನುಕ್ರಿಯೆಗಳ ಸಂಪರ್ಕವು ನೇರವಾಗಿದೆಯಲ್ಲದೆ ದೂರದ ಕೇಂದ್ರವಿನಿಮಯ ಮಂಡಲದ ಮೂಲಕವಲ್ಲ.

ಸಕಶೇರುಕ ಅಥವಾ ಬೆನ್ನೆಲುಬಿರುವ ಪ್ರಾಣಿಗಳಲ್ಲಿ ಮಾತ್ರ ಮಿದುಳು ನರಮಂಡಲದ ಕೇಂದ್ರವಾಗಿರುತ್ತದೆ. ಅಕಶೇರುಕಗಳ ಕೇಂದ್ರ ನರಮಂಡಲದಲ್ಲಿ ಆರನೆಯ ನಕ್ಷೆಯಲ್ಲಿ ಕೊಟ್ಟಿರುವಂಥ ನರಜಾಲಗಳ ಸರಪಳಿ ಮಾತ್ರ ಇರುತ್ತದೆ. ಅತಿ ಸರಳ ಮಾದರಿಯ ಸಕಶೇರುಕಗಳಲ್ಲಿ ಮುಖ್ಯವಾಗಿ ಬೆನ್ನುಹುರಿಯಲ್ಲಿಯೇ ನರಜಾಲ ಬೆಳೆದಿರುತ್ತದೆ–ಅದರಲ್ಲೂ ಬೆನ್ನು ಹುರಿಯ ತುದಿಯಲ್ಲಿ ಇರುವ ಉಬ್ಬಿನಲ್ಲಿ. ಬೆನ್ನುಹುರಿಯ ಈ ಚಿಕ್ಕ ಮೊಳಕೆಯಿಂದ ಮಾನವನ ಜಟಿಲವಾದ ಮಿದುಳು ವಿಕಾಸಹೊಂದಿತು. ಏಳನೆಯ ನಕ್ಷೆಯಲ್ಲಿ ಬೇರೆ ಬೇರೆ ಪ್ರಾಣಿಗಳ ಮಿದುಳುಗಳ ಬೆಳವಣಿಗೆಯ ಉತ್ತರೋತ್ತರ ಹಂತಗಳನ್ನು ಕಾಣಬಹುದು. ಅತಿ ಕೆಳಜಾತಿಯ ಸಕಶೇರುಕಗಳ ಮಿದುಳಿನಲ್ಲಿ ಮುಖ್ಯವಾಗಿ ಹಿಮ್ಮಿದುಳು, ನಡುಮಿದುಳು,

1.



THE NERVOUS SYSTEM

2.




---

DENDRITES




---

3.

MOTOR NERVE




MOTOR NEURON

ನೇತ್ರಲಂಬಕಗಳು ಮತ್ತು ಅರೆಹೊರೆದ ಮುಮ್ಮಿದುಳು ಇರುವವು. ಹೆಚ್ಚು ಜಟಿಲವಾದ ಮನೋವ್ಯಾಪಾರಗಳು ಮಾನವನಲ್ಲಿ ಮುಮ್ಮಿದುಳನ್ನೇ ಅವಲಂಬಿಸುತ್ತವೆ. ವಿಕಾಸದ ಮೆಟ್ಟಿಲನ್ನು ಏರುತ್ತ ಮೇಲೆ ಹೋದ ಹಾಗೆ ಮುಮ್ಮಿದುಳಿನ ಗಾತ್ರವು ಹೆಚ್ಚುತ್ತ ಹೋಗುತ್ತದೆ. ಅದರಿಂದಲೇ ಮನುಷ್ಯನಲ್ಲಿ ಅದು ಹಳಮಿದುಳನ್ನು ಮೀರಿಸುತ್ತದೆ. ಪ್ರಾಣಿಯ ಮತ್ತು ಮನುಷ್ಯನ ಮಿದುಳುಗಳಲ್ಲಿಯ ವ್ಯತ್ಯಾಸವು ಸುವ್ಯಕ್ತ. ಮನುಷ್ಯನ ಮುಮ್ಮಿದುಳಿನ ದೊಡ್ಡಭಾಗವು (ಅದರ ನಿಜವಾದ ಮೇಲ್ಮೈ) ಅದರ ಗಾತ್ರ ಹೆಚ್ಚಾದ ಹಾಗೆ ಬೆಳೆದುಬಂದ ಆಳವಾದ ಮಡಿಕೆ ಮತ್ತು ಬಿರುಕುಗಳಲ್ಲಿ ಅಡಗಿರುವುದರಿಂದ ಮೊದಲ ನೋಟಕ್ಕೆ ಅದರ ಗಾತ್ರವು ಇದ್ದದ್ದಕ್ಕೂ ಹೆಚ್ಚು ದೊಡ್ಡದಾಗಿ ಕಾಣಿಸುತ್ತದೆ.

## ಹಳಮಿದುಳು

ಮುಮ್ಮಿದುಳು ಗಾತ್ರದಲ್ಲಿ ಹೆಚ್ಚುತ್ತ ಹೋದಹಾಗೆ ತಾನು ಹುಟ್ಟಿ ಬಂದ ಹಳಮಿದುಳಿನ ಅನೇಕ ಕೃತ್ಯಗಳನ್ನು ತನ್ನ ಕೈಗೆ ತೆಗೆದುಕೊಳ್ಳುವ ಪ್ರವೃತ್ತಿಯನ್ನು ತೋರಿಸುತ್ತದೆ. ಇದರ ಉದಾಹರಣೆಗಳನ್ನು ನೇತ್ರಲಂಬಕಗಳ ಸಾಕ್ಷೇಪ ಗಾತ್ರ ಕಡಿಮೆಯಾಗುವುದರಲ್ಲಿ ಕಾಣಬಹುದು. ಮನುಷ್ಯನ ನಡುಮಿದುಳಿನ ಎದುರಿರುವ ಚಿಕ್ಕ ಪ್ರದೇಶವೇ ಹಳೆಯ ನೇತ್ರ ಲಂಬಕಗಳ ಅವಶೇಷ. ಅದನ್ನು ಅಡ್ಡಗೆರೆಗಳಿಂದ ತೋರಿಸಲಾಗಿದೆ. ಬೆಳಕಿಗೆ ನಮ್ಮ ಕಣ್ಣಿನಲ್ಲಿ ಉಂಟಾಗುವ ಕ್ಷೇಪಕ್ರಿಯೆಯನ್ನು ಅದು ನಿಯಂತ್ರಿಸುತ್ತದೆ. ನೋಟದ ಇತರ ಕೃತ್ಯಗಳನ್ನು ಮುಮ್ಮಿದುಳು ನಿಯಂತ್ರಿಸುತ್ತದೆ. ಮನುಷ್ಯನಲ್ಲಿ ಸಹ ಹಳಮಿದುಳು ಮೂಲೆಗೆ ಬಿದ್ದಿರುವಾಗ ಗೌಣವೆನಿಸಿದರೂ ಅಂಥ ಅನೇಕ ಗೌಣ ಕರ್ತವ್ಯಗಳನ್ನು ಅದು ಇನ್ನೂ ನೆರವೇರಿಸುತ್ತಿದೆ. ಆ ಕರ್ತವ್ಯಗಳು ನಮ್ಮ ವಿಕಾಸಾವಸ್ಥೆಯ ಮೊದಮೊದಲಿನ ಹಂತದ ಮತ್ತು ಯಾಂತ್ರಿಕವಾದ ಚಟುವಟಿಕೆಗಳಿಗೆ ಸಂಬಂಧಿಸಿವೆ. ನಡುಮಿದುಳು, ಹಿಮ್ಮಿದುಳು, ನರಸೇತು ಮತ್ತು ಭಾವನಾಪೀಠಗಳೇ ಹಳಮಿದುಳಿನ ಮುಖ್ಯ ಭಾಗಗಳು. ನಿಲುವಿನ ಭಂಗಿ, ಮಾಂಸಖಂಡಗಳ ಹೊಂದಿಕೆ ಮತ್ತು ಸಮತೋಲ ಉಳಿಸಿಕೊಳ್ಳುವುದು ನಡುಮಿದುಳಿನ ನಿಯಂತ್ರಣಕ್ಕೆ ಸೇರಿದ್ದು. ಅದರ ಬಲದಿಂದ ನಾವು ಬೀಳದಂತೆ ನೆಟ್ಟಗೆ ನಡೆಯಬಹುದು. ಅದರ ಸಹಾಯದಿಂದಲೇ ನಾವು ಕಲ್ಲು ಎಸೆಯುವುದು, ಚಂಡುಹಿಡಿಯುವುದು, ನೆಲದಿಂದ ಏನನ್ನಾದರೂ ಮೇಲಕ್ಕೆ ಎತ್ತಿಕೊಳ್ಳುವುದು ಮುಂತಾದ ಕಾರ್ಯಗಳನ್ನು ಎಷ್ಟೋ ಸಲ ನಮಗೆ ತಿಳಿಯದಂತೆಯೇ ಮಾಡುತ್ತೇವೆ; ಅಂಥ ಸಂದರ್ಭಗಳಲ್ಲಿ ತೂಕ ತಪ್ಪದಂತೆ ಉಳಿಯಲು ಬೇಕಾದ ಮಾಂಸಖಂಡಗಳ ಹೊದಿಕೆಗಳನ್ನು ಅದೇ ನೆರವೇರಿಸುತ್ತದೆ.

ಉಸಿರಾಟ, ಎದೆಬಡಿತ ಮತ್ತು ರಕ್ತನಾಳಗಳ ಸಂಕೋಚ ಮುಂತಾದ ಸತತಗತಿಯಿಂದ ತಿಳಿಯದೆ ಮಾಡುವ ಅನೇಕ ಕಾರ್ಯಗಳು ಹಿಮ್ಮಿದುಳಿನ ಕಕ್ಷೆಯಲ್ಲಿ ಸೇರುತ್ತವೆ. ಅನಂತರ ಕೆಳಗಿನ ಪ್ರಾಣಿಗಳಲ್ಲಿ ಭಾವನಾಪೀಠವೆಂಬುದು ಇಂದ್ರಿಯಾನುಭವ ಕೇಂದ್ರ; ಆದರೆ ಮನುಷ್ಯನಲ್ಲಿಯೂ, ಮೇಲು ಮಟ್ಟದ ಪ್ರಾಣಿಗಳಲ್ಲಿಯೂ ಅದರ ಕಾರ್ಯವನ್ನು ಹೊಸ ಮಿದುಳು ಕಸಿದುಕೊಂಡಿದೆ. ನೋವು ನುರಿ ಮುಂತಾದ ಸಾಮಾನ್ಯ ಸ್ಥೂಲ ಸಂವೇದನೆಗಳನ್ನು ನಮ್ಮಲ್ಲಿ ಭಾವನಾಪೀಠ ಉಂಟುಮಾಡುತ್ತದೆ; ಆದರೆ ಐಂದ್ರಿಯಿಕ ನಿರ್ಣಯ ಶಕ್ತಿ

ಮತ್ತು ಹೆಚ್ಚು ಸಮ್ಮಿಶ್ರ ರೂಪದಲ್ಲಿರುವ ಇಂದ್ರಿಯಾನುಭವಗಳು ಮುಮ್ಮಿದುಳಿಗೇ ಸಾಧ್ಯ. ಭಾವನಾಪೀಠವು ಒಂದು ಟಪ್ಪಾಲುಕಟ್ಟೆಯಂತೆ ವಿವಿಧ ಸಂವೇದನೆಗಳನ್ನು ಪ್ರತ್ಯೇಕವಾಗಿ ವಿಂಗಡಿಸಿ ಮಿದುಳಿನ ಮೇಲ್ಪದಿಯ ಉಚಿತ ಪ್ರದೇಶಗಳಿಗೆ ಕಳಿಸುತ್ತದೆ. ಇಂದ್ರಿಯಗಳಿಗೆ ಸಂಬಂಧಿಸಿದ ನರಚೋದನೆಗಳೆಲ್ಲವೂ ಭಾವನಾಪೀಠದ ಮೂಲಕವೇ ಹೊಸ ಮಿದುಳಿಗೆ ತಲುಪುತ್ತದೆ. ಇಷ್ಟೇ ಅಲ್ಲದೆ ಪ್ರಾಣಿಗಳಲ್ಲಿಯೂ, ಮನುಷ್ಯನಲ್ಲಿಯೂ ಭಾವನಾ ಪೀಠವೇ ವಿವಿಧ ಭಾವನೆಗಳ ಮೂಲಸ್ಥಳ. ಸುತ್ತುಮುತ್ತಲಿನ ಮೂಲ ನರಜಾಲಗಳೊಡನೆ ಕೂಡಿದ ಭಾವನಾಪೀಠವೇ ಹಳಮಿದುಳಿನ (ನಡುಮಿದುಳನ್ನು ಉಳಿದು) ಉಚ್ಚ ಕ್ರಿಯಾವಾಹಿ ಕೇಂದ್ರವೆನಿಸುತ್ತದೆ. ನಗುವುದು, ಆಕಳಿಸುವುದು, ನಡುಗುವುದು ಮುಂತಾದ ಭಾವನಾವ್ಯಂಜಕವಾದ ಅನಿಚ್ಛಾಕೃತ ಭೌತಿಕ ಪ್ರಕ್ರಿಯೆಗಳ ನಿಯಂತ್ರಣ ಅದಕ್ಕೆ ಸೇರಿದ್ದು. ೧೦ನೆಯ ನಕ್ಷೆಯಲ್ಲಿ ಮೂಲ ನರಜಾಲಗಳನ್ನು ಕಾಣಬಹುದು.

ಹಳಮಿದುಳು ಮತ್ತು ಬೆನ್ನ ಹುರಿಗಳನ್ನು ಸೇರಿಸಿ ಒಟ್ಟಿಗೆ ಕೆಳಗಿನ ಕೇಂದ್ರಗಳೆನ್ನುವುದು ರೂಢಿ; ಮೇಲಿನ ಕೇಂದ್ರಗಳು ಮುಮ್ಮಿದುಳನಲ್ಲಿವೆ.

## ಬೆನ್ನುಹುರಿ ಮತ್ತು ಕ್ಷೇಪಕ್ರಿಯೆ

ಆಗಲೇ ಹೇಳಿದ ಸರಳವಾದ ಎಷ್ಟೋ ಕ್ಷೇಪಕ್ರಿಯೆಗಳನ್ನು ಬೆನ್ನುಹುರಿ ನಿಯಂತ್ರಿಸುತ್ತದೆ. ಹಳಮಿದುಳು ನಿಯಂತ್ರಿಸುವ (೧) ಬೆಳಕಿನಿಂದ ಉಂಟಾಗುವ ಕ್ಷೇಪಾನುಕ್ರಿಯೆ ಮತ್ತು (೨) ಲಾಲಾ ರಸೋತ್ಪಾದನೆ ಮುಂತಾದ ತಲೆಯ ಕ್ಷೇಪಕ್ರಿಯೆಗಳು ಮಾತ್ರ ಅಪವಾದಗಳು.

4.



a

....4.



b



c

TYPES OF INTERNUNCIAL NEURONS

a and b in cortex, c in cerebellum

---

5.




REFLEX ACTION

ಮುಮ್ಮಿದುಳಿನ ಸಹಕಾರನ್ನು ಅಪೇಕ್ಷಿಸದ ಭೌತಿಕ ಪ್ರೇರಣೆಗಳಿಗೆ ತಕ್ಕಂತೆ ಉಂಟಾಗುವ ಜಡಾನುಕ್ರಿಯೆಗಳು ಎಷ್ಟೋ ಇವೆ. ಉದಾಹರಣೆಗಾಗಿ, ಈಗ ನಾವು ಒಂದು ಕಪ್ಪೆಯ ತಲೆಯನ್ನು ಕತ್ತರಿಸಿ ಒಗೆದು ಅದರ ರಕ್ತನಾಳಗಳನ್ನು ರಕ್ತ ಸೋರದಂತೆ ಕಟ್ಟಿ ಮೇಜಿನ ಮೇಲಿಟ್ಟರೆ ಅದು ಕೆಲ ಘಂಟೆಗಳ ಕಾಲ ಸಸ್ಯ ಬದುಕಿದಂತೆ ಬದುಕಿರುತ್ತದೆ. ಅದಕ್ಕೆ ಭಾವನಾಂಶದ ಸಂವೇದನೆ ಶಕ್ಯವಾಗದು; ಸ್ವೇಚ್ಛಾಕೃತ ಚಲನವಲನಗಳನ್ನು ಮಾಡಲಾರದು– ಅಲ್ಲದೆ ಅದಕ್ಕೆ ಯಾವುದೇ ಬಗೆಯ ಪ್ರಜ್ಞೆಯಾಗಲಿ ಅನುಭವವಾಗಲಿ ಇರದು. ಆದರೆ ಒಂದು ಚೂರು ಒತ್ತು ಕಾಗದವನ್ನು ಆಮ್ಲದಲ್ಲಿ ಅದ್ದಿ ಅದರ ಬಲಬದಿಯ ಚರ್ಮವನ್ನು ಮೆಲ್ಲಗೆ ಅದರಿಂದ ಮುಟ್ಟಿದರೆ ತಲೆಯಿಲ್ಲದ ಆ ಪ್ರಾಣಿಯು ತನ್ನ ಬಲಗಾಲನ್ನು ಎತ್ತಿ ಮುಟ್ಟಿದ ಭಾಗವನ್ನು ಕುಸಿದುಕೊಳ್ಳುತ್ತದೆ. ಅದರ ಬಲಗಾಲನ್ನು ಬಿಗಿಯಾಗಿ ಹಿಡಿದುಕೊಂಡರೆ ಒಂದು ಕ್ಷಣದ ನಂತರ ಅದು ತನ್ನ ಎಡಗಾಲನ್ನು ಎಳೆದು ಮೊದಲಿನಷ್ಟೇ ಸರಿಯಾಗಿ ತುರಿಸಿಕೊಳ್ಳುತ್ತದೆ. ನೋಡುವವನಿಗೆ ಅದು ಸ್ವೇಚ್ಛೆಯಿಂದಲೇ ತಿಳಿದು ತುರಿಸಿಕೊಂಡಂತೆ ಕಾಣುತ್ತದೆ. ಆದರೆ ವಾಸ್ತವಿಕವಾಗಿ ಕಪ್ಪೆಗೆ ಯಾವ ಅನುಭವವೂ ಆಗದು. ಅದರ ಕಾರ್ಯವು ಎದೆಬಡಿತದಷ್ಟೇ ಎಚ್ಚರವಿಲ್ಲದೆ, ಉದ್ದೇಶವಿಲ್ಲದೆ ನಡೆದದ್ದು.

ಕ್ಷೇಪಕ್ರಿಯೆಯು ಮುಮ್ಮಿದುಳಿನಿಂದ ಸ್ವತಂತ್ರ ಎಂಬ ಸಂಗತಿಯನ್ನು ಇನ್ನೂ ಸ್ಪಷ್ಟವಾಗಿ ಮನುಷ್ಯರಲ್ಲಿ ಕಾಣಬಹುದು. ಒಬ್ಬನು ಒಮ್ಮೆ ಅಪಘಾತಕ್ಕೆ ತುತ್ತಾಗಿ ಬೆನ್ನುಹುರಿ ಹರಿದುಕೊಂಡಾಗಲೂ ಬದುಕಿದ್ದ ನಿದರ್ಶನವಿದೆ. ಅಂಥ ಸಮಯದಲ್ಲಿ ಬೆನ್ನುಹುರಿ ಹರಿದುಹೋದುದರಿಂದ ಮಿದುಳಿನಿಂದ ಯಾವ ಸಂದೇಶವೂ ಹರಿದ ಸ್ಥಳದ ಕೆಳಗಿನ (ದೇಹದ) ಯಾವ ಭಾಗಗಳಿಗೂ ತಲುಪದಾದರೂ, ಅವನ ಕಾಲುಗಳು ಬೆನ್ನುಹುರಿಯಿಂದ ನಿಯಂತ್ರಿತವಾದ ಸರಳ ಕ್ಷೇಪಕ್ರಿಯೆಗಳನ್ನು ಕೆಲಕಾಲ ಮಾಡಬಲ್ಲುದು. ಒಂದು ಸೂಜಿಯನ್ನು ಅವನ ಕಾಲಿಗೆ ಚುಚ್ಚಿದರೆ ಅವನ ಕಾಲು ಫಕ್ಕನೆ ಸರಿಯುವುದು. ಅವನ ಅಂಗಾಲಿಗೆ ಒಂದು ಪಕ್ಕದಿಂದ ಕಚಗುಳಿ ಇಟ್ಟರೆ ಸ್ವಸ್ಥಮನುಷ್ಯನಂತೆ ಅವನು ಮುಲುಗಿ ಒದ್ದಾಡುತ್ತಾನೆ.

## ಕ್ಷೇಪಚಾಪ ಮತ್ತು ಪ್ರಜ್ಞೆ

ಮೇಲೆ ಹೇಳಿದ ಮನುಷ್ಯನಿಗೆ ಯಾವ ಭಾವನಾಂಶವನ್ನೂ ಗ್ರಹಿಸುವ ಶಕ್ತಿ ಇಲ್ಲದಾಗ ಸೂಜಿ ಚುಚ್ಚಿದ್ದಕ್ಕಾಗಲಿ, ಕಚಗುಳಿ ಇಟ್ಟಿದ್ದಕ್ಕಾಗಲಿ ಪ್ರತಿಕ್ರಿಯೆಯನ್ನು ಹೇಗೆ ಎಸಗಬಲ್ಲ? ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರ ಇಂತಿದೆ:

ಆಹಾರವನ್ನು ಜೀರ್ಣಿಸುವ ಕೆಲಸದಲ್ಲಿ ಮಗ್ನವಾದ ಜಠರ ಮಾಡುವಂಥ ಕ್ಷೇಪಕ್ರಿಯೆಗಳು ಸಂಪೂರ್ಣವಾಗಿ ನಮಗೆ ಎಚ್ಚರವಿಲ್ಲದೆಯೇ ನಡೆಯುತ್ತವೆ. ಸೂಜಿ ಚುಚ್ಚಿದಾಗ ನಾವು ಮುದುಡಿಕೊಳ್ಳುವಂಥ ಕ್ಷೇಪಕ್ರಿಯೆಗಳಲ್ಲಿ ಅವುಗಳ ಪ್ರೇರಣೆಯೊಂದಿಗೆ ಸಂವೇದನೆಯೂ ಕೂಡಿಕೊಂಡಿರಬಹುದು. ಈ ಎರಡನೆಯ ಬಗೆಯ ಕ್ಷೇಪಕ್ರಿಯೆಗಳಲ್ಲಿ ಸಂವೇದನೆಯೇ ಅನುಕ್ರಿಯೆಗೆ ಕಾರಣವೆಂದು ನಾವು ಭಾವಿಸುವ ಸಂಭವವಿದೆ. ಆದರೆ ಅದು ಸರಿಯಲ್ಲ. ಅನುಕ್ರಿಯೆಯ ಅನಂತರ ಸಂವೇದನೆಯು ಉಂಟಾಗುತ್ತದೆ; ಅಲ್ಲದೆ

ಅದು ಅನುಕ್ರಿಯೆಯನ್ನು ಉಂಟುಮಾಡುವುದರಲ್ಲಿ ಯಾವ ಪಾತ್ರವನ್ನೂ ವಹಿಸುವುದಿಲ್ಲ. ಅನುಕ್ರಿಯೆಗೆ ಅನುಗತವಾಗಿ ಸಂವೇದನೆ ಉಂಟಾಗುವ ಪ್ರಕರಣಗಳಲ್ಲಿ ಸಂಪರ್ಕನರಗಳ ಮೂಲಕ ಜ್ಞಾನವಾಹಿ ಮತ್ತು ಕ್ರಿಯಾವಾಹಿಗಳು ಬೆನ್ನು ಹುರಿಯಲ್ಲಿ ಇತರ ಶಾಖೆಗಳೊಡನೆ ಮಿದುಳಿನ ಸಂಪರ್ಕವನ್ನು ಪಡೆಯುತ್ತವೆ. ಈ ಪ್ರಕಾರ ಜ್ಞಾನವಾಹಿ ನರವು ಕೇಂದ್ರ ನರದ ಮೂಲಕ ಇಬ್ಬಗೆಯ ಸಂಪರ್ಕವನ್ನು ಕಲ್ಪಿಸುತ್ತದೆ: ಒಂದನೆಯದು ಕ್ಷೇಪಾನುಕ್ರಿಯೆಯನ್ನು ಉಂಟುಮಾಡುವ ಕ್ರಿಯಾವಾಹಿಯೊಡನೆ; ಎರಡನೆಯದು ಸಂವೇದನೆಯನ್ನು ಉಂಟುಮಾಡುವ ಮಿದುಳಿನೊಡನೆ. ಎಂಟನೆಯ ನಕ್ಷೆಯು ಈ ಸಂಗತಿಯ ಸ್ಥೂಲಜ್ಞಾನವನ್ನು ಮಾಡಿಕೊಡುತ್ತದೆ.

ಹೀಗೆ ಸಂವೇದನೆ ಎಂಬುದು ಒಂದು ಗೌಣ ಫಲಿತಾಂಶ. ಮಿದುಳಿನೊಡನೆ ಸಂಪರ್ಕವನ್ನು ನಿಲ್ಲಿಸಿ, ಸಂವೇದನೆ ಆಗದಂತೆ ಮಾಡಿದಾಗಲೂ ಕ್ಷೇಪಾನುಕ್ರಿಯೆ ನಡೆದೇ ನಡೆಯುತ್ತದೆ. ಸೂಜಿ ಚುಚ್ಚಿದಾಗ ನಾವು ಕೈಕಾಲು ಸರಿಸಿಕೊಳ್ಳುವುದು ಅಥವಾ ಕಚಗುಳಿ ಇಟ್ಟಾಗ ಒದ್ದಾಡುವುದು ತನ್ನಷ್ಟಕ್ಕೇ ನಡೆಯುತ್ತದೆಯಲ್ಲವೆ, ನಮಗೆ ಆ ಸಂವೇದನೆ ಬೇಡವಾದ್ದರಿಂದ ಅಲ್ಲ ಎಂಬುದನ್ನು ನಂಬುವುದು ಕಷ್ಟ; ಆದರೆ ಸತ್ಯವೇನೋ ಹಾಗೇ ಇದೆ.

## ಕ್ಷೇಪಕ್ರಿಯೆಯಲ್ಲಿ ಮಿದುಳಿನ ಪಾತ್ರ

ಮಿದುಳನ್ನು ಕಿತ್ತೊಗೆದಾಗಲೂ, ಅದರ ಸಂಬಂಧ ಇತರ ಭಾಗಗಳೊಡನೆ ಇಲ್ಲದಂತೆ ಮಾಡಿದಾಗಲೂ ಕ್ಷೇಪಕ್ರಿಯೆ ನಡೆಯಬಲ್ಲುದೆಂಬುದೀಗ ತಿಳಿದುಬಂದುದರಿಂದ ಕ್ಷೇಪಕ್ರಿಯೆ ಮಿದುಳಿನಿಂದ ಸ್ವತಂತ್ರ ಎನ್ನಬಹುದು. ಹೀಗಿದ್ದರೂ ಮಿದುಳೂ ಬೆನ್ನು ಹುರಿಯೂ ಸಮಸ್ಥಿತಿಯ ಸಂಬಂಧದಲ್ಲಿರುವಾಗ ಮಿದುಳು ಕ್ಷೇಪಕ್ರಿಯೆಯ ಮೇಲೆ ಕೆಲಮಟ್ಟಿಗೆ

6.




Central Nervous System of Lower Animals

7.




EVOLUTION OF THE BRAIN

8.




MIDDLE SURFACE OF THE RIGHT HEMISPERS

ಪರೋಕ್ಷವಾಗಿ ಪ್ರಭಾವ ಬೀರುತ್ತದೆ. ಮಿದುಳಿನ ಸಂಪರ್ಕವಿದ್ದಾಗ ಕ್ಷೇಪಕ್ರಿಯೆಯನ್ನು ಜೋರಾಗಿ ಇಲ್ಲವೆ ಮೆಲ್ಲಗೆ ಮಾಡಬಹುದು. ಅದರ ಈ ತೀವ್ರತೆಯು ಬಹುಮಟ್ಟಿಗೆ ಪ್ರೇರಣೆಯನ್ನೇ ಅವಲಂಬಿಸಿರುವುದಾದರೂ ಮಿದುಳಿನ ಚಾಲನೆಗೊಳಗಾದ ಬೆನ್ನುಹುರಿಯ ಸಾಮಾನ್ಯ ಅವಸ್ಥೆಯನ್ನೂ ಅಂಶತಃ ಅವಲಂಬಿಸುತ್ತದೆ. ಸಮಸ್ಥಿತಿಯಲ್ಲಿದ್ದಾಗ ನಾವು ಲಕ್ಷ್ಯಕ್ಕೆ ತಾರದಿರಬಹುದಾದ ಸ್ಪರ್ಶಕ್ಕೆ, ಗಾಬರಿಯ ಸ್ಥಿತಿಯಲ್ಲಿರುವಾಗ ತೀವ್ರಾನುಕ್ರಿಯೆಯನ್ನು ತೋರಿಸಬಹುದು. ಒಂದೇ ಬಗೆಯ ಪ್ರೇರಣೆಯಾದರೂ ಯಾವಾಗಲೂ ಒಂದೇ ಬಗೆಯ ಅನುಕ್ರಿಯೆಯನ್ನು ಉಂಟುಮಾಡಲಾರದು ಎಂಬ ಮಾತನ್ನಿಲ್ಲಿ ನೆನೆದುಕೊಳ್ಳಬೇಕು. ಸಮಸ್ಥಿತಿಯಲ್ಲಿರುವ ಮಿದುಳುಳ್ಳ ಎಲ್ಲ ಪ್ರಾಣಿಗಳಲ್ಲೂ ಇದು ಸರಳವಾದ ಕ್ಷೇಪಕ್ರಿಯೆಯ ಮಟ್ಟದಲ್ಲೂ ನಡೆಯುತ್ತದೆ.

ಇದೂ ಅಲ್ಲದೆ, ನಾವು ಕೆಲವೊಮ್ಮೆ ಸ್ವೇಚ್ಛಾಕೃತವಾಗಿ ಶೀನುವಾಗ ಇಲ್ಲವೆ ವೈದ್ಯನೊಬ್ಬನು ನಮಗೆ ಸೂಜಿ ಚುಚ್ಚಿದಾಗ ಪ್ರಯತ್ನಪಟ್ಟು ಸುಮ್ಮನೆ ಕುಳಿತುಕೊಂಡಿರುವಾಗ ಪರಿಮಿತ ಪರಿಮಾಣದಲ್ಲಿ ಮಿದುಳಿನ ನಿಯಂತ್ರಣವಿರುವುದು ಸ್ಪಷ್ಟ. ಕೆಲವು ಪ್ರಕರಣಗಳಲ್ಲಿ ಕ್ರಿಯಾವಾಹಿಗಳಿಂದ ಮೂಲ ಮಾಂಸಖಂಡಗಳಿಗೆ ಸಂದೇಶ ಬಂದಾಗಲೂ ತದ್ವಿರುದ್ಧವಾಗಿ ಇತರ ಮಾಂಸಖಂಡಗಳನ್ನು ಕಾರ್ಯದಲ್ಲಿ ತೊಡಗಿಸುವಷ್ಟರಿಂದಲೇ ಇಂಥ ನಿಯಂತ್ರಣ ಸಾಧ್ಯವಾಗಬಲ್ಲುದು. ಆದರೆ ಬಹುಶಃ ಇದು ಇಡೀ ವಿವರಣೆಯಾಗಲಾರದು. ನರಪ್ರವಾಹದ ಗತಿಯನ್ನು ವಿಸಂಧಿಯ ಪ್ರತಿಭಟನೆಯ ಮೂಲಕ ಮಿದುಳು ನೇರವಾಗಿ ಅಲ್ಲೇ ಇಂಗಿಸಿ ಆಗಬೇಕಾಗಿದ್ದ ಕ್ಷೇಪಕ್ರಿಯೆಯನ್ನು ತಡೆಹಿಡಿಯಬಹುದು. ಈ ಬಗೆಯಿಂದ ಮಿದುಳು ನಿಯಂತ್ರಿಸುವುದರ ತಂತ್ರವಿನ್ನೂ ಪೂರ್ಣವಾಗಿ ತಿಳಿದುಬಂದಿಲ್ಲ.

ಇಲ್ಲಿ ಮೇಲಿನ ಕೇಂದ್ರಗಳ ನೆರವಿಲ್ಲದೆ ಅನಿಚ್ಛಾಕೃತವಾಗಿ, ಹುಟ್ಟು ಗುಣವೆನಿಸಿ, ನಡೆಯುವ ಕ್ರಿಯೆಯನ್ನು ಕ್ಷೇಪವೆಂದು ಹೇಳಲಾಗಿದೆ. ಇದೇ ಉಕ್ತ ಪದದ ನಿರ್ದಿಷ್ಟವಾದ ಅರ್ಥ. ವರ್ತನಾವಾದಿಗಳು ಕ್ಷೇಪವೆಂಬ ಪದವನ್ನು ವಿಶಾಲವಾದ ಅರ್ಥದಲ್ಲಿ ಬಳಸುತ್ತಾರೆ. ಅವರ ಪ್ರಕಾರ ಎಲ್ಲ ಮಾನವ್ಯ ವರ್ತನೆಯನ್ನೂ ಕ್ಷೇಪಸಂಯೋಗಗಳ ರೂಪಕ್ಕೆ ಇಳಿಸಿಬಿಡಬಹುದು.

## ಸ್ವಾಯತ್ತ ನರಮಂಡಲ

೯ನೆಯ ನಕ್ಷೆಯಲ್ಲಿ ಸ್ವಾಯತ್ತ ನರಮಂಡಲವನ್ನು ಕಾಣಬಹುದು. ಅದು ಜೀವಶಾಸ್ತ್ರೀಯವಾಗಿ ಹೆಚ್ಚು ಪ್ರಾಚೀನ ಮತ್ತು ಕೇಂದ್ರ ನರಮಂಡಲದಿಂದ ಅಂಶತಃ ಸ್ವತಂತ್ರ. ಅದರ ರವೆಗಳು (Cell-bodies) ನರಜಾಲದಲ್ಲಿ ಸಂಗ್ರಹಿಸಲ್ಪಟ್ಟಿವೆ. ಈ ನರಜಾಲಗಳಲ್ಲಿ ಹಲವು, ಬುಡದಲ್ಲಿ ಕೂಡಿಕೊಂಡ ಎರಡು ಸರಪಳಿಗಳಾಗಿ ಬೆನ್ನು ಹುರಿಯ ಎರಡೂ ಬದಿಗಳಲ್ಲಿ ಹರಿದಿವೆ. ಸ್ವಾಯತ್ತ ನರಮಂಡಲವು ಅಕಶೇರುಕಗಳ ಪ್ರಾಚೀನ ನರಮಂಡಲಗಳನ್ನು ಬಹುಮಟ್ಟಿಗೆ ಹೋಲುತ್ತದೆ. ಅದರ ನರಜಾಲಗಳ ಸರಪಳಿಯಿಂದ ಬೆನ್ನು ಹುರಿಯ ಮಧ್ಯಭಾಗವು ನೇರವಾಗಿ ಸಂಬಂಧಿಸಲ್ಪಟ್ಟಿದೆ.

ಸ್ವಾಯತ್ತ ನರಮಂಡಲದ ನರಜಾಲಗಳೆಲ್ಲವೂ ಪರೋಕ್ಷಾಪರೋಕ್ಷ ರೀತಿಯಿಂದ ಬೆನ್ನು ಹುರಿಯ ಮೂಲಕ ಹಿಮ್ಮಿದುಳು ಹಾಗೂ ಭಾವನಾಪೀಠಗಳೊಡನೆ ಸಂಬಂಧ ಪಡೆದಿವೆ. ಶರೀರದ ಅನಿಚ್ಛಾಕೃತವಾದ ಆಂತರಿಕ ಪ್ರಕ್ರಿಯೆಗಳ ಮೇಲೆ ಬೀಳುವ ಹಳಮಿದುಳಿನ ಈ ಭಾಗಗಳ ಪ್ರಭಾವದಲ್ಲಿ ಮಧ್ಯಸ್ತಿಕೆ ಮಾಡುವುದೇ ಅವುಗಳ ಕೃತ್ಯ; ಸ್ವಾಯತ್ತಮಂಡಲದ ನರಗಳು ಹೃದಯದೊಡನೆಯೂ ಶ್ವಾಸಕೋಶ, ಜಠರ, ಕರುಳು ಮತ್ತು ದೇಹದೊಳಗಿನ ಇತರ ಅವಯವಗಳೊಡನೆಯೂ ಸಂಪರ್ಕಹೊಂದಿವೆ; ಮತ್ತು ನಾಳಗ್ರಂಥಿಗಳಾದ ಅಶ್ರುಗ್ರಂಥಿ, ಲಾಲಾಗ್ರಂಥಿ, ಸ್ವೇದಗ್ರಂಥಿ ಹಾಗೂ ಕೆಲ ನಿರ್ನಾಳ ಗ್ರಂಥಿಗಳೊಡನೆ–ವಿಶೇಷತಃ ತೇಜೋಗ್ರಂಥಿಗಳೊಡನೆ (Adrenais) ಅವು ಕೂಡಿಕೊಂಡಿವೆ. ಭಾವನೆಗಳಿಂದಲೂ, ಕಷ್ಟಕರವಾದ ಪ್ರಯತ್ನದಿಂದಲೂ ಹವೆಯ ಬದಲಾವಣೆ ಮುಂತಾದ ಆವರಣ ಪರಿಸ್ಥಿತಿಗಳಿಂದಲೂ ಉಂಟಾದ ಈ ಅವಯವಗಳ ಕಾರ್ಯಪರಿವರ್ತನೆಗಳೆಲ್ಲವೂ ಸ್ವಾಯತ್ತ ನರಮಂಡಲದ ಮೂಲಕ ಕಳಿಸಲಾಗುವ ಚೋದನೆಗಳನ್ನೇ ಅವಲಂಬಿಸುತ್ತವೆ.

ಕೃತ್ಯದ ದೃಷ್ಟಿಯಿಂದ ಅನುಕಂಪವೆಂದೂ ಉಪಾನುಕಂಪಕವೆಂದೂ ಸ್ವಾಯತ್ತನರಮಂಡಲವನ್ನು ಇಬ್ಬಗೆಯಾಗಿ ವಿಂಗಡಿಸಲಾಗಿದೆ. ಮೊದಲನೆಯದು ಮೇಲುಕೋಷ್ಠದ ಪ್ರದೇಶವನ್ನು ವ್ಯಾಪಿಸಿದರೆ, ಎರಡನೆಯದು ತಲೆಬುರುಡೆಯ ಪ್ರದೇಶದಲ್ಲೂ ಪೃಷ್ಠತ್ರಿಕಾಸ್ಥಿಯ ಪ್ರದೇಶದಲ್ಲೂ ವ್ಯಾಪಿಸಿದೆ. ಅವುಗಳ ಪರಸ್ಪರ ಸಂಬಂಧವು ತುಂಬ ಜಟಿಲ. ಅದರ ಸ್ಥೂಲವಿನ್ಯಾಸವನ್ನು ೯ನೆಯ ನಕ್ಷೆಯಲ್ಲಿ ಕಾಣಬಹುದು. ಉಕ್ತ ಎರಡು ಮಂಡಲಭಾಗಗಳೂ ಹಿಮ್ಮಿದುಳು ಹಾಗೂ ಭಾವನಾಪೀಠಗಳ ಯಜಮಾನಿಕೆಗೆ ಒಳಪಟ್ಟಿವೆ.

ಅನುಕಂಪಕ ಹಾಗೂ ಉಪಾನುಕಂಪಕ ವಿಭಾಗಗಳ ಕೃತ್ಯಗಳು ವಿರುದ್ಧ ರೀತಿಯವು ಇಲ್ಲವೆ ಪರಸ್ಪರ ಪೂರಕಗಳು. ಅತ್ಯಯ ಪ್ರಸಂಗದಲ್ಲಿ ಅಥವಾ ಭಾವೋದ್ರೇಕ ಉಂಟಾದಾಗ




DOUBLE CONNECTION MADE THROUGH cCENTRAL NEURON

ಆಗಿಂದಾಗ ಶಕ್ತಿ ಪ್ರಯೋಗ ಮಾಡುವ ಕೃತ್ಯವು ಮೊದಲನೆಯ ಮಂಡಲವಿಭಾಗಕ್ಕೆ ಸೇರಿದ್ದಾದರೆ, ಶರೀರದ ಶಕ್ತಿಯನ್ನು ಉಳಿಸಿಕೊಂಬ, ಸಂಗ್ರಹಿಸಿ ಇಡುವ ಮತ್ತು ತುಂಬಿಕೊಡುವ ಕೃತ್ಯವು ಎರಡನೆಯ ವಿಭಾಗಕ್ಕೆ ಸೇರಿದ್ದು; ಒಂದನೆಯದು ಜೀವರಸದ ವ್ಯಯಕ್ಕೆ ಕಾರಣವಾದರೆ, ಎರಡನೆಯದು ಅದರ ಸಂವರ್ಧನಕ್ಕೆ ಕಾರಣವಾಗಿದೆ. ಹೀಗೆ ಅನುಕಂಪಕ ಮಂಡಲವು ಎದೆಬಡಿತವನ್ನೂ ರಕ್ತದ ಒತ್ತಡವನ್ನೂ ಹೆಚ್ಚಿಸಿ ಜೀರ್ಣಶಕ್ತಿಯನ್ನು ಕುಗ್ಗಿಸುತ್ತದೆ; ಮತ್ತು ಉಪಾನುಕಂಪಕ ಮಂಡಲವು ತದ್ವಿರುದ್ಧ ಪರಿಣಾಮವನ್ನು ಉಂಟುಮಾಡುತ್ತದೆ.

## ಹೊಸಮಿದುಳು

ಒಂದು ಪ್ರಾಣಿಯ ತಲೆಯಲ್ಲಿರುವ ಹೊಸ ಮಿದುಳಿನ ಸಂಪರ್ಕವು ಹಳೆಮಿದುಳಿನೊಡನೆ ಉಳಿಯದಂತೆ ಅದನ್ನೂ ಇದನ್ನೂ ಕೂಡಿಸುವ ನರಗಳನ್ನು ಪರಿಣಾಮಕರವಾಗಿ ತುಂಡರಿಸಿದರೆ, ಆ ಪ್ರಾಣಿಯ ಬೆಳವಣಿಗೆಯ ಮಟ್ಟವು ಬಹಳಮಟ್ಟಿಗೆ ಬದಲಾಗುತ್ತದೆ. ಮುಮ್ಮಿದುಳು ಅಥವಾ ಹೊಸಮಿದುಳನ್ನು ಹಳಮಿದುಳು ಮತ್ತು ಬೆನ್ನುಹುರಿಗಳ ಸಂಬಂಧವನ್ನು ಕಳೆದುಕೊಂಬಂತೆ ಮಾಡಿದಾಗ ಮಂಗವು ಸರಳವಾದ ಕ್ಷೇಪಕ್ರಿಯೆಗಳನ್ನು ಎಸಗಬಲ್ಲುದು. ಅದು ನಡಿಯಲಾರದು, ಅದಕ್ಕೆ ಯಾವ ಸಂವೇದನೆಯೂ ಆಗಲಾರದು; ಅದನ್ನು ಸಾಯದಂತೆ ಉಳಿಸಲು ಮನುಷ್ಯನು ಪದೇ ಪದೇ ಅದರ ಚಾಕರಿಯನ್ನು ಮಾಡಬೇಕಾಗುತ್ತದೆ. ಆದರೆ ಕೆಳವರ್ಗದ ಪ್ರಾಣಿಗಳಲ್ಲಿ ಹಳಮಿದುಳೇ ಆಗಲೂ ಸಂವೇದನೆ ಹಾಗೂ ಚಲನೆಗಳನ್ನು ನಿಯಂತ್ರಿಸುತ್ತದೆ. ಮುಮ್ಮಿದುಳನ್ನು ನಿಷ್ಪ್ರಭಾವಗೊಳಿಸಲಾದ ಕಪ್ಪೆಯು ಮೊದಲ ನೋಟಕ್ಕೆ ಸಮಸ್ಥಿತಿಯಲ್ಲಿರುವಂತೆಯೇ ತೋರುತ್ತದೆ. ಅದು ನಡೆವ, ಹಾರುವ, ಈಜುವ ಮತ್ತು ಋತುಮಾನಕ್ಕೆ ಸರಿಯಾಗಿ ಪ್ರಜೋತ್ಪತ್ತಿ ಮಾಡುವ ಕಾರ್ಯಗಳನ್ನು ಇತರ ಸಾಮಾನ್ಯ ಕಪ್ಪೆಗಳಂತೆಯೇ ಮಾಡುತ್ತಿರುತ್ತದೆ.

ಆದರೆ ಸೂಕ್ಷ್ಮವಾಗಿ ನೋಡಿದರೆ ಅದು ಹೊರಪ್ರೇರಣೆಗಳಿಗಷ್ಟೇ ಅನುಕ್ರಿಯೆ ಎಸಗಬಲ್ಲುದಲ್ಲದೆ ಸ್ವೇಚ್ಛೆಯಂತೆ ಯಾವ ಕೆಲಸವನ್ನೂ ಮಾಡಲಾರದು ಎಂಬುದು ಗೊತ್ತಾಗುತ್ತದೆ. ಆಹಾರವನ್ನದರೆದುರಿಟ್ಟರೆ ಅದು ತಿನ್ನುತ್ತದೆ; ಆದರೆ ಅದನ್ನು ಎಷ್ಟು ಹೊತ್ತಿನವರೆಗೆ ಉಪವಾಸ ಕೆಡಹಿದರೂ ಅದು ಆಹಾರವನ್ನು ಅರಸಲು ತಾನಾಗಿ ಹೋಗದು. ಪ್ರಯೋಜಕನು ತನ್ನನ್ನು ಹೇಗೆ ನಡೆಸಿಕೊಂಡರೂ ಅದು ತಪ್ಪಿಸಿಕೊಂಬ ಇಲ್ಲವೆ ಪ್ರತಿಭಟಿಸುವ ಪ್ರಯತ್ನವನ್ನು ಮಾಡದು. ಅದು ಬರಿ ಒಂದು ಅವಶ್ಯ ಯಂತ್ರದಂತೆ ಸ್ವೇಚ್ಛಾಕೃತವಾದ ಅಥವಾ ಅಪ್ರತೀಕ್ಷಿತವಾದ ಯಾವ ಚಲನವನ್ನೂ ಮಾಡದೆ ಸುಮ್ಮನೆ ಇದ್ದು ಬಿಡುತ್ತದೆ.

ಪಾರಿವಾಳಗಳೇ ಮೊದಲಾದ ಇತರ ಜೀವಿಗಳ ಮೇಲೂ ಇಂಥ ಪ್ರಯೋಗ ಮಾಡಿ ಇದೇ ಫಲಿತಾಂಶವನ್ನು ಕಾಣಲಾಗಿದೆ. ಅಂದರೆ ಮೇಲಿನ ಹಾಗೂ ಕೆಳಗಿನ ಕೇಂದ್ರಗಳ ಕೃತ್ಯಗಳಲ್ಲಿಯ ವ್ಯತ್ಯಾಸವನ್ನು ಚೆನ್ನಾಗಿ ಗೊತ್ತುಮಾಡಲಾಗಿದೆ. ಕೆಳಗಿನ ಕೇಂದ್ರಗಳು ವರ್ತಮಾನ ಪ್ರೇರಣೆಗಳಿಗಷ್ಟೇ ಅನುಕ್ರಿಯೆಯನ್ನು ಮಾಡಿಸುತ್ತವೆ; ಮೇಲಿನ ಕೇಂದ್ರಗಳು ಸ್ಮೃತಿ ಹಾಗೂ ಪ್ರತೀಕ್ಷೆಗಳಿಂದ ಕಾರ್ಯವನ್ನು ಮಾಡಿಸಬಲ್ಲವು. ವಿಚಾರ ಮಾಡುವಂಥ, ತರ್ಕಿಸುವಂಥ ಮೇಲುಮಟ್ಟದ ಕಾರ್ಯವನ್ನು ಮುಮ್ಮಿದುಳಷ್ಟೇ ಮಾಡಬಲ್ಲುದು.

## ಮುಮ್ಮಿದುಳಿನ ರಚನೆ

ಹತ್ತನೆಯ ನಕ್ಷೆ ಮುಮ್ಮಿದುಳಿನ ಉದ್ದಕೊಯ್ತವನ್ನು ತೋರಿಸುತ್ತದೆ. ಅದನ್ನು ಬೂದಿ ಬಣ್ಣದ ಹಾಸೊಂದು ಸಂಪೂರ್ಣವಾಗಿ ಸುತ್ತಿಕೊಂಡಿದೆ. ಈ ಹೊರ ಹಾಸೇ ಮಿದುಳುದೊಗಟೆ. ಬೆನ್ನುಹುರಿಯ ಒಳಗಿನ ಬೂದಿ ಪದಾರ್ಥದಂತೆಯೇ ಇದಾದರೂ ಅಸಂಖ್ಯ ನರಗಳಿಂದ ಕೂಡಿದೆ; ಈ ನರಗಳ ಹುರಿಗಳು ಒಳಗಿನ ಬಿಳಿ ಪದಾರ್ಥದೊಳಗೆ ನುಗ್ಗಿ ಸಾಗಿವೆ. ಮಿದುಳುದೊಗಟೆಯು ಅತ್ಯಂತ ಚೆನ್ನಾಗಿ ಬೆಳೆದ ಹಾಗೂ ಅತಿ ಮುಖ್ಯವಾದ ಮಿದುಳುಭಾಗ. ಇಡಿ ಮುಮ್ಮಿದುಳು ಎರಡು ಸಮವಾದ ಗೋಲಾರ್ಧಗಳಾಗಿ ವಿಭಾಗವಾಗಿದೆ. ಅವುಗಳಲ್ಲಿ ಎಡಗೋಲಾರ್ಧವು ಶರೀರದ ಬಲಭಾಗವನ್ನೂ ಬಲ ಗೋಲಾರ್ಧವು ಅದರ ಎಡ ಭಾಗವನ್ನೂ ನಿಯಂತ್ರಿಸುತ್ತದೆ. ಗೋಲಾರ್ಧಗಳ ನಡುವಿನ ಪೊದರಿನಲ್ಲಿ (Corpus Callosum) ನರದ ಗಂಟೊಂದಿದೆ. ಸ್ವಲ್ಪ ಹೆಚ್ಚು ಕಡಿಮೆಯಾಗಿ ಮುಮ್ಮಿದುಳು ಮತ್ತೊಂದು ಬಗೆಯಿಂದ ಮುಂದಲೆ, ನಡುದಲೆ, ಹಿಂದಲೆ ಮತ್ತು ಬದಿದಲೆ ಎಂಬುದಾಗಿ ನಾಲ್ಕು ಭಾಗಗಳಾಗಿ ವಿಂಗಡವಾಗಿದೆ. ಹನ್ನೊಂದನೆಯ ನಕ್ಷೆಯಲ್ಲಿ ಈ ಲಂಬಕಗಳ ಸ್ಥಾನಗಳನ್ನು ನೋಡಬಹುದು. ಮಿದುಳು ಹಾಗೂ ಬೆನ್ನುಹುರಿಗಳ ಮೈ ಮೇಲೆಲ್ಲ ಮುಮ್ಮಿದುಳು–ಬೆನ್ನುಹುರಿ ರಸ ಅಂಟಿಕೊಂಡಿದೆ. ಈ ರಸವು ಮಿದುಳಿನ ಒಳಪೊಟ್ಟರೆಗಳಲ್ಲಿಯೂ (Ventricles) ತುಂಬಿಕೊಂಡಿರುತ್ತದೆ.

ಹಿಂದೆ ಸ್ಮೃತಿ, ಸಂಕಲ್ಪ, ಕಲ್ಪನಾಶಕ್ತಿ ಮುಂತಾದ ಅಂತಃಶಕ್ತಿಗಳು ಮಿದುಳಿನ ಬೇರೆ ಬೇರೆ ಭಾಗಗಳಲ್ಲಿವೆ ಎಂದು ಭಾವಿಸಲಾಗಿತ್ತು. ಈ ನಂಬಿಗೆಗೆ ಬುಡವಿಲ್ಲ. ಆದರೆ ಕೃತ್ಯದ ಸ್ಥಲನಿಷ್ಕರ್ಷವು ಕೆಲಮಟ್ಟಿಗೆ ಬೇರೆ ಬಗೆಯಿಂದ ಅಲ್ಲಿದೆ ಎಂಬುದೇನೋ ನಿಜ. ಬೇರೆ

ಬೇರೆ ಇಂದ್ರಿಯಗಳು ಮಿದುಳಿನ ಬೇರೆ ಬೇರೆ ಭಾಗಗಳಿಗೆ ತಮ್ಮ ಸಂದೇಶಗಳನ್ನು ಕಳಿಸುತ್ತವೆ: ಬೇರೆ ಬೇರೆ ಮಿದುಳು ಭಾಗಗಳು ಬೇರೆ ಬೇರೆ ಮಾಂಸಖಂಡಗಳನ್ನು ಅಂಕೆಯಲ್ಲಿಟ್ಟುಕೊಂಡಿರುತ್ತವೆ.

ಮುಮ್ಮಿದುಳಿನ ಮೊದಲನೆಯ ವಿಭಾಗವಾದ ಮುಂದಲೆಯಲ್ಲಿ ಕ್ರಿಯಾವಾಹಿ ನರಗಳ ಪ್ರದೇಶವಿದೆ. ಈ ಪ್ರದೇಶದಿಂದಲೇ ದೇಹದ ಎಲ್ಲ ಚಲನವಲನಗಳಿಗೆ ಬೇಕಾದ ಚೋದನೆಗಳು ಹೊರಡುತ್ತವೆ. ಈ ಪ್ರದೇಶದ ಎದುರು ಅದರ ಮೇಲ್ಮಟ್ಟದ ಕ್ರಿಯಾಪ್ರದೇಶವಿದೆ. ಅದು ಹೆಚ್ಚಿನ ನರ–ಸಹಕಾರ ಬೇಕಾದ ಕುಶಲ ಚಲನವಲನಗಳಿಗೆ ಚೋದಕ. ಅದರ ಹಿಂದುಗಡೆ ನಡುದಲೆ ಇದೆ. ಅದರಲ್ಲಿ ಸ್ಪರ್ಶಸಂವೇದನಾ ಪ್ರದೇಶವಿದೆ. ದೇಹದ ವಿವಿಧ ಭಾಗಗಳಿಂದ ಬರುವ ಮಾಂಸಲ ಸಂವೇದನೆ (Muscle Sensation), ಚರ್ಮ ಸಂವೇದನೆಗಳ (Skin Sensation) ಸಂದೇಶಗಳು ಇಲ್ಲಿ ಬಂದು ಸೇರುತ್ತವೆ. ಮಿದುಳಿನ ಹಿಂಭಾಗದಲ್ಲಿ ಇರುವ ಹಿಂದಲೆ ಚಾಕ್ಷುಷಪ್ರದೇಶ. ಇದಕ್ಕೆ ಬೆಳಕಿನ ಎಲ್ಲ ಸಂವೇದನೆಗಳೂ ಬಂದು ಸೇರುತ್ತವೆ. ನಡುಮಿದುಳಿನ ಅಡಿಯಲ್ಲಿ ಬದಿದಲೆ ಇದೆ. ಇದು ಶ್ರಾವಣಪ್ರದೇಶ. ಇದು ಎಲ್ಲ ತರದ ಶಬ್ದಸಂವೇದನೆಗಳನ್ನೂ ಸ್ವೀಕರಿಸುತ್ತದೆ. ಮುಮ್ಮಿದುಳಿನ ಮಧ್ಯಸ್ಥಳದ ಬಲಗಡೆ ರಸನೇಂದ್ರಿಯ ಹಾಗೂ ಘ್ರಾಣೇಂದ್ರಿಯಗಳ ಸಂವೇದನೆಯ ಕೇಂದ್ರಪ್ರದೇಶಗಳಿವೆ.

## ಸಂಪರ್ಕಪ್ರದೇಶ

ನಮ್ಮ ಮಿದುಳಿನಲ್ಲಿರುವ ಕರ್ಮೇಂದ್ರಿಯ ಹಾಗೂ ಜ್ಞಾನೇಂದ್ರಿಯಗಳ ಕೇಂದ್ರಪ್ರದೇಶಗಳು ಪ್ರಾಣಿಗಳ ಉಕ್ತ ಅವಯವಗಳನ್ನು ಹೋಲುತ್ತವೆ–ಗಾತ್ರದಲ್ಲಿ ಮಾತ್ರ ಪರಸ್ಪರ ವ್ಯತ್ಯಾಸವಿದೆ. ಮನುಷ್ಯನ ಮಿದುಳಿನಲ್ಲಿ ಘ್ರಾಣಪ್ರದೇಶವು ಅತಿಚಿಕ್ಕದಾಗಿದ್ದರೆ ನಾಯಿಯ ಮಿದುಳಿನಲ್ಲಿ ಅದು ಅತಿ ದೊಡ್ಡದಾಗಿದೆ. ಆದರೆ ಇವನ್ನು ಬಿಟ್ಟು ನಾವು ಮುಂದೆ ಹೋದಾಗ ಮನುಷ್ಯನ ಹಾಗೂ ಪ್ರಾಣಿಯ ಮಿದುಳುಗಳಲ್ಲಿಯ ವ್ಯತ್ಯಾಸವನ್ನು ಸ್ಪಷ್ಟವಾಗಿ ಕಾಣುತ್ತೇವೆ. ಒಂದು ಮಂಗ ಅಥವಾ ನಾಯಿಯ ಮಿದುಳಿನಲ್ಲಿ ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳ ಕೇಂದ್ರಪ್ರದೇಶಗಳನ್ನು ಅಳೆದ ನಂತರ ಮತ್ತೆ ಉಳಿಯುವ ಜಾಗ ಅತ್ಯಲ್ಪ. ಮನುಷ್ಯನ ಮಿದುಳಿನಲ್ಲಾದರೋ ಹಾಗೆ ಅಳೆದ ಬಳಿಕ ಬೇಕಾದಷ್ಟು ಜಾಗ ಉಳಿಯುತ್ತದೆ. ಅದರಲ್ಲಿ ಬೇರೆ ಬೇರೆ ಕರ್ಮ ಹಾಗೂ ಜ್ಞಾನೇಂದ್ರಿಯಗಳ ಸ್ಥಳಗಳನ್ನು ವಿಂಗಡಿಸುವ ವಿಸ್ತಾರವಾದ ಸಂಪರ್ಕಪ್ರದೇಶಗಳಿವೆ. ಈ ಪ್ರದೇಶಗಳ ಪೂರ್ಣಬೆಳವಣಿಗೆಯೇ ಮನುಷ್ಯನ ಮಿದುಳನ್ನು ಪ್ರಾಣಿಗಳ ಮಿದುಳಿಂದ ಬೇರೆ ಎಂದು ತೋರಿಸುತ್ತದೆ. ಜ್ಞಾನೇಂದ್ರಿಯ ಸ್ಥಳಗಳೇ ಇಂದ್ರಿಯ ಪ್ರತ್ಯಕ್ಷದ ಸ್ಥಾನಗಳು. ಆದರೆ ಚಾಕ್ಷುಷ ಶ್ರಾವಣಾದಿ ಸಂವೇದನೆಗಳು ಪ್ರತ್ಯೇಕವೂ ವಿಸಂಗತವೂ ಆಗಿ ಮೇಲಿನ ಸ್ಥಳಗಳಿಗೆ ತಲುಪದಂತೆ ನೋಡಿಕೊಳ್ಳುವ ಹೊಣೆ ಸಂಪರ್ಕ ಪ್ರದೇಶಗಳಿಗೆ ಸೇರಿದ್ದು. ಒಂದೊಂದು ಜಾತಿಯ ಸಂವೇದನೆಯಲ್ಲೂ ದೇಶ ಕಾಲ ಸಂದರ್ಭಗಳ ದೃಷ್ಟಿಯಿಂದ ಸಾಂಗತ್ಯವಿರಬೇಕು. ಅಲ್ಲದೆ ಒಂದೇ ವಸ್ತುವಿಗೆ ಸಂಬಂಧಿಸಿದಂತೆ ಬೇರೆ ಬೇರೆ ಕಾಲ ಹಾಗೂ ಸ್ಥಳಗಳಲ್ಲಿ ಬೇರೆ ಬೇರೆ ಸಂವೇದನೆಗಳನ್ನು ಪಡೆಯಬಹುದು. ಇವನ್ನು ಆ ವಸ್ತುವಿಗೇ ಅನ್ವಯಿಸಲು ಸಂಪರ್ಕಪ್ರದೇಶಗಳ ಸಹಾಯ

ಅಗತ್ಯ. ಒಂದು ಸಂವೇದನೆಯನ್ನು ಇನ್ನೊಂದರೊಡನೆ ಹೊಂದಿಸುವುದು, ಹಾಗೆ ಅವೆರಡನ್ನೂ ಒಂದು ವಸ್ತುವಿಗೆ ಅನ್ವಯಿಸುವುದು, ಅನ್ವಯಿಸಿ ಅದಕ್ಕೆ ಅರ್ಥ ಮಾಡುವುದು, ಅರ್ಥ ಮಾಡಿದ್ದನ್ನು ನೆನಪಿಟ್ಟುಕೊಳ್ಳುವುದು ಮತ್ತು ಆ ಮೂಲಕ ಅದನ್ನು ತಿಳಿದುಕೊಳ್ಳುವುದು–ಎಂಬೀ ಎಲ್ಲ ಪ್ರಕ್ರಿಯೆಗಳೂ ಸಂಪರ್ಕಪ್ರದೇಶಗಳನ್ನು ಅವಲಂಬಿಸಿವೆ.

ಈಗ ಒಂದು ದೃಷ್ಟಾಂತವನ್ನು ಎತ್ತಿಕೊಳ್ಳೋಣ: ನಾವು ಒಳಗೆ ಕುಳಿತಾಗ ಹೊರಗಿನಿಂದ ಯಾರದೋ ಸ್ವರ ಕೇಳಿಸುತ್ತದೆ. ಅದನ್ನು ಒಳಗೆ ಕುಳಿತೇ ರಾಮನ ಸ್ವರವೆಂದು ಗುರುತಿಸುತ್ತೇವೆ. ಶರೀರಶಾಸ್ತ್ರದ ಭಾಷೆಯಲ್ಲಿ ಹೇಳಬೇಕಾದರೆ, ರಾಮನ ಸ್ವರದ ಅಲೆಗಳು ನಮ್ಮ ಕಿವಿಯನ್ನು ಹೊಕ್ಕು ನಮ್ಮ ಮಿದುಳಿನ ಶ್ರಾವಣಕೇಂದ್ರದ ಒಂದು ಪ್ರೇರಣೆಯನ್ನು ಕೆಲವು ನರಗಳಿಗೆ ಮುಟ್ಟುವಂತೆ ಉಂಟುಮಾಡುತ್ತವೆ. ಶ್ರಾವಣಪ್ರದೇಶದಿಂದ ಹೊರಡುವ ನರಗಳು ಸಂಪರ್ಕಪ್ರದೇಶಗಳಲ್ಲಿಯ ನರಗಳನ್ನು ಕಾರ್ಯದಲ್ಲಿ ತೊಡಗಿಸಿ ರಾಮನ ಮುಖ, ಅವನ ಹೆಸರಿನ ಶಬ್ದ ಮುಂತಾದವುಗಳ ಪ್ರತಿಮೆ ಅಥವಾ ಕಲ್ಪನೆಗಳನ್ನು ಉಂಟುಮಾಡುತ್ತವೆ. ಸಂಪರ್ಕದ ದೆಸೆಯಿಂದ ಉಂಟಾಗುವ ಪ್ರಾಥಮಿಕ ಸಂವೇದನೆ, ಕಲ್ಪನೆ, ಪ್ರತಿಮೆ ಮತ್ತು ಸ್ಮೃತಿಗಳ ಸಮೂಹವೇ ರಾಮನ ಸ್ವರವನ್ನು ಗುರುತಿಸುವುದು ಎಂಬ ಕಾರ್ಯ.

ಹೀಗೆ ಮಿದುಳಿನ ನರಗಳಲ್ಲಿ ಎರಡು ವಿಧ: ಇಂದ್ರಿಯಗಳ ಮೂಲಕ ನೇರವಾಗಿ ಹೊರಗಿನ ಯಾವುದಾದರೂ ವಸ್ತುವಿನಿಂದ ಪ್ರೇರಣೆ ಪಡೆದು ಸಂವೇದನೆಗಳನ್ನು ಉಂಟುಮಾಡುವುವು ಒಂದು ಬಗೆ; ಪರೋಕ್ಷವಾಗಿ ಇತರ ನರಗಳಿಂದ ಪ್ರೇರಣೆ ಪಡೆದು ಕಲ್ಪನೆ, ಪ್ರತಿಮೆ, ಅಥವಾ ಸ್ಮೃತಿಗಳನ್ನು ಉಂಟುಮಾಡುವ ನರಗಳು ಇನ್ನೊಂದು ಬಗೆ. ಮಿದುಳಿನ ಪ್ರತಿಯೊಂದು ಇಂದ್ರಿಯ ಪ್ರದೇಶದ ಸುತ್ತಲೂ ಆಯಾ ಇಂದ್ರಿಯಕ್ಕೆ ಸಂಬಂಧಿಸಿದ ಕಲ್ಪನೆ, ಪ್ರತಿಮೆ ಮುಂತಾದವುಗಳಿಗೆ ಸೇರಿದ ಸಂಪರ್ಕ ಪ್ರದೇಶವಿದೆ; ಅದೇ ರೀತಿಯಲ್ಲಿ ಮಿದುಳಿನ ಕರ್ಮೇಂದ್ರಿಯ ಸ್ಥಳಗಳಿಗೂ ಸಂಪರ್ಕ ಪ್ರದೇಶಗಳಿವೆ. ಇಷ್ಟೇ ಅಲ್ಲದೆ ಮೇಲ್ಮಟ್ಟದ ವಿಚಾರ ಪ್ರಕ್ರಿಯೆಗಳಿಗೆ ಸಂಬಂಧಿಸಿದ ವಿಶಾಲವಾದ ಅವಿಶಿಷ್ಟ ಸಂಪರ್ಕಪ್ರದೇಶಗಳು ಇರುತ್ತವೆ.

**ಸಂಪರ್ಕಪ್ರದೇಶಗಳಿಗೆ ಉಂಟಾಗುವ ಅಪಾಯದ ಪರಿಣಾಮಗಳು:** ಮಿದುಳಿನ ಚಾಕ್ಷುಷಪ್ರದೇಶವನ್ನು ಬಿಟ್ಟು ಕೇವಲ ಅದಕ್ಕೆ ಸಂಬಂಧಿಸಿದ ಸಂಪರ್ಕಪ್ರದೇಶಕ್ಕೆ ಅಪಾಯ ಉಂಟಾದರೆ ಅಂಥ ರೋಗಿಯ ದೃಷ್ಟಿ ಶಕ್ತಿಯು ಕೆಡುವುದಿಲ್ಲ. ಆದರೆ ಅವನು ಕಂಡ ವಸ್ತುಗಳು ಅವನಿಗೆ ಬಹಳ ಮಟ್ಟಿಗೆ ಅರ್ಥಹೀನವಾಗುತ್ತವೆ. ಅವನು ಒಂದು ಸೀಸದ ಕಡ್ಡಿಯನ್ನು ನೋಡಿದರೆ ಅದು ಅವನಿಗೆ ಕೇವಲ ಒಂದು ಉದ್ದವೂ ಸಪುರವೂ, ಒಂದು ತುದಿಯಲ್ಲಿ ಮೊನೆಯುಳ್ಳದ್ದೂ ಆದ ಪದಾರ್ಥವಾಗಿ ಕಾಣಿಸುತ್ತದೆ. ಅವನು ಅದನ್ನು ಸ್ಪಷ್ಟವಾಗಿ ನೋಡುತ್ತಾನೆ. ಆದರೆ ಅದು ಏನೆಂಬ ಕಲ್ಪನೆ ಅಥವಾ ಅದನ್ನು ತೆಗೆದುಕೊಂಡು ಏನು ಮಾಡಬೇಕು ಎಂಬುದು ಅವನಿಗರಿಯದು. ಕರ್ಮಸಂಪರ್ಕ ಪ್ರದೇಶಗಳಿಗೆ ತೀಕ್ಷ್ಣವಾದ ಅಪಾಯ ಉಂಟಾದರೆ ಮನುಷ್ಯನ ಯೋಜನೆ ಮಾಡುವ ಮತ್ತು ಹಾಗೆ ಮಾಡಿ ಸುಸಂಗತವಾದ ಕಾರ್ಯವನ್ನು ನೆರವೇರಿಸುವ ಶಕ್ತಿ ಹೊರಟುಹೋಗುತ್ತದೆ. ಒಂದು

9.




SCHEMATIC DIAGRAM OF THE AUTONOMIC NERVOUS-SYSTEM

ಬೀಡಿಯನ್ನು ಕಿಸೆಯಿಂದ ತೆಗೆದು ಹಚ್ಚಿ ಸೇದುವುದನ್ನು ಕೂಡ ಅವನು ಮಾಡಲಾರನು. ಅವನು ಅದಕ್ಕೆ ಸಂಬಂಧಿಸಿದ ವಿವಿಧ ಕಾರ್ಯಗಳನ್ನು ಮಾಡಬಲ್ಲನು; ಆದರೆ ಸಂಗತವಾಗಿ ಮಾಡಲಾರನು. ಇನ್ನೊಬ್ಬನು ಅವನ ಎದುರು ಬೀಡಿಯನ್ನು ಸೇದಲು ತೊಡಗಿದರೆ ಅದನ್ನು ಸರಿಯಾಗಿ ಅನುಕರಿಸಬಲ್ಲನು. ಆದರೆ ಅವನು ಆ ಕೆಲಸಗಳನ್ನು ಸ್ವಬುದ್ಧಿಯಿಂದಲೇ ಮಾಡಲಾರನು. ಏಕೆಂದರೆ, ಇಷ್ಟಪಟ್ಟ ಪರಿಣಾಮದೊಡನೆ ಆ ಕಾರ್ಯಕ್ಕಿರುವ ಸಂಬಂಧವನ್ನು ಅವನು ಕಂಡುಕೊಳ್ಳಲಾರನು. ಹೀಗೆ ಕರ್ಮ ಹಾಗೂ ಜ್ಞಾನೇಂದ್ರಿಯಗಳ ಪ್ರದೇಶಗಳಿಗೆ ಹೊಡೆತ ಬೀಳದೆ ಕೇವಲ ಸಂಪರ್ಕ ಪ್ರದೇಶಕ್ಕೆ ಹೊಡೆತ ಬೀಳುವುದು ಬಹಳ ಅಪೂರ್ವ.

## ನಿರ್ನಾಳ ಗ್ರಂಥಿಗಳು

### ಮೇದೋಜೀರಕ ಗ್ರಂಥಿ

ನಿರ್ನಾಳ ಗ್ರಂಥಿಗಳು ವಿವಿಧ ಗ್ರಂಥಿರಸಗಳನ್ನು ಉಂಟುಮಾಡಿ ನೆತ್ತರಿಗೆ ಅವನ್ನು ಸೇರಿಸುತ್ತವೆ. ಕೆಲವು ಅವಯವಗಳ ಚಟುವಟಿಕೆಯ ಮಟ್ಟವನ್ನು ಇಳಿಸುವ ಅಥವಾ ಏರಿಸುವ ಶಕ್ತಿ ಆ ರಸಗಳಿಗೆ ಇದೆ. ಮೇದೋಜೀರಕ ಗ್ರಂಥಿಯು ಎರಡು ಬಗೆಯ

10.




ERTICAL CROSS-SECTION THROUGH THE HUMAN BRAIN

---

11.



ರಸಗಳನ್ನು ಉತ್ಪತ್ತಿ ಮಾಡುತ್ತದೆ. ಮೊದಲನೆಯದು ಮೇದೋಜೀರಕ ರಸ. ಅದು ಅಂತಃಸ್ರಾವವಲ್ಲ. ಇದು ಗ್ರಂಥಿಯಿಂದ ನೇರವಾಗಿ ನೆತ್ತರಿಗೆ ಹೋಗದೆ ಕರುಳಿಗೆ ಹೋಗುತ್ತದೆ. ಅಲ್ಲಿ ಇದು ಆಹಾರ ಜೀರ್ಣವಾಗುವುದಕ್ಕೆ ನೆರವಾಗುತ್ತದೆ. ಅದು ತನ್ನ ಇನ್ನೊಂದು ರಸವೆನಿಸಿದ ಇನ್‌ಸುಲಿನ್ನನ್ನು ನೆತ್ತರಿಗೆ ಸೇರಿಸುತ್ತದೆ. ರಕ್ತವು ಈ ರಸವನ್ನು ಮಾಂಸಖಂಡಗಳಿಗೆ ಒಯ್ದು ಅವಕ್ಕೆ ಸಕ್ಕರೆಯನ್ನು ಅಗ್ನಿವೃದ್ಧಿಗಾಗಿ ಬಳಸಲು ನೆರವಾಗುತ್ತದೆ. ಮೇದೋಜೀರಕ ಗ್ರಂಥಿಯು ಈ ರಸವನ್ನು ಪೂರೈಸದಿದ್ದರೆ ಸಿಹಿಮೂತ್ರ ಇಲ್ಲವೆ ಸಕ್ಕರೆ ರೋಗವು (Diabetes) ಉಂಟಾಗುತ್ತದೆ. ಏಕೆಂದರೆ, ಆಹಾರದಲ್ಲಿಯ ಸಕ್ಕರೆ ಆಗ ಕರಗುವುದಿಲ್ಲ ಮತ್ತು ಅದು ರಕ್ತದಲ್ಲಿ ಸಂಗ್ರಹವಾಗಿ ಕೊನೆಗೆ ಮೂತ್ರಕೋಶದಲ್ಲಿ ಹೊರಬೀಳುತ್ತದೆ. ಇನ್‌ಸುಲಿನ್ನಿನ ಉತ್ಪತ್ತಿಯಲ್ಲಿ ಹೆಚ್ಚು ಕಡಿಮೆಯಾಗಿ, ಆ ಮೂಲಕ ವ್ಯಕ್ತಿಯ ರಕ್ತಗತ ಸಕ್ಕರೆಯ ಮಟ್ಟ ವ್ಯತ್ಯಾಸ ಹೊಂದಿದರೆ, ಅದು ಅವನ ವ್ಯಕ್ತಿತ್ವ ಮತ್ತು ವರ್ತನೆಗಳ ಮೇಲೆ ಪರಿಣಮಿಸುತ್ತದೆ. ಸಾಮಾನ್ಯವಾಗಿ ಇಂಥ ನಿರ್ನಾಳ ಗ್ರಂಥಿಗಳೆಲ್ಲವೂ ನೋಡುವುದಕ್ಕೆ ಅತಿ ಚಿಕ್ಕ ಅವಯವಗಳಾಗಿ ಕಾಣಿಸುತ್ತವೆ. ಆದರೆ ಈ ಚಿಕ್ಕ ರಸಾಯನ ಕಾರ್ಖಾನೆಗಳು ಶರೀರಶಾಸ್ತ್ರದ ದೃಷ್ಟಿಯಿಂದಲೂ ಚಿಕಿತ್ಸಾಪದ್ಧತಿಯ ದೃಷ್ಟಿಯಿಂದಲೂ ಬಹಳ ಮುಖ್ಯವೆನಿಸಿವೆ.

## ಓಜೋಗ್ರಂಥಿ

ಈ ಗ್ರಂಥಿಯು ಕುತ್ತಿಗೆಯ ಬುಡದಲ್ಲಿ ಶ್ವಾಸನಾಳದ ಎದುರು ಇದೆ. ಸಾಮಾನ್ಯವಾಗಿ ಇದು ಒಂದು ಔನ್ಸ್ ತೂಕ ಉಳ್ಳದ್ದಾಗಿರುತ್ತದೆ. ಇದು ಉಬ್ಬಿದರೆ ಹೆಚ್ಚು ಅಪಾಯವಿಲ್ಲ. ಕಾಯಿಲೆಯಿಂದ ಓಜೋಗ್ರಂಥಿ (Thyroid Gland) ನಷ್ಟವಾದರೆ ವ್ಯಕ್ತಿಯು ತನ್ನ ಹಿಂದಿನ ಚುರುಕುತನವನ್ನು ಕಳೆದುಕೊಂಡು, 'ಮೈಕ್ಸಿಡಿಮಾ' (Myxoedema) ಎಂಬ ಜಡ ಸ್ಥಿತಿಗೆ ಇಳಿಯುತ್ತಾನೆ; ಚರ್ಮ ದಪ್ಪವಾಗುತ್ತದೆ; ಮಾಂಸಖಂಡಗಳೂ ಮಿದುಳೂ ಜಡವಾಗುತ್ತವೆ. ಅವನು ಮಂದಗತಿಯವನೂ ಹೆಡ್ಡನೂ ಮರ ಗುಳಿಯೂ ಮತ್ತು ಏಕಾಗ್ರತೆ ಇಲ್ಲದವನೂ ಅಥವಾ ಪರಿಣಾಮಕರವಾಗಿ ವಿಚಾರ ಮಾಡಲು ಮತ್ತು ಕೆಲಸ ಮಾಡಲು ಅಶಕ್ತನೂ ಆಗುತ್ತಾನೆ. ಈ ಗ್ರಂಥಿಯು ಜನ್ಮತಃ ನ್ಯೂನತೆ ಉಳ್ಳದ್ದಾಗಿದ್ದರೆ ಅಥವಾ ಬಾಲ್ಯಾವಸ್ಥೆಯಲ್ಲಿ ನಾಶವಾಗಿದ್ದರೆ ಬೆಳವಣಿಗೆಯು ಕುಂಠಿತವಾಗುತ್ತದೆ ಮತ್ತು ಬುದ್ಧಿಯು ವೃದ್ಧಿಯಾಗುವುದಿಲ್ಲ. ಅದರ ಉಗ್ರಪ್ರಕರಣಗಳಲ್ಲಿ 'ಕ್ರೆಟಿನ್ಸ್' ಹುಡುಗನು ಕುಳ್ಳನೂ ವಿಕೃತಾಕೃತಿಯವನೂ ನಿರ್ವೀರ್ಯನೂ ಆಗುತ್ತಾನೆ–ಮನೋವೃತ್ತಿಯಲ್ಲಿ ಮಾತ್ರ ಸಪ್ಪೆ–ಸಮಾಧಾನ ಸ್ಥಿತಿಯಲ್ಲಿ ಇರುತ್ತಾನೆ. ಕುರಿಯ ಓಜೋರಸವನ್ನು 'ಮೈಕ್ಸಿಡಿಮಾ' ಹಿಡಿದ ಮನುಷ್ಯನಿಗೆ ಚುಚ್ಚುಮದ್ದಿನ ರೂಪದಲ್ಲಿ ಕೊಟ್ಟಾಗ ಆಶ್ಚರ್ಯಕರವಾದ ರೀತಿಯಲ್ಲಿ ಗುಣವಾದದ್ದು ಕಂಡುಬಂದಿತು. ಇನ್ನು 'ಕ್ರೆಟಿನ್ಸ್'ರೋಗಿಗಳಿಗೆ ಸಹ ಓಜೋರಸವನ್ನು ಕೊಟ್ಟಾಗ ಅವರ ಬುದ್ಧಿಮತ್ತೆ ಸಮಸ್ಥಿತಿಗೆ ಬಂದದ್ದು ತಿಳಿದುಬಂದಿದೆ. ಆದರೆ ಓಜೋರಸವನ್ನು ಕೊಡುವುದರಿಂದ ಸಮಸ್ಥಿತಿಯ ಮನುಷ್ಯನ ಬುದ್ಧಿಯ ಮಟ್ಟವನ್ನು ಏರಿಸಲಾಗುವುದಿಲ್ಲ.

ಶರೀರದ ಜೀವರಸೀಕರಣ ರೂಪದ ರಾಸಾಯನಿಕ ಕಾರ್ಯದ ವೇಗವನ್ನು ಹೆಚ್ಚಿಸುವುದೇ ಓಜೋರಸದ ಕೆಲಸ. ಈ ರಸ ಕೊರತೆಯಾದಾಗ ದೇಹದಲ್ಲಿಯ

ಜೀವರಸೀಕರಣಕ್ರಿಯೆ ಮಂದಗತಿಗೆ ಇಳಿಯುತ್ತದೆ–ಅರ್ಥಾತ್ ಆಮ್ಲಜನಕದ ಬಳಕೆ ಕಡಿಮೆಯಾಗುತ್ತದೆ, ಇಂಗಾಲದ ಸಂಗ್ರಹವು ಜಾಸ್ತಿಯಾಗುತ್ತದೆ. ಓಜೋರಸದ ಉತ್ಪತ್ತಿಯು ಹೆಚ್ಚಾದರೆ ಜೀವರಸೀಕರಣ ಕ್ರಿಯೆಯು ಸಮಸ್ಥಿತಿಯ ಮಟ್ಟಕ್ಕಿಂತಲೂ ಹೆಚ್ಚಾಗುತ್ತದೆ. ಓಜೋಗ್ರಂಥಿಯು ಹೆಚ್ಚು ಹೆಚ್ಚು ಕೆಲಸ ಮಾಡತೊಡಗಿದಾಗ ವ್ಯಕ್ತಿಯು ಶ್ರಾಂತನೂ ನರದ ಬಿಗಿತದಿಂದ ನರಳುವವನೂ ಶೀಘ್ರಕೋಪಿಯೂ ಚಿಂತಾಗ್ರಸ್ತನೂ ಅಸ್ತಿಮಿತನೂ ಆಗುತ್ತಾನೆ. ಬೆಳವಣಿಗೆಯ ಅವಸ್ಥೆಯಲ್ಲೇ ಇರುವ ಮನುಷ್ಯನ ಬೆಳವಣಿಗೆಯು ತೀವ್ರವಾಗುತ್ತದೆ–ಅಂದರೆ ಎತ್ತರ ಹೆಚ್ಚುತ್ತದೆ ಮತ್ತು ವಾಮನತ್ವಕ್ಕೆ ವಿರುದ್ಧವಾದ ತ್ರಿವಿಕ್ರಮಾವತಾರವನ್ನು ಅವನು ತಾಳುತ್ತಾನೆ. ಆದರೆ ಆತನ ಬುದ್ಧಿ ಮತ್ತೆಯ ಬೆಳವಣಿಗೆ ಮಾತ್ರ ತೀವ್ರತರವಾಗುವುದಿಲ್ಲ.

## ತೇಜೋಗ್ರಂಥಿ

ಈ ಚಿಕ್ಕ ಗ್ರಂಥಿಗಳು ಮೂತ್ರಕೋಶದ ಸಮೀಪದಲ್ಲಿ ಇವೆ. ಇವುಗಳಲ್ಲಿ ಪ್ರತಿಯೊಂದು ಗ್ರಂಥಿಗೂ ಹೊರದೊಗಟೆ ಮತ್ತು ಒಳತಿರುಳು ಎಂಬ ಎರಡು ಭಾಗಗಳಿರುತ್ತವೆ; ಇವುಗಳ ಕೃತ್ಯವೂ ಪ್ರತ್ಯೇಕ, ರಚನೆಯೂ ಬೇರೆ–ಇವುಗಳಲ್ಲಿ ಪ್ರತಿಯೊಂದೂ ಸ್ವತಂತ್ರಗ್ರಂಥಿ. ತೇಜೋ ಗ್ರಂಥಿಯ (Adrenal Glands) ತೊಗಟೆಯು ತೊಗಟೆ–ರಸವನ್ನೂ ತಿರುಳು ತಿರುಳು–ರಸವನ್ನೂ ಉತ್ಪಾದಿಸುತ್ತವೆ. ತಿರುಳುರಸ (ಅಡ್ರೀನಿನ್) ಒಂದು ಶಕ್ತಿಯುತವಾದ ರಸ; ರಕ್ತದಲ್ಲಿ ಇದರ ಅಲ್ಪ ಪ್ರಮಾಣವು ಈ ಕೆಳಗಿನ ಪರಿಣಾಮಗಳನ್ನು ಉಂಟುಮಾಡುತ್ತದೆ: ಬಲವಾದ ಹಾಗೂ ವೇಗವಾದ ಎದೆಬಡಿತ, ಹೆಚ್ಚಾದ ನೆತ್ತರೊತ್ತಡ, ಚರ್ಮ ಇಲ್ಲವೆ ಅಂತರವಯವಗಳ ಮೂಲಕವಾಗಿ ರಕ್ತವನ್ನು ಕಳುಹಿಸುವ ಬದಲು ಮಾಂಸಖಂಡದ ಮತ್ತು ಮಿದುಳಿನ ಮೂಲಕ ಬಲವಂತವಾಗಿ ಕಳುಹಿಸುವುದು, ಜಠರದ ಮತ್ತು ಕರುಳುಗಳ ಕೆಲಸವು ಥಟ್ಟನೆ ನಿಂತುಹೋಗುವುದು, ಶ್ವಾಸಕೋಶಗಳಲ್ಲಿರುವ ವಾಯುದ್ವಾರವು ಅಗಲವಾಗುವುದು, ಪಿತ್ತಕೋಶದಲ್ಲಿ ಸಂಚಿತವಾದ ಸಕ್ಕರೆಯು ರಕ್ತಕ್ಕೆ ಸೇರುವುದು; ಮಾಂಸಖಂಡಗಳ ಸುಸ್ತು ತಡವಾಗಿ ಆಗುವುದು, ಬೆವರು ಸುಖವಾಗಿ ಬರುವುದು ಮತ್ತು ಕಣ್ಣಿನ ಕನೀನಿಕೆಯು ಅಗಲವಾಗುವುದು, ಈ ಪರಿಣಾಮಗಳು ಸ್ವಾಯತ್ತ ನರಮಂಡಲದ ಅನುಕಂಪಕ ವಿಭಾಗದಿಂದಲೂ ಉಂಟಾಗುತ್ತವೆ. ಆದರೆ ಇವೆರಡರಲ್ಲಿ ಒಂದು ವ್ಯತ್ಯಾಸವಿದೆ. ಅನುಕಂಪಕ ನರಗಳು ಈ ಪರಿಣಾಮಗಳನ್ನು ಬಹುವೇಗವಾಗಿ ಮತ್ತು ಸ್ವಲ್ಪ ಕಾಲ ಮಾತ್ರ ಉಳಿಯುವಂತೆ ಉಂಟುಮಾಡುತ್ತವೆ; ತಿರುಳುರಸವಾದರೋ ರಕ್ತದಲ್ಲಿ ಸೇರಿದಾಗ ಇದನ್ನು ಹೆಚ್ಚು ಅವಧಿಯ ತನಕ ಉಳಿಯುವಂತೆ ಉಂಟುಮಾಡುತ್ತದೆ. ಹೀಗೆ ತೇಜೋಗ್ರಂಥಿಯ ಒಳತಿರುಳು ಅನುಕಂಪಕ ನರಗಳ ಸಹಕಾರಿ ಎನಿಸಿದೆ. ಪ್ರಾಣಿಗಳು ಭಾವನೋದ್ರೇಕದಲ್ಲಿ ಇದ್ದಾಗ ಮೇಲೆ ಹೇಳಿದ ಪರಿಣಾಮಗಳೆಲ್ಲವೂ ಉಂಟಾಗಿ ಆ ಮೂಲಕ ಅವು ಅನಿರೀಕ್ಷಿತ ಅತ್ಯಯ ಪ್ರಸಂಗದಲ್ಲಿ ತಮ್ಮ ಆತ್ಮರಕ್ಷಣೆಯ ಪೂರ್ವಸಿದ್ಧತೆಯನ್ನು ಮಾಡಿಕೊಳ್ಳಲು ಶಕ್ತವಾಗುತ್ತವೆ.

ತೇಜೋಗ್ರಂಥಿಯ ತೊಗಟೆರಸವು ಸೋಡಿಯಂ, ಪೊಟಾಸಿಯಂ ಮತ್ತು ಸಕ್ಕರೆಗಳನ್ನು ನಮ್ಮ ದೇಹ ಬಳಸಿಕೊಳ್ಳುವುದರಲ್ಲಿ ನೆರವಾಗುತ್ತದೆ; ಅಲ್ಲದೆ ಅದು ಮಾಂಸಖಂಡಗಳ ಮತ್ತು ಕಾಮವಿಷಯಿಕ ಕೃತ್ಯಗಳ ಮೇಲೆ ಗಣ್ಯ ಪ್ರಭಾವವನ್ನು ಬೀರುತ್ತದೆ. ಈಗ ಇನ್ನೂ ಸರಿಯಾಗಿ ಗೊತ್ತಾಗದಂತಹ ಬಗೆಯಿಂದ ಅದು ನಮ್ಮ ದೇಹವನ್ನು ಸಜ್ಜಾಗಿಡುತ್ತದೆ. ಜೀವನಕ್ಕೆ ಅದು ಅವಶ್ಯಕ. ತೇಜೋಗ್ರಂಥಿಯ ತೊಗಟೆಯು ಕ್ಷಯಕ್ರಿಮಿಯಿಂದ ಸಂಪೂರ್ಣ ನಷ್ಟವಾದಾಗ "ಅಡಿಸನ್ನನ ರೋಗ" ಉಂಟಾಗುತ್ತದೆ. ಇದೊಂದು ಮರಣಾಂತಿಕ ವ್ಯಾಧಿ. ಈ ರೋಗದ ಚಿಹ್ನಗಳು: ಕ್ರಮೇಣ ಸೊರಗುವುದು, ಸುಸ್ತಾಗುವುದು, ಕಾಮಶಕ್ತಿ ಕಳೆದುಹೋಗುವುದು, ಜೀವರಸೀಕರಣಕ್ರಿಯೆ ಮಂದವಾಗುವುದು ಮತ್ತು ಅಂಟುರೋಗಗಳ ಆಕ್ರಮಣವನ್ನು ತಡೆಯುವ ಶಕ್ತಿ ಕಡಿಮೆಯಾಗುವುದು; ಚರ್ಮ ಕಪ್ಪಾಗುತ್ತದೆ, ರೋಗಿ ಚಳಿ ಬಿಸಿಲನ್ನು ತಡೆಯಲಾರ, ಅವನಿಗೆ ನಿದ್ರಾಲೋಪವಾಗುತ್ತದೆ; ಅವನ ವರ್ತನೆಯಲ್ಲಿ ಯುಕ್ತಾಯುಕ್ತ ವಿವೇಕ ಕಡಿಮೆಯಾಗುತ್ತದೆ; ಶೀಘ್ರಕೋಪಿತ್ವ ಹೆಚ್ಚುತ್ತದೆ, ಸಹಕಾರ ಬುದ್ಧಿ ಲೋಪವಾಗುತ್ತದೆ. ತೊಗಟೆ ರಸವನ್ನು ಕೊಟ್ಟರೆ, ಇವುಗಳೆಲ್ಲ ಗುಣಹೊಂದುತ್ತವೆ.

ತೇಜೋಗ್ರಂಥಿಯ ತೊಗಟೆ ಹೆಚ್ಚಾಗಿ ಕಾರ್ಯ ಮಾಡತೊಡಗಿದರೆ ಗಂಡು ಅಥವಾ ಹೆಣ್ಣಿನಲ್ಲಿ ಪುಂಸ್ತ್ವದ ಲಕ್ಷಣಗಳು ಅಧಿಕವಾಗುತ್ತವೆ; ಹೆಣ್ಣಿನಲ್ಲಿ ದೇಹದ ಸ್ಥೂಲರೇಖಾವಿನ್ಯಾಸದ ಉರುಟುತನ ಹೋಗಿ, ಸ್ವರ ಗಂಡಿನಂತೆ ಗಂಭೀರವಾಗಿ, ಗಡ್ಡ ಬೆಳೆಯುತ್ತದೆ.

## ಕಾಮಗ್ರಂಥಿಗಳು

ಸ್ತ್ರೀಯರ ಶೋಣಿತಕೋಶ, ಪುರುಷರ ಶುಕ್ಲಕೋಶ ಎಂಬಿವು ಮೂಲ ಕಾಮಗ್ರಂಥಿಗಳು. ಇವು ಪ್ರಜೋತ್ಪಾದಕ ಪುಟಗಳನ್ನು (Cells) ನಿರ್ಮಿಸುವುದಲ್ಲದೆ ಬೆಳವಣಿಗೆ ಹಾಗೂ ವರ್ತನೆಗಳ ಮೇಲೆ ಪರಿಣಾಮ ಮಾಡುವ ರಸಗಳನ್ನೂ ಉತ್ಪಾದಿಸುತ್ತವೆ. ಇಂಥ ರಸಗಳು ಅನೇಕ; ಇವುಗಳಲ್ಲಿ ಕೆಲವು ಸ್ತ್ರೀ ಪುರುಷರಿಗೆ ಸಾಧಾರಣ. ಪುಂರಸದ ಒಂದು ಸಮತೋಲವು ಪುಂಸ್ತ್ವದ ದಿಶೆಯಲ್ಲಿ ಬೆಳವಣಿಗೆಯನ್ನು ತೆಗೆದುಕೊಂಡು ಹೋದರೆ ಸ್ತ್ರೀರಸದ ಒಂದು ಸಮತೋಲವು ಸ್ತ್ರೀತ್ವದ ದಿಶೆಯಲ್ಲಿ ಅದನ್ನು ಒಯ್ಯುವುದು. ಯೌವನಾರಂಭದಲ್ಲಿ ಸ್ತ್ರೀಪುರುಷರ ಜನನಾವಯವಗಳನ್ನು ಈ ರಸಗಳು ಪೋಷಿಸುವುದಲ್ಲದೆ, ಸ್ತ್ರೀಯರಲ್ಲಿ ಮೊಲೆಯ ಬೆಳವಣಿಗೆ ಹಾಗೂ ಪುರುಷರಲ್ಲಿ ಗಡ್ಡ–ಮೀಸೆಯ ಬೆಳವಣಿಗೆ ಮತ್ತು ಧ್ವನಿಗಾಂಭೀರ್ಯ ಮುಂತಾದ ಲಿಂಗ ಚಿಹ್ನಗಳನ್ನೂ ಹೊರೆಯುತ್ತವೆ. ಕಾಮಗ್ರಂಥಿಗಳ ಅಭಾವದಲ್ಲಿ ವ್ಯಕ್ತಿಯು ಉಭಯ ಲಿಂಗಚಿಹ್ನಗಳಾವುವನ್ನೂ ಪಡೆಯದೆ ನಪುಂಸಕವಾಗಿ ಬೆಳೆಯುತ್ತದೆ. ಹೆಣ್ಣಿನ ರಜಃಕಾಲಚಕ್ರ ಮತ್ತು ಶೋಣಿತಾಣು–ಉತ್ಪತ್ತಿಯ ಕಾಲಚಕ್ರ, ಗರ್ಭಧಾರಣೆ ಹಾಗೂ ಮೊಲೆಹಾಲಿನ ಉತ್ಪತ್ತಿ ಮುಂತಾದ ಆಂತರಿಕ ಪುನರುತ್ಪಾದನ ಪ್ರಕ್ರಿಯೆಗಳು (Reproductive Processes) ಬಹಳ ಮಟ್ಟಿಗೆ ಕಾಮರಸಾಧೀನ. ತಾಯಿಯ ಮಕ್ಕಳ ಸಾಕಣೆಯ ಆಸಕ್ತಿ ಕೂಡ ಕೆಲಮಟ್ಟಿಗೆ ಕಾಮರಸಾವಲಂಬಿ.

ಕಾಮರಸಗಳು ಬಾಲ್ಯದಲ್ಲೇ ಇರುವುದಾದರೂ ಕೌಮಾರ ದಾಟುವ ಕಾಲದಲ್ಲಿ ಅವು ಹೆಚ್ಚಾಗುವುವು; ಅಲ್ಲದೆ, ಅವು ಕಾಮಾಸಕ್ತಿಗೆ ನಿಶ್ಚಿತವಾಗಿಯೂ ಅವಶ್ಯಕ. ಕೆಲವು ವ್ಯಕ್ತಿಗಳು ಅತಿಕಾಮಿಗಳೂ ಮತ್ತೆ ಕೆಲವರು ಅಲ್ಪ ಕಾಮಿಗಳೂ ಆಗಲು ಅವೇ ಕಾರಣವೆಂದು ಊಹಿಸಲಾಗಿದೆ. ಸಾಕಷ್ಟು ಸಮಸ್ಥಿತಿಯ ಕಾಮಾಸಕ್ತಿಯಿಲ್ಲದವರು ಅವರ ಸಹವಾಸಿಗಳ ಟೀಕೆಗೆ ಗುರಿಯಾಗುತ್ತಾರೆ ಮತ್ತು ಅವರ ಕಾಮವರ್ತನೆ ವಿಲಕ್ಷಣವಾಗಿರುತ್ತದೆ. ಉಳಿದ ಸಮಸ್ಥಿತಿಯ ಕಾಮಗ್ರಂಥಿಕಾರ್ಯವುಳ್ಳ ಮನುಷ್ಯರು ಅವರವರ ಸಾಮಾಜಿಕ ಆವರಣ ಮತ್ತು ಇತರ ಆಸಕ್ತಿಗಳ ಪ್ರಭಾವದಂತೆ ನಡೆದುಕೊಳ್ಳುತ್ತಾರೆ.

## ಭ್ರಾಜೋಗ್ರಂಥಿ:

ಇದು ನಾಯಕಗ್ರಂಥಿ. ಉಳಿದ ನಿರ್ನಾಳಗ್ರಂಥಿಗಳ ಮೇಲೆ ಇದರ ನಿಯಂತ್ರಣವಿರುತ್ತದೆ. ಇದು ಮಿದುಳಿನ ಕೆಳಭಾಗಕ್ಕೆ ಅಂಟಿಕೊಂಡಿರುವ ಒಂದು ಚಿಕ್ಕ ಗ್ರಂಥಿ. ಇದರ ಉತ್ತರ ಭಾಗವು ರಕ್ತದ ಒತ್ತಡ, ನೀರಿನ ಜೀವರಸೀಕರಣ ಮುಂತಾದ ದೈಹಿಕ ಪ್ರಕ್ರಿಯೆಗಳನ್ನು ನಿಯಂತ್ರಿಸುತ್ತದೆ. ಇದರ ಪೂರ್ವಭಾಗವು ಓಜೋಗ್ರಂಥಿ, ಕಾಮಗ್ರಂಥಿ ಮತ್ತು ತೇಜೋಗ್ರಂಥಿಯ ತೊಗಟೆಗಳ ರಸೋತ್ಪಾದನ ಕ್ರಿಯೆಗೆ ಪ್ರೇರಕವಾದ ರಸಗಳನ್ನು ಪೂರೈಸುತ್ತದೆ. ಭ್ರಾಜೋರಸಗಳಿಲ್ಲದೆ ಉಕ್ತ ಇತರ ಗ್ರಂಥಿಗಳು ಬೆಳೆಯಲಾರವು, ಸರಿಯಾಗಿ ಕೆಲಸ ಮಾಡಲಾರವು.

ದೇಹದ ಬೆಳವಣಿಗೆಯ ಮೇಲೆ ಭ್ರಾಜೋಗ್ರಂಥಿಯ (Pituitary Gland) ಪೂರ್ವಭಾಗವು ಬಹಳ ಪ್ರಭಾವ ಬೀರುತ್ತದೆ. ಬಾಲ್ಯದಲ್ಲಿ ಈ ಗ್ರಂಥಿ ಅತಿ ಚುರುಕಾಗಿ ಕೆಲಸ ಮಾಡುತ್ತಿದ್ದರೆ ಎಲುಬುಗಳೂ ಮಾಂಸಖಂಡಗಳೂ ತ್ವರಿತಗತಿಯಿಂದ ಬೆಳೆದು ವ್ಯಕ್ತಿಯು ೮–೯ ಅಡಿ ಎತ್ತರದ ಮನುಷ್ಯನಾಗುತ್ತಾನೆ. ಹೀಗೆ ಮೊದಲು ಅತಿಯಾಗಿ ಕೆಲಸ ಮಾಡಿದ ಬಳಿಕ ಇದು ಸುಸ್ತಾಗಿಬಿಡುವುದರಿಂದ ಮನುಷ್ಯನು ಮಾಂಸಖಂಡಗಳ ಶಕ್ತಿಯನ್ನು ಕಳೆದುಕೊಂಡು ಎಳೆತನದಲ್ಲೇ ಸಾಯುತ್ತಾನೆ. ಹಾಗಲ್ಲದೆ, ಇದು ಬೆಳವಣಿಗೆಯ ಕಾಲದಲ್ಲಿ ಸರಿಯಾದ ಪ್ರಮಾಣದ ಕಾರ್ಯಮಾಡಿ ಜೀವನದ ಪ್ರೌಢದೆಸೆಯಲ್ಲಿ ಅತಿಯಾಗಿ ಕೆಲಸ ಮಾಡತೊಡಗಿದರೆ ಮನುಷ್ಯನು ಹೆಚ್ಚು ಎತ್ತರವಾಗಿ ಬೆಳೆಯದೆ, ಅವನ ಹಸ್ತ, ಪಾದ, ಮೂಗು, ಕೆಳದವಡೆ ಮುಂತಾದವು ಅಗಲವಾಗಿ ಬೆಳೆಯುತ್ತದೆ. ಬೆಳವಣಿಗೆಯ ಕಾಲದಲ್ಲಿ ಈ ಗ್ರಂಥಿಯ ಪೂರ್ವಭಾಗವು ಕಡಿಮೆ ಪ್ರಮಾಣದಲ್ಲಿ ಕೆಲಸ ಮಾಡಿದರೆ ವ್ಯಕ್ತಿಯು ವಾಮನನಾಗುತ್ತಾನೆ. ಇಂಥ ವಾಮನರಾಯರು ಸಮಪಾರ್ಶ್ವ ಉಳ್ಳವರೂ 'ಕ್ರೆಟಿನ್' ರೋಗಿಗಳಿಗಿಂತ ಭಿನ್ನಸ್ವರೂಪದವರೂ ಎಷ್ಟೋ ವೇಳೆ ಸುಂದರರೂ, ಸಮಸ್ಥಿತಿಯ ಬುದ್ಧಿಮತ್ತೆ ಉಳ್ಳವರೂ ಆಗಿರುತ್ತಾರೆ. ಇಂಥವರಿಗೆ ಬಾಲ್ಯದಲ್ಲಿಯೇ ಭ್ರಾಜೋರಸಗಳನ್ನು ಕೊಟ್ಟರೆ ಈ ದೋಷ ಪರಿಹಾರವಾಗುತ್ತದೆ.

✱

## ಅಧ್ಯಾಯ ಮೂರು

# ಇಂದ್ರಿಯಗಳು

ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮ ಎಂಬ ಪಂಚೇಂದ್ರಿಯಗಳ ರೂಪ, ಶಬ್ದ, ಗಂಧ, ರಸ, ಸ್ಪರ್ಶ ಎಂಬ ಸಂವೇದನೆಗಳಲ್ಲದೆ ತದ್ಭಿನ್ನವಾಗಿ ಉಷ್ಣಸ್ಪರ್ಶ, ಶೀತಸ್ಪರ್ಶ, ದೈಹಿಕವಾದ ನೋವಿನ ಸಂವೇದನೆ, ಮಾಂಸಲಸ್ಪರ್ಶ ಮತ್ತು ಸಮತೋಲಸಂವೇದನೆ ಎಂಬವು ಇವೆ ಎಂದು ಹಲವರ ಮತ. ಇದು ಹೇಗಿದ್ದರೂ ಪಂಚೇಂದ್ರಿಯಗಳ ಸಂವೇದನೆಗಳಂತೂ ಸುಸ್ಪಷ್ಟ. ಈಗ ಸಂವೇದನಾ ವರ್ಗಗಳಲ್ಲಿ ಇಂದ್ರಿಯಾನುಗುಣವಾಗಿ ಒಂದೊಂದನ್ನೇ ಎತ್ತಿಕೊಳ್ಳೋಣ; ಮತ್ತು ಸಂವೇದನೆಯೊಂದರ ಪ್ರತ್ಯೇಕತೆಯನ್ನು ಪರಾಮರ್ಶಿಸೋಣ.

### ಕಣ್ಣಿನ ರಚನೆ

ಮನುಷ್ಯನ ಕಣ್ಣು ಗುಡ್ಡೆ ಹೆಚ್ಚು ಕಡಿಮೆ ಒಂದು ಗೋಲ. ೧೨(ಅ)ನೆಯ ನಕ್ಷೆಯಲ್ಲಿ ಅದರ ಭಾಗಗಳನ್ನು ಕಾಣಬಹುದು. ಕಣ್ಣಿನ ಕುಳಿಯಲ್ಲಿ ಕಣ್ಣು ಗುಡ್ಡೆ ತಿರುಗುವುದನ್ನು ಮೂರು ಜೋಡಿ ಮಾಂಸಖಂಡಗಳು ನಿಯಂತ್ರಿಸುತ್ತವೆ. ಕಣ್ಣು ಗುಡ್ಡೆಗೆ ಮೂರು ಪೊರೆಗಳು ಸುತ್ತಿಕೊಂಡಿವೆ. ಹೊರಗಿನ ಗಟ್ಟಿಯಾದ ಒರಟು ಪೊರೆಯೇ 'ಬೆಳ್‌ಪೊರೆ'. ಅದರ ಒಳಗಡೆ ಪ್ರಕಾಶಘ್ನ ಪೊರೆಯೊಂದಿದೆ. ಅದು ಎರಡನೆಯದು. ಅದರ ಬಣ್ಣಕಪ್ಪು. ಅದು ಕಣ್ಣಿನ ಒಳಗೆ ಬರುವ ಬೆಳಕಿನ ಕಿರಣಗಳನ್ನು ಒಳಗಡೆ ಪ್ರತಿಬಿಂಬಿಸದಂತೆ ತಡೆಯುತ್ತದೆ. ಮೂರನೆಯದಾದ ಬಲೆಪೊರೆಯು ನಮ್ಮ ನೋಡುವ ಶಕ್ತಿಯ ನಿಜವಾದ ಪೀಠ. ಅದರಲ್ಲಿ ಕಣ್ಣಿನ ಒಳಮೈಯ ತುಂಬ ಹರಡಿರುವ ಪುಟಗಳಿಂದಾದ ಹಲವಾರು ಪದರಗಳಿವೆ. ಈ ಪುಟಗಳನ್ನು ಅವುಗಳ ಆಕೃತಿಸಾದೃಶ್ಯದ ಮೇರೆಗೆ ಹೀರೆಗಳೆಂದೂ (Rods) ಸೌತೆಗಳೆಂದೂ (Cones) ವರ್ಗೀಕರಿಸಿ ಹೆಸರಿಸಬಹುದು.

ಬೆಳ್‌ಪೊರೆಯು ಅಪಾರದರ್ಶಕ. ಆದರೆ ಅದು ಕಣ್ಣಿನ ಮುಂಭಾಗವನ್ನು ಮುಟ್ಟುವಲ್ಲಿ ಸ್ವಲ್ಪ ಉಬ್ಬಿ ಪಾರದರ್ಶಕವಾಗುತ್ತದೆ. ಈ ಪಾರದರ್ಶಕ ಭಾಗವೇ 'ಎದುರುಪೊರೆ.' ಕಣ್ಣಿನಲ್ಲಿ ನಮಗೆ ಕಾಣುವ ಕಪ್ಪುವೃತ್ತವು, ಪ್ರಕಾಶಘ್ನ ಪೊರೆಯ ಒಂದು ಭಾಗ. ಅದಕ್ಕೆ 'ಕಪ್ಪುಪೊರೆ' ಎಂದು ಹೆಸರು. ಅದು ಪಾರದರ್ಶಕವಾದ ಎದುರುಪೊರೆಯ ಮೂಲಕ

ಕಾಣಿಸುತ್ತದೆ. ಕಪ್ಪುಪೊರೆಯ ನಡುವೆ ಒಂದು ತೂತಿದೆ. ಅದೇ ಕನೀನಿಕೆ. ಅದು ಒಳಭಾಗಕ್ಕೆ ಬೆಳಕನ್ನು ಬಿಡುತ್ತದೆ. ಸುತ್ತುಮುತ್ತಲಿನ ಬೆಳಕಿನ ಪರಿಸ್ಥಿತಿಯ ತೀವ್ರತೆಗೆ ಅನುಗುಣವಾಗಿ ಕನೀನಿಕೆಯನ್ನು ಹಿಗ್ಗಿಸಬಹುದು ಅಥವಾ ಕುಗ್ಗಿಸಬಹುದು. ಕಪ್ಪುಪೊರೆಯ ಹಿಂಬದಿಯಲ್ಲಿ ಹರಳಿದೆ. ಅದನ್ನು ಕೂಡ ಬೇಕಾದಹಾಗೆ ರೆಪ್ಪೆಯ ಸಹಾಯದಿಂದ ನಿಯಂತ್ರಿಸಿ ಹೊಂದಿಸಬಹುದು. ಈ ಹರಳಿನಿಂದಲೇ ನಾವು ಒಳಬರುವ ಬೆಳಕಿನ ಕಿರಣಗಳು ಬಲೆಪೊರೆಯ ಮಧ್ಯಭಾಗಕ್ಕೆ ಸರಿಯಾಗಿ ಬೀಳುವಂತೆ ಮಾಡಬಲ್ಲೆವು. ಪಾರದರ್ಶಕವೂ ಉಬ್ಬಿದ್ದೂ ಆದ ಎದುರುಪೊರೆಯೂ ಹರಳಿನಂತೆ ಕೆಲಸ ಮಾಡುತ್ತದೆ. ಎದುರುಪೊರೆಗೂ ಕಪ್ಪುಪೊರೆಗೂ ನಡುವೆ ಕಣ್ಣಿನ ಒಳ ಅಂಗಳವಿದೆ. ಅದರಲ್ಲಿ ನೀರಿನಂಥ ದ್ರವತುಂಬಿದೆ. ಹರಳಿನ ಹಿಂಭಾಗದಲ್ಲಿ ಕಣ್ಣಿನ ಹೊರ ಅಂಗಳವಿದೆ. ಅದೇ ಕಣ್ಣಿನ ದೊಡ್ಡ ಪೊಟ್ಟರೆ. ಅದರಲ್ಲಿ ಒಂದು ತರದ ತಿಳಿಯಾದ ಸ್ನಿಗ್ಧ ದ್ರವ ತುಂಬಿಕೊಂಡಿದೆ. ಈ ಎರಡು ದ್ರವಗಳೂ ಬೆಳಕಿನ ಕಿರಣಗಳನ್ನು ಬಲೆಪೊರೆಯ ನಡುಗಡೆಗೆ ನಿರ್ದೇಶಿಸುವಲ್ಲಿ ನೆರವಾಗುತ್ತವೆ.

ಹಿಂದೆ ಹೇಳಿದ ಬಲೆಪೊರೆಯಲ್ಲಿಯ ಹೀರೆಗಳೂ, ಸೌತೆಗಳೂ ಅನುಕ್ರಮವಾಗಿ ಬೆಳಕಿಗೂ ನೆರಳಿಗೂ ಗ್ರಾಹಕಗಳಾಗಿವೆ. ಬಲೆಪೊರೆಯ ನಡುವೆ ತುಂಬ ಸೌತೆಗಳಿವೆ. ಈ ಭಾಗದ ಮೂಲಕವೇ ಬಣ್ಣಗಳನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ. ಈ ಪೊರೆಯ ಪರಿಧಿಯು ಬೆಳಕಿಗೆ ಮತ್ತು ನೆರಳಿಗೆ ಹೆಚ್ಚು ಉನ್ಮುಖ. ಇಲ್ಲಿ ಹೀರೇಗಳೇ ಹೆಚ್ಚಾಗಿವೆ. ಈ ಭಾಗದ ಮೇಲೆ ಬಣ್ಣದ ಬೆಳಕು ಬಿದ್ದಾಗ ನಮಗೆ ಕೇವಲ ಬಿಳುಪು–ಕಪ್ಪುಗಳ ಸಂವೇದನೆ ಉಂಟಾಗುತ್ತದೆ.

# ಕಣ್ಣಿನ ಸಂವೇದನೆಗಳು

## ಬಣ್ಣದ ಬೆರಕೆಯಿಂದ ಆಗುವ ಪರಿಣಾಮ

ವರ್ಣಚಕ್ರದಲ್ಲಿ ಬರಿ ಗಣ್ಣಿಗೆ ಕಾಣುವ ಏಳು ಬಣ್ಣಗಳೆಂದರೆ ನೇರಳೆ ಬಣ್ಣ, ಮಾಸಲು ನೀಲಿ, ನೀಲಿ, ಹಸಿರು, ಕಿತ್ತಳೆ, ಹಳದಿ ಮತ್ತು ಕೆಂಪು. ನೇರಳೆ ಬಣ್ಣಕ್ಕೂ ಮುಂದೆ ಅತಿನೇರಳೆ ಕಿರಣಗಳಿವೆ (Ultra-voilet Rays). ಇವುಗಳನ್ನು ಬರಿಯ ಕಣ್ಣು ಕಾಣಲಾರದು. ಇವನ್ನು ಚಿಕಿತ್ಸಾವಿಧಾನದಲ್ಲಿ ಬಳಸುತ್ತಾರೆ. ಅವಕೆಂಪುಕಿರಣ (Infra-red Rays) ಗಳಾದರೂ ಅದೃಶ್ಯ. ಅವುಗಳನ್ನು ದೂರದಲ್ಲಿ ನಿಂತು ಫೋಟೋ ತೆಗೆಯುವಾಗ ಉಪಯೋಗಿಸುತ್ತಾರೆ. ಒಂದು ಬಗೆಯ ಬೂದಿ ಬಣ್ಣವನ್ನು ತಮ್ಮ ಮಿಶ್ರಸ್ವರೂಪದಲ್ಲಿ ಉಂಟುಮಾಡುವ ಪರಸ್ಪರ ವಿರುದ್ಧವಾದ ಎರಡು ಬಣ್ಣಗಳಿದ್ದರೆ ಅವನ್ನು ಪೂರಕವರ್ಣಗಳೆಂದು ಕರೆಯುತ್ತಾರೆ. ಅಂಥ ಪೂರಕವರ್ಣಗಳ ಜೋಡಿಗಳು ಎರಡು: ಕೆಂಪು ಮತ್ತು ಹಸಿರು; ಹಳದಿ ಮತ್ತು ನೀಲಿ.

ಬಲೆಪೊರೆಯ ಒಂದೇ ಸ್ಥಳದಲ್ಲಿ ಏಕಕಾಲದಲ್ಲಿ ಪೂರಕ ಸಂಬಂಧವಿಲ್ಲದ ಎರಡು ಬಣ್ಣಗಳ ಕಿರಣಗಳನ್ನು ಹಾಯಿಸಿದರೆ, ಉಂಟಾಗುವ ಸಂವೇದನೆಯು ಆ ಎರಡು

ಬಣ್ಣಗಳ ಮಿಶ್ರಸ್ವರೂಪದ್ದಾಗಿರುತ್ತದೆ. ಹಳದಿ ಮತ್ತು ಕೆಂಪು ಕಿರಣಗಳನ್ನು ಮೇಲೆ ಹೇಳಿದಂತೆ ಬೆರಸಿದರೆ ಎರಡಕ್ಕೂ ಮಧ್ಯಸ್ವರೂಪದ ಕಿತ್ತಿಳೆಯ ಸಾಕ್ಷಾತ್ಕಾರವಾಗುತ್ತದೆ. ಹಾಗಲ್ಲದೆ, ಅದೇ ರೀತಿಯಲ್ಲಿ ಕೆಂಪು ನೀಲಿ ವರ್ಣಗಳನ್ನು ಸೇರಿಸಿದರೆ, ಒಂದು ವಿಧದ ಮಧ್ಯಸ್ಥ ಬೂದಿಬಣ್ಣದ ಸಂವೇದನೆ ಉಂಟಾಗುತ್ತದೆ. ಅಂಥ ಪ್ರಕರಣಗಳಲ್ಲಿ ಬಲೆಪೊರೆಯು ಮಂದ ಪ್ರಕೃತಿಗೆ ಇಳಿದು ಅವುಗಳಲ್ಲಿ ಯೋಗ್ಯ ಮಿಶ್ರಣವನ್ನು ಮಾಡುವುದಕ್ಕೆ ಶಕ್ತವಾಗದುದರಿಂದಲೇ ಹಾಗೆ ಮಧ್ಯಸ್ಥ ಬೂದಿಬಣ್ಣದ ಸಂವೇದನೆ ಫಲಿಸುತ್ತದೆ. ವರ್ಣಚಕ್ರದ ಎಲ್ಲ ಬಣ್ಣಗಳೂ ಏಕಕಾಲದಲ್ಲಿ ಬಂದು ಸೌತೆಯ ಮೇಲೆ ಬಿದ್ದರೆ ತುಂಬಿದ ಹಗಲಿನಲ್ಲಾದಂತೆ ನಮಗೆ ಶುದ್ಧಪ್ರಕಾಶದ ಅಥವಾ ಬಿಳಿಯ ಬಣ್ಣದ ಸಂವೇದನೆಯಷ್ಟೇ ಆಗುತ್ತದೆ.

## ವರ್ಣವ್ಯತ್ಯಾಸದಿಂದ ಆಗುವ ಪರಿಣಾಮಗಳು

ತನ್ನ ಪೂರಕವರ್ಣದ ಪ್ರೇರಣೆ ನಿಜವಾಗಿ ಇಲ್ಲದಿರುವಾಗಲೂ ಅದರ ಸಂವೇದನೆಯನ್ನು ಯಾವುದಾದರೊಂದು ಬಣ್ಣದ ಸಂವೇದನೆಯು ಉಂಟುಮಾಡುವ ಪ್ರವೃತ್ತಿ ಇದೆ. ಉತ್ತರೋತ್ತರ ವ್ಯತ್ಯಾಸ ಮತ್ತು ಯುಗಪದ್ವ್ಯತ್ಯಾಸ ಎಂಬ ಘಟನೆಗಳಿಂದ ಈ ವಿಷಯ ಸ್ಪಷ್ಟ: ೩೦ ಸೆಕುಂದಗಳ ಕಾಲ ನಾವು ನಮ್ಮ ಕಣ್ಣುಗಳನ್ನು ಒಂದು ಬಣ್ಣದ ಕಾಗದದ ಮೇಲೆ ನಿಲ್ಲಿಸಿ, ಅನಂತರ ಅವನ್ನು ಬಿಳಿಯ ಅಥವಾ ಅರೆಬೂದಿಬಣ್ಣದ ಕಾಗದದತ್ತ ತಿರುಗಿಸಿದರೆ, ನಾವು ಮೊದಲಿನ ಕಾಗದದ ಗಾತ್ರ ಹಾಗೂ ಆಕೃತಿಗಳುಳ್ಳ ಪೂರಕವರ್ಣವನ್ನು ಎರಡನೆಯದರಲ್ಲಿ ನೋಡುತ್ತೇವೆ. ಈ ಗೌಣ ಸಂವೇದನೆಯನ್ನು ನೈಷೇಧಿಕ ಉತ್ತರ ಪ್ರತಿಮೆ ಎಂದು ಹೇಳುತ್ತಾರೆ (Negative After-Image). ಇದು ಉತ್ತರೋತ್ತರ ವ್ಯತ್ಯಾಸದ ಘಟನೆ. ನಾವು ನಮ್ಮ ಕಣ್ಣುಗಳನ್ನು ಒಂದು ಬಣ್ಣದ ಕಾಗದದ ಮೇಲೆ ನಿಲ್ಲಿಸಿದರೆ ಸ್ವಲ್ಪ ಕಾಲದ ಬಳಿಕ ಅದು ತನ್ನ ಪೂರಕವರ್ಣದ ಪ್ರಭಾವಲಯದೊಡನೆ ಮಸುಕಾಗಿ ಕಾಣುತ್ತದೆ. ಒಂದು ವರ್ಣಭಿತ್ತಿಯ ಮೇಲೆ ಅರೆಬೂದಿಬಣ್ಣದ ಕಾಗದದ ಚೂರನ್ನು ಇಟ್ಟರೆ ಅದು ಭಿತ್ತಿವರ್ಣದ ಪೂರಕವರ್ಣದೊಡನೆ ಸ್ವಲ್ಪ ಮಿಶ್ರವಾದಂತೆ ತೋರುತ್ತದೆ. ಈ ಎರಡನೆಯ ಪರಿಣಾಮವು ಉತ್ತರೋತ್ತರ ವ್ಯತ್ಯಾಸದ ಘಟನೆಯಷ್ಟು ಎದ್ದು ಕಾಣುವುದಿಲ್ಲ–ಅದರಲ್ಲೂ ಕೆಂಪು ಅಥವಾ ಹಸಿರು ವರ್ಣಭಿತ್ತಿಯನ್ನು ಬಳಸಿದಾಗ. ಆದರೆ ಆ ಕಾಗದವನ್ನೂ ಅದರ ವರ್ಣಭಿತ್ತಿಯನ್ನೂ ಒಂದು ತೆಳುವಾದ ಕಾಗದದಿಂದ ಮುಚ್ಚಿದರೆ ಪ್ರಭಾವಿತ ವರ್ಣವು (Induced Colour) ಇನ್ನಷ್ಟು ನಿಚ್ಚಳವಾಗಿ ತೋರುತ್ತದೆ. ಈ ಎರಡನೆಯ ಎರಡು ಪ್ರಕಾರಗಳೂ ಏಕಕಾಲಿಕ ವ್ಯತ್ಯಾಸದ ಘಟನೆ ಎಂಬ ವರ್ಗಕ್ಕೆ ಸೇರುತ್ತವೆ.

ವರ್ಣವ್ಯತ್ಯಾಸದ ಘಟನೆಯ ಕಾರಣ ಇನ್ನೂ ತಿಳಿದುಬಂದಿಲ್ಲ. ಈ ಬಗ್ಗೆ ಅನೇಕ ಸಿದ್ಧಾಂತಗಳನ್ನೇನೋ ಮಂಡಿಸಲಾಗಿದೆ. ಇವುಗಳಲ್ಲಿ ಹಲವು ಸಿದ್ಧಾಂತಗಳು ಬಲೆಪೊರೆಯಲ್ಲಿ ಆದೇಶಪ್ರಕ್ರಿಯೆಗಳು (Compensatory Process) ನಡೆಯುವದೆಂದು ಊಹಿಸುತ್ತವೆ. ಆದರೆ ಬಹುಶಃ ಈ ಘಟನೆಯ ವಿವರಣೆಯನ್ನು ಕಣ್ಣಿನಲ್ಲಿ ಹುಡುಕದೆ, ಮಿದುಳಿನಲ್ಲಿ ಹುಡುಕಬೇಕೆಂದು ತೋರುತ್ತದೆ.

## ವರ್ಣಾಂಧತೆ

ಕಣ್ಣಿನ ಬಲೆಪೊರೆಯಲ್ಲಿಯ ಸೌತೆಗಳ ಬೆಳವಣಿಗೆಯಲ್ಲಿಯ ದೋಷಗಳಿಂದ ಕೆಲವರು ಪೂರ್ಣವಾಗಿ ಅಥವಾ ಪಾಕ್ಷಿಕವಾಗಿ ವರ್ಣಾಂಧರಾಗಿರುತ್ತಾರೆ. ಸಂಪೂರ್ಣ ವರ್ಣಾಂಧನಿಗೆ ಈ ಜಗತ್ತು ಕಪ್ಪು, ಬಿಳುಪು ಮತ್ತು ಬೂದಿಬಣ್ಣಗಳಲ್ಲಿ ಮಾತ್ರ ಕಾಣಿಸುತ್ತದೆ. ಇಂಥವರು ಅತಿವಿರಳ. ೨೫ರಲ್ಲಿ ಒಬ್ಬ ಗಂಡಸಿಗೂ ೧೦೦೦ದಲ್ಲಿ ಒಬ್ಬ ಹೆಂಗಸಿಗೂ ಕೆಂಪು–ಹಸಿರುಗಳು ಕಾಣಿಸುವುದಿಲ್ಲ. ಕೆಲವರಿಗೆ ಒಂದೇ ಕಣ್ಣಿನಲ್ಲಿ ವರ್ಣಾಂಧತೆ ಇರುತ್ತದೆ.

12 (ಅ)




STRUCTURE OF THE EYE

12 (ಬ)



ಬಲೆಪೊರೆಯ ವಲಯಗಳು: ಸಾಮಾನ್ಯ ವ್ಯಕ್ತಿಯ ಕಣ್ಣು ಕೂಡ ತನ್ನ ಕೆಲ ಸ್ಥಳಗಳಲ್ಲಿ ವರ್ಣಾಂಧವಾಗಿರುತ್ತದೆ. ೧೨(ಬ)ನೆಯ ನಕ್ಷೆಯಲ್ಲಿ ಅದನ್ನು ಮೂರು ವಲಯಗಳನ್ನಾಗಿ ವಿಂಗಡಿಸಿದ್ದನ್ನು ಕಾಣಬಹುದು. ಬೆಳಕಿಗೆ ಒಗ್ಗಿದ ಕಣ್ಣಿನ ಬಲೆಪೊರೆಯ ಮಧ್ಯಪ್ರದೇಶವು (C) ಅತಿ ಸ್ಪಷ್ಟವಾದ ದರ್ಶನ ಶಕ್ತಿ ಉಳ್ಳದ್ದಾಗಿದೆ. ಅದು ಎಲ್ಲ ಬಣ್ಣಗಳನ್ನೂ ನೋಡಬಲ್ಲುದು. ನಡುವಿನ ವಲಯವು (B) ನೀಲ–ಹಳದಿಗಳನ್ನು ಕಾಣಬಹುದಲ್ಲದೆ, ಕೆಂಪು–ಹಸಿರುಗಳನ್ನು ಕಾಣಲಾರದು. ಹೊರವಲಯವು (A) ಸಂಪೂರ್ಣ ವರ್ಣಾಂಧ. ಬಲೆಪೊರೆಯನ್ನು ವಲಯಗಳನ್ನಾಗಿ ವಿಂಗಡಿಸಿದ್ದು ಅದರ ಮೇಲಿನ ಸೌತೆ ಹೀರೆಗಳ ವಿತರಣಕ್ಕೆ ಸಂಬಂಧಿಸಿದೆ. ಆದರೆ ಬೇರೆ ಕಾರಣಗಳೂ ಅದರಲ್ಲಿ ಸೇರಿರಬಹುದು.

## ಕಿವಿಯ ರಚನೆ

೧೩ನೆಯ ನಕ್ಷೆಯಲ್ಲಿ ಕಿವಿಯ ರಚನೆಯನ್ನು ಕೊಡಲಾಗಿದೆ. ಕಿವಿಯ ಹೊರನಾಲೆಯ ಮೂಲಕ ನಾದತರಂಗಗಳು ಹೊಕ್ಕು ಕಿವಿಯ ತಂಬಟೆಯನ್ನು ಬಡಿದು ಕಂಪಿಸುವಂತೆ ಮಾಡುತ್ತವೆ. ಈ ಕಂಪಗಳು ನಡುಗಿವಿಯಲ್ಲಿಯ ಬಡಿಗೆ, ಅಡಿಗಲ್ಲು ಮತ್ತು ಹತ್ತುಗಡೆ ಎಂಬ ಎಲುಬುಗಳ ಮೂಲಕ ಒಳಗಿವಿಯ ದ್ವಾರದಲ್ಲಿರುವ ಅಂಡಾಕೃತಿಯ ಪೊರೆಯನ್ನು ಮುಟ್ಟುತ್ತವೆ (ಮೇಲೆ ಹೇಳಿದ ಮೂರು ಮೂಳೆಗಳು ಬಡಿಗೆ, ಅಡಿಗಲ್ಲು ಮತ್ತು ಹತ್ತುಗಡೆಗಳಂತಿರುವುದರಿಂದ ಅವಕ್ಕೆ ಅವೇ ಹೆಸರುಗಳನ್ನು ಕೊಡಲಾಗಿದೆ). ಒಳಗಿವಿಯಲ್ಲಿ ಒಂದು ದ್ರವವಿದೆ. ಅದರ ಅಂಡಾಕೃತಿಯ ದ್ವಾರದಿಂದ ಮುಂದೆ ನಾದತರಂಗಗಳು ಈ ದ್ರವದ ಮೂಲಕವೇ ಹೋಗುತ್ತವೆ. ಒಳಗಿವಿಯ ಮುಖ್ಯವಾದ ಭಾಗವನ್ನು 'ಸುರುಳಿನಾಳ'ವೆನ್ನುತ್ತಾರೆ. ಈ ನಾಳವು ಬಸವನ ಹುಳುವಿನ ಚಿಪ್ಪಿನಂತೆ ತೋರುತ್ತದೆ. ಸುರುಳಿನಾಳದ ಸುರುಳಿಗಳೊಡನೆ ಬಿಗಿಯಾಗಿ ಹರಹಿದ ಮಾಂಸದ ಪೊರೆಯನ್ನು 'ಮೂಲಪೊರೆ' ಎನ್ನುತ್ತಾರೆ. ಅದರಲ್ಲಿ ಹಾರ್ಮೋನಿಯಮ್ಮಿನ ತಂತಿಯಂತೆ ಇರುವ ಅದರ ಸಾವಿರಾರು ಹುರಿಗಳು ಕಂಪಿಸತೊಡಗುತ್ತವೆ; ಸುರುಳಿನಾಳದ ಸುರುಳಿಗಳು ಏರಿದಂತೆಲ್ಲಾ ಚಿಕ್ಕದಾಗುತ್ತ ಹೋಗುತ್ತವೆ. ಮೂಲಪೊರೆಯಾದರೋ ಬುಡದಿಂದ ತುದಿಯತ್ತ ಹಿಗ್ಗುತ್ತ ಹೋಗುತ್ತದೆ. ಏರಿನ ತುದಿಯಲ್ಲಿಯ ಹುರಿಗಳು ಸಡಿಲವೂ ಉದ್ದವೂ ಆಗಿದ್ದರೆ, ಬುಡದಲ್ಲಿಯ ಹುರಿಗಳು ಚಿಕ್ಕವಾಗಿಯೂ ಬಿಗಿಯಾಗಿಯೂ ಇರುತ್ತವೆ. ಬಹುಶಃ ಈ ಪೊರೆಯ ಬೇರೆ ಬೇರೆ ಭಾಗಗಳು ಬೇರೆ ಬೇರೆ ತರಂಗಮಾನಗಳಿಗೆ ಕಂಪಿಸುವುವೆಂದು ತೋರುತ್ತದೆ. ಅದರಿಂದಲೇ ಬೇರೆ ಬೇರೆ ಸ್ವರೋತ್ಥಾನಗಳ ಸದ್ದುಗಳು ಉಕ್ತಪೊರೆಯ ಬೇರೆ ಬೇರೆ ಭಾಗಗಳನ್ನು ಕಂಪಿಸುತ್ತಿರಬೇಕು. ಹೀಗಿರುವುದರಿಂದ ಈ ಪೊರೆಯ ವಿಶಿಷ್ಟ ಭಾಗಗಳಿಗೆ ಅಪಾಯ ಒದಗಿದಾಗ ಕಿವಿಯು ವಿಶಿಷ್ಟ ಸ್ವರೋತ್ಥಾನಗಳಿಗೆ ಕಿವುಡಾಗಿ ವರ್ತಿಸುತ್ತದೆ. ಮೂಲಪೊರೆಯ ಹುರಿಗಳನ್ನು ಚಿಕ್ಕ ನರಗಳಾದ "ರೋಮಪುಟಗಳು" ಮಿದುಳಿಗೆ ಹೋಗುವ ನರದ ಹುರಿಗಳ ತುದಿಗಳನ್ನು ಕೂಡಿಸುತ್ತವೆ. ಮುಮ್ಮಿದುಳಿನ ಭಾಗವಾದ ಬದಿದಲೆಯ ಶ್ರಾವಣ ಕೇಂದ್ರ ಅಥವಾ ಪ್ರದೇಶಕ್ಕೆ ನರಪ್ರವಾಹವೊಂದು ಬಂದು ಮುಟ್ಟುವುದೇ ನಾವು ಕಿವಿಯಿಂದ ಕೇಳುವ ಕಾರ್ಯದ ಕೊನೆಯ ಹಂತ.

## ಕಿವುಡಿನ ಕಾರಣಗಳು

ಕಿವಿಯ ತಂಬಟೆಗೆ ಅಪಾಯವಾಗುವುದು, ನಡುಗಿವಿಯ ಎಲುಬುಗಳು ಸೆಟೆದುಕೊಳ್ಳುವುದು, ಅಂಡಾಕೃತಿಯ ದ್ವಾರಕ್ಕೆ, ಸುರುಳಿನಾಳಕ್ಕೆ ಅಥವಾ ಶ್ರಾವಣನರಗಳಿಗೆ ರೋಗ ಬರುವುದು ಅಥವಾ ಅಪಾಯವಾಗುವುದು; ಇಲ್ಲವೆ ಇತರ ಕಾರಣಗಳು ಕಿವುಡನ್ನುಂಟು ಮಾಡಬಹುದು. ಹೊರಗಿವಿ ಅಥವಾ ನಡುಗಿವಿಯಲ್ಲಿ ಕಿವುಡಿನ ಕಾರಣ ಅಂಕುರಿಸಿದಾಗ ಆ ದೋಷವನ್ನು ಎಲುಬಿನ ಮೂಲಕ ನಾದತರಂಗಗಳನ್ನು ಅಲ್ಪಾವರ್ತ ಮಾಡಿ ಕಳಿಸುವುದರಿಂದ ಪರಿಹಾರ ಮಾಡಬಹುದು. ಈ ಕಾರ್ಯಕ್ಕೆ ಒಂದು ಉಪಕರಣವನ್ನು ಬಳಸಲಾಗುತ್ತದೆ. ಅದು ನಾದತರಂಗಗಳನ್ನು ವಿಸ್ತರಿಸಿ ಕಿವಿಯ ಹಿಂದಿನ ಭಾಗದ ತಲೆಯೊಡನೆ ಸಂಬಂಧಿಸಲಾಗಿರುವ ಒಂದು ಕಂಪಿಸುವ ವಪೆಗೆ ಮುಟ್ಟುತ್ತದೆ. ಹೀಗೆ ನಾದತರಂಗಗಳು ತಲೆಬುರುಡೆಯ ಎಲಬುಗಳ ಮೂಲಕ ಒಳಗಿವಿಗೆ ನೇರವಾಗಿ ಮುಟ್ಟುವಂತೆ ಮಾಡಲಾಗುತ್ತದೆ.

ನಡುಗಿವಿಯನ್ನು ಗಂಟಲೊಡನೆ ಸಂಬಂಧಿಸುವ ನಾಳವನ್ನು "ಕಂಠಕರ್ಣನಾಳ" ಎನ್ನುತ್ತಾರೆ. ಈ ಕೊಳವೆಯ ಮೂಲಕ ಗಾಳಿಯು ನಡುಗಿವಿಗೆ ಹೋಗುತ್ತದೆ ಮತ್ತು ಅದು ಕಟ್ಟಿಕೊಂಡರೆ ತಂಬಟೆಯ ಇಬ್ಬದಿಯ ಗಾಳಿವೊತ್ತಡ ಅಸಮಾನವಾಗುತ್ತದೆ. ಬಿದಿಗೆಯ ಚಂದ್ರನಂತಿರುವ ನಾಲೆಗಳಿಗೂ ಶ್ರಾವಣ ಕ್ರಿಯೆಗೂ ಏನೂ ಸಂಬಂಧವಿಲ್ಲ; ಆದರೆ ಅವುಗಳ ಕಾರ್ಯವು ಸಮತೋಲವನ್ನು ಕಾದುಕೊಳ್ಳುವುದರಲ್ಲಿದೆ.

## ನಾದತರಂಗಗಳು

ಕೇಳುವುದಾದರೂ ನೋಡುವುದರಂತೆಯೇ ತರಂಗ ಅಥವಾ ಕಂಪಗಳಿಂದ ಪ್ರೇರ್ಯ. ಆದರೆ ಪ್ರಕಾಶ–ತರಂಗಗಳಿಗಿಂತ ನಾದ ತರಂಗಗಳು ಅನೇಕ ಬಗೆಯಿಂದ ಭಿನ್ನವಾಗಿವೆ. ಬೆಳಕು ಆಕಾಶದ ಮೂಲಕ ಹಾಯ್ದು ಹೋಗಬಲ್ಲುದು; ನಾದಕ್ಕೆ ತದಿತರ ಭೌತಿಕ ಮಾಧ್ಯಮ ಅವಶ್ಯಕ. ನಾದ–ಪ್ರಸಾರದ ಸಾಮಾನ್ಯ ಮಾಧ್ಯಮ ಗಾಳಿ; ಆದರೆ ನಾದದಲೆಗಳು ದ್ರವ, ಮೂಳೆ, ಲೋಹ ಮುಂತಾದ ಇತರ ಹಲವು ಮಾಧ್ಯಮಗಳ ಮೂಲಕ ಪ್ರಸರಿಸಬಲ್ಲುದು. ಬೆಳಕಿನಲೆಗಳಿಗಿಂತ ಸದ್ದಿನಲೆಗಳು ಅಗಲವೂ ಮಂದಗಾಮಿಗಳೂ ಆಗಿವೆ. ಬೆಳಕು ಒಂದು ಸೆಕಂದಿನಲ್ಲಿ ೧,೮೬,೦೦೦ ಮೈಲು ಓಡುತ್ತದೆ, ಅಥವಾ ಘಂಟೆಗೆ ೬೭೦೦ ಲಕ್ಷ ಮೈಲಿನಂತೆ ಚಲಿಸುತ್ತದೆ. ನಾದತರಂಗಗಳು ನಿಯತವಾಗಿರಬಹುದು ಇಲ್ಲವೆ ಅನಿಯತವಾಗಿರಬಹುದು. ಅನಿಯತ ತರಂಗಗಳು ಗದ್ದಲವನ್ನುಂಟು ಮಾಡಿದರೆ, ನಿಯತತರಂಗಗಳು ಸಂಗೀತದ ರಾಗ ಅಥವಾ ಧಾಟಿಗಳನ್ನು ಉಂಟುಮಾಡುತ್ತವೆ. ಆದರೆ ಗಲಾಟೆಗೂ ರಾಗಕ್ಕೂ ಸ್ಪಷ್ಟವಾದ ಪ್ರತ್ಯೇಕತೆಯಿಲ್ಲ. ನಮಗೆ ಕೇಳಿಬರುವಂಥವು ನಾದಗಳು; ಅವುಗಳಲ್ಲಿ ಕೆಲವು ಸರಾಗ, ಮತ್ತೆ ಕೆಲವು ಅರಾಗ ಎಂಬ ಗಣ್ಯ ಲಕ್ಷಣಗಳನ್ನು ತಾಳಿರುತ್ತವೆ: ಒಂದು ವರ್ಗರಾಗ ಪ್ರಧಾನ, ಇನ್ನೊಂದು ನೀರಾಗಪ್ರಧಾನ, ಅಷ್ಟೆ. ಒಂದು ಸಂಗೀತರಾಗದ ಸ್ವರೋತ್ಥಾನವು ನಾದತರಂಗದ ಆವೃತ್ತಿಯನ್ನವಲಂಬಿಸಿದೆ. ಒಂದೊಂದು

ಸೆಕುಂದಿಗೆ ಅಧಿಕ ಸಂಖ್ಯೆ ಕಂಪಗಳಾದರೆ ಸ್ವರೋತ್ಥಾನ ಎತ್ತರಿಸುತ್ತ ಹೋಗುತ್ತದೆ; ಸ್ವರದ ಸ್ಥಾಯಿಯ ತಾರತ್ವವು ಸೆಕುಂದಿಗಿಂತಿಷ್ಟೆಂಬ ಕಂಪಗಳ ಪುನರಾವೃತ್ತಿಯ ಸಂಖ್ಯೆಯ ಮೇಲೆ ನಿಂತಿದೆ. ಮನುಷ್ಯ ಕರ್ಣವು ಕೇಳಬಹುದಾದ ಅತಿ ಕೆಳಗಿನ ಸ್ವರೋತ್ಥಾನವು ಸುಮಾರು ಸೆಕುಂದಿಗೆ ಇಪ್ಪತ್ತು ಕಂಪಗಳುಳ್ಳದ್ದು; ಅತಿ ಮೇಲಿನದು ಸುಮಾರು ೨೦,೦೦೦ ಕಂಪಗಳುಳ್ಳದ್ದು. ಸಾಮಾನ್ಯವಾದ ದೊಡ್ಡ ಹಾರ್ಮೋನಿಯಮ್ಮಿನ ಸ್ವರದ ಪರಿಳಿತ ಅಥವಾ ಸ್ವರೋತ್ಥಾನ ಕ್ಷೇತ್ರವು ಸುಮಾರು ೨೫ ರಿಂದ ೪,೦೦೦ದ ವರೆಗಿದೆ.

ಬಾಳಿನ ಮೊದಲ ದಶೆಯಲ್ಲಿ ನಾವು ಉನ್ನತ ಸ್ವರೋತ್ಥಾನಗಳನ್ನು ಇಲ್ಲವೆ ತಾರಸ್ಥಾಯಿಯ ಸ್ವರಗಳನ್ನು ಕೇಳುವ ನಮ್ಮ ಶಕ್ತಿಯ ಪರಮಾವಧಿಯಲ್ಲಿ ಇರುತ್ತೇವೆ. ನಾವು ಸುಮಾರು ೨೫ರ ಮೆಟ್ಟಿಲನ್ನೇರಿದಾಗ ನಮ್ಮ ಆ ಶಕ್ತಿಯು ಕಡಿಮೆಯಾಗಲಾರಂಭಿಸುತ್ತದೆ. ಬಾವಲಿಯ ಕೂಗನ್ನು ೪೦ನ್ನು ಮೀರಿದ ಯಾವನೂ ಕೇಳಲಾರನೆಂದು ಹೇಳುವುದುಂಟು. ಪ್ರಾಣಿಗಳ ಶ್ರವಣಶಕ್ತಿಯ ಪರಮಾವಧಿಯು ಮನುಷ್ಯರದಕ್ಕಿಂತ ಬಹಳ ಹೆಚ್ಚಿನದಾಗಿದೆ. ಅವು ಕೇಳಬಲ್ಲರಾಗಗಳ ಕಂಪ–ಪ್ರಮಾಣವು ಸೆಕಂದಿಗೆ ೫೦,೦೦೦ದಷ್ಟು.

## ಸ್ವರೋತ್ಥಾನವನ್ನು ಬೇರ್ಪಡಿಸಿ ತಿಳಿದುಕೊಳ್ಳುವ ಬಗೆ

ಭಿನ್ನಕಂಪ ಪ್ರಮಾಣದ ರಾಗಗಳನ್ನು ಬೇರ್ಪಡಿಸಿ ತಿಳಿದುಕೊಂಬ ಶಕ್ತಿಯು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಆದರೆ ಅತ್ಯಂತ ತಜ್ಞ ಸಂಗೀತರಸಿಕನಾದರೂ ಮನುಷ್ಯನು ಇದರಲ್ಲಿ ನಾಯಿಯನ್ನು ಸರಿಗಟ್ಟಲಾರ. ಸೆಕುಂದಿಗೆ ೬೦೦ ರಿಂದ ೫೦೦೦ ಕಂಪಗಳವರೆಗಿನ ಕ್ಷೇತ್ರದಲ್ಲಿ ಸ್ವರೋತ್ಥಾನವಿವೇಕವು ಅತ್ಯಂತ ನಿಶ್ಚಿತವಾಗಿರಬಲ್ಲುದು. ವರ್ಣಚಕ್ರದ ಮಧ್ಯದಲ್ಲಿಯ ತರಂಗಮಾನಕ್ಕೆ ಕಣ್ಣು ಅತ್ಯಂತ ಹೆಚ್ಚಿನ ಗ್ರಾಹಕವಾಗಿರುವಂತೆಯೇ ಮಧ್ಯ ಕ್ಷೇತ್ರದಲ್ಲಿಯ ನಾದತರಂಗಗಳನ್ನು ಕಿವಿಯಾದರೂ ಅತ್ಯಂತ ಸ್ಪಷ್ಟವಾಗಿ ಗ್ರಹಿಸಬಲ್ಲುದು. ಈ ಕ್ಷೇತ್ರ ಪರಿಮಿತಿಯಲ್ಲಿ ಬಹುಸಂಖ್ಯ ಮಾನವರು ಸೆಕುಂದಿಗೆ ಸುಮಾರು ನೂರರಲ್ಲಿ ಮೂರರಷ್ಟು ಆವೃತ್ತಿ ಪ್ರಮಾಣದ ವ್ಯತ್ಯಾಸಗಳನ್ನು ಪ್ರತ್ಯೇಕಿಸಿ ಗುರುತಿಸಬಲ್ಲರು ಅಂದರೆ, ಅವರು ಅನುಕ್ರಮವಾಗಿ ಈ ಕೆಳಗಿನ ಕಂಪ–ಪ್ರಮಾಣಗಳುಳ್ಳ ರಾಗದಂಪತಿಗಳಲ್ಲಿ ಒಬ್ಬೊಬ್ಬರನ್ನೂ ಮತ್ತೊಬ್ಬರಿಂದ ಬೇರ್ಮಾಡಿ ತಿಳಿಯಬಲ್ಲರು: ೧೦೦೦ ಮತ್ತು ೧೦೦೩; ೨೦೦೦ ಮತ್ತು ೨೦೦೬; ಇಲ್ಲವೆ ೩೦೦೦ ಮತ್ತು ೩೦೦೯. ೫೦೦೦ಕ್ಕಿಂತ ಹೆಚ್ಚಿನ ಆವೃತ್ತಿಗಳಲ್ಲಿ ಕಿವಿಯ ಗ್ರಹಣಕ್ಕೆ ಶತಪ್ರಮಾಣದ ವ್ಯತ್ಯಾಸವು ಸ್ವಲ್ಪ ಹೆಚ್ಚಾಗಿರಬೇಕಾಗುತ್ತದೆ; ಅತಿ ಕೆಳಮಟ್ಟದ ಶ್ರವ್ಯಾವೃತ್ತಿಗೆ ಅದು ನೂರಕ್ಕೆ ಐದರಷ್ಟು ಹೆಚ್ಚಾಗಿರಬೇಕು.

## ನಾದಗಳ ಸಂಯೋಗ ಮತ್ತು ವಿಭಾಗ

ಎರಡು ರಾಗಗಳನ್ನು ಒಟ್ಟಿಗೆ ಎತ್ತಿದಾಗ ಮಧ್ಯಮ ಕಂಪ–ಪ್ರಮಾಣದ ಒಂಟಿರಾಗವೊಂದನ್ನು ಬೇರೆಯಾಗಿ ನಾವು ಕೇಳಲಾರೆವು: ನಮಗೆ ಕೇಳಿಸುವುದೊಂದು

13 (a)




13 (b)



(a) STRUCTURE OF THE EAR
(b) SECTION SHOWING COURSE OF A SOUND WAYS

ರಾಗಸಂಯೋಗ. ಅದರ ಫಲ ಸಮಶ್ರುತಿಯೋ ಅಪಶ್ರುತಿಯೋ ಎಂಬುದು ಆ ರಾಗಗಳ ಆವೃತ್ತಿ ಪ್ರಮಾಣಗಳ ನಡುವಿನ ನಿಯತಾಂತರವನ್ನವಲಂಬಿಸುತ್ತದೆ. ಇನ್ನು ಅಂಥ ರಾಗಸಂಯೋಗವು ನಮಗೆ ಚಿರಪರಿಚಿತವಾಗಿರುವುದು ಮತ್ತು ಅದನ್ನು ತಕ್ಕ ಚೌಕಟ್ಟಿನಲ್ಲಿಡುವುದು ಮುಂತಾದ ಕಾರಣಗಳೂ ಇವೆ ಎನ್ನಿ.

ಸಾಮಾನ್ಯವಾಗಿ ಎಷ್ಟೋ ವೇಳೆ ಒಂದೇ ಕಾಲದಲ್ಲಿ ವಿವಿಧ ಶಬ್ದಗಳ ಗೊಂದಲವನ್ನು ನಾವು ಕೇಳುತ್ತೇವೆ. ಹೀಗಾದಾಗ ಬೇರೆ ಬೇರೆ ಶಬ್ದಗಳು ಪ್ರತ್ಯೇಕವಾಗಿ ನಮ್ಮ ಕಿವಿಗಳನ್ನು ಹೋಗುವುದಿಲ್ಲ; ಅವೆಲ್ಲ ಸೇರಿ ಒಂದು ಸಂಮಿಶ್ರ ನಾದ ಚಲನೆಯಾಗಿ ನಮ್ಮ ಕಿವಿಯನ್ನು ಹೊಕ್ಕು ಅದರ ತಂಬಟೆಯನ್ನು ಮುಟ್ಟುವುವು. ಈ ವಿವಿಧ ಬಗೆಯ ಗಲಭೆಗಳ ಭಿತ್ತಿಯಲ್ಲಿ ನಾವು ಯಾವುದಾದರೂ ಒಂದು ವ್ಯಕ್ತಿಯ ಅಥವಾ ವಾದ್ಯದ ಸ್ವರವನ್ನು ಗುರುತಿಸುತ್ತೇವೆ. ನಮ್ಮ ಶಬ್ದವಿಭಾಗ–ಶಕ್ತಿಯು ಕಿವಿಯಲ್ಲಿರುವ ಮೂಲ ಪೊರೆಯ ವ್ಯತ್ಯಸ್ತ ಕಂಪನವನ್ನು ಅವಲಂಬಿಸಿದೆ ಎಂದು ಹೇಳಲಾಗುತ್ತದೆ. ಆ ಪೊರೆಯ ಬೇರೆ ಬೇರೆ ಭಾಗಗಳು ಬೇರೆ ಬೇರೆ ತರಂಗಮಾನಗಳಿಗೆ ಅನುಕ್ರಿಯೆಯೆಸಗಬಲ್ಲವಾದುದರಿಂದ ಸಂಮಿಶ್ರನಾದದ ತರಂಗವು ಅದರ ಬೇರೆ ಬೇರೆ ಭಾಗಗಳಲ್ಲಿ ಕಂಪವುಂಟುಮಾಡುತ್ತದೆ; ಮತ್ತು ಅದರ ಒಂದೊಂದು ಭಾಗವೂ ಸಂಮಿಶ್ರನಾದ ತರಂಗದ ಮೂಲ ಘಟಕವೊಂದೊಂದಕ್ಕೆ ಅನುಗುಣವಾಗುತ್ತದೆ ಎಂದು ವಿವರಣೆ ಕೊಡುವುದುಂಟು. ಆದರೆ ಕೆಲ ಮನಃಶಾಸ್ತ್ರಜ್ಞರು ಇದನ್ನು ಸ್ವೀಕರಿಸುವುದಿಲ್ಲ. ಅವರ ಪ್ರಕಾರ ಈ ಸಂಮಿಶ್ರನಾದತರಂಗದ ವಿಭಜನೆಯು ಸಂಪೂರ್ಣವಾಗಿ ಮಿದುಳಿನಲ್ಲೇ ನಡೆಯುತ್ತದೆ.

## ಜೋರಾದ ಶಬ್ದ ಮತ್ತು ಧ್ವನಿಗುಣ

ಸ್ವರೋತ್ಥಾನದಲ್ಲಲ್ಲದೆ ಶಬ್ದಗಳು (ಧ್ವನಿ ಇಲ್ಲವೆ ನಾದ) ಜೋರು ಮತ್ತು ಧ್ವನಿಗುಣಗಳಲ್ಲೂ ಭಿನ್ನವಾಗಿರುತ್ತವೆ. ನಾದದ ಜೋರು ಕಂಪದ ವಿಸ್ತಾರವನ್ನಾಧರಿಸುತ್ತದೆ. ಅದರ ಉತ್ಥಾನಕ್ಕೂ ಜೋರಿಗೂ ಇರುವ ಸಂಬಂಧವು ಬಣ್ಣದಲ್ಲಿಯ ವರ್ಣ ಗುಣಕ್ಕೂ ಪ್ರಕಾಶವತ್ತೆಗೂ ಇರುವ ಸಂಬಂಧವನ್ನು ಹೋಲುತ್ತದೆ. ಒಂದೇ ಕಂಪ ಪ್ರಮಾಣದ ಎರಡು ನಾದದಲೆಗಳು ಭಿನ್ನ ವಿಸ್ತಾರಮಾನದವಾಗಿರುವಾಗ ಬೇರೆ ಬೇರೆ ಜೋರಿನ ಒಂದೇ ಉತ್ಥಾನವುಳ್ಳ ರಾಗಗಳನ್ನು ಉಂಟುಮಾಡುತ್ತವೆ.

ಭಿನ್ನ ಭಿನ್ನ ವಾದ್ಯಗಳ ವಿಶಿಷ್ಟ ಗುಣವನ್ನು ಧ್ವನಿಗುಣವೆನ್ನಲಾಗುತ್ತದೆ. ವೀಣೆಯಲ್ಲಿಯೂ ಹಾರ್ಮೋನಿಯಮ್ಮಿನಲ್ಲಿಯೂ ಒಂದೇ ರಾಗವನ್ನು ನುಡಿಸಿದರೂ ಅವುಗಳ ಭೇದ ಸ್ಪಷ್ಟವಾಗಿ ಗೊತ್ತಾಗುತ್ತದೆ. ಧ್ವನಿಗುಣ ಭೇದವೇ ಅದಕ್ಕೆ ಕಾರಣ. ಧ್ವನಿಗುಣವು ಜನ್ಯ ತರಂಗಗಳಿಗೆ ಸೇರಿದ್ದು. ಪ್ರತಿಯೊಂದು ನಿಯತನಾದರಂಗವನ್ನೂ ಇತರ ಜನ್ಯತರಂಗಗಳು ಅನುಸರಿಸುತ್ತವೆ. ಮೂಲತರಂಗದ ಕಂಪ–ಪ್ರಮಾಣಕ್ಕೆ ಸರಿಯಾದ ಗುಣಿತಪ್ರಮಾಣದಲ್ಲಿ ಜನ್ಯ ತರಂಗಗಳ ಕಂಪ–ಪ್ರಮಾಣಗಳಿರುತ್ತವೆ. ಸೆಕಂದಿಗೆ ೧೦೦ರಂತೆ ಕಂಪಿಸುವ ಮೂಲತರಂಗವು ೨೦೦, ೩೦೦, ೪೦೦ರ ಜನ್ಯತರಂಗಗಳನ್ನು ಹುಟ್ಟಿಸುತ್ತದೆ. ಈ

ಜನ್ಯತರಂಗಗಳನ್ನು ಉತ್ತರರಾಗಗಳೆಂದೂ ಹೇಳುತ್ತಾರೆ. ಉತ್ತರರಾಗಗಳ ಸಂಖ್ಯೆ–ಸಾಮರ್ಥ್ಯಗಳೇ ಪ್ರತಿಯೊಂದು ವಾದ್ಯಕ್ಕೂ ಅದರದರ ವಿಶಿಷ್ಟ ಧ್ವನಿಗುಣವನ್ನು ಕೊಡುತ್ತವೆ. ಕಂಪನೋಪಕರಣವು (Turning Fork) ಪೂರ್ಣ ಶುದ್ಧ ರಾಗವನ್ನು ಉಂಟುಮಾಡುತ್ತದೆ. ಅದರಿಂದಲೇ ಸಂಗೀತದ ಪಕ್ಕವಾದ್ಯಗಳಲ್ಲಿ ಕೊಳಲಿನ ರಾಗವು ಒಂದೇ ಇದ್ದಾಗ ಅದು ಬಹಳ ತೆಳ್ಳಗಾಗಿಯೂ ಸಪ್ಪೆಯಾಗಿಯೂ ಕೇಳಿಸುತ್ತದೆ.

## ನಾಲಿಗೆಯ ಸಂವೇದನೆಗಳು

ಮೂಲಭೂತ ರುಚಿಗಳು ನಾಲ್ಕು; ಉಪ್ಪು, ಹುಳಿ, ಸಿಹಿ ಮತ್ತು ಕಹಿ. ನಾಲಿಗೆಯ ತುದಿಗೆ ಸಿಹಿ ಗೊತ್ತಾದರೆ, ಅದರ ಬದಿಗಳಿಗೆ ಹುಳಿ ಗೊತ್ತಾಗುತ್ತದೆ. ಅದರ ಹಿಂಬದಿಗೆ ಕಹಿಯ ಸಂವೇದನೆಯೂ, ತುದಿ–ಬದಿಗಳಿಗೆ ಉಪ್ಪಿನ ಸಂವೇದನೆಯೂ ಆಗುತ್ತವೆ ಎಂದು ಸ್ಥೂಲವಾಗಿ ಹೇಳಬಹುದು. ನಾಲಿಗೆಯಲ್ಲಿ ನಿಜವಾಗಿ ರುಚಿಯನ್ನು ಗ್ರಹಿಸುವ ಅವಯವಗಳೆಂದರೆ ರುಚಿ–ಮೊಗ್ಗೆಗಳು. ಅವು ಅದರ ಮೇಲ್ ಮೈಯ ಅಡಿಯಲ್ಲಿ ಅಡಗಿವೆ. ನಾವು ಬಾಯಲ್ಲಿ ಒಂದು ತುತ್ತು ಅನ್ನವನ್ನು ಹಾಕಿಕೊಂಡರೆ ಅದು ಚೂರುಚೂರಾಗಿ ಲಾಲಾರಸ ಅಥವಾ ನೀರಿನಲ್ಲಿ ಕರಗಿ ನಾಲಿಗೆಯಲ್ಲಿರುವ ಅಸಂಖ್ಯ ಸಣ್ಣ ತೂತುಗಳ ಮೂಲಕ ರುಚಿ–ಮೊಗ್ಗೆಗಳನ್ನು ಮುಟ್ಟುತ್ತದೆ.

ಮೂಲಭೂತ ರುಚಿಗಳು ನಾಲ್ಕೆಂದು ಹೇಳಿದ್ದು ವೈಜ್ಞಾನಿಕ ದೃಷ್ಟಿಯಿಂದ. ನಮ್ಮ ಪರಂಪರೆಯಲ್ಲಿ ಆರು ರುಚಿಗಳು ಪ್ರಸಿದ್ಧವಾಗಿವೆ. ಸೂಕ್ಷ್ಮಮತಿಗಳು ಈ ಆರರ ಪಟ್ಟಿಗೆ ಇನ್ನು ಎಷ್ಟನ್ನು ಬೇಕಾದರೂ ಸೇರಿಸಿಯಾರು. ಆದರೆ ಉಕ್ತ ನಾಲ್ಕರಿಂದ ಭಿನ್ನವಾದ ರುಚಿಗಳೆಲ್ಲವೂ ನಮ್ಮ ಮೂಗು ಮತ್ತು ಚರ್ಮಗಳು ಕೂಡಿಸಿಕೊಟ್ಟಂಥ ರಸಗಳು (Flavours). ಹವೆಯಿಂದ ರುಚಿಯಲ್ಲಿ ಬದಲಾವಣೆಯಾಗುವುದುಂಟು. ಮಂಜುಗಡ್ಡೆಯಲ್ಲಿ ಇಟ್ಟು ತಣಿಸಿದ ಕಾಫಿಯ ರುಚಿಗಿಂತ ಬಿಸಿ ಕಾಫಿಯ ರುಚಿ ಭಿನ್ನ. ಬಾಯಿಯಲ್ಲಿ ಹಾಕಿಕೊಂಡ ಪದಾರ್ಥದ ಒರಟು ಅಥವಾ ನಯವೂ ರುಚಿವ್ಯತ್ಯಾಸಕ್ಕೆ ಕಾರಣವಾಗುತ್ತದೆ. ಹರಳು ಸಕ್ಕರೆಯ ರುಚಿಗೂ ಪುಡಿ ಸಕ್ಕರೆಯ ರುಚಿಗೂ ವ್ಯತ್ಯಾಸವಿದೆ. ಈ ಎರಡು ತರದ ಸಕ್ಕರೆಗಳೂ ನಾಲಿಗೆಯ ಮೇಲ್ಭಾಗವನ್ನು ಮುಟ್ಟಿದಾಗ, ಅವು ಉಂಟುಮಾಡುವ ಚರ್ಮಸಂವೇದನೆಗಳು ಭಿನ್ನ. ಆದರೆ ರುಚಿಯ ಮೇಲೆ ಸ್ಪರ್ಶಕ್ಕಿಂತ ವಾಸನೆ ಮಾಡುವ ಪರಿಣಾಮ ಹೆಚ್ಚಿನದು. ಸೂಕ್ಷ್ಮವೆಂದು ಹೇಳಲಾಗುವ ನಮ್ಮ ಅನೇಕ ರುಚಿವಿಶೇಷಗಳು ನಿಜವಾಗಿ ನೋಡಿದರೆ ಮೂಗಿಗೂ ಬಾಯಿಗೂ ನಡುವಿನ ವಾಯುಮಾರ್ಗಗಳ ಮೂಲಕ ಮುಟ್ಟಿದ ವಾಸನೆಗಳೇ. ಬಲವಾಗಿ ನೆಗಡಿಯಾದಾಗ ನಮ್ಮ ರುಚಿಸಂವೇದನೆಗಳೆಲ್ಲಾ ನಾಶ ಹೊಂದುವುದೇ ಇದಕ್ಕೆ ಸಾಕ್ಷಿ. ರುಚಿಯನ್ನಲ್ಲದೆ ನಾಲಿಗೆಯು ಸ್ಪರ್ಶ, ಉಷ್ಣಸ್ಪರ್ಶ, ಶೀತಸ್ಪರ್ಶಗಳನ್ನು ಗ್ರಹಿಸಬಲ್ಲುದು. ಈ ಸ್ಪರ್ಶಗಳೂ ಎಷ್ಟೋ ಸಲ ರುಚಿಯೊಡನೆ ಸೇರಿ ರಸ ಹುಟ್ಟಿಸುತ್ತವೆ.

## ಮೂಗಿನ ಸಂವೇದನೆಗಳು

ಮೂಗಿನ ಹೊಳ್ಳೆಯ ಒಳಗಿರುವ ಗಂಧಗ್ರಾಹಕ ಪೊರೆಯೇ ವಾಸನೆಯನ್ನು ತಿಳಿಯುವ ಸಾಧನ. ವಾಸನೆಗಳು ಆರು: ದಾಲಚಿನ್ನಿಯಂಥ ಸಂಬಾರದ ದಿನಸಿನ ವಾಸನೆ, ಚಾಕಲೇಟು ಮುಂತಾದವುಗಳಿಗೆ ಹಾಕುವ ಹೂವಿನ ಪರಿಮಳ, ಹಣ್ಣಿನ ವಾಸನೆ, ನೀಲಗಿರಿ ಎಣ್ಣೆಯಲ್ಲಿರುವಂಥ ಸುಟಿಯಾದ ವಾಸನೆ, ಡಾಮರ್ ಎಣ್ಣೆಯಿಂದ ಬರುವ ಸುಟ್ಟ ವಾಸನೆ ಮತ್ತು ಕೊಳೆತ ಪದಾರ್ಥಗಳ ವಾಸನೆ. ಗಂಧಗ್ರಾಹಕಪೊರೆಯ ಬೇರೆ ಬೇರೆ ಭಾಗಗಳು ಬೇರೆ ಬೇರೆ ವಾಸನೆಗಳನ್ನು ಗ್ರಹಿಸುತ್ತಿರಬಹುದು. ಕೆಲವು ಕಾಯಿಲೆಗಳಲ್ಲಿ ರೋಗಿಗೆ ಕೆಲವು ವಾಸನೆಗಳು ಗೊತ್ತಾಗುವುದಿಲ್ಲ. ಸಮಸ್ಥಿತಿಯ ಮನುಷ್ಯರೂ ಕೂಡ ಕೆಲವೊಂದು ವಾಸನೆಗಳನ್ನು ಬಹಳ ಹೊತ್ತು ತೆಗೆದುಕೊಂಡರೆ ಸುಸ್ತಾಗುತ್ತಾರೆ. ಆಮೇಲೆ ಸ್ವಲ್ಪ ಕಾಲ ಅವರಿಗೆ ಆ ವಾಸನೆಗಳನ್ನು ಗ್ರಹಿಸುವ ಶಕ್ತಿಯೇ ಇರುವುದಿಲ್ಲ. ಬಹಳ ಕಾಲ ಕರ್ಪೂರವನ್ನು ಮೂಸಿದ ಮನುಷ್ಯನಿಗೆ ಹೆಂಡದ ವಾಸನೆಯು ಗೊತ್ತಾಗುವುದಿಲ್ಲ; ಆದರೆ ಅಯೋಡಿನ್ನಿನ ವಾಸನೆ ಮಾತ್ರ ಗೊತ್ತಾಗುತ್ತದೆ. ಇಲ್ಲಿಯೂ ಸಹ ನಮ್ಮ ವಾಸನೆಗಳಲ್ಲಿ ಚರ್ಮದ ಮತ್ತು ನಾಲಿಗೆಯ ಸಂವೇದನೆಗಳು ಸಮ್ಮಿಶ್ರವಾಗಿರುತ್ತವೆ. ಕ್ಲೋರೋಫಾರಮ್ಮಿನ ಮಧುರಗಂಧವು ಹೆಚ್ಚಾಗಿ ರುಚಿಗೆ ಸೇರಿದ್ದು. ಅಮೋನಿಯದ ಸ್ವಾಭಾವಿಕ ವಾಸನೆಯು ಹೆಚ್ಚಾಗಿ ನೋವಿನ ಸಂವೇದನೆಗೆ ಸೇರಿದ್ದು.

## ಚರ್ಮದ ಸಂವೇದನೆಗಳು

ಇಂದ್ರಿಯಗಳಲ್ಲೆಲ್ಲ ಚರ್ಮವು ಅತ್ಯಂತ ಸರಳವಾದುದು. ಅದರ ಸಂವೇದನೆಗೆ ಸ್ಪರ್ಶವೆಂದು ಹೆಸರು. ಈ ಸ್ಪರ್ಶದಲ್ಲಿ ನಾಲ್ಕು ಬಗೆಗಳಿವೆ. ಈ ನಾಲ್ಕಕ್ಕೂ ಬೇರೆ ಬೇರೆ ಇಂದ್ರಿಯಾವಯವಗಳಿವೆ. ತಂಪು, ಬಿಸಿ, ಒತ್ತಡ ಮತ್ತು ನೋವು ಎಂಬಿವೇ ಆ ನಾಲ್ಕು ಚರ್ಮಸಂವೇದನೆಗಳು. ಉಕ್ತ ಸಂವೇದನೆಗಳಿಗೆ ಸಂಬಂಧಿಸಿದ ಇಂದ್ರಿಯಾವಯವಗಳು ಚರ್ಮದ ಮೇಲ್‌ಪೊರೆಯ ಒಳಗಿರುತ್ತವೆ. ಚರ್ಮದ ಯಾವ ಭಾಗವನ್ನು ತೆಗೆದುಕೊಂಡರೂ ಈ ನಾಲ್ಕು ಕೇಂದ್ರಗಳು ಭಿನ್ನ ಪ್ರಮಾಣಗಳಲ್ಲಿ ಇರುತ್ತವೆ. ರೋಮ ಹೆಚ್ಚಾಗಿ ಬೆಳೆಯದಿರುವ ಚರ್ಮದ ಒಂದು ಭಾಗದಲ್ಲಿ ಶಾಯಿಯಿಂದ ಒಂದು ಅಂಗುಲದ ಚೌಕವನ್ನು ಗುರುತು ಮಾಡಿರಿ. ಮೊದಲು ಆ ಪ್ರದೇಶದ ಮೇಲೆ ಮೆಲ್ಲಗೆ, ತಣ್ಣಗಿರುವ ಸೂಜಿಯೊಂದನ್ನು ಓಡಾಡಿಸಿರಿ. ಆಗ ಕೆಲ ಸ್ಥಳಗಳಲ್ಲಿ ತಪ್ಪದೆ ಶೀತ ಸಂವೇದನೆ ಉಂಟಾಗುತ್ತದೆ. ಈ ಸ್ಥಳಗಳೇ ಶೀತಸ್ಥಳಗಳು. ಮಿಕ್ಕ ಕಡೆಗಳಲ್ಲಿ ಯಾವ ಸಂವೇದನೆಯೂ ಉಂಟಾಗುವುದಿಲ್ಲ; ನಮ್ಮ ಪ್ರೇರಣೆಯು ಬೇರೆ ಬಗೆಯ ಸ್ಥಳವನ್ನು ಮುಟ್ಟಿದ್ದರಿಂದ ಅನುಕ್ರಿಯೆ ಉಂಟಾಗುವುದಿಲ್ಲ. ಶೀತ ಸ್ಥಳಗಳನ್ನು ಕಂಡುಹಿಡಿಯುವುದು ಎಲ್ಲಕ್ಕಿಂತಲೂ ಸುಲಭ. ಉಷ್ಣ ಸ್ಥಳಗಳನ್ನು ಕಂಡುಹಿಡಿಯುವುದು ಅದಕ್ಕಿಂತ ಕಷ್ಟ. ಏಕೆಂದರೆ ಅವು ಚರ್ಮದಲ್ಲಿ ಹೆಚ್ಚು ಆಳವಾದ ಕಡೆ ಇರುತ್ತವೆ. ಬೆಚ್ಚಗಿರುವ ಸೂಜಿಯನ್ನು ಮೇಲಿನಂತೆಯೆ ಉಕ್ತ ಚರ್ಮದ ಭಾಗದ ಮೇಲೆ ಓಡಾಡಿಸಿದಾಗ ಉಷ್ಣಸ್ಥಳಗಳು ಸಿಗುತ್ತವೆ. ಚರ್ಮದ

14




15




THE LOCATION OF TASTE CELLS ON THE HUMAN TONGUE

ಉಷ್ಣಮಾನವು ಮೈಯ ಬೇರೆ ಬೇರೆ ಕಡೆಗಳಲ್ಲಿ ಬೇರೆಬೇರೆಯಾಗಿ ಇರುತ್ತದೆ. ಥಂಡಿಯ ದಿವಸಗಳಲ್ಲಿ ನಮ್ಮ ಮೈಯನ್ನು ಮುಚ್ಚಿಕೊಂಡ ಭಾಗಕ್ಕಿಂತ ತೆರೆದ ಭಾಗವು ಹೆಚ್ಚು ತಣ್ಣಗಾಗಿರುತ್ತದೆ. ವಿಶಿಷ್ಟ ಚರ್ಮಭಾಗದ ವಿಶಿಷ್ಟಾವಧಿಯ ಉಷ್ಣಮಾನವನ್ನು 'ಶರೀರ ಶಾಸ್ತ್ರೀಯ ಶೂನ್ಯ ಸ್ಥಳ'ವೆನ್ನುತ್ತಾರೆ (Physiological Zero Point). ಉಷ್ಣಪ್ರೇರಣೆಯು ಪರಿಣಾಮಕಾರಿಯಾಗಬೇಕಾದರೆ ಚರ್ಮದ ಉಷ್ಣಮಾನವು ಈ ಶೂನ್ಯಸ್ಥಳಕ್ಕಿಂತ ಮೇಲಿರಬೇಕಾಗುತ್ತದೆ. ಸಾಮಾನ್ಯವಾಗಿ, ಆಯಾ ಪ್ರೇರಣಾನುಸಾರವಾಗಿ ಶೀತಸ್ಥಳವು ಶೀತಾನುಕ್ರಿಯೆಯನ್ನು ಉಂಟುಮಾಡಿದರೆ, ಉಷ್ಣಸ್ಥಳವು ಉಷ್ಣಾನುಕ್ರಿಯೆಯನ್ನು ಉಂಟುಮಾಡುತ್ತದೆ. ಆದರೆ ಕೆಲವೊಮ್ಮೆ ಶೀತ ಪ್ರೇರಣೆಯು ಉಷ್ಣಸ್ಥಳವನ್ನು ಮುಟ್ಟಿದಾಗ ಉಷ್ಣಾನುಕ್ರಿಯೆ ಉಂಟಾಗುತ್ತದೆ. ಹಾಗೆಯೇ ಉಷ್ಣಪ್ರೇರಣೆಯು ಶೀತಸ್ಥಳವನ್ನು ಮುಟ್ಟಿದರೆ, ಶೀತಾನುಕ್ರಿಯೆ ಉಂಟಾಗುತ್ತದೆ. ಇವಕ್ಕೆ 'ವ್ಯತಿರೇಕ ಉಷ್ಣಸಂವೇದನೆ' ಮತ್ತು 'ವ್ಯತಿರೇಕ ಶೀತಸಂವೇದನೆ' ಎನ್ನುತ್ತಾರೆ. ಶೀತಸ್ಥಳವು ಎಲ್ಲ ಪ್ರೇರಣೆಗೂ ಶೀತಾನುಕ್ರಿಯೆಯನ್ನೇ ಉಂಟುಮಾಡುತ್ತದೆ. ಅದೇ ಮೇರೆಗೆ ಉಷ್ಣ ಸ್ಥಳವು ಎಲ್ಲ ಪ್ರೇರಣೆಗೂ ಉಷ್ಣಾನುಕ್ರಿಯೆಯನ್ನೇ ಉಂಟುಮಾಡುತ್ತದೆ.

ಹಿಂಸೆ ಅಥವಾ ನೋವಿನ ಕೇಂದ್ರಗಳನ್ನು ಸುಲಭವಾಗಿ ಗೊತ್ತುಮಾಡಬಹುದು. ಇವು ಬಹಳವಾಗಿವೆ. ಶರೀರಕ್ಕೆ ಅಪಾಯವಾಗುವುದನ್ನು ಸೂಚಿಸುವುದರಿಂದ ಇದೊಂದು ರಕ್ಷಣಾ ತಂತ್ರವಾಗಿದೆ. ಇವು ಬಹಳ ಚುರುಕಾಗಿದ್ದರೂ ಚರ್ಮದ ಆಳದಲ್ಲಿ ಇರುತ್ತವೆ. ಅಂಥ ಕೇಂದ್ರಗಳ ನಡುವಿನ ಸ್ಥಳವು ಯಾವ ನೋವನ್ನೂ ಗ್ರಹಿಸಲಾರದು. ನೋವನ್ನು ಗ್ರಹಿಸದ ಈ ಭಾಗವಾದರೂ ಒಂದು ರಕ್ಷಣಾತಂತ್ರವೇ. ಅದು ಅನವಶ್ಯಕವಾಗಿ ನಾವು

16




CUTANEOUS RECEPTORS

| | | | |
|---|---|---|---|
| A. | Hair folicle | B. | Meissner Corpuscle |
| C. | Pacinian Corpuscle | D. | Ruffini Corpuscle |
| E. | Drouse corpuscle | F. | Free nurve endings |

ನೋವಿನ ಅಪಾಯಕ್ಕೆ ಗಾಬರಿಗೆಡದಂತೆ ನೋಡಿಕೊಳ್ಳುತ್ತದೆ. ಸೂಜಿಯಿಂದ ನೋವಿನ ಕೇಂದ್ರಗಳನ್ನು ಗುರುತಿಸುವುದು ಸುಲಭ.

ಶೀತೋಷ್ಣ ಕೇಂದ್ರಗಳಿಗಿಂತ ಒತ್ತಡ ಅಥವಾ ಸಂಮರ್ದದ ಕೇಂದ್ರಗಳು ಹೆಚ್ಚಾಗಿವೆ. ಆದರೆ ಅವುಗಳ ಸಂಖ್ಯೆ ನೋವಿನ ಕೇಂದ್ರಗಳಿಗಿಂತ ಕಡಿಮೆ. ಅವು ಮೈತುಂಬ ಇವೆ. ಚರ್ಮದಲ್ಲಿರುವ ಪ್ರತಿಯೊಂದು ರೋಮದ ಬುಡದಲ್ಲಿಯೂ ಒಂದೊಂದು ಒತ್ತಡ ಕೇಂದ್ರವಿದೆ. ಅವು ನೀರೋಮ ಸ್ಥಳಗಳಲ್ಲಿಯೂ ಇರುತ್ತವೆ. ಅವನ್ನು ಹುಡುಕಲು ಕುದುರೆಯ ಒರಟಾದ ರೋಮವನ್ನು ಹಿಂದೆ ಹೇಳಿದಂತೆ ಮೈಮೇಲೆ ಆಡಿಸಬೇಕು. ಆದರೆ ಅದರ ಒತ್ತಡ ಚರ್ಮದ ಮೇಲೆ ಒಂದೇ ಸಮನಾಗಿರಬೇಕಲ್ಲದೆ ಹೆಚ್ಚಾದರೆ ನೋವಿನ ಸಂವೇದನೆ ಆದೀತು. ಹಿಂಸೆ–ಸಂಮರ್ದಗಳ ನೈಷೇಧಿಕ ಮುಖಗಳ ಸಂವೇದನೆಗಳು ಅನುಕ್ತ.

## ಮಾಂಸಲ ಸಂವೇದನೆ

ಈ ಸಂವೇದನೆಯು ನಮಗೆ ಶರೀರದ ಚಲನೆ, ಇತರ ಪದಾರ್ಥಗಳನ್ನು ಅದು ಅವರೋಧಿಸುವುದು ಮತ್ತು ನಮ್ಮ ಕೈಗಳಿಂದ ವಿವಿಧ ಪದಾರ್ಥಗಳನ್ನು ಎತ್ತಿದಾಗ ಅವುಗಳ ಭಾರ–ಇವನ್ನು ತಿಳಿಸುವುದು. ಯಾವುದಾದರೊಂದು ಭಾರವಾದ ವಸ್ತುವನ್ನು ನಾವು ಎತ್ತಿದರೆ, ಕೈಯಲ್ಲಿ ಒತ್ತಡದ ಸಂವೇದನೆಯಾಗುವುದಲ್ಲದೆ, ಕಷ್ಟದ ಭಾವನಾಂಶವು ತಿಳಿದು ಬರುತ್ತದೆ. ಅಂಥ ಸಂವೇದನೆಯು ಮುಷ್ಟಿಯನ್ನು ಬಿಗಿಮಾಡಿಕೊಂಡಾಗಲೂ ಉಂಟಾಗುವುದು. ಇದು ಚರ್ಮಸ್ಪರ್ಶಕ್ಕೆ ಮೀರಿದ್ದು. ಏಕೆಂದರೆ ಇದು ಚರ್ಮ ಸಂವೇದನೆಯ ಶಕ್ತಿಯನ್ನು ಸಂಪೂರ್ಣ ಕಳೆದುಕೊಂಡವರಲ್ಲಿಯೂ ಕಂಡುಬಂದಿದೆ. ಭಾರದ ಸಂವೇದನೆಯು ಕೇವಲ ಒತ್ತಡಕ್ಕೇ ಒಳಗಾಗಿದ್ದರೆ ಒಂದು ವಸ್ತುವನ್ನು ನಾವು ಎತ್ತಿದ ಕೂಡಲೇ ಅದರ ಭಾರವೆಷ್ಟೆಂಬುದನ್ನು ಹೇಳಲು ನಮಗೆ ಸಾಧ್ಯವಾಗಬೇಕಿತ್ತು. ಆದರೆ ನಮ್ಮ ಕೈಯನ್ನು ಅನೇಕ ಸಲ ಮೇಲೆ ಕೆಳಗೆ ಆಡಿಸಿದ ಹೊರತು ಹಾಗೆ ಹೇಳಲು ಸಾಧ್ಯವಾಗುವುದಿಲ್ಲ. ಆದುದರಿಂದ ಸ್ಪರ್ಶಸಂವೇದನೆಯು ಕೊಡುವ ನೆರವನ್ನೂ ಮೀರಿ ನಮ್ಮಲ್ಲಿ ಚಲನೆ ಮತ್ತು ಭಾರಗಳನ್ನು ಗುರುತಿಸುವ ವಿಶಿಷ್ಟ ಸಾಧನ ಇದೆಯೆಂದು ತಿಳಿಯಬೇಕಾಯಿತು. ಅದೇ ಮಾಂಸಲಸಂವೇದನೆ.

ಮೇಲೆ ಹೇಳಿದ ಸಂವೇದನೆಯು ನಮ್ಮ ಶರೀರದಲ್ಲಿರುವ ತಕಲಿಯಂತಿರುವ ಮಾಂಸಗಳಲ್ಲಿ ಉಂಟಾಗುತ್ತದೆ. ಇವು ಇತರ ಮಾಂಸಖಂಡಗಳ ಒಳಗಿದ್ದು ಜ್ಞಾನವಾಹಿ ನರಗಳೊಡನೆ ಸಂಬಂಧವಿಟ್ಟುಕೊಂಡಿರುತ್ತವೆ. ಮಿಕ್ಕ ಇಂದ್ರಿಯಾವಯವಗಳು ಮಾಂಸ–ಪೇಶಿ ಮತ್ತು ಸಂದಿಗಳಲ್ಲಿ ಸುತ್ತಮುತ್ತ ಇರುತ್ತವೆ. ನಮ್ಮ ರಟ್ಟೆಯನ್ನು ಜಟ್ಟಿಯಂತೆ ಬಗ್ಗಿಸಿದಾಗ ಒಂದು ಜೊತೆ ಮಾಂಸ ಖಂಡಗಳು ಕುಗ್ಗಿದರೆ, ಇನ್ನೊಂದು ಜೊತೆ ಹಿಗ್ಗುತ್ತದೆ. ಒಂದು ಜೊತೆಯಲ್ಲಿ ಮಾಂಸದ ತಕಲಿಗಳು ಒತ್ತಲ್ಪಟ್ಟರೆ ಇನ್ನೊಂದರಲ್ಲಿ ಅವು ಹಿಗ್ಗಿಸಲ್ಪಡುತ್ತವೆ. ಈ ಮಾಂಸದ ತಕಲಿಗಳಿಂದ ಬರುವ ಸಂವೇದನೆಗಳು ನಾವು ಕಣ್ಣುಮುಚ್ಚಿಕೊಂಡರೂ ನಮ್ಮ ಕೈಕಾಲುಗಳು ಎಲ್ಲಿವೆ ಎಂಬುದನ್ನು ನಮಗೆ ಸೂಚಿಸುತ್ತವೆ.

## ಸಂವೇದನೆಗಳ ಸ್ವರೂಪ

ಜ್ಞಾನವೆಂಬ ಪದಾರ್ಥವು ಮೊದಲೇ ಸಿದ್ಧವಾಗಿ ನಮ್ಮ ತಲೆಯನ್ನು ಪ್ರವೇಶಿಸುವ ವಸ್ತುವಲ್ಲ. ಜ್ಞಾನವಾಗಿ ಕೊನೆಯಲ್ಲಿ ಪರಿಣಮಿಸುವ ವಿಸ್ತಾರವಾದ ಪ್ರಕ್ರಿಯೆಯ ಮೊದಲ ಹೆಜ್ಜೆಯೇ ಸಂವೇದನೆ. ಮೊದಲು ನಾವು ಒಂದು ಸಂವೇದನೆಗೆ ಉನ್ಮುಖರಾಗಬೇಕು. ಅನಂತರ ಅದಕ್ಕೆ ಒಂದು ಅರ್ಥವನ್ನು ಕಂಡುಕೊಂಡು ಕೊನೆಯಲ್ಲಿ ಅಂಥ ಅನೇಕ ಅರ್ಥಗಳನ್ನು ಕೂಡಿಸಿ, ಒಂದು ಸಾಮಾನ್ಯ ಕಲ್ಪನೆಯನ್ನು ಮಾಡಿಕೊಳ್ಳುವುದೇ ಜ್ಞಾನ. ನಾವು ಉನ್ಮುಖತೆಯನ್ನು ತೋರಿಸದ ಸಂವೇದನೆಯು ಎಂದೆಂದಿಗೂ ನಮಗೆ ಕಳೆದುಹೋದಂತೆಯೇ ಸರಿ. ಸಂವೇದನೆಗಳನ್ನು ಜ್ಞಾನಕ್ಕೆ ರೂಪಾಂತರಿಸುವ ಕಾರ್ಯದಲ್ಲಿ ಮನಸ್ಸಿನ ಪಾತ್ರ ಬಹಳ ಮುಖ್ಯವಾದುದು. ಎಷ್ಟೋವೇಳೆ ಇಂದ್ರಿಯಾಂಗಗಳು ಜ್ಞಾನದ ಹೆಬ್ಬಾಗಿಲಾಗದೆ, ಜ್ಞಾನಕ್ಕೆ ಅಡ್ಡಿ ಮಾಡುವ ಗೋಡೆಗಳೂ ಆಗುವುದುಂಟು. ಪ್ರತಿಯೊಂದು ಇಂದ್ರಿಯಾಂಗವೂ ವಿಶಿಷ್ಟ ಸಂವೇದನೆಯೊಂದನ್ನು ಗ್ರಹಿಸಲೆಂದೇ ನಿರ್ಮಿತವಾಗಿದೆ. ಕಿವಿಗಳು ನೋಡಲಾರವು, ಕಣ್ಣುಗಳು ಕೇಳಲಾರವು. ಒಂದು ಬೆಳಕಿನ ಪ್ರೇರಣೆಯು ಕಿವಿಯ ಮೇಲೆ ಬಿದ್ದಾಗ ಕಿವಿಯು ಅವನ್ನು ತಡೆಯುವುದಲ್ಲದೆ ಒಳಗೆ ಬಿಡುವುದಿಲ್ಲ ಇನ್ನು ತಾನು ತೆಗೆದುಕೊಳ್ಳಬೇಕಾದ ಪ್ರೇರಣೆಯನ್ನಾದರೂ ಅದು ನಿರ್ದಿಷ್ಟ ಅಳತೆಯೊಳಗೆ ಇದ್ದರೆ ಮಾತ್ರ ತೆಗೆದುಕೊಳ್ಳುತ್ತದೆ. ಬಹಳ ಜೋರಾದ ಶಬ್ದಕ್ಕೂ ತೀರ ಮೆಲ್ಲನೆಯ ಶಬ್ದಕ್ಕೂ ಕಿವಿಯ ಬಾಗಿಲು ಮುಚ್ಚಿಕೊಳ್ಳುತ್ತದೆ.

ಇಂದ್ರಿಯಗಳಲ್ಲೆಲ್ಲ ಯಾವುದು ಹೆಚ್ಚು? ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವಾಗಿ "ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ" ಎಂದು ಯಾರಾದರೂ ಹೇಳಬಹುದು. ಅನಂತರ ಬರುವುದು ಕಿವಿ. ಆದರೆ ಇಂದ್ರಿಯಗಳ ಪ್ರಾಮುಖ್ಯವು ಆಯಾ ವ್ಯಕ್ತಿಗಳ ದೃಷ್ಟಿಕೋನ ಮತ್ತು ಆಸಕ್ತಿಗಳನ್ನು ಅವಲಂಬಿಸಿದೆ ಎಂಬುದು ಎಲ್ಲರೂ ನೆನಪಿನಲ್ಲಿಟ್ಟುಕೊಳ್ಳತಕ್ಕ ಸಂಗತಿ. ಹೆಚ್ಚು ಅನನುಕೂಲತೆ ತಂದುಕೊಳ್ಳದೆ ಬಿಟ್ಟು ಬಿಡಬಹುದಾದ ಇಂದ್ರಿಯವೆಂದರೆ ಮೂಗು. ನೆಗಡಿ ಹಿಡಿದಾಗ ನಮಗೆ ಯಾವುದಾದರೂ ವಾಸನೆ ಗೊತ್ತಾಗುತ್ತದೆಯೆ? ಆದರೂ ನಮ್ಮ ನಿತ್ಯದ ಕೆಲಸ ಸಾಗಿಯೇ ಸಾಗುತ್ತದೆ.

## ಸಂವೇದನೆಯ ಲಕ್ಷಣಗಳು

ಪ್ರೇರಣೆಯನ್ನು ಕೊಡುವುದು ಸಂವೇದನೆಯ ಪ್ರಥಮ ಲಕ್ಷಣ. ಎಂಗೆಲ್ಲನು ಇದನ್ನು ಉತ್ಕ್ಷೇಪ (Shock) ಎನ್ನುತ್ತಾನೆ. ಸಂವೇದನೆಗಳು ನಮ್ಮ ಒಳಗಿನ ಅಥವಾ ಹೊರಗಿನ ಕೆಲವು ಸಂಗತಿಗಳನ್ನು ಮೊದಲೇ ನಮ್ಮ ಗಮನಕ್ಕೆ ತಂದುಕೊಡುತ್ತವೆ. ಅವು ಸಾಮಾನ್ಯವಾಗಿ ನಮ್ಮ ಸುತ್ತುಮುತ್ತಲಿನ ಭೌತಿಕ ಪ್ರಪಂಚದ ಗಾಳಿಯಲೆ, ಉಷ್ಣ ತರಂಗಗಳು ಮುಂತಾದ ಚಲನೆಯ ರೂಪವನ್ನು ತಾಳುತ್ತವೆ.

ಸಂವೇದನೆಗಳು ಪರಿಣಾಮಕಾರಿಗಳಾಗಬೇಕಾದರೆ ಅವಕ್ಕೆ ಕೆಲಮಟ್ಟಿನ ತೀವ್ರತೆ ಇರಬೇಕು. ಅತಿ ಮಸುಕಾದ ಬೆಳಕು, ಅತಿ ಸೂಕ್ಷ್ಮವಾದ ವಾಸನೆ ಅಥವಾ ಅತಿ

ಮಂದವಾದ ಶಬ್ದ ನಮ್ಮ ಗಮನವನ್ನು ಸೆಳೆಯಲಾರವು. ಆದರೆ ಸಂವೇದನೆಗಳು ಅತಿ ತೀವ್ರವಾದಾಗಲೂ ಅವು ನಮ್ಮ ಮೇಲೆ ತಕ್ಕ ಪರಿಣಾಮಗಳನ್ನು ಉಂಟುಮಾಡದೆ ಕೇವಲ ನೋವನ್ನು ಉಂಟುಮಾಡುತ್ತವೆ. ಅತಿ ತೀಕ್ಷ್ಣವಾದ ಬೆಳಕು ಕಣ್ಣು ಕುಕ್ಕಿಸುತ್ತದೆ; ಅತಿ ಕರ್ಕಶ ಸ್ವರವು ಕಿವಿಯ ತಂಬಟೆಯನ್ನು ಒಡೆಯುತ್ತದೆ; ಅತಿಯಾದ ಚಳಿಯಿಂದ ಮೈಯ ನರನಾಡಿಗಳು ಸೆಟೆದು ಹೋಗುತ್ತವೆ.

ಒಂದು ಸಂವೇದನೆಯು ನಿರರ್ಥಕವಾಗುವ ಕೆಳಗಿನ ಮಟ್ಟವನ್ನು 'ಇಳಿಗಡು' ಎನ್ನಬಹುದು. ಅದು ಸಾರ್ಥಕವಾಗದೆ ಕೇವಲ ನೋವನ್ನು ಉಂಟುಮಾಡುವ ಮಟ್ಟಕ್ಕೆ 'ಏರುಗಡು' ಎನ್ನಬಹುದು. ಈ ಎರಡು ಗಡಿಗಳ ನಡುವೆ ಇಂದ್ರಿಯ ಸಂವೇದನೆಯ ತೀವ್ರತೆಯ ಅನೇಕ ಅಳತೆಗಳಿರುತ್ತವೆ. ಇಳಿಗಡುವಿನ ಕೆಳಗೆ ಪ್ರೇರಣೆಯೊಂದು ಬಿದ್ದರೆ ಅದು ಅನುಕ್ರಿಯೆಯನ್ನು ಹುಟ್ಟಿಸುವುದಿಲ್ಲ. ಅಂಥ ಅಶಕ್ತ ಪ್ರೇರಣೆಯನ್ನು 'ಅವ ಕ್ಷೀಣ ಪ್ರೇರಣೆ' ಎಂದು ಕರೆಯಬಹುದು (Subliminal Stimulus). ಆದರೆ ಎರಡು ಮೂರು ಅವಕ್ಷೀಣ ಪ್ರೇರಣೆಗಳು ಒಟ್ಟಾಗಿ ಒಂದು ಬಲವಾದ ಪ್ರತಿಕ್ರಿಯೆಯನ್ನು ಉಂಟುಮಾಡಬಹುದು. ಈ ಘಟನೆಯನ್ನು 'ಪ್ರೇರಣಾಸಮುದಯ' ಎನ್ನಬಹುದು. ಒಂದು ಕತ್ತೆಯ ಬೆನ್ನಿನ ಮೇಲೆ ಒಂದು ಹನಿ ಗಂಧಕಾಮ್ಲವನ್ನು ಸುರಿದರೆ ಅದು ಬಹಳ ಮೆಲ್ಲಗೆ ತುರಿಸಿಕೊಳ್ಳುವಷ್ಟು ಅನುಕ್ರಿಯೆಯನ್ನು ಹುಟ್ಟಿಸುತ್ತದೆ. ಅದರ ಬೆನ್ನಿನ ಇನ್ನೊಂದು ಭಾಗದಲ್ಲಿ ಇನ್ನೊಂದು ಹನಿಯನ್ನು ಬೀಳಿಸಿದರೆ ಅದು ಅಂಥದೇ ಇನ್ನೊಂದು ಅನುಕ್ರಿಯೆಯನ್ನು ಹುಟ್ಟಿಸುತ್ತದೆ. ಆದರೆ ಎರಡು ಹನಿಗಳನ್ನು ಏಕಕಾಲದಲ್ಲಿ ಒಂದೇ ಸ್ಥಳದಲ್ಲಿ ಸುರಿದರೆ ಬಲವಾಗಿ ತುರಿಸಿಕೊಳ್ಳುವ ಅನುಕ್ರಿಯೆಯನ್ನು ಅವು ಹುಟ್ಟಿಸುತ್ತವೆ.

ಸಂವೇದನೆಗಳಿಗೆ ಸುಪ್ತಿ ಕಾಲವಿದೆ. ನಮ್ಮ ಶರೀರದ ಪೇಶಿಗಳು ಸಮಸ್ಥಿತಿಯ ಅನುಕ್ರಿಯೆಗಳನ್ನು ಮಾಡಲು ತೆಗೆದುಕೊಳ್ಳುವ ಕಾಲಕ್ಕೆ 'ಸುಪ್ತಿಕಾಲ' ಎಂದು ಹೆಸರು. ಒಂದು ಇಂದ್ರಿಯಾಂಗವನ್ನು ಎಬ್ಬಿಸಲು .೦೦೫ ಸೆಕಂದಗಳಿಂದ .೧ ಸೆಕಂದದ ವರೆಗಿನ ಕಾಲಾವಧಿ ಅಗತ್ಯ. ಮಿದುಳಿಗೆ ಹೋಗುವ ನರದ ಹುರಿಗಳನ್ನು ಉದ್ರೇಕಿಸಲು ಕೂಡ ಕಾಲಬೇಕು. ಮಿದುಳಿನ ಸಂಘಟಕಗಳು, ಕ್ರಿಯಾವಾಹಿ ನರಗಳು ಮತ್ತು ಮಾಂಸಖಂಡಗಳು ಕೆಲಸ ಮಾಡಲು ಕೆಲಕಾಲ ಹಿಡಿಯುತ್ತದೆ. ಹೀಗೆ ಸಂವೇದನೆಯ ಗ್ರಹಿಕೆಗೂ ತತ್ಫಲವಾಗಿ ಆರಂಭವಾಗುವ ಕಾರ್ಯಕ್ಕೂ ನಡುವೆ ಕೆಲಕಾಲ ಕಳೆದುಹೋಗುವುದು ಅನಿವಾರ್ಯ. ಈ ಮಧ್ಯಕಾಲವನ್ನು ನಾವು ಕಾಲಮಾಪಕ ಯಂತ್ರದಿಂದ ಅಳೆಯಬಹುದು. ನರಗಳೂ ಪೇಶಿಗಳೂ ಅನುಕ್ರಿಯೆಯನ್ನು ಎಸಗಲು ಕಾಲ ತೆಗೆದುಕೊಳ್ಳುವುವು; ಅಷ್ಟೇ ಅಲ್ಲದೆ, ಕಾಲಹೋದ ಹಾಗೆ ಅವು ಅನುಕ್ರಿಯೆಯನ್ನು ನಿಲ್ಲಿಸುತ್ತಲೂ ಹೋಗುವುವು. ಹೀಗೆ ಎರಡು ಕಡೆಗಳಲ್ಲಿಯೂ ಕಾಲಯಾಪನೆ ಇದೆ. ಪ್ರಕಾಶ ಕ್ಷೇತ್ರದಲ್ಲಿ ಈ ಘಟನೆಯು ಉತ್ತರಪ್ರತಿಮೆಗೆ ಕಾರಣವಾಗುತ್ತದೆ.

ಒಂದು ಪ್ರೇರಣೆಯು ಪರಿಣಾಮಕಾರಿಯಾಗಬೇಕಾದರೆ ಅದಕ್ಕೆ 'ಉಳಿಗಾಲ' (duration) ಬೇಕು. ಅದು ಸಂಬಂಧಪಟ್ಟ ಇಂದ್ರಿಯಾಂಗದ ಮೇಲೆ ನಿರ್ದಿಷ್ಟ ಕಾಲ ಕೆಲಸಮಾಡಬೇಕು. ಒಂದು ಸಂವೇದನೆಯ ಸ್ವರೂಪವು ಉಳಿಗಾಲದ ಅವಧಿಯನ್ನು

ಮೀರಿ ಮತ್ತೂ ಮುಂದುವರಿದರೆ ಬದಲಾಗುತ್ತದೆ. ಒಂದು ಬಣ್ಣವನ್ನು ಬಹಳ ಕಾಲ ನೋಡುತ್ತ ಕುಳಿತರೆ ನಮ್ಮ ಕಣ್ಣು ಸುಸ್ತಾಗಿ ಕಣ್ಣ ಮುಂದೇ ಆ ಬಣ್ಣವು ಕ್ರಮೇಣ ಅಸ್ಪಷ್ಟವಾಗುತ್ತ ಹೋಗಿ, ಕೊನೆಗೆ ಮಾಯವಾಗಿಬಿಡುತ್ತದೆ.

ಅನೇಕ ಸಂವೇದನೆಗಳಿಗೆ ವ್ಯಾಪ್ತಿ (Extension) ಇದೆ. ಕರ್ಣ ಸಂವೇದನೆಗಳನ್ನು ನಾವು ಕೆಲಕಾಲ ಪರಿಮಾಣದವರೆಗೆ ಹಬ್ಬಿರುವ ಸಂಗತಿಗಳೆಂದು ತಿಳಿಯುತ್ತೇವೆ. ಚರ್ಮ ಮತ್ತು ನೇತ್ರಗಳ ಸಂವೇದನೆಗಳನ್ನೂ ಹಾಗೇ. ಸಂವೇದನೆಗಳು ಇಂದ್ರಿಯಾಂಗದ ಚಿಕ್ಕ ಅಥವಾ ದೊಡ್ಡ ಪ್ರದೇಶಗಳಲ್ಲಿ ಕೆಲಸ ಮಾಡುತ್ತವೆ. ಬಿಸಿನೀರಿನ ಸ್ನಾನದಿಂದ ಉಂಟಾಗುವ ಸಂವೇದನೆಗಳ ವ್ಯಾಪ್ತಿ ಸೂಜಿ ಚುಚ್ಚಿದ್ದರಿಂದ ಉಂಟಾಗುವ ಸಂವೇದನೆಯ ವ್ಯಾಪ್ತಿಗಿಂತ ಹೆಚ್ಚಿನದು.

✱

## ಅಧ್ಯಾಯ ನಾಲ್ಕು

# ಇಂದ್ರಿಯಪ್ರತ್ಯಕ್ಷ

ಮಿದುಳಿನ ಸಂಪರ್ಕ ಪ್ರದೇಶಗಳನ್ನು ಹೇಳುವಾಗ, ರಾಮನ ಸ್ವರವನ್ನು ಗುರುತಿಸುವ ಸಂಗತಿಯನ್ನು ಹೇಳಿದೆವಷ್ಟೆ; ಅದನ್ನು ಇಲ್ಲಿ ಮತ್ತೆ ನೆನೆಸಿಕೊಂಡರೆ, ಹಾಗೆ ರಾಮನನ್ನು ಗುರುತಿಸುವ ಒಟ್ಟು ಅನುಭವವನ್ನು ಹೀಗೆ ವಿವರಿಸಬಹುದು: ಅಲ್ಲಿ ಶ್ರವಣಸಂವೇದನೆಗಳು ಕಲ್ಪನೆ–ಪ್ರತಿಮೆಗಳನ್ನೂ ಇತರ ವಿವಿಧ ಸ್ಮೃತಿಗಳನ್ನೂ ಕೂಡಿಕೊಂಡು ರಾಮನನ್ನು ಗುರುತಿಸುವ ಇಂದ್ರಿಯಪ್ರತ್ಯಕ್ಷಕ್ಕೆ ಕಾರಣವಾಗುತ್ತವೆ. ಕೇವಲ ರಾಮನ ಸ್ವರವನ್ನು ಕೇಳುವುದು ಸಂವೇದನೆ ಎನಿಸುತ್ತದೆ. ನಮ್ಮ ಮಿದುಳಿನಲ್ಲಿಯ ಜ್ಞಾನೇಂದ್ರಿಯ ಸ್ಥಳಗಳಲ್ಲಿ ಒಂದಲ್ಲ ಒಂದರ ನರಪುಟಗಳು ಪ್ರೇರಿತವಾದಾಗ ಆಗುವ ಅನುಭವವೇ ಸಂವೇದನೆ. ಇಂಥ ಸಂವೇದನೆಯೊಡನೆ ನಮ್ಮ ಮಿದುಳಿನಲ್ಲಿಯ ಸಂಪರ್ಕಪ್ರದೇಶಗಳ ನರಪುಟಗಳು ಪ್ರೇರಿತವಾದಾಗ ಉಂಟಾಗುವ ಅನುಭವವನ್ನು ಕೂಡಿಸಿದರೆ ಇಂದ್ರಿಯ ಪ್ರತ್ಯಕ್ಷ ಉಂಟಾಗುತ್ತದೆ–ಅಥವಾ ಇಂದ್ರಿಯ ಪ್ರತ್ಯಕ್ಷವೆಂದರೆ ಪೂರ್ವಾನುಭವದಿಂದ ಹುಟ್ಟಿದ ಮತ್ತು ಸಂಪರ್ಕಬಲದಿಂದ ಪುನರಾಗಮಿಸಿದ ಕಲ್ಪನೆ, ಪ್ರತಿಮೆ ಮುಂತಾದವುಗಳಿಂದ ಪುಷ್ಟಿಗೊಂಡ ಸಂವೇದನೆ. ಸಂಪರ್ಕಪ್ರದೇಶಗಳಿಗೆ ಅಪಾಯ ಉಂಟಾದರೆ, ಸಂವೇದನೆಯು ಸರಿಯಾಗಿ ಆದರೂ ಇಂದ್ರಿಯ ಪ್ರತ್ಯಕ್ಷದಲ್ಲಿ ಹೆಚ್ಚಿನ ಗೊಂದಲ ಉಂಟಾಗುತ್ತದೆ ಎಂಬ ಅಂಶವನ್ನು ನಾವು ಆಗಲೇ ಹೇಳಿದ್ದೇವೆ.

ನಾವು ಒಂದು ಮನೆಯನ್ನು ಕಂಡಾಗ, ಮನೆಯ ಇಂದ್ರಿಯ ಪ್ರತ್ಯಕ್ಷಕ್ಕೆ ಕಾರಣವಾಗುವ ಬಲೆಪೊರೆಯ ಪ್ರತಿಮೆಯು (Retinal Image) ಕೇವಲ ಬೂದಿ ಬೂದಿಯಾದ, ಹೆಚ್ಚು ಕಡಿಮೆ ಎತ್ತರಕ್ಕಿಂತ ಅಗಲ ಹೆಚ್ಚಾದ ಆಕೃತಿಯಾಗಿರುತ್ತದೆ. ಆದರೆ ಮನೆಯನ್ನು "ಪ್ರತ್ಯಕ್ಷವಾಗಿ ಕಾಣುವುದು" ಎಂಬುದು ಬೂದಿ ಬಣ್ಣದ, ಎತ್ತರಕ್ಕಿಂತ ಅಗಲ ಹೆಚ್ಚಾದ ಒಂದು ಆಕೃತಿಯ ಸಂವೇದನೆಯನ್ನು ಪಡೆಯುವುದಕ್ಕಿಂತ ಹೆಚ್ಚು ಅರ್ಥವುಳ್ಳದ್ದು. ನಮ್ಮ ದೃಷ್ಟಿಯಲ್ಲಿ ಒಂದು ಮನೆ ಎಂದರೆ ಸುತ್ತಲೂ ಗೋಡೆಯುಳ್ಳ ಒಳಗಡೆ ಕೋಣೆಗಳು, ಬಾಗಿಲುಗಳು ಮುಂತಾದವುಗಳನ್ನು ಒಳಗೊಂಡಿರುವ ಒಂದು ಕಟ್ಟಡ. ಈ ಎಲ್ಲ ಜ್ಞಾನವು ನಮ್ಮ ಅನುಭವದ ಅಂಗವಾಗಿದೆ. ಒಂದು ವಸ್ತುವು ನಮ್ಮ ಇಂದ್ರಿಯಪ್ರತ್ಯಕ್ಷಕ್ಕೆ ಬರುವಾಗ, ನಾವು ಅದು ಹೊಂದಿದೆ ಎಂದು ನಮಗೆ ಗೊತ್ತಿರುವ, ಆದರೆ ನಾವು ಸದ್ಯಃ ಸಂವೇದಿಸದಿರುವ ಗುಣಗಳನ್ನು ಪರೋಕ್ಷಾ ಪರೋಕ್ಷವಾಗಿ ಅದಕ್ಕೆ ಅನ್ವಯಿಸುತ್ತೇವೆ.

ಸಾಮಾನ್ಯವಾಗಿ ವಾಸ್ತವ ಜಗತ್ತಿನಲ್ಲಿ ಅದರಲ್ಲೂ ಹೆಚ್ಚಾಗಿ "ನೋಡುವುದು" ಎಂಬ ಇಂದ್ರಿಯಪ್ರತ್ಯಕ್ಷದಲ್ಲಿ ಸಂವೇದನೆಯನ್ನೂ ಇಂದ್ರಿಯ ಪ್ರತ್ಯಕ್ಷವನ್ನೂ ಪ್ರತ್ಯೇಕವಾಗಿ ಗ್ರಹಿಸುವುದು ಅಸಾಧ್ಯ. ವಿಚಾರದಲ್ಲಿ ಮಾತ್ರ ಆ ಪ್ರತ್ಯೇಕತೆಯನ್ನು ಕಂಡುಕೊಳ್ಳಬಹುದು. ಒಂದು ವಸ್ತುವಿನ ಆಕೃತಿಯನ್ನು ಅದರ ಗಾತ್ರದಿಂದ ಪ್ರತ್ಯೇಕಿಸಿ ತಿಳಿದುಕೊಳ್ಳಬಹುದು. ಆದರೆ ಅವನ್ನು ಪ್ರತ್ಯೇಕವಾಗಿ ಅನುಭವಿಸುವುದು ಅಸಾಧ್ಯ. ಒಟ್ಟಿನಲ್ಲಿ ಪ್ರತ್ಯಕ್ಷಾನುಭವವೆಂದರೆ ನಮ್ಮ ಯಾವುದಾದರೂ ಒಂದು ಇಂದ್ರಿಯವು ಗ್ರಹಿಸಿದ ಬಾಹ್ಯ ವಸ್ತುವಿನ ಗುಣಗಳ ಸಂವೇದನೆಯು ಆ ವಸ್ತುವಿನ ಬಗ್ಗೆ ನಮ್ಮ ಸ್ಮೃತಿಯಲ್ಲಿ ಇರುವ ಅದರ ಗುಣಗಳ ಕಲ್ಪನೆಯನ್ನು ಕೂಡಿಕೊಂಡು ಉಂಟುಮಾಡುವ ನೇರವಾದ ವಸ್ತುಜ್ಞಾನ ಅಥವಾ ಇಂದ್ರಿಯಪ್ರತ್ಯಕ್ಷ ಎಂದು ತಾತ್ಪರ್ಯ. ಯಥಾರ್ಥವಾದ ಇಂದ್ರಿಯ ಪ್ರತ್ಯಕ್ಷದಲ್ಲಿ ಇಂದ್ರಿಯಗೋಚರವಾಗುವ ಪದಾರ್ಥದ ವಿಶಿಷ್ಟವಾದ ಗುಣ ಅಥವಾ ಧರ್ಮಗಳ (ಇವುಗಳಲ್ಲಿ ಪದಾರ್ಥದ ವಿಶಿಷ್ಟಾಂಗದ ಅಥವಾ ವಿಶಿಷ್ಟ ವರ್ಣ, ಆಕೃತಿ ಮುಂತಾದುದರ ಲಕ್ಷಣಗಳೂ ಅಡಕವಾಗುತ್ತವೆ) ಸಂವೇದನೆ ಸಾಕಷ್ಟು ಪರಿಪೂರ್ಣವಾಗಿ ಆಗುವುದು ಅತ್ಯವಶ್ಯ. ಮೇಲಿನ ನಿದರ್ಶನದಲ್ಲಿ ಮನೆಯ ಕಲ್ಪನೆಯನ್ನು ಮಿದುಳಿನ ಸಂಪರ್ಕ ಪ್ರದೇಶವು ಪರಿಪೂರ್ಣಗೊಳಿಸಿ ಕೊಡಲು ಸಮರ್ಥವಾಗಬೇಕಾದರೆ ಅದಕ್ಕೆ ಮನೆಯ ಸ್ವರೂಪದಲ್ಲಿರುವ ವಿಶಿಷ್ಟವಾದ ಲಕ್ಷಣ ಅಥವಾ ಲಕ್ಷಣಗಳ ಸ್ಪಷ್ಟವಾದ ಚಾಕ್ಷುಷ ಸಂವೇದನೆಗಳು ದೊರಕಬೇಕು. ಉಕ್ತಸಂವೇದನೆಗಳ ಅಸ್ಪಷ್ಟತೆ ಹಾಗೂ ಅಪರ್ಯಾಪ್ತತೆಗಳಿಂದ ಇಂದ್ರಿಯಪ್ರತ್ಯಕ್ಷದ ಚಾಕ್ಷುಷಾನುಭವವು ಅಯಥಾರ್ಥವೆನಿಸುವುದು. ಇಂದ್ರಿಯಪ್ರತ್ಯಕ್ಷವು ಅಂಗಿಯಾದರೆ ಇಂದ್ರಿಯ ಸಂವೇದನೆಯು ಅದರ ಅವಿಭಾಜ್ಯವಾದ ಅಂಗವೆನಿಸುತ್ತದೆ.

## ಇಂದ್ರಿಯ ಕ್ಷೇತ್ರದ ಸಂಘಟನೆ

ಪದಾರ್ಥಗಳ ಇಂದ್ರಿಯಪ್ರತ್ಯಕ್ಷವು ಯಥಾರ್ಥವಾಗಿ ಅಥವಾ ಅಯಥಾರ್ಥವಾಗಿ ನಮಗಾಗುವಾಗ ನಮ್ಮ ಅನುಭವವು ಬಹುಮಟ್ಟಿಗೆ ಮಿದುಳನ್ನೇ ಅವಲಂಬಿಸಿರುವುದು ಸುವ್ಯಕ್ತ. ಆದರೆ ಅದಕ್ಕೂ ಮೊದಲು ಮಿದುಳು ಏನನ್ನೂ ಮಾಡದೆ ಕುಳಿತಿರುವುದೆಂದು ತಿಳಿಯಬಾರದು. ಹಿಂದೆ ಲಕ್ಷಿಸಿದಂತಹ ಇಂದ್ರಿಯಪ್ರತ್ಯಕ್ಷದ ಅವಸ್ಥೆಗೆ ನಾವು ಬಂದು ಮುಟ್ಟುವುದಕ್ಕೆ ಎಷ್ಟೋ ಹಿಂದೆಯೇ ಮಿದುಳು ಬಹಳ ಮುಖ್ಯವಾದ ಪಾತ್ರವನ್ನು ನಿರ್ವಹಿಸಿರುತ್ತದೆ.

ಎಲ್ಲ ನೋಟವೂ ಚಿರಪರಿಚಿತ ಪದಾರ್ಥಗಳನ್ನು ಗುರುತಿಸುವುದಕ್ಕೇ ಮಿತವಾಗಿರುವುದಿಲ್ಲ. ನಮ್ಮ ಇಡಿ ಚಾಕ್ಷುಷಕ್ಷೇತ್ರವು ಯಾವ ವಾಸ್ತವಿಕ ಪದಾರ್ಥವೊಂದನ್ನೂ ಪ್ರತಿನಿಧಿಸದಂತಹ ಔಪಚಾರಿಕ ಯೋಜನೆಯಿಂದ ತುಂಬಿಕೊಂಡಿರಬಹುದು. ಆದರೆ ಅಂಥ ಪ್ರಕರಣದಲ್ಲಿ ನಾವು ಕಂಡದ್ದು ಸಂವೇದನೆಗಳ ಒಂದು ಬರಿ ಅಸಂಬದ್ಧ ರಾಶಿಯಾಗಿರದು. ನಾವು ಯೋಜನೆಯನ್ನು ಯೋಜನೆಯನ್ನಾಗಿಯೇ ನೋಡಬೇಕು– ಅಂದರೆ ಕೆಲ ಆಕೃತಿಗಳನ್ನೂ ವರ್ಣ ಪ್ರದೇಶಗಳನ್ನೂ ಒಟ್ಟಿಗೇ ಕೂಡಿರತಕ್ಕವೆಂದು ಗಣಿಸಬೇಕು ಮತ್ತು ಯೋಜನೆಯ ಕೆಲ ಭಾಗಗಳನ್ನು ರೂಪಗಳನ್ನಾಗಿಯೂ ಮತ್ತೆ ಕೆಲ

ಭಾಗಗಳನ್ನು ಹಿನ್ನೆಲೆಯನ್ನಾಗಿಯೂ ನೋಡಬೇಕು. ಇಂದ್ರಿಯ ಕ್ಷೇತ್ರವು ಸಂಘಟಿತವಾಗಿರಬೇಕಾದದ್ದು ಹೀಗೆ.

ನಾವು ಮೊದಲೆಂದೂ ನೋಡದಿರುವ ಒಂದು ವಸ್ತುವನ್ನು ನೋಡಹೋದಾಗಲೂ ಆ ವಸ್ತು ಯಾವುದೆಂದು ತಿಳಿಯದೆ ಹೋದರೂ ಅದರ ಆಕೃತಿಯು ನಮಗೆ ಸಮಗ್ರ, ಸುಸಂಗತ, ಸುಸಂಬದ್ಧವಾಗಿಯೇ ಕಾಣುವುದು. ಹೀಗಾಗಲು ಇಂದ್ರಿಯ ಕ್ಷೇತ್ರದಲ್ಲಿ ಆಕೃತಿ ರಚನೆಗಳ ಜ್ಞಾನವು ಹುಟ್ಟು ಗುಣವಾಗಿಯೇ ನಮಗೆ ಬಂದಿರುವುದೇ ಕಾರಣ. ಇದು ಗೆಸ್ಟಾಲ್ಟರ ಮತ.

ಈ ಸಂಘಟನೆಯು ಮಿದುಳನ್ನವಲಂಬಿಸಿದೆ; ಆದರೆ ಇದರಲ್ಲಿ ಮಿದುಳಿನ ಸಂಪರ್ಕಪ್ರದೇಶಗಳೂ ಸೇರಿಕೊಂಡಿವೆಯೋ ಅಥವಾ ಇಲ್ಲವೋ ಎಂಬುದು ಅನಿಶ್ಚಿತ. ಇಂದ್ರಿಯ ಕ್ಷೇತ್ರದ ಸಮೂಹಾಂಗಗಳಿಗೊಯ್ಯುವ ಮುಖ್ಯ ಕಾರಕಗಳನ್ನು ಐದು ವಿಧವಾಗಿ ವಿಂಗಡಿಸಬಹುದು: ಸನ್ನಿಕರ್ಷ ಅಥವಾ ಸಾಮೀಪ್ಯ, ಸಾದೃಶ್ಯ, ಸಾತತ್ಯ, ಪರ್ಯಾಪ್ತಿ ಮತ್ತು ಸಮಪಾರ್ಶ್ವತೆ ಇಲ್ಲವೆ ಸಮಾಂಗತೆ,

## ಇಂದ್ರಿಯಪ್ರತ್ಯಕ್ಷದ ಮೇಲೆ ಪ್ರಭಾವ ಬೀರುವ ಕಾರಕಗಳು

ಪ್ರತೀಕ್ಷೆ ಅಥವಾ ಅಪ್ರತೀಕ್ಷೆಯಿಂದ ನಮ್ಮ ಉನ್ಮುಖತೆ ಪ್ರಥಮತಃ ಮಾರ್ಗ ದರ್ಶನ ಪಡೆವ ಅಂಶವು ಪ್ರತ್ಯಕ್ಷಾನುಭವದ ಮೇಲೆ ಹೆಚ್ಚಿನ ಪ್ರಭಾವ ಬೀರಬಹುದು. ಕಪಾಟಿನಲ್ಲಿ ನಾವು ಒಂದು ಪುಸ್ತಕವನ್ನು ಹುಡುಕಲಾರಂಭಿಸಿದಾಗ ಕೇವಲ ಅದರ ಹೆಸರನ್ನು ತಿಳಿದಿರುವುದಕ್ಕಿಂತ ಅದರ ಆಕೃತಿಯ ಸರಿಯಾದ ಕಲ್ಪನೆ ಗೊತ್ತಿದ್ದರೆ ಅದು ನಮಗೆ ಹೆಚ್ಚು ಸುಲಭವಾಗಿ ದೊರಕುತ್ತದೆ. ಏಕೆಂದರೆ ಆಗ ನಮ್ಮ ಮನಸ್ಸಿನಲ್ಲಿ ಉಚಿತವಾದ ಕಲ್ಪನೆಗಳೂ ಪ್ರತಿಮೆಗಳೂ ಮೊದಲೇ ಮೂಡಿರುವುದರಿಂದ ಇಂದ್ರಿಯಪ್ರತ್ಯಕ್ಷದ ಜ್ಞಾನವನ್ನು ಮಾಡಿಕೊಳ್ಳಲು ನಮಗೆ ಅತಿ ಚಿಕ್ಕ ಸಂವೇದನಾತ್ಮಕ ಜ್ಞಾನ ದೊರೆತರೂ ಸಾಕಾಗುವುದು; ಆದರೆ ಅಂಥ ಸಂದರ್ಭಗಳಲ್ಲಿ ಕೆಲವೊಮ್ಮೆ ಇಂದ್ರಿಯಾನುಭವವು ಭ್ರಮೆಯಾಗುವುದೂ ಉಂಟು. ಸಂಜೆಯಲ್ಲಿ ಹೊತ್ತು ಮುಳುಗುತ್ತಿರುವಾಗ ನಾವು ಒಂದು ಹುಲ್ಲುಬಣಬೆಯನ್ನು ಮನೆಯೆಂದು ಕಾಣುವ ಪ್ರಸಂಗ ಅದಕ್ಕೆ ಒಂದು ಉದಾಹರಣೆ. ಇಲ್ಲಿ ಚಿರಪರಿಚಯ, ಪ್ರತೀಕ್ಷೆ ಅಥವಾ ಆಸಕ್ತಿಯ ಮೂಲಕ ಮಿದುಳಿನ ಕೆಲ ಭಾವಪ್ರಕಾರಗಳು ಚಾಕ್ಷುಷಪ್ರತ್ಯಕ್ಷಕ್ಕೆ ಮೊದಲೇ ಒಂದು ಬಗೆಯ ಉಪೋದ್ರೇಕದ ಅವಸ್ಥೆಯನ್ನು ಹೊಂದಿರುತ್ತವೆ. ಆದ್ದರಿಂದ ಅನುಚಿತ ಪ್ರೇರಣೆಯಿಂದ ಸುಲಭವಾಗಿ ಅವು ಸ್ಪರ್ಶಹೊಂದಿ ಗೃಹಭ್ರಮೆಯನ್ನು ನಮ್ಮಲ್ಲಿ ಹುಟ್ಟಿಸುವುವು. ಮನಸ್ಸಿನಲ್ಲಿ ಮೊದಲೇ ಎಣಿಸಿಕೊಂಡದ್ದನ್ನು ಎಣಿಸಿದ ವಸ್ತುವಿನಿಂದ ಭಿನ್ನವಾದದ್ದರಲ್ಲಿ ಕಾಣುವ ಪ್ರಸಂಗ ಎಲ್ಲರಿಗೂ ಗೊತ್ತಿರುವ ಅನುಭವ. ಅಪೇಕ್ಷೆ–ಪ್ರತೀಕ್ಷೆಗಳು ಯಥಾರ್ಥವಾದ ಇಂದ್ರಿಯಪ್ರತ್ಯಕ್ಷಕ್ಕೆ ಪ್ರತಿಬಂಧಕಗಳಾಗುವ ಬಗೆ ಹೀಗೆ:

ಸಾಮೀಪ್ಯ: ೧೭ (ಅ)ನೆಯ ನಕ್ಷೆಯಲ್ಲಿ ಜೊತೆಜೊತೆಯಾಗಿರುವ ಎರಡೆರಡು ಉದ್ದ ಗೆರೆಗಳನ್ನು ಕಾಣುತ್ತೇವೆ. ಅವುಗಳ ನಡುವೆ ಇರುವ ಜಾಗದ ದೆಸೆಯಿಂದ

ಅವೆರಡೂ ಒಟ್ಟು ಒಂದು ರೂಪವಾಗಿ ಕಾಣುತ್ತವೆ. ಆ ರೂಪದ ಹಿಂದಿನ ಜಾಗವೇ ಹಿನ್ನೆಲೆ. ಇಂಥ ಮೂರು ರೂಪಗಳು ಅಲ್ಲಿವೆ. ಬಿ ಮತ್ತು ಸಿ ಎಂಬ ಗೆರೆಗಳನ್ನು ಒಟ್ಟು ಗೂಡಿಸಲು ಶಕ್ಯವೇ ಇಲ್ಲ ಎಂದು ತೋರುತ್ತದೆ. ಹಾಗೇ ಡಿ ಮತ್ತು ಈ ಎಂಬ ಗೆರೆಗಳನ್ನೂ ಕೂಡಿಸಲಾಗದೆನಿಸುತ್ತದೆ. ಹೀಗೇ ಹತ್ತಿರದಲ್ಲಿರುವ ತಾರೆಗಳು ಒಂದು ಗುಂಪಾಗಿ ತೋರುತ್ತವೆ. ಒಂದು ಗುಂಪಿನ ನಕ್ಷತ್ರವನ್ನೂ ಮತ್ತೊಂದು ಗುಂಪಿನ ಒಂದು ನಕ್ಷತ್ರವನ್ನೂ ಒಂದು ಗುಂಪಿಗೆ ಸೇರಿದವೆಂದು ನಾವು ನೋಡುವುದಶಕ್ಯ.

ಸಾದೃಶ್ಯ: ೧೭ (ಬ)ನೆಯ ನಕ್ಷೆಯಲ್ಲಿ ಎಡಗಡೆಯ ಚುಕ್ಕೆಗಳು ಉದ್ದ ಸಾಲಿನಲ್ಲಿರುವಂತೆಯೂ ಬಲಗಡೆಯ ಚುಕ್ಕೆಗಳು ಅಡ್ಡ ಸಾಲಿನಲ್ಲಿರುವಂತೆಯೂ ತೋರುತ್ತವೆ. ಈ ಎರಡರಲ್ಲೂ ನಾವು ಸದೃಶ ಪದಾರ್ಥಗಳನ್ನು ಒಟ್ಟು ಗೂಡಿಸುತ್ತೇವೆ. ಇದು ಸಹಜ.

ಸಾತತ್ಯ: ಇದನ್ನೂ ತಾರೆಗಳ ಉದಾಹರಣೆಯಿಂದ ವಿವರಿಸಬಹುದು. ನೇರವಾದ ಸಾಲಿನಲ್ಲಿರುವ ತಾರೆಗಳನ್ನು ಒಂದು ಗುಂಪನ್ನಾಗಿಯೂ ಸಪ್ತರ್ಷಿಮಂಡಲದಂತೆ ಸೊಟ್ಟ ಸಾಲಿನಲ್ಲಿರುವುವನ್ನು ಒಂದು ಗುಂಪನ್ನಾಗಿಯೂ ನಾವು ನೋಡುತ್ತೇವೆ. ಗುಂಪಾಗಿ ಗ್ರಹಿಸುವ ನಮ್ಮ ಪ್ರವೃತ್ತಿಗೆ ಇಲ್ಲಿ ಸಾತತ್ಯವೇ ಕಾರಕವಾಗಿದೆ.

ಪರ್ಯಾಪ್ತಿ ಮತ್ತು ಸಮಾಂಗತೆ: ಸಂಪೂರ್ಣ ನೀರಂಧ್ರವಾದ ಒಂದು ರೂಪ– ಅದರಲ್ಲೂ ಅದು ಸಮಾಂಗವಾಗಿದ್ದಾಗ ನಮಗೆ ಒಂದೇ ಘಟಕವಾಗಿ ಹಿನ್ನೆಲೆಯಿಂದ ಎದ್ದು ಕಾಣುವ ಪ್ರವೃತ್ತಿಯನ್ನು ತೋರಿಸುತ್ತದೆ. ಒಂದು ಮೋಡವು ಎಷ್ಟೇ ಪ್ರಕಾಶಮಾನವಾಗಿದ್ದರೂ ಅದು ಅನಿಯತ ಆಕೃತಿಯುಳ್ಳದ್ದಾಗಿರುವುದರಿಂದ ಮಗುವು ಅದನ್ನು ನೋಡದೆ, ಅದರ ಸಮೀಪದಲ್ಲಿರುವ ಅಷ್ಟೇ ಪ್ರಕಾಶಮಾನವಾಗಿರುವ ಆದರೆ ನಿಯತಾಕೃತಿಯುಳ್ಳ ಚಂದ್ರನನ್ನೇ ಸಹಜವಾಗಿ ನೋಡುತ್ತದೆ.

## ಗೆಸ್ಟಾಲ್ಟ್ ಸಿದ್ಧಾಂತ

ಇಂದ್ರಿಯಕ್ಷೇತ್ರದ ಸಂಘಟನೆಯ ಪ್ರವೃತ್ತಿಯು ಹುಟ್ಟುಗುಣವೋ ಕಟ್ಟುಗುಣವೋ ಎಂಬುದರ ಬಗ್ಗೆ ಬಹಳ ವಾದ ವಿವಾದಗಳಾಗಿವೆ. ಅಭಿಜಾತ ಮನಃಶಾಸ್ತ್ರಜ್ಞರು ಅದು ಕಟ್ಟುಗುಣ ಅಥವಾ ಅನುಭವದಿಂದ ಕಲಿತುಕೊಳ್ಳತಕ್ಕದ್ದು ಎಂದು ನಂಬಿದರು. ಮಗುವಿನ ಇಂದ್ರಿಯಕ್ಷೇತ್ರವು ಅವ್ಯವಸ್ಥಿತ ಸಂವೇದನಾಂಶಗಳಿಂದ ತುಂಬಿರುತ್ತದೆ ಎಂದೂ ಮಗು ಕ್ರಮೇಣ ಅನುಭವದಿಂದ ಅದರ ಕೆಲವು ಅಂಶಗಳನ್ನು ಒಟ್ಟುಗೂಡಿಸಿ ಇಡಿ ಇಂದ್ರಿಯಕ್ಷೇತ್ರದಲ್ಲಿ ಪ್ರತ್ಯೇಕ ಹಾಗೂ ಗೌಣವಾದ ಇಡಿ ಆಕೃತಿಯನ್ನಾಗಿ ನೋಡಲು ಕಲಿಯುತ್ತದೆ ಎಂದೂ ಅವರು ಅಭಿಪ್ರಾಯಪಟ್ಟರು. ೧೮೯೬ರಲ್ಲಿ ಸ್ಟೌಟನು ಈ ಅಭಿಪ್ರಾಯವನ್ನು ಟೀಕಿಸಿದನು. ಇತ್ತೀಚೆಗೆ ಗೆಸ್ಟಾಲ್ಟ್ ಪ್ರಸ್ಥಾನದವರೆಂದುಕೊಂಬ ಜರ್ಮನ್ ಮನಃಶಾಸ್ತ್ರಜ್ಞರು ಅದರ ಮೇಲೆ ಒಟ್ಟಾಗಿ ದಾಳಿ ಮಾಡಿದ್ದಾರೆ. ಈ ಪ್ರಸ್ಥಾನದ ಮೂಲತತ್ವಗಳಲ್ಲಿ ಆಕೃತಿ ಅಥವಾ ರಚನೆಯ ಜ್ಞಾನವು ನಮ್ಮ ಇಂದ್ರಿಯಕ್ಷೇತ್ರದಲ್ಲಾಗುವುದು ನಮ್ಮ ಹುಟ್ಟುಗುಣವೆಂಬುದು ಒಂದು. ಅನುಭವದಿಂದಲೇ ನಾವು ವಸ್ತುಗಳನ್ನು ಗುರುತಿಸಬೇಕು

ಎಂಬುದು ನಿಜ. ಆದರೆ ತೀರ ಅಪರಿಚಿತ ಪದಾರ್ಥವಾದರೂ ಒಂದು ಮಗುವಿಗೆ ಒಂದು "ಗೆಸ್ಟಾಲ್ಟ್" ಆಗಿ ಕಾಣುವುದು. "ಗೆಸ್ಟಾಲ್ಟ್" ಎಂದರೆ ಸುಸಂಬದ್ಧವಾದ ಅಂಗಗಳಿಂದ ಕೂಡಿದ ಒಂದು ಅಂಗಿ ಅಥವಾ ಇಡಿ ಪದಾರ್ಥ; ಅದನ್ನು ಆಕೃತಿ, ರೂಪ ಎಂದು ಮುಂತಾಗಿ ಭಾಷಾಂತರಿಸುವುದುಂಟು. ಮೊದಲು ಕಂಡಿರದ ಪದಾರ್ಥವನ್ನಾದರೂ ಮಗುವು ಈ ಕಾರಣದಿಂದಲೇ ಅಸಂಬದ್ಧ ಸಂವೇದನೆಗಳ ರಾಶಿಯನ್ನಾಗಿ ಕಾಣದೆ, ಒಂದು ಪ್ರತ್ಯೇಕವಾದ ಇಡಿ ಆಕೃತಿಯನ್ನಾಗಿಯೇ ಕಾಣುತ್ತದೆ.

ಈ ವಿಷಯದಲ್ಲಿ ಗೆಸ್ಟಾಲ್ಟ್ ಸಿದ್ಧಾಂತಕ್ಕೆ ಎಲ್ಲ ಸಾಕ್ಷಿಗಳೂ ಅನುಕೂಲವಾಗಿವೆ. ಮಕ್ಕಳ ಸಂವೇದನೆಗಳ ವಿಷಯದಲ್ಲಿ ನಿಷ್ಕೃಷ್ಟವಾದ ಸಾಕ್ಷಿ ದೊರಕುವ ಸಂಭವ ಇಲ್ಲವಾದರೂ ಗೆಸ್ಟಾಲ್ಟ್ ಸಿದ್ಧಾಂತಕ್ಕೆ ಕುರುಡರಾಗಿ ಹುಟ್ಟಿ ಅನಂತರ ಶಸ್ತ್ರಚಿಕಿತ್ಸೆಯಿಂದ ಕಣ್ಣು ಪಡೆದವರ ಪ್ರಕರಣಗಳ ಅಭ್ಯಾಸದಿಂದ ಬಲವಾದ ಸಮರ್ಥನೆ ಸಿಗಬಹುದು. ಅಂಥ ರೋಗಿಗಳು ತಾವು ನೋಡಲಾರಂಭಿಸಿದ ಕ್ಷಣದಿಂದ ಸಂಘಟಿತ ಇಂದ್ರಿಯಕ್ಷೇತ್ರದಿಂದಲೇ ನೋಡಲಾರಂಭಿಸುತ್ತಾರೆ. ಅವರು ಆ ಕ್ಷಣದಲ್ಲಿ ಯಾವ ವಸ್ತುವನ್ನೂ ಗುರುತಿಸಲಾರರು. ಅವರು ಕುರುಡರಾಗಿದ್ದಾಗ ಮುಟ್ಟಿ ತಿಳಿದುಕೊಂಡ ಸುಪರಿಚಿತ ಆಕೃತಿಯನ್ನು ಮೊಟ್ಟಮೊದಲು ಎದುರಿಟ್ಟರೆ ಸಾಮಾನ್ಯವಾಗಿ ಅವರಿಗೆ ಅದರ ಹೆಸರನ್ನು ಹೇಳಲು ಬರದು. ಆದರೆ ಅವರು ಅದನ್ನು ನೋಡುತ್ತಾರೆ ಎಂಬುದರಲ್ಲಿ ಸಂದೇಹವಿಲ್ಲ. ಯಾರಾದರೂ ಅವರನ್ನು ನೀವು ಏನು ನೋಡುತ್ತೀರಿ? ಎಂದು ಕೇಳಿದರೆ ಅವರು ಹೇಳುವ ಉತ್ತರ, "ಒಂದು ವಸ್ತುವನ್ನು ಅಥವಾ ಕೊನೆಯ ಪಕ್ಷ ಒಂದು ಗೆಸ್ಟಾಲ್ಟನ್ನು" ಎಂದು. ತಾವು ಯಾವ ಸಂವೇದನೆಗಳ ಮೊತ್ತವನ್ನು ಒಂದು ಇಡಿ ವಸ್ತುವೆಂದು ಗ್ರಹಿಸಬೇಕು ಎಂಬುದನ್ನು ಅವರು ಅನುಭವದಿಂದ ಕಲಿತುಕೊಳ್ಳಬೇಕಾಗಿಲ್ಲ. ಗೆಸ್ಟಾಲ್ಟ್‌ಪ್ರಸ್ಥಾನವು ಹಿಂದಿನ ಮನಃ ಶಾಸ್ತ್ರೀಯ ಲೇಖನಗಳಲ್ಲಿ ಗೃಹೀತವೆಂದು ತಿಳಿದುಕೊಳ್ಳಲಾದ ಸಂಬಂಧಗಳನ್ನು ಅಥವಾ ಸಂಬಂಧ ಹೊಂದಿರುವ ಅಂಗಗಳನ್ನು ನೋಡುವ ಕಾರ್ಯವು ಅಂಗಗಳನ್ನೇ ವಾಸ್ತವಿಕವಾಗಿ ನೋಡುವುದಾದ ಮೇಲೆ ಗೌಣವಾಗಿ ಬರುತ್ತದೆ ಎಂಬುದನ್ನು ಖಂಡಿಸುತ್ತದೆ. ಅಂದರೆ ಪದಾರ್ಥದ ಇಂದ್ರಿಯಪ್ರತ್ಯಕ್ಷವು ಪದಾರ್ಥದ ಅಂಗಗಳ ಪರಸ್ಪರಸಂಬಂಧಗಳ ಪ್ರತ್ಯಕ್ಷಕ್ಕಿಂತ ಮೊದಲೇ ಪ್ರಧಾನವಾಗಿ ಆಗುತ್ತದೆ ಎಂಬ ಹಳೆಯ ಮತವನ್ನು ಗೆಸ್ಟಾಲ್ಟ್ ಪಂಥ ಅಲ್ಲಗಳೆಯುತ್ತದೆ. ಈ ಹಳೆಯ ಮತವನ್ನು ಇಲ್ಲಿ ಪರಾಮರ್ಶಿಸೋಣ: ಹಿಂದೆ ಹೇಳಿದ ನಕ್ಷೆಯಲ್ಲಿ ಮೊದಲು ನಾವು ಒಂದಿಷ್ಟು ಗೆರೆಗಳನ್ನು ನೋಡಿ ಅನಂತರ ಅವು ಜೊತೆಜೊತೆಯಾಗಿವೆ ಎಂಬುದನ್ನು ನೋಡುವುದಿಲ್ಲ. ನಮಗೆ ತತ್‌ಕ್ಷಣವೇ ಸಾಲುಗಳ ಜೋಡಿಗಳು ಕಾಣಿಸುತ್ತವೆ. ನಾವು ಅವನ್ನು ಜೋಡಿಜೋಡಿಯಾಗಿ ಕಾಣುವುದೂ ಸಾಲುಗಳನ್ನಾಗಿ ಕಾಣುವುದೂ ಏಕಕಾಲಿಕ. ಪ್ರಾಣಿಗಳು ಕೂಡ ನಮ್ಮಂತೆಯೇ ಪದಾರ್ಥ ಹಾಗೂ ಅದರ ಅಂಗಸಂಬಂಧಗಳನ್ನು ಒಂದೇ ಕಾಲದಲ್ಲಿ ನೋಡಬಲ್ಲವೆಂಬುದು ಇತರ ಪ್ರಯೋಗಗಳಿಂದಲೂ ಸಿದ್ಧವಾಗಿದೆ. ಬೂದುಬಣ್ಣದ ಎರಡು ತಟ್ಟೆಗಳಲ್ಲಿ ಆಹಾರವಿಟ್ಟು ಅದರಲ್ಲಿ ಹೆಚ್ಚು ಕಪ್ಪಾದ ತಟ್ಟೆಯಲ್ಲಿರುವ ಆಹಾರವನ್ನೇ ತೆಗೆದುಕೊಳ್ಳುವಂತೆ ಕೋಳಿಗಳಿಗೆ ತರಬೇತು ಕೊಡಲಾಯಿತು. ಆ ಎರಡರಲ್ಲಿ ಕಡಿಮೆ ಕಪ್ಪಾದ ತಟ್ಟೆಗೆ ಬದಲಾಗಿ ಅನಂತರ

17 (ಅ)

A B C D E F

17 (ಬ)

ಕಪ್ಪು ತಟ್ಟೆಯನ್ನು ತಂದಿಡಲಾಯಿತು. ಅದರಿಂದ ಅರೆಬೂದಿಬಣ್ಣವುಳ್ಳ (ಹಿಂದೆ ಹೆಚ್ಚು ಕಪ್ಪೆನಿಸಿದ) ತಟ್ಟೆ ಈಗ ಎರಡರಲ್ಲಿ ಕಡಿಮೆ ಕಪ್ಪಿನದಾಯಿತು. ಅನೇಕ ಕೋಳಿಗಳು ಹಿಂದೆಮುಂದೆ ನೋಡದೆ ಹೊಸ ಅರೆಬೂದಿ ಬಣ್ಣದ ತಟ್ಟೆಯ ಕಡೆಗೇ ಹೋದವು. ಇದರಿಂದ ಗೊತ್ತಾಗುವುದೇನೆಂದರೆ ಬೂದಿಬಣ್ಣದ ಯಾವುದಾದರೊಂದು ವಿಶಿಷ್ಟ ಬಗೆಗೆ ಅನುಕ್ರಿಯೆಯನ್ನು ತೋರಿಸುವ ಬದಲು ಜೋಡಿಯಾಗಿಟ್ಟ ಎರಡು ಪದಾರ್ಥಗಳಲ್ಲಿ ಹೆಚ್ಚು ಕಪ್ಪಾದುದಕ್ಕೇ ಅವು ಅನುಕ್ರಿಯೆಯನ್ನು ತೋರಿಸಲು ಕಲಿತವು.

ಗೆಸ್ಟಾಲ್ಟ್ ಸಿದ್ಧಾಂತದ ಸಾರವು ಪದಾರ್ಥದ ಹೂರಣವು ಅದರ ಆಕೃತಿಯಷ್ಟೇ ಮುಖ್ಯ ಎಂದು ಸಾಧಿಸುವುದರಲ್ಲಿ ಇದೆ. ಅಭಿಜಾತ ಮನಃಶಾಸ್ತ್ರಜ್ಞರು ಯಾವುದೇ ಒಂದು ಜಟಿಲ ವಸ್ತುವಿನ ಮೂಲಸತ್ಯವನ್ನು ತಿಳಿದುಕೊಳ್ಳಬೇಕಾದರೆ (ಅದು ಮಾನಸಿಕವಿರಲಿ,

ಭೌತಿಕವಿರಲಿ) ಅದನ್ನು ಅಂಗಗಳನ್ನಾಗಿ ವಿಂಗಡಿಸಬೇಕು ಎಂಬ ವಿಭಾಗಪದ್ಧತಿಯನ್ನು ಗೆಸ್ಟಾಲ್ಟ್ ಪ್ರಸ್ಥಾನವು ವಿರೋಧಿಸಿತು. ಉಕ್ತಪ್ರಸ್ಥಾನದ ಪ್ರಕಾರ ಒಂದು ಜಟಿಲ ಪದಾರ್ಥದ ಸ್ವರೂಪ ಇಡೀ ಗೆಸ್ಟಾಲ್ಟ್ ಆದರೂ ಅದರ ಅಂಗಗಳನ್ನು ಎಷ್ಟರಮಟ್ಟಿಗೆ ಅವಲಂಬಿಸುತ್ತದೆ, ಅಷ್ಟು ಮಟ್ಟಿಗೇ ಆ ಅಂಗಗಳ ಪರಸ್ಪರ ಸಂಬಂಧಗಳನ್ನೂ ಅವಲಂಬಿಸುತ್ತದೆ. ಬಿಡಿಗಳಿಂದ ಕೂಡಿದ ಒಂದು ಇಡಿ ಪದಾರ್ಥವು ಎಂದೂ ಒಂದು ಬಿಡಿಗಳ ರಾಶಿಯಲ್ಲ. ಅದು ಸುಸಂಬದ್ಧವಾದ ಬಿಡಿಗಳ ಒಂದು ಇಡಿ. ಪದಾರ್ಥ ಸ್ವರೂಪದ ಅಂಗವಾದಾಗ, ಒಂದು ಅಂಗವು ಅದರ ಅಂಗವಾಗಿರದಿದ್ದಾಗಿನ ತನ್ನ ಸ್ವರೂಪಕ್ಕಿಂತ ಭಿನ್ನವಾದ ಸ್ವರೂಪದ್ದಾಗಿರಬಹುದು; ಅಥವಾ ಸ್ವತಂತ್ರವಾದ ಒಂದು ಬಿಡಿಯು ಇಡಿಯೊಂದರ ಅಂಗವಾದಾಗ ತನ್ನ ಸ್ವತಂತ್ರ ಸ್ವರೂಪವನ್ನು ಕಳೆದುಕೊಂಡು ಅಂಗಸ್ವರೂಪವನ್ನು ಪಡೆಯುತ್ತದೆ. ಏಕೆಂದರೆ ಅದು ಇಡಿಯ ಅಂಗವಾದಾಗ ಇಡಿಯ ಹಿನ್ನೆಲೆ ಮತ್ತು ಆವರಣಗಳಿಂದ ಪ್ರಭಾವಿತವಾಗುವುದಲ್ಲದೆ, ಇಡಿಯಲ್ಲಿ ಅದಕ್ಕೆ ಸಿಕ್ಕುವ ಸ್ಥಾನದಿಂದಲೂ ಅದು ಸ್ವರೂಪಾಂತರ ಹೊಂದುತ್ತದೆ. ಬೇರೆ ಬಣ್ಣಗಳ ನಡುವಿಟ್ಟಾಗ ಒಂದು ಬಣ್ಣದ ಮೊದಲಿನ ಸ್ವರೂಪವು ಕೆಲಮಟ್ಟಿಗಾದರೂ ಬದಲಾಗುವುದು. ಬಾಯಿ ಹಾಡುಗಾರಿಕೆಯು ಪಕ್ಕವಾದ್ಯದ ಶ್ರುತಿಯೊಡನೆ ಸಮರಸವಾದಾಗ, ಅದರ ಸ್ವರೂಪ ಬದಲಾಗುವುದನ್ನು ನಾವು ಸ್ಪಷ್ಟವಾಗಿ ಅನುಭವದಿಂದ ಕಂಡುಕೊಳ್ಳಬಹುದು.

✱

## ಅಧ್ಯಾಯ ಐದು

# ಉನ್ಮುಖತೆ

ನಮ್ಮ ಅನುಭವಕ್ಕೆ ಬರುವ ವಿಚಾರ. ಕಲ್ಪನೆ, ಸಂವೇದನೆಗಳನ್ನು ಒಂದು ಪ್ರಜ್ಞಾಪ್ರವಾಹಕ್ಕೆ ಹೋಲಿಸಲಾಗಿದೆ. ಈ ಪ್ರವಾಹವು ಸತತವಾಗಿ ಹರಿಯುತ್ತದೆ. ಅದರ ಕೆಲವು ಅಂಶಗಳನ್ನು ಮಾತ್ರ ನಾವು ಪ್ರತ್ಯೇಕವಾಗಿ ಅನುಭವಿಸಬಲ್ಲೆವು. ಅದರ ಮಿಕ್ಕ ಅಂಶಗಳು ನಮ್ಮ ಜ್ಞಾತಪ್ರಜ್ಞೆಯ ಹೊರಗಿವೆ. ಒಮ್ಮೆ ಅವು ನಮ್ಮ ಅನುಭವಕ್ಕೆ ಬಂದರೂ ಅವನ್ನು ಬಿಡಿ ಬಿಡಿಯಾಗಿ ವಿಂಗಡಿಸಿದ ಅಂಶಗಳೆಂದು ನಮಗೆ ತಿಳಿದುಕೊಳ್ಳಲಾಗುವುದಿಲ್ಲ. ಅವು ಪ್ರತಿ ಕ್ಷಣವೂ ನಮ್ಮೆದುರು ಬರುವ ಜ್ಞಾನರಾಶಿಯ ಮೊತ್ತದ ಅಂಗವಾಗಿಯೇ ಇರುತ್ತವೆ. ಈಗ ನಾವು ಒಂದು ಕೋಣೆಯಲ್ಲಿ ಕಾದಂಬರಿಯನ್ನು ಓದುತ್ತ ಕುಳಿತುಕೊಂಡಿದ್ದೇವೆ ಎಂದು ಭಾವಿಸೋಣ. ಆಗ ನಾವು ಕಾದಂಬರಿಯ ವಸ್ತುವಿನಲ್ಲೇ ಸಾಮಾನ್ಯವಾಗಿ ಲೀನರಾಗಿರುವುದರಿಂದ, ನಮಗೆ ಕೋಣೆಯಲ್ಲಿರುವ ಗಡಿಯಾರದ ಸದ್ದಾಗಲಿ, ಹೊರಗೆ ಮಕ್ಕಳು ಮಾಡುತ್ತಿರುವ ಗಲಾಟೆಯಾಗಲಿ, ಎದುರು ರಸ್ತೆಯ ಮೇಲೆ ಓಡಾಡುವ ವಾಹನಗಳ ಸದ್ದಾಗಲಿ ಕೇಳಿಸದಿರಬಹುದು. ನಾವು ಸ್ಪಷ್ಟವಾಗಿ ತಿಳಿಯದಿರುವ ಉಕ್ತ ಅನುಭವಗಳು ನಮ್ಮ ಪ್ರಜ್ಞೆಯ ಒಳ ಅಂಚಿನಲ್ಲಿ ಇವೆ ಎಂದು ಹೇಳಬಹುದು. ನಾವು ಓದುತ್ತಿರುವ ಕಾದಂಬರಿಯು ನಮ್ಮ ಪ್ರಜ್ಞೆಯ ಕೇಂದ್ರಸ್ಥಳವನ್ನು ಆಕರ್ಷಿಸಿ ಹಿಡಿದಿರುತ್ತದೆ. ಇದೇ ಉನ್ಮುಖತೆ (ಅವಧಾನ). ಅಂದರೆ ನಮ್ಮ ಪ್ರಜ್ಞೆಯ ಕೇಂದ್ರ ಬಿಂದುವು ಕಾದಂಬರಿಯ ವಸ್ತುವಿಗೆ ಉನ್ಮುಖವಾಗಿರುತ್ತದೆ ಎಂದು ಅರ್ಥ. ನಾವು ಓದುತ್ತಿರುವ ಕಾದಂಬರಿಯಿಂದ ನಮ್ಮ ಉನ್ಮುಖತೆಯು ನಮ್ಮ ಪ್ರಜ್ಞೆಯ ಅಂಚಿನಲ್ಲಿರುವ ವಿವಿಧ ಪದಾರ್ಥಗಳಲ್ಲಿ ನಿಷ್ಠವಾಗಬಹುದು; ಅನಂತರ ಪುನಃ ಓದುತ್ತಿರುವ ಕಾದಂಬರಿಯ ಕಡೆಗೆ ತಿರುಗಬಹುದು. ನಮ್ಮ ಉನ್ಮುಖತೆ ಹೀಗೆ ನಮ್ಮ ಪ್ರಜ್ಞೆಯ ಮಧ್ಯದಿಂದ ಅಂಚಿಗೆ ಹಾಗೂ ಅಂಚಿನಿಂದ ಮಧ್ಯಕ್ಕೆ ಆಗಿಂದಾಗ ತಿರುಗುವಾಗ ಒಮ್ಮೆ ಸ್ಪಷ್ಟವಾದುದ್ದು ಇನ್ನೊಮ್ಮೆ ಅಸ್ಪಷ್ಟವೂ, ಒಮ್ಮೆ ಅಸ್ಪಷ್ಟವಾದದ್ದು, ಇನ್ನೊಮ್ಮೆ ಸ್ಪಷ್ಟವೂ ಆಗಿ ತೋರುತ್ತದೆ. ನಮ್ಮ ಪ್ರಜ್ಞೆಯ ಅಂಚಿನಲ್ಲಿ ಇರುವವೆಂದು ಹೇಳಲಾದ ವಸ್ತುಗಳ ಪ್ರಜ್ಞೆ ನಮಗೆ ಏನೂ ಇಲ್ಲದಾಗ ನಾವು ಅವುಗಳ ಇರವನ್ನು ಹೇಗೆ ಗುರುತಿಸಬಹುದು? ಎಂದು ಯಾರಾದರೂ ಕೇಳಿಯಾರು. ಅದಕ್ಕೆ ಉತ್ತರವಾಗಿ ಪ್ರಜ್ಞೆಯ ಅಂಚಿನಲ್ಲಿರುವ ಯಾವುದಾದರೂ ಒಂದು ಪದಾರ್ಥವು ತನ್ನ

ಕಾರ್ಯವನ್ನು ನಿಲ್ಲಿಸಿಬಿಟ್ಟರೆ ಆಗ ನಮಗೆ ಬದಲಾವಣೆಯೊಂದು ಆದದ್ದು ಕಂಡುಬರುವುದೇ ಸಾಕ್ಷಿ ಎನ್ನಬಹುದು.

ನಮ್ಮ ಕೋಣೆಯಲ್ಲಿರುವ ಗಡಿಯಾರದ ಸದ್ದನ್ನು ನಮ್ಮ ಪ್ರಜ್ಞಾಕೇಂದ್ರವು ಬಹಳ ಹೊತ್ತು ಗ್ರಹಿಸದೆ ಇದ್ದಾಗ ಒಮ್ಮೆ ಅದು ನಿಂತುಹೋದರೆ ಆ ಬದಲಾವಣೆಯನ್ನು ನಮ್ಮ ಪ್ರಜ್ಞೆ ಆ ಕೂಡಲೇ ಗ್ರಹಿಸುತ್ತದೆ. ನಮ್ಮ ಪ್ರಜ್ಞೆಯ ಅಂಚಿನ ಅನುಭವಗಳೆಲ್ಲವೂ ನಮ್ಮ ದಿನದ ಬಾಳಿಗೆ ಅನೇಕ ವಿಧದಿಂದ ನೆರವಾಗುತ್ತವೆ. ಅವು ಯಾವಾಗಲೂ ಪ್ರಜ್ಞಾಕೇಂದ್ರವನ್ನು ಹೊಗಲು ಸಿದ್ಧವಾಗಿಯೇ ಇರುತ್ತವೆ. ಉನ್ಮುಖರಾದರೆ ನಾವು ಗಡಿಯಾರದ ಸದ್ದನ್ನು ಕೇಳಬಹುದು; ಆದರೆ ಅದು ನಮಗೆ ಬೇಕಾಗುವವರೆಗೆ ನಮ್ಮ ಪ್ರಜ್ಞಾಕೇಂದ್ರವನ್ನು ಹೊಗುವುದಿಲ್ಲ. ಮನಸ್ಸು ನಮ್ಮ ಪ್ರಜ್ಞಾಕೇಂದ್ರಕ್ಕೆ ಲಕ್ಷ್ಯವಾಗುವ ಅಂಗಗಳನ್ನು ಸಂಪೂರ್ಣವಾಗಿ ಅಲ್ಲದಿದ್ದರೂ ಕೆಲಮಟ್ಟಿಗೆ ಆಯುತ್ತದೆ. ಈ ದೃಷ್ಟಿಯಿಂದ ನೋಡಿದರೆ ಉನ್ಮುಖತೆಯನ್ನು ನಮ್ಮ ಪ್ರಜ್ಞೆಯ 'ಆಯುವ ಚಟುವಟಿಕೆ' ಎಂದು ಲಕ್ಷಣಿಸಬಹುದು.

## ಉನ್ಮುಖತೆಯ ಕ್ಷೇತ್ರ

ಮನುಷ್ಯರ ಪ್ರಜ್ಞಾಕೇಂದ್ರವನ್ನು ಏಕಕಾಲದಲ್ಲಿ ಆಕ್ರಮಿಸಬಲ್ಲ ವಸ್ತುಗಳ ಸಂಖ್ಯೆಯನ್ನು ಪ್ರಯೋಗಪರೀಕ್ಷೆಗೆ ಗುರಿಪಡಿಸಲಾಗಿದೆ. ಒಂದು ಕಾಲದಲ್ಲಿ ಒಂದೇ ಪದಾರ್ಥಕ್ಕೆ ಉನ್ಮುಖರಾಗಬಹುದು ಎಂಬುದು ಸಾಮಾನ್ಯ ಅಭಿಪ್ರಾಯ. ಆದರೆ ಈ ಮಾತನ್ನು ತಿದ್ದಬೇಕು. ಏಕೆಂದರೆ ಒಂದು ವಸ್ತುವು ಸರಳವಾಗಿಯೂ ಇರಬಹುದು ಅಥವಾ ಜಟಿಲವಾಗಿಯೂ ಇರಬಹುದು. ನಾವು ಒಂದು ಮನೆಯನ್ನು ಒಂದು ಘಟಕ ಅಥವಾ ವಸ್ತುವೆಂದು ತಿಳಿಯುತ್ತೇವೆ; ಆದರೆ ಅದರಲ್ಲಿ ಕಿಟಕಿ, ಬಾಗಿಲು ಮುಂತಾದ ತಮ್ಮಲ್ಲೇ ಸ್ವತಂತ್ರ ಘಟಕಗಳೆನಿಸಿದ ಅನೇಕ ಭಾಗಗಳಿವೆ. ಆದುದರಿಂದ ಒಂದು ವಸ್ತುವಿನ ಒಂದುತನವು ನಮ್ಮ ಉದ್ದೇಶಕ್ಕೆ ತಕ್ಕಂತೆ ಬದಲಾಗುತ್ತದೆ. ಒಂದು ವಸ್ತುವು ಒಂದೇ ಒಂದು ಪದಾರ್ಥವಾಗಿರಬಹುದು ಇಲ್ಲವೆ ಅನೇಕ ಪದಾರ್ಥಗಳನ್ನು ಗುಂಪುಗೂಡಿಸಿ ಒಂದೇ ವಸ್ತುವೆಂದು ತಿಳಿದುಕೊಂಡದ್ದಾಗಿರಬಹುದು.

ಶೀಘ್ರದರ್ಶಿ ಯಂತ್ರವು (Tachistoscope) ನಮ್ಮ ಕಣ್ಣ ಮುಂದೆ ೧೦೦ನೆಯ ಒಂದು ಸೆಕುಂದದಿಂದ ೧/೫ ಸೆಕುಂದದವರೆಗಿನ ಕಾಲಾವಧಿಯಲ್ಲಿ, ಚುಕ್ಕೆ, ಗೆರೆ, ಅಕ್ಷರ, ಬಣ್ಣಗಳನ್ನು ಇಟ್ಟು ತೆಗೆಯುತ್ತದೆ. ನೋಟದ ಕಾಲವನ್ನು ಇಷ್ಟು ಕಡಿಮೆಮಾಡಿದ್ದು ಏತಕ್ಕೆ? ಅಷ್ಟು ಕಾಲದಲ್ಲಿ ನಮ್ಮ ಕಣ್ಣು ಚಲಿಸಿ, ಆ ಮೂಲಕ ನಾವು ನೋಡಿದ ವಸ್ತುಗಳನ್ನು ಲೆಕ್ಕಿಸುವ ಅವಕಾಶವನ್ನು ತಪ್ಪಿಸುವುದಕ್ಕೆ. ಅಂಥ ಕ್ಷಣಾಂಶದಲ್ಲಿ ನಾವು ಗುರುತಿಸಬಹುದಾದ ವಸ್ತುಗಳ ಸಂಖ್ಯೆ ಹೆಚ್ಚೆಂದರೆ ನಾಲ್ಕು ಇಲ್ಲವೆ ಐದು. ಇದನ್ನೇ ನಾವು ಉನ್ಮುಖತಾ ಕ್ಷೇತ್ರವೆನ್ನುತ್ತೇವೆ. ಉನ್ಮುಖತೆಯ ಒಂದೇ ಒಂದು ಸ್ಪಂದ ಅಥವಾ ಕಟಾಕ್ಷದಲ್ಲಿ ನಾವು ಗ್ರಹಿಸಬಹುದಾದ ವಸ್ತುಗಳ ಸಂಖ್ಯೆಗೆ ಉನ್ಮುಖತಾ ಕ್ಷೇತ್ರವೆನ್ನಬಹುದು. ಐದು ಬೇರೆ ಬೇರೆ ಅಕ್ಷರಗಳ ಬದಲು ಐದು ಚಿಕ್ಕ ಪದಗಳನ್ನು ಗುರುತಿಸಬಹುದು

ಎಂಬುದು ಕುತೂಹಲಕರವಲ್ಲವೆ? ಮತ್ತು ಚುಕ್ಕೆಗಳನ್ನು ಗುಂಪು ಗುಂಪಾಗಿ ಇಟ್ಟಿದ್ದರೆ ಬೇರೆ ಬೇರೆ ಚುಕ್ಕೆಗಳು ಎಷ್ಟಿವೆಯೋ ಅಷ್ಟೆ ಸಂಖ್ಯೆಯ ಗುಂಪುಗಳನ್ನು ಪ್ರತ್ಯೇಕವಾಗಿ ಗುರುತಿಸಬಹುದು. ಐದು ಜೊತೆ ಗೆರೆಗಳನ್ನು ಐದು ಪ್ರತ್ಯೇಕ ಗೆರೆಗಳೆಂದು ಗುರುತಿಸುವುದು ಸುಲಭ. ಹೀಗೆ ಗುರುತಿಸುವ ಶಕ್ತಿಯು ನಮಗೆ ವಯಸ್ಸು ಮತ್ತು ಅಭ್ಯಾಸ ಹೆಚ್ಚಾದಂತೆ ಹೆಚ್ಚಾಗುತ್ತದೆ. ಅಂದರೆ ನಮ್ಮ ಉನ್ಮುಖತಾ ಕ್ಷೇತ್ರ ಹೆಚ್ಚುವುದೆಂದು ಅರ್ಥವಲ್ಲ ಆದರೆ ಘಟಕಗಳು ಹೆಚ್ಚು ಹೆಚ್ಚು ಜಟಿಲವಾಗುತ್ತ ಹೋಗಬಹುದು ಎಂದರ್ಥ. ನಮಗೆದುರಾಗುವ ವಸ್ತುಗಳನ್ನು ಏಕಕಾಲದಲ್ಲಿ ಗ್ರಹಿಸುವ ಬದಲು ಅನುಕ್ರಮವಾಗಿ ಗ್ರಹಿಸುವಲ್ಲಿಯೂ ಇದೇ ತತ್ವ ಅಡಗಿದೆ. ಕಾಲಲೋಲಕ (Mctronome) ಯಂತ್ರದ ಬಡಿತಗಳನ್ನು ಒಂದಾದಮೇಲೆ ಒಂದರಂತೆ (ಆದರೆ ಎಣಿಸಲು ಶಕ್ಯವಾಗದಷ್ಟು ಬೇಗ) ನಾವು ಕೇಳಲಾರಂಭಿಸಿದರೆ, ಒಂದು ಕ್ಷಣದಲ್ಲಿ ಎಂಟಕ್ಕಿಂತ ಹೆಚ್ಚು ಬಡಿತಗಳನ್ನು ಕೇಳಲಾರೆವು. ಕಾಲ–ಲೋಲಕವು ಮೊದಲು ಎಂಟುಸಲ ಅನುಕ್ರಮವಾಗಿ ಎಂಟು ಬಡಿತಗಳನ್ನು ಬಡಿದು ಅನಂತರ ಅನುಕ್ರಮವಾಗಿ ಏಳುಬಡಿತಗಳನ್ನು ಬಡಿದರೆ, ಯೋಜ್ಯನು ಅವುಗಳನ್ನು ಎಣಿಸದೆ ಒಂದನೆಯ ಗುಂಪನ್ನು ಎರಡನೆಯ ಗುಂಪಿನಿಂದ ಪ್ರತ್ಯೇಕಿಸಿ ತಿಳಿದುಕೊಳ್ಳಬಲ್ಲನು; ಆದರೆ ಎಂಟು ಬಡಿತಗಳಿಗಿಂತ ಹೆಚ್ಚಿನ ಗುಂಪುಗಳ ವಿಷಯವಾಗಿ ಅವನ ತೀರ್ಪನ್ನು ಆಧರಿಸಲು ಬರದು.

ಯಾವುದಾದರೊಂದು ಭೌತಿಕ ಪ್ರೇರಣೆಯು ನಿಂತುಹೋದ ನಂತರ ಅದರಿಂದ ಉಂಟಾದ ಜಟಿಲ ಸಂವೇದನೆಯ ವಿಶ್ಲೇಷಣ ಆರಂಭಿಸುವುದೆಂದು ಹೇಳುವುದುಂಟು. ಈ ವಿಶ್ಲೇಷಣೆಯಲ್ಲಿ ಆ ಜಟಿಲ ಸಂವೇದನೆಯ ಒಂದೊಂದೇ ಅಂಗವನ್ನು ಪ್ರತ್ಯೇಕಿಸಿ, ಅದಕ್ಕೆ ನಾವು ವಿಶೇಷತಃ ಉನ್ಮುಖರಾಗುತ್ತೇವೆ. ಹಿಂದೆ ಹೇಳಿದ ಪ್ರಯೋಗದಲ್ಲಿರುವ ಚುಕ್ಕೆ ಅಥವಾ ಗೆರೆಗಳ ಎಣಿಕೆ ಇಲ್ಲವೆ ಅಕ್ಷರಗಳನ್ನು ಗುರುತಿಸುವುದು, ಅವು ನಮ್ಮ ಕಣ್ಣೆದುರಿನಿಂದ ಹೊರಟು ಹೋದ ನಂತರವೇ. ಒಬ್ಬ ಸಂಶೋಧಕನು ಅನೇಕ ವ್ಯಕ್ತಿಗಳ ಸ್ಮೃತಿ–ಪ್ರತಿಮೆಗಳ ಉಳಿಗಾಲವನ್ನು ಅಳೆದು, ಮೂಲ ಪ್ರೇರಣೆ ಹೋಗಿ ಬಹಳ ಕಾಲವಾದ ಮೇಲೆ ಕೂಡ ಸ್ಮೃತಿಪ್ರತಿಮೆಯು ಯಾರಲ್ಲಿ ಅಚ್ಚಳಿಯದೆ ಉಳಿದಿರುವುದೋ ಅಂಥವರ ಉನ್ಮುಖತಾ ಕ್ಷೇತ್ರವು ಬಹಳ ವಿಸ್ತಾರವಾದದ್ದೆಂದು ತೀರ್ಮಾನಿಸಿದ್ದಾನೆ. ಹೀಗಿರುವುದರಿಂದ ಉನ್ಮುಖತಾಕ್ಷೇತ್ರವು ಸ್ಮೃತಿ ಪ್ರತಿಮೆಯನ್ನು ಅವಲಂಬಿಸಿದೆ ಎಂಬುದರಲ್ಲಿಯೂ ಕೆಲಮಟ್ಟಿನ ಸತ್ಯಾಂಶವಿದೆ ಎಂದು ಹೇಳಬಹುದು.

## ಉನ್ಮುಖತೆಯ ಕಾರಕಗಳು

ಉನ್ಮುಖತೆಯನ್ನು ಉಂಟುಮಾಡುವ ಕಾರಕಗಳಲ್ಲಿ ವಸ್ತುನಿಷ್ಠ ಮತ್ತು ವ್ಯಕ್ತಿನಿಷ್ಠ ಎಂಬ ಎರಡು ಬಗೆಗಳಿವೆ.

**ವಸ್ತುನಿಷ್ಠ ಉನ್ಮುಖತೆ:** ಒಂದಲ್ಲ ಒಂದು ಕಾಲದಲ್ಲಿ ಎಲ್ಲವರೂ ಎಲ್ಲದಕ್ಕೂ ಉನ್ಮುಖರಾಗಬಹುದು. ಆದರೆ ಸಾಮಾನ್ಯವಾಗಿ ಮನುಷ್ಯರು ಕೆಲವನ್ನು ಬಿಟ್ಟು ಇನ್ನು

ಕೆಲವಕ್ಕೆ ಮಾತ್ರ ಉನ್ಮುಖರಾಗುವುದು ರೂಢಿ. ಈ ಸಂದರ್ಭದಲ್ಲಿ ಯಾವ ತರದ ವಸ್ತುಗಳು ಜನರ ಉನ್ಮುಖತೆಯನ್ನು ಸೆಳೆದು ಸೆರೆಹಿಡಿಯುವುದೆಂಬುದು ಮನಃಶಾಸ್ತ್ರೀಯ ಪ್ರಶ್ನೆ. ಪ್ರೇರ್ಯ, ಪ್ರೇರಣೆ ಮತ್ತು ಅನುಕ್ರಿಯೆಗಳ ಸೂತ್ರವನ್ನು ಇಟ್ಟುಕೊಂಡರೆ ನಾವು ಉತ್ತರವನ್ನು ಹುಡುಕುವುದು ಸುಲಭವಾಗುತ್ತದೆ. ಉನ್ಮುಖತೆಯನ್ನು ಸೆಳೆಯುವಲ್ಲಿ ಕೆಲ ಬಗೆಯ ಪ್ರೇರಣೆಗಳು ಹೆಚ್ಚು ಅನುಕೂಲವಾಗಿರುತ್ತವೆ.

**ತೀವ್ರತೆ:** ಪ್ರೇರಣೆಯ ತೀವ್ರತೆಯು ಮೊದಲನೆಯ ಕಾರಕ. ಉನ್ಮುಖತೆಯನ್ನು ಸೆಳೆಯುವಲ್ಲಿ ದುರ್ಬಲ ಪ್ರೇರಣೆಗಿಂತ ಬಲಿಷ್ಠ ಪ್ರೇರಣೆ ಹೆಚ್ಚು ಅನುಕೂಲವಾಗುತ್ತದೆ. ಪಿಸುಮಾತಿಗಿಂತ ಜೋರಾದ ಸದ್ದು ಮಿಣುಕು ದೀಪಕ್ಕಿಂತ ತೀಕ್ಷ್ಣಪ್ರಕಾಶವೂ ನಮ್ಮ ಉನ್ಮುಖತೆಯನ್ನು ಸೆಳೆದುಕೊಳ್ಳುವುದರಲ್ಲಿ ಹೆಚ್ಚು ಸಮರ್ಥ. ದೃಶ್ಯಪದಾರ್ಥಗಳಲ್ಲಿ ಅವುಗಳ ಗಾತ್ರವು ತೀವ್ರತೆಯಷ್ಟೇ ಪರಿಣಾಮಕಾರಿ. ಸಣ್ಣ ವಸ್ತುಗಳಿಗಿಂತ ದೊಡ್ಡ ವಸ್ತುಗಳು ನಮ್ಮ ಉನ್ಮುಖತೆಯನ್ನು ಸೆಳೆಯುವುದು ಹೆಚ್ಚು.

**ಪುನರಾವೃತ್ತಿ:** ಪುನರಾವೃತ್ತಿ ಅಥವಾ ಪ್ರೇರಣೆಗಳ ಸಮುದಯವು ಇನ್ನೊಂದು ಕಾರಕ. "ಅಯ್ಯೋ, ಅಯ್ಯೋ, ಅಯ್ಯೊ!" ಎಂದರೆ ಯಾರಾದರೂ ಓಡಿ ಬಂದಾರು. ಹಾಗಲ್ಲದೆ, ಒಂದೇ ಸಲ "ಅಯ್ಯೋ" ಅಂದರೆ ಯಾರೂ ಓಡಿಬರದಿರಬಹುದು. ಆದರೆ ಒಂದು ಪ್ರೇರಣೆಯನ್ನು ಬಹಳ ಸಲ ಪುನರಾವರ್ತಿಸಿದರೆ ತನ್ನ ಏಕತಾನದ ದೆಸೆಯಿಂದ ಅದು ನಮ್ಮ ಉನ್ಮುಖತೆಯನ್ನು ಸೆರೆಹಿಡಿಯಲಾರದು. ಆಗ ನಮ್ಮ ಉನ್ಮುಖತೆಯು ಬದಲಾವಣೆ ಹಾಗೂ ಹೊಸತನಗಳಿರುವ ಇನ್ನಾವುದಾದರೂ ಪ್ರೇರಣೆಗೆ ವಶವಾಗುತ್ತದೆ.

**ವ್ಯಭಿಚಾರ:** ಇದೊಂದು ಬಲಿಷ್ಠವಾದ ಕಾರಕ. ವ್ಯಭಿಚಾರ ಪ್ರೇರಣೆಯು ಸ್ಥಾಯಿಪ್ರೇರಣೆಗಿಂತ ಹೆಚ್ಚು ಸಾಮರ್ಥ್ಯ ಉಳ್ಳದ್ದು. ಅಚಲವಾಗಿ ನಿಂತ ಚಿತ್ರ ಒಂದಕ್ಕಿಂತ ಚಂಚಲಿಸುವ ಚಿತ್ರವು ನಮ್ಮ ಲಕ್ಷ್ಯವನ್ನು ಹೆಚ್ಚಾಗಿ ಸೆಳೆಯುತ್ತದೆ. ಸ್ಥಿರವಾದ ಬೆಳಕಿಗೆ ಎದುರಾದ ಜಾಹೀರಾತಿಗಿಂತ ನಂದಿ ಉರಿವ ಬೆಳಕಿಗೆ ಎದುರಾದ ಜಾಹೀರಾತು ಹೆಚ್ಚು ಆಕರ್ಷಕ. ಆದುದರಿಂದ ವಸ್ತುವು ಬದಲಾಯಿಸುವ ಅಥವಾ ವ್ಯಭಿಚರಿಸುವ ಅಂಶವೂ ಒಂದು ಗಮನೀಯ ಕಾರಕ.

**ವಿಲಕ್ಷಣತೆ:** ಪರಿಣಾಮದಲ್ಲಿ ಸಾಧಾರಣವಾಗಿ ವಿಲಕ್ಷಣತೆಯು ವ್ಯಭಿಚಾರವನ್ನೇ ಹೋಲುತ್ತದೆ. ತನ್ನ ಪರಿಸರದಲ್ಲಿ ಇರುವ ಇತರ ವಸ್ತುಗಳಿಗಿಂತ ವಿಲಕ್ಷಣವಾಗಿರುವ ವಸ್ತುವು ನಮ್ಮ ಲಕ್ಷ್ಯವನ್ನು ಬಹುಬೇಗ ಸೆಳೆಯುವುದು. ಅದು ಬಿಳಿಯ ಗೋಡೆಯ ಮೇಲೆ ಇಟ್ಟ ಕರಿಯ ಚುಕ್ಕೆಯಾಗಬಹುದು; ಇಲ್ಲವೆ ಸಂತೆಯಲ್ಲಿರುವ ಒಂದು ಏಕಾಂತ ಸ್ಥಳವಾಗಬಹುದು; ನಯವಾದ ಕೆನ್ನೆಯ ಮೇಲೆ ಒರಟಾಗಿ ಎದ್ದು ಮೊಡವೆಯಾಗಬಹುದು; ಇಲ್ಲವೆ ಪಟ್ಟೆಯ ಸೀರೆಯ ಒಂದು ಹರಕೂ ಆಗಬಹುದು.

**ವ್ಯಕ್ತಿನಿಷ್ಠಕಾರಕಗಳು:** ಇವು ಎರಡು ಬಗೆಯಾಗಿವೆ. ಮೊದಲನೆಯದು ವ್ಯಕ್ತಿಯ ಸ್ಥಿರವಾಗಿರುವ ಅಥವಾ 'ರಚನಾಗತವಾಗಿರುವ' ಲಕ್ಷಣಗಳು; ಎರಡನೆಯದು

ತಾತ್ಕಾಲಿಕವಾಗಿರುವ ಸ್ಥಿತಿ ಮತ್ತು (ನಡೆಯುತ್ತಲೇ ಇರುವ) ಕಾರ್ಯಪ್ರವಾಹ. ಸ್ಥಿರಕಾರಕಗಳಲ್ಲಿ ವ್ಯಕ್ತಿಯ ಉನ್ಮುಖತೆ ಮತ್ತು ಪರಾಙ್ಮುಖತೆ ಅಭ್ಯಾಸದಿಂದ (Habit) ಬರುತ್ತವೆ. ಕೆಲವು ವಸ್ತುಗಳ ಬಗ್ಗೆ ಲಕ್ಷ್ಯ ಹಾಕುವುದನ್ನೂ ಮತ್ತೆ ಕೆಲವು ವಸ್ತುಗಳನ್ನು ಅಲಕ್ಷ್ಯ ಮಾಡುವುದನ್ನೂ ಪ್ರತಿಯೊಂದು ವ್ಯಕ್ತಿಯೂ ಕಲಿತಿರುತ್ತಾನೆ. ಮೋಟಾರು ಕಾರಿನ ಡ್ರೈವರನಿಗೆ ಅದರ ಸದ್ದನ್ನು ಕೇಳಿ ಅಭ್ಯಾಸವಾಗಿರುತ್ತದೆ; ಅದರ ಸದ್ದು ಮೋಟಾರು ಸರಾಗವಾಗಿ ಹೋಗುತ್ತಿದೆಯೇ ಇಲ್ಲವೇ ಎಂಬುದನ್ನು ಅವನಿಗೆ ತಿಳಿಸುತ್ತದೆ. ಸಸ್ಯಶಾಸ್ತ್ರಜ್ಞನಿಗೆ ಕಲ್ಲು ಮತ್ತು ಮರಗಳಲ್ಲಿರುವ ಅತ್ಯಂತ ಕ್ಷುದ್ರವಾದ ಸಸ್ಯ ವಿಶೇಷಗಳನ್ನೂ ನೋಡುವುದು ಅಭ್ಯಾಸವಾಗಿರುತ್ತದೆ. ನೋಡತಕ್ಕದ್ದು ಯಾವುದು ಬಿಡತಕ್ಕದ್ದು ಯಾವುದು ಎಂಬುದನ್ನು ಮಗುವು ದೊಡ್ಡವರಿಂದ ಕಲಿತಿರುತ್ತದೆ.

ತಾತ್ಕಾಲಿಕ ವ್ಯಕ್ತಿನಿಷ್ಠ ಕಾರಕಗಳಲ್ಲಿ ಆಸಕ್ತಿಯು ಬಹಳ ಮುಖ್ಯವಾದದ್ದು. ಪ್ರಸ್ತುತ ಕಾಲದಲ್ಲಿ ನಿಮ್ಮ ಆಸಕ್ತಿಗೆ ಅನುಗುಣವಾಗಿರುವುದು ಯಾವುದೆಂಬುದನ್ನು ನೀವು ನೋಡುತ್ತೀರಿ. ಒಂದು ವಸ್ತುಪ್ರದರ್ಶನದಲ್ಲಿ ನೀವು ಕೊಳ್ಳಬೇಕೆಂದಿರುವ ವಸ್ತು ನಿಮ್ಮ ಕಣ್ಣನ್ನು ಸೆಳೆಯುತ್ತದೆ; ಮಿಕ್ಕ ವಸ್ತುಗಳನ್ನು ಅಲ್ಲಿ ಎಷ್ಟು ಎದ್ದು ಕಾಣುವಂತೆ ಪ್ರದರ್ಶಿಸಿದ್ದರೂ ಅತ್ತ ಕಡೆ ನಿಮ್ಮ ಲಕ್ಷ್ಯ ಹರಿಯುವುದಿಲ್ಲ. ಎಷ್ಟೋ ವೇಳೆ ನಿಮ್ಮ ನಿಯತಕಾಲಿಕ ಆಸಕ್ತಿಯು ಪ್ರಶ್ನೆಯ ರೂಪವನ್ನು ತಾಳುತ್ತದೆ. ಒಮ್ಮೆ ಬೆಲೆಯ ಪ್ರಶ್ನೆ ನಿಮ್ಮ ಮನಸ್ಸಿನ ಎದುರು ಬಂದ ಕೂಡಲೆ ನಿಮ್ಮ ಉನ್ಮುಖತೆಯನ್ನು ಒಂದು ಅಪ್ರಮುಖವಾದ ಬೆಲೆಪಟ್ಟಿಯು ಆಕರ್ಷಿಸುತ್ತದೆ!

ಲಕ್ಷ್ಯವನ್ನು ಸೆಳೆಯುವುದೇ ಒಂದು, ಅದನ್ನು ಸೆರೆಹಿಡಿದಿಡುವುದೇ ಮತ್ತೊಂದು. ಹೊಸತನ ಮತ್ತು ತೀವ್ರತೆ ಮುಂತಾದ ಪ್ರೇರಣಾಕಾರಕಗಳು ನಿಮ್ಮ ಲಕ್ಷ್ಯವನ್ನು ಸೆಳೆಯುತ್ತವೆ; ಆದರೆ ಬಹಳ ಕಾಲದವರಗೆ ನಿಮ್ಮ ಲಕ್ಷ್ಯವನ್ನು ಸೆರೆಹಿಡಿದಿಡಲು ಯಾವುದಾದರೊಂದು ನಿಜವಾದ ಆಸಕ್ತಿ ಬೇಕು. ನಿಜವಾದ ಆಸಕ್ತಿಯು ನಿಮ್ಮ ಉನ್ಮುಖತೆಗೆ ಬೆಂಬಲವಾಗಿ (Re-inforcement) ನಿಲ್ಲುತ್ತದೆ.

ಎಷ್ಟೋ ಸಲ ಉಪಾಧ್ಯಾಯರು ಮಕ್ಕಳು ತಾವು ಹೇಳುವುದನ್ನು ಲಕ್ಷಿಸುವುದಿಲ್ಲವೆಂದು ದೂರುತ್ತಾರೆ. ಅದೇ ಮೇರೆಗೆ ವಿದ್ಯಾರ್ಥಿಗಳಾದರೂ ತಮ್ಮ ಉನ್ಮುಖತೆಯ ಶಕ್ತಿಯು ತೀರ ದುರ್ಬಲವೆಂದು ದೂರಿಕೊಳ್ಳುವುದುಂಟು. ಮಕ್ಕಳನ್ನು ಕಾಡಿಸುವುದು ಸಂಪೂರ್ಣ ಪರಾಙ್ಮುಖತೆಯಲ್ಲ. ಅವರಿಗೆ ಅಂಟಿಕೊಂಡಿರುವ ರೋಗವೆಂದರೆ ಅನ್ಯೋನ್ಮುಖತೆ. ವಿದ್ಯಾರ್ಥಿಗಾದರೂ ಉಂಟಾಗುವ ತೊಂದರೆ ಇದೇ. ಅವನು ತನ್ನ ಇತರ ಆಸಕ್ತಿಗಳನ್ನು ಬಿಟ್ಟು ಕೊಟ್ಟಾಗ ಅವನ ಮನಸ್ಸಿನ ಅಲೆದಾಟ ನಿಲ್ಲುವುದು; ಅಂಥ ಸ್ತಿಮಿತ ಮನಸ್ಸಿನಿಂದ ಉಪನ್ಯಾಸದಲ್ಲಿ ನಿಜವಾದ ಆಸಕ್ತಿಯನ್ನು ತಾಳಿದರೆ ಅವನ ತೊಂದರೆ ಪರಿಹಾರವಾಗುವುದು.

**ಉನ್ಮುಖತಾಭಂಗ:** ಇದು ಉನ್ಮುಖತೆಗೆ ವಿರುದ್ಧವಾದ ಧರ್ಮ. ಉನ್ಮುಖತಾಭಂಗವೆಂಬುದು ನಾವು ಉನ್ಮುಖರಾಗಬಯಸುವ ವಸ್ತುವಿನಿಂದ ನಮ್ಮ ಉನ್ಮುಖತೆಯನ್ನು ತನ್ನ ಕಡೆಗೆ ಎಳೆವ ಒಂದು ಪ್ರೇರಣೆ. ಉನ್ಮುಖತೆಯನ್ನು

ವ್ಯವಸ್ಥೆಗೊಳಿಸಿಕೊಳ್ಳುವುದರಲ್ಲಿ ಉನ್ಮುಖತಾಭಂಗವನ್ನು ಗೆದ್ದುಕೊಳ್ಳುವುದು ಅತ್ಯಂತ ಮುಖ್ಯವಾದ ಅಂಶ.

ಉನ್ಮುಖತಾಭಂಗವು (Distraction) ಮೂರು ವಿಧವಾಗಿದೆ: ಆಂತರಿಕ, ಬಾಹ್ಯ ಮತ್ತು ಭಾವಿಕ ಎಂದು. ತಲೆನೋವು, ಹೊಟ್ಟೆನೋವು ಮುಂತಾದವು ಆಂತರಿಕ ಭಂಗಗಳು. ಹೊರಗಿನ ಗದ್ದಲಗಳು ಬಾಹ್ಯಭಂಗಗಳು. ನಾವು ಒಂದು ವಸ್ತುವಿನಲ್ಲಿ ಉನ್ಮುಖರಾಗಿರುವಾಗ ನಮ್ಮ ವಿಚಾರಗಳು ಬೇರೆ ದಿಕ್ಕುಗಳಿಗೆ ನಮ್ಮನ್ನು ಎಳೆದುಕೊಂಡು ಹೋದರೆ ಅಂಥ ಭಂಗವು ಭಾವಿಕ (Ideational) ಎನಿಸುತ್ತದೆ.

ಉನ್ಮುಖತಾಭಂಗವನ್ನು ಗೆಲ್ಲಲು ಅನೇಕ ಮಾರ್ಗಗಳಿವೆ. ಅವುಗಳಲ್ಲಿ ಮೊದಲನೆಯದೆಂದರೆ ಉನ್ಮುಖತಾಭಂಗವನ್ನು ಕಿತ್ತು ಬಿಸುಡುವುದು. ನಾವು ಓದುತ್ತಿದ್ದಾಗ ಯಾರಾದರೊಬ್ಬರು ಬಂದು ಜೋರಾಗಿ ಮಾತಾಡಲು ಶುರುಮಾಡಿದರೆ, ಅವರನ್ನು ನಾವು ಹೊರಗೆ ಅಟ್ಟಿಬಿಡಬಹುದು. ಇದು ಒಂದನೆಯ ಮಾರ್ಗ. ಹಾಗಲ್ಲದೆ ಅವರನ್ನು ಮಾತಾಡಲು ಬಿಟ್ಟು ಓದುವಿಕೆಯಲ್ಲಿ ನಾವು ಹೆಚ್ಚು ಪ್ರಯತ್ನವನ್ನು ಹಾಕಬಹುದು. ಅದರಿಂದ ಹೆಚ್ಚು ಏಕಾಗ್ರರಾಗಿ, ಗಟ್ಟಿಯಾಗಿ ಓದತೊಡಗಬಹುದು; ಇಲ್ಲವೆ ನಮ್ಮ ತಲೆಯನ್ನು ಪುಸ್ತಕದ ಹತ್ತಿರಕ್ಕೆ ಒಯ್ಯಬಹುದು. ಈ ಪ್ರಯತ್ನದಲ್ಲಿ ನಾವು ಮಾಡುತ್ತಿರುವ ಕೆಲಸದಲ್ಲಿ ಹೆಚ್ಚಿನ ಶಕ್ತಿಯನ್ನು ಪ್ರಯೋಗಿಸುತ್ತೇವೆ. ಹೀಗೆ ಉನ್ಮುಖತಾಭಂಗವನ್ನು ಗೆಲ್ಲುವುದು ಎರಡನೆಯ ಮಾರ್ಗ.

ಅದನ್ನು ಬಿಟ್ಟು ನಾವು ಉನ್ಮುಖತಾಭಂಗದ ಪ್ರೇರಣೆಗೆ ಪರಾಙ್ಮುಖರಾಗುವ ಅಭ್ಯಾಸವನ್ನು ಬೆಳೆಸಿಕೊಂಡು ಅದನ್ನು ಗೆಲ್ಲಬಹುದು. ಈ ಪ್ರಕ್ರಿಯೆಯೇ ನೈಷೇಧಿಕ ಹೊಂದಿಕೆ. ಪದೇ ಪದೇ ಭಂಗವೊಂದು ನಮ್ಮನ್ನು ಪೀಡಿಸತೊಡಗಿದರೆ ಕಾಲಹೋದ ಹಾಗೆ ನಾವು ಅದನ್ನು ಅಲಕ್ಷಿಸುವುದನ್ನು ಕಲಿಯುತ್ತೇವೆ. ರೈಲುನಿಲ್ದಾಣದ ಬಳಿ ವಾಸ ಮಾಡುವವರಿಗೆ ಅಲ್ಲಿಗೆ ಬಂದು ಹೋಗುವ ರೈಲುಗಳ ಸದ್ದಿನಿಂದ ಯಾವ ತೊಂದರೆಯೂ ಆಗುವುದಿಲ್ಲ. ಅದೇ ಒಬ್ಬ ಹೊಸಬನು ಅಲ್ಲಿಗೆ ಹೋದರೆ ಅವನಿಗೆ ಆ ಸದ್ದು ಅತ್ಯಂತ ಬಲವಾದ ಭಂಗವೆನಿಸುತ್ತದೆ.

ಕೊನೆಯದಾಗಿ, ನಮ್ಮ ಮುಖ್ಯ ಕಾರ್ಯದೊಡನೆ ಉನ್ಮುಖತಾಭಂಗವನ್ನು ಜೋಡಿಸಿಕೊಂಡು ಬಿಟ್ಟರೆ ಆಗ ಅದರ ವಿಷದ ಹಲ್ಲನ್ನು ಮುರಿದಂತೆ ಆಗುತ್ತದೆ. ಆಗ ಉನ್ಮುಖತಾಭಂಗವೆಂಬುದೇ ನಮ್ಮ ಮಿತ್ರನಾಗಿ ಕೆಲಸ ಮಾಡತೊಡಗುತ್ತದೆ. ಒಬ್ಬ ಸಂಗೀತಗಾರನು ಬಲಗೈಯಿಂದ ಕಾಲಿನಿಂದ ಒತ್ತುವ ಹಾರ್ಮೋನಿಯಮ್ಮನ್ನು ನುಡಿಸುತ್ತಿದ್ದಾಗ ಅವನಿಗೆ ಅವನ ಎಡಗೈಯೊಂದು ಉನ್ಮುಖತಾಭಂಗದ ಕಾರಣವೆನಿಸಿತು. ಆ ಕೈಯಿಂದ ಏನು ಮಾಡಬೇಕೆಂಬುದೇ ಗೊತ್ತಾಗಲಿಲ್ಲ. ಆದರೆ ಕಾಲಕ್ರಮೇಣ ಅವನು ಎಡಗೈಯಿಂದಲೂ ನುಡಿಸುವುದನ್ನು ಕಲಿತನು. ಹೀಗೆ ಅವನು ಉನ್ಮುಖತಾಭಂಗಕ್ಕೆ ಕಾರಣವಾದ ಅವನ ಎಡಗೈಯನ್ನು ಮಿತ್ರನನ್ನಾಗಿ ಮಾಡಿಕೊಂಡನು.

**ಉನ್ಮುಖತೆಯ ಬಗೆಗಳು:** ಸಕ್ರಿಯ ಮತ್ತು ನಿಷ್ಕ್ರಿಯ. ಸಂಪೂರ್ಣ ನಿಷ್ಕ್ರಿಯವಾದ ಉನ್ಮುಖತೆ ಎಂಬುದು ಇಲ್ಲ. ಈ ಭೇಧ ಕೇವಲ ಸಾಪೇಕ್ಷ. ಸಂಕಲ್ಪದ ಪ್ರಯತ್ನ ಇರುವಾಗ ನಡೆಯುವುದು ಸಕ್ರಿಯ ಉನ್ಮುಖತೆ. ಇದನ್ನೇ ಸ್ವೇಚ್ಛಾಕೃತ ಉನ್ಮುಖತೆ ಎಂದು ಕರೆಯಬಹುದು. ನಿಷ್ಕ್ರಿಯ ಉನ್ಮುಖತೆಯಲ್ಲಿ ಸಂಕಲ್ಪದ ಪ್ರಯತ್ನವು ಅಷ್ಟು ಎದ್ದು ಕಾಣುವುದಿಲ್ಲ. ಅದೊಂದು ಸಹಜವಾಗಿ ನಡೆಯುವ ಕ್ರಿಯೆ–ಅಲ್ಲಿ ವಸ್ತುವಿನಲ್ಲಿಯೇ ಇರುವ ಏನೋ ಒಂದು ನಮ್ಮ ಉನ್ಮುಖತೆಯನ್ನು ತನ್ನಕಡೆ ಸೆಳೆದುಕೊಳ್ಳುತ್ತದೆ. ಮೂಲ ಮತ್ತು ಜನ್ಯವೆಂಬುದು ಎರಡನೆಯ ವರ್ಗ–ಮೂಲ ಉನ್ಮುಖತೆಯಲ್ಲಿ ನಾವು ಉನ್ಮುಖರಾಗುವುದು ವಸ್ತುವಿನ ಸಲುವಾಗಿಯೇ; ಜನ್ಯ ಉನ್ಮುಖತೆಯಲ್ಲಿ ಯಾವುದೋ ಒಂದು ಸಿದ್ಧಿಯ ಸಾಧನವನ್ನಾಗಿ ತೆಗೆದುಕೊಂಡು ಒಂದು ವಸ್ತುವಿಗೆ ನಾವು ಉನ್ಮುಖರಾಗುತ್ತೇವೆ. ಒಂದು ಸರ್ಕಸ್ಸು ನೋಡುವಾಗ ಇರುವ ಉನ್ಮುಖತೆಯು ಮೂಲ ಸ್ವರೂಪದ್ದು. ಅಲ್ಲಿ ಅದರ ಕಸರತ್ತಿನಲ್ಲಿಯೇ ನಾವು ಆಸಕ್ತರಾಗಿರುತ್ತೇವೆ. ಬೇಸರ ಬರಿಸುವ ಒಂದು ಪ್ರಾಚಾರ್ಯ ಭಾಷಣವನ್ನು ಕೇಳುವಾಗ ಇರುವ ನಮ್ಮ ಉನ್ಮುಖತೆ ಜನ್ಯ ಸ್ವರೂಪದ್ದು. ಇಲ್ಲಿ ನಾವು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲು ಅದೊಂದು ಸಾಧನವೆಂದು ತಿಳಿದು ಬಲವಂತದಿಂದ ಆ ಬೇಸರಬರಿಸುವ ಭಾಷಣವನ್ನು ಕೇಳುತ್ತೇವೆ. ಮಕ್ಕಳಿಗೆ ಸಾಮಾನ್ಯವಾಗಿ ಮೂಲ ಸ್ವರೂಪದ ಉನ್ಮುಖತೆಯೇ ಇರುತ್ತದೆ. ಏಕೆಂದರೆ ಅವರಿಗೆ ಪ್ರಯೋಜನದೃಷ್ಟಿ ಇರುವುದಿಲ್ಲ. ಅವರ ಹೃದಯವನ್ನು ಆಕರ್ಷಿಸಿದ ವಸ್ತುವಿನಲ್ಲಿ ಅವರ ಉನ್ಮುಖತೆ ಲೀನವಾಗುತ್ತದೆ. ಈ ಸಹಜಪ್ರವೃತ್ತಿಯು ದೊಡ್ಡವರಾದ ಹಾಗೆ ಅಳಿದು ಹೋಗುತ್ತದೆ. ಏಕೆಂದರೆ ವಿಷಯಗಳಿಗೆ ನಾವು ಕೆಲವು ಕೃತಕ ಬೆಲೆಗಳನ್ನು ಅನ್ವಯಿಸಿ ಅವು ಬೇಸರಬರಿಸುತ್ತಿದ್ದರೂ ಅವುಗಳಿಂದ ಲಾಭವಿದೆ ಎಂದು ತಿಳಿದು ಅವುಗಳಿಗೆ ಉನ್ಮುಖರಾಗುತ್ತೇವೆ.

✱

# ಅಧ್ಯಾಯ ಆರು

# ಪ್ರತಿಮಾ ಸಂಪುಟ

ಸಂವೇದನೆ ಮತ್ತು ಇಂದ್ರಿಯಪ್ರತ್ಯಕ್ಷಗಳ ಸ್ವರೂಪವನ್ನು ನಾವು ಹಿಂದೆ ತಿಳಿದೆವು. ಅವು ಸದ್ಯಃ ನೇರವಾಗಿ ನಮ್ಮೆದುರಿರುವ ಆವರಣಕ್ಕೆ ಸಂಬಂಧಿಸಿದಂಥವು. ಹಾಗಲ್ಲದೆ ನಮ್ಮ ಮನಸ್ಸಿನಲ್ಲಿ ಎದುರಿರದ ಹಾಗೂ ಭೂತಕಾಲದ ಮಾನಸಿಕ ಪ್ರತಿಮೆಗಳೂ ಇರುತ್ತವೆ; ಎಂದೂ ನಿಜವಾಗಿ ಸಂಭವಿಸಿರದ ಪದಾರ್ಥ ಅಥವಾ ಘಟನೆಗಳ ಪ್ರತಿಮೆಗಳೂ ಇರಬಹುದು. ಈ ಮಾನಸಿಕ ಪ್ರತಿಮೆಗಳು ಮಿದುಳಿನ ಚಟುವಟಿಕೆಯನ್ನು ಅವಲಂಬಿಸಿರುವುವಲ್ಲದೆ ಸದ್ಯದ ನೇರವಾದ ಬಾಹ್ಯ ಪ್ರೇರಣೆಗಳನ್ನಲ್ಲ. ಇಂಥ ಪ್ರತಿಮೆಗಳನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು.

## ಸ್ಮೃತಿಪ್ರತಿಮೆಗಳು ಮತ್ತು ರಚಿತಪ್ರತಿಮೆಗಳು

ರಾಮನ ಮುಖವನ್ನು ಮನಸ್ಸಿನ ಕಣ್ಣಿನೆದುರು ತಂದುಕೊಂಡರೆ ಅಥವಾ ಅವನ ಸ್ವರದ ಶ್ರಾವಣಪ್ರತಿಮೆಯನ್ನು ನೆನೆದುಕೊಂಡರೆ, ನಾವು ಒಂದು ಸ್ಮೃತಿಪ್ರತಿಮೆಯನ್ನು ಅನುಭವಿಸುತ್ತೇವೆ ಎಂದಾಗುತ್ತದೆ. ನಾವು ಸ್ವರ್ಗದ ಅಮರಾವತಿಯ ರತ್ನದ ಬಾಗಿಲನ್ನೂ ಬಂಗಾರದ ರಸ್ತೆಗಳನ್ನೂ ಅಥವಾ ಕೋತಿಯ ಮುಖ, ಮೇಕೆಯ ಮೈ ಮತ್ತು ಹುಲಿಯ ಕೈಕಾಲುಗಳುಳ್ಳ ಪ್ರಾಣಿಯನ್ನು ಕಣ್ಣೆದುರು ಚಿತ್ರಿಸಿಕೊಂಡಾಗ ಅದು ರಚಿತಪ್ರತಿಮೆ ಎನಿಸಿಕೊಳ್ಳುತ್ತದೆ. ಅಂಥ ಪ್ರತಿಮೆಗಳು ನೇತ್ರೇಂದ್ರಿಯದ ಜ್ಞಾನಗಳಿಗಿಂತ ಭಿನ್ನವಾದ ಜ್ಞಾನಗಳಿಂದ ಹುಟ್ಟುತ್ತವೆ; ಕೇಳ್ಮೆಯಲ್ಲಿ ಇದು ಇನ್ನಷ್ಟು ಸ್ಪಷ್ಟ. ತಾನು ಎಂದೂ ಅನುಭವಿಸಿರದ ನಾದಾನುಕ್ರಮವನ್ನು ಒಬ್ಬ ಸಂಗೀತ ನಿರ್ಮಾತನು ಮನಸ್ಸಿನಿಂದಲೇ ಕೇಳುವದಿಲ್ಲವೆ? ಸ್ಮೃತಿಪ್ರತಿಮೆಗಳೆಲ್ಲವೂ ಭೂತಕಾಲದಲ್ಲಿ ನಾವು ಅನುಭವಿಸಿದ ಯಾವುದಾದರೊಂದನ್ನು ಹೋಲುತ್ತವೆ ಇಲ್ಲವೆ ಅದನ್ನು ಪುನರುತ್ಪತ್ತಿ ಮಾಡುತ್ತವೆ. ರಚಿತಪ್ರತಿಮೆಗಳು ಹಾಗೆ ಮಾಡುವುದಿಲ್ಲ. ಅವೆಲ್ಲ ಹೊಸವು. ರಚಿತ ಪ್ರತಿಮೆಯು ಸಂಪೂರ್ಣವಾಗಿ ಹೊಸದಾದರೂ ಅದರ ವಿವಿಧ ಅಂಗಗಳೆಲ್ಲವಕ್ಕೂ ತಕ್ಕ ಬಿಂಬಗಳು ನಮ್ಮ ಗತಾನುಭವದಲ್ಲಿರುತ್ತವೆ. ರತ್ನದ ಬಾಗಿಲುಗಳನ್ನೂ ಬಂಗಾರದ ರಸ್ತೆಗಳನ್ನೂ ನಾವು ಎಂದೂ ಕಂಡಿಲ್ಲ. ಆದರೆ ನಾವು ಬಾಗಿಲುಗಳನ್ನೂ ರತ್ನಗಳನ್ನೂ ಮತ್ತು ಬಂಗಾರವನ್ನೂ ನೋಡಿದ್ದೇವೆ. ರಚಿತ

ಪ್ರತಿಮೆಯು ಈ ಅಂಗಗಳನ್ನು ಒಂದು ಹೊಸ ಸ್ವರೂಪದಲ್ಲಿ ಸಂಯೋಜಿಸುವುದರಲ್ಲಷ್ಟೇ ಹೊಸ ರಚನೆ ಎನಿಸುತ್ತದೆ.

## ವಿವಿಧ ಇಂದ್ರಿಯಗಳ ಪ್ರತಿಮೆಗಳು

ಸಂವೇದನೆಗಳು ಎಷ್ಟು ಬಗೆಯಾಗಿವೆಯೋ ಅಷ್ಟೇ ಬಗೆಯ ಪ್ರತಿಮೆಗಳೂ ಇವೆ. ನಾವು ಮನಸ್ಸಿನ ಕಣ್ಣಿನಿಂದ ಚಿತ್ರಗಳನ್ನು ನೋಡಬಲ್ಲೆವು; ಅದರ ಕಿವಿಯಿಂದ ಶಬ್ದಗಳನ್ನು ಕೇಳಬಲ್ಲೆವು ಮತ್ತು ಮಿಕ್ಕ ಎಲ್ಲ ವಿಶಿಷ್ಟ ಇಂದ್ರಿಯಗಳಿಗೆ ಸಂಬಂಧಿಸಿದ ಪ್ರತಿಮೆಗಳನ್ನೂ ಸ್ಮೃತಿಪಥಕ್ಕೆ ತಂದುಕೊಳ್ಳಬಲ್ಲೆವು. ಉದಾ: ಕೇಸರಿಭಾತಿನ ರುಚಿ, ಗುಲಾಬಿಯ ವಾಸನೆ, ಪಚ್ಚೆಯ ನಯ, ಕಾವಲಿಯ ಬಿಸಿ, ಮಂಜುಗಡ್ಡೆಯ ತಂಪು, ಸುಟ್ಟಗಾಯದ ನೋವು ಅಥವಾ ನೀರೆತ್ತುವಾಗಿನ ಮಾಂಸಖಂಡಗಳ ಪ್ರಯತ್ನ. ಪ್ರತಿಮೆಗಳು ಸರಿಯಾದ ಅಳತೆಗೆ ಸಿಕ್ಕದಿರುವುದರಿಂದ ಬೇರೆ ಬೇರೆ ಬಗೆಯ ಪ್ರತಿಮೆಗಳ ಸಾಪೇಕ್ಷ ಸ್ಪಷ್ಟತೆಯನ್ನು ಬೆಲೆ ಕಟ್ಟುವುದು ಕಷ್ಟ. ಬಹಳ ಜನರಿಗೆ ಸಾಮಾನ್ಯವಾಗಿ ಅವನ್ನು ಐದು ವರ್ಗಗಳಾಗಿ ವಿಂಗಡಿಸಲು ಬರುತ್ತದೆ: ಬಹಳ ಸ್ಪಷ್ಟ, ಸ್ಪಷ್ಟ, ಸುಮಾರು ಸ್ಪಷ್ಟ, ಸಂಪೂರ್ಣ ಅಸ್ಪಷ್ಟ ಮತ್ತು ಪ್ರತಿಮೆಯ ಅಭಾವ ಎಂದು. ಅನೇಕರ ಅನುಭವದ ಫಲವಾಗಿ (ವೈಯಕ್ತಿಕ ಭಿನ್ನಾಭಿಪ್ರಾಯಗಳು ಎಷ್ಟೇ ಇದ್ದರೂ) ಈ ವಿಷಯದಲ್ಲಿ ಒಂದು ಸಾಮಾನ್ಯ ಅಭಿಪ್ರಾಯಕ್ಕೆ ಬರಲು ಶಕ್ಯವಾಗಿದೆ. ಆ ಪ್ರಕಾರ ಚಾಕ್ಷುಷ ಪ್ರತಿಮೆ ಅತ್ಯಂತ ಸ್ಪಷ್ಟ, ಶ್ರಾವಣಪ್ರತಿಮೆ ಎರಡನೆಯದು ಮತ್ತು ನೋವು ಹಾಗೂ ವಾಸನೆಯ ಪ್ರತಿಮೆಗಳು ಪಟ್ಟಿಯ ಕೊನೆಯಲ್ಲಿ ಬರುತ್ತವೆ. ಈ ಫಲಿತಾಂಶವು ಮನುಷ್ಯನಲ್ಲಿ ಕಣ್ಣಿಗಿರುವ ಪ್ರಾಧಾನ್ಯವನ್ನೂ ಮೂಗಿನ ಶಕ್ತಿಯ ಸಾಪೇಕ್ಷ ಕಡಿಮೆ ಬೆಳವಣಿಗೆಯನ್ನೂ ಸೂಚಿಸುತ್ತದೆ. ಚಾಕ್ಷುಷಪ್ರತಿಮೆಗಳು ಶ್ರಾವಣಪ್ರತಿಮೆಗಳಿಗಿಂತ ಸ್ಪಷ್ಟತರವೂ ಪದೇಪದೇ ಬರತಕ್ಕವೂ ಆಗಿವೆ; ಮಿಕ್ಕ ಅನೇಕ ಬಗೆಯ ಪ್ರತಿಮೆಗಳೊಡನೆ ಸಹಜವಾಗಿ ಉದ್ಭವಿಸಲು ಪ್ರವರ್ತಿಸುತ್ತವೆ. ಮಿಕ್ಕ ಪ್ರತಿಮೆಗಳು ಚಾಕ್ಷುಷಪ್ರತಿಮೆಗಳೊಡನೆ ಈ ಪ್ರಕಾರ ಪದೇ ಪದೇ ಬರುವುದಿಲ್ಲ. ಉದಾ: ಮಾವಿನ ಹಣ್ಣಿನ ಮಾನಸಿಕ ಚಿತ್ರವಿಲ್ಲದೆಯೇ ನಮಗೆ ಅದರ ರುಚಿಯನ್ನು ಊಹಿಸಲು ಸಾಧ್ಯವಿಲ್ಲ. ಭಾರವಾದ ಒಂದು ಕಲ್ಲಿನ ಮಾನಸಿಕ ಚಿತ್ರವಿಲ್ಲದೆ ನಾವು ಅದನ್ನು ಎತ್ತುವ ಮಾಂಸಖಂಡ ಪ್ರಯತ್ನವನ್ನು ಕಲ್ಪಿಸಲಾರೆವು. ಆದರೆ ಒಂದು ಮರದ ಚಾಕ್ಷುಷಪ್ರತಿಮೆ ನಮ್ಮ ಮನಸ್ಸಿನಲ್ಲಿ ಎದ್ದಾಗ ಯಾವಾಗಲೂ ನಮಗೆ ಅದರ ತೊಗಟೆಯ ಒರಟಿನ ಪ್ರತಿಮೆ ನೆನಪಾಗಬೇಕೆಂದಿಲ್ಲ. ಪ್ರತಿಮೆಗಳಲ್ಲಿ ಇರುವ ವೈಯಕ್ತಿಕ ಭೇದಗಳ ವ್ಯಾಪಕತೆಯನ್ನು ಒತ್ತಿಹೇಳಬೇಕಾಗಿದೆ. ಬಹಳ ಜನರಿಗೆ ಚಾಕ್ಷುಷಪ್ರತಿಮೆಗಳು ಬಹುಮುಖ್ಯವೆನಿಸಿದರೂ ಅನೇಕರಿಗೆ ಅವು ಶ್ರಾವಣ, ಮಾಂಸಲ ಇಲ್ಲವೆ ಇತರ ಪ್ರತಿಮೆಗಳಷ್ಟು ಮುಖ್ಯವಲ್ಲ. ದೂರದಲ್ಲಿರುವ ಸ್ನೇಹಿತರ ಆಕೃತಿಗಿಂತ ಹೆಚ್ಚಾಗಿ ಅವರ ಧ್ವನಿಯನ್ನೇ ನೆನೆದುಕೊಳ್ಳುವವರು ಇದ್ದಾರೆ. ಅಂಥವರು ಜ್ಯಾಮಿತಿಯಲ್ಲಿ ಅಥವಾ ಭೂಪಟವನ್ನು ಓದುವುದರಲ್ಲಿ ಕೋನ ವಿಭಾಗಗಳನ್ನೋ ವೃತ್ತದಲ್ಲಿರುವ ತ್ರಿಭುಜಗಳನ್ನೋ ಅಥವಾ ಸೀಮಾರೇಖೆಗಳನ್ನೋ ಚಾಕ್ಷುಷಪ್ರತಿಮೆಯ ರೂಪದಲ್ಲಿ ಮನಸ್ಸಿನ ಎದುರು ಸ್ಪಷ್ಟವಾಗಿ ತಂದುಕೊಳ್ಳಲಾರರು.

## ಪದಪ್ರತಿಮೆಗಳು

ನಮ್ಮ ವಿಚಾರಪ್ರಪಂಚದಲ್ಲಿ ಅದರಲ್ಲೂ ಅದು ಸೂಕ್ಷ್ಮವಾಗಿರುವಾಗ ನಾವು ವಸ್ತುಗಳ ಅಥವಾ ಸಂಗತಿಗಳ ಪ್ರತಿಮೆಗಳಿಗೆ ಬದಲಾಗಿ ಹೆಚ್ಚಾಗಿ ಪದಪ್ರತಿಮೆಗಳನ್ನೇ ಬಳಸುತ್ತೇವೆ. ಅವನ್ನು ಪದೇ ಪದೇ ನಮ್ಮ ಮಾನಸಿಕ ಪ್ರಕ್ರಿಯೆಯನ್ನು ಅನುಸರಿಸಿ ಬರುವ ಸ್ವರತಂತುಗಳ (Vocal cords) ನಾಲಿಗೆಯ, ತುಟಿಗಳ ಮತ್ತು ಇತರ ವಾಗಂಗಗಳ ಮಂದ ಚಲನೆಗಳೊಡನೆ ಸೇರಿಸಬಾರದು. ಓದುವಾಗ ಅಥವಾ ವಿಚಾರ ಮಾಡುವಾಗ ಉಕ್ತ ಅಂಗಗಳು ಚಲಿಸಬಹುದು. ಆದರೆ ಅವು ಇತರ ಶಾರೀರಕ ಚಲನೆಗಳಂತೆಯೇ ಮಾನಸಿಕ ಪ್ರತಿಮೆಗಳಾಗಲಾರವು. ಪದಪ್ರತಿಮೆಯು ಒಮ್ಮೆ ಅದರ ಲಿಖಿತ ಅಥವಾ ಮುದ್ರಿತ ಆಕೃತಿಯ ಚಾಕ್ಷುಷಪ್ರತಿಮೆಯಾಗಬಹುದು. ಅಥವಾ ಅದರ ಶಬ್ದದ ಇಲ್ಲವೆ ನಾದದ ಶ್ರಾವಣ ಪ್ರತಿಮೆಯಾದರೂ ಆಗಬಹುದು. ಅದರೊಟ್ಟಿಗೆ ಮಾತಿನಲ್ಲಿ, ಬರಹದಲ್ಲಿ ಅಥವಾ ಅಭಿನಯದಲ್ಲಿ ಅದನ್ನು ಹೇಳುವಾಗ ಉಂಟಾಗುವ ಚಲನೆಗಳ ಮಾಂಸಲ ಇಲ್ಲವೆ ಕ್ರಿಯಾತ್ಮಕ ಪ್ರತಿಮೆಗಳೂ ಬರಬಹುದು.

## ಪ್ರತಿಮೆಗಳೂ ಸಂಶೋಧನೆಗಳೂ

ತಕ್ಕ ಇಂದ್ರಿಯಾಂಗಕ್ಕೆ ಪ್ರೇರಣೆ ಮಾಡಿದಾಗ ಮಾತ್ರ ಸಂವೇದನೆ ಉಂಟಾಗಬಲ್ಲುದು. ಅದಕ್ಕೆ ಅದ್ಯತನಭೂತಕಾಲದಲ್ಲಿ ಪ್ರೇರಣೆ ದೊರೆತರೆ ಮಾತ್ರ ಉತ್ತರ ಸಂವೇದನೆಗಳು ಉಂಟಾಗುತ್ತವೆ. ಆದರೆ ಪ್ರತಿಮೆಗೆ ಅಂಥ ಯಾವ ಪ್ರೇರಣೆಯೂ ಬೇಕಾಗಿಲ್ಲ. ಕತ್ತಲಲ್ಲಿ ಇದ್ದಾಗ ನಮ್ಮ ಬಗೆಗನ್ನಡಿಯಲ್ಲಿ ಚಾಕ್ಷುಷಪ್ರತಿಮೆಗಳು ಮೂಡಬಹುದು. ಶಬ್ದಾವರೋಧಕ ಕೋಣೆಯಲ್ಲಿ ಸುಮ್ಮನೆ ಕುಳಿತ ನಮ್ಮ ಮನಸ್ಸಿನಲ್ಲಿ ಶ್ರಾವಣಪ್ರತಿಮೆಗಳು ಉದಯಿಸಬಹುದು. ಅದೇ ಪ್ರಕಾರ ಕಣ್ಣು ಕುರುಡಾಗಿ ಹೋದರೆ, ಕಿವಿ ಕಿವುಡಾಗಿ ಹೋದರೆ ನಮಗೆ ಚಾಕ್ಷುಕ ಇಲ್ಲವೆ ಶ್ರಾವಣ ಪ್ರತಿಮೆಗಳನ್ನು ಕಲ್ಪಿಸಿಕೊಳ್ಳುವ ಶಕ್ತಿಯು ಹೋಗುವುದಿಲ್ಲ.

ಎರಡನೆಯದಾಗಿ ಇಂದ್ರಿಯಾಂಗವನ್ನು, ಅವಲಂಬಿಸಿದ ಸಂವೇದನೆಗಳು ಪ್ರೇರಣೆ ನಿಂತರೆ ಅಥವಾ ಬದಲಾದರೆ ಆ ಕೂಡಲೆ ನಿಂತುಹೋಗುವುವು; ಆದರೆ ನಮ್ಮ ಇಂದ್ರಿಯಾಂಗಗಳ ಕಾರ್ಯವನ್ನು ಲೆಕ್ಕಿಸದೆ ಇತರ ಪ್ರತಿಮೆಗಳು ಸ್ವತಂತ್ರವಾಗಿ ಬಂದುಹೋಗುತ್ತವೆ.

ಮೂರನೆಯದಾಗಿ, ಸಂವೇದನೆಗಳಿಗಿಂತ ಪ್ರತಿಮೆಗಳು ಹೆಚ್ಚು ಅನಾಕ್ರಮಣ ಪ್ರವೃತ್ತಿಯವು. ಒಂದು ಇಂದ್ರಿಯಾಂಗದ ಪ್ರೇರಣೆಯು ಫಲಿತ ಸಂವೇದನೆಯನ್ನು ಪ್ರೇರಣೆ ಮುಗಿಯುವತನಕ–ನಮಗೆ ಇಷ್ಟವಿರಲಿ ಇಲ್ಲದಿರಲಿ, ನಾವು ಅದಕ್ಕೆ ಲಕ್ಷ್ಯಕೊಡಲಿ, ಕೊಡದೆ ಇರಲಿ, ನಮ್ಮ ಪ್ರಜ್ಞಾಕ್ಷೇತ್ರದಲ್ಲಿ ತುಂಬುತ್ತಲೇ ಹೋಗುವುದು. ಪ್ರತಿಮೆಗಳನ್ನು ನಮಗೆ ಬೇಕಾದಾಗ ಬರಿಸಿಕೊಳ್ಳಬಹುದು, ಬೇಡವಾದಾಗ ನಿವಾಳಿಸಬಹುದು. ಅವುಗಳನ್ನು ಉನ್ಮುಖತೆಯ ಪ್ರಯತ್ನದಿಂದ ನಾವು ಹಿಡಿದಿಡದಿದ್ದರೆ ಅವು ಬಹುಬೇಗ ಮಾಯವಾಗಿ ಹೋಗುತ್ತವೆ. ನಾಲ್ಕನೆಯದಾಗಿ, ತಾನು ಸಮನ್ವಿತವಾಗುವ ಒಂದು ಇಂದ್ರಿಯ ಪ್ರಜ್ಞೆಯ

ಸಂದರ್ಭವು ಪ್ರತಿಯೊಂದು ಸಂವೇದನೆಗೂ ಇದೆ. ಅಂದರೆ ಸಂವೇದನೆಯೂ ಅದರ ಇಂದ್ರಿಯಜ್ಞಾನದ ಸನ್ನಿವೇಶವೂ ಒಟ್ಟಿಗೇ ಬರುತ್ತವೆ. ಆದರೆ ಪ್ರತಿಮೆಗಳು ಸಾಪೇಕ್ಷವಾಗಿ ಒಂಟಿಗಳು ಮತ್ತು ಅದೇ ಕಾಲದಲ್ಲಿ ನಾವು ಅನುಭವಿಸುತ್ತಿರುವ ಸಂವೇದನೆಗಳೊಡನೆ ಸಮರಸವಾಗುವುದಿಲ್ಲ. ನಾವು ಗಂಟೆಯ ಸದ್ದನ್ನು ಕೇಳುತ್ತಿರುವಾಗ ಇಲ್ಲವೆ ಒಂದು ಸಂಪಿಗೆಯ ಪರಿಮಳವನ್ನು ಮೂಸುತ್ತಿರುವಾಗ ಈ ಸಂವೇದನೆಗಳು ಏಕಕಾಲಿಕ ಸಂವೇದನೆಗಳ ರೂಪದ ಒಂದು ಸಮ್ಮಿಶ್ರ ವಸ್ತುವಿನ ಭಾಗವೆನಿಸಿ, ಪರಸ್ಪರ ಹೊಂದಿಕೆಯಿಂದ ಹಾಸುಹೊಕ್ಕಾಗಿರುತ್ತವೆ. ಅಂದರೆ ಶ್ರಾವಣ ಅಥವಾ ಘ್ರಾಣ ಸಂವೇದನೆಗಳು ಆರಂಭದಲ್ಲಿ ಸೂಕ್ಷ್ಮ ರೀತಿಯಿಂದ ಅನುಕ್ರಮವಾಗಿದ್ದರೂ ಅವು ಒಂದರೊಡನೊಂದು ಸಮರಸವಾಗಿ ಹೊಂದಿಕೊಂಡಿರುತ್ತವೆ. ತದ್‌ವಿರುದ್ಧವಾಗಿ ನಾವು ಘಂಟಾನಾದ ಇಲ್ಲವೆ ಸಂಪಿಗೆ ವಾಸನೆಯ ಪ್ರತಿಮೆಗಳನ್ನು ನೆನೆದುಕೊಂಡಾಗ ಅವು ಸಾಪೇಕ್ಷವಾಗಿ ಒಂಟೊಂಟಿಯಾಗಿ ಬರುತ್ತವೆ; ಈ ಯಾವ ಒಂದು ಪ್ರತಿಮೆಯನ್ನೂ ಅದರ ಹಿನ್ನೆಲೆಯ ಪ್ರತಿಮೆಯು ಅನುಸರಿಸಿ ಬರುವುದಿಲ್ಲ. ಈ ಅಥವಾ ಇನ್ನಿತರ ಪ್ರತಿಮೆಗಳು ನಮ್ಮ ಏಕಕಾಲಿಕ ಇಂದ್ರಿಯಾನುಭವಗಳೊಡನೆ ಕೂಡುವುದೂ ಇಲ್ಲ, ಪರಸ್ಪರ ಕ್ರಿಯೆಯನ್ನು ಮಾಡುವುದೂ ಇಲ್ಲ. ಕಾರ್ಖಾನೆಯ ಸದ್ದು ನಮ್ಮ ಕಿವಿಯನ್ನು ಗಡಚಿಕ್ಕಿದರೂ ನಾವು ಗಂಟೆಯನ್ನು ಊಹಿಸಿಕೊಳ್ಳಬಹುದು. ಆಗ ಆ ಗಂಟೆಯ ಪ್ರತಿಮೆಯು ಕಾರ್ಖಾನೆಯ ಗದ್ದಲಕ್ಕೆ ಆದೇಶವಾಗುವುದಿಲ್ಲ; ಅದರೊಡನೆ ಸಮರಸವಾಗಿ ಬೆರೆಯುವುದೂ ಇಲ್ಲ. ಐದನೆಯದಾಗಿ, ಸನ್ನಿಕೃಷ್ಟ ಪ್ರತಿಮೆಗಳನ್ನೂ (Eidetic Images) ಮಾಯಾರೂಪಗಳನ್ನೂ ಬಿಟ್ಟರೆ ಮಿಕ್ಕ ಪ್ರತಿಮೆಗಳೆಲ್ಲವೂ ಸಂವೇದನೆಗಳಿಗಿಂತ ಹೆಚ್ಚು ಅಸ್ತಿಮಿತ, ಅಸ್ಪಷ್ಟ, ಅಪ್ರತ್ಯೇಕೀಕೃತ. ಜನಸಂಮರ್ದವುಳ್ಳ ರಸ್ತೆಯ ಚಾಕ್ಷುಕ ಪ್ರತಿಮೆಯು ಅದರ ಸಾಕ್ಷಾತ್ ಸಂವೇದನೆಗಿಂತ ಹೆಚ್ಚು ಹರಕುಮುರುಕು, ಅಸ್ಪಷ್ಟ ಮತ್ತು ವಿವರರಹಿತ.

ಸಂವೇದನೆಗಳಿಗೂ ಪ್ರತಿಮೆಗಳಿಗೂ ಇಷ್ಟು ವ್ಯತ್ಯಾಸಗಳಿದ್ದರೂ ಕೆಲವೇಳೆ ನಾವು, ಅವನ್ನು ಇವೆಂದೂ, ಇವನ್ನು ಅವೆಂದೂ ತಿಳಿದುಕೊಳ್ಳುವುದುಂಟು. ಮಾಯೆ (Hallucination) ಎಂಬುದು ಸಾಕಷ್ಟು ತೀವ್ರತೆ ಹಾಗೂ ಸ್ಪಷ್ಟತೆಯುಳ್ಳ ಪ್ರತಿಮೆ. ಅದನ್ನು ಮಾಯಾಜಾಲದಲ್ಲಿ ಸಿಕ್ಕಿದ ವ್ಯಕ್ತಿಯು ಒಂದು ಸಂವೇದನೆ ಎಂದೇ ಗ್ರಹಿಸುತ್ತಾನೆ. ನಾವೆಲ್ಲರೂ ಒಂದು ಮೆಲುದನಿಯ ಪ್ರತಿಮೆಯನ್ನೂ ಅದರ ಸಂವೇದನೆಯನ್ನೂ ಪ್ರತ್ಯೇಕಿಸಿ ತಿಳಿದುಕೊಳ್ಳಲಾರದಾದೇವು. ಗಾರ್ಡನರ್ ಮರ್ಫಿ ಮುಂತಾದವರು ನಡೆಸಿದ ಪ್ರಯೋಗಗಳಿಂದ ಸಂವೇದನೆಗಳಿಗೂ ಪ್ರತಿಮೆಗಳಿಗೂ ಇರುವ ವ್ಯತ್ಯಾಸವು ಯಾವಾಗಲೂ ಗುರುತಿಸಬರುವಂಥದಲ್ಲ–ಕೆಲವು ಕಾಲದಲ್ಲಿ ಮಾತ್ರ ಗುರುತಿಸಲು ಶಕ್ಯವಾಗುವಂಥದು.

## ಪ್ರತಿಮೆಗಳಲ್ಲಿ ವ್ಯಕ್ತಿಗತ ವ್ಯತ್ಯಾಸಗಳು

ಹಿಂದೆ ಹೇಳಿದಂತೆ ಬಹಳ ಜನರಲ್ಲಿ ಚಾಕ್ಷುಷ ಪ್ರತಿಮೆಗಳು ಹೆಚ್ಚು ಪರಿಪುಷ್ಟವಾಗಿರುತ್ತವೆ; ಅವುಗಳ ನಂತರ ಶ್ರಾವಣ ಪ್ರತಿಮೆಗಳು. ಕೆಲ ಜನರು ಒಂದಲ್ಲ ಒಂದು ವಿಧದ ಪ್ರತಿಮಾ ಸಂಪುಟವನ್ನೇ ಅವಲಂಬಿಸುತ್ತಾರೆ. ವಿಚಾರ ಹೆಚ್ಚು ಹೆಚ್ಚು ಸೂಕ್ಷ್ಮವಾಗುತ್ತ ಹೋದಹಾಗೆ

ವಸ್ತು ಅಥವಾ ಸಂಗತಿಗಳ ಪ್ರತಿಮೆಗಳಿಗಿಂತ ಪದ ಅಥವಾ ಸಂಕೇತಗಳ ಪ್ರತಿಮೆಗಳು ಬಹಳ ಮುಖ್ಯವಾಗುತ್ತ ಹೋಗುತ್ತವೆ. ಒಂದು ಕಾಲದಲ್ಲಿ ಈ ವ್ಯತ್ಯಾಸಗಳನ್ನು ಆಧರಿಸಿಕೊಂಡು ಜನರನ್ನು ವರ್ಗೀಕರಿಸಲಾಗಿತ್ತು. ಆ ಪ್ರಕಾರ ಚಾಕ್ಷುಷ ಪ್ರತಿಮೆಗಳನ್ನು ಪ್ರಧಾನವಾಗಿ ಉಳ್ಳವರು ಚಾಕ್ಷುಷರು, ಶ್ರಾವಣಪ್ರತಿಮಾಪ್ರಧಾನರು ಶ್ರಾವಣರು. ಇದೇ ರೀತಿಯಲ್ಲಿ ಘ್ರಾಣರು, ಚಾರ್ಮಣರು ಮತ್ತು ರಾಸನರು ವರ್ಗೀಕೃತರಾದರು. ಆದರೆ ಇತ್ತೀಚಿನ ಸಂಶೋಧನೆಯಿಂದ ಬೇರೆ ಬೇರೆ ಬಗೆಯ ಹೆಚ್ಚು ಕಡಿಮೆ ಸ್ಪಷ್ಟ ಪ್ರತಿಮೆಗಳುಳ್ಳ ಮನುಷ್ಯರು ಒಂದೇ ಒಂದು ಬಗೆಯ ಪ್ರತಿಮೆಗಳನ್ನು ಸಾಕಷ್ಟು ವ್ಯಾಪಕವಾಗಿ ಉಳ್ಳವರಿಗಿಂತ ಅಧಿಕಸಂಖ್ಯರು ಎಂದು ತಿಳಿದುಬಂದಿದೆ.

ಕೆಲವರಿಗೆ ವಿಚಿತ್ರ ಪ್ರತಿಮೆಗಳೂ ಭಾಸವಾಗುತ್ತವೆ. ಅವುಗಳಲ್ಲಿ ಸಂಖ್ಯಾಕೃತಿಗಳು ಒಂದು ಬಗೆ. ಅವುಗಳಲ್ಲಿ ಸಂಖ್ಯೆಗಳು ಬದಲಾಗದ ನಿಶ್ಚಿತರೂಪದ ನಕ್ಷೆಯಲ್ಲಿ ವ್ಯವಸ್ಥಿತವಾಗಿರುತ್ತವೆ. ಅವರು ಒಂದು ಅಂಕೆಯನ್ನು ಯೋಚಿಸಿದ ಕೂಡಲೆ ಈ ನಕ್ಷೆಯು ಅವರ ಮನಸ್ಸಿನ ಕಣ್ಣಿಗೆ ಎದುರಾಗುತ್ತದೆ. ಆಗ ಅವರು ಯುಕ್ತಸ್ಥಳದಲ್ಲಿ ಇರುವ ಆ ಅಂಕೆಯನ್ನು ಮಾನಸಿಕವಾಗಿ ನೋಡುತ್ತಾರೆ. ಗಾಲ್ಟನ್ನನ ಪ್ರಯೋಗದ ಫಲವಾಗಿ ಸಂಖ್ಯಾ ಆಕೃತಿಗಳು ಕೌಟುಂಬಿಕ ವರ್ಗದಲ್ಲಿರುವುವು ಎಂದು ತಿಳಿದುಬಂದಿದೆ. ಅವುಗಳನ್ನು ಬಗೆಗಳನ್ನಾಗಿ ವಿಂಗಡಿಸಲಾಗಿದೆ. ಬಾಲ್ಯದಲ್ಲಿ ಅಂಕೆಗಳನ್ನು ಕಲಿಯುವ ಯಾವ ವಿಶಿಷ್ಟ ಕ್ರಮದೊಡನೆಯೂ ಅವು ಸಂಬಂಧಿಸಿಲ್ಲ. ಸಂಖ್ಯಾ ಪ್ರತಿಮೆಗಳನ್ನು ಕಾಣಬಲ್ಲವರನ್ನು ಕಂಡರೆ ಮಿಕ್ಕವರಿಗೆ ಎಷ್ಟು ಆಶ್ಚರ್ಯಕರವಾಗುವುದೋ, ಮಿಕ್ಕವರನ್ನು ಕಂಡರೂ ಅವರಿಗೆ ಅಷ್ಟೇ ಆಶ್ಚರ್ಯವಾಗುವುದು! ಸಂಖ್ಯಾ ಪ್ರತಿಮೆಗಳನ್ನು ಕಾಣಬಲ್ಲವರು ಮಾನಸಿಕ ಗಣಿತ ಕಾರ್ಯದಲ್ಲಿ ಅಸಾಧಾರಣ ಕೌಶಲವುಳ್ಳವರೋ ಅಲ್ಲವೋ ಎಂಬುದಕ್ಕೆ ಅನಂತರದ ಸಂಶೋಧಕರು ಸಾಕ್ಷಿಗಳನ್ನು ಒದಗಿಸಲಾರದೆ ಹೋದರು.

ಪ್ರತಿಮಾ ಸಂಪರ್ಕ ಕಾರ್ಯವು ಎರಡನೆಯ ವಿಚಿತ್ರ. ಈ ಪ್ರವೃತ್ತಿಯುಳ್ಳವರು ಒಂದು ಇಂದ್ರಿಯಕ್ಕೆ ಸೇರಿದ ಪ್ರತಿಮೆಗಳನ್ನು ಇನ್ನೊಂದು ಇಂದ್ರಿಯದ ಸಂವೇದನೆ, ಪ್ರತಿಮೆ ಇಲ್ಲವೆ ಕಲ್ಪನೆಗಳೊಡನೆ ಕೂಡಿಸುತ್ತಾರೆ. ಪ್ರತಿಮಾ ಸಂಪರ್ಕ ಕಾರ್ಯದ ಸರ್ವಸಾಧಾರಣ ಬಗೆ ಎಂದರೆ ರಂಜಿತ ವಿಚಾರಕ್ರಮ. ಈ ಕ್ರಮದಲ್ಲಿ ಬೇರೆ ಬೇರೆ ಬಣ್ಣಗಳ ಪ್ರತಿಮೆಗಳನ್ನು ಬೇರೆ ಬೇರೆ ಶಬ್ದಗಳು, ಜನಗಳು, ತಿಂಗಳುಗಳು ಅಥವಾ ದಿನಗಳೊಂದಿಗೆ ಇಲ್ಲವೆ ವರ್ಣಮಾಲೆಯ ವಿವಿಧ ಅಕ್ಷರಗಳೊಂದಿಗೆ ಸೇರಿಸಲಾಗುತ್ತದೆ.

ಮೂರನೆಯದು ಸನ್ನಿಕೃಷ್ಟಪ್ರತಿಮೆ. ಕೆಲವರು ಕಾಣಬಲ್ಲ ಈ ಪ್ರತಿಮೆಯು ವಿವರಪೂರ್ಣವೂ ವಸ್ತುಸದೃಶವೂ ಸುಸ್ಪಷ್ಟವೂ ಆಗಿರುವುದಲ್ಲದೆ ಹೊರಜಗತ್ತಿನಲ್ಲಿ ಅವಕ್ಕೆ ಸ್ಥಳನಿರ್ದೇಶನ ಮಾಡಬಹುದು. ಈ ಬಗೆಯ ಪ್ರತಿಮೆಗಳಿಗೂ ಮಾಯಾಪ್ರತಿಮೆಗಳಿಗೂ ಬಹಳ ವ್ಯತ್ಯಾಸವಿದೆ. ಇವನ್ನು ವಾಸ್ತವಿಕ ಪ್ರತಿಮೆಗಳೆಂದು ಯಾರೂ ತಪ್ಪಾಗಿ ತಿಳಿದುಕೊಳ್ಳುವುದಿಲ್ಲ. ಇವು ಸತತ ಪೀಡಕ ಮತ್ತು ಭಂಗಕಾರಕ ಎನಿಸಬಹುದು. ಇಲ್ಲವೆ ಆಕಸ್ಮಿಕ ನಿಯಂತ್ರಣಾರ್ಹ ಮತ್ತು ವ್ಯಕ್ತಿಯ ಉದ್ದೇಶಗಳಿಗೆ ಅನುಗುಣ ಎನಿಸಲೂಬಹುದು.

ಸರ್ವಸಾಧಾರಣವಾಗಿ ಸನ್ನಿಕೃಷ್ಟಪ್ರತಿಮೆಯು ತದನುಗುಣವಾದ ಇಂದ್ರಿಯ ಪ್ರತ್ಯಕ್ಷವಾದ ಮೇಲೇ ಬರುತ್ತದೆ; ಆದರೆ ಎಲ್ಲ ಸನ್ನಿಕೃಷ್ಟ ಪ್ರತಿಮೆಗಳೂ ಇಂದ್ರಿಯಪ್ರತ್ಯಕ್ಷಗಳ ತತ್‌ಕ್ಷಣದ ಪುನರ್ನಿರ್ಮಿತಿಗಳಲ್ಲ. ಎಷ್ಟೋ ವೇಳೆ ಅವು ಸತತವಾಗಿರುತ್ತವೆ; ಕೆಲ ಕಾಲದವರೆಗೆ ಪುನಃಪುನಃ ಉಂಟಾಗುತ್ತಿರುತ್ತವೆ. ಅವುಗಳಲ್ಲಿ ಕೆಲವು ರಚಿತಪ್ರತಿಮೆಗಳ ವರ್ಗಕ್ಕೆ ಸೇರುತ್ತವೆ ಸ್ಮೃತಿ ಪ್ರತಿಮಾವರ್ಗಕ್ಕಲ್ಲ. ಸನ್ನಿಕೃಷ್ಟ ಪ್ರತಿಮೆಗಳನ್ನು ಕಾಣುವ ಶಕ್ತಿಯು ಮಕ್ಕಳಲ್ಲಿ ಇದ್ದಷ್ಟು ದೊಡ್ಡವರಲ್ಲಿ ಇಲ್ಲ.

## ಪ್ರತಿಮೆಗಳ ಕೃತ್ಯಗಳು

ಸ್ಪಷ್ಟ ವಿಚಾರಕ್ಕೆ ಕಣ್ಣೆದುರಿಗೆ ಇರದ ವಾಸ್ತವಿಕವಾದ ಭೂತ–ಭವಿಷ್ಯತ್ ಇಲ್ಲವೆ ಸಂಭಾವನಾತ್ಮಕ ಸಂಗತಿ ಅಥವಾ ವಸ್ತುಗಳ ಪ್ರತಿಮೆಗಳು ಮುಖ್ಯ ಸಾಮಗ್ರಿಗಳು. ಸಂವೇದನೆಗಳಿಲ್ಲದೆ ಹೇಗೆ ನಾವು ಯಾವುದರ ಇಂದ್ರಿಯಜ್ಞಾನವನ್ನೂ ಪಡೆಯಲಾರೆವೋ ಹಾಗೇ ಯಾವ ಪ್ರತಿಮೆಯೂ ಇಲ್ಲದೆ ಯಾವ ವಸ್ತುವಿನ ಕಲ್ಪನೆಯನ್ನೂ ಮಾಡಿಕೊಳ್ಳಲಾರೆವು; ಸಂವೇದನೆಗೂ ಇಂದ್ರಿಯಜ್ಞಾನಕ್ಕೂ ಯಾವ ಸಂಬಂಧವಿದೆಯೋ ಪ್ರತಿಮೆಗೂ ಕಲ್ಪನೆಗೂ ಅಂಥದೇ ಸಂಬಂಧವಿದೆ. ಇತ್ತೀಚಿನ ಪ್ರಯೋಗಗಳ ಫಲವಾಗಿ ಕಲ್ಪನೆಗಳು ಪ್ರತಿಮೆಗಳಿಂದ ಭಿನ್ನವಾಗಿದ್ದರೂ ಅವಕ್ಕೆ ಶಬ್ದ ಅಥವಾ ಸಂಕೇತದಂತಹ ಪ್ರತಿಮೆಗಳ ಬೆಂಬಲವಾದರೂ ಇದ್ದೇ ಇರಬೇಕು ಎಂದು ಕಂಡುಬಂದಿದೆ.

ಎರಡನೆಯದಾಗಿ, ಪ್ರತಿಮೆಗಳು ಸ್ಮೃತಿಗೆ ನೆರವಾಗುತ್ತವೆ. ಚಾಕ್ಷುಷ ಮುಂತಾದ ಪ್ರತಿಮೆಯ ಬಲದಿಂದ ನಾವು ಹೆಚ್ಚು ಸುಲಭವಾಗಿ ವಿಷಯಗಳನ್ನು ಜ್ಞಾಪಕಕ್ಕೆ ತಂದುಕೊಳ್ಳಬಹುದು. ವ್ಯಾಲೆಂಟೈನ್ ನಡೆಸಿದ ಒಂದು ಪ್ರಯೋಗದಲ್ಲಿ ಒಂದು ವರ್ಗದ ವಿದ್ಯಾರ್ಥಿಗಳಿಗೆ ಭೂಪಟ ಸಹಿತವಾದ ಮತ್ತು ಭೂಪಟರಹಿತವಾದ ಸಮಪ್ರಮಾಣದ ಎರಡು ಇತಿಹಾಸಪಾಠಗಳನ್ನು ಹೇಳಲಾಯಿತು. ಅನಂತರ ಅವರನ್ನು ಪರೀಕ್ಷೆ ಮಾಡಿದ್ದಲ್ಲಿ ಭೂಪಟಸಹಿತವಾಗಿ ಹೇಳಿಕೊಟ್ಟ ಇತಿಹಾಸಪಾಠಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳು ಹೆಚ್ಚು ಹೆಚ್ಚು ಸಿಕ್ಕಿದವು. ಇದರಿಂದ ಶಿಕ್ಷಣದಲ್ಲಿ ಚಾಕ್ಷುಷೋಪಕರಣಗಳು ಎಷ್ಟು ಸಹಾಯಕವಾಗುತ್ತವೆ ಎಂಬುದು ತಿಳಿದುಬರುತ್ತದೆ.

ಮೂರನೆಯದಾಗಿ, ಪದಪ್ರತಿಮೆಗಳು ಸೂಕ್ಷ್ಮ ವಿಚಾರಕ್ಕೆ ಬಹಳ ಸಹಾಯ ಮಾಡುತ್ತವೆ. ಪದಗಳ, ಅಂಕೆಗಳ ಮತ್ತು ಇತರ ಸಂಕೇತಗಳ ಪ್ರತಿಮೆಗಳ ನೆರವಿಲ್ಲದೆ ಗಣಿತ ಪ್ರಶ್ನೆಗಳನ್ನು ಎಂದೂ ನಾವು ಬಿಡಿಸಲಾರೆವು. ಪಿಯರನಂಥ ಕೆಲ ಮನಃಶಾಸ್ತ್ರಜ್ಞರು ಸೂಕ್ಷ್ಮವಿಚಾರ ಮಾಡುವಲ್ಲಿ ಪದೇತರ ಪ್ರತಿಮೆಗಳು ಪದಪ್ರತಿಮೆಗಳಿಗಿಂತ ಹೆಚ್ಚು ಪ್ರಯೋಜನಕರ ಎನ್ನುತ್ತಾರೆ.

ನಾಲ್ಕನೆಯದಾಗಿ, ಅಪೂರ್ವ ಉಪಕರಣಗಳ ನಿರ್ಮಾಣದಲ್ಲಿ, ಸಮಸ್ಯೆಗಳನ್ನು ಬಿಡಿಸುವುದರಲ್ಲಿ ಮತ್ತು ವಾಸ್ತವಿಕ ಅಥವಾ ಸಂಭವವಸ್ತುಗಳ ಮಾನಸಿಕ ಲೆಕ್ಕಾಚಾರದಲ್ಲಿ ಪ್ರತಿಮೆಗಳು ಬಹಳ ಉಪಕಾರವನ್ನು ಮಾಡುತ್ತವೆ. ತಾನು ಕಟ್ಟಲಿರುವ ಹೊಸ ಕಟ್ಟಡ ಹೇಗಿರಬೇಕೆಂದು ವಾಸ್ತುಶಿಲ್ಪಿಯೊಬ್ಬ ವಿಚಾರಮಾಡುವಾಗ ಕೆಟ್ಟುಹೋದ ಯಂತ್ರದ ಯಾವ

ಭಾಗ ಕೆಟ್ಟಿದೆ ಎಂಬುದನ್ನು ದುರಸ್ತುಗಾರನು ಊಹಿಸುವಾಗ ಮತ್ತು ಒಬ್ಬ ಹುಡುಗನು ೧೨ ಅಡಿ ತಗ್ಗಿಗೆ ಹಾರಿದರೆ ತನ್ನ ಮಾಂಸಲ ಸಂವೇದನೆ ಎಂಥದಾಗಬಹುದೆಂದು ಕಲ್ಪಿಸುವಾಗ ವಿಚಾರ ಹಾಗೂ ವರ್ತನೆಗಳ ಮಾರ್ಗದರ್ಶಕಗಳನ್ನಾಗಿ ಪ್ರತಿಮೆಗಳನ್ನು ಬಳಸುತ್ತಾರೆ.

ಐದನೆಯದಾಗಿ, ಸಾಹಿತ್ಯ, ಚಿತ್ರ, ಮೂರ್ತಿಶಿಲ್ಪ ಮತ್ತು ಇತರ ಕಲೆಗಳನ್ನು ಮೆಚ್ಚುವುದರಲ್ಲಿ ನಮ್ಮ ಪ್ರತಿಮೆಗಳು ಪ್ರವೇಶಿಸುತ್ತವೆ. ನಾವು ಒಂದು ಚಿತ್ರವನ್ನೋ ವಿಗ್ರಹವನ್ನೋ ನೋಡುತ್ತಿರುವಾಗ ನಮ್ಮಲ್ಲಿ ಚಾಕ್ಷುಷ ಸಂವೇದನೆ ಹಾಗೂ ಇಂದ್ರಿಯಪ್ರತ್ಯಕ್ಷಗಳನ್ನಲ್ಲದೆ ಬೇರೆ ಇಂದ್ರಿಯಗಳಿಂದ ಹುಟ್ಟಿದ ಅನೇಕ ತರದ ಪ್ರತಿಮೆಗಳನ್ನು ಮನಸ್ಸಿನಲ್ಲೇ ಅನುಭವಿಸಿದಂತೆ ಭಾಸವಾಗುತ್ತದೆ. ಕೆಲವು ಕವಿಗಳು ಚಾಕ್ಷುಷಪ್ರತಿಮೆಗಳನ್ನೇ ಬಳಸಿದರೆ, ಮತ್ತೆ ಕೆಲವರು ಶ್ರಾವಣಪ್ರತಿಮೆಗಳಿಗೆ ಹೆಚ್ಚು ಶರಣಾಗುತ್ತಾರೆ. ಇದರಿಂದ ಗೊತ್ತಾಗುವುದೇನೆಂದರೆ ಸೂಕ್ಷ್ಮವೂ ಸಾಮಾನ್ಯವೂ ಆದ ಪದಗಳ ಪ್ರಯೋಗಕ್ಕಿಂತ ಸಂದರ್ಭಾನುಸಾರವಾಗಿ ಮಾಡುವ ಸುಸ್ಪಷ್ಟವಾದ ಪ್ರತಿಮೆಗಳ ಪ್ರಯೋಗವು ಮನುಷ್ಯರಲ್ಲಿ ಬಹುಬೇಗ ಭಾವನೋದ್ರೇಕವನ್ನು ಉಂಟುಮಾಡಿ ಅವರನ್ನು ಕಾರ್ಯಪ್ರವೃತ್ತರನ್ನಾಗಿ ಮಾಡಬಲ್ಲುದು. ಅಂಥ ಪ್ರತಿಮಾ ಪ್ರಯೋಗಗಳನ್ನು ರೂಪಕ, ಉಪಮೆ ಮುಂತಾದ ಅಲಂಕಾರಗಳಲ್ಲಿ ಚೆನ್ನಾಗಿ ಕಾಣಬಹುದು. ಅವು ರಸಿಕನ ಮನಸ್ಸು ಬೇಗ ಹಾಗೂ ತೀವ್ರವಾಗಿ ರಸ ಕಾರ್ಯವನ್ನು ಮಾಡಲು ಹಚ್ಚುವುದು ಅನುಭವಸಿದ್ಧ.

*

## ಅಧ್ಯಾಯ ಏಳು

# ಕಲಿಯುವಿಕೆ

ತನ್ನ ಆವರಣದ ಮೇಲೂ ತನ್ನಮೇಲೂ ಪ್ರಭುತ್ವವನ್ನು ಸಂಪಾದಿಸಿಕೊಳ್ಳಬೇಕಾದರೆ ವ್ಯಕ್ತಿಯು ಕಲಿಯಬೇಕು, ಜ್ಞಾಪಿಸಿಕೊಳ್ಳಬೇಕು ಮತ್ತು ವಿಚಾರ ಮಾಡಬೇಕು. ಹೊಸ ಪರಿಸ್ಥಿತಿಗಳನ್ನು ವ್ಯಕ್ತಿಯು ಹೇಗೆ ಎದುರಿಸಿ ಅವುಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳುತ್ತಾನೆ, ಹೊಸ ಸಮಸ್ಯೆಗಳನ್ನು ಹೇಗೆ ಬಗೆಹರಿಸಿಕೊಳ್ಳುತ್ತಾನೆ, ತನ್ನ ಸಿದ್ಧಿಗಳನ್ನವನು ಹೇಗೆ ಉಳಿಸಿಕೊಳ್ಳುತ್ತಾನೆ ಮತ್ತು ಅವನ್ನು ಅವನು ಅದೇ ಸನ್ನಿವೇಶವನ್ನು ಮತ್ತೊಮ್ಮೆ ಎದುರಾದಾಗ ಇಲ್ಲವೆ ಅಂಥದೇ ಇನ್ನೊಂದು ಸನ್ನಿವೇಶ ಎದುರಾದಾಗ ಹೇಗೆ ಉಪಯೋಗಿಸಿಕೊಳ್ಳುತ್ತಾನೆ ಎಂಬುದನ್ನೀಗ ನಾವು ಅಭ್ಯಾಸ ಮಾಡಬೇಕಾಗಿದೆ. ಒಂದು ಸಮಸ್ಯೆಯನ್ನು ವಿಚಾರದಿಂದ ಬಗೆಹರಿಸಿಕೊಂಬುದು ಮನುಷ್ಯನಿಗೆ ವಿಶಿಷ್ಟವಾದದ್ದು. ಕಲಿಯುವುದೂ ನೆನಪಿಟ್ಟುಕೊಳ್ಳುವುದೂ ಮನುಷ್ಯನಿಗೂ ಪ್ರಾಣಿಗೂ ಸಾಧಾರಣ. ಏನಾದರೊಂದನ್ನು ಕಲಿಯುವಾಗ ವ್ಯಕ್ತಿಯು ಸ್ಪಷ್ಟವಾಗಿ ಹೊಸದೊಂದು ಸನ್ನಿವೇಶದೊಡನೆ ವ್ಯವಹರಿಸುತ್ತಾನೆ. ಹಾಗಲ್ಲದೆ ಸನ್ನಿವೇಶವು ಸಂಪೂರ್ಣ ಸುಪರಿಚಿತವೇ ಆಗಿದ್ದಲ್ಲಿ ಅವನು ತನ್ನ ಸ್ಮೃತಿಯನ್ನು ಅವಲಂಬಿಸಿದರಷ್ಟೇ ಸಾಕಾದೀತಲ್ಲವೆ ಕಲಿಯಬೇಕಾದದ್ದು ಅಲ್ಲಿ ಏನೂ ಇರದು.

ಕಲಿಯುವಿಕೆಯ ಲಕ್ಷಣ: ತನ್ನ ಪಾಲಿನ ಕೆಲಸವೇನನ್ನೂ ಮಾಡದೆ ವ್ಯಕ್ತಿಯು ಕೇವಲ ಆವರಣ ಬಲದಿಂದ ರೂಪಿಸಲ್ಪಡುತ್ತಾನೆ ಎಂಬುದು ಸುಳ್ಳು ಅವನು ತಾನು ರೂಪಿಸಲ್ಪಡುವ ಕಾರ್ಯದಲ್ಲಿ ತನಗೆ ದೊರಕುವ ಪ್ರೇರಣೆಗಳಿಗೆ ಸಕ್ರಿಯವಾಗಿ ಅನುಕ್ರಿಯೆಯೆಸಗುವುದರ ಮೂಲಕ ಕಲಿಯುತ್ತಾನೆ-ನಿಷ್ಕ್ರಿಯನಾಗಿ ತನ್ನತ್ತ ಆವರಣವು ಕಳಿಸಿದ ಪ್ರೇರಣೆಗಳಿಗೆ ಅನುಕ್ರಿಯೆಯೆಸಗುತ್ತ ಕುಳಿತಿರುವುದಿಲ್ಲ. ಏಕೆಂದರೆ, ಅವನೊಂದು ಜಡ ಯಂತ್ರವಲ್ಲ; ಅಥವಾ ವಶವಿಲ್ಲದೆ ಕ್ಷೇಪಕ್ರಿಯೆಗಳನ್ನು ಮಾತ್ರ ಮಾಡಿ ಬದುಕುವ ಗಿಡಮರಗಳಂತಿರುವವನಲ್ಲ. ಕಲಿಯುವಿಕೆಯಲ್ಲಿ ನಾವು ಮಾಡುವ ನರಮಂಡಲ ಹಾಗೂ ಮಿದುಳುಗಳ ಚಟುವಟಿಕೆಯು ಮಾಂಸಪೇಶಿಗಳಿಗೆ ಶಕ್ತಿ ಕೊಡುತ್ತದೆ; ಮಿದುಳಿನ ನರದ ರವೆಗಳಿಗೂ ಬಹುಶಃ ತ್ರಾಣ ನೀಡುತ್ತದೆ. ಆದರೆ ಕಲಿಯುವುದೆಂಬುದು ಕೇವಲ ಶಕ್ತಿವರ್ಧನ ಎಂಬುದಕ್ಕಿಂತ ಹೆಚ್ಚಿನದು. ಕಲಿತ ಕೆಲಸವೆಂಬುದು ವ್ಯಕ್ತಿ ತನ್ನ ಸಂಗ್ರಹಕ್ಕೆ ಸೇರಿಸಿಕೊಂಡ

ಹೊಸದೊಂದು ಅಂಶ. ಕಲಿಯುವುದು ವ್ಯಕ್ತಿಯು ಉಳಿಸಿಕೊಂಡು ಮತ್ತೊಮ್ಮೆ ಬಳಸಿಕೊಂಬಂತಹ ಏನೋ ಹೊಸದೊಂದನ್ನು ಮಾಡುವುದರಲ್ಲಿದೆ. ಈ ಹೊಸದೊಂದು ಎಂಬುದು ಒಂದು ಚಲನೆಗಳ ಕೂಟವಾಗಿರಬಹುದು ಇಲ್ಲವೆ ಹೊಸ ವಸ್ತು ಅಥವಾ ಮುಖವೊಂದನ್ನು ನೋಡಿ ಅನಂತರ ಗುರುತಿಸುವ ಕಾರ್ಯವಾಗಿರಬಹುದು. ಕಲಿಯುವುದೆಂಬುದು ಇಂಥ ಒಂದು ವಿಶೇಷವಾದ ಚಟುವಟಿಕೆ ಎಂದು ಹೇಳಲು ಬರದು; ಆದರೆ ಅದು ಹೊಸದಾಗಿರಬೇಕು–ಇಡಿಯಾಗಿ ಅಥವಾ ಅಂಶತಃ– ಎಂಬುದು ಅನಿವಾರ್ಯ.

ಆದರೆ ಪ್ರತಿಯೊಂದು 'ಹೊಸತೂ' ಕಲಿಯಲ್ಪಡುವುದಿಲ್ಲ. ಒಂದು ಹೊಸ ಸನ್ನಿವೇಶದ ಮೇಲೆ ಪ್ರಭುತ್ವವನ್ನು ಪಡೆಯಲು ಯತ್ನಿಸುವಾಗ ಅನೇಕ ಬಗೆಯ ಕಾರ್ಯಗಳನ್ನು ನೀವು ಮಾಡುವ ಸಂಭವವುಂಟು. ಅವುಗಳಲ್ಲಿ ಎಲ್ಲವೂ ವ್ಯರ್ಥವೆನಿಸಿ ಕೊನೆಗೆ ಯಾವುದೋ ಒಂದು ಬಗೆಯ ಕಾರ್ಯವು ಬಲ ಪಡೆದು ನಿಮ್ಮಿಂದ ಕಲಿಯಲ್ಪಡುತ್ತದೆ. ಅದೇ ಯಶಸ್ವಿ ಕಾರ್ಯ. ಮಿಕ್ಕ ಕಾರ್ಯಗಳನ್ನು ನೀವು ಉಳಿಸಿಕೊಳ್ಳದೆ ಬಿಟ್ಟುಬಿಡುತ್ತೀರಿ. ಯಶಸ್ವಿ ಕಾರ್ಯವು ಬಲ ಪಡೆಯುತ್ತದೆ. ಆದುದರಿಂದ ಕಲಿಯುವಿಕೆಯಲ್ಲಿ ಈ ಬಲವನ್ನು ಪಡೆಯುವ ಅಂಶವು ಮೂಲಭೂತವಾದದ್ದು ಎಂಬುದು ಗಮನಾರ್ಹ.

## ಪ್ರಾಣಿಗಳು ಕಲಿಯುವ ಬಗೆ

ಮೇಲ್ಮಟ್ಟದವೆನಿಸಿದ ಮನುಷ್ಯರ ಬೌದ್ಧಿಕ ಪ್ರಕ್ರಿಯೆಗಳಿಂದ ಜಟಿಲವಾಗದೆ, ಹೆಚ್ಚು ಸರಳವಾಗಿ ಉಳಿದಿರುವ ಕಲಿಯುವಿಕೆಯ ಮೂಲಭೂತ ಪ್ರಕ್ರಿಯೆಗಳನ್ನು ನಾವು ಪ್ರಾಣಿಗಳಲ್ಲಿ ಕಾಣಬಹುದು. ಕಲಿಯುವಿಕೆಯ ಬಗ್ಗೆ ತಮಗಾಗುವ ಅಂಥ ಮೂಲಭೂತ ಜ್ಞಾನವು ಮಾನವ ಜೀವನದಲ್ಲಿ ಹೆಚ್ಚು ಪ್ರಯೋಜನಕಾರಿಯಾಗಬಲ್ಲುದು ಎಂದು ಭಾವಿಸಿ, ಮನಃಶಾಸ್ತ್ರಜ್ಞರು ಪ್ರಾಣಿಗಳ ಕಲಿಯುವಿಕೆಯಲ್ಲಿ ಅನೇಕ ಪ್ರಯೋಗಗಳನ್ನು ಯಶಸ್ವಿಯಾಗಿ ಮಾಡಿದ್ದಾರೆ. ಪ್ರಾಣಿಗಳನ್ನು ಯೋಜ್ಯಗಳನ್ನಾಗಿ ತೆಗೆದುಕೊಂಡಾಗ ಲಾಯ್ಡ್ ಮಾರ್ಗನ್ನನ ನೀತಿಯನ್ನು ಅನುಸರಿಸಲಾಯಿತು. ಆ ನೀತಿಯ ಪ್ರಕಾರ ಮಾನಸ ಮಟ್ಟದಲ್ಲಿ ಕೆಳಗಿರುವ ಯಾವುದಾದರೊಂದು ಪರಿಹಾರ ಪ್ರಯತ್ನದ ಫಲವೆಂದು ಒಂದು ಕಾರ್ಯವನ್ನು ಅರ್ಥಮಾಡಲು ಬರುವ ಯಾವ ಪ್ರಕರಣದಲ್ಲಿಯೂ ಅದನ್ನು ಮೇಲ್ಮಟ್ಟದ ಮಾನಸಿಕ ಶಕ್ತಿಯ ಫಲವೆಂದು ಯಾರೂ ಅರ್ಥಮಾಡಹೋಗಬಾರದು.

ಲಾಯ್ಡ್ ಮಾರ್ಗನ್ನನ ಹತ್ತಿರ ಒಂದು ನಾಯಿಯಿತ್ತು. ಅದನ್ನವನು ಬೇಲಿ ಹಾಕಿದ ಎದುರಂಗಳದಲ್ಲಿ ಒಮ್ಮೆ ಇಟ್ಟನು. ಆದ ಅದು ತನ್ನ ವರ್ತನೆಯಲ್ಲಿ ಅಲ್ಲಿಂದ ತಪ್ಪಿಸಿಕೊಂಡು ಬೀದಿಗೋಡುವ ಲವಲವಿಕೆಯನ್ನು ತೋರಿಸಿತು. ಅನಂತರ ಅದು ಬೇಲಿ ಗೂಟಗಳ ನಡುವೆ ತನ್ನ ಮೂಗನ್ನು ಹಾಕಿ ಒತ್ತುತ್ತ ಹೋಯಿತು. ಅಂಥ ಒಂದು ಸ್ಥಳದಲ್ಲಿ ಬೇಲಿಯ ಬಾಗಿಲಿತ್ತು. ಅದನ್ನೊತ್ತಿದ ಕೂಡಲೇ ಅದು ತೆರೆಯಿತು. ಆಗ ನಾಯಿಯು ಹೊರ ಬಿದ್ದು ಓಡಿಹೋಯಿತು. ಆ ಮೇಲೆ ಅಂಗಳದಲ್ಲಿ ಬಿಟ್ಟಾಗ ಅದು ಬೇಲಿ ಬಾಗಿಲಿನ

ಹತ್ತಿರದಲ್ಲೇ ಮೂಗುಹಾಕಿ ಒತ್ತಲಾರಂಭಿಸಿ, ಬಾಗಿಲು ತೆರೆಯುವುದನ್ನು ಕಲಿತು, ಅಂತ್ಯದಲ್ಲಿ ಸೀದಾ ಒಮ್ಮೆಲೇ ಬಾಗಿಲೆದುರು ಹೋಗಿ ಅದನ್ನು ಮೂಗಿನಿಂದ ಒತ್ತಿ ಎತ್ತಿ ತೆರೆಯಲು ಕಲಿತುಬಿಟ್ಟಿತ್ತು. ನಾಯಿಯ ವರ್ತನೆಯಲ್ಲಿ ವಿಚಾರದ ಲಕ್ಷಣವಿಲ್ಲ. ವಿಚಾರಜನ್ಯ ಕಾರ್ಯದಲ್ಲಿ ಚೋದನಾತ್ಮಕತೆಗಿಂತ ಬುದ್ಧಿಪೂರ್ವಕವಾಗಿ ಮಾಡುವ ಅಂಶ ಹೆಚ್ಚಾಗಿರುತ್ತದೆ. ಅಂಥ ಲಕ್ಷಣ ನಾಯಿಯ ಆ ವರ್ತನೆಯಲ್ಲಿ ಇದ್ದಂತೆ ತೋರಲಿಲ್ಲ. ಯಾವಾಗಲೂ ಹೊರ ಹೋಗಬೇಕೆಂದು ಪ್ರಯತ್ನಿಸುತ್ತ ತನ್ನ ಚಟುವಟಿಕೆಯನ್ನು ಬದಲಾಯಿಸುತ್ತ ಹೋಗುವ ರೀತಿಯಿಂದ ಅದು ಬಂದ ಸಂಕಟದ ಪರಿಹಾರಕ್ಕೆ ಪ್ರಯತ್ನ ನಡೆಸಿತ್ತು. ಇಂಥ ಪರಿಹಾರ ಪ್ರಯತ್ನದ ಬಗೆಯನ್ನು "ಪ್ರಯತ್ನ ಮತ್ತು ತಪ್ಪು" ಎಂದು ಕರೆಯಬಹುದು. ಅದರ ಮುಖ್ಯ ಅಂಶಗಳು ನಾಲ್ಕು: ಒಂದು ಗುರಿಯನ್ನು ಮುಟ್ಟಲು ಮೊದಲು ಒಂದು ಸನ್ನಿವೇಶ ತಯಾರಾಗಬೇಕು; ಆಗ ಗುರಿಯನ್ನು ಮುಟ್ಟುವ ಯಾವ ಸ್ಪಷ್ಟ ಮಾರ್ಗವೂ ತೋರದಂತಿರಬೇಕು; ಬಳಿಕ ಪರಿಸ್ಥಿತಿಯ ಪರಿಶೋಧ: ಶಕ್ಯಮಾರ್ಗಗಳನ್ನು ಹುಡುಕಿ, ಆ ಮೂಲಕ ಪ್ರಯತ್ನಿಸಿ, ಆ ಈ ಮಾರ್ಗದಲ್ಲಿ ಶಕ್ಯವಾಗದೆಂದು ಕಂಡು ಬಂದಾಗ ಹಿಂದಕ್ಕೆ ಸರಿದು ಮತ್ತೊಂದು ಮಾರ್ಗ ಹಿಡಿದು ಪ್ರಯತ್ನಿಸತೊಡಗಬೇಕು. ಅಂತ್ಯದಲ್ಲಿ ಸರಿಯಾದ ಮಾರ್ಗವನ್ನು ಕಂಡುಕೊಂಡು ಗುರಿಯನ್ನು ಮುಟ್ಟಬೇಕು.

ಯಾವ ಕಲಿಯುವಿಕೆಯೂ ಇಲ್ಲದೆ ಈ ಸಂಗತಿಗಳೆಲ್ಲ ನಡೆಯಬಹುದು. ಆದರೆ ಪ್ರತಿದಿನವೂ ತೋರುತ್ತ ಹೋದ ಸುಧಾರಣೆಯು ಅಲ್ಲಿ ಕಲಿಯುವಿಕೆ ನಡೆಯಿತೆಂಬುದಕ್ಕೆ ಸಾಕ್ಷಿ. ಮೇಲೆ ಹೇಳಿದ ಪ್ರಯತ್ನ ಮತ್ತು ತಪ್ಪುಗಳ ಪದ್ಧತಿಯಿಂದ ನಾಯಿಯು 'ಎಲ್ಲಿ ಕೆಲಸ ನಡೆಸಿದರೆ ಕಾರ್ಯಸಿದ್ಧಿಯಾಗುವುದು' ಎಂಬ ಅಂಶವನ್ನು ಕಲಿಯಿತು. ಮೊದಲು ಅದು ಹೆಚ್ಚು ಕಡಿಮೆ ಅಂದಾಜು ಕಟ್ಟಿ ಎಲ್ಲಿ ಕೆಲಸಮಾಡಬೇಕೆಂಬುದನ್ನು ಕಲಿತು, ಅನಂತರ ಸರಿಯಾಗಿ ಎಲ್ಲಿ ಮಾಡಬೇಕೆಂಬುದನ್ನು ಕಲಿಯಿತು. ಇದನ್ನು "ಸ್ಥಳದ ಕಲಿಯುವಿಕೆ" ಎನ್ನಬಹುದು. ಕೊನೆಯಲ್ಲಿ ಬಾಗಿಲು ತೆರೆಯುವುದು ಹೇಗೆ ಎಂಬುದನ್ನು ಕಲಿಯಿತು. ಇದನ್ನು "ಸಾಧನದ ಕಲಿಯುವಿಕೆ" ಎಂದು ಹೇಳಬಹುದು. ಲಾಯ್ಡ್ ಮಾರ್ಗನ್ನನ ನೀತಿಯ ಪ್ರಕಾರ ಕೆಲ ಮಾಂಸಖಂಡಗಳ ಚಟುವಟಿಕೆಗಳನ್ನು ಮಾಡುವುದರ ಮೂಲಕ ಪ್ರಾಣಿಯು ಅತ್ಯಂತ ಕೆಳಮಟ್ಟದಲ್ಲಿ ಯಾವುದಾದರೊಂದು ಇಂದ್ರಿಯಪ್ರೇರಣೆಗೆ ಅನುಕ್ರಿಯೆದೋರಲು ಕಲಿಯುತ್ತದೆ. ಅದಕ್ಕಿಂತ ಸ್ವಲ್ಪ ಮೇಲ್ಮಟ್ಟದಲ್ಲಿ ಅದು ಸ್ಥಳವನ್ನು ಹುಡುಕುವುದರ ಮೂಲಕ ಸ್ಥಳಜ್ಞಾನವನ್ನು ಪಡೆಯುವುದು. ಆ ಬಳಿಕ ಒಂದು ವಸ್ತುವನ್ನು ಸರಿಯಾಗಿ ಬಳಸುವುದರ ಮೂಲಕ ವಸ್ತುಜ್ಞಾನವನ್ನು ಹೊಂದುತ್ತದೆ. ಪ್ರಾಣಿಯ ಕರ್ಮೇಂದ್ರಿಯದ ವರ್ತನೆಯು ಈ ಲಬ್ಧಜ್ಞಾನದಿಂದ ನಿಯಂತ್ರಿತವಾಗುವುದಲ್ಲದೆ, ಕೇವಲ ನೇರವಾಗಿ ಲಬ್ಧಪ್ರೇರಣೆಯಿಂದ ಅಲ್ಲ. ಪ್ರಾಣಿಯು ಸರಿಯಾಗಿ "ಏನನ್ನು" ಮತ್ತು "ಹೇಗೆ" ಕಲಿಯುತ್ತದೆ ಎಂಬುದನ್ನು ಕಂಡುಹಿಡಿಯುವುದಕ್ಕಾಗಿ ಮನಃಶಾಸ್ತ್ರಜ್ಞರು ಈ ಪ್ರಕಾರ ಸ್ಥಳ ಹಾಗೂ ಸಾಧನಗಳ ಜ್ಞಾನಕ್ಕೆ ಸಂಬಂಧಿಸಿದಂತೆ ಅನೇಕ ಪ್ರಯೋಗಗಳನ್ನು ಮಾಡಿದ್ದಾರೆ.

**ಸ್ಥಳಜ್ಞಾನ ಪಡೆಯುವುದು:** ಕೆಲ ಅಕಶೇರುಕಗಳನ್ನು ಬಿಟ್ಟು ಮಿಕ್ಕ ಎಲ್ಲ ಪ್ರಾಣಿಗಳೂ ಸ್ಥಳಗಳನ್ನು ಹುಡುಕಿ ಬಹಳ ವ್ಯರ್ಥ ಪ್ರಯತ್ನ ಮಾಡದೆ ಅಲ್ಲಿ ಹೋಗುವುದನ್ನು ಕಲಿಯುತ್ತವೆ.

ಪ್ರಯೋಗಶಾಲೆಗಳಲ್ಲಿ ಬಿಳಿ ಇಲಿಯನ್ನು ಸಾಕಲಾಗುವುದರಿಂದ ಅದರ ವಂಶ, ವಯಸ್ಸು ಮತ್ತು ಹಿಂದಿನ ಅನುಭವಗಳು ಮೊದಲೇ ತಿಳಿದಿರುತ್ತವೆ. ಆದುದರಿಂದ ಮನುಷ್ಯರೂಪದ ಯೋಜ್ಯರ ಮೇಲೆ ಮಾಡುವ ಪ್ರಯೋಗಗಳಲ್ಲಿಗಿಂತ ಹೆಚ್ಚು ಸಮರ್ಪಕವಾಗಿ ಈ ಮುಖ್ಯ ಪರಿವರ್ತಿಕಾರಕಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಸಾಧ್ಯವಾಗುವುದು.

**ನೈಷೇಧಿಕ ಹೊಂದಿಕೆ:** ಒಂದು ಇಲಿಯನ್ನು ಒಂದು ಹೊಸ ಸ್ಥಳದಲ್ಲಿ ಅಂದರೆ ಒಂದು ಪೆಟ್ಟಿಗೆಯಲ್ಲಿ ಇಟ್ಟಾಗ ಅದು ಭಯ ಅಥವಾ ಜಾಗರೂಕತೆಯ ಚಿಹ್ನಗಳನ್ನು ತೋರಿಸುತ್ತದೆ. ಪೆಟ್ಟಿಗೆಯಿಂದ ತಪ್ಪಿಸಿಕೊಂಡು ಹೋಗಲು ಅದು ವಿಲಿವಿಲಿ ಒದ್ದಾಡಬಹುದು ಇಲ್ಲವೆ ಒಂದು ಮೂಲೆಯಲ್ಲಿ ಹೋಗಿ ಹೆದರಿ ಕೂತು ಬಿಡಬಹುದು. ಸ್ವಲ್ಪ ಕಾಲಾಂತರ ಅದರ ಭಾವನಾ ಕ್ಷೋಭೆಯು ಇಳಿದ ಮೇಲೆ ಅದು ತಪ್ಪಿಸಿಕೊಂಡು ಹೋಗಲು ಅನುಕೂಲವಾದ ಸ್ಥಳವನ್ನು ಹುಡುಕಲಾರಂಭಿಸುತ್ತದೆ. ಆ ದಿನ ಅದನ್ನು ಪೆಟ್ಟಿಗೆಯಿಂದ ಹೊರದೆಗೆದು ಮರುದಿನ ಮತ್ತೆ ಅದನ್ನು ಅದರಲ್ಲೇ ಇಟ್ಟಾಗ ಅದರ ವರ್ತನೆ ಅದೇನೋ ಹೊಸದನ್ನು ಕಲಿಯಿತೆಂಬುದನ್ನು ತೋರಿಸುತ್ತದೆ. ಏಕೆಂದರೆ, ಅದು ಹಿಂದಿನ ದಿನದಷ್ಟು ಬೆದರುವುದಿಲ್ಲ ಮತ್ತು ಅದು ಪೆಟ್ಟಿಗೆಯ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಸರಾಗವಾಗಿ ಓಡಾಡುತ್ತ, ಅತ್ತಿತ್ತ ಸಿಕ್ಕಿದ್ದನ್ನು ಮೂಸುತ್ತ, ಸಾಗುತ್ತದೆ. ಪೆಟ್ಟಿಗೆಯಲ್ಲಿ ತಿಂಡಿ–ತೀರ್ಥ ಮುಂತಾದ ಇಲಿಗೆ ಬೇಕಾದ ಯಾವ ಸಾಮಾನೂ ಇಲ್ಲದಿದ್ದಲ್ಲಿ ಅದರ ಹುಡುಕಾಟದ ಚಟುವಟಿಕೆ ಸ್ವಲ್ಪ ಕಾಲದಲ್ಲೇ ನಿಂತು ಹೋಗುತ್ತದೆ. ಮಾರನೆಯ ದಿನ ಅದನ್ನು ಅದೇ ಪೆಟ್ಟಿಗೆಯಲ್ಲಿ ಇಟ್ಟಾಗ ಅದರ ಚಟುವಟಿಕೆ ಮತ್ತಷ್ಟು ಕಮ್ಮಿಯಾಗುತ್ತದೆ–ಪುನಃ ಆ ಇಲಿಯ ಸುಧಾರಿತ ವರ್ತನೆಯು ಅದು ಮತ್ತೇನೋ ಹೊಸದನ್ನು ಕಲಿತಿದೆ ಎಂಬುದನ್ನು ತೋರಿಸುತ್ತದೆ.

ಇಲ್ಲಿಯವರೆಗಿನ ಕಲಿಯುವಿಕೆಗೆ "ನೈಷೇಧಿಕ ಹೊಂದಿಕೆ" ಎನ್ನುತ್ತಾರೆ. ಇಲ್ಲಿ ಇಲಿಯು ಪೆಟ್ಟಿಗೆಯೊಳಗಿರುವ ಆವರಣಕ್ಕೆ ಹೊಂದಿಕೊಂಡಿತು. ಈ ಹೊಂದಿಕೆಯಲ್ಲಿ ಕೆಲ ಅನುಕ್ರಿಯೆಗಳನ್ನು ಬಿಟ್ಟು ಬಿಡುವುದು ಅಡಗಿದೆ. ಮೊದಲು ಭಯಾನುಕ್ರಿಯೆಗಳು ಬಿಟ್ಟುಹೋದವು. ಅನಂತರ ಶೋಧಾನುಕ್ರಿಯೆಗಳು ಹೊರಟು ಹೋದವು. ಇಲಿಗೆ ಪೆಟ್ಟಿಗೆಯಲ್ಲಿ ಭಯಾನುಕ್ರಿಯೆಯನ್ನು ಬೆಂಬಲಿಸುವ ಯಾವ ಸನ್ನಿವೇಶವೂ ದೊರಕಲಿಲ್ಲ. ಒಳಗಿನ ಜಾಗವನ್ನು ಚೆನ್ನಾಗಿ ಪರಿಶೀಲಿಸಿದ ನಂತರ ಶೋಧಾನುಕ್ರಿಯೆಗಳು ನಿಂತು ಹೋದವು.

ನೈಷೇಧಿಕ ಹೊಂದಿಕೆ ಎಂಬುದು ಒಂದು ಮೂಲಭೂತವಾದ ಕಲಿಯುವಿಕೆ. ಪಳಗಿಸಲಾಗುವ ಎಲ್ಲ ಪ್ರಾಣಿಗಳಲ್ಲಿಯೂ ಈ ವಿಧವಾದ ಕಲಿಯುವಿಕೆಯನ್ನು ಕಾಣಬಹುದು. ಸರ್ಕಸ್ಸಿಗೆ ಹೊಸದಾಗಿ ಪಳಗಿಸಲು ತೆಗೆದುಕೊಂಡ, ಹುಲಿ, ಚಿರತೆ, ಆನೆ, ಸಿಂಹ ಮುಂತಾದ ಪ್ರಾಣಿಗಳು ಹೇಗೆ ಕ್ರಮೇಣ ತಮ್ಮ ಭಯವನ್ನು ಕಳೆದುಕೊಳ್ಳುತ್ತ ಅಲ್ಲಿಯ ಆವರಣಕ್ಕೆ

ಹೊಂದಿಕೊಂಡು ವರ್ತಿಸುವುವು ಎಂಬುದು ಮೇಲಿನ ಮಾತಿಗೆ ದೃಷ್ಟಾಂತ. ತಪ್ಪಿಸಿಕೊಂಡು ಹೋಗುವ ಇಲ್ಲವೆ ಎದುರು ಬೀಳುವ ಉಗ್ರಪ್ರತಿಕ್ರಿಯೆಯನ್ನು ತೋರಿದ ಸನ್ನಿವೇಶದಲ್ಲಿ ಸಮಾಧಾನದಿಂದ ವರ್ತಿಸುವುದನ್ನು ಕಲಿಸುವುದೇ ಪಳಗಿಸುವ ಕಾರ್ಯ. ಮನುಷ್ಯನಾದರೂ ಮೊದಮೊದಲು ತನ್ನಲ್ಲಿ ಭಯ ಇಲ್ಲವೆ ಅರಕ್ಷಿತತೆಯ ಭಾವನೆಯನ್ನು ಹುಟ್ಟಿಸಿದ ಸನ್ನಿವೇಶಕ್ಕೆ ನೈಷೇಧಿಕವಾಗಿ ಹೊಂದಿಕೊಳ್ಳುತ್ತಾನೆ. ಅವನ ಭಯಾನುಕ್ರಿಯೆಗಳು ಹೊಂದಿಕೊಂಡು ಹೋಗುತ್ತವೆ. ಅವನ ಶೋಧಾನುಕ್ರಿಯೆಗಳಾದರೂ ಹಾಗೇ: ಫಕ್ಕನೆ ಅವನ ಲಕ್ಷ್ಯವನ್ನು ಸೆಳೆದ ಒಂದು ಸದ್ದು ಪದೇ ಪದೇ ಉಂಟಾದಾಗ ಅವನ ಸಂಪೂರ್ಣ ಅಲಕ್ಷ್ಯಕ್ಕೆ ಗುರಿಯಾಗುವುದು ಒಂದು ನಿದರ್ಶನ. ನೈಷೇಧಿಕ ಹೊಂದಿಕೆಯು ವ್ಯರ್ಥಾನು ಕ್ರಿಯೆಗಳನ್ನು ಕಳೆದುಬಿಡುತ್ತದೆ; ಕೊಟ್ಟ ಆವರಣದಲ್ಲಿರುವ ಮುಖ್ಯವಾದ ವಸ್ತುಗಳೊಡನೆ ವ್ಯವಹರಿಸಲು ಅವನನ್ನು ಸ್ವತಂತ್ರಗೊಳಿಸುತ್ತದೆ. ಅದು ಅವನ ಸನ್ನಿವೇಶದ ಒಂದು ಭಾಗವೇ ಆಗುತ್ತದೆ.

## ಗಲಿಬಿಲಿ ಪೆಟ್ಟಿಗೆಯಲ್ಲಿ ಇರುವ ಇಲಿ

ಗಲಿಬಿಲಿ ಪೆಟ್ಟಿಗೆಯಲ್ಲಿ ನಡುನಡುವೆ ಗೋಡೆಗಳಿರುತ್ತವೆ. ಆ ಗೋಡೆಗಳಲ್ಲಿ ಅನೇಕ ಇಕ್ಕಟ್ಟಾದ ಮಾರ್ಗಗಳಿರುತ್ತವೆ. ಅವುಗಳೊಟ್ಟಿಗೆ ತಪ್ಪುದಾರಿಗಳಿರುತ್ತವೆ. ಅವುಗಳಲ್ಲಿ ಆಹಾರದ ಪೆಟ್ಟಿಗೆಗೆ ಒಯ್ದು ಮುಟ್ಟಿಸುವ ಒಂದು ವಕ್ರವಾದ ರಾಜಮಾರ್ಗವೂ ಇರುತ್ತದೆ. ಅದರಲ್ಲಿ ಇಟ್ಟ ಇಲಿಗೆ ಬಹಳ ದೂರದಲ್ಲಿ ಇಟ್ಟಿರುವ ಆಹಾರದ ಪೆಟ್ಟಿಗೆಯು ಕಾಣಿಸುವುದಿಲ್ಲ. ಮೊಟ್ಟ ಮೊದಲು ಪೆಟ್ಟಿಗೆಯಲ್ಲಿ ಇರುವ ಇಲಿಗೆ ನಿರ್ದಿಷ್ಟವಾದ ಯಾವ ಗುರಿಯೂ ಇರುವುದಿಲ್ಲ. ಆದರೆ ಅದರ ವಿವಿಧ ದ್ವಾರಗಳಲ್ಲಿ ಸುತ್ತಾಡುತ್ತ, ಸಿಕ್ಕಸಿಕ್ಕಲ್ಲಿ ಮೂಸುತ್ತ, ಇಲಿಯು ಆಹಾರವನ್ನು ಹುಡುಕಲು ಆರಂಭಿಸುತ್ತದೆ. ಹೀಗೆ ಸುತ್ತಾಡುತ್ತ ಅದು ಆಹಾರದ ಪೆಟ್ಟಿಗೆಯನ್ನು ಮುಟ್ಟಿ ಅದರಲ್ಲಿರುವ ಆಹಾರವನ್ನು ತಿಂದುಬಿಡುತ್ತದೆ. ಅದನ್ನು ಮತ್ತೆ ಮೊದಲಿನ ಜಾಗಕ್ಕೆ ತಂದುಬಿಟ್ಟರೆ ತಾನು ಆಗಲೇ ಏನನ್ನೋ ಕಲಿತಿದ್ದೇನೆ ಎಂಬುದನ್ನು ತೋರಿಸುತ್ತದೆ.

ಹೇಗೆಂದರೆ, ಈಗ ಅದರ ವರ್ತನೆಯು ಮೊದಲಿನಷ್ಟು ಸಾವಕಾಶವಾಗಿರದೆ, ತಪ್ಪು ದಾರಿಗಳಲ್ಲಿ ಹೆಚ್ಚಾಗಿ ಹೋಗದೆ, ಬೇಗನೆ ಆಹಾರದ ಪೆಟ್ಟಿಗೆಯನ್ನು ಮುಟ್ಟುವ ರೂಪದಲ್ಲಿ ಇರುತ್ತದೆ. ಈಗ ಅದಕ್ಕೆ ಒಂದು ನಿರ್ದಿಷ್ಟ ಗುರಿ ಇದೆ. ಅದಕ್ಕೆ ಇದೇ ರೀತಿಯಲ್ಲಿ ತರಬೇತನ್ನು ಕೊಡುತ್ತ ಹೋದರೆ, ಕ್ರಮೇಣ ಅದು ತಪ್ಪು ದಾರಿಗಳಲ್ಲಿ ಹೋಗುವುದು ಕಡಿಮೆ ಆಗುತ್ತದೆ; ಅನಂತರ ತಪ್ಪುದಾರಿಯ ಎದುರು ಹೋಗಿ ನಿಂತು ಅಲ್ಲಿಂದ ಅಡ್ಡ ತಿರುಗುತ್ತದೆ; ಕೊನೆಯಲ್ಲಿ ಅದು ತಲೆಯನ್ನು ಅತ್ತಿತ್ತ ತಿರುಗಿಸದೆ ನೇರವಾಗಿ ಆಹಾರದ ಪೆಟ್ಟಿಗೆಯ ಕಡೆ ಹೋಗುತ್ತದೆ. ಈ ಪ್ರಕರಣದಲ್ಲಿ ಇಲಿಯು ನಿಶ್ಚಿತವಾದ ಚಲನಸಂತಾನವನ್ನು ಕಲಿಯಿತು. ಕಲಿಯುವಿಕೆಯ ಈ ಸೂತ್ರವನ್ನು ಮಾಲಾಕ್ಷೇಪ ಸಿದ್ಧಾಂತ (Chain Reflex Theory) ಎಂದು ಹೇಳುತ್ತಾರೆ. ಮೊಟ್ಟ ಮೊದಲು ಇಲಿಯು ವಿವಿಧವಾಗಿ ಚಲಿಸಿತು.

ತಪ್ಪು ದಾರಿಗಳನ್ನು ಹುಡುಕುವುದರಲ್ಲಿ ಮಾಡಿದಂಥ ಅದರ ಎಷ್ಟೋ ಚಲನವಲನಗಳು ಅನವಶ್ಯಕ. ಈ ವ್ಯರ್ಥ ಚಲನಗಳನ್ನು ಕ್ರಮೇಣ ಬಿಟ್ಟುಕೊಟ್ಟನಂತರ ಉಳಿಯುವುದು ಒಂದು ನಿಯತವಾದ ಚಲನ ಸಂತಾನ. ಈ ಚಲನಸಂತಾನವನ್ನು ಅದು ಪೆಟ್ಟಿಗೆಯ ಉತ್ತರೋತ್ತರ ಭಾಗಗಳಿಂದ ಬಂದ ನಿಯತವಾದ ಪ್ರೇರಣಾಸಂತಾನಕ್ಕೆ ಅನುಕ್ರಿಯೆಯಾಗಿಮಾಡಿತು. ಈ ಸಿದ್ಧಾಂತದ ಯೋಗ್ಯತೆ ಅದರ ಸರಳತೆಯಲ್ಲಿ ಇದೆ. ಆದರೆ ಗಲಿಬಿಲಿ ಪೆಟ್ಟಿಗೆಯಲ್ಲಿ ನಡೆಯುವ ಇಲಿಯ ಚಲನವಲನಗಳನ್ನು ಆಧರಿಸಿದ ಈ ಸಿದ್ಧಾಂತವು ಹೇಳುವಷ್ಟು ಯಾಂತ್ರಿಕವಲ್ಲ ಎಂದು ಇತರ ಪ್ರಯೋಗಗಳು ಸಿದ್ಧಮಾಡಿಕೊಟ್ಟಿವೆ. ಅಂಥ ಪ್ರಯೋಗಗಳಲ್ಲಿ ಈ ಕೆಳಗಿನದು ಬಹಳ ಮುಖ್ಯವಾದದ್ದು:

ಒಂದು ಗಲಿಬಿಲಿಪೆಟ್ಟಿಗೆಯನ್ನು ಹೊಸದಾಗಿ ನಿರ್ಮಿಸಲಾಯಿತು. ಅದರಲ್ಲಿ ಬೇಕಾದ ಮಟ್ಟದವರೆಗೆ ನೀರನ್ನು ತುಂಬಿಸುವ ವ್ಯವಸ್ಥೆಯನ್ನು ಮಾಡಲಾಯಿತು. ಸ್ವಲ್ಪ ಪ್ರಮಾಣದ ನೀರಿನಲ್ಲಿ ನಡೆದುಕೊಂಡು ಹೋಗಿ, ಆಹಾರದ ಪೆಟ್ಟಿಗೆಗೆ ಒಯ್ದು ಮುಟ್ಟಿಸುವ ಸರಿಯಾದ ಮಾರ್ಗವನ್ನು ಅನುಸರಿಸಲು ಕಲಿತ ಇಲಿಗಳು ನೀರು ಆಳವಾಗಿ, ಅದರಲ್ಲಿ ಈಜಿಕೊಂಡು ಹೋಗಬೇಕಾದ ಪ್ರಸಂಗ ಒದಗಿದಾಗಲೂ ಅದೇ ಮಾರ್ಗವನ್ನು ಹಿಡಿದು ಆಹಾರದ ಪೆಟ್ಟಿಗೆಯನ್ನು ಮುಟ್ಟಿದವು. ಇದೇ ರೀತಿಯಲ್ಲಿ ಮೊದಲು ಈಜಿಕೊಂಡು ಹೋಗಿ ಆಹಾರದ ಪೆಟ್ಟಿಗೆಯನ್ನು ಮುಟ್ಟಿದ ಇಲಿಗಳು ಅದೇ ಮಾರ್ಗವನ್ನು ಅನುಸರಿಸಿ ಸ್ವಲ್ಪ ಪ್ರಮಾಣದ ನೀರಿನಲ್ಲಿ ನಡೆಯುತ್ತ ಹೋಗಿ, ಅದನ್ನು ಮುಟ್ಟಲು ಶಕ್ತವಾದವು. ನಡಿಗೆಗೆ ಸಂಬಂಧಿಸಿದ ಚಲನಸಂತಾನವನ್ನು ಆಳವಾದ ನೀರಿನಲ್ಲಿ ಮಾಡಲು ಬರದು. ಹಾಗೆಯೇ ಈಜುವುದಕ್ಕೆ ಸಂಬಂಧಿಸಿದ ಚಲನ ಸಂತಾನವನ್ನು ಸ್ವಲ್ಪ ಪ್ರಮಾಣದ ನೀರಿನಲ್ಲಿ ಮಾಡಲು ಬರದು. ಆದುದರಿಂದ ಇಲಿಗಳು ಒಂದು ಪರಿಸ್ಥಿತಿಯಿಂದ ಇನ್ನೊಂದು ಪರಿಸ್ಥಿತಿಗೆ ಬದಲಾಯಿಸುವಾಗ ಕಲಿತದ್ದು ಕೇವಲ ಒಂದು ಯಾಂತ್ರಿಕ ಚಲನಸಂತಾನವನ್ನಲ್ಲ. ಅವು ಆಹಾರದ ಪೆಟ್ಟಿಗೆಗೆ ಹೋಗುವ ಸರಿಯಾದ ದಾರಿಯನ್ನು ಕಲಿತವು. ಒಂದು ಕಾಲನ್ನು ಮುರಿದುಕೊಂಡ ನಾಯಿಯು ತನ್ನ ಮೂರು ಕಾಲುಗಳಿಂದ ನಡೆಯುವಂತಾದಾಗಲೂ ಅದಕ್ಕೆ ಮನೆಗೆ ಹೋಗುವ ದಾರಿ ಗೊತ್ತಿರುತ್ತದೆ ಎಂಬ ಅಂಶವು ಮೇಲಿನ ಪ್ರಯೋಗಕ್ಕೆ ಸಮಾನವಾದದ್ದು:

ಆದರೆ ಈ "ನಿಶ್ಚಿತ ಮಾರ್ಗ ಸಿದ್ಧಾಂತವು" (The Fixed Path Theory) ಸಾಲದು. ಆ ಪ್ರಾಣಿ ಕಲಿಯುವುದು ಗಲಿಬಿಲಿ ಪೆಟ್ಟಿಗೆಯ ಮೂಲಕ ಹೋಗುವ ಒಂದು ಮಾರ್ಗವನ್ನು ಮಾತ್ರವಲ್ಲ; ಒಂದು ಸರಳವೂ ಚಚ್ಚೌಕವೂ ಆದ ಅಂಗಳದ ಒಂದು ನಿಶ್ಚಿತವಾದ ಮೂಲೆಯಲ್ಲಿ ಆಹಾರದ ಪೆಟ್ಟಿಗೆಯನ್ನು ಇಟ್ಟು, ಒಂದು ಇಲಿಯನ್ನು ಪದೇ ಪದೇ ಅದರಲ್ಲಿ ಬಿಡಿರಿ. ಅಂಗಳದ ಬಾಗಿಲಿನಿಂದ ಆಹಾರದ ಪೆಟ್ಟಿಗೆ ಇದ್ದಲ್ಲಿಗೆ ಬೇಗನೆ ಹೋಗುವುದನ್ನು ಅದು ಕಲಿತ ನಂತರ, ಅಂಗಳದ ನಡುವೆ ಸ್ವಲ್ಪ ಎತ್ತರದ ಅಡ್ಡ ಗೋಡೆಯನ್ನು ನಿರ್ಮಿಸಿರಿ. ಆಗಲೂ ಇಲಿಯು ಅಗತ್ಯವಾದ ಅಡ್ಡ ತಿರುಗಾಟಗಳನ್ನು ಮಾಡಿ ಆಹಾರದ ಪೆಟ್ಟಿಗೆಯನ್ನು ಹೆಚ್ಚು ತೊಂದರೆ ಇಲ್ಲದೆ ಮುಟ್ಟುತ್ತದೆ. ಇದರಿಂದ

ಗುರಿಯನ್ನು ಮುಟ್ಟುವುದು ಮುಖ್ಯವಲ್ಲದೆ, ಇಂಥ ಒಂದು ಬಗೆಯ ಚಲನವನ್ನೇ ಮಾಡಬೇಕೆಂಬುದು ಮುಖ್ಯವಲ್ಲ ಎಂಬುದು ಗೊತ್ತಾಗುತ್ತದೆ.

ಇಲಿಯು ಗಲಿಬಿಲಿ ಪೆಟ್ಟಿಗೆಯಲ್ಲಿ ಇಟ್ಟಾಗ ಅದರ ಅಡ್ಡ ಗೋಡೆ, ಮೂಲೆ, ತಪ್ಪುದಾರಿ, ಸರಿದಾರಿಗಳನ್ನೆಲ್ಲ ಶೋಧಿಸಿ ಅವನ್ನು ಇಡಿ ಪೆಟ್ಟಿಗೆಯಲ್ಲಿ ಸ್ಥಾನಾನುಗುಣವಾಗಿ ಗೊತ್ತುಮಾಡಿಕೊಳ್ಳುತ್ತದೆ. ಅದು ಆಹಾರದ ಪೆಟ್ಟಿಗೆಯನ್ನು ಹುಡುಕಿ ಹೆಚ್ಚು ಕಡಿಮೆ ನಿಷ್ಕೃಷ್ಟವಾಗಿ ಅದರ ಸ್ಥಳವನ್ನು ಗೊತ್ತುಮಾಡಿಕೊಳ್ಳುತ್ತದೆ. ಈ ಸಂಗತಿಗಳನ್ನು ಅನುಭವಕ್ಕೆ ತಂದುಕೊಂಡು ಅವುಗಳಲ್ಲಿ ಕೆಲವನ್ನು ನೆನಪಿಟ್ಟುಕೊಂಡು, ಕ್ರಮೇಣ ಅದು ಆ ಗಲಿಬಿಲಿ ಪೆಟ್ಟಿಗೆಯನ್ನು ಸುಪರಿಚಿತವನ್ನಾಗಿ ಮಾಡಿಕೊಳ್ಳುತ್ತದೆ. ಅದರಲ್ಲಿಯ ಅದರ ಚಲನ ವಲನಗಳು ಹೆಚ್ಚು ಕಡಿಮೆ ಬದಲಾಗುತ್ತಿದ್ದರೂ ಒಟ್ಟಿನಲ್ಲಿ ಅವೆಲ್ಲವೂ ಪೆಟ್ಟಿಗೆಯ ಆವರಣದಿಂದ ನಿಯಂತ್ರಿತವಾಗಿವೆ. ಒಂದು ಗಲಿಬಿಲಿ ಪೆಟ್ಟಿಗೆಯ ಮೇಲೆ ಪ್ರಭುತ್ವವನ್ನು ಸಂಪಾದಿಸುವುದರಲ್ಲಿ ಬಹುಶಃ ಅನೇಕ ಹಂತಗಳಿವೆ: ಭಾವನೆಗಳನ್ನು ಹೊಂದಿಸಿಕೊಳ್ಳುವುದು ಮೊದಲನೆಯ ಹಂತ. ಅನಂತರ ಪೆಟ್ಟಿಗೆಯ ಶೋಧ ಮತ್ತು ಅದರ ಪರಿಚಯ ಮಾಡಿಕೊಳ್ಳುವುದು. ಆಮೇಲೆ ಕ್ರಮೇಣ ತಪ್ಪು ದಾರಿಗಳನ್ನು ಬಿಟ್ಟುಬಿಡುವುದು ಮತ್ತು ನೇರವಾದ ಮಾರ್ಗವನ್ನು ಹಿಡಿಯುವುದು. ಇನ್ನೂ ಅನೇಕ ಸಲ ತರಬೇತು ಕೊಟ್ಟರೆ ಇಲಿಯು ತನ್ನ ವೇಗವನ್ನು ಹೆಚ್ಚಿಸಿಕೊಂಡು, ಮಾಲಾಕ್ಷೇಪವನ್ನು ಸೂಚಿಸುವಂಥ ಯಾಂತ್ರಿಕ ರೀತಿಯಿಂದ ಪೆಟ್ಟಿಗೆಯ ಮೂಲಕ ಓಡುತ್ತ ಹೋಗುವುದು. ಆದರೆ ಇಲ್ಲಿ ಕಲಿಯುವಿಕೆಯ ಅನುಕ್ರಮ ಹೀಗಿದೆ: ಮೊದಲು ಸ್ಥಳಜ್ಞಾನ, ಅನಂತರ ಸರಿಯಾದ ಮಾರ್ಗದ ಜ್ಞಾನ ಮತ್ತು ಕೊನೆಗೆ ಚಲನೆಗಳ ನಿಕಟವಾದ ಸಮನ್ವಿತ ಅನುಕ್ರಮದ ಜ್ಞಾನ.

## ಸಾಧನದ ಜ್ಞಾನವನ್ನು ಪಡೆಯುವುದು

ಸ್ಥಳಜ್ಞಾನವನ್ನು ಪಡೆಯುವುದೆಂದರೆ ಶೋಧ ಮಾಡಿ ಕಲಿಯುವುದು ಎಂದಾದರೆ, ನಾವು ಈಗ ತೆಗೆದುಕೊಳ್ಳುವುದು ಕೌಶಲವನ್ನು ಉಪಯೋಗಿಸಿ ಕಲಿಯುವುದನ್ನು. ಒಂದು ಸ್ಥಳವನ್ನು ಪರಿಚಯ ಮಾಡಿಕೊಳ್ಳಬೇಕಾದರೆ, ನಮ್ಮ ಇಂದ್ರಿಯಗಳನ್ನು ಬಳಸಿಕೊಂಡೇ ಓಡಾಡುತ್ತೇವೆ ನಾವಿಲ್ಲಿ ಚಲನೆಯೊಡನೆ ನಿರೀಕ್ಷಣೆಯನ್ನು ಕೂಡಿಸುತ್ತೇವೆ. ಒಂದು ವಸ್ತುವನ್ನು ಪರಿಚಯ ಮಾಡಿಕೊಳ್ಳಬೇಕಾದರೆ, ನಾವು ಅನೇಕ ಸಲ ಅದರೊಡನೆ ವ್ಯವಹರಿಸಿ, ಅದರ ಗತಿಕ್ರಮದಲ್ಲಿ ಅದನ್ನು ಇಟ್ಟು ನೋಡಬೇಕಾಗುತ್ತದೆ. ಕೆಲವು ಫಲಗಳು ಉಂಟಾಗುವಂತೆ ನಾವು ಕೌಶಲದಿಂದ ಬಳಸುವ ವಸ್ತುವೇ ಸಾಧನ. ಕೌಶಲದಿಂದ ಬಳಸಿ ಅದರ ಫಲವನ್ನು ನಿರೀಕ್ಷಿಸುವುದರಿಂದ ನಮಗೆ ಸಾಧನದ ಪರಿಚಯವಾಗುತ್ತದೆ. ಮನುಷ್ಯನು ತನ್ನ ಹಸ್ತ, ಪಾದಗಳನ್ನು ಕೌಶಲದಿಂದ ಬಳಸಿದರೆ, ಪ್ರಾಣಿಗಳು ತಮ್ಮ ಕಾಲು, ಹಲ್ಲು, ಸೊಂಡಿಲು ಇಲ್ಲವೆ ಕೊಕ್ಕು ಅಥವಾ ದೇಹದ ಇತರ ಅವಯವಗಳನ್ನು ಉಪಯೋಗಿಸಿ ಪದಾರ್ಥಗಳನ್ನು ಅಲುಗಾಡಿಸಿ, ಅವುಗಳ ಪರಿಚಯವನ್ನು ಮಾಡಿಕೊಳ್ಳುತ್ತವೆ.

## ಥಾರನ್‌ಡೈಕ್‌ನ ಒಗಟಿನ ಪೆಟ್ಟಿಗೆಯಲ್ಲಿ ಇಟ್ಟ ಬೆಕ್ಕು

ಒಂದು ಹಸಿದ ಬೆಕ್ಕಿನ ಮರಿಯನ್ನು ಚಿಕ್ಕ ಬೋನೊಂದರಲ್ಲಿ ಇಡಿರಿ. ಅದರ ಹೊರಗೆ ಒಂದು ಲೋಟದ ತುಂಬ ಹಾಲನ್ನು ಇಡಿರಿ. ಆಗ ಅದು ತನ್ನ ಚೋಟನ್ನು ಬೋನಿನ ಸರಳುಗಳ ನಡುವೆ ಪಸರಿಸುತ್ತದೆ. ಆದರೆ ಅದಕ್ಕೆ ಲೋಟ ಸಿಕ್ಕುವುದಿಲ್ಲ. ಅನಂತರ ಅದು ಸರಳುಗಳ ನಡುವೆ ತನ್ನ ಮೂಗು ಹಾಕಿ ಒತ್ತುತ್ತದೆ. ಆದರೆ ಆಗಲೂ ಅದರ ಮೂಲಕ ಅದಕ್ಕೆ ಲೋಟವನ್ನು ಮುಟ್ಟಲಾಗುವುದಿಲ್ಲ. ಆ ಮೇಲೆ ಅದು ಸರಳುಗಳನ್ನು ಕಚ್ಚುತ್ತದೆ; ಅಲ್ಲೇನಾದರೂ ಚಿಕ್ಕ ಪದಾರ್ಥವಿದ್ದರೆ ಅದನ್ನು ತನ್ನ ಉಗುರುಗಳಿಂದ ಎಳೆಯುತ್ತದೆ, ಸಡಿಲವಾಗಿ ಏನಿದ್ದರೂ ಅದನ್ನು ಅಲ್ಲಾಡಿಸುತ್ತದೆ. ಆ ಪ್ರಕಾರ ಅದು ಲೋಟಕ್ಕೆ ಸಮೀಪವಾಗಿರುವ ಬೋನಿನ ಎಲ್ಲ ಭಾಗವನ್ನೂ ಪರಚಿ ನೋಡುವ ಸಂಭವವಿದೆ. ಸ್ವಲ್ಪ ಹೊತ್ತಿನಲ್ಲಿಯೇ ಅದು ಮುಚ್ಚಿದ ಬಾಗಿಲಿನ ತಾಳನ್ನು ಮುಟ್ಟುತ್ತದೆ. ಅನಂತರ ಕೌಶಲದಿಂದ ಅದನ್ನು ಎತ್ತಿ ಬಿಡುತ್ತದೆ: ಆಗ ಬೋನಿನ ಬಾಗಿಲು ತೆರೆಯುತ್ತದೆ ಮತ್ತು ಬೆಕ್ಕು ಹೊರ ಹೋಗಿ ಹಾಲನ್ನು ಕುಡಿಯುತ್ತದೆ. ಈ ಮೊದಲನೆಯ ಪ್ರಯತ್ನದ ಕಾಲವನ್ನು ದಾಖಲೆ ಮಾಡಿಕೊಂಡ ನಂತರ ಪ್ರಯೋಜಕನು ಇನ್ನೂ ಹಸಿದುಕೊಂಡೇ ಇದ್ದ ಆ ಬೆಕ್ಕಿನ ಮರಿಯನ್ನು ಬೋನಿನಲ್ಲಿ ಬಿಟ್ಟು ಬಾಗಿಲು ಹಾಕಿ ಮತ್ತೊಂದು ಲೋಟದ ತುಂಬ ಹಾಲನ್ನು ಇಡುತ್ತಾನೆ. ಪುನಃ ಅದು "ಪ್ರಯತ್ನ ಮತ್ತು ತಪ್ಪು" ಎಂಬ ಮಾರ್ಗದಲ್ಲಿಯೇ ವರ್ತಿಸುತ್ತದೆ: ಆದರೆ ಹಿಂದಿನಷ್ಟು ತಪ್ಪುವುದಿಲ್ಲ. ಇನ್ನು ಮುಂದಿನ ಪ್ರಯತ್ನಗಳಲ್ಲಿ ವ್ಯರ್ಥ ಚಲನೆ ಮಾಡುವುದನ್ನು ಬಿಟ್ಟು ಕೊನೆಯ ಸಲ ಬೋನಿನಲ್ಲಿ ಇಟ್ಟ ಅರೆನಿಮಿಷದಲ್ಲಿ ಅದು ತಾಳನ್ನು ಎತ್ತಿ ಹೊರಗೆ ಹೋಗಿ ಹಾಲನ್ನು ಕುಡಿದು ಬಿಡುತ್ತದೆ. ಇಷ್ಟನ್ನು ಕಲಿಯಬೇಕಾದರೆ, ಅದಕ್ಕೆ ಬಹುಶಃ ಹತ್ತು ಇಪ್ಪತ್ತು ಸಲ ಇದೇ ರೀತಿಯಲ್ಲಿ ಪ್ರಯತ್ನಮಾಡಬೇಕಾಗಿ ಬಂದಿರಬಹುದು.




CAT IN PUZZLE BOX

ಮುದಿಯಾದ, ಇಲ್ಲವೆ ಸ್ತಿಮಿತ ಮನೋಭಾವದ ಅಥವಾ ಯಾವುದಾದರೊಂದು ಕಾರಣಕ್ಕಾಗಿ ಅಷ್ಟು ಉತ್ಸಾಹವನ್ನು ತೋರಿಸದಿರುವ ಬೆಕ್ಕು ಕರ್ಮೇಂದ್ರಿಯದ ಚಟುವಟಿಕೆಯನ್ನು ಇಷ್ಟು ಹೆಚ್ಚಾಗಿ ಮಾಡದೆಯೆ ಉದ್ರಿಕ್ತ ಬೆಕ್ಕಿಗೆ ಬೇಕಾದ್ದಕ್ಕಿಂತ ಅಲ್ಪ ಪ್ರಯತ್ನಗಳಿಂದಲೇ ಈ ಉಪಾಯವನ್ನು ಕಲಿತುಕೊಂಡೀತು. ಇದರಿಂದ ಗೊತ್ತಾಗುವುದೇನೆಂದರೆ, ಕಲಿಯುವಿಕೆಯಲ್ಲಿ ಪ್ರಬಲವಾದ ಕರ್ಮೇಂದ್ರಿಯ ಕಾರ್ಯಕ್ಕಿಂತ ಜ್ಞಾನೇಂದ್ರಿಯ ಕಾರ್ಯವೇ ಪ್ರಧಾನವೆಂಬುದು. ಒಂದು ಸಲ ಬೋನಿನಿಂದ ಹೊರಗೆ ಹೊರಟು ಹೋದ ಬೆಕ್ಕುಗಳು ಮತ್ತೊಮ್ಮೆ ಬೋನಿನಲ್ಲಿ ಇಟ್ಟಾಗ, ಬಾಗಿಲ ಸಮೀಪದ ಪ್ರದೇಶದ ಮೇಲೆಯೇ ತಮ್ಮ ಕಾರ್ಯವನ್ನು ಕೇಂದ್ರೀಕರಿಸುತ್ತವೆ. ಆಗಲೇ ಅವು ಕೆಲಮಟ್ಟಿನ ಸ್ಥಳಜ್ಞಾನವನ್ನು ಪಡೆದುಕೊಂಡಿರುತ್ತವೆ. ಒಂದು ವಿಧದ ಒಗಟಿನ ಪೆಟ್ಟಿಗೆಯಲ್ಲಿ ಅದರ ಬಾಗಿಲನ್ನು ತೆರೆಯಬೇಕಾದರೆ ಅದರಲ್ಲಿ ನೇತಾಡುತ್ತಿರುವ ತಂತಿಯನ್ನೋ, ಹಗ್ಗವನ್ನೋ ಎಳೆಯಬೇಕಾಗುತ್ತದೆ. ಬೆಕ್ಕುಗಳು ಬಹಳ ಬೇಗನೆ ಈ ಹಗ್ಗದ ಮೇಲೆ ಕಣ್ಣಿಡುತ್ತವೆ. ಈ ಸಂದರ್ಭದಲ್ಲಿ ಪ್ರಯೋಜಕನು ಹಗ್ಗವನ್ನು ಬೋನಿನ ಇನ್ನೊಂದು ಭಾಗಕ್ಕೆ ಸರಿಸಿದರೆ ಅವು ಮೊದಲು ಆ ಹಗ್ಗ ಇದ್ದ ಸ್ಥಳಕ್ಕೆ ಹೋಗಿ ಮೇಲಕ್ಕೆ ಚೋಟು ಎತ್ತುತ್ತವೆ; ಆದರೆ ಅಲ್ಲಿ ಅವುಗಳ ಪ್ರತೀಕ್ಷೆ ಸಫಲವಾಗುವುದಿಲ್ಲ. ಇದರಿಂದ ಅವಕ್ಕೆ ಸ್ಥಳಜ್ಞಾನ ಉಂಟಾಗಿದೆ ಎಂದು ತಿಳಿದುಬರುತ್ತದೆ. ಆಮೇಲೆ ಹೊಸ ಜಾಗದಲ್ಲಿ ಆ ಹಗ್ಗವನ್ನು ಕಂಡಾಗ, ಅವು ಮೊದಲಿನ ಜಾಗದಲ್ಲಿ ಇದ್ದಾಗ ಅದನ್ನು ಎಳೆಯುವುದನ್ನು ಕಲಿತಂತೆಯೇ ಈಗಲೂ ಎಳೆದುಬಿಡುತ್ತವೆ. ಇದರಿಂದ ಅವಕ್ಕೆ ವಸ್ತುವಿನ ಅಥವಾ ಸಾಧನದ ಜ್ಞಾನವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಇನ್ನೊಂದು ಸಂಗತಿ: ಹಗ್ಗ ಎಳೆಯಲು ಕಲಿತ ಬೆಕ್ಕು ಒಮ್ಮೆ ಉಗುರಿನಿಂದ ಅದನ್ನು ಎಳೆದರೆ ಮತ್ತೊಮ್ಮೆ ಅದೇ ಉದ್ದೇಶ ಸಾಧನೆಗಾಗಿ ಹಲ್ಲಿನಿಂದ ಕಚ್ಚಿ ಎಳೆದರೂ ಎಳೆದೀತು. ಕೆಲವು ವೇಳೆ ಇಂಥ ಚಲನೆ ಯಾಂತ್ರಿಕವಾದೀತು: ಆದರೆ ಬಹಳ ಸಲ ಹಾಗಾಗುವುದಿಲ್ಲ. ಇದರಿಂದ ಅದು ಕೇವಲ ಏನನ್ನೋ ಕಂಡು ಕೆಲ ಬಗೆಯ ಚಲನವಲನಗಳನ್ನು ಮಾಡದೆ ವಸ್ತು ಇಲ್ಲವೆ ಸಾಧನದೊಡನೆ ವ್ಯವಹರಿಸುತ್ತದೆ ಎಂದು ತಿಳಿದುಕೊಳ್ಳಬೇಕಾಗುತ್ತದೆ.

ಮೇಲಿನ ಪ್ರಯೋಗದಲ್ಲಿ ಬೆಕ್ಕು ಕಲಿಯುವುದು ಯಾವುದೋ ಒಂದು ಬಗೆಯ ಚಲನ ಇಲ್ಲವೆ ಚಲನಸಂತಾನಗಳನ್ನಲ್ಲ; ಅದು ಕಲಿಯುವುದು ಕೆಲ ವಸ್ತುಗಳ ಉಪಯೋಗವನ್ನು ಹಾಗೂ ಮಿಕ್ಕ ಕೆಲ ವಸ್ತುಗಳ ನಿರುಪಯೋಗವನ್ನು ಅಭ್ಯಾಸಬಲದಿಂದ ಪ್ರಾಣಿಯೂ ಮನುಷ್ಯನೂ ತಮ್ಮ ಕರ್ಮೇಂದ್ರಿಯದ ಕೌಶಲವನ್ನು ಹೆಚ್ಚಿಸಿಕೊಳ್ಳಬಹುದು.

## ಚಿಂಪಾಂಜಿಗಳು ಮತ್ತು ಮಂಗಗಳು ಕಲಿಯುವ ಕ್ರಮ

ನಾಯಿ ಬೆಕ್ಕುಗಳಿಗಿಂತ ಕೋತಿಗಳು ತಮ್ಮ ಕೈಕಾಲು, ಕಣ್ಣು ಮತ್ತು ಮಿದುಳುಗಳನ್ನು ಹೆಚ್ಚಿನ ಕೌಶಲದಿಂದ ಬಳಸಬಲ್ಲವು.

ಅವು ಬೇಗ ಕಲಿಯಬಲ್ಲವು ಮತ್ತು ಹೆಚ್ಚಿನ ಜಟಿಲ ಸಾಧನಗಳನ್ನು ಉಪಯೋಗಿಸಬಲ್ಲವು. ಚಿಂಪಾಂಜಿಯು ಮಂಗನಿಗಿಂತ ದೊಡ್ಡ ಮಿದುಳಿನದಾಗಿರುತ್ತದೆ.

ಮನುಷ್ಯನ ಸಾಧನೋಪಯೋಗ ಶಕ್ತಿಗೆ ಬಹುಶಃ ಅದರ ಶಕ್ತಿಯು ಬಹಳ ಹತ್ತಿರವಾಗಿದೆ ಎನ್ನಬಹುದು. ಒಂದು ಮಂಗವು ಬೋನಿನಲ್ಲಿ ಇದೆ ಎಂದು ಭಾವಿಸಿರಿ. ಬೋನಿನ ಹೊರಗೆ ಒಂದು ಬಾಳೆ ಹಣ್ಣು ಇದೆ ಎಂದುಕೊಳ್ಳಿರಿ. ಆದರೆ ಹತ್ತಿರದಲ್ಲೇ ಒಂದು ಕೋಲಿದೆ. ಅದನ್ನು ತೆಗೆದುಕೊಂಡ ಮಂಗವು ಬಾಳೆ ಹಣ್ಣನ್ನು ತನ್ನ ಕಡೆಗೆ ಬಹುಬೇಗ ಎಳೆದುಕೊಳ್ಳುತ್ತದೆ. ಅದಾದ ನಂತರ ಎರಡನೆಯ ಬಾರಿ ಹೊರಗೆ ಬಾಳೆಹಣ್ಣನ್ನು ಇಟ್ಟು ಒಂದು ಚಿಕ್ಕ ಹಾಗೂ ದೊಡ್ಡ ಕೋಲುಗಳನ್ನು ಹತ್ತಿರದಲ್ಲಿ ಇಡಿರಿ. ಆಗ ಅದು ಸಣ್ಣ ಕೋಲಿನಿಂದ ಬಾಳೆಹಣ್ಣನ್ನು ಮುಟ್ಟಲಾರದೆ, ಅದರಿಂದ ದೊಡ್ಡ ಕೋಲನ್ನು ತನ್ನ ಕಡೆ ಎಳೆದುಕೊಂಡು ಆ ಕೋಲಿನಿಂದ ಬಾಳೆ ಹಣ್ಣನ್ನು ತನ್ನ ಕಡೆಗೆ ಎಳೆದುಕೊಳ್ಳುತ್ತದೆ. ಹೀಗೆ ಎರಡಕ್ಕಿಂತ ಹೆಚ್ಚು ಕೋಲುಗಳನ್ನು ಇಟ್ಟಾಗಲೂ ಮಂಗವು ಈ ಉಪಾಯವನ್ನು ಬಹುಬೇಗ ಕಲಿಯುತ್ತದೆ.

ಕೋಲಿನಿಂದ ಬೋನಿನ ಹೊರಗಿನ ಬಾಳೆ ಹಣ್ಣನ್ನು ಎಳೆದುಕೊಂಡು ತಿನ್ನುವುದನ್ನು ಆಗಲೇ ಕಲಿತುಕೊಂಡ ಚಿಂಪಾಂಜಿ ಒಂದಕ್ಕೆ ಎರಡು ಕೋಲುಗಳನ್ನು ಕೊಟ್ಟು ಬೋನಿನಲ್ಲಿ ಇಡಿರಿ. ಅವುಗಳಲ್ಲಿ ಒಂದು ಕೋಲು ಬಾಳೆ ಹಣ್ಣನ್ನು ಮುಟ್ಟುವಂತಿರಬಾರದು. ಆದರೆ ಅವುಗಳಲ್ಲಿ ಒಂದನ್ನು ಇನ್ನೊಂದರಲ್ಲಿ ಸಿಕ್ಕಿಸುವಂಥ ಅನುಕೂಲವಿರಬೇಕು. ಆಗ ಅದು ಒಂದೊಂದೇ ಕೋಲನ್ನು ಹಿಡಿದುಕೊಂಡು ಬಾಳೆ ಹಣ್ಣನ್ನು ಮುಟ್ಟಲು ಹೋಗಿ ಅವೆಲ್ಲ ಗಿಡ್ಡ ಎಂಬುದನ್ನು ತಿಳಿದುಕೊಳ್ಳುತ್ತದೆ. ಆಗ ಆ ಪ್ರಯತ್ನವನ್ನು ಬಿಟ್ಟುಕೊಟ್ಟು ಬೋನಿನ ಹಿಂಬದಿಗೆ ಹೋಗಿ ಅದು ಆ ಕೋಲುಗಳನ್ನು ತೆಗೆದುಕೊಂಡು ಆಟವಾಡಲು ಆರಂಭಿಸುತ್ತದೆ. ಆಟದ ಕಾಲದಲ್ಲಿ ಅದು ಒಂದರ ತುದಿಯಿಂದ ಇನ್ನೊಂದರ ಬುಡವನ್ನು ಒತ್ತುವಾಗ ಅವು ಒಂದಕ್ಕೊಂದು ಸಿಕ್ಕುಹಾಕಿಕೊಳ್ಳುತ್ತವೆ. ಅದನ್ನು ಕಂಡು ಒಮ್ಮೆಲೇ ಹಿಗ್ಗಿ ಚಿಂಪಾಂಜಿಯು ಆ ಕೂಡುಗೋಲಿನಿಂದ ಬಾಳೆಹಣ್ಣನ್ನು ಎಳೆದುಕೊಳ್ಳಹೋಗುತ್ತದೆ. ಆಗ ಗಟ್ಟಿಯಾಗಿ ಸಿಕ್ಕಿಕೊಳ್ಳದಿದ್ದ ಆ ಕೋಲುಗಳು ಬಿಡಿಯಾಗಿ ಬಿದ್ದುದನ್ನು ಕಂಡು ಅದು ತನ್ನ ಕೌಶಲದಿಂದ ಪುನಃ ಅವನ್ನು ಜೋಡಿಸಿ ಬಾಳೆ ಹಣ್ಣನ್ನು ಒಳಗೆ ಎಳೆದುಕೊಳ್ಳುತ್ತದೆ. ಅಷ್ಟೇ ಅಲ್ಲದೆ, ತಿನ್ನುವುದನ್ನು ಕೂಡ ಬಿಟ್ಟು ಆ ಜೋಡುಗೋಲಿನಿಂದ ಅದು ಬೋನಿನ ಹೊರಗೆ ಹತ್ತಿರದಲ್ಲಿ ಇರುವ ಎಲ್ಲ ವಸ್ತುಗಳನ್ನೂ ಒಳಗೆ ಎಳೆದುಕೊಳ್ಳುತ್ತದೆ. ಇದೇ ವ್ಯವಸ್ಥೆ ಮಾಡಿ ಮರುದಿನ ಅದನ್ನು ಬೋನಿನಲ್ಲಿಟ್ಟಾಗ ಅದು ಮೊದಲು ಸ್ವಲ್ಪ ಕಾಲ ಹಿಂದಿನಂತೆಯೇ ಕೆಲವು ವ್ಯರ್ಥ ಚಲನೆಗಳನ್ನು ಮಾಡಿದರೂ ಅರೆಕ್ಷಣದಲ್ಲಿ ಕೋಲುಗಳನ್ನು ಕೂಡಿಸಿಕೊಂಡು ಹೊರಗಿನ ಬಾಳೆ ಹಣ್ಣನ್ನು ಒಳಗೆ ಎಳೆದುಕೊಳ್ಳುತ್ತದೆ. ಇಂಥ ಪ್ರಯೋಗಗಳನ್ನು ಮಕ್ಕಳ ಮೇಲೂ ಮಾಡಿ ಸದೃಶ ಫಲಗಳನ್ನು ಪಡೆಯಬಹುದು.

**ಸೂಕ್ಷ್ಮದೃಷ್ಟಿ:** ಮೇಲೆ ಹೇಳಿದ ಚಿಂಪಾಂಜಿಯು ತನ್ನ ಅಸಹಾಯ ಅವಸ್ಥೆಯಿಂದ ಅಕಸ್ಮಾತ್ತಾಗಿ ಪಾರಾಗುವ ಉಪಾಯವನ್ನು ಕಂಡುಕೊಂಡ ಸಂಧಿಯು ನಾಟಕೀಯ. ಒಮ್ಮೆಲೇ ಎರಡು ಕೋಲುಗಳನ್ನು ಜೋಡಿಸಲು ಅದಕ್ಕೆ ಹೊಳೆದದ್ದು ಸೂಕ್ಷ್ಮದೃಷ್ಟಿಯಿಂದ. ಸಣ್ಣ ಕೋಲು ಸಾಲದಾದಾಗ ದೊಡ್ಡ ಕೋಲು ಉಪಯುಕ್ತವಾದೀತೆಂದು ಕಂಡುಕೊಂಡದ್ದು

ಹಾಗೂ ಒಂದು ಕೋಲು ಸಾಕಾಗದಾಗಲು ಎರಡು ಕೋಲುಗಳನ್ನು ಆಕಸ್ಮಿಕವಾಗಿ ಜೋಡಿಸಿದರೂ ಆ ಕೂಡುಗೋಲು ಪ್ರಯೋಜನಕ್ಕೆ ಬಂದೀತೆಂದು ಅದಕ್ಕೆ ಊಹಿಸಲು ಸಾಧ್ಯವಾದದ್ದು ಸೂಕ್ಷ್ಮದೃಷ್ಟಿಗೆ ತಕ್ಕ ನಿದರ್ಶನ. ಇಲ್ಲಿ ಪ್ರಾಣಿಯು ತನ್ನ ಜ್ಞಾನೇಂದ್ರಿಯಗಳನ್ನು ಬಳಸಿಕೊಂಡು ವಸ್ತುಗಳ ಪರಿಚಯ ಮಾಡಿಕೊಳ್ಳುವುದರಲ್ಲಿ ಯಶಸ್ವಿಯಾಗಿ, ಅವನ್ನು ಗುರಿಯನ್ನು ಮುಟ್ಟುವ ಸಾಧನಗಳನ್ನಾಗಿ ಮಾಡಿಕೊಳ್ಳುವುದು ಗಣ್ಯ.

ಸೂಕ್ಷ್ಮದೃಷ್ಟಿಯೆಂಬುದು ಕೆಲವೊಮ್ಮೆ ಮುನ್ನೋಟವಾದರೆ ಮತ್ತೆ ಕೆಲವೊಮ್ಮೆ ಹಿನ್ನೋಟವೆನಿಸುತ್ತದೆ. ಚಿಂಪಾಂಜಿಯು ಕೂಡುಗೋಲನ್ನು ಹಿಡಿದು ಬಾಳೆಯ ಹಣ್ಣನ್ನು ಎಳೆದುಕೊಳ್ಳಲು ಓಡಿದಾಗ ಅದಕ್ಕಿದ್ದುದು ಮುನ್ನೋಟ; ತನಗೆ ಜಯ ಕಟ್ಟಿಟ್ಟದ್ದು ಎಂಬ ತಿಳಿವಳಿಕೆಯಿಂದ ಅದು ಓಡಿತು. ಅದಕ್ಕಾಗ ಗೆಲುವಿನ ಮುನ್ನೋಟವಿತ್ತು. ಒಗಟಿನ ಪೆಟ್ಟಿಗೆಯಲ್ಲಿದ್ದ ಬೆಕ್ಕೂ ಗಲಿಬಿಲಿ ಪೆಟ್ಟಿಗೆಯಲ್ಲಿದ್ದ ಇಲಿಯೂ ಒಂದು ಮಾರ್ಗ ಹಿಡಿದು ಹೋಗಿ ನಡುವೆಯೇ ಮುಂದಿನ ದಾರಿ ಕಾಣದಾದಾಗ, ತಾವು ಹಿಡಿದದ್ದು ತಪ್ಪುದಾರಿ ಎಂದು ತಿಳಿದುಕೊಂಡದ್ದು ಹಿನ್ನೋಟದಿಂದ. ಅನುಸರಿಸಿ ತಮಗೆ ಉಪಯುಕ್ತವೆಂದು ಒಂದು ವಸ್ತುವನ್ನೋ, ಕಾರ್ಯವನ್ನೋ ಅವು ತಿಳಿದುಕೊಂಡದ್ದೂ ಅಂಥ ನೋಟದಿಂದಲೇ. ಅನುಸರಿಸುವ ಮೊದಲೇ ಗುರಿಯನ್ನು ಮುಟ್ಟುವ ಮಾರ್ಗವನ್ನು ಕಂಡುಕೊಳ್ಳುವುದೂ ಸಾಕ್ಷಾತ್ತಾಗಿ ಬಳಸದೆ ಅಥವಾ ಅನುಸರಿಸದೆ ಒಂದು ವಸ್ತುವನ್ನೋ, ದಾರಿಯನ್ನೋ ನಿರುಪಯುಕ್ತವೆಂದು ಮೊದಲೇ ತಿಳಿದುಕೊಳ್ಳಲು ಶಕ್ತರಾಗುವುದೂ ಮುನ್ನೋಟವೆನಿಸುತ್ತದೆ. ಅದೇ ಮೇರೆಗೆ ಬಳಸಿದ ಇಲ್ಲವೆ ಅನುಸರಿಸಿದ ನಂತರ ಒಂದು ವಸ್ತುವನ್ನೋ, ಚಟುವಟಿಕೆಯನ್ನೋ ಒಳ್ಳೆಯದು ಅಥವಾ ಕೆಟ್ಟದ್ದು ಎಂದು ತಿಳಿದುಕೊಳ್ಳುವುದು ಹಿನ್ನೋಟ. ಇಡಿ ಸನ್ನಿವೇಶವು ಸ್ಪಷ್ಟವಾಗಿ ನಿಃಸ್ಸಂಧಿಗ್ಧವಾದಾಗ ಮುನ್ನೋಟಕ್ಕೆ ಸದವಕಾಶವಿರುತ್ತದೆ. ಸನ್ನಿವೇಶದ ಮುಖ್ಯ ಲಕ್ಷಣಗಳನ್ನು ಶೋಧನ ಮಾರ್ಗದಿಂದಲೂ ಕುಶಲ ತಂತ್ರದಿಂದಲೂ ಕಂಡುಹಿಡಿಯ ಬೇಕಾಗಿರುವಾಗ ಹಿನ್ನೋಟವು ಮಹೋಪಕಾರ ಮಾಡಬಲ್ಲುದು.

## ಪ್ರಾಣಿಯ ಹಾಗೂ ಮನುಷ್ಯನ ಕಲಿಯುವಿಕೆಯಲ್ಲಿರುವ ವ್ಯತ್ಯಾಸಗಳು

ಪ್ರಾಣಿಗಳ ಕಲಿಯುವಿಕೆಗಿಂತ ಮನುಷ್ಯನ ಕಲಿಯುವಿಕೆ ಕೆಳಗಿನ ನಾಲ್ಕು ಅಂಶಗಳಿಂದ ಹೆಚ್ಚಿನದೆನಿಸುತ್ತದೆ. ಮನುಷ್ಯನು ಪ್ರಾಣಿಗಿಂತ ಉತ್ತಮನಾದ ನಿರೀಕ್ಷಕ. ಪ್ರಾಣಿಯ ಅಳವಿಗೆ ಮೀರಿದ ವಸ್ತು. ಜನ ಮತ್ತು ಸನ್ನಿವೇಶಗಳ ಅನೇಕ ಲಕ್ಷಣಗಳನ್ನವ ನಿರೀಕ್ಷಿಸಬಲ್ಲ. ಒಂದು ಸಮಸ್ಯೆಯನ್ನು ಎದುರಿಸುವಾಗ ಮಾನವನು ಹೆಚ್ಚಿನ ಬುದ್ಧಿಯನ್ನೂ ವ್ಯವಸ್ಥಾ ನೀತಿಯನ್ನೂ ನಿಯಂತ್ರಣಶಕ್ತಿಯನ್ನೂ ಉಪಯೋಗಿಸುತ್ತಾನೆ. ಅವನು ಕಲಿಯುವುದರಲ್ಲಿ ಹೆಸರುಗಳನ್ನೂ ಸಂಖ್ಯೆಗಳನ್ನೂ ಭಾಷೆಯನ್ನೂ ವಿನಿಯೋಗಿಸುತ್ತಾನೆ. ಸಾಮಗ್ರಿಗಳು ತನ್ನ ಎದುರಿಲ್ಲದಾಗಲೂ ಅವನು ಅಂಶತಃ ಭಾಷಾಬಲದಿಂದ ಸಮಸ್ಯೆಗಳ ಬಗ್ಗೆ ವಿಚಾರಮಾಡಬಲ್ಲನು; ಒಂದು ಸಮಸ್ಯೆಯನ್ನು ಬಗೆಹರಿಸಲು ವ್ಯರ್ಥ ಪ್ರಯತ್ನ ಮಾಡಿ, ಹಾಸಿಗೆಯಲ್ಲಿ ಉರುಳಿಕೊಂಡು, ಮರುದಿನ ಬೆಳಿಗ್ಗೆ ಪರಿಹಾರೋಪಾಯವನ್ನು ಕಂಡುಕೊಂಡ ನಿದರ್ಶನವುಂಟು. ಕೊಟ್ಟ ಕ್ಷಣದಲ್ಲಿ ಎದುರಿಲ್ಲದ ವಸ್ತುಗಳ ಬಗ್ಗೆ ವಿಚಾರ ಮಾಡಬಲ್ಲ

ಭಾವಿಕತ್ವವು ಮಿಕ್ಕ ಯಾವ ಪ್ರಾಣಿಗಳಲ್ಲೂ ಕಂಡುಬರದಷ್ಟು ಹೆಚ್ಚಾಗಿ ಬೆಳೆದಿರುವುದು ಮಾನವನಲ್ಲಿ ನಿಃಸಂದಿಗ್ಧವಾಗಿ ಕಂಡುಬರುತ್ತದೆ.

## ನಿಯಂತ್ರಿಸುವುದು ಅಥವಾ ಅನುಕ್ರಮಗಳನ್ನು ಕಲಿತುಕೊಳ್ಳುವುದು

ತನ್ನ ಆವರಣವನ್ನರಿತು ಅದರೊಡನೆ ವ್ಯವಹರಿಸಬಲ್ಲವನಾಗಬೇಕಾದರೆ ಮಾನವನು ಸ್ಥಳಜ್ಞಾನ, ಸಾಧನ ಜ್ಞಾನಗಳ ಜೊತೆಗೆ ಅನುಕ್ರಮಜ್ಞಾನವನ್ನೂ ಪಡೆದುಕೊಳ್ಳುವುದು ಅಗತ್ಯ. ಘಟನೆ, ಸಂಭೂತಿ, ಸಂಗತಿ ಇಲ್ಲವೆ ಬದಲಾವಣೆ ಎಂಬುದು ಅನುಕ್ರಮರೂಪದಲ್ಲಿರಬಹುದು; ಅನುಕ್ರಮಗಳು ನಿಯತವಾಗಿಯೂ ಇರುವುದುಂಟು. ಬಾಲ್ಯದಿಂದಲೂ ಮನುಷ್ಯ ಅನುಕ್ರಮಗಳನ್ನು ಬಲ್ಲ; ಅದರಿಂದಲೇ ಎಷ್ಟೋ ವೇಳೆ ಅವನು ಚಿರಪರಿಚಿತ ಸನ್ನಿವೇಶಗಳನ್ನು ಪ್ರತೀಕ್ಷಿಸಬಲ್ಲವನೆನಿಸುತ್ತಾನೆ. ಮಿಂಚನ್ನು ಕಂಡ ಕೂಡಲೇ ಗುಡುಗನ್ನು ಪ್ರತೀಕ್ಷಿಸುವುದಿಲ್ಲವೇ? ಪ್ರಾಚಾರ್ಯರಿಗೆ ಕೋಪ ಬಂದ ಕೂಡಲೇ ವಾಕ್‌ಪ್ರವಾಹವನ್ನು ಅವರಿಂದ ನಾವು ಪ್ರತೀಕ್ಷಿಸುವುದಿಲ್ಲವೇ? ಎಷ್ಟೋ ಸಲ ಗೆಳೆಯರೋ ಗುರುಗಳೋ ಹೇಳಿದ ಅರ್ಧ ವಾಕ್ಯವನ್ನು ನಾವು ಪೂರ್ಣ ಮಾಡಬಲ್ಲವರಾಗುತ್ತೇವೆ; 'ಸು' ಎಂದರೆ ಸುಕ್ಕಿನುಂಡೆ ಎಂದು ನಾವು ಊಹಿಸುತ್ತೇವೆ. ಇದು ನಾವು ಮೇಲಿಂದ ಮೇಲೆ ನಡೆದ ಒಂದು ವಿಷಯವನ್ನು ಅನೇಕ ಬಾರಿ ನೋಡಿ ಲಬ್ಧವಾದ ನಿಯತಾನುಕ್ರಮದ ಜ್ಞಾನದಿಂದ ಮಾಡುವ ಪ್ರತೀಕ್ಷೆ. ಇದರಲ್ಲಿ ನಿರೀಕ್ಷಣೆ, ಕಲಿಯುವಿಕೆ ಮತ್ತು ನೆನಪಿಟ್ಟುಕೊಳ್ಳುವುದು ಎಂಬ ಮೂರು ಕ್ರಿಯೆಗಳು ಕ್ರಮವಾಗಿ ಅಳವಟ್ಟಿವೆ. ಮಾನವನ ಶರೀರದ ಅಂಗ–ಉಪಾಂಗಗಳಲ್ಲಿ ಕೂಡ ವಿವಿಧ ಚಲನಗಳ ನಿಯತಾನುಕ್ರಿಯೆಗಳಿವೆ. ಅವು ಅವನ ವರ್ತನೆಯಲ್ಲಿ ಚಿರಪರಿಚಿತವೂ ಅನಿಚ್ಛಾಕೃತವೂ ಆಗಿ ತೋರುತ್ತವೆ. ಚಿರಪರಿಚಿತ ಪದವೊಂದನ್ನವನು ಉಚ್ಚರಿಸುವಾಗ ತಪ್ಪದೆ ವಾಕ್ ಚಲನಗಳ ಕಲಿತ ಅನುಕ್ರಮವನ್ನು ಪುನರಾವರ್ತಿಸುತ್ತಾನೆ. ನೆನಪಿನಿಂದ ಅವನೊಂದು ಹಾಡು ಹೇಳುವುದು ಅಂಥ ಇನ್ನೊಂದು ಉದಾಹರಣೆ. ಟೈಪ್ ರೈಟಿಂಗ್ ಮುಂತಾದ ಕುಶಲಕರ್ಮಗಳ 'ಮೇಲ್ಮಟ್ಟದ ಘಟಕಗಳೂ' (Higher Units) ಅಂಥವೇ.

ಈ ಪ್ರೇರಣಾನುಕ್ರಮ ಹಾಗೂ ಚಲನಾನುಕ್ರಮಗಳಲ್ಲದೆ, ಜ್ಞಾನೇಂದ್ರಿಯ ಪ್ರೇರಣೆ ಮತ್ತು ಕರ್ಮೇಂದ್ರಿಯಾನುಕ್ರಿಯೆಗಳುಳ್ಳ ಸುಶಿಕ್ಷಿತ ಅನುಕ್ರಮಗಳು ಅನೇಕವಾಗಿವೆ. ಅಂಥ ಅನುಕ್ರಮದ ಆಕೃತಿಯು–

ಪ್ರೇ೧–ಅ೧–ಪ್ರೇ೨–ಅ೨

ಎಂಬಂತಿರುತ್ತಿದೆ; ಅಲ್ಲದೆ ಅನೇಕ ಪ್ರೇರಣೆ–ಅನುಕ್ರಿಯೆಗಳ ಪಂಕ್ತಿಯಾಗಿರಬಹುದು. ಅನೇಕ ಪ್ರಕರಣಗಳಲ್ಲಿ ಪ್ರೇ೧ ಎಂಬುದು ಪ್ರೇ೨ ಬರುತ್ತದೆ ಎಂಬುದಕ್ಕೆ ಸೂಚನೆ ಅಥವಾ ಎಚ್ಚರಿಕೆ. ಅ೧ ಎಂಬುದು ಅ೨ ಎಂಬುದಕ್ಕೆ ಪೂರ್ವಸಿದ್ಧತೆ. "ಸಿದ್ಧನಾಗು! ಹೋಗು!" ಎಂಬಿವು ಎರಡು ಪ್ರೇರಣೆಗಳು ಮತ್ತು ಮೊದಲನೆಯ ಅನುಕ್ರಿಯೆಯಾದ ಅ೧ ಎಂಬುದು ಬೇಗ ಹೋಗುವಿಕೆ ಎಂಬ ಅ೨ ಕ್ಕೆ ಸಿದ್ಧತಾಭಂಗಿಯಾಗಬಹುದು. ಒಂದು ಓಟದ ಸ್ಪರ್ಧೆಯಲ್ಲಿ

ಓಟಗಾರರಿಗೆ ಓಡಲು ಎರಡು ಪ್ರೇರಣೆಗಳನ್ನು ಕೊಡಲಾಗುತ್ತದೆ: ಒಂದು ಪ್ರಧಾನ, ಮತ್ತೊಂದು ಗೌಣ; "ಸಿದ್ಧರಾಗಿರಿ" ಎಂಬುದು ಮೊದಲು ಕೊಡುವ ಗೌಣ ಪ್ರೇರಣೆ, "೧,೨,೩–ನಡೆಯಿರಿ" ಎಂದು ಅನಂತರ ಕೊಡುವ ಪ್ರೇರಣೆಯು ಪ್ರಧಾನ ಪ್ರೇರಣೆ ಎನಿಸುತ್ತದೆ. ಎಷ್ಟೋ ವೇಳೆ ಓಟಗಾರರು ಪ್ರಧಾನಪ್ರೇರಣೆಯನ್ನು ಕೊಡುವ ಮೊದಲು ಗೌಣ ಪ್ರೇರಣೆಗೇ ಅನುಕ್ರಿಯೆಯನ್ನು ಎಸಗುವುದುಂಟು. ಇದರಿಂದ ಅನುಕ್ರಿಯೆಯು ಪ್ರಧಾನ ಪ್ರೇರಣೆಗೆ ಬದಲಾಗಿ ಗೌಣ ಪ್ರೇರಣೆಯನ್ನು ಅನುಸರಿಸುವುದೂ ಉಂಟು.

## ಪಾವಲಫ್ ಮಹಾಶಯನ ಉಪಾಹಿತ ಪ್ರಯೋಗಗಳು

ಕ್ರಿ.ಶ ೧೯೦೦ರಲ್ಲಿ ನಾಯಿಗಳನ್ನು ಯೋಜ್ಯಸ್ಥಾನದಲ್ಲಿ ಇಟ್ಟುಕೊಂಡು ಪಚನಕಾರ್ಯವನ್ನು ಅಭ್ಯಾಸ ಮಾಡುತ್ತಿದ್ದಾಗ ರಷ್ಯದ ಪ್ರಸಿದ್ಧ ಶರೀರಶಾಸ್ತ್ರಜ್ಞ ಪಾವಲಫ್ ಲಾಲಾಪ್ರವಾಹವನ್ನು ಅಳೆಯುವ ಕ್ರಮ ಒಂದನ್ನು ಯೋಜಿಸಿದನು. ಲಾಲಾ ಗ್ರಂಥಿಗಳಲ್ಲಿ ಒಂದರ ನಾಳವು ನಾಯಿಯ ಗಲ್ಲದ ಹೊರಗೆ ಲಾಲಾರಸವನ್ನು ಸುರಿಸುವಂತೆ ಮಾಡಿ ಅದರಿಂದ ಹರಿದುಬರುವ ಲಾಲಾರಸವನ್ನು ಒಂದು ಮಾಪಕದಲ್ಲಿ ಬೀಳುವಂತೆ ಮಾಡಲಾಯಿತು. ಈ ಪ್ರಯೋಗಧಾನಿಯನ್ನು ಬಳಸುತ್ತಿದ್ದಾಗ ಅನುಷಂಗಿಕವಾಗಿ ಆಹಾರವು ನಾಯಿಯ ಬಾಯಿಯಲ್ಲಿ ಇರುವಾಗ ಮಾತ್ರವಲ್ಲದೆ, ತಿನ್ನುವ ಮೊದಲು ಆಹಾರವನ್ನು ತಟ್ಟೆಯಲ್ಲಿ ಕಂಡಾಗಲೂ ಜವಾನನು ಆಹಾರ ತರುವುದನ್ನು ಕಂಡಾಗಲೂ ಇಲ್ಲವೆ ಪಕ್ಕದ ಕೋಣೆಯಿಂದ ಅವನ ಕಾಲಿನ ಹೆಜ್ಜೆಯ ಸದ್ದನ್ನು ಕೇಳಿದಾಗ ಕೂಡ, ಲಾಲಾರಸವು ಹರಿದುಬರುವುದನ್ನು ಪಾವಲಫ್ ಕಂಡ. ಆಹಾರ ಸಾಕ್ಷಾತ್ತಾಗಿ ಬಾಯಿಯಲ್ಲಿ ಇರುವಾಗ ಲಾಲಾರಸ ಒಸರುವುದು ಸಹಜಕ್ಷೇಪ. ಆದರೆ ಅದು ತಟ್ಟೆಯ ನೋಟ ಇಲ್ಲವೆ ಹೆಜ್ಜೆಯ ಸಪ್ಪಳ ಮುಂತಾದ ಪ್ರೇರಣೆಗಳಿಂದ ಉಂಟಾದಾಗ ಶಿಕ್ಷಿತಾನುಕ್ರಿಯೆ ಎನಿಸುತ್ತದೆ. ಈ ಶಿಕ್ಷಿತಾನುಕ್ರಿಯೆಯು ಹಿಂದೆ ಪ್ರಯೋಗ ಶಾಲೆಯಲ್ಲಿ ಇಟ್ಟು ಆ ಪ್ರಾಣಿಗೆ ಆಹಾರವನ್ನು ಕೊಟ್ಟ ಉಪಾಧಿಗಳನ್ನು ಅವಲಂಬಿಸುತ್ತದೆ. ಪಾವಲಫ್ ಇದನ್ನು ಉಪಾಹಿತ ಕ್ಷೇಪವೆಂದು (Conditioned Reflex) ಕರೆದನು.

ಆದರೆ ನಿಷ್ಕೃಷ್ಟಾರ್ಥದಲ್ಲಿ ಅದು ಕ್ಷೇಪವಲ್ಲವಾದುದರಿಂದ ಅದನ್ನು ಉಪಾಹಿತ ಅನುಕ್ರಿಯೆ (Conditioned Response) ಎಂದು ಕರೆಯಬಹುದು.

ತಟ್ಟೆಯ ನೋಟ ಇಲ್ಲವೆ ಹೆಜ್ಜೆಯ ಸದ್ದನ್ನು ಕೇಳುವುದು ಆಹಾರ ಬರುತ್ತಿದೆ ಎಂಬುದರ ಸೂಚನೆ: ಬಾಯಿಯಲ್ಲಿ ಸಾಕ್ಷಾತ್ತಾಗಿ ಆಹಾರ ಹೊಗುವ ಮೊದಲೇ ಲಾಲಾರಸ ಒಸರುವುದು ಸಿದ್ಧತೆಯ ಅನುಕ್ರಿಯೆ. ನಾಯಿಯು ಇಲ್ಲಿ ಪ್ರೇ–ಅ–ಪ್ರೇ–ಅ ಎಂಬ ಅನುಕ್ರಮವನ್ನು ಕಲಿತಿತ್ತೆಂಬುದು ಸ್ಪಷ್ಟ. ಆಹಾರದ ತಟ್ಟೆಯ ನೋಟ ಇಲ್ಲವೆ ಹೆಜ್ಜೆಯ ಸದ್ದಿನ ಕೇಳ್ಮೆ ಎಂಬ ಪ್ರೇ ಉಪಾಹಿತ ಪ್ರೇರಣೆಯಾಗಿದೆ. ಅ ಎಂಬುದು ಲಾಲಾರಸ; ಮೊದಲೇ ಒಸರುವ ರೂಪದ ಉಪಾಹಿತ ಅನುಕ್ರಿಯೆ. ಬಾಯಿಯಲ್ಲಿ ಇರುವ ಆಹಾರ ರೂಪದ ಪ್ರೇ ಅನುಪಾಹಿತ ಪ್ರೇರಣೆ. ಬಾಯಿಯಲ್ಲಿಯ ಆಹಾರದಿಂದ ಉದ್ಭವಿಸಿದ ಲಾಲಾ ಪ್ರವಾಹ ರೂಪದ ಅ ಎಂಬುದು ಅನುಪಾಹಿತ ಅನುಕ್ರಿಯೆ.

## ಪಾವಲಫ್ ಮಹಾಶಯನ ಉಪಾಧಾನ ಪ್ರಯೋಗಗಳು

ಬೆಂಬಲ ಪಡೆದ ಪುನರಾವರ್ತನೆಯಿಂದ ಉಪಾಹಿತ ಅನುಕ್ರಿಯೆಯ ಸ್ಥಾಪನೆ: ಗಂಟೆಯ ಶಬ್ಧ, ಚರ್ಮಸ್ಪರ್ಶ ಇಲ್ಲವೆ ಪ್ರಾಣಿಯನ್ನು ಹೆಚ್ಚು ಗಲಿಬಿಲಿಗೊಳಿಸದೆ ಅದರ ಉನ್ಮುಖತೆಯನ್ನು ಆಕರ್ಷಿಸುವ ಪ್ರೇರಣೆ ಮುಂತಾದ ಸಂಪೂರ್ಣ ನಿರಂಕುಶ ಪ್ರೇರಣೆಗೆ ಲಾಲಾನುಕ್ರಿಯೆ ಉಂಟಾಗುವಂತೆ ಉಪಾಧಿಯನ್ನು ಇಡಲು ಪಾವಲಫ್ ಪ್ರಯತ್ನಿಸಿದ. ಚೆನ್ನಾಗಿ ಸಾಕಿದ, ಪ್ರಯೋಗ ಶಾಲೆಯನ್ನು ಚೆನ್ನಾಗಿ ಪರಿಚಯ ಮಾಡಿಕೊಂಡ ಒಂದು ಹಸಿದ ನಾಯಿಯನ್ನು ಅತ್ತಿತ್ತ ಅಲುಗಾಡದಂತೆ ಕೊಕ್ಕೆ ಹಾಕಿ ಮೇಜಿನ ಮೇಲೆ ಅವನು ನಿಲ್ಲಿಸಿದನು. ಅದು ಈ ಸನ್ನಿವೇಶಕ್ಕೆ ಹೊಂದಿಕೊಂಡು ಸಮಾಧಾನವಾದ ಮೇಲೆ ವಿದ್ಯುತ್ತಿನ ಗಂಟೆಯನ್ನು ಬಾರಿಸಲು ಶುರು ಮಾಡಲಾಯಿತು. ಸುಮಾರು ೧೫ ಸೆಕುಂದಗಳ ಕಾಲ ಗಂಟೆ ಬಡಿದ ಮೇಲೆ ಅದರ ಬಾಯಿಯಲ್ಲಿ ಆಹಾರವನ್ನು ಹಾಕಲಾಯಿತು. ಕೆಲ ನಿಮಿಷಗಳ ನಂತರ ಪ್ರೇರಣೆಗಳ ಅದೇ ಅನುಕ್ರಮವನ್ನು ಪುನರಾವರ್ತಿಸಲಾಯಿತು. ಅದೇ ಮೇರೆಗೆ ನಡುನಡುವೆ ಬಿಟ್ಟು ಬಿಟ್ಟು ಹಾಗೇ ಪ್ರೇರಣೆಗಳನ್ನು ಕೊಡಲಾಯಿತು. ಗಂಟೆ ಮತ್ತು ಆಹಾರರೂಪದ ಪ್ರೇರಣಾನುಕ್ರಮದ ಅನೇಕ ಪುನರಾವೃತ್ತಿಗಳಾದ ಮೇಲೆ, ಆಹಾರ ಕೊಡುವ ಮೊದಲು ಗಂಟೆ ಹೊಡೆಯುತ್ತಿರುವಾಗಲೇ ಲಾಲಾರಸ ಸ್ರವಿಸಲಾರಂಭಿಸಿತು. ಈ ಉಪಾಹಿತ ಲಾಲಾರಸದ ಅಳತೆಯು ಒಂದೊಂದು ಪ್ರಯೋಗ ಪ್ರಯತ್ನ ನಡೆದ ಹಾಗೂ ಹೆಚ್ಚುತ್ತ ಹೋಗಿ, ಒಂದು ಪರಮಾವಧಿಯನ್ನು ಮುಟ್ಟಿತು. ಆದರೆ ಈ ಪರಮಾವಧಿಯು ಬಾಯಿಯಲ್ಲಿರುವ ಆಹಾರ ಉಂಟುಮಾಡಿದ ಲಾಲಾಪ್ರವಾಹಕ್ಕಿಂತ ಕಡಿಮೆಯಾಗಿತ್ತು. ಈ ಪ್ರಕಾರ ಆ ದಿನದ ಉಪಾಹಿತ ಲಾಲಾನುಕ್ರಿಯೆಯನ್ನು ಗೊತ್ತುಪಡಿಸಲಾಯಿತು.

ಮರುದಿನ ಮೊದಲ ಸಲ ಗಂಟೆ ಬಾರಿಸಿದಾಗ ಲಾಲಾಪ್ರವಾಹ ಹರಿಯಲೇ ಇಲ್ಲ; ಆದರೆ ಪುನಃಪುನಃ ಬಾರಿಸಿದ ನಂತರ ಅದು ಉಂಟಾಯಿತು. ಇದೇ ರೀತಿಯಲ್ಲಿ ನಿತ್ಯವೂ ಪ್ರಯೋಗವನ್ನು ಮಾಡುತ್ತ ಹೋದಮೇಲೆ, ಕೆಲವೇ ದಿನಗಳಲ್ಲಿ, ಉಪಾಹಿತ ಅನುಕ್ರಿಯೆಯು ನಿಯತಪ್ರಮಾಣವನ್ನು ಹೊಂದಿತು. ಒಂದು ಸಲ ಹೀಗೆ ಸ್ಥಾಪಿಸಲ್ಪಟ್ಟ ಉಪಾಹಿತ ಅನುಕ್ರಿಯೆಯು ನಿಯತಪ್ರಮಾಣವನ್ನು ಹೊಂದಿತು. ಒಂದು ಸಲ ಹೀಗೆ ಸ್ಥಾಪಿಸಲ್ಪಟ್ಟ ಉಪಾಹಿತ ಅನುಕ್ರಿಯೆಯನ್ನು ಅನೇಕ ತಿಂಗಳ ಕಾಲ ಒಂದು ಪ್ರಾಣಿಯು ಉಳಿಸಿಕೊಳ್ಳಬಲ್ಲುದು.

ಅಳತೆಗೆ ಸಿಗುವ ಲಾಲಾರಸದ ಪ್ರಮಾಣವೆಷ್ಟೆಂಬುದನ್ನು ಅರಿಯುವುದೇ ಪಾವಲಫ್ ಮಹಾಶಯನ ಗುರಿಯಾಗಿದ್ದರೂ ಗ್ರಂಥಿಯ ಅನುಕ್ರಿಯೆಯನ್ನು ಒಂದು ಉಪಾಹಿತ ಕರ್ಮೇಂದ್ರಿಯಾನುಕ್ರಿಯೆಯು ಅನುಸರಿಸಿದ್ದು ಕಂಡ. ಆಹಾರ ಕೊಡುವ ಮೊದಲು ಗಂಟೆ ಹೊಡೆಯುತ್ತಿದ್ದಾಗ ನಾಯಿಯು ಆಹಾರದತ್ತ ತನ್ನ ಕತ್ತನ್ನು ತಿರುಗಿಸುತ್ತಿತ್ತು. ಗ್ರಂಥಿಯ ಮತ್ತು ಕರ್ಮೇಂದ್ರಿಯದ ಉಪಾಹಿತ ಅನುಕ್ರಿಯೆಗಳ ಮೊತ್ತವು ಆಹಾರ ಸ್ವೀಕಾರದ ಸಿದ್ಧತೆಯಾಗಿತ್ತು. ಒಟ್ಟಿನಲ್ಲಿ ಈ ಸಿದ್ಧತಾನುಕ್ರಿಯೆಯು ಆಹಾರವನ್ನು ತಿನ್ನುವ

ಅಂತ್ಯಾನುಕ್ರಿಯೆಯಿಂದ ಭಿನ್ನ. ಏಕೆಂದರೆ, ಅದರ ಗ್ರಂಥೀಯ ಭಾಗವು ಪ್ರಮಾಣವೊಂದನ್ನು ಬಿಟ್ಟು ಮಿಕ್ಕ ವಿಷಯದಲ್ಲಿ ಒಂದೇ ಆಗಿತ್ತು ಮತ್ತು ಆಹಾರವನ್ನು ಸಮೀಪಿಸುವ ಸಿದ್ಧತೆಯ ರೂಪದ ಚಲನೆಯು ಅದನ್ನು ಅಗಿವ ಕೊನೆಯ ಕೆಲಸಕ್ಕಿಂತ ತೀರ ಭಿನ್ನವಾಗಿತ್ತು. ಆಹಾರ ಕೊಡುವ ನಿಯತ ಕಾಲವನ್ನು ಸೂಚಿಸಲು ಗಂಟೆ ಹೊಡೆದ ಮೇಲೆಯೇ ಯಾವಾಗಲೂ ಆಹಾರವನ್ನು ಕೊಡುತ್ತಿದ್ದುದು ಈ ಸಂದರ್ಭದಲ್ಲಿ "ಬೆಂಬಲ"ವೆನಿಸುತ್ತದೆ.

ಬೆಂಬಲ ಕೊಡದೆ ಪುನರಾವೃತ್ತಿಯಿಂದ ಉಪಾಹಿತ ಅನುಕ್ರಿಯೆಯನ್ನು ಹೋಗಲಾಡಿಸುವುದು: ಅನುಪಾಹಿತ ಪ್ರೇರಣೆಯನ್ನು ಅನುಗತವಾಗಿ ಕೊಡದೆ ಉಪಾಹಿತ ಪ್ರೇರಣೆಯನ್ನು ಪದೇಪದೇ ಕೊಡುವುದರಿಂದ ಒಂದು ಉಪಾಹಿತ ಅನುಕ್ರಿಯೆಯನ್ನು ಹೋಗಲಾಡಿಸುವುದು ಎಂಬುದು ಪಾವಲಫ್ ಮಹಾಶಯನ ಒಂದು ಮುಖ್ಯ ಶೋಧ. ಗಂಟೆಯನ್ನು ಹೊಡೆಯಿರಿ, ಆದರೆ ಅನ್ನವನ್ನು ಹಾಕಬೇಡಿರಿ; ಪ್ರೆಗ್ನ ನ್ನು ಕೊಡಿರಿ. ಆದರೆ ಪ್ರೇತ್ನನ್ನು ಕೊಡಬೇಡಿರಿ.

ತನ್ನ ಒಂದು ಪ್ರಯೋಗದಲ್ಲಿ ಪಾವಲಫ್ ಬಡಿವ ಕಾಲಲೋಲಕವನ್ನು ಉಪಾಹಿತ ಪ್ರೇರಣೆಯನ್ನಾಗಿ ಮಾಡಿದಾಗ ಕೆಲದಿನಗಳಲ್ಲಿ ಉಪಾಹಿತ ಲಾಲಾನುಕ್ರಿಯೆಯನ್ನು ನಿಷ್ಕರ್ಷಿಸಿದ. ಅನಂತರ ಒಂದು ದಿನ ಹಿಂದಿನಂತೆಯೇ ಕಾಲಲೋಲಕವನ್ನು ಬಡಿಯಲಾಯಿತು. ಆ ಕೂಡಲೇ ಸಾಕಷ್ಟು ಲಾಲಾ ಪ್ರವಾಹ ಉಂಟಾಯಿತು. ಆದರೆ ಬೆಂಬಲರೂಪದ ಆಹಾರವಾವುದನ್ನೂ ನಾಯಿಗೆ ಕೊಡಲಿಲ್ಲ. ಅಂಥ ಎರಡನೆಯ ಪ್ರಯೋಗದಲ್ಲಿ ಮೂರು ನಿಮಿಷಗಳ ನಂತರ ಪ್ರವಾಹದ ಪ್ರಮಾಣವು ಕಡಿಮೆಯಾಯಿತು. ಆ ಮೇಲೂ ಆಹಾರವನ್ನು ಕೊಡಲಿಲ್ಲ. ಇದೇ ಪ್ರಕಾರ ಕಾಲಲೋಲಕವು ಲಾಲಾನುಕ್ರಿಯೆಯನ್ನು ಉಂಟು ಮಾಡಲು ಸಂಪೂರ್ಣವಾಗಿ ಅಶಕ್ತವಾಗುವವರೆಗೆ ಅದೇ ಕ್ರಮವನ್ನು ಪದೇ ಪದೇ ಅನುಸರಿಸಲಾಯಿತು. ಉಪಾಹಿತ ಅನುಕ್ರಿಯೆಯು ಕ್ರಮವಾಗಿ ಅಳಿದು ಹೋಗುವುದರ ಪಟ್ಟಿಯನ್ನು ಈ ಕೆಳಗೆ ಕೊಡಲಾಗಿದೆ.

| **ಕಾಲಲೋಲಕವು ಪ್ರೇರಣೆ ಕೊಡಲಾರಂಭಿಸಿದ ಕಾಲ** | **ಲಾಲಾಬಿಂದುಗಳ ಪ್ರಮಾಣ** |
|---|---|
| ೧೨.೦೭ ಉ.ರೇ | ೧೩ |
| ೧೨.೧೦ ,, | ೭ |
| ೧೨.೧೩ ,, | ೫ |
| ೧೨.೧೬ ,, | ೬ |
| ೧೨.೧೯ ,, | ೩ |
| ೧೨.೨೨ ,, | ೨.೫ |
| ೧೨.೨೫ ,, | ೦ |
| ೧೨.೨೮ ,, | ೦ |

ಒಂದು ಅಥವಾ ಎರಡು ಸಲ ಬೆಂಬಲ ಕೊಡಿರಿ; ಆ ಕೂಡಲೆ ಉಪಾಹಿತ ಅನುಕ್ರಿಯೆ ಪುನಃ ಉಂಟಾಗುತ್ತದೆ. ಉಪಾಹಿತ ಅನುಕ್ರಿಯೆ ನಷ್ಟವಾದ ಮೇಲೆ ಯಾವ ಬೆಂಬಲವನ್ನೂ ಕೊಡಬೇಡಿರಿ; ಆದರೆ ನಾಯಿಗೆ ಸುಮ್ಮನೆ ವಿಶ್ರಾಂತಿ ಕೊಡಿರಿ; ಮತ್ತು ಮರುದಿನವೇ ಉಪಾಹಿತ ಅನುಕ್ರಿಯಾಶಕ್ತಿಯನ್ನು ನಾಯಿಯು ಪುನಃ ಪಡೆದುಕೊಳ್ಳುವುದನ್ನು ನೋಡುತ್ತೀರಿ. ಕಾಲಲೋಲಕ ಬಡಿದ ಕೂಡಲೇ ಲಾಲಾರಸವು ಹರಿಯುತ್ತದೆ. ಆ ದಿನವೂ ಅನ್ನ ಹಾಕದಿದ್ದರೆ ಉಪಾಹಿತ ಅನುಕ್ರಿಯೆಯ ನಾಶವು ಹೆಚ್ಚು ಬೇಗ ಆಗುತ್ತದೆ. ಇದನ್ನು ಪದೇ ಪದೇ ದಿನದಿನವೂ ಯಾವ ಬೆಂಬಲವನ್ನೂ ಕೊಡದೆ ನಡೆಸಿದರೆ, ಉಪಾಹಿತ ಅನುಕ್ರಿಯಾಶಕ್ತಿಯನ್ನು ನಾಯಿಯು ಸಂಪೂರ್ಣವಾಗಿ ಕಳೆದುಕೊಳ್ಳುತ್ತದೆ. ಮೂಲತಃ ಉಪಾಹಿತ ಅನುಕ್ರಿಯೆಯ ನಾಶವೂ ನೈಷೇಧಿಕ ಹೊಂದಿಕೆಯೂ ಒಂದೇ. ಈ ಎರಡರಲ್ಲಿಯೂ ಪುನಃಪುನಃ ಕೊಟ್ಟ ಪ್ರೇರಣೆಗೆ ಮಾಡುವ ವ್ಯರ್ಥಾನುಕ್ರಿಯೆಯ ಕ್ರಮಿಕ ನಿವಾರಣೆಯು ಕಂಡುಬರುತ್ತದೆ.

## ವಿಲಂಬಿತ ಬೆಂಬಲದಿಂದ ವಿಲಂಬಿತ ಉಪಾಹಿತಾನುಕ್ರಿಯೆ

ಆಹಾರವನ್ನು ಕೊಡುವುದಕ್ಕೆ ಒಂದು ನಿಮಿಷ, ಮುಂಚೆ ಗಂಟೆ ಅಥವಾ (ಕಾಲ ಲೋಲಕ) ಹೊಡೆಯಲಿ. ಉಪಾಹಿತ ಅನುಕ್ರಿಯೆಯು ಮೊದಲ ಸಲ ಉಂಟಾಗುವ ಉಪಾಧಾನದ ಪ್ರಥಮ ಪ್ರಕ್ರಿಯೆಯಲ್ಲಿ ಉಕ್ತ ಅನುಕ್ರಿಯೆಯು ಸದ್ದಿನ ಒಡನೆಯೇ ಎಂಬಂತೆ ಶುರುವಾಗುತ್ತದೆ. ಆಗ ಲಾಲಾರಸ ಹರಿಯಲು ತೊಡಗುತ್ತದೆ ಮತ್ತು ತಡ ಮಾಡಿದ ಇಡಿ ನಿಮಿಷದ ತನಕವೂ ಹಾಗೇ ಅದು ಹರಿಯುತ್ತ ಹೋಗುವುದು. ದಿನ ಹೋದ ಹಾಗೆ ಉಪಾಧಾನವನ್ನು ಮುಂದುವರಿಸಿದಾಗ, ನಿಮಿಷವು ಸಂಪೂರ್ಣವಾಗಿ ಕಳೆದು ಹೋಗುವವರೆಗೂ ಉಕ್ತ ಅನುಕ್ರಿಯೆಯು ವಿಲಂಬಿತವಾಗುತ್ತದೆ. ಮೊದಲಿನ ನಿಮಿಷಾರ್ಧ ಅಥವಾ ಅದಕ್ಕಿಂತ ಸ್ವಲ್ಪ ಹೆಚ್ಚುಕಾಲ ನಾಯಿಯು ತನ್ನ ಸ್ತಬ್ಧಾವಸ್ಥೆಯಲ್ಲಿ ತೂಕಡಿಸುತ್ತ ಕುಸಿದು ಬೀಳುತ್ತದೆ; ಅದರ ನಾಲಿಗೆಯಲ್ಲಿ ಲಾಲಾರಸ ಹೊರಡುವುದಿಲ್ಲ. ಆದರೆ ನಿಮಿಷ ಮುಗಿಯುವ ಹೊತ್ತಿಗೆ ಅದು ಸರಕ್ಕನೆ ತಲೆ ಎತ್ತುತ್ತದೆ ಮತ್ತು ಅದರ ಬಾಯಿಯಿಂದ ಲಾಲಾರಸ ಹರಿಯಲಾರಂಭಿಸುತ್ತದೆ. ಅದು ಪ್ರೇರಣೆಯ ಕಾಲನಿರ್ದೇಶಕ್ಕೆ ಹೊಂದಿಕೊಂಡಿದೆ; ಅದು ದ್ವಿಮುಖವಾದ ಉಪಾಹಿತ ಅನುಕ್ರಿಯೆಯನ್ನು ಕಲಿತಿದೆ! ಮೊದಲು ಕಾದಿರುವುದಕ್ಕೆ ಪೂರ್ವಸಿದ್ಧತೆಯಾದ ಸಪ್ತೇತನ; ಅನಂತರ ಆಹಾರ ಸ್ವೀಕಾರಕ್ಕೆ ಪೂರ್ವಸಿದ್ಧತೆ ಎಂದು ಎದ್ದು ಜೊಲ್ಲು ಸುರಿಸುವುದು.

## ಆಯ್ದ ಬೆಂಬಲದಿಂದ ಆಯ್ದ ಉಪಾಧಾನವನ್ನು ಸಾಧಿಸಿಕೊಳ್ಳುವುದು

ಉಪಾಧಾನದಲ್ಲಿ ಸೂಚನೆ ಎಂದು ಬಳಸಿಕೊಳ್ಳುವ, ನಿಯತ ಪ್ರೇರಣೆಯನ್ನು ಹೋಲುವ ಯಾವುದಾದರೊಂದು ಆಕಸ್ಮಿಕ ಪ್ರೇರಣೆಯಿಂದ ಉಪಾಹಿತಾನುಕ್ರಿಯೆಯನ್ನು ಹುಟ್ಟಿಸಬಹುದು. ಈ ದೃಷ್ಟಿಯಿಂದ ಅದು ಸ್ವಲ್ಪ ಯಾಂತ್ರಿಕವಾಗುತ್ತದೆ. ಇಲ್ಲಿಯವರೆಗೆ ಬಳಸಲಾದ ಉಪಾಹಿತ ಪ್ರೇರಣೆ ಕೊಡುವ ವಿದ್ಯುತ್ತಿನ ಗಂಟೆಗೆ ಬದಲಾಗಿ

ತಂಬಟೆಯೊಂದನ್ನು ಬಳಸಿದರೆ ಸ್ವಲ್ಪ ದುರ್ಬಲವಾದರೂ ನಿಯತವಾದ ಉಪಾಹಿತ ಅನುಕ್ರಿಯೆ ನಾಯಿಯಿಂದ ನಮಗೆ ದೊರಕುತ್ತದೆ.

ಒಂದು ನಿರ್ದಿಷ್ಟ ಉಪಾಹಿತ ಪ್ರೇರಣೆಯನ್ನು ಸುಮಾರಾಗಿ ಹೋಲುವ ಇತರ ಪ್ರೇರಣೆಗೂ ಆ ನಿರ್ದಿಷ್ಟ ಉಪಾಹಿತ ಪ್ರೇರಣೆಗೇ ಮೀಸಲಾದ ಒಂದು ಉಪಾಹಿತ ಅನುಕ್ರಿಯೆಯು ಕೆಲಸ ಮಾಡಬಹುದು. ಇದನ್ನು ಪ್ರೇರಣೆಯ ಸಾಧಾರಣೀಕರಣ (Stimulus Generalization) ಎನ್ನುತ್ತಾರೆ.

ನಿರ್ದಿಷ್ಟ ಉಪಾಹಿತ ಪ್ರೇರಣೆಯನ್ನು ಕಡಿಮೆ ಕಡಿಮೆ ಹೋಲಿಸಿದಷ್ಟೂ ಬದಲು ಪ್ರೇರಣೆಗಳು ಅಲ್ಪ ಪರಿಣಾಮಕರಗಳಾಗುತ್ತವೆ. ಇದನ್ನು 'ಸಾಧಾರಣೀಕರಣ ಶ್ರೇಣಿ' ಎನ್ನುತ್ತಾರೆ. ಆಯ್ದ ಬೆಂಬಲವನ್ನು ಉಪಯೋಗಿಸಿಕೊಳ್ಳುವುದರಿಂದ ಆರಂಭದ ಸಾಧಾರಣೀಕರಣವನ್ನು ಗೆದ್ದುಕೊಳ್ಳುವುದಕ್ಕೆ ವಿಂಗಡಣೆ ಎಂದು ಹೆಸರು. ನಾಯಿಯು ಬೇರೆ ಬೇರೆ ಪ್ರೇರಣೆಗಳಿಗೆ ಬೇರೆ ಬೇರೆಯಾಗಿ ಅನುಕ್ರಿಯೆ ತೋರುವುದನ್ನು ಕಲಿಯುವುದರಿಂದ ವಿಂಗಡಣೆ ಎಂದರೆ ವಿಂಗಡಿಸುವುದೆಂದೇ ಅರ್ಥ.

ಯಾವ ಆಕರ್ಷಕ ಮನುಷ್ಯನನ್ನು ಕಂಡರೂ ಮಗು "ಅಪ್ಪಾ" ಎಂದು ಕರೆಯಲಾರಂಭಿಸಿದರೆ ಅದು ಮಾಡುವುದು ಪ್ರೇರಣೆಯ ಸಾಧಾರಣೀಕರಣ ಎಂದೆನಿಸುತ್ತದೆ. ಅದರ ಸಾಮಾಜಿಕ ಆವರಣ ಕೊಡುವ ಆಯ್ದ ಬೆಂಬಲವು ಕೂಡಲೇ ಅದರ ತಪ್ಪನ್ನು ತಿದ್ದುತ್ತದೆ.

ಸನ್ನಿವೇಶಕ್ಕೆ ಹೊಂದಿಕೊಳ್ಳುವುದು ಉಪಾಧಾನದ ಯಶಸ್ವಿ ಪ್ರದರ್ಶನಕ್ಕೆ ಅವಶ್ಯಕ. ನಾಯಿಗೆ ಪ್ರಯೋಜಕನು ಚೆನ್ನಾಗಿ ಪರಿಚಿತನಾಗಿರುವುದು ಮತ್ತು ಅದು ಪ್ರಯೋಗಶಾಲೆಯ ಆವರಣಕ್ಕೆ ಹೊಂದಿಕೊಂಡದ್ದೂ ಆಗಿರುವುದು ಈ ಪ್ರಯೋಗಗಳ ಯಶಸ್ಸಿಗೆ ಅನಿವಾರ್ಯ ಕಾರಣಗಳು. ನಡುವೆ ಭಂಗವನ್ನು ತರುವ ಯಾವುದಾದರೊಂದು ಪ್ರೇರಣೆಯು ನಾಯಿಯ ಹೊಂದಿಕೆಯನ್ನು ತಾತ್ಕಾಲಿಕವಾಗಿ ಕೆಡಿಸಬಹುದು. ಅಲ್ಲದೆ ಉಪಾಧಾನದಲ್ಲಿ ಕೈಹಾಕಿ ಅದನ್ನು ನಾಶಮಾಡಬಹುದು ಇಲ್ಲವೆ ವಿಂಗಡಣೆಗೆ ಗುರಿಪಡಿಸಬಹುದು. ಯೋಜ್ಯವಾಗಿ ತೆಗೆದುಕೊಳ್ಳುವ ಪ್ರಾಣಿಯ ಉನ್ಮುಖತೆ ಭಾಸವಾಗದಂತೆ ನೋಡಿಕೊಳ್ಳುವುದು ಬಹಳ ಮುಖ್ಯವೆಂದು ಪಾವಲಫ್ ತಿಳಿದಿದ್ದನು. ಅದಕ್ಕಾಗಿ ಅವನು ಉಪಾಹಿತ ಕ್ಷೇಪಪ್ರಯೋಗಗಳಿಗೆಂದೇ ಒಂದು ವಿಶಿಷ್ಟವಾದ ಪ್ರಯೋಗಶಾಲೆಯನ್ನು ಕಟ್ಟಿಸಿದ್ದನು. ಅದರಲ್ಲಿ ಹೊರಗಿನ ಬೆಳಕು, ಸದ್ದು ಮುಂತಾದವು ಒಳಗೆ ಬರದಂತೆ ಬಲವಾದ ವ್ಯವಸ್ಥೆಯನ್ನು ಮಾಡಿದ್ದನಲ್ಲದೆ, ಪ್ರಯೋಜಕನು ಕೂಡ ಪ್ರಯೋಗ ಕಾಲದಲ್ಲಿ ಅದಕ್ಕೆ ಕಾಣಿಸಿಕೊಳ್ಳದೆ ಇರಲು ಬೇಕಾದ ಅನುಕೂಲತೆಗಳನ್ನು ಮಾಡಿದ್ದನು.

## ಮನುಷ್ಯರಲ್ಲಿ ಉಪಾಹಿತ ಅನುಕ್ರಿಯೆ

ಮೊದಲ ಬಾರಿಗೆ ಎಳೆಮಕ್ಕಳ ಎದುರು ನಗಾರಿ ಬಾರಿಸಿದರೆ ಅವು ಹೆದರಿ ಅಳುತ್ತವೆ. ಈ ಕ್ರಮವನ್ನು ಕೆಲವು ದಿನಗಳವರೆಗೆ ಅನುಸರಿಸಿದರೆ, ಅವು ಉಪಾಹಿತರಾಗುವ ಲಕ್ಷಣಗಳನ್ನು

ತೋರಿಸುತ್ತವೆ, ಅಂದರೆ ಅವು ನಗಾರಿ ಬಾರಿಸಿದಾಗ ಅಳುವುದನ್ನು ನಿಲ್ಲಿಸುತ್ತವೆ, ಸುಮ್ಮನೆ ಬಾಯಿ ತೆರೆಯುತ್ತವೆ ಇಲ್ಲವೆ ಬಾಯಿ ಚಪ್ಪರಿಸುತ್ತವೆ. ನಾಲ್ಕು ವರ್ಷದವರೆಗೆ ಮಗು ಬೆಳೆಯುತ್ತ ಹೋದ ಹಾಗೆ ಉಪಾಧಾನ ಸುಲಭವಾಗುತ್ತ ಹೋಗುತ್ತದೆ. ಆದರೆ ಆ ವಯಸ್ಸಿನ ನಂತರ ಮನುಷ್ಯನನ್ನು ಉಪಾಧಿಗೆ ಒಳಪಡಿಸುವುದು ಕಷ್ಟಕರವಾಗುತ್ತದೆ ಎಂದು ತೋರುತ್ತದೆ. ಕೆಲ ಪ್ರೌಢ ಮನುಷ್ಯರಲ್ಲಿ ಉಪಾಹಿತ ಲಾಲಾನುಕ್ರಿಯೆಯನ್ನು ಪ್ರಾಯೋಗಿಕವಾಗಿ ಸ್ಥಾಪಿಸಬಹುದು. ಆದರೆ ಅದು ನಾಯಿಗಳಲ್ಲಿ ಕಂಡುಬಂದದ್ದರಷ್ಟು ಅವಲಂಬನೀಯವಲ್ಲ. ಸಾಮಾನ್ಯ ಜೀವನದಲ್ಲಿ ಆಹಾರವನ್ನು ಕಂಡ ಕೂಡಲೆ, ಊಟದ ಗಂಟೆಯನ್ನು ಬಾರಿಸಿದೊಡನೆಯೆ ಅಥವಾ ಯಾವನಾದರೊಬ್ಬನು ನಮ್ಮ ಎದುರು ಲಿಂಬೆ ಪಾನಕವನ್ನು ವರ್ಣಿಸಿದ ಕೂಡಲೆ ನಮ್ಮ ನಾಲಿಗೆಯಲ್ಲಿ ನೀರೂರುತ್ತದೆ. ಆದರೆ ಪ್ರಯೋಗ ಶಾಲೆಯಲ್ಲಿ ಹೊಕ್ಕ ಪ್ರೌಢನೊಬ್ಬನು ತನ್ನ ಬಾಯಿಯಲ್ಲಿ ಕೃತಕವಾಗಿ ನೀರನ್ನು ಬರಿಸಿ ಹುಚ್ಚನನ್ನಾಗಿ ಮಾಡುತ್ತಾರೆ, ತನಗೆ ಇಚ್ಛೆ ಇಲ್ಲದ ಕೆಲಸವನ್ನು ಮಾಡಿಸುತ್ತಾರೆ ಎಂದು ಮುಂತಾಗಿ ಭಾವಿಸಬಹುದು. ಕೆಲವರು ಮಿಕ್ಕವರಿಗಿಂತ ಹೆಚ್ಚು ಜೋರಾಗಿ ಪ್ರತಿಭಟಿಸಬಹುದು; ಮತ್ತು ಒಬ್ಬನೇ ವ್ಯಕ್ತಿಯ ಮನೋವೃತ್ತಿಯು ಕಾಲಕಾಲಕ್ಕೆ ಬದಲಾಯಿಸಬಹುದು. ಆದುದರಿಂದ ಪ್ರಯೋಗ ಶಾಲೆಯ ಉಪಾಹಿತ ಅನುಕ್ರಿಯೆಯು ಅವಲಂಬನೀಯವಲ್ಲ.

ಮನುಷ್ಯನ ಮೇಲೆ ಉಪಾಧಾನ ಪ್ರಯೋಗಗಳನ್ನು ಮಾಡಿದರೆ ಸಾಮಾನ್ಯವಾಗಿ ನಿಷ್ಫಲವಾಗುತ್ತದೆ ಎಂದು ಯಾರೂ ತಿಳಿದುಕೊಳ್ಳಬಾರದು. ಪ್ರಯೋಜಕನು ಒಳ್ಳೆಯ ತಂತ್ರವನ್ನು ಬಳಸಿದ್ದೇ ಆದರೆ ಅಂಥ ಪ್ರಯೋಗಗಳು ಸ್ಥಾಪನೆ (Establishment), ನಾಶ (Extinction) ಇಲ್ಲವೆ ವಿಂಗಡಣೆ (Differentiation) ಎಂಬ ಮೂರರಲ್ಲಿ ಒಂದು ರೂಪದ ಉಪಾಹಿತ ಅನುಕ್ರಿಯೆಯಲ್ಲಿ ಪರಿಣಮಿಸುತ್ತವೆ. ಸಿದ್ಧತಾಸೂಚನೆ ಮತ್ತು ವಿದ್ಯುತ್ತಿನ ಉತ್‌ಕಂಪ ಕೊಟ್ಟಾಗ ಕೈಯನ್ನು ಹಿಂದೆ ಸರಿಸಿಕೊಳ್ಳುವುದಕ್ಕೆ ಪೂರ್ವಸಿದ್ಧತೆ ಎನಿಸುವ ಉಪಾಹಿತ ಅನುಕ್ರಿಯೆಗಳನ್ನು ಯಶಸ್ವಿಯಾಗಿ ಸಿದ್ಧಾಂತಿಸಲಾದದ್ದು ಮೇಲಿನ ಮಾತಿಗೆ ಉದಾಹರಣೆ.

✱

## ಅಧ್ಯಾಯ ಎಂಟು

# ಸ್ಮೃತಿ

ಹಿಂದೆ ಕಲಿತದ್ದನ್ನು ಕ್ರಮಶಃ ಸಮನ್ವಯಿಸಿಕೊಳ್ಳುವುದೇ ಸ್ಮೃತಿ. ಅದಕ್ಕೆ ಕಲಿಯುವಿಕೆ, ಧಾರಣೆ ಮತ್ತು ಸ್ಮೃತಿಸಮನ್ವಯ ಎಂಬ ಮೂರು ಅಂಗಗಳಿವೆ. ಸ್ಮೃತಿ ಸಮನ್ವಯದಲ್ಲಿ ಜ್ಞಾಪನ ಮತ್ತು ಪ್ರತ್ಯಭಿಜ್ಞಾನ ಎಂಬ ಎರಡು ಪ್ರಕ್ರಿಯೆಗಳು ಅಡಗಿವೆ. ಕಲಿಯುವುದೆಂದರೆ ಏನೆಂಬುದನ್ನು ಹಿಂದೆಯೇ ಹೇಳಲಾಗಿದೆ. ಎರಡನೆಯ ಅಂಗವಾದ ಧಾರಣೆಯು ನಿಷ್ಕ್ರಿಯಾ ಸ್ವರೂಪದ್ದು. ಸ್ಮೃತಿ ಸಮನ್ವಯವಾದರೋ ಸಕ್ರಿಯ ಸ್ವರೂಪವುಳ್ಳದ್ದು.

ಸ್ಮೃತಿ ಪ್ರಯೋಗದ ಸಾಮಾನ್ಯ ಯೋಜನೆ ಹೀಗಿರುತ್ತದೆ: ಕ+ಮ+ಸ್ಮೃ.ಸ. ಈ ಸೂತ್ರದಲ್ಲಿ ಕ ಎಂದರೆ ಕಲಿಯುವಿಕೆ, ಮ ಎಂದರೆ ಧಾರಣೆಯ ಮಧ್ಯಕಾಲ, ಸ್ಮೃ. ಸ. ಎಂದರೆ ಸ್ಮೃತಿ ಸಮನ್ವಯ. ಅವಸರದ ಕಲಿಯುವಿಕೆಗೆ ಅನುಕೂಲವಾದ ಸನ್ನಿವೇಶವಾವುದೆಂಬುದನ್ನು ಕಂಡುಹಿಡಿಯಬೇಕಾಗಿದ್ದಾಗ ನಾವು ಕಲಿಯುವಿಕೆಗೆ ಅನುಕೂಲವಾದ ಸನ್ನಿವೇಶಗಳನ್ನು ಬದಲಾಯಿಸುತ್ತೇವೆ; ಧಾರಣೆಯ ಕಾಲವನ್ನು ಕಡಿಮೆ ಮಾಡುತ್ತೇವೆ ಮತ್ತು ಸ್ಮೃತಿಸಮನ್ವಯ ಕಾಲವನ್ನು ಹಾಗೇ ಇಡುತ್ತೇವೆ. ಧಾರಣೆಯ ನಿಯಮಗಳನ್ನು ಕಂಡು ಹಿಡಿಯಬೇಕಾಗಿದ್ದಾಗ ನಾವು ಅದರ ಮಧ್ಯಕಾಲದ ಅಳತೆಯನ್ನು ಬದಲು ಮಾಡುತ್ತೇವೆ ಇಲ್ಲವೆ ಯೋಜ್ಯನನ್ನು ಕಾರ್ಯಾಂತರದಲ್ಲಿ ಮಗ್ನನನ್ನಾಗಿ ಮಾಡುತ್ತೇವೆ ಮತ್ತು ಸ್ಮೃತಿಸಮನ್ವಯವನ್ನು ಹಾಗೇ ಇಡುತ್ತೇವೆ. ನಾವು ಜ್ಞಾಪನಕ್ರಿಯೆಯಲ್ಲಿ ಇಲ್ಲವೆ ಪ್ರತ್ಯಭಿಜ್ಞಾನದಲ್ಲಿ ಕುತೂಹಲಿಗಳಾಗಿದ್ದರೆ ಸ್ಮೃತಿಸಮನ್ವಯದ ಸನ್ನಿವೇಶಗಳನ್ನು ಬದಲಾಯಿಸಿ ಕಲಿಯುವಿಕೆಯ ಮತ್ತು ಧಾರಣೆಯ ಮಧ್ಯಕಾಲಗಳನ್ನು ಹಾಗೇ ಇಡುತ್ತೇವೆ. ಕಲಿಯುವಿಕೆಯ ಸನ್ನಿವೇಶಗಳ ವೈವಿಧ್ಯ: ಒಬ್ಬನಿಗೆ ಒಂದು ಅವತರಣಿಕೆಯನ್ನು ಕಲಿಯಲು ಹೇಳುವುದು ಅರ್ಥಾತ್ ಸುಸಂಬದ್ಧ ವಾಕ್ಯಸಮುದಾಯವನ್ನು ಅಭ್ಯಾಸ ಮಾಡಲು ಹೇಳುವುದು ಅವನಿಗೆ ಸುಸಂಬದ್ಧ ವಸ್ತುನಾಮಗಳನ್ನು ಕಲಿಯಲು ಹೇಳುವುದು, ಅಸಂಬದ್ಧ ವಸ್ತುನಾಮಗಳನ್ನು ಕಲಿಯಲು ಹೇಳುವುದು ಮತ್ತು ಅರ್ಥವಿಲ್ಲದ ಅಕ್ಷರಗಳನ್ನು ಕಲಿಯಲು ಹೇಳುವುದು. ಧಾರಣೆಯ ಮಧ್ಯಕಾಲವನ್ನು ಬದಲಾಯಿಸುವುದು ಎಂದರೆ ಆ ಕಾಲದ ಅಂತರವನ್ನು ಹೆಚ್ಚು ಅಥವಾ ಕಡಿಮೆ ಮಾಡುವುದು. ಸ್ಮೃತಿಸಮನ್ವಯವನ್ನು ಬದಲು ಮಾಡುವುದೆಂದರೆ, ಕಲಿಯಲು ಎದುರಿಟ್ಟ ಅವತರಣಿಕೆಯ ಪಠನದ ಪುನರಾವೃತ್ತಿ ಸಂಖ್ಯೆಯನ್ನು ಬದಲಾಯಿಸುವುದು.

## ಅಂತರಿತ ಕಲಿಯುವಿಕೆ ಮತ್ತು ಅನಂತರಿತ ಕಲಿಯುವಿಕೆ

ಈ ಎರಡು ಬಗೆಯ ಕಲಿಯುವಿಕೆಗಳಲ್ಲಿ ಯಾವುದು ಹೆಚ್ಚು ಲಾಭಕರ ಎಂಬ ಬಗ್ಗೆ ಅನೇಕ ಪ್ರಯೋಗಗಳೂ ವಿವಾದಗಳೂ ನಡೆದವು. ಈಗ ಅಂತರಿತ ಕಲಿಯುವಿಕೆಯಿಂದಲೇ ಹೆಚ್ಚು ಲಾಭವುಂಟೆಂಬ ಅಭಿಪ್ರಾಯ ಮೆಲ್ಲಮೆಲ್ಲನೆ ಬಲಗೊಳ್ಳುತ್ತಿದೆ. ಅದು ಅನಂತರಿತ ಕಲಿಯುವಿಕೆಗಿಂತ ಹೆಚ್ಚು ಕಾಲ ಉಳಿಯುವುದು ಮತ್ತು ಹೆಚ್ಚು ಪರಿಣಾಮಕಾರಿಯಾಗುವುದು. ಪರೀಕ್ಷೆಗೆ ಮುಂಚೆ ವಿದ್ಯಾರ್ಥಿಯೊಬ್ಬನು ಒಂದು ವಿಷಯವನ್ನು ಅವಸರದಿಂದ ಉರುಹೊಡೆಯುವುದರಿಂದ ಅವನು ಪ್ರಥಮಶ್ರೇಣಿಯಲ್ಲೇನೋ ತೇರ್ಗಡೆಯಾದಾನು. ಆದರೆ ಪರೀಕ್ಷೆಯಾದ ಸ್ವಲ್ಪ ಕಾಲದಲ್ಲೇ ಅವನಿಗೆ ಕಲಿತದ್ದೆಲ್ಲ ಮರೆತು ಹೋಗಬಹುದು. ಹಾಗಲ್ಲದೆ ಒಂದು ವಿಷಯವನ್ನು ಸ್ಮೃತಿಗತ ಮಾಡಿಕೊಳ್ಳುವ ಪ್ರಯತ್ನಗಳಲ್ಲಿ ನಡುನಡುವೆ ನ್ಯಾಯವಾದ ಕಾಲಾವಧಿಗಳನ್ನು ಇಟ್ಟುಕೊಂಡರೆ ಹಾಗೆ ಕಲಿತದ್ದು ಮನಸ್ಸಿನಲ್ಲಿ ಬಹಳ ಕಾಲ ನಿಲ್ಲುವುದು.

## ಇಡಿಯಾಗಿ ಮತ್ತು ಬಿಡಿಬಿಡಿಯಾಗಿ ಕಲಿಯುವುದು

ಸಾಮಾನ್ಯವಾಗಿ ಎಲ್ಲರೂ ಕೊಟ್ಟ ವಿಷಯವನ್ನು ಬಿಡಿಬಿಡಿಯಾಗಿ ಕಲಿಯುವುದೇ ರೂಢಿ. ಒಂದು ಪದ್ಯದಲ್ಲಿ ೩೦ ಸಾಲುಗಳಿದ್ದರೆ ಒಂದು ಸಾಲನ್ನು ಕಲಿತು ಅನಂತರ ಇನ್ನೊಂದನ್ನು ಕಲಿಯಹೋಗುವುದು ಸಾಮಾನ್ಯ; ಆದರೆ ಅದು ಅಷ್ಟು ಲಾಭಕರವಾದ ಕ್ರಮವಲ್ಲ ಎಂಬುದು ಸಂಶೋಧನೆಯಿಂದ ತಿಳಿದು ಬಂದಿದೆ. ಇಡಿ ವಿಷಯವನ್ನು ಎತ್ತಿಕೊಂಡು ಕಲಿಯುವ ಕ್ರಮವೇ ಅತ್ಯಂತ ಲಾಭಕರ. ಇಡಿ ಪದ್ಯವನ್ನು ಪದೇ ಪದೇ ಇಡಿಯಾಗಿ ಓದಿ ಅದನ್ನು ಸ್ಮೃತಿಗತ ಮಾಡಿಕೊಳ್ಳುವುದು ಅದರ ಬಿಡಿ ಸಾಲುಗಳನ್ನು ಒಂದೊಂದನ್ನಾಗಿ ತೆಗೆದುಕೊಂಡು ಸ್ಮೃತಿಗತ ಮಾಡಿಕೊಳ್ಳುವುದಕ್ಕಿಂತ ಹೆಚ್ಚು ಫಲಪ್ರದ. ಈ ಎರಡನೆಯ ಕ್ರಮವು ಸುಮಾರು ೨೪೦ ಸಾಲುಗಳವರೆಗೆ ಯೋಗ್ಯವೆಂದು ಕಂಡುಬಂದಿದೆ. ಎರಡನೆಯ ಕ್ರಮದ ಸಾಫಲ್ಯಕ್ಕೆ ಅಪಸಂಯೋಜನೆಗಳ (Erroneous Bonds) ಸಂಖ್ಯೆ ಅದರಲ್ಲಿ ಕಡಿಮೆಯಾಗುವುದೇ ಕಾರಣ. ಪದ್ಯವನ್ನು ಒಂದು ಸಲಕ್ಕೆ ಒಂದು ಸಾಲಿನಂತೆ ಕಲಿಯುವಾಗ ಒಂದು ನುಡಿಯ ಮೊದಲ ಸಾಲಿಗೂ ಕಡೆಯ ಸಾಲಿಗೂ ನಡುವೆ ಒಂದು ವಿಧವಾದ ಸಂಯೋಗ ಉಂಟಾಗುತ್ತದೆ. ಈ ಸಂಯೋಗವನ್ನು ಅನಂತರ ನಿಷ್ಫಲವೆಂದೂ ಬಿಡಬೇಕಾಗುತ್ತದೆ. ಅಲ್ಲದೆ ಒಂದೊಂದೇ ನುಡಿಯನ್ನು ಬಿಡಿಬಿಡಿಯಾಗಿ ಕಲಿತ ನಂತರ ಅವುಗಳ ನಡುವೆ ಸರಿಯಾದ ಸಂಬಂಧವನ್ನು ಕಲ್ಪಿಸುವುದು ಅಪಸಂಯೋಗದ ದೆಸೆಯಿಂದ ಕಷ್ಟತರವಾಗುತ್ತದೆ. ಹಾಗಲ್ಲದೆ ಇಡಿಯಾಗಿರುವ ಕ್ರಮವನ್ನು ಹಿಡಿದರೆ ಯಾವ ನಿಷ್ಫಲ ಸಂಯೋಗವೂ ಉಂಟಾಗದೆ (ಇಡಿ ಪದ್ಯದ ಆದಿ ಅಂತ್ಯಗಳ ಸಂಯೋಗವೊಂದನ್ನು ಬಿಟ್ಟು) ಇರುವುದರಿಂದ ಅಪಸಂಯೋಗಗಳನ್ನು ಆ ಮೇಲೆ ಕಿತ್ತೊಗೆಯುವ ಸಂದರ್ಭ ಬರುವುದೇ ಇಲ್ಲ.

ಇಡಿಯಾಗಿ ಕಲಿಯುವ ಕ್ರಮವು ಮಕ್ಕಳಿಗೆ ಅಷ್ಟು ಯೋಗ್ಯವಲ್ಲವೆಂದು ತೋರುತ್ತದೆ.

ಏಕೆಂದರೆ ಅವರಲ್ಲಿ ನಿರುತ್ಸಾಹ ಉಂಟಾಗುವ ಸಂಭವವಿದೆ. ಒಂದು ನುಡಿಯನ್ನು ಕಲಿತ ಕೂಡಲೆ ಉಂಟಾಗುವ ಉತ್ಸಾಹವು ಮುಂದಿನ ನುಡಿಯನ್ನು ಕಲಿಯಲು ಪ್ರೋತ್ಸಾಹವಾಗಬಹುದು. ಇಡಿಯಾಗಿ ಕಲಿಯುವುದರಲ್ಲಿ ಮಕ್ಕಳಿಗೆ ಈ ಅನುಕೂಲವಿಲ್ಲ. ಅವರು ಧೃತಿಗೆಡದಷ್ಟೇ ದೊಡ್ಡ ಇಡಿ ಅವತರಣಿಕೆಯನ್ನು ಸ್ಮೃತಿಗತಮಾಡಿಕೊಳ್ಳ ಹೇಳುವುದು ಒಳ್ಳೆಯದಾದೀತು. ಮಕ್ಕಳಿಗೆ ಇಡಿ ಕ್ರಮಕ್ಕಿಂತ ಬಿಡಿ ಕ್ರಮವೇ ಪ್ರಶಸ್ತ ಎಂಬ ಅಂಶವು ಇತ್ತೀಚೆಗೆ ವಿಂಚ್ ಮಹಾಶಯನು ನಡೆಸಿದ ಪ್ರಯೋಗಗಳಿಂದ ಸಿದ್ಧವಾಗಿದೆ. ಇಡಿ ಕ್ರಮದ ಇನ್ನೊಂದು ದೋಷವೆಂದರೆ ಕಲಿಯಲು ಕೊಟ್ಟ ವಸ್ತುವು ಸಮರೂಪವಿಲ್ಲದ್ದಾಗಿರಬಹುದು–ಅಂದರೆ ಕೆಲವು ಭಾಗ ಕಷ್ಟವಿರಬಹುದು; ಕೆಲವು ಭಾಗ ಸುಲಭವಿರಬಹುದು: ಅದರಿಂದ ಕಷ್ಟವಾದ ಭಾಗವನ್ನು ಸ್ಮೃತಿಗತ ಮಾಡಿಕೊಳ್ಳಲು ಇಡಿಯನ್ನು ಸಾಮಾನ್ಯವಾಗಿ ಬೇಕಾದ್ದಕ್ಕಿಂತ ಹೆಚ್ಚು ಸಲ ಉರು ಹೊಡೆಯುವ ಅವಶ್ಯಕತೆ ಉಂಟಾಗಬಹುದು.

ಮೇಲೆ ಹೇಳಿದ ದೋಷವನ್ನು ಪರಿಹರಿಸುವ ಸಲುವಾಗಿ ಇಡಿ ಕ್ರಮದ ಬದಲು ಮಿಶ್ರಕ್ರಮವನ್ನು ಸೂಚಿಸಲಾಗಿದೆ. ಈ ಕ್ರಮದ ಪ್ರಕಾರ ಕಲಿಯುವವನು ಆರಂಭದಿಂದ ಮೊದಲನೆಯ ಕಷ್ಟ ಬರುವವರೆಗೆ ಸರಾಗವಾಗಿ ಮುಂದುವರಿಯುತ್ತಾನೆ. ಕಷ್ಟದ ಭಾಗವನ್ನು ಕಲಿಯುವವರೆಗೆ ಅವನು ಅಲ್ಲಿ ಸ್ವಲ್ಪ ನಿಲ್ಲುತ್ತಾನೆ. ಆ ನಂತರ ಅವನು ಪುನಃ ಮೊದಲಿನಿಂದ ಅಂದರೆ (ಮೊದಲನೆಯ ಸಾಲಿನಿಂದ) ಎರಡನೆಯ ಕಷ್ಟಾಂಶ ಬಂದು ಅದನ್ನು ಗೆಲ್ಲುವವರೆಗೆ ಕಲಿಯುತ್ತ ಹೋಗುತ್ತಾನೆ. ಹೀಗೆ ಇಡಿ ಪದ್ಯವನ್ನು ಕಲಿತು ಮುಗಿಸುವವರೆಗೆ ಇದೇ ಕ್ರಮವನ್ನು ಅವನು ಅನುಸರಿಸುತ್ತಾನೆ. ಹೀಗಲ್ಲದೆ ಹೋದರೆ ಅವನು ಪದ್ಯದಲ್ಲಿ ಇರುವ ಕಷ್ಟಾಂಶಗಳನ್ನು ಮೊದಲೇ ಕಲಿತುಕೊಂಡು ಅನಂತರ ಇಡಿ ಪದ್ಯವನ್ನು ಅಭ್ಯಾಸ ಮಾಡಬಹುದು. ಡಾ. ಎಂ.ವಿ. ಗೋಪಾಲಸ್ವಾಮಿ ಕಂಡುಹಿಡಿದ ಮೊದಲ ಪದ್ಧತಿಯನ್ನು "ಪ್ರಗತಿಕ್ರಮ" ಎಂದು ಹೇಳಬಹುದು.

**ಸ್ಮೃತಿಕಾರಕಗಳು:** ಉದ್ದೇಶ ಭೇದದಿಂದ ಸ್ಮೃತಿಗೆ ತಂದುಕೊಳ್ಳುವ ಕ್ರಮದಲ್ಲಿ ಭೇದ ಉಂಟಾಗುತ್ತದೆ. ಶೀಘ್ರಫಲಬೇಕಾಗಿದ್ದರೆ, ಬಿಡಿಯಾಗಿ ಇಲ್ಲವೆ ಅನಂತರಿತವಾಗಿ ಕಲಿಯುವುದು ಉತ್ತಮ. ಕಲಿತದ್ದು ಬಹಳಕಾಲ ನಿಲ್ಲಬೇಕೆಂಬ ಅಪೇಕ್ಷೆ ಇದ್ದರೆ ಇಡಿ ಇಲ್ಲವೆ ಅಂತರಿತ ಕ್ರಮವನ್ನು ಅನುಸರಿಸಬೇಕು. ಕೆಳಗೆ ಕೊಡುವ ನಾಲ್ಕು ಕಾರಕಗಳಲ್ಲಿ ಕೆಲವು ಒಂದು ಕ್ರಮಕ್ಕೆ ಅನುಕೂಲವಾದರೆ, ಇನ್ನು ಕೆಲವು ಮತ್ತೊಂದಕ್ಕೆ ಅನುಕೂಲವಾಗುತ್ತವೆ.

ಆತ್ಮವಿಶ್ವಾಸವು ಬಿಡಿ ಕಲಿಯುವಿಕೆಗೆ ಅನುಕೂಲವಾಗಿದೆ. ಅಂದರೆ ಒಂದು ಸಾಲನ್ನು ಕಲಿತು ಆತ್ಮವಿಶ್ವಾಸ ಪಡೆದು ಮುಂದಿನ ಸಾಲನ್ನು ಕಲಿಯುತ್ತ ಹೋಗುವ ಕ್ರಮದಿಂದ ಮಕ್ಕಳಿಗೆ ಕಲಿಯುವುದು ಸುಲಭವಾಗುತ್ತದೆ.

ಕಾಲಸಾಮೀಪ್ಯವು ಅನಂತರಿತ ಕಲಿಯುವಿಕೆಗೆ ಅನುಕೂಲವಾಗಿದೆ. ಇಲ್ಲಿ ಪುನರಾವೃತ್ತಿಗಳ ನಡುವೆ ಬಿಡುವಿಲ್ಲ.

ಅರ್ಥ, ಸ್ಥೂಲರೇಖೆ, ಮತ್ತು ಸ್ಥೂಲಸಂಬಂಧಗಳು ಎಂಬುದು ಅತ್ಯಂತ ಮುಖ್ಯವಾದ ಕಾರಕ. ಇದು ಇಡಿಯಾಗಿ ಕಲಿಯುವುದಕ್ಕೆ ಅನುಕೂಲ. ಬಿಡಿ ಕಲಿಯುವಿಕೆಯು ಯಾಂತ್ರಿಕ. ಪ್ರತಿಯೊಂದು ಸಾಲನ್ನೂ ಕಲಿತುಕೊಳ್ಳುತ್ತ ಹೋದಾಗ ಇಡಿಯ ಒಂದು ವಿನ್ಯಾಸವನ್ನೇ ಮರೆತುಬಿಡುತ್ತೇವೆ. ಇಡಿ ಕ್ರಮದಲ್ಲಿ ಕಲಿಯಬೇಕಾದ ವಸ್ತುವಿನ ಅರ್ಥ ಮತ್ತು ಸ್ಥೂಲ ವಿನ್ಯಾಸಗಳು ನಮಗೆ ನಿಸ್ಸಂದಿಗ್ಧವಾಗಿ ಗೊತ್ತಾಗುತ್ತವೆ.

ವಿಶ್ರಾಂತಿಯ ಮೂಲಕ ಸಮಗ್ರಗೊಳಿಸುವುದು ಅಂತರಿತ ಕಲಿಯುವಿಕೆಗೆ ಅನುಕೂಲ. ಒಂದೇ ಕಾಲದಲ್ಲಿ ಒಂದೇ ವಸ್ತುವನ್ನು ಅನೇಕ ಸಲ ಪುನರಾವರ್ತಿಸಿದರೆ ಮನಸ್ಸು ಸುಸ್ತಾಗಿ ಅನುಕ್ರಿಯೆಯನ್ನು ತೋರಿಸದಿರಬಹುದು. ಕೆಲ ಪ್ರಯತ್ನಗಳಾದ ಮೇಲೆ ನಡುನಡುವೆ ವಿಶ್ರಾಂತಿ ದೊರಕಿದರೆ ಮನಸ್ಸು ಗ್ರಹಿಸಿದ್ದನ್ನು ಸಮಗ್ರಗೊಳಿಸಿಕೊಂಡು ಆ ಮೂಲಕ ಅದನ್ನು ತನ್ನಲ್ಲಿ ಸ್ಥಿರವಾಗಿ ಇಟ್ಟುಕೊಳ್ಳಬಹುದು.

**ಜಡಸ್ಮೃತಿ:** ಜಡಸ್ಮೃತಿಯಲ್ಲಿ ಪ್ರಾಣಿಗಳಿಗೆ ಸಹಜವಾದ ಜಡಾಭ್ಯಾಸ ಅಡಕವಾಗಿದೆ. ಜಡಾಭ್ಯಾಸವೆಂದರೆ ಅರ್ಥ ತಿಳಿದುಕೊಳ್ಳದೆ ಮತ್ತು ಸಂಬಂಧವನ್ನು ಗ್ರಹಿಸದೆ ಕಲಿಯುವುದು. ಕೆಲವರು ಇದನ್ನು ಭಾವಿಕಸ್ಮೃತಿ ಎನ್ನುತ್ತಾರೆ. ಏಕೆಂದರೆ ಅದರಲ್ಲಿ ಪದಗಳ ಪಾತ್ರ ಪ್ರಮುಖ. ನಾವು ಅರ್ಥವಿಲ್ಲದ ಪದಗಳನ್ನು ಬಳಸಬಹುದು. ಒಂದು ಮೋಟಾರನ್ನು ನಡೆಸಲಾರಂಭಿಸುವುದನ್ನು ಕಲಿಯುವುದಕ್ಕಿಂತ ಕಡಿಮೆ ಭಾವಿಕತ್ವವು ಕೆಲ ಬಗೆಯ ಜಡಸ್ಮೃತಿಯಲ್ಲಿ ಕಂಡು ಬರಬಹುದು.

ನಾವು ಒಂದು ಭಾಷೆಯನ್ನು ಕಲಿಯಲಾರಂಭಿಸಿದಾಗ ನಮ್ಮ ಕಂಠದಲ್ಲಿರುವ ಉಚ್ಚಾರಣೋಪಕರಣಗಳ ಕರ್ಮಾಭ್ಯಾಸವಷ್ಟನ್ನೇ ಮಾಡುತ್ತೇವೆ. ಇದು ಜಡಸ್ಮೃತಿಯ ಕನಿಷ್ಠರೂಪ. ನಮ್ಮ ಭಾಷೆಯಲ್ಲಿರುವ ಅಸಂಬದ್ಧ ವಸ್ತು ನಾಮಗಳನ್ನು ಕಲಿಯುವುದು ಭಾವಿಕತನವನ್ನು ಸಮೀಪಿಸುವ ಸ್ಮೃತಿ. ಇಲ್ಲಿ ಪ್ರತಿ ನಾಮಕ್ಕೂ ಅರ್ಥವಿದೆ; ಆದರೆ ಅವುಗಳ ಇಡಿ ಪಟ್ಟಿಗೆ ಸುಸಂಬದ್ಧವಾದ ಅರ್ಥವಿಲ್ಲ. ನಮ್ಮ ಭಾಷೆಯ ಗ್ರಂಥದಲ್ಲಿ ಇರುವ ಒಂದು ಅವತರಣಿಕೆಯನ್ನು ಗಟ್ಟಿ ಮಾಡುವುದು ಭಾವಿಕ ಸ್ಮೃತಿಯನ್ನು ಸಮೀಪಿಸುವ ಮುಂದಿನ ಹೆಜ್ಜೆ. ಇಲ್ಲಿ ವಾಕ್ಯರಚನೆಯ ದೆಸೆಯಿಂದ ಒಂದು ಸಂಬಂಧದ ಅರಿವಾಗುತ್ತದೆ ಮತ್ತು ಅನೇಕ ನಾಮಗಳು ಏನಾದರೊಂದು ಅರ್ಥ ಕೊಡುತ್ತವೆ. ಆದರೆ ವಿಷಯ ಗೊತ್ತಿಲ್ಲದ ಓದುಗನಿಗೆ ಆ ಇಡಿ ಅವತರಣಿಕೆ ಏನೂ ಅರ್ಥವಾಗದೆಂದೇ ಹೇಳಬೇಕು.

ಈ ಮೂರು ಬಗೆಯ ಕಲಿಯುವಿಕೆಯೂ ಗಿಳಿಯೋದು. ಇಲ್ಲಿ ಅತ್ಯಲ್ಪ ಭಾವಿಕತ್ವವಿದೆ– ಬರಿಯ ಪದಾಭ್ಯಾಸಕ್ಕಿಂತ ಸ್ವಲ್ಪ ಹೆಚ್ಚನ್ನು ಕಲಿಯಲಾಗಿದೆ. ತಮಗೆ ತಿಳಿಯದ ಟಿಪ್ಪಣಿಗಳನ್ನೋ ಪಠ್ಯಪುಸ್ತಕದ ಅವತರಣಿಕೆಗಳನ್ನೋ ಎಷ್ಟೋ ವಿದ್ಯಾರ್ಥಿರತ್ನರು ಈ ಪ್ರಕಾರ ಪದಾಭ್ಯಾಸದಿಂದ ಕಲಿತುಕೊಳ್ಳುತ್ತಾರೆ. ಪರೀಕ್ಷೆಯಲ್ಲಿ ಉತ್ತೀರ್ಣರಾಗುವ ದೃಷ್ಟಿಯಿಂದ ಕೂಡ ಇದು ಗ್ರಾಹ್ಯವಲ್ಲ. ತಾನು ಸ್ಮೃತಿಗತ ಮಾಡಿಕೊಂಡದ್ದರ ಅರ್ಥ ತಿಳಿದುಕೊಳ್ಳದಿದ್ದಲ್ಲಿ ಅದರ ಮೇಲಿನ ಅವನ ಪ್ರಭುತ್ವವು ಅವಲಂಬನೀಯವಾಗದು.

**ಭಾವಿಕ ಸ್ಮೃತಿ:** ವಿದ್ಯಾರ್ಥಿಗೆ ಅತ್ಯವಶ್ಯಕವಾದದ್ದು ಭಾವಿಕ ಸ್ಮೃತಿ. ಎಷ್ಟೋ ವೇಳೆ ಅದರಲ್ಲಿ ಪದಗಳ ಪ್ರಯೋಗವಿರಬಹುದು. ಆದರೆ ಹಾಗೆ ಪದ ಪ್ರಯೋಗವಿರಲೇಬೇಕೆಂಬ ನಿಯಮವಿಲ್ಲ. ಒಬ್ಬನ ರೂಪ, ಒಬ್ಬನ ಧಾಟಿ ಇಲ್ಲವೆ ಟಪ್ಪಾಲುಕಟ್ಟೆ ಇರುವ ಸ್ಥಳ ಮುಂತಾದವನ್ನು ನೆನಪಿಟ್ಟುಕೊಳ್ಳುವಲ್ಲಿ ಪದಗಳ ಅವಶ್ಯಕತೆಯೇ ಇಲ್ಲದಿರಬಹುದು. ಒಬ್ಬನಿಗೆ ಸ್ಮೃತಿಶಕ್ತಿ ಹೆಚ್ಚಾಗಿದೆ, ಮತ್ತೊಬ್ಬನಿಗೆ ಕಡಿಮೆಯಾಗಿದೆ ಎಂದು ಹೇಳುವುದುಂಟು. ಈ ಅರ್ಥದಲ್ಲಿ ಸ್ಮೃತಿಯು ಒಂದೇ ಒಂದು ಕೃತ್ಯ. ಇದು ಸ್ವಲ್ಪ ಮಟ್ಟಿಗೆ ನಿಜ. ಸ್ಮೃತಿ ಪ್ರಯೋಗಗಳು ಬುದ್ಧಿಗಿರುವಂತೆಯೇ ಸ್ಮೃತಿಗೂ ಒಂದು ಸಾಮಾನ್ಯ ಕಾರಕವಿದೆ ಎಂದು ಸಿದ್ಧಮಾಡಿವೆ: ಅದೇ ಆಸಕ್ತಿ, ಅದಲ್ಲದೆ ಚಾಕ್ಷುಷ, ಶ್ರಾವಣ, ಮುಂತಾದ ಸ್ಮೃತಿಗಳ ಸಮುದಾಯಕಾರಕಗಳೂ ಇತರ ವಿಶಿಷ್ಟ ಕಾರಕಗಳೂ ಇವೆ. ಕೆಲವರಿಗೆ ಇನ್ನೊಬ್ಬರ ಮುಖವನ್ನು ನೆನಪಿಟ್ಟುಕೊಳ್ಳುವುದು ಸುಲಭವಾಗಬಹುದು. ಇತರರಿಗೆ ಅವರ ಇಡಿ ಶರೀರವನ್ನು ನೆನಪಿಟ್ಟುಕೊಳ್ಳುವುದು ಸುಲಭವಾಗಬಹುದು. ಇಂಥವು ವಿಶಿಷ್ಟ ಕಾರಕಗಳು.

**ನಶ್ವರ ಹಾಗೂ ಸ್ಥಿರ ಸ್ಮೃತಿಗಳು:** ಕಲಿತ ಕೂಡಲೇ ಹೇಳಬೇಕಾದದ್ದನ್ನು ಕಲಿಯುವಾಗ ವ್ಯಕ್ತಿಯು ತನ್ನ ನಶ್ವರ ಸ್ಮೃತಿ ಶಕ್ತಿಯನ್ನು ಬಳಸುತ್ತಾನೆ. ಕಲಿತ ಕೆಲಕಾಲ ಸಂದ ಅನಂತರ ಹೇಳಬೇಕಾದದ್ದನ್ನು ಕಲಿಯಲು ಅವನು ತನ್ನ ಸ್ಥಿರ ಸ್ಮೃತಿ ಶಕ್ತಿಯನ್ನು ಬಳಸುತ್ತಾನೆ.

ನಶ್ವರ ಸ್ಮೃತಿಯನ್ನು ಪರೀಕ್ಷಿಸಲು ಸ್ಮೃತಿಕ್ಷೇತ್ರ ನಿರ್ಣಯದ ಕ್ರಮವನ್ನು ಅನುಸರಿಸಲಾಗುತ್ತದೆ. ಅಂಕೆಗಳ ಇಲ್ಲವೆ ಅರ್ಥಹೀನ ಅಕ್ಷರಗಳ ಬೇರೆ ಬೇರೆ ಉದ್ದಳತೆಗಳ ಪಂಙ್ತಿಗಳನ್ನು ಯೋಜ್ಯನಿಗೆ ಕೊಡಲಾಗುತ್ತದೆ. ಒಂದು ಸಲ ಓದಿದ ಮೇಲೆ ಎಷ್ಟು ಉದ್ದದ ಪಂಙ್ತಿಯನ್ನು ಸ್ಮೃತಿ ಬಲದಿಂದ ಹೇಳಲು ಬರುತ್ತದೆ ಎಂದು ಅವನನ್ನು ಪರೀಕ್ಷಿಸಲಾಗುತ್ತದೆ. ನಶ್ವರ ಸ್ಮೃತಿಯು ವಯಸ್ಸು ಹೆಚ್ಚಾದ ಹಾಗೆ ಹೆಚ್ಚುತ್ತದೆ. ಮಕ್ಕಳ ನಶ್ವರ ಸ್ಮೃತಿ ಕ್ಷೇತ್ರವು ಎಂದೂ ಪ್ರೌಢರ ನಶ್ವರ ಸ್ಮೃತಿಕ್ಷೇತ್ರದ ದಕ್ಷತೆಯನ್ನು ಸಾಧಿಸಿದ್ದಿಲ್ಲ. ಮ್ಯೂವನ್ನನು ೧೩ ವರ್ಷಗಳವರೆಗೆ ನಶ್ವರ ಸ್ಮೃತಿಯ ಬೆಳವಣಿಗೆಯು ಬಹಳ ಮಂದ ಎಂದೂ ೧೩ ರಿಂದ ೧೬ರವರೆಗೆ ಶೀಘ್ರವೆಂದೂ ೨೨ರಿಂದ ೨೫ರವರೆಗೆ ಪರಮಾವಧಿಕವೆಂದೂ ಅನಂತರ ಸ್ವಲ್ಪ ಇಳಿತಾಯ ಬರುವುದೆಂದೂ ಸಿದ್ಧ ಮಾಡಿದ್ದಾನೆ. ನಶ್ವರ ಸ್ಮೃತಿ ಶಕ್ತಿಯು ಸತತೋದ್ಯಮವನ್ನು ಆಧರಿಸಿದೆ.

ಶಿಕ್ಷಣದ ದೃಷ್ಟಿಯಿಂದ ಸ್ಮೃತಿಕ್ಷೇತ್ರ ಶೋಧವು ಗಣ್ಯ. ಏಳು ವರ್ಷದ ಒಂದು ಮಗು ೬ ಅಕ್ಷರಗಳನ್ನು ನೆನಪಿಟ್ಟುಕೊಳ್ಳಬಹುದಾದರೆ ಅದಕ್ಕಿಂತ ಹೆಚ್ಚು ಅಕ್ಷರಗಳುಳ್ಳ ಪದವನ್ನು ಅದು ಕಲಿಯುವುದು ಅಸಾಧ್ಯವಾದೀತು. ಒಮ್ಮೆ ಅದು ಕಲಿಯಬೇಕಾದರೆ ಹೆಚ್ಚು ಅಕ್ಷರಗಳುಳ್ಳ ಪದವನ್ನು ಬೇರೆ ಬೇರೆ ಘಟಕಗಳನ್ನಾಗಿ ವಿಂಗಡಿಸಬಹುದು. ಸ್ಮೃತಿಕ್ಷೇತ್ರವನ್ನು ಚಾಕ್ಷುಷ ಇಲ್ಲವೆ ಶ್ರಾವಣ ರೀತಿಯಿಂದ ಪರೀಕ್ಷಿಸಬಹುದು.

ಪದಗಳನ್ನು ಅಥವಾ ಅಂಕೆಗಳನ್ನು ಯೋಜ್ಯನಿಗೆ ಒಂದೊಂದಾಗಿ ಬರೆದು ತೋರಿಸಬಹುದು ಅಥವಾ ಓದಿ ಹೇಳಬಹುದು. ಶ್ರಾವಣ ಸ್ಮೃತಿ ಕ್ಷೇತ್ರದ ಪ್ರಮಾಣವು

ಅನೇಕ ವೃತ್ತಿಗಳಿಗೆ ಸೇರಲು ನಿಕಷವಾಗಬಹುದು. ಅಂಥ ವೃತ್ತಿ ಎಂದರೆ ಟೆಲಿಫೋನ್ ಕಚೇರಿಯ ಕೆಲಸ. ಅಲ್ಲಿ ಕೇಳಿದ ಅಂಕೆಗಳನ್ನು ನೆನಪಿಟ್ಟುಕೊಳ್ಳುವ ಶಕ್ತಿ ಚೆನ್ನಾಗಿರಬೇಕು.

## ಸ್ಥಿರ ಸ್ಮೃತಿಯ ಸ್ವರೂಪವನ್ನು ಕಂಡುಹಿಡಿಯುವ ಬಗೆಗಳು

**ಗ್ರಹಣಧಾರಣ ಕ್ರಮ:** ಒಂದು ವಿಧದ ರೂಲು ದೊಣ್ಣೆಯ ಮೇಲೆ ಮೊದಲೇ ಅರ್ಥಹೀನವಾದ ಅಕ್ಷರಗಳನ್ನು ಇಲ್ಲವೆ ಅಂಕೆಗಳನ್ನು ಬರೆದು ಅಂಟಿಸಲಾಗುತ್ತದೆ. ಈ ರೂಲು ದೊಣ್ಣೆಯು ಸ್ಮೃತಿಪ್ರಯೋಗಧಾನಿಯ ಒಂದು ಅಂಗ. ಪ್ರಯೋಗಧಾನಿಯ ಕೀಲಿಯನ್ನು ತಿರುಗಿಸಿದಾಗ ಅದರೊಳಗೆ ನಿಲ್ಲಿಸಿದ ರೂಲು ದೊಣ್ಣೆಯ ಮೇಲಿನ ಒಂದೊಂದೇ ಅಂಕೆ ಅಥವಾ ಅಕ್ಷರವು ಒಂದು ಸಲಕ್ಕೆ ಯೋಜ್ಯನಿಗೆ ಕಾಣುತ್ತ ಹೋಗುವುದು. ಈ ಅಂಕೆಗಳ ಅಥವಾ ಅಕ್ಷರಗಳ ಪಂಜ್ತೆಯನ್ನು ಲಯಬದ್ಧವಾಗಿ ಕ್ರಮೇಣ ತೋರಿಸಲಾಗುತ್ತದೆ. ತನ್ನ ಕಣ್ಣನ್ನು ಪ್ರಯೋಗಧಾನಿಯ ಕಿಂಡಿಯ ಮೇಲೆ ನಿಲ್ಲಿಸಿ ಪಂಜ್ತೆಯಲ್ಲಿರುವ ಎಲ್ಲ ಅಂಕೆಗಳೂ ಮುಗಿಯುವವರೆಗೆ ಒಂದೊಂದನ್ನೇ ಗಟ್ಟಿಯಾಗಿ ಹೇಳುತ್ತ ಹೋಗುತ್ತಾನೆ; ಅನಂತರ ಅದನ್ನು ನೆನಪಿನಿಂದ ಹೇಳಲು ಪ್ರಯತ್ನಿಸಲಾಗುತ್ತದೆ; ಮತ್ತೂ ಸೋತರೆ ಮತ್ತೊಮ್ಮೆ ಅದೇ ರೀತಿ ಪ್ರದರ್ಶಿಸಲಾಗುತ್ತದೆ; ಮತ್ತೂ ಸೋತರೆ ಹೀಗೇ ಅವನು ಪೂರ್ತಿಯಾಗಿ ನೆನಪಿನಿಂದ ಹೇಳಲು ಶಕ್ತನಾಗುವವರೆಗೆ ಪಂಜ್ತೆಪ್ರದರ್ಶನ ನಡೆಯುತ್ತದೆ. ಇದು ಕಲಿಯುವ ಕ್ರಮ. ಒಂದೆರಡು ದಿವಸಗಳಾದ ಮೇಲೆ ಅಥವಾ ಒಂದು ವಾರದ ನಂತರ ಪುನಃ ಅವನು ಕಲಿತ ಪಂಜ್ತೆಯನ್ನು ನೆನಪಿನಿಂದ ಹೇಳಲು ಪ್ರಯತ್ನಿಸುತ್ತಾನೆ. ಆಗಲೂ ಅವನು ಸೋತರೆ ಮೊದಲಿನ ಕ್ರಮದಲ್ಲೇ ಅವನು ಕಲಿಯಬೇಕು. ಕಲಿಯಲೆಂದು ಮರಳಿ ಮರಳಿ ಮಾಡಿದ ಪ್ರಯತ್ನಗಳ ಸಂಖ್ಯೆಯಲ್ಲಿರುವ ವ್ಯತ್ಯಾಸವು ಧಾರಣೆ ಎನಿಸುತ್ತದೆ.

**ಹೇಳಿಕೊಡುವ ಕ್ರಮ:** ಈ ಕ್ರಮದಲ್ಲಿ ಅಕ್ಷರ ಅಥವಾ ಅಂಕೆಯ ಪಂಜ್ತೆಯನ್ನು ಯೋಜ್ಯನು ಅಸಮರ್ಪಕವಾಗಿ ಕಲಿತಾಗ ಅವನು ಸರಿಯಾಗಿ ಇಡಿ ಪಂಜ್ತೆಯನ್ನು ನೆನಪಿನಿಂದ ಹೇಳಲು ಶಕ್ತನಾಗುವವರೆಗೆ ಎಷ್ಟು ಸಲ ನಡುನಡುವೆ ಅವನಿಗೆ ಹೇಳಿಕೊಡಬೇಕಾಗುತ್ತದೆ ಎಂಬುದನ್ನು ಅಳೆಯಲಾಗುತ್ತದೆ.

**ಗಳಿಕೆಯ ಕ್ರಮ:** ಈ ಕ್ರಮದಲ್ಲಿ ಗೊತ್ತುಮಾಡಿದಷ್ಟು ಸಲ ಯೋಜ್ಯನೆದುರಿಗೆ ಅರ್ಥಹೀನ ಅಕ್ಷರಗಳನ್ನು ಪ್ರದರ್ಶಿಸಲಾಗುತ್ತದೆ. ಈ ಪ್ರದರ್ಶನವನ್ನು ಅವನೆದುರಿಗೆ ಆ ಪಂಜ್ತೆಯನ್ನವನು ಸಂಪೂರ್ಣ ಕಲಿಯಲು ಸಾಕಾಗುವಷ್ಟು ಇಡಲಾಗುವುದಿಲ್ಲ. ಪಂಜ್ತೆಯ ಪ್ರದರ್ಶನದ ಪ್ರತಿಯೊಂದು ಪುನರಾವೃತ್ತಿಯಲ್ಲೂ ಯೋಜ್ಯನು ಉತ್ತರೋತ್ತರವಾಗಿ ಕಂಡ ಎರಡೆರಡು ಅಕ್ಷರಗಳನ್ನು ಒಟ್ಟೊಟ್ಟಿಗೆ ಓದುತ್ತಾನೆ. ಸ್ವಲ್ಪ ವೇಳೆ ಕಳೆದ ಮೇಲೆ ಅಕ್ಷರಯುಗಗಳಲ್ಲಿಯ ಮೊದಲನೆಯ ಅಕ್ಷರವನ್ನು ಯೋಜ್ಯನಿಗೆ ಅಕ್ರಮಬದ್ಧವಾಗಿ ತೋರಿಸಲಾಗುತ್ತದೆ ಮತ್ತು ಅವನು ಆ ಅಕ್ಷರಗಳಲ್ಲಿಯ ಮತ್ತೊಂದು ಅಕ್ಷರವನ್ನು ನೆನಪಿನಿಂದ ಹೇಳಬೇಕಾಗುತ್ತದೆ. ಅವನು ಎಷ್ಟು ಸಲ ಸರಿಯಾಗಿ ನೆನಪಿನಿಂದ ಹೇಳುತ್ತಾನೆ ಎಂಬುದು 'ಗಳಿಕೆ' ಎನಿಸುತ್ತದೆ. ಪ್ರತಿಯೊಂದು ಅಕ್ಷರಯುಗದ ಮತ್ತೊಂದು ಅಕ್ಷರವನ್ನು

ನೆನಪು ಮಾಡಿಕೊಂಡು ಹೇಳಲು ಯೋಜ್ಯನು ಎಷ್ಟು ವೇಳೆ ತೆಗೆದುಕೊಳ್ಳುತ್ತಾನೆ ಎಂಬುದನ್ನು ಕಾಲಮಾಪಕವು ಅಳೆದು ತೋರಿಸುತ್ತದೆ. ಇದನ್ನು ಗಳಿಕೆಯ ಕಾಲವೆಂದು ಹೇಳಬಹುದು.

ಈ ಎಲ್ಲ ಪ್ರಯೋಗಗಳಲ್ಲಿ ಅರ್ಥವಿಲ್ಲದ ಅಕ್ಷರಗಳನ್ನೋ ಅಂಕೆಗಳನ್ನೋ ಉಪಯೋಗಿಸಬೇಕು. ಏಕೆಂದರೆ ಸನ್ನಿವೇಶವನ್ನು ಒಂದೇ ರೂಪದಲ್ಲಿ ಇಡುವುದಕ್ಕೋಸ್ಕರ ಕಲಿಯಬೇಕಾದ ವಸ್ತುವು ಎಷ್ಟು ಸರಳವಾಗಿದ್ದರೂ ಅಷ್ಟು ಉತ್ತಮ. ಅರ್ಥವತ್ತಾದ ಅಕ್ಷರಗಳನ್ನು ಬಳಸಿದರೆ ಬೇರೆ ಬೇರೆ ವ್ಯಕ್ತಿಗಳ ನೆನಪಿನ ಫಲಿತಾಂಶಗಳು ತುಲನೀಯವಾಗುವುದಿಲ್ಲ. ಅರ್ಥಹೀನ ಅಕ್ಷರಗಳು ಹೀಗಿರುತ್ತವೆ: ಡಾಕ್, ಘುವ್, ಕಿಗ್, ಮಿಗ್ ಮುಂತಾದವು.

## ಮರೆವು

ಧಾರಣ ಪ್ರಯತ್ನದಲ್ಲಿ ಆಗುವ ಸೋಲೇ ಮರೆವು. ಮರೆವೆಂಬುದು ಕೇವಲ ನಿಷೇಧರೂಪದ್ದಲ್ಲ. ಅದೊಂದು ಸಕ್ರಿಯವಾದ ಪ್ರಕ್ರಿಯೆ. ಸತತೋದ್ಯಮವನ್ನು ಮನ್ನಿಸಿ ತಕ್ಕ ವಿಶ್ರಾಂತಿಯ ಮೂಲಕ ಕಲಿತದ್ದನ್ನು ಸಮಗ್ರ ಗಳಿಸಿಕೊಂಡು ಮನಸ್ಸಿನಲ್ಲಿ ಬೇರೂರಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ಕೊಟ್ಟರೆ ಮರೆವು ಕಡಿಮೆಯಾಗುತ್ತದೆ. ನಿದ್ರೆಯಲ್ಲಿ ಅದರ ಕಾರ್ಯವೇ ಇಲ್ಲ. ಅಜ್ಞಾತ ಪ್ರಜ್ಞೆಯಲ್ಲಿ ಕಲಿತ ವಸ್ತುವನ್ನು ಸಕ್ರಿಯವಾಗಿ ಮತ್ತು ಸರಭಸವಾಗಿ ತುಂಬುವುದರಿಂದಲೇ ಮರೆವಿನ ಕೆಲವು ಪ್ರಕಾರಗಳು ಉಂಟಾಗುತ್ತವೆ. ಮರೆಯುವ ಕಾರ್ಯದಲ್ಲಿ ಕಾಲವು ಗಣ್ಯವಾದ ಕಾರಕ ಎಂದು ಹೇಳುವುದುಂಟು. ಇದು ಸರಿಯಲ್ಲ. ಇದರ ಪ್ರಕಾರ ಮರೆವಿಗೆ ಕೇವಲ ಕಾಲ ಕಳೆಯುವುದೇ ಕಾರಣ ಎಂದಾಗುತ್ತದೆ. ಆದರೆ ಮರೆವಿಗೆ ಕಳೆದ ಕಾಲವಷ್ಟೇ ಅಲ್ಲದೆ ಅದಕ್ಕೂ ಹೆಚ್ಚಾಗಿ ಆ ಕಾಲದಲ್ಲಿ ಏನಾಯಿತು ಎಂಬುದು ಬಹು ಮುಖ್ಯ. ಅದರಲ್ಲಿಯೂ ಒಂದು ಘಟನೆ ಸಂಭವಿಸಿದ ಅಪರ ಕ್ಷಣದಲ್ಲಿಯೇ ಏನಾಯಿತು ಎಂಬುದು ಅತಿ ಮುಖ್ಯ. ಕಲಿತ ವಸ್ತುವನ್ನು ಮನಸ್ಸಿನಲ್ಲಿ ಬೇರೂರಿಸಿಕೊಳ್ಳಲು ಈ ಸಮಯದಲ್ಲಿ ತಕ್ಕ ಕ್ರಮವನ್ನು ಕೈಕೊಂಡರೆ ವರ್ಷಗಳು ಕಳೆದು ಹೋಗುವುದು ಕೂಡ ಅದರ ಮೇಲೆ ಬಹಳ ಪರಿಣಾಮಕಾರಿಯಾಗದು. ಮರೆವು ಒಂದು ಸ್ವಾಭಾವಿಕವಾದ ಕಾರ್ಯ. ನೀವೇನಾದರೂ ಹೊಸದನ್ನು ಕಲಿಯುವಾಗ ನೀವು ನಿಮ್ಮ ಮನೋಭೂಮಿಕೆಯನ್ನು ಬದಲಾಯಿಸುತ್ತೀರಿ; ಹೊಸದೊಂದು ಸನ್ನಿವೇಶವನ್ನು ತಂದು ನೀವು ಹೊಸ ಕಾರಕವನ್ನು ಒಡ್ಡುತ್ತೀರಿ. ಮೊದ ಮೊದಲು ಅದನ್ನು ನಿಮ್ಮ ಮನಸ್ಸು ಒಪ್ಪುವುದಿಲ್ಲ ಮತ್ತು ಅದನ್ನು ಕಿತ್ತೆಸೆಯಲು ಪ್ರಯತ್ನಿಸುತ್ತದೆ. ಆದುದರಿಂದ ಮರೆವೆಂಬುದು ಹಿಂದಿದ್ದ ಸಮಸ್ಥಿತಿಗೆ ಪುನಃ ಮರಳುವ ಕಾರ್ಯ; ಯಥಾಸ್ಥಿತಿಯನ್ನು ಉಳಿಸಿಕೊಂಬ ಬಯಕೆ. ಈ ಬಯಕೆಯನ್ನು ಯಶಸ್ವಿಯಾಗಿ ತಡೆದಾಗ ಧಾರಣೆಯು ಸಾಧ್ಯವಾಗುತ್ತದೆ.

**ಮರೆವಿನ ಪ್ರಮಾಣ:** ಯಾವ ವಸ್ತುವನ್ನು ತೆಗೆದುಕೊಂಡಾಗಲೂ ಕಲಿತ ಕೂಡಲೆ ಕೆಲಕಾಲ ಮರೆವಿನ ಕಾರ್ಯವು ಶೀಘ್ರವಾಗಿ ನಡೆದು ಅನಂತರ ಅದು ಬಹಳ ಮೆಲ್ಲಗೆ

ಸಾಗುತ್ತದೆ. ಎಬ್ಬಿಂಗ್ ಹಾಸನ ಪ್ರಕಾರ ಕಲಿತ ವಸ್ತುವಿನಲ್ಲಿ ಅರ್ಧದಷ್ಟು ಕಲಿತ ಅರ್ಧ ಗಂಟೆಯಲ್ಲಿಯೇ ಮರೆತು ಹೋಗುತ್ತದೆ, ಮೂರನೆಯ ಎರಡು ಅಂಶವು ಎಂಟು ಗಂಟೆಗಳ ನಂತರ ಮತ್ತು ಒಂದು ತಿಂಗಳಲ್ಲಿ ೪/೫ ಅಂಶ ಮರೆತು ಹೋಗುತ್ತದೆ. ಜಾಹೀರಾತಿನ ಪ್ರಪಂಚದಲ್ಲಿ ಇದರ ಪರಿಣಾಮವು ಗಮನಾರ್ಹ. ಕಲಿಯುವಿಕೆಯಲ್ಲಿ ಜ್ಞಾಪಿಸಿಕೊಳ್ಳುವ ಕಾರ್ಯವು ಲಾಭಕರ ಎಂಬುದನ್ನೂ ಮರೆಯುವ ಕಾರ್ಯ ಶೀಘ್ರವಾಗಿ ನಡೆಯುವ ಕಲಿಯುವಿಕೆಯ ಉತ್ತರಕಾಲವೇ ಜ್ಞಾಪಿಸಿಕೊಳ್ಳಲು ಅತ್ಯುತ್ತಮ ಅವಧಿ ಎಂಬುದನ್ನೂ ಮರೆವಿನ ಪ್ರಮಾಣವು ತೋರಿಸುತ್ತದೆ. ಕಲಿಯಲು ಬಳಸಿದ ಕಾಲದ ಅರ್ಧವನ್ನು ಜ್ಞಾಪಿಸಿಕೊಳ್ಳಲು ಉಪಯೋಗಿಸಬೇಕು ಎಂಬುದು ಒಂದು ಸಾಮಾನ್ಯ ನಿಯಮ.

**ಮರೆವಿನ ಕಾರಣಗಳು:** ಮರೆವಿನ ಕಾರಣಗಳು ಎರಡು: ಮಸುಕಾಗುವುದು ಮತ್ತು ಅಡ್ಡಿಯಾಗುವುದು. ಮಿದುಳಿನಲ್ಲಿ ನಡೆಯುವ ನರಗಳ ಚಟುವಟಿಕೆಯ ಪರಿಣಾಮಗಳೊಂದಿಗೆ ಒಂದಲ್ಲ ಒಂದು ವಿಧದಿಂದ ಸ್ಮೃತಿಯು ಸಂಬಂಧಿಸಿದೆ. ಈ ಪರಿಣಾಮಗಳನ್ನು ಮಿದುಳಿನ ಲಾಂಛನಗಳು ಅಥವಾ ಸ್ಮೃತಿ ಲಾಂಛನಗಳು ಎಂದು ಕರೆಯಬಹುದು. ಆದರೆ ಉಕ್ತ ಪರಿಣಾಮಗಳು ನಿರೀಕ್ಷಣೀಯವಲ್ಲ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಪುನಃ ಪ್ರಚೋದಿಸದಿರುವ ಮಿದುಳಿನ ಲಾಂಛನಗಳು ಕ್ರಮಶಃ ಮಸುಕಾಗುತ್ತ ಹೋಗುವುದು ಬಹುಶಃ ಮರೆವಿನ ಮುಖ್ಯ ಕಾರಣವಾಗಿದೆ. ಜ್ಞಾಪಿಸಿಕೊಳ್ಳಲು ಸಾಕಾಗದಷ್ಟು ದುರ್ಬಲವಾದ ಒಂದು ಲಾಂಛನವು ಪ್ರತ್ಯಭಿಜ್ಞಾನಕ್ಕೆ ಸಾಕಾಗಬಹುದು; ಆದರೆ ಅದನ್ನು ಪುನಃ ಪ್ರಚೋದಿಸದಿದ್ದರೆ, ಅದು ಕ್ರಮೇಣ ಮಸುಕಾಗುತ್ತ ಹೋಗಿ, ಕೊನೆಯಲ್ಲಿ ಸಂಪೂರ್ಣ ನಷ್ಟವಾಗಿ, ನಮಗೆ ಯಾವ ಜಾಗರಿತ ಅನುಭವವನ್ನೂ ಉಂಟು ಮಾಡುವುದಿಲ್ಲ.

ಕೆಲ ಮನಃಶಾಸ್ತ್ರಜ್ಞರ ಪ್ರಕಾರ ಮಿದುಳಿನ ಯಾವು ಲಾಂಛನವೂ ಸಂಪೂರ್ಣವಾಗಿ ನಶಿಸಿ ಹೋಗುವುದಿಲ್ಲ. ಈ ಅಭಿಪ್ರಾಯವನ್ನು ಪರಾಮರ್ಶಿಸಲು ಸಾಧ್ಯವಿಲ್ಲ. ಆದರೆ ಜಾಗರಿತ ಜ್ಞಾಪಕವನ್ನು ಉಂಟುಮಾಡುವ ಹಂತವನ್ನು ಮೀರಿಯೂ ಮಿದುಳಿನ ಲಾಂಛನಗಳು ಉಳಿಯಬಲ್ಲವು ಎಂಬುದಕ್ಕೆ ಬೇಕಾದಷ್ಟು ಪ್ರಮಾಣಗಳಿವೆ. ಈ ವಿಷಯದಲ್ಲಿ ಪುನಃ ಕಲಿಯುವುದು ಎಂಬ ಕಾರ್ಯವು ಬಲಿಷ್ಠ ಕಾರಣಗಳಲ್ಲಿ ಒಂದಾಗಿದೆ. ನಾವು ಒಂದು ಪದ್ಯವನ್ನು ಬಾಯಿಪಾಠ ಮಾಡಿ ಅದರ ಒಂದು ಸಾಲನ್ನು ಜ್ಞಾಪಿಸಿಕೊಳ್ಳಲಾರದಷ್ಟು ಚೆನ್ನಾಗಿ ಮರೆತು ಬಿಟ್ಟಿರಬಹುದು. ಹೀಗಿದ್ದರೂ ಅದನ್ನು ಪುನಃ ಕಲಿಯಲಾರಂಭಿಸಿದರೆ ಅದನ್ನು ನಾವು ಎಂದೂ ಕಲಿಯದೆ ಇದ್ದ ಅಷ್ಟೇ ಉದ್ದದ ಪದ್ಯವನ್ನು ಸ್ಮೃತಿಗತ ಮಾಡಿಕೊಳ್ಳುವುದಕ್ಕಿಂತ ಕಡಿಮೆ ಕಾಲದಲ್ಲಿ ಸ್ಮೃತಿಗತ ಮಾಡಿಕೊಳ್ಳಬಲ್ಲೆವೆಂಬುದು ಅನುಭವಕ್ಕೆ ಬರುತ್ತದೆ. ಅಲ್ಲದೆ ಸಾಮಾನ್ಯವಾಗಿ ಎಂದೂ ಜ್ಞಾಪಿಸಿಕೊಳ್ಳಲಾರದ ಸ್ಮೃತಿಗಳು ಮನೋವಶೀಕರಣ ಮಾಡಿದಾಗಿನ ಅವಸ್ಥೆಯಲ್ಲಿ ಪುನಃ ಮೂಡುತ್ತವೆ ಎಂಬುದು ಮತ್ತೊಂದು ಪ್ರಮಾಣ.

**ಸ್ಮೃತಿ ಬಾಧೆ:** ಮರೆವಿಗೆ ಮಿದುಳಿನ ಲಾಂಛನ ಮಸುಕಾಗುವುದೊಂದೇ ಕಾರಣವಲ್ಲ. "ಗಂಟಲಲ್ಲಿ ಇವನ ಹೆಸರು ಇದೆ, ಆದರೆ ಬಾಯಿಗೇಕೋ ಈಗ ಬರುವುದಿಲ್ಲ" ಎಂದು ನೆನಪು ಮಾಡಿಕೊಳ್ಳಲು ನಾವು ಒದ್ದಾಡುವ ಪ್ರಸಂಗದಲ್ಲಿ ನಮಗೆ ಉಂಟಾಗುವ ಮರೆವೇ ಬೇರೆ. ಶಾಲೆಯಲ್ಲಿ ನಮಗೆ ಉಪಾಧ್ಯಾಯರು ವ್ಯಾಕರಣದಲ್ಲಿ ಕಲಿಸಿದ ಪ್ರಕೃತಿ ಮತ್ತು ಧಾತು ಎಂಬವುಗಳಲ್ಲಿಯ ವ್ಯತ್ಯಾಸ ಮರೆತು ಹೋದ ಮರೆವಿನ ಲಕ್ಷಣವೇ ಬೇರೆ. ಮೊದಲನೆಯ ಪ್ರಕರಣದಲ್ಲಿ ಮಿದುಳಿನ ಲಾಂಛನವು ಅಳಿಸಿ ಹೋಗಿಲ್ಲ, ಒಂದು ಅರ್ಥದಲ್ಲಿ ಅಲ್ಲಿ ನೆನಪಿದೆ. ಆದರೆ ಏನೋ ಒಂದು ಅಡ್ಡ ಬಂದು ಅದು ಹೊರ ಬರದಂತಾಗುತ್ತದೆ. ನೆನಪಿಗೆ ಅಡ್ಡ ಬರುವ ಕಾರಣಗಳಲ್ಲಿ ಬಾಧೆ ಅಥವಾ ಅಡ್ಡಿಯೂ ಒಂದು. ನಾವು ಚಳಗೇರಿಯನ್ನು ನೆನಪು ಮಾಡಿಕೊಳ್ಳಲು ಹೋದಾಗ ಎಷ್ಟು ಪ್ರಯತ್ನಪಟ್ಟರೂ ಚಳ್ಳಕೆರೆಯೇ ನಮ್ಮ ಬಾಯಿಗೆ ಬರಬಹುದು. ಎಲ್.ಜೆ. ಬೇಂದ್ರೆಯವರನ್ನು ನೆನೆಸಿಕೊಳ್ಳಲು ಪ್ರಯತ್ನಿಸಿದಾಗ ಎಷ್ಟು ಒದ್ದಾಡಿದರೂ ದ.ರಾ ಅಲ್ಲದೆ ಎಲ್.ಜೆ ನೆನಪಾಗುವುದಿಲ್ಲ!

ಅಭ್ಯಾಸಬಲದ ಸ್ಮೃತಿಯಲ್ಲಿಯೂ ಇಂಥ ಅಡ್ಡಿ ಅಡ್ಡಬರಬಹುದು. ಟೆನಿಸ್ ಆಟವನ್ನು ನೆನಪು ಮಾಡಿಕೊಳ್ಳಲು ಹೋದಾಗ ಬ್ಯಾಡ್‌ಮಿಂಟನ್ ಆಟವೇ ನೆನಪಾಗುವುದು ಇದಕ್ಕೆ ಒಂದು ಉದಾಹರಣೆ. ಎರಡು ಸದೃಶವಾದ ಭಾವ ಪ್ರಕಾರಗಳು ತಲೆಯಲ್ಲಿ ಇದ್ದಾಗ ಅವುಗಳಲ್ಲಿ ಒಂದು ಹೆಚ್ಚು ಸಲ, ಹೆಚ್ಚು ಇತ್ತೀಚೆಗೆ ಅಥವಾ ಹೆಚ್ಚು ತೀವ್ರವಾಗಿ ಹಿಂದೆ ಪ್ರಚೋದಿತವಾಗಿದ್ದರೆ ಆ ಅನಪೇಕ್ಷಿತವಾದ ಭಾವಪ್ರಕಾರವೇ ನೆನಪಿಗೆ ಬರಬಹುದು. ಈ ರೀತಿ ಸ್ಮೃತಿಗಳು ಅಡ್ಡಿಗೆ ಒಳಪಟ್ಟಾಗ ನಾವು ಒದ್ದಾಡುವುದು ವ್ಯರ್ಥ. ಇಂಥ ಸಮಯದಲ್ಲಿ ಎಲ್ಲವನ್ನೂ ತಲೆಯಿಂದ ಆಚೆಗೆ ನೂಕಿ ಕದಡಿದ ಮಿದುಳಿಗೆ ಶಾಂತವಾಗಲು ಸಮಯ ಕೊಡುವುದು ಒಳ್ಳೆಯದು. ಆಗ ಅತ್ಯಂತ ಅನಿರೀಕ್ಷಿತವಾಗಿ ಅಪೇಕ್ಷಿತವಾದ ವಿಷಯವು ಮೆಲ್ಲಗೆ ನಮ್ಮ ನೆನಪಿಗೆ ಬರಬಹುದು.

**ಅಪಧಾಯಕ ಅಂತರ್‌ಗ್ರಹ:** ಕಲಿಯುವುದಾದ ಕೂಡಲೆ ಮತ್ತೇನಾದರೂ ಮಾನಸಿಕ ಚಟುವಟಿಕೆ ನಡೆದರೆ ಅದರಲ್ಲೂ ಆ ಚಟುವಟಿಕೆ ಮೊದಲನೆಯದನ್ನೇ ಹೋಲುತ್ತಿದ್ದರೆ ಸ್ಮೃತಿಗೆ ಅದು ಅಡ್ಡಿಯಾಗುವ ಸಂಭವ ಹೆಚ್ಚು. ಮೇಣದ ಮೈಮೇಲೆ ಮುದ್ರೆಗಳು ಬೀಳುವಂತೆ ಮಿದುಳಿನ ಮೇಲೆ ಲಾಂಛನಗಳು ಕ್ರಮೇಣ ಬೀಳುತ್ತವೆ. ಅಂಥ ಒಂದು ಮುದ್ರೆಯ ಮೇಲೆ ಮತ್ತೊಂದು ಮುದ್ರೆ ಬಿದ್ದರೆ ಮೊದಲನೆಯದು ಮಸುಕಾಗುವುದು ಸ್ವಾಭಾವಿಕ ಎಂದು ಊಹಿಸಲಾಗಿದೆ. ಆದರೆ ಈ ಮಾತಿಗೆ ವುಡ್ ವರ್ತನ ಪ್ರಯೋಗವು ಪೋಷಕವಾಗಿದೆ. ಒಬ್ಬನು ಒಮ್ಮೆ ಮರದ ಮೇಲಿಂದ ಬಿದ್ದು ಮೂರ್ಛೆಯನ್ನು ಹೊಂದಿದನು. ಸ್ವಲ್ಪ ಕಾಲದಲ್ಲಿಯೇ ಅವನು ಸುಧಾರಿಸಿಕೊಂಡು ಮನೆಗೆ ಹೋಗಲು ಶಕ್ತನಾದನು. ಹೋಗುವಾಗ ಅವನು ಒಂದು ತರದ ಅರಳು ಮರಳು ಸ್ಥಿತಿಯಲ್ಲಿ ಇದ್ದರೂ ಅನಂತರ ಅವನಿಗೆ ಸರಿಯಾಗಿ ಜ್ಞಾನಬಂದಿತು. ಆದರೆ ಅವನು ಸಂಪೂರ್ಣ ಸುಧಾರಿಸಿದಾಗ ಅವನಿಗೆ ಬಿದ್ದದ್ದಾಗಲಿ ಮನೆಗೆ ಹೋದದ್ದಾಗಲಿ ಬೀಳುವುದಕ್ಕೆ ಮುಂಚೆ

೧೫ ನಿಮಿಷಗಳವರೆಗೆ ನಡೆದ ಯಾವ ಘಟನೆಯಾಗಲಿ ನೆನಪಾಗಲಿಲ್ಲ. ಅವನ ಮರೆವಿಗೆ ಮಿದುಳಿನ ವಿಷಮಾವಸ್ಥೆಗಳೇ ಕಾರಣವೆಂದು ವುಡ್‌ವರ್ತನ ಮತ.

**ಸ್ಮೃತಿಬಾಧೆಗೆ ಇರುವ ಭಾವನಾತ್ಮಕ ಕಾರಣಗಳು:** ಸ್ಮೃತಿಬಾಧೆಗೆ ಅನೇಕ ಸಲ ಕಾರಣವಾಗುವುದು ಅಭಿಜ್ಞೆಯಲ್ಲ. ಭಾವನೆಯೇ. ಹೆದರಿಕೆ, ಧೃತಿಗೇಡು ಅಥವಾ ಕ್ಷೋಭೆ ಜ್ಞಾಪಿಸಿಕೊಳ್ಳುವುದಕ್ಕೆ ಅಡ್ಡಿಯಾಗಬಹುದು. ಕೆಲವು ಸ್ಮೃತಿಬಾಧೆಗಳಿಗೆ ದಮನವೂ ಕಾರಣವಾಗುತ್ತದೆ. ದಮನವೆಂದರೆ ಬೇಡವಾದ ಕಲ್ಪನೆಯನ್ನು ಅಥವಾ ಸ್ಮೃತಿಯನ್ನು ನಮ್ಮ ಪ್ರಜ್ಞೆಯಿಂದ ಹೊರದೂಡುವುದು. ಇದು ಸಂಭವಿಸಿದಾಗ ದಮನಶಕ್ತಿಗಳು ಬೇಡವಾದ ಕಲ್ಪನೆಯ ಮೇಲೆ ಅಷ್ಟೇ ಅಲ್ಲದೆ ಅದನ್ನು ಸಂಪರ್ಕಬಲದಿಂದ ನೆನಪಿಗೆ ತಂದುಕೊಡಬಹುದಾದ ಇತರ ಎಲ್ಲ ವಸ್ತುಗಳನ್ನೂ ಅದುಮುತ್ತವೆ. ಈ ಪ್ರಕಾರ ಯಾವುದಾದರೂ ಒಂದು ವಿಷಯವನ್ನು ನಮಗೆ ಚೆನ್ನಾಗಿ ಸ್ಮೃತಿಪಥಕ್ಕೆ ತಂದುಕೊಳ್ಳಲು ಸಾಧ್ಯವಾಗದೆ ಆಶ್ಚರ್ಯವಾದಾಗ ಅಂಥ ಮರೆವಿಗೆ ನಮಗೆ ಮರೆತುಬಿಡಬೇಕೆನ್ನಿಸಿದ ಯಾವುದೋ ಒಂದು ಆ ವಿಷಯಕ್ಕೆ ಸಂಬಂಧಿಸಿರುವುದೇ ಕಾರಣ.



## ಅಧ್ಯಾಯ ಒಂಭತ್ತು

# ಮೂಲ ಪ್ರವೃತ್ತಿಗಳು

### ಕ್ಷೇಪ ಮತ್ತು ಮೂಲ ಪ್ರವೃತ್ತಿ

**ಹೋಲಿಕೆ:** ಎರಡೂ ಆನುವಂಶಿಕ ಮತ್ತು ಅಶಿಕ್ಷಿತ; ಅನುಭವದಿಂದ ತಿದ್ದಿಕೊಳ್ಳಲು ಬರುವಂಥವು. ಕ್ಷೇಪವನ್ನು ಹೇಗೆ ಅಂತರ್‌ಗ್ರಹಣಮಾಡಿಕೊಳ್ಳಲು ಅಥವಾ ಅನುಕೂಲಿಸಿಕೊಳ್ಳಲು ಸಾಧ್ಯವೋ ಹಾಗೇ ಮೂಲ ಪ್ರವೃತ್ತಿಯನ್ನಾದರೂ ಅದು ತನ್ನ ಮೂಲ ಸ್ವರೂಪದಲ್ಲಿ ಒಬ್ಬನ ಹಿತಕ್ಕೆ ಅನಾನುಕೂಲವಾಗಿದ್ದರೆ, ಅವನು ಅದನ್ನು ಬದಲಾಯಿಸಿಕೊಳ್ಳಬಹುದು ಇಲ್ಲವೆ ತಾತ್ಕಾಲಿಕವಾಗಿ ತಡೆಗಟ್ಟಿ ಹಿಡಿದಿಟ್ಟುಕೊಳ್ಳಬಹುದು.

**ವ್ಯತ್ಯಾಸ:** ಕ್ಷೇಪಕ್ರಿಯೆಯು ಸಾಮಾನ್ಯವಾಗಿ ಬಹುಬೇಗ ನಡೆಯುವಂಥದು; ಕಣ್ಣು ಮಿಟುಕಿಸುವುದರ ಹಾಗೆ ಕ್ಷಣಿಕವಾದರೂ ಆದೀತು. ಆದರೆ ಒಂದು ಮೂಲಪ್ರವೃತ್ತಿಯು ಉಂಟುಮಾಡಿದ ಕಾರ್ಯಸಂತಾನವು ಮುಗಿಯಲು ಗಂಟೆಗಳಾದರೂ ಬೇಕಾದಾವು; ಉದಾ: ಪ್ರಾಣಿಗಳಲ್ಲಿ ಕಂಡು ಬರುವ ಆಹಾರ ಹುಡುಕುವ ಚೋದನೆ ತಣಿಯಲು ಗಂಟೆಗಳು ಬೇಕು. ಮೂಲಪ್ರವೃತ್ತಿ ಉಂಟುಮಾಡುವ ಕಾರ್ಯವು ಸಂಪೂರ್ಣ ಜಾಗ್ರದವಸ್ಥೆಯದು; ಕ್ಷೇಪಕ್ರಿಯೆಯು ಅನಿಚ್ಛಾಕೃತವಾಗಿ ನಡೆಯುತ್ತದೆ– ಪ್ರಜ್ಞೆಗೆ ಗೊತ್ತಾಗುವ ಮೊದಲೇ ಅದು ಮುಗಿದು ಹೋಗಬಹುದು. ಕ್ಷೇಪಶಕ್ತಿಯು ನಮ್ಮ ಹುಟ್ಟುಗುಣ. ಆದರೆ ಮೂಲಪ್ರವೃತ್ತಿಯ ಕಾರ್ಯವು ನರಮಂಡಲದ ಬೆಳವಣಿಗೆಯನ್ನು ಅವಲಂಬಿಸಿರುವುದರಿಂದ, ಕಾಮದಂತಹ ಮೂಲಪ್ರವೃತ್ತಿಯು ನಮ್ಮ ಜೀವನದಲ್ಲಿ ತಕ್ಕಮಟ್ಟಿಗೆ ತಡವಾಗಿ ಉದಯಿಸುತ್ತದೆ.

### ಮೂಲಪ್ರವೃತ್ತಿಯ ಲಕ್ಷಣ

ಲಾಯಡ್ ಮಾರ್ಗನ್ನನ ಪ್ರಕಾರ ಮೂಲಪ್ರವೃತ್ತಿಯ ವರ್ತನೆಗೆ ನಾಲ್ಕು ಸಹಜ ಲಕ್ಷಣಗಳಿವೆ: ಇಡಿ ಅವಯವಿಯನ್ನೇ ಮಗ್ನಗೊಳಿಸುವ ಜಟಿಲ ಕಾರ್ಯಸಂತಾನವನ್ನು ಮಾಡುವುದು; ಅಂಥ ಕಾರ್ಯ ಸಂತಾನವು ಅವಯವಿಯ ಜೀವಕ್ಕೆ ಪೋಷಕವಾಗುವಂತಿರುವುದು; ಒಂದೇ ಜಾತಿಗೆ ಸೇರಿದ ಎಲ್ಲವೂ ಅಂಥ ಕಾರ್ಯಸಂತಾನಗಳನ್ನು ಎಸಗುವುದು; ಅವನ್ನು ಕಲಿಯಬೇಕಾಗಿಲ್ಲ–ಮೊದಲಿನ ಸಲವೇ

ಅವನ್ನು ಸಮರ್ಪಕವಾಗಿ ಎಲ್ಲವೂ ಮಾಡಲು ಬರುವಂತಿರುವುದು. ಮೂಲಪ್ರವೃತ್ತಿಯ ಈ ಲಕ್ಷಣವನ್ನು ಲಾಯಡ್ ಮಾರ್ಗನ್ ಹೇಳಿದ್ದು ೧೮೯೬ರಲ್ಲಿ. ಆದರೆ ಅದು ಇಂದಿಗೂ ಗ್ರಾಹ್ಯವಾಗಿದೆ. ಆ ಲಕ್ಷಣವು ಮನುಷ್ಯನಿಗಿಂತ ಹೆಚ್ಚಾಗಿ ಪ್ರಾಣಿ, ಹಕ್ಕಿ ಮತ್ತು ಹುಳುಗಳ ಮೂಲಪ್ರವೃತ್ತಿಯ ವರ್ತನೆಗೆ ಅನ್ವಯಿಸುತ್ತದೆ.

**ಮೆಕ್‌ಡೂಗಲ್ಲನು ಕೊಟ್ಟ ಲಕ್ಷಣ:** ಮೂಲಪ್ರವೃತ್ತಿಗಳೆಂದರೆ ಆಗರ್ಭ ಪ್ರವೃತ್ತಿಗಳು. ಅವು ಒಂದು ಜಾತಿಗೆ ಸಾಧಾರಣ. ಅವು ನಮ್ಮ ಲಕ್ಷ್ಯವನ್ನು ಸೆಳೆದು ಕೆಲ ಬಗೆಯ ವಸ್ತು ಅಥವಾ ಸನ್ನಿವೇಶಗಳಲ್ಲಿ ನಮ್ಮನ್ನು ಆಸಕ್ತರನ್ನಾಗಿ ಮಾಡುವುವು. ಇದು ಮೂಲಪ್ರವೃತ್ತಿಗಳ ಅಭಿಜ್ಞಾಮುಖ. ಅವು ಈ ವಸ್ತುಗಳ ಕಡೆಗೆ ನಾವು ಏನಾದರೊಂದು ಭಾವನೆಯನ್ನು ತಾಳುವಂತೆ ಮಾಡುತ್ತವೆ. ಇದು ಅವುಗಳ ಭಾವನಾಮುಖ. ಅಲ್ಲದೆ ಅವು ಅಂಥ ವಸ್ತುಗಳ ಕಡೆಗೆ ಒಂದು ಬಗೆಯಿಂದ ವರ್ತಿಸುವಂತೆ ಇಲ್ಲವೆ ವರ್ತಿಸಬೇಕೆಂಬ ಚೋದನೆ ನಮ್ಮಲ್ಲಿ ಉಂಟಾಗುವಂತೆ ಮಾಡುತ್ತವೆ. ಇದು ಅವುಗಳ ಸಂಕಲ್ಪಮುಖ. ಅವನ ಪ್ರಕಾರ ಈ ಮುಖತ್ರಯದಲ್ಲಿ ಭಾವನಾಮುಖಕ್ಕೆ ಹೆಚ್ಚು ಪ್ರಾಧಾನ್ಯ. ಹೆದರಿಕೆ, ಹಸಿವು ಮತ್ತು ಕಾಮ ಮುಂತಾದ ಅಶುದ್ಧ ಮಾನುಷ ಭಾವನೆಗಳು ಜೀವ ಪೋಷಕವಾದ ಚಟುವಟಿಕೆಯತ್ತಣ ಪ್ರವೃತ್ತಿಗಳೊಡನೆ ಸಂಬಂಧಿಸಿವೆ. ಮೂಲ ಪ್ರವೃತ್ತಿಯ ಈ ಲಕ್ಷಣವು ಮಾರ್ಗನ್ನನ ಲಕ್ಷಣಕ್ಕೆ ವಿರುದ್ಧವಾಗಿಲ್ಲ. ಎರಡರ ನಡುವಿನ ವ್ಯತ್ಯಾಸವು ಹೆಚ್ಚಾಗಿ ಅರ್ಥಪ್ರಾಧಾನ್ಯಕ್ಕೆ ಸಂಬಂಧಿಸಿದ್ದು. ಮಾರ್ಗನ್ನನು ಪ್ರಾಣಿಗಳ ಮೂಲಪ್ರವೃತ್ತಿಯನ್ನು ಲಕ್ಷ್ಯವಾಗಿಟ್ಟುಕೊಂಡಿದ್ದರೆ, ಮೆಕ್‌ಡೂಗಲ್ಲನು ಮನುಷ್ಯರ ಮೂಲಪ್ರವೃತ್ತಿಯನ್ನು ಮುಖ್ಯವಾಗಿ ಲಕ್ಷ್ಯದಲ್ಲಿಟ್ಟುಕೊಂಡು ಲಕ್ಷಣಿಸಿದ್ದಾನೆ.

**ಮಾಲಾಕ್ಷೇಪ ಸಿದ್ಧಾಂತ:** ಪ್ರಾಣಿಗಳ ಮೂಲಪ್ರವೃತ್ತಿಯ ವರ್ತನೆಗೆ ದೂರದ ಗುರಿಯಷ್ಟೇ ಅಲ್ಲ, ಹತ್ತಿರದ ಗುರಿ ಕೂಡ ಇಲ್ಲ ಎಂದು ಕೆಲ ಲೇಖಕರು ಹೇಳುತ್ತಾರೆ. ಅರ್ಥಾತ್ ಅದು ಸಂಕಲ್ಪಾತ್ಮಕವಲ್ಲ ಎಂಬುದು ಅವರ ಅಭಿಪ್ರಾಯ. ಅವರ ಪ್ರಕಾರ ಪ್ರಾಣಿಗಳ ಮೂಲಪ್ರವೃತ್ತಿಯ ವರ್ತನೆಯು ಹೊಂದಿಕೊಂಡ ಕ್ಷೇಪಗಳ ಮಾಲೆ– ಆ ಮಾಲೆಯಲ್ಲಿಯ ಪ್ರತಿಯೊಂದು ಅನುಕ್ರಿಯೆಯೂ ಅದರ ಮುಂದಿನ ಅನುಕ್ರಿಯೆಗೆ ಪ್ರೇರಣೆಯಾಗುತ್ತದೆ; ಅದರಿಂದ ಒಂದೇ ಒಂದು ಪ್ರೇರಣೆಯು ಒಂದು ಇಡಿ ಅನುಕ್ರಿಯಾಸಂತಾನಕ್ಕೆ ಕಾರಣವಾಗಬಲ್ಲುದು. ಈ ಅಭಿಪ್ರಾಯವು ಸರಿಯಲ್ಲ. ನಿಷ್ಕೃಷ್ಟವಾದ ಅರ್ಥದಲ್ಲಿ ಕ್ಷೇಪವೆಂದರೆ ಮಿದುಳಿನ ಸಹಾಯವಿಲ್ಲದೆಯೇ ಅನಿಚ್ಛಾಕೃತವಾಗಿ ಉಂಟಾಗುವ ಅನುಕ್ರಿಯೆ. ಇನ್ನು ಕ್ಷೇಪಕ್ಕೆ ವಿಶಾಲಾರ್ಥವನ್ನು ಕೊಟ್ಟು ಆಂತರಿಕ ಅಥವಾ ಬಾಹ್ಯರೂಪದ ಮತ್ತು ನರಮಂಡಲದ ಯಾವುದಾದರೂ ಮಟ್ಟದಿಂದ ಉಂಟಾಗುವ ಒಂದು ಅನುಕ್ರಿಯೆ ಎಂದು ಹೇಳುವುದಾದರೆ ಅದರಲ್ಲಿ ವಿಶೇಷವೇನೂ ಇಲ್ಲ; ಮೂಲಪ್ರವೃತ್ತಿಯ ವರ್ತನೆಯು ಶರೀರಾಧೀನ ಎಂಬುದಷ್ಟೇ ಅದರಿಂದ ಸಿದ್ಧವಾಗುತ್ತದೆ. ಆದರೆ ಮಾಲಾಕ್ಷೇಪ ಸಿದ್ಧಾಂತಿಗಳು ನಿರ್ದೇಶಿಸಬೇಕೆಂದಿರುವುದು ಮೂಲಪ್ರವೃತ್ತಿಯ ಚಟುವಟಿಕೆಯು ಮಿದುಳಿಗೆ ಸಂಬಂಧಿಸಿದರೂ ಸಂಕಲ್ಪಕ್ಕೆ ಸಂಬಂಧಿಸಿಲ್ಲ ಎಂಬುದಾಗಿ. ಈ ಅಭಿಪ್ರಾಯವು ಅಸಮಂಜಸ. ತನ್ನ ಮೊಟ್ಟೆಯಿಂದ ಮರಿ ಹೊರಗೆ ಬರುತ್ತದೆ ಎಂಬುದರ ಮುನ್ನೋಟ ಅದರ ಮೇಲೆ

ಕುಳಿತುಕೊಳ್ಳುವ ಕೋಳಿಗಿಲ್ಲ ಎಂಬ ಮಾತೇ ಒಂದು; ಮೊಟ್ಟೆಯ ಮೇಲೆ ಕಾವಿಗೆ ಕೂತುಕೊಳ್ಳಲು ಅದಕ್ಕೆ ಇಷ್ಟವೇ ಇಲ್ಲ. ಎಂಬ ಮಾತು ಇನ್ನೊಂದು. ಮೂಲಪ್ರವೃತ್ತಿಯ ಚಟುವಟಿಕೆಯಲ್ಲಿ ವೈವಿಧ್ಯವಿಲ್ಲದ ಚಲನಸಂತಾನಗಳ ಪುನರಾವೃತ್ತಿ ಇದ್ದಿದ್ದರೆ ನಾವು ಮಾಲಾಕ್ಷೇಪ ಸಿದ್ಧಾಂತವನ್ನು ಒಪ್ಪಬಹುದಾಗಿತ್ತು. ಆದರೆ ವೈವಿಧ್ಯಪೂರ್ಣ ಪ್ರಯತ್ನದಿಂದ ಮುಂದೊತ್ತಿಕೊಂಡು ಹೋಗುವುದು ಅಂಥ ಚಟುವಟಿಕೆಯ ಮುಖ್ಯ ಲಕ್ಷಣವೆಂದು ಬಹಳ ಹಿಂದೆಯೇ ಲಾಯಡ್ ಮಾರ್ಗನ್ ತೋರಿಸಿಕೊಟ್ಟಿದ್ದಾನೆ. ಅತ್ಯಂತ ಕೆಳಮಟ್ಟದ ಜೀವಿಗಳಲ್ಲಿಯೂ ಮೂಲಪ್ರವೃತ್ತಿಯ ವರ್ತನೆಯು ಮೂಲತಃ ಶಿಥಿಲ. ಕುರುಡಿ ಅಥವಾ ಕಡಿಜೀರಂಗಿ ಹುಳು (Mason Wasp) ತನ್ನ ನಿಶ್ಚೇಷ್ಟ ಬಲಿಯನ್ನು ಗೂಡಿನೊಳಗೆ ಎಳೆದುಕೊಂಡು ಹೋಗುವಾಗ ನಿರ್ದಿಷ್ಟ ಚಲನಸಂತಾನವನ್ನು ಮಾಡುವುದಿಲ್ಲ. ಅದು ಮಾಡುವುದು ಹೊತ್ತುಕೊಂಡು ಹೋಗುವ ಕೆಲಸ. ಅಂದರೆ ಇಂದ್ರಿಯ ಪ್ರತ್ಯಕ್ಷದಿಂದ ನಿರ್ದಿಷ್ಟವಾದ ಸಂಕಲ್ಪಾತ್ಮಕ ಚಟುವಟಿಕೆಯನ್ನು ಅದು ನಡೆಸುತ್ತದೆ. ಅದು ಸಾಕ್ಷಾತ್ತಾಗಿ ಮಾಡುವ ಚಲನವಲನಗಳು ಪರಿಸ್ಥಿತಿಗೆ ತಕ್ಕಂತೆ ಭಿನ್ನವಾಗಬಹುದು. ತನ್ನ ಮರಿಗಳ ಆಹಾರಕ್ಕಾಗಿ ಎಳೆದುಕೊಂಡು ಬಂದ ಹುಳುವನ್ನು ಒಂದು ಎತ್ತರದ ಜಾಗದ ಮೇಲಿಂದ ತೆಗೆದುಕೊಂಡು ಹೋಗಬೇಕಾಗಿದ್ದರೆ ಇಲ್ಲವೆ ಅಡ್ಡ ಬಂದ ಯಾವುದಾದರೂ ಒಂದು ದೊಡ್ಡ ವಸ್ತುವನ್ನು ಸುತ್ತುವರಿದು ತೆಗೆದುಕೊಂಡು ಹೋಗಬೇಕಾಗಿದ್ದರೆ ಅದು ಮಾಡುವ ಪ್ರಯತ್ನವೇ ಬೇರೆ. ಗೂಡಿನಬಾಯಿ ಚಿಕ್ಕದಾಗಿದ್ದು ತಾನು ತಂದ ಹುಳುವೇ ದೊಡ್ಡದಾಗಿದ್ದರೆ ಗೂಡಿನ ಬಾಯಿಯನ್ನು ಅಗಲ ಮಾಡುವ ಅದರ ಪ್ರಯತ್ನವೇ ಬೇರೆ. ಎರಡನೆಯ ಪ್ರಯತ್ನ ಮಾಡುವಾಗ ಅದರ ಚಲನಗಳ ಅಭ್ಯಸ್ತಾನುಕ್ರಮದಲ್ಲಿ ಸಂಪೂರ್ಣ ಬದಲಾವಣೆ ಆಗಿರುತ್ತದೆ. ಅದು ಹೀಗೆ ಸಂದರ್ಭಾನುಸಾರ ಭಿನ್ನ ಪ್ರಯತ್ನ ಮಾಡಲು ತನ್ನ ಬಲಿಯನ್ನು ಗೂಡಿನೊಳಗೆ ಎಳೆದುಕೊಳ್ಳುವ ಸಂಕಲ್ಪ ಅದಕ್ಕೆ ಇರುವುದೇ ಕಾರಣ.

ಮೇಲು ಮಟ್ಟದ ಜೀವಿಗಳಲ್ಲಿಯ ಮೂಲಪ್ರವೃತ್ತೀಯ ವರ್ತನೆಯಲ್ಲಿ ಇನ್ನೂ ಹೆಚ್ಚು ಶೈಥಿಲ್ಯ ಕಂಡುಬರುತ್ತದೆ. ಒಂದು ಹಕ್ಕಿಯು ಗೂಡು ಕಟ್ಟಲು ಹೊರಟಾಗ ಪರಿಸ್ಥಿತಿಗನುಗುಣವಾಗಿ ತನ್ನ ಕಾರ್ಯವನ್ನು ಹೊಂದಿಸಿಕೊಳ್ಳಬೇಕಾಗುತ್ತದೆ–ತಾನು ಗೂಡು ಕಟ್ಟಲು ಬಯಸಿದ ಪೊಟ್ಟರೆಯ ಆಕೃತಿ, ತನಗೆ ಸಿಕ್ಕಿದ ಕಟ್ಟುವ ಸಾಮಾನು, ಗೂಡಿನ ಪೂರ್ಣ ಸ್ವರೂಪ ಮುಂತಾದವುಗಳನ್ನು ನೋಡಿಕೊಂಡು ಅದು ಕೆಲಸ ಮಾಡಬೇಕಾಗುತ್ತದೆ. ಅಂಥ ವೈವಿಧ್ಯ ಪೂರ್ಣ ಚಟುವಟಿಕೆಯನ್ನು ನಿರ್ದಿಷ್ಟ ಅನಿಚ್ಛಾಕೃತ ಪ್ರೇರಣಾನುಕ್ರಿಯೆಗಳ ಸೂತ್ರದಿಂದ ವಿವರಿಸಲು ಶಕ್ಯವಿಲ್ಲ. ಈ ಮಟ್ಟದಲ್ಲಿಯ ಮೂಲಪ್ರವೃತ್ತಿಯ ವರ್ತನೆಗೆ ದೂರದ ಉದ್ದೇಶವಿಲ್ಲದೆ ವಿವರಣೆ ಕೊಡುವುದು ಕಷ್ಟ. ಒಂದು ಕಡ್ಡಿ ಇಟ್ಟು ಮತ್ತೊಂದು ಕಡ್ಡಿಯನ್ನಿಡಬೇಕೆಂಬುದಕ್ಕಿಂತ ಹೆಚ್ಚಿನ ಮುನ್ನೋಟವಿಲ್ಲದೆ–ತಾನು ಕಟ್ಟಲಿರುವ ಗೂಡಿನ ಕಲ್ಪನೆ ಅಥವಾ ಪ್ರತಿಮೆ ಅದರ ತಲೆಯಲ್ಲಿ ಇಲ್ಲದೆ–ಅದು ಗೂಡು ಕಟ್ಟಲು ಹೊರಡುತ್ತದೆ ಎಂಬುದು ಅತ್ಯಂತ ಅಸಂಭವ. ಹೀಗಿದ್ದರೂ ತದ್‌ವಿರುದ್ಧವಾಗಿ ಬೇರೆ ಯಾವ ವಿವರಣೆ ಕೊಡಹೋದರೂ ಅನೇಕ ತೊಂದರೆಗಳು ಅಡ್ಡ ಬರುತ್ತವೆ. ಹೇಗೆಂದರೆ ತಾನು ಕಟ್ಟುವ ಗೂಡಿನ ಕಲ್ಪನೆ ಹಕ್ಕಿಗೆ ಮೊದಲೇ ಇತ್ತೆಂದು ಭಾವಿಸಿದರೆ, ಮೊದಲನೆಯ ಬಾರಿಗೆ

ಗೂಡು ಕಟ್ಟಹೋದ ಅಂಥ ಹಕ್ಕಿಗೆ ಅದು ಎಲ್ಲಿಂದ ಬಂತು ಎಂದು ಯಾರಾದರೂ ಕೇಳಬಹುದು. ಅದರ ತಾಯಿಯ ಗೂಡನ್ನು ನೋಡಿದ ನೆನಪು ಅದಕ್ಕೆ ಇದೆ ಎಂದು ಉತ್ತರ ಕೊಟ್ಟರೆ ಕಾಗೆಯ ಗೂಡಿನಲ್ಲಿ ಹುಟ್ಟಿದ ಕೋಗಿಲೆಯಂತಹ ಹಕ್ಕಿಗೆ ತನ್ನ ಜಾತಿಗೆ ಸಹಜವಾದ ಗೂಡಿನ ಕಲ್ಪನೆ ಎಲ್ಲಿಂದ ಬರಬೇಕು? ಎಂದು ಮತ್ತೆ ಪ್ರಶ್ನೆ ಎದ್ದೀತು. ಏಕೆಂದರೆ, ಕೋಗಿಲೆಯಂತಹ ಪರಪುಷ್ಟ ಹಕ್ಕಿಯು ಎಂದೂ ಕಾಗೆಯ ಗೂಡಿನಂಥ ಗೂಡನ್ನು ಕಟ್ಟುವುದಿಲ್ಲ. ಇದಕ್ಕಿರುವ ಒಂದೇ ಒಂದು ಉತ್ತರವೆಂದರೆ ಗೂಡಿನ ಕಲ್ಪನೆಯು ಅಂಥ ಪರಪುಷ್ಟ ಮರಿಗೆ ಆನುವಂಶಿಕವಾಗಿ ಬಂದಿದೆ ಎಂಬುದೇ. ಇದು ಕುಲಸ್ಮೃತಿವಾದಿಗಳ ಮತ. ಆದರೆ ವರ್ತನೆಯ ಮಾದರಿಗಳಿಂದ ಭಿನ್ನವಾದ ಸ್ಮೃತಿಗಳೂ ಪ್ರತಿಮೆಗಳೂ ಆನುವಂಶಿಕವಾಗಿ ಬರುವುದಿಲ್ಲ ಎಂಬ ಈವರೆಗಿನ ಅನುಭವವು ಮೇಲಿನ ಮತಕ್ಕೆ ಮಾರಕವಾಗಿದೆ. ಹೀಗಿದ್ದರೂ ಹಕ್ಕಿಯ ಮರಿಯು ಭಿನ್ನ ಜಾತಿಯ ಹಕ್ಕಿಯ ಗೂಡಿನಲ್ಲಿ ಹುಟ್ಟಿ ಹೊರಬಿದ್ದು ತನ್ನ ಜಾತಿಯ ಹಕ್ಕಿಗಳು ಕಟ್ಟುವ ಗೂಡಿನ ಮಾದರಿಯನ್ನು ಕಾಣುವ ಮೊದಲೇ ಗೂಡು ಕಟ್ಟಲು ಹೋಗಿ, ಸ್ವಜಾತಿಗೆ ಸಹಜವಾದ ಮಾದರಿಯ ಗೂಡನ್ನು ಯಶಸ್ವಿಯಾಗಿ ಕಟ್ಟುವ ಉದಾಹರಣೆಯಿಂದ ಅದಕ್ಕೆ ಸ್ವಜಾತಿಗೆ ಸಹಜವಾದ ಗೂಡಿನ ಮಾದರಿಯ ಅಸ್ಪಷ್ಟ ಅಥವಾ ಅತ್ಯಂತ ಸ್ಥೂಲರೂಪದ ಕಲ್ಪನೆಯಾದರೂ ಆನುವಂಶಿಕವಾಗಿ ಬಂದಿರುತ್ತದೆ ಎಂಬುದು ಅಬಾಧಿತವಾಗುತ್ತದೆ. ಇದರಿಂದ ಸಿದ್ಧವಾಗುವುದೇನೆಂದರೆ, “ಪ್ರತಿಮೆ ಅಥವಾ ಕಲ್ಪನೆಯು ಆನುವಂಶಿಕವಾಗಿ ಬರುವುದಿಲ್ಲ” ಎಂಬ ಸಿದ್ಧಾಂತವು ಪುನರ್ವಿಮರ್ಶನೀಯ ಎಂಬುದು. ಆದುದರಿಂದ ದೂರೋದ್ದೇಶದ ಪ್ರಶ್ನೆಯನ್ನು ದೂರವಿಟ್ಟರೂ ಮೂಲಪ್ರವೃತ್ತೀಯ ವರ್ತನೆಯು ಸದ್ಯದ ಅನುಭವಗಮ್ಯ ಉದ್ದೇಶವನ್ನೀಡೇರಿಸುವ ಸಂಕಲ್ಪದಿಂದ ಪ್ರಾರಂಭವಾಗುತ್ತದೆ ಎಂಬುದು ನಿರ್ವಿವಾದವೆನಿಸಿದೆ.

ಕ್ಷೇಪಕ್ರಿಯೆಗೂ ಮೂಲಪ್ರವೃತ್ತೀಯ ವರ್ತನೆಗೂ ನಡುವೆ ಇರುವ ವ್ಯತ್ಯಾಸವನ್ನು ಹೀಗೆ ಸಂಕ್ಷೇಪಿಸಬಹುದು: ಕ್ಷೇಪಕ್ರಿಯೆಯು ವಿಶಿಷ್ಟ ಚಲನ ಸಂತಾನಕ್ಕೆ ಪರಿಮಿತ; ಮೂಲಪ್ರವೃತ್ತೀಯ ವರ್ತನೆಯಲ್ಲಿ ಅನುಭವಕ್ಕೆ ಬರುವ ಒಂದು ಸನ್ನಿವೇಶವನ್ನು ನಿರ್ದಿಷ್ಟ ರೀತಿಯಿಂದ ಬದಲಾಯಿಸುವ ಚೋದನೆ ಇದೆ. ಈ ಬದಲಾವಣೆ ತರಲು ಬಳಸುವ ಚಲನಗಳು ಬಹುಮಟ್ಟಿಗೆ ಯಾಂತ್ರಿಕವಾಗಿರಬಹುದು. ಆದರೆ ಅವುಗಳಲ್ಲಿ ಯಾವಾಗಲೂ ಕೆಲಮಟ್ಟಿನ ಬದಲಾವಣೆಗೆ ಅವಕಾಶವಿದೆ.

ಮನುಷ್ಯನ ಮೂಲ ಪ್ರವೃತ್ತಿಗಳು: ಮನುಷ್ಯನ ಮೂಲಭೂತ ಪ್ರವೃತ್ತಿಗಳು ಇಂತಿವೆ: ಆಹಾರಾನ್ವೇಷಣೆ, ಕುತೂಹಲ, ಪಲಾಯನ, ಆಕ್ರಮಣ, ಸ್ವಾವಧಾರಣ, ಕಾಮ ಮತ್ತು ಸಂರಕ್ಷಣೆ ಇವು ಮನಃಶಾಸ್ತ್ರದ ಎಲ್ಲ ಪ್ರಸ್ಥಾನಗಳಿಗೂ ಸಾಧಾರಣವೆನ್ನಬಹುದು. ಅನಂತರ ಸಮಷ್ಟಿಜೀವನ, ಸರ್ಜನೆ ಮತ್ತು ಆರ್ಜನೆ ಎಂಬುವನ್ನೂ ಕೆಲವರು ಸೇರಿಸುತ್ತಾರೆ. ಮೊದಲಿನ ಏಳು ಲಾಯಡ್ ಮಾರ್ಗನ್ನನ ಪ್ರಕಾರ ಜೀವಿಗಳಿಗೆ ಆಜನ್ಮ; ಅವು ಒಂದು ಜಾತಿಯ ಅಥವಾ ಲಿಂಗದ ಎಲ್ಲ ವ್ಯಕ್ತಿಗಳಿಗೂ ಸಾಧಾರಣ. ಅವು ನಮ್ಮ ಬದುಕಿಗೆ ಸಹಕಾರಿಗಳು. ಅಲ್ಲದೆ ಅವು ಕಲಿಯುವಿಕೆ ಅಥವಾ ಪೂರ್ವಾನುಭವದ ಹಂಗಿಲ್ಲದೆ ಸ್ವತಂತ್ರವಾಗಿ ಗೋಚರವಾಗುತ್ತವೆ.

✱

# ಅಧ್ಯಾಯ ಹತ್ತು

# ಭಾವನೆಗಳೂ ರಸಗಳೂ

ಭಾವನೆಯ ಸಾಮಾನ್ಯ ಲಕ್ಷಣಗಳು: ಭಯ, ಕ್ರೋಧ, ಪ್ರತ್ಯಾಶೆ ಶಂಕೆ, ಮತ್ಸರ ಮುಂತಾದ ಭಾವನೆಗಳು ಎಲ್ಲರಿಗೂ ಪರಿಚಿತ. ಶಾರೀರಿಕವಾದ ಸಾಮಾನ್ಯ ಕ್ಷೋಭೆಯಿಂದ ಉಂಟಾಗುವ ಒಂದು ವಿಧದ ಸಂವೇದನೆಯನ್ನು ಭಾವನೆ ಎನ್ನುತ್ತಾರೆ ಕೆಲವರು. ಮತ್ತೆ ಕೆಲವರು ಭಾವನೆಯಲ್ಲಿ ಇರುವುದು ಗತಕಾಲದ ಸುಖ ದುಃಖಗಳ ಸಂಪರ್ಕಜನ್ಯವಾದ ಪುನರುತ್ಥಾನ ಎನ್ನುವರು. ಇನ್ನೂ ಕೆಲವರು ವಿಶಿಷ್ಟ ರೀತಿಯಲ್ಲಿ ವರ್ತಿಸುವ ಪ್ರವೃತ್ತಿಯೇ ಭಾವನೆ– ಅದೊಂದು ಸಾಂಕಲ್ಪಿಕ ಪ್ರಜ್ಞೆ ಎನ್ನುತ್ತಾರೆ. ಇಂಥ ಭಿನ್ನಾಭಿಪ್ರಾಯಗಳ ನಡುವೆ ಸಿಕ್ಕಿದ ನಾವು ಮೊದಲು ಮಾಡತಕ್ಕ ಕೆಲಸವೆಂದರೆ ಕೆಲ ಪ್ರಾತಿನಿಧಿಕ ಭಾವನೆಗಳನ್ನು ತೆಗೆದುಕೊಂಡು ಅವುಗಳ ಪ್ರಕಟನೆಯಲ್ಲಿ ಜಾತೀಯ ಹಾಗೂ ವಿಶಿಷ್ಟ ಲಕ್ಷಣಗಳನ್ನು ನಿರ್ಧರಿಸಲು ತೊಡಗುವುದು.

ಭಾವನೆಯ ಮೊದಲ ಲಕ್ಷಣ ವಿಶಾಲತೆ. ಇಂದ್ರಿಯಾನುಭವದ ಕೆಳಮಟ್ಟದಿಂದ ಮನಸ್ಸಿನ ಭಾವಿಕ ಹಾಗೂ ಕಲ್ಪಕ ಚಟುವಟಿಕೆಗಳವರೆಗೂ ನಿರ್ದಿಷ್ಟ ಜಾತಿಗಳಿಗೆ ಸೇರಿದ ಭಾವನೆಗಳು ಕಂಡುಬರುತ್ತವೆ. ಮರಿಯ ಸುದ್ದಿಗೆ ಹೋದರೆ ಬೆಕ್ಕಿಗೆ ಕೋಪ ಬರುತ್ತದೆ, ಆಟಿಗೆಗಳನ್ನು ಕಸಿದುಕೊಂಡರೆ ಮಗುವಿಗೆ ಸಿಟ್ಟು ಬರುತ್ತದೆ, ಒಬ್ಬನ ಪುಸ್ತಕವನ್ನು ಕಟುವಾಗಿ ಟೀಕಿಸಿದರೆ ಅವನು ಉರಿದೇಳುತ್ತಾನೆ. ಈ ನಿದರ್ಶನಗಳಿಂದ ಕ್ರೋಧವೆಂಬ ಭಾವನೆಯ ಹರಹು ಎಷ್ಟೆಂಬುದು ತಿಳಿದು ಬರುತ್ತದೆ.

ಭಾವನೆಗಳ ಉದ್ಬೋಧನೆಗೆ ಕಾರಣವಾದ ಸನ್ನಿವೇಶಗಳ ವೈವಿಧ್ಯವು ಎರಡನೆಯ ಲಕ್ಷಣ. ಭಂಗ ಅಥವಾ ವಿರೋಧವು ಸಿಟ್ಟಿಗೆ ಕಾರಣವಾಗಬಹುದು. ಯಾವುದಾದರೂ ಒಂದು ಅಪಾಯ ನಮಗೆ ಹೆದರಿಕೆ ಬರಿಸೀತು. ಏನನ್ನಾದರೂ ತಿನ್ನುತ್ತಿರುವಾಗ ಗಲಾಟೆ ಮಾಡಿ ಅಥವಾ ಅದರ ಮರಿಯನ್ನು ಕೆಣಕಲು ಹೋಗಿ ಅಥವಾ ಅದರ ಬಾಲ ಎಳೆದು ನಾಯಿಗೆ ಸಿಟ್ಟು ಬರಿಸಬಹುದು. ಇದರಿಂದ ಯಾವುದಾದರೊಂದು ಭಾವನೆಯನ್ನು ಉದ್ರೇಕಿಸಲು ಸಾಮಾನ್ಯ ರೀತಿಯ ಒಂದು ಸನ್ನಿವೇಶ ಕಾರಣವಾದೀತಲ್ಲದೆ ವಸ್ತುಗಳ ನಿರ್ದಿಷ್ಟ ವರ್ಗವಲ್ಲ. ಸಾಮಾನ್ಯ ಭಾವನೆಯನ್ನು ವ್ಯಕ್ತಮಾಡುವ ವರ್ತನೆಯಾದರೂ ಸಾಮಾನ್ಯ ಲಕ್ಷಣವುಳ್ಳದ್ದು. ಅದು ಆ ಈ ವಸ್ತುಗಳ ವಿಶಿಷ್ಟ ಬಗೆಗೆ ಹೊಂದಿಕೊಳ್ಳುವ

ಪ್ರಯತ್ನವಲ್ಲ; ಒಂದು ನಿರ್ದಿಷ್ಟ ಪ್ರಕಾರದ ಸನ್ನಿವೇಶಕ್ಕೆ ಸಲ್ಲುವ ಸಾಮಾನ್ಯವಾದ ಕಾರ್ಯವಿಧಾನ. ಎಷ್ಟು ಜೋರು ಸಿಟ್ಟು ಬಂದರೂ ನಾಯಿಯ ಸಿಟ್ಟಿನ ಸಾಮಾನ್ಯ ಲಕ್ಷಣ ಒಂದೇ; ಹಲ್ಲು ಕಿಸಿದು, ಗುರುಗುಟ್ಟಿ, ಕಚ್ಚಲು ಯತ್ನಿಸಿ ಮಾಡುವ ಅದರ ಶಾರೀರಿಕ ಚಟುವಟಿಕೆ ಯಾವಾಗಲೂ ಒಂದೇ ಬಗೆಯದಾಗಿರುತ್ತದೆ.

ಭಾವನೆಯ ಎರಡು ಅವಸ್ಥೆಗಳನ್ನು ಪ್ರತ್ಯೇಕಿಸಿ ತಿಳಿದುಕೊಳ್ಳುವುದಗತ್ಯ. ನಿಶ್ಚಿತ ಇಂದ್ರಿಯಾನುಭವ ಅಥವಾ ಕಲ್ಪನೆಗಳಿಂದ ಭಾವನೆಗಳು ಉದ್ಬುದ್ಧವಾಗಬಹುದು: ಒಳ್ಳೆಯ ಸುದ್ದಿ ಕೇಳಿದಾಗ ಸಂತೋಷವಾಗುವುದು ಇದಕ್ಕೆ ನಿದರ್ಶನ. ಎರಡನೆಯದಾಗಿ, ಶಾರೀರಿಕ ಪರಿಸ್ಥಿತಿಯಿಂದ ಭಾವನೆಗಳು ನಮ್ಮಲ್ಲಿ ಏಳಬಹುದು: ಹೆಂಡ ಕುಡಿದಾಗ ನಮ್ಮ ಅನುಭವಕ್ಕೆ ಬರುವ ಭಾವನೆಗಳು ಈ ಬಗೆಗೆ ನಿದರ್ಶನಗಳು. ಈ ವಿಧವಾಗಿ ಹೇತುಭೇದದ ಮೇಲಿಂದ ಭಾವನೆಗಳನ್ನು ವರ್ಗೀಕರಿಸಬಹುದು.

ಮನುಷ್ಯನ ಭಾವನಾವಸ್ಥೆಯು ಅವನ ಆರೋಗ್ಯವನ್ನವಲಂಬಿಸಿರುತ್ತದೆ. ದೇಹಸ್ಥಿತಿಯು ಒಂದೆರಡು ರೀತಿಗಳಿಂದ ಕಾರ್ಯಪರವಾಗಬಹುದು. ಅದು ನರಮಂಡಲದ ಸ್ಥಿತಿಯನ್ನು ನೇರವಾಗಿ ವ್ಯತ್ಯಾಸಗೊಳಿಸಬಹುದು; ಇಲ್ಲವೆ ದೇಹದ ಸಾಮಾನ್ಯಾವಸ್ಥೆಯನ್ನು ಬದಲಾಯಿಸುವುದರ ಮೂಲಕ ಆಂತರಿಕ ಅವಯವಗಳಿಂದ ಬಂದ ಹಾಗೂ ಕೇಂದ್ರ ನರಮಂಡಲ ಗ್ರಹಿಸಿದ ಚೋದನೆಗಳ ಬಗೆಯನ್ನೇ ಬದಲಾಯಿಸಬಹುದು. ಶಾರೀರಿಕ ಸಂವೇದನೆಗಳ ಎಲ್ಲೆಲ್ಲೂ ಹರಡಿಕೊಳ್ಳುವ ಸ್ವಭಾವದ ಮೂಲಕ ನರಮಂಡಲದಲ್ಲಿ ಒಂದು ಸಾಮಾನ್ಯ ಬದಲಾವಣೆಯಾಗುತ್ತದೆ. ಅಂಥ ಬದಲಾವಣೆಯು ಮಾನಸಿಕ ಕ್ಷೇತ್ರದಲ್ಲಿ ಉದ್ರಿಕ್ತಾವಸ್ಥೆ (Emotional Mood) ಎಂಬ ರೂಪದಲ್ಲಿ ನಮ್ಮ ಅನುಭವಕ್ಕೆ ಬರುತ್ತದೆ.

ಯಾವ ಕಾರಣದಿಂದ ಉದ್ಭವಿಸಿದ್ದರೂ ಒಮ್ಮೆ ಎಬ್ಬಿಸಿದ ನಂತರ ಉದ್ರಿಕ್ತ ಅವಸ್ಥೆಯು ಎದುರಿಗೆ ಸಿಕ್ಕ ವಸ್ತುವನ್ನು ಹಿಡಿದುಕೊಳ್ಳುತ್ತದೆ. ಯಾವುದಾದರೂ ಮದ್ದು ಕುಡಿದಾಗ ತಲೆ ಕೆಟ್ಟುಹೋಗಬಹುದು ಇಲ್ಲವೆ ಮನಸ್ಸು ಇಳಿದು ಹೋಗಬಹುದು ಅಥವಾ ಹಿಗ್ಗಿ ಕುಣಿದಾಡಬಹುದು. ಆದರೆ ಒಮ್ಮೆ ಇಂಥ ಉದ್ರಿಕ್ತಾವಸ್ಥೆ ಹುಟ್ಟಿತೆಂದರೆ ಸಾಕು–ಅದು ಎದುರಿಗೆ ಸಿಕ್ಕಿದ್ದಕ್ಕೆ ಅಂಟಿಕೊಳ್ಳುತ್ತದೆ. ನಿದ್ದೆಗೆಟ್ಟ ಒಬ್ಬನು ಬೆಳಿಗ್ಗೆ ಎದ್ದಾಗ ಕಂಡದ್ದರ ಮೇಲೆಲ್ಲ ಕಿಡಿಕಿಡಿಯಾಗಬಹುದು. ಅದೇ ವಸ್ತು ಅಥವಾ ಸನ್ನಿವೇಶವು ಮತ್ತೊಂದು ಭಾವನಾವಸ್ಥೆಯಲ್ಲಿ ಎದುರಾದರೆ ಇದರಿಂದ ಅವನು ಎಳ್ಳಷ್ಟೂ ಉದ್ರೇಕ ಹೊಂದದಿರಬಹುದು. ಒಂದು ಭಾವನಾವಸ್ಥೆಗೆ ಚಟುವಟಿಕೆಯ ಸಾಮಾನ್ಯ ದಿಕ್ಕೊಂದಿದೆ; ಅದು ಪರಿಸ್ಥಿತಿಗೆ ಅನುಗುಣವಾಗಿ ಶಕ್ತ್ಯನುಸಾರ ವಿಶೇಷ ರೂಪವನ್ನು ತಾಳುತ್ತದೆ.

ಪರೋಪಜೀವನವು ಭಾವನೆಯ ಐದನೆಯ ಲಕ್ಷಣ. ಕೇವಲ ಶಾರೀರಿಕ ವ್ಯತ್ಯಾಸಗಳಿಂದಲ್ಲದೆ ಸಾಮಾನ್ಯ ಸನ್ನಿವೇಶಗಳಿಂದ ಉದ್ರೇಕ ಹೊಂದಿದ ಭಾವನೆಗಳು ಗೌಣ ಘಟನೆಗಳೆನಿಸುತ್ತವೆ. ಅವುಗಳ ಹಿನ್ನೆಲೆಯಲ್ಲಿ ನಿರ್ದಿಷ್ಟ ಪ್ರವೃತ್ತಿಗಳಿರುತ್ತವೆ. ಅತ್ಯಂತ ಸರಳ ಹಾಗೂ ಮೂಲಭೂತ ಭಾವನೆಗಳನ್ನು ಬಿಟ್ಟರೆ ಮಿಕ್ಕ ಎಲ್ಲವಕ್ಕೂ ಈ ಮಾತು ಅನ್ವಯಿಸುತ್ತದೆ. ಎಲುಬಿನ ಚೂರನ್ನು ಕಸಿದುಕೊಂಡಾಗ ಉಂಟಾಗುವ ನಾಯಿಯ

ಸಿಟ್ಟಿಗೆ ಆಹಾರ ಬೇಕೆಂಬ ವಿಶಿಷ್ಟವಾದ ಹಸಿವೇ ಹಿನ್ನೆಲೆ. ಅದರ ಮರಿಯನ್ನು ಕೆಣಕಲು ಹೋದಾಗ ಅದಕ್ಕೆ ಉಂಟಾಗುವ ಸಿಟ್ಟಿಗೆ ಅದರಲ್ಲಿರುವ ಸಾಕುವ ಪ್ರವೃತ್ತಿಯೇ ಹಿನ್ನೆಲೆ.

ಭಾವನೆಯ ತೀವ್ರ ಮುಖಗಳಲ್ಲೆಲ್ಲ ಶಾರೀರಿಕ ಸಂವೇದನೆಗಳು ಅದರ ಪ್ರಜ್ಞಾವಸ್ಥೆಯ ಮುಖ್ಯಾಂಗವಾಗುತ್ತವೆ. ಮೂಲತಃ ಶಾರೀರಿಕ ಬದಲಾವಣೆಯಿಂದ ಉಂಟಾಗಿರಲಿ ಇಲ್ಲವೆ ನಿಶ್ಚಿತ ಅನುಭವ ಅಥವಾ ಕಲ್ಪನೆಗಳಿಂದ ಮೊಟ್ಟಮೊದಲಿಗೆ ಉದ್ಭವಿಸಿರಲಿ ಯಾವ ಭಾವನೆಗೂ ಈ ಮಾತು ಅನ್ವಯುವಾಗತಕ್ಕದ್ದೇ. ಮೇಲಿನ ವಿಚಾರಗಳಿಂದ ಸ್ಪಷ್ಟವಾಗುವುದೆಂದರೆ ಒಳ ಅವಯವ ಹಾಗೂ ಮಾಂಸಖಂಡದಲ್ಲಿ ಉಂಟಾದ ಬದಲಾವಣೆಯಿಂದ ಉದ್ಭವಿಸುವ ಸಂವೇದನೆಗಳು ಭಾವನಾಪ್ರಜ್ಞೆಯ ಮುಖ್ಯಸ್ವರೂಪವನ್ನು ನಿರೂಪಿಸುತ್ತವೆ ಎಂಬುದೇ ಆಗಿದೆ. ಇದು ಜೇಮ್ಸ್ ಹಾಗೂ ಲ್ಯಾಂಗ್ ಎಂಬಿಬ್ಬರ "ಪರಿಧಿ ಸಿದ್ಧಾಂತ" ಎನಿಸಿಕೊಳ್ಳುತ್ತದೆ.

ಪರಿಧಿಸಿದ್ಧಾಂತದ ಪ್ರಕಾರ ಶರೀರದ ಮಾಂಸಖಂಡಗಳ ಹಾಗೂ ಒಳ ಅವಯವಗಳ (Vital Organs) ಚಟುವಟಿಕೆಗಳ ಪರಿಣಾಮವೇ ಭಾವನೆ. ಎದೆಬಡಿತ, ಅಳ್ಳೆ ಹೊಡೆದುಕೊಳ್ಳುವುದು, ಕೈಕಾಲು ನಡುಗುವುದು. ಗಂಟಲೊಣಗುವುದು ಮೊದಲಾದ ಶಾರೀರಿಕ ಕ್ರಿಯೆಗಳನ್ನು ತೆಗೆದೊಗೆದರೆ ಹೆದರಿಕೆ ಎಂಬುದಕ್ಕೆ ಅರ್ಥವೇ ಇಲ್ಲ. ಒಂದು ಕರಡಿಯನ್ನು ಕಂಡಾಗ ನಾವು ಓಡುತ್ತೇವೆ; ಅನಂತರ ಹೆದರುತ್ತೇವೆ ಎಂಬುದು ಪರಿಧಿಸಿದ್ಧಾಂತ. ಅಂದರೆ ಕರಡಿಯನ್ನು ಕಂಡು ನಮ್ಮ ದೇಹದಲ್ಲಿ ಉಂಟಾದ ಬದಲಾವಣೆಯ ಪರಿಣಾಮವಾಗಿ ನಮ್ಮಲ್ಲಿ ಹೆದರಿಕೆ ಎಂಬ ಭಾವನೆ ಪ್ರಜ್ಞಾಗತವಾಗುವುದು. ತದ್ವಿರುದ್ಧವಾಗಿ ಕರಡಿಯನ್ನು ಕಂಡು ಹೆದರಿದ ಮೇಲೆ ನಾವು ಓಡುವ ಮುಂತಾದ ಶಾರೀರಿಕ ಚಟುವಟಿಕೆಗಳನ್ನು ಮಾಡುತ್ತೇವೆ ಎಂಬುದು ನಮ್ಮೆಲ್ಲರ ಸಾಮಾನ್ಯ ಅನುಭವ. ಇಂದ್ರಿಯಪ್ರತ್ಯಕ್ಷ→ಶಾರೀರಿಕ ಅನುಕ್ರಿಯೆ→ಭಾವನೆ ಎಂಬುದು ಪರಿಧಿಸಿದ್ಧಾಂತದ ಸೂತ್ರವಾದರೆ–

ಇಂದ್ರಿಯಪ್ರತ್ಯಕ್ಷ→ಭಾವನೆ→ಶಾರೀರಿಕ ಅನುಕ್ರಿಯೆ ಎಂಬುದು ಅನುಭವ ಸೂತ್ರ.

ಅತಿ ಹೆದರಿಕೆಯಾದಾಗ ಓಡುವ ಶಕ್ತಿಯೂ ಉಡುಗಿ ಹೋಗುತ್ತದೆ. ಆಗ ಓಡುವ ಶಾರೀರಿಕ ಅನುಕ್ರಿಯೆ ಇಲ್ಲದೆಯೇ ಮನುಷ್ಯನಿಗೆ ಹೆದರಿಕೆ ಹೇಗೆ ಹುಟ್ಟುತ್ತದೆ? ಎಂದು ಅನುಭವಿಗಳು ಕೇಳಿದರೆ ಜೇಮ್ಸ್ ಹೇಳುತ್ತಾನೆ: ಆಗ ಓಡುವ ಅನುಕ್ರಿಯೆ ಇಲ್ಲದಿದ್ದರೂ ಅದಕ್ಕೂ ತೀವ್ರವಾದ ಅನುಕ್ರಿಯೆ ಶರೀರದ ಒಳಗಿನ ಅಂಗಗಳಲ್ಲಿ ಉಂಟಾಗಿ, ಆ ಮೂಲಕ ಅವನಿಗೆ ಹೆದರಿಕೆಯ ಜ್ಞಾನವಾಗುತ್ತದೆ– ಎಂದು. ಆದರೆ ಮುಂದೆ ಕೊಡುವ ಸಾಕ್ಷಿಗಳಿಂದ ಪರಿಧಿ ಸಿದ್ಧಾಂತದ ಪ್ರಾಧಾನ್ಯವು ಸಂಪೂರ್ಣವಾಗಿ ಬಿದ್ದು ಹೋಗುತ್ತದೆ.

ತೇಜೋರಸವನ್ನು ಒಬ್ಬನ ರಕ್ತಕ್ಕೆ ಚುಚ್ಚಿದಾಗ ಅವನಲ್ಲಿ ಅಸ್ಪಷ್ಟವಾದ ಒಂದು ಭಾವನೆ ಉಂಟಾದದ್ದು ಕಂಡು ಬಂದಿತು. ಜೇಮ್ಸ್ ವಾದಿಗಳು ಇದನ್ನಾಧರಿಸಿ ತೇಜೋರಸದಿಂದ ಉಂಟಾದ ಆಂತರಿಕ ಅವಯವಗಳ ಅನುಕ್ರಿಯೆಗಳು ಇಂಥ

ಭಾವನೆಯನ್ನು ಉಂಟುಮಾಡಿದವು ಎಂದು ಹೇಳಿ ತಮ್ಮ ಸಿದ್ಧಾಂತದಲ್ಲಿ ಪಾಕ್ಷಿಕ ಸತ್ಯವಾದರೂ ಇದೆ ಎಂದು ಪ್ರತಿಪಾದಿಸಿದ್ದಾರೆ. ಆದರೆ ಈ ಪ್ರಕರಣದಲ್ಲಿ ಆಂತರಿಕ ಅವಯವಗಳು ಚುಚ್ಚುಮದ್ದಿನ ಬಾಹ್ಯಪ್ರೇರಣೆಯಿಂದ ಅನುಕ್ರಿಯೆಯಲ್ಲಿ ತೊಡಗುವ ಮಾಧ್ಯಮವಾದವೇ ಹೊರತು, ಉಕ್ತ ಅಸ್ಪಷ್ಟ ಭಾವನೆಯನ್ನು ಉಂಟು ಮಾಡುವಲ್ಲಿ ನೇರವಾದ ಕರ್ತೃಗಳೆನಿಸಲಿಲ್ಲ. ಕರಡಿಯ ಕಾಣ್ಕೆ ಮೊದಲು ಮನುಷ್ಯನಲ್ಲಿ ಹೆದರಿಕೆಯನ್ನು ಹುಟ್ಟಿಸಿದ ಹಾಗೆಯೇ ಇಲ್ಲಿಯೂ ಚುಚ್ಚು ಮದ್ದು ಒಳಗಿನ ವಿವಿಧ ಅವಯವಗಳಲ್ಲಿ ಸಂವೇದನೆಯ ಸಂತಾನವನ್ನೆಬ್ಬಿಸಿ ಮಿದುಳಿಗೆ ಆ ಸಂತಾನ ತಲುಪಿದಾಗ ಭಾವನಾಪೀಠದಲ್ಲಿ ಒಂದು ವಿಧದ ಭಾವನೆ ಉಂಟಾದ್ದು ಸ್ಪಷ್ಟ. ಆದುದರಿಂದ ಹಿಂದೆ ಕೊಟ್ಟ ಅನುಭವ ಸೂತ್ರವೇ ಪ್ರಾಮಾಣಿಕವೆಂದು ಸಿದ್ಧವಾಗುತ್ತದೆ. ಪರಿಧಿ ಸಿದ್ಧಾಂತದ ಪಾಕ್ಷಿಕ ಸತ್ಯತೆಯು ಅಂತರವಯವಗಳಿಗೆ ಪರೋಕ್ಷವೂ ನಿವಾರ್ಯವೂ ಆದ ಕರ್ತೃತ್ವವನ್ನು ಆರೋಪಿಸಿದಾಗ ಮಾತ್ರ ಗ್ರಾಹ್ಯವಾಗುತ್ತದೆ.

ಭಾವನಾಪೀಠವೇ ಭಾವನೆ ಹುಟ್ಟುವ ಕೇಂದ್ರ. ಸಂವೇದನೆಗಳು ಭಾವನೆಗಳಿಂದ ಭಿನ್ನ. ಕೇವಲ ಸಂವೇದನೆಗಳು ಭಾವನೆಗಳನ್ನು ಹುಟ್ಟಿಸಲಾರವು; ಅವಕ್ಕೆ ಸಂಕಲ್ಪಾತ್ಮಕ ಹಿನ್ನೆಲೆಯಿರಬೇಕು. ಆಂತರಿಕ ಅವಯವಗಳೂ ಮಾಂಸಖಂಡಗಳೂ ಭಾವನೆಯ ಉತ್ಪತ್ತಿಗೆ ಅನಿವಾರ್ಯ ಕಾರಣಗಳಲ್ಲ. ಭಾವನಾ ಪೀಠಕ್ಕೆ ಜ್ಞಾನವಾಹಿ–ಕ್ರಿಯಾವಾಹಿ ನರಗಳ ಸಂಪರ್ಕವಿರುವುದು ಅನಿವಾರ್ಯ. ಆಂತರಿಕ ಅವಯವ ಹಾಗೂ ಮಾಂಸಖಂಡಗಳ ಚೋದನೆಗಳು ಸಹಕಾರಿ ಕಾರಣಗಳಾದಾವು ಎಂಬಷ್ಟರಮಟ್ಟಿಗೆ ಜೇಮ್ಸ್‌ನ ಮತ ಗ್ರಾಹ್ಯ. ಸಂಕಲ್ಪಾತ್ಮಕ ಪ್ರವೃತ್ತಿಯ ಹಿನ್ನೆಲೆಯಿಲ್ಲದ 'ಭಾವನೆ'ಗೆ ಅರ್ಥವಿಲ್ಲ ಎಂದು ಸ್ಟೌಟ್ ಸ್ಪಷ್ಟಪಡಿಸುತ್ತಾನೆ. ಸ್ಮೃತಿಯ ಪ್ರೇರಣೆಯಿಂದ ಭಾವನಾಪೀಠದಲ್ಲಿ ಭಾವನೆಯೇಳುವ ಅಂಶ ಪ್ರತ್ಯೇಕ; ಅಲ್ಲಿ ವರ್ತಮಾನ ಸಂವೇದನೆಗಳಿಗೆ ಪ್ರಧಾನಕಾರಕದ ಸ್ಥಾನವಿಲ್ಲ.

ಜೇಮ್ಸ್‌ಲ್ಯಾಂಗ್ ಸಿದ್ಧಾಂತದಲ್ಲಿ ಅಲ್ಪಾಂಶ ಮಾತ್ರ ಸತ್ಯವಿದೆ, ಪೂರ್ಣ ಸತ್ಯವಿಲ್ಲ ಎಂಬುದು ಮುಂದೆ ಕೊಡುವ ಪ್ರಯೋಗದಿಂದ ಸಿದ್ಧವಾಗುತ್ತದೆ: ಪ್ರಾಣಿಗಳ ಅವಯವಯಗಳಲ್ಲಿ ಎರಡು ವಿಧ: ತಲೆಬುರುಡೆಯ ಮೂಲಕ ಮಿದುಳಿನ ಕೆಳಭಾಗಕ್ಕೆ ನೇರವಾಗಿ ಹೋಗುವ ಅವಯವಗಳು ಒಂದು ಬಗೆ, ಹಾಗಲ್ಲದೆ ಬೆನ್ನು ಹುರಿಯಲ್ಲಿ ಮೊದಲು ಹೊಕ್ಕು ಮಿದುಳಿಗೆ ಎರಡನೆಯ ಬಿತ್ತರದಲ್ಲಿ ಹೋಗುವಂಥವು ಎರಡನೆಯ ಬಗೆ. ಈ ಎರಡೂ ಬಗೆಯ ಮಾರ್ಗಗಳನ್ನು ಒಂದು ಸಮಸ್ಥಿತಿಯಲ್ಲಿರುವ ನಾಯಿಯಲ್ಲಿ ಕತ್ತರಿಸಲಾಯಿತು. ಮುಂಡದಿಂದ ಯಾವ ತರದ ಅಂತರವಯವ ಸಂವೇದನೆಯೂ (ಕರುಳುಗಳು) ಮಿದುಳಿಗೆ ತಲುಪುವುದಿಲ್ಲವೆಂದು ಆ ಮೂಲಕ ಭಾವಿಸಲಾಯಿತು. ಹೀಗಿದ್ದರೂ ಆ ನಾಯಿಯು ಮೊದಲಿನಷ್ಟೇ ಭಾವನಾತ್ಮಕ ಅನುಕ್ರಿಯೆಯನ್ನು ತೋರಿಸುತ್ತ ಹೋಯಿತು. ಈ ಸಂದರ್ಭದಲ್ಲಿ ನಾಯಿಗೆ ನಿಜವಾಗಿಯೂ ಬಾಹ್ಯಪ್ರೇರಣೆಯ ಫಲವಾಗಿ ಸಿಟ್ಟು ಬಂದಿತ್ತೋ ಇಲ್ಲವೋ ಎಂಬುದು ವಿವಾದಾಸ್ಪದ. ಅಂತೂ ಅದು ಸಿಟ್ಟು ಬಂದಂತೆ ಜೋರಾಗಿ ಬೊಗಳಿ ಸಿಟ್ಟಿಗೆ ಸಹಜವಾದ ಇತರ ಎಲ್ಲ ರೀತಿಯನ್ನೂ ತನ್ನ ವರ್ತನೆಯಲ್ಲಿ

ತೋರಿಸಿತು. ಇನ್ನೊಂದು ಪ್ರಯೋಗದಲ್ಲಿ ಬೆನ್ನು ಹುರಿಯನ್ನೂ ಆಂತರಿಕ ಅವಯವಗಳನ್ನೂ ಸಂಬಂಧಿಸುವ ನರಗಳನ್ನೂ ಕತ್ತರಿಸಲಾಯಿತು. ಆಂತರಿಕ ಅವಯವಗಳ ಮೇಲೆ ಪರಿಣಾಮ ಮಾಡದಂತೆ ಅನುಕಂಪಕ ನರಮಂಡಲವನ್ನು ಸಂಪೂರ್ಣವಾಗಿ ಕಿತ್ತೊಗೆಯಲಾಗಿತ್ತು. ಹೀಗಿದ್ದರೂ ನಾಯಿಯ ಭಾವನೆ ಮೊದಲಿನಷ್ಟೇ ಬಲಿಷ್ಠವಾಗಿ ಉಳಿಯಿತು. ಈ ಸಂಕಟ ಸಮಯಗಳಲ್ಲಿ (ಅರ್ಥಾತ್ ನಾಯಿಯನ್ನು ಕೆಣಕಿದಾಗ) ಆಂತರಿಕ ಅವಯವಗಳು ಹೆಚ್ಚು ಬಲವಾಗಿ ಅನುಕ್ರಿಯೆಯನ್ನು ತೋರಿಸುವಂತೆ ಮಾಡಲು ಯಾವ ಸಾಧನವೂ ಇಲ್ಲವೆಂದಾದರೆ ಈ ಅಂತರವಯವಗಳು ಗ್ರಹಿಸಿದ ಸಂವೇದನೆಗಳನ್ನು ಭಾವನೆ ಅವಲಂಬಿಸುತ್ತದೆ ಎಂದು ಹೇಳುವುದು ಸ್ವಲ್ಪ ಅವಾಸ್ತವವೆನಿಸೀತು. ಇಷ್ಟೇ ಅಲ್ಲದೆ ಹೆದರಿಕೆ, ಸಿಟ್ಟು ಮತ್ತು ತೀವ್ರವಾದ ನೋವುಗಳನ್ನು ಪ್ರತ್ಯೇಕಿಸಿ ತಿಳಿದುಕೊಳ್ಳಲು ಭಾವನಾಪೀಠದ ಸಹಾಯವಿಲ್ಲದಿದ್ದರೆ ಸಾಧ್ಯವಿಲ್ಲ ಎಂಬ ಅಂಶವೂ ಜೇಮ್ಸ್ ಲ್ಯಾಂಗ್ ಸಿದ್ಧಾಂತಕ್ಕೆ ವಿರುದ್ಧವಾಗಿ ನಿಲ್ಲುತ್ತದೆ. ಭಾವನೆಯ ಉತ್ಪತ್ತಿಯು ಕೇವಲ ಕೇಳಕೋಷ್ಠದ ಅಂತರವಯವಗಳನ್ನು ಅವಲಂಬಿಸಿದೆ ಎಂದು ಭಾವಿಸಿದರೆ ಮೇಲೆ ಹೇಳಿದ ಮೂರು ವಿವಿಧ ಭಾವನೆಗಳ ಪ್ರತ್ಯೇಕತೆಯನ್ನು ನಾವು ಹೇಗೆ ಗ್ರಹಿಸಬಲ್ಲೆವು? ಎಂಬುದು ಹೇಳಲು ಬರದಂತಾಗುವುದು.

ದೇಹದ ಇತರ ಭಾಗಗಳೊಡನೆ ಮುಮ್ಮಿದುಳಿಗಿರುವ ಸಂಬಂಧವನ್ನು ತಪ್ಪಿಸಲಾದ ನಾಯಿಯು ಬಾಹ್ಯಪ್ರೇರಣೆಗೆ ಪ್ರತಿಯಾಗಿ ಗುರ್ ಎನ್ನುವುದನ್ನು, ಬೊಗಳುವುದನ್ನು, ಹಲ್ಲುಕಿಸಿಯುವುದನ್ನು ಬಿಡುವುದಿಲ್ಲ. ಈ ಉದಾಹರಣೆಯಿಂದ ಮುಮ್ಮಿದುಳಿನ ಗೋಲಾರ್ಧಗಳ ಕೆಳಗೆ ಭಾವನೆಗಳಿಗೆ ಮೂಲಭೂತ ಸಂಬಂಧ ಇಟ್ಟುಕೊಂಡಿರುವ ಒಂದು ಪ್ರದೇಶವಿದೆ ಎಂಬುದು ಸ್ಪಷ್ಟವಾಗುತ್ತದೆ. ಈ ಪ್ರದೇಶಕ್ಕೆ ಯಾವುದಾದರೂ ರೋಗ ತಗುಲಿದಾಗ ಅನುಕೂಲ ಅಥವಾ ಪ್ರತಿಕೂಲ ಸಂವೇದನೆಗಳಿಂದ ಉಂಟಾಗುವ ಭಾವನೆಯ ಉದ್ರೇಕವು ಸಮಸ್ಥಿತಿಯ ಮಟ್ಟಕ್ಕಿಂತ ಹೆಚ್ಚಿನದಾಗಿರುತ್ತದೆ ಎಂಬುದು ವೈದ್ಯಕೀಯ ಸಾಕ್ಷಿಗಳಿಂದ ತಿಳಿದು ಬರುತ್ತದೆ. ಇಂಥ ಉದಾಹರಣೆಗಳಿಂದ ಮಿದುಳಿನ ಕಾಂಡದಲ್ಲಿ ಭಾವನೆಗಳಿಗೆ ಕೇಂದ್ರ ಪ್ರದೇಶವೆನಿಸಿದ ಭಾವನಾಪೀಠ ಇದೆ ಎಂಬುದು ಸಿದ್ಧವಾಗುತ್ತದೆ. ಈ ವಿಷಯವನ್ನು ನಾಯಿಯ ಮುಮ್ಮಿದುಳಿನ ಒಂದೊಂದೇ ಭಾಗವನ್ನು ವಿಸಂಗತಗೊಳಿಸುತ್ತ ಹೋದ ಪ್ರಯೋಗಗಳಿಂದ ಸ್ಥಿರಪಡಿಸಲಾಗಿದೆ. ಮುಮ್ಮಿದುಳಿನ ಗೋಲಾರ್ಧಗಳನ್ನು ವಿಸಂಗತಗೊಳಿಸಿದಾಗಲೂ ನಾಯಿಯಲ್ಲಿ ಭಾವನೋತ್ಪತ್ತಿ ನಿಲ್ಲಲಿಲ್ಲ; ತದ್ವಿರುದ್ಧವಾಗಿ ಅದು ಹೆಚ್ಚಾದಂತೆ ತೋರಿತು. ಭಾವನೆಯ ಅಸ್ತಿತ್ವ ಅಥವಾ ಸಮಸ್ಥಿತಿ ಮುಮ್ಮಿದುಳಿನ ಗೋಲಾರ್ಧಗಳನ್ನು ಅವಲಂಬಿಸಿಲ್ಲ ಎಂಬುದು ಸಿದ್ಧವಾಗುತ್ತದೆ. ಆದುದರಿಂದ ಕ್ಯಾನನ್ ಮತ್ತು ಅವನ ಸಹಕಾರಿಗಳು ಭಾವನೆ ಎಂಬುದು ಮಿದುಳಿನ ಕಾಂಡದ ಒಂದು ನಿರ್ದಿಷ್ಟ ಭಾಗದ ಕೃತ್ಯವಲ್ಲದೆ, ಅಂತರವಯವ ಹಾಗೂ ಮಾಂಸಗಳ ಸಂವೇದನೆಯನ್ನು ಅವಲಂಬಿಸಿಲ್ಲ ಎಂದು ನಿರ್ಣಯಿಸಿದ್ದಾರೆ. ಇದರಿಂದ ಜೇಮ್ಸ್ ಮತ್ತು ಲ್ಯಾಂಗರ ಪರಿಧಿಸಿದ್ಧಾಂತದ ಪ್ರಾಧಾನ್ಯವು ಕ್ಯಾನನ್ ಮೊದಲಾದವರ ಕೇಂದ್ರಸಿದ್ಧಾಂತದಿಂದ ಖಂಡಿಸಲ್ಪಟ್ಟಂತಾಗುತ್ತದೆ.

## ರಸಗಳು

**ಮನಃಪ್ರವೃತ್ತಿ:** ಪ್ರಜ್ಞೆಯುಳ್ಳ ವ್ಯಕ್ತಿಯ ಎಲ್ಲ ಬಗೆಯ ಮಾನಸ ಅನುಭವದ ಅವಸ್ಥೆಯನ್ನೂ ಜ್ಞಾತಪ್ರಜ್ಞಾವಸ್ಥೆ ಎಂದು ಹೇಳುತ್ತಾರೆ. ಜ್ಞಾತ ಪ್ರಜ್ಞೆ ಎಂದರೆ ಜಾಗರಿತ ಮನಃಸ್ಥಿತಿ. ಕೆಲವು ಸನ್ನಿವೇಶಗಳಲ್ಲಿ ನಿರ್ದಿಷ್ಟ ಬಗೆಯ ಅನುಭವವನ್ನು ಪಡೆಯುವ ಪ್ರವೃತ್ತಿಯನ್ನು ಮನಃಪ್ರವೃತ್ತಿ ಎಂದು ಕರೆಯುತ್ತಾರೆ. ಹೆದರಿಕೆ ಅಥವಾ ಸಿಟ್ಟು ಭಾವನಾತ್ಮಕ ಪ್ರಜ್ಞಾವಸ್ಥೆಗಳು; ಅಂಜುಬುರುಕುತನವೂ ಮುಂಗೋಪಿತನವೂ ಭಾವನಾತ್ಮಕ ಮನಃಪ್ರವೃತ್ತಿಗಳೇ. ಮನಃಪ್ರವೃತ್ತಿಗಳನ್ನು ಸ್ಪಷ್ಟವಾಗಿ ಒಂದು ಅಂತಃಶಕ್ತಿ ಎಂದು ತಿಳಿದುಕೊಳ್ಳಲಾಗುವುದಿಲ್ಲ ಸ್ಮೃತಿ, ಕಲ್ಪನೆಗಳಿದ್ದ ಹಾಗೆ. ಒಬ್ಬನನ್ನು ಅಂಜುಬುರುಕನೆಂದು ಹೇಳಿದರೆ ಅವನು ಮಿಕ್ಕವರಿಗಿಂತ ಹೆಚ್ಚಾಗಿ ಹೆದರುವ ಪ್ರವೃತ್ತಿ ಉಳ್ಳವನು ಎಂದಿಷ್ಟೇ ಅರ್ಥ. ಮನಃಪ್ರವೃತ್ತಿಗಳು ವಸ್ತುಗಳಿಗೆ ಗುಣಗಳಿದ್ದಂತೆ ಮನಸ್ಸಿಗೆ ಇರುವ ಗುಣಗಳು ಎನ್ನಬಹುದು. ವ್ಯಕ್ತಿಯಲ್ಲಿರುವ ಮೂಲ ಪ್ರವೃತ್ತಿಯೊಂದರ ಚೋದನೆಯ ತೀವ್ರತೆಯ ಅಂಶವನ್ನು ನಾವು ಮನಃ ಪ್ರವೃತ್ತಿ ಎಂದು ಗುರುತಿಸುತ್ತೇವೆ. ಲೋಕದಲ್ಲಿ ನಾವು ಒಬ್ಬನನ್ನು ಅತಿ ಕಾಮಿ, ಹೊಟ್ಟೆಬಾಕ, ಮಂದಿಯನ್ನು ಹೆಚ್ಚಾಗಿ ಹಚ್ಚಿಕೊಂಬವನು ಅಥವಾ ಅತಿ ಕುತೂಹಲಿ ಎಂದು ಮುಂತಾಗಿ ಕರೆಯುವುದು ಇದಕ್ಕೆ ಉದಾಹರಣೆ. ಒಬ್ಬನಿಗೆ ಅಂಜುಬುರುಕಪ್ರವೃತ್ತಿ ಇದ್ದರೆ ಅವನು ಸ್ವಲ್ಪ ಕೆದಕಿದ ಕೂಡಲೆ ಅಂಜುತ್ತಾನೆ. ಅದು ಅವನ ಸ್ವಭಾವಾಂಶವೆಂದೇ ನಮಗೆ ಎನಿಸುತ್ತದೆ. ಎಲ್ಲ ವಿಧದ ಮೂಲಪ್ರವೃತ್ತಿಗಳೂ ಎಲ್ಲರಲ್ಲೂ ಇವೆ. ಆದರೆ ಕೆಲವರಲ್ಲಿ ಕೆಲ ಮೂಲ ಪ್ರವೃತ್ತಿಗಳು ಪ್ರಧಾನವಾಗಿರುತ್ತವೆ. ಅಂಥ ಪ್ರಧಾನಪ್ರವೃತ್ತಿಯೇ ಅವರ ಮನಃಪ್ರವೃತ್ತಿ. ಅಂಜುಬುರುಕನಲ್ಲಿ ಅಂಜುಬುರುಕತನವು ಪ್ರಧಾನಪ್ರವೃತ್ತಿಯಾಗಿರುವುದರಿಂದ ಅವನನ್ನು ಅಂಜುಬುರುಕ ಮನಃಪ್ರವೃತ್ತಿಯವನೆಂದು ಹೇಳುತ್ತೇವೆ. ಕೆಲವರಲ್ಲಿ ಯಾವ ಒಂದು ಮನಃಪ್ರವೃತ್ತಿಯೂ ಪ್ರಧಾನವಾಗಿ ಕಾಣಿಸದಿರಬಹುದು. ಅದರ ಅರ್ಥ ಅವರಿಗೆ ಯಾವ ಮನಃಪ್ರವೃತ್ತಿಯೂ ಇಲ್ಲವೆಂದಲ್ಲ; ಅವರು ಸಮತೋಲಚಿತ್ತರು ಎಂದು ಇಷ್ಟೇ ಅರ್ಥ. ಮನಃಪ್ರವೃತ್ತಿಯ ಶಕ್ತಿಯು ಎಲ್ಲರಿಗೂ ಜನ್ಮಸಿದ್ಧ. ಆದರೆ ಆವರಣಬಲದಿಂದ ಒಬ್ಬನಲ್ಲಿ ಒಂದು ಮನಃಪ್ರವೃತ್ತಿ ದುರ್ಬಲವಾಗುತ್ತ ಹೋಗಬಹುದು, ಇನ್ನೊಂದು ಪ್ರಬಲವಾಗುತ್ತ ಹೋಗಬಹುದು.

ಯಾವುದಾದರೂ ಒಂದು ವಸ್ತುವಿಗೆ ಸಂಬಂಧಿಸಿದಂತೆ ಕೆಲ ಭಾವನೆ ಮತ್ತು ಬಯಕೆಗಳನ್ನು ಅನುಭವಿಸುವ ವ್ಯಕ್ತಿ–ಪ್ರವೃತ್ತಿಯು ರಸದಲ್ಲಿ ಕಂಡು ಬರುತ್ತದೆ. ನಿರ್ದಿಷ್ಟ ಪದಾರ್ಥ ಒಂದರ ಅನುಭವವು ಅದರ ಬಗ್ಗೆ ಪ್ರೇರಿಸಿದ ಚಿರಸ್ಥಾಯಿಯಾದ ಸಂಕಲ್ಪಾತ್ಮಕ ಮನಃಪ್ರಣಾಲಿಯನ್ನು ರಸವೆನ್ನಬಹುದು. ಒಬ್ಬ ತುಂಟ ಹುಡುಗನು ಒಂದು ನಾಯಿ ಮರಿಯನ್ನು ಪದೇ ಪದೇ ಕೆಣಕುತ್ತ, ಪೀಡಿಸುತ್ತ ಹೋದಾಗ ಅದು ಬಹುಬೇಗ, ದೂರದಲ್ಲಿ ಅವನ ಸದ್ದು ಕೇಳಿದ ಕೂಡಲೆ ಅಥವಾ ಅವನನ್ನು ಕಂಡಕೂಡಲೆ ಹೆದರಿ ಓಡಿಹೋಗುವ ಪ್ರವೃತ್ತಿಯನ್ನು ಪಡೆದುಕೊಳ್ಳುತ್ತದೆ. ಆ ಹುಡುಗನನ್ನು ನೋಡಿ ಹೆದರಿಕೊಳ್ಳುವ ರಸ ನಾಯಿಯಲ್ಲಿ ಉಂಟಾಯಿತು ಎಂದರೆ ಭಾಷಾವ್ಯವಹಾರದಲ್ಲೇನೋ ಸ್ವಲ್ಪ ವಿಲಕ್ಷಣವಾಗಿ ಕಂಡೀತು. ಅದೊಂದು ಭಾವನಾಭ್ಯಾಸ; ಆದರೆ ಅದು ನಿಜವಾಗಿಯೂ ಒಂದು ರಸದ ಬೀಜಾವಸ್ಥೆಯೇ.

ನಾಯಿಮರಿಯು ಆ ಹುಡುಗನನ್ನು ಕಂಡಾಗ ಮಾತ್ರವಲ್ಲದೆ ಯಾವಾಗಲೂ ಹೆದರಿಕೆಯ ವರ್ತನೆಯನ್ನೂ ಚಿಹ್ನಗಳನ್ನೂ ತೋರಿಸುವುದಿಲ್ಲ. ಇದೇ ರೀತಿ ಒಂದು ಮಗುವು ಅದನ್ನು ಪೀಡಿಸುವ ದೊಡ್ಡವನ ಬಗ್ಗೆ ಭಯದ ಭಾವನಾಭ್ಯಾಸವನ್ನು ಅಥವಾ ರಸವನ್ನು ತಾಳಬಹುದು. ನಾಯಿಮರಿಗೂ ಮಗುವಿಗೂ ಇರುವ ಒಂದೇ ಒಂದು ವ್ಯತ್ಯಾಸವೆಂದರೆ ಮಗುವಿಗೆ ನಾಯಿ ಮರಿಗಿಂತ ಹೆಚ್ಚಿನ ಕಲ್ಪನಾಶಕ್ತಿ ಇದೆ, ನೆನಪಿನ ಬಲವಿದೆ. ಅದರಿಂದ ಅದು ಮಾತುಕತೆಯ ಮೂಲಕ ಅಥವಾ ಇನ್ನಾವುದಾದರೂ ಸಂಗತಿಯ ಮೂಲಕ ಪೀಡಿಸುವ ಮನುಷ್ಯನು ಇಲ್ಲದಾಗಲೂ ಭಯದ ಮನಃಪ್ರಣಾಲಿಯನ್ನು ವ್ಯಕ್ತಪಡಿಸಬಹುದು. ಅದಕ್ಕೆ ಈ ರಸ ಉಂಟಾದ್ದರಿಂದ ಪೀಡಕನನ್ನು ಅದು ಕಲ್ಪನಾಪ್ರಪಂಚದಲ್ಲಿ ಕಾಣಬಲ್ಲುದು. ಹಾಗೆ ಕಲ್ಪಿಸಿಕೊಂಡಾಗ ಅದು ಕೆಲ ಮಟ್ಟಿನ ಭಯಾಂಶವನ್ನು ತಾಳಬಹುದು. ಆ ಭಯಾಂಶವು ಕೊಡುವ ಚೋದನೆಯಿಂದ ಅದು ತನ್ನ ಕಲ್ಪನಾಶಕ್ತಿಯನ್ನು ಉಪಯೋಗಿಸಿ, ಪೀಡಕನಿಂದ ದೂರವಿರುವ ಉಪಾಯ ಮಾಡಬಹುದು. ಅಂಥ ಸರಳ ರಸವು ಯಾವುದಾದರೊಂದು ಮೂಲಪ್ರವೃತ್ತಿಯ ಪ್ರೇರಣೆಯು ಯಾವುದಾದರೂ ವಸ್ತುವಿನಿಂದ ಸಂಭವಿಸಿದಾಗ ಉಂಟಾಗುತ್ತದೆ. ಅದನ್ನು ಒಂದೇ ಒಂದಾದ ತಪ್ಪಿಸಿಕೊಳ್ಳುವ ಮೂಲ ಪ್ರವೃತ್ತಿರೂಪದ ಭಾವನಾ ಸಂಕಲ್ಪಾತ್ಮಕ ಮನಃಪ್ರವೃತ್ತಿಯೊಡನೆ ಕೃತ್ಯತಃ ಸಂಬಂಧಿಸಿದ ಅಭಿಜ್ಞಾಮನಃಪ್ರವೃತ್ತಿ ಎನ್ನಬಹುದು.

ಸಾಮಾನ್ಯರು ರಸ–ಭಾವನೆಗಳಲ್ಲಿ ಒಂದನ್ನು ಇನ್ನೊಂದನ್ನಾಗಿ ತಿಳಿಯುವುದು ಹೆಚ್ಚು. ಆದರೆ ಅಲ್ಲಿಯೂ ಅವೆರಡರಲ್ಲಿಯ ವ್ಯತ್ಯಾಸವು ಸೂಚಿತವಾಗುತ್ತದೆ. ಪ್ರಾಣಿಗಳು ಬಲಿಷ್ಠ ಭಾವನೆಗಳನ್ನು ಪ್ರದರ್ಶಿಸುತ್ತವೆ. ಒಂದು ನಾಯಿಯು ಅಪರಿಚಿತನನ್ನು ಕಂಡಾಗ ಜೋರಾಗಿ ಬೊಗಳುತ್ತದೆ. ಆಗ ನಾವು ಅದರಲ್ಲಿ ಭಾವನೆ ಇದೆ ಎಂದು ಭಾವಿಸಿದರೂ ಅದು ಒಂದು ರಸವನ್ನು ವ್ಯಕ್ತಗೊಳಿಸುತ್ತದೆ ಎಂದು ಹೇಳುವುದಿಲ್ಲ. ಆದರೆ ಅದು ತನ್ನ ಯಜಮಾನನಿಗೆ ಹೆಚ್ಚಾಗಿ ಅಂಟಿಕೊಂಡಿದ್ದರೆ, ಅವನನ್ನು ಇನ್ನೊಬ್ಬರು ಎದುರಿಸಿದಾಗ ರಕ್ಷಿಸುತ್ತಿದ್ದರೆ, ಅವನಿಲ್ಲದಾಗ ಅವನ ಬಗ್ಗಾಗಿ ಯಾತನೆಯನ್ನು ಅನುಭವಿಸಿದರೆ, ಅವನು ಮರಳಿದಾಗ ಹೆಚ್ಚಿನ ಹಿಗ್ಗನ್ನು ಪ್ರದರ್ಶಿಸಿದರೆ ಅದಕ್ಕೆ ಯಜಮಾನನಲ್ಲಿ ಭಕ್ತಿರಸವಿದೆ, ಪ್ರೇಮವಿದೆ ಎಂದು ಹೇಳಲು ನಾವು ಹಿಂದೆ ಮುಂದೆ ನೋಡುವುದಿಲ್ಲ. ಅದು ಯಜಮಾನನ ಕೈಗಳನ್ನು ನೆಕ್ಕಿ ಅವನ ಮುಖವನ್ನು ನೋಡುತ್ತ ನಿಂತರೆ ಆಗ ನಾವು ಅದು ಪ್ರೇಮಭಾವನೆಯನ್ನು ತಾಳಿ, ವ್ಯಕ್ತಪಡಿಸುತ್ತಿದೆ ಮತ್ತು ಪ್ರೇಮರಸವನ್ನು ವ್ಯಕ್ತಪಡಿಸುತ್ತದೆ ಎಂದು ಹೇಳೋಣ ಎನ್ನಿಸಬಹುದು. ತನ್ನ ಯಜಮಾನನನ್ನು ಹೊಡೆದವನ ಮೇಲೆ ಅದು ಉಗ್ರವಾಗಿ ಹರಿಹಾಯ್ದರೆ ಆಗಲೂ ನಾವು ಅದು ಯಜಮಾನನ ಬಗ್ಗೆ ಭಕ್ತಿರಸವನ್ನು ವ್ಯಕ್ತಪಡಿಸುತ್ತದೆ ಎನ್ನಬಹುದು. ಆದರೆ ಆ ಕಾಲದಲ್ಲಿ ಅದು ಅನುಭವಿಸುತ್ತಿರುವುದು ಪ್ರೇಮಭಾವನೆ ಎಂದು ಮಾತ್ರ ನಾವು ಭಾವಿಸಕೂಡದು. ರಸ–ಭಾವನೆಗಳಲ್ಲಿಯ ವ್ಯತ್ಯಾಸವನ್ನದು ಸೂಚಿಸುತ್ತದೆ. ಭಾವನೆ ಎಂಬುದು ಒಂದು ತಾತ್ಕಾಲಿಕ ಅನುಭವ. ರಸವೆಂಬುದು ಪಡೆದುಬರುವ ಮನಃಪ್ರವೃತ್ತಿ. ಅನೇಕ ಭಾವನಾನುಭವಗಳಿಂದ ಅದು ಕ್ರಮೇಣ ರೂಢವಾಗುತ್ತದೆ. ಅದೊಂದು ಭಾವನಾ ಸಂಘಟನೆ. ಒಮ್ಮೆ ಅದು ರೂಢವಾದರೆ

ಬಹಳ ಕಾಲ ಉಳಿಯುತ್ತದೆ. ಅನಂತರ ಕ್ಷಯಿಸಲಿ ಅಥವಾ ವೃದ್ಧಿ ಹೊಂದಲಿ–ಅದು ಒಮ್ಮೆ ಮರಣಪರ್ಯಂತವೂ ಉಳಿದೀತು. ತನಗೆ ಸಹಜವಾದ ಭಾವನೋದ್ರೇಕದೊಡನೆ ನಿರ್ದಿಷ್ಟ ಪ್ರವೃತ್ತಿಯೊಂದನ್ನು ನಮ್ಮಲ್ಲಿ ಹುಟ್ಟಿಸುವ ಯಾವ ವಸ್ತುವಾದರೂ ಅದಕ್ಕೆ ಯುಕ್ತವಾದ ಸರಳ ರಸವಸ್ತುವಾಗುತ್ತದೆ. ತನ್ನ ಒರಟು ನಡತೆಯಿಂದ ಒಬ್ಬನು ನಮ್ಮನ್ನು ಪದೇ ಪದೇ ಬೇಸರಗೊಳಿಸಿದರೆ ಅನಂತರ ಅವನ ವಿಚಾರ ಮನಸ್ಸಿಗೆ ಬಂದ ಕೂಡಲೆ ಅಥವಾ ಅವನನ್ನು ಕಂಡ ಕೂಡಲೆ–ಅವನು ಅತ್ಯುತ್ತಮ ರೀತಿಯಲ್ಲಿ ವರ್ತಿಸುತ್ತಿದ್ದಾಗಲೂ–ನಮಗೆ ಜುಗುಪ್ಸೆಯ ಅನುಭವವಾಗುತ್ತದೆ. ಹಾಗಲ್ಲದೆ ಒಬ್ಬನು ಪದೇ ಪದೇ ನಮ್ಮಲ್ಲಿ ತನ್ನ ಆರ್ದ್ರವೂ ಉದಾರವೂ ಆದ ವರ್ತನೆಯನ್ನು ತೋರಿದರೆ ಅವನ ಬಗ್ಗೆ ನಮ್ಮಲ್ಲಿ ಕೃತಜ್ಞತಾರಸ ಉಂಟಾಗುತ್ತದೆ. ಅವನನ್ನು ನೆನಸಿಕೊಂಡಾಗಲೆಲ್ಲ ಈ ರಸಸ್ಪರ್ಶವಿಲ್ಲದೆ ಅವನ ಬಗ್ಗೆ ವಿಚಾರ ಮಾಡಲು ಸಾಧ್ಯವೇ ಇಲ್ಲದಂತಾಗುವುದು. ರಸವೆಂಬ ಈ ಹೊಸ ರಚನೆ ನಮ್ಮಲ್ಲಿ ಉಂಟಾದುದಕ್ಕೆ ಅಪರೋಕ್ಷ ಪ್ರಮಾಣ: ಒಬ್ಬ ಮನುಷ್ಯನು ಮೇಲಿಂದ ಮೇಲೆ ನಮ್ಮಲ್ಲಿ ಭಯ–ಕ್ರೋಧಗಳನ್ನು ಉದ್ದೀಪಿಸಿದರೆ ಯಾವಾಗಲೂ ಅವನ ಬಗ್ಗೆ ನಮ್ಮಲ್ಲಿ ಭಯ–ಕ್ರೋಧಗಳ ಸಮ್ಮಿಶ್ರವಾದ ರಸ ಉಂಟಾಗುತ್ತದೆ. ಈ ಪ್ರತಿಯೊಂದು ಪ್ರಕರಣದಲ್ಲೂ ಭಾವನಾತ್ಮಕ ಪ್ರತಿಕ್ರಿಯೆಯು ಒಂದು ಅಭ್ಯಾಸವಾಗಿ ಬಿಡುತ್ತದೆ. ಆದುದರಿಂದ ಆಯಾ ಮೂಲಪ್ರವೃತ್ತಿಗಳು ಸಂಘಟಿತವಾಗಿ ಆ ವ್ಯಕ್ತಿಯ ಬಗ್ಗೆ ವಿಚಾರ ಮಾಡುವ ಇಲ್ಲವೆ ಅವನನ್ನು ಗುರುತಿಸುವ ಶಕ್ತಿಯೊಡನೆ ಸಂಬದ್ಧವಾಗುತ್ತವೆ.

ಒಂದು ಭಾವನೆಯನ್ನೂ ಅದು ಉದ್ಬೋಧಿಸುವ ರಸವನ್ನೂ ಒಂದೇ ಹೆಸರಿನಿಂದ ಕರೆಯುವುದರಿಂದ ಭಾವನೆ ಮತ್ತು ರಸಗಳಲ್ಲಿ ಗಲಿಬಿಲಿಯುಂಟಾಗುತ್ತದೆ. ಇದು ಪ್ರೇಮ–ದ್ವೇಷಗಳ ವಿಷಯದಲ್ಲಿ ಇನ್ನಷ್ಟು ಹೆಚ್ಚು. ಸರಿಯಾಗಿ ಹೇಳುವುದಾದರೆ ಇವು ರಸಗಳು. ಸಂರಕ್ಷಣ ಪ್ರವೃತ್ತಿಯು ತನ್ನ ವಾತ್ಸಲ್ಯದ ಚೋದನೆ ಮತ್ತು ಭಾವನೆಗಳೊಡನೆ ಸಂಘಟಿತವಾಗದ ಪ್ರತಿಯೊಂದು ರಸವನ್ನೂ ಪ್ರೇಮವೆನ್ನಬಹುದು. ಅದು ಎಷ್ಟೇ ಜಟಿಲವಾಗಿರಲಿ, ಅದೇ ಮಂಡಲದಲ್ಲಿ ಇತರ ಎಷ್ಟು ಪ್ರವೃತ್ತಿಗಳು ಬೇಕಾದರೂ ಸಂಘಟಿತವಾಗಿರಲಿ ಅದು ಪ್ರೇಮರಸವೇ. ಅಂಜಿಕೆ ಮತ್ತು ಸಿಟ್ಟು ಎಂಬ ಭಾವನೆಗಳು ಸಂಘಟಿತವಾದಾಗ ದ್ವೇಷರಸ ಉತ್ಪನ್ನವಾಗುತ್ತದೆ. ಜುಗುಪ್ಸೆಯು ಮುಖ್ಯವಾದ ಭಾವನೋದ್ದೀಪಕ ಅಂಗವಾದಾಗ ಉಂಟಾಗುವ ರಸಕ್ಕೆ ದ್ವೇಷವೆಂಬುದು ಅಷ್ಟು ಸರಿಯಾದುದಲ್ಲ.

ಒಂದು ರಸದ ಸಾರ, ಯೋಜನೆ ಅಥವಾ ರಚನೆ ಇರುವುದು ಹೀಗೆ: ಒಬ್ಬ ವ್ಯಕ್ತಿಯ ಅನುಭವದ ಮೂಲಕ ಒಂದು ಅಭಿಜ್ಞಾಶಕ್ತಿಯು ಕೃತ್ಯತಃ ಒಂದು ಅಥವಾ ಹೆಚ್ಚು ಮೂಲಪ್ರವೃತ್ತಿಗಳೊಡನೆ ಸಂಬದ್ಧವಾಗುತ್ತದೆ. ಆ ಅಭಿಜ್ಞಾ ಶಕ್ತಿಯು ಕಾರ್ಯ ಮಾಡತೊಡಗಿದಾಗ (ಅರ್ಥಾತ್ ಅದಕ್ಕೆ ಅನುಗುಣವಾದ ವಸ್ತುವನ್ನು ಇಂದ್ರಿಯ ಪ್ರತ್ಯಕ್ಷ ಮಾಡಿಕೊಂಡಾಗ ಇಲ್ಲವೆ ಅದರ ಬಗ್ಗೆ ವಿಚಾರ ಮಾಡಿದಾಗ) ಮೂಲ ಪ್ರವೃತ್ತಿ ಕೂಡ ಕಾರ್ಯದಲ್ಲಿ ನಿಯುಕ್ತವಾಗಿ ವಸ್ತು ಮುಖವಾದ ತನ್ನ ವಿಶಿಷ್ಟ ಭಾವನಾತ್ಮಕ ಪ್ರವೃತ್ತಿಯನ್ನು ಉಂಟುಮಾಡುತ್ತದೆ. ಈ ರಚನೆ ಎಂಬುದು ಮಾನಸ ಮಂಡಲ.

**ರಸಗಳು ಮತ್ತು ಚಾರಿತ್ರ:** ನಮ್ಮ ಭಾವನೋದ್ದೀಪಕ ಮತ್ತು ಸಂಕಲ್ಪಾತ್ಮಕ ಜೀವನದ ಮುಖ್ಯ ಸಂಘಟಕಗಳು ರಸಗಳೇ ಎಂಬುದನ್ನು ಹಿಂದೆ ವಿವರಿಸಲಾಯಿತಷ್ಟೆ. ಚಿರಸ್ಥಾಯಿಯಾದ ರಸಗಳಿಲ್ಲದೆ ಹೋಗಿದ್ದರೆ ನಾವು ಪ್ರತಿಯೊಂದು ತಾತ್ಕಾಲಿಕ ಚೋದನೆಗೂ ಬಲಿಯಾಗುತ್ತ ಹೋಗಬೇಕಾಗಿತ್ತು. ರೂಢಮೂಲವಾಗಿ ಬೆಳೆದು ನೆಲೆನಿಂತ ಆಸಕ್ತಿಗಳು, ವ್ಯಾಮೋಹಗಳು ಮತ್ತು ಶ್ರದ್ಧೆಗಳು ಎಷ್ಟೋ ವೇಳೆ ದೀರ್ಘಕಾಲಿಕ ತೃಪ್ತಿಗಳಿಗೋಸ್ಕರ ನಾವು ಮೂಲಪ್ರವೃತ್ತಿಯ ಸದ್ಯದ ಚೋದನೆಗಳನ್ನು ತಡೆಯುವಂತೆ ಮಾಡುತ್ತವೆ.

ವೈಯಕ್ತಿಕವಾದ ಚಾರಿತ್ರ್ಯಭೇದಕ್ಕೆ ರಸಗಳೇ ಕಾರಣ. ಮೂಲ ಪ್ರವೃತ್ತಿಯ ಮಟ್ಟದಲ್ಲಿ ಹೆಚ್ಚು ಕಡಿಮೆ ನಾವೆಲ್ಲರೂ ಒಂದೇ. ವ್ಯಕ್ತಿತ್ವದ ಬೆಳವಣಿಗೆಯು ಬಹಳಮಟ್ಟಿಗೆ ಇರುವುದು ಪ್ರಧಾನರಸಗಳ ಬೆಳವಣಿಗೆಯಲ್ಲೇ. ಪ್ರತಿಯೊಬ್ಬನಲ್ಲೂ ವಿವಿಧ ರಸಗಳಿರುತ್ತವೆ. ಅಂಥ ರಸಗಳ ಕೇಂದ್ರದ ಸುತ್ತ ಗೌಣ ರಸಗಳು ಸಂಘಟಿತವಾಗುತ್ತವೆ. ಒಬ್ಬನಲ್ಲಿ ವೈಯಕ್ತಿಕ ಮಹತ್ವಾಕಾಂಕ್ಷೆಯು ಪ್ರಧಾನರಸವಾಗಿರಬಹುದು; ಇನ್ನೊಬ್ಬನಲ್ಲಿ ಮನೆ, ಮಠ, ಹೆಂಡತಿ, ಮಕ್ಕಳ ಮೇಲಿನ ಪ್ರೇಮವು ಪ್ರಧಾನವಾಗಿರಬಹುದು; ಮಗುದೊಬ್ಬನಲ್ಲಿ ವೈಜ್ಞಾನಿಕ ಸಂಶೋಧನೆಯಲ್ಲಿಯ ಆಸಕ್ತಿಯು ಗಣ್ಯವಾಗಿರಬಹುದು; ಮತ್ತೂ ಒಬ್ಬನಲ್ಲಿ ಸಾಮಾಜಿಕ ನ್ಯಾಯಸಾಧನೆ ಮುಖ್ಯ ಶಕ್ತಿಯಾಗಿರಬಹುದು; ಇನ್ನೂ ಒಬ್ಬನಲ್ಲಿ ಹಳ್ಳಿಯ ಜೀವನದಲ್ಲಿ ಮತ್ತು ಆಟ ಪಾಟಗಳಲ್ಲಿ ವಿಶೇಷ ರತಿ ಇರಬಹುದು. ಹೀಗೆ ಪಟ್ಟಿಯನ್ನು ಎಷ್ಟು ಉದ್ದವಾದರೂ ಬೆಳೆಸುತ್ತ ಹೋಗಬಹುದು. ಒಬ್ಬನ ಪ್ರಧಾನರಸಗಳು ಗೊತ್ತಾದರೆ ಅವನ ಚಾರಿತ್ರ್ಯದ ಬಗ್ಗೆ ನಮಗೆ ಹೆಚ್ಚು ಅರಿವು ಉಂಟಾಗುತ್ತದೆ. ಒಬ್ಬ ಮನುಷ್ಯನು ಯಾರ ಬಗ್ಗೆ ಭಯ ಭಕ್ತಿಯನ್ನು ತೋರಿಸುತ್ತಾನೆ, ಯಾರನ್ನು ಅಥವಾ ಏನನ್ನು ದ್ವೇಷಿಸುತ್ತಾನೆ, ಪ್ರೀತಿಸುತ್ತಾನೆ ಮತ್ತು ತುಚ್ಛವೆಂದು ಕಾಣುತ್ತಾನೆ ಮತ್ತು ಯಾವುದನ್ನು ಮೆಚ್ಚುತ್ತಾನೆ ಎಂಬುದು ಗೊತ್ತಾದರೆ ಅವನ ಶೀಲವನ್ನು ಕೆಲಮಟ್ಟಿಗೆ ಊಹಿಸಲು ಸಾಧ್ಯವಾಗುತ್ತದೆ.

**ರಸಗಳು ಮತ್ತು ನೈತಿಕ ಬೆಳವಣಿಗೆ:** ಆಗಲೇ ಹೇಳಿದಂತೆ ರಸಗಳು ಜನ್ಮಜಾತವಲ್ಲ. ಮಗು ಸರಸವಾಗಿ ಹುಟ್ಟುವುದಿಲ್ಲ. ಆದರೆ ಅದು ತನ್ನ ತಾಯಿ, ತಂದೆ, ಅಣ್ಣ, ತಮ್ಮ, ಅಕ್ಕ, ತಂಗಿ ಮತ್ತು ತನ್ನ ಆವರಣದಲ್ಲಿಯ ಇತರರ ಬಗ್ಗೆ ಬಹು ಬೇಗ ಮೂರ್ತವಾದ ರಸಗಳನ್ನು ಬೆಳೆಸಿಕೊಳ್ಳುತ್ತದೆ. ಈ ಮಟ್ಟ ಮುಟ್ಟಿದ ಕೂಡಲೆ ಅದರ ಶೀಲವನ್ನು ಕೇವಲ ಸುಖಾನುಸಂಧಾನ ಮತ್ತು ದುಃಖದೂರೀಕರಣಗಳಿಂದ ನಿರ್ಧರಿಸಲು ಬರುವುದಿಲ್ಲ. ಆದರೆ ಈ ಮಟ್ಟದಲ್ಲಿ ನಾಯಿ ಮರಿಯಂತೆ ಮಗುವಿಗೂ ನಿಜವಾದ ನೀತಿಜ್ಞಾನವಿರುವುದಿಲ್ಲ. ಅದಕ್ಕೆ ಸರಿ–ತಪ್ಪುಗಳ ಸ್ಥೂಲ ಕಲ್ಪನೆ ಮಾತ್ರ ಇರುತ್ತದೆ. ಎಷ್ಟೋ ವೇಳೆ ತನ್ನ ಸದ್ಯದ ಮೂಲಪ್ರವೃತ್ತಿಯ ಚೋದನೆಗಳನ್ನು ಅದು ಈ ಯುಕ್ತಾ ಯುಕ್ತ ವಿವೇಕದಿಂದ ಗೆಲ್ಲಲು ಶಕ್ತವಾಗುತ್ತದೆ. ಆದರೆ ಈ ಸ್ಥೂಲವಿವೇಕವು ನೈತಿಕ ತತ್ವವನ್ನು ಆಧರಿಸಿದ್ದಲ್ಲ. ದೊಡ್ಡವರಿಗೆ ಸಂತೋಷ ಉಂಟಾಗುವುದೆಲ್ಲ ಸರಿ, ಅವರಿಗೆ ಸಿಟ್ಟು ಬರುವುದೆಲ್ಲ ತಪ್ಪು ಎಂಬುದಷ್ಟೇ ಅದರ ವಿವೇಕ. ಅಮೂರ್ತ ರಸಗಳು ರೂಢಿಗೊಳ್ಳುವವರೆಗೆ ಯಾವ ವ್ಯಕ್ತಿಗೂ ನೀತಿಮಟ್ಟವೆಂಬುದು ಇಲ್ಲವೇ ಇಲ್ಲ.

ಸಾಂಪ್ರದಾಯಿಕವಲ್ಲದಿರುವಾಗ ಪ್ರೌಢರ ನೀತಿಸಂಹಿತೆ ಅವರ ಬಾಲ್ಯ ಮತ್ತು ಯೌವನಗಳಲ್ಲಿ ಬೆಳೆದುಬಂದ ರಸಗಳನ್ನು ಅವಲಂಬಿಸುತ್ತದೆ. ಮೊಟ್ಟ ಮೊದಲಿನ ಅಮೂರ್ತ ರಸಗಳಲ್ಲಿ ನ್ಯಾಯಪ್ರಿಯತೆ ಒಂದು. ಸುಮಾರು ಆರು ಏಳು ವರ್ಷಗಳ ಹೊತ್ತಿಗೆ ಮಗು ತನ್ನ ಸರಿಜೋಡಿಯವರಲ್ಲಿ ನಿಜವಾಗಿ ಆಸಕ್ತಿಯನ್ನು ವಹಿಸುತ್ತದೆ. ಆಗ ಈ ನ್ಯಾಯಪ್ರಿಯತೆ ಅದರಲ್ಲಿ ವ್ಯಕ್ತವಾಗುತ್ತದೆ. ಅನಂತರ ಮುಂದೆ ಮಕ್ಕಳು ವ್ಯವಹಾರದಲ್ಲಿ ಎಷ್ಟು ಕೊರತೆ ಕಂಡುಬಂದರೂ ಯೋಗ್ಯ (Fairness) ವಾದುದನ್ನು ಆದರ್ಶವೆಂದು ಗ್ರಹಿಸಿ ಮೆಚ್ಚಿಕೊಂಡಾಡದಿರರು. ಇದು ಸ್ವಲ್ಪ ಮುಖ್ಯವಾದ ವಿಷಯ. ಏಕೆಂದರೆ ದಾಕ್ಷಿಣ್ಯ, ಸೌಮ್ಯವಿವೇಚನೆ, ತಾಳ್ಮೆ ಮತ್ತು ಅಂಥ ಇತರ ಗುಣಗಳು ಪ್ರೌಢರಿಗೆ ಬೇಸರ ಬರಿಸುವ ಕಲ್ಪನಾವಿಲಾಸಗಳೆನಿಸುವ ಕಾಲದಲ್ಲಿ ಮಗು ಸಾಮಾನ್ಯವಾಗಿ 'ಇದುಯೋಗ್ಯ' ಎಂದು ಹೇಳುವ ಮಾತಿಗೆ ಸಹಾನುಭೂತಿಯಿಂದ ವರ್ತಿಸುತ್ತದೆ.

ಹೆಚ್ಚುಕಡಿಮೆ ಪ್ರಾರಂಭದಲ್ಲೇ ರೂಪಗೊಳ್ಳುವ ರಸವೆಂದರೆ ಸ್ವಾಭಿಮಾನ. ಇದನ್ನು ಅಮೂರ್ತರಸವೆಂದು ವರ್ಗೀಕರಿಸಿದರೆ ವಿಪರೀತವಾಗಿ ಕಾಣಬಹುದು. ಆದರೆ ಅದು ಅಮೂರ್ತವೆನಿಸಿದ್ದು ಆಯಾ ವ್ಯಕ್ತಿಯು ತನ್ನನ್ನು ತನ್ನತನದ ಆದರ್ಶಸ್ವರೂಪಕ್ಕೆ ಅನ್ವಯಿಸುವುದರಿಂದ– ಅಲ್ಲಿ ತಾನು ವಾಸ್ತವಿಕವಾಗಿ ಹೇಗಿದ್ದೇನೆ ಎಂಬುದಕ್ಕೆ ಅವನು ಆ ಅಭಿಮಾನವನ್ನು ಅನ್ವಯಿಸಿಕೊಳ್ಳುವುದಿಲ್ಲ. ಇವೆಲ್ಲ ಅನಪೇಕ್ಷಣೀಯ ಪ್ರವೃತ್ತಿಗಳು. ಆದರೆ ಬಹಳ ಜನರು ಅದನ್ನು ನೀತಿಯ ನೆಲಗಟ್ಟೆನ್ನುತ್ತಾರೆ. ಏಕೆಂದರೆ ಅದು ವ್ಯಕ್ತಿಯ ಕಾರ್ಯಗಳನ್ನು ನಿರ್ಣಯಿಸುವ ಆದರ್ಶ ಮಾನದಂಡವನ್ನು ಸೂಚಿಸುತ್ತದೆ.

ಇನ್ನು ಯಾವ ಯಾವ ರಸಗಳನ್ನು ಮಗು ಬೆಳೆಸಿಕೊಳ್ಳುತ್ತದೆ ಎಂಬುದು ಹೆಚ್ಚಾಗಿ ಆವರಣವನ್ನು ಅವಲಂಬಿಸಿರುತ್ತದೆ–ಅದರಲ್ಲೂ ಅದು ಸಂಪರ್ಕ ಪಡೆಯುವ ಪ್ರೌಢರ ಮೇಲೆ. ಅಮೂರ್ತ, ಅರ್ಧಮೂರ್ತ ರಸಗಳ ಹುಟ್ಟು ಹಾಗೂ ಬೆಳವಣಿಗೆಗಳ ಪರಿಶೀಲನದಿಂದ ಅವು ಸಾಮಾನ್ಯವಾಗಿ ಮೂರ್ತರಸಗಳಿಂದ ಉದ್ಭವಿಸುತ್ತವೆ–ವಿಶೇಷತಃ ವ್ಯಕ್ತಿಗಳ ಬಗ್ಗೆ ಇರುವ ರಸಗಳಿಂದ ಎಂದು ತಿಳಿದುಬರುತ್ತದೆ. ಒಂದು ಮಗು ಒಬ್ಬ ಪ್ರೌಢನ ಬಗ್ಗೆ ಮೆಚ್ಚಿಗೆಯನ್ನು ಬೆಳೆಸಿಕೊಂಡಾಗ ಇಲ್ಲವೆ ಇತಿಹಾಸ ಅಥವಾ ಕಥೆ ಕಾದಂಬರಿಗಳಲ್ಲಿ ಇರುವ ಪಾತ್ರದ ಬಗ್ಗೆ ಅಭಿಮಾನ ತಾಳಿದಾಗ ಆ ವ್ಯಕ್ತಿ ಅಥವಾ ಪಾತ್ರಪ್ರದರ್ಶಿಸುವ ಅಮೂರ್ತ ರಸಗಳನ್ನು ಸ್ವೀಕರಿಸುವ ಸಂಭವವಿರುತ್ತದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ವಾಚ್ಯವಾದ ನೀತಿಬೋಧೆಗಿಂತಲೂ ಹೆಚ್ಚಾಗಿ ವೈಯಕ್ತಿಕ ಉದಾಹರಣೆ ಮತ್ತು ಪ್ರಭಾವಗಳಿಂದಲೇ ನೈತಿಕ ರಸಗಳು ರೂಪಿತವಾಗುತ್ತವೆ.

ಕೆಲವೊಮ್ಮೆ ಮೂರ್ತರಸಗಳು ಅಮೂರ್ತರಸಗಳಿಂದ ಉದ್ಭವಿಸುವುದೂ ಉಂಟು. ಆದರೆ ಅಂಥ ಸಂದರ್ಭ ಕಡಿಮೆ–ಹಿಂದೂ ಧರ್ಮ ಅಥವಾ ಕಾಂಗ್ರೆಸ್ ಪಕ್ಷದ ಮೇಲೆ ವ್ಯಾಮೋಹವಿದ್ದವನು ತನ್ನ ಅಭಿಪ್ರಾಯವನ್ನು ಇಟ್ಟುಕೊಂಡ ಇತರರ ಬಗ್ಗೆ ಅನುಕೂಲವಾದ ಮೂರ್ತರಸಗಳನ್ನು ರೂಢಿಸಿಕೊಳ್ಳುವ ಪೂರ್ವಪ್ರವೃತ್ತಿ ಇಟ್ಟುಕೊಂಡಿರುವುದು ಇದಕ್ಕೊಂದು ಉದಾಹರಣೆ.

ಹೀಗೆ ರಸಗಳನ್ನು ಒಂದು ದೃಷ್ಟಿಯಿಂದ ಮಾನಸರುಚಿಗಳೆನ್ನಬಹುದು. ಆ ದಿಶೆಯಲ್ಲಿ ಮನುಷ್ಯನ ಬಂಧ–ಮೋಕ್ಷಗಳಿಗೆ ಮನಸ್ಸು ಕಾರಣವೆಂದೆವು. ಅಂಥ ಕೃತ್ಯ ರೂಪದ ಮನಸ್ಸಿನ ಚಿರಸ್ಥಾಯಿಯಾದ ಬಲಿಷ್ಠ ಪ್ರೇರಣೆ ರಸಾತ್ಮಕ. ಸುಸಂಸ್ಕೃತ ಅಥವಾ ಕುಸಂಸ್ಕೃತ ಮಾನವನ ಅಭಿಜ್ಞೆ, ಸಂಕಲ್ಪ ಮತ್ತು ಭಾವನೆಗಳ ನೆಲಗಟ್ಟಾಗಿರುವುದು ರಸ. ಪ್ರಾಣಿಗಳಿಗಿಂತ ಹೆಚ್ಚಿನ ಚೋದನಾ ಗ್ರಹಣದ ಕಾರ್ಯವು ಮನುಷ್ಯನ ಷಟ್ಕರಣಗಳಲ್ಲಿ ಜ್ಞಾತಾಜ್ಞಾತವಾಗಿ ನಿರಂತರವೂ ನಡೆಯುತ್ತಿರುವುದರಿಂದ ಅವನು ಸಂಸ್ಕಾರ ರೂಪದಲ್ಲಿ ಪರಿಣಮಿಸುವ ಮನೋಮುದ್ರೆಗಳ ಪ್ರಭಾವದಿಂದ ಎಂದೂ ಮುಕ್ತನಾಗಿರಲಾರ. ಅವನ ಮನಸ್ಸು ಸಂಪೂರ್ಣ ಖಾಲಿಯಾಗಿರುವ ಅವಸ್ಥೆ ಅಕಲ್ಪನೀಯ. ಆದುದರಿಂದ ಮಾನವನು ಆಜನ್ಮ ವಿದ್ಯಾರ್ಥಿ. ಅವನ ರಸರೂಪಣ–ರೂಪದ ವಿದ್ಯಾರ್ಜನೆ ಸಾಯುವವರೆಗೂ ನಡೆದೇ ಇರುತ್ತದೆ. ಅವನ ಅಭಿಪ್ರಾಯ ಅಭಿರುಚಿ, ಅನುಕೂಲ–ಪ್ರತಿಕೂಲಪ್ರವೃತ್ತಿಗಳು ಸಾಮಾನ್ಯವಾಗಿ ಜೀವನದ ಆದ್ಯಂತವೂ ರಸಪ್ರೇರಿತ. ಅದರಿಂದಲೇ ಶಿಕ್ಷಣದಲ್ಲಿ ಕೇವಲ ಜ್ಞಾನಾರ್ಜನೆ ಮುಖ್ಯವಲ್ಲ, ವಿದ್ಯಾರ್ಥಿಯ ಶೀಲರೂಪಣ ಮುಖ್ಯ ಎಂದು ಶಿಕ್ಷಣತಜ್ಞರನೇಕರು ಸಿದ್ಧಾಂತಿಸಿದ್ದು. 'ಮನೋದಾರ್ಢ್ಯವಂತನು ತನಗುಂಟಾದ ಭಾವನಾಂಶವನ್ನು ಅಡಗಿಸಿಕೊಂಡಾಗ ಅದು ರಸವೆನಿಸುತ್ತದೆ. ಕಲ್ಪನಾಶಕ್ತಿಯು ಸುಂದರವಾದ ಹರಳುಗಳನ್ನಾಗಿ ಮಾಡಿದಂತಿರುವ ಒಮ್ಮಿಂದೊಮ್ಮೆ ಆವಿರ್ಭವಿಸಿದ ಭಾವನೆಯೇ ರಸ. ಬೌದ್ಧಿಕ ರೂಪಕ್ಕೆ ಪರಿವರ್ತಿಸಲಾದ ಭಾವನೆಯೇ ರಸ. ರಸವೆಂಬುದು ಕಲ್ಪನಾಶಕ್ತಿಯ ಪದ್ಯ ಕಾವ್ಯ. ಅದು ಕಲ್ಪನಾಶಕ್ತಿಯ ಪಕ್ವಫಲ, ಹೆಂಗಸಿನ ಸಾಕ್ಷಿಪ್ರಜ್ಞೆ' ಎಂದು ಮುಂತಾಗಿ ವಿದ್ವಾಂಸರು ರಸಪ್ರಶಂಸೆ ಮಾಡಿದ್ದು ತಪ್ಪಲ್ಲ. ಆದರೆ ಈ ಲೌಕಿಕ ಮುಖದ ರಸವು ಕಾವ್ಯಪ್ರೇರಿತವಾದ ರಸಾತ್ಮಕ ಮನಃಸ್ಥಿತಿಯ ಕಾರಣ ಸಾಮಗ್ರಿಗಳಲ್ಲಿ ಅಡಕವಾಗಿದ್ದರೂ ಆ ರಸಪ್ರಜ್ಞೆಯಿಂದ ಭಿನ್ನ. ಮನಃಶಾಸ್ತ್ರದ ವ್ಯಾವಹಾರಿಕ ದೃಷ್ಟಿಯ ವಿವರಣೆಗಳ ಮೂಲಕ ಈವರೆಗೆ ವಿವೇಚಿಸಿದ್ದು ಲೋಕರಸವನ್ನು, ಕಾವ್ಯರಸವನ್ನಲ್ಲ ಎಂಬುದು ನೆನಪಿಟ್ಟುಕೊಳ್ಳಬೇಕಾದ ಅಂಶ.

✱

## ಅನುಬಂಧ

# ಆಯುರ್ವೇದೀಯ ಮನೋವಿಜ್ಞಾನ

ಮನಸ್ಸು: ಸುಖ–ದುಃಖ ಮೊದಲಾದ ಅನುಭವಗಳನ್ನು ಪ್ರತ್ಯಕ್ಷಕ್ಕೆ ತಂದುಕೊಡುವ ಪರಮಾಣು ರೂಪವುಳ್ಳ (ದ್ರವ್ಯಜಾತಿಗೆ ಸೇರಿದ) ಹೃದಯದಲ್ಲಿರುವ ಒಂದು ಇಂದ್ರಿಯಾತ್ಮಕ ಸಾಧನ. ಅದು ಅತೀಂದ್ರಿಯ ಅಥವಾ ಅನುಮಾನಗಮ್ಯ (Inferable); ಸತ್ವ (ಸಾರ, ಮುಖ್ಯ) ಸಂಜ್ಞೆಯುಳ್ಳ ಚೇತಸ್ಸು. ಸುಖ–ದುಃಖ, ಚಿಂತ್ಯ–ಚಿಂತನಾದಿಗಳ ಭೋಕ್ತ ಮತ್ತು ಕರ್ತ ಎನಿಸಿದ್ದು ಆತ್ಮತತ್ವ. ಅದು ಚೇತನಾಸ್ವರೂಪವುಳ್ಳದ್ದು. ಮನಸ್ಸು ತನ್ನ ಪಂಚೇಂದ್ರಿಯಗಳ ಸಹಕಾರದಿಂದ ಆತ್ಮಕ್ಕೆ ಪ್ರಪಂಚಾನುಭವ ಮಾಡಿಸಿಕೊಡತಕ್ಕ ಕರಣ. ಚಕ್ಷುರಾದಿ ಪಂಚೇಂದ್ರಿಯ ಗ್ರಾಹ್ಯವಾದ ರೂಪಾದಿ ಗುಣ ಅಥವಾ ಸಂವೇದನೆಗಳನ್ನು ಆ ಇಂದ್ರಿಯಗಳು ಗ್ರಹಿಸುವಲ್ಲಿ ಮನಸ್ಸು ಪ್ರತ್ಯಯರೂಪದ ಕಾರಣವಾಗುತ್ತದೆ–ಅರ್ಥಾತ್ ನಿಷ್ಕೃಷ್ಟಜ್ಞಾನಕಾರಕವಾಗುತ್ತದೆ.

ಸುಖ, ಚಿಂತ್ಯ ಮುಂತಾದವು ವಿಷಯಗಳಾದಾಗ ಆತ್ಮವು ತನ್ನ ಪ್ರಯತ್ನ ಶೀಲವನ್ನು ವ್ಯಕ್ತಮಾಡುತ್ತದೆ. ಆಗ ಮನಸ್ಸು ಆಯಾ ವಿಷಯಗಳಲ್ಲಿ ಪ್ರವರ್ತಿಸುತ್ತದೆ; ಪಂಚೇಂದ್ರಿಯಗಳನ್ನು ಆಶ್ರಯಿಸುತ್ತದೆ. ಅನಂತರ ಆ ಇಂದ್ರಿಯಗಳು ಆಯಾ ವಿಷಯಗಳ ಜ್ಞಾನಗಳನ್ನು ಮನಸ್ಸಿನ ಮೂಲಕ ಆತ್ಮಕ್ಕೆ ಮಾಡಿಕೊಡುತ್ತವೆ. ಅಂಥ ಜ್ಞಾನವು ಪ್ರಪಂಚಕ್ಕೆ ಸಂಬಂಧಿಸಿದ ವಿಚಾರ, ಭಾವನೆ ಅಥವಾ ಬಯಕೆಯ ರೂಪದ್ದಾಗಿರುತ್ತದೆ.

ಉಪಾಧಿ ಅಥವಾ ಆಶ್ರಯದ ಭೇದದಿಂದ ಒಂದೇ ಆಗಿರುವ ಮನಸ್ತತ್ವವು ಅನೇಕವಾಗಿ ಕಂಡುಬರುತ್ತದೆ. ಅಂದರೆ, ಮನಸ್ಸು ತಾನು ಗ್ರಹಿಸಿರುವ ಒಂದು ವಸ್ತುವನ್ನು ಬಿಟ್ಟು ಮತ್ತೊಂದನ್ನು ಗ್ರಹಿಸುವುದರಿಂದ ಅಥವಾ ತನ್ನ ಒಂದು ಸಂಕಲ್ಪವನ್ನು ತ್ಯಜಿಸಿ ಮತ್ತೊಂದನ್ನು ಹಿಡಿಯುವುದರಿಂದ ಒಬ್ಬನಲ್ಲೇ ಅನೇಕ ಮನಸ್ಸುಗಳಿರಬಹುದೆಂದು ತೋರುವುದು. ಇದು ಬರಿಯ ಭ್ರಮೆ. ಒಂದೇ ಒಂದಾದ ಮನಸ್ಸು ಸತ್ವಗುಣವನ್ನಾಶ್ರಯಿಸಿದಾಗ ಸಾತ್ವಿಕ, ರಜೋಗುಣವನ್ನಾಶ್ರಯಿಸಿದಾಗ ರಾಜಸ ಮತ್ತು ತಮೋಗುಣವನ್ನು ಆಶ್ರಯಿಸಿದಾಗ ತಾಮಸ ಎನಿಸುತ್ತದೆ. ಒಂದೇ ಒಂದಾದ ಆ ಮನಸ್ಸು ಒಬ್ಬನಲ್ಲಿರುವಾಗ ಅನೇಕ ವಿಷಯಗಳಲ್ಲಿ ಏಕ ಕಾಲದಲ್ಲಿ ಪ್ರವರ್ತಿಸುವುದಿಲ್ಲ. ಆದುದರಿಂದ ಅನೇಕ ಇಂದ್ರಿಯಗಳ ಕಾರ್ಯಗಳು ಅಕ್ಷರಶಃ (ಶುದ್ಧ ತರ್ಕಾನುಸಾರ) ಏಕ ಕ್ಷಣದಲ್ಲಿ ಮನಸ್ಸಿಗೆ ಅವಗತವಾಗಲಾರವು. ಸೂಕ್ಷ್ಮವಾದ

ಕಾಲಿಕ ಅನುಕ್ರಮ ಅವುಗಳ ಜ್ಞಾನವು ಮನಸ್ಸಿಗಾಗುವುದರಲ್ಲಿ ಇದ್ದೇ ಇರಬೇಕು; ಏಕಕಾಲಾವಧಿಯಲ್ಲಿ ಮನಸ್ಸು ಪಂಚೇಂದ್ರಿಯಗಳೆಲ್ಲವೂ ಅವವುಗಳ ವಿಷಯವನ್ನು ಗ್ರಹಿಸುವಂತೆ ಪ್ರೇರಿಸಲಾರದು. ಪಂಚೇಂದ್ರಿಯಗಳೆಲ್ಲವುಗಳಿಂದಲೂ ಬರುವ ಒಂದು ವಸ್ತುವಿನ ಜ್ಞಾನಗಳನ್ನು ಮನಸ್ಸು ಗ್ರಹಿಸಲಾರದುದರಿಂದಲೇ ಅದು ಪರಮಾಣುರೂಪವುಳ್ಳದ್ದೆಂದು ಸಿದ್ಧಾಂತಿಸಲಾಗಿದೆ.

**ಮನೋ ವಿಷಯಗಳು:** ಮೊದಲನೆಯದು ಚಿಂತ್ಯ. ಕಾರ್ಯತಃ ಆಗಲಿ, ಕೇವಲ ಸಂಕಲ್ಪದಿಂದಾಗಲಿ ಚಿಂತಿಸಲ್ಪಡುವುದು ಚಿಂತ್ಯ. ಎರಡನೆಯದು ವಿಚಾರ್ಯ. ಯುಕ್ತಾಯುಕ್ತ, ಪ್ರಾಪ್ಯಾಪ್ರಾಪ್ಯಗಳ ದೃಷ್ಟಿಯಿಂದ ವಿಮರ್ಶಿಸಲ್ಪಡುವುದು ವಿಚಾರ್ಯ. ಮೂರನೆಯದು ಊಹ್ಯ. ಸಂಭಾವನಾದೃಷ್ಟಿಯಿಂದ ಊಹಿಸಲ್ಪಡುವುದು ಊಹ್ಯ. ನಾಲ್ಕನೆಯದಾದ ಧ್ಯೇಯವು ಭಾವನೆಯಲ್ಲಿರುವ ಜ್ಞಾನಕ್ಕೆ ವಿಷಯವಾಗಿದೆ. ಅನುಭೂತಾನನುಭೂತ ವಿಷಯಗಳಲ್ಲಿ ಮನುಷ್ಯನ ವಿಚಾರವು ಸ್ಥಿರತೆಯನ್ನು ಹೊಂದುವದಿದೆಯೋ ಅದಕ್ಕೆ ಭಾವನೆಯೆಂಬ ಹೆಸರು. ಆರನೆಯದಾದ ಸಂಕಲ್ಪವು ಗುಣ ಅಥವಾ ದೋಷದಿಂದ ಮುಂದೆ ನಿಶ್ಚಯವಾಗುವ ವಿಷಯ. ಅದೇ ವಿಶಾಲಾರ್ಥದಲ್ಲಿ ಮನಸ್ಸಿನ ಎಲ್ಲ ಕರ್ಮ, ಕಾರ್ಯ, ಕ್ರಿಯೆ. ಅದು ನಿರ್ಧಾರ್ಯ. ಯಾವುದಾದರೊಂದು ಮನೋವಿಷಯು ಎಂದರೆ ಮನಸ್ಸು ತಿಳಿಯತಕ್ಕದ್ದೆನಿಸಿರುವ ಅಂಶ ಅಥವಾ ಅರ್ಥ.

ಇಷ್ಟೇ ಅಲ್ಲದೆ, ಪಂಚೇಂದ್ರಿಯಗಳ ಸಹಾಯವಿಲ್ಲದೆಯೂ ಮನಸ್ಸು ಕೆಲ ಅಂಶಗಳನ್ನು ತಿಳಿದುಕೊಳ್ಳಬಲ್ಲುದಾಗಿದೆ. ಆದುದರಿಂದ ಮನಃಪದಾರ್ಥವು ಸ್ವತಂತ್ರ. ಅದು ಅವಿನಾಶಿ; ಒಬ್ಬೊಬ್ಬರಿಗೊಂದೊಂದರಂತಿರುವುದರಿಂದ ಅನಂತ ಪಂಚೇಂದ್ರಿಯಗಳಲ್ಲಿ ಒಂದೊಂದಕ್ಕೂ ವಿಷಯಗ್ರಹಣಕ್ಕೆ ಸಹಾಯಕವಾದುದರಿಂದ ಅವೆಲ್ಲವಕ್ಕೂ ಅದು ಅಧಿಷ್ಠಾನ ಅಥವಾ ಆಶ್ರಯ.

**ಬುದ್ಧಿ:** ಐಂದ್ರಿಯಿಕ ವಿಷಯಗಳ ಗ್ರಹಣ, ಆತ್ಮನಿಗ್ರಹಣ, ಊಹನ, ವಿಚಾರಣ, ಮತ್ತು ಸಂಕಲ್ಪಗಳು ಮನಸ್ಸಿನ ಕರ್ಮಗಳು. ಸಂಶಯದ ಅವಸ್ಥೆಯಲ್ಲೇ ಇರುವುದು ಮನಸ್ಸು; ಅದು ನಿಶ್ಚಯರೂಪ ತಾಳಿದೊಡನೆಯೇ ಬುದ್ಧಿ ಎನಿಸುತ್ತದೆ. ಸಂಕಲ್ಪ–ವಿಕಲ್ಪಾತ್ಮಕವಾದ ಮನಸ್ಸಿನಿಂದ ಪ್ರವರ್ತನೆಯಾದ ಮೇಲೆ ಅಧ್ಯಯವಸಾಯ, ಬುದ್ಧಿ, ನಿಷ್ಕೃಷ್ಟಜ್ಞಾನ ಎಂಬುದು ಫಲಿಸಿ, ಅದು ಮನುಷ್ಯನನ್ನು ಕಾರ್ಯಕ್ಕೆ ಪ್ರಚೋದಿಸುತ್ತದೆ. ಮನಸ್ಸು ಸಂಕಲ್ಪಪ್ರಧಾನವಾದ ಅವಸ್ಥೆ, ಬುದ್ಧಿಯು ನಿಶ್ಚಯಪ್ರಧಾನವಾದ ಅವಸ್ಥೆ. ಮನಸ್ಸು, ಇಂದ್ರಿಯ, ಬುದ್ಧಿಗಳ ಗುಣ ವೈಲಕ್ಷಣ್ಯವನ್ನು ದೀಪದ ಬತ್ತಿ, ಎಣ್ಣೆ, ಬೆಂಕಿಗಳ ಗುಣ ವೈಲಕ್ಷಣ್ಯಕ್ಕೆ ಹೋಲಿಸಲಾಗಿದೆ. ದೀಪದ ಜ್ವಾಲೆಯ ಸ್ಥಾನ ಜೀವಾತ್ಮಕ್ಕೆ. ಅಹಂಕಾರಯುಕ್ತವಾದ ಷಟ್ಕರಣಗಳು ಜೀವಾತ್ಮಾನುವರ್ತಿಗಳು. ನಾನು ಅನುಭವಿಸುತ್ತೇನೆ, ಮಾಡುತ್ತೇನೆ ಎಂಬುದು ಜೀವಾತ್ಮದ ಅಹಂಕಾರ; ಆದರೆ ಜಡವಾದುದರಿಂದ ದೀಪಜ್ವಾಲೆ ಮಾತ್ರ ನಾನು ಪ್ರಕಾಶಿಸುತ್ತೇನೆ, ವಸ್ತುಜ್ಞಾನ ಮಾಡಿಕೊಡುತ್ತೇನೆ ಎನ್ನುವುದಿಲ್ಲ–ಅಷ್ಟೆ.

ಐದು ಜ್ಞಾನೇಂದ್ರಿಯಗಳ ಮೂಲಕ ಬೇರೆ ಬೇರೆಯಾದ ಐದು ಇಂದ್ರಿಯ ಪ್ರತ್ಯಕ್ಷಗಳಾಗುತ್ತವೆ. ಅಂಥ ಇಂದ್ರಿಯಪ್ರತ್ಯಕ್ಷಕ್ಕೆ ಕಾರಣವಾಗಿ ಆಯಾ ಇಂದ್ರಿಯಕ್ಕೆ ಸಹಕಾರಿಯಾದ ಬುದ್ಧಿ ಇದೆ. ಈ ಪ್ರಕಾರ ಐದು ಇಂದ್ರಿಯಗಳಿಗೆ ಐದು ಬುದ್ಧಿ (ಪ್ರದೇಶ)ಗಳಿವೆ. ಇಷ್ಟರಮೇಲೆ ಕೇವಲ ಮನಸ್ಸಿಗೆ ಸಹಕಾರಿಯಾದ 'ಮನೋಬುದ್ಧಿ' ಎಂಬ ಶಕ್ತಿಯನ್ನೂ ನಿರ್ದೇಶಿಸಲಾಗಿದೆ. ಮನೋಬುದ್ಧಿಯು ಇಂದ್ರಿಯ ಹಾಗೂ ಅರ್ಥಗಳ ಸನ್ನಿಕರ್ಷವಿಲ್ಲದೆಯೇ ಉತ್ಪನ್ನವಾಗಬಲ್ಲುದು. ಅದರ ಸಹಾಯದಿಂದ ಮನಸ್ಸು ಇಂದ್ರಿಯಗಳ ಸಹಾಯವಿಲ್ಲದೆ ಕೂಡ ಚಿಂತ್ಯ ಮುಂತಾದ ಅರ್ಥ ಅಥವಾ ವಿಷಯಗಳನ್ನು ನಿರ್ಣಯಿಸಬಲ್ಲುದು. ಮನಸ್ಸಿನ ಸ್ವಾತಂತ್ರ್ಯ ಈ ಬುದ್ಧಿಯ ಅಸ್ತಿತ್ವದಿಂದಲೇ ಸಿದ್ಧ; ಅದು ಇಂದ್ರಿಯ–ಅರ್ಥಗಳಿಲ್ಲದೆ ಸಹ ವಿಷಯಗ್ರಹಣ ಮಾಡಲು ಸಮರ್ಥವಾಗಿ ಅತೀಂದ್ರಿಯವೆನಿಸಿದ್ದಾದರೂ ಇದರಿಂದಲೇ. ಮನಸ್ಸು ಮನೋಬುದ್ಧಿಗಳೊಡನೆ ಮನೋಽರ್ಥ ಅಥವಾ ಮನೋವಿಷಯದ ಸಮಯೋಗವಿದ್ದಾಗ ಮನುಷ್ಯನು ಸಮಸ್ಥಿತಿಯಲ್ಲಿರುತ್ತಾನೆ. ಅಂಥ ಸಮಯೋಗವಿಲ್ಲದೆ ಹೋದಾಗ ಪ್ರಕೃತಿಯು ವಿಕೃತವಾಗುತ್ತದೆ, ವಿಷಮವಾಗುತ್ತದೆ. ಇಂಥ ವಿಷಮಸ್ಥಿತಿಗೆ ವಿಷಯದ ಅತಿಯೋಗ, ಅಯೋಗ, ಹೀನಯೋಗ ಮತ್ತು ಮಿಥ್ಯಾಯೋಗಗಳು ಕಾರಣಗಳು. ವಿಷಯದ ಅತಿಭೋಗವೇ ಅತಿಯೋಗ, ಅಭೋಗವೇ ಅಯೋಗ, ಅಲ್ಪಭೋಗವೇ ಹೀನಯೋಗ ಮತ್ತು ವಿಕಟಭೋಗವೇ ಮಿಥ್ಯಾಯೋಗ.

**ಮನೋರೋಗ:** ಮನಸ್ಸನ್ನು ಆಶ್ರಯಿಸಿ ಉತ್ಪನ್ನವಾಗುವ ರೋಗಗಳಿಗೆ ಮಾನಸ ರೋಗಗಳೆಂದು ಹೇಳಲಾಗಿದೆ. ಅಂಥ ರೋಗಗಳಿಗೆ ಪದೇ ಪದೇ ಅತಿಯಾಗಿ ಉದ್ರಿಕ್ತವಾಗುವ ಕಾಮಕ್ರೋಧಾದಿಗಳು ಮುಖ್ಯ ಕಾರಣಗಳು. ಅವುಗಳಿಂದ ಮನಸ್ಸು ಅಪಘಾತ ಹೊಂದಿದರೆ, ಅದರ ಆಶ್ರಯವಾದ ಹೃದಯವು ರೋಗಗ್ರಸ್ತವಾಗುತ್ತದೆ. ಆಯುಕ್ತ ಪ್ರಮಾಣದಲ್ಲಿ ಕಾಮಾದಿ ಭಾವನೆಗಳ ಉದ್ಬೋಧವಾಗಲು ಹಿಂದೆ ಹೇಳಿದಂತೆ ಮನಸ್ಸು–ಮನೋಬುದ್ಧಿಗಳೊಡನೆ ಇಂದ್ರಿಯಾರ್ಥದ ಯೋಗವು ವಿಷಮರೀತಿಯಿಂದ ಉಂಟಾಗುವ ಸನ್ನಿವೇಶದಲ್ಲಿ ಮನುಷ್ಯನು ಸಿಕ್ಕಿ ಬೀಳುವುದೇ ಕಾರಣ. ವಿಷಮಬುದ್ಧಿ ಸ್ಥಿತಿಗಳಿಗೂ ಅದೇ ಕಾರಣವಾಗುತ್ತದೆ.

ಜೀವಾತ್ಮನ ಚೇತನಾಯೋಗವಿಲ್ಲದ ವಿಸಂಗತ ಮನಸ್ಸು ಜಡ, ಆದರೆ ಕ್ರಿಯಾಯುಕ್ತ. ಆತ್ಮವು ಚೇತನಾಮಯ. ಅದು ಮನಸ್ಸನ್ನು ಪ್ರೇರಿಸುವುದೆಂದರೆ ಚೇತನೆಯನ್ನುಂಟುಮಾಡುವುದು. ಚೇತನಾಯುಕ್ತವಾದ ಕೂಡಲೇ ಮನಸ್ಸು ಕ್ರಿಯೆಯನ್ನು ಆರಂಭಿಸುತ್ತದೆ. ಆದರೆ ಜಡ ಮನಸ್ಸಿನ ಕ್ರಿಯಾವಂತಿಕೆಯನ್ನು ಅದರ ಸ್ವಯಂಕರ್ತೃತ್ವವೆಂದು ತಿಳಿಯಬಾರದು. ಆತ್ಮಕ್ಕೆ ಕ್ರಿಯೆಯನ್ನು ಆರೋಪಿಸಿರುವುದು ಔಪಚಾರಿಕ. ವಸ್ತುತಃ ಆತ್ಮವು ಕ್ರಿಯಾಕಾರಕ, ಕ್ರಿಯಾವಂತವಲ್ಲ. ಚೇತನಾವಂತಿಕೆಯಿಂದ ಮಾತ್ರ ಜೀವಾತ್ಮವು ಕರ್ತ, ಭೋಕ್ತ ಎನಿಸುತ್ತದೆ.

**ಜೀವಾತ್ಮ:** ಆತ್ಮ ಅಥವಾ ಜೀವಾತ್ಮ ಎಂಬುದು ಸರ್ವಕ್ರಿಯಾಸಾಧಕ. ಜೀವನವೆಂದರೆ ಜೀವಾತ್ಮದೊಡನೆ ಮನಸ್ಸು, ಬುದ್ಧಿ, ದೇಹಗಳ ಒಂದು ಸಂಯುಕ್ತಾವಸ್ಥೆ. ಅವು

ವಿಮುಕ್ತವಾದಾಗ ಮರಣ. ಮರಣದ ಅವಸ್ಥೆಯಲ್ಲಿ ಕ್ರಿಯೆಯೂ ಇಲ್ಲ, ಚೇತನೆಯೂ ಇಲ್ಲ; ಅದರಲ್ಲಿರುವ ಪದಾರ್ಥಗಳೆಲ್ಲವೂ ಭೂತಾತ್ಮಕ. ಭೌತಿಕ ಪದಾರ್ಥವರ್ಗದಿಂದ ಭಿನ್ನವಾದವುಗಳೆಲ್ಲವೂ ಆತ್ಮಾದಿಗಳಿಗೆ ಸಂಬಂಧಿಸಿದಂಥವು. ಜೀವಾತ್ಮ ನೇರವಾಗಿ ಮಾಡಿಸುವ ಕೆಲಸಗಳೆಂದರೆ ಪ್ರಾಣಾಪಾನಗಳು, ಶ್ವಾಸೋಚ್ಛ್ವಾಸಗಳು, ನಿಮೇಷೋನ್ಮೇಷಗಳು, ಜೀವಿಸಿರುವಂತೆ ಎಸಗುವುದು ಮತ್ತು ಮನಸ್ಸಿಗೆ ಚೇತನೆ ಕೊಡುವುದು.

ಮನಸ್ಸಿನ ಕರ್ಮವಾದ ಕಣ್ಣು ಮುಂತಾದ ಇಂದ್ರಿಯಗಳಲ್ಲಿ ಸಂಚರಿಸುವುದು ಪ್ರೇರಣೆ–ಧಾರಣೆಗಳು, ಸ್ವಪ್ನದಲ್ಲಿಯ ದೇಶಾಂತರಗತಿ ಮತ್ತು ಮೃತವಾದ ಲಕ್ಷಣವನ್ನು ತಿಳಿಯುವುದು ಆತ್ಮಾಶ್ರಯ ಮನೋವ್ಯಾಪಾರಗಳು.

ಆತ್ಮದಲ್ಲಿ ಇಚ್ಛೆ, ದ್ವೇಷ, ಸುಖ, ದುಃಖ, ಪ್ರಯತ್ನ, ಬುದ್ಧಿಗಳೂ ಬುದ್ಧಿಯಲ್ಲಿ ಪ್ರಕಾಶವಾಗುವ ಚೇತನೆ, ಧೃತಿ, ಸ್ಮೃತಿ ಮತ್ತು ಅಹಂಕಾರಗಳೂ ಲಕ್ಷಣಗಳಾಗಿ ನಿಂತಿವೆ. ಪಂಚಭೂತಾತ್ಮಕವಾದ ಮೃತದೇಹದಲ್ಲಿ ಈ ಯಾವುದೂ ಇಲ್ಲ.

## ವಿಶೇಷ ವಿವರಗಳು

ಆಯುರ್ವೇದವು ಪ್ರಥಮತಃ ಸಾಂಖ್ಯದರ್ಶನವನ್ನು ಆಧರಿಸಿದ್ದು. ಆ ದರ್ಶನದ ಪ್ರಕಾರ ಜೀವಗಳೆಲ್ಲ ಪುರುಷಗಳು. ಮಿಕ್ಕವೆಲ್ಲ ಪ್ರಕೃತಿ ಎಂಬ ಪದಾರ್ಥದ ವಿಕಾರಗಳು. 'ಬುದ್ಧಿಯು' ಅಂಥ ಮೊದಲನೆಯ ವಿಕಾರ. ಅದು ಜೀವವಿಲ್ಲದ್ದು. ಆದರೆ ಸ್ಪಷ್ಟಾರ್ಥದಲ್ಲಿ ಜಡವಲ್ಲ. ಅದು ಜಡಕ್ಕೂ ಜೀವಕ್ಕೂ ನಡುವೆ ಬರುತ್ತದೆ. ಅದು ಜಡಶಕ್ತಿಯ ಹೆಚ್ಚು ನಯವೂ ಸೂಕ್ಷ್ಮವೂ ಆದ ರೂಪಗಳನ್ನು ಪುರುಷ ಅಥವಾ ಜೀವಾತ್ಮನ ನೇರವಾದ ಸದ್ಯಃ ಪ್ರತ್ಯಕ್ಷಕ್ಕೆ ವಸ್ತುಗಳಾಗುವಂತೆ ರೂಪಾಂತರಗೊಳಿಸಿ ಮಾಡಿದ್ದು. ಬುದ್ಧಿಯ ಮೂಲಕ ಪುರುಷನು ಹೊರ ಜಗತ್ತಿನೊಡನೆ ಸಂಪರ್ಕ ಹೊಂದುತ್ತಾನೆ. ಆಗ ಅವಿವೇಕದ ಫಲವಾಗಿ ಅವನಲ್ಲಿ ಮಮತ್ವ ಅಥವಾ ಅಹಂಕಾರ ಉದಯವಾಗುತ್ತದೆ. ಈ ಅವಸ್ಥಾಂತರಗಳಾವುವೂ ಕಾಲದ ಆವರಣದಲ್ಲಿ ಸಂಭವಿಸುವಂಥವಲ್ಲ. ಇವೆಲ್ಲ ಆದರ್ಶಲೋಕಕ್ಕೆ ಸೇರಿದಂಥವು.

ಇಡಿ ವಿಶ್ವವೂ ಪ್ರಕೃತಿಯಿಂದ ಹುಟ್ಟಿದ್ದು. ವ್ಯಕ್ತಿ (ಪುರುಷ) ಅದರಲ್ಲಿ ಇದ್ದಾನೆ. ಅದು ಅವನಲ್ಲಿ ಸಂಸಾರದ ಸುಖ–ದುಃಖ–ಮೋಹರೂಪದ ಅನುಭವವನ್ನು ಉಂಟುಮಾಡುತ್ತದೆ. ವ್ಯಕ್ತಿಯ ಮನಸ್ಸಿನ ಹಾಗೂ ಬುದ್ಧಿ ಮುಂತಾದವುಗಳ ಮಾನಸಿಕ ಯಂತ್ರದಿಂದೊಡಗೂಡಿದ ಶರೀರವು ಆಧ್ಯಾತ್ಮಿಕ ಭೇದಗಳಲ್ಲಿ ಅಡಕವಾಗುತ್ತದೆ. ಶರೀರವೂ ನಾನಾ ವಿಧದ ಸುಖ–ದುಃಖ–ಮೋಹರೂಪದ ಅನುಭವಗಳ ಆಗರ.

ಪಂಚ ಜ್ಞಾನೇಂದ್ರಿಯಗಳಿಗೂ ಅವುಗಳ ವಿಷಯಗಳುಳ್ಳ ಪದಾರ್ಥಗಳಿಗೂ ಸನ್ನಿಕರ್ಷ, ಸಂಬಂಧ ಅಥವಾ ಸಾಮೀಪ್ಯ ಉಂಟಾದಾಗ ಪ್ರತ್ಯಕ್ಷಾನುಭವ ಉಂಟಾಗುತ್ತದೆ. ನ್ಯಾಯ–ವೈಶೇಷಿಕರ ಪ್ರಕಾರ ಆತ್ಮ–ಮನಸ್ಸುಗಳು ಮೊದಲು ಕೂಡಬೇಕು. ಅನಂತರ ಹಾಗೆ ಆತ್ಮದಿಂದೊಡಗೂಡಿದ ಮನಸ್ಸು ಇಂದ್ರಿಯಸಂಪರ್ಕ ಪಡೆಯುತ್ತದೆ. ಆ ಪ್ರಕಾರದ

ಮನಸ್ಸಿಂದೊಡಗೂಡಿದ ಇಂದ್ರಿಯವು ವಸ್ತು ಸಂಪರ್ಕ ಹೊಂದಿದಾಗ ವಸ್ತುಸ್ವರೂಪಜ್ಞಾನವು ಇಂದ್ರಿಯದ್ವಾರಾ, ಮನಸ್ಸಿನ ಮೂಲಕ ಜೀವಾತ್ಮಕ್ಕಾಗುವುದು.

ಕಣ್ಣಿನ ಇಂದ್ರಿಯಶಕ್ತಿಯು ಕೃಷ್ಣ ತಾರೆಯ ತುದಿಯಲ್ಲಿರುತ್ತದೆ. ವಸ್ತುವೊಂದು ಎದುರಾದಾಗ ಈ ಇಂದ್ರಿಯಶಕ್ತಿಯು ಅದನ್ನು ಆವರಿಸಿ, ಅದರ ಸ್ವರೂಪವನ್ನು ಗ್ರಹಿಸಿ ಹಿಂದಿರುಗಿ ಮನಸ್ಸಿಗೆ ಮುಟ್ಟಿಸಿದಾಗ ನಮಗೆ ಚಾಕ್ಷುಷಪ್ರತ್ಯಕ್ಷವಾಗುತ್ತದೆ. ಇತರ ಇಂದ್ರಿಯಶಕ್ತಿಗಳಾದರೂ ಹಾಗೇ ವಸ್ತುವಿನಲ್ಲಿರುವ ತಮ್ಮ ತಮ್ಮ ವಿಷಯಗಳನ್ನು ಅರ್ಥಾತ್ ಗುಣಗಳನ್ನು ಗ್ರಹಿಸುತ್ತವೆ.

ಪ್ರತ್ಯಕ್ಷಜ್ಞಾನದಲ್ಲಿ ನಿರ್ವಿಕಲ್ಪಕ ಹಾಗೂ ಸವಿಕಲ್ಪಕ ಎಂಬ ಎರಡು ಭೇದಗಳಿವೆ. ಗುಣರಹಿತವಾಗಿ ಕೇವಲ ವಸ್ತುವನ್ನು ಗ್ರಹಿಸುವುದು ಮೊದಲಿನ ಲಕ್ಷಣದಲ್ಲುಂಟಾಗುವ ನಿರ್ವಿಕಲ್ಪಕ ಜ್ಞಾನ. ವಿಕಲ್ಪ ಅಥವಾ ಗುಣಸಹಿತವಾಗಿ ವಸ್ತುವನ್ನು ತಿಳಿಯುವ ಎರಡನೆಯ ಜ್ಞಾನವೇ ಸವಿಕಲ್ಪಕ. ನಿರ್ವಿಕಲ್ಪಕದಲ್ಲಿ ವಿಶೇಷ್ಯ–ವಿಶೇಷಣಗಳ ಮತ್ತು ಅವುಗಳ ಸಂಬಂಧದ ಜ್ಞಾನವಾಗುವುದಿಲ್ಲ; ಸವಿಕಲ್ಪದಲ್ಲಿ ಆಗುತ್ತದೆ.

ಬುದ್ಧಿಯೆಂದರೆ ಜ್ಞಾನ. ಅದು ಎಲ್ಲ ವ್ಯವಹಾರಕ್ಕೂ ಕಾರಣ. ಅದರಲ್ಲಿ ಸ್ಮೃತಿ ಮತ್ತು ಅನುಭವ ಎಂದು ಎರಡು ಭಾಗಗಳಿವೆ. ಸ್ಮೃತಿಯು ಸಂಸ್ಕಾರದಿಂದ ಹುಟ್ಟುತ್ತದೆ. ಅದರಿಂದ ಪ್ರತ್ಯೇಕವಾದದ್ದು ಅನುಭವ. ಅನುಭವ ಎರಡು ಬಗೆಯದು: ಯಥಾರ್ಥ ಅಯಥಾರ್ಥ ಎಂದು. ಯಥಾರ್ಥವು ಸತ್ಯಾನುಭವ, ಅಯಥಾರ್ಥವು ಮಿಥ್ಯಾನುಭವ. ಯಥಾರ್ಥಾನುಭವ ನಾಲ್ಕು ವಿಧ: ಪ್ರತ್ಯಕ್ಷ (Perception), ಅನುಮಿತಿ (Inference), ಉಪಮಿತಿ (Analogy) ಮತ್ತು ಶಾಬ್ದ (Testimony) ಎಂದು.

ಸತ್ಯಾನುಭವವು ಪ್ರಮೆ, ಮಿಥ್ಯಾನುಭವವು ಭ್ರಮೆ. ಮೊದಲನೆಯದರಲ್ಲಿ ವಸ್ತುವಿನ ಜ್ಞಾನ ಇದ್ದ ಹಾಗೇ ಆದರೆ, ಎರಡನೆಯದರಲ್ಲಿ ವಸ್ತುವಿನ ನಿಜ ಜ್ಞಾನದಿಂದ ಭಿನ್ನವಾದ ಅವಾಸ್ತವ ಜ್ಞಾನವಾಗುವುದು.

ಜೀವಶಕ್ತಿ (Life) ಮತ್ತು ಮನಸ್ಸುಗಳು ರೋಗದ ಕಾರಕಗಳಾಗಬಲ್ಲವೆಂಬುದು ಹಳೆಯ ಸಿದ್ಧಾಂತ. ಮಾನಸಿಕ ರೋಗಗಳಿಗೆ ರಜೋಗುಣ ಹಾಗೂ ತಮೋಗುಣಗಳು ಕಾರಣಗಳೆಂದು ಆಯುರ್ವೇದದ ಹೇಳಿಕೆ. ಈ ಮಾತನ್ನು ಆಧುನಿಕ ರೀತಿಯಲ್ಲಿ ಹೇಳುವುದಾದರೆ, ಮನುಷ್ಯನ ಅವಪ್ರಜ್ಞೆಯಲ್ಲಿ ಸ್ಥಿತ್ಯಂತರಗಳುಂಟಾಗುವುದೇ ಮಾನಸಿಕ ರೋಗಗಳ ಉತ್ಪತ್ತಿಗೆ ಕಾರಣ.

ಸತ್ವವು ಮನಸ್ಸಿನ ಸಮಸ್ಥಿತಿಗೆ ಕಾರಣವಾದ ಗುಣವು. ರೋಗನಿದಾನದ ಐದು ತತ್ವಗಳಲ್ಲಿ ಮೊದಲನೆಯದು ನಿದಾನ. ನಿದಾನದ ಅಥವಾ ರೋಗದ ಮೂಲಕಾರಣದ ಮೂರು ಉಪವಿಭಾಗಗಳಲ್ಲಿ ಪ್ರಜ್ಞಾಪರಾಧವೆಂಬುದೂ ಒಂದು. ಪ್ರಜ್ಞಾಪರಾಧವೆಂದರೆ ವರ್ತನೆಯಲ್ಲಿ ಅವಿವೇಕ ತಾಳುವುದು ಮತ್ತು ಜೀವನದಲ್ಲಿ ಅನಿಯಮದಿಂದ ವರ್ತಿಸುವುದು. (A. Materia Medica P. 124).

ಬುದ್ಧಿಯು ಸತ್ವ, ರಜ, ತಮ ಎಂಬ ಮೂರು ತರಹದ ಸ್ವಭಾವವುಳ್ಳದ್ದು. ಈ ಮೂರು ಗುಣಗಳಿಂದ ಕೂಡಿದ ಬುದ್ಧಿಯೇ ಅಹಂಕಾರದ ತಂದೆ. ಅಹಂಕಾರ ಕೂಡ ಅದೇ ಪ್ರಕಾರ ಮೂರು ಬಗೆಯದು. ಇಂದ್ರಿಯಗಳೂ ಮನಸ್ಸೂ ವಿಕಾರಗಳು. ಜೀವಾತ್ಮನಿಗೆ ಮನಸ್ಸು ದೂತ.

ಹಿತಾಹಿತ ವಿವೇಕರೂಪದ ಬುದ್ಧಿ, ಮನಸ್ಸನ್ನು ದೃಢಪಡಿಸುವ ಧೈರ್ಯ ಮತ್ತು ಶಾಸ್ತ್ರಜ್ಞಾನಗಳು ಮನಸ್ಸಿನ ದೋಷಗಳೆನಿಸುವ ರಜಸ್ತಮ–ಕಾಮ ಕ್ರೋಧಾದಿಗಳಿಂದ ಉಂಟಾಗುವ ಚಿಂತೆ, ಭಯ ಮೊದಲಾದ ರೋಗಗಳಿಗೆ ಮದ್ದು.

ಮಸ್ತಿಷ್ಕ ಅಥವಾ ಮಿದುಳು ಜ್ಞಾನದ ಕಾರ್ಯಗಳಿಗೆ ಸಾಧನ, ಜ್ಞಾನೇಂದ್ರಿಯಗಳ ಆಶ್ರಯಸ್ಥಾನ. ಇಂದ್ರಿಯ ಮತ್ತು ಮನಸ್ಸುಗಳ ಸಮ್ಯಗ್ಯೋಗದಿಂದ ಜೀವಾತ್ಮನಿಗೆ ಜ್ಞಾನವಾಗುವುದು. ಇಂದ್ರಿಯುಗಳ ಯೋಗವಿಲ್ಲದಾಗಲೂ ಇಂದ್ರಿಯುಗಳು ವಿಷಮಸ್ಥಿತಿಯಲ್ಲಿದ್ದಾಗಲೂ ಜೀವಾತ್ಮನಿಗೆ ಬಾಹ್ಯ ವಸ್ತುಗಳ ಯಥಾರ್ಥಜ್ಞಾನವಾಗುವುದಿಲ್ಲ.

ಚೇತನಾಸ್ಥಾನವಾದ ಹೃದಯದಲ್ಲಿ ತಮಸ್ಸು ಆವರಿಸಿದರೆ ನಿದ್ರೆ ಬರುತ್ತದೆ, ಸತ್ವ ಆವರಿಸಿದರೆ ಎಚ್ಚರವಾಗುತ್ತದೆ. ರಜೋಗುಣ ಹೃದಯುವನ್ನಾವರಿಸಿದರೆ ಸ್ವಪ್ನದರ್ಶನವಾಗುತ್ತದೆ. (ಸ್ವಪ್ನದಲ್ಲಿ ಕಾಣುವುದೆಲ್ಲವೂ ಪೂರ್ವದಲ್ಲಿ ಅನುಭವಿಸಿದ ವಿಷಯಜ್ಞಾನದಿಂದಲೇ.) (P. 305 ಶಾರೀರವಿಜ್ಞಾನ Line 20)

# ಆಧಾರ ಗ್ರಂಥಗಳು


1. Introduction to Psychology by Boring, Longfeld & Weld
2. Experimental Psychology by Robert S. Woodworth
3. Psychology-The Fundamentals of Human Adjustment by Normal L. Munn
4. Readings in General Psychology by Wayne Dennis
5. Psychology-A Study of Mental Life by Robert S. Woodworth & Donald G. Marquis
6. The Energies of Men by William Medougall
7. A Maunal of Psychology by G.F.Stout
8. A Modern Itroduction to Psychology by Rox & Margaret Knight
9. The Psychology of Every Day Life by Drever
10. An Outline of Psychology by William Mc Daugall
11. Experimental Psychology by Mary Collins & James Draver
12. A Briefer Course to General Psychology by Garner Murphy
13. The Principles of Psychology by William James
14. The Human Mind by Prof. S.P. Adinarayan
15. General Psychology by Guilford
16. Tarka Sangrahah by Annambhatta
17. Notes on the Brahma Sutras of Badarayana by S.K. Belvalkar
18. ಶಾರೀರ ವಿಜ್ಞಾನ by ವಿ.ಎನ್. ಜೋಶಿ
19. ಶಾಂರ್ಙ್ಗಧರ ಸಂಹಿತೆ by ದಾ.ಅ. ಹಲಸೀಕರ
20. A Hand Book of Ayurvedic Materia Medica by Dr. H.V. Savanur

# ಪದಾರ್ಥಕೋಶ

| | |
|---|---|
| ಅಕಶೇರುಕ | Invertebrate |
| ಅಂಗ | Organ |
| ಅಜ್ಞಾತ ಪ್ರಜ್ಞೆ | The Unconscious Mind |
| ಅತಿನೇರಿಳೆ | Ultra-violet |
| ಅತಿಭೌತಶಾಸ್ತ್ರ | Metaphysics |
| ಅಂತರ್‌ಗ್ರಹ | Inhibition |
| ಅಂತರ್‌ನಿರೀಕ್ಷಣೆ | Introspection |
| ಅಂತರವಯವ | Viscera, Interior organs |
| (brain, heart, liver, intes | tines) |
| ಅಂತರಿತ ಕಲಿಯುವಿಕೆ | Spaced Learning |
| ಅಂತಃಶಕ್ತಿ | Faculty |
| ಅನ್ವಯ | Application |
| ಅನ್ವಿತ | Applied |
| ಅನಿಚ್ಛಾಕೃತ | Involuntary |
| ಅನಂತರಿತ ಕಲಿಯುವಿಕೆ | Unspaced Learning |
| ಅನುಕ್ರಿಯೆ | Response |
| ಅನುಕಂಪಕ | Sympathetic |
| ಅನುಕ್ರಮ | Succession |
| ಅಪಧಾಯಕ ಅಂತರ್‌ಗ್ರಹ | Retroactive Inhibition |
| ಅಪರೋಕ್ಷ | Direct |
| ಅಪಸಂಯೋಜನೆಗಳು | Erroneous Bonds |
| ಅಭಿಜ್ಞೆ | Cognition |
| ಅಭಿಜ್ಞಾಮನಃಶಾಸ್ತ್ರ | Psychology of Cognition |
| ಅಭ್ಯಾಸ | Habit, Study |
| ಅಮೂರ್ತ | Abstract |
| ಅಯಥಾರ್ಥ | Unreal |
| ಅರೆಬೂದಿ | Light Grey, Medium Grey |
| ಅವಕೆಂಪು | Infra-red |

| | |
|---|---|
| ಅವಕ್ಷೀಣ | Subliminal |
| ಅವಯವ, ಅವಯವಿ | Organ; Organism |
| ಅವಧಾನ | Attention |
| ಅವಪ್ರಜ್ಞೆ | The Pre-conscious Mind |
| ಅವಭಾವನಾಪೀಠ | Hypothalamus |
| ಅವರೋಧ | Resistance; Proof |
| ಅವಸ್ಥೆ | Stage; State |
| ಆಗರ್ಭ | Inborn |
| ಆಜನ್ಮ | Innate |
| ಆತ್ಮಪ್ರಜ್ಞೆ | Self-consciousness |
| ಆದೇಶ | Compensatory; Substitute |
| ಆನುವಂಶಿಕ | Hereditary |
| ಆರ್ಜನೆ | Acquisition |
| ಆವರ್ತ | Curcuit |
| ಆವೃತ್ತಿ | Frequency |
| ಆಸಕ್ತಿ | Interest |
| ಆಹಾರಾನ್ವೇಷಣೆಯ ಪ್ರವೃತ್ತಿ | Instinct of Nutrition |
| ಇಂದ್ರಿಯಾವಯವ, ಇಂದ್ರಿಯಾಂಗ | Sense Organ |
| ಇಂದ್ರಿಯಪ್ರತ್ಯಕ್ಷ | Perception |
| ಇನ್‌ಸುಲಿನ್ | Insulin |
| ಇಳಿಗಡು | Lower Limit |
| ಉತ್ಕ್ರಿಯಾತ್ಮಕ | Dynamic |
| ಉತ್ಕ್ಷೇಪ | Shock |
| ಉತ್ತರಪ್ರತಿಮೆ | After-image |
| ಉದ್ರಿಕ್ತಾವಸ್ಥೆ | Emotional Mood |
| ಉನ್ಮುಖತೆ | Attention |
| ಉಪಾಧಿ | Condition |
| ಉಪಾಧಾನ | Conditioning |
| ಉಪಾಹಿತ | Conditioned |
| ಉಪಾನುಕಂಪಕ | Parasympathetic |
| ಉಳಿಗಾಲ | Duration |
| ಎದುರುಪೊರೆ | Cornea |
| ಏರುಗಡು | Upper Limit |
| ಒತ್ತಡ | Preasure |

| | |
|---|---|
| ಒಳಪೊಟ್ಟರೆ | Ventricles |
| ಓಜೋಗ್ರಂಥಿ | Thyroid Gland |
| ಓಜೋರಸ | Thyroxiu |
| ಔದ್ಯಮಿಕ | Industrial |
| ಔಷಧ ಶಾಸ್ತ್ರ | Science of Medicine |
| ಔದ್ಯೋಗಿಕ | Vocational |
| ಕಂಠಕರ್ಣನಾಳ | Eustachian Tube |
| ಕಥನಕ ಮ | Anecdotal Method |
| ಕನೀನಿಕೆ | Pupil |
| ಕಪ್ಪು ಪೊರೆ | Iris |
| ಕಂಪ | Vibration |
| ಕಂಪನೋಪಕರಣ | Tuning Fork |
| ಕರ್ಮೇಂದ್ರಿಯ ಸ್ಥಳ | Motor Area |
| ಕಲ್ಪನೆ | Idea |
| ಕಲ್ಪಕ | Imaginative |
| ಕಲ್ಪನಾಶಕ್ತಿ | Imagination |
| ಕಶೇರುಕ | Vertebra |
| ಕಾಮ, ಕಾಮಗ್ರಂಥಿ | Sex; Gonads |
| ಕಾಲಮಾಪಕ | Chronometer |
| ಕಾಲಲೋಲಕ | Metronome |
| ಕೃತ್ಯ | Function |
| ಕೆಳಕೋಷ್ಠ | Abdomen |
| ಕೇಂದ್ರ | Centre |
| ಕ್ರಮ | Method |
| ಕ್ರಿಯಾವಾಹಿ ನರ | Motor Nerve |
| ಕ್ಷೇತ್ರಾವೇಕ್ಷಣ ಕ್ರಮ | Field Survey Method |
| ಕ್ಷೇಪ ಕ್ಷೇಪಚಾಪ | Reflex; Reflex Are |
| ಕ್ಷೇಪಕ್ರಿಯೆ | Reflex Action |
| ಗುರುತಿಸು | Recognise |
| ಗ್ರಹಣ | Reception |
| ಗ್ರಹಣಧಾರಣ ಕ್ರಮ | Learning & Saving Method |
| ಗ್ರಹಿಕೆ | The Received Knowledge |
| ಗ್ರಾಹಕ | Recipient; Receptacle |
| ಘಟನೆ | Phenomenon |

| | |
|---|---|
| ಘ್ರಾಣೇಂದ್ರಿಯ | Nose |
| ಚರ್ಮದ ಸಂವೇದನೆ | Skin Sensation |
| ಚಾಕ್ಷುಷ, ಚಾಕ್ಷುಷರು | Visual; Visile |
| ಚಾಕ್ಷುಷ ಸಂವೇದನೆ | Visual Sensation |
| ಚಾಕ್ಷುಷ ಪ್ರದೇಶ | Visual Area |
| ಚೋದನೆ | Impulse |
| ಜಡ | Mechanical; Automatic |
| ಜಡಸ್ಮೃತಿ | Rote Memory |
| ಜನನಶಾಸ್ತ್ರೀಯ ಕ್ರಮ | Genetic Method |
| ಜನನಾವಯವ | Genital Organ |
| ಜಾತಿ | Species |
| ಜೀವರಸ | Protoplasm |
| ಜೀವರಸೀಕರಣ | Metabolism |
| ಜೋರು | Loud |
| ಜ್ಞಾತಪ್ರಜ್ಞೆ | The Conscious Mind |
| ಜ್ಞಾನ | Sense; Knowledge |
| ಜ್ಞಾನಾರ್ಜನೆ | Learning |
| ಜ್ಞಾನೇಂದ್ರಿಯ ಸ್ಥಳ | Sensory Area |
| ಜ್ಞಾನವಾಹಿ ನರ | Sensory Nerve |
| ಜ್ಞಾಪನೆ | Recalling |
| ತಲೆಬುರುಡೆ | Skull, cranium |
| ತಾತ್ವಿಕ ಮನಃಶಾಸ್ತ್ರ | Philosophical Psychology |
| ತಿರುಳುರಸ (ತೇಜೋಗ್ರಂಥಿಯ) | Adrenin |
| ತೀವ್ರತೆ | Intensity |
| ತೇಜೋಗ್ರಂಥಿ | Adrenal Gland |
| ತೊಗಟೆರಸ (ತೇಜೋಗ್ರಂಥಿಯ) | Cortin |
| ಧ್ವನಿ | Sound |
| ಧ್ವನಿಗುಣ | Timbre |
| ನಡುಮಿದುಳು | Cerebellum |
| ನಡುದಲೆ | Parietal Lobe |
| ನರ | Nerve |
| ನರಕುಡಿ | Dendrites |
| ನರಗಂಟು | Corpus Callo um |
| ನರಪುಟ | Nerve-cell |

| | |
|---|---|
| ನರಮಂಡಲ | Nervous System |
| ನರರವೆ | Cell-body |
| ನರವಿಸಂಧಿ | Synapse |
| ನರಸೇತು | Pons |
| ನರ ಹುರಿ | Axon |
| ನಿರ್ನಾಳಗ್ರಂಥಿ | Ductless Gland |
| ನಿರೀಕ್ಷಣೆ | Observation |
| ನೈಷೇಧಿಕ | Negative |
| ಪದ | Word |
| ಪದಪ್ರತಿಮೆ | Verbal Image |
| ಪರ್ಯಾಪ್ತಿ | Completeness |
| ಪರತಃ ಪ್ರಾಮಾಣ್ಯ ದೃಷ್ಟಿ | Objective Point of View |
| ಪರಿ ನರಮಂಡಲ | Peripheral Nervous System |
| ಪರಿಧಿ ಸಿದ್ಧಾಂತ | Peripheral Theory |
| ಪರಿಮಾಣ | Measure |
| ಪರೋಕ್ಷ | Indirect |
| ಪಿಂಡ | Organism |
| ಪುಟ | Cell |
| ಪುನರಾವೃತ್ತಿ | Repetition |
| ಪೂರಕ | Complementary |
| ಪೃಶ್ರಿಕಾಸ್ಥಿ | Sacral Bones |
| ಪೇಶಿ | Tissue |
| ಪೊರೆ | Membrane |
| ಪ್ರಕರಣೇತಿಹಾಸ ಕ್ರಮ | Case-history Method |
| ಪ್ರಕಾರ | Pattern; Type |
| ಪ್ರಕಾಶಘ್ನಪೊರೆ | Choroid |
| ಪ್ರಕ್ರಿಯೆ | Process |
| ಪ್ರಚೋದನೆ | Motivation; Motive |
| ಪ್ರಜ್ಞೆ | Conscionsness |
| ಪ್ರತ್ಯಭಿಜ್ಞಾನ | Recognition |
| ಪ್ರತಿಕ್ರಿಯೆ | Reaction |
| ಪ್ರತಿಮೆ | Image |
| ಪ್ರತಿಮಾಸಂಪುಟ | Imagery |
| ಪ್ರತೀಕ್ಷೆ | Expectation |

| | |
|---|---|
| ಪ್ರಭಾವಿತ | Expectation |
| ಪ್ರಮಾಣ | Proof (Evidence) |
| ಪ್ರಯೋಗ | Experiment |
| ಪ್ರಯೋಜಕ | Experimenter |
| ಪ್ರವೃತ್ತಿ | Tendency |
| ಪ್ರೇರಣೆ | Stimulus |
| ಪ್ರೇರಣಾಸಮುದಯ | Summation of Stimuli |
| ಪ್ರೇರ್ಯ | Respondent |
| ಪ್ರೇರಿತ | Stimulated |
| ಬದಿದಲೆ | Temporal Lobe |
| ಬಲೆಪೊರೆ | Retina |
| ಬಹಿರ್ ನಿರೀಕ್ಷಣೆ | Objective Observation |
| ಬೀಜ | Nucleus; Basic Theory |
| ಬುದ್ಧಿ ಪರೀಕ್ಷೆ | Intelligence Test |
| ಬುದ್ಧಿ ಪೂರ್ವಕ | Deliberate |
| ಬುದ್ಧಿ ಮಾಪಕ | Measurement of Intelligence |
| ಬೂದಿ ಬಣ್ಣ | Grey Colour |
| ಬೆನ್ನುಹುರಿ | Spinal Cord |
| ಬೆನ್ನೆಲುಬು | Vertebrae |
| ಬೆಳ್‌ಪೊರೆ | Sclerotic |
| ಭಾವ | Mental State |
| ಭಾವನೆ | Emotion |
| ಭಾವನಾಂಶ | Feeling |
| ಭಾವಪ್ರಕಾರ | Brain-pattern |
| ಭಾವಿಕಸ್ಮೃತಿ | Ideational Memory |
| ಭಾವನೋದ್ರೇಕ | Excitement |
| ಭ್ರಾಜೋಗ್ರಂಥಿ | Putuitary |
| ಮಂಡಲ | System |
| ಮನಃಪ್ರವೃತ್ತಿ | Disposition |
| ಮನಃ ಪ್ರಣಾಲಿ | Attitude |
| ಮನಃಶಾಸ್ತ್ರೀಯ, ಮಾನಸಶಾಸ್ತ್ರೀಯ | Psychological |
| ಮನೋವಶೀಕರಣ | Hypnosis |
| ಮನೋರೋಗನಿದಾನ | Psycho-pathology |
| ಮಾನಸಚಿಕಿತ್ಸಾಶಾಸ್ತ್ರ | Psychotherapy |

| | |
|---|---|
| ಮಾನಸ–ಮಾನಶಾಸ್ತ್ರ | Psycho-metry |
| ಮಾಯೆ | Illusion |
| ಮಾಯಾಪ್ರತಿಮೆ | Ilusory Image |
| ಮಾಂಸಲ ಸಂವೇದನೆ | Muscle-Sensation |
| ಮಿದುಳು | Brain |
| ಮುಮ್ಮಿದುಳು | Cerabrum |
| ಮಿದುಳುದೊಗಟೆ | Cortex |
| ಮಿದುಳಿನ ಲಾಂಛನ | Brain-trace |
| ಮುಂಡ | Trunk of the Body |
| ಮುಂದಲೆ | Frontal Lobe |
| ಮೂರ್ತ | Concrete |
| ಮೂಲಪ್ರವೃತ್ತಿ | Instinct |
| ಮೇಲುಕೋಷ್ಠ | Thorax |
| ಯಥಾರ್ಥ | Real |
| ಯಾಂತ್ರಿಕ | Mechanical |
| ಯುಗಪದ್ವ್ಯತ್ಯಾಸ | Simultaneous Contrast |
| ಯೋಜ್ಯ | Subject of Experiment |
| ನಿರ್ಮಾಪಕ | Creative |
| ರಚನಾತ್ಮಕ | Structural |
| ರಂಜಿತ | Coloured |
| ರಜಃಕಾಲಚಕ್ರ | Menstrual Cycle |
| ರಸ | Sentiment; Gland Secretion |
| ರಾಗ | Note; Tune |
| ರುಚಿ | Taste |
| ರುಚಿಮೊಗ್ಗೆ | Taste-bud |
| ರೋಗನಿದಾನ | Pathology |
| ರೋಮಪುಟ | Hair-cell |
| ಲಂಬಕ | Lobe |
| ಲಾಲಾರಸ | Saliva |
| ಲೋಲಕ | Pendulum |
| ವಪೆ | Diaphragm |
| ವರ್ಣಚಕ್ರ | Colour-disc |
| ವರ್ಣಾಂಧ | Colour-blind |
| ವರ್ತನೆ | Behaviour |

| | |
|---|---|
| ವ್ಯತಿರೇಕ ಶೀತಸಂವೇದನೆ | Paradoxical Cold |
| ವ್ಯತಿರೇಕ ಉಷ್ಣ ಸಂವೇದನೆ | Paradoxical Warm |
| ವಸ್ತು ನಿಷ್ಠಕಾರಕ | Objective Factor |
| ವ್ಯಕ್ತಿ ನಿಷ್ಠಕಾರಕ | Subjective Factor |
| ವ್ಯತ್ಯಾಸ | Difference |
| ವರ್ಣವ್ಯತ್ಯಾಸ | Colour Contrast |
| ವ್ಯಭಿಚಾರ | Change |
| ವಿಚಾರ | Thought |
| ವಿಭಜನೆ | Division |
| ವಿಂಗಡಣೆ | Differentiation |
| ವಿಶಿಷ್ಟ ಶಕ್ತಿಗಳು | Special Abilities |
| ವಿಸಂಧಿ | Gap |
| ವಿಷಮ ಮನಃಶಾಸ್ತ್ರ | Abnormal Psychology |
| ವಿಷಮಸ್ಥಿತಿ, ವಿಷಮಾಟಸ್ಥೆ | Abnormal State |
| ವಿಧಾನ | Positing |
| ವಿಧಾಯಕ | Legal, Legislative |
| ವೈಧಿಕ | Positive |
| ಶರೀರಶಾಸ್ತ್ರ | Physiology |
| ಶರೀರ ರಚನಾಶಾಸ್ತ್ರ | Anatomy |
| ಶಾರೀರಿಕ ಮನಃಶಾಸ್ತ್ರ | Physiological Psychology |
| ಶುಕ್ಲಕೋಶ | Testes |
| ಶೋಣಿತ ಕೋಶ | Ovary |
| ಶೋಣಿತಾಣೂತ್ಪತ್ತಿಯ ಕಾಲಚಕ್ರ | Ovulation Cycle |
| ಶ್ರಾವಣ, ಶ್ರಾವಣರು | Auditory; Audiles |
| ಶ್ರಾವಣ ಪ್ರದೇಶ | Auditory Area |
| ಶ್ರಾವಣ ಸಂವೇದನೆ | Auditory Sensation |
| ಸಕಶೇರುಕ | Vertebrate |
| ಸಂಕಲ್ಪಶಕ್ತಿ | Conation; Will Power |
| ಸಂಕಲ್ಪಾತ್ಮಕ | Conative |
| ಸಮಗ್ರ | Integral |
| ಸಮನ್ವಿತ–ಸಮನ್ವಯ | Integrated; Integration |
| ಸಮಸ್ಥಿತಿ, ಸಮಾವಸ್ಥೆ | Normality |
| ಸಮಪಾರ್ಶ್ವತೆ, ಸಮಾಂಗತೆ | Symmetry |
| ಸಮಷ್ಟಿ ಜೀವನಪ್ರವೃತ್ತಿ | Herd Instinct |

| | |
|---|---|
| ಸಂಖ್ಯಾಕೃತಿ | Number-form |
| ಸಂಖ್ಯಾಶಾಸ್ತ್ರೀಯ | Statistical |
| ಸಂಚಾರಿ ಭಾವ | Passing Mood |
| ಸನ್ನಿ ಕೃರ್ಷ, ಸಾಮೀಪ್ಯ | Proximity |
| ಸನ್ನಿ ಕೃಷ್ಟಪ್ರತಿಮೆ | Eidetic Image |
| ಸಂಪರ್ಕನರ | Association Nerve |
| ಸಂಮರ್ದ | Pressure |
| ಸಂರಕ್ಷಣಪ್ರವೃತ್ತಿ | Maternal Instinct |
| ಸಂಯೋಗ | Combination |
| ಸಂವೇದನೆ | Sensation |
| ಸಂಹಿತೆ | Code |
| ಸರ್ಜನೆ | Creation |
| ಸಾತತ್ಯ | Continuity |
| ಸಾದೃಶ್ಯ | Similarity |
| ಸುಪ್ತಿಕಾಲ | Latency Period |
| ಸುರುಳಿನಾಳ | Cochlea |
| ಸ್ಮೃತಿ | Memory |
| ಸ್ಮೃತಿಪ್ರತಿಮೆ | Memory Image |
| ಸ್ಮೃತಿ ಸಮನ್ವಯ | Remembering |
| ಸ್ಥಳ ನಿರ್ದೇಶನ | Localization |
| ಸ್ವತಃ ಪ್ರಾಮಾಣ್ಯದೃಷ್ಟಿ | Subjective Point of View |
| ಸ್ವಯಂಸೂಚನೆ | Auto-suggestion |
| ಸ್ವರತಂತು | Vocal Cord |
| ಸ್ವರೋತ್ಥಾನ | Pitch |
| ಸ್ವಾಯತ್ತ | Autonomic |
| ಸ್ವಾವಧಾರಣ | Self-assertion |
| ಸ್ವೇಚ್ಛಾಕೃತ | Voluntary |
| ಸೌತೆ | Cone |
| ಹತ್ತುಗಡೆ | Stirrup |
| ಹರಳು | Lens; Crystal |
| ಹಳಮಿದುಳು | Old Brain |
| ಹಿಂದೆಲೆ | Occipital Lobe |
| ಹಿಮ್ಮಿದುಳು | Medulla Oblongata |
| ಹೀರೆ | Rod |

# ಭದ್ರಂ ಶುಭಂ ಮಂಗಲಂ

ಪ್ರೊ.ಬಿ.ಎಚ್.ಶ್ರೀಧರ, ಸಿದ್ಧಾಪುರ ಇವರು ಉತ್ತಮ ಕವಿಗಳು, ವಕ್ತಾರರು, ಶಿಕ್ಷಕರು, ಪತ್ರಿಕಾಪ್ರಪಂಚದಲ್ಲಿ ವರ್ಷಾನುವರ್ಷ ದುಡಿದು, ನಮ್ಮ ಸದ್ಯದ ಭಾರತೀಯ ಸಮಾಜಕ್ಕೆ ಯಾವ ರೋಗ ಹತ್ತಿದೆ? ಏನಾದರೆ ಆರೋಗ್ಯವಾದೀತು? ಎಂಬುದನ್ನು ಎರಡು ತಪ ವಿಚಾರ ವಿವೇಕ ಮಾಡುತ್ತ ಬಂದಿದ್ದಾರೆ. ಅದರ ಫಲರೂಪವಾಗಿ 'ರಸಯಜ್ಞ'ದ ಕವನಗಳನ್ನು ನೀಡಿ, ಆಮೇಲೆ ವಿವೇಕ ವಿಸ್ತಾರವನ್ನು 'ಕಾವ್ಯಸೂತ್ರ' 'ಜ್ಞಾನಸೂತ್ರ' ಮತ್ತು 'ರಾಷ್ಟ್ರಸೂತ್ರ' ಎಂಬ ಈ ತ್ರಯಿಯಿಂದ ತಮ್ಮ ಪ್ರಸ್ಥಾನಭೇರಿಯನ್ನು ಮೊಳಗಿಸಿದ್ದಾರೆ. ಪಂಪನ ಆದಿಪುರಾಣದಲ್ಲಿ ಪ್ರಥಮ ತೀರ್ಥಂಕರನ ಮಗ–ಭರತ ಚಕ್ರವರ್ತಿ–ಪಂಚಮ್ಲೇಚ್ಛ ಖಂಡಗಳನ್ನು ಆರನೆಯ ಆರ್ಯಖಂಡದೊಡನೆ ಹೊಂದಿಸುವುದು ಹೇಗೆ? ಎಂಬುದರ ಚರಿತ್ರೆ ಬಂದಿದೆ. ಪುಲಿಕೇಶಿಯ ದಿಗ್ವಿಜಯ, ಶಿಲಾಲೇಖವಾಗಿಯೇ ಉಳಿಯಿತು. ಈ ಕ್ಷಣಕ್ಕೂ ಕರ್ನಾಟಕವು ಪಂಚೀಕೃತವೋ, ಪಂಚತ್ವಂಗತವೋ, ಹೇಳುವುದು ಕಷ್ಟವಾಗಿದೆ. ಷಡ್‌ಗುಣೈಶ್ವರ್ಯಶಾಲಿ ಭಗವಂತನೇ ಆ ಕಾರ್ಯವನ್ನು ನಿರ್ವಹಿಸಬೇಕು. ಶ್ರೀಧರರು ತಮ್ಮ ವಿವೇಕ ಸೂತ್ರವನ್ನು ಇಲ್ಲಿ ವ್ಯಾಸವಾಗಿ, ಸಮಾಸವಾಗಿ ಕೂಡಿಸಿ, ಬಿಡಿಸಿ ತೋರಿಸಿದ್ದಾರೆ.

ಸತ್ತ್ವಕ್ಕೂ, ತತ್ತ್ವಕ್ಕೂ, ಸ್ವತ್ವವಿಲ್ಲದೆ ನಿರ್ವಾಹವಾಗದು. ಆ ಸ್ವತ್ತು ಸ್ವಾಮಿಯ ಸೊತ್ತು. ಈ ಗತ್ತು, ಗಮಕ ಮೈಗೂಡದೆ ಅಭಿನಯ ಮಾಡಿದರೆ, ಯಾವ ಅಭಯಪ್ರಧಾನವೂ ಅಲ್ಲಿ ಆಗದು. ಇಂಥ ವಿಚಾರ ಪ್ರಣಾಲಿಯ ಗ್ರಂಥಕ್ಕೆ ಶ್ರೀ ಡಿ.ವಿ.ಜಿ.ಯವರ ಭಗವದ್ಗೀತಾ ಭಾಷ್ಯ, ಶ್ರೀ ಮಾಸ್ತಿಯವರ–ಭಾರತ, ರಾಮಾಯಣ ಪ್ರಜ್ಞೆ, ಶ್ರೀ ಕುವೆಂಪುರವರ ಪ್ರಜ್ಞೆ, ಶ್ರೀ ಕುಮಾರಸ್ವಾಮಿ, ಶ್ರೀ ಜ.ಚ.ನಿ. ಮಾತೆಮಹಾದೇವಿ, ಜಯದೇವಿತಾಯಿ ಲಿಗಾಡೆ ಇತ್ಯಾದಿ ವ್ಯಕ್ತಿಗಳ ಮೇಳಸೇರಿ, ಕರ್ನಾಟಕದ ಶೀಲಕ್ಕೆ, ದೇಸಿ–ಮಾರ್ಗ ಒಡಂಬಡುವಂತೆ ಶೀಲದ ಸಂಚಾರ ಕ್ರಮವನ್ನು ತಿಳಿಸಿಕೊಡಬೇಕು. ಶ್ರೀ ದಿವಾಕರ, ಶ್ರೀ ಮೂರುಸಾವಿರಮಠದ ಸ್ವಾಮಿಗಳು, ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆ, ಸೇನಾಪತಿ ಕರಿಯಪ್ಪನವರು, ಶ್ರೀ ಪಾವಟೆಯವರು, ಶ್ರೀ ಅಡಕೆಯವರು, ಪೇಜಾವರಮಠದ ಶ್ರೀಗಳು, ನವೀನ ಆಚಾರ ಸಂಹಿತೆಯನ್ನು ಕಲ್ಪಿಸಬೇಕು. ಅಲ್ಲಿಯವರೆಗೂ ಕ್ಷುದ್ರಕ್ಷುಲ್ಲಕ ವಿಚಾರಗಳಿಗೂ, ಭದ್ರಮಂಗಲ ವಿಚಾರಗಳಿಗೂ ತಾಕಲಾಟ ನಡೆಯತಕ್ಕದ್ದೇ. ಈ ಮಂಥನದಲ್ಲಿ ಯಾವ ಹೊಸ ರತ್ನಗಳು ಹುಟ್ಟುವವೋ? ಅಲ್ಲಿಯವರೆಗೆ ಅರಬ್ಬೀ ಸಮುದ್ರ, ಹಿಂದೀ ಮಹಾಸಾಗರ, ಬಂಗಾಲ ಉಪಸಾಗರ ಇವುಗಳೊಳಗೆ, ಮಹಾಮೃತ್ಯುವು ತನ್ನ ಸಂಹಾರಕ ಸಂಚಾರದ ಒಳಸಂಚು ನಡೆಸಿರುವುದನ್ನು ಮರೆಯುವುದು ಹೇಗೆ? ಹಿಮಾಲಯದಿಂದ ಹಿಂದೂಕೂಶವರೆಗೂ

ಇರುವ ಗುಡ್ಡದ ಸಾಲು, ಸಾಮರ್ಥ್ಯವಂತರಿಗೆ ಏನೂ ಅಡ್ಡಿಯಾಗಲಾರದು. ಗ್ಲೋಬಲ್ ಯುನಿಟಿ ಆರ್ ಗ್ಲೋಬಲ್ ಡಿಸ್ಟ್ರಕ್ಶನ್ – ಇವುಗಳಲ್ಲಿ ಯಾವುದು ಬೇಕು? ಕೈವೊಡ್ಡಿ ನಿಂತಿವೆ. ಬಾಯಿಬಡಕ ಶೀಲವು ಅಸಂಗತ ನಾಟಕದಲ್ಲಿಯೂ ಆಕರ್ಷಕ ಎನಿಸಲಾರದು. ಜೀವನರಂಗದಲ್ಲಿ ಅದು ಪೈಶಾಚ ನೃತ್ಯ ಹೂಡಿದರೆ, ಅದಕ್ಕೆ ಶಿವ–ರುದ್ರ ಅವತಾರವು ಕಾಲಕ್ಕೆ ತಕ್ಕಂತೆ ಆಗಬೇಕಾಗುತ್ತದೆ. ಶಕ್ತಿ ಅವತರಿಸಿದ್ದಾಳೆ. ಯುಕ್ತಿ ಇಲ್ಲದಿದ್ದರೆ ಅವಿವೇಕದಿಂದ ಸಂಹಾರವು ಅನಾಯಾಸವಾಗಿ ನಡೆಯಲಿದೆ.

ಶ್ರೀಧರರ ವಿವೇಕಸೂತ್ರವು ಸಹೃದಯರ ಸಹಕಾರಕ್ಕೆ ನಾಂದಿಯಾಗಲಿ. ಅವರ 'ರಾಷ್ಟ್ರಸೂತ್ರ'ಕ್ಕೆ ಸ್ವಾಗತ ಹೇಗೆ ಕಾದಿದೆಯೋ ನೋಡಬೇಕು. ಅಲ್ಲಿಯವರೆಗೂ ಭದ್ರಂ ಶುಭಂ ಮಂಗಲಂ. ಇದೇ ಮೊದಲು, ಇದೇ ಕೊನೆ.

೨–೬–೧೯೭೪ **ದ.ರಾ.ಬೇಂದ್ರೆ**

# ಅರಿಕೆ

"ರಸಯಜ್ಞ"ಕ್ಕೆ ದೇವರಾಜ ಬಹಾದೂರರ, "ಕಾವ್ಯಸೂತ್ರ"ಕ್ಕೆ ಪ್ರೊ.ತೀ.ನಂ.ಶ್ರೀಕಂಠಯ್ಯನವರ ಸ್ಮಾರಕನಿಧಿಯ ಹಾಗೂ ಮೈಸೂರು ರಾಜ್ಯದ ಸಾಹಿತ್ಯ ಅಕಾಡಮಿಯ ಮತ್ತು "ಜ್ಞಾನಸೂತ್ರ"ಕ್ಕೆ ಲೋಕ ಶಿಕ್ಷಣ ಸಂಸ್ಥೆಯ ಕರ್ನಾಟಕ ಶೈಕ್ಷಣಿಕ ಪಾರಿತೋಷಕಗಳು ಬಂದದ್ದು ಈ ಲೋಕಸೇವಾಸಕ್ತನ ಉತ್ಸಾಹಕ್ಕೆ ನೀರೆರೆದವು. ಮೊದಲಿನಿಂದಲೂ ನಮ್ಮ ರಾಷ್ಟ್ರ ತಪ್ಪುಮಾಡುತ್ತ ಬಂದಿರುವುದು ಗೊತ್ತಾಗಿದ್ದುದರಿಂದ, ಆ ಬಗ್ಗೆ ೨೫ ವರ್ಷಗಳಿಂದ ಚಿಂತನ ಮಾಡುತ್ತ ಬಂದು ಈಗ ಕೆಲ ಮಟ್ಟಿನ ರೋಗನಿದಾನ, ರೋಗ ಪ್ರತೀಕಾರಗಳ ದರ್ಶನವಾದಂತೆನ್ನಿಸಿದೆ.

ಭಾರತೀಯ ಸಾಂಸ್ಕೃತಿಕ ಸಾಮರಸ್ಯವು ಕ್ರಿ.ಶ. ೧೨ನೆಯ ಶತಮಾನದಿಂದ ಹೆಚ್ಚು ಖಿಲವಾಗುತ್ತ ಹೋದುದರಿಂದ ಕೃಷ್ಣದೇವರಾಯ ಮತ್ತು ಶಿವಾಜಿಗಳು ಮಾಡಿದ ಪ್ರಯತ್ನಗಳು ರಾವಣನ ಹೊಟ್ಟೆಗೆ ಕಾಸಿನ ಕಡಲೆಗಳಾದವು. ವಿವೇಕಾನಂದ, ತಿಲಕ, ಗಾಂಧಿ, ಠಾಕೂರ ಮುಂತಾದವರ ಪ್ರಯತ್ನಗಳೂ ಯಥಾಶಕ್ತಿ ಸಫಲವಾದವಲ್ಲದೆ, ರಾಷ್ಟ್ರೀಯತೆಯನ್ನು ಹಾಸು-ಹೊಕ್ಕಾಗಿ ಇಲ್ಲಿ ಹೆಣೆಯಲು ಸಮರ್ಥವಾಗಲಿಲ್ಲ. ಆದುದರಿಂದ ೮ ಶತಮಾನಗಳ ಹಿಂದೆ ಸುಸ್ಪಷ್ಟವಾದ ಸಾಂಸ್ಕೃತಿಕ "ಕ್ಯಾನ್ಸರನ್ನು" ಗುಣಪಡಿಸಲು ಈ ಶತಮಾನದ ಗಾಂಧ್ಯುತ್ತರಕಾಲೀನವಾದ ಕೆಲ ಸಂಸ್ಥೆಗಳು ಯಥಾಶಕ್ತಿ ಪ್ರಯತ್ನ ನಡೆಸುತ್ತ ಬಂದಿವೆ. "ನೀ ಹುಚ್ಚ, ನೀ ಹುಚ್ಚ" ಎಂಬ ವಾದ-ಪ್ರತಿವಾದಗಳಲ್ಲಿ ನಿರತವಾದ ರಾಜಕೀಯ ಪಕ್ಷಗಳ ದೆಸೆಯಿಂದ ಪ್ರಜಾಸ್ತೋಮವು "ಸ್ವರಾಜ್ಯ"ದ ಅರ್ಥವನ್ನೇ ಕಾಣದಾಗಿದೆ.

ಸಾಂಸ್ಕೃತಿಕ ಏಕೀಕರಣವಾಗದೆ ಹೋದರೆ ನಮ್ಮ ದೇಶದವರ ಎಲ್ಲ ಐಕಮತ್ಯಗಳೂ ಮಳಲಮೇಲೆ ಕಟ್ಟಿದ ಮನೆಗಳಾವುವು. ಶ್ರೀ ಅರವಿಂದರು Foundations of Indian Culture ಭಾರತೀಯ ಸಂಸ್ಕೃತಿಯ ನೆಲೆಗಟ್ಟನ್ನು ಬರೆದರೆ ಎಷ್ಟುಜನ ಓದಿ ತಮ್ಮ ಆಚಾರಗಳಲ್ಲಿ ತಿದ್ದುಪಡಿಮಾಡಿಕೊಂಡರು? ಕೆಲವರು ಮಾಡಿಕೊಂಡರು. ಅಷ್ಟಷ್ಟೇ ಆಗುತ್ತ ಹೋಗಿ ಒಂದು ಕಾಲದಲ್ಲಿ ಅಖಿಲ ಭಾರತೀಯತೆಯು ಸರ್ವಪ್ರಜಾವ್ಯಾಪಕವಾದೀತು- ಎಂಬ ಆಶಾಬಂಧವು ಜಾತ್ಯೈಕ್ಯ, ಮತಧರ್ಮೈಕ್ಯಗಳ ಸುದ್ದಿಗೆ ಹೋಗದೆ ಅವೆಲ್ಲವುಗಳಿಗೂ ಮೂಲಾದಾರವಾದ ಸಾಂಸ್ಕೃತಿಕ ಐಕ್ಯದ ರಸ-ರುಚಿಗಳನ್ನು ವೈಧಿಕ, ಶೈಕ್ಷಣಿಕ, ಪ್ರಶಾಸನಿಕ ಮಾರ್ಗಗಳಿಂದ ಕ್ರಮೇಣ ಬದ್ಧಸಂಕಲ್ಪರ ನೇತೃತ್ವವು ಮತಾಧಿಕಾರ ಪಡೆದ ಹಾಗೂ ಪಡೆಯದ ಪ್ರಜಾಕೋಟಿಯಲ್ಲಿ ಬೆಳೆಯಿಸೀತು ಎಂದೆನಿಸಿದ್ದರಿಂದ ಪ್ರಸ್ತುತ ಪ್ರಬಂಧವು ಹೊರಬಿದ್ದಿತು.

ಇಲ್ಲಿ Revivalism ಸರ್ವಪ್ರಾಚೀನ ರೀತಿಗಳ ಪುನರುಪಕ್ರಮವನ್ನು ವಿರೋಧಿಸಲಾಗಿದೆ; ಹಾಗೇ ಸರ್ವ ಪಾಶ್ಚಾತ್ಯ ರೀತಿಗಳನ್ನು ಅಚಿಕಿತ್ಸಕ ದೃಷ್ಟಿಯಿಂದ ಅಳವಡಿಸಿಕೊಳ್ಳಲು ಮಾಡುತ್ತ ಬಂದ ಪ್ರಯತ್ನಗಳನ್ನು ಖಂಡಿಸಲಾಗಿದೆ. ರವೀಂದ್ರನಾಥ ಠಾಕೂರರು ತಮ್ಮ ಲೇಖಕತ್ವದ ಆರಂಭದಲ್ಲಿ ಸುಮಾರು ೩–೪ ವರ್ಷಗಳ ವರೆಗೆ ಈ ಮಧ್ಯಮಾರ್ಗವನ್ನು ಹಿಡಿದು ಜನಪ್ರಿಯ ಲೇಖಕರೆನ್ನಿಸಿಕೊಳ್ಳಲಾರದಾದರಂತೆ!

ಹಿಂದುತ್ವವಿಲ್ಲಿ ಭಾರತೀಯತ್ವದ ಪರ್ಯಾಯ; ಅದರ ಮತಧರ್ಮಾರ್ಥಕ್ಕಿಲ್ಲಿ ಸ್ಥಳವಿಲ್ಲ. ಆ ಪದವನ್ನು ದ್ವೇಷಿಸುವವರ ಬುದ್ಧಿಸಂಸ್ಕಾರಕ್ಕಾಗಿಯೇ ಅದನ್ನಿಲ್ಲಿ ಬಳಸಲಾಗಿದೆ; ಉಕ್ತಪದ ದ್ವೇಷವಿಲ್ಲಿ ಮಾನಸ ಶಾಸ್ತ್ರೀಯವಾಗಿ ರಾಷ್ಟ್ರೀಯ ಅಶ್ರದ್ಧಾವಂತಿಕೆಯ ಚಿಹ್ನವೆಂಬುದನ್ನು ಎಲ್ಲ ಮತ ಧರ್ಮೀಯರೂ ಪ್ರೀತಿವಾತ್ಸಲ್ಯಗಳಿಂದ ಅರಿತು ಅರಗಿಸಿಕೊಂಡು ನಂಬಿ ನಡೆಯುವ ಸುದಿನ ಬರುವ ವರೆಗೆ ನಮ್ಮ ದೇಶಕ್ಕೆ ಸ್ವಾತಂತ್ರ್ಯವಿದ್ದರೂ ನಮ್ಮ ಬದುಕು "ಅಪಾರ್ಥೀಡ್" ಆಗಿಯೇ ಉಳಿದು, ಆಪತ್ಕಾಲದಲ್ಲಿ ರಾಷ್ಟ್ರದ್ರೋಹಿಗಳನ್ನು ನಿರ್ಮಿಸಿಯೇ ತೀರುವುದು–ಎಂಬುದು ಶಿಲಾಲಿಪಿ ಎಂದು ತಿಳಿಯತಕ್ಕದ್ದು. ಹಿಂದುತ್ವಕ್ಕೆ ಅಧಿಕ ಮರ್ಯಾದೆ ಇಲ್ಲದಲ್ಲಿ ಭಾರತತ್ವ ಉಳಿಯದು. ಹಿಂದು ಧರ್ಮದ (ಸಂಸ್ಕೃತಿಯ) ಮೂಲತತ್ವಗಳ ವೈಶಾಲ್ಯ ಇನ್ನಾವ ಮತಧರ್ಮ ತತ್ವಗಳಲ್ಲೂ ಇಲ್ಲವೆಂಬುದು ಅಪ್ರತಿಹತಸತ್ಯ. ಅದಕ್ಕೆ ತಪ್ಪಿ ನಡೆದ ಹಿಂದುವನ್ನು ಉಪದೇಶದಿಂದ ಅವನ ಸಹಜೀವಿ ಇಲ್ಲಿ ತಿದ್ದಬಲ್ಲ. ತರ್ಕಶುದ್ಧವಾಗದ, ಐತಿಹಾಸಿಕ ಸಾಮರ್ಥ್ಯವಿಲ್ಲದ ಉಪದೇಶವಿಲ್ಲಿ ಹಿಂದುವಿನ ಮೇಲೆ ಮಾಡುವ ಬಲಾತ್ಕಾರವಾಗಿ ಪರಿಣಮಿಸುತ್ತದೆ ಎಂಬುದನ್ನು ಸರಕಾರಗಳೂ ನ್ಯಾಯಾಲಯಗಳೂ ರಾಜಕೀಯ ಪಕ್ಷಗಳೂ ಅರಿತುಕೊಳ್ಳಬೇಕು. ಅವೇ ಅರಿಯದಾದಾಗ "ಹರಕೊಲ್ಲಲ್ ಪರ ಕಾಯ್ವನೇ?" ಎಂಬ ಸ್ಥಿತಿಯು ಭಾರತೀಯ ನಾಗರಿಕತೆಗೆ ಬಂದೊದಗುತ್ತದೆ; ಸ್ವದೇಶದಲ್ಲೇ ಹಿಂದುವು ಬಡ ಪರದೇಶೀಯನಂತೆ ಬದುಕ ಬೇಕಾಗುತ್ತದೆ. ಈ ಸ್ಥಿತಿಯನ್ನು ಮಾರ್ಪಡಿಸಲು ರಾಷ್ಟ್ರಸೂತ್ರ ಅಗತ್ಯ. ಬಹುಸಂಖ್ಯಾತರಿಗೆ ಆತ್ಮರಕ್ಷಣೆಗೂ ಅವಕಾಶವಿಲ್ಲದಷ್ಟು "ಅಲ್ಪಸಂಖ್ಯಾತ" ಪ್ರಾಬಲ್ಯವನ್ನು ಸಹಿಸುತ್ತ ಬರುವ ಆಡಳಿತವು ರಾಷ್ಟ್ರೀಯವಾಗದು. ಬಹುಸಂಖ್ಯಾತರ ದಬ್ಬಾಳಿಕೆ ನಡೆದಲ್ಲಿ ಅದನ್ನು ಆಗಿಂದಾಗ ದಮಿಸದ ಅತ್ಯಲ್ಪಸಂಖ್ಯ ಪ್ರಕರಣಗಳೂ ಇವೆ. ಈ ಯಾವ ಬಗೆಯ ಪೂರ್ವಗ್ರಹವೂ ಉಳಿಯದಂತಹ ಸ್ಥಿರಪರಿಸ್ಥಿತಿಯನ್ನುಂಟು ಮಾಡುವುದು ರಾಷ್ಟ್ರಸೂತ್ರದ ಸಾಂಸ್ಕೃತಿಕ ಏಕೀಕರಣ–ಆರ್ಥಿಕ ವೈಷಮ್ಯಪರಿಹಾರಗಳು ಮಾತ್ರ ಎಂಬುದನ್ನು ನಿರ್ಧರಿಸಲಾದುದರಿಂದ ಅವುಗಳ ಪ್ರತಿಪಾದನೆಯನ್ನಿಲ್ಲಿ ಯಥಾಶಕ್ತಿ ಮಾಡಲಾಗಿದೆ. Uniformity ಏಕರೂಪ್ಯವು Unity ಐಕ್ಯದ ನಿರ್ಜೀವ ಸ್ವರೂಪವೆಂಬುದು ನಿಜವಾದರೂ ಭೇದೋಪಾಯದಿಂದ ಯಾರಾದರೂ ಐದು ನಿಮಿಷಗಳಲ್ಲಿ ಜಾತಿ–ಮತ ವೈರಗಳನ್ನು ಪ್ರಜ್ವಲಿಸಬಹುದಾದ ಮನಃಸ್ಥಿತಿಯಿಂದ ಭಾರತದ ಮತದಾರರು ಮುಕ್ತರಾಗಬೇಕಾದರೆ ಭಾರತೀಕರಣವು ಸರ್ವ ಬಾಹ್ಯ ವ್ಯವಹಾರಗಳಲ್ಲೂ ಸಾಕಷ್ಟು ಐಕರೂಪ್ಯಕ್ಕೆ ಇಳಿಸಲ್ಪಡುವುದು ಐತಿಹಾಸಿಕವಾದ ರಾಷ್ಟ್ರೀಯ ಅವಶ್ಯಕತೆ. ಆ ದಿಕ್ಕಿನಲ್ಲಿ ನಮ್ಮ ಆಡಳಿತದ, ನ್ಯಾಯದಾನದ ಮತ್ತು ಶಿಕ್ಷಣದ ಸಂಸ್ಥೆಗಳು

ಮುನ್ನಡೆ ಇಡುವಂತಹ ಯೋಜನೆಗಳನ್ನು ಸಿದ್ಧಗೊಳಿಸಿ ಅಧಿಕೃತವಾಗಿ ಅಮಲು ಜಾರಿಗೆ ತರಬೇಕೆಂಬುದೇ ಇಲ್ಲಿ ಪ್ರತಿಪಾದಿತವಾದ ನೀತಿವೀರತನ. ಶಾಂತಿಪರ್ವಸ್ಥ ಹಿಂದು ಸೂತ್ರಗಳು ಬಹಳ ವ್ಯಾಪಕವಾಗಿರುವುದರಿಂದ ಅದನ್ನು ಸರಕಾರದ ಶಿಕ್ಷಣ ಶಾಖೆಯು ಬೈಬಲ್ಲೆಂದು ತಿಳಿದು ಮತದಾರರಲ್ಲಿ ಪ್ರಚುರಪಡಿಸಲು ತಕ್ಕ ಭಾಷಾಂತರಗಳನ್ನು ಈ ಕೂಡಲೇ ಮಾಡಿಸಿ ಸಾರ್ವಜನಿಕ ಸಮಾಜಶಿಕ್ಷಣವನ್ನು ಏರ್ಪಡಿಸುವುದಗತ್ಯವೆನಿಸಿದ್ದೇ ಈ ಪ್ರಬಂಧವನ್ನು ಪ್ರಸ್ತುತ ಲೇಖಕನಿಂದ ಬರೆಯಿಸಿತು. ಸರ್ವಜಾತಿಮತಸ್ಥರೂ ಉಕ್ತ ಗ್ರಂಥವನ್ನು ಅರಿತು ಅರಗಿಸಿಕೊಂಡು ಆಚರಿಸುವಂತೆ ನೋಡಿಕೊಳ್ಳುವುದು ಭಾರತೀಯ ಪ್ರಜಾಪ್ರಭುಗಳ ಕರ್ತವ್ಯ.

**"ಉತ್ಥಾನ ಹೀನೋ ರಾಜಾ ಹಿ ಬುದ್ಧಿ ಮಾನಪಿ ನಿತ್ಯಶಃ**

**ಪ್ರಧರ್ಷಣೀಯಃ ಶತ್ರೂಣಾಂ ಭುಜಂಗ ಇವ ನಿರ್ವಿಷಃ"**

ಉತ್ಸಾಹದಿಂದ ಕಾರ್ಯಪರನಾಗದ ರಾಜನಿಗೆ ಶತ್ರುಗಳಿಂದ ಪರಾಜಯ ತಪ್ಪಿದಲ್ಲ ಎಂಬ ಈ ವ್ಯಾಸಸೂತ್ರವಿಂದು ಎಲ್ಲ ಮತದಾರರಿಗೂ ಅನ್ವಯಿಸುತ್ತದೆ; ಅದರಲ್ಲೂ ಹೆಚ್ಚಾಗಿ ಭಾರತದ ಸಂಸ್ಕೃತಿಯನ್ನು ಉಳಿಯಿಸಿಕೊಂಡು ಹೋಗುವುದರಲ್ಲಿ ಹೆಚ್ಚು ಜವಾಬುದಾರಿಯನ್ನುಳ್ಳ ಹಿಂದುಗಳಿಗೆ ಇನ್ನಷ್ಟು ಪ್ರಬಲವಾಗಿ ಅನ್ವಯಿಸುತ್ತದೆ.

ಓಂ ಸತ್ ಸತ್

**ಬಿ.ಎಚ್.ಶ್ರೀಧರ್**

# ಉಪಕ್ರಮ

General Memory or spirit of the race –ಸಾಮಾನ್ಯಸ್ಮೃತಿ ಅಥವಾ ಜಾತಿಸ್ಮರಣ ಎಂದು ಸರ್ ಜಾನ್‌ವುಡ್ರೋಫ್ ಯಾವುದನ್ನು ಕರೆಯುತ್ತಾರೋ ಅದೇ ಕಾರ್ಲ್ ಜಿ.ಯುಂಗನ "The Collective Unconscious" under national limitation ರಾಷ್ಟ್ರೀಯ ಪರಿಮಿತಿಯೊಳಗಿನ ಸಾಮೂಹಿಕ ಅವಿಜ್ಞಾತ ಪ್ರಜ್ಞೆ ಅಥವಾ ಸ್ವಧರ್ಮ, ಸ್ವಭಾವ, ಸ್ವರೂಪ. ಭಾರತದ ಸ್ವಧರ್ಮವು ಆರ್ಯಧರ್ಮ. ಆರ್ಯಧರ್ಮದ ಎಷ್ಟೋ ಅಂಶಗಳು ವಿಶ್ವಮಾನವಮನೋಧರ್ಮಕ್ಕೆ ಸಾಧಾರಣವಾದರೂ ಅದು ತನ್ನ ವಿವಿಧ ಅಂಶಗಳನ್ನು ಮಾನವ ವ್ಯಕ್ತಿಗಳ ಮನೋವಾಕ್ಕಾಯ ಕರ್ಮಗಳ ಮೂಲಕ ಪ್ರಕಟಪಡಿಸುವ Patterns ಪ್ರಕಾರ ವರ್ಗವು ಭಾರತವಿಶಿಷ್ಟ.

ಛಂದಸ್ಸಿನಲ್ಲಿ ಅಕ್ಷರಗಣ (Syllabism) ಮಾತ್ರಾಗಣ (Quantity) ಮತ್ತು ಸ್ವರಭಾರ (Accent)ಗಳನ್ನು ಲಯಪ್ರಕಾರಗಳ ರೂಪಣಕ್ಕೆ ಸಾಧನಗಳೆಂದು ತಿಳಿದಿರುವಂತೆ ದೇಶೀಯ ಸಾಂಸ್ಕೃತಿಕ ಏಕಪ್ರಕಾರಕತೆಗೆ ವಸ್ತ್ರ, ಶರೀರ, ವಾಕ್ ಎಂಬ ಮೂರು ನಾಗರಿಕ ಪ್ರಕಟನ ಸಾಧನಗಳಿವೆ. ಛಂದಸ್ಸು ಅರ್ಥನಿರಪೇಕ್ಷವೆಂಬವರಂತೆ ಉಕ್ತ ಸಾಧನತ್ರಯವನ್ನು ಸಂಸ್ಕೃತಿನಿರಪೇಕ್ಷವೆಂದು ಆಂಗ್ಲಾಕ್ಷ ಭಾರತೀಯರು ತಿಳಿಯುತ್ತಾರೆ. ಇದು ಅಮಾನಸಶಾಸ್ತ್ರೀಯ. ಮನಸ್ಸಿನಂತೆ ದೇಹ (ಅವಯವ ಸಂಘಟನೆ), ದೇಹದಂತೆ ವೇಷ (ವಸ್ತ್ರವಿನ್ಯಾಸ), ವೇಷದಂತೆ ಭಾಷೆ (ವಾಕ್ಯ ಸಂಯೋಜನೆ); ಹಾಗೇ ಭಾಷೆ, ವೇಷ, ದೇಹ, ಮನಸ್ಸುಗಳ ಅನುಕ್ರಮವೂ ಸಮಸತ್ಯ.

ಶೈಲಿ, ರೂಪ (ಆಕಾರ), ಹೂರಣ (Content), ಪದ, ಅದರ ಆತ್ಮ; ಅಭಿವ್ಯಕ್ತಿ, ಪ್ರಾತಿಭಸ್ಫುರಣ–ಎಂಬ ಕಾವ್ಯಸಪ್ತಾಂಗಗಳಂತೆ ವರ್ತನಾಪ್ರಕಾರ, ಆಕಾರ, ಅನುಭವಿಕಜ್ಞಾನ, ಆಚಾರ, ವಿಚಾರ, ಮನಃಪ್ರಣಾಲಿ, ಪ್ರತ್ಯುತ್ಪನ್ನಮತಿತ್ವಗಳು ಒಂದು ದೇಶದ ಸಂಸ್ಕೃತಿಯ ಸಪ್ತಾಂಗಗಳು. Classical ಅಭಿಜಾತ ಶೈಲಿ, Gothic ಗೋತಿಕ್ ಶೈಲಿ, Renaissance ಪುನರುಜ್ಜೀವನ ಶೈಲಿ, Baroque ವಿಕಟ ಶೈಲಿ ಎಂಬ ಕಲಾಶೈಲಿಗಳಂತೆ, ವೈದರ್ಭಿ, ಗೌಡಿ, ಪಾಂಚಾಲಿ, ಲಾಟಿ ಎಂಬ ಕಾವ್ಯಶೈಲಿಗಳಂತೆ, ಒಂದುದೇಶದ ಸಂಸ್ಕೃತಿಯಲ್ಲಿ ವೈಯಕ್ತಿಕ–ಸಾಮಾಜಿಕ ವರ್ತನಾ (ನಿಯಮಗಳ) ಪ್ರಕಾರಗಳ ನಿರ್ದಿಷ್ಟ ಮಾದರಿಗಳಿರುತ್ತವೆ. Certain defined characteristitcs ಕೆಲ ಲಕ್ಷಿತ ಲಕ್ಷಣಗಳು ಭಾರತೀಯತೆಗಿರುವುದು ವಿದೇಶೀಯರಿಂದ ಸ್ವೀಕೃತವಾಗಿದೆ. ಅವುಗಳಲ್ಲಿ ಕೆಲವು ಬಾಹ್ಯ (ನಾಗರಿಕ), ಕೆಲವು ಆಂತರಿಕ (ಸಾಂಸ್ಕೃತಿಕ). ಹೊರ ಲಕ್ಷಣಗಳು ಒಳ ಲಕ್ಷಣಗಳ ಅಭಿವ್ಯಂಜಕಗಳಾಗಿರುವುದು

ಸುಸಂಬದ್ಧ. ಮಾನವ ಸಾಮಾನ್ಯ ಲಕ್ಷಣಗಳು ರಾಷ್ಟ್ರಸೂತ್ರಕ್ಕೆ ವಿಶೇಷ ಉಲ್ಲೇಖನೀಯಗಳಲ್ಲ.

(1) Orthodox beliefs and practices, (2) their modification to meet new social and econimic ideas and conditions, (3) scraping Indian Civilization as out of date- ಪ್ರಾಚೀನ ನಂಬಿಕೆ ಮತ್ತು ಆಚಾರಗಳನ್ನು ಮುಂಬರಿಸಿಕೊಂಡು ಹೋಗುವುದು, ಅವುಗಳನ್ನು ಹೊಸ ಸಾಮಾಜಿಕ, ಆರ್ಥಿಕ ವಿಚಾರ–ಪರಿಸ್ಥಿತಿಗಳಿಗೆ ತಕ್ಕಂತೆ ತಿದ್ದುವುದು, ಅಥವಾ ಭಾರತೀಯ ನಾಗರಿಕತೆಯನ್ನು ಇಡಿಯಾಗಿ ಕಾಲಾತ್ಯಯ ದೋಷದೂಷಿತವೆಂದು ತ್ಯಜಿಸುವುದು–ಎಂಬ ಮೂರು ವಿಕಲ್ಪಗಳಲ್ಲಿ ಜಾಗತಿಕ ಬುದ್ಧಿವಂತರು ನಡುವಿನದನ್ನೇ ಸಾರ್ವದೇಶಿಕ ಸೂತ್ರವೆಂದು ಎತ್ತಿ ಹಿಡಿಯುತ್ತಾರೆ. ಕುಲಸಂಸ್ಕಾರವನ್ನೀಗ ಪಾಶ್ಚಾತ್ಯ ಪ್ರಭಾವಗಳಲ್ಲಿ ಮುಳುಗಿಸುವ ಪ್ರಯತ್ನವನ್ನು ನಮ್ಮ ಸರಕಾರಗಳು ನಡೆಸುತ್ತಿವೆ. ಇದು ಪಾಶ್ಚಾತ್ಯೀಕರಣ. ಇದರಿಂದ ೩ನೆಯ ವಿಕಲ್ಪವು ಫಲಿಸಬೇಕೆಂಬ ಆಶೆಯನ್ನು ಸರಕಾರಗಳು ವ್ಯಕ್ತಪಡಿಸುತ್ತವೆ. ಸರಕಾರಿ ಪ್ರಭಾವಕ್ಕೆ ಸ್ವಲ್ಪವೂ ಒಳಪಡದ ಸಂಸ್ಥೆಯೇ ನಮ್ಮಲ್ಲೀಗ ಇಲ್ಲವೆನ್ನುವಷ್ಟಾಗಿದೆ. ಪಾಶ್ಚಾತ್ಯ ಆಧುನಿಕತೆಯು ಸರ್ವಾಂಶತಃ ಪೌರಸ್ತ್ಯ ಆಧುನೀಕತೆಯಾಗಲಾರದು. ಕಾಲದಷ್ಟೇ ದೇಶವೂ ಲಾಕ್ಷಣಿಕ ಪ್ರಾಧಾನ್ಯವುಳ್ಳದ್ದು ಎಂಬುದು ಪ್ರಕೃತಿ ಶಾಸ್ತ್ರ ಸಿದ್ಧ. ಅಂತಾರಾಷ್ಟ್ರೀಯವೆಂಬ ಹೆಸರಿನಲ್ಲಿ ವಿದೇಶೀಯ ಬಲಿಷ್ಠರ ವಿಲಾಸಗಳನ್ನು ಅಂಧಾನುಕರಣ ಮಾಡುವ ಸರಕಾರಿ ನಾಯಕತ್ವವು ದೇಶದೊಳಗಡೆ ಸಾಂಸ್ಕೃತಿಕವಾಗಿ ಅಸಮರ್ಥನೀಯವೆಂಬುದನ್ನು ಬುದ್ಧಿ ಜೀವಿಗಳೇ ಅರಿತುಕೊಳ್ಳಲಾರದಂತಾಗಲು ಅವರ ಮನಸ್ಸುಗಳ ವೈಚಾರಿಕ ಕವಚಗಳು ಪಾಶ್ಚಾತ್ಯವಾಗಿರುವುದೇ ಕಾರಣ.

"India contains all types of culture extending almost from the neolithic to the present age. Probably this juxta-position and, in cases, admixture of high and low types, is one of the main, if not the chief material cause, of the arrested development and degeneracy o fthis country, which has made it for centuries a prey to any one who desired it –ನವಾಶ್ಮಯುಗದಿಂದ ವರ್ತಮಾನಯುಗದ ವರೆಗಿನ ಎಂಬಷ್ಟು ವಿವಿಧ ಸಾಂಸ್ಕೃತಿಕ ಮಾದರಿಗಳು ಭಾರತದಲ್ಲಿವೆ. ಈ ಪ್ರಕಾರ ತರತಮವಾಗಿ ಭಿನ್ನವಾದ ಸಾಂಸ್ಕೃತಿಕ ಜನಸಮೂಹಗಳು ಒಟ್ಟೊಟ್ಟಾಗಿರುವುದೂ ಕೆಲವೆಡೆ ಉಚ್ಚ–ನೀಚ ಮಾದರಿಗಳು ಸಂಮಿಶ್ರವಾಗಿ ಸೇರಿಹೋಗಿರುವುದೂ ಈ ದೇಶವು (ನೈತಿಕ) ಅವನತಿಗೀಡಾಗಲು ಮತ್ತು ಶತಮಾನಗಳಿಂದ ಇಚ್ಛೆ ಬಂದವನ ಬಾಯಿ ತುತ್ತಾಗುವ ಸ್ಥಿತಿಗಿಳಿಯಲು ಬಹುಶಃ ಕಾರಣವಾಗಿರಬೇಕು"–ಎಂದು ಸರ್ ಜಾನ್ ವುಡ್ರೋಫ್ ೧೯೧೯ರಲ್ಲಿ ಹೇಳಿದ್ದು ಈಗಲೂ ಸತ್ಯವಾಗಿದೆ. ಹೀಗಿರುವಾಗ Indianisation or Nationalisation ಭಾರತೀಕರಣ ಅಥವಾ ರಾಷ್ಟ್ರೀಕರಣ ಮಾಡಲು ಐತಿಹಾಸಿಕ ಹಾಗೂ ಪ್ರಜಾಪ್ರಭುತ್ವೀನ ಹಕ್ಕುಳ್ಳವರಾದ ಹಿಂದುಗಳು ಅದಕ್ಕಾಗಿ ಶೈಕ್ಷಣಿಕ ಮಾರ್ಗಗಳನ್ನು ವಿಮತೀಯರಿಗಿಲ್ಲಿ ತೆರೆಯುವುದು ಅತ್ಯಣತ ಅನಿವಾರ್ಯವಾದ ಐತಿಹಾಸಿಕ ಕರ್ತವ್ಯ. ಸ್ವಮತೀಯರ ಸಾಂಸ್ಕೃತಿಕ ಉನ್ನತೀಕರಣಕ್ಕೂ ಅವರಲ್ಲಿಯ ಉಚ್ಚಸಾಂಸ್ಕೃತಿಕ ಮಟ್ಟದವರು ಅಹೋರಾತ್ರ ಶ್ರಮಿಸುವುದು ಬಿಡಲಾರದ ಕರ್ತವ್ಯವಾಗಿದೆ.

**"ಹಾಳರ್ಥ ಹೊಲೆಯರೆಂದು**
**ಬೀಳರ್ಥ ಹೆಣ್ಣು ಎಂದು**
**ಹೋಳು ಹೋಳಾಗಿಹುದು ಆಳು ಬಾಳಾಗಿಹುದು"**

ಎಂದು ವರಕವಿ ಬೇಂದ್ರೆಯವರು ಮೇಲಿನ ಅನುಭವದಿಂದಲೇ ಉದ್ಗರಿಸಿದ್ದು ಸ್ಪಷ್ಟ. ವೇದಿಕಾ ಭಾಷಣಗಳಿಂದ 'ಎಲ್ಲ ಸರಿಯಾಗಿದೆ ಆಗುತ್ತದೆ' ಎಂದು ಗಳಹುವ ವಸ್ತು ಸತ್ಯದ ಅಪಹ್ನುತಿಯು ರಾಷ್ಟ್ರಘಾತಕವಾದುದು. ಅಪ್ರಿಯವಾದ ಸತ್ಯವನ್ನು ಮನ್ನಿಸಿ ಅದನ್ನು ತಿದ್ದಲು ತಕ್ಕ ಶೈಕ್ಷಣಿಕ ಮಾರ್ಗಹಿಡಿಯುವುದು ವಿವೇಕ.

ಸಾಂಸ್ಕೃತಿಕ ತಾರತಮ್ಯವಿಲ್ಲಿ ಈಗ ಕೇವಲ ಅರ್ಥವೈಷಮ್ಯವನ್ನು ಅವಲಂಬಿಸಿಲ್ಲ–ಐತಿಹಾಸಿಕ ಪರಂಪರೆಯನ್ನೇ ಹೆಚ್ಚಾಗಿ ಅವಲಂಬಿಸಿದೆ. ಬ್ರಹ್ಮಸಮಾಜ, ಆರ್ಯಸಮಾಜಗಳು ಮಾಡಹೊರಟದ್ದನ್ನೇ ಇಂದು ಹಿಂದು ಸಮಾಜ ಮಾಡಬೇಕಾಗಿದೆ. ಇದೇ ನಿಜವಾದ ಸಮಾಜಶಿಕ್ಷಣ ನಮಗೀಗ. ಗಾಂಧಿಯವರಿದನ್ನು ತಮ್ಮದೇ ಆದ ವ್ರತ, ನಿಯಮ, ಉಪವಾಸ, ಭಜನೆ, ಪ್ರಾರ್ಥನೋತ್ತರ ಭಾಷಣಗಳ ಮೂಲಕ ಮಾಡಲಾರಂಭಿಸಿದ್ದು ಎಲ್ಲರಿಗೂ ತಿಳಿದ ಸಂಗತಿ. ಆದರೆ ಅವರ ಪ್ರಯತ್ನ ಅವರ ಮರಣದ ಅವಧಿಗಷ್ಟೇ ಪರಿಸೀಮಿತವಾಯ್ತು. ರಾಷ್ಟ್ರೀಯ ಸ್ವಯಂಸೇವಕಸಂಘವು ಉಕ್ತಪ್ರಯತ್ನವನ್ನು ತನ್ನದೇ ಆದ ಮಾರ್ಗದಲ್ಲಿ ಮುಂಬರಿಸುತ್ತಿದೆ. ಅದಕ್ಕೆ ಸರಕಾರಿ ಮನ್ನಣೆ ದೊರಕುವಂತಾಗಬೇಕು; ಅಲ್ಲಿಯ ವರೆಗೆ ಅದರ ಪ್ರಯತ್ನವು ಆಗಬೇಕಾದಷ್ಟು ಪ್ರಭಾವಿಯಾಗದು. ಅದರ Hindu or Indian Socialism ಹಿಂದು ಅಥವಾ ಭಾರತೀಯ ಸಮಾಜವಾದವಿನ್ನೂ ಸ್ಪಷ್ಟವಾದ ರೂಪರೇಖೆಗಳಿಂದ ಜನಮನದ ಮೇಲೆ ಪ್ರತಿಬಿಂಬಿಸಿಲ್ಲ. ಅದರ ರಾಷ್ಟ್ರೀಯತೆಯ ಭಾವಿ ಸಂವಿಧಾನವೂ ಆರ್ಥಿಕ, ಸಾಮಾಜಿಕ ಧೋರಣೆಗಳೂ ನವ್ಯೀಕೃತವಾಗಬೇಕು. ಹಿಂದುಗಳಲ್ಲಿಯ ರಾಷ್ಟ್ರಕಂಟಕವಾದ ಸನಾತನ (ಪ್ರಾಚೀನ) ನಂಬಿಗೆಗಳನ್ನಾಧರಿಸಿದ ಸಾಮಾಜಿಕತೆಯ ಅಧ್ವರ್ಯುಗಳ ಹೃದಯ ಪರಿವರ್ತನವನ್ನದು ಇನ್ನೂ ಸಮರ್ಪಕವಾಗಿ ಮಾಡಿಲ್ಲ. ರಾಜಕೀಯವೂ ಕಲೆಯೂ ನೈತಿಕಜೀವನದಿಂದ ಹೊರಗೆ ಎಂದು ತಿಳಿಯುವ ನ್ಯಾಯಸಿದ್ಧಾಂತವನ್ನು ನಮ್ಮ ಸರಕಾರ–ಕೋರ್ಟುಕಚೇರಿಗಳಿಂದ ಹೊರಗೆ ಹಾಕಬೇಕು. 'ಸಮಾಜ' ಮತ್ತು 'ನೀತಿ'ಗಳು ನಮ್ಮ ಎಲ್ಲ ಚಟುವಟಿಕೆಗಳನ್ನೂ ವ್ಯಾಪಿಸುವ ವಿಚಾರಗಳು – ಎಂಬ ಭಾರತೀಯ ತತ್ವಸಿದ್ಧಾಂತಕ್ಕೆ ಸಂವಿಧಾನದಲ್ಲಿ ಸ್ಥಾನಸಿಗಬೇಕು. ನೀತಿವಿಮುಖ ರಾಜ್ಯಶಾಸ್ತ್ರವನ್ನೂ ಅರ್ಥಶಾಸ್ತ್ರವನ್ನೂ ಗಾಂಧಿಯವರು ತಿರಸ್ಕರಿಸಿದ್ದು ಜಗದ್ವಿದಿತ. ಹಾಗೇ ನೀತಿವಿಮುಖ ಕಾಯದೆಗಳೂ ತ್ಯಾಜ್ಯ. ನೀತಿಯೇ ಸಮಾಜದ ವೈಶ್ವಾನರ ಸೂತ್ರ. 'ಮಹಾಭಾರತ'ದ ಶಾಂತಿಪರ್ವವು ಭಾರತೀಯತೆಯ ಅಥವಾ ಹಿಂದುತ್ವದ ಸಂವಿಧಾನ ಕಲ್ಪನೆಯ ಮೂಲಾಧಾರ. ರಾಜಕೀಯ ಆಡಳಿತದ ನೀತಿನಿಷ್ಠತೆಯನ್ನು ಎಷ್ಟು ವ್ಯಾಪಕವಾದುದೆಂದು ಅದು ಸಾರಿದೆ? ನೋಡೋಣ:

**"ಚಾತುರ್ವರ್ಣ್ಯಂ ತಥಾ ವೇದಾಶ್ಚಾತುರಾಶ್ರಮ್ಯಮೇವಚ ।**
**ಸರ್ವಂ ಪ್ರಮುಹ್ಯತೇ ಹ್ಯೇತ ದ್ಯದಾ ರಾಜಾ ಪ್ರಮಾದ್ಯತಿ ॥**
**ಅಗ್ನಿತ್ರೇತಾ ತ್ರಯೀವಿದ್ಯಾ ಯಜ್ಞಾಶ್ಚ ಸಹದಕ್ಷಿಣಾಃ ।**

**ಸರ್ವ ಏವ ಪ್ರಮಾದ್ಯಂತಿ ಯದಾ ರಾಜಾ ಪ್ರಮಾದ್ಯತಿ ॥**
**ಪ್ರಜಾ ಜಾಗರ್ತಿ ಲೋಕೇऽಸ್ಮಿನ್ ದಂಡೋಜಾಗರ್ತಿ ತಾಸುಚ ।**
**ಸರ್ವಂ ಸಂಕ್ಷಿಪತೇ ದಂಡಃ ಪಿತಾಮಹ ಸಮಪ್ರಭಃ ॥**
**ಯಸ್ಯ ಸ್ಮ ವಿಷಯೆ ರಾಜ್ಞಃ ಸ್ತೇನೋ ಭವತಿ ವೈ ದ್ವಿಜಃ ।**
**ರಾಜ್ಞ ಏವಾಪರಾಧಂ ತಂ ಮನ್ಯಂತೇ ಕಿಲ್ಬಿಷಂ ನೃಪ ॥**
**ಅಪುಮಾಂಸೋऽಂಗಹೀನಾಶ್ಚ ಸ್ಥೂಲಜಿಹ್ವಾ ವಿಚೇತಸಃ ।**
**ಏತೇ ಚಾನ್ಯೇಚ ಜಾಯಂತೇ ಯದಾ ರಾಜಾ ಪ್ರಮಾದ್ಯತಿ ॥**
**ಅಧರ್ಮಾಃ ಸಂಪ್ರವರ್ದಂತೇ ಪ್ರಜಾಸಂಕರಕಾರಕಾಃ**
**ಅಶೀತೇ ವಿದ್ಯತೇ ಶೀತಂ ಶೀತೇ ಶೀತಂ ನವಿದ್ಯತೇ॥"**

ಈ ರಾಜಧರ್ಮ (ನೀತಿ) ಭಾರತೀಯ ಪ್ರಜಾಕೋಟಿ ಆಶಿಸುವ ಆಡಳಿತದ ಆದರ್ಶವನ್ನು ಸೂಚಿಸಿದ್ದು ಇಂದಿಗೂ ಸಮಾಜ ಶಾಸ್ತ್ರಜ್ಞನ ಪ್ರಯೋಗಪರೀಕ್ಷೆಯಿಂದ ಸಿದ್ಧವಾಗುತ್ತದೆ. ಕಾಲಭೇದದ ಕಾರಣದಿಂದ ಇಲ್ಲಿ ಪ್ರಜಾಮನೋಧರ್ಮವು ಈ ವಿಷಯದಲ್ಲಿ ಬದಲಾಗದುದನ್ನು ಗಮನಿಸದ ಪ್ರಶಾಸನಯೋಜನೆಯು ರಾಷ್ಟ್ರಹಾನಿಕರವಾಗುತ್ತ ಹೋಗಿರುವುದೀಗ ಸರ್ವಾನುಭವಗಮ್ಯವಾಗಿದೆ. "ಗಣವೃತ್ತ" (ಪ್ರಜಾಪ್ರಭುತ್ವ)ದಲ್ಲಿ–

**"ಪ್ರಾಜ್ಞಾನ್ ಶೂರಾನ್ ಮಹೋತ್ಸಾಹಾನ್ ಕರ್ಮಸು ಸ್ಥಿರ ಪೌರುಷಾನ್**
**ಮಾನಯಂತಃ ಸದಾ ಯುಕ್ತಾ ವಿವರ್ಧಂತೇ ಗಣಾ ನೃಪ ॥"**

ಎಂಬ Merit Principle ಯೋಗ್ಯತಾ ಪುರಸ್ಕಾರದ ತತ್ವವೇ ರಾಜಧರ್ಮ. ಜಾತಿಸಾದೃಶ್ಯ, ಕುಲಸಾದೃಶ್ಯ, ಕ್ರೋಧ–ಮೋಹ–ಲೋಭರಹಿತತ್ವ ಎಂಬೀ ಮೂರು ಪ್ರಜಾಪ್ರಭುತ್ವದ ಜಯಕ್ಕೆ ಅಗತ್ಯವೆಂದು ವ್ಯಾಸ ಹೇಳಿರುವುದರಿಂದ ಜಾತಿಗಳಿಂದಲೂ ಮತಧರ್ಮಗಳಿಂದಲೂ ಕೂಡಿದ ಈ ದೇಶವು ಅವುಗಳಲ್ಲಿ ನ್ಯಾಯವಾದ ಸರ್ವಸಾಧಾರಣ (common to all) ಆಚಾರನಿಯಮಗಳನ್ನೇ ಸಾರ್ವಭಾರತೀಯವಾಗಿ ಪರಿಗಣಿಸುವುದು ಕ್ರಮಪ್ರಾಪ್ತ. ವಿದೇಶೀಯ ಆಚಾರಗಳನ್ನು ಸ್ವೀಕರಿಸುವುದು "ಸೆಕ್ಯೂಲಾರಿಜಂ=ಲೌಕಿಕತೆ" ಅಲ್ಲ. ಉದ್ಯೋಗಭೇದ, ಶಾಸ್ತ್ರಜ್ಞಾನಭೇದ, ರೂಪ ಭೇದ, ದ್ರವ್ಯಭೇದಗಳು ಗೌರವಭೇದಕ್ಕೆ ಕಾರಣಗಳಾಗಕೂಡದು; ಶೀಲವೊಂದೇ ಗೌರವಾರ್ಹವಾಗಬೇಕು.

**"ದಾಕ್ಷಿಣ್ಯಂ ಸ್ವಜನೇ ದಯಾ ಪರಿಜನೇ ಶಾಠ್ಯಂ ಸದಾ ದುರ್ಜನೇ**
**ಪ್ರೀತಿಃ ಸಾಧುಜನೇ ನಯೋ ನೃಪಜನೇ ವಿದ್ವಜ್ಜನೇ ಚಾರ್ಜವಂ ।**
**ಶೌರ್ಯಂ ಶತ್ರುಜನೇ ಕ್ಷಮಾ ಗುರುಜನೇ ಕಾಂತಾಜನೇ ಧೃಷ್ಟತಾ**
**ಯೇ ಚೈವಂ ಪುರುಷಾಃ ಕಲಾಸು ಕುಶಲಾ ಸ್ತೇಷ್ವೇವ ಲೋಕಸ್ಥಿತಿಃ॥"**

ಎಂಬ ಭರ್ತೃಹರಿಯ ಶೀಲಸೂತ್ರವು ಕಾರ್ಯಕರವಾದ ಪ್ರೀತಿಯನ್ನು ಸಹಸಜ್ಜನರೆಲ್ಲರಲ್ಲೂ ತೋರಬೇಕೆಂದಿರುವಾಗ ಆಸ್ತಿಲೋಭ, ಅಧಿಕಾರಲೋಭ, ಮಾನಲೋಭ, ಸ್ಥಾನಲೋಭಗಳನ್ನು ಹೆಚ್ಚಿಸುವ ಔದ್ಯಮಿಕ, ಆರ್ಥಿಕ, ಆಸ್ತಿವಿಷಯಕ ಕಾಯಿದೆ ನಿಯಮಾವಳಿಗಳನ್ನು ವರ್ಜ್ಯವೆನ್ನದವ ಭಾರತೀಯನೆಂತಾದಾನು?

**"ಅದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾಗಿರಾ ।**
**ಅನುಗ್ರಹಶ್ಚ ದಾನಂಚ ಸತಾಂ ಧರ್ಮಃ ಸನಾತನ॥"**

ಎಂಬ ವ್ಯಾಸಸೂತ್ರವೂ ಸಮತ್ವದ ಅರ್ಥಯೋಗವನ್ನೂ (The scheme of ecocomic acquisition) ಯೋಗಾರ್ಥವನ್ನೂ (The significance of successful maintenance of law and order in society) ಪರ್ಯಾಯವಾಗಿ ಹೇಳಿದೆ. ಗಾಂಧಿಯವರು ಈ ಅಂಶವನ್ನು–

"The dream I want to realise is not the SPOILATION of the property of private owners, but RESTRICT its enjoyment so as to avoid all pauperism, consequent discontent and the hideously ugly contrast that exist today between the lives and surroundings of the rich and the poor–ಖಾಸಗಿ ಒಡೆಯರ ಆಸ್ತಿಯನ್ನು ಹಾಳುಮಾಡಬೇಕೆಂಬುದು ನನ್ನ ಕನಸಲ್ಲ; ಅದರ ಭೋಗ ಅಥವಾ (ಅನುಭವ) ಬಳಕೆಯನ್ನು ಪರಿಸೀಮಿತಗೊಳಿಸುವುದರ ಮೂಲಕ ನಿರ್ಧನತೆ, ಅದರಿಂದುಂಟಾಗುವ ಅತೃಪ್ತಿ ಮತ್ತು ಧನಿಕ–ದರಿದ್ರರ ಜೀವನ ಹಾಗೂ ಪರಿಸರಗಳಲ್ಲಿ ಈಗಿರುವಂಥ ಅಸಹ್ಯ ಅಂತರಗಳನ್ನು ಹೋಗಲಾಡಿಸುವುದೇ ಆಗಿದೆ"– ಎಂಬ ನುಡಿಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಈ ನ್ಯಾಯವೊಂದೇ ಭಾರತದಲ್ಲಿ ರಾಷ್ಟ್ರೀಯ ಶಾಂತಿಪರ್ವವನ್ನು ತರಬಲ್ಲದು. "ಪುತ್ರಾದಪಿ ಧನಭಾಜಾಂ ಭೀತಿಃ" ಎಂದು ಶಂಕರಾಚಾರ್ಯರು ಹೇಳಿದಂತೆ ಲುಬ್ಧರಾದ ಅತಿಧನಿಗಳಿಗೆ ಕಮ್ಯೂನಿಜಮ್ಮಿನ ಸಿಂಹಸ್ವಪ್ನ ಸದಾಕಾದಿರುವುದು ಜಗತ್‌ಪ್ರಸಿದ್ಧ. ಅಂಥ ಭೀತಿಯಿಂದ ಅವರು ಮುಕ್ತರಾಗಬೇಕಾದರೆ To lose onself in others is to find onself- ಪರಹಿತಕ್ಕಾಗಿ ದುಡಿಯುವುದರಲ್ಲೇ ಸ್ವಹಿತವನ್ನು ಕಾಣುವ ಬುದ್ಧಿಯು ವಿವೇಕದಿಂದ ಅಥವಾ ರಾಜದಂಡದ (ಶಾಸನದ) ಭಯದಿಂದ ಉತ್ಪನ್ನವಾಗಬೇಕು. ಈ ಅರ್ಥಶಾಸನವಿಲ್ಲದಲ್ಲಿ ರಾಷ್ಟ್ರೀಯ ಸಂಘಟನೆಯೆಂದೂ ಚಿರಸ್ಥಾಯಿಯಾಗದು. ಸಾಮಾನ್ಯ ಶರೀರಿಗಳೆಲ್ಲರ ಜೀವನದ ಬೆಲೆಗಳಿಗೆ ಅರ್ಥವು ಪೋಷಕ.

**"ಧರ್ಮಂ ಪೂರ್ವೇ ಧನಂ ಮಧ್ಯೇ ಜಘನ್ಯೇ ಕಾಮಮಾಚರೇಸ್**
**ಅಹನ್ಯನು ಚರೇ ದೇವಂ ಏಷ ಶಾಸ್ತ್ರ ಕೃತೋವಿಧಿಃ"**

ಎಂಬುದು ವ್ಯಾಸಾಯನ. ಧರ್ಮದ ಅರ್ಥವು ಪರೋಕಾರಪ್ರಧಾನವಾದುದು. ಆ ಉಪಕಾರವು ಯಥಾಶಕ್ತಿಯ ಆನುಪಾತಿಕ ಆಯ–ವ್ಯಯ ನಿಷ್ಠವಾದುದು. ಇದನ್ನು ಮರೆತರೆ ದೇಶಪ್ರೇಮದ ಪ್ರಚಾರವಿಂದು ಟೊಳ್ಳುಎನ್ನಿಸದಿರದು. ಆ ಅನ್ಯಾಯವು ಪ್ರತ್ಯಕ್ಷವಾಗಿರಬಹುದು ಅಥವಾ ಪರೋಕ್ಷವಾಗಿರಬಹುದು! ಅನ್ಯಾಯದ ಪರೋಕ್ಷತೆ ಅಥವಾ ಪ್ರಚ್ಛನ್ನತೆ ಇಲ್ಲವೆ ಕಾಯದೆಬದ್ಧತೆ ಅದನ್ನು ನ್ಯಾಯವನ್ನಾಗಿ ಪರಿವರ್ತಿಸಲಾರದು. ನ್ಯಾಯವು ಧರ್ಮದ ಸಾರ. ಧನ–ಕಾಮಗಳು ಧರ್ಮಾಧೀನವಾಗಿರಬೇಕೆಂಬುದು ವ್ಯಾಸ ತಾತ್ಪರ್ಯ. "Dharma is the law of form - it is the spirit of the Ancient Race-it is the Racial self –ಧರ್ಮವು ವ್ಯವಹಾರದ (ನಡತೆಯ) ರೀತಿ, ರೂಪ– ಅದು ಪ್ರಾಚೀನ ಕುಲಚೈತನ್ಯ–ಕುಲದ ಆತ್ಮ. When a man loses faith in his own

historic past, he cannot have any faith in, and respect for, himself - Swadharma is that which upholds one's Form; it is the true nature of the seed of Race and its manifestations – ತನ್ನ ಗತೇತಿಹಾಸದಲ್ಲಿ ಒಬ್ಬನಿಗೆ ನಂಬಿಗೆ ಹೋದರೆ, ಅವನಿಗೆ ತನ್ನ ಮೇಲೆ ಶ್ರದ್ಧೆ–ಗೌರವ ಉಳಿಯವು; ಸ್ವರೂಪ ಉಳಿಸಿಕೊಡುವುದು ಸ್ವಧರ್ಮ; ಅದು ವಿವಿಧವಾಗಿ ಪ್ರಕಟವಾದ ತನ್ನ ಕುಲಬೀಜ"– ಎಂಬ ಅರ್ಥಗಳನ್ನು ರಾಷ್ಟ್ರಧರ್ಮವೆಂದು ಭಾರತಕ್ಕೆ ಅಂದೇ ಹೇಳಿದ್ದರೂ ಆಂಗ್ಲೀಕೃತ ಆಳರಸರ ಕಿವುಡು ಇನ್ನೂ ಹೋಗಿಲ್ಲ. ಅದರಿಂದಲೇ ಭಾರತದ ಮುಖಂಡರ ಆಳ್ವಿಕೆಗೆ ಜಾಗರಿತವೂ ಸ್ವತಂತ್ರವೂ ಆದ ರೂಪ ಬಂದಿಲ್ಲ. ಅಹಿಂಸಾದಿ ಶಾಶ್ವತ ಧರ್ಮದ ನೀತಿಯು ಭಾರತದ ಜೀವನ ಧರ್ಮಯೋಗ. ಅದರ ಬೆಳವಣಿಗೆಗೆ ಭಾರತೀಯ ಶಿಕ್ಷಣದಲ್ಲಿ ಈವರೆಗೆ ಎಡೆಮಾಡಿ ಕೊಟ್ಟಿಲ್ಲ. ಆದುದರಿಂದಲೇ ಭಾರತದಲ್ಲಿ ಸ್ವಜನದ್ರೋಹ ಅಸಹ್ಯಮಟ್ಟಕ್ಕೇರಿದೆ. ಇದಕ್ಕೆ ಇನ್ನೂ ಹೆಚ್ಚಿನ ಆಂಗ್ಲೀಕರಣ ಅಥವಾ ಅಮೇರಿಕೀಕರಣವೊಂದೇ ಮದ್ದೇ? ರೋಗ ಜನಕ ಪದ್ಧತಿಯನ್ನೇ ಮದ್ದೆಂದು ಭಾವಿಸುವ ಜನ ಜಾಗರಿತವಾದದ್ದೇ?

"Each being has its law; it is its nature; it is the law of form and function–ಪ್ರತಿಯೊಂದಕ್ಕೂ ಅದರದೇ ಆದ ನಿಯಮವಿದೆ, ಅದು ಅದರ ಸ್ವಭಾವ; ಅದು ಅದರ ಸ್ವರೂಪ ಮತ್ತು ವರ್ತನೆಗಳ ನಿಯಮ" ಎಂಬುದನ್ನು ಮರೆತಾಗ ರಾಷ್ಟ್ರೀಯ ಶಿಕ್ಷಣವನ್ನು ಯಾವ ವಿದ್ಯಾಮಂತ್ರಿಯೂ ರೂಪಿಸಲಾರನು. ಭಾರತೀಯ ಜ್ಞಾನಭಾಂಡಾರದ ಅರಿವಾಗುವ (ಸ್ವಾಧ್ಯಾಯದ) ಮೊದಲೇ ವಿದೇಶೀಯ ಜ್ಞಾನಭಾಂಡಾರದಲ್ಲಿ ತಲೆಹಾಕುವ ದುರವಸ್ಥೆಯೆಂದೂ ಭಾರತೀಯನಲ್ಲಿ ಅನನ್ಯ ನವನಿರ್ಮಾಣಶಕ್ತಿಯನ್ನು ಬೆಳೆಯಿಸದು. ಈ ಅಪನೀತಿಯಿಂದ ಯಾವ ಪ್ರಗತಿಶೀಲ ರಾಷ್ಟ್ರವೂ ಇಂದು ಪ್ರಗತಿಯನ್ನು ಸಾಧಿಸಿಲ್ಲ. ಭಾರತೀಯ ಜೀವನಶೈಲಿ, ವಿಚಾರಶೈಲಿ, ವ್ಯವಹಾರಶೈಲಿಗಳೆಲ್ಲವುಗಳನ್ನು ಅವೈಜ್ಞಾನಿಕ, ಅನಾಧುನಿಕ ಎಂದು ಬಿಸುಟ ಸರಕಾರಗಳ ದೆಸೆಯಿಂದಲೇ ಚೋರಸಂಘಾತರೂಪದ ರಾಜಕೀಯ ಪಕ್ಷಗಳಿಂದು ಅನೇಕಕಡೆ ಬೆಳೆದು ನಿಂತು ನಿತ್ಯವೂ ಸ್ವಜನವಂಚನೆ ನಡೆಸುತ್ತಿವೆ; ಲೋಭ, ಮತ್ಸರ, ವಿಕಟಕಾಮ ಸಂತೃಪ್ತಿಗಳಲ್ಲೇ ಅನೇಕ ಮಹಾಧಿಕಾರ ಸಂಪನ್ನರಕಾಲ ಕಳೆದುಹೋಗುತ್ತಿದೆ. ಅವರಿಗೆ ಸ್ವಾತಂತ್ರ್ಯ, ಇತರರಿಗೆ ದಾಸ್ಯ! ಹೀಗಿರುವಾಗ ವಂಚನಾವಿಜ್ಞಾನವಲ್ಲದೆ ಇನ್ನಾವ ವಿಜ್ಞಾನ ಇಲ್ಲಿ ಬೆಳೆದೀತು?

ಆರ್ಯಧರ್ಮದಲ್ಲಿ ಯಜ್ಞವೆಂದರೆ ವಿಷ್ಣು; ವಿಷ್ಣುವು ವ್ಯಾಪನಶೀಲ, ಆತ್ಮವು ಯಜ್ಞಭೂಮಿ. ಪಶುತ್ವವೆಂದರೆ ಮಂದಮತಿತ್ವ, ಅದರ ಸಂಹಾರವೇ ಪಶುಯಜ್ಞ, ಅದರಲ್ಲಿ ಶ್ರದ್ಧೆ ಇಲ್ಲದವ ಅಭಾರತೀಯ. ವ್ಯಾಪ್ತಿಯು ವಿಕಾಸ, ವಿಸ್ತಾರ–ಯಾವುದರ? ತನ್ನತನದ, ಆತ್ಮದ, ಸ್ವಧರ್ಮದ; ಪ್ರಜಾವ್ಯಕ್ತಿಯ ರಾಷ್ಟ್ರೀಕರಣ, ಅದರ ಸರ್ವಸ್ವದ ರಾಷ್ಟ್ರೀಕರಣ; ಸಹಭಾರತೀಯನಿಗಿಲ್ಲದ ಸುಖಸಾಧನೆ ನನಗೆ ಬೇಡ ಎಂಬ ರಾಷ್ಟ್ರೀಯಭ್ರಾತೃತ್ವದ ದೀಕ್ಷೆ. ಭಾರತೀಯನ ಆತ್ಮವು ಮೊದಲು ಭಾರತ ವ್ಯಾಪಕವೂ ಆಗದಿದ್ದರೆ ಅದೆಂದಾದರೂ ಭಾರತಹಿತವನ್ನು ಕಾಣಬಲ್ಲದೇ? ಭಾರತದಷ್ಟು ಅಗಲವಾಗುವಂತೆ ಪ್ರಜೆಯ ಆತ್ಮವನ್ನು ವಿಸ್ತರಿಸುವುದೇ ಭಾರತೀಕರಣ (Indianisation); ಭಾರತೀಯ ಸತ್‌ಸಂಪ್ರದಾಯಗಳನ್ನು ಬಿಡದಿರುವವರಂತೆ ಬಿಟ್ಟವರನ್ನು

ತಯಾರುಮಾಡುವುದೂ ಭಾರತೀಕರಣ. ಇಂಥ ಸಾಂಸ್ಕೃತಿಕ ಪುನರುಜ್ಜೀವನಕ್ಕೆ ಪ್ರಯತ್ನಿಸದ ಮಂದಮತಿತ್ವವಿರುವಾಗ ಇಲ್ಲಿ ಯಾರು ಏನು ಮಾಡಿದರೂ ಅದು ಭಾರತಹಿತವನ್ನು ಸಾಧಿಸಿಕೊಡಲಾರದು.

"ಸೋಶಲಿಜಂ", "ಸೆಕ್ಯೂಲಾರಿಜಂ" ಮತ್ತು "ಡೆಮೊಕ್ರೆಸಿ" ಎಂಬ ಯಾವುದೂ ಅರ್ಥಸಾಮ್ಯ, ಲೋಕನ್ಯಾಯ ಮತ್ತು ಪ್ರಜಾಭಿಪ್ರಾಯಪಾಲನಗಳೆಂಬ ಭಾರತೀಯ ರೂಪದಲ್ಲಿ ಧರ್ಮಾಂತರ ಹೊಂದಿ ಭಾರತೀಯ ಪದ್ಧತಿಯ ಆಡಳಿತದ ಮೂಲಕ ಅಭಿವ್ಯಕ್ತವಾಗುವಂತೆ ಪ್ರಯತ್ನಿಸದಿದ್ದರೆ ಅವು ಪದಸತ್ಯಗಳಷ್ಟೇ ಆಗಿ ಉಳಿದಾವಲ್ಲದೆ, ಅರ್ಥಸತ್ಯಗಳಾಗಲಾರವು. ಭಾರತೀಯ ರಾಜನೀತಿ ಶಾಸ್ತ್ರದಲ್ಲಿರುವ ಆಡಳಿತಜ್ಞಾನವು ಸರ್ವಪ್ರಜಾಪ್ರತಿನಿಧಿಗಳಿಗೂ ಮೊದಲು ಆಗಬೇಕು. ಅಲ್ಲಿಯ ವರೆಗೆ ಔದ್ಯಮೀಕರಣ, ಉತ್ಪಾದನೆ, ಅಭಿವೃದ್ಧಿ ಮುಂತಾದ ಎಲ್ಲವೂ ಕಾಗದದ ಕುದುರೆಗಳಾಗಿ ಉಳಿಯುತ್ತವೆ. ಶ್ರೀ ಕೃಷ್ಣನ ಸುದರ್ಶನ ಚಕ್ರವಲ್ಲದೆ, ಅಶೋಕ ಚಕ್ರ ಇಲ್ಲಿ ಯಾವ ಸ್ಫೂರ್ತಿಯನ್ನೂ ಯಾರಿಗೂ ನಿಜವಾಗಿ, ಆಳವಾಗಿ ಕೊಡದು. ಶೋಕಚಕ್ರದಲ್ಲಿ ಸಿಲುಕಿ ಪ್ರಜೆಗಳು ಒದ್ದಾಡುವುದು ತಪ್ಪದು. ದೊಡ್ಡ ಪ್ರಮಾಣದಲ್ಲಿ ಪ್ರಜಾವಂಚನೆ ಮುಖಂಡರಿಂದ ನಡೆಯಲು ಮುಖಂಡರು ವಿದೇಶ್ಯೀಕೃತರಾಗುತ್ತ ಹೋಗುವುದೇ ಕಾರಣ; ಅವರ ಮನೋವಾಕ್ಕಾಯಕರ್ಮಗಳ ಆಕಾರ ಪರಕೀಯವಾಗುವುದು ವಿದೇಶ್ಯೀಕರಣ. ನಮಸ್ಕಾರದ ಅಂಜಲಿಹಸ್ತವು "ಗುಡ್‌ಮಾರ್ನಿಂಗಿ"ನ ಹೊಡೆಗೈಯಾದದ್ದು ಒಂದು ದೃಷ್ಟಾಂತ.

ಜಗತ್ತಿನ ಎಲ್ಲ ದೇಶಗಳ ಜನರೂ ಒಂದಲ್ಲ ಒಂದು ಮತಧರ್ಮವನ್ನು ಸ್ವೀಕರಿಸಿದವರು. ಆದರೆ ಆ ಮತಧರ್ಮವು ಅವರ ಜೀವನದ ಚಟುವಟಿಕೆಗಳ ಅನೇಕ ಕ್ಷೇತ್ರಗಳಲ್ಲಿ ಒಂದು ಮಾತ್ರ. ಆದರೆ ಹಿಂದು ಅಥವಾ ಆರ್ಯಧರ್ಮವೆಂಬುದು ಹಾಗಿಲ್ಲ; ಇದು ಒಂದು way of life ಜೀವನ ಧರ್ಮಯೋಗ, ಸಂಸ್ಕೃತಿ, ನಾಗರಿಕತೆ. "That is the life of our race – ಅದು ನಮ್ಮ ಜೀವನದ ಜೀವಾಳ" ಎಂದು ವಿವೇಕಾನಂದರು ಹೇಳಿದ್ದು ಉಕ್ತ ಅರ್ಥದಲ್ಲಿಯೇ. ಅದೊಂದು ಜೀವನಯೋಜನೆ (Plan of life's activities); ಭಾರತೀಯತೆಯ ಮುದ್ರೆ (Stamp) ಇಲ್ಲದ ಚಟುವಟಿಕೆ ಇಲ್ಲಿದ್ದಿದ್ದಿಲ್ಲ. ಈಗ ಪಾಶ್ಚಾತ್ಯರಂತೆ ಅದನ್ನು ಒಂದು 'ರಿಲಿಜನ್–ಮತಧರ್ಮ' ಎಂಬ ಸಂಕುಚಿತತೆಗೆ ಇಳಿಸಿದ್ದೇ ಎಲ್ಲ ಅವ್ಯವಸ್ಥೆಗಳಿಗೂ ಕಾರಣವಾಯ್ತು–ಕಲಿತ ಅನೇಕರಲ್ಲಿ. ಕಲಿತವರಿಗಾದ ಪಾಶ್ಚಾತ್ಯ Brain wash ತಲೆ ತೊಳೆತದ ಫಲವಿದು. ಇದರಿಂದಲೇ ಅವರಲ್ಲನೇಕರು Rootless ಬೇರಿಲ್ಲದ ಜನರಾದರು; ಅವರ ವ್ಯವಹಾರ "ಬಾಡಿಗೆಯಭಟ"ರದ್ದಾಯ್ತು. ಅದೇ ವಂಚನಾಮೂಲ; Shameless freedom ಅವರು ಅನುಭವಿಸುತ್ತಿರುವ ನಿರ್ಲಜ್ಜ ಸ್ವಾತಂತ್ರ್ಯದ ಬುಡ.

ವರ್ತಮಾನಕಾಲದ ಗಣ್ಯ ಪಾಶ್ಚಾತ್ಯ ಮುಖಂಡತ್ವದಲ್ಲಿ (೧) ಸಾಮ್ರಾಜ್ಯಾಕಾಂಕ್ಷೆ, (೨) ನಿರಂಕುಶ ಪ್ರಭುತ್ವ, (೩) ಬಂಡವಾಳ ಶಾಹಿ, (೪) ಘೋರಯುದ್ಧಗಳು, (೫) ಆಧ್ಯಾತ್ಮಿಕ ವಿಷಯದಲ್ಲಿ ಪರಾಙ್ಮುಖತೆ, (೬) ಆರ್ಥಿಕ ವ್ಯವಸ್ಥೆಯಲ್ಲಿ ಉಚ್ಚ–ನೀಚ ಭಾವ, (೭) ಜಾತಿಯೆಂಬ ದುರಹಂಕಾರ, (೮) ಕಲಾಸಾಹಿತ್ಯಗಳಲ್ಲಿ ಬಂಜೆತನ, (೯) ವಿಜ್ಞಾನದ ದುರುಪಯೋಗ ('ಭಾರತೀಯ ಸಂಸ್ಕೃತಿ'ಯ ಪುಟ ೩೩೭) ಎಂಬ

ಅವಲಕ್ಷಣಗಳು ಗಣ್ಯವಾಗಿರುವಾಗ–ಜೀವನ, ವ್ಯವಹಾರ, ಆಡಳಿತ, ಶಿಕ್ಷಣ, ವ್ಯಾಪಾರ, ಸಾಹಿತ್ಯಾದಿ ಚಟುವಟಿಕೆಗಳಲ್ಲಿ ಅಂಥ ಮುಖಂಡರ ದೃಷ್ಟಿಯ ಮಾದರಿಗಳನ್ನು ಇಲ್ಲಿ ಹುಟ್ಟು ಹಾಕುವುದು ಆರೋಕ್ಯಕರವೇ? ಎಂಬುದೇ ದೊಡ್ಡ ಸವಾಲು; 'ಕುತಸ್ತ್ವಾ ಕಶ್ಮಲಮಿದಂ ವಿಷಯೇ ಸಮುಪಸ್ಥಿತಂ। ಅನಾರ್ಯಜುಷ್ಟಮಸ್ವರ್ಗ್ಯಮ ಕೀರ್ತಿಕರಮರ್ಜುನ' ಎಂಬುದೇ ಅತ್ಯಂತ ಗಂಭೀರವಾದ ಪ್ರಶ್ನೆ. ಪಾಶ್ಚಾತ್ಯರ ಆ ಈ ರೀತಿಯ ಅನುಕರಣ ಮತ್ತು ನೀತಿಯ ಅನುಕರಣಗಳೆರಡೂ ಇಲ್ಲಿ ವಿಕೃತಮನಸ್ಕರನ್ನು ತಯಾರುಮಾಡುತ್ತಿವೆ. ಅವರ ಅಂತಃಸ್ಥ ರಾಷ್ಟ್ರೀಯ ಸತ್ವವನ್ನು ಅನುಕರಿಸಲು ಮೊದಲಿನ ಅನುಕರಣವು ವಿಘ್ನಕಾರಿ ಎಂಬುದನ್ನೀಗ ಜನನಾಯಕರೆಂದು ಭಾವಿಸಿಕೊಳ್ಳುವವರು ಅರಿತುಕೊಳ್ಳಬೇಕಾಗಿದೆ ರಾಷ್ಟ್ರೀಯ ಏಕಲಿಪಿ, ಏಕಭಾಷೆ, ಏಕಶಿಕ್ಷಣ ಪದ್ಧತಿ, ಏಕ ಮಾನ–ಸನ್ಮಾನ ಪದ್ಧತಿ. ಏಕ ಪ್ರಶಾಸನ ಪದ್ಧತಿಗಳ ಪರಂಪರಾವಿಕಾಸಕ್ಕೆ ಎಡೆಗೊಡದೆ, ಬ್ರಿಟಿಷ್ ಪರಂಪರೆಯ ವಿಕೃತ ರೂಪಗಳ ಅಂಧಾನುಕರಣವನ್ನು ಬಿಡಲಾರದವರ ರಾಷ್ಟ್ರೀಯತೆಯ ದರ ಎಷ್ಟು? ನಾವೀಗ ರಾಷ್ಟ್ರೀಯ ಉಪನಯನವನ್ನು ಹೊಸದಾಗಿ ಆರಂಭಿಸಬೇಕು; ಇಲ್ಲವಾದರೆ ನಮಗೆ ದ್ವಿಜತ್ವ (ಸಂಸ್ಕೃತತ್ವ) ಇಲ್ಲ. "ಓ ಭಾರತವೇ ಇದು ನಿನಗೆ ಭಯಂಕರವಾದ ಅಪಾಯ. ಪಾಶ್ಚಾತ್ಯಾನುಕರಣದ ಮಾಯೆಯು ಒಳಿತು–ಕೆಡಕುಗಳ ಬಗೆಗಿನ ವಿಚಾರ, ವಿವೇಕ, ನಿರ್ಧಾರಗಳನ್ನು ಶಾಸ್ತ್ರಾಧಾರವನ್ನು ಅವಲಂಬಿಸಿ ಮಾಡದೆ ಇರುವುದು; ಬಿಳಿಯರು ಹೊಗಳಿದ ರೀತಿಗಳೆಲ್ಲ ಒಳ್ಳೆಯವು, ಅವರು ತೆಗಳಿದ ಅಥವಾ ಅವರಿಗೆ ಬೇಡವಾದ ರೀತಿಗಳೆಲ್ಲ ಕೆಟ್ಟವು! ಅಯ್ಯೋ, ಮೂಢತನಕ್ಕೆ ಇದಕ್ಕಿಂತ ಹೆಚ್ಚಿನ ಪ್ರತ್ಯಕ್ಷ ಪ್ರಮಾಣ ಯಾವುದಿದ್ದೀತು?" ಎಂದು ವಿವೇಕಾನಂದರು ಮರುಗಿದ್ದಕ್ಕೆ ಅರ್ಥವಿಲ್ಲವೆ?

ಬಹುಪಕ್ಷ ಪದ್ಧತಿಯ ಪ್ರಜಾಪ್ರಭುತ್ವವನ್ನೂ ವಯಸ್ಕ ಮತಾಧಿಕಾರವನ್ನೂ ಒಪ್ಪಿದ್ದೇ ಮಾರಕವಾದಂತೆ ತೋರುತ್ತದೆ. ಅವುಗಳನ್ನು ತಿದ್ದಲು ಸಾಧ್ಯವೇ ಇಲ್ಲವೇ? ಮನಸ್ಸು ಅಧಿಕಾರಸ್ಥರಿಗಿಲ್ಲವಾದುದರಿಂದ ಸಾಧ್ಯವಿಲ್ಲವೆಂದು ತೋರುತ್ತದೆ. ಅಧಿಕಾರಸ್ಥರ ಅನುಯಾಯಿಗಳ ಅಧಿಕಾರವು ಪರಂಪರಾಗತವಾಗಿ ನಡೆದು ಬರುತ್ತಿರುವಾಗ ಅವರ ರೀತಿಗಳನ್ನು ತಿದ್ದಲು ಅಥವಾ ಬದಲು ಮಾಡಲು ಪರಮಾತ್ಮನೇ ಅವತರಿಸಬೇಕಾದಷ್ಟು ಕ್ರಾಂತಿಯಾಗಬೇಕೇ? ಪ್ರತಿಯೊಂದು ಪಕ್ಷವೂ ಒಂದೊಂದು ಪಾಕಿಸ್ತಾನ ಅಥವಾ ಸಿಂಹಳವಾಗಿ ವರ್ತಿಸುತ್ತಿರುವುದು ಪಾಶ್ಚಾತ್ಯ "ಇಜಮ್ಮು"ಗಳ ಬೆನ್ನು ಹತ್ತಿದುದರಿಂದ. ಪ್ರತಿಯೊಬ್ಬ ವಯಸ್ಕನೂ ಮತದಾನವನ್ನು ಜೂಜು ಅಥವಾ ಲಾಟರಿ ಎಂದು ತಿಳಿಯುವಂತೆ ಮಾಡಿದ್ದು ಅಂಥ ಪಕ್ಷಗಳ ಆಡಳಿತ ವ್ಯವಸ್ಥೆಗಳು. ಮಾನವರ ಚಟುವಟಿಕೆಗಳೆಲ್ಲವೂ ಲೋಕದಲ್ಲೀಗ ಆತ್ಯಂತಿಕವಾಗಿ ರಾಜಕೀಯ ನಿಯಮಗಳಿಗೊಳಪಟ್ಟಿರಬೇಕಾಗಿ ಬಂದುದರಿಂದ ವಿದ್ಯಾರ್ಥಿಗಳೂ ಇಲ್ಲಿ ರಾಜಕಾರಣಿಗಳಾಗಬೇಕಾಗಿದೆ. ಮೂಲಾಧಾರಕ್ಕೆ ಮೂಲವ್ಯಾಧಿ ಬಡಿದುಕೊಂಡಾಗ ಎಲ್ಲರ ಕಾಲ, ಧನ, ಶಕ್ತಿಗಳೂ ಅದನ್ನು ಪರಿಹರಿಸಲು ಪ್ರತಿದಿನ ವ್ಯಯವಾಗಬೇಕಾಗಿ ಬಂದಿದೆ.

ಭಾರತಕ್ಕೆ Political Stability ರಾಜಕೀಯ ಸ್ಥೈರ್ಯವು ಇನ್ನೂ ಬಾರದಂತಾಗಲು ಪಕ್ಷಪದ್ಧತಿಯ ಪ್ರಭುತ್ವವನ್ನು ಚೆನ್ನಾಗಿ ಅರಗಿಸಿಕೊಳ್ಳಲಾರದುದೇ ಕಾರಣ. ೨೫

ವರ್ಷಗಳವರೆಗೂ ದೇಶದ ಹೊಟ್ಟೆಯಲ್ಲದು ಜೀರ್ಣವಾಗದೆ ಉಳಿದಿದೆ. ಅಸಂಖ್ಯಾತ ಪಕ್ಷಗಳೂ ಅಸಂಖ್ಯಾತ ಭ್ರಷ್ಟಾಚಾರಗಳೂ ವೈಧಾನಿಕ, ರಾಜಕೀಯ, ಪ್ರಶಾಸನಿಕ, ಔದ್ಯಮಿಕ, ಔದ್ಯೋಗಿಕ, ಶೈಕ್ಷಣಿಕ, ವೈಜ್ಞಾನಿಕ, ನ್ಯಾಯಾಸ್ಥಾನಿಕ, ಸೈನಿಕ, ಆರ್ಥಿಕ ಕರ್ಮಾಚರಣೆಯನ್ನು ಅನನುಕೂಲಪರಿಣಾಮಿಯನ್ನಾಗಿ ಮಾಡಿವೆ. ಭಾರತೀಯ ಪ್ರಜಾಪ್ರಭುತ್ವಕ್ಕೆ ಪಕ್ಷಪದ್ಧತಿ ಬಹುಶಃ ಒಂದು ಮೂಲಭೂತ ಭ್ರಷ್ಟಾಚಾರವೆಂದೇ ತೋರುತ್ತದೆ. ಅರಗದ ಆಹಾರದ ಸೇವನೆಯನ್ನು ಮುಖಂಡರು ಬಿಡಬಾರದೇಕೆ? ಜನರೇ ಬಿಡಿಸಬೇಕಾಗಿದೆ ಎಂದು ಕಾಣುತ್ತದೆ. ಸಂಸತ್ತಿನ ಸದಸ್ಯರಲ್ಲಿ ಕೃಷ್ಣಾವತಾರ ಎಂದಾದೀತು? ಎಲ್ಲ ಶೈಲಿಗಳಲ್ಲೂ ವೈದರ್ಭಿಯೇ ಶ್ರೇಷ್ಠವಾಗಿರುವಂತೆ ಎಲ್ಲ "ಇಜಮ್ಮು"ಗಳಲ್ಲೂ "ಸೋಷಲಿಜಮ್ಮು" ಶ್ರೇಷ್ಠ. ಏಕೆಂದರೆ ಅದು ಭಾರತದ "ದಯಾ ಸರ್ವಭೂತೇಷು" ಎಂಬ ಆತ್ಮಗುಣವನ್ನು ಹೆಚ್ಚು ಸ್ಪಷ್ಟವಾಗಿ ಸೂಚಿಸುತ್ತದೆ. ಉಕ್ತ ಆತ್ಮಗುಣವು ಭಾರತೀಯ ಸಂಸ್ಕೃತಿಯ ಸಾರ, ರಸ, ಆತ್ಮ.

"Make laws and institutions that remain undiminished in their power through scores of centuries–ನೂರಾರು ಶತಮಾನಗಳ ವರೆಗೆ ಸಾಮರ್ಥ್ಯವನ್ನು ಕಳೆದುಕೊಳ್ಳದೆ ಉಳಿಯಬಲ್ಲ ಕಾಯದೆ (ನೀತಿ)ಗಳನ್ನೂ ಸಂಸ್ಥೆಗಳನ್ನೂ ನಿರ್ಮಿಸು" ಎಂಬುದು ದಾರ್ಶನಿಕ ವಕ್ತಾರನ ಸಂದೇಶ. ನಮ್ಮ ಪಂಚವಾರ್ಷಿಕ ಯೋಜಕರಿಗೀದೃಷ್ಟಿ ಇದೆಯೇ? ನಾಳಿನ ಮಾತನ್ನು ನಾರಾಯಣ ಬಲ್ಲ, ಸಿಕ್ಕಿದ್ದಷ್ಟೇ ಮಕ್ಕಳ ಪುಣ್ಯ, ಬೆಂದಮನೆಯಿಂದ ಹಿರಿದು ಕದ್ದುಕೊಂಡು ಹೋದದ್ದೇ ಲಾಭ–ಎಂಬಂಥ "ನ್ಯಾಯ"ಗಳನ್ನಲ್ಲದೆ ಇನ್ನಾವುವನ್ನು ಇಲ್ಲಿ ಅನೇಕ ಯೋಜಕರೂ ನಿಯೋಜಕರೂ ನಿಯುಕ್ತರೂ ಅವಲಂಬಿಸುತ್ತ ಬಂದದ್ದು? ಕಾಲದೈರ್ಘ್ಯವೇ ಇಂದಿಗೂ ನಾಗರಿಕತೆಯೊಂದರ ಸಂಸ್ಥೆಗಳ ಯೋಗ್ಯತೆಗೆ ಗಣ್ಯ ನಿಕಷವಾಗಿದೆ; ಸಾತತ್ಯವಿಲ್ಲದ ಕ್ಷಣಭಂಗುರತೆಗೆ ಮಾರುವೋಗುವುದು ಮುಂದಿನ ತಲೆಮಾರುಗಳ ಹಿತಚಿಂತನೆ ಇಲ್ಲದ ಹಿರಿಯತನಕ್ಕೆ ಮಾತ್ರ ಪರಿಸೀಮಿತ.

"The community in Palestine must approach the social ideal of our forefathers as it is laid down in the Bible-ಬೈಬಲ್ಲಿನಲ್ಲಿ ಬರೆದಿಟ್ಟಂತೆ ನಮ್ಮ ಹಿರಿಯರ ಸಾಮಾಜಿಕ ಆದರ್ಶವನ್ನು ಪಾಲಿಸ್ತಾನದ ಸಮಾಜವು ಮುಟ್ಟಬೇಕು" ಎಂದು ಹೇಳಿದ್ದು ಯಾರು ಗೊತ್ತೇ? (Vide "The world as I see it"-p.97) ಆಲ್ಬರ್ಟ್ ಐನ್‌ಸ್ಟೀನ್! ಯಾವಾಗ? ೧೯೩೫ರಲ್ಲಿ! ಇದು ವಿಜ್ಞಾನದ ಹೆಸರಿನಲ್ಲಿ ಸಾಮಾಜಿಕ ಸದಾಚಾರಗಳನ್ನು ಹಳಿಯುವವರಿಗೆ ಬಾರುಗೋಲಿನ ಏಟು. ಸಾಮಾಜಿಕ ಬೆಂಬಲವಿಲ್ಲದ ವ್ಯಕ್ತಿಯು ನೈತಿಕ ಅಸ್ಥಿರತೆಗೆ (ಚಾಂಚಲ್ಯಕ್ಕೆ) ತುತ್ತಾಗುತ್ತಾನೆ– ಎಂದದ್ದು ಐನ್‌ಸ್ಟೀನ್ ಮಹಾಶಯನೇ. ಅವನ ಮಾತಿನಂತೆ ನಡೆದುಕೊಂಡ ಪಾಲಿಸ್ತಾನಿಗಳೀಗ ಹೇಗೆ ಪ್ರಗತಿಶೀಲರಾಗಿ ಪರಾಕ್ರಮದಿಂದ ಮುನ್ನಡೆಯುತ್ತಿದ್ದಾರೆ–ಎಂಬುದೀಗ ಜಗತ್ತಿಗೆ ಗೊತ್ತಾಗಿದೆ. "ನಮ್ಮ ರೀತಿಯಿಂದ ನಾವು ಬದುಕೋಣ; ನಮ್ಮ ಸ್ವಭಾವಕ್ಕೆ ಅಪರಿಚಿತವಾದ ದ್ವಂದ್ವಯುದ್ಧ ಮಾಡುವ ಮತ್ತು ಹೆಂಡಕುಡಿಯುವ ಅಭ್ಯಾಸಗಳನ್ನು ನಕಲು ಮಾಡದಿರೋಣ"– ಎಂದ ವಿಜ್ಞಾನಿ ಪರಮೇಷ್ಠಿಯ ಸಾಂಸ್ಕೃತಿಕ ಅನುಭವಾಮೃತವನ್ನು ಆಂಗ್ಲಾಕ್ಷ ಭಾರತೀಯ

ಎಡಗೈಯಿಂದ ಮುಟ್ಟನು. ಏಕೆ? ಅವನು ವೈದೇಶ್ಯೀಕೃತನಾಗಿ ಹೋಗಿದ್ದಾನೆ! ಅಂಥವರು ತಾವು ಸಾಂಸ್ಕೃತಿಕ ಪರದೇಶಿಳಾಗಿದ್ದೂ ದೇಶೀಯ ರೀತಿಯಿಂದ ಬಾಳುವ ಸ್ವದೇಶಿಯರನ್ನು ಕೀಳ್ಗಳೆಯುವ ಅಧಿಕ ಪ್ರಸಂಗಿತನವನ್ನು ಮೆರೆಯಿಸಲು ಅವರಿಗೆ ಸರಕಾರ ಬೆಂಬಲಿಸುವ ಸಂಸ್ಥೆಗಳು ಕೊಟ್ಟಸ್ಥಾನ, ಮಾನಗಳೇ ಕಾರಣ. ಆದುದರಿಂದ ಪ್ರಾಧಿಕಾರಿಗಳು ಸಂಪೂರ್ಣವಾಗಿ ಬದಲಾಗುವುದಿಂದು ಮೊಟ್ಟಮೊದಲಿನ ಅಗತ್ಯ. ಅವರ ಅತ್ತೆತನವು (ವಿದೇಶೀಯ) ಹಳೆಯ ಅಪಸಂಪ್ರದಾಯವನ್ನು ಸತತಗೊಳಿಸದೆ ಉಳಿಯದು. ಸ್ವದೇಶದ 'ಪರದೇಶಿ'ಗಳ ಮನಃಸ್ವರೂಪವನ್ನು ಐನ್‌ಸ್ಟೀನ್ ಚಿತ್ರಿಸಿದ್ದಾನೆ: "Their attitude does not originate in thier intellect at all– ಅವರ ಮನಃಪ್ರಣಾಲಿಯು ಅವರ ಮಿದುಳಿನಲ್ಲಿ ಹುಟ್ಟಿದ್ದೇ ಅಲ್ಲ"– ಎಂದರೆ ವಿದೇಶದ ರೀತಿನೀತಿಗಳ ಅಂಧಾನುಯಾಯಿಗಳು ಗೋಮುಖವ್ಯಾಘ್ರರು; ಅವರು ಹೇಳುವುದು ಶಾಸ್ತ್ರ, ಹಾಕುವುದು ಗಾಳ ಎಂಬಂಥ ಕಪಟವಾಗ್ವೈಖರಿಯನ್ನು ಹಿಡಿದ ಸಂಕುಚಿತ ಸ್ವಾರ್ಥಿಗಳಾಗುತ್ತಾರೆ ಎಂದರ್ಥ. ಅವರ ದೇಶಾಭಿಮಾನವು ಟೊಳ್ಳು; ಅವರ ಗಟ್ಟಿತನವು ದರ್ಶನವಲ್ಲ, ಪ್ರದರ್ಶನ. ಪ್ರದಾರ್ಶನಿಕರು ಭಾರತದಲ್ಲಿಂದು ಗಣ್ಯ ಅಧಿಕಾರ ಸ್ಥಾನಗಳಲ್ಲಿರುವುದು ದೇಶದ ಅಭಿವೃದ್ಧಿ ಪ್ರಯತ್ನಕ್ಕೆ ದೂರಾದ ಹಿಮಾಲಯೋಪಮ ವಿಘ್ನ. ಅಧಿಕೃತ ಪ್ರಾಥಮಿಕ ಶಿಕ್ಷಣದಿಂದ ಹಿಡಿದು ವಿಶ್ವವಿದ್ಯಾನಿಲಯದತ್ತ ಹೋದ ಹಾಗೆ ಈ ವಿದೇಶೀಯ ಬಾಹ್ಯಾಚಾರ ವ್ಯಾಮೋಹವು ಹೆಚ್ಚುತ್ತ ಹೋಗುವ ರೀತಿನೀತಿಗಳನ್ನು ಇಂದು ಅನುಸರಿಸಲಾಗುತ್ತಿದೆ. ಇದು ಪ್ರಥಮತಃ ಖಂಡನೀಯ. ರಾಷ್ಟ್ರೀಯ ಶಿಕ್ಷಣವೆಂಬುದರ ನಿಜಸ್ವರೂಪವು ಹೇಳ ಹೆಸರಿಲ್ಲದಂತಾದುದು ಈ ಕ್ರಮದಿಂದಲೇ ಎಂಬುದನ್ನು ನಾವಿಂದು ಮೊದಲು ಅರಿತುಕೊಂಡು ಜಾಗ್ರತರಾಗಬೇಕಾಗಿದೆ. ವಿಜ್ಞಾನದ ಮುನ್ನಡೆಯು ಸಾಮಾಜಿಕವಾದ ಆದರ್ಶ ಆಚಾರಗಳ ಶತ್ರುವಲ್ಲವೇ ಅಲ್ಲ. ಐಷಾರಾಮ ಜೀವನವು ರಾಷ್ಟ್ರೀಯತೆಯ ಬೇರಿಗೆ ದೊಡ್ಡ ಕೊಡಲಿಯಾಗುತ್ತದೆ. ಐಶ್ವರ್ಯ–ಆರಾಮಗಳು ಆತ್ಮಸಾಕ್ಷಿಯನ್ನು ಹತ್ತಿಕ್ಕುತ್ತವೆ. ಅವುಗಳಿಗೆ ವಶವರ್ತಿಗಳಾದವರ ದೆಸೆಯಿಂದಲೇ ಸಾವಕಾರ–ಸರಕಾರ ವೃತ್ತಗಳೆರಡರಲ್ಲೂ ಭ್ರಷ್ಟಾಚಾರದ ಭೂತ ಉದಯಿಸಿ ರಾಷ್ಟ್ರ ಶೋಷಣೆಗೆ ದಾರಿ ಮಾಡಿಕೊಟ್ಟಿರುವುದು. "ಋದ್ಧಿರ್ಮೋಹಯತೇ ನರಂ" ಎಂಬುದು ರಾಷ್ಟ್ರಸೂತ್ರ. ದಾಸಿ, ಭೃತ್ಯ, ಸುತ, ಬಂಧು, ವಸ್ತು, ವಾಹನ, ಧನ, ಧಾನ್ಯಗಳ ಮದದಿಂದ ಅವುಗಳಲ್ಲೇ ಲೀನರಾದವರು ಎಂದೆಂದೂ ದೇಶಪ್ರೇಮವನ್ನು ತಮ್ಮೆದೆಯಲ್ಲಿ ನಿಜವಾಗಿ ಚಿಗುರಿಸಿಕೊಳ್ಳಲಾರರು. "ಇಂದ್ರೇಣ ದುರ್ಜಯಮಿಂದ್ರಿಯಂ" ಎಂಬುದು ಸತ್ಯ. ವಿಷಯಲಂಪಟರಾದ ಪ್ರಜಾಪ್ರತಿನಿಧಿಗಳ ಆಳ್ವಿಕೆ ಎಂದೂ ದೇಶವನ್ನು ರಕ್ಷಿಸಲಾರದು. ಅಂಥ "ಯೆಂಡ್ಕುಡ್ಕ"ರ ವೈಜ್ಞಾನಿಕತೆ, ಆಧುನಿಕತೆಗಳು ಮಹಾ ಮೋಸಗಳು, ಅವರನ್ನೇ ಶಿಕ್ಷಿತರು, ತಜ್ಞರು, ಮಹಾಪ್ರಾಚಾರ್ಯರು, ಕುಲಪತಿಗಳು ಎಂದು ಗ್ರಹಿಸಬೇಕಾದ ದುಃಸ್ಥಿತಿಯನ್ನು ಮಕ್ಕಳಿಗೆ ತಂದೊಡ್ಡಿದ ಹಿರಿತನದ ನರಿತನವಿಂದು ಬಯಲಾಗಿದೆ. ಇಂಥ ಶಿಕ್ಷಣವಿಂದು ಅಸಹ್ಯ ಶಿಕ್ಷೆ. ಇದರ ಮೂಲೋತ್ಪಾಟನ ಮೊದಲು ಆಗಬೇಕು. ಆಗ ನವಾರಂಭಕ್ಕೆ ಪೀಠಿಕೆ ಹಾಕಲು ಸಾಧ್ಯವಾಗುತ್ತದೆ. ಕುಲಕಸಬಿನ ಕಲೆಯನ್ನು ಕೊಂದ 'ಕೀರ್ತಿ' ಆಧುನಿಕ ಶಿಕ್ಷಣಕ್ರಮಕ್ಕೇ ಸಲ್ಲುತ್ತದೆ; ಮನೆತನಸ್ಥಿಕೆಯನ್ನು ಮುರಿದ 'ಯಶಸ್ಸು' ಆಧುನಿಕ ಕಾಯದೆ ಕ್ರಮಗಳಿಗೇ ಮೀಸಲು.

ರಾಜಪ್ರಮಾದ (ರಾಜ್ಯಾಧಿಕಾರ ಸಂಪನ್ನ ಮುಖಂಡರ ಪ್ರಮಾದ) ಸರ್ವರ ಸರ್ವಪ್ರಮಾದಗಳಿಗೂ ಮೂಲಭೂತ ಪ್ರೇರಕ. ಮದವು ಪ್ರಮಾದಪ್ರೇರಕ. ಅದೊಂದು Animal instinct ಪಾಶವ ಮೂಲಪ್ರವೃತ್ತಿ. 'A man of reason must have an unselfish devotion to the world (Vide "Glimpses of world Religions"- p.34) – ವಿಚಾರವಂತನಿಗೆ ಜಗತ್ತಿಗೆ ನಿಃಸ್ವಾರ್ಥ ಸೇವೆ ಸಲ್ಲಿಸುವ ಭಕ್ತಿ ಇರಬೇಕು' ಎಂಬುದು ಹಿಂದುಧರ್ಮದ ಸಾರ. ಆಳರಸರಿಗೆ ಪರಮಾಧಿಕಾರವಿರುವುದರಿಂದ ಅವರ ಸ್ವಾರ್ಥಪರತೆಯಿಂದ ಜನತೆಗೆ ಹೆಚ್ಚು ಹಾನಿಯೂ ನಿಃಸ್ವಾರ್ಥಪರತೆಯಿಂದ ಹೆಚ್ಚು ಲಾಭವೂ ಉಂಟಾಗುತ್ತವೆ. ಮದವು ಸ್ವಾರ್ಥದ ಉಲ್ಬಣಾವಸ್ಥೆ. ಅದರಿಂದ ಸಂಸ್ಕೃತತೆಗೆ ಚ್ಯುತಿಯುಂಟಾಗುತ್ತದೆ. ಆದರೆ ಅದಕ್ಕೆ ಗೌರವ, ಸ್ವಾಭಿಮಾನ, ಪ್ರಬುದ್ಧ ಸ್ವಾರ್ಥಶೀಲ, ನ್ಯಾಯವಾದ ಹಕ್ಕಿನ ದೊಡ್ಡಸ್ತಿಕೆ, ನಾಗರಿಕತೆ, ಸಂಸ್ಕೃತಿ, ವ್ಯಕ್ತಿಸ್ವಾತಂತ್ರ್ಯ ಮುಂತಾದ ಹೆಸರುಗಳನ್ನಿಟ್ಟು ಬೆಳೆಯಿಸಿಕೊಳ್ಳುವ ವಿದ್ಯಾವಂತಿಕೆಗೆ ಮನ್ನಣೆ ಸಿಗುವ ವ್ಯಾವಹಾರಿಕ ಸಂನಿವೇಶವನ್ನು ನಿರ್ಮಿಸಿದ ರಾಜಶಕ್ತಿ ಎಂದಾದರೂ ರಾಷ್ಟ್ರೀಯ ಐಕ್ಯವನ್ನು, ಸಾಮರ್ಥ್ಯವನ್ನು, ಹಿತವನ್ನು ಪೋಷಿಸೀತೇ? ಮದಾಲಸರನ್ನು Gentlemen ಸಭ್ಯರೆಂದು ಸ್ವೀಕರಿಸುವ ಒತ್ತಾಯದ ಸಂನಿವೇಶಗಳನ್ನು ಆಡಳಿತದಲ್ಲೂ ಶಿಕ್ಷಣದಲ್ಲೂ ತಂದ ಬುದ್ಧಿಯೇ ಪರದೇಶೀಯ ನಿರ್ಜೀವ ಅನುಕರಣದಿಂದ ಬೆಳೆಯಿಸಿಕೊಂಡ ಬುದ್ಧಿ. ಒಬ್ಬ ಜಗಜೀವನ ರಾಮನು ಸಾಕು– ಹರಿಜನೋದ್ಧಾರದ "ಸಫಲತೆ"ಯನ್ನು ನಿದರ್ಶಿಸಲು; ಒಬ್ಬ ಫಕ್ರುದ್ದೀನ್ ಅಹಂಮದನು ಸಾಕು–ಅಲ್ಪಸಂಖ್ಯಾತರ ಅಭಿವೃದ್ಧಿಯ "ಸಾರ್ಥಕತೆ"ಯನ್ನು ಪ್ರಮಾಣಿಸಿ ತೋರಿಸಲು; ಒಬ್ಬ ಜ್ಯೋತಿಬಸು ಸಾಕು–ಬಡವರ ಉದ್ಧಾರಕ್ಕಾಗಿ ಹೋರಾಡುವ ವೀರತ್ವದ "ಪ್ರಾಮಾಣಿಕತೆ"ಯನ್ನು ರುಜುವಾತು ಮಾಡಲು! ಚುನಾವಣೆಯನ್ನು ಪಾಪಜಾಲವನ್ನಾಗಿ ರೂಪಿಸಿದ "ದೇಶಭಕ್ತ"ರಿಂದಲೇ ದೇಶ ಪಾಪರವಾಗುತ್ತ ಬಂದುದು!

ಮಾನವಸ್ವರೂಪದ ಯೋಗ್ಯತೆಯನ್ನು ಅಂಥ ವ್ಯವಹಾರ ರೀತಿಗಳ ಮೂಲಕ ಕೆಳಗಿಳಿಸಿದ್ದರಿಂದ ಸಾಮಾನುಗಳ ದರ ಅವಿರತವಾಗಿ ಆಕಾಶಕ್ಕೇರುತ್ತ ಹೋಗಿದೆ ಎಂಬುದನ್ನು ಕಂಡೂ ನಿರ್ಲಜ್ಜಶೀಲತೆಯಿಂದ ಆ ಈ ಪಕ್ಷಗಳು ತಮ್ಮ ದೇಶಸೇವೆಯ ಪ್ರಚಾರದ ಡೋಲು ಬಾರಿಸುತ್ತ ತಿರುಗುವುದು ರಾಷ್ಟ್ರೀಯ ವಿಘಟನೆಯನ್ನು ತ್ವರಿತ ಗತಿಯಿಂದ ಹೆಚ್ಚಿಸುತ್ತ ಹೋಗಿದೆ. ವಿಘಟಿತ ರಾಷ್ಟ್ರವು ರಾಷ್ಟ್ರವೇ? ವಿಘಟಿತವನ್ನು ಎಷ್ಟು ದಿನ ಅಡಗಿಸಿಟ್ಟು ಅಸತ್ಯ ಪ್ರಚಾರ ಮಾಡಿ ಗೆಲ್ಲಲು ಸಾಧ್ಯ? ಪ್ರಾಮಾಣಿಕತೆಯ ಅಭಾವವು ಬುದ್ಧಿವಂತಿಕೆಯ ಅಪೂರ್ಣತೆ. ಏಕೆಂದರೆ, "Right living and right knowledge as distinguished from mere intellectual ability, accompanied by virtue, a sense of duty and a desire for attaining perfection are the pathways of self realisation –ಸರಿ (ನ್ಯಾಯ)ಯಾದ ಬಾಳು, ಸರಿಯಾದ ಜ್ಞಾನಗಳಲ್ಲದೆ, ಕೇವಲ ಬೌದ್ಧಿಕ ಕಸರತ್ತುಗಳು ಗ್ರಾಹ್ಯವಲ್ಲ. ಅವುಗಳೊಟ್ಟಿಗೆ ಪರೋಪಕಾರಗುಣ, ಕರ್ತವ್ಯ ದೃಷ್ಟಿ, ಪೂರ್ಣತೆಯನ್ನು ಮುಟ್ಟಬೇಕೆಂಬ ಆಸೆ–ಇವೇ ಆತ್ಮ ಸಾಕ್ಷಾತ್ಕಾರದ ಮಾರ್ಗಗಳು" ಎಂಬುದನ್ನು ಪೂರ್ಣಬುದ್ಧಿವಂತ ಮಾತ್ರ ಬಲ್ಲ; ಅವನೇ ನಿಜವಾದ ಹಿಂದು, ಆರ್ಯ,

ಭಾರತೀಯ. ಆತ್ಮದಲ್ಲಿ ಶ್ರದ್ಧೆಯಿಲ್ಲದ ಹಾಗೂ ಅಲ್ಪಸ್ವಲ್ಪ ಇದ್ದರೂ ಅದನ್ನು ಅನುಭವಕ್ಕೆ ತಂದುಕೊಳ್ಳುವುದೇ ಭಾರತೀಯ ಪರಮಾದರ್ಶವೆಂದು ತಿಳಿಯದ ಮತ್ತು ಅದು ಗೊತ್ತಾದರೂ ಆ ಸಾಕ್ಷಾತ್ಕಾರಕ್ಕೆ ಮೇಲೆ ಹೇಳಿದ ಸಾಧನಗಳೇ ಅಗತ್ಯ ಎಂಬುದನ್ನು ಅರಿಯದ ವಿದ್ಯಾವಂತರು ನಿಜವಾಗಿ ಇಲ್ಲಿ ಅವಿದ್ಯಾವಂತರು. ಪರ ಶೋಷಣೆ ಪರರ ಮನಸ್ಸಿಗಾಗುವಂತೆ ವರ್ತಿಸುವುದೂ ವಿಷಮಜೀವನ, ಸಮಜೀವನವಲ್ಲ. ಸಹಜೀವಿಗಿಲ್ಲದ ಸುಖಸಾಧನಗಳನ್ನು ಸ್ವಭೋಗಕ್ಕಾಗಿ ಇಟ್ಟುಕೊಳ್ಳುವುದು ಪಾಪಕರವೆಂದು ತಿಳಿದು ಅಂಥ ಪಾಪವನ್ನು ಮಾಡದೆ ಬಾಳಿದ ಗಾಂಧಿಯವರಿಗೆ ಭಾರತೀಯ ಸಮಾಜವಾದದ ಅರ್ಥಗೊತ್ತಿರುವಷ್ಟು ಚೆನ್ನಾಗಿ ಇನ್ನಾರಿಗೂ ಇಂದು ಗೊತ್ತಿಲ್ಲ. ಆ ಹಿಂದುತ್ವದ ಉಪಾಸನೆ, ಆರಾಧನೆ, ಆಚರಣೆ ರಾಷ್ಟ್ರಸಂಘಟನೆಯನ್ನು ಅಮರಗೊಳಿಸಬಲ್ಲ ವಜ್ರಗಾರೆ.

**“ಖಾನಾ ಪೀನಾ ಸುಖಸೇ ಸೋನಾ ಧಾಮ ಧೂಮಸೇ ಆಜ ರೇ**

**ಇಸ್ ದುನಿಯಾ ಮೇ ಪೈದಾಹೋಕರ್ ಯಹ್ ಸೀಖಾ ಸಬಕ್ ಆಜರೇ”**

ಎಂಬುದು ನಿತ್ಯಜೀವನದ ನೀತಿಯಾಗಿರುವ ನಾಯಕಮಣಿಗಳ ಪ್ರಭಾವವನ್ನು ನಿಷ್ಪ್ರಭಗೊಳಿಸುವದು ದೇಶಪ್ರೇಮಿಯ ಆದ್ಯ ಕರ್ತವ್ಯ. ಇದಿಂದು ರಾಷ್ಟ್ರಸೇವೆ ಸಫಲವಾಗಲು ತೆಗೆದುಕೊಳ್ಳಬೇಕಾದ ಮೊದಲನೆಯ ಕ್ರಮ. ಆರುನೂರು ತುಂಡರಸರ ಪಾತ್ರವನ್ನು ನಿರ್ವಹಿಸುತ್ತಿರುವ ಆರುನೂರು ಮಂತ್ರಿಗಳು “ಅರ್ಥಶಾಸ್ತ್ರ” ಜ್ಞಾನವಿಲ್ಲದೆ ನಡೆಯಿಸುತ್ತಿರುವ “ನಾಗರಿಕತೆ”ಯೀಗ ರಾಷ್ಟ್ರವಿಘಾತಕವಾಗಿದೆ.

ಮಾನವನೇ ಯಜ್ಞ (ತ್ಯಾಗ); ಸ್ವಾರ್ಥತ್ಯಾಗವೇ ಆತ್ಮಯಜ್ಞ; ಆತ್ಮಯಾಜಿಯೇ ನಿಜವಾದ ರಾಷ್ಟ್ರಸೇವಕ; ರಾಷ್ಟ್ರಸೇವೆಯೇ ಪೂರ್ಣತೆಯ (ಮುಕ್ತಿಯ) ಹಾದಿ–ಎಂಬುದನ್ನು ನಂಬಿ ನಡೆಯದ ಮುಂದಾಳುಗಳು ಅಂಥ ಪಾಶ್ಚಾತ್ಯೀಕರಣದ ಮಾಯಾ ಬಜಾರವನ್ನು ಮತದಾರರೆದುರು ಪ್ರದರ್ಶಿಸಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಿರುವುದು ರಾಷ್ಟ್ರದ ದುರ್ಬಲತೆಯನ್ನು ಹೆಚ್ಚಿಸುತ್ತಿದೆ. ಈ “ಆಲೋಪೆತಿ”ಗಾಗಿ ಮಾಡುವ ರಾಷ್ಟ್ರೀಯ ವೆಚ್ಚವು ಎದೆಯೊಡೆಯುವಷ್ಟು; ಅದರಲ್ಲೂ ಪಕ್ಷಪಾತ ಖಂಡಿಗಟ್ಟಲೆ! ಪಕ್ಷಗಳು ಪಾತಗಳಿಗೆ ಕಾರಣಗಳಾದವು; ಅವುಗಳ ನಿರ್ಮೂಲನದಿಂದ ನಿಷ್ಪಕ್ಷಪಾತವಾಗಿ ವ್ಯವಹರಿಸಬಲ್ಲ ರಾಷ್ಟ್ರೀಯ ಏಕಪಕ್ಷದ ಚುನಾಯಿತರ ಬಹುಮತವು ಸಂಸತ್ತಿನ ಮೂಲಕ ದುಂದನ್ನೂ ಶೋಷಣೆಯನ್ನೂ ದಮನಮಾಡುಬಲ್ಲದು. ಅದು ಸಂಘಟನೆಯ ಏಕೈಕ ರಾಜಮಾರ್ಗ.

ದೇಹ–ಮನಗಳೂ ಅವುಗಳ ಆವರಣಗಳೂ ಪರಸ್ಪರ ಪ್ರಭಾವಿಗಳೆಂಬುದು ಅಪ್ರತಿಹತ ಸತ್ಯ. ಹೀಗಿರುವಾಗ ಆಂಗ್ಲೀಕೃತ ದೇಹ, ವೇಷ, ಆಂಗ್ಲೀಕೃತ ಮನೋವೇಷಗಳ ಜೊತೆಗೆ ಆಂಗ್ಲಾಚಾರದ ಆವರಣಗಳು ಸೇರಿದರೆ ಆಂಗ್ಲವಲ್ಲದ ಈ ದೇಶದಲ್ಲಿ ಪ್ರೇತನೃತ್ಯವಲ್ಲದೆ ಇನ್ನಾವ ಜೀವನ ಪೋಷಕ ಕಾರಭಾರ ನಡೆದೀತು? “Man is a creature of will, according to what he believes in this world so will he be when he is departed (“Glimpses of wolrd Religions-p.37)–ಸತ್ತ ಮೇಲೆ ಮನುಷ್ಯ ತನ್ನನ್ನು ತಾನು ಏನೆಂದು ತಿಳಿದುಕೊಂಡಿರುತ್ತಾನೆಯೋ ಹಾಗೇ ಆಗುವನು” ಎಂಬ ಆರ್ಯಸತ್ಯಕ್ಕೆ ಎದುರಿಲ್ಲ. ಹೀಗಿರುವಾಗ ಈ ಜನ್ಮದಲ್ಲಿ ತಾನು ಪಕ್ಕಾ ಪಾಶ್ಚಾತ್ಯನೆಂದು ನಂಬಿ ನಡೆದುಕೊಳ್ಳುವ

ಭಾರತೀಯನು ಸಾಯುವವರೆಗೆ ಪಾಶ್ಚಾತ್ಯನಾಗಲಾರನು; ಭಾರತೀಯನಾಗಿ ಎಂತೂ ಉಳಿಯಲಾರ; ಎಂದರೆ ತ್ರಿಶಂಕುವಿನಂತೆ ಅಂತರಾಲದಲ್ಲಿ ನಿಲ್ಲುವ ಅರಾಷ್ಟ್ರೀಯನಾಗಿರುತ್ತಾನೆ ಎಂದರ್ಥ. ಇಂಥ ಬಾವಲಿಗಳ ಅಧಿಪತ್ಯವು ಪ್ರಜಾಪ್ರಭುತ್ವವಾದರೇನು ಸೋಷಲಿಜಂ ಆದರೇನು, ಸೆಕ್ಯೂಲಾರಿಜಂ ಆದರೇನು? ಹೊರಗೆ ಸರ್ವೋದಯಕರವಾದ ಈ ಯಾವ ರಾಜಕೀಯ ಅರ್ಥಯೋಜನೆಯಂತೆಯೂ ಇವು ದೇಶದೊಳಗೆ ಸರ್ವೋದಯವನ್ನು ಸಾಧಿಸಿ ತೋರಿಸಲಾರವು. ಸರ್ವೋದಯವಿಲ್ಲದ ರಾಷ್ಟ್ರದ ರಾಷ್ಟ್ರತ್ವ ನಾಮ ಮಾತ್ರ ಸತ್ಯ. ರೂಪವಿಲ್ಲದ ನಾಮ, ರೂಪಕಲ್ಲದ ನಾಮ, ರೂಪವಿಸ್ಮಾರಕ ನಾಮ, ಅಪರೂಪಜನಕ ನಾಮ ಎನ್ನಿಸುವ ರಾಷ್ಟ್ರವೊಂದು ಮರುಮರೀಚಿಕೆ. "The reality of life is the character, and not the body and the mind–ಜೀವನದ ಸತ್ಯವೆಂದರೆ ಚಾರಿತ್ರ; ದೇಹವೂ ಅಲ್ಲ, ಮನಸ್ಸೂ ಅಲ್ಲ."

ಚರಿತ್ರೆಯು ಚಾರಿತ್ರ ನಿರ್ಮಾಪಕ. ಭಾರತೀಯ ಧರ್ಮವೀರರ ಚರಿತ್ರೆಯಲ್ಲಿ ಅಭಿಮಾನ ತಾಳದವರ ಚಾರಿತ್ರ ಭಾರತೀಯವಾಗದು. ತಿಲಕ, ಗಾಂಧಿ, ಸುಭಾಷರು ಇಂಗ್ಲೀಷನ್ನೂ ಇಂಗ್ಲೀಷರನ್ನೂ ಇತರರಿಗಿಂತ ಹೆಚ್ಚಾಗಿ ಬಲ್ಲವರಾದುದರಿಂದ ಇತರ ಮುಖಂಡರಂತೆ ಆಂಗ್ಲೀಕೃತರಾಗಲಿಲ್ಲ. ಅಷ್ಟು ಬಲ್ಲಿದ ತನವಿಲ್ಲದವರು ಇಂಗ್ಲೀಷನ್ನು ಜ್ಞಾನಸಾಧನವೆಂದು ಬಾಲ್ಯದಿಂದ ಮಾಧ್ಯಮ ರೂಪದಲ್ಲಿ ಸ್ವೀಕರಿಸಬಾರದು. ನೀಲಕಂಠನು ವಿಷಪಾನಮಾಡಿದರೂ ಮೃತ್ಯುಂಜಯನಾದನೆಂದು ಕೂಳಕಂಠರು ಮಾಡಹೋದರೆ ಏನಾದಿತು? ಆಗಬಾರದ್ದೆಲ್ಲಾ ಆಗುವಂತಾಗುತ್ತದೆ! ಇಲ್ಲಿ ಮಾಡಬಾರದ್ದೆಲ್ಲವನ್ನೂ ಮಾಡಹೋಗುವ ದೌರ್ಬಲ್ಯಕ್ಕೆ ಅವರು ತುತ್ತಾಗುವುದರಿಂದ! ವಿದ್ಯಾಭ್ಯಾಸವು "ಸ್ವಜ್ಞಾನೇನ ಅನ್ಯಧೀ ಹೇತುಃ" ಎಂಬ ತತ್ವವನ್ನು ಹಿಡಿದರೆ ಮಾತ್ರ ರಾಷ್ಟ್ರೀಯವಾದೀತು. ಭಾರತದ ವಿಷಯಗಳನ್ನು ಅಭ್ಯಸಿಸಿದ ಪ್ರತಿಯೊಬ್ಬ ವಿದೇಶೀಯ ವಿದ್ವಾಂಸನ ವಿದ್ಯಾಭ್ಯಾಸವೂ ಉಕ್ತ ತತ್ವದಂತೆಯೇ ನಡೆದಿದೆ. ವಿದೇಶೀಯ ವಿಷಯಗಳ ಭಾರತೀಯ ಅಭ್ಯಾಸಿಗಳಿಗೆ ಮಾತ್ರ ಉಕ್ತ ತತ್ವದಂತೆ ವಿದ್ಯಾಭ್ಯಾಸ ದೊರಕಿಲ್ಲ. ಸ್ವದೇಶೀಯ ಜ್ಞಾನಭಂಡಾರದ ಪರಿಚಯವನ್ನು ಮೊದಲಿನಿಂದ ಕಡೆಯತನಕವೂ ಮಾಡಿಕೊಳ್ಳದೆಯೇ ವಿದೇಶೀಯ ಭಾಷೆ–ವಿಷಯಗಳಲ್ಲಿ ಮಗ್ನರಾಗಿ ಸ್ವದೇಶದ ಎಲ್ಲವನ್ನೂ "ಆಗದೆ ಇದ್ದ ಗಂಡನಿಗೆ ಮೊಸರಲ್ಲಿ ಕಲ್ಲು ಬಂತು" ಎಂಬ ಗಾದೆಯಂತೆ ಖಂಡಿಸುತ್ತ "ಹೊಸಮಡಿಕೆಯ ಕಂಡೆಯಾ, ಕಿಸಿದೆಯಾ ಬಾಯ?" ಎಂಬ ಗಾದೆಯಂತೆ ವಿದೇಶೀಯ ವಿಕಾರಗಳನ್ನೇ ಹೆಚ್ಚಾಗಿ ಎತ್ತಿ ಹೊಗಳುತ್ತ ಹಾಗೂ ಅನುಕರಿಸುತ್ತ ಬಂದ ಆಚಾರ್ಯ–ಪ್ರಾಚಾರ್ಯ–ಪ್ರಾಧ್ಯಾಪಕರುಗಳನ್ನು ಸಾಕುತ್ತಲಿರುವ ಪ್ರಭುಶಕ್ತಿ ರಾಷ್ಟ್ರವನ್ನು ಎಂತು ದೃಢಗೊಳಿಸಲು ಶಕ್ತವಾದೀತು?

"ಬ್ರಾಹ್ಮಣೇನ ನಮ್ಲೇಚ್ಛಿತ ವೈ ನಾಪಭಾಷಿತ ವೈ" ಎಂಬ ರಾಷ್ಟ್ರಸೂತ್ರದ ಸಾಮಾಜಿಕ ಮನಃಶಾಸ್ತ್ರಬದ್ಧತೆ ಅಭೇದ್ಯವಾದುದು. ಆತ್ಮಸಾತ್ತಾಗಿ ಮಾಡಿಕೊಳ್ಳಲು ಆತ್ಮ ಮೊದಲು ಸಮರ್ಥವಾಗಿ ಇದ್ದಿರಬೇಕು. ಅದು ಹಾಗಿಲ್ಲದಾಗ ಪರಸಾಂಸ್ಕೃತಿಕ ಅಂಶಗಳು ನಮ್ಮನ್ನು ವಶೀಕರಿಸಿಕೊಳ್ಳದೆ ಎಂದೂ ಉಳಿಯವು. ಆತ್ಮವೆಂದರೆ ತನ್ನತನದ ಅನನ್ಯತೆಯ ಜಿಗುಟು. ಅಂಥ ಸ್ವ–ಭಾವದ ಎಚ್ಚರವನ್ನು ಪಡೆಯುವ ಮೊದಲೇ ಪರಪುಷ್ಟರಾಗತೊಡಗಿದ

ದುರ್ಬಲಾತ್ಮರ ನೇತೃತ್ವದಲ್ಲಿ ನಮ್ಮ ರಾಜಕೀಯ, ಸಾಮಾಜಿಕ, ಆರ್ಥಿಕ, ಕೌಟುಂಬಿಕ, ಸಾಹಿತ್ಯಿಕ, ಶೈಕ್ಷಣಿಕ, ಪ್ರಶಾಸನಿಕ ರೀತಿಗಳೆಲ್ಲವೂ ಅನನ್ವಿತವಾಗಿ ಭ್ರಷ್ಟಾಚಾರದ ವಿಕಾರರೂಪಗಳನ್ನು ಹಡೆದವು. ಹಿಂದೆ ಹೇಳಿದಂತೆ ರಾಷ್ಟ್ರೀಯವಾದ ನಮಸ್ಕಾರಕ್ಕಾದರೂ ಒಂದೇ ಮಾದರಿಯ ಅಂಗವಿನ್ಯಾಸವಿದೆಯೇ ಈಗ? ಇದೆಲ್ಲಾ ಕ್ಷುಲ್ಲಕವಿಷಯವೆಂಬ ಡಾಂಭಿಕತನವು ಸದ್ಗೃಹಸ್ಥಿಕೆಯಲ್ಲ. ಗೌರವಸೂಚನೆಯ ರೀತಿಯು ಕ್ಷುಲ್ಲಕವಾದಾಗ ಗೌರವವೂ ಕ್ಷುಲ್ಲಕಮಟ್ಟದ್ದಾಗುತ್ತದೆ. ವೇಷ, ಭಾಷೆ, ಅಲಂಕಾರ, ಅಂಗಚಲನೆ (ವರ್ತನಾರೀತಿ) ಗಳು ಭಾರತೀಯ ಶರೀರಕ್ಕೆ ಒಪ್ಪುವಂತಿರಬೇಕಾದದ್ದು ನಾಟ್ಯಶಾಸ್ತ್ರದಲ್ಲಿ ಹೇಗೆ ಅನಿವಾರ್ಯವೋ ಹಾಗೇ ಜೀವನದಲ್ಲೂ ಅನಿವಾರ್ಯವೆಂಬುದನ್ನು ಕಂಡುಕೊಳ್ಳದ ಕುರುಡರು ಮನೋವ್ಯಾಪಾರದಲ್ಲೂ ಅಸ್ವಾಭಾವಿಕ ಆಲೋಚನಾಪರಂಪರೆಯಲ್ಲಿ ಸಿಲುಕಿ ಅಸ್ವಸ್ಥತೆಯನ್ನು ರಾಷ್ಟ್ರದಲ್ಲಿ ಹಬ್ಬಿಸುತ್ತಾರೆ. ಅಸ್ವಸ್ಥರಾಷ್ಟ್ರವು ಸ್ವಾತಂತ್ರ್ಯವನ್ನು ಹೇಗೆ ಉಳಿಸಿಕೊಳ್ಳಬಲ್ಲದು? ಅದಕ್ಕೆ ಸ್ವಾತಂತ್ರ್ಯವನ್ನು ಬಳಸಲು ಸಾಧ್ಯವಾಗುವುದು ಹೇಗೆ? ಮಕ್ಕಳ ಕೈಯಲ್ಲಿ ಚೂರಿಯನ್ನಿತ್ತಂತೆ ಶೈಶವಮತಿಗಳ ಕೈಯಲ್ಲಿ ಸ್ವತಂತ್ರ ಪ್ರಶಾಸನಾಧಿಕಾರ ಸಿಕ್ಕಿದರೆ ನಿಷ್ಫಲ ಅಥವಾ ದುಷ್ಫಲ ಉಂಟಾಗದಿರದು. ಕಾಯಿದೆಗಳೂ ಪ್ರಶಾಸನ ನಿಯಮಗಳೂ ಅಭಾರತೀಯವಾದಲ್ಲೇ ಭ್ರಷ್ಟಾಚಾರ ಅವತರಿಸಿದೆ; ಇತರ ಕಡೆಗಳಲ್ಲಿಲ್ಲ. ಚುನಾವಣೆಯು ಗುಪ್ತಸ್ವರೂಪದ್ದಾಗಿರುವುದೂ, ನ್ಯಾಯದಾನ ಸಿದ್ಧಾಂತವೂ ಪದ್ಧತಿಯೂ ಆಂಗ್ಲೇಯವಾಗಿರುವುದೂ ರಾಷ್ಟ್ರಸ್ಥೈರ್ಯಕ್ಕೆ ಭಂಗವನ್ನು ತಂದಿವೆ. ಶಿಕ್ಷೆ ವಿಧಿಸುವ ಹಾಗೂ ಆನುವಂಶಿಕತೆ ಮತ್ತು ವರ್ಗಾವಣೆಗಳ ಪದ್ಧತಿಗಳ ಆದೇಶ, ಲೋಪ ಮತ್ತು ಆಗಮಸಂಧಿಗಳೂ ಪ್ರಜಾಶೋಷಣೆಗೆ (ತಮ್ಮ ಅಭಾರತೀಯತೆಯ ದೆಸೆಯಿಂದ) ಕಾರಣಗಳಾಗಿವೆ. ಆಸ್ತಿಯ ವಾರಸುದಾರಿಕೆಯ ಬದಲಾವಣೆ ಮತ್ತು ಆಸ್ತಿಸಂಗ್ರಹದ ಲೋಭಾನುಕೂಲಗಳನ್ನು ಒದಗಿಸಿದ್ದು ಬಹುಸಂಖ್ಯಾತರಿಗೆ ಜೀವನ ದುರ್ಧರವಾಗುವಂತೆ ಮಾಡಿ, ರಾಷ್ಟ್ರೀಯತೆಯ ಭಾವವನ್ನು ಶಿಥಿಲಗೊಳಿಸಿದೆ. ವಿದೇಶೀಯತೆಯ ಸಾಂಸ್ಕೃತಿಕ–ನಾಗರಿಕ ಅತಿಪ್ರಸರಣವೇ ಆರ್ಥಿಕ ಅತಿಪ್ರಸರಣಕ್ಕೆ ಹೇತು. ಸಾಮಾನಿನ ದರ ಮನುಷ್ಯರಿಗಿಲ್ಲವಾದುದು ಅದರಿಂದಲೇ. ಭಾರಿ ಅಂತಾರಾಷ್ಟ್ರೀಯ ಯುದ್ಧವಿಲ್ಲದೆ ಅಶಾಂತಿಪರ್ವ ೨೫ ವರ್ಷಗಳಾದರೂ ತಪ್ಪದಿರಲು ಅದೇ ಕಾರಣ. ಶಿಸ್ತು, ಸಂಯಮ, ಮಾನವಂತಿಕೆ, ಔದಾರ್ಯ, ಧ್ಯೇಯನಿಷ್ಠೆ, ವಚನಬದ್ಧತೆಗಳಿಲ್ಲದ "ವಿದ್ಯಾವಂತ"ರ ರಾಷ್ಟ್ರೀಯತೆಗೆ ಅರ್ಥವಿದೆಯೇ? ರಾಷ್ಟ್ರೀಯತೆ ಇಲ್ಲದವರ ಆಳ್ವಿಕೆಯಿಂದ ಸರ್ವೋದಯ ಎಂದಾದರೂ ಸಾಧ್ಯವೇ? ಆದುದರಿಂದ ಪಾಠಶಾಲಾಕ್ರಮದ ಗುರುಕುಲಗಳ ಆಚಾರವನ್ನು ಪ್ರಾಥಮಿಕದಿಂದ ವಿಶ್ವವಿದ್ಯಾನಿಲಯದ ಶಿಕ್ಷಣದವರೆಗೆ ಕೂಡಲೇ ಜಾರಿಗೆ ತರುವುದಗತ್ಯ. ನಾನ್ಯಃ ಪಂಥಾವಿದ್ಯತೇಽಯನಾಯ. ಅನಂತರ ಶಿವಾಜಿಯ ಆಡಳಿತದಾಚಾರಗಳನ್ನು ಸರಕಾರಗಳು ಸ್ವೀಕರಿಸಬೇಕು. ಉಗ್ರ ಶಿಕ್ಷೆ ಇಲ್ಲದ ಭ್ರಷ್ಟಾಚಾರ ಅಳಿಯದು. ಭ್ರಷ್ಟಾಚಾರ ಅಳಿಯದೆ ರಾಷ್ಟ್ರ ಶೋಷಣೆ ನಿಲ್ಲದು. ರಾಷ್ಟ್ರಶೋಷಣೆಯಿಂದ ರಾಷ್ಟ್ರೀಯತೆ ನಷ್ಟವಾಗದಿರದು. ರಾಷ್ಟ್ರೀಯತೆ ಅಳಿದಾಗ ವಿದೇಶೀಯರ ದಾಳಿ ಅತ್ಯಂತ ಸುಲಭವಾಗಿ ಪ್ರಾಪ್ತವಾಗದಿರದು. ಪರಾಧೀನತೆಯಿಂದ ಮತ್ತೆ ಜನ "ಅಂಧಂ ತಮಃ ಪ್ರವಿಶಂತಿ"!

# ಅನುಕ್ರಮಣಿಕೆ

# ೧

# ಪ್ರಜಾಪ್ರತಿನಿಧಿಗಳಿಗಿರಬೇಕಾದ ಸಂಸ್ಕಾರ

ವಿದೇಶೀಯ ಬಾಹ್ಯಾಚಾರಗಳ ಅಂಧಾನುಕರಣದ ಪ್ರವೃತ್ತಿಯ ಇನ್ನೊಂದು ಮಗ್ಗುಲು ಸ್ವದೇಶೀಯ ಸುಖಪುರುಷರ ವೃತ್ತಿ–ವರ್ತನೆಗಳ ಅಂಧಾನುಕರಣ. ಪ್ರತಿಯೊಬ್ಬನೂ ತಾನಾಗಿರುವುದನ್ನು ಬಿಟ್ಟು ತನಗಿಂತ ಭಿನ್ನನಾದ ಸುಖಪುರುಷನಂಗಾತಲು ಹೇಗಾದರೂ ಪ್ರಯತ್ನಿಸುವುದು ಸ್ವತಂತ್ರತೆಯ ಲಕ್ಷಣ ಎಂಬ ಅಜ್ಞಾನವನ್ನಿಂದು ಪಸರಿಸಲಾಗುತ್ತಿದೆ. ಸುಖವೆಂದರೆ ತಮ್ಮ ಅನುಕೂಲತೆಗಳೆಲ್ಲವನ್ನೂ ಇತರರು ಸಿದ್ಧ ಮಾಡಿಡುವುದು ಎಂಬ ಅಪಕಲ್ಪನೆಯನ್ನು ಆಢ್ಯರಿಲ್ಲಿ ಏನು ಹೇಳಿದರೂ ಬಿಡಲಾರದವರಾಗಿದ್ದಾರೆ. ಹೆಚ್ಚು ಭೌತಿಕ ಸಲಕರಣೆಗಳ ಮೇಲೆ ಹೆಚ್ಚು ಪ್ರಭುತ್ವ ತಮಗಿರುವುದು ಭಾಗ್ಯಶಾಲಿತ್ವ ಎಂದು ಪ್ರತಿಯೊಬ್ಬರೂ ಹೆಣಗಿದ್ದರಿಂದ Destructive Individualism ಸಮಾಜ ಘಾತಕ ವ್ಯಕ್ತಿವಾದ ಆಚರಣೆಯಲ್ಲಿ ಬಂದು ನಿಜವಾದ Human relation ಮಾನವೀಯ ಸಂಬಂಧವು ನಮ್ಮಲ್ಲಿ ಆಳವಾಗಿ ಬೇರು ಬಿಡದಂತಾಗಿದೆ. ವ್ಯಕ್ತಿಯ ಈ ಹೀನ ಹೋರಾಟವನ್ನು ಆಧುನಿಕತೆ, ಪ್ರಗತಿಪರತೆ ಎಂದು ಹರಸಿದ್ದರಿಂದ ವ್ಯಕ್ತಿಗಳಲ್ಲೀಗ ಮತ್ಸ್ಯನ್ಯಾಯವು ಬಳಕೆಗೆ ಬರುವಂತಾಗಿದೆ. ಇನ್ನೊಬ್ಬರಿಗೆ ಟೊಪ್ಪಿಗೆ ಹಾಕಿ ಗೆದ್ದವನ ಬಾಳೇ ಜಯಶಾಲಿಯಾದ ಬಾಳು ಎಂಬ ವಾಸ್ತವಿಕ ಭಾವನೆಯನ್ನು ಬೆಳೆಯಿಸದ ಆಡಳಿತವು ರಾಷ್ಟ್ರದ್ರೋಹದ ವ್ಯಾಪ್ತಿಯನ್ನು ದಿನೇ ದಿನೇ ಹೆಚ್ಚಿಸುತ್ತಿದೆ. ಕಾಯಿದೆಗಳನ್ನು ಎಲ್ಲರಿಗಾಗಿ ಮಾಡಿದರೂ ಅವುಗಳ ಅನ್ವಯ ಮತ್ತು ಅನನ್ವಯಗಳು ಸಮಸಂದರ್ಭಗಳಲ್ಲಿಯೂ ಪ್ರತ್ಯೇಕ ವ್ಯಕ್ತಿಗಳಿಗೂ ಪ್ರತ್ಯೇಕ ಗುಂಪುಗಳಿಗೂ ಪ್ರತ್ಯೇಕ – ಎಂಬುದು ಪ್ರಶಾಸನಾಚಾರವಾಗಿರುವುದು ದುಃಶಾಸನ. ದುಃಶಾಸಕರು ಸ್ವಕುಟುಂಬವೇ ರಾಷ್ಟ್ರವೆಂದು ನಂಬಿದ ಕುಟುಂಬ ರಾಷ್ಟ್ರರು. ಕುಟುಂಬ ರಾಷ್ಟ್ರರೆಂತು ರಾಷ್ಟ್ರ ಕುಟುಂಬರಾದಾರು? ರಾಷ್ಟ್ರಕುಟುಂಬರಾಗದವರು ನಿಷ್ಪಕ್ಷಪಾತ ಆಡಳಿತಗಾರರೆಂತಾದಾರು? ಇಂಥ Antisocialelements ಸಮಾಜಘಾತಕರು ಬೀದಿಯ ಮೇಲೆ ಪುಂಡತನವನ್ನು ಪ್ರದರ್ಶಿಸುವವರನ್ನು ಗುಂಡರೆಂದು ಬೈಯಲು ಯಾವ ನೈತಿಕ ಅಧಿಕಾರವುಳ್ಳವರಾಗುತ್ತಾರೆ?

## ಸದ್ಗುರುವರಣ

ಕುಟುಂಬ, ಶಾಲೆ, ಮನೋರಂಜನಕೂಟ, ವ್ಯಾಪಾರಿಸಂಘ, ಸರಕಾರ, ಕಾರಖಾನೆ ಮುಂತಾದ ಪ್ರತಿಯೊಂದು ಸಂಸ್ಥೆಯೂ ರಾಷ್ಟ್ರೋದಯ ಸಾಧನವಾಗಿಯೇ ನಡೆಯುವಂತೆ

ನೋಡಿಕೊಳ್ಳಲಾರದ ಆಡಳಿತವು ರಾಷ್ಟ್ರೀಯ ಆಡಳಿತವಲ್ಲ. ಅರಾಷ್ಟ್ರೀಯ ಪ್ರಶಾಸನವು ರಾಷ್ಟ್ರಭೇದಕವಲ್ಲದೆ ರಾಷ್ಟ್ರಸಾಧಕವಲ್ಲ. ರಾಷ್ಟ್ರಕ್ಷೇಮದಲ್ಲಿ ವ್ಯಕ್ತಿ ಕ್ಷೇಮ ಅಡಕವಾಗುವುದಲ್ಲದೆ, ಇದರಲ್ಲಿ ಅದಲ್ಲ. ವ್ಯಾಪಕವನ್ನು ವ್ಯಾಪ್ಯವೆಂದು ತಿಳಿಯುವ ವಿಚಾರದೋಷವು ಭಾರತದ ಇಂದಿನ ವ್ಯಕ್ತಿ ಸ್ವಾತಂತ್ರ್ಯವಾದದಲ್ಲಿರುವ ಕಿಲುಬು. ಇದೇ ಸ್ವೇಚ್ಛಾಚಾರದ ಬೀಜ, ಅಶಿಸ್ತಿನ ಮೂಲ. ತಾತ್ಕಾಲಿಕ ಸುಖಕ್ಕೆ ಮಾರುಹೋಗಿ ದೀರ್ಘಕಾಲಿಕ ಹಾನಿಯನ್ನು ತಂದುಕೊಳ್ಳಲು ವ್ಯಕ್ತಿ ತನಗೆ ಹಕ್ಕಿದೆ ಎನ್ನುವುದು ಆತ್ಮಹತ್ಯೆಗೆ ಹಕ್ಕಿದೆ ಎಂದು ಹೇಳುವಷ್ಟೇ ಅವೈಧಿಕ. ಇಂಥ ಸ್ವಾತಂತ್ರ್ಯವನ್ನು ಆಡಳಿತ ನಿಯಮಾವಳಿಯಲ್ಲಿ ಕಾಯದೆಯ ಆಧಾರದಿಂದ ಸೇರಿಸಿದ ತಪ್ಪು ಸಾಂವಿಧಾನಿಕವಾಗಿ ತಿದ್ದುಪಡಿಯಾಗುವುದಗತ್ಯ. ವ್ಯಕ್ತಿಗಿಂದು ಸ್ವಾತಂತ್ರ್ಯ ಅಗತ್ಯವಾದಲ್ಲಿ ಇಲ್ಲ. ಅನಗತ್ಯವಾದಲ್ಲಿ ಇದೆ! ಈ ವಿಪರೀತ ಪರಿಸ್ಥಿತಿಯು ಪಕ್ಷ, ಕೋಲಾಹಲ, ಮದ, ಮಾತ್ಸರ್ಯ, ಪರಸ್ಪರಘಾತಕ ಪ್ರವೃತ್ತಿಗಳನ್ನು ಪ್ರಚೋದಿಸಿದೆ. ಸ್ವಾತಂತ್ರ್ಯ ಅಥವಾ ಶಿಸ್ತು ಗುಲಾಮಗಿರಿಯಲ್ಲ, ಹಾಗೇ ಸ್ವಚ್ಛಂದ ವರ್ತನೆಯೂ ಅಲ್ಲ. ಜ್ಞಾನಾನುಭವ ಚಾರಿತ್ರಗಳ ಮಟ್ಟಕ್ಕೆ ಸಪ್ರಮಾಣವಾಗಿ ಸ್ವಾತಂತ್ರ್ಯವಿರುವುದೊಂದೇ ವ್ಯಕ್ತಿಸ್ವಾತಂತ್ರ್ಯದ ಸಮಸ್ಥಿತಿ. ಅಂಥ ಜಾಣ್ಮೆಯಿಲ್ಲದೆ ಶಾಸಕರನ್ನೂ ಪ್ರಶಾಸನಕರನ್ನೂ ಆಯ್ದ ಅಥವಾ ನಿಯಮಿಸಿದ ಪ್ರಜಾತಂತ್ರವು ಆತ್ಮಘಾತಕ ತಂತ್ರ. ಉಕ್ತ ಜಾಣ್ಮೆಯು "ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರವೇ ನಮಃ" ಎಂಬ ಪೂಜ್ಯತೆಗೆ ಪಾತ್ರರಾದ ತಿಲಕ–ಗಾಂಧಿಯವರಂಥ ರಾಷ್ಟ್ರಗುರುಗಳ ಸೇವೆಯಿಂದ ಮಾತ್ರ ಲಭ್ಯ. ಸರ್ವ ಸಂಘ–ಸಂಸ್ಥೆಗಳೂ ಈ ಬಗೆಯ ಸದ್ಗುರುಗಳ ಅಧ್ಯಕ್ಷತೆಯಲ್ಲೇ ನಡೆಯುವ ಹಾಗಾಗಲು ಸದ್ಗುರುವನ್ನು ಗುರುತಿಸುವ ಉತ್ಕಟ ಪ್ರಯತ್ನವನ್ನು ಮಾಡುವುದೊಂದೇ ಸಾಧನ.

**"ಮಾತೃವತ್ ಪರದಾರಾಂಶ್ಚ ಪರದ್ರವ್ಯಾಣಿ ಲೋಷ್ಟವತ್ ।**

**ಆತ್ಮವತ್ ಸರ್ವ ಭೂತಾನಿ ಯಃ ಪಶ್ಯತಿ ಸ ಪಶ್ಯತಿ"** ॥

–ಎಂಬುದು ಯಾವನ ಆಚಾರದಲ್ಲಿ ಕಂಡು ಬರುವುದೋ ಅವನು ಸದ್ಗುರು. ಇಂಥ ರಾಷ್ಟ್ರಗುರುಗಳ ಸರ್ವಾಧಿಕಾರಕ್ಕೆ ತಲೆಬಾಗುವ ಶಿಷ್ಯವೃತ್ತಿಯೇ ರಾಷ್ಟ್ರೀಯ ಶಿಕ್ಷಣ. ನಮ್ಮ ಅತ್ಯುಚ್ಚ ವಿದ್ಯಾನಿಲಯಗಳ ಅತ್ಯುಚ್ಚಸ್ಥಾನದಲ್ಲಿಯೂ ಇಂಥ ರಾಷ್ಟ್ರಗುರುಗಳಿಲ್ಲದಿರುವ ಇಂದಿನ ದಿನಮಾನದಲ್ಲಿ ಶಿಸ್ತು, ಶಾಂತಿ, ಸಾವಧಾನ, ಅಹಿಂಸೆ, ಸತ್ಯ ಮುಂತಾದ ಪದಗಳ ಪ್ರಚಾರದಿಂದ ಯಾವ ಲಾಭ ಪ್ರಜೆಗೆ ದೊರಕೀತು? ಪದಾನಂದಸ್ವಾಮಿಗಳ ಉಪದೇಶ ಕೇಳಿ ಯಾರು ಅರ್ಥಾನಂದ ಶಿಷ್ಯೆರೆನ್ನಿಸಿಯಾರು? ಮಹಾಮಹೋಪಾದ್ಯಾಯ ಡಾ॥ ಪಿ.ವಿ.ಕಾಣೆಯವರಂಥವರನ್ನು National Professor ರಾಷ್ಟ್ರೀಯ ಪ್ರಾಧ್ಯಾಪಕರೆಂದು ಗೌರವಿಸಿ ಸಂಬಳಕೊಟ್ಟದ್ದೇನೋ ಸರಿ; ಆದರೆಅವರ ಮಾತನ್ನು ಯಾವ ರಾಜಕಾರಣಿ ಕೇಳ ಹೋಗಿದ್ದಾನೆ? ಇಂಥ ರಾಜಕಾರಣವು ರಾಜಕಾರಣವಲ್ಲ, ಇವರು ರಾಜಕಾರಣಿಗಳೂ ಅಲ್ಲ. ತಮಗೆ ಪರಿಹರಿಸಲಾಗದ ತೊಂದರೆ ಬಂದಾಗಲೂ ಸರ್ವಪೂಜ್ಯರಾದ ರಾಷ್ಟ್ರಗುರುಗಳ ಜೊತೆಗೆ ಸಮಾಲೋಚನೆ ಮಾಡಿ ಅವರ ನಿರ್ಣಯದಂತೆ ನಡೆದುಕೊಳ್ಳದ ಆಳರಸಗಿರಿಯು ಯಾವ ಅರ್ಥದಲ್ಲಿ ಪ್ರಜಾಪ್ರಭುತ್ವೀನ? ಸರ್ವಮಾನ್ಯರ ಮಧ್ಯಸ್ಥಿಕೆಗೆ ತಲೆಬಾಗದವರು

ನಾಗರಿಕರೆನ್ನಿಸುವುದು ಅಸಂಭವ, ಪ್ರಜಾಪ್ರಭುಗಳೆನ್ನಿಸುವುದಂತೂ ಮತ್ತೂ ಆಚೆಗೆ ಉಳಿಯಿತು. ಇದು ಪ್ರಭುಗಳ ಅರಾಷ್ಟ್ರೀಯತೆಗೆ ನಿದರ್ಶನ. ಅಂತಃಕಲಹಗಳಲ್ಲಿ ಛಲದಂಕಮಲ್ಲತನವನ್ನು ಹಿಡಿಯುವ ಶಾಠ್ಯವು ಭಾರತೀಯ ಸಂಸ್ಕೃತಿಯನ್ನು ದ್ಯೋತಿಸದು. ಅದರಿಂದಲೇ ಕೌರವರ ಅಭಾರತೀಯತೆಯನ್ನು ಕೃಷ್ಣನು ದಂಡಿಸಲು ವ್ಯವಸ್ಥೆಮಾಡಿದ್ದು.

ಪದಾರ್ಥವನ್ನು ಗಣಿಸದ ಪದಸ್ಥರ ಪದಚ್ಯುತಿ ಪ್ರತಿಯೊಬ್ಬ ಭಾರತೀಯನ ಕರ್ತವ್ಯ. ರಾವಣವಧಾನಂತರ ರಾಮರಾಜ್ಯವು ಸ್ಥಾಪಿಸಲ್ಪಟ್ಟಂತೆ, ಕೌರವವಧಾ ನಂತರ ಧರ್ಮರಾಜ್ಯವು ರಚಿತವಾದಂತೆ ಅಧರ್ಮಪ್ರಸಾರವನ್ನು ಹತ್ತಿಕ್ಕುವ ಕರ್ತವ್ಯವು ಆದ್ಯ. ರಾಷ್ಟ್ರಹಿತಕ್ಕೆ ವಿರುದ್ಧವಾಗಿ ಪರಿಣಮಿಸುವ ಕಾರ್ಯಗಳೂ ವರ್ತನೆಗಳೂ ರಾಷ್ಟ್ರೀಯರ ಸ್ವಧರ್ಮಕ್ಕೆ ವಿರುದ್ಧವಾದವುಗಳು. ವ್ಯಾಪ್ಯಗಳ ಹಿತಗಳು ವ್ಯಾಪಕದ ಹಿತಗಳಿಗೆ ಸದಾ ಅವಿರುದ್ಧವಾಗಿರುವುದೇ ನ್ಯಾಯ. ಈ ನ್ಯಾಯಾನ್ವೀಕ್ಷಣವು ರಾಷ್ಟ್ರಸೂತ್ರಬದ್ಧವಾದುದು. ವ್ಯಕ್ತಿಗಳೂ, ಕುಟುಂಬಗಳೂ, ರಾಜ್ಯಗಳೂ, ಪಕ್ಷಗಳೂ, ರಾಷ್ಟ್ರದ ಅವಯವಗಳು. ಸಂವಿಧಾನವು ರಾಷ್ಟ್ರದ ಪರಮಾಧಿಕಾರವು. ಅದರ ಅಪರಮಾಧಿಕಾರ ಪದಗಳೊಡನೆ ಇಟ್ಟುಕೊಳ್ಳಬೇಕಾದ (ರಾಷ್ಟ್ರಹಿತಾನುಕೂಲತೆಗೆ ಪ್ರಾಶಸ್ತ್ಯ ಕೊಡುವ) ಸಂಬಂಧಗಳನ್ನು ನಿರ್ಧರಿಸುವ ಸೂತ್ರಗಳನ್ನು ಒಳಗೊಂಡಿರಬೇಕು. ಅಂಥ ಸೂತ್ರಗಳ ದರ್ಶನವು ರಾಷ್ಟ್ರಗುರುಗಳಿಗಲ್ಲದೆ ಇತರರಿಗೆ ಹೊಳೆಯದು. ನಮ್ಮ ಸದ್ಯದ ಸಂವಿಧಾನವು ತನ್ನ ಆ ಲೋಪದೋಷಗಳಿಂದ ರಾಷ್ಟ್ರಹಿತಸಾಧನೆಗೆ ಆತಂಕ ಉಂಟುಮಾಡುವವರಿಗೆ ಅನುಕೂಲವಾಗಿದ್ದರೆ ಅದರ ಅಂಥ ಅಂಶಗಳನ್ನು ರಾಷ್ಟ್ರಗುರುಗಳ ನಿರ್ಣಯದಂತೆ ತಿದ್ದುಪಡಿ ಮಾಡಬೇಕು. ಸಂವಿಧಾನವು ವಿವಿಧ ರಾಷ್ಟ್ರಸೂತ್ರಗಳ ಸಮನ್ವಿತ ಚಿತ್ರವನ್ನು ಕೊಡುವಂತಿರಬೇಕು. ಇಲ್ಲವಾದರೆ ಅದು ರಾಷ್ಟ್ರೀಯ ಸಂವಿಧಾನವೆನ್ನಿಸದು. ದೀನ–ದಲಿತರ ಕ್ರಮಬದ್ಧ ಉದ್ಧಾರ, ಯೋಗ್ಯತಾ ಪುರಸ್ಕಾರಗಳನ್ನು ಸಮನ್ವಯಿಸದಿರುವ ಮತ್ತು ಸರಕಾರ–ಸಾವಕಾರ ವೃತ್ತಗಳ ಕಾರ್ಯ ಸಾಮರ್ಥ್ಯವನ್ನು ನಿರ್ದುಷ್ಟಗೊಳಿಸಿ ಅನ್ವಯಿಸಲಾರದ ಆಡಳಿತಕ್ಕೆ ಕಾರಣವಾದ ಕಾಯದೆಗಳನ್ನೂ ಅವುಗಳ ಆಧಾರಸ್ಥಾನದಲ್ಲಿರುವ ಸಂವಿಧಾನ ಸೂತ್ರಗಳನ್ನೂ ಕೂಡಲೇ ತೊಡೆದುಹಾಕಿ ಸರಿಯಾದವುಗಳನ್ನು ರೂಪಿಸುವುದು ರಾಷ್ಟ್ರಗುರು ವಿಧೇಯರ ಮಹಾಕರ್ತವ್ಯ.



# ೨

# ರಾಷ್ಟ್ರಗುರು ಸ್ಥಾನ

ಪ್ರಧಾನಿಯೂ ರಾಷ್ಟ್ರಪತಿಯೂ ಕಾರ್ಯಪಾಲಿಕೆಯು ಕಾಯದೆಬದ್ಧ ಪರಮಾಧಿಕಾರಿಗಳಾದರೆ ಕಾಯದೆಗಿಂತ ಮೇಲಿನ ನೈತಿಕ ಪರಮಾಧಿಕಾರವು ರಾಷ್ಟ್ರಗುರುಗಳ ಸಮಿತಿಗಿರುವುದು ಅಗತ್ಯ. ಆಪತ್ಕಾಲದಲ್ಲಿ ಮಾತ್ರ ರಾಷ್ಟ್ರಗುರು ಸಮಿತಿಯ ಅಧ್ಯಕ್ಷನು ತನ್ನ ಸಮಿತಿಯ ಬಹುಮತವನ್ನು ರಾಷ್ಟ್ರಪತಿಗೆ ಅರುಹಬೇಕು. ಕಾಯದೆಯಂತೆ ಪರಿಹಾರ ಮಾಡಿಕೊಳ್ಳದ ಘರ್ಷಣ ಸಂದರ್ಭಗಳೆಲ್ಲವೂ ಆಪತ್ಕಾಲಗಳು. ಆಗ ಎಷ್ಟು ರಾಜ್ಯ, ಪ್ರಾಂತ, ಪ್ರದೇಶ, ಘಟಕಗಳಿವೆಯೋ ಅವುಗಳನ್ನು ಪ್ರತಿನಿಧಿಸುವ ಅಷ್ಟೇ ಸಂಖ್ಯೆಯ ರಾಷ್ಟ್ರಗುರುಗಳಿರುವ ಸಮಿತಿಯ ಬಹುಮತವು ರಾಷ್ಟ್ರಪತಿಗೂ ಪ್ರಧಾನಿಗೂ ಪಾರ್ಲಿಮೆಂಟಿಗೂ ಬಂಧನಕಾರಿಯಾಗುವ ಸೂತ್ರವು ಸಂವಿಧಾನದಲ್ಲಿರಬೇಕು. ಖಾಸಗಿ ಆಸ್ತಿಯ ಒಡೆಯತನಕ್ಕೆ ಇತಿಮಿತಿಗಳಿಲ್ಲದಾಗ ಮಹಾಸ್ತಿವಂತರು ಸರ್ವರಾಷ್ಟ್ರಸೂತ್ರಗಳನ್ನೂ ಮಾಯೋಪಾಯಗಳಿಂದ ತಲೆಕೆಳಗೆ ಮಾಡಬಲ್ಲರೆಂದು ಐತರೇಯ ಬ್ರಾಹ್ಮಣವು ಎಂದೋ ಎಚ್ಚರಿಕೆ ಕೊಟ್ಟಿದ್ದರೂ ವೈಶ್ಯಾರ್ಥಾತಿವೃದ್ಧಿಯನ್ನು ತಡೆಯದಿರುವ ಪ್ರಶಾಸನದಿಂದ ಸದ್ಯದ ಅನೇಕ ರಾಜಕೀಯ ಪಕ್ಷಗಳ ಅರಾಜಕತೆ ಉದಯಿಸಿರುವದು ಸರ್ವವೇದ್ಯ. ಆರು ಹಗೆಗಳ ಆರಾಧನೆ ನಡೆಯುವುದು ಐಶ್ವರ್ಯ ಮದಮತ್ತರ ವರ್ಗದಲ್ಲಿಯೇ. ಅವರಿಗೂ ಸರ್ವೋದಯಾಕಾಂಕ್ಷಿಯ ದೇಶಪ್ರೇಮಕ್ಕೂ ಸಾವಿರಾರು ಹರಿದಾರಿಗಳಷ್ಟು ದೂರ.

ಧರ್ಮಚಾರಿ, ಬ್ರಹ್ಮಚಾರಿ, ನಿಷ್ಕಾಮಕರ್ಮಿ, ಪರೋಪಕಾರಿ, ನಿವೃತ್ತಕರ್ಮಿ, ಸಂನ್ಯಾಸಿ, ಲೋಕಸೇವಾಪರಾಯಣ, ರಾಷ್ಟ್ರಸೇವಕ, ಯಜ್ಞಶಿಷ್ಟಾಶಿ, ಸಂತ, ಭಗವದ್‌ಭಕ್ತ, ಮುಮುಕ್ಷು, ಮುಕ್ತ, ಯೋಗಿ, ಋಷಿ, ಮುನಿ, ತಪಸ್ವಿ, ಜ್ಞಾನಿ (ಬ್ರಹ್ಮ–ಆತ್ಮಜ್ಞಾನಿ) ಮತ್ತು ಸಾಧು ಎಂಬ ಪದಗಳ ಅರ್ಥಗಳಂತೆ ನಡೆದುಕೊಳ್ಳುವವರಷ್ಟೇ ಮೇಲ್ಮಟ್ಟದ ಭಾರತೀಯರು, ಭಾರತ ರಾಷ್ಟ್ರೀಯರು. ಅವರಲ್ಲಿ "ವನೌಕಸೋಽಪಿ ಸಂತೋ ಲೌಕಿಕಜ್ಞಾವಯಂ" ಎಂಬ ಬಗೆಯವರು ರಾಷ್ಟ್ರಗುರುಗಳಾಗಬಲ್ಲವರು. ಅವರ ಸಮಿತಿಯು ವಿದ್ಯಾರಣ್ಯ ಸಮಿತಿ.

ರಾಮದಾಸರಿಲ್ಲದೆ ಶಿವಾಜಿ ರೂಪಿತನಾಗಲಿಲ್ಲ. ಗಾಂಧಿ ಇಲ್ಲದೆ ಸರದಾರ ಪಟೇಲ ರೂಪಿತನಾಗಲಿಲ್ಲ. ಅರಿವು ಅಚೇತನವಾಗಿರುವಾಗ ಧರ್ಮಸೂಕ್ಷ್ಮಗಳನ್ನು ಸ್ಪಷ್ಟವಾಗಿ ಬಿಡಿಸಿ ಹೇಳಬಲ್ಲ ಗುರುವಿಗೆ ಗ್ರಂಥಗಳು ಬದಲಿಗಳಾಗಲಾರವು. ವಿಷಯಬೋಧನದಲ್ಲಿ

ವಿರಮಿಸುವ ಗುರುತ್ವವು ಸಾಮಾನ್ಯ. ಹಾಗೇ ಶಿಷ್ಯಗತ ಸುಪ್ತಶಕ್ತಿಗಳನ್ನೆಚ್ಚರಿಸಿ ವಿರಮಿಸುವ ಗುರುತ್ವವೂ ಅಪೂರ್ಣ. ಸಂಘರ್ಷ ಸಂದರ್ಭಗಳಲ್ಲಿ ಧರ್ಮಾಧರ್ಮ ವಿವೇಕವನ್ನು ಕಂಡುಕೊಳ್ಳುವಂತೆ ಪ್ರೇರಿಸಬಲ್ಲ ಗುರುತ್ವವು ಅಸಾಮಾನ್ಯ, ಪರಿಪೂರ್ಣ, ಅದೇ ರಾಷ್ಟ್ರಗುರುತ್ವ. ಲೋಕಜೀವನದ ಸಂದರ್ಭಗಳ ವೈವಿಧ್ಯದ ದೆಸೆಯಿಂದ ಆಪ್ತವಾಕ್ಯದ (ಗುರೂಪದೇಶದ) ಅಗತ್ಯ ಗೃಹಸ್ಥರಿಗೆ ಉಂಟಾಗದಿರುವುದು ಅಸಂಭವ. ರಾಷ್ಟ್ರಜೀವನವು ಲೋಕಜೀವನದ ಅಂಗ ಮತ್ತು ಕೌಟುಂಬಿಕ ಜೀವನದ ಅಂಗಿ. ಕುಟುಂಬದ ಸಂಕುಚಿತತೆ ಅಳಿದು ವಿಶಾಲವಾಗುತ್ತ ಹೋಗುವ ಅರ್ಥಸೂತ್ರಗಳು ರಾಷ್ಟ್ರಪೋಷಕ. ಆದುದರಿಂದ ಗ್ರಾಮಕುಟುಂಬ ರಚನೆಯು ಹೆಚ್ಚು ಆರೋಗ್ಯಕರ. ಗ್ರಾಮಸ್ಥರೆಲ್ಲರೂ ಕುಟುಂಬ ಸದಸ್ಯರ ಹಕ್ಕುಬಾಧ್ಯತೆಗಳನ್ನುಳ್ಳವರಾಗುವ ವ್ಯವಸ್ಥೆ ಅಗತ್ಯ. ಅದು ಗ್ರಾಮಗಣರಾಜ್ಯ (Village Republic). ಸ್ವಾವಲಂಬನ ಸ್ವಯಂಪೂರ್ಣತೆಗಳು ಅದರ ಆಧಾರ, ಉತ್ಸರ್ಗಸೂತ್ರ. ಅದರ ಒಟ್ಟು ಉತ್ಪನ್ನದ ೪ನೆಯ ಒಂದಂಶವು ರಾಷ್ಟ್ರಾದಾಯವಾಗಬೇಕು. ತಾಲೂಕು–ಜಿಲ್ಲೆ–ರಾಜ್ಯ–ರಾಷ್ಟ್ರ–ಕೇಂದ್ರಗಳೆಲ್ಲವುಗಳಲ್ಲೂ ಹಂಚಿಹೋಗುವ ಆದಾಯ ಅಷ್ಟೇ ಆಗಿರುವುದು ನಿತ್ಯಧರ್ಮ; ರಾಷ್ಟ್ರೀಯ ಆಪದ್ಧರ್ಮದ ಅಧಿಕಾರ ಅಪವಾದಾತ್ಮಕ. ನಗರ–ಪಟ್ಟಣಗಳಲ್ಲಿ ಗ್ರಾಮಸಮವಾಗಿ ವಿಭಕ್ತವಾದ ಒಂದೊಂದು ವೃತ್ತಿಘಟಕವು ಒಂದೊಂದು ಕುಟುಂಬದಂತೆ ಗಣಿತವಾಗಬೇಕು. ವೃತ್ತಿಯಂತೆ ಪ್ರದೇಶ ಅಲ್ಲಿ ಭಿನ್ನವಾಗಿರಬೇಕು. ರಾಷ್ಟ್ರಗುರು ಬೋಧದಿಂದ ಜನ ಇದನ್ನು ಸ್ವೀಕರಿಸುತ್ತದೆ.



೩

# ಸರಕಾರಿ ಕಾಯದೆಯ ವ್ಯಾಪಕತ್ವ ಮತ್ತು ದಕ್ಷಾಚಾರ

ಅನುತ್ಪಾದಕರಾದ ಲೇಖನ-ಭಾಷಣಕಾರರ ಸಂಖ್ಯೆ ಸರಕಾರಗಳಲ್ಲಿ ಅತ್ಯಲ್ಪ ಸಂಖ್ಯೆಗೆ ಇಳಿಸಲ್ಪಡುವುದಗತ್ಯ. ವಚನಭಂಗಕ್ಕೆ ಕಠಿಣ ಶಿಕ್ಷೆ ಜಾರಿಗೆ ಬರಬೇಕು. ಅನೃತಾಲಾಪಕ್ಕೂ ಅದೇ ರೀತಿಯ ಉಗ್ರಶಿಕ್ಷೆ ಬರಬೇಕು. ಹಣದ ರೂಪದಿಂದ ದಂಡಕೊಡುವ ಶಿಕ್ಷೆಯ ಪದ್ಧತಿ ಲುಪ್ತವಾಗಬೇಕು. ಕೈದಿಗಳಿಂದಲೂ ಶಾಂತಿಕಾಲದ ಸೈನಿಕರಿಂದಲೂ ಉತ್ಪಾದಕ ಕೆಲಸಗಳನ್ನು ಮಾಡಿಸಬೇಕು. ವಿದ್ಯಾರ್ಥಿಗಳೆಲ್ಲರಿಗೂ ೧೬ ವರ್ಷ ತುಂಬಿದ ಕೂಡಲೇ ಒಲವಿನ ಪರೀಕ್ಷೆ ಮಾಡಿಸಿ ಕಲಿಯುವಿಕೆಯ ಜೊತೆಗೆ ಸಂಪಾದನೆ ಮಾಡುವ ವೃತ್ತಿಶಿಕ್ಷಣವನ್ನು ಕೊಡಬೇಕು. ಮದ್ಯಪಾನಕ್ಕೂ ವೇಶ್ಯಾವೃತ್ತಿಗೂ ಉಗ್ರದಂಡನೆ ಜಾರಿಗೆ ಬರಬೇಕು. ವರದಕ್ಷಿಣೆ-ಕನ್ಯಾಶುಲ್ಕಗಳಿಗೂ ಉಗ್ರಶಿಕ್ಷೆ ವಿಧಿಸಬೇಕು. ಈ ಎಲ್ಲವೂ "ಕ್ರಿಮಿನಲ್" ಮಟ್ಟದ ಅಪರಾಧಗಳೆಂದು ಗಣಿಸಲ್ಪಡಬೇಕು. ೩೦ ವರ್ಷಗಳ ಕೆಳಗಿನವರಿಗೆ ಯಾವ ಸರಕಾರಿ ನೌಕರಿಯೂ ಕೊಡಲ್ಪಡಬಾರದು. ನೌಕರಿಗೆ ತೆಗೆದುಕೊಳ್ಳಲು ಅನುಭವ-ಜ್ಞಾನಗಳ ಜೊತೆಗೆ ಒಲವಿನ ಪರೀಕ್ಷೆಯನ್ನೂ ನಿಕಷವನ್ನಾಗಿ ಮಾಡಬೇಕು. ಚುನಾವಣೆಗಾಗಿ ಚುನಾವಣೆಯ ಋತುವಿನಲ್ಲಿ ಧನವ್ಯಯ ಮಾಡುವುದು, ಜೂಜು, ಲಾಟರಿ, ಸಟ್ಟಾ, ವಾಯಿದೆ, ಕುದುರೆ ರೇಸು ಮುಂತಾದವುಗಳೂ ಕಳ್ಳತನ, ಕಳ್ಳಪೇಟೆ ವ್ಯವಹಾರ, ಖೂನಿಗಳ ಮಾದರಿಯ ತಪ್ಪುಗಳೆಂದು ಘೋಷಿಸಬೇಕು. Non-cognizable offences. ಪೋಲೀಸರು ತಾವಾಗಿಯೇ ಗ್ರಹಿಸದಿರಬಹುದಾದ ತಪ್ಪುಗಳ ಸಂಖ್ಯೆ ಅತ್ಯಲ್ಪ ಗುಣ, ಅತಿಕ್ಷುದ್ರ ಅಥವಾ ಲಘು ಎನ್ನಿಸುವಂತಾಗಬೇಕು. ಯಾವ ತಪ್ಪೂ ಸ್ವಾತಂತ್ರ್ಯದ ಸದುಪಯೋಗವೆನ್ನಿಸಲಾರದು. ವ್ಯಕ್ತಿಯು ತನಗೇ ಮಾಡಿಕೊಳ್ಳಲಿ, ಪರರಿಗೇ ಮಾಡಲಿ-ಹಾನಿ ಹಾನಿಯೇ. ಅಜ್ಞಾನಿಗಳು ಶಿಶುಸಮಾನರಾದುದರಿಂದ ಅವರಿಗೆ ಹಾನಿ ಮಾಡಲು ಹಕ್ಕಿಲ್ಲ. ಕೋರ್ಟು-ಕಚೇರಿಗಳ ನ್ಯಾಯದ ದರ, ವಿಲಂಬ, ನ್ಯಾಯಾಧೀಶನ ವಸ್ತುಜ್ಞಾನದ ಅವೈಯಕ್ತಿಕತೆ ಮತ್ತು ಅವನ ನಿರ್ಣಯದ ಅನಂತಿಮತೆ ಶೂನ್ಯವಾಗಬೇಕು. ಪೋಲೀಸರ ಸಂಖ್ಯೆ ಕಡಿಮೆ ಮಾಡಿ, ಅವರ ಯೋಗ್ಯತೆ-ಸಂಬಳಗಳ ಮಟ್ಟಗಳನ್ನು ಏರಿಸಬೇಕು. ನಿರುದ್ಯೋಗಿಗಳನ್ನು ಉದ್ಯೋಗಕೊಟ್ಟು ಉಳಿಸಿಕೊಳ್ಳುವುದು ಆಯಾ ಗ್ರಾಮಕುಟುಂಬದ ಹೊಣೆ. ಸರಕಾರಿ ನೌಕರಿಯಲ್ಲಿ ಉಂಟಾದ ಸರಕಾರಿ ಹಾನಿಗಳನ್ನು ವೈಯಕ್ತಿಕ ಅಧಿಕಾರಿಗಳು ತುಂಬಿಕೊಡುವ

ಹೊಣೆ ಅವರಲ್ಲಿ ಅವರವರಿಗಿರಬೇಕು. ಅಧಿಕಾರಕ್ಕೂ ಅನುಕೂಲಗಳಿಗೂ ಹೊಣೆಗಳಿಗೂ ಸಮಪ್ರಮಾಣವಿರಬೇಕು. ಕಾರ್ಯಪಾಲಿಕೆಗೆ ನ್ಯಾಯಪಾಲಿಕೆಯ ೪ನೆಯ ಒಂದರಷ್ಟು ಹಕ್ಕುಗಳನ್ನು ಕೊಡಬೇಕು. ದೊಡ್ಡ ತಪ್ಪುಗಳನ್ನು ಮೂರು ಸಲ ಮಾಡಿದ ಮತ್ತು ಶಿಕ್ಷೆ ಅನುಭವಿಸಿದ ಅಧಿಕಾರಿಯನ್ನು ಮನೆಗೆ ಕಳಿಸಬೇಕು. ರಾಷ್ಟ್ರಪತಿಯಿಂದ ಉಗ್ರಾಣಿಯವರೆಗಿನ (ರಾಜಕಾರಣಿಗಳ ಸಹಿತ) ಸರಕಾರಿ ಕಾರ್ಯಕರ್ತರ ನಿವೃತ್ತಿಯ ವಯಸ್ಸು ಸಾಮಾನ್ಯವಾಗಿ ೬೦ನೆಯ ವರ್ಷವೇ ಆಗಬೇಕು. ಮೆಟ್ರಿಕ್ಯುಲೇಷನ್ ಆಗದವನಿಗೆ ಮತದಾನದ ಹಕ್ಕಿರಬಾರದು. ಅದರ ಅಳತೆ ೧೨ ವರ್ಷಗಳ ವಿದ್ಯಾಭ್ಯಾಸವಾಗಿರಬೇಕು. ಹರಕೆಯ ದೇವರಿಗೆ ಮರದ ಜಾಗಟೆಗಳೆಂಬ ತರಬೇತಿನ ಕೇಂದ್ರಗಳನ್ನು ಮುಚ್ಚಿಬಿಡಬೇಕು. ವೈಜ್ಞಾನಿಕ ಪ್ರಗತಿಯು ಯಾವಾಗಲೂ ಉದ್ಯಮ–ಸೈನಿಕ ಶಕ್ತಿಗಳ ಪೋಷಣೆಗೆ ಆದ್ಯ ಪ್ರಾಶಸ್ತ್ಯವನ್ನು ಕೊಡುತ್ತಿರಬೇಕು. ಕೃಷಿ, ಗೋರಕ್ಷೆ, ವಾಣಿಜ್ಯಗಳ ಉತ್ಪಾದನೆ, ವ್ಯಾಪಾರಗಳ ದರಗಳು ಸಮಪ್ರಮಾಣಿತವಾಗಿರುವಂತೆ ಕಾಯಿದೆ ಜಾರಿಮಾಡಬೇಕು. ರೂಪಾಯಿಯ ಆಂತರಿಕ ಮೌಲ್ಯವು ಮೊದಲಿದ್ದಷ್ಟಕ್ಕೆ ಏರುವಂತೆ ಮಾರ್ಪಾಟು ಮಾಡಬೇಕು. ಎಂಜಿನಿಯರರನ್ನೂ ಕೃಷಿತಜ್ಞರನ್ನೂ, ಡಾಕ್ಟರರನ್ನೂ, ವೈಜ್ಞಾನಿಕವಾಗಿ ಭಾರತೀಕರಿಸಬೇಕು. ಕಾಗದದ ಪ್ರಮಾಣಕ್ಕಿಂತ ನಾಲಿಗೆಯ ಪ್ರಮಾಣ ಕಾಯಿದೆಯಂತೆ ಅಧಿಕವೆಂದು ಸರ್ವವ್ಯವಹಾರದಲ್ಲೂ ಗಣಿಸಲ್ಪಡಬೇಕು. ಎಲ್ಲ ಬ್ಯಾಂಕುಗಳೂ ಸಾರಿಗೆಗಳೂ ರಾಷ್ಟ್ರೀಕೃತವಾಗಬೇಕು. ಸಾಮಾನ್ಯವಾಗಿ ಸ್ವಲ್ಪ ಹೆಚ್ಚು ಕಡಿಮೆ ಸರ್ವಪದಾರ್ಥಗಳ ದರಗಳೂ ದೇಶದಾದ್ಯಂತ ಒಂದೇ ಮಟ್ಟದಲ್ಲಿರುವಂತೆ ಸರಕಾರಿ ನಿಯಂತ್ರಣ ಬೇಕು. ಅರಾಷ್ಟ್ರೀಕೃತ ನಿಕ್ಷೇಪ ಸ್ಥಾನಗಳು ಕಾಯಿದೆ ಬಾಹಿರವಾಗಬೇಕು. ಗ್ರಾಮಗಳಲ್ಲಿ ಪರಸ್ಪರ ಆಂತರಿಕ ಸ್ವಾಯತ್ತತೆ ಹೆಚ್ಚಬೇಕು. ಅದರ ಬಳಕೆ ಅದಕ್ಕಿಂತ ದೊಡ್ಡ ಘಟಕಗಳ ಹಿತಕ್ಕೆ ಧಕ್ಕೆಯಾಗದಂತೆ ನಿಯಂತ್ರಿತವಾಗಿರಬೇಕು. ಶೈಕ್ಷಣಿಕ ವ್ಯವಹಾರ–ಆಡಳಿತಗಳು ಆಯಾ ಶಿಕ್ಷಣ ಸಂಸ್ಥೆಗಳ ಸಂಪೂರ್ಣ ಸ್ವಾಯತ್ತತೆಗೆ ಒಳಪಡಬೇಕು. ಅವುಗಳು ಕೊಡುವ ಸಾಮಾನ್ಯ ಜ್ಞಾನದ ಮಟ್ಟವನ್ನು ಪ್ರತಿವರ್ಷ ರಾಷ್ಟ್ರೀಯ ತಜ್ಞರು ಬೆಲೆ ಕಟ್ಟಿ ಹೇಳುತ್ತಿರಬೇಕು. ಸಾರ್ವಜನಿಕರೂ ಸರಕಾರಗಳೂ, ಅವುಗಳ ಸಮಪೋಷಕರಾಗಬೇಕು. ವಿದೇಶಗಳೊಡನೆ ಮಾಡುವ ಎಲ್ಲ ವ್ಯವಹಾರಗಳೂ ಕೇಂದ್ರ ಸರಕಾರದ ಅನುಮತಿಯನ್ನು ಪಡೆದೇ ನಡೆಯಬೇಕು. ಸಹಕಾರಿ ಮಾರುಕಟ್ಟೆಗಳು ಪ್ರತಿಯೊಂದು ಗ್ರಾಮಕ್ಕೂ ಒಂದೊಂದರಂತೆ ಇರಬೇಕು; ಸಹಕಾರಿ ಕಣಜಗಳೂ ಹಾಗೇ. ಗ್ರಾಮಸಭಾನಿಲಯವೂ ಒಂದೊಂದು ಗ್ರಾಮಕ್ಕೆ ಒಂದೊಂದಿರಬೇಕು. ಪ್ರತಿಯೊಂದು ಪಂಚಾಯುತಕ್ಕೂ ಕಾರ್ಯಾಂಗ (ಕಾರ್ಯಪಾಲಿಕೆ), ನ್ಯಾಯಾಂಗ ಮತ್ತು ಶಾಸನಾಂಗಗಳೊಂದೊಂದು ಇರಬೇಕು. ಅವುಗಳ ಸಂವಿಧಾನವು ರಾಷ್ಟ್ರದಾದ್ಯಂತ ಒಂದೇ ಆಗಿರುವಂತೆ ಕೇಂದ್ರ ಸರಕಾರ ನೋಡಿಕೊಳ್ಳಬೇಕು. ರಾಜ್ಯ ಮಂತ್ರಿಮಂಡಲಗಳ ಸಂಖ್ಯೆ ಎಲ್ಲಿಯೂ ಎಂಟಕ್ಕಿಂತ ಹೆಚ್ಚಿರಬಾರದು. ಅವರ ನಿಯೋಜನವು ಅವರ ಅನುಭವ, ಜ್ಞಾನ, ಒಲವು, ಚಾರಿತ್ರಗಳನ್ನೇ ಆಧರಿಸಿರುವಂತೆ ರಾಜ್ಯಪಾಲರು ನೋಡಿಕೊಳ್ಳಬೇಕು. Public Service Commission ಸಾರ್ವಜನಿಕ (ಸರಕಾರಿ) ಸೇವಾ ಆಯೋಗ ಇರುವುದು ಅನಗತ್ಯ. ಆಯಾ ಸಂಸ್ಥೆಯ ಮುಖ್ಯಾಧಿಕಾರಿಯೇ ತನ್ನ ಜೊತೆ ಕೆಲಸಗಾರರ

ನಿಯೋಜಕನಾಗಿರಬೇಕು. ಮುಖ್ಯಾಧಿಕಾರಿಯನ್ನು ಅನುಭವಾದಿಗಳ ಮೇರೆಗೆ ರಾಜ್ಯಪಾಲ, ರಾಷ್ಟ್ರಪತಿಗಳು ನಿಯಮಿಸಿದ ಮನಃಶಾಸ್ತ್ರತಜ್ಞ ಮಂಡಲಗಳು ನಿಯಮಿಸಬೇಕು.

ಮೇಲೆ ಹೇಳಿದವು ಕೆಲವು ಮಾದರಿಯ ಸುಧಾರಣೆಗಳು. ಅವುಗಳಿಂದ ಅಥವಾ ಅಂಥವುಗಳಿಂದ ಮಾತ್ರ ಪ್ರಜಾಪ್ರಭುತ್ವ ಈ ದೇಶಕ್ಕೆ ಕ್ಷೇಮಕರವಾದೀತೆಂದು ಪ್ರಸ್ತುತ ಲೇಖಕನ ಅನುಭವಿಕ ನಂಬಿಗೆ. ಅಲ್ಲದೆ, ಮಂತ್ರಿಗಳೇ ಮೊದಲಾದ ಉಚ್ಚಾಧಿಕಾರಿಗಳ ಚರಿತವನ್ನು ಕಣ್ಣಿಗೆ ಎಣ್ಣೆ ಹಾಕಿಕೊಂಡು ನೋಡುವ ಗೂಢಚಾರ ಕೇಂದ್ರವು ಸಂಪೂರ್ಣ ಸ್ವತಂತ್ರವಾಗಿ ರಾಷ್ಟ್ರಗುರುಗಳಿಗೆ ಕಾಲಕಾಲಕ್ಕೆ ತಿಳಿಸುವ ವ್ಯವಸ್ಥೆಯೂ ಅತ್ಯಗತ್ಯ. ಅತಿ ಐಶ್ವರ್ಯದಂತೆಯೇ ಮಹಾಧಿಕಾರವೂ ಕೆಲವರಲ್ಲಿ ಕೆಲವೆಡೆ, ಕೆಲಸಲ, ಮದವನ್ನು ಬೆಳೆಯಿಸುತ್ತದೆ: *ಆದುದರಿಂದ ಪ್ರಜಾಸ್ವಾಸ್ಥ್ಯದ ದೃಷ್ಟಿಯಿಂದ ಉಕ್ತ ವ್ಯವಸ್ಥೆ ಇರುವುದು ರಾಷ್ಟ್ರೀಯ ಅಸ್ತಿತ್ವಕ್ಕೆ ದೊಡ್ಡ ರಕ್ಷಾಕವಚ.



# ೪

# ಭಾರತೀಕರಣ

"All the old religions of the world, with their rituals their scriptures, and priests, have failed to meet the deepening crisis of today. Man is looking desperately for an answer which will cure the growing imbalance between his achievements in science, which so far he has utilised for creating more and more deadly weapons, and his incapacity to live in peace and friendliness with his fellowmen- ತಮ್ಮ ಕರ್ಮ, ಶ್ರುತಿ ಮತ್ತು ಪೂಜಾರಿಗಳಿಂದೊಡಗರೂಡಿದ ಹಳೆಯ ಮತಧರ್ಮಗಳೆಲ್ಲವೂ ಇಂದಿನ ಆಳವಾಗಿ ಕೊರೆದುಕೊಂಡು ಹೋಗುತ್ತಿರುವ ಬಿಕ್ಕಟ್ಟನ್ನು ಎದುರಿಸಲಾರದಾಗಿವೆ. ಮಾನವನು ತಾನು ವಿಜ್ಞಾನದಲ್ಲಿ ಸಾಧಿಸಿದ್ದೆಲ್ಲವನ್ನೂ ಹೆಚ್ಚು ಹೆಚ್ಚು ಮಾರಕವಾದ ಶಸ್ತ್ರಗಳನ್ನು ನಿರ್ಮಿಸಲು ಬಳಸಿ ತನ್ನ ಸಹಜೀವಿಗಳೊಡನೆ ಶಾಂತಿ–ಸೌಹಾರ್ದಗಳಿಂದ ಬದುಕಲಾರದಾಗಿರುವ ವಿಷಮತೋಲನಕ್ಕೆ ತಕ್ಕ ಉತ್ತರ ಪಡೆಯಲು ನಿರಾಶೋನ್ಮುಖನಾಗಿ ಹಾತೊರೆಯುತ್ತಿದ್ದಾನೆ" ಎಂಬಂಥ ಒಗ್ಗರಣೆಗಳನ್ನಿಂದು ಅತೃಪ್ತ, ವಿಕ್ಷಿಪ್ತ, ಮಧ್ಯಮವರ್ಗದ ತತ್ವಜ್ಞಾನಿಂಮನ್ಯರ ಲೇಖನಿಗಳ ಮೂಲಕ ಪತ್ರಿಕೆಗಳಲ್ಲಿ ನಾವು ಕಾಣುತ್ತೇವೆ. ಜಗತ್ತು ಅನೇಕ ಪ್ರಭುತ್ವಗಳಲ್ಲಿರುವ ವರೆಗೆ ಅದರಲ್ಲಿಯ ಮಾನವರನ್ನು 'ಮಾನವ' ಎಂಬ ಒಂದೇ ಒಂದು ಜಾತಿವಾಚಕದಿಂದ ಸಾಮಾನ್ಯೀಕರಿಸಿ ಮಾತಾಡುವುದು ಅಸಂಬದ್ಧ. ಅನೇಕ ವೈಯಕ್ತಿಕ ಜೀವಾತ್ಮಗಳೆಲ್ಲವುಗಳಿಗೂ ವಿಶ್ವಾತ್ಮಕತೆ ಜೀರ್ಣವಾಗುವ ವರೆಗೆ ಪ್ರಾದೇಶಿಕ ರಾಷ್ಟ್ರೀಯ ಸ್ವಾಸ್ಥ್ಯಕ್ಕಲ್ಲದೆ ಇನ್ನಾವುದಕ್ಕೂ ವ್ಯವಹಾರ್ಯತೆ ಇಲ್ಲ. ರಾಷ್ಟ್ರೀಯ ಸಾರ್ವಭೌಮತ್ವವನ್ನು ಆಧರಿಸಿ ನಡೆಯುವ ದೇಶಗಳು ಇತರ ದೇಶೀಯರ ಸಾಧನೆಗಳನ್ನೂ ಅವುಗಳ ಬಳಕೆಯನ್ನೂ ಸಾಮಾನ್ಯ ಮಾನವೀಯವೆಂದು ಗಣಿಸಲು ಬರದು. ಜೊತೆಗೆ, ಮತಧರ್ಮಗಳ ಆಚಾರ–ವಿಚಾರಗಳಲ್ಲಿ ಅಂತರವನ್ನಿಟ್ಟುಕೊಂಡ ವಿದ್ಯಾವಂತ ಆಷಾಡಭೂತಿಗಳ ಅಪ್ರಾಮಾಣಿಕತೆಯನ್ನು ಗಣನೆಗೆ ತೆಗೆದುಕೊಳ್ಳದೆ ಅವುಗಳೆಲ್ಲವೂ ಈಗ ನಿರುಪಯುಕ್ತವೆಂದು ಒದರುವುದು ಮೂಢತನ. ಶ್ರೀ ಅರವಿಂದರು ಅಭಿಪ್ರಾಯಪಟ್ಟಂತೆ ಪ್ರತಿಯೊಂದು ಶ್ರುತಿಯಲ್ಲಿಯೂ ಸಾರ್ವಕಾಲಿಕ ಮತ್ತು ತಾತ್ಕಾಲಿಕ ಜ್ಞಾನಸೂತ್ರಗಳೆಂಬ ಇಬ್ಬಗೆಯ ನೀತಿನಿರೂಪಣೆಗಳಿರುತ್ತವೆ. ಅವುಗಳಲ್ಲಿ ಮೊದಲನೆಯ ಬಗೆಯ ನೀತಿ ಸೂತ್ರಗಳ ಅಭ್ಯಾಸ, ಆಚರಣೆಗಳನ್ನು ಸದ್ಯದ ಜೀವನ ಸಂದರ್ಭಗಳಿಗೆ

ಅಗತ್ಯವಾದ ರೂಪ–ರೀತಿಗಳ ಮೂಲಕ ನಡೆಯಿಸಿ ನೋಡುವ ಶುದ್ಧ ಶ್ರದ್ಧಾವಂತಿಕೆಯುಳ್ಳ ಪ್ರೌಢಿಯೊಂದೇ ಅವ್ಯವಸ್ಥೆಯಿಂದ ಆಯಾ ಪಾರಂಪರಿಕ ಜನಾಂಗವನ್ನು ವಿವೇಕದಿಂದ ಬಾಳಲು ತಕ್ಕದ್ದನ್ನಾಗಿ ರೂಪಿಸೀತು. ತಾತ್ಕಾಲಿಕವಾದ ಅಂಶಗಳಲ್ಲಿ ಕೆಲವು ಪ್ರಯೋಜನಕಾರಿಯಾದಾವು. ಕೆಲವು ಆಗದೆ ಹೋದಾವು. "ಸಂತಃ ಪರೀಕ್ಷ್ಯ ಅನ್ಯತರದ್ ಭಜಂತೇ" ಎಂಬ ವೈಜ್ಞಾನಿಕ ತರ್ಕಬುದ್ಧಿ ಇಲ್ಲದವರ ಸಾಂಸ್ಕೃತಿಕ ವಿಮರ್ಶೆಯು ಅವೈಜ್ಞಾನಿಕ.

ಜಗತ್ತಿನಲ್ಲಿ ಸಹ–ಅನುಭೂತಿಯು ಪ್ರಾದೇಶಿಕ (ರಾಷ್ಟ್ರೀಯ) ಸಾಂಸ್ಕೃತಿಕ ಐಕ್ಯಕ್ಕೆ ಮೂಲಕಾರಣ. ಸಹಶಿಕ್ಷಣ, ಸಹರಕ್ಷಣ, ಸಹಗೌರವಾದರ ವಿನಿಮಯ, ಸಹಭೋಗ, ಸಹಕಾರ್ಯ, ಸಹಶ್ರದ್ಧೆ, ಸಹವಾಸಗಳು ಸಹ–ಅನುಭೂತಿಯ ಕಾರಕಗಳು. ಇಡಿ ಜಗತ್ತಿನಲ್ಲಿ ಒಂದೇ ಮಟ್ಟದ ಶಾಂತಿ ಅಥವಾ ಅಶಾಂತಿ ಒಂದು ನಿಮಿಷವೂ ಇರದು. ಸಾರ್ವಮಾನವೀಯತೆ, ಸಾರ್ವಜೀವಿಕತೆಗಳು ವ್ಯಕ್ತಿಗಳಲ್ಲಿ ಅತ್ಯಲ್ಪ ಸಂಖ್ಯಾತರಿಗೆ ಮಾತ್ರ ಯಾವ ದೇಶದಲ್ಲಾದರೂ ಅನುಭವಗೋಚರವಾದೀತು. ಆದುದರಿಂದ ಜಾಗತಿಕ ಸರಕಾರದ ರಚನೆಯು ಬಿಸಿಲುಗುದುರೆ. ಅಂತಾರಾಷ್ಟ್ರೀಯ ಕಾಮನವೆಲ್ತಿನಂಥ, ಸಂಯುಕ್ತ ರಾಷ್ಟ್ರ ಸಂಘದಂಥ ಹಾಗೂ ಹೀಗೂ ಸಾಗುವ ನೈತಿಕ ನಿಯಾಮಕ ಸಂಸ್ಥೆಗಳಿಗಿಂತ ಮೇಲಿನದನ್ನು ಮಾನವ ಜಗತ್ತು ನಿರ್ಮಿಸಿಕೊಳ್ಳಲಾರದು; ಹಾಗೇ ಚಂದ್ರಲೋಕಕ್ಕೆ ಹೋಗಿ ಬಂದಂತೆ ಸೂರ್ಯ ಲೋಕಕ್ಕೆ ಹೋಗಿರಬರಲಾರದು. ರಾಷ್ಟ್ರೀಯತೆಯು "ಸಹನಾವವತು, ಸಹನೌಭುನಕ್ತು, ಸಹವೀರ್ಯಂ ಕರವಾವಹೈ" ಎಂದ ಕಾಲದಿಂದ ನಡೆದುಬಂದದ್ದು. ರಾಷ್ಟ್ರಕೂಟಗಳಲ್ಲಿ ಕಲಹ ಉಂಟಾಗುವ ಸಂದರ್ಭಗಳೂ ಮೊದಲಿನಿಂದ ಇದ್ದದ್ದು. "ಹೊಸ" ಎಂಬ ಪದದಿಂದ ಸಾರಾಂಶದಲ್ಲಿ ಅನುಭವ ಬದಲಾಗದು.

ಹಲ್ಲಿ ಬಾಲ ಕಳೆದುಕೊಂಡಂತೆ ಭೂತಕಾಲದ ಸರ್ವಾಂಶಗಳಿಂದಲೂ ಪೂರ್ಣ ಮುಕ್ತವಾಗಲು ಮನಸ್ಸಿಗೆ ಶಕ್ತಿ ಇಲ್ಲ. ಅದರ ಅಂತಃಸಾರವೇ ಭೂತವಸ್ತುವಾದ ಆತ್ಮ. ಆತ್ಮವನ್ನು ಜೀವಾತ್ಮಕತೆಗಿಳಿಸಿದ ಅದರ ಕವಚ (ಆವರಣ)ಗಳ ಮಾಯಿಕ (Material) ಸಾರಾಂಶವೂ ಭೂತಕಾಲೀನ, ವಿಚಾರ್ಯವೆಲ್ಲವೂ ಭೂತಕಾಲೀನ. ಕಾಲದ ಕಾರ್ಯವು ಅದೃಶ್ಯ–ಕಾಲವೇ ಪ್ರಾತ್ಯಯಿಕವಾದುದರಿಂದ. ಕಾಲ–ದೇಶಗಳೆಂದು ನಮಗೆನ್ನಿಸುವವುಗಳು ಪೃಥಿವಿ, ಅಪ್, ತೇಜಸ್, ವಾಯುಗಳ ಮೂಲಕವೇ ಅನುಭವ ಗೋಚರವಾಗುವುವು. ವಿಭುದ್ರವ್ಯಗಳ (ಸಹಜ ಕಾಲ್ಪನಿಕ) ಅನೇಕತೆಯು ಮೂರ್ತದ್ರವ್ಯ ಸಂಯೋಗದಿಂದಲೇ ನಿಗಮನೀಯ ಎಂಬುದು ತರ್ಕಸಿದ್ಧವಾದ ಭೌತಶಾಸ್ತ್ರೀಯ ನಿಯಮ. ಸಾಮಾನ್ಯ ಜಗತ್ತು ಐಕಾತ್ಮ್ಯಚ್ಯುತವಾಗಿ ತೋರುವುದೇ ಎಲ್ಲ ಬಿಕ್ಕಟ್ಟುಗಳಿಗೂ ಕಾರಣ. ಸಾಧಾರಣವಾದ ಶಾಂತಿಯಷ್ಟೇ ಐಕಾತ್ಮ್ಯದ ಪ್ರೀತಿ ಅಥವಾ ಆತ್ಮೀಯತೆ ಹೃದಯದಲ್ಲಿ ಹೆಚ್ಚು ಹೆಚ್ಚು ಸಾಂದ್ರವಾಗುತ್ತ ಹೋದಲ್ಲಿ ಕೆಲಕಾಲಾವಧಿಗಳಲ್ಲಿ ಕೆಲವೆಡೆ ಸಾಧಾರಣ ತೃಪ್ತಿಕರವಾದ ಶಾಂತಿಯು ರಾಜಸಜೀವನದಲ್ಲಿ ಸಾಧ್ಯ. ಉಕ್ತ ಸಾಧ್ಯಕ್ಕೆ ರಾಷ್ಟ್ರೀಯ ಭಾವನೆ ಸಾಧನ. ರಾಜಸಜೀವನದ ಆದರ್ಶವನ್ನು ಅನುಭವಕ್ಕೆ ತಂದುಕೊಂಡ ಮೇಲೆ ಒಂದು ದೇಶದ

ಒಂದು ತಲೆಮಾರಿನ ರಾಷ್ಟ್ರೀಯರು ಸಾತ್ವಿಕ ಜೀವನದ (ಅರ್ಥಾತ್ ಜಯ ಜಗತ್ತಿನ) ಧೋರಣವನ್ನು ಹಿಡಿಯಬಹುದು.

"ಹೀಗೆ ಭಾರತೀಯ ಸಂಸ್ಕೃತಿಯಲ್ಲಿ ವಿಜ್ಞಾನವೂ ಕಲೆಯೂ ಧರ್ಮಕ್ಕೆ ಅಧೀನವಾಗಿವೆಯೇ ಹೊರತು ಪಾಶ್ಚಾತ್ಯರ ವಿಜ್ಞಾನ-ಕಲೆಗಳಂತೆ ಪ್ರಪಂಚನಾಶಕ್ಕೆ ಕಾರಣವಾಗಲಿಲ್ಲ. ಈ ರಹಸ್ಯವು ಪಾಶ್ಚಾತ್ಯರಿಗೂ ಈಗ ಸ್ವಲ್ಪ ವಿದಿತವಾಗುತ್ತ ಬರುತ್ತಿದೆ" ("ಭಾರತೀಯ ಸಂಸ್ಕೃತಿ", ಪುಟ ೩೦೯) ಎಂದು ಡಾ.ಶ್ರೀಕಂಠ ಶಾಸ್ತ್ರಿಗಳು ನಿದರ್ಶಿಸಿರುವುದು ಹಿಂದೆ ಹೇಳಿದ ಒಗ್ಗರಣೆ ಚಟಪಟಿಸಿದವರ ದೃಷ್ಟಿಗೆ ಬಿದ್ದಂತಿಲ್ಲ.

ವೈದಿಕ ಭಾರತದ ವೃತ್ತಿನಿಷ್ಠವಾದ ವರ್ಣವಿಭಾಗದಂಥ ಜನವರ್ಗೀಕರಣವನ್ನು ಎಚ್.ಜಿ.ವೆಲ್ಸ್, ಗೆರಾಲ್ಡ್ ಹರ್ಡ್ ಮುಂತಾದ ಸಮಾಜ ಸುಧಾರಕರು ಮಾನವ ವರ್ಗದಲ್ಲಿ ಸ್ಥೈರ್ಯ, ಶಾಂತಿ, ಸೌಖ್ಯಗಳು ಚಿರಕಾಲ ಉಳಿಯಬೇಕಾದರೆ ಅಗತ್ಯವೆಂದು ಹೇಳಿದ್ದುಂಟು. ಅವು Professional Guilds ವೃತ್ತಿ ಸಂಘಗಳಾಗುವುದಂತೂ ಪ್ರಜಾಪ್ರಭುತ್ವ ಪೋಷಕ. ಆನುವಂಶಿಕತೆಯು ಅನಪವಾದಾತ್ಮಕವಾಗದಂತೆ ನೋಡಿಕೊಳ್ಳದೆ ಹೋಗಿ ವರ್ಣವು ಜಾತಿನಿರ್ಮಾಣಕ್ಕೆಡೆಗೊಟ್ಟು ಕೆಲ ಅಪಾಯಗಳನ್ನು ಹಿಂದು ಸಂಸ್ಕೃತಿಗೆ ತಂದೊಡ್ಡಿದ್ದು ಮಧ್ಯಯುಗೀನ ಇತಿಹಾಸದಲ್ಲಿ. ಆದುದರಿಂದ Hinduism in its prestine purity–ಶುದ್ಧವಾದ ಮೂಲಭೂತ ಹಿಂದು ಸಂಸ್ಕೃತಿಯು ಜಾಗತಿಕ ಸಂಸ್ಕೃತಿ ಎನ್ನಿಸುವಷ್ಟು ಸುವ್ಯವಸ್ಥಾಪಕ ವ್ಯವಹಾರ ಸೂತ್ರಗಳಿಂದ ಒಡಗೂಡಿರುವುದರಿಂದ ಅದರ ಸುತ್ತ ಬೆಳೆದ ಪಾಚಿಯನ್ನು ಕಿತ್ತೆಸೆದು ಆಧುನಿಕ ಭಾರತೀಯನು ಅಭ್ಯಸಿಸಿ ಆಚರಣೆಗೆ ತರುವುದೊಂದೇ ನಮ್ಮ ರಾಷ್ಟ್ರವನ್ನು ಸ್ಥಿರವಾದ ಬುನಾದಿಯ ಮೇಲೆ ಚಿರಸ್ಥಾಯಿಯೂ ಬಲಿಷ್ಠವೂ ಆಗಿ ಬೆಳೆದು ನಿಲ್ಲುವಂತೆ ಮಾಡೀತು. ೧೦ ಸಾವಿರ ವರ್ಷಗಳಿಂದ ಪರರಾಷ್ಟ್ರಗಳ ಮೇಲೆ ಆಕ್ರಮಣ ಮಾಡದೆ ಕೇವಲ ಅಹಿಂಸಾತ್ಮಕ ಸಾಂಸ್ಕೃತಿಕ ಪ್ರಚಾರಬಲದಿಂದಲೇ ಪರರಾಷ್ಟ್ರಗಳಿಂದ ಗೌರವ ಪಡೆದು, ದುರ್ದೈವದಿಂದ ಬ್ರಿಟಿಷ್ ಆಳ್ವಿಕೆಗೆ ತುತ್ತಾದರೂ ತನ್ನ ಸ್ವತ್ವವನ್ನು ಪೂರ ಕಳೆದುಕೊಳ್ಳದಿರುವ ಭಾರತಿಯನ್ನು ಗುರುತಿಸುವ ಮತ್ತು ಹಾಗೆ ಗುರುತಿಸಿ ಪೋಷಿಸುವ ಪ್ರವೃತ್ತಿಯೊಂದೇ ರಾಷ್ಟ್ರೋತ್ಥಾನಕ್ಕೆ ಕಾರಣವಾದೀತಲ್ಲದೆ, ವಿದೇಶಗಳಲ್ಲಿರುವ ಸಾಂಸ್ಕೃತಿಕ ಸಿದ್ಧಾಂತಗಳ, ಆಚಾರಗಳ, ವಿಲಾಸಗಳ ಪ್ರಾಚುರ್ಯದಲ್ಲಿ ಮಗ್ನವಾಗುವ ಪ್ರವೃತ್ತಿಯಲ್ಲ.

"A joy in life's pursuits is evident from the earliest vedic period and is to be traced in the multifariousness of Indian culture and the colourful Indian history itself which has left Hindus one of the ancient races still virile among nations and capable of assimilation without itself becoming extinct–ಪ್ರಾಚೀನತಮ ವೈದಿಕ ಯುಗದಿಂದಲೂ ಜೀವನದ ವಿವಿಧ ವೃತ್ತಿಗಳನ್ನು ಅನುಸರಿಸುವುದರಲ್ಲಿ ಸಂತೋಷ ಜನರಲ್ಲಿದೆ ಎಂಬುದನ್ನು ಭಾರತೀಯ ಸಂಸ್ಕೃತಿಯ ವಿವಿಧ ಸ್ತರಗಳಲ್ಲಿಯೂ ಅದರ ಇತಿಹಾಸದ ವರ್ಣರಂಜಿತತೆಯಲ್ಲಿಯೂ ಪ್ರಾಚೀನ

ಕುಲಗಳಲ್ಲಿ ಒಂದಾದ ಹಿಂದುಕುಲವನ್ನಿನ್ನೂ ತೇಜಸ್ವಿಯನ್ನಾಗಿ ಉಳಿಸಿರುವುದರಲ್ಲಿಯೂ ತಾನು ನಷ್ಟ ಹೊಂದದೆ ಅದು ಹೊರಗಿನ ಸಾಂಸ್ಕೃತಿಕ ಅಂಶಗಳನ್ನು ಜೀರ್ಣಿಸಿಕೊಂಡಿರುವುದರಲ್ಲಿಯೂ ಕಾಣಬಹುದು" ಎಂದು ಹೇಳಿರುವುದರ ಜೊತೆಗೇ "The racial and religious hotch-potch which is India – ಭಾರತ ಕುಲ–ಮತಗಳ ಒಂದು ಕಲಸುಮೇಲೋಗರ" ಎಂದು ತತ್ವಶಾಸ್ತ್ರದ ಪದಾರ್ಥಕೋಶ ("The Dictionary of philosophy, P.144) ಹೇಳಿರುವುದನ್ನು ಗಮನಿಸಿದರೆ ಭಾರತೀಯ ರಾಷ್ಟ್ರೀಕರಣದ ಐತಿಹಾಸಿಕ ಅಗತ್ಯ ಈಗ ಎಷ್ಟಿದೆ ಎಂಬುದರ ಅರಿವಾಗುವುದು. ವಿದೇಶೀಯರಿಗೆ ಕಲಸುಮೇಲೋಗರವಾಗಿ ಕಾಣುವ ಭಾರತವು ಉಕ್ತಸತ್ಯವನ್ನು ಸಾಕಷ್ಟು ಚೆನ್ನಾಗಿ ಕಾಣದಿರುವುದೇ ಅದರ ಇಂದಿನ ಅಪ್ರಗತಿಶೀಲ ವ್ಯವಹಾರಗಳಿಗೆ ಕಾರಣ. ವ್ಯಾಪಾರವೂ ದ್ರೋಹಚಿಂತನವೇ, ರಾಜಕಾರಣವೂ ದ್ರೋಹಚಿಂತನವೇ– ದ್ರೋಹ ಕಾರ್ಯವೇ ಎನ್ನಿಸುವಂತಾಗಲು ಭಾರತೀಯರಲ್ಲಿ ರಾಷ್ಟ್ರೀಯತ್ವದ ಕಲ್ಪನೆ ಏಕರೂಪವಾಗಿಲ್ಲದುದೇ ಕಾರಣ. ಸಾಂಸ್ಕೃತಿಕ ಐಕರೂಪ್ಯವಿಲ್ಲದ ಯಾವ ದೇಶದ ರಾಷ್ಟ್ರತ್ವವೂ ಸುಸಂಬದ್ಧ, ಸುದೃಢ, ದಕ್ಷವಾದ ಅರ್ಥಸಾಧನ ಎಂದೆನ್ನಿಸದು. ಹಿಂದು ಧರ್ಮದ ಮತಾಚಾರವನ್ನಲ್ಲ, ಅದರ ಸಾಂಸ್ಕೃತಿಕ ಮೌಲ್ಯಗಳನ್ನು ಸರ್ವಗ್ರಾಹ್ಯವನ್ನಾಗಿ ಕಾರ್ಯತಃ ಪ್ರಚುರಪಡಿಸದೆ ಹೋದರೆ ಭಾರತವು ಯಾದವಿಯಲ್ಲಿ ಬಿದ್ದು ಅಲ್ಪಕಾಲದಲ್ಲೇ ಮೃತಪ್ರಾಯವಾಗುವುದು. ಕರ್ಮ, ಪುನರ್ಜನ್ಮ, ಮೋಕ್ಷ ಸಿದ್ಧಾಂತಗಳಲ್ಲಿರುವ ನಂಬಿಗೆ ಭಾರತೀಯ ಸಂಸ್ಕೃತಿಯ ಗಣ್ಯ ಸಾಧಾರಣಾಂಶ; ಇವುಗಳಿಗೆ ಆತ್ಮದ ಅಮರತ್ವವು ಅಡಿಗಲ್ಲು. ಬಾಳಿನಲ್ಲಿರುವ ದುಷ್ಟ ಅಂಶಗಳಿಂದ ಮುಕ್ತವಾಗುವ ಯೋಜನೆ ಇಲ್ಲಿ ಜೀವನಯೋಜನೆ. ವ್ಯಕ್ತಿಮನಃ ಸಂಸ್ಕರಣ ಮತ್ತು ಸಾಮಾಜಿಕ ಆವರಣದ ಸಂಸ್ಕರಣಗಳೆರಡೂ ಜೀವನ್ಮುಕ್ತಿಗೆ ಅಗತ್ಯ. ಸಾಂಸ್ಕೃತಿಕ ಆದರ್ಶಗಳ ತಾರತಮ್ಯಾನುಸಾರ ನಡೆಯುವ ರಾಜ್ಯಭಾರವು ಉಭಯ ಸಂಸ್ಕರಣಕ್ಕೂ ಆಧಾರ. ಸಾಮಾನ್ಯ ಅಥವಾ ಶಾಶ್ವತ (ಸನಾತನ) ಎನ್ನಿಸಿದ ಪಂಚ ಮಹಾಧರ್ಮಗಳೇ ಉಕ್ತ ಆದರ್ಶಗಳ (ಪುರುಷಾರ್ಥಗಳ) ಸಮನ್ವಯದ ಸೇತು. ಅವುಗಳನ್ನು ಪ್ರತಿಯೊಬ್ಬ ಭಾರತೀಯನೂ ತನ್ನ ದೈನಂದಿನ ಜೀವನ ವ್ಯವಹಾರದಲ್ಲಿ ವ್ಯಕ್ತಪಡಿಸುವ ರೀತಿಯಲ್ಲಿ ಸಾಮರೂಪ್ಯವನ್ನು ತರುವುದೇ ಭಾರತೀಕರಣ. ಮುಸಲ್ಮಾನರೂ ಕ್ರೈಸ್ತರೂ ಸಾರ್ವಜನಿಕ ಜೀವನದಲ್ಲಿ ಸರ್ವಗ್ರಾಹ್ಯವಾದ ಆಚಾರ ನಿಯಮಗಳನ್ನು ಅವರಿಗಿಂತ ಸಾವಿರಾರು ವರ್ಷಗಳ ಹಿಂದಿನಿಂದ ಹುಟ್ಟಿ ಬೆಳೆದು ನಿಂತ ಹಿಂದುಗಳಿಂದ ಕಲಿಯದಿರುವುದು ಲಜ್ಜಾಸ್ಪದವೆಂಬುದಕ್ಕೆ ಇಂದಿನ ನಮಸ್ಕಾರ ಪದ್ಧತಿಗಳ ವೈವಿಧ್ಯವನ್ನೇ ಉದಾಹರಣೆಯನ್ನಾಗಿ ತೆಗೆದುಕೊಂಡರೆ ಸಾಕು. ಸಲಾಮು–ಸೆಲ್ಯೂಟುಗಳಿರುವ ವರೆಗೆ ಭಾರತವೊಂದು ರಾಷ್ಟ್ರವೆನ್ನಿಸದು. ತಮ್ಮ ನಮಸ್ಕಾರಗಳನ್ನೂ ಅಂಥ ಇತರ ಸದಾಚಾರಗಳನ್ನೂ ವೇಷ–ಭಾಷೆಗಳನ್ನೂ ಬಿಡುವ ಹಿಂದುಗಳು ಅಕ್ಕಲಗೇಡಿಗಳಲ್ಲದೆ ರಾಷ್ಟ್ರಸೂತ್ರಜ್ಞರಲ್ಲ. ಈ ಬಾಹ್ಯ ಸಾಮರೂಪ್ಯವನ್ನೂ ಒಲ್ಲದ "ಭಾರತೀಯರು" ಆಂತರಿಕ ಸಾಂಸ್ಕೃತಿಕ ಸಾಮರೂಪ್ಯವನ್ನು ಸ್ವಾಗತಿಸಿಯಾರೇನು? ಅಂಥವರ ಭಾರತೀಯತೆಯ ಕಿಮ್ಮತ್ತೆಷ್ಟು? ಅವರು ವಿದೇಶೀಯರು ದಾಳಿಮಾಡುವಾಗ ಅವರ ಪಂಚಮದಳವಾಗದೆ ಉಳಿದಾರೇನು? ಇಷ್ಟೂ ತಿಳಿಯದವರು

ಭಾರತದ ರಾಜ್ಯಭಾರವನ್ನು ನಡೆಯಿಸಿದರೆ ಅದರ ಸ್ವಾತಂತ್ರ್ಯ – ಶಾಂತಿಗಳು ಹಿಂದುಗಳನ್ನು ಶವಗಳನ್ನಾಗಿ ಪರಿವರ್ತಿಸಿ ಕಾಲಕ್ರಮೇಣ ಪರದೇಶೀಯರಿಗೆ ಅಧೀನವಾಗುವುವು. ತಮಗೆ ತಿಳಿಯದಂತೆಯೇ ತಮ್ಮ ಜೀವನ ಸಂಸ್ಕಾರಗಳ ಮೇಲೆ ಹಿಂದು ಸಂಸ್ಕೃತಿಯು ಬೀರಿದ ಸತ್‌ಪ್ರಭಾವವನ್ನು ಲೆಕ್ಕಿಸದ, ಮನ್ನಿಸದ, ತಿಳಿದು ಕೃತಜ್ಞರಾಗದ ಅಹಿಂದುಗಳನ್ನು ಎಲ್ಲೆಂದರಲ್ಲಿ ಈಗ ಎತ್ತಿ ತೋರಿಸಬಹುದು. ಇದೂ ರಾಷ್ಟ್ರೀಯ ಸಂಸ್ಕಾರದ ಒಂದು ನ್ಯೂನತೆಯೇ. ಪ್ರಜ್ಞೆಯಲ್ಲಿ ಜಾಗರಿತವಾಗಿ ಇರದ ಯಾವ ಭಾವವೂ ಅರ್ಥಪೂರ್ಣ ಎಂದೆನ್ನಿಸದು. ಹಾಗೆ ಜಾಗರವನ್ನು ಉಂಟುಮಾಡುವುದೂ ಭಾರತೀಕರಣದ ಒಂದು ಶೈಕ್ಷಣಿಕ ಅಂಶ.



೫

# ಆಭಾಸಿಕ ಹಿಂದುಗಳು

ವ್ಯಕ್ತಿ ಸ್ವಾರ್ಥದ ಭಾರದಲ್ಲಿ ಕುಗ್ಗಿದ ಕುತ್ತಿಗೆಗಳನ್ನುಳ್ಳ ಆಭಾಸಿಕ ಹಿಂದುಗಳ ರಾಜ್ಯಭಾರದಲ್ಲಿ ರಾಜ್ಯವೇ ಅವರಿಗೆ ಭಾರವಾಗಿ ಹೊರಲಾರೆವೆಂದು ಅವರು ಕೈಯೆತ್ತಿದವರಿಗೆ ಒಂದು ದಿನ ಸ್ವಾರ್ಥಭೋಗಕ್ಕಾಗಿ ಅದನ್ನು ಕೊಟ್ಟೇ ಬಿಡುವುದು ಖಂಡಿತ. ಈ ಮೋಹಾಂಧತೆಯಿಂದ ಅವರನ್ನು ಪಾರುಮಾಡುವುದೂ ಭಾರತೀಕರಣದ ಒಂದು ಮಹೋದ್ದೇಶ. ಹಿಂದುಸ್ತಾನವೆಂಬ ಹೆಸರನ್ನು ಭಾರತವೆಂದು ಕರೆಯಹೊರಟಲ್ಲೇ ಸ್ವಾತಂತ್ರ್ಯೋತ್ತರ ಕಾಲದ ಸಂವಿಧಾನ ನಿರ್ಮಾತರು ತಮ್ಮ ಕ್ಲೈಬ್ಯವನ್ನು ಸ್ವಲ್ಪ ಹೊರಗೆಡಹಿದ್ದು ಸೂಚಿತವಾಗಿದೆ. ಅಂಥ ಕ್ಲೈಬ್ಯದ ಪೋಷಣೆಯನ್ನೇ ಈ ವರೆಗೂ ಮಾಡುತ್ತ ಬಂದುದರಿಂದಲೇ ಜಾತೀಯ ದಂಗೆಗಳು ಪಾಕಿಸ್ತಾನ ರಚನೆಯಾದ ಮೇಲೂ ಹಿಂದುಸ್ತಾನದಲ್ಲಿ ಹೆಚ್ಚುತ್ತ ಹೋಗಲು ಕಾರಣ. ಅಲ್ಪಸಂಖ್ಯಾತರೆಂಬ ಸೋಗಿನಲ್ಲಿ ವಿಶೇಷ ಹಕ್ಕುಗಳನ್ನು ಅನುಭವಿಸಲು ಅಹಿಂದುಗಳಿಗೆ ಅವಕಾಶಕೊಟ್ಟದ್ದು ಅರಾಷ್ಟ್ರೀಯ. “ಹಿಂದುಕೋಡು” “ಇಂಡಿಯಾ ಕೋಡಾ”ಗದುದು ಅದಕ್ಕೊಂದು ನಿದರ್ಶನ. ಸಾಂಸ್ಕೃತಿಕ ಏಕೀಕರಣವನ್ನು ವಿರೋಧಿಸುವ ಹಿಂದುಗಳು ಭಾರತೀಯರೆಂದು ಯಾವ ಬಾಯಿಂದ ಹೇಳಲು ಸಾಧ್ಯ? ಎಲ್ಲವುದಕ್ಕೂ ಮತದ ನೆವವನ್ನೊಡ್ಡಿ ತಮ್ಮ ಪ್ರತ್ಯೇಕತೆಯನ್ನು ಕಾಯ್ದುಕೊಂಡು ಹೋಗುವ ಪ್ರವೃತ್ತಿಯನ್ನು ಅಲ್ಪಮತೀಯರಲ್ಲಿ ಬೆಳೆಯಿಸುವ ರಾಜ್ಯಭಾರವು ಅರಾಷ್ಟ್ರೀಯ, ವಿದೇಶೀಯ. ಮಕ್ಕಳಿಂದ “ಟಾಟಾ” ಮಾಡಿಸುವ ಸ್ವಾಭಿಮಾನಶೂನ್ಯ ಹಿಂದುಗಳು ರಾಷ್ಟ್ರೀಯರಲ್ಲವೇ ಅಲ್ಲ; ಅವರು ಪಾರತಂತ್ರ್ಯಕ್ಕೇ ಪಾತ್ರರು. ಅವರಿಗೆ ರಾಜ್ಯಾಧಿಕಾರ ಸಿಗುವಂತೆ ಮಾಡಿದ್ದು ಹಿಂದುಗಳ ಅಜ್ಞಾನ, ಆಲಸ್ಯ, ಅಪಕಲ್ಪನೆಗಳು. ಅಲ್ಪಸಂಖ್ಯಾತರೆಂಬ ವರ್ಗೀಕರಣಕ್ಕಿಲ್ಲಿ ಅವಕಾಶವಿಲ್ಲ. ಸಮಾನ ಹಕ್ಕುಬಾಧ್ಯತೆಗಳನ್ನುಳ್ಳ ಪ್ರಜೆಗಳಲ್ಲಿ ಅಲ್ಪಸಂಖ್ಯಾತರೆಲ್ಲಿಂದ ಹಾರಿ ಬಂದರು? ಹಿಂದುಳಿದ–ಮುಂದುಳಿದ ವರ್ಗಗಳೆಲ್ಲಿಂದ ಓಡಿ ಬಂದವು? ಧನಿಕ–ದರಿದ್ರರೇಕೆ ಹುಟ್ಟಿದರು? ಸ್ತ್ರೀ–ಪುರುಷ ವೈಷಮ್ಯದ ಪ್ರಚಾರ ಹೇಗೆ ಉಳಿಯಿತು?

ಭಾರತದಲ್ಲಿ ಕ್ಷತ್ರಿಯರು ರೂಪ, ಲೇಖ, ಗಣನೆ, ವ್ಯವಹಾರ, ದಂಡನೀತಿ, ವಾರ್ತೆ, ಆನ್ವೀಕ್ಷಿಕಿ, ಪುರಾಣ, ಇತಿಹಾಸ, ಧನುರ್ವಿದ್ಯೆ, ಅರ್ಥಶಾಸ್ತ್ರ, ಧರ್ಮಶಾಸ್ತ್ರಗಳನ್ನು

ಕಲಿತಿರುತ್ತಿದ್ದರು. ನಮ್ಮ ಪ್ರಜಾಪ್ರತಿನಿಧಿಗಳಿಗೆ ಈ ಯಾವ ಶಾಸ್ತ್ರದ ಜ್ಞಾನ ಎಷ್ಟು ಇರುತ್ತದೆ? ೨ ವಿಷಯಗಳನ್ನೂ ಆಳವಾಗಿ ಅಭ್ಯಸಿಸಿರಬೇಕೆಂದಿಲ್ಲದೆ, ೨೦ ರಿಂದ ೫೦ ಸಾವಿರ ರೂಪಾಯಿಗಳನ್ನು ಚುನಾವಣೆಗಾಗಿ ವ್ಯಯಿಸಲು ಸಮರ್ಥನಾಗಿದ್ದರೆ, ಹಾಗೆ ವ್ಯಯಿಸಿ ಗೆದ್ದರೆ – ಒಬ್ಬನಿಲ್ಲಿ ಈಗ ಪ್ರಜಾಪ್ರತಿನಿಧಿ, ಶಾಸಕ, ಕ್ಷತ್ರಿಯ ಎನ್ನಿಸಿಕೊಳ್ಳಬಲ್ಲ! ರೂಪಾಯಿ ಪೈಲವಾನಗಿರಿಯನ್ನು ಪ್ರತಿನಿಧಿತ್ವದ ಅರ್ಹತೆಯೆಂದು ಗಣಿಸುವ ಪ್ರಭುತ್ವವು ಭಾರತೀಯವೆಂತಾದೀತು? ರೂಪಾಯಿ ವೀರರು ರಾಷ್ಟ್ರವೀರರಲ್ಲ. ಅವರ ಪಕ್ಷದ ರಾಜನೀತಿ ಪ್ರಸ್ಥಾನದ ಹೆಸರು ನಿರರ್ಥಕ. ಏಕೆ? ಅವರು ಪರರ ರೂಪಾಯಿ ಹಾಕಿ ಸ್ವಂತಕ್ಕಾಗಿ ರೂಪಾಯಿ ತೆಗೆಯಲು ಮಾತ್ರ ಬಲ್ಲವರು!

ಅನೇಕ ಪ್ರತಿನಿಧಿಗಳ ಅವಿದ್ಯೆ, ಅಪವಿದ್ಯೆಗಳ ದೆಸೆಯಿಂದ ಗಣರಾಜ್ಯಭಾರವು ಹೆಗ್ಗಣ ರಾಜ್ಯಭಾರವಾಗಲು ಶುರುವಾದದ್ದು ಅನುಭವಸಿದ್ಧ. ಚುನಾಯಿತರಾದ ಮರುದಿನ ಅವರು "ಹೊಳೆದಾಟಿದ ಮೇಲೆ ಅಂಬಿಗರ ಮಿಂಡ" ಎಂಬ ನೀತಿಯನ್ನು ಹಿಡಿದು ಕೊತ್ವಾಳಗಿರಿ ನಡೆಸುವುದು ಆಡಳಿತವನ್ನು ಅಸ್ತವ್ಯಸ್ತಗೊಳಿಸಿದೆ. ರಾಷ್ಟ್ರೀಯತೆ ಅವರಲ್ಲಿದ್ದಿದ್ದರೆ ಪ್ರಾಮಾಣಿಕತೆ, ಉತ್ಸಾಹ ಅವರಲ್ಲಿ ಪುಟಿದೆದ್ದು ಪ್ರಶಾಸನವು ದೇಶಶೋಷಕವಾಗದಂತೆ ನೋಡಿಕೊಳ್ಳುತ್ತಿದ್ದರು. ರಾಷ್ಟ್ರಭಕ್ತಿಯು ರಾಷ್ಟ್ರಧರ್ಮಶಾಸ್ತ್ರದ ಮೂಲತತ್ತ್ವ. ಅದರ ಅಭಾವವು ಸ್ವಭಾವವಾಗಿರುವುದು ತಪ್ಪಲು ಹುರಿಯಾಳಾಗಲು ಉಕ್ತ ದ್ವಾದಶ ವಿದ್ಯೆಗಳ ಆಧುನಿಕ ಪರ್ಯಾಯಗಳನ್ನು ಕಲಿತವರಿಗೆ ಮಾತ್ರ ಅರ್ಹತೆ ಇದೆಯೆಂಬ ಸಾಂವಿಧಾನಿಕ ತಿದ್ದುಪಡಿಯಾಗಬೇಕು. ಅಲ್ಲಿಯವರೆಗೆ ನಮ್ಮ ಪ್ರಭುತ್ವವು ಪ್ರಜಾಪ್ರಭುತ್ವ, ರಾಷ್ಟ್ರೀಯ ಪ್ರಭುತ್ವ, ನಮ್ಮ ಪ್ರಭುತ್ವ ಎನ್ನಿಸದು.

ಹಿಂದೆ, ಅಧಿಕಾರಿಗಳಾಗಿದ್ದು ಸರಿಯಾಗಿ ಲೆಕ್ಕವನ್ನಿಡದಿದ್ದರವರೂ ಅವರ ಮಕ್ಕಳೂ ಅವರ ಚಿಕ್ಕಪ್ಪ ದೊಡ್ಡಪ್ಪ ಅತ್ತೆ ಮಾವ ಅಣ್ಣತಮ್ಮಂದಿರೇ ಮುಂತಾದವರೂ, ಅಂತಹರೊಡನೆ ವಿವಾಹ ಸಂಬಂಧ ಮಾಡಿದವರೂ, ಅವರ ಸ್ನೇಹಿತರೂ, ಅವರ ಅಳಿಯಂದಿರೂ, ಮಹಾಪಾತಕಗಳನ್ನೂ ಮಾಡಿದವರೂ, ಪ್ರಾಯಶ್ಚಿತ್ತಮಾಡಿಕೊಳ್ಳುವವರೆಗೂ ಅಂತಹವರ ಸ್ನೇಹಿತರೂ, ಲಂಚ ತೆಗೆದುಕೊಂಡವರು ಪ್ರಾಯಶ್ಚಿತ್ತ ಮಾಡಿಕೊಂಡರೂ ಚುನಾವಣೆಗೆ ಹಿಂದೆ ಹೇಗೋ ಇಂದೂ ಹಾಗೇ ಹುರಿಯಾಳಾಗಿ ನಿಲ್ಲಲು ಅನರ್ಹರೆಂದಾಗಬೇಕು. ಈ ಅಪಾತ್ರತಾ ನಿಯಮವು ರಾಷ್ಟ್ರಭದ್ರತೆಯ ಒಂದು ಮಹಾಸೂತ್ರ. ಲಂಚದ ದರ ಏರುತ್ತಿರುವಾಗ ಯಾವ ಪ್ರಭುತ್ವವೂ ರಾಷ್ಟ್ರೀಯವೆನ್ನಿಸದು; ಸರಕಾರಿ ಧನದ ಹಾಗೂ ವಸ್ತುವಾಹನಗಳ ದುಂದು, ದುರುಪಯೋಗ ಅಧಿಕವಾಗುತ್ತಿರುವುದೂ ಅಭಾರತೀಯ. ದಿನಕ್ಕೆ ೩೦ ಆಣೆಗಳನ್ನು ಖರ್ಚುಮಾಡಲಾರದ ಅಸಂಖ್ಯಾತರಿರುವಾಗ ಪ್ರಧಾನಿಗಳು ೩೦ ಸಾವಿರ ರೂಪಾಯಿಗಳನ್ನು ದಿನವೂ ವೆಚ್ಚಮಾಡುವರಂತೆ! ಅಕ್ಬರನೂ ಕೃಷ್ಣದೇವರಾಯನೂ ಇವರ ಮುಂದೆ ಚಿಕ್ಕವರಾಗಬೇಕಾಯಿತು. ರಾಷ್ಟ್ರಕ್ಕೆ ರಾಜ್ಯಭಾರವೇ ತಲೆಭಾರವಾಗುವಂತೆ ನೋಡಿಕೊಂಡ, ತಲೆಶೂಲೆಯನ್ನು ಪ್ರಜೆಗೊದಗಿಸಿದ ಪ್ರತಿನಿಧಿಗಳ ಸಂಸ್ಕಾರವು ರಾಷ್ಟ್ರೀಯವಾಗಿರುವುದು ನಂಬಲರ್ಹವಾದೀತೇ?



# ೬

# ಭಾರತೀಯ ಆದರ್ಶಗಳ ಶಿಕ್ಷಣ

ವಿದೇಶೀಯ ವಿದ್ಯಾಭ್ಯಾಸ ಪದ್ಧತಿಯಿಂದ ಭಾರತೀಯರು ವಿದೇಶಗಳಲ್ಲಿರುವ ವ್ಯವಹಾರ ಪದ್ಧತಿಗಳನ್ನು ಸ್ವೀಕರಿಸಿ ಪ್ರಗತಿಶೀಲರಾಗುವರೆಂಬ ಭ್ರಾಂತಿಯನ್ನು ಅವುಗಳಿಂದಾದ ನಷ್ಟಗಳಿಂದ ಬಿಡತಕ್ಕದ್ದಗತ್ಯ. ಅಲ್ಲಿ ಸಲ್ಲುವುದೆಲ್ಲವೂ ಇಲ್ಲಿ ಸಲ್ಲುವುದೆಂಬ ಭ್ರಮೆಯನ್ನು ಬಿಡದೆ ಹೋದರೆ ಭಾರತೀಯ ಸಂಘಟನೆಯೆಂದೂ ಚಿರಸ್ಥಾಯಿಯಾಗಿ, ಸ್ವತಂತ್ರವಾಗಿ, ರಾಷ್ಟ್ರಾಭಿಮಾನಿಯಾಗಿ ಉಳಿಯಲಾರದು. ಈ ಅಂಶವನ್ನು ನಮ್ಮ ರಾಜಕೀಯ ಮುಖಂಡರು ಹೃದ್ಗತ ಮಾಡಿಕೊಳ್ಳದಿರುವ ವರೆಗೆ ಭಾರತವು ಅನೇಕಾನೇಕ ಕಷ್ಟ, ನಷ್ಟ, ಭ್ರಷ್ಟಾಚಾರಗಳ ತವರುಮನೆಯಾಗಿಯೇ ಉಳಿಯುವುದು. ಭಾರತವನ್ನು ಭಾರತವನ್ನಾಗಿ ಸಾವಿರಾರು ವರ್ಷಗಳ ಕಾಲ ಉಳಿಸಿಕೊಂಡು ಬಂದದ್ದು ನಮ್ಮ ಪಾಠಶಾಲಾ ಪದ್ಧತಿ. ಗುರುಕುಲ ಪದ್ಧತಿ. ಅದರ ತಿರಸ್ಕಾರದ ಫಲವೀಗ ವಿದ್ಯಾರ್ಥಿಕ್ಷೋಭೆಯಲ್ಲಿ ಪರಿಣಮಿಸಿದೆ. ವಿದ್ಯಾರ್ಥಿತ್ವ ಮುಗಿದ ಮೇಲೆ ಅವರಲ್ಲನೇಕರು ಮನಃಶಾಸ್ತ್ರ ಹೇಳಿದ ವಿವಿಧ ಮನೋರೋಗಿಗಳಾಗುವುದು ಕ್ರಮಪ್ರಾಪ್ತ. ಈ ರೋಗಿಸಂವರ್ಧನ ಸಂಪ್ರದಾಯವನ್ನು ರಾಷ್ಟ್ರಸಂಘಟನೆಯೆಂದು ತಿಳಿದವರು ಬುದ್ಧಿಕ್ಷಯ (Retardation) ಎಂಬ ರೋಗಕ್ಕೆ ತುತ್ತಾದವರು. ಭಾರತದ ಬಹುಸಂಖ್ಯಾತ ರಾಜಕಾರಣಿಗಳಿಂದು ಇಂಥ ರೋಗಿಗಳು. ರಾಷ್ಟ್ರಪ್ರೇಮಸಂವರ್ಧನೆಯ ಅವರ ಪ್ರಯತ್ನಗಳೆಂದೂ ಜಯಶೀಲವಾಗಲಾರವು. ಅವರಿಗೇ ನಿಜವಾದ, ಆತ್ಮ ವಿಶ್ವಾಸಯುಕ್ತವಾದ ರಾಷ್ಟ್ರಪ್ರೇಮವನ್ನು ಬೆಳೆಯಿಸಿಕೊಳ್ಳಲಾಗಲಿಲ್ಲ. ಕ್ಷುದ್ರವಾದ ವ್ಯಕ್ತಿಕುಟುಂಬ ಸ್ವಾರ್ಥ ಅವರನ್ನು ಕುರುಡರನ್ನಾಗಿ ಮಾಡಿದೆ.

೧೬ ವರ್ಷಗಳಾದ ಪ್ರತಿಯೊಬ್ಬ ವ್ಯಕ್ತಿಗೂ ಭಾರತೀಯತೆಯ ಮಹಾದರ್ಶಗಳ ಅರಿವಿರಬೇಕು. "ವಿಜ್ಞಾನದಿಂದ ಸಂಸ್ಕೃತಿಯ ಮುಖ್ಯ ಚಿಹ್ನೆಗಳಾದ ನಿತ್ಯಾನಿತ್ಯ ವಸ್ತುವಿವೇಕ, ಇಹಾಮುತ್ರಭೋಗವಿರಾಗ, ಶಮದಮಾದಿ ಸಾಧನ ಸಂಪತ್ತಿ, ಮತ್ತು ಮುಮುಕ್ಷುತ್ವಗಳ ಸಾಧನೆಯು ಉಂಟಾಗಲಾರದು" ಎಂದ ಡಾ.ಎಸ್.ಶ್ರೀಕಂಠಶಾಸ್ತ್ರಿಗಳ ವಿವೇಕೋಕ್ತಿ ಇಲ್ಲಿ ಸ್ಮರಣೀಯ. ಉಕ್ತ ಚಿಹ್ನೆಗಳು ಸಂಘಟಿತ ಭಾರತೀಯ ಜೀವನದ ಯಶಸ್ಸಿನ ಮುದ್ರೆಗಳು. ನಿತ್ಯಾನಿತ್ಯ ವಸ್ತು ವಿವೇಕವಿಲ್ಲದುದರಿಂದಲೇ ಸಂಕುಚಿತ ಕುಟುಂಬೈಕನಿಷ್ಠತೆಯು ಮುಖಂಡರಲ್ಲಿ ಅನೇಕರನ್ನು ಹಾರ್ದಿಕವಾಗಿ ರಾಷ್ಟ್ರಹಿತವಿಮುಖರನ್ನಾಗಿ ಮಾರ್ಪಡಿಸಿದೆ.

ದೇಶದ್ರೋಹಿಗಳು ಪ್ರಥಮ ಪಂಕ್ತಿಯಲ್ಲಿರುವಾಗ ಉಳಿದ ಹಿಂದಿನ ಪಂಕ್ತಿಯವರೇನು ಮಾಡಬಲ್ಲರು? ವಿದೇಶೀಯರೇಕೆ ಹಾರ್ದಿಕ ಗೌರವವನ್ನು ನಮ್ಮ ರಾಷ್ಟ್ರಕ್ಕೆ ಕೊಟ್ಟಾರು? ವಿಜ್ಞಾನಿ, ಎಂಜಿನಿಯರ್, ಡಾಕ್ಟರ್, ಲಾಯರ್, ಶಿಕ್ಷಕ, ಆಡಳಿತಗಾರ, ಉದ್ಯಮಕರ್ತ, ವ್ಯಾಪಾರ ನಿರ್ವಾಹಕ, ಕೃಷಿಕ, ಭಿಕ್ಷುಕ, ಕೂಲಿಕಾರ, ನೌಕರ, ಮಂತ್ರೀಶ್ವರ, ಪಕ್ಷಾಧೀಶ, ಪಕ್ಷಾನುಯಾಯಿ ಎಂಬ ಪಂಚದಶವರ್ಗಗಳಲ್ಲೂ ಸಹಜೀವಿಗಳನ್ನು ವಂಚಿಸಿ ಸುಖಪಡುವ ಪ್ರವೃತ್ತಿಯು ಬೆಳೆಯುತ್ತ ಹೋಗಿರುವುದನ್ನು ಕಂಡರೂ ನಗ್ನನೃತ್ಯ, ಮಾಂಸಾಶನ, ಸುರಾಪಾನ, ಸ್ವೈರಕಾಮಸಂತರ್ಪಣಗಳನ್ನು ಮುಖಂಡರನೇಕರು ಸುಖಸಾಧನಗಳೆಂದು ಆರಾಧಿಸಿ ಆ ಮೂಲಕ ಜನಹಿತವಿಮುಖರಾಗುತ್ತಿರುವುದು ಸ್ಪಷ್ಟವಾದರೂ ಸದ್ಯದ ಶೈಕ್ಷಣಿಕ, ರಾಜಕೀಯ, ಆರ್ಥಿಕ, ಔದ್ಯಮಿಕ, ಕೃಷಿಕ ಸಂಘಟನೆಗಳನ್ನು ಪುನರ್ವಿಮರ್ಶಿಸ ಹೊರಡದೆ, ಕೇವಲ ಬೀದಿ ಕೂಗುಗಳಿಂದ ಚುನಾವಣೆಯನ್ನು ಮುಗಿಸಿ ಜನಜೀವನದ ಕಷ್ಟಗಳನ್ನು ಹೆಚ್ಚಿಸುತ್ತಿರುವುದು ರಾಷ್ಟ್ರೀಯ ಭಾವನೆ ಜನರಲ್ಲಿ ಬೆಳೆಯಿಸಲು ಎಂದೂ ಸಮರ್ಥವಾಗದು. ಸ್ವದೇಹದ ಅನಿತ್ಯತೆಯೇ, ಈ ದೇಶದಲ್ಲಿ, ಇಲ್ಲದವರ ಅರ್ಥಸಾಧನೆಗೆ ಉಳ್ಳವರು ಪ್ರಯತ್ನಿಸಲು ಸ್ಫೂರ್ತಿ ಕೊಡಬಲ್ಲ ಸತ್ಯ. ದೇಹಾತ್ಮಭಾವದ ಆರಾಧನೆಯಿಂದ ಇಲ್ಲೆಂದೂ ಸಂಸ್ಕೃತವೂ ಬಲಿಷ್ಠವೂ ಸಂಘಟಿತವೂ ಆದ ಸಮಾಜಜೀವನವು ರಾಷ್ಟ್ರೀಯವಾಗಿ ಸಿದ್ಧಿಸದು. ಸಾಮಾಜಿಕ ಮನೋಧರ್ಮದ ರಹಸ್ಯವು ದೇಶದಿಂದ ದೇಶಕ್ಕೆ ಭಿನ್ನವಾಗಿರುವುದು ಹಿಂದು, ಕ್ರೈಸ್ತ, ಇಸ್ಲಾಂ, ಯೆಹೂದಿ, ಬೌದ್ಧ ಸಾಂಸ್ಕೃತಿಕ ಉಪಾಧಿಗಳ ದೆಸೆಯಿಂದ ಸತ್ಯವಾಗಿದೆ. ಭಾರತವು ಈ ಪಂಚ ಸಂಸ್ಕೃತಿಗಳ ಸಮಾನ ಸರ್ವಾಧಿಕಾರವನ್ನು "ಸೆಕ್ಯುಲಾರಿಜಂ" ಎಂದು ತಿಳಿದದ್ದು ಶುದ್ಧ ತಪ್ಪು. ಅದರಿಂದ ಅದು ಸಿದ್ಧಿಸದೆ, ಸ್ವಜನದ್ರೋಹದ ಹಿಂದುತನವು ವಂಚಕ ಹಾಗೂ ಹೇಡಿಗಳ ಸಂತಾನವನ್ನು ಹೆಚ್ಚಿಸುವಂತಾಯ್ತು. ಮತಧಾರ್ಮಿಕ ಸಮಾನ ಸ್ವಾತಂತ್ರ್ಯವೆಂದರೆ ಸಾಂಸ್ಕೃತಿಕ ಸಮಾನಸ್ವಾತಂತ್ರ್ಯವಲ್ಲ. ಉಕ್ತ ಮತಧರ್ಮಗಳು ಕೇವಲ ಮತ ಧರ್ಮಗಳಾಗಿವೆಯೇ ಉಳಿದಿದ್ದರೆ ಅವುಗಳಿಂದ ಭಾರತಕ್ಕೆ ಯಾವ ಹಾನಿಯೂ ಆಗುತ್ತಿರಲಿಲ್ಲ; ಅವೀಗ ಸಾಂಸ್ಕೃತಿಕ ಮನಃಪ್ರಣಾಳಿಗಳಾಗಿ ಬಿಟ್ಟಿರುವುದರಿಂದ ಹಿಂದುತ್ವದಿಂದ ಮಾತ್ರ ಉಳಿಯಬಲ್ಲ ಭಾರತದ ರಾಷ್ಟ್ರೀಯತೆ ಇನ್ನೂ ಸಿದ್ಧಿಸದಂತಾಗಿದೆ. ಹಿಂದು ಸಾಂಸ್ಕೃತಿಕ ಮೌಲ್ಯಗಳನ್ನು ಗೌರವಿಸದ (ಕೇವಲ ಗೌರವಿಸಿದಂತೆ ನಟಿಸುವ) ತದಿತರರು ಯಾವಾಗಲೂ ಪಂಚಮದಲದವರೆಂದು ರಾಜತಂತ್ರಜ್ಞ ತಿಳಿದಿರಬೇಕು. ಸಾಂಸ್ಕೃತಿಕ ಮತಾಂತರವೊಂದೇ ಭಾವೈಕ್ಯ ಸಾಧಕ. ನಾನ್ಯಃ ಪಂಥಾ ವಿದ್ಯತೇಽಯನಾಯ.



# ೭

# ಸಾಂಸ್ಕೃತಿಕ ಏಕೀಕರಣ

"ನಾಗರೀಕತೆಯು ಅನುಕರಣೀಯ, ಆದರೆ ಸಂಸ್ಕೃತಿಯು ಅನನುಕರಣೀಯ" ಎಂದು ಡಾ.ಶಾಸ್ತ್ರಿಗಳು ಹೇಳಿರುವುದೂ ಇಲ್ಲಿ ಮನನೀಯ. ಸಂಸ್ಕೃತಿಯ (ಆಧ್ಯಾತ್ಮಿಕ) ಮೌಲ್ಯಗಳಲ್ಲಿ ಐಕರೂಪ್ಯವಿಲ್ಲದಲ್ಲಿ ಯಾವ ಒಂದು ದೇಶವೂ ಒಂದು ರಾಷ್ಟ್ರವೆಂದು ನ್ಯಾಯವಾಗಿ ಹೇಳಿಸಿಕೊಳ್ಳಲಾರದು. ಆತ್ಯಂತಿಕವಾಗಿ ಹಿಂದುವಿನ ಆತ್ಮವು ಬ್ರಹ್ಮ. ಇಸ್ಲಾಂ, ಯೆಹೂದಿ, ಕ್ರೈಸ್ತಾತ್ಮಗಳು ಬ್ರಹ್ಮೇತರ; ಬೌದ್ಧ – ಪಾರಸೀಕ ಆತ್ಮಗಳು ಹಿಂದು ಆತ್ಮಕ್ಕೆ ಪರಾಕಾಷ್ಠೆಯಲ್ಲಿ ಸರಿದೊರೆ. ಬ್ರಹ್ಮದ ವ್ಯಾಪ್ತಿಯಷ್ಟು ಹೆಚ್ಚಿನ ವ್ಯಾಪ್ತಿಯು ಜಗತ್ತಿನ ಇನ್ನಾವ ಕಲ್ಪನೆಗೂ ಇಲ್ಲ. ಬ್ರಹ್ಮವು (೧) ವಿಶ್ವಾತ್ಮ, (೨) ಋಕ್, (೩) ಪವಿತ್ರಬೋಧ, (೪) ವೇದ, (೫) ಓಂಕಾರ, (೬) ಬ್ರಹ್ಮಜ್ಞವರ್ಗ, (೭) ಬ್ರಹ್ಮಶಕ್ತಿ, (೮) ಬ್ರಹ್ಮೋಪಾಸನೆ, (೯) ಪಾವಿತ್ರ್ಯ, (೧೦) ಮುಕ್ತಿ, (೧೧) ಪವಿತ್ರ ಗ್ರಂಥ, (೧೨) ವೇದವ್ಯಾಖ್ಯೆ, (!೩) ಐಶ್ವರ್ಯ, (೧೪) ಆಹಾರ, (೧೫) ಒಬ್ಬ ಬ್ರಹ್ಮಜ್ಞ, ಬ್ರಹ್ಮಾನುಭವ ಸಂಪನ್ನ, (೧೬) ಸತ್ಯ. ಬ್ರಹ್ಮದ ಮುಖ್ಯಾರ್ಥವು ವಿಶ್ವಾತ್ಮಕತೆಯಾದುದರಿಂದ ಋಗಾದಿಗಳೆಲ್ಲವೂ ಅಂಥ ಅನುಭವ ಕೊಡಲು ಭಾರತೀಯನಿಗೆ ಸಾಧನಗಳು. ವಿಶ್ವಾತ್ಮಕತೆಯು ರಾಷ್ಟ್ರಾತ್ಮಕತೆಯನ್ನು ಗರ್ಭೀಕರಿಸಿಕೊಂಡೇ ಇದೆ; ಆದರೆ ಕುಟುಂಬಾತ್ಮಕತೆಯು ಅಥವಾ ಶರೀರಾತ್ಮಕತೆಯು ರಾಷ್ಟ್ರಾತ್ಮಕತೆಯನ್ನು ಒಳಗೊಂಡಿಲ್ಲ. ವಿಶ್ವಾತ್ಮನು ಅವ್ಯೆಯಕ್ತಿಕನಾದುದರಿಂದ ನಮ್ಮ ವ್ಯಕ್ತಿಸ್ವಾತಂತ್ರ್ಯವು ಯಾವಾಗಲೂ ಸಹಜೀವಿಸುಖಕ್ಕೇ ಪ್ರಾಧಾನ್ಯ ಕೊಡುತ್ತಿರುವ ಲಕ್ಷಣವುಳ್ಳದ್ದಾಗಿರಬೇಕು. ಅದೇ ನಿಜವಾದ ಹಿಂದು ಸ್ವಾತಂತ್ರ್ಯ. ಸಹಜೀವಿಯು ಹಿಂದುತ್ವವನ್ನು ಹೀಯಾಳಿಸುವವನಾಗಿರುವಾಗ ಅವನು ಸಾರ್ಥಕ ಅಸಹಜೀವಿಯೇ; ಆಗ ಅವನನ್ನು ಚತುರೋಪಾಯಗಳಿಂದ ಹಿಂದುಮನಸ್ಕನನ್ನಾಗಿ ಮಾಡಲೇಬೇಕಾದದ್ದು ಹಿಂದುವಿನ ಧರ್ಮ (ಕರ್ತವ್ಯ). ಇದು ಮತ ಧರ್ಮಾಂತರದ ಸ್ವರೂಪವುಳ್ಳದ್ದಲ್ಲ; ಸಾಂಸ್ಕೃತಿಕ ಸ್ವರೂಪವುಳ್ಳದ್ದು. ಅದನ್ನು ಇದೆಂದೂ ಇದನ್ನು ಅದೆಂದೂ ಭ್ರಮಿಸುವವರು ಮೂಢರು. ಮತಧರ್ಮವು ಸಂಸ್ಕೃತಿಯ ಒಂದು ಅಂಶವನ್ನು ಪ್ರಕಟಿಸುವ ಆಚಾರಪದ್ಧತಿ ಮಾತ್ರ; ಅದೇ ಇಡಿ ಸಂಸ್ಕೃತಿಯಲ್ಲ, ವಿಶಿಷ್ಟ ದೇವಭಕ್ತ ಸಂಬಂಧದ ಹಿಂದುಮತದ ಬಾಹ್ಯಾಚಾರದ ಒತ್ತಾಯಕ್ಕಿಲ್ಲಿ ಆಸ್ಪದವಿಲ್ಲ. ಅಂಥ ಆಚಾರದ ಒತ್ತಾಯ ಪದ್ಧತಿಯನ್ನು ಹಿಂದು ಸಂಸ್ಕೃತಿ – ನಾಗರಿಕತೆಗಳು ಎಲ್ಲಿಯೂ

ಹೇಳಿಲ್ಲ; ಈಗ ಹೇಳುತ್ತಲೂ ಇಲ್ಲ. ಆತ್ಮ (ಬ್ರಹ್ಮ) ಮೌಲ್ಯದ ಪರಮೋಚ್ಚತೆಯನ್ನು ಮನ್ನಿಸದವರು ಭಾರತೀಯ ಸಂಸ್ಕೃತಿಯ ಸದಸ್ಯರೆನ್ನಿಸಿಕೊಳ್ಳಲಾರರು. ಸಾಂಸ್ಕೃತಿಕ ಏಕೀಕರಣವಿಲ್ಲದ ರಾಷ್ಟ್ರವು ರಾಷ್ಟ್ರವೇ ಅಲ್ಲ; ಅಂಥ ರಾಷ್ಟ್ರದ ಒಕ್ಕಟ್ಟು ಎಂದೂ ಅವಲಂಬನೀಯವಾಗದು. ಅದರಲ್ಲಿರುವುದು ಅಭಾವೈಕ್ಯ!

ಅನನುಕರಣೀಯವಾದ ಭಾರತೀಯ ಅಥವಾ ಹಿಂದು ಸಂಸ್ಕೃತಿಯಲ್ಲಿ ಪರ ಸಾಂಸ್ಕೃತಿಕರನ್ನು ಅಂತರ್ಗತ ಮಾಡಿಕೊಳ್ಳುವುದರ ಜೊತೆಗೇ ಹಿಂದುಗಳಲ್ಲೇ ಅಪ್ರಬುದ್ಧರಿರುವುದರಂದ ಅವರಲ್ಲಿ ಆದರ್ಶ ಹಿಂದುತ್ವವನ್ನು ಜಾಗರಿತಗೊಳಿಸುವುದೂ ಸಂಘಟನೆಗೆ ಅತ್ಯಂತ ಅವಶ್ಯಕವಾದ ಪೂರ್ವ ಸಿದ್ಧತೆ. ನಾಗರಿಕತೆಯ ಶಿಸ್ತು ಮತ್ತು ಶಿಕ್ಷಣಪದ್ಧತಿಗಳು ಈ ಕಾರ್ಯಗಳನ್ನು ನೆರವೇರಿಸಬಲ್ಲವು. ಅರ್ಥಾಚಾರ, ರಾಜಕೀಯ ಆಚಾರ, ಜ್ಞಾನ ಸಂಗ್ರಹಾಚಾರಗಳು ನಾಗರಿಕತೆಯ ಶಿಸ್ತಿನ ಅಂಗಗಳು. ಅವುಗಳ ವಿವರಗಳ ಐಕರೂಪ್ಯವನ್ನು ರಾಷ್ಟ್ರೀಯ ಸರಕಾರವು ಎಲ್ಲ ನಾಗರಿಕರಿಗೂ ಕಲಿಸಬೇಕು. ಹಾಗೆ ಕಲಿಸಲೊಲ್ಲದ ಪ್ರಭುತ್ವವು ಪ್ರಜಾಪ್ರಭುತ್ವವೇ ಅಲ್ಲ. ಅದರ ಅಸ್ತಿತ್ವವೆಂದೂ ಸುಭದ್ರವಾಗದು. ಅಭಾರತೀಯ (ಅಹಿಂದು) ಶಿಸ್ತಿನ ಆಚಾರಗಳಿಂದ ಭಾರತೀಯರಲ್ಲಿ ಶಿಸ್ತು ಬೆಳೆಯದು. ಶಿಸ್ತು ಸಂಘಟನೆಯ ಬಾಹ್ಯಸಾಧನ. ರೋಮನ್ ಜಿಮ್ನೇಸಿಯಂ ಪದ್ಧತಿಯು ಭಾರತೀಯ ಜಟ್ಟಿಗಳ ನೈತಿಕ ವ್ಯಕ್ತಿತ್ವವನ್ನು ಎಂದೂ ಇಲ್ಲಿ ರೂಪಿಸಲಾರದು. ಅನುಕೃತ ನಾಗರಿಕತೆಯು ಸಂಸ್ಕೃತಿಯ ಆಭಾಸವನ್ನಷ್ಟೇ ಪೋಷಿಸೀತು. ಒಂದು ಸಂಸ್ಕೃತಿಗೆ ಪೋಷಕವಾಗದ ನಾಗರಿಕ ವ್ಯವಹಾರಗಳು ತ್ಯಾಜ್ಯ. ಮನೆಗಳು ಬಂಗಲೆಗಳಾಗುತ್ತಿರುವುದನ್ನು ಬೆಂಗಳೂರಿನ ವಿಧಾನಸೌಧದ ಭಾರತೀಯ ಕಲೆಯು ಖಂಡಿಸುತ್ತದೆ. ಇದನ್ನಾರಾದರೂ ಗಮನಿಸಿದ್ದಾರೆಯೇ? ಸಂಸ್ಕೃತಿಗೊಪ್ಪದ ನಾಗರಿಕತೆಯು ಸರ್ವ ಭ್ರಷ್ಟಾಚಾರಗಳಿಗೂ ಪ್ರೇರಕ. ಗಾಂಧಿಯವರು ಖಾದಿ ಟೋಪಿಯನ್ನು ಭಾರತಕ್ಕೆ ತೊಡಿಸಿದ್ದು ಸಾಂಸ್ಕೃತಿಕ ಔಚಿತ್ಯದ ದೃಷ್ಟಿಯಿಂದ – ಎಂಬುದನ್ನು ಅರಿಯದುದರಿಂದ ಅದೀಗ ಅರೂಢವಾಗುತ್ತ ಹೋಗಿದೆ; ಅದು ಸೂಚಿಸುತ್ತಿದ್ದ ಸತ್ಯಸಂಧತೆಯೂ ಅದರಿಂದ ಓಡಿಹೋಗಿದೆ. ಸಂಕೇತಕ್ಕೂ ಅದರ ನಿರೀಕ್ಷಿತ ಅರ್ಥಕ್ಕೂ ಸಂಬಂಧವಿಲ್ಲದಂತಾಗುವುದು ಭ್ರಷ್ಟಾಚಾರದ ರಹಸ್ಯ. ಭ್ರಷ್ಟಾಚಾರವು ಟೊಳ್ಳುಗಟ್ಟಿ (ಗೋಮುಖವ್ಯಾಘ್ರ) ರಾಷ್ಟ್ರೀಯತೆಯನ್ನು ಬೆಳೆಯಿಸಿ ದೇಶದ ಪರಾಜಯವನ್ನು ಹತ್ತಿರಕ್ಕೆ ತರುತ್ತದೆ.

ಅಭಾರತೀಯ ಸಾಧನ, ಸಾಮಗ್ರಿಗಳಿಂದ ಭಾರತೀಯತೆಯೆಂದೂ ಸಿದ್ಧಿಸದು. ಭಾರತೀಯವೆಂದರೆ ಪ್ರಾಚೀನ ಜೀವನ ನೀತ್ಯಾದಿಗಳ ಪ್ರಕಟನದ ಪ್ರಾಚೀನ ಕ್ರಮಗಳೆಂದಲ್ಲ. ಖಾದಿಟೋಪಿಯು ಭಾರತೀಯ ಆಧುನಿಕತೆಗೆ ಹೇಗೆ ನಿದರ್ಶನವೋ ಹಾಗೇ ದೇಶೀಯ ರೂಪವಿಕಾಸಗಳಿಂದಲೇ ದೇಶೀಯ ಆಧುನಿಕತೆ ಬೆಳೆಯಬಲ್ಲದು. ಜೀವನ ನೀತಿಗಳು ಕೆಳಮಟ್ಟದಲ್ಲಿ ಭಿನ್ನವಲ್ಲದೆ ಯಾವ ಸಂಸ್ಕೃತಿಯಲ್ಲಿಯೂ ಅತ್ಯುಚ್ಚ ಮಟ್ಟದಲ್ಲಿ ಅನೇಕವಾಗಲಾರವು; ಹಾಗೇ ಸಾರ್ವಜನಿಕ ರೀತಿಗಳೂ ತೀರ ಭಿನ್ನವಾಗಿರಲಾರವು. ಇಂಗ್ಲೆಂಡು–ಅಮೇರಿಕಗಳಲ್ಲಿ ಇರುವ ಶಿಕ್ಷಣ ಪದ್ಧತಿಗಳನ್ನು ನಕಲು ಮಾಡುತ್ತ

ಹೋಗಬೇಕೆಂಬ ರಾಜಕಾರಣಿಗಳ ಪ್ರಭುತ್ವವಿರುವವರೆಗೆ ಭಾರತವು "ಇಂಡಿಯ"ವಲ್ಲದೆ ಭಾರತವೆನ್ನಿಸದು. ಅಭಾರತದಲ್ಲಿ ಬದುಕುತ್ತಿರುವುದು ನರಕ ಜೀವನ.

ರಾಷ್ಟ್ರೀಯತೆ ಮತ್ತು ಭೌತವಿಜ್ಞಾನಗಳಲ್ಲಿ ಹಿಂದುಳಿದಿರುವ ಭಾರತವು ಅವುಗಳನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕಾದ ಭಯಕ್ಕೀಗ ಅವಕಾಶವಿಲ್ಲ. ನಮ್ಮ ಪ್ರಾಚೀನ ಸಂಸ್ಕೃತಿಯು ಪರ ಸಾಂಸ್ಕೃತಿಕ ಅಂಶಗಳನ್ನು ಜೀರ್ಣಿಸಿಕೊಂಡದ್ದು ಗುಣಾವಗುಣವಿಮರ್ಶೆ ಮತ್ತು ಗ್ರಹಣ ಕ್ರಮಗಳಲ್ಲಿ ಇರುವ ಒಂದು ನಿಯತವಾದ ಧರ್ಮದಿಂದ ಎಂದು ಶ್ರೀಕಂಠಶಾಸ್ತ್ರಿಗಳು ಹೇಳಿರುವುದು ಗಮನಾರ್ಹ. ಆ ತದ್ಭವಕರಣದ ತಂತ್ರವನ್ನು ಬಳಸದೆ ಈಗ ಆಂಗ್ಲ ಮಾಧ್ಯಮದ ಮೂಲಕ ಗುಣಾವಗುಣಗುಳನ್ನರಿಯದೆ ಸ್ವೀಕರಿಸಲಾಗುತ್ತಿರುವ ವಿದೇಶೀಯ ವಿಚಾರ–ಆಚಾರಾಂಶಗಳೆಲ್ಲವೂ ಉಪ್ಪಿಟ್ಟಿನ (ತಿನ್ನುವಾಗ ಬಾಯಿಗೆ ಗೊತ್ತಾಗುವ) ಕಲ್ಲುಗಳಾಗಿವೆ.



# ೮

# ತಪ್ಪಿಗೆ ತಕ್ಕ ದಂಡ ಅಗತ್ಯ

ಕನ್ನಡ ಸಾಹಿತ್ಯದಲ್ಲಿ ಜಾನಪದಗೀತವಾದ ಗೋವಿನ ಕತೆಯ ಹಾಡಿನ ಸಂದೇಶವಾದ "ಕೊಟ್ಟ ಮಾತಿಗೆ ತಪ್ಪಲಾರೆನು" ಎಂಬ ಪುಣ್ಯಕೋಟಿಯ ಸಂದೇಶವು ಶ್ರೀರಾಮನ ಪಿತೃವಾಕ್ಯಪರಿಪಾಲನವನ್ನು ನೆನಪಿಗೆ ತಂದುಕೊಡುತ್ತದೆ. ಅದು ಅಹಿಂಸೆಯ ಇನ್ನೊಂದು ಮುಖವೆಂದು ಮಹಾತ್ಮರು ಹೇಳಿದ ಸತ್ಯಸಂಧತೆ. ನೈತಿಕ ಶಿಸ್ತಿನಲ್ಲಿ ಅಹಿಂಸೆಯಂತೆಯೇ ಸತ್ಯಸಂಧತೆಗೆ ಸಮಾನಸ್ಥಾನವಿದೆ. ಸಂಘಟಕರು ಇದನ್ನು ಮರೆಯುವಂತಿಲ್ಲ. ಹಿಂದೆ ಸತ್ಯಾಗ್ರಹಕಾಲದಲ್ಲಿ ಅಂಕೆ ತಪ್ಪಿ ಕೆಲವರು ದೇಶೀಯ ಆಸ್ತಿಪಾಸ್ತಿಗಳಿಗೆ ಹಾನಿಯನ್ನುಂಟು ಮಾಡಿಯೂ ಹಾಗೆ ಮಾಡಿಲ್ಲವೆಂದು ಹೇಳಿದವರು ಇಂದು ವಿಧಾನಪರಿಷತ್ತಿನ ಸಭಾಪತಿ ಸ್ಥಾನದಂಥ ಸ್ಥಾನವನ್ನು ಪಡೆದಿರುವುದು ವಿಘಟನೆಗೆ ಕರೆಕೊಟ್ಟು ಕೃತಾರ್ಥವಾಗಿದೆ. ಅಪೂಜ್ಯರಿಗೆ ಪೂಜ್ಯ ಸ್ಥಾನ ನೀಡುವ ಕಲಂಕಿತ ಸಾರ್ವಜನಿಕತೆಯು ಸಂಘಟನೆಗೆ ಶತ್ರು. ಮುಖಂಡ ಮಂಡಲದ ಈ ವ್ಯವಹಾರವು ಮುಖಂಡರಲ್ಲಿ ಜನರಿಗೆ ವಿಶ್ವಾಸ ಉಳಿಯದಂತೆ ಮಾಡುತ್ತದೆ. ಅವರು 'ವಿಶ್ವಾಸಯಂತಿ ಚ ನರಂ ನತು ವಿಶ್ವಸಂತಿ' ಎಂಬಂತೆ ನಡೆದುಕೊಳ್ಳಲಾರಂಭಿಸುವುದೂ ಅವಿಶ್ವಾಸ್ಯರಲ್ಲೇ ಪದೇ ಪದೇ ವಿಶ್ವಾಸವನ್ನಿಡುವುದೂ ಜನಾಕ್ರೋಶವನ್ನೆಬ್ಬಿಸದಿರದು. ವಿದ್ಯಾರ್ಥಿಗಳ ಹಿಂಸಾಚಾರಗಳೂ ಕಾರ್ಮಿಕರ ವಿನಾಶಕ ಚಟುವಟಿಕೆಗಳೂ ಚಳವಳಿಗಳೆನ್ನಿಸಿರುವುದು ಪೂಜ್ಯಪೂಜಾ ವ್ಯತಿಕ್ರಮದ ನಿಯಮವನ್ನು ಹಿರಿಯರು ಪಾಲಿಸಹೊರಟದ್ದರಿಂದಲೇ. ಭಾರತದ ನಾಗರಿಕತೆ–ಸಂಸ್ಕೃತಿಗಳು ಬದುಕಿ ಬಂದದ್ದು ಪುಣ್ಯಕೋಟಿತ್ವದಿಂದಲ್ಲದೆ ಚಂಗೇಸಖಾನಗಿರಿಯಿಂದಲ್ಲ. ತೈಮೂರಲಂಗತನದಿಂದಲ್ಲ, ಯಾಹ್ಯಾಚಾರದಿಂದಲ್ಲ.

ನಯವಂಚಕತೆಯನ್ನು ರಾಜತಂತ್ರವೆಂದು ತಿಳಿದ ರಾಜಕೀಯ ಪಕ್ಷವೂ ಸರಕಾರವೂ ಜನದ್ವೇಷ್ಯವಾಗುವುದು ಸಹಜ. ಅದರಿಂದ ರಾಷ್ಟ್ರೀಯ ವಿಘಟನೆಯಾಗಿಯೇ ತೀರುತ್ತದೆ. ೧೯೪೭ನೆಯ ಇಸವಿಯ ಭಾರತದ ವಿಘಟಿತತೆಯನ್ನು ಪ್ರಕಟ ಪಡಿಸಿದ್ದು ಜನದ್ರೋಹ; ಜನವಧದಂತೆಯೇ ಅದು ಮಹಾಪರಾಧ. "ಅತ್ಯುತ್ಕಟೈಃ ಪಾಪಪುಣ್ಯೈರಿಹೈವ ಫಲಮಶ್ನುತೇ" ಎಂಬ ಹಾಗೆ ಅದರ ಫಲ ಆಗಿಂದಾಗ ಹೊರಬೀಳುತ್ತದೆ. ಕೈ, ಬಾಯಿ, ಕಚ್ಚೆಗಳು ಸರ್ವಜ್ಞ ಹೇಳಿದಂತೆ ಶುದ್ಧವಾಗಿರಬೇಕು. ಅವುಗಳ ಶುದ್ಧಿಗೆ ತಿಲಾಂಜಲಿಯನ್ನಿತ್ತೂ ಭಾರತೀಯರು

ತಮಗೆ ವಿಧೇಯರಾಗಿ ವರ್ತಿಸಬೇಕೆಂದು ಬಯಸುವ ಮುಖಂಡರು ಮುತ್ಸಾಳರು. "Every thing is fair in love and war ಪ್ರಣಯ ಮತ್ತು ಯುದ್ಧಪ್ರಸಂಗಗಳಲ್ಲಿ ಮಾಡುವುದೆಲ್ಲಾ ಸರಿ, ನ್ಯಾಯ" ಎಂಬುದು "ಪೌರವ ರಕ್ಷ ವಿನಯಂ" ಎಂದು ನುಡಿದ ಶಕುಂತಲೆಯನ್ನು ನಿರ್ಮಿಸಿದ ದೇಶದಲ್ಲಿ ಗ್ರಾಹ್ಯವಾಗಲಾರದು. ಅಶುದ್ಧರೊಡನೆ ಅಸಹಕಾರ ಮಾಡುವುದು ಶುದ್ಧರೊಡನೆ ಸಹಕರಿಸುವುದಕ್ಕಿಂತ ಮೊದಲು ಮಾಡಬೇಕಾದ ಕರ್ತವ್ಯ. ಅಶುದ್ಧರ ದಂಡನೆಯು ಸಂಘಟನೆಗೆ ಅನಿವಾರ್ಯವಾದ ಉಪಕರಣ. ಅಶುದ್ಧಿಯೊಡನೆ ರಾಜಿಮಾಡಿಕೊಳ್ಳುವ ನಿತ್ಯಾಚಾರವು ನಿತ್ಯಾಧರ್ಮ, ಅಶುದ್ಧಿಯನ್ನು ಸಹಿಸದಿರುವುದು ಸಂಘ ಸದಸ್ಯರ ಆದ್ಯ ಕರ್ತವ್ಯ. ಅದಕ್ಕಾಗಿ ಕೊಡುವ ಶಿಕ್ಷೆ ಯಾವಾಗಲೂ ಸಾನುಪಾತಿಕ, ಸಪ್ರಮಾಣ. ಸೇವೆ–ತ್ಯಾಗಗಳ ಕರಗಹೊತ್ತ ಎಷ್ಟೋ ಗುಂಪುಗಳಿಂದು ಸೇವಾತ್ಯಾಗ ಮಾಡಿ ಶಿಶ್ನೋದರಪರಾಯಣವಾಗುತ್ತಿರುವುದು ನಮ್ಮ ರಾಷ್ಟ್ರೀಯತೆಯನ್ನು ತುಂಡು ತುಂಡು ಮಾಡಿ ಒಡೆಯುತ್ತಿದೆ. ನಿಃಶೀಲ–ದುಃಶೀಲರ ನಿರ್ಲಜ್ಜೆಯು ಆಗಿಂದಾಗ ದಂಡಿತವಾಗುವಂತೆ ನೋಡಿಕೊಳ್ಳುವುದು ಸಂಘಟನೆ ದೃಢವಾಗಿ ಉಳಿಯಲು ಅತ್ಯಗತ್ಯ.

ಮಾನವ ಜೀವನದ ೧೦೦ ವರ್ಷಗಳಲ್ಲಿ ಪ್ರತಿಯೊಂದು ವರ್ಷವೂ ಹೆಚ್ಚು ಹೆಚ್ಚು ದೇಹಭೋಗಕ್ಕೆ ಮೀಸಲಾಗಿರುವುದೇ ಆಧುನಿಕ ವ್ಯಕ್ತಿ ಸ್ವಾತಂತ್ರ್ಯದ ಅರ್ಥ – ಎಂದು ತ್ರಿಕರಣಶುದ್ಧವಾಗಿ ನಂಬಿ ನಡೆವ ಸಾಕ್ಷರರ ರಾಕ್ಷಸತೆಯನ್ನು ಹತ್ತಿಕ್ಕದೆ ಹೋದರೆ ಭಾರತವು ಎಂದೆಂದೂ ತಲೆಯೆತ್ತದಷ್ಟರ ಮಟ್ಟಿನ ಅಧಃಪತನಕ್ಕಿಳಿಯುತ್ತದೆ. ಈ ಲೋಕ ಕಂಟಕರ ಸಂಖ್ಯಾಭಿವೃದ್ಧಿ ಜನಸಂಖ್ಯಾಭಿವೃದ್ಧಿಗಿಂತಲೂ ಹೆಚ್ಚು ಭಯಂಕರವೆಂಬುದನ್ನು ಜನ ಮನದಟ್ಟು ಮಾಡಿಕೊಳ್ಳಲು ತಕ್ಕ ಬೋಧಕರು ಸಂಘಟನ ಕೇಂದ್ರಗಳಿಂದ ಜ್ಞಾನಪ್ರಸಾರವನ್ನು ಅವ್ಯಾಹತವಾಗಿ ನಡೆಸಬೇಕು. ಪ್ರತಿಯೊಂದು ಜ್ಞಾನಸತ್ರವೂ ತಕ್ಕ ಕರ್ಮಸತ್ರವನ್ನು ನಡೆಸಿಯೇ ಮುಗಿಯಬೇಕಾದದ್ದು ಸಂಘಟಿಸಿ ಸುದೃಢವಾಗಲು ಅವಶ್ಯಕ. ಶುಷ್ಕ ಪ್ರಚಾರವೂ ಕೇವಲ ಪರಪಕ್ಷ ಖಂಡನವೂ ಸಮರ್ಥ ಜ್ಞಾನಪ್ರಸಾರದ ಕ್ರಮಗಳಲ್ಲ. ವ್ಯಾಯಾಮವು ಸರ್ವಪ್ರಕಾರದ ಜ್ಞಾನಸತ್ರಕ್ಕೂ ಅನುಬಂಧವಾಗುವ ಕರ್ಮಾಂಗವಲ್ಲ. ವಿದ್ಯಾರ್ಥೀತರರಿಗೆ ಲೋಕೋಪಯೋಗಿಯಾದ ಕರ್ಮಗಳು ಜ್ಞಾನಾನುಬಂಧಗಳಾಗುವುದು ಅಪರಿಹಾರವಾದ ನಿತ್ಯಸೂತ್ರ. "ಯತ್ರ ಜ್ಞಾನಂ ತತ್ರ ಕರ್ಮ" ಎಂಬಷ್ಟು ಅವಿನಾಭಾವ ಜ್ಞಾನ–ಕರ್ಮಗಳಲ್ಲಿರುವುದೂ ಅವೆರಡರ ಸಂಬಂಧವು ಅತ್ಯಂತ ಹೆಚ್ಚು ಲೋಕೋಪಕಾರಕವಾಗಿರುವುದೂ ಸಂಘಟನೆಯ ತರಬೇತಿನ ತಿರುಳು. ಅಸಂಘಟಿತ ರಚನಾತ್ಮಕ ಘಟನೆ ಒಂದೂ ದೇಶದಲ್ಲಿ ನಡೆಯದಂತೆ ಆದ ದಿನ ದುಂದು ನಿಲ್ಲುತ್ತದೆ. ಮಿತವ್ಯಯದಿಂದ ಅಮಿತಹಿತವನ್ನು ಸಾಧಿಸುವುದೇ ಸಂಘಟನೆಯ ಗುರಿ. ದುಂದನ್ನು ವೈಭವವೆಂದು ತಿಳಿದವರಿಲ್ಲಿ ಎಂದೂ ದಿವಾಳಿ ಹೊಂದದೆ ಇದ್ದದ್ದಿಲ್ಲ. ಮಿತವ್ಯಯವೆಂದೂ ಜಿಪುಣತನವಲ್ಲ. ನಿತ್ಯವೂ ಗಳಿಸಿದಂತೆಯೇ ಉಚಿತವಾಗಿ ವೆಚ್ಚ ಮಾಡುವುದು ಕರ್ಮಶೀಲತೆ.



# ೬

# ಅವತಾರದ ಅರ್ಥ

ಸಂಘಟನೆಯು ರಕ್ಷಣತತ್ತ್ವ. ಮತ್ಸ್ಯಾವತಾರವು ದೇಶ ಕಳೆದುಕೊಂಡ ಅಮೂಲ್ಯ ಸ್ವತ್ತನ್ನು ಪುನಃ ಸಂಪಾದಿಸಬೇಕೆಂಬುದನ್ನು ಸೂಚಿಸುತ್ತದೆ. ಕೂರ್ಮಾವತಾರವು ರಾಷ್ಟ್ರಪ್ರಗತಿಯ ತುತ್ತತುದಿಯನ್ನು ಮುಟ್ಟಲು ಅವಿಶ್ರಾಂತ ಹೋರಾಟದ ಹೊಣೆಯನ್ನು ಹೊರಬೇಕೆಂದು ಧ್ವನಿಸುತ್ತದೆ. ವರಾಹಾವತಾರವು ವಿಘಟಕ ಸ್ವಾರ್ಥಿಗಳನ್ನು ನಿರ್ಮೂಲ ಮಾಡಲು ಸಂದೇಶವನ್ನಿತ್ತಿದೆ. ವಾಮನಾವತಾರವು ಸಂಘಟಕರ ವ್ಯಕ್ತ್ಯಹಂಕಾರದ ತಾಮಸವನ್ನು ಪಾತಾಳಕ್ಕಿಳಿಸಲು ಕರೆಗೊಟ್ಟಿದೆ. ನರಸಿಂಹಾವತಾರವು ವ್ಯಕ್ತಿಸ್ವಾತಂತ್ರ್ಯದ ನ್ಯಾಯಾಂಶವನ್ನು ಹತ್ತಿಕ್ಕುವ ಪ್ರಯತ್ನಕ್ಕಿಳಿದ ಸಂಘಟಕರ ಸಂಹಾರವನ್ನು ಕರ್ತವ್ಯವೆಂದು ತೋರಿಸುತ್ತದೆ. ಪರಶುರಾಮಾವತಾರವು ದುರ್ಮದಾಂಧ ರಾಜಕೀಯಶಕ್ತಿಯನ್ನು ಎಡೆಬಿಡದೆ ದಮಿಸುತ್ತ ಹೋಗುವ ಅವಶ್ಯಕತೆಯನ್ನು ಒತ್ತಿಹೇಳುತ್ತದೆ. ರಾಮಾವತಾರವು ಸುರಾಜಕೀಯ ಶಕ್ತಿಯನ್ನು ಅವಿವೇಕದಿಂದ ದ್ವೇಷಿಸುವುದನ್ನು ಮರ್ದಿಸಬೇಕೆನ್ನುತ್ತದೆ. ಕೃಷ್ಣಾವತಾರವು ಪ್ರಚ್ಛನ್ನ ನೇತೃತ್ವ ಅಗತ್ಯವೆನ್ನಿಸಿದಾಗ ಪ್ರಕಟನೇತೃತ್ವವನ್ನು ವಹಿಸದೆ ಅಧರ್ಮವನ್ನು ನಾಶ ಮಾಡಲು ತಕ್ಕ ಪ್ರಕಟ ನೇತೃಗಳನ್ನು ತರಬೇತುಗೊಳಿಸಿ ಕಾರ್ಯಪ್ರವೃತ್ತರನ್ನಾಗಿ ಮಾಡಬೇಕೆಂಬ ಮಹಾಸಂಘಟನ ವಿವೇಕವನ್ನು ಹೇಳುತ್ತದೆ. ಬೌದ್ಧಾವತಾರವು ವಿಘಟಕ ಲೋಕಕಂಟಕರು ಅದಮ್ಯರಾದಾಗ ಆಪದ್ಧರ್ಮವನ್ನು ಅನುಸರಿಸಿ ಅವರನ್ನು ಹತ್ತಿಕ್ಕಬೇಕೆಂಬ ತಂತ್ರವನ್ನು ಬೋಧಿಸುತ್ತದೆ. ಕಲ್ಕ್ಯವತಾರವು ಸಾಮ, ದಾನ, ಭೇದಗಳಿಂದ ಸಾಧ್ಯವಾಗದಾಗ ಭೌತಿಕ ಪ್ರತಿಹಿಂಸಾಕ್ರಮವನ್ನು ಸಜ್ಜುಗೊಳಿಸಿಕೊಂಡು ರಾಷ್ಟ್ರಶತ್ರುಗಳನ್ನು (ಅವರು ವಿದೇಶೀಯರಾಗಿರಲಿ ಸ್ವದೇಶಿಯರಾಗಿರಲಿ) ಹೊಡೆದೋಡಿಸಬೇಕು ಎಂಬುದನ್ನು ಆಜ್ಞಾಪಿಸುತ್ತದೆ. ಇದು ದಶಾವತಾರದ ಭಾಗವತ ಸಂಪ್ರದಾಯ. ವಿಷ್ಣುವಿಲ್ಲಿ ಭಗವಾನ್. ಅವನು ಯಜ್ಞರಕ್ಷಕ ಶಕ್ತಿ. ಯಜ್ಞವು ರಾಷ್ಟ್ರಕಾರ್ಯ, ವ್ಯಕ್ತಿಸ್ವಾರ್ಥತ್ಯಾಗದ ಮಹಾವ್ರತ, ಸುಸಂಘಟಿತ ರಾಷ್ಟ್ರಹಿತಕಾರಕ ಮಹಾತಂತ್ರ.



✦ ೬೫೬

# ೧೦

# ಕಾಲಭೇದ–ಧರ್ಮಭೇದ

ಸಂಘಟಕರಲ್ಲಿ ಪೂಜ್ಯತಾ ತಾರತಮ್ಯವು ಗುಣಮಾನದಿಂದ ವರ್ಗೀಕೃತವಾಗಿರುತ್ತದೆ; ಇತರ ಮಾನದಂಡಗಳಿಂದಲ್ಲ. ಇತರ ಅಳೆಗೋಲುಗಳು ತಲೆಹಾಕಿದ ಕೂಡಲೇ ಸಂಘದ ಆಯುರ್ದಾಯ ಇಳಿದುಹೋಗುತ್ತದೆ. ಅಲ್ಪಾಯುವಾದ ಸಂಘಟನೆ ಅಪ್ರಯೋಜಕ. ಗುಣವು ಸಾರ್ವಜನಿಕ ಕರ್ಮಶಕ್ತಿ. ಅಸಾರ್ವಜನಿಕತೆಗೆ, ಅಸೌಭ್ರಾತ್ರಕ್ಕೆ ಸಂಘದಲ್ಲಿ ಸ್ಥಳವಿಲ್ಲ. Equality, Libertyಸಮತೆ, ಸ್ವಾತಂತ್ರ್ಯಗಳ ಅರ್ಥಗಳು ಸುಸ್ಪಷ್ಟವಾಗುವುದು fraternity ಸೌಭ್ರಾತ್ರದಿಂದಲೇ. ಸೌದರ್ಯಕ್ಕಿಂತ ಹೆಚ್ಚಿನ ಸೌಂದರ್ಯ ಜೀವನದಲ್ಲಿಲ್ಲ. ರಾವಣನಿಗೆ ಸೌಭ್ರಾತ್ರವಿಲ್ಲ, ಕುಂಭಕರ್ಣನಿಗೂ ಇಲ್ಲ– ಆದರೆ ವಿಭೀಷಣನಿಗಿದೆ, ಸುಗ್ರೀವನಿಗಿದೆ, ರಾಮ–ಲಕ್ಷ್ಮಣ ಭರತ–ಶತ್ರುಘ್ನರಿಗಿದೆ. ಧರ್ಮರಾಜಾದಿ ಪಂಚಪಾಂಡವರಿಗಿದೆ: ಕೌರವರಲ್ಲಿರುವ ಗುಣ ದೌರ್ಭ್ರಾತ್ರ; ಅವರ ಭ್ರಾತೃತ್ವದ ಸಹಕಾರವು ದುರ್ಯೋಜಕ. ರಾಷ್ಟ್ರವಿಘಟಕ, ಎಲ್ಲ ಬಗೆಯ ಸಹಕಾರವೂ ಭ್ರಾತೃತ್ವವೂ ರಾಷ್ಟ್ರಪೋಷಕವಲ್ಲ. ಧರ್ಮ್ಯವಾದ ಸಹಕಾರ–ಭ್ರಾತೃತ್ವಗಳು ಮಾತ್ರ ರಾಷ್ಟ್ರಪೋಷಕ ಜಗದ್ಧಿತಕಾರಕ. ದೈತ್ಯರ ಮತಧರ್ಮಾಚಾರಗಳು, ರಾಷ್ಟ್ರಮಾರಕ. ಅರ್ಜುನನ ಶಿವಾರಾಧನೆಗೆ ರಾವಣನ ಶಿವಾರಾಧನೆಯು ಸರಿಸಮಾನವಲ್ಲ. ಅರ್ಜುನನ ಅಥವಾ ಧರ್ಮಜನ ಅಧಿಕಾರಲಾಲಸೆಯು ಕೌರವನ ಅಧಿಕಾರಲಾಲಸೆಗಿಂತ ತೀರ ಭಿನ್ನಸ್ವಭಾವವುಳ್ಳದ್ದು. ಅಧಿಕಾರಲಾಲಸೆ ಅಥವಾ ದಾಹ ಎಂಬುದು ಸರ್ವತ್ರ ನಿಂದ್ಯವಲ್ಲ. ಸರ್ವಸಂದರ್ಭಗಳಲ್ಲೂ ವಂದ್ಯ ಅಥವಾ ನಿಂದ್ಯ ಎಂಬ ಆಚಾರ ಜಗತ್ತಿನಲ್ಲಿಲ್ಲ. ಸಂದರ್ಭಜ್ಞತೆಯೇ ವಿವೇಕ. ರಾಷ್ಟ್ರೀಯ ಸಂದರ್ಭವು ಅತ್ಯಂತ ಪ್ರಧಾನ ಎಂಬುದು ಆಪತ್ಕಾಲದಲ್ಲೂ ಜಾಗರಿತವಾಗದ ರಾಷ್ಟ್ರವು ರಾಷ್ಟ್ರವಲ್ಲ. ಅದಕ್ಕೆ ಆಪತ್ತೊದಗದಂತಹ ಭದ್ರತೆಯನ್ನು ಮಾಡಿದ ಮೇಲೆ ಪ್ರಾಂತ ರಾಜ್ಯಗಳ ಹಿತಗಳಿಗೆ ಪ್ರಾಧಾನ್ಯ – ಹೀಗೇ ವ್ಯಕ್ತಿಯವರೆಗೂ. ವ್ಯಕ್ತಿಯ ಸ್ವಾತಂತ್ರ್ಯವು Freedom of conscience, of thought and speech ಮನಃಸಾಕ್ಷಿ, ವಿಚಾರ, ಮಾತುಗಳಲ್ಲಿ ಇರುವಷ್ಟು ಸಾರ್ವಜನಿಕ ಜೀವನಕ್ಕೆ ಸಂಬಂಧಿಸಿದಂತೆ ಮಾಡುವ ಕಾರ್ಯಕ್ಷೇತ್ರದಲ್ಲಿ ವ್ಯವಹಾರತಃ ಯಾವ ನಾಗರಿಕತೆಯಲ್ಲೂ ಇಲ್ಲ. ವ್ಯಕ್ತಿಯನ್ನು, ಗುಂಪು ಯಂತ್ರದಂತೆ ದುಡಿಯಿಸಿಕೊಂಡು ಹೊರಗೆ ಹಾಕೀತೆಂಬ ಭಯದಿಂದ ವ್ಯಕ್ತಿಸ್ವಾತಂತ್ರ್ಯವನ್ನು ಎತ್ತಿ ಹೇಳುವಷ್ಟೇ ಸಮರ್ಥವಾಗಿ ವ್ಯಕ್ತಿಗಳು ತೀರ

ಸ್ವಾರ್ಥಲೋಲುಪರಾಗಿ ತಾವು ಋಣಿಗಳಾಗಿರುವ ಗುಂಪನ್ನು ಕಃಪದಾರ್ಥವೆಂದು ಧಿಕ್ಕರಿಸಿ ನಡೆದುಕೊಳ್ಳುವ ಸಂಭಾವ್ಯದ ಭಯದಿಂದ ಸಮಾಜಹಿತವನ್ನೂ ಎತ್ತಿ ಹೇಳುತ್ತಲೇ ಬಂದಿದೆ ಭಾರತ. ರಾಷ್ಟ್ರೀಯ ಆಪತ್ಕಾಲದಲ್ಲಿ ಲೋಕಜೀವನದಲ್ಲಿ ಸಾಮಾಜಿಕತೆ ಮಹತ್ವದ್ದು. ಸಂಪತ್ಕಾಲದಲ್ಲಿ ವ್ಯಕ್ತಿ–ಸಮಾಜಹಿತಗಳು ಸಮಪ್ರಧಾನ; ವ್ಯಕ್ತಿಹಿತ ಹೆಚ್ಚಾದರೆ ಲಾಭಬಡುಕ, ಕಳ್ಳಪೇಟಿಗ, ಲಂಚಿಗ, ದೀರ್ಘಸೂತ್ರಿಗಳು ಸಾರ್ವಜನಿಕರನ್ನು ಶೋಷಿಸುವ ಅನುಭವವು ರಾಷ್ಟ್ರಕ್ಕೆ ಉಂಟಾಗುತ್ತದೆ.



# ೧೧

# ಧ್ಯೇಯತಾರತಮ್ಯ

ಆದುದರಿಂದ ಭಾರತವು ವ್ಯಕ್ತಿಯ ಲೌಕಿಕ ಹಿತವನ್ನು ಪ್ರಿಯ ಅಥವಾ ಪ್ರೇಯಸ್ಸೆಂದಿತು. ಅಲೌಕಿಕ (ಆಧ್ಯಾತ್ಮಿಕ) ಹಿತವನ್ನು ಹಿತ ಅಥವಾ ಶ್ರೇಯಸ್ಸೆಂದಿತು. ವ್ಯಕ್ತಿಯ ಅಲೌಕಿಕ ಹಿತಸಾಧನೆಯು ಸಮಷ್ಟಿಯ ಪ್ರೇಯ: ಶ್ರೇಯಗಳಿಗಾಗಿ ಮನೋವಾಕ್ಕಾಯ ಕರ್ಮಗಳಿಂದ ದುಡಿಯುವುದರಲ್ಲಿದೆ; ಲೌಕಿಕವಾದ ಪ್ರೇಯಸ್ಸು ಧರ್ಮ್ಯವಾದ ಅರ್ಥಕಾಮಗಳ ಅರ್ಜನೆ ಮತ್ತು ಉಪಭೋಗಗಳಲ್ಲಿದೆ. ಧರ್ಮವು ಮೂಲತಃ ಅಹಿಂಸಾದಿ ಪಂಚಮಹಾತತ್ವಗಳಿಂದ ವರ್ಣಿತವಾಗಿದೆ. "The negative method of asceticism, by which the individual mortifies his body, gives up all possessions, and breaks all social connections is not the Hindu view, which requires us to grow into the larger freedom of spirit, the superindividuality, by developing each side of our life until it transcends its limits. ವ್ಯಕ್ತಿಯು ತನ್ನ ಶರೀರ ಶೋಷಣೆಗಿಳಿದು, ಸಾಮಾಜಿಕ ಸಂಬಂಧಗಳೆಲ್ಲವನ್ನೂ ಕಡಿದುಕೊಳ್ಳುವ ನೈಷೇಧಿಕವಾದ ತಾಪಸವೃತ್ತಿಯು ಹಿಂದು ದೃಷ್ಟಿಕೋನವಲ್ಲ; ಹಿಂದು ದೃಷ್ಟಿಕೋನದ ಪ್ರಕಾರ ನಮ್ಮ ಜೀವನದ ಪ್ರತಿಯೊಂದು ಅಂಗವನ್ನೂ ಅಭಿವೃದ್ಧಿಗೊಳಿಸಿ, ಅಂತ್ಯದಲ್ಲಿ ನಮ್ಮ ಪರಿಮಿತಿಯನ್ನು ಮೀರಿ, ಅತಿಮಾನವ ವ್ಯಕ್ತಿತ್ವವನ್ನು ಬೆಳೆಯಿಸಿ ಕೊಳ್ಳುವ ವಿಶಾಲತರವಾದ ಸ್ವಾತಂತ್ರ್ಯವನ್ನು ಅನುಭವಿಸುವುದೇ ಆಗಿದೆ" – ಎಂದಿದ್ದಾರೆ ಡಾ.ಸರ್.ಎಸ್.ರಾಧಾಕೃಷ್ಣರು ತಮ್ಮ "Eastern Religions and Western thought'' ಎಂಬ ಹೆಬ್ಹೊತ್ತಿಗೆಯಲ್ಲಿ. ಕಾಳಿದಾಸನು ತನ್ನ ರಘುವಂಶದಲ್ಲಿ–

**"ಶೈಶವೇಭ್ಯಸ್ತ ವಿದ್ಯಾನಾಂ ಯೌವನೇ ವಿಷಯೈಷಿಣಾಂ**

**ವಾರ್ಧಕ್ಯೇ ಮುನಿವೃತ್ತೀನಾಂ ಯೋಗೇ ನಾಂತೇ ತನುತ್ಯಜಾಂ"**

ಎಂಬ ಶ್ಲೋಕದಲ್ಲಿ ಹಿಂದು ಜೀವನ ಪದ್ಧತಿಯ ಸಿಂಹಾವಲೋಕನವನ್ನು ಮಾಡಿದ್ದಾನೆ. ಗೀತೆಯು ೬ನೆಯ ಅಧ್ಯಾಯದಲ್ಲಿ ಯುಕ್ತಾಹಾರವಿಹಾರಾದಿಗಳನ್ನು ಹೇಳಿರುವುದು ಅದರ ಸಮತ್ವಸಿದ್ಧಾಂತದ ಪರಿಭಾಷೆಯಲ್ಲಿ ಮೇಲಿನ ಶ್ಲೋಕವನ್ನು ವಿಸ್ತರಿಸಿ ಸ್ಪಷ್ಟಪಡಿಸುವಂಥದಾಗಿದೆ. ಜೀವನದ ನಾಲ್ಕು ಹಂತಗಳಲ್ಲೂ "ತೇನ ತ್ಯಕ್ತೇನ ಭುಂಜೀಥಾಃ" ಎಂಬ ಈಶಾವಾಸ್ಯದ ಆತ್ಮಗೀತೆ ಅಡಗಿದೆ. ಆದುದರಿಂದ ಆದರ್ಶ ವೈಯಕ್ತಿಕ ಜೀವನವಿಲ್ಲಿ ಸಾಮಾಜಿಕತೆಗೆ

ವಿಘ್ನಕಾರಿಯಾಗುವ ಸಂಭವವೇ ಇಲ್ಲ. ಹಾಗೇ ಗೀತೆಯು ಸ್ವಧರ್ಮವನ್ನು – ಬ್ರಾಹ್ಮ, ಕ್ಷಾತ್ರ, ವೈಶ್ಯ, ಶೂದ್ರ ಎಂಬ ನಾಲ್ಕು ನೈಸರ್ಗಿಕ ಮನಃಪ್ರಣಾಳಿಗಳನ್ನಾಗಿ ವಿಭಾಗಿಸಿ, ಆಯಾ ಮನಃಪ್ರಣಾಳಿಯವರು ಆಯಾ ವೃತ್ತಿಧರ್ಮದಂತೆ ನಡೆದುಕೊಳ್ಳಬೇಕೆಂದು ಹೇಳಿದ್ದಲ್ಲದೆ, ಗುಣದಲ್ಲಿ–ಸಾತ್ವಿಕ, ರಾಜಸ, ತಾಮಸಗಳೆಂದು ವಿಭಾಗಿಸಿ, ಕೊನೆಯಿಂದ ಮೊದಲಿನದಕ್ಕೆ ಉತ್ತರೋತ್ತರವಾಗಿ ಬದಲಾಯಿಸುತ್ತ ಬರಬೇಕೆಂಬ ಸಾಂಸ್ಕೃತಿಕ ಮೆಟ್ಟಿಲುಗಳನ್ನು ಕೊಟ್ಟಿದೆ. ಸಾತ್ವಿಕನದು Divine life ದಿವ್ಯಜೀವನ, Super-individuality ಅತಿಮಾನವ ವ್ಯಕ್ತಿತ್ವ. ಇದರ ಮುಂದೆ "Live and let (others) live – ಬದುಕು, ಅನಂತರ ಇತರರಿಗೆ ಬದುಕಗೊಡು" ಎಂಬ ನ್ಯಾಯವು ಅಸಂಸ್ಕೃತವಾಗಿ ತೋರುತ್ತದೆ– ರಾಷ್ಟ್ರೀಯ ಜೀವನದಲ್ಲಿ.



# ೧೨

# ಕಾಂಚನ ಮೂಲ

ಆದರೆ ಉಕ್ತನ್ಯಾಯಗಳೆಲ್ಲವೂ ನಮ್ಮ ಸಮಾನ ಧರ್ಮಿಗಳೊಡನೆ ವ್ಯವಹರಿಸಬೇಕಾದಾಗ ಮಾತ್ರ ಎಂಬುದನ್ನು ಮರೆತಾಗ ರಾಷ್ಟ್ರೀಯ ನಾಯಕರಿಗೆ ಪೃಥ್ವೀರಾಜನ ಗತಿಯುಂಟಾಗುತ್ತದೆ– ಎಂಬುದು ಕೃಷ್ಣೋಪದೇಶದಸಾರ, ವ್ಯಾಸದೃಷ್ಟಿಯ ಪರಾಕಾಷ್ಠೆ. ಪಾಲಕರ ಸಭೆಯಲ್ಲಿ ಪಾಲಕೋಚಿತ ಧರ್ಮವು ಅನುಸರಣೀಯ, ಬಾಲಕರ ಸಭೆಯಲ್ಲಿ ಬಾಲಕೋಚಿತ ಧರ್ಮವು ಆಚರಣೀಯ. ಅವರವರ ಹಗ್ಗದಿಂದಲೇ ಅವರವರ ಕೈಕಟ್ಟುವ ಜಾತ್ಯುತ್ತರತರ್ಕವು ಬ್ರಾಹ್ಮ–ಸಾತ್ವಿಕಾದಿ ಸರ್ವಧರ್ಮ–ವೃತ್ತಿಪ್ರಧಾನರೂ ತಿಳಿದುಕೊಂಡಿರಬೇಕಾದ ಸಂಗತಿ. ಸರ್ವತ್ರ ಸರ್ವಪ್ರಾಧಾನವೆಂಬುದು ಲೋಕದಲ್ಲಿರುವ ಯಾವ ಮಟ್ಟದ ಶರೀರಿಗೂ ಇಲ್ಲ. The universe has no such universality in the rules of conduct–ವಿಶ್ವದಲ್ಲಿ ಅಂಥ ವಿಶ್ವವ್ಯಾಪಕ ವರ್ತನಾನಿಯಮವೆಂಬುದಿಲ್ಲವೇ ಇಲ್ಲ. ಏಕೆಂದರೆ ಅದು ಸ್ವಭಾವತಃ Multiverse ಬಹುಪ್ರಕಾರಕತೆಯನ್ನುಳ್ಳದ್ದು. ಔಚಿತ್ಯ ವಿವೇಕವಿಲ್ಲದೆ ಧರ್ಮಸೂತ್ರಗಳನ್ನು ಅನುಸರಿಸುವವರು Blinkered horses ಕಣ್ಣುಪಟ್ಟಿಗಳಿಂದ ಬದ್ಧವಾದ ಕುದುರೆಗಳೇ ಸರಿ. ಹಾಗೇ ಸ್ವಚ್ಛಂದಚಾರಿಗಳು ಶುದ್ಧ ದೈತ್ಯರು; ಕಾಲಾಂತರದಲ್ಲಿ ಬರುವ ದುರ್ನಿವಾರ್ಯ ದುಃಖವನ್ನರಿಯದೆ ಅವರು ಧರ್ಮಸೂತ್ರಗಳಾವುವನ್ನೂ ಹಾರ್ದಿಕವಾಗಿ ಮನ್ನಿಸರು.

ಇದು ಸಂಘಟನೆಗೆ ಬೇಕಾದ ಭಾರತೀಯ ಬೌದ್ಧಿಕ ತರಬೇತು. ಇದಿಲ್ಲದ ಸಂಘಟನೆಯು ಮಳಲಮೇಲೆ ಕಟ್ಟಿದ ಮನೆಯಂತೆ ಪತನೋನ್ಮುಖವಾಗಿರುವುದು. ಈ ಬೌದ್ಧಿಕ ಸಿದ್ಧಾಂತದಲ್ಲಿ ಶ್ರದ್ಧೆಯನ್ನಿಟ್ಟ ಯಾವ ರಾಜಶಕ್ತಿಸಂಪನ್ನರೂ ಬಂಡವಾಳ ಶಾಹಿಯಶೋಷಣಾಚಾರವನ್ನು ಜನರ ಮೇಲೆ ಹೇರಲಾರರು; "ಹೂವನ್ನು ಹರಿದು ಮುಡಿಯಬೇಕು. ಹಣ್ಣನ್ನು ಹಂಚಿತಿನ್ನಬೇಕು" ಎಂಬ ವೈದಿಕ ಸಮಾಜವಾದವನ್ನೇ ಅಂಥವರು ವಿಧಿಬದ್ಧವಾಗಿ ಜಾರಿಗೆ ತರುವರು. ಅಂಥ ಕಾರ್ಯಯೋಜನೆಗೆ ಕಟಿಬದ್ಧರಾಗದವರು ಕೇವಲ ಪರವಂಚನೆಗಾಗಿ ಮೇಲಿನ ಸಿದ್ಧಾಂತವನ್ನು ಗಳಹುತ್ತಹೋಗುತ್ತಾರೆ – ಅಷ್ಟೇ. ಸ್ವಯಂಪ್ರೇರಣೆಯಿಂದ ಸಾಮ್ಯಜೀವನ ನಡೆಸುವ ತ್ಯಾಗಿಗಳ (ದಾನಿಗಳ) ಸಂಖ್ಯೆ ಹೆಚ್ಚಿದಾಗ ವಿಧಿರಚನೆ ಆ ಬಗ್ಗೆ ಅನವಶ್ಯಕವಾಗುವುದು.

ಅದಿಲ್ಲದಾಗ ಅಂಥ ಜೀವನ ಸಿದ್ಧಿಯು ಸರ್ವಪ್ರಜೆಗಳಿಗೂ ದೊರಕಲು ರಾಜಶಕ್ತಿಯು ವಿಧಿ–ಪ್ರಶಾಸನಗಳ ಮೂಲಕ ಪ್ರಯತ್ನಿಸಬೇಕಾಗುತ್ತದೆ.

**"ಯಸ್ಯಾಸ್ತಿ ವಿತ್ತಂ ಸ ನರಃ ಕುಲೀನಃ**
**ಸ ಪಂಡಿತಃ ಸ ಶ್ರುತಿಮಾನ್ ಗುಣಜ್ಞ।**
**ಸ ಏವ ವಕ್ತಾ ಸ ಚ ದರ್ಶನೀಯ:**
**ಸರ್ವೇ ಗುಣಾಃ ಕಾಂಚನಮಾಶ್ರಯಂತೇ॥"**

ಎಂಬಂತಾದ ಜೀವನವು ಸರ್ವಥಾ ಅಭಾರತೀಯ, ಅರಾಷ್ಟ್ರೀಯ, ಈ ನೈತಿಕ ಅಂಶವು (=ಗುಣಾಃ ಪೂಜಾ ಸ್ಥಾನಂ ಗುಣಿಷು ನ ಚ ಲಿಂಗಂ ನಚವಯಃ) ಸ್ಫೂರ್ತಿಯ ಮೂಲವಾಗಿರುವಂತೆ ಸದಾ ನೋಡಿಕೊಂಡಾಗ ಮಾತ್ರ ಸಂಘಟನೆಯು ಶಾಶ್ವತವಾದ ರಾಷ್ಟ್ರಸಿದ್ಧಿಗೆ ಸಮರ್ಥಸಾಧನವಾದೀತು. ಆದುದರಿಂದ ಸರ್ವ ಬಾಹ್ಯಾಚಾರಗಳೂ ಸಾಂಘಿಕರಲ್ಲಿ ಉಕ್ತಜಾಗ್ರತಿಯನ್ನು ಹುಟ್ಟಿಸುತ್ತಿರಬೇಕು; ಇಲ್ಲವಾದರೆ ಅವೆಲ್ಲವೂ ರಾಷ್ಟ್ರಘಾತಕವಾದ ದುರಾಚಾರಗಳಾಗುತ್ತವೆ. ಆದುದರಿಂದ ಚುನಾವಣೆಯ ಕಾಂಚನ ಮೂಲವನ್ನು ಮೊದಲು ಕಿತ್ತೊಗೆಯಬೇಕು.

ಕಾಂಚನವು ಅರ್ಥಾಧಿಕ್ಯದ ಸಂಕೇತ; ಅರ್ಥವು ಪ್ರಭುತ್ವಾಧಿಕ್ಯದ ಪ್ರತೀಕ. ಪ್ರಭುತ್ವದ ದುರುಪಯೋಗವು ಹಿಂಸೆ. ಹಿಂಸೆಯು ಅಸೌಭ್ರಾತೃತ್ವದ ದ್ಯೋತಕ. ರಾಷ್ಟ್ರವೊಂದು ಭ್ರಾತೃಸಮುದಾಯ. ಭ್ರಾತೃಭಾವರಹಿತವಾದುದು ರಾಷ್ಟ್ರವಲ್ಲ, ರಾಜ್ಯವಲ್ಲ, ಆಡಳಿತವಲ್ಲ, ಸಂಸ್ಕೃತ ಸಂಸ್ಥೆಯೇ ಅಲ್ಲ. ಭ್ರಾತೃಭಾವಕ್ಕೆಡೆಗೊಡದ ಪ್ರಭುತ್ವವು "ದೇಶೀಯ"ವೇ ಆಗಿದ್ದರೂ ಅದನ್ನು ಧ್ವಂಸಮಾಡಬೇಕಾದ್ದು ಸ್ವರಾಜ್ಯದ ಸ್ವಧರ್ಮ. ಈ ಉದ್ದೇಶಕ್ಕಾಗಿ ಸಂಘಟನೆ ಇರುವುದೊಂದೇ ಅದರ ಸಫಲತೆಗೆ ಆಧಾರ. ಇತರ ಉದ್ದೇಶಗಳು ಇದನ್ನು ಧಿಕ್ಕರಿಸಿ ಮುಂಬರಿದಾಗ ಅವುಗಳಿಗಾಗಿ ಮಾಡಿದ ಎಲ್ಲ ಸಂಘಟನೆಗಳೂ ಜನದ್ರೋಹಕಾರಿಗಳಾಗಿ ಪರಿಣಮಿಸದೆ ಉಳಿಯವು. ಜನದ್ರೋಹವು ಸರ್ವಾಸ್ತಕರಣ; ಜನದ್ರೋಹಿಗಳು ಆತ್ಮಹಂತೃಗಳು. ಜನಹಿತವು ಭ್ರಾತ್ರೀಯವಾಗಿ ಕಾರ್ಯರೂಪಕ್ಕೆ ಬಂದಾಗ ಮಾತ್ರ ಪ್ರಭುತ್ವವು ಸುರಾಜ್ಯಭಾರ ಮಾಡುತ್ತಿದೆ ಎನ್ನಲು ಸಾಧ್ಯ. ವಾಗಾಡಂಬರದ ಸಹಾನುಭೂತಿಯು ಪಕ್ಕಾ ಮೋಸ. ಯಾವ ಸಂವಿಧಾನವಿರಲಿ, ವಿಧಾನವಿರಲಿ–ಅದರ ಅರ್ಥವನ್ನೂ ಕಾರ್ಯರೂಪಕ್ಕೆ ತರುವುದನ್ನೂ ಭ್ರಾತೃಭಾವ ನಿಷ್ಠವನ್ನಾಗಿ ಮಾಡದಿದ್ದರೆ ಅದೆಲ್ಲಾ ಮೋಸ. ಭ್ರಾತೃಭಾವರಹಿತರಾದ ಪ್ರತಿನಿಧಿಗಳೂ ಪ್ರಶಾಸಕರೂ ಪ್ರಚಾರಕರು.



# ೧೩

# ವಿಡಂಬನೀಯ ಹಿಂದು

ಅಜ್ಞಾನಿಗಳನ್ನು ಜ್ಞಾನಿಗಳನ್ನಾಗಿ ಪರಿವರ್ತಿಸುವುದೊಂದೇ ಹಿಂದುಳಿದ ಹಿಂದುಗಳ ಉದ್ಧಾರದ ಉತ್ತಮೋಪಾಯ. ಉಳಿದ ಉಪಾಯಗಳೆಲ್ಲವೂ ರಾಷ್ಟ್ರ ಮಾರಕ. ಜ್ಞಾನಿಗಿರುವ ಲಕ್ಷಣವನ್ನು ಮೇಲೆ ವಿವರಿಸಲಾಗಿದೆ. ಜ್ಞಾನಿಯು ಆದರ್ಶ ಹಿಂದು; ಅವನು ಸ್ವರೂಪತಃ ಗಂಗೆ. ಅವನಿಗೆ ಸ್ಪೃಶ್ಯಾಸ್ಪೃಶ್ಯಭೇದವಿಲ್ಲ– ಸಂಸ್ಕೃತಾಸಂಸ್ಕೃತ ಭೇದ ಮಾತ್ರ ಗಣ್ಯ. ಅಲ್ಲಿಯೂ ಅಸಂಸ್ಕೃತರ ಅಪಸಂಸ್ಕಾರಗಳನ್ನು ತೆಗೆದುಹಾಕಲು ಅವನು ನಿತ್ಯಪ್ರಯತ್ನಶೀಲನಾಗಿರುತ್ತಾನೆ. ಭಾರತೀಯ ಸಂಸ್ಕೃತಿಯ ಸಾರಾಂಶವನ್ನು ಅರಿತು ಆಚರಣೆಯಲ್ಲಿಟ್ಟುಕೊಂಡವನು ಸಂಸ್ಕೃತ ಹಿಂದು. ಬಾಹ್ಯಾಡಂಬರಗಳು ಆದರ್ಶ ಹಿಂದುತ್ವದ ಲಕ್ಷಣಗಳಲ್ಲ. ಅದಕ್ಕಾಗಿ–

**"ಬೊಮ್ಮಬ್ರಾಹ್ಮಣ ತಾನೆಂಬ । ಹಮ್ಮಿನಜ್ಞಾನ ತುಂಬ**
**ದಂ–ಹಿಡಿದರೇನೂ ಫಲವಿಲ್ಲ । ಅಜ್ಞಾನವೆಲ್ಲ ॥**
**ಮಂಡೆ ಬೋಳ್ಮಾಡಿ ಕೈಯ । ದಂಡsಕೋಲ್ವಿಡಿಯ ಮಾಯಾ**
**ಕಂಡೆsಯಾ ಸನ್ಮಾರ್ಗತಾವ । ಭಯಭಕ್ತಿಭಾವ ॥**
**ಗೋಪೂಜೆ–ರಾಹುಶಾಂತಿ । ಆಪತ್ತಿ ಹರಣಭ್ರಾಂತಿ**
**ಈ ಪಾಟಿ ದೈವ ಕೃಪೆಯುಂಟೆ । ಸೈತಾನ ನಂಟೇ ॥**
**ಕಾಶಿ ಕಾವಡಿಯ ಹೊತ್ತು । ದೇಶದೇಶಗಳ ಸುತ್ತು**
**ಈಸು ದಂಡನೆಯು ಬರಿಗಂಟು । ಕೈಕಾಲು ಕುಂಟು ॥**
**ಗೋಪೀಚಂದನವು ಭಸ್ಮ । ಲೇಪ ಪನ್ನೆರಡು ನಾಮ**
**ಕಾಪಟ್ಯ ಹಲವಂಗ ನೇಮ । ನೀರಲ್ಲಿ ಹೋಮ॥**
**ಜಂಗಮ ತಾನೆಂದು ಸೊಕ್ಕಿ । ಲಿಂಗವ ಕೊರಳಾಗ ಯಿಕ್ಕಿ**
**ಕಂಗಾಣ, ತನ್ನಾತ್ಮಹಿತವೇನು । ಬರಿಮೋಸ ಕಾಣು ॥**

ಎಂಬಂತಹ ವಿಡಂಬನೆಗೆ ಹಿಂದು ಮತಾಚಾರ ಹಲವು ಸಲ ತುತ್ತಾಯಿತು. ನವಭಾರತೀಯ ಹಿಂದುತ್ವವು ಈ ಬಗೆಯ ಶುಷ್ಕಾಚಾರದಿಂದ ಮುಕ್ತವಾಗಬೇಕೆಂದೇ ಗಾಂಧಿಯವರೂ, ತಿಲಕರೂ ಭಜನೆಯನ್ನು ಪ್ರೋತ್ಸಾಹಿಸಿದರು. ಭಜನೆಯ ಸಾರ್ವಜನಿಕತೆ

ಇನ್ನಾವ ಉಪಾಸನಾವಿಧಿಗೂ ಇಲ್ಲ. ಸಾಹಿತ್ಯವು ರಾಷ್ಟ್ರೀಯರಾದ ದಯಾವೀರ, ಧರ್ಮವೀರ, ದಾನವೀರ, ಯುದ್ಧವೀರರ ಲಕ್ಷಣಗಳನ್ನು ಎತ್ತಿಹೇಳುವಂತಿರುವುದು ಸಾರ್ವಜನಿಕ ಸಂಘಟನೆಗೆ ಹೆಚ್ಚು ಪ್ರಯೋಜನಕರ. ಅವೀರಚರಿತೆಯು ಅಸ್ಫೂರ್ತಿದಾಯಕವಾದುದು. ರಾಷ್ಟ್ರಧರ್ಮ ಸಂಸ್ಥಾಪನಾರ್ಥವಾಗಿ ನಡೆದ ಚರಿತ್ರೆಗಳು ಭಜನವಸ್ತುಗಳಾಗುವುದು ಉದ್ದೇಶ ಸಾಧಕವಾದುದು. ರಾಷ್ಟ್ರೀಯ ಸಂಸ್ಕೃತಿಯ ರಕ್ಷಣೆಗಾಗಿ ಹೋರಾಡುವ ವೀರತ್ವವೇ ನಿಜವಾದ ವೀರತ್ವ. ಸಂಸ್ಕೃತಿಯು ಜೀವನದ ಸಾರ. ಅದಿದ್ದರೆ ಉಳಿದ ಎಲ್ಲವೂ ಇದ್ದಾವು, ಇದ್ದರೆ ಭೂಷಣಪ್ರಾಯ. ಅದಿಲ್ಲದಾಗ ಉಳಿದವು ಮೆಲ್ಲಮೆಲ್ಲನೆ ಕಳಚಿಕೊಂಡಾವು. ಕಳಚಿಕೊಳ್ಳದೆಕೆಲವರಲ್ಲಿ ಉಳಿದರೂ ಅವು ದೂಷಣಪ್ರಾಯ. ಅಂಥ ಪ್ರಾಚೀನ ರಾಜರ (ಜನನಾಯಕರ) ಪಟ್ಟಿಯಲ್ಲಿ ಮಾಂಧಾತ, ನಹುಷ, ಅಂಬರೀಷ, ಸಗರ, ಪ್ರಭು, ಹೇಹಯ, ಧರ್ಮರಾಜ, ನಲ, ದಶರಥ, ರಾಮ, ಪರಶುರಾಮ, ಇಕ್ಷ್ವಾಕು, ವಿಭೀಷಣ, ಭರತ, ಉತ್ತಾನಪಾದ, ಧ್ರುವರು ಸುಪ್ರಸಿದ್ಧರು. ಹರಿಹರದ ಅವತಾರಗಳೂ ಅಂಥ ಉದಾತ್ತ ಉದ್ದೇಶಕ್ಕಾಗಿಯೇ ಆದಂಥವುಗಳು. ಐತಿಹಾಸಿಕ ಕಾಲದ ಯುದ್ಧವೀರರೂ ಶಾಂತಿವೀರರೂ ಉಕ್ತಪಟ್ಟಿಗೆ ಸೇರುತ್ತಾರೆ–ಅವರು ಸ್ತ್ರೀಯರಿರಲಿ, ಪುರುಷರಿರಲಿ, ಅಪ್ರಾಪ್ತವಯಸ್ಕರಿರಲಿ, Unity with all beings–ಸರ್ವಾತ್ಮಕತೆಯ ಪ್ರಥಮಾನುಭವವು ರಾಷ್ಟ್ರಾತ್ಮಕತೆಯಲ್ಲಿ ದೊರಕುವುದರಿಂದ ನಿಜವಾದ ವೀರತ್ವದ ಸಾಮಾನ್ಯ ಉದಾಹರಣೆಗಳು ಉಕ್ತ ಲೋಕವೀರರ ಚರಿತೆಗಳಲ್ಲಿ ಲಭಿಸುತ್ತವೆ. ಅರಿಷಡ್ವರ್ಗವು ವೀರತ್ವಕ್ಕೆ ವಿರುದ್ಧ, ರಾಷ್ಟ್ರೀಯತೆಗೂ ವಿರುದ್ಧ. ಅರಾಷ್ಟ್ರೀಯ ಹಾಗೂ ಅಸಾಂಸ್ಕೃತಿಕ ವೀರತ್ವವು ಆಭಾಸಿಕ ವೀರತ್ವ; ಆದ್ದರಿಂದ ನಿಂದ್ಯ. ನಿಷ್ಪಾಪಜೀವಿಗಳ ರಕ್ಷಣೆ ಆದ್ಯಂತೋದ್ದೇಶವಾಗಿರುವುದು ನಿಜವಾದ ವೀರತ್ವಕ್ಕೆ ಮಾತ್ರ: 'ನಿಜಧೀರರ ನಿಲುವೇ ಚೆಲುವು!'

"Every one is equal to every other in every thing under all circumstances–ಎಲ್ಲ ಸಂದರ್ಭಗಳಲ್ಲೂ ಎಲ್ಲ ವಿಷಯಗಳಲ್ಲೂ ಎಲ್ಲರೂ ಸಮಾನರು" ಎಂಬುದು ಪ್ರಜಾಪ್ರಭುತ್ವದ ಅಲ್ಲ–ಯಾವ ಸಂಘಟನೆಯ ವ್ಯಾವಹಾರಿಕ ತತ್ವವೂ ಅಲ್ಲ. ಪ್ರಜೆಗಳೂ ಪ್ರಭುಗಳೂ ಪ್ರಜಾತ್ವದ ಹಕ್ಕಿನಲ್ಲಿ (ನಾಗರಿಕತ್ವದಲ್ಲಿ) ಅಥವಾ ಮತದಾರಿಕೆಯಲ್ಲಿ ಸಮಾನರು– ಎಂಬುದು ರಾಮನ ಕಾಲದಿಂದಲೂ ಇಲ್ಲಿ ನಂಬಿಕೊಂಡು ಬಂದ ಆದರ್ಶ. "ರಾಜನು ತನ್ನ ರಾಜ್ಯದ ಭೂಮಿಯನ್ನು ಸ್ವಂತ ಆಸ್ತಿಯೆಂದು ಗಣಿಸುವುದಕ್ಕೆ ಅವಕಾಶವಿರಲಿಲ್ಲ ('ಭಾರತೀಯ ಸಂಸ್ಕೃತಿ'ಯ ೨೭೯ನೆಯ ಪುಟವನ್ನು ಓದಿರಿ). ವಿಶ್ವಜಿದ್ಯಾಗದಲ್ಲಿ ಸರ್ವಸ್ವವನ್ನು ದಾನಮಾಡುವಾಗ ಕೂಡ ಚಕ್ರವರ್ತಿಯು ಭೂಮಿಯನ್ನೆಲ್ಲ ದಾನ ಮಾಡಲು ಹಕ್ಕಿಲ್ಲವೆಂದು ಪೂರ್ವಮೀಮಾಂಸಕರು ನಿರ್ಧರಿಸಿದರು (ಜೈಮಿನಿಯ ಮೀಮಾಂಸಾಸೂತ್ರದ ೪–೭–೩೮ ಮೇಲಿನ ಶಾಬರ ಭಾಷ್ಯವನ್ನು ಓದಿರಿ). ಚಕ್ರವರ್ತಿಯೇ ಭೂಮಿಗೆಲ್ಲ ಅಧಿಕಾರಿ, ಜನರು ಅವನ ಅನುಮತಿಯಿಂದ ಜೀವಿಸುವರೆಂಬ ತತ್ವಕ್ಕೆ ಬ್ರಿಟಿಷರೇ ಮೂಲ (Vide Bom. H.C.App. P. 1-124; Bombay Land Revenue Code. See 37, Bombay Act V of 1879; etc.). ಅಪ್ರಾಯಸ್ಥರಿಗೆ ಪ್ರಜಾತ್ವವಿಲ್ಲ; ಅವರಿಗಿರುವುದು ಪ್ರಜಾರಕ್ಷಿತತ್ವ. ಪ್ರಜೆ ರಕ್ಷಿತನಾದರೂ ಅವನಿಗೆ ಅಭಿಪ್ರಾಯ ಸ್ವಾತಂತ್ರ್ಯವಿದೆ.

Divine Right ದೇವದತ್ತವಾದ ರಾಜ್ಯಾಧಿಕಾರದ ಹಕ್ಕೆಂಬುದು ರಾಜರಿಗಿದೆಯೆಂದು ಭಾರತವೆಂದೂ ಒಪ್ಪಿಲ್ಲ. ('ಭಾರತೀಯ ಸಂಸ್ಕೃತಿ'ಯ ೨೩೦ನೆಯ ಪುಟವನ್ನೋದಿರಿ).

ಆರ್ಥಿಕ ಮೇಲ್ಮಟ್ಟವು ಒಬ್ಬನಿಗೆ, ಉಳಿದೆಲ್ಲರಿಗೂ ಉಪದೇಶ ಕೊಡುವ ಅಥವಾ ಆಜ್ಞೆಮಾಡುವ ಹಕ್ಕನ್ನು ಕೊಡುತ್ತದೆ ಎಂಬುದು ಭಾರತೀಯರೊಪ್ಪಿದ ತತ್ವವಾಗಿರಲಿಲ್ಲ. ಬ್ರಿಟಿಷ್ ಗುಲಾಮಗಿರಿಯ ಕಾಲದಿಂದ ಅಸಹಾಯಕರಾದ ದೀನರೆದುರು ಆಗ್ರಹದಿಂದ ಭಾರತೀಯ ಶ್ರೀಮಂತರೂ ಬ್ರಿಟಿಷ್ ದಾಸರಾದ ಇಲ್ಲಿಯ ಅಧಿಕಾರಿಗಳೂ ಈ ವ್ಯವಹಾರವನ್ನು ಜಾರಿಗೆ ತಂದರು. ಅವರ ಈ ಅಭಾರತೀಯತೆಯಿನ್ನೂ ಉಳಿದಿದೆ. ಅದೀಗ ದೇಶದಾದ್ಯಂತ ಹರಡಿರುವ ದುರ್ನಿವಾರ್ಯವಾದ ಮಹಾವ್ಯಾಧಿ. ರಾಷ್ಟ್ರಸಂಘಟಕರು ಈ ವ್ಯಾಧಿಯನ್ನು ಪರಿಹರಿಸಲು ತಕ್ಕ ಸುಬೋಧವನ್ನು ಜನರಲ್ಲಿ ಹರಡಬೇಕಲ್ಲದೆ, ನೈತಿಕಾತ್ಮಬಲವನ್ನು ಬೆಳೆಯಿಸಿಕೊಳ್ಳಲು ಬೇಕಾದ ಭ್ರಾತೃತ್ವದ ಕೃತಿಗಳನ್ನೂ ಪ್ರಚೋದಿಸಬೇಕಾಗಿದೆ. ಇಡಿಗ್ರಾಮವೇ ಒಂದು ಕುಟುಂಬವೆಂಬಂತೆ ವರ್ತಿಸುತ್ತಿದ್ದ ಋಗ್ವೇದೀಯ ಬುನಾದಿಯನ್ನು ಪಟ್ಟಣ–ನಗರಗಳಲ್ಲೂ ಬಿತ್ತಬೇಕಾಗಿದೆ. ಸಾಧುವಿಗೆ ಜಗತ್ತೇ ಕುಟುಂಬವೆಂದಿದ್ದರೆ ಇಂದಿನ ಅಸಾಧುವಿಗೆ ಕುಟುಂಬವೇ ಜಗತ್ತು ಅಥವಾ ರಾಷ್ಟ್ರ ಎನ್ನಿಸಿದೆ. ಈ ವಿಪರೀತ ಮತಿಯನ್ನು ನಿವಾರಿಸಲು ತಕ್ಕ ದೈನಂದಿನ ಆಚಾರ–ವ್ಯವಹಾರಗಳನ್ನು ರೂಪಿಸಲು ಸ್ವತಃ ಬಳಸಲು ಬೇಕಾದಷ್ಟು ನೆಲಕ್ಕಷ್ಟೇ ಪ್ರತಿಯೊಂದು ಕುಟುಂಬಕ್ಕೂ ಅಧಿಕಾರ ಎಂಬ ನವವಿಧಿಯನ್ನು ಮಾಡಿ ಜಾರಿಗೆ ತರಬೇಕು. ಮಿಕ್ಕ ನೆಲದ ಮೇಲೆ ಅದೇ ರೀತಿಯಿಂದ ಮಿಕ್ಕವರಿಗೆ ಅಧಿಕಾರ. ಕುಂಟುನೆವಗಳಿಂದ ಭೂಮಾಲಿಕತ್ವವನ್ನಿಟ್ಟುಕೊಳ್ಳುವವರನ್ನು ದಂಡಿಸಲು ಆ ವಿಧಿಯ ಪ್ರಶಾಸಕರಿಗೆ ಅಧಿಕಾರವು ಸಂಪೂರ್ಣವಾಗಿ ಇರಬೇಕು. ಪ್ರಶಾಸಕರು ರಾಷ್ಟ್ರಧರ್ಮದೀಕ್ಷಿತರಾಗಿಯೇ ಇರುವಂತೆ ಪ್ರಜೆಗಳೂ ಪ್ರತಿನಿಧಿಗಳೂ ನಿತ್ಯವೂ ನೋಡಿಕೊಳ್ಳಬೇಕು. ಸಂಬಳ–ದಿನಗೂಲಿಗಳಿರಬಾರದು. ಎಲ್ಲ ಕೆಲಸಗಳೂ ಎಲ್ಲೆಲ್ಲೂ "ಕಮಿಶನ್" ಸೂತ್ರದಂತೆ ಸರಕಾರ–ಸಾರ್ವಜನಿಕ–ಸಾವಕಾರರ ಕಾರ್ಯಾಲಯಗಳಲ್ಲಿ ಸಾಗುವಂತಾಗಬೇಕು. ಕೆಲಸ ಪರಿಮಾಣ–ಪ್ರಕಾರಗಳಂತೆ "ಕಮಿಶನ್" ನಿರ್ಧರಿಸಲ್ಪಡಬೇಕು. ಆ ಪರಿಮಾಣ ಪ್ರಕಾರಗಳ ನಿಕಷಗಳನ್ನು ವಿಧಿಯು (ಕಾಯದೆಯು) ನಿರ್ದಿಷ್ಟಪಡಿಸಿಟ್ಟಿರಬೇಕು ದುಡಿಯಲಾರದವರ ದೌರ್ಬಲ್ಯಗಳಿಗೂ ನಿಕಷಗಳಿರಬೇಕು ಮತ್ತು ಅವರ ಸಂರಕ್ಷಣೆಯು ಅಚ್ಯುತವಾಗಿ ಸಾಗಲು ತಕ್ಕ ಏರ್ಪಾಡನ್ನು ಸ್ಥಾನಿಕ ಸ್ವರಾಜ್ಯಸಂಸ್ಥೆಗಳು ವಿಧಿಯುಕ್ತವಾಗಿ ಮಾಡುವಂತಾಗಬೇಕು. ಇದಕ್ಕಾಗಿ ನಮ್ಮ ಸಂವಿಧಾನ ಹಾಗೂ ಕಾಯದೆಗಳ ಪುನರ್ನವೀಕರಣ ನಡೆಯಬೇಕು. ಜೀವನದ ನ್ಯಾಯದರ್ಶನವನ್ನು ಜನರಿಗೆ ತಿಳಿಸದೆ ಅವರನ್ನು ಸಂಘಟಿಸತೊಡಗುವುದು ಸಫಲವಾಗದು. ವಿಶೇಷಾನುಕೂಲಗಳನ್ನುಳ್ಳವರು ಅಡ್ಡ ಬಂದರೆ ಅವರನ್ನು ಸಾಮ, ದಾನ, ಭೇದ, ದಂಡಗಳಿಂದ ಹದಕ್ಕೆ ತರಲು ಸಂಘಟನ ಕೇಂದ್ರಗಳು ಸದಾ ಸಿದ್ಧವಾಗಿರಬೇಕು. ಆಗ ಮಾತ್ರ ಜನರು ಪ್ರಾಮಾಣಿಕತೆಯಿಂದ ಸಂಘವನ್ನು ಬೆಂಬಲಿಸುವ ಧೈರ್ಯವನ್ನು ತಂದು ಕೊಂಡಾರು. ಮೂಲಭೂತ ಹಕ್ಕುಗಳಲ್ಲಿ ಸ್ಥಿರಾಸ್ತಿಯ ಮೇಲಿನ ಹಕ್ಕು ಇಂದು ಬಹುಸಂಖ್ಯಾತರಿಗಿಲ್ಲದಿರುವಾಗ ಮತ್ತು ಇಲ್ಲವಾಗುತ್ತಿರುವಾಗ ಉಕ್ತ ಹಕ್ಕಿಗಾಗಿ (ಅಂದರೆ ತಮ್ಮ ಬಳಕೆಗಿಂತ ಹೆಚ್ಚು ಸ್ಥಿರಾಸ್ತಿ–

ಚರಾಸ್ತಿ ಸಂಗ್ರಹಕ್ಕಾಗಿ) ಕೂಗುವ ದುರಾತ್ಮರನ್ನು ಕಂಡಲ್ಲಿ ವಿಧಿವತ್ತಾಗಿ ದಂಡಿಸಲು ರಾಜಶಕ್ತಿ ರೂಪಿತವಾಗಬೇಕು. ಉಳ್ಳವರಿಗೆ ಮಾತ್ರ ಸ್ವರಾಜ್ಯ, ಸ್ವಾತಂತ್ರ್ಯ ಎಂಬುದು ಅಧರ್ಮ್ಯ, ಅಭಾರತೀಯ ಅಂಥ ಅನ್ಯಾಯವಿದ್ದ ಅವಧಿಗಳಲ್ಲೇ ವಿದೇಶೀಯರಿಲ್ಲಿ ಹೊಕ್ಕು ರಾಜಶಕ್ತಿಯನ್ನು ವಶಪಡಿಸಿಕೊಂಡು ಶೋಷಣೆಗಾರಂಭಿಸಿದ್ದು ಇತಿಹಾಸದಲ್ಲಿ ಸ್ಪಷ್ಟವಾಗಿದೆ. ಸ್ಥಾನಿಕ ಹಾಗೂ ಆರ್ಥಿಕ ಬಲಾತ್ಕಾರದಿಂದ ದೇಶಸೇವೆಗಾಗಿ ಮಂದಿಯನ್ನು ಒತ್ತಾಯಿಸುವ ಸಂದರ್ಭದಲ್ಲಿ ರಾಷ್ಟ್ರ ರಕ್ಷಣೆಗೆ ಜಯವು ಯಾವಾಗಲೂ ದೊರಕುತ್ತದೆ ಎಂದು ಹೇಳಲು ಸಾಧ್ಯವೇ ಇಲ್ಲ. ತದ್ವಿರುದ್ಧವಾಗಿ ಅಪಜಯದ ಸಂಭವ ಬಹಳ ಎನ್ನಬಹುದು. ಆಗ ರಕ್ಷಣೆ ಯಾರದ್ದು? ಪ್ರಗತಿ ಯಾರಿಗೆ ಎಂಬ ಸವಾಲನ್ನು ಅನ್ಯಾಯಕ್ಕೆ ತುತ್ತಾದ ಬಹುಸಂಖ್ಯಾತರು ಭಾರತದಲ್ಲಿ ಕಾರ್ಯತಃ ಕೇಳಿಯೇ ಇದ್ದಾರೆ ಎಂಬುದನ್ನು ಅನೇಕರು ಮರೆತಿದ್ದಾರೆ. ಅಂಥ ಕೇಳಿಕೆಯ ದೆಸೆಯಿಂದಲೇ ವಿದೇಶೀಯ ಸಾರ್ವಭೌಮತೆಗೆ ಇಲ್ಲಿ ಕ್ರಿ.ಪೂ.೩–೪ನೆಯ ಶತಮಾನಗಳಿಂದ ಅವಕಾಶ ಆಗಾಗ ಲಭ್ಯವಾಗುತ್ತ ಹೋದದ್ದು. ರಾಷ್ಟ್ರ ಭಕ್ತಿಯು ಬಡವರಿಗೆ ಮಾತ್ರ ಆಚರಣೀಯವೆಂಬಂಥ ಜೀವನ ಪರಿಸ್ಥಿತಿಯನ್ನು ನಿರ್ಮಿಸಿದ ಜನ–ದ್ರೋಹಿಗಳು ಹೆಚ್ಚಾದಾಗ ಮಾತ್ರ ಇಲ್ಲಿ ವಿದೇಶಿಯರ ದಾಳಿಗಳು ಸುಲಭ ಜಯವನ್ನು ಅವರಿಗೆ ಗಳಿಸಿಕೊಟ್ಟವು. ತ್ರಿಕರಣ ಶುದ್ಧಿಗೆ ತಿಲಾಂಜಲಿಯನ್ನಿತ್ತ ರಾಜಕೀಯ, ಆರ್ಥಿಕ ಉಪದೇಶಕರ ಆಡಂಬರದಿಂದ ಭಾರತೀಯ ಬಹುಸಂಖ್ಯಾತರೆಂದೂ ಬಹುಕಾಲ ಮರುಳಾಗಿ ಅವರಿಗೆ ತ್ರಿಕರಣ ಶುದ್ಧಿಯಿಂದ ವಿಧೇಯರಾಗಿ ವರ್ತಿಸಿದ್ದಿಲ್ಲ. ಈ ಅಂಶವನ್ನು ಮರೆತ ಸಂಸ್ಕೃತಿ ಪ್ರಚಾರಕರು ಮೂಢ ಮತಿಗಳು, ರಾಜಕೀಯ ಪಕ್ಷಗಳು ಮುನ್ನೋಟವಿಲ್ಲದ ಕುರುಡು ಹಂದಿಗಳು. ಅತ್ಯಂತ ಅಲ್ಪಸಂಖ್ಯಾತ ಲುಬ್ಧಾಢ್ಯರ ಸೇವೆಯನ್ನು ರಾಷ್ಟ್ರ ಸೇವೆಯೆಂದು ಯಾವ ಹಿಂದುವೂ ಮನ್ನಿಸಲಾರನು. ಇದು ನಿಜವಾದ ಜನಸಂಘಟಕರಿಗೆ ಯಾವಾಗಲೂ ಗೊತ್ತು. ಅವರೆಂದೂ ಲುಬ್ಧರು ಮಾಡುವ ದೀನರ ಶೋಷಣೆಯನ್ನು ಯಾವ ಸಂವಿಧಾನ, ಹಕ್ಕು, ಮೂಲ, ಭೂತ, ಪಿಶಾಚಗಳ ಆಧಾರದಿಂದಲೂ ಸರಿಯೆಂದೆನ್ನರು. ಅವರ ಅಲ್ಪದಾನದ ಆಡಂಬರ–ಪ್ರದರ್ಶನಗಳಿಂದ ಹಿಂದು ಧರ್ಮ (ಸಂಸ್ಕೃತಿ)ಜ್ಞರು ಮೋಸಹೋಗಲಾರರು. ಯಥಾ ಶಕ್ತಿಯ (ಶಕ್ತಿಗೆ ಸಮಾನುಪಾತದಲ್ಲಿರುವ) ದಾನವೊಂದೇ ಶಾಸ್ತ್ರೋಕ್ತವಾಗಿ ಗ್ರಾಹ್ಯ. ಲುಬ್ಧ ದಸ್ಯುಗಳಾದ ಕೇವಲಾದಿಗಳನ್ನು ಸಾಕುವ ರಾಜಶಕ್ತಿಯು ಕೇವಲ ಶನಿ ಅಥವಾ ಕಲಿ ಎಂಬುದು ವ್ಯಾಸಸಿದ್ಧಾಂತ. ಧರ್ಮಜ್ಞತೆಯಿಂದ ಯಥಾಶಕ್ತಿ ದಾನ ಮಾಡಲೊಲ್ಲದ ಕೇವಲಾಘರನ್ನು ಕಾಯದೆಯಿಂದ ಬಗ್ಗಿಸುವದು ಧರ್ಮ್ಯ. ಧರ್ಮ್ಯವಾದುದನ್ನು ಮಾಡದಿರುವುದು ಅಧರ್ಮ. ಅಧರ್ಮವು ರಾಷ್ಟ್ರ ಘಾತಕವಾದುದು. ಬಾಧ್ಯತೆಗೆ ಸಮವಾಗಿಯೇ ಹಕ್ಕಿರುತ್ತದೆ; ಅವುಗಳಲ್ಲಿ ವಿಷಮಾನುಪಾತವಿರುವುದು ಹಸಿ ಅನ್ಯಾಯ. ಅಂಥ ಅನ್ಯಾಯವನ್ನು ಸ್ವೀಕರಿಸುವ ಪಕ್ಷಗಳು ಅಭಾರತೀಯ, ಅಹಿಂದು. ಗೋಮುಖವ್ಯಾಘ್ರ ಹಿಂದುಗಳಷ್ಟೇ ಅನ್ಯಾಯವನ್ನು ನ್ಯಾಯವೆಂದು ಕೂಗುತ್ತ ತಿರುಗುತ್ತಾರೆ. ಅವರ ನಿಗ್ರಹವು ರಾಷ್ಟ್ರಧರ್ಮ. ವಿಡಂಬನೀಯ ಹಿಂದುಗಳ ನಿಗ್ರಹ ಮೊದಲಾಗತಕ್ಕದ್ದು.



# ೧೪

# ರಾಷ್ಟ್ರೀಯ ಪುನರ್ಜನ್ಮ

ಕರ್ಮಕ್ಕೆ ತಕ್ಕ ಫಲ–ಎಂಬುದು ಕೇವಲ ವ್ಯಕ್ತಿಗೆ ಮಾತ್ರ ಅನ್ವಯಿಸುವ ಕರ್ಮಸೂತ್ರವಲ್ಲ. ವ್ಯಕ್ತಿಗಿಂತ ಹೆಚ್ಚಾಗಿ ಅದು ರಾಷ್ಟ್ರಕ್ಕೂ ಜಗತ್ತಿಗೂ ಅನ್ವಯಿಸುತ್ತದೆ. ಪ್ರತಿಯೊಂದು ನಾಗರಿಕತೆಯಲ್ಲಿಯೂ ವ್ಯಕ್ತಿಯಲ್ಲಿ ವ್ಯಕ್ತಿವೈಶಿಷ್ಟ್ಯಕ್ಕಿಂತ ಮಾನಸ ಶಾಸ್ತ್ರೀಯವಾಗಿಯೂ ಜೀವಶಾಸ್ತ್ರೀಯವಾಗಿಯೂ ಸಾಮಾಜಿಕಾಂಶಗಳು ಪರಿಮಾಣ–ಪ್ರಕಾರಗಳೆರಡರಲ್ಲೂ ಹೆಚ್ಚಾಗಿರುತ್ತವೆ. ಆದುದರಿಂದ ಕರ್ಮಸಿದ್ಧಾಂತವು ಪುನರ್ಜನ್ಮ ಸಿದ್ಧಾಂತವನ್ನಂಬಿಸಿದಾಗಲೂ ರಾಷ್ಟ್ರ ಪುನರ್ಜನ್ಮಸಿದ್ಧಾಂತದಿಂದ (ಪ್ರತಿ ತಲೆಮಾರೂ ರಾಷ್ಟ್ರಕ್ಕೆ ಪುನರ್ಜನ್ಮ) ವ್ಯಾಪ್ತವಾಗಿರುತ್ತದೆ. ವ್ಯಾಪಕವಾದುದರ ಬಲವು ವ್ಯಾಪ್ಯವಾದುದಕ್ಕಿಂತ ಹೆಚ್ಚಿನದು. ಒಂದು ತಲೆಮಾರಿಗೆ ನೂರು (ಅಥವಾ ನೂರಿಪ್ಪತ್ತು ವರ್ಷ) ಹತ್ತು ವರ್ಷವಲ್ಲ. ಆದುದರಿಂದ ಸಾಂಸ್ಕೃತಿಕ ಯೋಜನೆಯಾದ ಜೀವನ ಯೋಜನೆ ಶತವಾರ್ಷಿಕವಾಗಿರಬೇಕಲ್ಲದೆ ಪಂಚವಾರ್ಷಿಕವಾಗಿರಕೂಡದು. ಕೊನೆಯ ಪಕ್ಷ ಪಂಚಾಶದ್ವರ್ಷದ್ದಾದರೂ ಆಗಿರುವದಗತ್ಯ. ಜೊತೆಗೆ ಕಾರ್ಯಪ್ರಗತಿಯ ವಿಮರ್ಶೆಯು ಪ್ರತಿ ವರ್ಷವೂ ನಡೆಯುತ್ತಿರುವದಗತ್ಯ. "ಸಂತಃ ಪರೀಕ್ಷಾನ್ಯತರದ್ ಭಜಂತೇ" ಎಂಬುದನ್ನು ಮಾತ್ರ ವ್ಯಾವಹಾರಿಕವಾಗಿ ಹತ್ತು ವರ್ಷದ ಗಡಿಗಿಳಿಸಬಹುದು– ೨೦ ಅಲ್ಲ.

ಅಸಂಸ್ಕೃತರಲ್ಲಿ ಮೇಲ್ತನ–ಕೀಳ್ತನಗಳಿರುವುದು ಅಸಂಬದ್ಧ. ಸಂಸ್ಕೃತರ ಸಂಸ್ಕೃತಿಯ ಪರಿಮಾಣ–ಪ್ರಕಾರಗಳನ್ನು ಮನ್ನಿಸಿ ಅನುಪಾತಿಕವಾಗಿ ಗೌರವಿಸುವದು ಹಿಂದು ದೃಷ್ಟಿಕೋನ. ರಾಷ್ಟ್ರೀಯ ಔದಾರ್ಯಸಂಪನ್ನತೆಯು ಸಾಂಸ್ಕೃತಿಕ ಅಥವಾ ಜೈವನಿಕ ವ್ಯಾಪ್ತಿಯಲ್ಲಿ ಅತ್ಯುನ್ನತವಾದ ವ್ಯಾವಹಾರಿಕ ಮಟ್ಟ. ಗೌರವವಿದ್ದಲ್ಲಿ ವಿಧೇಯತೆ ತೋರದಿರುವುದು ಅಭಾರತೀಯ. ದೇಶಾವರಿ ನಗೆಯ ಗೌರವ ಸಮರ್ಪಣದ ಪಾಶ್ಚಾತ್ಯತೆ ಅನಾರ್ಯ. ಅನಾರ್ಯವಾದುದು ಅಸ್ವರ್ಗ್ಯ, ಅಕೀರ್ತಿಕರ, ಅಸದ್ಗತಿಕರ. ಸ್ವಾರ್ಥ ನಾಶದ ಭಯಗ್ರಸ್ತತೆಯಿಂದ ಮಾಡುವ ಈ ಮನುಷ್ಯ ಸೇವೆಯು ಅತ್ಯಂತ ಹೀನವೆಂಬುದು ರಾಷ್ಟ್ರೀಯತೆಯ ಮಾನದಂಡದಿಂದ ಸಿದ್ಧವಾದುದು. ಹೀನವು ಅರಾಷ್ಟ್ರೀಯ, ಅರಾಷ್ಟ್ರೀಯವು ಹೀನ. ಸಂಕುಚಿತ ವ್ಯಕ್ತಿ ಸ್ವಾರ್ಥವಿರುವಲ್ಲಿ ರಾಷ್ಟ್ರೀಯತೆ ಎಂದೂ ಇರಲಾರದು. ಅದಕ್ಕೂ ಇದಕ್ಕೂ ಎಣ್ಣೆಸೀಗೆಯ ಸಂಬಂಧ. ಯಾವ ಸಾಧು–ಸಂತರ ಕೃಪಾಪೋಷಿತತೆಯಿಂದಲೂ

ಉಕ್ತ ಸಂಬಂಧವು ನಾಗರಿಕವಾಗದು. ಮೌಲ್ಯಗಳ ವ್ಯಾಪ್ತಿತಾರತಮ್ಯವನ್ನರಿಯದ ಸಾಧು ಸಾಧುವಲ್ಲ, ಸಂತ ಸಂತನಲ್ಲ, ಗುರು ಗುರುವಲ್ಲ, ಶಿಷ್ಯ ಶಿಷ್ಯನಲ್ಲ. ರಾಷ್ಟ್ರದ ಹಿತವು ವ್ಯಾವಹಾರಿಕವಾದ ಆಧುನಿಕ ಪರಮ ಧ್ಯೇಯ, ಪರಮ ಮೌಲ್ಯ.

ಸಮರ್ಪಕವಾಗಿ ಸ್ವಕರ್ತವ್ಯವನ್ನು ಮಾಡುವಷ್ಟೇ ಜಾಣತನದಿಂದ ಪರರಿಂದ ಅವರ ಕರ್ತವ್ಯವನ್ನು ಮಾಡಿಸುವುದೂ ರಾಷ್ಟ್ರೀಯ ಸಂಘಟಕರ ಧರ್ಮ. ಧರ್ಮಾಧಿಕಾರವು ಎಲ್ಲರಿಗೂ ಇಲ್ಲಿದೆ. ಕರ್ತವ್ಯಭೇದವು ಶಕ್ತಿಭೇದವನ್ನವಲಂಬಿಸಿದೆ. ಆದರೆ ಕರ್ತವ್ಯರಹಿತತೆಯು ರಾಷ್ಟ್ರೀಯ ಜೀವನ ವ್ಯವಸ್ಥೆಯಲ್ಲಿ ದುಡಿಯಲಾರದವರಿಗೆ ಕೂಡ ಇಲ್ಲ. ಹುಚ್ಚರಷ್ಟೇ ಅಪವಾದಪಂಕ್ತಿಗೆ ಸೇರುತ್ತಾರೆ. ಅವರ ದೇಖರೇಖೆ ಇತರರ ಕರ್ತವ್ಯ. ಶಕ್ತಿಗೆ ತಕ್ಕಂತೆ ಸಾರ್ವಜನಿಕ ಹಿತದ ಕೆಲಸ ಮಾಡದವನು ರಾಷ್ಟ್ರೀಯ ದೃಷ್ಟಿಯಿಂದ ಇಲ್ಲಿ ಕಳ್ಳ, ಆದ್ದರಿಂದ ದಂಡನೀಯ– ಎಂಬುದು ಮಹಾತ್ಮ ಮತ. ಆತ್ಮವು ಮಹಾತ್ಮವಾಗುವುದು ನಿಜವಾದ ಪುನರ್ಜನ್ಮ.



# ೧೫

# ವ್ಯಾಸೋಪದೇಶ

ಸ್ವಾರ್ಥಪ್ರೇರಿತವಾದ ಕಾಮಕ್ರೋಧಾದಿಗಳು ಸಾಂಸ್ಕೃತಿಕವಾಗಿ ಶೂದ್ರ ಮಟ್ಟದವು; ಶಮದಮಾದಿ ಸಂಪನ್ನತೆಯು ಬ್ರಾಹ್ಮಣಮಟ್ಟ; ಅದನ್ನುಳ್ಳ ಶೂದ್ರನು ಬ್ರಾಹ್ಮಣನು: ಅಂಥ ಜ್ಞಾನ ಬಂದ ಮೇಲೆಯೂ ಐಶ್ವರ್ಯದಿಂದ ದರ್ಪ ಉಂಟಾದರೆ ಅದು ನಷ್ಟವಾಗಿ ಹೋಗುವುದು. ಐಶ್ವರ್ಯದರ್ಪವು ರಾಷ್ಟ್ರೀಯತೆಯ ಜ್ಞಾನವನ್ನು ಕಳೆದೊಗೆಯಬಲ್ಲದು. 'ಶ್ರೀಮದ, ಸ್ತ್ರೀಮದ, ಮದ್ಯಮದ, ಮಾಂಸಮದ, ಸ್ಥಾನಮದ, ಮಾನಮದ, ಬಲಮದ, ಗುಣಮದಗಳೆಲ್ಲವೂ ಐಶ್ವರ್ಯಮದದ ಅಂಗಗಳು. ಮದವು (ದರ್ಪವು) ಪ್ರಮಾದಪ್ರೇರಕ. ಪ್ರಮಾದಾಪ್ರಮಾದಭೇದವು ಪ್ರಸನ್ನಮನಸ್ಕರಾದ (ದ್ವಿಜ) ಸಂಸ್ಕೃತರಿಗೆ ಮಾತ್ರ ಗೊತ್ತಾಗುವ ದೇವಗುಹ್ಯ.

> **ಶೂದ್ರಯೋನೌ ಹಿ ಜಾತಸ್ಯ**
> **ಸದ್ಗುಣಾನುಪತಿಷ್ಠತಃ ।**
> **ವೈಶ್ಯತ್ವಂ ಲಭತೇ ಬ್ರಹ್ಮನ್**
> **ಕ್ಷತ್ರಿಯತ್ವಂ ತಥೈವಚ ॥      ಮ.ಭಾ.ಶಾಂ.ಪ. ೨೧೨-೧೧॥**

ಗುಣವಿಲ್ಲಿ ಸಾಂಸ್ಕೃತಿಕ. ಆದುದರಿಂದ ತಂತ್ರಲಬ್ಧವಾದ ಸ್ಥಾನಮಾನಾಗ್ರಹಗಳಿಂದ ಅಥವಾ ಮದಮಾತ್ಸರ್ಯಾದಿಗಳಿಂದ ಯಾರೂ ಇಲ್ಲಿ ಮೇಲು ಜಾತಿಯ ಸಂಸ್ಕಾರವನ್ನು ಪಡೆಯಲಾರರು. ಜಾತಿದ್ವೇಷವು ಸಂಸ್ಕೃತಿಮಾರಕ. ಗರ್ವವು ಸರ್ವಸದ್ಗುಣಗಳ ಶತ್ರು. ಸದ್ಗುಣವಂತರು ಸಜ್ಜನರು. ಸಂಸ್ಕೃತರು. ಬ್ರಹ್ಮ (Intellectuals) ದ್ವೇಷವು ಒಂದು ಜಾತಿದ್ವೇಷ. ಅದರಿಂದ ಬಲಿಯು ಪಾತಾಳಕ್ಕಿಳಿಯಬೇಕಾಗಿ ಬಂದಂತೆ ರಾಷ್ಟ್ರವು ಅಧೋಗತಿಗಿಳಿಯುತ್ತದೆ-ಎಂಬುದು ಸಾಮಾಜಿಕ ಮನಃಶಾಸ್ತ್ರಸಿದ್ಧ. ಆಭಾಸಿಕ ಬ್ರಾಹ್ಮಣರು (ಬ್ರಹ್ಮವಂತರು) ಬ್ರಾಹ್ಮಣರಲ್ಲವೆಂಬುದು ಸುಸ್ಪಷ್ಟ. ಜನ್ಮದ್ವೇಷವು ಜ್ಞಾನಿ (ಬ್ರಾಹ್ಮಣ)ಗಿಲ್ಲ. ಜಾತಿಯು ಜನ್ಮವೆಂದೆನ್ನಿಸಿದ ವರ್ತಮಾನಕಾಲದಲ್ಲಿ ಜಾತ್ಯಾ ಬ್ರಾಹ್ಮಣ ಅಥವಾ ಜಾತ್ಯಾ ಬ್ರಾಹ್ಮಣೇತರ ಎಂಬಷ್ಟೇ ಕಾರಣದಿಂದ ಅವರು ಜ್ಞಾನಿಗಳಾಗಿದ್ದರೂ ಅವಹೇಳನ-ಉದಾಸೀನತೆಗಳಿಗೀಡಾಗುವ ಅಥವಾ ಅಜ್ಞಾನಿಗಳಾಗಿದ್ದಾಗಲೂ ಅವರನ್ನು ಅಟ್ಟಕೇರಿಸುವ ವ್ಯವಹಾರವು ಪದ-ಪದವೀ-ಬಿರುದಾದಿಗಳ ದಾನದಲ್ಲಿ ಕಂಡುಬರುವಂತಾದುದು ಹೇಯ.

ಇದಕ್ಕಿಂತ ಪ್ರತಿಯೊಂದು ಹಿಂದು ಜಾತಿಗೂ ಒಂದೊಂದು 'ಸೀಟು' ಎಂಬ ವ್ಯವಸ್ಥೆ ಮಾಡಿದರೆ ಒಳ್ಳೆಯದಾದೀತು. ಸಂಯುಕ್ತ ರಾಷ್ಟ್ರಸಂಘದಲ್ಲಿ ದೇಶಕ್ಕೊಂದು ಸೀಟಿದ್ದ ಹಾಗೆ ಇಲ್ಲಿ ಕೂಡ ಕೊಡಬಹುದು. ಅದರಿಂದ ಅವರವರ ಉದ್ಧಾರವನ್ನು ಅವರವರೇ ಮಾಡಿಕೊಳ್ಳಬೇಕೆಂಬ ಹೊಣೆಯ ಅರಿವಾಗಿ ನಿಷ್ಕಾರಣವಾಗಿ ಪರಜಾತಿಯವರನ್ನು ದೂರಿ ವ್ಯಕ್ತಿಸ್ವಾರ್ಥವನ್ನು ಮಾತ್ರ ಸಾಧಿಸಿಕೊಳ್ಳುವ ಮುಖಂಡರ ಪೀಳಿಗೆಗೆ ಕೊನೆಯುಂಟಾದೀತು.

ವಿವೇಕಿಗಳಿಗೆ ಅವಿವೇಕಿಗಳೊಡನೆ ರಾಜಿ ಇಲ್ಲ–ಎಂದ ಧರ್ಮರಾಯನು ಭಾರತೀಯ, ಹಿಂದು, ಆರ್ಯ–ಗುಣ ಕರ್ಮಗಳಲ್ಲಿ. ವಿವೇಕಿಗಳೊಡನೆ ತಲೆಬಾಗಿ ನಡೆದುಕೊಳ್ಳುವ ವಿವೇಕ ಅವನಲ್ಲಿದ್ದುದರಿಂದ ತನ್ನಲ್ಲಿಯ ಅವಿವೇಕವನ್ನು ಸಂಪೂರ್ಣವಾಗಿ ಕಳೆದುಕೊಂಡು ಸದೇಹ ಸ್ವರ್ಗಾರೋಹಣ ಮಾಡಿದನು. ಜಗತ್ತಿನ ಯಾವ ಮಹಾ ಕಾವ್ಯದಲ್ಲೂ ಇಂಥ ಪಾತ್ರವಿಲ್ಲ. ರಾಮಕೃಷ್ಣಾದಿ ಅವತಾರಗಳಿಗಿಲ್ಲದ ವಿಶಿಷ್ಟ ಪುರಸ್ಕಾರವನ್ನು ವ್ಯಾಸನು ಧರ್ಮರಾಯನಿಗೆ ಕೊಟ್ಟದ್ದು ಅರ್ಥಪೂರ್ಣವಾಗಿದೆ. ಅವನ ಧರ್ಮಜ್ಞಾನವು ಸಂಘಟಕರಿಗೆ ಅಗತ್ಯ.

ಧರ್ಮ, ದಾನ, ಸತ್ಯ, ಶೀಲಗಳ ಪೂರ್ಣತೆ ಇರುವುದು – ದಕ್ಷತೆ, ಯಶಸ್ಸು, ಸ್ವರ್ಗ ಮತ್ತು ನಿಜಸುಖಗಳಲ್ಲಿ. ಮಗ, ಹೆಂಡತಿ, ಮಳೆ, ದಾನಗಳು ಮಾನವನ ಆತ್ಮ, ಗೆಳೆಯ, ಉಪಜೀವನ ಸಾಧನ ಮತ್ತು ನೀತಿ. ಧನವಂತರಲ್ಲಿ ದಕ್ಷ, ಧನಗಳಲ್ಲಿ ವಿದ್ಯೆ, ಲಾಭಗಳಲ್ಲಿ ದಾರ್ಢ್ಯ ಮತ್ತು ಸುಖಗಳಲ್ಲಿ ತುಷ್ಟಿ ಉತ್ತಮ. ಧರ್ಮಾಚಾರಗಳಲ್ಲಿ ದಯೆ ಮುಖ್ಯವಾದದ್ದು; ನಿತ್ಯಸಫಲವಾಗುವ ಧರ್ಮಾಚಾರವೆಂದರೆ ವೇದಾಭ್ಯಾಸ; ಮನೋನಿಗ್ರಹವು ಯಾರಿಗೂ ದುಃಖ ಉಂಟು ಮಾಡದು. ವಿವೇಕಿಗಳೊಡನೆ ಅವಿವೇಕಿ ರಾಜಿ ಮಾಡಿಕೊಳ್ಳ ಹೋಗುವುದು ವ್ಯರ್ಥ. ದುರಭಿಮಾನದ ತ್ಯಾಗವು ಪ್ರಿಯವನ್ನು ತರುತ್ತದೆ. ಕ್ರೋಧಾಗ್ನಿ ತ್ಯಾಗದಿಂದ ಯಾರೂ ಅಳರು. ಕಾಮತ್ಯಾಗದಿಂದ ಧನಿತ್ವಪ್ರಾಪ್ತಿ–ಲೋಭತ್ಯಾಗದಿಂದ ಸುಖಪ್ರಾಪ್ತಿ. ಧರ್ಮಪ್ರಗತಿಯಾಗುವುದು ಗುರುಗಳಿಗೆ ದಾನ ಕೊಡುವುದರಿಂದ. ಕಲಾವಿದರಿಗೆ ದಾನಕೊಡುವುದು ಕೀರ್ತಿಗಾಗಿ. ಜವಾನರಿಗೆ ಸಂಬಳ ಕೊಡುವುದು ಅವರನ್ನೂ ಅವರ ಮೂಲಕ ತನ್ನನ್ನೂ ಹೊರೆಯಲು. ಸರಕಾರಕ್ಕೆ ಜನ ಕಂದಾಯ ಕೊಡುವುದು ಹೆದರಿಕೆಯಿಂದ ಪಾರಾಗಲು. ಲೋಕವನ್ನು ಮುಸುಕಿರುವುದು ಅಜ್ಞಾನ. ಅದರಿಂದ ಅದು ಹೊಳೆಯದು. ಲೋಭದಿಂದ ಮಾನವರು ತಮ್ಮ ಗೆಳೆಯರನ್ನು ಬಿಡುವರು. ಸಂಗದೋಷದ ದೆಸೆಯಿಂದ ನರರು ಸ್ವರ್ಗಗಾಮಿಗಳಾಗರು. ಕಡುಬಡವನು ಇದ್ದೂ ಸತ್ತವ. ಅರಾಜಕತೆಯು ರಾಷ್ಟ್ರದ ಮರಣ. ಶ್ರೋತ್ರಿಯನಿಲ್ಲದೆ ಮಾಡಿದ ಶ್ರಾದ್ಧವು ಮೃತ. ದಕ್ಷಿಣೆ ಕೊಡದೆ ಮಾಡಿದ ಯಜ್ಞವು ವ್ಯರ್ಥ.

ಸೂರ್ಯನಿಗೆ ಬ್ರಹ್ಮವು ಉತ್ಥಾನಶಕ್ತಿದಾಯಕ. ಅವನ ಸುತ್ತ ತಿರುಗುವವರು ದೇವತೆಗಳು. ಅವನನ್ನು ಮುಳುಗಿಸುವವನು ಯಮ. ಸತ್ಯದಲ್ಲಿ ಅವನ ನೆಲೆ. ವಿದ್ಯೆಯು ವಿದ್ವತ್ತೆಯ ಬುಡ. ಶೋಧಕತ್ವದಿಂದ ಮಹತ್ವ ಉಂಟಾಗುವುದು. ಧೃತಿ ಸಂಪನ್ನನು ಹೆಣ್ಣಿಗೆ ತಕ್ಕವರ. ಜ್ಞಾನವೃದ್ಧರ ಸೇವೆಯಿಂದಲೇ ಮಾನವನು ಬುದ್ಧಿವಂತನಾಗುವನು. ಗುರುವಿನ

ದೇವತ್ವವಿರುವುದು ಹೆಚ್ಚಿನ ಓದಿನಲ್ಲಿ; ಶಮದಮಾದಿ ಸಾಧನಸಂಪಾದನೆಯೇ ಅವನ ತಪಸ್ಸು. ಮರಣಾವಸ್ಥೆಯಲ್ಲಿ ಮಾನವನಿಗೆ ತನ್ನ ಮಾನವತ್ವದ ಅರಿವಾಗುವುದು; ಪೂಜ್ಯನಿಂದೆ ಅವನ ದುರ್ಗುಣ. ಕ್ಷತ್ರಿಯನಿಗೆ ಶಸ್ತ್ರವಿದ್ಯೆಯಿಂದ ದೇವತ್ವಪ್ರಾಪ್ತಿ; ಅವನು ಮಾಡಬೇಕಾದದ್ದು ಯಜ್ಞವನ್ನು; ಅವನಿಗೆ ಮರಣಾವಸ್ಥೆಯಲ್ಲಿ ತನ್ನ ನರತ್ವದ ಅನುಭವ ಬರುತ್ತದೆ. ಆರ್ತರನ್ನು ಕಾಯದಿರುವುದು ಅವನ ದುರ್ಗುಣ. ಪ್ರಾಣರೂಪದ ಸಾಮವನ್ನು ಯಜ್ಞಮಾಡಬೇಕು; ಮನಸ್ಸು ಅದಕ್ಕೆ ಯಜುಸ್ಸು; ಜ್ಞಾನಯಜ್ಞವನ್ನು ಋಕ್ ಸ್ವೀಕರಿಸುತ್ತದೆ, ಯಜ್ಞಕ್ಕೆ ಋಗುದ್ಗಾರವು ಕೊನೆ. ಸಕಾಲವೃಷ್ಟಿಯು ದೇವತಾರಾಧನೆಯ ಫಲ. ಶ್ರಾದ್ಧಕ್ಕೆ ಗದ್ದೆ, ತೋಟ, ಸತಿ–ಸುತರು ಶ್ರೇಷ್ಠಫಲ. ಲೋಕದ ಅರ್ಥಸಂಪತ್ತಿರುವುದು ಸಾಧನ–ಸಾಮಗ್ರಿಗಳಲ್ಲಿ, ಧರ್ಮವೀರನ ತಂದೆ ಧನ್ಯ. ದೇವ, ಅತಿಥಿ, ಸೇವಕ, ಗುರು, ಆತ್ಮಗಳನ್ನು ತಣಿಸದವನು ಇಂದ್ರಿಯಾರ್ಥಗಳ ಅನುಭವ, ಸ್ಥಾನ–ಮಾನ–ಮತಿವಂತಿಕೆ, ಧನಾಧಿಕಾರ ಜನಮತಗಳನ್ನು ಪಡೆದರೂ ಜೀವನ್ಮೃತನು.

ಪಾರ್ಥಿವಪ್ರಜ್ಞೆಗೆ ತಾಯಿ ಹೆಚ್ಚು, ವ್ಯೋಮಪ್ರಜ್ಞೆಗೆ ತಂದೆ ಹೆಚ್ಚು. ವಾಯು ವೇಗವನ್ನು ಮೀರುವುದು ಮನಸ್ಸು. ಚಿಂತೆಯು ಹುಲ್ಲಿಗಿಂತ ಕಡೆ. ಬಿಡುಗಣ್ಣಿನ ಜಂತುವೆಂದರೆ ಮೀನು. ಹುಟ್ಟಿದೊಡನೆ ಅಲ್ಲಾಡಲಾರದ್ದು ಮೊಟ್ಟೆ. ಕಲ್ಲಿಗೆ ಹೃದಯವಿಲ್ಲ. ವೇಗದಿಂದ ಹೊಳೆಯ ಶಕ್ತಿ ಹೆಚ್ಚುವುದು. ಚಿತ್ತದ ಶಕ್ತಿಯೂ ಹೆಚ್ಚುವುದು. ಪ್ರವಾಸಿಗೆ ಅಂಗಡಿಕಾರನು ನೆರವಿಗ. ಹೆಂಡತಿ ಗೃಹಸ್ಥನ ಸಖಿ. ರೋಗಿಗೆ ವೈದ್ಯನೇ ಸಖ. ಮರಣಕಾಲದಲ್ಲಿ ದಾನಧರ್ಮವು ಮಿತ್ರ. ಅಗ್ನಿಯು ಸರ್ವಭೂತಗಳ ಅತಿಥಿ. ಮೋಕ್ಷವು ಅಮರ ಧರ್ಮವು. ಪೇಯಗಳಲ್ಲಿ ಹಾಲು ಅಮೃತ. ನಮ್ಮ ಜಗತ್ತಿಡೀ ವಾಯುಮಯ. ಏಕಾಕಿಯಾಗಿ ತಿರುಗುವವನು ಸೂರ್ಯ. ಹುಟ್ಟಿದ ಮೇಲೆ ಹುಟ್ಟುವವನು ಚಂದ್ರ. ಚಳಿಗೆ ಬೆಂಕಿಯು ಮದ್ದು. ಬಿತ್ತಿಗೆಗೆ ಬುಡ ಗದ್ದೆ.

ಅಹಂಕಾರವು ತಾಯಿ, ಆನಂದವು ತಂದೆ. ಬ್ರಹ್ಮವು ನಿಷ್ಪಂದ. ನಿರ್ನಿಮೇಷ. ಪಿಂಡಾಂಡ–ಬ್ರಹ್ಮಾಂಡಗಳು ಅಂಡಾಕೃತಿಯವು. ದೇಹಾತ್ಮಭಾವರಹಿತನಾದ ಯೋಗಿಗೆ ದುಃಖವಿಲ್ಲ. ದೃಷ್ಟಿವೇಗದಿಂದ ಚಿತ್ತವು ಸೃಷ್ಟಿಬಲವನ್ನು ಪಡೆಯುತ್ತದೆ. ಸೂರ್ಯನು ಆತ್ಮ. ಚಂದ್ರನು ಪ್ರಪಂಚಪ್ರಜ್ಞೆ, ಚಳಿಯು ಅವಿದ್ಯೆ, ಅಗ್ನಿಯು ವಿದ್ಯೆ. ಮೀನು ಬ್ರಹ್ಮ. ವಿದ್ಯಾವಿದ್ಯೆಗಳಿಗೆ ಶರೀರವು ನಿಧಾನಪಾತ್ರ. ದಾರ್ಢ್ಯವು ಆರೋಗ್ಯ. "ಕೊನೆಗಾಣಿಸಲಾರದ ಕೆಲಸದಲ್ಲಿ ತೊಡಗಬಾರದು. ಪರರು ಕಸಿದುಕೊಂಡು ಹೋಗಲು ಸಾಧ್ಯವಾಗುವಂಥ ವಸ್ತುವನ್ನು ಸಂಪಾದಿಸ ಹೋಗಬಾರದು. ಬೇರನ್ನು ಕಿತ್ತೊಗೆಯಲು ಸಾಧ್ಯವಾಗದಂಥದನ್ನು ಅಗೆಯಹೊರಡಬಾರದು. ತನಗೆ ಕಾಯಲುಬಾರದಿಹ ತಲೆಯಿರುವವನನ್ನು ಕೊಲ್ಲಬಾರದು"– ಎಂಬ ಭೀಷ್ಮೋಕ್ತ ಆಪದ್ಧರ್ಮದಿಂದ ಯುಧಿಷ್ಠಿರನ ಧರ್ಮಜ್ಞಾನವನ್ನು ಮುಗಿತಾಯಕ್ಕೆ ಇಲ್ಲಿ ತಂದು ಮುಟ್ಟಿಸಲಾಗಿದೆ. ಏಕೆಂದರೆ ಧರ್ಮರಾಯನ ವ್ಯವಹಾರ–ಪರಮಾರ್ಥ ವಿವೇಕಕ್ಕೆ ಉಕ್ತಭೀಷ್ಮೋಕ್ತಿಯು ಮುಗಿತಾಯವನ್ನು ಕೊಡಬಲ್ಲದು; 'ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ' ಎಂಬ ಉದ್ಗಾರವಲ್ಲ.

ಇದೊಂದು ನಿದರ್ಶನ ಮಾತ್ರ. ಮಹಾಭಾರತದಲ್ಲಿ ಜೀವನದ ಕೈಪಿಡಿಯಾದ ಶಾಂತಿಪರ್ವ ಭಾರತೀಯತೆಯ ಮಾನಸಶಾಸ್ತ್ರವನ್ನೇ ಹೇಳಿದೆ; ವನಪರ್ವದಲ್ಲಿ ಪಾಂಡವರಿಗೆದುರಾದ ಸಮಸ್ಯೆಗಳಿಗೆ ಇಲ್ಲಿ ಉತ್ತರಗಳಿವೆ. ಧರ್ಮರಾಯನಿಗಿಲ್ಲಿ ಇನ್ನೂ ಹೆಚ್ಚಿನ ಜೀವನ ಸೂತ್ರಗಳು ದೊರಕುತ್ತವೆ.

**"ಯೋ ನಿತ್ಯಂ ಕ್ಷಮತೇ ತಾತ ಬಹೂನ್ ದೋಷಾನ್ ಸ ವಿಂದತಿ ।**

**ಭೃತ್ಯಾಃ ಪರಿಭವಂತ್ಯೇನಮುದಾಸೀನಾಸ್ತಥಾರಯಃ ॥"**

ಎಂದು ವ್ಯಾಸರು ವನವಾಸದಲ್ಲಿಯೇ (೬–೨೯–೭) ಧರ್ಮರಾಯನ ಜ್ಞಾನನ್ಯೂನತೆಗಳನ್ನು ಪರಿಹರಿಸಲು ಪ್ರಾರಂಭಿಸಿ, ಶಾಂತಿಪರ್ವದಲ್ಲಿ ಕೊನೆಗೊಳಿಸಿದ್ದಾರೆ.

**"ಅಸತಾಂ ಪ್ರತಿಷೇಧಶ್ಚ ಸತಾಂ ಚ ಪರಿಪಾಲನಂ ।**

**ಏಷ ರಾಜ್ಞಾಂ ಪರೋ ಧರ್ಮಃ ಸಮರೇಚಾಪಲಾಯನಂ॥**

**ಯಸ್ಮಿನ್ ಕ್ಷಮಾ ಚ ಕ್ರೋಧಶ್ಚ ದಾನಾದಾನೇ ಭಯಾಭಯೇ**

**ನಿಗ್ರಹಾನುಗ್ರಹೌ ಚೋಭೌ ಸವ್ವೈ ಧರ್ಮವಿದುಚ್ಯುತೇ"**

ಅಲ್ಲಿ ಹೇಳಿದ ನಿತ್ಯಕ್ಷಮೆಯ ಅನಾಚರಣೀಯತೆ ಇಲ್ಲಿ ಮತ್ತೆ (ರಾಜಧರ್ಮ ಪರ್ವದ ೧೪ನೆಯ ಅಧ್ಯಾಯದ ೧೬–೧೭ನೆಯ ಶ್ಲೋಕಗಳು) ದೃಢೀಕೃತವಾಗಿದೆ. ಸಂಘಟಕರು ತಮ್ಮಲ್ಲಿ ಅಧಿಕಾರಿಕ ನಿಃಶ್ರೇಣಿಯಲ್ಲಿ ವ್ಯವಸ್ಥಿತರಾಗಿರುವಾಗ, ಹಿರಿಯನು ತದಿತರರೊಡನೆ ಕಾರ್ಯಸಾಧನೆಯಲ್ಲಿ ತೊಡಗಿದಾಗ, ಅವನ ಜ್ಞಾನದ ಬಂಡವೆಂತಿರಬೇಕು ಎಂಬುದರ ವಿಹಂಗಮಾವಲೋಕನವಿದು. ಇಂದಿನ ಭಾಷೆಯಲ್ಲಿ "ಮುಖಂಡತನದ ಗುಣಗಳು" ಇವು. "ಯೋ ಯಚ್ಛ್ರದ್ಧಃ ಸ ಏವ ಸಃ" ಎಂಬ ಗೀತಾಸೂತ್ರದ ಮಾನಸಿಕ ಲಕ್ಷಣವಿಲ್ಲಿ ಸ್ಮರಣೀಯ. ಪೂಜ್ಯ ದ.ರಾ.ಬೇಂದ್ರೆಯವರು ಹೇಳಿದ "ಅಧಿಯಜ್ಞ"ದ ಕರ್ತೃತ್ವ ಭಾವವೂ ಇಲ್ಲಿ ಸಾಂದರ್ಭಿಕ. ದೇವರ ಆಜ್ಞೆಯಂತೆ ದುಡಿಯುವ ಕರ್ತೃ ತಾನೆಂಬುದು ಮುಖಂಡನಿಗಿದ್ದಾಗ ಅವನ ಶ್ರದ್ಧಾದಾರ್ಢ್ಯವೂ ಆತ್ಮವಿಶ್ವಾಸವೂ ಅಪ್ರತಿಹತವಾಗುವುವು. ಅವನ ವ್ಯವಹಾರ–ಪರಮಾರ್ಥ ಜ್ಞಾನಗಳು ಅವುಗಳಿಗೆ ಹಿನ್ನೆಲೆ. "ಜ್ಞಾನಿಯ ಮತಿ ಇರುಳೊಳಗತಿ ನಿಜ ಜಾಗ್ರತಿ ಇರುವುದು"– ಎಂಬಷ್ಟು ಮೈಯೆಲ್ಲ ಕಣ್ಣಾಗಿರುವುದು ಯಜಮಾನನಿಗೆ, (ನೇತಾರನಿಗೆ) ನಿಮಿತ್ತ ಮಾತ್ರ ಕರ್ತೃತ್ವವುಳ್ಳ ನಾಯಕನಿಗೆ, ವೈಯಕ್ತಿಕ ಅಹಂಕಾರವನ್ನು ಬಿಟ್ಟ ದೇವಕಿಂಕರಾಹಂಕಾರಿಗೆ ಅಗತ್ಯ. ಧರ್ಮರಾಯನಿಗೆ ಅವನ ತಮ್ಮಂದಿರು ಚತುರ್ಭುಜಗಳು. ಅವರಲ್ಲಿ ಭೀಮಾರ್ಜುನರು ಮುಖ್ಯರು. ಧರ್ಮರಾಜನು ಯಮಸದೃಶ ನಿಷ್ಪಕ್ಷಪಾತಿಯಾದ ನ್ಯಾಯಾಧೀಶ ಮನಸ್ಕನಾದರೆ ಅರ್ಜುನನು ಇಂದ್ರಸದೃಶನಾದ ಕಾರ್ಯನಿರ್ವಾಹಕ. ಪಂಚಪಾಂಡವರು ಕೃಷ್ಣನ (ಬ್ರಹ್ಮನ) ಶರೀರ ಅಥವಾ ಪಂಚಪ್ರಾಣಶಕ್ತಿಗಳು. ಹೃದಯದಲ್ಲಿರುವುದು ಪ್ರಾಣ, ಗುದದಲ್ಲಿರುವುದು ಅಪಾನ, ಸರ್ವಶರೀರವರ್ತಿಯಾಗಿರುವುದು ವ್ಯಾನ, ಕಂಠಸ್ಥವಾಗಿರುವುದು ಉದಾನ ಮತ್ತು ನಾಭಿಯಲ್ಲಿರುವುದು ಸಮಾನ (These are the different forms of the Kinetic

energy that keeps the body in a working condition). ಶರೀರವು ಸಂಘಟಿತ ಪದಾರ್ಥದ ಒಂದು ಅತ್ಯುತ್ತಮ ಮಾದರಿ. ಅದರ ಜ್ಞಾನವಾಹಕ ಮತ್ತು ಕಾರ್ಯನಿರ್ವಾಹಕ ಸಾಧನಗಳು ಜನಸಂಘಟನೆಗಿರಬೇಕಾದ ಸಾಧನಗಳಿಗೆ ಮಾದರಿಗಳು. ಧರ್ಮರಾಯನು ಹೃದಯಸ್ಥನು. Wish is th efather of thought ಸಂಕಲ್ಪವು ವಿಚಾರದ ತಂದೆಯಿಂದ ಹಾಗೆ ಧರ್ಮಕಾರ್ಯವನ್ನು ಅವನು ಸಂಕಲ್ಪಿಸುವವನು. ಧರ್ಮಜ್ಞಾನವಾದ ಬ್ರಹ್ಮವು ಅವನ ಸಹಸ್ರಾರ ಚಕ್ರ (The Cerebellum)ದಲ್ಲಿರುವುದು, ಅಜ್ಞಾನಚಕ್ರದಲ್ಲಿ (Cerebrum) ಅದು ಪ್ರಕಟವಾಗುವುದು. ಅನಂತರ ಅದರ Execution ಕಾರ್ಯನಿರ್ವಾಹದ ಆರಂಭ. ಭೀಮಾದಿಗಳು ಕರ್ಮ ಪಂಚಾವಯವಗಳಿರುವ ಹಾಗೆ.



# ೧೬

# ನಮ್ಮ ಸಂವಿಧಾನ

ಒಂದು ರಾಷ್ಟ್ರವು ಒಂದು ಶರೀರವಿರುವ ಹಾಗೆ ಇದೆ. ಅದರ ಕೇಂದ್ರವು ಸಂವಿಧಾನ; ಅದೇ ಅದರ ಬ್ರಹ್ಮಸ್ಥಳ. ರಾಷ್ಟ್ರಪತಿ ಅದರ ಬ್ರಹ್ಮ. ಪ್ರಧಾನ ಮಂತ್ರಿಯು ಆಜ್ಞಾಚಕ್ರದ ಪ್ರತಿನಿಧಿ. ನ್ಯಾಯಾಲಯಗಳು ಸಹಸ್ರಾರ(ಬ್ರಹ್ಮಸ್ಥಳ)ಕ್ಕೂ ಅಜ್ಞಾಚಕ್ರಕ್ಕೂ ನಡುವಿನವು; ಶಾಸನ ಕರ್ಮದ ಸಭೆಗಳೂ ಹಾಗೇ. ರಾಜಕೀಯ ಪಕ್ಷಗಳು ಬಹಿಶ್ಚರ ಪ್ರಾಣಗಳು. ಸರಕಾರಿ ಕಾರ್ಯಾಲಯಗಳು ಕರ್ಮಾವಯವಗಳು. ಪ್ರಜಾಕೋಟಿಯು ವಿಕೇಂದ್ರೀಕೃತ ಬ್ರಹ್ಮಾಂಶಗಳು; ನಮ್ಮ ಸದ್ಯದ ಸಂವಿಧಾನವು ಬ್ರಹ್ಮದಷ್ಟು (ಸಾಕಷ್ಟು) ವಿಶಾಲವಾಗಿಲ್ಲ. ಆದುದರಿಂದ ಅನೇಕ ತೊಂದರೆಗಳುದ್ಭವಿಸಿದವು. ಕಾಯದೆಗಳ ರಚನೆಗೆ ಅಗತ್ಯವಾದ flexibility ನಮ್ಯತೆ ಅದರಲ್ಲಿರಬೇಕು. ಅದನ್ನು ಜಾರಿಗೆ ತರುವ ನಿಯಮಗಳು ಸ್ಥಳೀಯ ರೂಢಿಗಳಿಗೆ ಸರಿಯಾಗಿರಬೇಕು.

ಒಂದು ರಾಜಕೀಯ ಪಕ್ಷ ಅಥವಾ ಸಾಂಸ್ಕೃತಿಕ ಸಂಘ ಕೂಡ ಉಕ್ತ ರೀತಿಯನ್ನೇ ಅನುಸರಿಸಬೇಕಾಗುತ್ತದೆ. ಅದಕ್ಕೂ ಪ್ರಭುತ್ವಕ್ಕಿರುವಂತೆಯೇ ಜ್ಞಾನಸಂಗ್ರಾಹಕ, ಕಾರ್ಯನಿರ್ವಾಹಕ ಮತ್ತು ನ್ಯಾಯನಿರ್ಣಾಯಕ ಸಮಿತಿಗಳಿರುವುದು ಅಗತ್ಯ. ಕೇವಲ ಅಧ್ಯಕ್ಷ– ಕಾರ್ಯದರ್ಶಿಗಳಿದ್ದರೆ ಸಾಲದು. ಪಕ್ಷಕ್ಕಾಗಲಿ, ಸಂಘಕ್ಕಾಗಲಿ ಅವುಗಳ ನಿಯಮಾವಳಿಯೇ ಸಂವಿಧಾನ ಅಥವಾ ಶಾಸನಮಂಜರಿ. ಅದರಲ್ಲಿ ಅವುಗಳ ಧ್ಯೇಯ–ಕಾರ್ಯ ನಿಯಮಗಳೆಲ್ಲವೂ ಇರಬೇಕು.

"ಸರಳ ಜೀವನ ಉದಾತ್ತ ವಿಚಾರ" ಎಂಬ ನಾವು ಆಡಂಬರದ ಅಲಂಕೃತ ಮನೆ, ಮಠ, ಆಫೀಸು, ಬಂಗಲೆ, ಮೇಜುವಾನಿಗಳ ಮಾರ್ಗವನ್ನು ಹಿಡಿದು ಜನಸಂಘಟನೆಯನ್ನಿಲ್ಲಿ ಶೀಲವಂತಿಕೆಯಿಂದ ಮಾಡಲಾರೆವು. ಅದರಿಂದಲೇ ಗಾಂಧಿಯವರು ಸಬರಮತಿ ಆಶ್ರಮವನ್ನು ತಮ್ಮ ಕಾರ್ಯಾಲಯವನ್ನಾಗಿ ಮಾಡಿಕೊಂಡರು. ಬಾಹ್ಯಾವರಣಕ್ಕೆ ಹತ್ತು ಸಮಸ್ತರು ವಶರಾಗದೆ ಉಳಿಯುವುದು ಕಷ್ಟ. ವಿಕಾರಹೇತು ಜೊತೆಗಿದ್ದರೂ ಮನೋವಿಕಾರ ಹೊಂದದಿರುವ ವ್ಯಕ್ತಿತ್ವ–ಚಾರಿತ್ರ್ಯಗಳ ಸಾಮರ್ಥ್ಯ ಸಾಮಾನ್ಯರಿಗಿಲ್ಲ. ಆದುದರಿಂದ ಆಶ್ರಮಕೇಂದ್ರಗಳ ಮೂಲಕವೇ ನಮ್ಮ ಜನ ಹೆಚ್ಚು ಸ್ಫೂರ್ತಿಯನ್ನು ಪಡೆಯಬಲ್ಲರು. ಸಬರಮತಿ ಆಶ್ರಮದ ಜೀವನ ಕ್ರಮ, ಶಿಸ್ತು, ವಿಧೇಯತೆ, ವಿಚಾರವಿನಿಮಯ ಪದ್ಧತಿಗಳನ್ನು ನಡೆಸಿಕೊಂಡು ಹೋಗಬಲ್ಲ ಉದಾತ್ತ ನಾರಾಯಣ ಮನಸ್ಕರನ್ನು ಗುರು(ನಾಯಕ)ಗಳನ್ನಾಗಿ

ಆಯ್ದುಕೊಂಡು ಅವರ ಆಜ್ಞಾಪಾಲಕರಾದ ವ್ರತಚಾರಿಗಳಾಗಿ ಕಾರ್ಯಮಾಡಹೊರಟ ಹೊರತು ಈ ದೇಶದ ಪ್ರಜಾಪ್ರಭುತ್ವವು ಸರ್ವೋದಯಕರವಾಗಿ ಚಿರಕಾಲ ನಡೆಯುವಂತೆ ಸಂಘಟಕರಾರೂ ಮಾಡಲಾರರು. ಕಾಲಬದಲಾಗಿರಬಹುದು, ದೇಶಬದಲಾಗಿಲ್ಲ; ಜನರ Collective Unconscious ಅವಿಜ್ಞಾತ ಪ್ರಜ್ಞಾಸ್ತರದಲ್ಲಿ ನೆಲೆನಿಂತ ಪಳೆಯುಳಿಕೆಗಳು ನಷ್ಟವಾಗಿಲ್ಲ; ಅವುಗಳೆಲ್ಲವನ್ನೂ ಸರ್ವವ್ಯವಹಾರದಲ್ಲೂ ಧಿಕ್ಕರಿಸಬೇಕೆಂಬ ಹಠವು ಆರೋಗ್ಯಕರವೂ ಅಲ್ಲ. ಸಂಸ್ಕೃತಿಯ ಆತ್ಮರೂಪದ ಪಳೆಯುಳಿಕೆಗಳ ಬಿಲ್ಲೆಗಳು (Archetypes) ನಾಗರಿಕತೆಯ ಸಾತತ್ಯಕ್ಕೆ ಆಧಾರಗಳು. ಜೊತೆಗೆ ನಮ್ಮ ಪ್ರಾಚೀನ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ವ್ಯವಹಾರಗಳೆಷ್ಟೋ ಅತ್ಯಂತ ಸಮಾಜವಾದೀಯವೂ ಪ್ರಜಾಪ್ರಭುತ್ವೀನವೂ ಆಗಿದ್ದುದನ್ನು ಇತಿಹಾಸ ತೋರಿಸಿಕೊಟ್ಟಿದೆ. ಕ್ರಿ.ಶ. ೮ನೆಯ ಶತಮಾನದಿಂದ ಅವು ಕೆಡುತ್ತ ಹೋಗಲು ತಕ್ಕ ಆವರಣವನ್ನು ವಿದೇಶೀಯರು ನಿರ್ಮಿಸಲು ಶಕ್ತರಾದರು. ಆದರೂ ಬ್ರಿಟಿಷರು ಬರುವವರೆಗೆ ನಮ್ಮ Village Republics ಗ್ರಾಮಸ್ವರಾಜ್ಯಗಳು ತಮ್ಮ ಪೂರ್ಣ ಲಕ್ಷಣಗಳನ್ನು ಕಳೆದುಕೊಂಡಿದ್ದಿಲ್ಲ. ಪ್ರಾಶ್ಚಾತ್ಯ ಪಟ್ಟಣೀಕರಣದ (Urbanisation) ಪ್ರವೃತ್ತಿಗೆ ಅಲ್ಲಿಂದ ಮುಂದೆ ಅತಿ ಹೆಚ್ಚಿನ ಪ್ರೇರಣೆದೊರೆತು ಈಗ ನಮ್ಮ ದೇಶದ ರಾಜಧಾನಿಯಾದ ದಿಲ್ಲಿಯು ಜೀವನಕ್ರಮದಲ್ಲಿ ಸಂಪೂರ್ಣ ವಿದೇಶೀಯವಾಗಿರುವಂತೆ ತೋರುವಂತಾಯ್ತು ಸಾಂಸ್ಕೃತಿಕ Plastic Surgery ಕೃತಕಾವಯವ ಯೋಜನೆಯ ಶಸ್ತ್ರಕ್ರಿಯೆಯು ಎಂದೂ ಇಲ್ಲಿ ಜಯಹೊಂದದು. ಇದಕ್ಕಲ್ಲದ ನಾಗರಿಕತೆಯನ್ನು ನಿರ್ಮಿಸುವುದರಲ್ಲಿ ಮುಖಂಡರು ಕೆಲಮಟ್ಟಿನ ಜಯವನ್ನು ಗಳಿಸಿದ್ದರಿಂದಲೇ ಭ್ರಷ್ಟಾಚಾರ–ಶೋಷಣೆಗಳು ದೇಶದಾದ್ಯಂತ ದುರ್ಗಂಧದಂತೆ ಹಬ್ಬುವಂತಾಯ್ತು; ದೇಶವೀಗ ರಾಜಿಕವಿದ್ದೂ ಅರಾಜಿಕವಾಗಿದೆ. ಬಹುಸಂಖ್ಯಾತರಿಗೆ ಅಶನವಸನ ನ್ಯಾಯಗಳು ದುರ್ಲಭವಾಗಿವೆ. ಇದಕ್ಕೆ ಸಂವಿಧಾನದಲ್ಲಿ ತಕ್ಕ ತಿದ್ದುಪಡಿಯನ್ನು ಮಾಡುವುದು ಮೊದಲ ಕರ್ತವ್ಯ.



# ೧೭

# ಸಾಮಾಜಿಕ ಇತಿಹಾಸದ ಪಾಠ

ಭಾರತೀಯತೆಯ ಜೀವನಚಿತ್ರದ ಸಾಂಸ್ಕೃತಿಕ ಮೂಲವಿರುವುದು "ಶಾಕುಂತಲ"ದಲ್ಲಿ. ಋಷಿರಾಜ–ರಾಜರ್ಷಿಗಳ ಪರಸ್ಪರ ಸಂಬಂಧವನ್ನು ಅಲ್ಲಿ ನೋಡಬೇಕು. ನಗರಸ್ಥರು ಗ್ರಾಮಸ್ಥ ಚಾರಿತ್ರಸಂಪನ್ನರಿಗೆ ಯಾವ ಸ್ಥಾನಮಾನಗಳನ್ನು ಕೊಡುತ್ತಿದ್ದರೆಂಬುದು ಅಲ್ಲಿ ಸ್ಪಷ್ಟವಾಗುತ್ತದೆ. ಎಂಥ ಕಾಲದಲ್ಲೂ ನಗರ–ಪಟ್ಟಣಗಳಿಗಿಂತ ಹಳ್ಳಿಗಳ ಸಂಖ್ಯೆಯೇ ಅಧಿಕವಾಗಿರುವುದು ಪ್ರತಿಯೊಂದು ಬೃಹದ್ ರಾಷ್ಟ್ರದಲ್ಲೂ ಕಾಣಸಿಗುತ್ತದೆ. ಯಾವ ಕಾಯದೆ, ನಿಯಮ, ಧ್ಯೇಯಗಳನ್ನು ಚಿಂತಿಸುವಾಗಲೂ ಬಹುಸಂಖ್ಯಾತ ಘಟಕಗಳನ್ನು ಮರೆಯಲು ಸಾಧ್ಯವಿಲ್ಲ. ಆದುದರಿಂದ ಗ್ರಾಮ ಭಾರತವೇ ಈಗಲೂ ನಿಜವಾದ ಸಾಂಸ್ಕೃತಿಕ ಭಾರತವಾಗಿದೆ. ವೇಷ–ಭಾಷೆಗಳ ಅತ್ಯಲ್ಪ ಬದಲಾವಣೆ ಹಳ್ಳಿಯ ಹತ್ತು ಸಮಸ್ತರಲ್ಲಿ ಉಂಟಾದ್ದನ್ನು ಕಂಡು ಇದೇ ವೇಗದಿಂದ ಅವರ ವೇಷ, ಭಾಷೆ, ಆಚಾರ, ವಿಚಾರಗಳೆಲ್ಲವೂ ಇನ್ನು ೧೦–೨೦ ವರ್ಷಗಳಲ್ಲಿ ಪಾಶ್ಚಾತ್ಯೀಕೃತವಾಗಿ ಬಿಡುತ್ತವೆ ಎಂದು ನಂಬಿದ ಆಂಗ್ಲಾಕ್ಷರು ತೀರ ದಡ್ಡರು. ಅವರ ಮುಖಂಡತ್ವ ಎಂದೂ ಬಹುಕಾಲ ಇಲ್ಲಿ ಉಳಿಯದು–ಉಳಿಯಕೂಡದು. ಸದ್ಯ: ಉಳಿದಿರುವುದರಿಂದಲೇ ವಿದೇಶಗಳು ಈಗ ನಮ್ಮನ್ನು ಅಂತಃಕರಣ ಸಾಕ್ಷಿಯಾಗಿ ಗೌರವಿಸುತ್ತಿಲ್ಲ. ಅವರ ಔಪಚಾರಿಕತೆಯನ್ನು ರಾಜತಂತ್ರವೆಂದು ತಿಳಿಯದೆ ಸಹಜವೆಂದು ತಿಳಿಯುವ ಮಂದಮತಿಗಳು ಹಾಸ್ಯಾಸ್ಪದ ದ್ವಿಪಾದ ಜಂತುಗಳು. ಟ್ರ್ಯಾಕ್ಟರುಗಳನ್ನು ಬಳಸುವುದರಿಂದ ಎತ್ತುಗಳು ಅನವಶ್ಯಕ ಎಂದೊಬ್ಬ ತಜ್ಞಂ ಮನ್ಯ ಭಾಷಣ ಬಡಿದಿದ್ದಾನೆ; ಕೃತಕಗೊಬ್ಬರವೇ ಸರ್ವಸ್ವ ಮತ್ತು ಹಾಲಿನ ಪುಡಿಯನ್ನು ಪರದೇಶದಿಂದ ತರಿಸಿಕೊಂಡರಾಯ್ತು; ಆದ್ದರಿಂದ ಗೋಸಂಗೋಪನ ತ್ಯಾಜ್ಯ ಅಥವಾ ಕಡಿದು ತಿನ್ನಲು ಅವುಗಳನ್ನು ಸಾಕಾಗಬಹುದು–ಎಂಬಂಥ ನಿಗಮಕ್ಕೆಡೆಗೊಡುವ ಸುಧಾರಕರ ಅವೈಜ್ಞಾನಿಕತೆಯನ್ನು ವಿವರಿಸಿದರೆ ಅದೇ ಒಂದು ಹೆಬ್ಬೊತ್ತಿಗೆಯಾದೀತು. ದಿವಂಗತ ಜೆ.ಸಿ.ಕುಮಾರಪ್ಪನವರು ಆ ಕೆಲಸವನ್ನು ಹಿಂದೆಯೇ ಮಾಡಿದ್ದಾರೆ, Push Button Comfort ಗುಂಡಿಯೊತ್ತಿದೊಡನೆ ಸುಖ ಬಂದು ಬಾಯೊಳಗೆ ಕುಳಿತುಕೊಳ್ಳುವಂತೆ ಅಲ್ಪಸಂಖ್ಯಾತರಿಗೆ ಸೌಕರ್ಯವೊದಗಿಸಲು ಬಹುಸಂಖ್ಯಾತರು ಜೀವ ಸವೆಯಿಸುವ ನಾಗರಿಕತೆ ಅಭಾರತೀಯ. ೫೦ ಕೋಟಿ ಜನರಿರುವ ಈ ದೇಶದಲ್ಲಿ ಬ್ರಹ್ಮನೂ ಅಂಥ ಸುಖಸಾಧನವನ್ನು

ಸರ್ವಲಭ್ಯವಾಗುವಂತೆ ನಿರ್ಮಿಸಿಕೊಡಲಾರನು. ಇಲ್ಲಿ ಜಪಾನಿನಲ್ಲಿರುವಂತೆ ವಿದ್ಯುಚ್ಚಾಲಿತ ಚಿಕ್ಕ ಗೃಹಯಂತ್ರೋಪಕರಣಗಳನ್ನು ಒದಗಿಸುವುದೊಂದೇ ನಿರುದ್ಯೋಗ ನಿವಾರಣೆ, ಚಿಕ್ಕ ಕೈಗಾರಿಕೆಗಳ ಬೆಳವಣಿಗೆ, ವಿಕೇಂದ್ರೀಕೃತ ರಾಜ್ಯಾಧಿಕಾರ, ಸಮೀಕೃತ ಅರ್ಥ ವ್ಯವಸ್ಥೆಗಳನ್ನು ಒದಗಿಸಿ ಸರ್ವೋದಯವನ್ನು ತಂದೀತು. ಮಹೋದ್ಯಮಗಳೆಲ್ಲವನ್ನೂ ಸರಕಾರ ನಡೆಸಬೇಕು. ದೇಶವಂಚಕರಾದ ಕೆಲ ದೊಡ್ಡ ಸಾವಕಾರರನ್ನು ಪ್ರತಿಶತಮಾನದಲ್ಲೂ ಹಡೆದ ಭಾರತ ಅವರ ಕೈಯಲ್ಲಿ ಈಗ ಅವುಗಳನ್ನು ಬಿಟ್ಟು, ಅವರು ಉತ್ಪಾದನೆಯ ಪರಿಮಾಣವನ್ನೂ ಪ್ರಕಾರವನ್ನೂ ಹೆಚ್ಚಿಸಿ ಅಗ್ಗಕ್ಕೆ ಮಾರುವರೆಂಬುದು ಷೈಲಾಕನನ್ನು ದಾನಶೂರ ಕರ್ಣನೆಂದು ತಿಳಿಯುವಷ್ಟೇ ಹಾಸ್ಯಾಸ್ಪದವೆಂಬುದನ್ನು ಶೋಧಕರು ಸ್ಪಷ್ಟವಾಗಿ ಕಾಣಬಹುದಾಗಿದೆ. ಇಂಥ ಔದ್ಯಮೀಕರಣಕ್ಕೂ ಜನವಂಚಕತೆ ತುಂಬಿದ ಸರಕಾರಿ ಉತ್ಪಾದನೆಗೂ ಅಂತರವೀಗ ಇಲ್ಲ. ಆದರೆ ಉತ್ಸರ್ಗನಿಯಮವು ಮಹೋದ್ಯಮಗಳನ್ನು ದಕ್ಷಸರಕಾರಿ ನಿಗಮಗಳು ನಡೆಸುವುದರಲ್ಲೇ ಇದೆ ಎಂಬುದು ಸಾಮಾಜಿಕ ಇತಿಹಾಸ ತೋರಿಸಿಕೊಟ್ಟಿರುವ ಮನಃಶಾಸ್ತ್ರ ನಿರ್ಣಯ. ಅಥರ್ವಣ ನಾಗರಿಕತೆಯ ಯುಗ ಅಂಥ ವ್ಯವಸ್ಥೆಯನ್ನಿಲ್ಲಿ ಮಾಡಿ ಗೆದ್ದಿತ್ತು.

ಕೇವಲ "ಸೋಷಲಿಜಂ" ಮತ್ತು "ಕಮ್ಯೂನಿಜಂ"ಗಳನ್ನು ಬಯ್ಯುವುದರಿಂದ ಭಾರತೀಯ ಸರ್ವೋದಯ ಸಿದ್ಧಿಸದು; ಹಾಗೇ ಅವು ವಿದೇಶಗಳಲ್ಲಿ ಹೇಗೆ ಆಚರಣೆಯಲ್ಲಿವೆಯೋ ಹಾಗೇ ಇಲ್ಲಿ ಅನುಕರಿಸುವುದರಿಂದಲೂ ಉಕ್ತ ಧ್ಯೇಯ ಕೈಗೂಡದು. "ರೀತಿರಾತ್ಮಾಕಾವ್ಯಸ್ಯ" ಎಂಬುದನ್ನು ಖಂಡಿಸಿದ ಪಂಡಿತರೂ "ರೀತಿರಾತ್ಮ ಸಂಸ್ಕೃತೇ" ಎಂಬುದನ್ನು ಖಂಡಿಸಲಾರರು. Manners maketh man ವರ್ತನಾ ರೀತಿಯು ಮಾನವನನ್ನು ಮಾನವನನ್ನಾಗಿ ಮಾಡುತ್ತದೆ– ಎಂಬುದು ಬಹಳ ಆಳವಾದ ಅರ್ಥವುಳ್ಳ ಸಂಘಟನಸೂತ್ರ. ರೀತಿಯನ್ನು "Means ಸಾಧನ" ಎಂದರು ಮಹಾತ್ಮರು. ದಾನಧರ್ಮದಿಂದ ಯಾವ ದೇಶದಲ್ಲೂ ಅರ್ಥವಿಷಮತೆ ಚಿರಸ್ಥಾಯಿಯಾಗಿ ಪರಿಹಾರವಾಗಿಲ್ಲ; ಆಗಿದೆ ಎಂದು ಭಾವಿಸುವುದು ಭ್ರಮೆ. ಆದುದರಿಂದ ಅವರವರ ಧರ್ಮದಲ್ಲಿ ಅವರವರು ಸರಿಯಾಗಿ ಇರುವಂತೆ ನೋಡಿಕೊಳ್ಳುವುದು ಪ್ರಭುತ್ವದ ಆದ್ಯ ಕರ್ತವ್ಯ. ಸ್ವಯಂಪ್ರೇರಣೆಯಿಂದ ದಾನ ಮಾಡದಿದ್ದ ಆಢ್ಯರಿದ್ದರೆಂಬುದನ್ನು ಗಾಂಧಿಯವರು ಒಪ್ಪಿದ್ದರು. ಅಂಥಲ್ಲಿ ಕಾಯದೆಯ ಚಲಾವಣೆ ಅಗತ್ಯ. ಪಾಶ್ಚಾತ್ಯೀಕೃತವಾದ ಭಾರತೀಯ ಮಹಾನಗರಗಳಲ್ಲಿರುವ ಕುಬೇರರು ಅಲ್ಪಸ್ವಲ್ಪ ದಾನಧರ್ಮದ ಪ್ರದರ್ಶನ ಮಾಡುತ್ತಿರುವರಲ್ಲದೆ ಹೆನ್ರಿಫೋರ್ಡನ ಪಾತ್ರವನ್ನು ವಹಿಸಲಿಲ್ಲ. "ತಾನು ತನ್ನದು ತನ್ನ ಸೂನುಸತಿಯರೆಂಬ ಹೀನಾಭಿಮಾನ"ದ ದಾಸರಾಗಿರುವ ಹಿರಣ್ಯಾಕ್ಷ–ಹಿರಣ್ಯಕಶಿಪುಗಳ ನಯವಂತಿಕೆಯು ದಡ್ಡರ ಮೂಗಿಗೆ ತುಪ್ಪ ಒರಿಸುವಂಥದಷ್ಟೇ, ಅಂಥವರು ಹಿಂದುಗಳಲ್ಲ, ಆರ್ಯರಲ್ಲ, ರಾಷ್ಟ್ರೀಯರಲ್ಲ, ದೇಶಾಭಿಮಾನಿಗಳಲ್ಲ, ನಾಗರಿಕರಲ್ಲ, ಸಂಸ್ಕೃತರಲ್ಲ, ಅವರೊಡನೆ ಅವರ ಜೀವನ ನೀತಿಯನ್ನೇ ಹಿಡಿದು ಪೈಪೋಟಿ ನಡೆಸುವ ಅಧಿಕಾರಾರೂಢ ಶಾಸಕರೂ ಮಂತ್ರಿಗಳೂ ಅದೇ ದರ್ಜೆಯವರು. ಆದರಿವರದು ಗಾಣದವರ ಗುದ್ದಾಟವಲ್ಲದೆ ನಿಜವಾದ ಪ್ರತಿದ್ವಂದ್ವಿತ್ವ ಅಲ್ಲವೇ ಅಲ್ಲವೆಂಬುದು ಕಬಂಧರಿಗೆ ಮಾತ್ರ ಗೊತ್ತಾಗಿರಲಿಕ್ಕಿಲ್ಲ. ಅವರ ದಾನ–ಧರ್ಮಕ್ಕೂ ಆಢ್ಯತೆಗೂ ಅನುಪಾತಿಕ ಸಮತೋಲನವಿಲ್ಲ. ಮೋಸವನ್ನು

ಬುದ್ಧಿವಂತಿಕೆಯೆಂದು ತಿಳಿದು ಆ ಮೂಲಕ ಅರ್ಜಿಸುವವರೇ ಭಾರತೀಯ ಕ್ಷತ್ರಿಯ–ವೈಶ್ಯವೃತ್ತಿಯವರಲ್ಲೀಗ ಹೆಚ್ಚಾಗಿದ್ದಾರೆ. ಇದನ್ನು ಪ್ರತಿಭಟಿಸುವುದೇ ನವಸಂಘಟನೆಯ ಉದ್ದೇಶ. ದುರ್ಜನರ ಸಹಕಾರವನ್ನು ಬಗ್ಗುಬಡಿಯಲು ಸಜ್ಜನರ ಸಹಕಾರ ಎದುರು ನಿಲ್ಲಬೇಕಾಗಿದೆ. "ಕ್ಷೀಣಾನರಾ ನಿಷ್ಕರುಣಾ ಭವಂತಿ" ಎಂಬ ಸುಭಾಷಿತವನ್ನು ಮರೆತು ದರಿದ್ರರ ಸಂಘಟಿತ ಪ್ರತಿಭಟನೆಯು ಆರ್ಥಿಕ ಕಾರಣದಿಂದ ಸಮರ್ಥನೀಯವಾಗಿದ್ದಾಗಲೂ ಅದನ್ನು ಬಯ್ಯುವುದು ಸಂಭಾವಿತಗಿರಿಯಲ್ಲ. ಪ್ರಭುತ್ವವು ಎಮ್ಮೆ ತಮ್ಮಣ್ಣನಂತೆ ರಾಜ್ಯಭಾರ ಮಾಡುತ್ತ ಹೋದರೆ, ಪ್ರಭುಗಳು ಭೋಗಲಂಪಟತನದಲ್ಲೇ ೧೦–೨೦ ವರ್ಷಗಳನ್ನು ಕಳೆದರೆ, ಕುಚೇಲರು ಕುಬೇರರ ವಿರುದ್ಧವಾಗಿ ಕತ್ತಿಯನ್ನು ಹಿರಿಯದಿರರು– ಹಿರಿದರೆ ಅದು ಅಭಾರತೀಯವಾಗದು. ಮಾನವೀಯತೆಯೇ ಇಲ್ಲದವರ ಯಜಮಾನಿಕೆಯೆಂತು ಭಾರತೀಯವಾದೀತು? ಬಾಯ ಬಣ್ಣಾಚಾರದ ಪ್ರಚಾರವು ದಿವ್ಯಜೀವನವೆನ್ನಿಸಿತೇ? "ಹಿತಂ ಮನೋಹರಿಚ ದುರ್ಲಭಂ ವಚಃ" ಎಂಬ ಸುಭಾಷಿತ ಹುಟ್ಟಿದ್ದು ಇಂಥ ಪ್ರಸಂಗಗಳನ್ನು ಕಂಡೇ, ಸೋಶಲಿಸಂ ಅಥವಾ "ಕಮ್ಯೂನಿಜಂ" ಎಂಬ ಹೆಸರುಗಳು ಬೇಡವಾದರೆ ಹೋಗಲಿ; ಆ ತತ್ವಜ್ಞಾನವನ್ನು ಕಂಡ ಋಷಿಯ ಹೃದಯದ ಮಾನವೀಯತೆಯನ್ನು ಗೌರವಿಸಿ ನಮ್ಮದೇ ಆದ ಹೆಸರು–ವ್ಯವಸ್ಥೆಗಳ ಮೂಲಕವಾದರೂ ನಾವು ಗಾಂಧಿಯವರೆಂದಂತೆ ಅಧಿಕೃತ ಸರಕಾರಗಳ ಮೂಲಕ ದೀನ–ದಲಿತರ ದಾರಿದ್ರ್ಯ, ರೋಗ, ಅಜ್ಞಾನಗಳನ್ನು ನಿವಾರಿಸಲೇಬೇಕು. ಇಲ್ಲವಾದರೆ ನಮ್ಮ ಸಂಘಟನೆಯು ಅಸಾರ್ಥಕ ಅಥವಾ ವಂಚನಾಬುದ್ಧಿ ಪ್ರೇರಿತವೆನ್ನಿಸುತ್ತದೆ. ವಸ್ತುಸ್ಥಿತಿಯನ್ನು ಗ್ರಹಿಸಲಾರದ ಅಥವಾ ಗ್ರಹಿಸಲೊಲ್ಲದ ವಾದಿಗಳಿಗೆ ದಂಡವೊಂದೇ ಮದ್ದು– "ದಂಡೇನ ಗೌರ್ಗರ್ದಭಾಃ"



# ೧೮

# ಇಂದಿನ ಅವ್ಯವಸ್ಥೆ

ದೇವರ ಹೆಸರಿನಲ್ಲಿ ಖೂನಿಮಾಡಿ ಯಜ್ಞವೆಂದು ಕರೆದಂತೆಯೇ ರಾಷ್ಟ್ರೀಯತೆಯ ಹೆಸರಿನಲ್ಲಿ ಖೂನಿಮಾಡಿ ಅದನ್ನು ದೇಶಸೇವೆ ಎಂಬ ನಟ ಸಾರ್ವಭೌಮರೂ ಇಂದಿನ ರಾಜಕೀಯದಲ್ಲಿ ಬೇಕಾದಷ್ಟು ಜನರು ಸಿಗುತ್ತಾರೆ. Law, order, discipline ಕಾಯದೆ, ಸುವ್ಯವಸ್ಥೆ, ಶಿಸ್ತುಗಳ ಹೆಸರನ್ನು ವರ್ಷಗಟ್ಟಲೇ ಹೇಳುತ್ತ ದೀನೋದ್ಧಾರದ ಕೃತಕಪ್ರದರ್ಶನವನ್ನು ಮಾಡುತ್ತ ಹೋಗುವ "ಜೆಂಟ್ಲಮೆನ್‌ಗಿರಿ" ಭಾರತದಲ್ಲೀಗ ಕಡಿಮೆ ಇಲ್ಲ. ಆದರೆ ಹಿಂಸಾಚಾರ ಹಿಡಿದ ಕೆಲಸ ಹುಚ್ಚರಿಗೆ ಸಾಮಾಜಿಕ ಅಪರಾಧಿ ಯಾರು, ನಿರಪರಾಧಿ ಯಾರು ಅಥವಾ ಅಪರಾಧಿಗಳಲ್ಲಿ ಮೂಲ ಅಪರಾಧಿ ಯಾರು ಎಂದು ಮುಂತಾಗಿ ವಿವೇಚಿಸುವ ಬುದ್ಧಿ ಹೊರಟುಹೋದಾಗ ನಿಜವಾದ ಗುಂಡಾಗಿರಿ ಶುರುವಾಗುತ್ತದೆ. ಅದರಿಂದಲೇ ಗಾಂಧಿಯವರು ಅಹಿಂಸಾತ್ಮಕ ಪ್ರತೀಕಾರವೊಂದೇ ಆಂತರಿಕ ಸುಧಾರಣೆಗೆ ಭಾರತದಲ್ಲಿ ಉತ್ತಮ ಸಾಧನವೆಂದು ಉದಾಹರಿಸಿ ಹೋದರು. ಅವರ ಅನ್ಯಾಯ ಪ್ರತಿಭಟನದ ತಂತ್ರವನ್ನು ಅರಗಿಸಿಕೊಳ್ಳಲು ನಮ್ಮ ಬಹುಸಂಖ್ಯಾತರಿಗೆ ಸಾಧ್ಯವಾಗುವಂತೆ ಮಾಡುವುದೇ ಸಂಘಟಿತ ಜನಶಿಕ್ಷಣ, ಸಮಾಜಶಿಕ್ಷಣ – ಮತ್ತಾವುದೂ ಅಲ್ಲ; ಉಳಿದವುಗಳನ್ನು ಶಾಲಾ-ಕಾಲೇಜುಗಳಲ್ಲಿ ಶಿಕ್ಷಕರು ಕಲಿಸುತ್ತಾರೆ. ಅದಕ್ಕೆ ಸಾರ್ವಜನಿಕ ಹತ್ತು ಸಮಸ್ತರ ಸಂಘಟನೆ ಅನವಶ್ಯಕ. ಸತ್ಯಾಗ್ರಹದ ಕೌಶಲ್ಯವನ್ನು ಜನರಿಗೆ ಕರಗತ ಮಾಡಿಕೊಡುವುದು ಭಾರತದ ಸಾಮಾಜಿಕ ಆರೋಗ್ಯವನ್ನೂ ರಾಷ್ಟ್ರೀಯ ಬಲವರ್ಧನೆಯನ್ನೂ ಸಜ್ಜನ ತೃಪ್ತಿಕರವಾಗಿ ಸಾಧಿಸಲು ಅವಶ್ಯಕ. ಸತ್ಯವೇ ಸಾಮಾಜಿಕ ನ್ಯಾಯ– Scoial justice. ಸಾಮಾಜಿಕತೆಯಲ್ಲಿ ಉಳಿದ ಎಲ್ಲ "ಕತೆ"ಗಳೂ ಅಡಕವಾಗುತ್ತವೆ. ಸತ್ಯಜ್ಞಾನವಿಲ್ಲದಲ್ಲಿ ಅಸತ್ಯಾಗ್ರಹ ಶುರುವಾಗುತ್ತದೆ.

ವೃತ್ತಿಯು ಮನೋವೃತ್ತಿರೂಪಕವಾಗುತ್ತದೆ. ಆದುದರಿಂದ ಸರ್ವವೃತ್ತಿಗಳಿಗೂ "ಅದ್ರೋಹೇಣೈವ ಭೂತಾನಾಂ" ಎಂಬ ನಿಯಮವಿರುವಂತೆ ರಾಜ್ಯಶಕ್ತಿ ನೋಡಿಕೊಳ್ಳುವುದು ಆರ್ಯ, ಭಾರತೀಯ. ದ್ರೋಹಸಂವರ್ಧನೆಯೇ ನಮ್ಮ ಹೆಮ್ಮೆಯ ಆಂತರಿಕ ಸಾಮ್ರಾಜ್ಯಗಳನ್ನು ಅಂತ್ಯದಲ್ಲಿ ಉರುಳಿಸಿದ್ದೆಂಬುದು ಇತಿಹಾಸಸಿದ್ಧವಾಗಿದೆ. ಅನ್ಯಾಯವನ್ನು ಪ್ರತಿಭಟಿಸಲು ದ್ರೋಹಮಾರ್ಗವನ್ನು ಹಿಡಿದ ಕ್ಷಮ್ಯಾಪರಾಧಿಗಳೂ ಅಂಥ ದೇಶದ್ರೋಹಿಗಳಲ್ಲಿ ಕೆಲವರಿದ್ದಾರೆ. ಅವರಿಗಿಂತ ಐಷಾರಾಮಲಂಪಟರು ದ್ರೋಹಿಗಳನ್ನು ಸಾಕಿದ್ದರಿಂದಾದ

ರಾಷ್ಟ್ರೀಯ ಅನಾಹುತಗಳೇ ಅಧಿಕ. ಭೋಗಮಗ್ನ ಪ್ರಭುಗಳು ಆಶ್ರಮಸಂಯಮಿಗಳಂತೆ ಯುಕ್ತಾಯುಕ್ತ ವಿವೇಕಿಗಳಾದಾರೆಂಬುದು ತ್ರಿಕಾಲಾಬಾಧಿತವಾದ ಅನೃತ. ಆಶ್ರಮ ಶಿಕ್ಷಿತರಲ್ಲಿ ಕಪಟಿಗಳಿರಲಾರರೆಂದಲ್ಲ; ಆದರೆ ಅವರ ಸಂಖ್ಯೆ ಅಲ್ಪ– ಬಂಗಲಾ ಶಿಕ್ಷಿತರಲ್ಲಿರುವಷ್ಟು ಜನರು ಸಿಗಲಿಕ್ಕಿಲ್ಲ. ದೇವಾಲಯವು ಎಷ್ಟು ಚೆನ್ನಾಗಿದ್ದರೂ ಅದು "ಬಂಗಲೆ"ಯಾಗದು; ಆಶ್ರಮ ಎಂಥ ಸೌಕರ್ಯಗಳಿಂದೊಡಗೂಡಿದ್ದರೂ "ಅರಮನೆ"ಯಾಗದು. ಬಾಲಗಂಗಾಧರ ತಿಲಕರು ದೇಶವು ಲುಬ್ಧವಾದ ಮಾಯಾಶೀಲರನ್ನು ಸಾಕಬೇಕೆಂದು ಹೇಳಿಲ್ಲ. ಪ್ರಜಾಪ್ರತಿನಿಧಿಗಳು ಲುಬ್ಧಸಂವರ್ಧಕರಾದರೆ ಅವರ ಪ್ರಭುತ್ವವು ಪ್ರಜಾಪ್ರಭುತ್ವವೆನ್ನಿಸದು. ಲೋಭ ಮೂಲಾನಿ ಪಾಪಾನಿ; ಲೋಭಚ್ಛೇದಗುಣೇನಕಿಂ? ಲುಬ್ಧೇ ಭ್ಯೋ ಜಾಯತೇ ಲುಬ್ಧಾಃ; ಇವು ದುರ್ಭಾಷಿತಗಳೇನು? ಸ್ವದ್ರವ್ಯ–ಪರದ್ರವ್ಯಗಳ ಭೇದವು ಕಾಯದೆಯಿಂದಾದುದಲ್ಲದೆ ನಿಸರ್ಗದಿಂದಲ್ಲ. ಆ ಭೇದವು ಹಿಂಸೆ–ಶೋಷಣೆಗಳಿಗವಕಾಶ ಕೊಟ್ಟಾಗ ಕಾಯದೆಯನ್ನು ಬದಲು ಮಾಡುವುದು ಮಾನವ ಧರ್ಮ. ಅತಿಯಾದ ಅಹಂಕಾರ–ಮಮಕಾರಗಳಿಂದ ರಾಜಕೀಯ, ಆರ್ಥಿಕ ವಿಚಾರಕ್ಕಿಳಿಯುವವರಿಗಿದು ರುಚಿಸದು. ಅಂಥವರು ಭಾರತೀಯರಲ್ಲ. ಅವರು ವಿಮರ್ಶಬಾಹಿರರು ಮತ್ತು ದಂಡನೀಯರು, ರಾಷ್ಟ್ರೀಯರಲ್ಲ. ಕರ್ಮದಿಂದಾದದೋಷವನ್ನು ಕರ್ಮವೇ ತಿದ್ದಬಲ್ಲದು; ಕಾಯದೆಯು ಕರ್ಮ.

"Abandon your charity and put away your righteousness; and people will be more brotherly and more kind; put away your riches and scheming and there will be no robbers or frauds (that is a hint to those who establish charities like universities, hospitals, museaums, after they have amassed enormous wealth by robbery of all kinds)- ನಿನ್ನ ದಾನ–ಧರ್ಮಗಳನ್ನು ತ್ಯಜಿಸು; ಆಗ ಜನರು ಹೆಚ್ಚು ಭ್ರಾತೃಭಾವ ಸಂಪನ್ನರಾಗಲೂ ದಯಾವಂತರಾಗಲೂ ಕಲಿತುಕೊಳ್ಳುವರು; ನಿನ್ನ ಐಶ್ವರ್ಯವೆಲ್ಲವನ್ನೂ ತ್ಯಜಿಸು. ನಿನ್ನ ತಂತ್ರದ ಕಂತ್ರಾಟುಗಳನ್ನು ಬಿಡು–ಆಗ ಕಳ್ಳರೇ ಇಲ್ಲದಂತಾಗುವರು, ಮೋಸ ಕಣ್ಣಿಗೇ ಕಾಣಿಸದು (ಇದು ನಾನಾ ವಿಧದ ಸ್ತೇಯ ಮಾರ್ಗಗಳಿಂದ ಅಪಾರವಾದ ಆಸ್ತಿಯನ್ನು ಗಳಿಸಿದ ಮೇಲೆ ವಿಶ್ವವಿದ್ಯಾಲಯಗಳನ್ನೋ, ಆಸ್ಪತ್ರೆಗಳನ್ನೋ, ವಸ್ತು ಪ್ರದರ್ಶನಾಲಯಗಳನ್ನೋ ಕಟ್ಟಿಸುವವರಿಗೆ ಬುದ್ಧಿವಾದ)" –"Glimpses of world Religions'' P. 257. ಅದೇ ಪುಸ್ತಕ ಇನ್ನೂ ಹೇಳುತ್ತದೆ: "Abandon your saintliness (this is a hint to the so called preachers) put away your cleverness (this is a hint to the so called learned people and statesmen) and the people will be benefited a hundred fold–ನಿನ್ನ ಸಾಧು ಸಂತಗಿರಿಯನ್ನು ಬಿಟ್ಟುಬಿಡು (ಇದು ಪರೋಪದೇಶ ಪಂಡಿತರಿಗೆ ಬುದ್ಧಿವಾದ), ನಿನ್ನ ಚಾಕಚಕ್ಯತೆಯನ್ನು ದೂರ ಇಡು (ಇದು ಪಂಡಿತಂಮನ್ಯರಿಗೂ ರಾಜನೀತಿಜ್ಞಂಮನ್ಯರಿಗೂ ಆಡಿದ ಹಿತವಚನ); ಆಗ ಜನರು ನೂರುಪಟ್ಟು ಹೆಚ್ಚು ಪ್ರಯೋಜನ ಪಡೆಯುವರು". ಆದುದರಿಂದ ದ್ರೋಹ, ಸ್ತೇಯ,

ವಂಚನೆ, ಮೋಸ, ದಗಗಳು ಯಾರ ಯಾವ ಕಾರ್ಯಕ್ಷೇತ್ರದಲ್ಲೂ ಒಂದಲ್ಲ ಒಂದು ರೂಪದಿಂದ ಉದಯಿಸಬಹುದು– ಎಂಬುದನ್ನು ರಾಷ್ಟ್ರೀಯ ಸಂಘಟಕ ತಿಳಿದಿರುವುದಗತ್ಯ; ಇಲ್ಲವಾದರೆ ಅವನ ಸಂಘಟನೆ ಬಹಳಕಾಲ ಬಾಳದು ಅಥವಾ ಪಾಪವೆನ್ನಿಸೀತು. ಲಾವೋತ್ಸೆ ಹೀಗೆ ಹೇಳಿದರೆ, ಬೌದ್ಧ ಧರ್ಮವು "Meditation on the non-existence of an immortal soul leads to cessation of selfishness- ಅಮರವಾದ ಆತ್ಮವೆಂಬ ಪದಾರ್ಥವು ಇಲ್ಲವೆಂದು ಧ್ಯಾನಿಸಿದರೆ ವ್ಯಕ್ತಿಯ ಸಂಕುಚಿತ ಸ್ವಾರ್ಥಪರತೆ ನಿಂತೀತು" ಎಂದು ಹೇಳಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದೆ (G.W.R.P. 79); ಅಂದರೆ, ಸಂಕುಚಿತ ಸ್ವಾರ್ಥಪರಾಯಣತೆಯು ವಿಶ್ವರೂಪಗಳ ಮಾಯೆ ಆತ್ಮವಂಚನೆ–ದೇಶವಂಚನೆಗಳನ್ನು ಅತ್ಯಂತ ಸೂಕ್ಷ್ಮವಾಗಿಯೂ ಪ್ರಚ್ಛನ್ನವಾಗಿಯೂ ಮಾಡಬಲ್ಲದಾದುದರಿಂದ ಅಹಂಕಾರ ತ್ಯಾಗ ಮಾಡೆನ್ನದೆ ಅದಕ್ಕೆ ಅಧಿಕರಣವಾದ ಮನಸ್ಸಿನ ಅಡಿಗಲ್ಲಾದ ಆತ್ಮದ ಕಲ್ಪನೆಯನ್ನೇ ತ್ಯಜಿಸಿಬಿಡು–ಎಂದು ಹೇಳಿದೆ. ಇದರಿಂದ ಭಾರತೀಯ ತಿಳಿದುಕೊಳ್ಳಬೇಕು– ಈ ದೇಶದ ಸಾಮೂಹಿಕ ಅವನತಿಗಳಿಗೆ ಯಾವಾಗಲೂ ಈ ಧನಶಕ್ತಿ–ರಾಜ್ಯಶಕ್ತಿಗಳುಳ್ಳವರೂ ವಿದ್ಯಾಶಕ್ತಿ–ಬುದ್ಧಿಶಕ್ತಿಗಳುಳ್ಳವರೂ ಧರ್ಮಸಾರವನ್ನರಿಯದೆ, ಅರಿತರೂ ಲೆಕ್ಕಿಸದೆ, ಸಂಕುಚಿತ ವ್ಯಕ್ತಿಸ್ವಾರ್ಥಕ್ಕಾಗಿ ಆಯಾ ಶಕ್ತಿಗಳನ್ನು ಬಳಸಿಕೊಂಡದ್ದೇ ಕಾರಣ– ಎಂಬುದು ಗೊತ್ತಾಗುತ್ತದೆ. ಅದರಿಂದಲೇ ಗೀತೆ ನಿಷ್ಕಾಮಕರ್ಮವನ್ನು ಸರ್ವಭಾರತೀಯರಿಗೂ ಬೋಧಿಸಿದೆ; ಅದರಿಂದಲೇ ಅವರ ಜೀವನ ಸಫಲವಾದೀತು. ಪರೋಪಕಾರದ ತತ್ವವನ್ನು ಎಲ್ಲರೂ ಒಪ್ಪುತ್ತಾರೆ; ಆದರೆ ಅದನ್ನು ಕಾಯದೆ ಒತ್ತಾಯಿಸುವುದು ಬೇಡವೆನ್ನುತ್ತಾರೆ. ಪುಣ್ಯಸ್ಯ ಫಲ ಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ। ಹಿಂದು, ಪಾರಸೀಕ, ಬೌದ್ಧ ತತ್ವಜ್ಞಾನ ಹೇಳಿದ ಈ ಸೂತ್ರವನ್ನು ಕಾಯದೆಯ ಮೂಲಕ ಜಾರಿಗೆ ತರಲು ಸುವ್ಯವಸ್ಥೆ ಮಾಡುವುದು ನಮ್ಮ ಸಂಘಟನೆಗಿಂದು ಮುಖ್ಯೋದ್ದೇಶ; ಅವ್ಯವಸ್ಥೆಯಿಂದ ನಡೆಯುತ್ತಿರುವ ಅಲ್ಪ ಸ್ವಲ್ಪ ದೀನೋದ್ಧಾರವನ್ನು ನಿಲ್ಲಿಸಿದರಷ್ಟೇ ಸಾಲದು.



# ೧೯

# ಸತ್ಯದ ಲಕ್ಷಣ

"There is no virtue in mere open mindedness which leads no where– ಬರಿ ತೆರೆದ ಬಗೆಯಿಂದಿರುವುದು ಯಾವೆಡೆಗೂ ನಮ್ಮನ್ನೊಯ್ಯದಾಗ ಅದು ಸಂಭಾವಿತಗಿರಿ ಅಲ್ಲವೇ ಅಲ್ಲ" (The Indian philosophical congress, 1952; D.M. Datta ojn Modera Indian philosophy). ಈ ಮೂರು ಪ್ರತಿಯೊಂದನ್ನೂ ನಿಷ್ಕಾರಣದಿಂದ ಪೂರ್ವಗ್ರಹವೆಂದು ಹೇಳಿ ತಿರಸ್ಕರಿಸುವ ನಗರ ಕಾಕಸಮುದಾಯಕ್ಕೀಗ ಮನನೀಯವಾಗಿದೆ. ದತ್ತರ ಮಾತಿನಲ್ಲಿ ನಿಜವಾದ ಆಧುನಿಕ ಭಾರತೀಯ ಸಂಘಟಕನಿಗಿರಬೇಕಾದ ದೃಷ್ಟಿ ದಿಕ್ಕುಗಳು ಹತ್ತು : (೧) ವಿದೇಶಗಳಲ್ಲಿರುವ ಜನರ ಅನುಭವದಲ್ಲಿ ಕಂಡುಬಂದ ಸತ್ಯದ ಶೋಧಕ್ಕೆ ಪ್ರಾಮಾಣಿಕವಾಗಿ ಕಂಕಣಬದ್ಧವಾಗುವುದು ಮತ್ತು ವಿವಿಧ ಜನಾಂಗಗಳ ಸಂಸ್ಕೃತಿಗಳಲ್ಲಿ ಐಕ್ಯಸೂತ್ರವನ್ನು ಶೋಧಿಸುವುದು, (೨) ರಾಷ್ಟ್ರೀಯತೆ ಮತ್ತು ದೇಶಪ್ರೇಮಗಳಲ್ಲಿಯೂ ಅಡಗಿದ ಅಂತಾರಾಷ್ಟ್ರೀಯ ಮಾನವೀಯ ದೃಷ್ಟಿಯನ್ನು ಅಳವಡಿಸಿಕೊಳ್ಳುವುದು, (೩) ದೇಶೀಯ–ವಿದೇಶೀಯ, ಪ್ರಾಚೀನ–ಅರ್ವಾಚೀನ ಅತ್ಯುತ್ತಮ ವಿವೇಕವನ್ನು ಜೀರ್ಣಿಸಿಕೊಂಡು ಸಮನ್ವಯಿಸಿಕೊಳ್ಳುವುದು, (೪) ಸತ್ಯವನ್ನು ವಿವಿಧ ದಾರಿಗಳಿಂದ ಸೇರಬಹುದೆಂಬುದನ್ನು ನಂಬಿ ಭಿನ್ನ ಮತಧರ್ಮಗಳ ಬಗೆಗೆ ಗೌರವ ತಾಳುವುದು, (೫) ಮಾನವನ ಭಿನ್ನ ಕಾರ್ಯಕ್ಷೇತ್ರಗಳಾದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಮುಖಗಳೆಲ್ಲವೂ ಆತ್ಯಂತಿಕ ಆಧ್ಯಾತ್ಮಿಕ ಸಾಕ್ಷಾತ್ಕಾರದ ಸಾಧನಗಳೆಂದು ಗ್ರಹಿಸಿಕೊಳ್ಳುವುದು, (೬) ನಮ್ಮ ಜೀವನದ ವ್ಯಾವಹಾರಿಕ ಕ್ಷೇತ್ರದ ಪ್ರತಿಯೊಂದು ವಲಯದಲ್ಲಿಯೂ ನೈತಿಕ ಶಿಸ್ತು ಮತ್ತು ನಿಷ್ಕಾಮಕರ್ಮಗಳ ನೀತಿಯು ಇರಬೇಕೆಂಬುದಕ್ಕೆ ವಿಶೇಷ ಪ್ರಾಧಾನ್ಯವನ್ನು ಕೊಟ್ಟುಕೊಳ್ಳುವುದು, (೭) ನೀತಿ ಹಾಗೂ ಆಧ್ಯಾತ್ಮಿಕ ಸಾಕ್ಷಾತ್ಕಾರಗಳು ಎಲ್ಲ ನಿಜ ಮತಧರ್ಮಗಳ ಸಾರ ಎಂಬುದನ್ನು ಮನ್ನಿಸುವುದು, (೮) ಮಾನವನ ಸುಪ್ತ ಸಾತ್ವಿಕತೆಯಲ್ಲಿ ಶ್ರದ್ಧೆ ಇಟ್ಟುಕೊಳ್ಳುವುದು, (೯) ವ್ಯಕ್ತಿಯ ಆಧ್ಯಾತ್ಮಿಕ ಸ್ವಾತಂತ್ರ್ಯದ ಬಗ್ಗೆ ಅತಿ ಹೆಚ್ಚಿನ ಮಹತ್ವವನ್ನು ಕೊಟ್ಟುಕೊಳ್ಳುವುದು; ಕುಟುಂಬ, ಸಮಾಜ, ರಾಜ್ಯಗಳಲ್ಲಿಯ ಜೀವನ ಚಟುವಟಿಕೆಗಳು ಅದರ ಸಾಧನವೆಂದು ಗ್ರಹಿಸಿಕೊಳ್ಳುವುದು ಮತ್ತು ಎಲ್ಲದಕ್ಕೂ ಮೇಲಾಗಿ, ೧೦) ಇಂದ್ರಿಯಾಧೀನ–ಇಂದ್ರಿಯಾತೀತ ಅನುಭವಗಳನ್ನೂ ಪಾಶ್ಚಾತ್ಯ–

ಪೌರಸ್ತ್ಯ ವಿಜ್ಞಾನ ಹಾಗೂ ಗತವಿವೇಚನ ಪದ್ಧತಿಗಳನ್ನೂ ಬಳಸಿಕೊಂಡು ವಿಶ್ವದ ಸಮನ್ವಿತ ದರ್ಶನವನ್ನು ಪಡೆದುಕೊಳ್ಳಲು ಪ್ರಯತ್ನಿಸುವುದು.

**ಟಿಪ್ಪಣಿ :**

"Dynamics does not abrogate the status of Reality... There can be a manifold status of Being–ಉತ್ಕ್ರಿಯತ್ವವು ಸ್ಥಿತಿಯನ್ನು ಖಂಡಿಸದು... ಪರಮಸತ್ಯಕ್ಕೆ ಅನೇಕ ಸ್ಥಿತಿಗಳಿರಬಲ್ಲವು" ಎಂದು ಆರ್.ಪಿ.ಸಿಂಗರು ಮಂಡಿಸಿದ ಅರವಿಂದವಾದವು ಸಮಗ್ರಯೋಗದ ವಿಶಿಷ್ಟಾರ್ಥಕ್ಕೆ ಆಧಾರ. ಇಲ್ಲಿ "ನಾಸದಾಸೀತ್ ನೋ ಸದಾಸೀತ್ತದಾನೀಂ" ಎಂಬ ಋಗ್ವೇದ ಸೂಕ್ತವನ್ನು ನೆನೆದುಕೊಳ್ಳಬೇಕು. ಸದಸದ್ವಿಲಕ್ಷಣವಾದ ಆಧಾರ ಸತ್ಯವನ್ನು ಉತ್ಕ್ರಿಯ, ನಿಷ್ಕ್ರಿಯ, ಸ್ಥಿತಿರಹಿತ, ಸ್ಥಿತಿವಂತ ಎಂದು ಮುಂತಾಗಿ ವರ್ಣಿಸ ಹೋಗುವುದೇ ತಪ್ಪು. ಹಾಗೆ ವರ್ಣಿಸಹೋದರೆ ಜ್ಞಾನ–ಕ್ರಿಯೆಗಳ ತಾರತಮ್ಯ ಶಕ್ತಿ–ಅಶಕ್ತಿಗಳ ವಿವೇಚನೆಯನ್ನು ಬಿತ್ತರಿಸದಿರುವಾಗ ಪರಮಸತ್ಯದ ಬಗೆಗಿನ ಅಪಲಾಪಗಳೆಲ್ಲವೂ ಗ್ರಾಹ್ಯವೆಂಬ ಸರ್ವಸ್ಯಾದ್ವಾದವನ್ನು ಸ್ವೀಕರಿಸಿದಂತಾಗುವುದಲ್ಲದೆ, ಸಮಗ್ರೀಕರಣ ಮಾಡಿದಂತಾಗದು. ವಿವೇಕಾನಂದರಿಗಿಂತ ಭಿನ್ನವಾದ ಅಭಿಪ್ರಾಯವನ್ನು ತಾಳಿದರೆ ಭಾರತೀಯ ವೇದಾಂತವು ಒಂದು Bundle of Contradictions ವ್ಯಾಘಾತಗಳ ಹೊರೆಯಾಗುತ್ತದೆ. ಈಶಾವ್ಯಾಸದಲ್ಲಿ "ಅನೇಜದೇಜತ್" ಎಂಬ ವ್ಯಾಘಾತಗಳ ಆಲಂಕಾರಿಕ ಪ್ರಯೋಗದಿಂದ ಜ್ಞಾನಸ್ವರೂಪದ "ಈಶ"ನ ಸರ್ವಪ್ರೇರಕತೆಗೆ ಕ್ರಿಯಾವಾಚಕಗಳನ್ನು ಅನ್ವಯಿಸದಿರುವುದು ಕ್ಷೇಮ ಎಂಬುದು ಗೊತ್ತಾಗುತ್ತದೆ. ಹಾಗೇ ಅದಕ್ಕೆ ಸ್ಥಿತಿ ಅನೇಕ ಎಂದರೆ ಅದರ ವರ್ಣನೆಯಾಗದೆ ಅದು ಜಗತ್ತಿನ ವರ್ಣನೆಯಾಗುತ್ತದೆ. ಮಾಯೆಯು Magic; ಅದು ಪ್ರಥಮ ಸೃಷ್ಟಿಗೆ ಕಾರಣ. ಯಾವ ಬುದ್ಧಿಬಲದಿಂದಲೂ ಆದಿಕಾರಣನಾದ ಈಶನವರೆಗೆ ಸೃಷ್ಟಿಕರ್ಮಜಾಲದ ಹಿಂದೆ ಹಿಂದಿನ ಸ್ತರಗಳನ್ನೂ ನಿಯಮಗಳನ್ನೂ ಕೊಡಲಾರನೆಂಬುದನ್ನು ಮರೆತ ಆರ್.ಪಿ.ಸಿಂಗರು "ಅರವಿಂದರ" "ಸೂಪರ್ ಮೈಂಡನ್ನು" ತಿಳಿಯದೆ ಹೆಸರಿಸಿದ್ದಾರೆ. ಆ "ಸೂಪರ್ ಮೈಂಡು" ಅಧಿಯಜ್ಞ ಅಥವಾ ಮಾಯಾಶಕ್ತಿ, ಪುರುಷೋತ್ತಮ ಮುಖ, ಈಶ್ವರ ಸಂಕೇತಿಕ ಕ್ರಿಯಾಬೀಜ. ಅದೇನೂ ಅನನ್ಯಪದಾರ್ಥ ಸಂಶೋಧನೆಯಲ್ಲ. "ಅಕ್ಷರಾದಪಿಚೋತ್ತಮಃ" ಎಂಬುದು ಈಶ್ವರ ಅಥವಾ ಪರಮ ಆತ್ಮ. ಪರಬ್ರಹ್ಮವಲ್ಲ; ಪರಬ್ರಹ್ಮವು ಸತ್, ಚಿತ್, ಆನಂದ, ಸತ್ಯ, ಜ್ಞಾನ, ಅನಂತ, ಅದರ ಅಂಶವಲ್ಲದೆ ಅದಕ್ಕಿಂತ ಮೇಲಿನದೆಂದು "ಉತ್ತಮ" ಪದದ ವಸ್ತುನಿಷ್ಠ ಅರ್ಥವಲ್ಲ. ವ್ಯಾಕರಣದಲ್ಲಿ "ಉತ್ತಮ ಪುರುಷ" ಎಂದರೆ "ನಾನು, ನಾವು" ಎಂದರ್ಥ. ಅದನ್ನೇ ಗೀತಾಕೃಷ್ಣ ತನಗನ್ವಯಿಸಿಕೊಂಡು ಹೇಳಿದ್ದಾನೆ – ಅರ್ಜುನನ ರಾಜಸಪಾತ್ರಕ್ಕೆ ಆತ್ಮವಿಶ್ವಾಸ ಹುಟ್ಟಿಸಲು – ವಿಶ್ವರೂಪದರ್ಶನ ಮಾಡಿಸಿದಂತೆ. ಇಲ್ಲವಾದರೆ, "ಸರ್ವೋಪನಿಷದೋ ಗಾವೋದೋಗ್ಧಾ ಗೋಪಾಲನಂದನಃ" ಎಂದು ಕೃಷ್ಣನನ್ನು ಯಾರೂ ವರ್ಣಿಸುತ್ತಿರಲಿಲ್ಲ. ಈಶ್ವರನು ಏನು ಬೇಕಾದರೂ ಮಾಡಬಲ್ಲನೆಂಬುದು ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಂದ ಪರಿಸೀಮಿತವಾಗಿದೆ. ಮುಮುಕ್ಷುವಿರುವುದು ಪ್ರಪಂಚದಲ್ಲಿ, ಅವನ ಬಂಧಮುಕ್ತಿಗೆ ಅವನು

ಅನುಗ್ರಹಿಸುವುದು ಹೊಸ ಸಂಶೋಧನೆಯಲ್ಲ. ವಿವೇಕಾನಂದರು ಬ್ರಹ್ಮಸೂತ್ರದ ಶಂಕರ ಭಾಷ್ಯಕ್ಕೆ ಭಾಷ್ಯ ಬರೆದರು, ಅದರ ಗೂಢಾರ್ಥಗಳೆಲ್ಲವನ್ನೂ ತಿಳಿಸಿದರು, ಯಾವ ಹೊಸದನ್ನಾದರೂ ಕಂಡುಹಿಡಿದೆನೆಂದು ಅಹಂಕರಿಸಲಿಲ್ಲ. ಅರವಿಂದರ ಅಹಂಕಾರವು ಅಧಿಯಜ್ಞದ ರಾಜಸರೂಪ, ಸಾತ್ವಿಕರೂಪವಲ್ಲ; ಕೃಷ್ಣಾಹಂಕಾರವು. ಬ್ರಹ್ಮಾಹಂಕಾರ, ಅರ್ಥಾತ್ ಸಾತ್ವಿಕಾಹಂಕಾರ ಅಥವಾ ನಿರಹಂಕಾರವನ್ನು ಅರ್ಜುನನಿಗಾಗಿ ಅಹಂಕಾರಕ್ಕೆ ತಿರುಗಿಸಿಕೊಂಡು ತಳೆದ ಅನುಗ್ರಹ ಮುಖ. ಅದ್ವೈತದಲ್ಲಿ ಇತರ ತತ್ವಗಳು ಅಡಕವಾಗಬಲ್ಲಂತೆ ಇತರ ಯಾವುದರಲ್ಲೂ ಅಡಕಗೊಳಿಸಲು ಬುದ್ಧಿವಂತರಿಗೆ ಸಾಧ್ಯವಿಲ್ಲ. ಆದುದರಿಂದ ಅದೇ ಸಮಗ್ರ ವೇದಾಂತ. ಭಾರತದ ಬಹುಸಂಖ್ಯಾತರ ಮತಗಣನೆ ಮಾಡಿದರೆ ಅಥವಾ ಅವರ ಮನಸ್ಸಿನ ಒಲವು ನಿಲುವುಗಳನ್ನು ಮನಃಶಾಸ್ತ್ರರೀತ್ಯಾ ವಿಶ್ಲೇಷಿಸಿದರೆ ಅದ್ವೈತ ಪರಿಭಾಷೆ–ಭಾಷೆಗಳ ಸಂಸ್ಕಾರ ಆತ್ಮೀಯವೆನಿಸಿರುವುದು ಸುಸ್ಪಷ್ಟವಾಗದಿರದು. ಶಂಕರರನ್ನು ಸಿಂಗರಲ್ಲದೆ ಬೆಳ್ವಲ್ಕರರೂ ಅಪಾರ್ಥ ಮಾಡಿಕೊಂಡಿದ್ದಾರೆ; ದಾಸಗುಪ್ತರೂ ಇದಕ್ಕೆ ಅಪವಾದವಾಗಿಲ್ಲ, ಶಂಕರರ ಭಾಷ್ಯಗಳೆಲ್ಲವನ್ನೂ ಸಮೀಕ್ಷಿಸಿದರೆ ಈ ಅಂಶ ಗೊತ್ತಾಗುತ್ತದೆ. ಶ್ರೀರಮಣರು ತಮ್ಮ "ಸದ್ದರ್ಶನ ಭಾಷ್ಯ"ದಲ್ಲಿ ವೇದಾಂತ ತಾತ್ಪರ್ಯವನ್ನು –"This whole movement, the creation, called a play of shakti, is a formulation of the Lord ಈಶಕಲ್ಪನಾ. If this ಕಲ್ಪನಾ is transcended, what remains is ಸ್ವರೂಪ. ಸೃಷ್ಟಿಯ ಇಡೀ ಚಲನವು ಶಕ್ತಿಲೀಲೆ; ಇದು ಈಶಕಲ್ಪನೆ; ಈ ಕಲ್ಪನೆಯನ್ನು ಮೀರಿಹೋದರೆ ಉಳಿದಿರುವುದು ಸ್ವರೂಪ" ಎಂದಿದ್ದಾರೆ. ಆದುದರಿಂದ ಸ್ವರೂಪದ Being ಇರವು ಅನೇಕವೆಂಬುದು ಸಾಕ್ಷಾತ್ಕಾರದ ಅಪರೋಕ್ಷಜ್ಞಾನಕ್ಕೆ ಹೊಂದದು. ಅದರ ಕೆಳಗಿನ ಎಲ್ಲ ಇರವುಗಳೂ ಬಂದುಹೋಗತಕ್ಕಂಥವು, ಅಶಾಶ್ವತ –Becoming ಆಗುವಿಕೆಯ ನಿಯತಕಾಲಿಕ ಸಾಪೇಕ್ಷ ಅವಸ್ಥೆಗಳು. "ಸೂಪರ್ ಮೈಂಡು" ಇದಕ್ಕೆ ಹೊರತಲ್ಲ. ಸ್ವರೂಪವು ಸತ್, ಅದು ಮಾಡಿದ ಕಲ್ಪನೆಯು ತ್ಯತ್; ಎರಡೂ ಕೂಡಿದ್ದು ಸತ್ಯವೆಂಬ ಒಂದು ಪದಾರ್ಥ. ಶಕ್ತಿ, ವಸ್ತು, ವ್ಯಾಪಾರ, ಆಶ್ರಯಗಳು ಅಸತ್ಯದ ಚತುರ್ಮುಖಗಳು. "This shastra once again in conclusion reiterates that the ego that is engaged in these discussions must withdraw from them and plunge itself into the Deep self and that alone is real Release- ಮತ್ತೊಮ್ಮೆ ಈ ಶಾಸ್ತ್ರವು, ಈ ಚರ್ಚೆಯಲ್ಲಿ ತೊಡಗಿದ ಅಹಂಕಾರವು ಇವುಗಳಿಂದ ಹಿಂಜರಿದು ತಾನೇ ಸ್ವತಃ ತನ್ನ ಗಂಭೀರಾತ್ಮದಲ್ಲಿ ಮುಳುಗಿದರೆ ಅದೇ ನಿಜವಾದ ಮುಕ್ತಿ, ಎಂದು ಸಿದ್ಧಾಂತಿಸಿ ಪುನಃ ದೃಢೀಕರಿಸುತ್ತದೆ. ("Saddarshana Bhashya and Talks with Maharashi", p.110)



# ೨೦

# ಸುಧಾರಣೆಗಳ ಮಾದರಿಗಳು

ಸಮಾಜ ಶಾಸ್ತ್ರದ ಪ್ರಕಾರ ಮಾನವನ ಮಾನಸಿಕ ಬೆಳವಣಿಗೆಯು ಸಾಮಾಜಿಕ ಪ್ರಕ್ರಿಯೆ (Social process). ಸಾಮಾಜಿಕ ರೀತಿ, ನೀತಿ, ರೂಢಿ, ಪರಂಪರೆಗಳು ಸಮಾಜದ ಸಾಮಾಜಿಕ ಸಂಘಟಿತತೆಗೆ ಸಾಧನಗಳು. ಭ್ರಾತೃಭಾವವೇ ಅದರ ಸಾಧಾರಣ ಧರ್ಮ. ವ್ಯಕ್ತಿಗಳಾದ ಸದಸ್ಯರ ಆಚಾರ–ವಿಚಾರಗಳ ಸಾದೃಶ್ಯ ಹೆಚ್ಚಾಗಿದ್ದಷ್ಟೂ ಅವರ ಸಮಾಜದ ಐಕ್ಯವು ದೃಢತರವಾಗಿರುತ್ತದೆ. ಚರ್ಚು–ಮಸೀದೆಗಳು ಕ್ರೈಸ್ತ–ಮುಸಲ್ಮಾನರನ್ನು ಒಂದುಗೂಡಿಸಿದಷ್ಟು ದೇವಾಲಯಗಳೀಗ ಹಿಂದುಗಳನ್ನು ಒಂದುಗೂಡಿಸುತ್ತಿಲ್ಲ. ಏಕೆಂದರೆ ಹಿಂದುತ್ವದ ಬ್ರಹ್ಮಜ್ಞಾನವು ಶಬ್ದಶಃ ವಿವಿಧವಾಗಿರುವುದೂ ಸಾಮಾನ್ಯರು ಅದನ್ನು ತಿಳಿದುಕೊಳ್ಳಲು ಪ್ರಯತ್ನಿಸದಿರುವುದೂ ಅವರನ್ನು ಅತ್ತ ತಿರುಗಿಸಲು ತಕ್ಕ ಸಂಸ್ಥಾತ್ಮಕ ಪ್ರಯತ್ನವು ಏಕಸೂತ್ರಬದ್ಧವಾಗಿಲ್ಲದಿರುವುದೂ ಕಾರಣ. ವೃತ್ತಿನಿಷ್ಠ ಜಾತಿನಿರ್ಧಾರವೊಂದೇ ಈಗ ಗ್ರಾಹ್ಯವಾಗಿದೆ. ವೃತ್ತಿಗಳಲ್ಲಿ ಮೇಲುಕೀಳೆಂಬುದನ್ನು ಬಿಡಬೇಕು. ದೇವಾಲಯಕ್ಕೆ ಆದಿತ್ಯ (ಸೂರ್ಯ) ವಾರ ಪ್ರತಿಯೊಬ್ಬ ಹಿಂದುವೂ ಹೋಗಲು ವ್ಯವಸ್ಥೆಯಾಗಬೇಕು. ಸತ್ಯನಾರಾಯಣ ವ್ರತವೊಂದೇ ಸರ್ವವೈದಿಕವ್ರತಗಳ ಆದೇಶವಾಗಬೇಕು. ಹರಿ–ಹರ–ಜಿನ–ಬುದ್ಧ–ಜರತುಷ್ಟ್ರರನ್ನು ಪರಬ್ರಹ್ಮಾವತಾರಗಳೆಂದು ಗಣಿಸಬೇಕು. ಭಜನೆಯೇ ಸಾರ್ವಜನಿಕ ಪೂಜಾವಿಧಾನದ ಮುಖ್ಯಾಂಗವಾಗಬೇಕು. ಮಹಾಭಾರತದ ಶಾಂತಿಪರ್ವವನ್ನು ಬೈಬಲ್ಲೆಂದು ಎಣಿಸಿ ಅದರಂತೆ ನಡೆಯಲು ಕಲಿಯಬೇಕು. ಅದನ್ನು ದೇಶೀಯ ಭಾಷೆಗಳೆಲ್ಲವುಗಳಿಗೂ ಭಾಷಾಂತರಿಸಿ ಪ್ರತಿಯೊಬ್ಬ ಹಿಂದುವಿನ ಮನೆಗೂ ಹಂಚಬೇಕು. ಭಾರತದ ವಿಶ್ವಮಾನವೀಯತೆಯ ಪೂರ್ಣಚಿತ್ರವು ಶಾಂತಿಪರ್ವದಲ್ಲಿ ಸ್ಪಷ್ಟವಾಗಿದೆ. ಪ್ರಾಚೀನ ಭಾರತದ ಇತಿಹಾಸದ ಅಭ್ಯಾಸವು ವೇದಾಭ್ಯಾಸದಷ್ಟು ನಿಷ್ಠೆಯಿಂದ ದೇಶದಾದ್ಯಂತ ನಡೆಯುವಂತಾಗಬೇಕು. ಅಸ್ಪೃಶ್ಯತೆಯ ನಿತ್ಯತೆಗೆ ಎಡೆ ಇರದಿರಬೇಕು. ತಿಳಿಯದೆ ಅಥವಾ ಬಲಾತ್ಕಾರಕ್ಕೊಳಗಾಗಿ ಮತಾಂತರ ಹೊಂದಿದವರನ್ನೂ ಶರೀರ ಧರ್ಮಭ್ರಷ್ಟರಾದವರನ್ನೂ ಪ್ರಾಯಶ್ಚಿತ್ತವಿಧಿಯಿಂದ ಹಿಂದುತ್ವಕ್ಕೆ ಸೇರಿಸಿಕೊಳ್ಳಬೇಕು. ಹಿಂದುಧರ್ಮ ಗುರುಗಳು ಏಕೀಕೃತರಾದರೆ ಒಳ್ಳೆಯದು, ಇಲ್ಲವಾದರೆ ಅವರ ಪೂಜ್ಯತೆಗೆ ಮನ್ನಣೆ ಕೊಡುವುದನ್ನು ಬಿಟ್ಟುಬಿಡಬೇಕು ಮತ್ತು ಅಖಿಲ ಭಾರತ ಹಿಂದು ಮತಧರ್ಮ

ನಾಯಕನನ್ನಾಗಿ ಮಹಾತ್ಮನೊಬ್ಬನನ್ನು ಆಯ್ದು ಮನ್ನಿಸಬೇಕು. ಹಿಂದು ಮತ ಧರ್ಮೈಕ್ಯದ ಸಂವಿಧಾನವೊಂದನ್ನು ಆತನಿಂದ ಬರೆಯಿಸಿ ಅದಕ್ಕೆ ಎಲ್ಲರೂ ತಲೆಬಾಗಬೇಕು. ವಿಶ್ವಹಿಂದುಪರಿಷತ್ತು ಇಂಥ ಶಿಸ್ತಿನ ಕಾರ್ಯಕ್ರಮವನ್ನು ರೂಪಿಸದಿದ್ದರೆ ನಿಷ್ಫಲ. ವರ್ಷಕ್ಕೊಮ್ಮೆ ಸಭೆ ಸೇರಿದರೆ ಯಾವ ಪ್ರಯೋಜನವೂ ಲಭಿಸದು. ಸೋಮಾರಿತನದಿಂದಲೇ ಹಿಂದುಗಳು ಆತ್ಮ ಹಂತೃಗಳಾಗುತ್ತ ಹೋಗಲಾರಂಭಿಸಿದ್ದಾರೆ. ಯಾವ ಉಪಾಯವೂ ಹೊಳೆಯದಾದರೆ ಪ್ರತಿಯೊಬ್ಬ ಹಿಂದುವಿಗೂ ನಿತ್ಯಾಚಾರಕ್ರಮವನ್ನು ರೂಪಿಸಿಕೊಡಲು ರಾಮಕೃಷ್ಣ ಮಠದವರನ್ನು ಕೇಳಿಕೊಳ್ಳಬೇಕು; ಅದರ ದ್ವಿತೀಯ ಶ್ರೇಣಿಯ ಬಹಿಶ್ಚರ ಸದಸ್ಯತ್ವವನ್ನು ಸ್ವೀಕರಿಸಿ ಪ್ರತಿಯೊಂದು ಹಳ್ಳಿಯಲ್ಲೂ, ಪಟ್ಟಣದಲ್ಲೂ ರಾಮಕೃಷ್ಣ ಮಂದಿರವನ್ನು ಸ್ಥಾಪಿಸಿ ವಾರಕ್ಕೊಮ್ಮೆ ವಿವೇಕಾನಂದರ ಗ್ರಂಥಗಳನ್ನೋದಿಸಿ ಕೇಳಬೇಕು. ಪರಂಪರಾಗತ ಮಠಗಳಿಗೆ ನಡೆದುಕೊಳ್ಳುವುದನ್ನು ಸಂಕಲ್ಪ ಬಲದಿಂದ ಬಿಟ್ಟುಬಿಡಬೇಕು. ಮತಧರ್ಮದಿಂದ ತತ್ವಜ್ಞಾನವನ್ನು ಪ್ರತ್ಯೇಕಿಸಿ ದೂರ ಇಟ್ಟರೂ ಸರಿಯೆ; ಮತಧರ್ಮದಲ್ಲಿ ಹರಿ–ಹರರನ್ನು ಬ್ರಹ್ಮನೆಂದೇ ಕರೆದು ಭಜಿಸಲು ತೊಡಗಿದರೂ ಸರಿಯೆ. ಅಂತೂ ವ್ಯಾವಹಾರಿಕ ಮತಾಂತರದ ಸಮೀಕರಣವಾಗಲೇ ಬೇಕು. ಎಷ್ಟು ಕಾಲವನ್ನು ಹೀಗೇ ಅಸ್ತವ್ಯಸ್ತ ಸ್ಥಿತಿಯಲ್ಲಿ ಕಳೆಯುತ್ತ ಹೋಗಬೇಕು? ಆ ಬ್ರಹ್ಮನನ್ನು "ನಿರ್ದೋಷಾ ಶೇಷ ಸದ್ಗುಣ"ನೆಂದೇ ಕರೆಯಲಿ. ಅವನಿಗೆ ಹೆಂಡಿರು–ಮಕ್ಕಳನ್ನು ಕೊರಳಿಗೆ ಕಟ್ಟುವುದು ಮಾತ್ರಬೇಡ. ಅಂಥ ಹಿಂದುತ್ವ ಇನ್ನು ಸಾಕು.

ಭಾರತಕ್ಕೆಲ್ಲಾ ಕನ್ನಡ ಅಥವಾ ದೇವನಾಗರಿ ಲಿಪಿಯೊಂದೇ ಎಂದಾಗಬೇಕು. ಎಲ್ಲ ಭಾಷೆಗಳೂ ಅದನ್ನೇ ಬಳಸಬೇಕು. ಹಿಂದಿಯೇ ಅಂತಾರಾಜ್ಯ ಭಾಷೆಯಾಗಬೇಕು – ಇಂದಿನಿಂದಲೇ, ಭಾರತವನ್ನು ಐದೇ ಐದು ರಾಜ್ಯಗಳನ್ನಾಗಿ ವಿಂಗಡಿಸಿಬಿಡಬೇಕು. ಪದವ್ಯುತ್ತರ ಶಿಕ್ಷಣ ಮಾಧ್ಯಮ ಹಿಂದಿಯೇ ಆಗಬೇಕು. ಇಂಗ್ಲೀಷನ್ನು ಐಚ್ಛಿಕವಾಗಿ ಆದಿಯಿಂದ ಅಂತ್ಯದವರೆಗೂ ಓದಲು ಅವಕಾಶವಿರಲಿ. ಅದಕ್ಕೆ ಬಲಾತ್ಕಾರ ಬೇಕಾಗಿಲ್ಲ. ಪಾರಿಭಾಷಿಕ ಪದಗಳಲ್ಲಿ ಎಲ್ಲ ಭಾರತೀಯ ಭಾಷೆಗಳೂ ಹಿಂದಿಯವುಗಳನ್ನೇ ಅನುಸರಿಸಬೇಕು. ವೈಯಕ್ತಿಕ ಆಸ್ತಿಸಾಮ್ಯ ಹೋಗಿ, ಕೌಟುಂಬಿಕ ಆಸ್ತಿವಂತಿಕೆ ಬರಬೇಕು. ಸರಕಾರಕ್ಕೆ ಭೂಮಿಯ (ನೆಲದ) ಮೇಲೆ ಹಾಗೂ ಕಾಡಿನ ಮೇಲೆ ಸ್ವಾಮ್ಯದ ಯಾವ ಹಕ್ಕೂ ಇರಕೂಡದು. ಅದು ಕಂದಾಯವಷ್ಟನ್ನು ಮಾತ್ರ ಉತ್ಪನ್ನದ ಆರನೆಯ ಒಂದಂಶದಂತೆ ಪಡೆಯುವ ಹಕ್ಕುಳ್ಳದ್ದಾಗಬೇಕು. ಎಲ್ಲ ಬಗೆಯ ಉತ್ಪಾದನೆಗಳಿಗೂ ಈ ಪ್ರಮಾಣವನ್ನು ಅನ್ವಯಿಸಬಹುದು– ಹಣಸಂಪಾದನೆಗೆ ಕೂಡ. ಬೇರೆ ಬೇರೆ ಕರ–ಕಂದಾಯಗಳ ವೈವಿಧ್ಯವನ್ನು ಕೂಡಲೇ ತೆಗೆದು ಹಾಕಬೇಕು. ದಕ್ಷತೆ–ಪ್ರಾಮಾಣಿಕತೆ–ನಿಗರ್ವಿತ್ವಗಳಿಲ್ಲದವರಿಗೆ ಯಾವ ನೌಕರಿಯಲ್ಲಿಯೂ ಒಂದು ದಿನ ಕೂಡ ಇಟ್ಟುಕೊಳ್ಳಬಾರದು. ಇಷ್ಟು ಮಾಡಿದರೆ ಏಕೆ ಭಾರತವು ಅತ್ಯಂತ ತ್ವರಿತಗತಿಯಿಂದ ಪ್ರಗತಿಯನ್ನು ಸಾಧಿಸದೆ ಉಳಿದೀತು? ಹೇಗೆ ಉಳಿದೀತು? ಜಪಾನು–ಇಸ್ರೇಲುಗಳಿಗಿಂತಲೂ ಅಧಿಕ ಮುನ್ನಡೆಯನ್ನಿದು ಸಾಧಿಸೀತು. ಅನುತ್ಪಾದಕ ಚರ–ಸ್ಥಿರ ಆಸ್ತಿಗಳು ನಿಮಿಷಾರ್ಧದಲ್ಲಿ ಸರಕಾರದ ಬಳಕೆಗೆ ಸೇರುವಂತಾಗಬೇಕು.

ಸರಕಾರವೂ ಕೃಷಿ–ಗೋರಕ್ಷೆ–ವಾಣಿಜ್ಯಗಳನ್ನು ನಡೆಸಬೇಕು, ಕಾರಖಾನೆಗಳನ್ನು ನಡೆಸಬೇಕು, ವರ್ಗಾವರ್ಗಿ ನಿಲ್ಲಬೇಕು. ತರಬೇತಿನ ಕೇಂದ್ರಗಳನ್ನು ತೆರೆಯುವ ಹುಚ್ಚನ್ನು ಬಿಡಬೇಕು; ಕಾರ್ಯಾಲಯಗಳೇ ತರಬೇತಿನ ಕೇಂದ್ರಗಳಾಗಬೇಕು. ಮನಸ್ಸು ಮಾಡಿದರೆ ಇಂದೇ ಇಂಥ ಬದಲಾವಣೆಗಳನ್ನು ತರಬಹುದು. ಭಾರತೀಯ ಸಂಘಟನೆ ಇದರಿಂದ ಅತಿಶೀಘ್ರವಾಗಿ ಮತ್ತು ಅತಿ ದಕ್ಷವಾಗಿ ನೆಲೆನಿಲ್ಲುವಂತಾದೀತು. ಅಂದು ರಾಮರಾಜ್ಯವನ್ನು ನಾವು ಕಂಡೇವು; ಪ್ರಕಟ ಮತದಾನದಿಂದ ಪ್ರತಿನಿಧಿಗಳನ್ನು ಆರಿಸಿಯೇವು; ಮತದಾರರ ವಯಸ್ಸನ್ನು ೩೦ಕ್ಕೆ ಏರಿಸಿಯೇವು– ನೌಕರಿಯ ವಯಸ್ಸನ್ನೂ ಅಷ್ಟಕ್ಕೇ ಏರಿಸಿಯೇವು. ಅರ್ಥವೈಷಮ್ಯ ನಿವಾರಣೆಗಾಗಿ ಕಾಯದೆಯ ಒತ್ತಾಯದಿಂದ ಸಾರ್ವಜನಿಕ ರಚನಾತ್ಮಕ ಕಾರ್ಯಗಳಿಗೆ ಶ್ರೀಮಂತರಿಂದ ದಾನಕೊಡಿಸುವ ಹಕ್ಕನ್ನು ಸ್ಥಾಪಿಸಿಯೇವು. ಯೋಜನಾ ಬದ್ಧ ಮಳೆ–ಬೆಳೆಗಳನ್ನು ಸಾಧಿಸಿಯೇವು; ಮನೆ–ಮಠಗಳನ್ನು ಕಟ್ಟಿಸಿಯೇವು; ನಿರುದ್ಯೋಗವನ್ನು ಓಡಿಸಿಯೇವು; ಸೋಮಾರಿಗಳಿಗೆ ಕಠಿಣ ಸಜೆ ವಿಧಿಸಿಯೇವು; ದೈಹಿಕ ಮಾನಸಿಕ ಶಿಕ್ಷಣವನ್ನು ಎಲ್ಲರಿಗೂ ಕಡ್ಡಾಯವಾಗಿ ಕೊಟ್ಟೇವು; ವಿಜ್ಞಾನದಿಂದ ಜಗತ್ತಿನ ಹಿಂಸಾಚಾರಗಳನ್ನು ನಿಲ್ಲಿಸಿಯೇವು; ನವನಿರ್ಮಿತಿಗಳಿಂದ ಜಗತ್ತಿನ ಕಣ್ಣನ್ನು ಕೋರಯಿಸಿಯೇವು; ಜಾಗತಿಕ ಸರಕಾರವನ್ನೇ ಸ್ಥಾಪಿಸಿಯೇವು; ನಾವೇನು ಕಡಿಮೆ ಸಂಖ್ಯೆಯಲ್ಲಿರುವೆವೇ? ನಮ್ಮ ಭೂಮಿ ಬಂಜರೇ? ನಮ್ಮ ಮಿದುಳು ನಿರ್ವೀರ್ಯವೇ? ನಮ್ಮ ಉತ್ಸಾಹ ಜಾಡ್ಯವನ್ನು ಕೊಡಹಲಾರದೇ?

ಆದರೆ ಸಂಕಲ್ಪವೊಂದೇ ದೃಢವಾಗಿಲ್ಲ. ಮುಕ್ತಿಯ ಅಗತ್ಯವಿಲ್ಲದವರೇ ಯುಕ್ತಿವಾದಗಳಿಂದ ವಿಚ್ಛಿದ್ರಕಾರಕರಾಗುತ್ತಲೇ ಬಂದಿದ್ದಾರೆ; ಮತಶ್ರದ್ಧೆ ಇಲ್ಲದವರೇ ಮತಾಚಾರಗಳನ್ನೆತ್ತಿ ಹೇಳಿ ಸಾಮಾನ್ಯ ಜನರನ್ನು ಹೋಳು ಹೋಳಾಗಿ ಮಾಡಿದ್ದಾರೆ. “ಮತಜ್ಞರೂ” “ಪೂಜಾರಿಗಳೂ” ಹಿಂದುಗಳೂ ಹಿಂದುತ್ವದ ಹತ್ಯೆಗೆ ಶತಮಾನಗಳಿಂದ ಜಯಶಾಲಿಯಾಗಿ ಪ್ರಯತ್ನಿಸುತ್ತ ಬಂದರು; ಬೇಲಿಯು ಹೊಲವನ್ನು ಮೇದುದು; ಸುಪುತ್ರರ ಆರೈಕೆಗೆ ಕುಮಾತೆ ದೊರೆತಳು. ಅವಿವೇಕಾನಂದರು ಪಂಡಿತರಾಗಿ ಹಿಂದುತ್ವವನ್ನು ಹರಾಜಿಗಿಟ್ಟ ಪಂಡರಾದರು. ಏಕೆ? ಅವರ ಸಂಖ್ಯೆ ಅಲ್ಪವಾಗುತ್ತ ಹೋಗುವಂತಾದುದರಿಂದ; ಮಿಕ್ಕವರು ಲೋಕಲಂಪಟತೆಯಲ್ಲೇ ಉಳಿದುದರಿಂದ. ಧರ್ಮಜ್ಞಾನ ಬೇಡವಾದವರ ಕರ್ಮದ ಫಲವಿದು. ಅವರ ಸಂಖ್ಯೆ ಹೆಚ್ಚಾಯ್ತು. ಧರ್ಮವಿಲ್ಲಿ ಕೇವಲ ಮತಧರ್ಮವಲ್ಲ; ಮಾನವನ ನಾಗರಿಕ ಸಾಂಸ್ಕೃತಿಕ ಕರ್ತವ್ಯಗಳೆಲ್ಲವೂ ಇದರಲ್ಲಿ ಅಡಕವಾಗಿವೆ ಎಂಬುದನ್ನು (A way of life) ಹಿಂದುಗಳಲ್ಲಿ ಬಹುಜನರು ಅರಿತುಕೊಳ್ಳಲಿಲ್ಲ. ಧರ್ಮಜಾಗರವೆಂದರೆ ಭಾರತದಲ್ಲಿ ಕೇವಲ ಮತಾಚಾರ ಜಾಗರವಲ್ಲ– ಅರ್ಥನೀತಿ, ರಾಜನೀತಿ, ಸಮಾಜನೀತಿ, ಕುಟುಂಬ ನೀತಿ, ವ್ಯಕ್ತಿ ನೀತಿಗಳೆಲ್ಲವೂ ಧರ್ಮ, ಆತ್ಮಕ್ಕೂ ಸರ್ವಮೂಲಕ್ಕೂ ಹೇಗೆ ಭೇದವಿಲ್ಲವೋ ಹಾಗೇ ವ್ಯಕ್ತಿ ಕರ್ತವ್ಯಗಳಿಗೂ ಸಾಮಾಜಿಕ ಕರ್ತವ್ಯಗಳಿಗೂ ಭೇದವಿಲ್ಲಿಲ್ಲ. ನಮ್ಮ ವ್ಯವಹಾರಗಳೆಲ್ಲವೂ ಧರ್ಮದ ಒಂದು ಜಾಲ (Complex)ದಿಂದ ಹೆಣೆದುಕೊಂಡಿದ್ದವು. ಆ ಜಾಲ ಸಂಬಂಧವನ್ನು ವಿದೇಶೀಯ ವ್ಯವಹಾರ ಪದ್ಧತಿ ಕಡಿದು ಹಾಕಿತು. ಅದನ್ನು ಕೂಡಿಸಿಕೊಳ್ಳದೆ ಹೋದರೆ ನಾವು ನಾವಲ್ಲವಾಗಿ ಹೋಗುತ್ತೇವೆ. ವಿದೇಶೀಯ ವ್ಯಾವಹಾರಿಕ

ವಿಶ್ಲೇಷ ಪದ್ಧತಿಯನ್ನು ಅವರು ಹೇಗೆ ಸಮಾಜಾನುಕೂಲವಾಗಿ ಬಳಸಿಕೊಳ್ಳಬಲ್ಲರೋ ಹಾಗೆ ನಾವಿಲ್ಲಿ ಬಳಸಿಕೊಳ್ಳಲಾರೆವು– ನಮ್ಮ ಸ್ವಭಾವದಲ್ಲದು ಬಂದಿಲ್ಲ. ಈ ಅಂಶವನ್ನು ಗಮನಿಸಿದಾಗ ನಮ್ಮ ತಪ್ಪೇನೆಂಬುದು ಗೊತ್ತಾಗುತ್ತದೆ. ಇದು Revivalism ಸನಾತನ ಧರ್ಮದ ಪುನರುದ್ಧಾರವಾದವಲ್ಲ; Old is gold ಹಳೆಯದೆಲ್ಲಾ ಶ್ರೇಷ್ಠ ಎಂಬ ಪ್ರಚಾರವಲ್ಲ. ಕರತಪ್ಪಿಸುವವರೀಗ ಇಷ್ಟೇಕೆ ಹೆಚ್ಚಾದರು? ಹಿಂದೆ ಏಕೆ ಇಷ್ಟು ಸಂಖ್ಯೆಯಲ್ಲಿ ಜನರು ಕರಕಂದಾಯಗಳನ್ನು ತಪ್ಪಿಸುತ್ತಿರಲಿಲ್ಲ? ಪದ್ಧತಿ ಬದಲಾದುದರಿಂದ, ಪದ್ಧತಿ ವ್ಯತ್ಯಾಸದಿಂದ ಉಂಟಾದ ಅಪ್ರಾಮಾಣಿಕತೆಗೆ ಪದ್ಧತಿಯನ್ನು ಬದಲಾಯಿಸುವುದೇ ಮದ್ದು; ಇನ್ನೊಂದು ಮದ್ದಿಲ್ಲ. ಸಂಘಟನೆ ಇಲ್ಲಿತ್ತು – ಅದರ ಸೂತ್ರದಲ್ಲಿದ್ದ ಒಂದೆರಡು ದೋಷಗಳನ್ನು ತಿದ್ದಿಕೊಂಡರೆ ಸರಿ ಆಗುತ್ತಿತ್ತು. ಆದರೆ ಅದರ ಸರ್ವ ಸೂತ್ರಗಳನ್ನೂ ಬದಲಾಯಿಸ ಹೊರಟಿದ್ದು ರಾಷ್ಟ್ರ ಮಾರಕವಾಯಿತು. ಕೇಂದ್ರ–ಪ್ರಾಂತ ರಾಜ್ಯಗಳ ಸಂಬಂಧವೂ ಪ್ರಾಚೀನ ಭಾರತೀಯ ಮಹಾಚಕ್ರವರ್ತಿ–ಸಾಮಂತರಲ್ಲಿ ಇದ್ದಂತೀಗ ಇಲ್ಲ! ಅಂಥ ಸುಧಾರಣೆ ತರಲು ತಕ್ಕ ಅಧಿಕಾರ ವಿಕೇಂದ್ರೀಕರಣವು ಸಾಧನ.



# ೨೧

# ಧರ್ಮದ ಸ್ಥಾನ

"As an institution, Hinduism partakes of the formless-ness and unorganised character of all Eastern religions (p.116 of "Comparative Religion'' by A.C.Bouque) – ಸಂಸ್ಥಾರೂಪದ ಹಿಂದು ಧರ್ಮವು ಇತರ ಪೌರಸ್ತ್ಯ ಮತಧರ್ಮಗಳಂತೆಯೇ ರೂಪ ರಹಿತವೂ ಅಸಂಘಟಿತವೂ ಆಗಿದೆ" ಎಂಬ ಏ.ಸಿ.ಬೋಕೆಯ ಮಾತು ಹಿಂದುಮತ ಧರ್ಮದ ಆಧುನಿಕ ಅನುಯಾಯಿಗಳಿಗೆ ಮಾತ್ರ ಅನ್ವಯಿಸುವಂಥದು. ಹಾಗೇ ಉಕ್ತ ಗ್ರಂಥದ ೧೦೨ನೆಯ ಪುಟದಲ್ಲಿ "ವಿರುದ್ಧ ತತ್ವಗಳನ್ನು ಅವಿನಾಭಾವಿಗಳನ್ನಾಗಿ ಹೇಳುವುದು ಭಾರತೀಯ ಮನಕ್ಕೆ ಮಾದರಿ" ಎಂದುಕೊಂಡು – ೧೧೫ನೆಯ ಪುಟದಲ್ಲಿ, ಜಗದ್ವಿಮುಖನಾದ ತಪಸ್ವಿಯನ್ನು ಭಾರತ ಹೆಚ್ಚಾಗಿ ಮೆಚ್ಚುವುದರಿಂದ ತನ್ನನ್ನೇ ತಾನು ಮರೆತು ಪರಸೇವೆ ಮಾಡುವುದು ಮೋಕ್ಷಕ್ಕೆ ದಾರಿ ಎಂದು ಮಹಾತ್ಮಾಗಾಂಧಿ ಹೇಳಿದ್ದು ಕ್ರೈಸ್ತ ತತ್ವವಾದೀತಲ್ಲದೆ, ಹಿಂದು ತತ್ವವಾಗಲಾರದು – ಎಂದು ವಾದಿಸುವ ಬೋಕೇ ಸಾಹೇಬನ ಬುದ್ಧಿಯು ಸಂಘಟಿತವಾದದ್ದೋ ವಿಘಟಿತವಾದದ್ದೋ? ಇಂಥ ಜನರು ಹೀಗೆ ಬರೆದು ಪ್ರಕಟಿಸಲು ಅನುಕೂಲ ದೊರಕಲು ಹಿಂದು ಭಾರತವು ತನ್ನ ವೈದಿಕಯುಗದ ಸಂಘಟಿತತೆಯನ್ನು ತ್ಯಜಿಸಿ ವಿಘಟಿತವಾಗುತ್ತ ಹೋಗಿ, ೮ನೆಯ ಶತಮಾನದ ಬಳಿಕ ಕ್ರಮೇಣ ಪರಾಧೀನವಾಗುತ್ತ ನಡೆದು ಬ್ರಿಟಿಷ್‌ದಾಸ್ಯದ ನೊಗವನ್ನು ಕೊನೆಗೆ ಹೊರುವಂತಾದುದೇ ಕಾರಣ.

ತತ್ವ ವಿರೋಧವು ಆಭಾಸಿಕ ಎಂಬ ಔಪನಿಷದಿಕತೆಯನ್ನರಿಯದ ಬೋಕೆಯಂತೆಯೇ ೮ನೆಯ ಶತಮಾನದ ಅನಂತರದ ಹಿಂದುಗಳೂ ಶಂಕರ ಭಾಷ್ಯದ ಅಂತರರ್ಥವನ್ನು ಅರಿಯಲಾರದಾಗುತ್ತ ಹೋದದ್ದು ಹಿಂದು ವಿಘಟನೆಗೆ ಕಾರಣವಾಯ್ತು. ಬ್ರಹ್ಮೈಕ್ಯವೆಂದರೆ ಜಗತ್ತನ್ನು ಬಿಟ್ಟು ಆಕಾಶದಾಚೆಗೆ ಮೂಲೆಯೊಂದಕ್ಕೆ ಜೋತು ಬಿದ್ದಿರುವುದು ಎಂಬಷ್ಟು ಅಪಕಲ್ಪನೆಯಿಂದ ಮೋಕ್ಷವನ್ನು ಅರ್ಥಮಾಡಿಕೊಳ್ಳುವ ಪಂಡಿತರು ಬೋಕೆಯಂತೆಯೇ ಮಾಹಿಷಮತಿಮಂತರು. ಬ್ರಹ್ಮವು ಸರ್ವ, ವಿಶ್ವಮಯ ವಿಶ್ವೋತ್ತರ, ವಿಶ್ವಗರ್ಭಿತ, ವಿಶ್ವವನ್ನು ಉಗುಳುವ ಮತ್ತು ನುಂಗುವ ಮಹಾಶಕ್ತಿ; ಅದು ಸರ್ವಾತ್ಮಗಳ ಆಧಾರ ಚೈತನ್ಯ, ಸರ್ವಸಂಬಂಧಗಳ ನೆಲೆಗಟ್ಟು; ಅದಕ್ಕೆ ಏಕತ್ವ ದೃಷ್ಟಿಯು ನಿತ್ಯ, ನಾನಾತ್ವ ದೃಷ್ಟಿಯು ಅನಿತ್ಯ; ಬ್ರಾಹ್ಮೀಸ್ಥಿತಿಯೆಂದರೆ ವಿಶ್ವಜೀವಿಗಳ ಅಂತರಂಗಗಳ ಏಕತ್ವದ ನೆಲೆಯ ಅನುಭವ–

ಎಂಬ ಅಂಶಗಳನ್ನು ಗಮನಿಸದ ವ್ಯಾಖ್ಯಾತೃಗಳು ಎಂದೂ ರಾಷ್ಟ್ರೀಯ ಸಂಘಟಕರಾಗಲಾರರು. ಬ್ರಹ್ಮದ ಮೈತುಂಬ ಇರುವ ಕೇಂದ್ರಗಳು ಆತ್ಮಗಳು; ಪ್ರತಿಯೊಂದು ಆತ್ಮವೂ ಬ್ರಹ್ಮದ ಮಧ್ಯಬಿಂದು. ಆತ್ಮೀಯತೆಯನ್ನು ಸಹಜೀವಿಗಳೊಡನಲ್ಲದೆ ಹೋದರೆ ಇನ್ನಾರೊಡನೆ ಮಾನವರು ಬೆಳೆಯಿಸಿಕೊಳ್ಳುತ್ತಾರೆ? ಭಾರತೀಯ ಮುಕ್ತನ ಪ್ರಕಾರ ಆತ್ಮಸಾತ್ತಾಗುವುದು ಎಂದರೆ ಸಹಜೀವಿಗಳನ್ನು ಆತ್ಮ ಪ್ರಧಾನವಸ್ತುಗಳೆಂದು ಗ್ರಹಿಸಿ, ಅವರ ಆತ್ಮಗಳೂ ತನ್ನ ಆತ್ಮವೂ ಅಭಿನ್ನ ಎಂದು ಅನುಭವ ಹೊಂದುವುದು. ಆತ್ಮೀಕರಣವೇ ರಾಷ್ಟ್ರೀಕರಣ. ಅದನ್ನು ೮ನೆಯ ಶತಮಾನದವರೆಗೆ ಭಾರತ ಮಾಡುತ್ತ ಬಂತು; ದಾಳಿ ಮಾಡಿ ಒಳ ಹೊಕ್ಕ ಅಭಾರತೀಯರಿಗಿಲ್ಲಿ ಭಾರತೀಯತೆಯ ದೀಕ್ಷೆಯನ್ನು ಕೊಡಲಾಯಿತು. ಹಾಗೆ ಭಾರತೀಕೃತ (Indianised or Hinduised)ರಾದವರ ಅಸ್ತಿತ್ವವು ಸಂಘಟನೆಗೆ ಮಾರಕವಾಗಲಿಲ್ಲ. ಆದರೆ ೮ನೆಯ ಶತಮಾನದಲ್ಲಿ ಬಂದ ಪರಕೀಯರು ಭಾರತೀಕೃತರಾಗುವಂತೆ ಮಾಡಲು ತಕ್ಕ ಸಂಘಟಿತ ಹಿಂದುಶಕ್ತಿ ಭಾರತದಲ್ಲಿ ಉಳಿದಿರಲಿಲ್ಲ. ಅಂದಿನಿಂದ ಅಧಃಪತನ ಆರಂಭವಾಗಿ ೧೯೪೭ನೆಯ ಕ್ರಿಸ್ತಶಕದವರೆಗೂ ಅದು ಭಾರತೀಯರನ್ನು ನಾನಾ ಸಂಕಟಗಳಿಗೆ ಒಡ್ಡುತ್ತ ಹೋಯ್ತು. ೧೨ ಶತಮಾನಗಳ ಕಾಲ ಇಲ್ಲಿ ರಾಷ್ಟ್ರೀಯ ಅಂಧಕಾರ ತುಂಬಿತ್ತೆಂಬುದೀಗ ಸ್ಪಷ್ಟವಾಗುತ್ತದೆ. ಈ ವಿಷಯ ಈಗ ಸ್ಪಷ್ಟವಾದುದರಿಂದ ಒಂದೇ ಒಂದು ಶತಮಾನದಲ್ಲಿ ನಮ್ಮ ವಿಘಟಿತ ರಾಷ್ಟ್ರೀಯ ಸಮಾಜವನ್ನು ಭಾರತೀಕರಣದಿಂದ ಸಂಘಟಿತವನ್ನಾಗಿ ಮಾಡಲು ಯೋಚಿಸಿ, ಕಾರ್ಯಕ್ಕಾರಂಭಿಸುವುದು ಐತಿಹಾಸಿಕ ಜಾಣತನ.

ಸಹಜೀವಿಸೇವೆಯನ್ನು "ಪರೋಪಕಾರ" ಎಂದು ಗ್ರಹಿಸಿದ ಹಿಂದುಮತವು ಸಾಮಾನ್ಯ; ಅದು ಸ್ವೋಪಕಾರದ ಅತ್ಯುಚ್ಚದಶೆಯೆಂದು ಗ್ರಹಿಸಿದ ಹಿಂದುಮತವು ಮಾನ್ಯ. ಈ ಯಾವ ಬಗೆಯಲ್ಲಿಯೂ Social Service ಸಮಾಜಸೇವೆ, ಸಮಾಜೋದ್ಧಾರಗಳು ಬಹಿಷ್ಕೃತವಾಗಿಲ್ಲವೆಂಬುದು ಕಣ್ಣಿದ್ದವರಿಗೆ ಕಾಣಿಸುತ್ತದೆ. Ultimate significance in the events of human life ಮಾನವ ಜೀವನದ ಘಟನೆಗಳಿಗೆ ಆತ್ಯಂತಿಕ ಅರ್ಥ ಹಿಂದು ಜೀವನದಲ್ಲಿಲ್ಲ ಎಂದ ಬೋಕೆಯು (ಪುಟ ೧೧೫) ಕೂಡಲೇ (ಪುಟ ೧೧೬) ಹಿಂದುವಿಗೆ – ಭೋಗಲಂಪಟತೆಗಿಂತ ಸ್ವಾರ್ಥ ತ್ಯಾಗ ಹೆಚ್ಚಿನದು; ಆಶೆ–ಆವೇಶಗಳನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಅವುಗಳನ್ನು ತೃಪ್ತಿಪಡಿಸುತ್ತ ಹೋಗುವುದಕ್ಕಿಂತ ಮೇಲು; ದೇಹಕ್ಕಿಂತ ಆತ್ಮ ಹೆಚ್ಚು; ಸಂಸಾರಿಗಿಂತ ಸನ್ಯಾಸಿ ಹೆಚ್ಚಿನವ, ತಪಸ್ವಿ ಮೇಲಿನವ– ಎಂದದ್ದು ಹಿಂದು ಜೀವನದಲ್ಲಿ ಐಹಿಕ ಸಾಮಾಜಿಕ ಹಿತಸಾಧನೆಗೆ ಸ್ಥಾನವೇ ಇಲ್ಲ ಎಂದು ನಿಗಮನಿಸಲು ಸಮರ್ಥನೆಯನ್ನು ನೀಡಬಲ್ಲದೇ? ಅತಿಹೆಚ್ಚಿನ ಸಮಾಜ ಸೇವಕನೆಂದರೆ ಇಲ್ಲಿ ಸನ್ಯಾಸಿ, ತಪಸ್ವಿ, ಋಷಿ, ಮುನಿ, ಬ್ರಾಹ್ಮಣ – ವೈದಿಕ ಯುಗದಲ್ಲಿ. ಆದರೆ ೮ನೆಯ ಶತಮಾನದ ಹಿಂದುತ್ವದಲ್ಲಿ ಬೋಕೆ ಹೇಳಿದ ಬೊಕ್ಕೆಗಳು ಹಿಂದುಧರ್ಮದ ಮೈಮೇಲೆ ಸ್ಪಷ್ಟವಾಗಿ ಮೂಡಲಾರಂಭಿಸಿದವು; ವೈದಿಕತೆಯು ಲೌಕಿಕತೆಗೆ ತೀರ ವಿರುದ್ಧವಾದ ಸಂಕುಚಿತತೆಯನ್ನು ತಾಳಿತು; ರಾಜರ ವಿದೇಹಜನಕತ್ವವು ಯಾಜ್ಞವಲ್ಕ್ಯತ್ವಕ್ಕಿಂತ ಅಂತಃಸಾರದಲ್ಲಿ ಭಿನ್ನವಲ್ಲ ಎಂಬ ಅರಿವು ಅಡಗಿಹೋಯ್ತು; ವಸಿಷ್ಠ–ವಾಮದೇವಾದಿಗಳು ಅಯೋಧ್ಯೆಯಲ್ಲಿ ರಾಜ

ಪುರೋಹಿತರಾಗಿದ್ದದ್ದೂ ವಿಶ್ವಾಮಿತ್ರನು ರಾಮಗುರುವಾಗಿದ್ದದ್ದೂ ಅನನುಕರಣೀಯವಾಗುತ್ತ ಹೋಯ್ತು. ಹಿಂದುಗಳು ಹಿಂದುಳಿಯಲಾರಂಭಿಸಿದ್ದು ರಾಷ್ಟ್ರೀಯವಾಗಿ ಅಂದಿನಿಂದ. ದೇಶದ ಅರ್ಧಭಾಗದಲ್ಲಿ ಕೂಡ ಆರೋಗ್ಯಕರವಾದ ಹಿಂದು ಆಚಾರ ವಿಚಾರಗಳು ಉಳಿಯದಂತಾದದ್ದು ೧೪ನೆಯ ಶತಮಾನದಿಂದ. ಅಂದೇ ಹಿಂದುಪುನರುಜ್ಜೀವನ ಪ್ರಯತ್ನ ಪ್ರಾರಂಭವಾಯ್ತು. ಆದರದು ಆತ್ಯಂತಿಕ ಪರಿಣಾಮಕಾರಿಯಾಗಲಿಲ್ಲ. ಆದುದರಿಂದ ಬ್ರಿಟಿಷ್ ಪ್ರಭುತ್ವವು ಇಡಿ ಭಾರತವನ್ನು ಅನಂತರ ವಶಪಡಿಸಿಕೊಂಡಿತು. ಹಿಂದುಪುನರುತ್ಥಾನವೇ ಭಾರತದಲ್ಲಾಗಬೇಕಾದ ರಾಷ್ಟ್ರೀಯ ಸಂಘಟನೆ. ಹಿಂದುತ್ವ ಅಳಿದ ದಿನ ಭಾರತದ ಭಾರತತ್ವ ಅಳಿದುಹೋಗುತ್ತದೆ. ಪ್ರಬುದ್ಧ ಹಿಂದುಗಳು ಸಹಜೀವಿಗಳ ಹಿಂಸಕರಲ್ಲ; ಅವರು ಅಂಥವರೆಂದು ತಿಳಿದು ಅವರ ತೇಜೋವಧೆಯನ್ನು ರಾಜಕೀಯ ಮುಖಂಡರನೇಕರು ಮಾಡುತ್ತ ಬಂದದ್ದು ಸದ್ಯದ ಅರಾಜಕತೆ–ಶತ್ರುಭಯಗಳಿಗೆ ಗಣ್ಯವಾದ ಒಂದು ಕಾರಣ. ಹಿಂದುತ್ವವಿಲ್ಲದೆ ಇಲ್ಲಿ ರಾಷ್ಟ್ರೀಯತೆ ಇಲ್ಲ. ಅರಾಷ್ಟ್ರೀಯತೆಯು ಅಸ್ವಾತಂತ್ರ್ಯವನ್ನು ತರುವ ಘೋರ ಕಾಳೋರಗ. ಹಿಂದುಗಳ ವರ್ಣ–ಜಾತಿಗಳಾವುವೂ ಅರಾಷ್ಟ್ರೀಯವಾಗದೆ ಇರಲು ಅವರಲ್ಲಿ ಭ್ರಾತೃಭಾವ, ಅರ್ಥಸಾಮ್ಯಗಳು ನೆಲೆನಿಲ್ಲುವುದು ಅಗತ್ಯ. ವರ್ಣಭ್ರಾತೃತ್ವ, ಜಾತಿ ಭ್ರಾತೃತ್ವಗಳು ಸಾಂಸ್ಕೃತಿಕ ಮೌಲ್ಯಗಳಿಂದ ನಿಯತವಾದಾಗ ಯಾರೂ ಹಿಂದುಗಳನ್ನು ಒಡೆದಾಳಲಾರರು. ಸಾಂಸ್ಕೃತಿಕ ಮೌಲ್ಯಗಳ ತಾರತಮ್ಯ ವ್ಯವಸ್ಥೆ ಸರ್ವಾನುಮತವಾಗಿ ಇರದಿರುವುದು ಸಮಾಜಘಾತಕ. ಅಂಥ ಅಭಾವ ಇಂದು ತಲೆದೋರಿದ್ದು ಖೇದಕರ. ಅದರ ಪರಿಹಾರಕ್ಕೆ ಕೂಡಲೇ ಪ್ರಯತ್ನ ನಡೆಯಬೇಕು.

**ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।**

**ರಾಜ್ಯಸ್ಯಾರ್ಥೇತ್ಯಜೇದ್ ಗ್ರಾಮಂ ದೇಶಾರ್ಥೇ ರಾಜ್ಯಮಾಪದಿ ॥**

ಎಂಬ ಆಪದ್ಧರ್ಮವು ರಾಷ್ಟ್ರೀಯ ಸಂಘಟಕರ ಧ್ರುವತಾರೆ. ಭಾರತೀಯತೆಯನ್ನು ತಿರಸ್ಕರಿಸುವ ಯಾವ ರಾಜನೀತಿ ಪ್ರಸ್ಥಾನವೂ ಆರೋಗ್ಯಕರವಲ್ಲ. ಅಸ್ಪೃಶ್ಯತೆಯನ್ನು ನಿವಾರಿಸಲು ಅಕ್ರಮವನ್ನು ಯೋಚಿಸುತ್ತಿರುವುದೂ ತಕ್ಕ ಕ್ರಮವನ್ನು ಯೋಚಿಸದಿರುವುದೂ ಅಧಿಕಾರಾರೂಢರಾದವರ ಅಭಾರತೀಯ ನಾಯಕತ್ವದ ಲಕ್ಷಣ. ಬುದ್ಧಿನಾಶಾತ್ ಪ್ರಣಶ್ಯತಿ– ಹಿಂದುಬುದ್ಧಿ ಇಲ್ಲದಲ್ಲಿ ಹಿಂದುತ್ವ ಉಳಿಯದು–ಅದು ನಾಶವಾಗುವುದು. ಆ ನಾಶವು ಸಾಂಸ್ಕೃತಿಕ. ನಷ್ಟನಾದ ಹಿಂದುವಿಗೆ ಮತಾಂತರ ಹೊಂದುವುದು ಈ ಜನ್ಮದಲ್ಲಿ ಅಲ್ಲವಾದರೆ ಮುಂದಿನ ಜನ್ಮದಲ್ಲಾದರೂ ಅನಿವಾರ್ಯವಾಗುತ್ತದೆ; ಅವನ ಮಕ್ಕಳು ಮರಿಗಳು ಹಾಗೆ ಮಾಡಲೇ ಬೇಕಾಗಿ ಬರುವುದು. ಏಕೆಂದರೆ ನಾಸ್ತಿಕ ಕೈವಲ್ಯವು ಮಾನಸಶಾಸ್ತ್ರೀಯವಾಗಿ ಅತಿಅಸ್ಥಿರ, ಅದೃಢ, ಅಸಮಾಧಾನಕರ. Perfect aloofness of individuality for ever in any state or at any level of psycho-spiritual existence is impossible –ಯಾವಾಗಲೂ ಎಲ್ಲ ಸ್ಥಿತಿ ಅಥವಾ ಮಟ್ಟಗಳಲ್ಲೂ ಮಾನಸ–ಆತ್ಮಿಕ ಜೀವನದಲ್ಲಿ ಪೂರ್ಣ ಪ್ರತ್ಯೇಕತೆಯುಳ್ಳ ವೈಯಕ್ತಿಕತೆಯನ್ನು ಇಟ್ಟುಕೊಳ್ಳುವುದು ಅಸಾಧ್ಯ– ನಾನಾತ್ವದ ಪ್ರಪಂಚ, ಸ್ವರ್ಗ, ಮೋಕ್ಷಗಳಲ್ಲಿ. ಮಾಡತಕ್ಕದ್ದನ್ನು ಸಕಾಲದಲ್ಲಿ ಮಾಡದಿರುವುದು ವಿಸಂಘಟನ ಹೇತು. ವ್ಯಕ್ತಿಗಳು ವಿಶ್ವಾತ್ಮನ Pseudo-pods ಆಭಾಸಿಕ ಕಾಲುಗಳು– ಎಂಬ ಸತ್ಯದ

ಅರಿವು ಸಂಘಟನೆಯ ಚಿರಸ್ಥಾಯಿತ್ವವನ್ನು ಸಾಧಿಸಲು ಅವಶ್ಯಕ. ವಿಶ್ವಾತ್ಮ (ಬ್ರಹ್ಮ)ನಿಗೂ ವ್ಯಕ್ತಿಗಳಿಗೂ ಇರುವುದೆಂದು ನಂಬಲಾದ ಭೇದ–ವಿರೋಧಗಳನ್ನು ಇಲ್ಲವೆಂಬ ಅನುಭವಕ್ಕೆ ಮಾರ್ಪಡಿಸಲು ವ್ಯಕ್ತಿಗಳನ್ನು ಯೋಜಿಸುವುದು ರಾಷ್ಟ್ರೀಯ ಸಂಘಟನೆಯ ಪ್ರಥಮಪಾಠ. ಸಾಂಸ್ಕೃತಿಕವಾಗಿ ಉನ್ನತ, ಉನ್ನತತರ ಸ್ತರಗಳಿಗೇರುತ್ತ ಹೋದ ಹಾಗೆ ಹೆಚ್ಚು ಹೆಚ್ಚಿನ ಅಭೇದವು ಸಿದ್ಧಿಸಿ ಆ ಮೂಲಕ ಹೆಚ್ಚು ಹೆಚ್ಚು ಸ್ಥಾಯಿಯಾದ ಸಮಾಧಾನವು ರಾಷ್ಟ್ರೀಯ ಸಂಸ್ಕೃತರಿಗೆ ದೊರಕುತ್ತ ಹೋಗುವುದೆಂಬ ಅಂಶವಿಲ್ಲಿ ಮನನೀಯ. ವ್ಯಕ್ತಿಗಳಲ್ಲಿ ಎಷ್ಟು ಭೇದಗಳಿದ್ದರೂ ಸಾಂಸ್ಕೃತಿಕ ಪ್ರಕಾರದ ಐಕ್ಯವು ಸಾಧ್ಯ, ಅಪೇಕ್ಷಣೀಯ ಮತ್ತು ವ್ಯಕ್ತಿಗಳ ಸ್ಥಾಯಿ ಸುಖಕ್ಕದು ಆಧಾರ ಎಂಬುದೇ ಸಾಮಾಜಿಕತೆಯ ಅರ್ಥ, ಸಂಘಟಿತ ಜೀವನದ ರಹಸ್ಯ. ವ್ಯಕ್ತಿಗೆ ಸ್ವಾಚ್ಛಂದ್ಯವಿರುವುದು ತಾತ್ಕಾಲಿಕ ಸುಖಕ್ಕಾದೀತಲ್ಲದೆ, ಚಿರಸ್ಥಾಯಿ ಸುಖಕ್ಕಾಗದು. ಸಂಘಟಿತ ಜೀವನದಲ್ಲಿ ದೇಹಸಂಬಂಧಗಳು ವ್ಯಕ್ತಿಗೆ ಅನನುಕೂಲವಾಗದಿರಲು ಐಕಮತ್ಯದಿಂದ ಒಂದೇ ಒಂದು ಮಹಾ ಆರ್ಥಿಕ ವ್ಯವಹಾರ ಸೂತ್ರವನ್ನು (ಅರ್ಥಶಾಸ್ತ್ರದ ಒಂದು ಪ್ರಸ್ಥಾನ ಹೇಳುವ Law of chance ಆಕಸ್ಮಿಕತಾವಿಧಿ ಮತ್ತು Law of competition ಸ್ಪರ್ಧಾವಿಧಿಗಳಲ್ಲಡಗಿದ ಪೂರ್ವಯೋಜನಾ ರಹಿತತೆಯನ್ನು ಬಿಟ್ಟು) ರೂಪಿಸಿಕೊಳ್ಳುವುದು ಸಮಾಜವಾದದ ಸಂಘಟನ ಶ್ರದ್ಧೆಯ ಸಾರ. ಅದಕ್ಕೆ ಅಪ್ರಬುದ್ಧ ವಯಸ್ಕರನ್ನು ಪ್ರಬುದ್ಧರನ್ನಾಗಿ ತರಬೇತುಗೊಳಿಸುವುದು ಪ್ರಥಮಾವಶ್ಯಕತೆ. ಸ್ತ್ರೀ–ಪುರುಷರಲ್ಲಿ, ಪೌರಜಾನಪದೀನರಲ್ಲಿ ಯಾರೂ ಅಪ್ರಬುದ್ಧ (Unenlightenned, uneducated nationally)ರಾಗಿ ಉಳಿಯಗೊಡಬಾರದು. ಮಾನವನು ತನಗೆ ತಾನೇ ಬಗೆಯುವ ಅನ್ಯಾಯಗಳಲ್ಲಿ ತನ್ನನ್ನೂ ತನ್ನ ಸಹಜೀವಿಗಳನ್ನೂ ಅಪ್ರಬುದ್ಧರನ್ನಾಗಿ ಉಳಿಯಗೊಡುವುದು ಅಗ್ರಗಣ್ಯ.

ಐತಿಹಾಸಿಕ ಕತೆಗಳಷ್ಟು ಜನಶಿಕ್ಷಣ ಮಾಧ್ಯಮವಾಗಬಲ್ಲ ಯೋಗ್ಯತೆ ಇನ್ನಾವುದಕ್ಕೂ ಇಲ್ಲ. ಕತೆಗಳ ಪೌರಾಣಿಕತೆಯು ದೋಷಪೂರ್ಣವಾದದ್ದು. ಅವುಗಳ ಜೀವಶಾಸ್ತ್ರ–ರಸಾಯನಶಾಸ್ತ್ರ–ಭೌತಶಾಸ್ತ್ರ ಪರಿಸೀಮಿತತೆಯೂ ಹಾಗೇ ದೋಷಪೂರ್ಣವಾದದ್ದು. ಇಂದ್ರಿಯ, ಮನ, ಆತ್ಮಗಳ ಉತ್ತರೋತ್ತರಾಧಿಕ ಮೌಲ್ಯದ ಅನುಭವ ಮಾಲಿಕೆಯೇ ಸಾಂಸ್ಕೃತಿಕ ವಿಕಾಸದ ಪರಮಾಧಾರ. ಮನದ ಅಂಗವಾದ ಕೇವಲ ಗಾಣಿತಿಕ ಅಥವಾ ತಾರ್ಕಿಕ ಬುದ್ಧಿಯ ಉಪಾಸನೆ ವಿಘಟನ ಪ್ರೇರಕ. ಉಕ್ತಬುದ್ಧಿಯು ಸಂಘಟನ ಪ್ರೇರಕವಾಗಲು ಅದಕ್ಕೆ ಭೌತಿಕ ಗುಣಗಳನ್ನು ಗುಣಿಸಿ ಊಹಿಸಲಾಗದ ಮಹೋನ್ನತ ಸಾಂಸ್ಕೃತಿಕ ಪುರುಷಾರ್ಥಗಳು ಆರಾಧ್ಯವಾಗಬೇಕು. ಆ ಪುರುಷಾರ್ಥಗಳು ತರತಮವಾಗಿರುವುದು ದೇಶ ವಿಶಿಷ್ಟ. ಧರ್ಮವು ಭಾರತದಲ್ಲಿ ಸಿದ್ಧಿಯೂ ಹೌದು, ಇತರ ಪುರುಷಾರ್ಥಗಳ ಸಾಧನವೂ ಹೌದು.

ಶೌಚಧರ್ಮದ ಸಾಧಾರಣೀಕರಣವು ಸಾಂಸ್ಕೃತಿಕ ಸಮಾನತೆಯ ಆದ್ಯ ಸಾಧನ. ಅಹಿಂಸೆಯು ಅಂತಃಶೌಚ, ಬಹಿಃಶೌಚವು ಆದರ್ಶ ಆಸ್ಪತ್ರೆಯ ಕ್ರಮಗಳಿಂದ ವೇದ್ಯ. ದುಷ್ಟಶಿಕ್ಷಣ–ಶಿಷ್ಟಸಮರ್ಥನೆ, ಅಹಿಂಸೆ, ನಿರಪರಾಧಿ ಸಹಜೀವಿಗಳ ನೆರವಿಗೆ ನಿಲ್ಲದಿರುವುದು ದುಷ್ಟತೆ. ಅಪರಾಧವು ರಾಷ್ಟ್ರೀಯ ಸರ್ವೋದಯದ ಮಾನದಂಡದಿಂದ ನಿರ್ಧರಿಸಲ್ಪಡುತ್ತದೆ.

ಧರ್ಮನ್ಯಾಯ, ಅರ್ಥನ್ಯಾಯ, ಕಾಮನ್ಯಾಯ, ಮೋಕ್ಷ ನ್ಯಾಯಗಳು ಸರ್ವಾರ್ಥಸಿದ್ಧಿಯ ಸಾಧನಗಳ ವಿತರಣದ ಸ್ವರೂಪ ನಿರ್ಣಾಯಕಗಳು. ಯುಕ್ತತೆಗೆ, ಸಂಘಟಿತತೆಗೆ ರಾಷ್ಟ್ರೀಯವಾಗಿ ಆಧಾರವಾಗಬಲ್ಲ ವ್ಯವಹಾರಸೂತ್ರಗಳು ನ್ಯಾಯದಾಯಕಗಳು. ಆತ್ಮದಲ್ಲಿ ಬುದ್ಧಿಯು ಯುಕ್ತವಾಗುವುದು ಯೋಗ. ಆತ್ಮದ ಲೌಕಿಕ ವ್ಯಾಪ್ತಿಯೀಗ ರಾಷ್ಟ್ರ. ರಾಷ್ಟ್ರಾತ್ಮಕತೆಯೇ ಭಾರತೀಯತೆ. ಮನಃಶುದ್ಧಿ, ರುಚಿಶುದ್ಧಿ, ಆಚಾರಶುದ್ಧಿಗಳು ಹಿಂದುಸಮನ್ವಯದ ಅತ್ಯಂತ ಸಮರ್ಥಸಾಧನಗಳು. ಔಪನಿಷದಿಕತೆಯೇ ಶುದ್ಧತೆಗೆ ಭಾರತದಲ್ಲಿ ನಿಕಷ. ಅಹಿಂಸಾರುಚಿಯು ಸರ್ವವ್ಯವಹಾರಗಳಲ್ಲೂ ಒಡಮೂಡಬೇಕು. ಸಾಮ, ದಾನ, ಭೇದ, ದಂಡಗಳು ಶಿಕ್ಷಣೋಪಾಯಗಳು.

ಬೌದ್ಧಧರ್ಮ ಹಿಡಿದು ಅಹಿಂಸಾಚಾರಕ್ಕಿಳಿದು ತಿಬೇಟಿಗರು ಶತ್ರುವಶರಾದರೆಂಬುದು ಬೋಕೆ ಹೇಳಬಹುದಾದ ಮಾತು. ಅವರು ಬೌದ್ಧಧರ್ಮವನ್ನು ಹಿಡಿದರೋ ಅದರ ಆಭಾಸವನ್ನು ಹಿಡಿದರೋ? ಎಂಬುದನ್ನು ಮೊದಲು ಕೇಳಬೇಕು. ಹಾಗೇ ಕ್ರೈಸ್ತಧರ್ಮವನ್ನು ಯುರೋಪಿಯನ್ನರು ಹಿಡಿದು ಅದರ ಶಾಂತಿ–ಪ್ರೇಮಾಚಾರಗಳ ಮೂಲಕ ಪರರಾಷ್ಟ್ರಗಳಲ್ಲಿ ಅಕ್ರಾಮಕರರಾಗಿ ಚಕ್ರಾಧಿಪತ್ಯಗಳನ್ನು ಕಟ್ಟಿದರೋ ಅಥವಾ ಅದರ ವಿರುದ್ಧ ಧರ್ಮವನ್ನು ಆಚಾರದಲ್ಲಿಕೊಂಡು ಆ ಪ್ರಕಾರ ಉಪನಿವೇಶಾದಿಗಳನ್ನು ಗಳಿಸಿದರೋ? ವಿಚಾರ–ಆಚಾರಗಳಲ್ಲಿ ಹೊಂದಿಕೆ ಇರದುದನ್ನು ಅರಿಯದ ಲೇಖಕರು ವಿಚಾರಗಳಲ್ಲಿ ಹೊಂದಿಕೆಯನ್ನು ತರಲು ಅಸಮರ್ಥರು. ಕೇಂಬ್ರಿಜ್ ವಿಶ್ವವಿದ್ಯಾಲಯ ಪ್ರಾಧ್ಯಾಪಕರಲ್ಲಿ ಇಂಥ ಪಂಡಿತ ಲೇಖಕರಿದ್ದುದು ಭಾರತದಲ್ಲಿ ಶಿಕ್ಷಿತರೆಷ್ಟು ಮಂದಿಗೆ ಗೊತ್ತು? ಇಂಗ್ಲೆಂಡಿಗೆ ಹೋಗಿ ಅಥವಾ ಅಮೇರಿಕಕ್ಕೆ ಹೋಗಿ ನಮ್ಮವರು ಕಲಿತುಕೊಂಡು ಬರುತ್ತಿದ್ದದ್ದು ಈ ಬಗೆಯ ವಿಸಂಗತ ವಿಚಾರಧಾರೆಯನ್ನು ಅವರಲ್ಲಿ ಅನಂತ ನಾಗರಿಕತೆ–ಸಂಸ್ಕೃತಿಗಳ ವಕ್ತಾರರು, ವಿಧಾತರು, ಆಚಾರದ ಮೇಲ್ಪಂಕ್ತಿ ಹಾಕಿಕೊಡುವವರು! ೨೩ ವರ್ಷಗಳ ಸ್ವಾತಂತ್ರ್ಯವೂ ಭಾರತವನ್ನು ರಾಷ್ಟ್ರೀಯ ಏಕ ಸಾಂಸ್ಕೃತಿಕ ಘಟಕವನ್ನಾಗಿ ರೂಪಿಸಲಾರದಾದದ್ದು ಇಂಥ ವಿಲಾಯತೀಕೃತರ ಆಳ್ವಿಕೆಯಿಂದಲೇ. ಸಂಘಟನೆಯು ತತ್ವಗಳಲ್ಲಿ ಮೊದಲು ಆಗಬೇಕು, ಅದು ವ್ಯಕ್ತಿಗಳ ಸಂಘಟನೆಗೆ ಆಧಾರ. Concordantia oppositorum ವಿರೋಧ ಸಮನ್ವಯವೇ ರಚನಾತ್ಮಕ ಕಾರ್ಯಗಳ ಬೀಜ. ವಿಕ್ಷಿಪ್ತತೆಗೆ ಸಮನ್ವಯವಿಲ್ಲ.

ಶೌಚತತ್ವದ ಪರಿಷ್ಕೃತ ರೂಪವನ್ನು ಒಪ್ಪದವರು ಭಾರತೀಯತಾ ಸೂತ್ರದಿಂದ ಸಂಘಟಿತರಾಗಲಾರರು. ರುಚಿ–ಅಭಿರುಚಿಗಳಿಗೆ Sentiment ರಸವು ಮೂಲ. ರಸ ರೂಪಣಕ್ಕೆ ಪರಿಷ್ಕೃತ ಜೀವನ ಮೌಲ್ಯಗಳ ತಾರತಮ್ಯ ವಿವೇಕ ಆಧಾರ. ಸಸ್ಯಾಹಾರವು ಒಂದು ರುಚಿಸೂತ್ರ. ಅದಕ್ಕೆ ಪ್ರಾಣಿ ದಯಾಬುದ್ಧಿಯು ಬುನಾದಿ. ಎಂಜಲ ಮುಸುರೆಗಳದು ಆಸ್ಪತ್ರೆಯ ಶುಚಿಸೂತ್ರ; ಶರೀರ–ವಾಗ್–ವಸ್ತ್ರಗಳ ಶುಚಿಯೂ ಹಾಗೇ ಸರ್ವಸಾಧಾರಣ ರುಚಿಯಾಗಿ ಮಾರ್ಪಡಬೇಕು. ವಿಚಾರ ಶುಚಿ ಅಥವಾ ಮನಃ ಶುಚಿ ಇಲ್ಲವೆ ಅಂತಃಶೌಚ ಈ ಎಲ್ಲವುಗಳಿಗೂ ಮೂಲ. ಇದೇ ನಿಜವಾದ ವೈಜ್ಞಾನಿಕತೆ.



# ೨೨

# ದುಷ್ಟದಮನ

ಶ್ರೀರಾಮನ ಪಿತೃವಾಕ್ಯ ಪರಿಪಾಲನವೊಂದು ದೌರ್ಬಲ್ಯವೆಂದು ಕೆಲವರು ವಾದಿಸಬಹುದು. ಆದರೆ ಶ್ರೀರಾಮನ ದೇಹಬಲ, ಮನೋಬಲ, ಆತ್ಮಬಲಗಳ ಸರಿಯಾದ ತಿಳಿವಳಿಕೆ ನಮಗಾಗಲೆಂದೇ ಅವನು ದೃಢನಿರ್ಧಾರದಿಂದ ರಾಜ್ಯತ್ಯಾಗ ಮಾಡಿ ವನವಾಸಕ್ಕೆ ಹೊರಟದ್ದು. ಈಶ ಕೋದಂಡವನ್ನು ಮುರಿದಾಗ ಅವನ ದೇಹಬಲ ಜಗತ್ ಪ್ರಸಿದ್ಧವಾದುದನ್ನು ಅವನು ವನವಾಸಕ್ಕೆ ಹೊರಟಾಗ ಮರೆಯುವುದೆಂತು? ಜಗದೇಕವೀರತೆಯ ಆತ್ಮವಿಶ್ವಾಸ ಅವನಿಗಾಗಲೇ ಉಂಟಾಗಿ ಹೋಗಿತ್ತು. ಅವನದನ್ನು ನಂಬಿ ರಾಜ್ಯವು ನಿಷ್ಕಂಟಕವಾಗಲು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಲು ವನವಾಸವೊಂದು ಸದವಕಾಶವೆಂದು ತಿಳಿದುದಲ್ಲದೆ, ತಮ್ಮನಾದ ಭರತನ ಯೋಗ್ಯತೆಯನ್ನೂ ಶಕ್ತಿಯನ್ನೂ ಜನಪ್ರಿಯತೆಯನ್ನೂ ಅಳೆದು ಕೈಮೀರಲಾರನೆಂಬುದನ್ನೂ ಅರಿತಿದ್ದನೆನ್ನಬಹುದು. ಪಟ್ಟಕ್ಕಿಂತ ಪ್ರಭುತ್ವ ಮೇಲು ಎಂಬ ಕೃಷ್ಣಸಿದ್ಧಾಂತ ಮಹಾಭಾರತ ಯುಗಕ್ಕಿಂತ ಮೊದಲು ರಾಮಸಿದ್ಧಾಂತವಾಗಿತ್ತೆನ್ನಬೇಕು. ಆದರೆ ಕೃಷ್ಣ ಪಟ್ಟಾಧಿಕಾರವುಳ್ಳವನಾಗಿರಲಿಲ್ಲ, ರಾಮ ಅದನ್ನುಳ್ಳವನಾಗಿದ್ದನು ಮತ್ತು ಕೊನೆಗೆ ಪಟ್ಟವನ್ನು ಸ್ವೀಕರಿಸಿದನು. ಪಿತೃದೌರ್ಬಲ್ಯವನ್ನು ಮನ್ನಿಸಿ ಅನುಸರಿಸುವುದು ಪುತ್ರದೌರ್ಬಲ್ಯವಾದೀತು; ಆದರೆ ದಶರಥ ಕೈಕೇಯಿಗೆ ದೌರ್ಬಲ್ಯದಿಂದ ೨ ವರಗಳನ್ನು ಕೊಟ್ಟಿರಲಿಲ್ಲ – ಅವಳ ಆಪತ್ಕಾಲಿಕ ನೆರವಿಗಾಗಿ ಕೊಟ್ಟಿದ್ದ. ಆದರೆ ಅವಳು ಅದರ ದುರುಪಯೋಗ ಮಾಡಿಕೊಂಡಳು. ಆ ದುರುಪಯೋಗ ಜನ್ಮವಾದ ಸಂದರ್ಭವನ್ನು ತನ್ನ ದಿಗ್ವಿಜಯಕ್ಕಾಗಿ ಸದುಪಯೋಗ ಮಾಡಿಕೊಂಡದ್ದು ಶ್ರೀರಾಮನ ಜಾಣತನ.

ರಾಮ ಮಾಡಿದ ವಾಲಿವಧಕ್ಕೂ ಭೀಮ ಮಾಡಿದ ದುರ್ಯೋಧನ ವಧಕ್ಕೂ ಸಾಮ್ಯವಿದೆ. ಮೃಗಸಮಾನರಾದವರಿಗೆ ಮೃಗಬೇಟೆಯ ನ್ಯಾಯವಲ್ಲದೆ ಮಾನವ ಶ್ರೇಷ್ಠರ ಧರ್ಮಯುದ್ಧದ ನ್ಯಾಯ ಅನ್ವಯಿಸದು. ಇಂದ್ರಜಿತುವಿನಂಥ ಮಾಯಾ (ಮೋಸ) ಯುದ್ಧ ಪದ್ಧತಿಯವನಿಗೂ ಹಾಗೇ. ಈ ನ್ಯಾಯ ರಾಮನದೂ ಹೌದು ಕೃಷ್ಣನದೂ ಹೌದು. ಕೌರವ–ರಾವಣ–ದುಃಶಾಸನಾದಿಗಳು ಆಸುರ ಸಂಪತ್ತಿನವರು. ಶೂರ್ಪನಖೆ–ತಾಟಕೆಯರು ಅವರ ಬಳಗದವರು. ಆದರೆ ಶಂಬೂಕ? ಶಂಬೂಕನ ತಪಸ್ಸು ಬ್ರಾಹ್ಮಣ ಹಿಂಸಾಕಾರಿಯಾದುದರಿಂದ

ಅದು ದಂಡನಾರ್ಹವಲ್ಲದೆ ಅಹಿಂಸಾತ್ಮಕವಾಗಿದ್ದರೆ ರಾಮ ಅವನನ್ನು ದಂಡಿಸುತ್ತಿರಲಿಲ್ಲ. ಅವನ ವಧೆಯ ಕಾರಣ ಅವನ ತಪಸ್ಸಿನ ಪರಿಣಾಮವನ್ನು ಆಧರಿಸಿತ್ತು. ಸೀತಾಪರಿತ್ಯಾಗವು ರಾಮನ ಪ್ರಜಾ ವ್ಯಾಮೋಹದ ಪರಿಣಾಮವೆಂದು ಹೇಳಲು ಆಸ್ಪದವಿದೆ. ಸೀತೆಯ ಪತ್ನೀತ್ವ ಅವನಿಂದ ವ್ಯಕ್ತವಾದದ್ದು– ಪ್ರಜಾತ್ವವಲ್ಲ. ಆದರೆ ಅವಳು ನಿರಪರಾಧಿ ಎಂಬುದು ಅವನಿಗೆ ಗೊತ್ತಿದ್ದರೂ ಅವಳನ್ನು ಬಿಟ್ಟಿದ್ದು ನ್ಯಾಯನಿಷ್ಠುರತೆಯ ಲಕ್ಷಣವಲ್ಲ. ಈ ಒಂದೇ ಒಂದು ದೋಷದಿಂದ ರಾಮನು ಮರ್ಯಾದಾ ಪುರುಷೋತ್ತಮ, ಕೃಷ್ಣನಂತೆ ಅಸೀಮ ಪುರುಷೋತ್ತಮನಲ್ಲ. ರಾಮನು ನೇರವಾಗಿ ರಾಜ್ಯಭಾರ ಮಾಡಿ ಪ್ರಜಾಪ್ರಿಯನಾದನು, ಕೃಷ್ಣನು ನೇರವಾಗಿ ರಾಜ್ಯಭಾರ ಮಾಡದೆ ಪ್ರಜಾಪ್ರಿಯನಾದನು.... ಮಹಾಭಾರತದ ಯುದ್ಧ ಮುಗಿದ ಬಳಿಕ. ಆದರೆ ರಾಮ ಕುಟುಂಬದ ಸಹಕೃತಕಾರ್ಯದ ಆದರ್ಶ ಕೃಷ್ಣ ಕುಟುಂಬಕ್ಕಿಲ್ಲ. ರಾಮನ ಮತ್ತು ಅವನ ತಮ್ಮಂದಿರ ಸಹಜೀವನದ ಚಿತ್ರಕ್ಕಿರುವ ಸೌಂದರ್ಯವು ಕೃಷ್ಣನ ಮತ್ತು ಅವನ ಅಣ್ಣನ ನೆಂಟಿಗಿಲ್ಲ. ಸೌಭ್ರಾತ್ರವು ಸಾಮಾಜಿಕತೆಯ ಮೂಲಾಧಾರ. ರಾಷ್ಟ್ರೀಯತೆಯ ಅಡಿಗಲ್ಲು, ಜಾಗತಿಕತೆಯ ನೆಲೆಗಟ್ಟು, ಪ್ರಾಣಿ ದಯಾಧರ್ಮದ ಬೀಜ. ಹಿರಿಯನ ತ್ಯಾಗಕ್ಕೆ, ಕಿರಿಯರ ವಿಧೇಯತೆಯು ಪ್ರತಿಕರ್ತವ್ಯವಾದುದನ್ನು ರಾಮಚತುಷ್ಟಯ ತೋರಿಸಿಕೊಟ್ಟಿದೆ. ಹಿರಿಯತನ ವಯೋಮಾನದ್ದೊಂದೇ ಅಲ್ಲ, ಶಕ್ತಿಯದೂ ಒಂದೇ ಅಲ್ಲ, ನಿಃಸ್ವಾರ್ಥತೆಯೂ ಅವುಗಳೊಟ್ಟಿಗೆ ಸೇರಿದ್ದರಿಂದ ರಾಮನ ಹಿರಿಯತನ ಸರ್ವಸಮರ್ಥನೀಯವಾಯಿತು.

ಸೀತೆಯ ಹಿರಿಯತನವನ್ನು ಹೆಚ್ಚಿಸಲು ರಾಮಾಯಣದ ಉತ್ತರಕಾಂಡವನ್ನು ಬರೆದ ಕವಿ ರಾಮನ ವ್ಯಕ್ತಿತ್ವವನ್ನು ಚಿಕ್ಕದನ್ನಾಗಿ ಮಾಡಿದನು. ಇಲ್ಲವಾದರೆ ರಾಮನು ಮರ್ಯಾದಿತ ಪುರುಷೋತ್ತಮನೆನ್ನಿಸುತ್ತಿರಲಿಲ್ಲ. ಕೃಷ್ಣನು ಲೋಕಮರ್ಯಾದೆಯನ್ನು ಬಿಟ್ಟಿರಲಿಲ್ಲ. ಆದುದರಿಂದ ಇಬ್ಬರೂ ಸರಿಸಮಾನರೆನ್ನಿಸುತ್ತಿದ್ದರು. ರಾಮನ ಶಕ್ತಿ ಕೃಷ್ಣನಿಗಿದ್ದರೂ ರಾಮನ ಶಿಸ್ತು ಮತ್ತು ರಾಜಗಾಂಭೀರ್ಯಗಳು ಕೃಷ್ಣನಿಗಿರಲಿಲ್ಲ. ಕೃಷ್ಣನು ರಾಮನಷ್ಟೇ ತ್ಯಾಗಿಯಾದರೂ ಅವನ ತ್ಯಾಗವು ಶ್ರೀ ರಾಮಕೃಷ್ಣ ಪರಮಹಂಸರ ಕಾಂಚನತ್ಯಾಗದಂತಾಯ್ತು, ಬುದ್ಧನ ರಾಜ್ಯ ತ್ಯಾಗದಂತೆ ಎದ್ದು ಕಾಣಿಸಲಿಲ್ಲ. ರಾಮನ ರಾಜ್ಯತ್ಯಾಗವು ಬುದ್ಧನ ರಾಜ್ಯತ್ಯಾಗದಷ್ಟು ಉದಾತ್ತತೆಯನ್ನು ಪ್ರದರ್ಶಿಸದಿದ್ದರೂ ಕೃಷ್ಣನ ರಾಜ್ಯಾಕಾಂಕ್ಷಾರಾಹಿತ್ಯದಷ್ಟು ಅಪ್ರದರ್ಶನಯುಕ್ತವಾಗಿರಲಿಲ್ಲ. ಬುದ್ಧನು ಸಂನ್ಯಾಸಿಯಾದುದರಿಂದ ರಾಮನಂತೆ ಲೋಕಾಭಿರಾಮನೆನ್ನಿಸಲಿಲ್ಲ. ಶಾಂಕರ ಪ್ರತಿವಾದದಿಂದ ಬುದ್ಧಪ್ರಭೆ ಭಾರತದಲ್ಲಿ ಅಳಿಯಿತು. ರಾಮನಪ್ರಭೆಯು ಗಾಂಧಿಯವರ ತಲೆಮಾರಿನಲ್ಲಿಯೂ ಅಳಿಯದೆ ಉಳಿಯುವಂತಾಯಿತು. ಅವನ ಸೀತಾ ತ್ಯಾಗವೂ ಸ್ವಾರ್ಥತ್ಯಾಗದ ಕಕ್ಷೆಗೇ ಸೇರಿಸಲ್ಪಟ್ಟಿತು. ಆದುದರಿಂದ ರಾಮಾಯಣವು ಪ್ರಸಿದ್ಧವಾದಂತೆ ಕೃಷ್ಣಾಯಣವು ಪ್ರಸಿದ್ಧವಾಗಲಿಲ್ಲ. ಕೃಷ್ಣಾಯಣವು ಗೀತಾಯನ; ಅದಕ್ಕೆ ಶಂಕರಾಯನವು ವಾಖ್ಯೆಯಾಯ್ತು – ವಿದ್ಯಾರಣ್ಯ ಪಾತ್ರದಲ್ಲಿ ಜೀವನ್ಮುಕ್ತರ ಲೋಕಸಂಗ್ರಹಕಾರ್ಯದ ಕೃಷ್ಣಾದರ್ಶವು ಪ್ರಕಟವಾಗುವಂತಾಯ್ತು. ಲೋಕವು ಕೌಟುಂಬಿಕತೆಯನ್ನು ಹೆಚ್ಚಾಗಿ ನೆಚ್ಚಿರುವುದರಿಂದ ರಾಮನ ಲೌಕಿಕತೆಯು ಜನಪ್ರಿಯವಾಯ್ತು; ಕೃಷ್ಣನ ಲೌಕಿಕತೆಯು ಅಪೂರ್ವ, ವಿರಳ ಎನ್ನಿಸಿತು– ಅದು ಕ್ಷಾತ್ರ, ಇದು ಬ್ರಾಹ್ಮ.

ರಾಮಜನನವು ಅಗ್ನಿ ಪ್ರಸಾದದಿಂದಾದುದೆಂಬುದು ಸ್ಮರಣೀಯ. ರಾಮಾಗ್ನಿಯು ನ್ಯಾಯಾಗ್ನಿ, ಧರ್ಮಾಗ್ನಿ, ಸಾಮಾಜಿಕತೆಯ ಅಗ್ನಿ, ಪ್ರಜಾಸರ್ವೋದಯದ ಅಗ್ನಿ. ಪ್ರಜಾಗ್ನಿಯಲ್ಲಿ ರಾಮನು ತನ್ನನ್ನು ತಾನೇ ಹೋಲಿಸಿಕೊಂಡದ್ದನ್ನು ಉತ್ತರಕಾಂಡ ಹೊರಗೆಡಹುತ್ತದೆ. ಅದನ್ನು ಬಿಟ್ಟರೂ ಅವನ ಪ್ರಜಾಸೇವೆ ಕಡಿಮೆಯದೆನ್ನಿಸದು. ಕೃಷ್ಣನು ತಾನು ಮಾಡಿದ್ದಕ್ಕಿಂತ ಹೆಚ್ಚಿನ ಪ್ರಜಾಸೇವೆಯನ್ನು ಪರಹಸ್ತಗಳಿಂದ ಮಾಡಿಸಿದನು. ಆದುದರಿಂದ ಕೃಷ್ಣನು ದೇವರಾದಷ್ಟು ರಾಜನಾಗಲಿಲ್ಲ!

ಕೃಷ್ಣನ ಸಂಘಟನಶಕ್ತಿಯು ರಾಮನ ಸಂಘಟನ ಶಕ್ತಿಯ ಮುಂದೆ ಕಿರಿದಾಗಿ ಕಾಣುತ್ತದೆ. ಕೃಷ್ಣಪಕ್ಷೀಯರಾದ ಪಾಂಡವರ ಸೈನ್ಯವು ಏಳು ಅಕ್ಷೌಹಿಣಿಯಾದರೆ, ಕೌರವ ಸೈನ್ಯ ಹನ್ನೊಂದು ಅಕ್ಷೌಹಿಣಿ. ಜೊತೆಗೆ, ಕೃಷ್ಣನ ಯಾದವ ಕುಲವು ಯಾದವೀಯ ಕಲಹಕ್ಕೆ ಹೆಸರಾಗಿ ನಾಶ ಹೊಂದಿತು. ರಾಮನ ಅನಂತರ ಅವನ ವಂಶಜರು ಅವನಷ್ಟು ಕೀರ್ತಿಯನ್ನು ಪಡೆಯದಿದ್ದರೂ ಅವನ ಸತ್‌ಪರಂಪರೆಯನ್ನು ಬಹುಕಾಲ ಕಾಯ್ದುಕೊಂಡು ಹೋದರು. "ರಘುವಂಶ"ದ ಪ್ರಕಾರ ೨೮ನೆಯ ಅರಸನಾದ ಅಗ್ನಿವರ್ಣನ ವರೆಗೆ ರಾಮಪರಂಪರೆ ಚೆನ್ನಾಗಿ ಸಾಗಿತು. ಅಗ್ನಿವರ್ಣ ಅದನ್ನು ಮುರಿದ ಕೊನೆಯ ಅರಸನಾದನು. ರಾಮ ಕಟ್ಟಿದ ವಾನರಸೇನೆಯು ಅವನ ಸಂಘಟನ ಶಕ್ತಿಯನ್ನು ಬನವಾಸಿಯ ಮಯೂರ ಶರ್ಮನು ಕ್ರಿ.ಶ.೨೭೯ರಲ್ಲಿ ಕಿರಾತಸೈನ್ಯವನ್ನು ಕಟ್ಟಿ ಪಲ್ಲವರನ್ನು ಸೋಲಿಸಿದ ಸಂಘಟನ ಶಕ್ತಿಗೆ ಹೋಲಿಸಬಹುದು. ಕೃಷ್ಣನು ದೈವ ಪ್ರಾಧಾನ್ಯವನ್ನು ಹೆಚ್ಚು ಪ್ರಚುರಪಡಿಸಿದರೆ ರಾಮನು ಪೌರುಷಪ್ರಾಧಾನ್ಯವನ್ನು ಹೆಚ್ಚು ಬೆಳಕಿಗೆ ತಂದನು. ದೈವಪ್ರಾಧಾನ್ಯದ ಅತಿರೇಕವು ಅದೃಷ್ಟದೊಡನೆ ಜೂಜಾಡುವ ಮನಃಸ್ಥಿತಿಯು ದುರ್ಬಲಾತ್ಮರಲ್ಲಿ ಉಂಟಾಗುವಂತೆ ಮಾಡಿತು. ಶುದ್ಧ ಪೌರುಷದ ಅತಿರೇಕಕ್ಕೆ ಭಾರತದಲ್ಲಿ ಉದಾಹರಣೆಗಳು ಕಡಿಮೆ. ರಾಮನದಾದರೂ ದೈವಭಕ್ತಿ ರಹಿತವಾದ ಪೌರುಷವಲ್ಲ. ಇದಕ್ಕೆ ಕಾರಣವೇನೆಂದರೆ, ದೈವಕ್ಕೆ ಹೊಣೆಯ ಐದನೆಯ ಒಂದರಷ್ಟು ಭಾಗವನ್ನೂ ವಹಿಸಿಕೊಡದಿದ್ದರೆ ಮನುಷ್ಯನು ದುರಹಂಕಾರಿಯಾಗಿ ಪರಿಣಮಿಸಿ. ಪರಹಾನಿ–ಸ್ವಹಾನಿಗಳಿಗೆ ಅಂತ್ಯದಲ್ಲಿ ಕಾರಣವಾಗಿಯೇ ತೀರುತ್ತಾನೆ ಎಂಬ ಅಭೇದ್ಯ ಅನುಭವ ಭಾರತದ ಬುದ್ಧಿವಂತರಿಗೆ ಸಾವಿರಾರು ವರ್ಷಗಳಿಂದ ಉಂಟಾದದ್ದು. ಆದರೆ ಅತಿ ದೈವಾಧೀನತೆಯು ನಿಷ್ಪೌರುಷಕ್ಕೆ ಅನೇಕ ನಾಯಕರನ್ನಿಳಿಸಿದ ಹಾನಿ ಕೃಷ್ಣೋಪದೇಶದಿಂದ ಎಲ್ಲೆಡೆಗಳಲ್ಲೂ ನೇರವಾಗಿ ಆಗದಿದ್ದರೂ "ನಿಮಿತ್ತ ಮಾತ್ರಂ ಭವ ಸವ್ಯಸಾಚಿನ್" ಎಂಬ ಅವನ ಉಕ್ತಿಯಿಂದ ಪರ್ಯಾಯವಾಗಿ ಆಗಿದೆ, ಆಗುತ್ತ ಬಂದಿದೆ– ಈ ವರೆಗೂ ನಮ್ಮ ದೇಶದಲ್ಲಿ. ಈ ದೋಷವನ್ನು ಬಿಡಬೇಕಾದದ್ದು ಸಂಘಟನಸಿದ್ಧಾಂತಕ್ಕೆ ಈಗ ಅತ್ಯವಶ್ಯಕ. ಇಲ್ಲವಾದರೆ "ಕ್ಲೈಬ್ಯಂ ಮಾಸ್ಮ ಗಮಃ ಪಾರ್ಥ", "ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂ ತಪ" ಮತ್ತು "ತತೋ ಯುದ್ಧಾಯ ಯುಜ್ಯಸ್ವ" ಎಂಬ ಉಪದೇಶಗಳ ಅರ್ಥಶಕ್ತಿ ಕಡಿಮೆ ಅರ್ಥಕ್ರಿಯಾಕಾರಿಯಾಗುತ್ತದೆ; "ಮಾಮನು ಸ್ಮರ ಯುಧ್ಯಚ" ಎಂಬುದಕ್ಕೆ "ಆಪತ್ಕಾಲೆ" ಎಂಬುದನ್ನು ಸೇರಿಸಿದರೆ ಸರಿಹೋಗುತ್ತದೆ. ಸದಾಕಾಲದ ದೈವಭಜನೆ ಹೆಚ್ಚಿನ ಸಾಮಾಜಿಕ ಹೊಣೆ ಹೊತ್ತವರಿಗೆ

ಉದಾಸೀನತಾ ಪ್ರೇರಕವಾಗುತ್ತದೆ. ಅದು ಸಿದ್ಧಾಂತವಾಗಿರಬಹುದಲ್ಲದೆ ಜಪರೂಪಕ್ಕೆ ತಿರುಗಬಾರದು.

ಕೃಷ್ಣನ ಅಲೌಕಿಕಾಂಶ ರಾಮನಲ್ಲಿಲ್ಲ. ಅವನ ಜೀವನ್ಮುಕ್ತತೆ ಇವನ ಲೋಕೋತ್ತರ ಚೇತಸ್ಸಿಗಿಲ್ಲ. ಆದರೆ ಆ ನ್ಯೂನತೆಯು "ಓಂಕಾರದ ಶಂಖನಾದಕ್ಕಿಂತ ಕಿಂಚಿದೂನ" ಎಂಬಷ್ಟು ಮಾತ್ರ; ಆ ನ್ಯೂನತೆಯು ಆಪತ್‌ಕಾಲದಲ್ಲಿ ಇಂದ್ರಾದಿ ದೇವತೆಗಳಿಂದ ತುಂಬಿಸಲ್ಪಡುತ್ತದೆ. ಆದುದರಿಂದ ರಾಮನ ಲೌಕಿಕತೆ ಅರ್ಥಪೂರ್ಣವೆನ್ನಿಸಿದಷ್ಟು ಕೃಷ್ಣನ ಲೌಕಿಕತೆ ಹಾಗೆನ್ನಿಸದು. "ಬಲೀಯಸೀ ಕೇವಲಮೀಶ್ವರೇಚ್ಛಾ" ಎಂಬ ರೀತಿಯದು ಕೃಷ್ಣನ ಲೌಕಿಕತೆ; ಅದು ಲೀಲಾನ್ಯಾಯಭರಿತವಾದುದಲ್ಲದೆ, ಕಾರ್ಯಕಾರಣ ಸಂಬಂಧದಲ್ಲಿ ಪೂರ್ಣವಾಗುವಂಥದಲ್ಲ. ರಾಮಬಾಣವು ಗಾದೆಯ ಮಾತಾದಷ್ಟು ಕೃಷ್ಣನ ಸುದರ್ಶನವು ಗಾದೆಯ ಮಾತಾಗಿ ರೂಢಿಗೆ ಬರಲಿಲ್ಲ. ರಾಮನು ಆದರ್ಶವೀರನು. ಸಂಘಟಕನಾಗಲು ನಾಯಕನು ಅಂಥ ವೀರನಾಗಿರುವುದಗತ್ಯ. ದಾನವೀರ, ದಯಾವೀರ, ಧರ್ಮವೀರ, ಯುದ್ಧವೀರರಲ್ಲಿ ಕೊನೆಯವನು ಹೆಚ್ಚು ಲೋಕಾಭಿರಾಮನು. ಏಕೆಂದರೆ ಅವನ ಪರಾಕ್ರಮವು ದೈಹಿಕವಾಗಿ ಪ್ರಕಟವಾಗುತ್ತದೆ; ಅದರಿಂದ ಅದು ಕಣ್ಣಿಗೆ ಎದ್ದು ಕಾಣುತ್ತದೆ. ಅದಕ್ಕೆ Mass appeal ಸರ್ವಾದರಣೀಯತೆ ಅಧಿಕ. ವೀರನ ಸಾಹಸವೂ ಔದಾರ್ಯವೂ ಅವನ ಅನುಯಾಯಿಗಳ ಸಂಖ್ಯೆಯನ್ನು ಹೆಚ್ಚಿಸುತ್ತದೆ; ಅವನ ವಚನನಿಷ್ಠತೆಯೂ ಆರ್ಜವವೂ ಜನಪ್ರಿಯತೆಯನ್ನು ಗಳಿಸಿಕೊಡುತ್ತದೆ. ಅವುಗಳಿಂದ ಆತನ ಸ್ಥಾನವು ಜನಹೃದಯದಲ್ಲಿ ಸ್ಥಿರವಾಗಿ ನೆಲೆ ನಿಲ್ಲುತ್ತದೆ. ವೈಯಕ್ತಿಕ ಸ್ವಾರ್ಥಶೀಲರಿಗೆಂದೂ ಅಂಥ ಸ್ಥಿರತೆ ದೊರಕದು. ಆದುದರಿಂದ ನಿಷ್ಕಾಮಕರ್ಮವು ನಾಯಕತ್ವದ ಅತ್ಯಂತ ದೃಢವಾದ ಆಧಾರ. ಸೀತಾಬಂಧ ಮುಕ್ತಿಯ ಹೆಸರಿನಲ್ಲಿ ಲೋಕಕಂಟಕರೆಲ್ಲರನ್ನೂ ಸಂಹರಿಸಿದ್ದೇ ರಾಮನ ಸ್ಥಿರವಾದ ಜನಪ್ರಿಯತೆಗೆ ಕಾರಣ. ಲೋಕಕಂಟಕರೇ ಭ್ರಷ್ಟಾಚಾರಪರಾಯಣರು. ಅವರಿರುವವರೆಗೆ ಯಾರೂ ಯಾವ ಒಳ್ಳೆಯ ಸುಧಾರಣೆಯನ್ನೂ ಸರ್ವೋದಯಕ್ಕಾಗಿ ಮಾಡಲಾರರು. ಪ್ರತಿಬಂಧಕಾಭಾವ ವಿಶಿಷ್ಟವಾದ ಕಾರಣ ಸಾಮಗ್ರಿಯೊಂದೇ ಕಾರ್ಯಜನಕ. ಲೋಕಕಂಟಕರ ಕೃತ್ಯಗಳು ಪ್ರತಿಬಂಧಕಗಳು. ಅವುಗಳ Destruction ನಿರ್ಮೂಲನ ಮೊದಲಾಗಬೇಕಾದದ್ದು; ಅನಂತರ ಸರ್ವೋದಯದ constructive work ರಚನಾತ್ಮಕ ಕಾರ್ಯ ಆರಂಭವಾದರೆ ಅದು ನಿರಾತಂಕವಾಗಿ ಸಾಗಬಲ್ಲದು. First organise to destroy the obstructionists and after destroying them or making them powerless, start organising for constructive work– ಮೊದಲು ಬ್ರಿಟೀಷರನ್ನೋಡಿಸಲು ಜನಸಂಘಟನೆ ಮಾಡಿ, ಅವರ ಪ್ರಭುತ್ವವನ್ನು ಓಡಿಸಿದ ಅನಂತರ ಗಾಂಧಿಯವರು ದೇಶದ ನಾಯಕರಿಗೆ ಸರ್ವೋದಯ ಕಾರ್ಯ ನಿರ್ವಿಘ್ನವಾಗಿ ಸಾಗಲು ಅವಕಾಶ ಮಾಡಿಕೊಟ್ಟರು. ಆದರೆ ಸ್ವದೋಷಗಳ ದೆಸೆಯಿಂದ ನಮ್ಮ ಆಧುನಿಕ ನಾಯಕರು ತಮ್ಮ ಗರ್ವೋದಯಕ್ಕೆ ಕಾರಣರಾಗಿ ಸರ್ವೋದಯದ ಕಾರ್ಯವನ್ನು ಸಮರ್ಪಕವಾಗಿ ಮಾಡಲಿಲ್ಲ. ಅದರ ಫಲವಾಗಿ ಅನುಯಾಯಿಗಳ ಸಮೇತ ನಾಯಕರು ಒಡೆದುಹೋಗಿ, ಅನೇಕ ಪಕ್ಷೋಪಕ್ಷಗಳಾಗಿ,

ದೇಶವು ಅನಾಯಕತೆಗಿಳಿಯಿತು (೧೯೭೦). ಕೇವಲ ವಚನಶೂರತೆಗಿಳಿದಾಗ ನಾಯಕರಲ್ಲಿ ಜನಾದರ ಇಳಿಯದೆ ಇರದು. ಜನಾದರ ಕಳೆದುಕೊಂಡವರ ಯಾವ ಸದ್‌ಬೋಧಾಮೃತವೂ ಜನಸಹಕಾರವನ್ನು ಕೂಡಿಸದು. ಅಲ್ಪಸಂಖ್ಯಾತರಿಗೆ ಉಪದಾನವಿತ್ತು ಅವರ ಮೂಲಕ ಜನರನ್ನು ಬೆದರಿಸಿ ಅಥವಾ ಅವರಿಗೆ ಮೋಸಮಾಡಿ ಯಾರೂ ಚಿರಕಾಲ ತಮ್ಮ ನಾಯಕತ್ವವನ್ನು ಸುರಕ್ಷಿತವನ್ನಾಗಿ ಮಾಡಿಕೊಳ್ಳಲಾರರು. "ಬೆಂದ ಮನೆಗೆ ಹಿರಿದದ್ದೇ ಲಾಭ" ಎಂಬುದನ್ನು "ಇನ್ನೊಬ್ಬರ ಬೆಂದ ಮನೆಯಿಂದ ಎಷ್ಟು ಹೆಚ್ಚನ್ನು ತನಗಾಗಿ ಹಿರಿದುಕೊಂಡರೂ ಅಷ್ಟು ಹೆಚ್ಚು ತನಗೆ ಲಾಭ" ಎಂಬ ಅರ್ಥಕ್ಕೆ ತಿರುಗಿಸಿದ ತತ್ವವನ್ನು ಹಿಡಿದ ನಾಯಕನು ಜನರಿಂದ ಗುರುತಿಸಲ್ಪಟ್ಟೇ ತೀರುವನು. ಭಾರತದಲ್ಲಿ ಅಂಥವನು ೧೦–೧೫ ವರ್ಷಗಳಿಗಿಂತ ಹೆಚ್ಚು ಕಾಲ ಜನನಾಯಕನಾಗಿ ಉಳಿಯಲಾರನು. ಶಿಕ್ಷಿತರು ಜಾಗ್ರತರಾದರೆ ಐದೇ ವರ್ಷಗಳಲ್ಲಿ ಅವನು ಸ್ಥಾನಭ್ರಷ್ಟನಾಗುವನು.

ದೇವತ್ವ, ರಕ್ಷಕತ್ವ, ನಾಯಕತ್ವ, ಗುರುತ್ವ, ಪಿತೃತ್ವಗಳು ಭಾರತದಲ್ಲಿ ಸಾರತಃ ಒಂದೇ ತಾತ್ಪರ್ಯವುಳ್ಳಂಥವುಗಳು. ರಕ್ಷಣ, ಬೋಧನ, ವಿಧಾನಗಳು (Protection, training and commanding obedience) ನೇತಾರನ ನೇತೃತ್ವದ ಮೂರು ದೊಡ್ಡ ಗುರುತುಗಳು. ಗ್ರಾಮರಕ್ಷಕ, ತಾಲೂಕು ರಕ್ಷಕ, ಜಿಲ್ಲಾ ರಕ್ಷಕ, ರಾಜ್ಯರಕ್ಷಕ, ದೇಶರಕ್ಷಕ ಎಂಬ ನಾಯಕರಲ್ಲಿ ಸಮನ್ವಯವಿರಬೇಕು, ಉತ್ತರೋತ್ತರ ಅಧಿಕಾರಾಧಿಕ್ಯವಿರಬೇಕು. ಪ್ರಾಮಾಣಿಕರೂ ದಕ್ಷರೂ ಆದ ದೇಶರಕ್ಷಕರಿಲ್ಲದಾದಾಗ ಅನಾಯಕತ್ವ ಆರಂಭವಾಗುವುದು, ಗುಂಪುಗುಳಿತನ ಹೆಚ್ಚುವುದು, ಅನ್ಯಾಯ ದುರ್ದಮ್ಯವಾಗುವುದು, ಜನಾಕ್ರೋಶ ಉರಿದೇಳುವುದು. ನಾಯಕತ್ವದ ಪಂಚಸ್ಥಾನಗಳಲ್ಲಿರುವವರ ಯೋಗ್ಯತೆ ಉತ್ತರೋತ್ತರ ಅಧಿಕವಾಗಿರುವುದು ಅಗತ್ಯವೆಂಬುದು ಸಂಘಟನೆಯ ಒಂದು ಮುಖ್ಯ ಅಂಶ. ಹೇಗಾದರೂ ಮಾಡಿ ಪಡೆದ ಸ್ಥಾನಬಲದಿಂದ ಯೋಗ್ಯತೆ ಇದೆಯೆಂದು ಗರ್ವಿಸಲು ಕಲಿತ ನಾಯಕರ ಕತೆ "ಸ್ಥಾನಭ್ರಷ್ಟಾ ನ ಶೋಭಂತೇ ದಂತಾಃ ಕೇಶಾ ನಖಾ ನರಾಃ" ಎಂಬಂತಾದಾಗ ಅವರ ಸಂಘಟನಶಕ್ತಿ ಎಷ್ಟರ ಮಟ್ಟದ್ದಾಗಿ ಉಳಿದೀತು? ಅದು ರಾಷ್ಟ್ರೀಯ ವಿಘಟನೆಯ ಮೂಲಸೂತ್ರ. ಸ್ಥಾನ ಬಿಟ್ಟರೆ ಕೇವಲ ಸೊನ್ನೆ ಅಥವಾ ವಿಷ ಎಂಬಂತಹ ವ್ಯಕ್ತಿತ್ವ ಚಾರಿತ್ರ, ಬುದ್ಧಿ ಮತ್ತೆ, ವಿದ್ಯಾವಂತಿಕೆಗಳಿರುವ ಜನರು ಉಚ್ಚಸ್ಥಾನಾಪನ್ನರಾದಲ್ಲಿ ಅಂಥ ಪಕ್ಷ, ಸರಕಾರ ಅಥವಾ ರಾಷ್ಟ್ರ ಕೆಲವೇ ಕಾಲದಲ್ಲಿ ಅರಾಜಕವಾಗಿ ಹೋಗಿಯೇ ತೀರುವುದು ಭಾರತದಲ್ಲಿ ತ್ರಿಕಾಲಾಬಾಧಿತ ಸತ್ಯ. ರಾಮಾದರ್ಶ, ಗಾಂಧ್ಯಾದರ್ಶಗಳು ವ್ಯಕ್ತಿತ್ವ ಚಾರಿತ್ರಗಳ ಬೆಳವಣಿಗೆಗೆ ಅನಗತ್ಯ ಅಥವಾ ಅಸಾಧ್ಯ ಎಂಬ ಪ್ರಚಾರೋಪನ್ಯಾಸಕರು ಭಾರತದ ಹಿತಚಿಂತನ ಮಾಡಲು ತೀರ ಅಸಮರ್ಥರು; ಅವರ ಶಾಸ್ತ್ರಜ್ಞಾನ ತೀರ ಅಪ್ರಯೋಜಕ ಅಥವಾ ಅತಿ ಹಾನಿಕರ. ಸಂಘಟಿತ ಭಾರತ ಮಾತ್ರ ರಾಷ್ಟ್ರ. ಆಭಾಸಿಕ ಸಂಘಟನೆಯು ಇದನ್ನು ಆಭಾಸಿಕ ರಾಷ್ಟ್ರವನ್ನಾಗಿ ಮಾಡುವುದು. ಆಭಾಸವು ಭಾಸವಲ್ಲ (Appearance is not reality). ಅಸಮರ್ಥ ಅಧಿಕಾರಿಗಳು ದುಷ್ಟರು; ಅವರ ದಮನ (ಪರಿಹಾರ) ಮೊದಲಾಗತಕ್ಕದ್ದು.



# ೨೩

# ಸಂಘಟನೆ ಮತ್ತು ಸಂಸ್ಕೃತಿ

ಲೋಕ ಕಾರ್ಯಕ್ಷೇತ್ರಗಳೆಲ್ಲವುಗಳಲ್ಲೂ ಸಂಘಟನೆ ಬಹಳ ಮುಖ್ಯವಾದುದೆಂಬುದು ಎಲ್ಲರಿಗೆ ಗೊತ್ತಿದ್ದರೂ ಚಿರಸ್ಥಾಯಿಯೂ ರಾಷ್ಟ್ರ-ರಾಷ್ಟ್ರೋತ್ತರ ವ್ಯಾಪಿಯೂ ಆದ ಸಂಘಟನೆಯನ್ನು ಹೇಗೆ ಮಾಡಬೇಕೆಂಬುದನ್ನಿಂದು ಭಾರತ ಅರಿಯದಾಗಿದೆ. ಪ್ರಾಚೀನ ಮಧ್ಯಯುಗೀನ ರಾಜ್ಯಗಳೂ ಸಾಮ್ರಾಜ್ಯಗಳೂ ಮತಧಾರ್ಮಿಕ ಸಾಧನವನ್ನು ಸಾಂಸ್ಕೃತಿಕ ಏಕೀಕರಣಕ್ಕಾಗಿ ಬಳಸಿ ಜಯಶಾಲಿಗಳಾದದ್ದು ಇತಿಹಾಸಕೋವಿದರಿಗೆ ತಿಳಿದ ಸಂಗತಿ. ಅನಂತರ ತತ್ವಭೇದ, ದೇವಭೇದ, ಆಚಾರಭೇದಗಳುದಯಿಸಿ ಆ ಸಂಘಟನೆಗಳು ಶಿಥಿಲವಾಗತೊಡಗಿದವು. ರಾಜಕೀಯ ಮಹತ್ವಾಕಾಂಕ್ಷೆಗಳು ಅಂದಿನಿಂದ ಇಂದಿನವರೆಗೂ ಆಗಾಗ ಬಲಾತ್ಕಾರದಿಂದ ಜನಸಂಘಟನೆ ಮಾಡುತ್ತ, ವಿಘಟಿತವಾಗುತ್ತ ಹೋದುದೂ ಕಣ್ಣಿಗೆ ಕಾಣುತ್ತವೆ. ಅರ್ಥಲೋಭಿಗಳ ಗುಂಪು ಆರ್ಥಿಕ ಆಮಿಷದ ಮೂಲಕ ಜನಸಂಘಟನೆಯನ್ನು ಸ್ವಾನುಕೂಲಕ್ಕಾಗಿ ಮಾಡುತ್ತಿರುವುದೂ ಸ್ಪಷ್ಟವಾಗಿದೆ. ರಾಜಕೀಯ ಸಾಧನದಿಂದ ಅರ್ಥಾರ್ಜನೆ ಮಾಡುವ ಅಥವಾ ಅರ್ಥಸಾಧನದಿಂದ ರಾಜ್ಯಶಕ್ತಿಯನ್ನು ಪಡೆದು ಪ್ರಭುತ್ವ ನಡೆಸುವ ಸಂಘಟಿತ ಜನವರ್ಗಗಳು ಅಲ್ಲಲ್ಲಿ ಇವೆ. ತತ್ವಜ್ಞಾನವೂ ರಾಜಕೀಯ ವಿಚಾರವೂ ಮತಧರ್ಮ ಸಿದ್ಧಾಂತಗಳೂ ಬೇರೆ ಬೇರೆಯಾಗಿಯೂ ಒಟ್ಟಾಗಿಯೂ ಜನಸಂಘಟನೆಗೆ ಕಾರಣವಾದದ್ದುಂಟು. ಸಂಘಟನೆಯ ಪ್ರಬಲ ಕಾರಣ ಯಾವುದೇ ಆಗಿದ್ದರೂ ಅದರ ಆಧಾರದ ಮೇಲೆಯೇ ಒಂದು ಸಂಘಟಿತ ಜನತೆಯ ಜೀವನದ ವಿವಿಧ ಚಟುವಟಿಕೆಗಳೆಲ್ಲವೂ ಪ್ರಧಾನವಾದ ಒಂದು ಏಕಪ್ರಕಾರಕತೆಯನ್ನು ತಾಳಿ ಒಳಮೌಲ್ಯ-ಹೊರಮೌಲ್ಯಗಳೆರಡರ ತಾರತಮ್ಯ ಮಾನದಂಡಗಳು ರೂಪಿತವಾಗುವುದರ ಮೂಲಕ ಸಂಸ್ಕೃತಿ- ನಾಗರಿಕತೆಗಳು ಪ್ರಕಟವಾಗುತ್ತವೆ.

ಡಾರ್ವಿನ್ನನ ವಿಕಾಸವಾದವು ನಿಂತಿರುವ ಉಪಮಾನ (Analogy) ಪ್ರಮಾಣದ ದೌರ್ಬಲ್ಯವನ್ನು ಗಣಿಸದ ವಿಜ್ಞಾನಿಮನ್ಯನಿಂದು ಅಮೀಬ-ಆದಿಮಾನವ-ಮಧ್ಯಮಾನವ-ವರ್ತಮಾನ ಕಾಲೀನ ಮಾನವರ ಚರಿತ್ರೆಗಳೆಂದು ಪುರಾಣಗಳನ್ನು (Mythologies) ಬರೆದು ಪ್ರಕಟಿಸಿದ್ದಾರೆ. ಒಂದು ಅತ್ಯಂತ ಚಿಕ್ಕದಾದ ಆವಯವಿಕ ಬದಲಾವಣೆಯಾಗಲು ಲಕ್ಷಾಂತರ-ಕೋಟ್ಯಂತರ ವರ್ಷಗಳು ಅಗತ್ಯವೆಂದ ಡಾರ್ವಿನೀಯರ ವಾದವು ಪ್ರಯೋಗ

ಪರೀಕ್ಷಾತೀತವೆಂಬುದನ್ನು ಹೊಸದಾಗಿ ಯಾರೂ ಹೇಳಬೇಕಾಗಿಲ್ಲ. ಸಾದೃಶ್ಯ ಸಂಬಂಧವನ್ನು ತಾದಾತ್ಮ್ಯ ಸಂಬಂಧವೆಂದು ತಪ್ಪಾಗಿ ತಿಳಿದುಕೊಂಡ ಮೂಲಕ ವಿಕಾಸವಾದವಿಂದು ವಿದ್ಯಾವಂತ ಚಿಂಪಾಂಜಿಗಳ ಹಾಸ್ಯಕ್ಕೆ ಪಾತ್ರವಾಗಿದೆ. ಹೋಲಿಕೆಯ ಸತ್ಯತೆಯು ಅತ್ಯಲ್ಪ ಭಿನ್ನರಾಶಿಕವೆಂಬುದನ್ನು ಆಲಂಕಾರಿಕನಾದ ಭಾಮಹ ಹೇಳಿದ್ದಿಲ್ಲಿ ಸ್ಮರಣೀಯ. ಮುಖವು ಕಮಲದಂತಿದೆಯೆಂದಾಗ ಕಮಲವು ಮಾನವ ಮುಖವಾಗಿ ಕೋಟ್ಯಂತರ ವರ್ಷಗಳ ಅನಂತರ ಪರಿವರ್ತನ ಹೊಂದಿದೆ ಎಂಬ ಪುರಾಣವು ವಿಜ್ಞಾನವಾಗಬಹುದೇ? ಹಾಗಾಗಿದೆ ಎಂಬ ಮೂಢನಂಬಿಗೆಯ ದೆಸೆಯಿಂದ ಅಮೀಬದಿಂದ ಕ್ರಮಶಃ ಪ್ರಾಣಿಗಳೂ ಮನುಷ್ಯರೂ ವಿಕಸಿಸಿದರೆಂದು ಹೇಳಲಾಗುತ್ತಿದೆ. ವಿಕಾಸವಾದದ ಊಹಾಕ್ರಮವನ್ನು ಆಧರಿಸಿ ೧) ಫಲಸಂಕಲನಸ್ಥಿತಿ, ೨) ಮೃಗಯಾಜೀವನ ಸ್ಥಿತಿ, ೩) ಪಕ್ವಮಾಂಸಾಶನಸ್ಥಿತಿ, ೪) ಪರಿವ್ರಾಜಕ (Nomadic) ಸ್ಥಿತಿ (ಪಶುಪಾಲನ ಸ್ಥಿತಿ) ೫) ಅಪರಿವ್ರಜನದ ಕೃಷಿಜೀವನ ಸ್ಥಿತಿ ಎಂದು ಮುಂತಾಗಿ ನಾಗರಿಕತೆಯ ಅವಸ್ಥೆಗಳು ಒಂದಕ್ಕಿಂತ ಇನ್ನೊಂದು ಉತ್ತರೋತ್ತರ ಮೇಲ್ಮಟ್ಟದ್ದಾಗುತ್ತ ಹೋಯ್ತೆಂಬ ಒಂದು ಚಿತ್ರವನ್ನೂ ಅದೇ ಪ್ರಕಾರ ೧) ಪ್ರಥಮ–ದ್ವಿತೀಯಾದಿ ಅಶ್ಮಯುಗ ಮತ್ತು ೨) ವಿವಿಧಲೋಹೋಪ ಯೋಗದ ಯುಗ ಎಂಬ ಎರಡನೆಯ ಕ್ರಮದ ಸಂಸ್ಕೃತಿಸ್ತರಗಳ ಉತ್ತರೋತ್ತರ ಮೇಲ್ಮೆಯನ್ನು ಕೊಡುವ ಚಿತ್ರವನ್ನೂ ವಿಜ್ಞಾನಪುರಾಣಿಕರಿಂದು ಜನರೆದುರಿಟ್ಟಿದ್ದಾರೆ, ಈ ಸೊನ್ನೆಯಿಂದ ಉತ್ತರೋತ್ತರ ಸುಧಾರಣೆಯಾಗುತ್ತ ಬಂತೆಂಬ ಊರ್ಧ್ವರೋಮ ವಿಚಾರಸೂತ್ರವು ಅವ್ಯಾವಹಾರಿಕವೆಂಬುದಕ್ಕೆ ತ್ರಯಸ್ಥ ದೃಷ್ಟಿಯಿಂದ "ಆಧುನಿಕ ಜೀವನ, ನಾಗರಿಕತೆ, ಸಂಸ್ಕೃತಿ"[೧]ಗಳನ್ನು ಅವಲೋಕಿಸಿದರೆ ಪ್ರಮಾಣಗಳು ಸಿಗುತ್ತವೆ. ಒಂದೇ ಯುಗದಲ್ಲಿ ಜಗತ್ತಿನ ವಿವಿಧ ರಾಜ್ಯಗಳ ಜೀವನಚಿತ್ರಗಳ ಭೇದಗಳನ್ನು ಕಂಡಾಗ, ಅವು ಅಪಕ್ರಮವನ್ನು ಪ್ರದರ್ಶಿಸಿದ್ದು ಗೊತ್ತಾದಾಗ ಮತ್ತು ಒಂದೇ ರಾಜ್ಯದ ಸ್ಥಿತಿ ಗತಿಗಳು ಏರಿಳಿತಗಳನ್ನು ಹೊಂದಿದ್ದು ತಿಳಿದಾಗ ಮಾನವೇತಿಹಾಸವು ಅಥವಾ ವಿಶ್ವ ಜೀವನೇತಿಹಾಸವು ಚಕ್ರಾರಪಂಕ್ತಿಯಗತಿಯನ್ನು ಹಿಡಿದದ್ದು ಸ್ಪಷ್ಟವಾಗುತ್ತದೆ. ಸೊನ್ನೆಯೂ ಬರುತ್ತದೆ, ಹೋಗುತ್ತದೆ; ಹಾಗೇ ಪರಾಕಾಷ್ಠೆಯೂ ಬರುತ್ತದೆ, ಹೋಗುತ್ತದೆ. ಅವುಗಳ ನಡುವಿನ ಗತಿಗಳು ಕೂಡ ಯಾವಾಗಲೂ ಒಂದೆಡೆ ಉತ್ತರೋತ್ತರ ಉತ್ತಮವಾಗುತ್ತ ಹೋಗುವುದಿಲ್ಲ. ಸೊನ್ನೆಯಿಂದ ನೂರರವರೆಗಿನ ತರತಮಸ್ತರಗಳಲ್ಲಿ ಉತ್ತರೋತ್ತರ ಉತ್ತಮತೆಯ ನಿತ್ಯಾನುಕ್ರಮವು ಇಡಿ ವಿಶ್ವದಲ್ಲಿಯೂ ಇಲ್ಲ, ಅದರ ಒಂದು ಭಾಗದಲ್ಲಿಯೂ ಇಲ್ಲ. ಯಾವುದಾದರೂ ಒಂದು ಭೂವಿಭಾಗದ ೧೦೦೦ ವರ್ಷಗಳ ಇತಿಹಾಸವು ಕೆಲಮಟ್ಟಿಗೆ ಆನುಕ್ರಮಿಕ ಉತ್ತರೋತ್ತರಾಭಿವೃದ್ಧಿಯನ್ನು ಕೆಲ ನಾಗರಿಕತಾಂಶಗಳಲ್ಲಿ

---

೧ "Culture'' is the intrinsic value of society; it is synonymous with civilization. It is employed by spengler to define a civilazation in its creative growth-period. It is the means or the tools, customs and institutions of social groups- or the employment of such means. In psychology it is the enlightenment or education of the individual. Some distinguish "culture'' from "civilization''; the former being the effect on personal development,

ತೋರಿಸಿದ್ದನ್ನು ಕೆಲವೆಡೆ ಕಂಡು, ಇದನ್ನು ಸಾಮಾನ್ಯೀಕರಿಸಿ, ಇದರ ಹಿಂದಿನ ಇತಿಹಾಸದ ಅಪಾರ್ಥಮಾಡಿ, ಇದಕ್ಕೂ ಹೀನದಶೆಗಳ ಸ್ತರಗಳೆಂದು ಅದನ್ನು ಕರೆದು ಇದಕ್ಕೆ ಹಿಂಬಾಲವಾಗಿ ಅದನ್ನು ಜೋಡಿಸಿ ವಿಕಾಸ ಅಥವಾ ಊರ್ಧ್ವಗತಿಯು ಉತ್ಸರ್ಗನಿಯಮವೆಂದು ಲೋಕಜೀವನದ ಚರಿತ್ರೆಗೆ ಅನ್ವಯಿಸುವುದು ಅಪಂಡಿತತೆ.

ಸಾಮಾಜಿಕ ಧನಾಢ್ಯತೆ, ಶಸ್ತ್ರಾಢ್ಯತೆ, ಭೌತಿಕವಾದ ಇತರ ಸಾಧನಗಳ ಆಢ್ಯತೆಗಳು ನಾಗರಿಕತೆಯ ಮಾಪಕಗಳು, ಸಂಸ್ಕೃತಿಯ ಮಾಪಕಗಳಲ್ಲ. ಸಂಸ್ಕೃತಿಯು ಅಂತರ್ ಮೌಲ್ಯನಿಷ್ಠ; ಆಂತರಿಕವಾದ ಜೀವನದ ಚರಮಮೌಲ್ಯಗಳು ಧರ್ಮ, ಅರ್ಥ, ಕಾಮ, ಮೋಕ್ಷ: ಅವು ವ್ಯಕ್ತಿಬುದ್ಧಿಯಲ್ಲಿ ಜೀರ್ಣವಾಗಿ ರಕ್ತಗತವಾಗುವಂಥವುಗಳು. ನಾಗರಿಕತೆಯು ಸಾಮಾಜಿಕ, ಸಂಸ್ಕೃತಿಯು ವೈಯಕ್ತಿಕ. ಸಮಾಜವು ಬಾಹ್ಯಧ್ಯೇಯ ಸಾಧನೆಗಾಗಿ ಕೂಡಿದ ಜನರ ಒಂದು ಗುಂಪು. ಸಂಸ್ಕೃತರಿಂದ ತುಂಬಿದ ಸಮಾಜ ಅಥವಾ ನಾಗರಿಕತೆ ಮತ್ತು ಅಸಂಸ್ಕೃತರಿಂದ ತುಂಬಿದ ನಾಗರಿಕತೆಗಳು ಅನುಕ್ರಮವಾಗಿ ದರ್ಶನೀಯ ಮತ್ತು ಪ್ರದರ್ಶನೀಯ. ಎರಡೂ ದರ್ಶನೀಯವಾಗಲು ಸಮಾಜವಾದೀಯ ಸಮಾಜವು ರಚಿತವಾಗಿ ದಕ್ಷತೆಯಿಂದ ಸಂಘಟಿತ ಜೀವನವನ್ನು ನಡೆಸಬೇಕು.

ನಾಗರಿಕತೆಯ ಚಿರಸ್ಥಾಯಿತ್ವಕ್ಕೆ ವ್ಯಕ್ತಿಸಂಸ್ಕರಣವು ಅತ್ಯಂತ ಅನಿವಾರ್ಯವಾದ ಸಾಧನ. ಸಂಸ್ಕೃತ ವ್ಯಕ್ತಿಯು[೨] ಕಾರಣಾಂತರದಿಂದ ಅನಾಗರಿಕನಾದರೆ ಅವನನ್ನು ನಾಗರಿಕನನ್ನಾಗಿ ಪರಿವರ್ತಿಸುವುದು ಸುಲಭ; ಅಸಂಸ್ಕೃತನು ಹಾಗಾದರೆ ಅವನನ್ನು ತಿದ್ದುವುದು ಬಹಳ ಕಷ್ಟ. ಭಾರತದ ಬಹುಸಂಖ್ಯಾತರು ಕಳೆದ ೬೦೦ ವರ್ಷಗಳಿಂದ ಅಸಂಸ್ಕೃತರಾಗುತ್ತ ಹೋದುದರಿಂದ ಅವರನ್ನು ಸಂಸ್ಕರಿಸುವುದು ಈಗ ಬಹಳ ಕಷ್ಟವಾಗಿ ಹೋಗಿದೆ. ಅಂಥವರೇ ಪಾಶ್ಚಾತ್ಯ ಅನಾರ್ಯಾಭಿರುಚಿಗೆ ಬಹುಬೇಗ ಮಾರು ಹೋಗುವವರು ಅಥವಾ ದೇಶೀಯ ಅಂಧಾಚಾರನಿಷ್ಠರಾಗುವವರು. ಆಧುನಿಕ ವಿದ್ಯಾಭ್ಯಾಸ ಪದ್ಧತಿಗಳು ಅವರನ್ನು ಹಾಗಾಗಲು ಅಣಿಗೊಳಿಸುತ್ತ ಹೋಗಿವೆ. ಅನಾರ್ಯತೆಯು ಭಾರತದಲ್ಲಿ ಅಸಂಸ್ಕೃತತೆ. and the latter being the expression (in art, science or religion) of the institutions, materials and social organisation - J.K.F.

ಆರ್ಯತೆಯು ಆತ್ಮಗುಣ ಸಮಾಹಾರ. ಆದುದರಿಂದಲೇ ಅದು ನಮ್ಮ ನಾಗರಿಕತೆಯ ಆತ್ಮ. ಮಾನಸಶಾಸ್ತ್ರದ ಆ ಈ ಪ್ರಸ್ಥಾನಗಳೀಗ ಮನೋಗುಣಗಳನ್ನು ಆತ್ಮಗುಣಗಳೆಂದು ವರ್ಣಿಸುವುದು ಸಾಂಸ್ಕೃತಿಕ ಏಕಪ್ರಕಾರತೆಯ ಸಾಧನೆಗೆ ವಿಘ್ನಕಾರಿ. ಆರ್ಯತೆಯು ಭಾರತೀಯತೆಯ ತಿರುಳು. ಆದುದರಿಂದ ತನ್ನಿಷ್ಠ ನಾಗರಿಕತೆ ಮಾತ್ರ ಇಲ್ಲಿ ಚಿರಸ್ಥಾಯಿಯಾಗಿರಬಲ್ಲದು. ಸಂಘಟನೆಯು ರಾಷ್ಟ್ರೀಯ ಸಮಾಜದ ಅಥವಾ ನಾಗರಿಕತೆಯ ಜೀವಾಳ. ಮನೋಗುಣಗಳು ಅಥವಾ ಮೂಲಪ್ರವೃತ್ತಿಗಳು ದೇಹದ ತಾತ್ಕಾಲಿಕ ಸುರಕ್ಷಿತತೆಗೆ ಪ್ರಯತ್ನಿಸತಕ್ಕಂಥವುಗಳು. ದೇಹವು ಪ್ರತ್ಯೇಕತೆಯ ಪ್ರತೀಕ; ಆತ್ಮವು ಐಕ್ಯದ ಅಧಿಷ್ಠಾನ.

---

೨ It is difficult to explain how either prime matter or substantial form can be the cause or principle of individuality - V.J.B.

ಅನಾರ್ಯತೆಯು ರಾವಣನಾಗರಿಕತೆಯ ಮತ್ತು ಆರ್ಯತೆಯು ರಾಮನಾಗರಿಕತೆಯ ಅಡಿಗಲ್ಲುಗಳು. ಅಸಂಸ್ಕೃತ ನಾಗರಿಕತೆಯು ಅಚಿರಸ್ಥಾಯಿಯಾದುದರಿಂದ ಆಭಾಸಿಕ. ಆತ್ಮಗುಣ ಸಮಾಹಾರವೇ ಧರ್ಮ, ಸಂಸ್ಕೃತಿ; ಅದರಿಂದ 'ರಾಮರಾಜ್ಯ'ದ ಸಿದ್ಧಿ.

ಭಾರತದಲ್ಲಿ ಕ್ರಿ.ಶ.ಮೂರನೆಯ ಶತಮಾನದಿಂದ ೧೪ನೆಯ ಶತಮಾನದ ವರೆಗೆ (ಅಂದರೆ ಸುಮಾರು ೧೧೦೦ ವರ್ಷಗಳ ವರೆಗೆ) ಚಕ್ರವರ್ತಿಗಳಾಗಿ, ಪಾಳೆಯಗಾರರಾಗಿ, ರಾಜ್ಯಪಾಲರಾಗಿ, ರಾಜ್ಯಪ್ರತಿನಿಧಿಗಳಾಗಿ ಮತ್ತು ಮಹಾ ಮಂಡಲೇಶ್ವರರಾಗಿ ಆಳಿದ ಕುಂತಳದ (ಕರ್ನಾಟಕದ) ಕದಂಬ ಕುಲದವರು ಸಂಸ್ಕೃತಿಯ ಚಿರಸ್ಥಾಯಿತ್ವದ ಮೇಲೆ ನಿಂತ ನಾಗರಿಕತೆಯನ್ನು ಕಟ್ಟಿದ ಕೀರ್ತಿಗೆ ಪಾತ್ರರು, "ಯತೋ ಧರ್ಮ ಸ್ತತೋ ಜಯಃ" ಎಂಬ ಮಹಾವಾಕ್ಯವನ್ನು ನಿದರ್ಶಿಸಿದವರು.

ಸಂಘಟನೆಯು ಅಭೇದ್ಯವಾದ ಅಡಿಗಲ್ಲು ಸಾಂಘಿಕರ ಆರ್ಯತೆಯೇ. ಅನಾರ್ಯತೆ ಅಥವಾ ದಸ್ಯುತ್ವವು ಎಂದೂ ಚಿರಸ್ಥಾಯಿಯಾದ (ಸಾವಿರಾರು ವರ್ಷಗಳವರೆಗೆ ಮುಂಬರಿಯ ಬಲ್ಲ) ಸ್ವತಂತ್ರ ನಾಗರಿಕತೆಯನ್ನು ಕಟ್ಟಲಾರದು. ನಾಗರಿಕತೆಯ ವಿಮರ್ಶಕನು ಅದರ ಸಾಂಸ್ಕೃತಿಕ ಸತ್ಯತೆಯ ಸ್ವರೂಪವನ್ನು ಶೋಧಿಸಿ ತಿಳಿದುಕೊಳ್ಳುವುದಗತ್ಯ; ಹಾಗೇ ಆ ಸತ್ಯವು ವರ್ತನೆಯಲ್ಲಿ ಪ್ರಕಟವಾಗುವ ರೀತಿ–ರೂಪಗಳನ್ನು ಶೋಧಿಸುವುದೂ ಅವಶ್ಯಕ. ಏಕೆಂದರೆ ಆತ್ಮಗುಣಗಳು ಸರ್ವಮಾನವರಿಗೂ ಸಾಧಾರಣವಾದ ಸುಪ್ತಶಕ್ತಿಗಳು. ಅವುಗಳ ವ್ಯಕ್ತೀಕರಣದ ರೀತಿ, ರೂಪ, ಸಂದರ್ಭಗಳ ವ್ಯತ್ಯಾಸವು ಸಂಸ್ಕೃತ ನಾಗರಿಕತೆಗಳೆರಡರಲ್ಲಿರುವ ಭೇದಕ್ಕೆ ಕಾರಣಗಳಾಗುತ್ತವೆ. ಅವು ಹೆಚ್ಚಾಗಿ ದೇಶೀಯ ಮತ್ತು ಕೆಲಮಟ್ಟಿಗೆ ಕಾಲೀನ. ಕಾಲೀನತೆಯು ದೇಶೀಯತೆಯನ್ನು ನಿರ್ಮೂಲ ಮಾಡಹೊರಡುವುದು ಸಂಘಟನೆಗೆ ವೈರಿ. ಸ್ವದೇಶೀಯ ಕಾಲೀನತೆ ಎಂದೂ ಅಂಥ ಬುದ್ಧಿಯನ್ನು ದೇಶೀಯರಲ್ಲಿ ಉಂಟು ಮಾಡದು. ದೇಶೀಯ ಸಾಂಸ್ಕೃತಿಕ ಬೀಜದ ನಿರ್ಮೂಲನ ಪ್ರಯತ್ನವೇ ಸರ್ವಭ್ರಷ್ಟಾಚಾರಗಳ ತಂದೆ, ಭ್ರಷ್ಟಾಚಾರವು ರಾಷ್ಟ್ರೀಯ ಸಂಘಟಿತ ಜೀವನದ ಸಿದ್ಧಿಗೆ ಶತ್ರು. ವಿಚಾರದ ಮಾನಸಿಕ ರೂಪ ಬದಲಾಗುವುದೂ ಆಚಾರದ ರೂಪ ಬದಲಾಗುವುದೂ ಪರಸ್ಪರ ಪರಿಣಾಮಕಗಳು. ಮೌಲ್ಯವಿಚಾರದ ಮಾನಸಿಕ ಪಡೆನುಡಿ ದೇಶದಿಂದ ದೇಶಕ್ಕೆ ಭಿನ್ನವಾಗಿರುವುದುಂಟು. ಅದಕ್ಕೆ ಅನೇಕ ಸಲ ಇತರ ದೇಶದ ಸಂಪೂರ್ಣ ಸಮಾನಾರ್ಥಕ ಪಡೆನುಡಿ ಇರುವುದೇ ಇಲ್ಲ. ಆದುದರಿಂದ ಇಂಗ್ಲೀಷಿಲ್ಲಿ ಉಚ್ಚ ಸಾಂಸ್ಕೃತಿಕ ಮೌಲ್ಯವಿಮರ್ಶೆಯ ಮಾಧ್ಯಮವಾಗಲು ಎಂದಿಗೂ ಅರ್ಹವಲ್ಲ. "ಸಾಧನ" ಇರುವಾಗ "ಮಾಧ್ಯಮ"ವನ್ನು ನಾವು ಏಕೆ ಬಳಸಲು ಕಲಿತೆವು? "ಸಾಧನ" ಸಾಲದಾದರೆ "ವಾಹಕ"ವಿದೆ. ಆದರೀ ಯಾವ ಪದಗಳೂ "ಮಾಧ್ಯಮ" ಸೃಷ್ಟಿಯನ್ನು ತಪ್ಪಿಸಲಾರದಂತಾದದ್ದು ವಿಚಾರಕ್ಕೆ ವಿದೇಶೀಯತೆಯ ಗ್ರಹಣ ಹಿಡಿದುದರಿಂದಲೇ, ವಿಚಾರ, ಆಲೋಚನೆ, ಭಾವ, ಕಲ್ಪನೆಗಳಲ್ಲಿ ಯಾವ ಪದವೀಗ, Idea, Thought, Concept ಎಂಬವುಗಳಿಗೆ ಸಮಾನಾರ್ಥಕ? ನಿರುಕ್ತಿ ಇಲ್ಲದಲ್ಲಿ ದುರುಕ್ತಿ ಹುಟ್ಟುತ್ತದೆ. ಆದುದರಿಂದ ಎನ್.ಸಿ.ಸಿ.ಯವರಿಗೆ "Charge" ಎನ್ನಲು ದೇಶೀಯ ಪದ ಹೊಳೆಯದಾಗಿದೆ. ಇದು ಅನ್ಯಚಿಂತನದ ಅಂಧಾನುಕರಣದಿಂದಾದ ಬುದ್ಧಿಯ ಲಕ್ಷಣ. ಅದರಿಂದ ಸ್ವತಂತ್ರ ನಾಗರಿಕತೆ ಹುಟ್ಟಿ ಬೆಳೆಯದು. ಪರತಂತ್ರ

ನಾಗರಿಕತೆ ಎಂದಾದರೊಂದು ದಿನ ಪರಾಧೀನವಾಗಿಯೇ ತೀರುವುದೆಂಬುದು ಇತಿಹಾಸ ಸಿದ್ಧವಾಗಿದೆ. ಆದುದರಿಂದ ಸುಲಭೀಕೃತ ಸಂಸ್ಕೃತವೊಂದೇ ನಮ್ಮ ರಾಷ್ಟ್ರಭಾಷೆಯಾಗಲು ಅರ್ಹ. ರಾಮನರೇಶತ್ರಿಪಾಠಿಯವರ ಕವನಗಳು ಅಂಥ ಪದಸಂಪತ್ತಿಯನ್ನು ನಿದರ್ಶಿಸುತ್ತವೆ.

ಪದಪ್ರತಿಮೆಗಳು ವಿಚಾರಗಳ ಮಾನಸಿಕ ಕವಚಗಳು. ಅವುಗಳಲ್ಲಿ ಸಂಕರ ಉಂಟಾದಾಗ ಮಧ್ಯಯುಗದ ಭಾರತೀಯ ನಾಗರಿಕತೆ ಪರಾಧೀನವಾಯಿತು. ಅನಂತರ ಅನ್ಯವೆನ್ನಿಸಿದ ಆಂಗ್ಲಭಾಷೆಯ ಅಧೀನತೆಯಿಂದ ಭಾರತೀಯ ಬುದ್ಧಿಯು ಸ್ವತಂತ್ರ ಮೌಲ್ಯವಿಚಾರಶೀಲತೆಯನ್ನು ಕಳೆದುಕೊಂಡು ನಿಸ್ತೇಜವಾಯಿತು. "ನಿಸ್ತೇಜಾಃ ಪರಿಭೂಯತೇ ಪರಿಭವಾನ್ನಿರ್ವೇದ ಮಾಪದ್ಯತೇ। ನಿರ್ವಿಣ್ಣಃ ಶುಚಮೇತಿ ಶೋಕ ಪಿಹಿತೋ ಬುದ್ಧ್ಯಾಪರಿತ್ಯಜ್ಯತೇ। ನಿರ್ಬುದ್ಧಿಃ ಕ್ಷಯ ಮೇತ್ಯಹೋ" ಎಂಬ ಕಾರಣ ಕಾರ್ಯಮಾಲೆಯ ಆದಿ ಇರುವುದು "ದಾರಿದ್ರ್ಯಾತ್ (ಪದದಾರಿದ್ರ್ಯಾತ್) ಹ್ರಿಯ ಮೇತಿ ಹ್ರೀಪರಿಗತೋ ನಿಸ್ತೇಜಸಾ ಗೃಹ್ಯತೆ" ಎಂಬುದರಲ್ಲಿ. ನಿರ್ಲಜ್ಜತೆಯು ಸಂಘಜೀವನಕ್ಕೆ ಮಾರಕ. ಅದು ಮೌಲ್ಯಚಿಂತನವನ್ನು ವಿದೇಶಿಯ ಮಾನಸಿಕ ಪಡೆನುಡಿಗಳನ್ನುಳ್ಳ ಮತ್ತು ಮೇಲು ಮೇಲೆ ಸಮಾನಾರ್ಥಕತೆಯನ್ನು ತೋರಿಸುವ ಪದಗಳ ಮೂಲಕ ಮಾಡಲಾರಂಭಿಸಿದ್ದರ ಫಲ. ನಿರ್ಲಜ್ಜೆಯು ನಿಸ್ತೇಜತೆಗೆ ಕಾರಣ. ಪದ ಸಾಂಕರ್ಯ-ಅರ್ಥಸಾಂಕರ್ಯಗಳು ಜೀವನ ಮೌಲ್ಯವಿವೇಚನೆಯಲ್ಲಿ ನಾರಕಗೊಂದಲವನ್ನುಂಟು ಮಾಡಿ ವ್ಯಕ್ತಿಗಳಲ್ಲಿ ಅಸಾಮಾಜಿಕತೆಯನ್ನು ಬೆಳೆಯಿಸುತ್ತದೆ. ಅನನ್ಯತೆಯು Originality, independence; ಅದು ಉಕ್ತಕ್ಷೇತ್ರದಲ್ಲಿ ವಿದೇಶೀಯ ಮನೋಭಾವವಾಹಕಗಳಿಂದ ಎಂದೂ ಸಿದ್ಧಿಸದು.

"ವೇದಾಂತಕೃದ್ವೇದವಿದೇವ ಚಾಹಂ" ಎಂಬ ಗೀತೋಕ್ತಿಯಿಂದ ವ್ಯಾಸ, ಕೃಷ್ಣ, ಉತ್ತಮ ಪುರುಷ, ಪರಮಾತ್ಮ, ಅಧಿಯಜ್ಞಗಳೆಂದರೆ ಒಂದೇ. ಅದು ಲೀಲಾ ಮಾನುಷವಿಗ್ರಹ; ಅದರ ಆತ್ಮವು ಬ್ರಹ್ಮ ಅಥವಾ ಜ್ಞಾನಿ ಇಲ್ಲವೆ ಕರ್ಮಯೋಗಿಗಿರುವ ಭಾವ, ಜೀವನ್ಮುಕ್ತ ಸ್ಥಿತಿ. ಆತ್ಮಗುಣಗಳು ಆ ಸ್ಥಿತಿಯಲ್ಲಿ ನಿತ್ಯಜಾಗರಿತವಾಗಿರುತ್ತವೆ. ಹಾಗಿರುವುದೇ ಆದರ್ಶ ಭಾರತೀಯ ನಾಗರಿಕನ ಲಕ್ಷಣ. ಅಹಿಂಸೆ, ಸತ್ಯ, ಅಸ್ತೇಯ, ಶೌಚ ಇಂದ್ರಿಯನಿಗ್ರಹಗಳು ಎಂಟು ಆತ್ಮಗುಣಗಳಲ್ಲಿ ಅತಿ ಮುಖ್ಯ.

ಮನೋವ್ಯಾಯಾಮರಹಿತವಾದ ದೇಹವ್ಯಾಯಾಮವು ಹಾನಿಕರ. ಅಂತಃಶುಚಿ ಇಲ್ಲದ ಬಾಹ್ಯಶುಚಿಯು Live to Show ಪ್ರದರ್ಶನ ಮಾಡಲು ಬದುಕುವ ಪರಪ್ರತಾರಕರ ಲಕ್ಷಣ. ಬುದ್ಧಿಯು ಕರ್ಮದ ಬಣ್ಣವನ್ನು ಹೊಂದುವಂಥದಾಗಿರುವುದರಿಂದ – ವೃತ್ತಿ, ವರ್ತನೆ, ಮತಾಚಾರ, ಮನೋರಂಜನ ಪದ್ಧತಿ, ವಿದ್ಯಾಭ್ಯಾಸ ರೀತಿ, ವಿಚಾರದ ತರ್ಕಸರಣಿ ಮುಂತಾದ ಎಲ್ಲವೂ ವಿಶಾಲಾರ್ಥದಲ್ಲಿ ಕರ್ಮಗಳಾಗಿರುವುದರಿಂದ–ಕರ್ಮದ ರೀತಿಯೂ ನೀತಿಯೂ ದೇಶೀಯವಾಗಿರುವುದಗತ್ಯ. ಮನಸ್ಸಿಗೆ ದೇಶೀಯ ಆದರ್ಶಗಳ ಅನುಸಾರವಾಗಿ ಸಂಸ್ಕೃತವಾದ ಕರ್ಮನೀತಿ–ಕರ್ಮ ರೀತಿಗಳ ಸಂಸ್ಕಾರ ಕೊಡುವುದೇ ಮನೋವ್ಯಾಯಾಮ ಅಥವಾ ಅಂತಃಶುಚಿ ಸಾಧನೆ. Mental culture ಮನಃಸಂಸ್ಕಾರ ಹೀನವಾದ Physical culture ದೇಹಸಂಸ್ಕಾರವು ಸಂಘಟನಾನುಕೂಲ ಮನಸ್ಕತೆಯನ್ನು ಜನರಲ್ಲಿ ಪ್ರೇರಿಸಲಾರದು.

ದೇಹವ್ಯಾಯಾಮವು ಮನೋವ್ಯಾಯಾಮಕ್ಕೆ ಪೂರಕ–ಶ್ರೋತವ್ಯಕ್ಕೆ ಮಂತವ್ಯವಿದ್ದ ಹಾಗೆ, ವಿಚಾರಕ್ಕೆ ಆಚಾರವಿದ್ದ ಹಾಗೆ, ಸಿದ್ಧಾಂತಕ್ಕೆ ಅನುಭವವಿದ್ದ ಹಾಗೆ ಇರಬೇಕು.

ಮಾನಸಿಕ ಶಿಸ್ತು ದೈಹಿಕ ಶಿಸ್ತಿಗೆ ಅಡಿಗಲ್ಲಾಗಿರುವುದು ಸಮರ್ಥ ಸಾಂಘಿಕರ ತರಬೇತಿನ ಮೂಲಸೂತ್ರ. ಮಾನಸಿಕ ಶಿಸ್ತಿಗೆ ಧ್ಯೇಯಗಳ (ಆದರ್ಶಗಳ, ಸಾಂಸ್ಕೃತಿಕ ಮೌಲ್ಯಗಳ) ನಿಷ್ಠೆಯು ಆಧಾರ. ಯಮ (Moral restraint), ನಿಯಮ (Self culture), ಆಸನ (Proper posture), ಪ್ರಾಣಾಯಾಮ (Breath control), ಪ್ರತ್ಯಾಹಾರ (control of the senses), ಧ್ಯಾನ (concentration on the ideal), ಧಾರಣ (Retention of the state of concentration) ಮತ್ತು ಸಮಾಧಿ (Meditative balance uniform and continuous glow of the pure spirit-consciousness or surrender of the self to the spirit) ಎಂಬಿವು ಮನೋವ್ಯಾಯಾಮದ ಎಂಟು ಅಂಗಗಳು. ಭಾರತೀಯ ಪರಮಾತ್ಮನೇ ಧ್ಯೇಯವಸ್ತು; ಅವನದೇ ಧ್ಯಾನ. ಪರಕೀಯ ಪರಮಾತ್ಮನ ಪದಪ್ರತಿಮೆ–ಅರ್ಥಪ್ರತಿಮೆಗಳು ನಮಗೆಂದೂ ಸಾತ್ಮ್ಯವಾಗಲಾರವು, ಅದರಿಂದಲೇ ಗಾಂಧಿಯವರು "ಹೇ ರಾಮ" ಎಂದು ದಿವಂಗತರಾದರು. ನಮ್ಮ ಪರಮಾತ್ಮನ ಚಿತ್ (ಮನಸ್ಸು) ನಿತ್ಯಸತ್ಯವೂ ನಿತ್ಯಾನಂದವೂ ಆಗಿರುವುದರಿಂದ ನಮ್ಮ ರಾಷ್ಟ್ರೀಯತೆಯ ಸತ್ಯತೆಯು ಅದನ್ನೇ ಆಧರಿಸಬೇಕಾದದ್ದು ಕ್ರಮಪ್ರಾಪ್ತ. ಈ ಅರ್ಥದಲ್ಲಿ ರಾಷ್ಟ್ರೀಯತೆಯೊಂದೇ ನಿಜವಾದ ಸನಾತನತೆ–ನಾವೀನ್ಯಗಳೆಷ್ಟಿದ್ದರೂ ಅವುಗಳನ್ನು ಜೀರ್ಣಿಸಿ ರಕ್ತಗತಮಾಡಿಕೊಂಡು ಸ್ವಸ್ವರೂಪವನ್ನು ಉಳಿಸಿಕೊಳ್ಳುವ ಆಧುನಿಕತೆ ಸ್ವಸ್ವರೂಪಮಾರಕವಾದ ನಾವೀನ್ಯಗಳು ಸರ್ವಥಾ ತ್ಯಾಜ್ಯಗಳು. ರಾಷ್ಟ್ರೀಯರೆಲ್ಲರೂ ಸಮಾನಸುಖಿಗಳಾಗುವ ಭೌತಿಕತೆಯು ಅದರ ಲೌಕಿಕ ಫಲ.

ಯಮನು ಧರ್ಮ, ಧರ್ಮವು ನೀತಿ, ನೀತಿಯು ಸಂಸ್ಕೃತಿಯ ಪಂಚಪ್ರಾಣಗಳಾದ ಪಂಚ ಆತ್ಮಗುಣಗಳು. ನಿಯಮವು "ಸಂಸ್ಕೃತೋऽಹಂ" ಎಂಬುದರ ಮನನ. ಆಸನವು[೩] ಧ್ಯಾನಕ್ಕೆ ಅನುಕೂಲವಾಗುವಂತೆ ಕುಳಿತುಕೊಳ್ಳುವುದು. ಪ್ರಾಣಾಯಾಮವು ಭಾರತೀಯ ಸಂಸ್ಕೃತತೆ ಅಥವಾ ಆರ್ಯತೆಯನ್ನು ಒಳಗೆಳೆದುಕೊಳ್ಳುವ ಕ್ರಮಬದ್ಧ ಉಸಿರಾಟ. ಪ್ರತ್ಯಾಹಾರವು ಇಂದ್ರಿಯಗಳ ಚಾಪಲ್ಯವನ್ನು ಬಿಡಿಸಿ ದೇಶೋಪಕಾರೋನ್ಮುಖತೆಗೆ ತಿರುಗಿಸುವುದು. ಧ್ಯಾನವು ಸಂಸ್ಕೃತಾತ್ಮತೆಯ ಭಾವವನ್ನು ಭಾರತೀಯ ಆತ್ಮವಾದ ಬ್ರಹ್ಮನಲ್ಲಿ ಉನ್ಮುಖಗೊಳಿಸುವುದು. ಧಾರಣವು ಆ ಉನ್ಮುಖತೆಯನ್ನು ದೃಢಗೊಳಿಸುತ್ತ ಹೋಗುವುದು. ಸಮಾಧಿಯೆಂದರೆ ಭಾರತೀಯತಾಬ್ರಹ್ಮನಲ್ಲಿ ಲೀನತೆ ಹೊಂದುವುದು. ಭಾರತವೆಂದರೆ ಮೇರುವಿನ ದಕ್ಷಿಣ ಪಾರ್ಶ್ವದಲ್ಲಿ ಬೆಳಗುವ ಸೂರ್ಯ, ಪ್ರಕಾಶ ಮಗ್ನ, ಜ್ಞಾನನಿಷ್ಠ. ಜ್ಞಾನಕ್ಕೂ ಕರ್ಮಕ್ಕೂ ಸೇತುವಾಗಿರುವುದೇ ಯೋಗವಾರ್ಗ. ಕರ್ಮದಂತೆ ಜ್ಞಾನವು ರೂಪಿತವಾಗುವುದನ್ನು ನಿಲ್ಲಿಸಿ. ಜ್ಞಾನದಂತೆ ಕರ್ಮವು ನಡೆಯುವಂತೆ ನೋಡಿಕೊಳ್ಳುವುದೇ ಯೋಗ. ಜ್ಞಾನವು ಜೀವನ ಯೋಜನೆಯ ಭಾವಚಿತ್ರ ಅಥವಾ ನಕ್ಷೆ. ಅದು ಮೌಲ್ಯ

೩ ದೇಹ ಸಂಸ್ಕಾರದ ಪ್ರಾಧಾನ್ಯವಿರುವಾಗ ಆಸನವು ವಿವಿಧವಾಗುತ್ತದೆ.

ತಾರತಮ್ಯ ನಿರ್ಣಯದಿಂದ ಲಭ್ಯ. ಸ್ವಹಿತಕ್ಕೆ ದೇಶಹಿತವು ಆಧಾರವಲ್ಲದೆ, ದೇಶಹಿತಕ್ಕೆ ಸ್ವಹಿತವು ಆಧಾರವಲ್ಲ ಎಂಬುದು ತಾರತಮ್ಯ ವಿವೇಕ. The individual is a part of the whole ವ್ಯಕ್ತಿಯು ಇಡಿ ಸಮಾಜದ ಒಂದು ಭಾಗ. ಬಿಡಿಯು ಇಡಿಯಲ್ಲಿ ಸಮನ್ವಿತವಾಗಬೇಕು. ಜ್ಞಾನಯೋಗ–ಕರ್ಮಯೋಗಗಳು ಸಾರತಃ ಭಿನ್ನವಲ್ಲ; ಅವು ನಿವೃತ್ತಿಕರ್ಮ–ನಿಷ್ಕಾಮಕರ್ಮಗಳಿದ್ದ ಹಾಗಿವೆ, ಸಿದ್ಧ–ಸಾಧಕರಂತಿವೆ. "ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ" ಎಂಬ ಗೀತೋಕ್ತಿಗಿಷ್ಟು ಅರ್ಥ ಹೇಳುವ ಶಕ್ತಿಯಿದೆ. ಜ್ಞಾನವಿಮುಖವಾದ ಕರ್ಮನಿಷ್ಠೆ ಅಥವಾ ಕರ್ಮಭಕ್ತಿ ಸರ್ವದಾ ಹೇಯ, ಜ್ಞಾನೋನ್ಮುಖವಾದ ಕರ್ಮ ನಿಷ್ಠೆಯು ನಿಷ್ಕಾಮಕರ್ಮ; ಜ್ಞಾನಪ್ರೇರಿತವಾದ ಕರ್ಮವು ನಿವೃತ್ತಿ ಕರ್ಮ. ಜ್ಞಾನವಿಲ್ಲಿ ಭಾರತೀಯ ಜೀವನದ ವಿಶ್ವಕುಟುಂಬಿತ್ವಭಾವ. "ಜಯಭಾರತ"ವು "ಜಯಜಗತ್ತಾ" ಗುವ ಬ್ರಹ್ಮಬೀಜ. ನೆರೆಹೊರೆಯ ಸಜ್ಜನರಿಗಾಗಿಯೇ, ಸುಜೀವಿಗಳಿಗಾಗಿಯೇ ಬದುಕುವುದು ಸಾಧಕನಿಗೆ ಸಾಧನ, ಸಿದ್ಧನಿಗೆ ಸ್ವಭಾವ. ಭಕ್ತಿಯೋಗವು ಸ್ವತಂತ್ರವಾದ ಯೋಗವೇ ಅಲ್ಲ. ಭಕ್ತಿಯು ತದಿತರ ಪದಾರ್ಥದಲ್ಲಿರುವ ನಿಷ್ಠೆ. ನಿತರಾಂತಿಷ್ಠತಿ ಇತಿನಿಷ್ಠಾ. ರಾಜಯೋಗವೂ ಹಠಯೋಗವೂ ಮನಃಸಂಸ್ಕಾರಕ–ದೇಹಸಂಸ್ಕಾರಕ ರೀತಿಗಳು. ಯೋಗಕ್ಕೆ ಎಷ್ಟು ಮುಖಗಳಿದ್ದರೂ ಅವುಗಳಲ್ಲಿ ಒಂದೊಂದೇ ಎಂದೂ ಪೂರ್ಣವಲ್ಲ ಅದರಿಂದಲೇ ಶ್ರೀ ಅರವಿಂದರು "ಪೂರ್ಣಯೋಗ"ವನ್ನು ಬೋಧಿಸಿ, ಯೋಗಗಳ ಸಂಕುಚಿತ ಪ್ರತ್ಯೇಕತೆಯ ಅನುಸರಣವನ್ನು ಖಂಡಿಸಿದರು.

ನಿಯಮವು ಶ್ರದ್ಧಾ[೪]ದಾರ್ಢ್ಯದ ಸಾಧನ. ಶ್ರದ್ಧೆಯು ಆತ್ಮವಿಶ್ವಾಸ. ಆತ್ಮವು ಆರ್ಯಧರ್ಮಪ್ರದೀಪವಾದ ಭಾರತೀಯ ಜೀವನ್ಮುಕ್ತತೆ. ಜೀವನ್ಮುಕ್ತನಿಗೆ ಮಾತ್ರ–

**"ನಿಂದಂತು ನೀತಿನಿಪುಣಾ ಯದಿ ವಾ ಸ್ತುವಂತು**
**ಲಕ್ಷ್ಮೀಃ ಸ್ಥಿರಾ ಭವತು ಗಚ್ಛತು ವಾ ಯಥೇಚ್ಛಂ**
**ಅದ್ಯೈವ ವಾ ಮರಣಮಸ್ತು ಯುಗಾಂತರೇ ವಾ**
**ನ್ಯಾಯ್ಯಾತ್ ಪಥಃ ಪ್ರವಿಚಲಂತಿ ಪದಂ ನ ಧೀರಾಃ"**

ಎಂದು ಭಾವಿಸಿಕೊಂಡು ಬ್ರಹ್ಮಸಹಜ ಕರ್ತವ್ಯನಿಷ್ಠನಾಗಲು ಸಾಧ್ಯ. ಅಲ್ಪಸಂಖ್ಯಾತ ಸಂಬಂಧಗಳ ತ್ಯಾಗದಿಂದ ಜೀವನ್ಮುಕ್ತನು[೫] ಸರ್ವಸಂಬಂಧಗಳಲ್ಲಿ ಸಮಾನ ಮಗ್ನತೆಯನ್ನು

---

೪ Faith is the acceptance of ideals which are theoretically indemonstrable yet necessarily entailed by the indubitable reality of freedom. For Kant the Summum Bonum, God and immmortality are the chief-articles of faith or "Practical" belief. It is the nonrational belief in objects encountered in action.
-O.F.K.

೫ One who has attained salvation
While in this present life: all
but a remainder of 'Prarabdha Karma"
is accumulated in virtue of the person's
having gained "Jnana" (insight) -K.F.L

ಸಾಧಿಸಿಕೊಂಡಿರುತ್ತಾನೆ. "ಸರ್ವ ಶರ್ವಃ ಶಿವಃ ಸ್ಥಾಣುಃ" ಮತ್ತು "ವಿಶ್ವಂ ವಿಷ್ಣುಃ" ಜೀವನ್ಮುಕ್ತಿಯು ಮಹಾಯೋಧಯೋಗ, ಮಹಾವೀರಯೋಗ–ಜಗನ್ನಿಂದಕನಾದ ನಿಷ್ಕ್ರಿಯನ ಯೋಗವಲ್ಲ, ನಿಷ್ಪ್ರೇರಕನ ಜೀವಚ್ಛವತ್ವವಲ್ಲ. ಮುಕ್ತನಿಗೆ ಯಾವ ಕರ್ಮದಿಂದಲೂ ಫಲಬೋಗದ ಬಂಧನವುಂಟಾಗದು. ಏಕೆಂದರೆ ಅವನ ನಿತ್ಯದ ಜಾಗ್ರತಿಯು "ನಾಹಂಭೋಗೀ" ಎಂಬುದಾಗಿರುತ್ತದೆ; ಕರ್ತೃತ್ವ – ಭೋಕ್ತೃತ್ವಗಳು ಅವನ ದೇಹಾತ್ಮಭಾವರಹಿತತೆಯ ದೆಸೆಯಿಂದ ಅವನ ವಿಶ್ವಾತ್ಮಕತೆಗೆ (ಬ್ರಹ್ಮಕ್ಕೆ) ಬಿಟ್ಟು ಕೊಟ್ಟಂಥವುಗಳಾಗಿರುತ್ತವೆ. ಬ್ರಹ್ಮಭಾವವೆಂಬುದು ಬೀಸುವ ಹೆಗ್ಗಾಳಿಯಂತೆ, ಹರಿಯುವ ಮಹಾನದಿಯಂತೆ ನಿತ್ಯನಿರ್ಮಲ; ಹಾಗೇ ಅದು ನಿತ್ಯನಿರ್ಬಂಧ, ನಿತ್ಯಾವಿರುದ್ಧ, ವಿಶ್ವನ್ಯಾಯಾನುರುದ್ಧ, ವಿಶ್ವವ್ಯಾಪಕ ಮತ್ತು ಇಚ್ಛಾಮಾತ್ರದಿಂದ ಭಾರತ ಭಾಗ್ಯವಿಧಾಯಕ – ತನ್ಮೂಲಕ ಜಗದ್ಧಿತ ಸಾಧಕ. ವಿಶ್ವ ನ್ಯಾಯವನ್ನು ಬೆಂಬಲಿಸುವ ಭಾರತವೇ ನಿಜವಾದ ಭಾರತ. ಭಾರತದ ರಾಷ್ಟ್ರೀಯತೆ ಎಂದೂ ಸ್ವಾರ್ಥಕ್ಕಾಗಿ ಪರದೇಶಾಕ್ರಾಮಕವಾದುದಲ್ಲ, ಪರದೇಶ ಪೀಡಕವಾದುದಲ್ಲ. ಪರದೇಶಗಳು ಭಾರತದಲ್ಲಿ ಲೀನವಾದರೆ ಅವು ಭಾರತೀಯ ಸುಖದುಃಖ ಸಮಭಾಗಿಗಳಾಗುವಂತೆಯೇ ನಮ್ಮ ರಾಷ್ಟ್ರೀಯತೆಯು ನೋಡಿಕೊಳ್ಳುತ್ತದೆ. ಅಹಿಂದುಗಳು ಹಿಂದುನಾಗರಿಕತೆಯಲ್ಲಿ ಸಮನ್ವಿತ ಅಂಗಗಳಾಗುವಂತೆ ಯೋಜಿಸಬೇಕೆಂಬ (Indianisation) ಭಾರತೀಕರಣವು ಸಂಘಟನೆಗಿಲ್ಲಿ ಮಹಾಮಂತ್ರ. ಹಾಗೇ ಹಿಂದುಗಳೆಲ್ಲರೂ ಬ್ರಾಹ್ಮಣೀಕೃತರಾಗುತ್ತ ಹೋಗುವುದೇ ಇಲ್ಲಿಯ ಪ್ರಗತಿ ಸೂತ್ರ. ಪೂರ್ವೋಕ್ತ ಲಕ್ಷಣದ ಆತ್ಮಗುಣ ಸಹಜ ಆಚಾರವುಳ್ಳ ಭಾರತೀಯ ಮಾತ್ರ ಬ್ರಾಹ್ಮಣ.

ಆದರ್ಶದ (ಚರಮಮೌಲ್ಯದ, ಪುರುಷಾರ್ಥದ) ವ್ಯಾಪಕತೆ ಹೆಚ್ಚಿದಷ್ಟೂ ಅದರ ಕಕ್ಷೆಯಲ್ಲಿ ಬರುವ ಜನರಸಂಖ್ಯೆ ಹೆಚ್ಚಾಗುವುದೆಂಬುದಕ್ಕೆ "greatest good of the largest majority ಅತಿ ಬಹುಸಂಖ್ಯಾತರ ಅತಿಹೆಚ್ಚಿನ ಒಳಿತು" ಎಂಬ ಪ್ರಜಾಪ್ರಭುತ್ವಾದರ್ಶಕ್ಕಿಂತಲೂ ಗಾಂಧಿಯವರ "ಸರ್ವೋದಯ" ಎಂಬ ಆದರ್ಶವು ಹೆಚ್ಚು ವ್ಯಾಪಕವೂ ಸರ್ವಾಕರ್ಷಕವೂ ಆಗಿದೆ. ಅದರ ಅಸ್ಪಷ್ಟತೆಯನ್ನು ನೆಹರು ಅವರು "ಸಮಾಜವಾದೀಯ ಸಮಾಜ ರಚನೆ" ಎಂದು ವ್ಯಾಖ್ಯಾನಿಸಿ ತೊಡೆದು ಹಾಕಿದರು. ಧರ್ಮಾರ್ಥ ಕಾಮ ಮೋಕ್ಷಗಳನ್ನು ಸಾಧಿಸಲು ಸರ್ವರಿಗೂ ಸಮಾನಾವಕಾಶವಿರುವಂಥ ಸನ್ನಿವೇಶವನ್ನು ತರುವುದಲ್ಲದೆ, ಅದಕ್ಕೆ ಬೇಕಾದ ಸಾಮರ್ಥ್ಯದ ತಾರತಮ್ಯವನ್ನು ಪ್ರಜೆಗಳಲ್ಲಿ ಕಡಿಮೆಮಾಡಲು ತಕ್ಕ ಸರಕಾರಿ ಧೋರಣೆ, ವಿಧಿ ಮತ್ತು ಪ್ರಶಾಸನ ಕ್ರಮಗಳನ್ನು ಯೋಜಿಸಿ ಜಾರಿಗೆ ತರುವುದು "ಪ್ರಜಾಪ್ರಭುತ್ವೀನ ಸಮಾಜವಾದ" ಎನ್ನಿಸಿತು. ಅದಕ್ಕೆ "ಭಾರತೀಯ" ಎಂಬುದನ್ನು ಕೆಲವರು ಸೇರಿಸಿದರು. "ಭಾರತೀಯ ಸಮಾಜವಾದ" ಅದರ ಹ್ರಸ್ವರೂಪ. ಭಾರತದಲ್ಲಿ ಇಂದಿರುವ ಸಾಂಸ್ಕೃತಿಕ, ವೈಜ್ಞಾನಿಕ ಮತ್ತು ಆರ್ಥಿಕ ಪರಿಸ್ಥಿತಿಗನುಗುಣವಾಗಿ ವಿಧಿ ಹಾಗೂ ಪ್ರಶಾಸನ ಕ್ರಮಗಳನ್ನು ತರುವುದರಲ್ಲೇ ಭಾರತೀಯತೆ ಇದೆ. ಸರ್ವೋದಯಕ್ಕಾಗಿ ದುಡಿಯುವುದು ಮೋಕ್ಷಕ್ಕೆ ಸಾಧನವಾಗುವುದು ಅಥವಾ ಜೀವನ್ಮುಕ್ತನ ನಿವೃತ್ತಿಕರ್ಮವೂ ಆಗುವುದು. ಅಂಥ ದುಡಿತಕ್ಕೆ ಸಾಮೂಹಿಕ ಸಂಘಟನೆ ಅನಿವಾರ್ಯ. ಗಾಂಧಿಯವರು ಮಾಡ ಹೊರಟಿದ್ದು ಸಂಸಾರಿಗಳ ನೇತೃತ್ವವುಳ್ಳ ಸಂಘಟನೆಯನ್ನು;

ಆದ್ದರಿಂದ ಅದು ಬೇಗ ಜಯಪಡೆಯಲಿಲ್ಲ. "ಆನಂದ ಮಠ"ದಲ್ಲಿ ಕಲ್ಪಿಸಿದ್ದು ಕೇವಲ ಸಂನ್ಯಾಸಿಗಳ ಸಂಘಟನೆಯನ್ನು; ಆದ್ದರಿಂದ ಅದು ಸಾಧ್ಯವಾಗಲಿಲ್ಲ. ಈ ಎರಡು ಕ್ರಮಗಳ ಸಂಯೋಜನೆಯು ಸಫಲವಾದೀತು. ಸದ್ಯದ ಹಿಂದು ಮಠದ ಸಂನ್ಯಾಸಿ ಇಲ್ಲಿ ಅಭಿಪ್ರೇತನಲ್ಲ; ವಿವೇಕಾನಂದರಂಥ ಸಂನ್ಯಾಸಿಗಳು ಅಭಿಪ್ರೇತರು, ಗಾಂಧಿಯವರಂಥ ಸಂಸಾರಿಗಳು ಸೂಚಿತರು. ಅಂಥವರ ಸ್ಥಾಯಿಯಾದ ನೇತೃತ್ವದಲ್ಲಿ ಅನುಯಾಯಿಗಳು ತರಬೇತಾಗುವುದು ಸಂಘಟನೆಯ ಚಿರಸ್ಥಾಯಿತ್ವದ ಪ್ರಥಮಸೂತ್ರ. ಭಾರತೀಯ ಸಂಘಟನೆಗೆ ಸದ್ಗುರು ಅಗತ್ಯ– ಇಹಕ್ಕಾಗಲಿ, ಪರಕ್ಕಾಗಲಿ; ಅವನೇ ನೇತಾರ (ನೇತಾಜಿ). ಅಂಥ ಬ್ರಾಹ್ಮಶಕ್ತಿಯ ಸೂಚನೆಯಂತೆ ಅನುಯಾಯಿಗಳ ಕ್ಷಾತ್ರಶಕ್ತಿಯು ಕೆಲಸ ಮಾಡಲು ಕಂಕಣಬದ್ಧವಾಗುವುದು ಸಂಘಟಿತತೆಯ ಸುಸ್ವರೂಪ.

ಶಾರೀರಿಕ ಶಿಕ್ಷಣದಲ್ಲಿ ಯೋಗಾಸನಗಳ ಜೊತೆಗೆ ಗರಡಿ ತರಬೇತೂ ಜುಜುತ್ಸೂಪ ಶಿಕ್ಷಣವೂ ಸೇರಬೇಕು. ಸ್ತ್ರೀಪುರುಷರ ಪ್ರತ್ಯೇಕ ಗುಂಪುಗಳು ತರಬೇತು ಹೊಂದುವಂತಾಗಬೇಕು. ಕರ್ಮಕೌಶಲಕ್ಕೂ (Technical skill) ಅಲ್ಲಿ ಸ್ಥಾನವಿರಬೇಕು– ಔಪಯೋಗಿಕ ವಸ್ತುಗಳ ನಿರ್ಮಾಣಕ್ಕೂ ಅಂಥ ಕೇಂದ್ರಗಳು ಶಾಖೆಗಳನ್ನು ತೆರೆದು ವೇಳಾಪತ್ರಿಕೆಯನ್ನು ಸಿದ್ಧಮಾಡಿ ಕಾರ್ಯಪ್ರವೃತ್ತವಾಗಬೇಕು. ಈ ದೈಹಿಕ ಕಾರ್ಯಗಳೆಲ್ಲವೂ, ಒಂದೇ ಸಂಸ್ಥೆಯ ಅಧೀನವಾಗಿ ವೇಳಾಪತ್ರಿಕೆಯಂತೆ ನಡೆಯಬೇಕಲ್ಲದೆ ಬೇರೆ ಬೇರೆ ಸಂಸ್ಥೆಗಳ ಅಧೀನವಾಗಿ ಅಲ್ಲ. ಸಂಸ್ಥಾಭೇದವು ಕರ್ಮವಿಘಟನೆ ಹಾಗೂ ಬುದ್ಧಿ ಅಥವಾ ಮನೋವಿಘಟನೆಗೆ ಕಾರಣವಾಗುತ್ತದೆ. ಹಾಗಾಗದಂತೆ ನೋಡಿಕೊಳ್ಳುವುದೇ ಸಮಗ್ರಯೋಗದ ರಹಸ್ಯ. ಶಾರೀರಿಕ ಶಿಕ್ಷಣದ ಸಂಸ್ಥೆಗೂ ಮಾನಸಿಕ ಶಿಕ್ಷಣದ ಸಂಸ್ಥೆಗೂ ಅತ್ಯಂತ ನಿಕಟ ಸಂಪರ್ಕವಿರಬೇಕು ಮತ್ತು ಅವುಗಳ ವೇಳಾಪತ್ರಿಕೆಗಳು ಪರಸ್ಪರ ಪೂರಕವಾಗಿರಬೇಕು. ೨೪ ತಾಸುಗಳಲ್ಲಿ ೬ ತಾಸುಗಳು ನಿದ್ರೆಗೆ ಹೋದರೆ ೬ ತಾಸುಗಳು ಮಾನಸಿಕ ಶಿಕ್ಷಣಕ್ಕೂ ಮತ್ತಾರು ತಾಸುಗಳು ಮೇಲೆ ಹೇಳಿದಂಥ ಶಾರೀರಿಕ ಶಿಕ್ಷಣಕ್ಕೂ ಮೀಸಲಾಗಬೇಕು. ಉಳಿದ ಆರು ತಾಸುಗಳನ್ನು ವೈಯಕ್ತಿಕವಾದ ಖಾಸಗಿ ಕೆಲಸಕ್ಕೂ ಮನೋರಂಜನೆಗೂ ಮೀಸಲು. ಮನೋರಂಜನೆಗೆ ದಿನದಲ್ಲಿ ೧॥ ತಾಸು ಸಾಕು – ಆಟ ಬೇಕಾದವರಿಗೆ ಆಟ, ಕಲೆ ಸಾಹಿತ್ಯಾದಿಗಳು ಬೇಕಾದವರಿಗೆ ಕಲೆಸಾಹಿತ್ಯಾದಿಗಳು. ಬೌದ್ಧಿಕ ಅಥವಾ ಮಾನಸಿಕ ಶಿಕ್ಷಣದಲ್ಲಿ ಶಾಸ್ತ್ರಜ್ಞಾನ– ವ್ಯವಹಾರ ಜ್ಞಾನಗಳ ಸಮನ್ವಿತ ಪಾಠಗಳು ದೊರಕಬೇಕು. ಒಲವಿನ ಪರೀಕ್ಷೆಯು ಕರ್ಮಕೌಶಲ್ಯಕ್ಕೂ ಶಾಸ್ತ್ರಾಭ್ಯಾಸಕ್ಕೂ ಅವಶ್ಯಕ; ಅನ್ಯಥಾ–ಸ್ಥಳ, ಕಾಲ, ಸಾಧನ, ವ್ಯಕ್ತಿ, ಧನ, ಶಕ್ತಿಗಳ ಅಪವ್ಯಯವಾಗುತ್ತದೆ. ಸುಸಂಗ್ರಹ – ದುಃಸಂಗ್ರಹಗಳ ವಿವೇಕದಂತೆಯೇ ಸುವ್ಯಯ–ದುರ್ವ್ಯಯಗಳ ವಿವೇಕವೂ ಸಂಘಟಿತ ಕಾರ್ಯಗಳಿಗೆ ಅತ್ಯಗತ್ಯ.

ವ್ಯಕ್ತಿಗಳ ನೈಸರ್ಗಿಕ ಶಕ್ತಿಗಳಲ್ಲಿ ತಾರತಮ್ಯವಿರುವುದು ಸ್ಪಷ್ಟ. ಒಂದು ವ್ಯಕ್ತಿಗೆ ೧೦ ಶಕ್ತಿಗಳಿದ್ದರೆ (Capacities) ಅವುಗಳೊಳಗೇ ತಾರತಮ್ಯವಿರಬಹುದು; ಹಾಗೇ ಅವುಗಳಷ್ಟಕ್ಕೂ ಇತರ ವ್ಯಕ್ತಿಯ ೧೦ ಶಕ್ತಿಗಳೆಲ್ಲವುಗಳಿಗೂ ಬಿಡಿಯಾಗಿಯೋ ಇಡಿಯಾಗಿಯೋ ತಾರತಮ್ಯವಿರಬಹುದು. ಅಶಕ್ತಿಯೂ ಶಕ್ತಿಯೂ ಪರಿಮಾಣತಃ ಸಾಪೇಕ್ಷ ಪದಾರ್ಥಗಳು.

ಒಬ್ಬನು ಅಶಕ್ತಿಯನ್ನೂ ಶಕ್ತಿಯನ್ನಾಗಿ ಆಪತ್ಕಾಲದಲ್ಲಾದರೂ ಬಳಸಿಕೊಳ್ಳುವಂತೆ ತರಬೇತು ಹೊಂದುವುದೇ ನಿಜವಾದ ತರಬೇತು – ಅವನ ಶಕ್ತಿ ಪ್ರಕಾರಗಳಲ್ಲಿ ಭೇದವಿದ್ದಾಗ. ಎಲ್ಲರೂ ಎಲ್ಲವನ್ನೂ ಒಂದೇ ಮಟ್ಟದಲ್ಲಿ, ಒಂದೇ ಅವಧಿಯಲ್ಲಿ, ಒಂದೇ ವೇಗದಲ್ಲಿ, ಒಂದೇ ಸಾಧನದಿಂದ ಮತ್ತು ಒಂದೇ ರೀತಿಯಿಂದ ಮಾಡಲಾರರು. ಮಟ್ಟ (ಗುಣಮಾನ), ಅವಧಿ, ವೇಗ, ಸಾಧನ ಮತು ರೀತಿಗಳೆಲ್ಲವನ್ನೂ ಲೆಕ್ಕಕ್ಕೆ ತೆಗೆದುಕೊಂಡು ಒಬ್ಬೊಬ್ಬನ ಪ್ರಧಾನ ಕರ್ಮಕರ್ತೃತ್ವವನ್ನು ಗುರುತಿಸಿ ಅವನಿಗೆ ಅದರಲ್ಲೇ ಹೆಚ್ಚು ತರಬೇತೂ ಉದ್ಯೋಗವೂ ಸಿಗುವಂತಾಗುವುದು ಸಂಘಟಿತ ಜೀವನದ ಆರೋಗ್ಯಸೂತ್ರ. ಪ್ರತಿಯೊಂದು ಸಂಸ್ಥೆಯೂ ಒಂದು ಕುಟುಂಬದಂತೆ ಸಾಗುವ ಆವರಣವಿರುವಂತೆ ನೋಡಿಕೊಳ್ಳುವುದು ಉದ್ದೇಶ ಸಾಧನೆಗೆ ಅತ್ಯಂತ ಅಗತ್ಯವಾದ ಉಪಾಯ. ಸಂಘ–ಸಂಸ್ಥೆಗಳ ಕೌಟುಂಬಿಕತೆಯೊಂದೇ ಜನರನ್ನು ಶೋಷಣ ವಿಮುಖರನ್ನಾಗಿ ಮಾಡಬಲ್ಲದು. ಭಾರತದ ಕುಟುಂಬಕ್ಕೆ ಶ್ರೀರಾಮನ ಗಾರ್ಹಸ್ಥ್ಯವು ಮಾದರಿ. ಅವನ ರಾಜ್ಯವು ಸಂಘಟಿತ ಸಾಂಸ್ಕೃತಿಕ ರಾಷ್ಟ್ರೀಯ ಕುಟುಂಬಕ್ಕೆ ಮಾದರಿ.



# ೨೪

# ಸಾಂಸ್ಕೃತಿಕ ರೋಗನಿದಾನ ಮತ್ತು ಪ್ರತೀಕಾರ

Pleasure principle ಐಷಾರಾಮಗ್ರಹ ಮತ್ತು Reality principle ವಸ್ತುಸತ್ಯೋನ್ಮುಖತೆ ಎಂಬ ಎರಡರಲ್ಲಿ ಒಂದನ್ನು ಮನುಷ್ಯ ಆರಾಧಿಸುತ್ತಾನೆ ಎಂಬುದನ್ನು ಪ್ರಯೋಗ ಮನಃಶಾಸ್ತ್ರವು ಸಿದ್ಧ ಮಾಡಿದೆ. ಐಷಾರಾಮಿಗಳು ಬಾಲಿಶರು; ಅವರಿಗೆ ಜೀವನದ ಕಾಲಾಂತರಾನುಭವ್ಯವಾದ ಬೆಲೆಗಳ ಕಡೆಗೆ ಗಮನವೇ ಇರದು. ತಾತ್ಕಾಲಿಕ ಅಪ್ರಿಯ ಸಂನಿವೇಶವನ್ನೂ ಅವರು ಎದುರಿಸಲಾರರು. ಅಂಥವರು ಪಲಾಯನವಾದಿಗಳು, ಗುಪ್ತಿಪ್ರಿಯರು, Stolen fruits are sweet-undeserved rewards are preferrable-ಕದ್ದು ತಿಂದ ಹಣ್ಣು ಬಲು ರುಚಿ, ಅನರ್ಹತೆ ಇದ್ದೂ ಬಂದ ಬಹುಮಾನವು ಹೆಚ್ಚು ಅಪೇಕ್ಷಣೀಯ ಎಂಬುದು ಐಷಾರಾಮ ಗ್ರಹ ಹಿಡಿದ ಸುಖಕ್ರಿಮಿಗಳಿಗೆ ಸಹಜ. Self deception and wishful thinking ಆತ್ಮವಂಚನೆ ಮತ್ತು ಹಗಲುಗನಸು ಕಾಣುವುದು ಅವರಿಗೆ ಸಹಜ. ಕೆಲವೊಮ್ಮೆ jealousy complex ಮಾತ್ಸರ್ಯಗ್ರಹವೂ ಅವರನ್ನು ಹಿಡಿದುಕೊಳ್ಳುವುದುಂಟು. ಅನಂತರ Sadism ಸೇಡಿನ ಮನೋವೃತ್ತಿ ಬೆಳೆದು ಅಸಾಮಾಜಿಕ ಕೃತ್ಯ ಮಾಡುವುದರಲ್ಲಿ ಹೆಮ್ಮೆಪಡುವ ವಿಕಟಾಟ್ಟಹಾಸಶೀಲ ಅವರಲ್ಲಿ ಮನೆ ಮಾಡಿಕೊಳ್ಳಬಹುದು. ಆಮೇಲೆ Surrogation ಹಿಂದೆ ಪ್ರಿಯವಾಗಿದ್ದವುಗಳನ್ನು ಬಿಟ್ಟು ತದ್ವಿರುದ್ಧ ಪ್ರಕೃತಿಯವುಗಳನ್ನು ಮೆಚ್ಚುವ ಹಠವು ಅವರಲ್ಲಿ ಉದಯಿಸುತ್ತದೆ. ಕೊನೆಯಲ್ಲಿ Paranoia ಕ್ರಮಬದ್ಧವಾದ ಮತಿಭ್ರಮೆ ತಲೆದೋರುವುದು ಸಹಜವಾಗಿ ಬಿಡುತ್ತದೆ. ಭಾರತದ ವಿದ್ಯಾವಂತರಲ್ಲಿ ಅನೇಕ ಜ್ಞಾನಲವ ದುರ್ವಿದಗ್ಧರು ಉಕ್ತ ಮನೋವ್ಯಾಧಿಗಳಿಗೆ ಪ್ರತಿದಿನವೂ ತುತ್ತಾಗುತ್ತಿದ್ದಾರೆ. ಸಮಾಜದ್ವೇಷ ಅಥವಾ ರಾಷ್ಟ್ರದ್ವೇಷ ಅವರಿಗೆ ವ್ಯಕ್ತಿಸ್ವಾತಂತ್ರ್ಯವೆಂದು ತೋರುತ್ತದೆ. ಈ ವಿಕೃತಮನಸ್ಕರಿಗೆ ಸ್ವದೇಶೀಯವಾದುದೆಲ್ಲವೂ ದ್ವೇಷ್ಯವಾಗಿರುತ್ತದೆ. ಇವರಿಗೆ Repression ದಮನವಲ್ಲ, Suppression ಮರ್ದನವೊಂದೇ ಕಣ್ಣುತೆರೆಯಿಸಿ Sublimation ಉದಾತ್ತೀಕರಣದ ಪಥಕ್ಕೆ ಒಯ್ದು ಮುಟ್ಟಿಸಬಲ್ಲದು. ಮರ್ದನಂ (ನಿರೋಧ) ಗುಣವರ್ಧನಂ. ಇದೇ ನಾಲ್ಕನೆಯದಾದ ದಂಡೋಪಾಯ ಅಥವಾ ಶಿಕ್ಷಣಾರ್ಥವಾದ ಶಿಕ್ಷೆ.

ದೈಹಿಕ ಶಿಕ್ಷೆಗಳೆಲ್ಲವೂ ಎಲ್ಲ ಸಂದರ್ಭಗಳಲ್ಲೂ ಎಲ್ಲರಿಗೂ ವರ್ಜ್ಯವೆಂಬ ಭ್ರಮೆಯನ್ನು ಒಂದು ರಾಷ್ಟ್ರ ಬೆಳೆಸಿಕೊಂಡರೆ ಅದು ಕೆಲವೇ ಕಾಲದಲ್ಲಿ ದಿವಾಳಿಯಾಗುವುದು ಸ್ವತಃಸಿದ್ಧ.

ನಮ್ಮ ರಾಷ್ಟ್ರದ ಅಧಿಕೃತ ಧುರೀಣರನೇಕರಿಗೆ ಇಂಥ ಮತಿಭ್ರಮೆಯುಂಟಾಗಲು ಅವರಿಗೆ ಐಷಾರಾಮಗ್ರಹ ಹಿಡಿದಿರುವುದೇ ಕಾರಣ. ನಿಜವಾಗಿ ನೋಡಿದರೆ ಪಶ್ಚಾತ್ತಾಪ ಪಡದ ತಪ್ಪಿತಸ್ಥರಿಗೆ ದೇಹಶಿಕ್ಷೆ ಕೊಡುವುದೇ ನಿಜವಾದ ಶಿಕ್ಷೆ. ಅದರಿಂದ ಆಗುವ ಸತ್‌ಪರಿಣಾಮ ದುಡ್ಡಿನ ದಂಡದಿಂದಾಗದು. ದುಡ್ಡಿನ ದಂಡವು ಧನಿಕ–ದರಿದ್ರಭೇದವನ್ನವಲಂಬಿಸುವುದರಿಂದ ಚುನಾವಣೆಯ ಇಡುಗಂಟಿನಂತೆಯೇ ವರ್ಜ್ಯ. Right to work ದುಡಿಯುವ ಹಕ್ಕು ಉದ್ಯೋಗ ಒದಗಿಸುವ ಜವಾಬ್ದಾರಿಯನ್ನು ಸರಕಾರಕ್ಕೆ ಮತ್ತು ಸಮಾಜಕ್ಕೆ ಅಂಟಿಸುವುದರಷ್ಟೇ ನ್ಯಾಯವು ಅಂಥ ದೇಹದಂಡನೆಯ (ದುಡಿತದ) ಶಿಕ್ಷೆಯಲ್ಲಿಯೂ ಇದೆ. ಕೆಲ ಮಾನಸಿಕ (ನರ)ರೋಗಗಳಿಗೆ ದೇಹ ಶಿಕ್ಷೆಯ ಅಭಾವವೇ ಕಾರಣವಾಗುತ್ತದೆ. ಅಳುವುದು Purging of sorrow ಮನಸ್ಸನ್ನು ಹಗುರಗೊಳಿಸುವಂತೆ, ದೇಹಶಿಕ್ಷೆಯು ಧರ್ಮಬೀರುತ್ವವನ್ನು ಅಗತ್ಯವಾಗಿ ಸಾಮಾನ್ಯ ಅಸಂಸ್ಕೃತರಲ್ಲಿ ಮೊದಲು ಮೂಡಿಸಿ ಕ್ರಮಶಃ ಅವರಲ್ಲಿ ಧರ್ಮಪ್ರಿಯತೆಯನ್ನು ಹುಟ್ಟಿಸುತ್ತದೆ. ವಿಷಯಲಂಪಟರಾದ (ಐಷಾರಾಮಗ್ರಹ ಹಿಡಿದ) ಜನರಿಗೆ ಅದು ಅತ್ಯುಚಿತ. ಇಲ್ಲವಾದರೆ ಅವರು ಗುಂಡರೋ ದೀರ್ಘಕಾಲಿಕ ನರರೋಗಿಗಳೋ ಆಗಿ ಸಮಾಜಕ್ಕೂ ತಮಗೂ ಹಾನಿಕಾರಕರಾಗಿಯೇ ಉಳಿಯುತ್ತಾರೆ. ಮತಿಭ್ರಮೆ ಮೂರ್ಖಶಾಠ್ಯಕ್ಕೇರಿದಾಗ "ದಂಡೋ ದಶಗುಣೋ ಭವೇತ್" ಎಂಬುದು ಅಂಥ ಭ್ರಮಿಷ್ಠರ ಉದ್ಧಾರದ ಮೊದಲಿನ ಪರಿಣಾಮಕಾರಿಯಾದ ಕ್ರಮ. ಸತ್ಯಾಗ್ರಹದ ಸೋಗನ್ನು ಗುಂಪಾಗಿ ನಡೆಯಿಸುವ ದುರಾಗ್ರಹಿಗಳ ಕಾರ್ಯಕ್ಕೂ ಅದೇ ಮದ್ದು. ಅವರಿಗೆ ಮಹಾಜನರ ಸಂಮತಿ ಇರದಿರುವುದೇ ಅವರ ಶಾಠ್ಯಕ್ಕೆ ಸಾಕ್ಷಿ. ಆಧುನಿಕ ವ್ಯಕ್ತಿಸ್ವಾತಂತ್ರ್ಯದ ಹೆಸರಿನಲ್ಲಿ ಸ್ವಾಚ್ಛಂದ್ಯವನ್ನು ಸಮರ್ಥಿಸಿಕೊಳ್ಳುವವರು ರಾಷ್ಟ್ರ ದ್ರೋಹಿಗಳು. ಸಮಾಜದ ಮನೋವಿಕಾರಕ್ಕೆ ಕಾರಣವಾಗುವ ವರ್ತನೆಯು ಅಭಿಪ್ರಾಯ ಸ್ವಾತಂತ್ರ್ಯದಂತೆ ಗ್ರಾಹ್ಯವಾದ ಸ್ವಾತಂತ್ರ್ಯವಲ್ಲ. ಅಭಿಪ್ರಾಯ ಸ್ವಾತಂತ್ರ್ಯಕ್ಕೂ ಗಡಿಮಿತಿ ಇರುವುದು ಅನುಭವವೇದ್ಯ. ಏಕೆಂದರೆ "ಖುಶಿ"ಯನ್ನು ಅಭಿಪ್ರಾಯವೆಂದು ಸಾಧಿಸುವವರೂ ಇದ್ದಾರೆ. ಅವರಿಗೆ ಅಹಿಂಸೆಯೇ ಸತ್ಯವೆಂಬುದರ ಅರ್ಥಗೊತ್ತಿಲ್ಲ. ಹಿಂದು ಸಂಸ್ಕೃತಿಯ ಉನ್ನತ ಆದರ್ಶ ವರ್ತನೆಗೆ ಭಂಗ ಉಂಟು ಮಾಡುವ ಸ್ವಾತಂತ್ರ್ಯಗಳು ಭಾರತೀಯವೆಂತಾದಾವು? ಒಂದು ನಾಗರಿಕತೆಯಲ್ಲಿ ನ್ಯಾಯಾಧೀಶರೂ ಕೋರ್ಟುಗಳೂ ಇರುವುದು ವ್ಯಕ್ತಿ ಸ್ವಾತಂತ್ರ್ಯದ ಸ್ವಾಚ್ಛಂದ್ಯಕ್ಕೆ ತಡೆಯೊಡ್ಡುವುದಕ್ಕಾಗಿಯೇ ಅಲ್ಲವೇ? ಅಶ್ಲೀಲವು ಸಮಾಜಮನೋವಿಕಾರಕವಾಗುವುದು ಆಯಾ ಸಮಾಜದ (ರಾಷ್ಟ್ರದ) ಸಮುದಾಚಾರದ ನಿಯಮಗಳಿಗೆ ಅಧೀನ. ಖೋಸ್ಲಾ ಸಮಿತಿಗಿದು ಗೊತ್ತಿಲ್ಲ. ಏಕೆ? ಖೋಸ್ಲಾ ಮಹಾಶಯ ಭಾರತೀಯತ್ವದ ಸಂಸ್ಕಾರವನ್ನು ಪಡೆದವನಲ್ಲ. ಅಸಂಸ್ಕೃತರಿಂದು ಶಾಸಕರಾಗಬಲ್ಲರು, ನ್ಯಾಯಾಧೀಶರೂ ಆಗಬಲ್ಲರು! ಅದರಿಂದಲೇ ಭಾರತವಿನ್ನೂ ಭಾರತವಾಗಿಲ್ಲ. ಬ್ರಿಟಿಷರಿಗಿಂತಲೂ ಹೆಚ್ಚಿನ ಅಭಾರತೀಕರಣವನ್ನು ಕಾಂಗ್ರೆಸ್ಸು ಮಾಡಿತು. ಅದರಲ್ಲಿಯ ಕೆಲವೇ ಜನರಿಗೀಗ ಅದರ ದುಷ್ಪರಿಣಾಮ ಹೊಳೆಯುತ್ತಿದೆ. ಯಾಂತ್ರೀಕರಣದ ಸಾಂದರ್ಭಿಕತೆ–ಅಸಾಂದರ್ಭಿಕತೆಗಳನ್ನು ಅರಿಯದ ಸುಧಾರಕರ ಕೀಲೋತ್ಪಾಟಿವಾನರತೆಯ ಪರಿಣಾಮ ಅಲ್ಲಿ ಇಲ್ಲಿ ಆಗೀಗ ಕಂಡುಬರಲಾರಂಭಿಸಿದೆ. ವೇಳಾನಿಯಮವೊಂದನ್ನು

ಪಾಲಿಸದ ಶಿಸ್ತಿನ ಪರೋಪದೇಶಪಂಡಿತರ ಆಧುನಿಕತೆ ಈ ಬಗೆಯದೇ ಆಗಿದೆ. ವಿಜ್ಞಾನದಂತೆ ಆಧುನಿಕತೆ–ಸ್ವಾತಂತ್ರ್ಯಗಳೂ ಹಿಂದುಗಳಲ್ಲಿ ಹಲವರ ಮತಿಭ್ರಮೆಗೆ ಕಾರಣವಾಗಿದೆ. ನಿಜ ವಿಜ್ಞಾನ, ನಿಜ ಆಧುನಿಕತೆ, ನಿಜ ಸ್ವಾತಂತ್ರ್ಯಗಳನ್ನು ಅಂಥವರಿಗೆ ಸಕಾಲದಲ್ಲಿ ಚತುರೋಪಾಯಗಳಿಂದ ಪರಿಚಯಮಾಡಿಕೊಡದಿದ್ದರೆ ಅವರು ಸಮಾಜ ಕಂಟಕರು (ಅರ್ಥಾತ್ ರಾಷ್ಟ್ರದ್ರೋಹಿಗಳು) ಎನ್ನಿಸದಿರರು. ನಾಗರಿಕತೆಯನ್ನೊಮ್ಮೆ ಕಸೆಕಟ್ಟಬಹುದಾದರೂ ಸಂಸ್ಕೃತಿಯನ್ನು ಹಾಸ್ಯಾಸ್ಪದವಾಗದಂತೆ ಹಾಗೇ ಕಸೆಕಟ್ಟಲು ಯಾರಿಂದಲೂ ಸಾಧ್ಯವಿಲ್ಲ.

ಸಂಯಮವೇ ಸೌಂದರ್ಯವೆಂಬುದು ನಮ್ಮ ಸಂಸ್ಕೃತಿ. ಅಸಂಯಮಿಗಳು ಅಸಂಸ್ಕೃತರು. ಸ್ವಾತಂತ್ರ್ಯವೆಂಬುದು ಸಂಯಮದಷ್ಟು ಸಾಂಸ್ಕೃತಿಕ ಮಹತ್ವವನ್ನಿಲ್ಲಿ ಪಡೆಯದಿರಲು ಸ್ವಾತಂತ್ರ್ಯವಿಲ್ಲಿ ಮೊದಲಿನಿಂದಲೂ ಅಗ್ಗವಾಗಿತ್ತು. ಬ್ರಿಟಿಷರ ಕಾಲದಲ್ಲಿ ಮಾತ್ರ ಅದು ಅಷ್ಟು ತುಟ್ಟಿಯಾಯಿತು; ಆಗ ಸಂಯಮವು ದಾಸ್ಯಕ್ಕಿಳಿಯಬೇಕಾಯ್ತು. ಈಗಲೂ ಪ್ರಾಮಾಣಿಕನಿಗೆ ಸ್ವಾತಂತ್ರ್ಯ ಬಹಳ ತುಟ್ಟಿ, ಅಪ್ರಾಮಾಣಿಕರಿಗೆ ಅಗ್ಗ. ಈ ಅವಸ್ಥೆಗೆ ಭಾರತೀಯ ಆಡಳಿತಕಲೆಯಲ್ಲಿ ನುರಿಯದ ಸರಕಾರಿ ಅಧಿಕಾರಿಗಳೂ ಮಂತ್ರಿಗಳೂ ನೌಕರರೇ ಕಾರಣ. ಜನರ ಅಸಂಸ್ಕಾರಕ್ಕಿಂದು ರಾಜಕೀಯರೂ ಸರಕಾರಿಗಳೂ ಕಾರಣರಲ್ಲದೆ ಇನ್ನಾರೂ ಮುಖ್ಯವಾಗಿ ಅಲ್ಲ. ಇವರಿಗೆ ಮೊದಲು ಭಾರತೀಕರಣದ ದೀಕ್ಷೆಯನ್ನು ಕೊಡುವುದಗತ್ಯ. ಹಿಂದು ವಿಶ್ವವಿದ್ಯಾಲಯ ಶಾಂತಿನಿಕೇತನಗಳಿಗಾಗದ ಕೆಲಸವಿದು. ರಾಮಕೃಷ್ಣ ಮಿಶನ್ನಿನವರಿಗೆ ಮಾತ್ರ ಸಾಧ್ಯ. ಅವರಿಗೆ ದೇಶದಾದ್ಯಂತವಾಗಿ ಪ್ರಾಚುರ್ಯ, ಪ್ರೋತ್ಸಾಹ, ಸಹಾಯುಗಳು ದೊರಕಬೇಕು. ಅವರು ಎಲ್ಲ ವಿಶ್ವವಿದ್ಯಾನಿಲಯುಗಳ ನೈತಿಕ ನಿಯಾಮಕರಾಗಬೇಕು. ಆಗ ಬಂಕಿಂಚಂದ್ರರ ಆತ್ಮಕ್ಕೆ ಸಂತೋಷವಾದೀತು, ರವೀಂದ್ರರಿಗೆ ಹರ್ಷವಾದೀತು, ಗಾಂಧಿಯವರಿಗೆ ಯಶಸ್ವಿಯಾದಂತೆನ್ನಿಸೀತು, ತಿಲಕರಿಗೆ ಕೃತಾರ್ಥರಾದಂತೆನ್ನಿಸೀತು, ಅವರ ದಿನಾಚರಣೆ ಮಾಡುವ ಸೋಗು ಮಾಯವಾದೀತು, ಭಾರತೀಯ ಬಾಳುವೆ ಸತ್ಯವೆನ್ನಿಸೀತು! ಇಲ್ಲವಾದರೆ, “Authority without mercy ceremonial without revernce and mourning without sorrow-what have I to do with these? – ದಯೆಯಿಲ್ಲದ ಪ್ರಾಧಿಕಾರಿ ಭಯಭಕ್ತಿಗಳಿಲ್ಲದ (ಧಾರ್ಮಿಕ) ಸಮಾರಂಭ, ದುಃಖವಿಲ್ಲದ ದುಃಖ ಸೂಚಕ ಸಭೆ.... ಇವುಗಳನ್ನು ಕಟ್ಟಿಕೊಂಡು ನಾನೇನು ಮಾಡಲಿ?” ಎಂದು ಕನ್‌ಫ್ಯೂಷಿಯಸ್ ಕೇಳಿದಂತೆ ನಾವೂ ಕೇಳಬೇಕಾದೀತು. ‘ಸರ್ವೋ ದಂಡಜಿತೋಲೋಕೋ ದುರ್ಲಭೋ ಹಿ ಶುಚಿರ್ನರಃ’ ಎಂಬ ಸ್ಥಿತಿಯು ಶಿಥಿಲ ಪ್ರಶಾಸನದ ಪರಿಣಾಮ. ಉಗ್ರದಂಡ ಹೇಗೋ ಶಿಥಿಲ ದಂಡ ಹಾಗೇ ರಾಷ್ಟ್ರಹತ್ಯಾಕಾರಿ. ಸಮದಂಡಕ್ಕೆ ‘ಯೋಗಃ ಕರ್ಮಸು ಕೌಶಲಂ’ ಅಗತ್ಯ. ಪಾತ್ರಾ ಪಾತ್ರವಿವೇಕ ಅವಶ್ಯಕ, ದೇಶ–ಕಾಲ– ಸಂದರ್ಭಗಳ ಜ್ಞಾನ ಅನಿವಾರ್ಯ. Delhi School of Administration–ದಿಲ್ಲಿಯ ಪ್ರಶಾಸನ ಶಾಲೆ ಅಥವಾ ಪ್ರಸ್ಥಾನವು ಉಕ್ತಸಂಸ್ಕಾರವನ್ನು ನಮ್ಮ ಆಡಳಿತಗಾರರಿಗೆ ಕೊಡಲು ಸಮರ್ಥವಾಗಿಲ್ಲ. ಅದಕ್ಕೆ ಧನುಷ್ಕೋಡಿ ಪ್ರಶಾಸನ ಆಶ್ರಮ ಸಿದ್ಧವಾಗುವುದು ಅಗತ್ಯ. “ವಿವೇಕದಿಂದ ಸಂದೇಹನಾಶ, ನೀತಿಯಿಂದ ದುಃಖನಾಶ, ನಿರ್ಧಾರದಿಂದ ಭಯನಾಶ” ಎಂಬ ಚೀನರ್ಷಿಯ ಮಾತಿಲ್ಲಿ ಸ್ಮರಣೀಯ. ರಾಷ್ಟ್ರೀಯತೆಯ ಬಗೆಗೆ ವಿವೇಕಯುಕ್ತವಾದ

ನಿರ್ಧಾರವಿಲ್ಲದ ಹೃದಯಾಂತರಾಳವು ಗಣ್ಯ ಅಧಿಕೃತ ಮುಖಂಡರಿಗಿರುವಾಗ ಅದೆಂತು ಸತ್ಯವಾಗಿ ಅನುಭವಕ್ಕೆ ಬಂದೀತು? Open-mindedness ತೆರೆದ ಮನದಲ್ಲಿಂದು ತೆರೆದ ಹಾಗೂ ತೆರಪಿದೆ. ಉನ್ಮೀಲಿತ ಮನ ಹೀಗೆ; ನಿಮೀಲಿತ ಮನವೋ? ಧೃತರಾಷ್ಟ್ರ, ರಾಷ್ಟ್ರಧರ. ಬೌದ್ಧ ಮತದ ಪ್ರಚಾರಕರು ಮೊದಲು ಜಪಾನಿನಲ್ಲಿ ಚೆನ್ನಾಗಿದ್ದರಂತೆ. ಆ ಮೇಲೆ ಅವರಿಗೆ ದೊರಕಿದ ಜಯದ ದೆಸೆಯಿಂದ ಸುಮಾರು ೧೬೦೩–೧೮೬೮ರ ಅವಧಿಯನ್ನು ತಲುಪುವಷ್ಟರಲ್ಲಿ ಅವರ ಪರಂಪರೆಯವರು ಅತ್ಯಸಂಸ್ಕೃತ ಮಟ್ಟಕ್ಕೆ ಇಳಿದರಂತೆ. ಸ್ವತಂತ್ರ ಭಾರತದ ಆಳರಸರ ಪರಂಪರೆ ಅದೇ ದಾರಿಯನ್ನು ಹಿಡಿಯಿತು. ಧರೆ ಬೀಜವನ್ನು ನುಂಗಿತು, ಬೇಲಿ ಹೊಲವನ್ನು ಮೇದಿತು!

ಶೀಖ ಮತದಲ್ಲಿ "The Guru merged his personality in the body of the nation – ಗುರುವು ತನ್ನ ವ್ಯಕ್ತಿತ್ವವನ್ನು ರಾಷ್ಟ್ರದಲ್ಲಿ ಲೀನಗೊಳಿಸಿದನು" ಎಂದಿದೆ. ಇದು ದೇವರ ಭಕ್ತಪರಾಧೀನತೆಗೆ ಸರಿಸಮ. "ಸಂಘದಲ್ಲಿ ಗುರುವನ್ನು ಹುಡುಕಿದರೆ ಸಿಗುತ್ತಾನೆ" ಎಂಬುದು "ಸಭೆಯಲ್ಲಿ ದೇವರಿದ್ದಾನೆ" ಎಂಬುದಕ್ಕೆ ಸದೃಶವಾದುದು. ರಾಷ್ಟ್ರವು ಒಂದು ಪ್ರಜಾಸಂಘ. ಸಂಘಶಕ್ತಿಯ ವೃದ್ಧಿಗೆ ವ್ಯಕ್ತಿಶಕ್ತಿಯನ್ನು ಧಾರೆಯೆರೆಯುವುದು ರಾಷ್ಟ್ರೀಯ ಮತ. ವ್ಯಕ್ತಿಗಳ ಭ್ರಾತೃತ್ವವು ಸಮಾನತಾಧಾರ; ಸಮಾನತೆಯು ಸ್ವಾತಂತ್ರ್ಯದ ಚಿರಸ್ಥಾಯಿತ್ವಕ್ಕೆ ಬೇಕಾದ ಪರಸ್ಪರ ಸ್ನೇಹ–ಸಹಕಾರಗಳ ಬುನಾದಿ. ಮಾನಸಾಮ್ಯವು ಸಮಾನತೆಯ ಅಂತಃಸೂತ್ರವಾಗಿರುವುದು ಕಾರ್ಯಪಾಲಿಕೆ–ನ್ಯಾಯಪಾಲಿಕೆಗಳನ್ನು ಹೊರತುಪಡಿಸಿದ ಶಾಸನಸಭೆಗೆ ಮೀಸಲಾದದ್ದು. ಸರ್ವಾನುಮತ ಬಹುಮತಗಳಲ್ಲಿಯ ನ್ಯಾಯಸೂತ್ರ. ಭಾರತೀಯ ಸಮಾಜದಲ್ಲಿರುವ ಪ್ರತಿನಿಧಿಗಳಿಗೂ ಮತದಾರರಿಗೂ ಶಾಸನಿಕವಾಗಿ ಅರ್ಥಮಾನದ ವೈಷಮ್ಯವು ಪರಿಹಾರ್ಯ; ಇತರ ಮಾನವೈಷಮ್ಯಗಳು ಶೈಕ್ಷಣಿಕವಾಗಿ ಪರಿಹಾರ್ಯ– ಎಂಬುದನ್ನಿಂದು ರಾಷ್ಟ್ರೀಯ ಅರಿತಿರುವುದಗತ್ಯ. ನ್ಯಾಯವಾದ ವೈಷಮ್ಯಗಳನ್ನು ಸರ್ವರೂ ಮನ್ನಿಸಬೇಕಾದದ್ದು–ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಹಾನೀತಿವಂತರ ಮುಂದೆ ಉಳಿದವರೆಲ್ಲರೂ ಮಕ್ಕಳು. ಅಂಥವರೇ ಸಂಘನಾಯಕತ್ವಕ್ಕೆ ಅರ್ಹರೆಂಬುದನ್ನು ತಿಳಿಯದವನಿಗೆ ರಾಷ್ಟ್ರೀಯ ವಿವೇಕವಿಲ್ಲ. ಧನಪೂಜೆ–ರಾಜಕೀಯ ಅಥವಾ ಸರಕಾರಿ ಅಧಿಕಾರಪೂಜೆಗಳೀಗ ರಾಷ್ಟ್ರಶೋಷಣೆಗೆ ಕಾರಣಗಳಾಗಿವೆ. ರಾಜಕಾರಣಿಗಳೂ ಸರಕಾರಗಳೂ ಪ್ರಜೆಗಳ ಸೇವಕರೆಂಬುದನ್ನು ಅವರಿಗೆ ಮನದಟ್ಟು ಮಾಡಿಕೊಡುವಂತೆ ವರ್ತಿಸುವ ಪ್ರಜಾಶಕ್ತಿಯೇ ಪ್ರಭುತ್ವ. ರಾಷ್ಟ್ರಪ್ರಭುತ್ವದ ಆತ್ಮಜ್ಞಾನವಿಲ್ಲದವನು ಪ್ರಜಾಪ್ರಭುತ್ವದಲ್ಲಿ ಹೊಣೆಗೇಡಿ; ಇಂಥ ಹೊಣೆಗೇಡಿತನದ ಪರಿಹಾರಪ್ರಯತ್ನವು ಸರ್ವಶಿಕ್ಷಣಾಲಯುಗಳಲ್ಲೂ ಪ್ರತಿಗಂಟೆಯಲ್ಲಿಯೂ ನಡೆಯಬೇಕು. ಅಲ್ಲಿ ಈಗ ನಡೆಯುತ್ತಿರುವುದು ಅಪ್ರಯತ್ನ ಅಥವಾ ದುಷ್ಪ್ರಯತ್ನ.

ಭಾರತೀಯ ಅನಧ್ಯಯನ ದಿನಗಳೇ ಸರ್ವಸಂಸ್ಥೆಗಳ ರಜಾ ದಿನಗಳಾಗುವುದು ಶೈಕ್ಷಣಿಕ ರಂಗದಲ್ಲಿ ಆಗಬೇಕಾದ ಮೊದಲ ಸುಧಾರಣೆ. ಕ್ರಿಸ್ತಶಕದ ಲೆಕ್ಕಾಚಾರವನ್ನು ಬಿಟ್ಟು ವಿಕ್ರಮಶಕವನ್ನು ವ್ಯವಹಾರಕ್ಕೆ ತರುವುದು ೨ನೆಯ ಸುಧಾರಣೆ. ಪಾಠ ಶಾಲೆಯ

ಗುರು–ಶಿಷ್ಯ ಸಂಬಂಧವನ್ನು ಪುನರಾರಂಭಿಸಲು ಪರಿಪತ್ರ ಹೊರಡಿಸುವುದು ೩ನೆಯ ಸುಧಾರಣೆ. ಬರವಣಿಗೆಗಿಂತ ವಾಗ್ವ್ಯವಹಾರಕ್ಕೆ ಹೆಚ್ಚಿನ ಗುರುತ್ವ ಕೊಡುವುದು ೪ನೆಯ ಸುಧಾರಣೆ. ವಾಗ್ವಿಸಂಗತಿಯು ಭ್ರಷ್ಟಾಚಾರದ ಬಲಿಷ್ಠ ಪ್ರೇರಕ. ವಾಕ್ಕೃತಿಗಳ ವಿಸಂಗತಿಯೇ ಭ್ರಷ್ಟಾಚಾರ. ಬಹಳ ಕಡೆ ವಕೀಲರೂ ನ್ಯಾಯಾಧೀಶರೂ ಪೋಲೀಸರೂ ಡಾಕ್ಟರರೂ ಸೈನಿಕರೂ ಉಚ್ಚಾಧಿಕಾರಿಗಳೂ ಉಚ್ಚಶಿಕ್ಷಕರೂ ಮಂತ್ರಿಗಳೂ ಭ್ರಷ್ಟಾಚಾರ ಪ್ರೇರಕರಾದಾಗ ಗುಮಾಸ್ತರ "ಧರ್ಮಶಾಲೆ ಕಾರಭಾರ" ನಡೆಯುವುದು ಸಹಜ. ಆಗ ರಾಜನಿದ್ದೂ ಅರಾಜಕವಾದ ರಾಜ್ಯದಲ್ಲಿರುವಂತೆ ಪರಸ್ಪರ ಅಪನಂಬಿಗೆಯೇ ಉತ್ಸರ್ಗನಿಯಮವಾಗುವುದು. "ನಂಬದಿರು ಈ ದೇಹ ನಿತ್ಯವಲ್ಲ" ಎಂದು ಹಳಬರು ಹಾಡಿದರೆ; ಈಗ "ನಂಬದಿರು ಜೊತೆಯವನ, ಕಳ್ಳನಾತ" ಎಂದು ಹೊಸಬರು ಹಾಡಬೇಕಾಗಿದೆ. ಅಪನಂಬಿಕೆಗಳ ಹಿಮಾಲಯೋಪಮ ರಾಶಿಯ ಮೇಲೆ ನಡೆಯುವ ರಾಷ್ಟ್ರದ ಸ್ವತಂತ್ರ ವ್ಯವಹಾರ ಎಷ್ಟು ವರ್ಷ ನಡೆದೀತು?

**ನಲಿನೀದಲಗತಜಲಮತಿತರಲಂ**
**ತದ್ವದ್ ರಾಷ್ಟ್ರಾರೋಗ್ಯಂ ಚಪಲಂ ।**
**ಅರಿಷಡ್ವರ್ಗ ನಿಮಗ್ನೈಃ ಕ್ರಿಯತೇ**
**ಪರಚಕ್ರಾಗಮ ಪಥವಿನ್ಯಾಸಂ ॥**

ಪ್ರಜಾಕ್ರೋಶವು ದೇಶಪ್ರೇಮವನ್ನು ಪ್ರಜೆಗಳಲ್ಲಿ ಉಳಿಯಗೊಡದುಃ "ಕ್ಷೀಣಾ ನರಾ ನಿಷ್ಕರುಣಾ ಭವಂತಿ". ಅಂಥ ಆಕ್ರೋಶವು ಅರಾಷ್ಟ್ರೀಯ ಅಥವಾ ಆಭಾಸಿಕ ರಾಷ್ಟ್ರೀಯ ಆಳಿಕೆಯ ಅನಿವಾರ್ಯ ಫಲ. ದೊಡ್ಡ ಆಸ್ತಿ ಅಧಿಕಾರಗಳ ದಾಸರು ಅಲ್ಪ ಆಭಾಸಿಕ ರಾಷ್ಟ್ರ ಪೋಷಣೆ ನಡೆಯಿಸುವ ಅವಧಿಯಲ್ಲಿ ರಾಷ್ಟ್ರೀಯ ದೌರ್ಬಲ್ಯ ಅಥವಾ ಶೈಥಿಲ್ಯ ಉಂಟಾಗುವುದು ಅಭೇದ್ಯ ಸತ್ಯ. "ಭೇದೇ ಗಣಾ ವಿನಶ್ಯೇಯುಃ" ಎಂಬ ವ್ಯಾಸ ಸೂತ್ರದಂತೆ ಅವರು ಗಣಗಳನ್ನು (ಜನರ ವರ್ಗಗಳನ್ನೂ ವ್ಯಕ್ತಿಗಳನ್ನೂ) ಒಡೆದಾಳಲು ಶುರು ಮಾಡುತ್ತಾರೆ. ಗಣಗಳಿಗೆ ಪರಸ್ಪರ ವಿಶ್ವಾಸ ಹಾರಿಹೋದ ಬಳಿಕ ಅವರ ಮೇಲಿನ ವಿಶ್ವಾಸವೂ ಹಾರಿಹೋಗುತ್ತದೆ. ಅಶ್ರದ್ಧಾ ವ್ಯವಹಾರಗಳೇ ಭ್ರಷ್ಟಾಚಾರಗಳು; ಅವೇ ರಾಷ್ಟ್ರಭ್ರಂಶಕಗಳು. ರಾಷ್ಟ್ರಭ್ರಂಶಕ್ಕೆ ಕಾರಣರಾದವರು ಭ್ರಷ್ಟ ರಾಷ್ಟ್ರೀಯರು, ಆಭಾಸಿಕ ರಾಷ್ಟ್ರೀಯರು. "ವಿದ್ಯಾವಂತರ" ಅವಿದ್ಯೆಯು ಈಗ ಸರ್ವಾಸ್ತಕ್ಕೆ ದಾರಿ ಮಾಡುತ್ತಲಿರುವುದನ್ನು ನಿಲ್ಲಿಸಲು ಜನಸಂಘಟನೆ ಮಾಡುವುದು ಆದ್ಯ ಕರ್ತವ್ಯ. ಆಳುವ ಮಂತ್ರಿಗಳಲ್ಲಿ ಮುಕ್ಕಾಲುವಾಸಿ ಜನರು ಮನೆಗೆ ಹೋಗುವಂತೆ ಮಾಡಲು ಲೋಭಿ ಪೂಜಕವಾದ ಅವರ ಪಕ್ಷಗಳಿಗೆ ಮತದಾನ ಮಾಡದಿರುವುದು ಪವಿತ್ರವಾದ ರಾಷ್ಟ್ರೀಯ ಕರ್ತವ್ಯ. ಏಕೆಂದರೆ ಅವರು ಮಾತೃಯೌವನವನ್ನು ಭೇದ ಮಾಡುವ ಕೊಡಲಿಗಳಾಗಿದ್ದಾರೆ; ಲೋಭಾರಾಧನೆಯನ್ನವರು ಲೋಕಾರಾಧನೆಯೆಂದು ಹೇಳುತ್ತ ಬಂದಿದ್ದಾರೆ. ಆಪತ್ಕಾಲದಲ್ಲಿ "ಶಸ್ತ್ರಂ ದ್ವಿಜಾತಿಭಿರ್ಗ್ರಾಹ್ಯಂ" ಬ್ರಾಹ್ಮಣರೂ ಅರ್ಥಾತ್ ಶಿಕ್ಷಕವೃತ್ತಿ ಹಿಡಿದವರೂ ಶಸ್ತ್ರಧಾರಣ ಮಾಡಿ ದುಷ್ಟಸಂಹಾರ ಮಾಡಲು ಮುಂದಾಗಬೇಕೆಂದು ಮನು ಅಂದೇ ಹೇಳಿದನು. ಇಂದಿನ ಭಾಷೆಯಲ್ಲದು

ಕರನಿರಾಕರಣ, ಕಾಯದೆಭಂಗ, ಅಸಹಕಾರ ಚಳವಳಿಗಳೆನ್ನಿಸುತ್ತದೆ. ಈ ಮಾರ್ಗ ಹಿಡಿಯಲು (ಆಪತ್ಕಾಲದಲ್ಲಿ) ಅಂಜುವ ಸಂಘ, ಪಕ್ಷ, ವ್ಯಕ್ತಿಗಳು ಸ್ವರಾಜ್ಯಕ್ಕೆ ಅನರ್ಹರೆಂದ ಗಾಂಧಿಯವರ ನುಡಿ ಅಪ್ರತಿಹತ, ಅವಿಸ್ಮರಣೀಯ.

ಯುದ್ಧ ಮಾತ್ರ ಆಪತ್ಕಾಲಿಕವಲ್ಲ, ಎಲ್ಲ ಸಲ ಆಪತ್ಕಾರಕವೂ ಅಲ್ಲ. ಕ್ಷಯ ರೋಗದ ಅಣುಗಳನ್ನು ರಕ್ತಕ್ಕೆ ಚುಚ್ಚಿ ದಾಯಾದನನ್ನು ನಾಶಮಾಡಿ, ಅವನ ಆಸ್ತಿಯನ್ನು "ಪಳಾರ" ಮಾಡುವ ಧೂರ್ತನಂತೆ, ಪ್ರಜೆಗಳಲ್ಲಿ ಸ್ವದೇಶಿಯವಾದ ಯಾವುದರ ಬಗೆಗೂ ಅಭಿಮಾನ ಉಂಟಾಗದಂತೆ ನೋಡಿಕೊಳ್ಳುವ ಮತ್ತು ಅವರು ಪರಸ್ಪರ ಗುಂಪುಗಳಾಗಿ ಕಲಹನಿರತರಾಗುವಂತೆ ಯೋಜಿಸುವ ರಾಜಕೀಯ ಇಂದ್ರರನ್ನು ಶಪಿಸಿ ಗದ್ದುಗೆಯಿಂದಿಳಿಸುವವರು ರಾಷ್ಟ್ರೀಯರು; ದೀನೋದ್ಧಾರದ, ದಲಿತೋದ್ಧಾರದ ನಾಟಕವನ್ನು ಪ್ರದರ್ಶಿಸಿ, ಆ ಬಗ್ಗೆ ಅಪಾರವಾಗಿ ಪ್ರಜಾದತ್ತ ಕರಧನವನ್ನು ವ್ಯಯಿಸಿ, ಆಡಳಿತದಲ್ಲಿ ಸರ್ವವಿಧದ ಭ್ರಷ್ಟಾಚಾರಗಳು ಉದಯವಾಗುವಂತೆ ಮಾಡಿದವರನ್ನು ಪದಚ್ಯುತಗೊಳಿಸುವವರು ರಾಷ್ಟ್ರೀಯರು; ಮಹಾವಾಣಿಜ್ಯ ಸೂತ್ರಧಾರಿಗಳಿಂದ ಗುಪ್ತ ಧನವನ್ನು ಯಥೇಷ್ಟವಾಗಿ ಪಡೆಯುತ್ತ, ಜನರೆದುರು ಅವರೊಡನೆ ಗಾಣದವರ ಗುದ್ದಾಟವನ್ನು ನಡೆಯಿಸಿ ಆಂತರಿಕವಾಗಿ ಏಕಮತದಲ್ಲಿದ್ದು, ಮಹಾಜನರಿಗೆ ಸುಲಿಗೆ ಸೇವೆ ಸಲ್ಲಿಸುತ್ತ ಬರುವವರ ಅಧಿಕಾರದ ಅಹಂಕಾರವನ್ನು ಇಳಿಸುವವರು ರಾಷ್ಟ್ರೀಯರು!

"Fearlessness connotes freedom from all external fear - fear of disease, bodily injuries and death of dispossession, of losing one's nearest and dearest, of losing reputation or giving offence and so on–ರೋಗಭಯ, ಆಘಾತಭಯ, ಮರಣಭಯ, ಧನಹಾನಿಭಯ, ನಿಕಟತಮ ಬಾಂಧವರನ್ನು ಕಳೆದುಕೊಂಬ ಭಯ, ಪ್ರಸಿದ್ಧಿಯನ್ನು ಕಳೆದುಕೊಳ್ಳುವ ಭಯ, ಮಂದಿಗೆ ಕೇಡಾದೀತೆಂಬ ಭಯ ಮುಂತಾದ ಬಾಹ್ಯಭಯಗಳಿಂದ ಮುಕ್ತನಾಗುವುದೇ ನಿರ್ಭಯಸಿದ್ಧಿ" – ಎಂದ ಗಾಂಧಿಸೂತ್ರವು ಮಾತ್ರ ನಿಜವಾದ ರಾಷ್ಟ್ರವೀರಸೂತ್ರ. ಅಭಯಸಿದ್ಧಿ ಇಲ್ಲದವರ ವೀರತನವು ಒಂದಲ್ಲ ಒಂದು ಸಂದರ್ಭದಲ್ಲಿ ಉತ್ತರಪೌರುಷವಾಗಿ ಪರಿಣಮಿಸಿಯೇ ತೀರುವುದು. ರಾಷ್ಟ್ರಸೇವಕನ ಸಾಧನೆಯಲ್ಲಿ ರಾಷ್ಟ್ರಸಂಸ್ಕೃತಿಯ ಜ್ಞಾನಕ್ಕೆ ಇರುವಷ್ಟೇ ಮಹತ್ವವು ಈ ಅಭಯಸಾಧನೆಗಿದೆ. "ನ ಹನ್ಯತೇ ಹನ್ಯಮಾನೇ ಶರೀರೆ" ಎಂಬುದು ತನ್ನ ಆತ್ಮಕ್ಕಿರುವ ಶಕ್ತಿ ಎಂಬುದನ್ನರಿಯದವ ಅಪೂರ್ಣ ಸಂಸ್ಕೃತ, ಆಭಾಸಿಕ ರಾಷ್ಟ್ರೀಯ. ಸರ್ವನೀತಿಗಳ ವ್ಯವಸ್ಥಾಪಕನಾದ ದೇವನಲ್ಲಿ ಭಯಭಕ್ತಿ ಇರುವಾತ ಭೂಲೋಕದ ಯಾವ ಚಕ್ರವರ್ತಿ ಎದುರಾದರೂ ಎದೆಗೆಡನು. "ಕ್ಲೈಬ್ಯಕ್ಕೆ ರಾಷ್ಟ್ರೀಯ ಶಬ್ದಕೋಶದಲ್ಲಿ ಸ್ಥಲವಿರಬಾರದು" – ಎಂದದ್ದು ಮಹಾತ್ಮ. ಅನಾರ್ಯವಾದ ಆಸೆ, ಚಾಪಲ, ಚಟ, ಭೋಗ ದಾಸ್ಯಗಳು ಕ್ಲೀಬೀಕರಣದ ಸಾಧನಗಳು. ಪೂರ್ಣ ಅಭಯಸಿದ್ಧಿ ಬ್ರಹ್ಮಾನುಭವಿಗೆ ಮಾತ್ರ ಸಾಧ್ಯವಾದರೂ ಅಂಥವನ ಹೆಜ್ಜೆಯನ್ನನುಸರಿಸಿ ಹೋಗುವ ದೃಢ ಸಂಕಲ್ಪವುಳ್ಳ ರಾಷ್ಟ್ರೀಯನಿಗೆ ಕಿಂಚಿದೂನ ಅಭಯಸಿದ್ಧಿ ಆಗಿಯೇ ತೀರುತ್ತದೆ. ಆಸ್ತಿ, ಮನೆ, ಅಂಗಡಿ, ಅಧಿಕಾರಗಳಿಗೆ ದಾಸರಾಗುವುದನ್ನು

ಬಿಟ್ಟ ದಿನ ನಾವು ಅಭೀಕರು. ಅವುಗಳನ್ನು ತ್ರೈಕರಣಿಕ ಅನಾಸಕ್ತಿಯಿಂದ ಅನುಭವಿಸುವ ಜಾಗರ ಪ್ರಾಮಾಣಿಕವಾಗಿ ಎದೆಯಲ್ಲಿದ್ದರಾಯ್ತು. ಭಯವಿದ್ದಲ್ಲಿ ಮತವಿಲ್ಲ, ಧರ್ಮವಿಲ್ಲ, ತತ್ವವಿಲ್ಲ, ಜ್ಞಾನವಿಲ್ಲ. ಅವೀರರು ಅನಾಧ್ಯಾತ್ಮಿಕರು, ಅನೈತಿಕರು. ಈ ಅಕ್ಷರಸತ್ಯವನ್ನು ಮರೆಯದಿರುವಂತೆ, ಪ್ರತಿಕ್ಷಣವೂ ಎಚ್ಚರದಲ್ಲಿಟ್ಟುಕೊಂಡಿರುವಂತೆ ಮಾಡಬಲ್ಲ ಶಿಕ್ಷಣವೇ ರಾಷ್ಟ್ರೀಯತೆಯ ಸಂಸ್ಕಾರವನ್ನು ಕೊಡಬಲ್ಲ ಶಿಕ್ಷಣ. ಭೌತಿಕ ಲಾಭದಲ್ಲಿ ಲೋಭವಿದ್ದಲ್ಲೆಲ್ಲ ಭಯ ತಲೆ ಹಾಕುತ್ತದೆ. ಅವಿವೇಕಜನ್ಯವಾದ ಭಯವು ಸರ್ವರೋಗಗಳ ಆದಿ. ಹೃದ್ಗತನಾದ ಈಶ್ವರನು ಅಧರ್ಮಕಾರ್ಯಕ್ಕೆ ದಂಡನೆ ವಿಧಿಸಿಯೇ ತೀರುವನೆಂಬ ಭಯವೊಂದೇ ವಿವೇಕಯುಕ್ತವೂ ಆರೋಗ್ಯಕರವೂ ಆದ ಭಯ.



# ೨೫

# ರಾಷ್ಟ್ರೀಯತೆ ಒಡೆಯಲು ಕಾರಣ

ಕಾಲದೂರಗಳನ್ನು ಸಂಕ್ಷೇಪಿಸಲು ಅತ್ಯಾವೇಶದ ಪ್ರಯತ್ನ ನಡೆಸುವುದು, ಪಾಶವ ಹಸಿವೆಗಳ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುವುದು, ಅವುಗಳ ಸಂತರ್ಪಣಕ್ಕಾಗಿ ಜಗತ್ತಿನ ಆ ತುದಿಯಿಂದ ಈ ತುದಿಯ ವರೆಗೆ ಓಡುವುದು–ಭಾರತೀಯ ಸಂಸ್ಕೃತಿಗೆ ಸಹಜವಾದ ಸಾಮಾನ್ಯ ಜೀವನದ ರಸ–ರುಚಿಗಳಲ್ಲ. ರಾಷ್ಟ್ರಸೇವೆಯಲ್ಲಿಯೇ ಸಂತೋಷವನ್ನು ಕಾಣುವ ರಾಷ್ಟ್ರೀಯ ಮನೋಧರ್ಮವು ಭಾರತೀಯ. ತನ್ನ ಆತ್ಮಸಾಕ್ಷಿಗೆ ಸರಿಯಾಗಿ ನಡೆದುಕೊಳ್ಳದ ಗೋಮುಖವ್ಯಾಘ್ರತೆಯನ್ನಿಲ್ಲಿ ನಾಗರಿಕತೆಯೆನ್ನುವುದಿಲ್ಲ. ಸರ್ವಜೀವಗಳ ಸಂಭವಸ್ಥಳವಾದ ದೇವತ್ವದ ಬಗೆಗೆ– ದಿನವೂ ಆಕಸ್ಮಿಕತೆಯ ಅಪಾಯಗಳನ್ನೆದುರಿಸುವ ಸಂಭಾವ್ಯತೆ ಇರುವ– ಮನುಷ್ಯರಾದ ನಾವು ಅಲಕ್ಷ್ಯವನ್ನು ತೋರಿಸುವುದರಲ್ಲಿ ಅಡಗಿದ ನಮ್ಮ ಗರ್ವವು ಅತ್ಯಾಶ್ಚರ್ಯಕರ ಎಂದದ್ದು ಮಹಾತ್ಮಾಗಾಂಧಿ. ದೇವಧಾನ್ಯವು ರಾಷ್ಟ್ರಸೇವಕನ ಶಕ್ತಿಕೇಂದ್ರ. ದೇವನು ಹೃದಿಸ್ಥಿತನೆಂಬುದು ಭಾರತ; ಆತನು ಅಜಯ್ಯನೆಂಬುದೂ ಇಲ್ಲಿ ದೃಷ್ಟ. ದೇವ, ಸತ್ಯ, ಧರ್ಮ, ನ್ಯಾಯಗಳು ಜಗದ್ಧಿತದ ದೃಷ್ಟಿಯಲ್ಲಿ ಏಕಾರ್ಥಕಗಳು. ಪ್ರತಿಯೊಂದು ಮಹಾಶ್ರದ್ಧೆಯೂ ವಿಚಾರೋತ್ತರ. ವಜ್ರಸ್ಥಿರವಾದ ಮಹಾಶ್ರದ್ಧೆಯು ನಿತ್ಯವೂ ಮಾಡುವ ಗಂಭೀರ ಧ್ಯಾನದಿಂದ ಲಭ್ಯವಾದೀತಲ್ಲದೆ, ಬೌದ್ಧಿಕ ಕಸರತ್ತುಗಳಿಂದಲ್ಲ– ಎಂಬುದು ಸರ್ವ ಮಹಾತ್ಮರ ಅನುಭವ. ಮಹಾತ್ಮರೇ ಮಹಾವೀರರು; ಮಹಾವೀರರ ರಾಷ್ಟ್ರೀಯತೆಯ ದಕ್ಷತೆ ಇತರರಿಗಿಲ್ಲ. ಏಕೆಂದರೆ, ಅವರಲ್ಲಿ Perfect continence of thought, speech and action ವಿಚಾರ, ವಾಣಿ ಮತ್ತು ಕೃತಿಗಳಲ್ಲಿ ಪರಿಪೂರ್ಣ ಸಂಯಮವಿರುತ್ತದೆ.

"ಲೋಕಶಾಹಿ ಯಶಸ್ವಿಯಾಗಬೇಕಾದರೆ ಲಫಂಗರಿಗೆ ಯಾವ ಪಕ್ಷವೂ ತಿಕೀಟು ಕೊಡಬಾರದು. ನಿರ್ಮಲಚಿತ್ತರೂ ನಿಜವಾದ ಜನಸೇವಕರೂ ಪ್ರತಿಯೊಂದು ಪಕ್ಷದಲ್ಲಿ ಇದ್ದರೆ ಮಾತ್ರ ಆಡಳಿತ ಶುಚಿಯಾಗಿ ನಡೆಯುವುದು, ರಾಷ್ಟ್ರವು ತ್ವರಿತವಾಗಿ ವಿಕಾಸಗೊಳ್ಳುವುದು. ಕೊನೆಗೆ ನಿಲ್ಲುವುದು ಜನಸೇವೆಯೇ ಹೊರತು ಅಧಿಕಾರಲಾಲಸೆಯಲ್ಲ" ಎಂದು "ಜನಸೇವಕ" ೨೬–೧–೭೧ರ ಪ್ರಜಾರಾಜ್ಯ ದಿನೋತ್ಸವದಲ್ಲಿ ಹೇಳಿದೆ. ಲಫಂಗರೆಂದರೆ ಅಭಾರತೀಯ ವಿಚಾರ–ಆಚಾರ–ಉಚ್ಚಾರಗಳನ್ನಿಟ್ಟುಕೊಂಡ ಆಭಾಸಿಕ ಭಾರತೀಯರು. ಉಕ್ತ ಮೂರರಲ್ಲಿ ಯಾವ ಒಂದನ್ನಿಟ್ಟುಕೊಂಡರೂ ಲಫಂಗತನ

ಉದಯವಾಗುತ್ತದೆ. ಸಾಂಸ್ಕೃತಿಕ ಪ್ರಕಾರಗಳ ಭೇದವು ಪಂಚಭೂತಗಳ ದೆಸೆಯಿಂದ ದೇಶದೇಶಕ್ಕೂ ಪ್ರತ್ಯೇಕವಾಗಿರುವುದು ಆಹಾರಭೇದದಷ್ಟೇ ಸ್ವಾಭಾವಿಕ. ಪ್ರೊ.ಎಫ್.ಎಸ್.ಸಿ.ನಾರ್ತ್ರಾಪರು ಸದ್ಯದ ಪಾಶ್ಚಾತ್ಯ ಪ್ರತಿಭೆಯನ್ನು Theoretic intuition or the intuition of the connotative intellect ಸೈದ್ಧಾಂತಿಕ ಅಥವಾ ಜಾತ್ಯುನ್ಮುಖ ಪ್ರತಿಭೆ ಎಂದು ಪೌರಸ್ತ್ಯ ಪ್ರತಿಭೆಯನ್ನು aesthetic or existential intuition ರಸಾತ್ಮಕ ಅಥವಾ ಆಸ್ತಿಕ ಪ್ರತಿಭೆ ಎಂದೂ ("Radhakrishnan" pp. 371, 372) ವಿಂಗಡಿಸಿರುವುದು ಪಾಶ್ಚಾತ್ಯದಲ್ಲಿ ತ್ರೈಕರಣಿಕ ಶುದ್ಧಿ ಇಲ್ಲದಿರುವ ನಿಕಷವನ್ನು ಎತ್ತಿ ಹೇಳುತ್ತದೆ. ಅವರ ವಿಚಾರದ ಪ್ರಚಾರಕ್ಕೂ ವಾಸ್ತವಿಕ ಆಚಾರಕ್ಕೂ ಸಂಬಂಧವಿಲ್ಲದಿರುವುದು ಅವರಿಗೆ ಮಾನ್ಯ. ಅವರ ತತ್ವಜ್ಞಾನವು ವಿಜ್ಞಾನವನ್ನಾಧರಿಸಿರಲಿ, ಮತಧರ್ಮವನ್ನಾಧರಿಸಿರಲಿ – ಜೀವನದ ರಸ–ರುಚಿಗಳ ಸ್ವರೂಪವನ್ನು ರೂಪಿಸುವುದಿಲ್ಲ. ನಮ್ಮದು ಅದು ಯಾವುದನ್ನು ಬಿಟ್ಟಿದೆಯೋ ಅದನ್ನೇ ಮಾಡುತ್ತದೆ. ಈ ನಮ್ಮತನವನ್ನು ನಮ್ಮ ಆಂಗ್ಲಾಕ್ಷರು ಬಿಡುತ್ತ ಹೋದುದೇ ಭ್ರಷ್ಟಾಚಾರವು ಸಾಂಕ್ರಾಮಿಕವಾಗಲು ಕಾರಣ. ಪಾಶ್ಚಾತ್ಯರ ಪರಸ್ಪರ ವಿಶ್ವಾಸವು ಪಾಶ್ಚಾತ್ಯರಿಗಷ್ಟೇ ಪರಿಸೀಮಿತ. ಆದುದರಿಂದ ನಾವು ನಮ್ಮ ಪರಸ್ಪರ ವಿಶ್ವಾಸವು ನಮಗಷ್ಟೇ ಸೀಮಿತಗೊಳಿಸಿಕೊಳ್ಳುವುದು ಅನಿವಾರ್ಯ. ಇಲ್ಲವಾದರೆ ಅವರ ದ್ವಿಸಂಧಾನವನ್ನು ಬದಲಾಯಿಸಿ ಅಂತಾರಾಷ್ಟ್ರೀಯ ವ್ಯವಹಾರಗಳಲ್ಲಿ ನಮ್ಮ ಭಾರತೀಯ ತ್ರಿಕರಣ ಶುದ್ಧಿಯನ್ನು ಅನುಸರಿಸುವಂತೆ ಮಾಡಬೇಕು. ಪ್ರತ್ಯಕ್ಷ–ಅಪರೋಕ್ಷಗಳ ಪ್ರಾಧಾನ್ಯಕ್ಕಿಲ್ಲಿ ಬೆಲೆ; ಪ್ರತ್ಯಕ್ಷ–ಅನುಮಾನಗಳಿಗೆ ಅಲ್ಲಿ ಹೆಚ್ಚಿನ ಬೆಲೆ. ಪ್ರತ್ಯಕ್ಷ ಅಪರೋಕ್ಷಗಳ ಸಾಕ್ಷಾತ್ಕಾರ ಸೂತ್ರವು ಒಂದು; ಪ್ರತ್ಯಕ್ಷಕ್ಕೆ ಸಾಕ್ಷಾತ್ಕಾರ ಸೂತ್ರವಾದರೆ, ಅನುಮಾನಕ್ಕೆ ತಾರ್ಕಿಕ ಸಮನ್ವಯದ ಅಪ್ರತ್ಯಕ್ಷತೆಯು ಸೂತ್ರ. ಅವರದು ದ್ವಿಮೂಲಿಕಾ ಪ್ರಯೋಗವಾದರೆ ನಮ್ಮದು, ಏಕಮೂಲಿಕಾ ಪ್ರಯೋಗ. ಈ ವಿಶ್ಲೇಷಣೆವು ಜನಾಂಗಗಳ ಇಂದಿನ ಸಾಮೂಹಿಕ ಅಂತರ್ಗುಣಗಳ ಸಾಮಾನ್ಯೀಕೃತ ಉತ್ಸರ್ಗಕ್ಕೆ ಕಾರಣ. ಆದರೆ ವಾಸ್ತವಿಕವಾಗಿ ಪಾಶ್ಚಾತ್ಯರ ಸಾಮೂಹಿಕ Self-preservation instinct ಸ್ವಸ್ಥಾನಭದ್ರತೆಯ ಮೂಲಪ್ರವೃತ್ತಿಯೀಗ ಮೊದಲಿಗಿಂತ ಹೆಚ್ಚು ಬಲವತ್ತರವಾಗಿದೆ; ತದ್ವಿರುದ್ಧವಾಗಿ ಪೌರಸ್ತ್ಯರಲ್ಲದು ದುರ್ಬಲತರವಾಗುತ್ತ ಹೋಗಿದೆ. ಭಾರತದ ಸ್ವಸ್ಥಾನ ಭದ್ರತಾಬುದ್ಧಿಯನ್ನು ಬ್ರಿಟಿಷ್ ಆಳಿಕೆ ಸಂಪೂರ್ಣ ಸಡಿಲಿಸಿತು. ಇಲ್ಲಿ ಪ್ರತ್ಯೇಕ ಸ್ವತಂತ್ರ ರಾಜ್ಯಗಳಿದ್ದ ಅವಧಿಗಿಂತಲೂ ಹೆಚ್ಚಿನ ವಿಭಾಜಕ ಸಂಕುಚಿತತೆಯನ್ನದು ಬಿತ್ತಿ ಬೆಳೆಯಿಸಿತು. ಅಂಥ ಲಫಂಗತನದ ಬಿತ್ತಿಗೆ–ಬೆಳೆಗಳಿಗೆ ಶಿಕ್ಷಣ–ಆಡಳಿತ ರೀತಿನೀತಿಗಳು ಸಾಧನಗಳಾದವು. ಪ್ರತಿಯೊಂದು ರಾಜಕೀಯ ಪಕ್ಷವೂ ಇಲ್ಲಿ ಪ್ರತ್ಯೇಕವಾದ ಒಂದೊಂದು ಪಾಕಿಸ್ತಾನ; ಪ್ರತಿರಾಜ್ಯವೂ, ಆಯಾ ರಾಜ್ಯದ ಪ್ರತಿ ಜಿಲ್ಲೆಯೂ ಅಲ್ಲಲ್ಲಿ ಪಾಕಿಸ್ತಾನಗಳು! ಪ್ರತಿ ಮತವೂ ಜಾತಿಯೂ ಪ್ರತ್ಯೇಕ ಪಾಕಿಸ್ತಾನ! ಈ ತೀಕ್ಷ್ಣವಾದ Insularism ದ್ವೈಪಾಯನತೆಯು ಅಭಾರತೀಯ. ಆದರೆ ಅದಿಲ್ಲಿ ಆಹಾರದೊಡನೆ ಸೇರಿಕೊಂಡ ಮಳಲ ಕಣಗಳಂತೆ ಈಗ ಪ್ರತಿಕ್ಷಣ ಪ್ರಾಮಾಣಿಕ ಭಾರತೀಯನ ಎದೆಯನ್ನು ಚುಚ್ಚುತ್ತದೆ.

ಜೀವನವು ಭಾವಮಯ (A fusion of emotion and thought). ಭಾವವು ಕಾರಣರೂಪದ ಸ್ಮೃತಿಗತಾನುಭವ ಮತ್ತು ಫಲರೂಪದ ಸದ್ಯೋಽನುಭವಗಳ ನಡುವೆ

ಹೃದಯ (ಮನ)ದಲ್ಲಿ ಜೀವಾತ್ಮ ನಿಕಟವರ್ತಿಯಾಗಿ ನಿಂತಿರುವ "ಕಾರ್ಯ ನಾಣ್ಯ". ಭಾವದ ಪೂರ್ವೋಕ್ತ ಭೇದನವು ಸಾಂಸ್ಕೃತಿಕ ವಿನಾಶವನ್ನು ಮಾಡಲು ಯೋಜಿಸಲಾದ ಮಹಾಯತ್ನ. ಆ ಯತ್ನಕ್ಕೆ ಮೊದಲು ತುತ್ತಾದವರೇ Temporal authorities ಭೌತಕಾಲೀನ ಬಾಹ್ಯಾಧಿಕಾರಪದಸ್ಥರು ಎನ್ನಿಸಿದ್ದರಿಂದ ತಿಲಕ–ಗಾಂಧಿ–ಠಾಕೂರರ ಸಾಂಸ್ಕೃತಿಕ ಯೋಜನೆಗಳು ಅಯಶಸ್ವಿಗಳಾಗಿ ಜವಾಹರೀಕರಣವೇ ನಮ್ಮ ಅಕ್ಷರದ ತಲೆಕಟ್ಟಾಗಿದೆ. ಜವಾಹರರ ಕಾರ್ಯನಾಣ್ಯವೆನಿಸಿದ್ದ ಭಾವವು ಮುಕ್ಕಾಲುವಾಸಿ ಪಾಶ್ಚಾತ್ಯೀಕೃತವಾಗಿತ್ತು. ಸಾಂಸ್ಕೃತಿಕ ಆತ್ಮಜ್ಞಾನವಾಗಲು ಅವರಿಗೆ ಆಯುಷ್ಯ ಸಾಲದಾಯ್ತು. ಅವರ ಮೇಲ್ಪಂಕ್ತಿ, ಜನರನ್ನು ಗೊಂದಲಕ್ಕೀಡು ಮಾಡಿತು. ಕೆಳಪಂಕ್ತಿಗಳಲ್ಲಿ ಆಭಾಸಿಕ ಭಾರತೀಯತೆಯ ಸಂಕುಚಿತ ಸ್ವಾರ್ಥಮುದ್ರಾಧರರ ಘೂಟುಲಾಯರಗಿರಿಯು ಇನ್ನೊಂದು ವಿಧದಿಂದ ದ್ವೈಪಾಯನತೆಯನ್ನು ಬೆಳೆಯಿಸುತ್ತಿತ್ತು. ಮೇಲು–ಕೆಳ ಯತ್ನಗಳೆರಡು ಬೇರೆ ಬೇರೆಯವುಗಳಾದರೂ ಉದ್ದೇಶತಃ ಒಂದಾಗಿ, ಪರಿಣಾಮತಃ ಭಾವಭೇದಕಗಳಾದವು. ಇದೇ ನಮ್ಮ ಒಡೆದುಹೋದ ರಾಷ್ಟ್ರೀಯತೆ. ಅದರ ಚೂರುಗಳನ್ನು ಬೆಸೆಯಲು ಈಗ ಭಗೀರಥ ಪ್ರಯತ್ನದಿಂದ ವಜ್ರಗಾರೆಯನ್ನು ಹಾಕಬೇಕಾಗಿದೆ. ಅದಿಲ್ಲದೆ ಇರುವ ಈಗ ಯಾವ ಕ್ಷೇತ್ರದಲ್ಲೂ ನಮ್ಮ ತಜ್ಞಶಕ್ತಿಯು ಸಂಪೂರ್ಣ ಸಹಕಾರದಿಂದ ತೀವ್ರ ಪ್ರಗತಿಯನ್ನು ಸಾಧಿಸಲು ಶಕ್ತವಾಗದಂಥ ಪೂರ್ವಗ್ರಹ, ಅಸೂಯೆ, ಸ್ವಪ್ರತಿಷ್ಠೆ, ಜಂಭ, ದಂಭ, ಲೋಭ, ಲಾಭಬಡಿಕತನಗಳು ಅಡ್ಡಿಆತಂಕಗಳಾಗಿ ಏಳುತ್ತಿವೆ. ಮುಹುರ್ವಿಘ್ನಿತ ಕಾರ್ಯಾರಂಭಗಳಿಂದ ಪ್ರತಿಯೊಬ್ಬ ಪ್ರಾಮಾಣಿಕ ಪ್ರಜೆಯೂ ನಿರುತ್ಸಾಹ, ನಿರಾಶೆ, ನಿರ್ವೀರ್ಯತೆಗಳ ದೆಸೆಯಿಂದ ಪೂರ್ವಗ್ರಹಾದಿಗಳಿಂದ ತುಂಬಿದ ನೇತಾರ–ಅಧಿಕಾರವಂತರುಗಳನ್ನು ಶಪಿಸುತ್ತ ಕಾಲಹರಣಮಾಡಬೇಕಾಗಿದೆ. ಇದು ನಮ್ಮ ಪ್ರಜಾಪ್ರಭುತ್ವಕ್ಕೆ ಇಂದು ಹಿಡಿದ ಮಹಾರೋಗ. ರಾಷ್ಟ್ರೀಯತೆ ನುಚ್ಚು ನೂರಾದುದು ಇದರಿಂದ.



# ೨೬

# ಕೃಷ್ಣಾಯಣ

"A life of ideal harmony demands that I should realise through the body, and in conformity with its best interests, the inseperable connection and continuity of the body with the rest of the world, and develop thus the sense of my identity and harmony with the universe. This would create in me the feeling of wholeness - the feeling of missing nothing without which perfect health is unattainable - ಆದರ್ಶ ಸಾಮಶ್ರುತ್ಯದ ಬಾಳುವೆ ನಡೆಸಲು ನಾನು ನನ್ನ ದೇಹದ ಮೂಲಕ ಅದರ ಅತ್ಯುತ್ತಮ ಹಿತಸಾಧನೆಗೆ ಅನುಗುಣವಾಗಿ ನನ್ನ ಶರೀರೇತರ ಜಗತ್ತಿನೊಡನೆ ನನ್ನ ಶರೀರಕ್ಕಿರುವ ಸಂಪರ್ಕ ಮತ್ತು ಸಾತತ್ಯಗಳನ್ನು ಅನುಭವಕ್ಕೆ ತಂದುಕೊಂಡು, ನನ್ನ ವಿಶಿಷ್ಟತೆಯನ್ನು ಹಾಗೂ ಅದಕ್ಕೆ ವಿಶ್ವದೊಡನಿರುವ ಸಾಮಶ್ರುತ್ಯವನ್ನು ಅರಿತುಕೊಂಡರೆ – ನನ್ನಲ್ಲಿ ಇಡಿತನದ ಭಾವನೆ ಉದಯಿಸಿ, ಯಾವ ಕೊರತೆಯೂ ಇಲ್ಲವೆಂದೆನ್ನಿಸಿ, ಪೂರ್ಣಾರೋಗ್ಯವನ್ನು ನಾನು ಪಡೆಯುವಂತಾಗುತ್ತದೆ" ("Radhakrishnan'' p. 329). ಇದು ರಾಷ್ಟ್ರಜೀವನದ ವ್ಯಷ್ಟಿ–ಸಮಷ್ಟಿ ಸಮನ್ವಯ ಸೂತ್ರವನ್ನು ಸೂಚಿಸುತ್ತದೆ. ದೇಹಾತೀತ ಐಕ್ಯದಂತೆಯೇ ರಾಷ್ಟ್ರಾತೀತ ಐಕ್ಯವೂ ದುಃಸಾಧ್ಯ; ಒಮ್ಮೆ ಮೊದಲಿನದು ಸಾಧ್ಯವಾದರೂ ಎರಡನೆಯದು ಸಾಧ್ಯವಾಗುವುದು ದುರೂಹ್ಯ. ಐಕ್ಯದಲ್ಲಿ ಅಂಗಗಳು ಅಂಗಿಯಲ್ಲಿ ಲೀನವಾಗುವುವೆಂದಕೂಡಲೇ ಸಂಪೂರ್ಣ ಸರ್ವತಂತ್ರ ಸ್ವತಂತ್ರವಾದ ಶೂನ್ಯತ್ವಕ್ಕಿಳಿಯುವುವು ಎಂಬ ಹೆದರಿಕೆಯು ವಿಶಿಷ್ಟತೆ ಮತ್ತು ಸಾಮಶ್ರುತ್ಯಗಳೆಂಬ ಎರಡು ಕಲ್ಪನೆಗಳನ್ನು ಹೊರಡಿಸುತ್ತದೆ. ಜಗತ್ತಿನ ಜಡಗಳನ್ನಾಧರಿಸಿದ ಚೈತನ್ಯಗಳಿಗೆ ರಾಜಸಾವಸ್ಥೆಯಲ್ಲಿ ಅಂಥ ಹೆದರಿಕೆ ಬರುತ್ತದೆ; ಆದರೆ ಸಾತ್ವಿಕಾವಸ್ಥೆಯಲ್ಲಿ ಅಂಥ ಹೆದರಿಕೆ ಉಳಿಯದು. "To lose oneself in the infinite is to find onself–ಅಪ್ರಮೇಯದಲ್ಲಿ ತನ್ನನ್ನು ತಾನು ಕಳೆದುಕೊಳ್ಳುವುದರಿಂದಲೇ ತನಗೆ ತನ್ನ ಸಾಕ್ಷಾತ್ಕಾರವಾಗುತ್ತದೆ" ಎಂಬುದು ಸಾತ್ವಿಕನಿಗೆ ಗೊತ್ತು. ಆದ್ದರಿಂದ ಅವನು ದೇಹಾತೀತವಾದ ಆತ್ಮೈಕ್ಯಕ್ಕೆ ಹೆದರನು. ರಾಜಸನ

ಸರ್ವರಾಷ್ಟ್ರಗಳ ಐಕ್ಯವೆಂಬುದು ಅಸಾಧ್ಯತೆಯ ದೆಸೆಯಿಂದ ಅಸಂಭವವಾಗಿದೆ. ಆದುದರಿಂದ ಸದ್ಯಃ ಅವನಿಗಿರುವ ಸಾಧ್ಯವಾದ ಆದರ್ಶವು ರಾಷ್ಟ್ರೀಯತೆಯೊಂದೇ. ಅದನ್ನು ಸಾಧಿಸಲು ಸಹ ಸಿದ್ಧರಾಗದ ಪಟ್ಟಭದ್ರಹಿತಾಸಕ್ತರು ಹುಟ್ಟಿ ಬೆಳೆದು ದೊಡ್ಡವರಾಗದಂತೆ ನೋಡಿಕೊಳ್ಳುವ ಯೋಜನೆಯೇ ನಿಜವಾದ ಪಂಚವಾರ್ಷಿಕ ಯೋಜನೆ. ಅರ್ಥಾಧಿಕಾರ ಮೂಢರಿಂದ ಔದಾರ್ಯವನ್ನೂ ದಾನವನ್ನೂ ದಯೆಯನ್ನೂ ಪ್ರೀತಿಯನ್ನೂ ಉಪಕಾರವನ್ನೂ ಭಾರತದ ಬಡವ ನಿರೀಕ್ಷಿಸುವುದು ಈಗ ಬಿಸಿಲುಗುದುರೆಯ ಬೆನ್ನುಹತ್ತಿದಂತೆಯೇ ಎಂಬುದನ್ನು ಮರೆತಾಗ, ಈಗಿರುವುದೆಲ್ಲಾ ಸಮರ್ಪಕವಾಗಿ ಸರ್ವೋದಯವನ್ನು ತ್ವರಿತಗತಿಯಿಂದ ಸಾಧಿಸುತ್ತ ಹೋಗಬಲ್ಲದು ಎಂಬ ಭ್ರಮಾಭಿಪ್ರಾಯ ತಲೆದೋರುವುದು. ಭಾರತವು ಕೌರವರ ನಾಡು; ಅದನ್ನು ಪಾಂಡವೀಕರಿಸಲು ಕೃಷ್ಣ ಚಾತುರ್ಯ ಅಗತ್ಯ– ಎಂಬುದೇ ರಾಷ್ಟ್ರಚಿಂತನದ ಬುನಾದಿ. ಕೃಷ್ಣಚಾತುರ್ಯವು ಕೃಷ್ಣಶಕ್ತಿ–ಕೃಷ್ಣಕಾರುಣ್ಯಗಳಿಗೆ ಅವಿನಾಭಾವಿ. ರಾಷ್ಟ್ರೀಯತೆಗೆ ಕೃಷ್ಣಾದರ್ಶವು ಆರಾಧನೀಯ. ಸ್ವತಃ ಚಕ್ರವರ್ತಿಯಾಗಬಹುದಾಗಿದ್ದರೂ ಆಗದೆ ಪಾಂಡವರ ಮೂಲಕವೇ ಜಗದ್ಧಿತವನ್ನು ಯೋಜಿಸಿ ಸಾಧಿಸಿದ ರಾಜನಿರ್ಮಾಪಕತ್ವದ ರಾಜಕಾರಣವು ಸದ್ಯದ ಸಂದರ್ಭಕ್ಕೆ ಸ್ಫೂರ್ತಿದಾಯಕ.

ರಾಷ್ಟ್ರಕಾರ್ಯಗಳಲ್ಲಿ ಸ್ಫೂರ್ತಿದಾಯಕರಾದ ಕೃಷ್ಣಗುರುಗಳನ್ನು, ಕೃಷ್ಣನಾಯಕರನ್ನು, ಕೃಷ್ಣತಂತ್ರಜ್ಞರನ್ನು ಅನುಸರಿಸುವುದು ಕಾರ್ಯಸಿದ್ಧಿಕರ. ಅಂಥ ನಾಯಕರಿಗೆ ನಿಮಿತ್ತಕಾರಣಗಳಾಗುವ ತರಬೇತು ಸಾಮಾನ್ಯರಿಗೆ ಬೇಕಾದ ರಾಷ್ಟ್ರೀಯ ಸಂಸ್ಕಾರ. ಅದಕ್ಕೆ ಬೇಕಾದ ತತ್ತ್ವಬೋಧದ ಶಿಕ್ಷಣ ಸರ್ವಶಾಸ್ತ್ರಗಳ ಅಭ್ಯಾಸಕ್ಕೂ ನಿತ್ಯಪೀಠಿಕೆಯಾಗಬೇಕು. ಉಪೋದ್ಘಾತವಿಲ್ಲದ ಉಪನ್ಯಾಸಗಳು ಅಸಂಬದ್ಧ; ಅವುಗಳಿಗೆ ಉಪಸಂಹಾರಗಳೂ ಎಷ್ಟೋ ಸಲ ಇರುವುದಿಲ್ಲ. ದಿನಚರ್ಯೆ ಕೂಡ ರಾಷ್ಟ್ರೀಯ ಉಪಕ್ರಮ–ಸಂಕಲ್ಪಗಳಿಂದ ಕೂಡಿರುವ ಕರ್ಮದೀಕ್ಷೆ–ಕರ್ಮಸಂಸ್ಕಾರಗಳು ಮಾನಸಿಕ ವ್ಯಾಯಾಮಗಳು. ಸತ್ಯ–ಆರ್ಜವ–ನಿಷ್ಠೆಗಳಲ್ಲದವರು ಬೋರ್ಸ್ಟ್‌ಲ್ ಸ್ಕೂಲಿಗೆ ಕಳಿಸಲ್ಪಡಬೇಕಲ್ಲದೆ, ಇತರರೊಡನೆ ವಿದ್ಯಾಲಯಗಳಲ್ಲಿ ಪ್ರವೇಶ ಪಡೆಯುವ ಸೌಲಭ್ಯದಿಂದ ವರ್ಜಿತರಾಗಬೇಕು. ಅಪಾತ್ರವಿದ್ಯಾದಾನ ಅರಾಷ್ಟ್ರೀಯ. ಅನಾಗರಿಕ ಕಲಾ–ಸಾಹಿತ್ಯ–ನಾಟಕ–ಸಿನೆಮಗಳ ಕಾಯದೆಬದ್ಧ ಬಹಿಷ್ಕಾರವೂ ಅಗತ್ಯ. ಅರಿಷಡ್ವರ್ಗ ಪ್ರಚೋದಕವಾದ ಪ್ರತಿಯೊಂದು ದೃಶ್ಯವೂ ಜನತಾ ಶಿಕ್ಷಣಕ್ಕೆ ವಿರುದ್ಧವಾದುದು. ಭಾರತವು ವಿದೇಶೀಯರ ದಾಳಿಗೆ ತುತ್ತಾದದ್ದೆಲ್ಲಾ ವಿಷಯಲಂಪಟರಾದ ರಾಜ, ಸುಲ್ತಾನ ಭಾದಶಹರ ಕಾಲದಲ್ಲಿ. ಈ ಅಂಶವನ್ನು ಮರೆತರೆ ಮಾಡುವುದೆಲ್ಲಾ ನೀರಲ್ಲಿ ಹೋಮವಾಗುತ್ತದೆ. ಉಷ್ಣಪ್ರದೇಶವಾದ ಭಾರತಭೂಮಿಯ ವಾಯುಗುಣ, ಸಸ್ಯಗುಣಗಳಿಗನುಗುಣವಾದ ಶರೀರ–ಮನಸ್ಸುಗಳನ್ನು ಪಡೆದ ಭಾರತೀಯರು ಶೀತ ಪ್ರದೇಶ ನಿವಾಸಿಗಳಾದ ಬಿಳಿಯರ ಭೋಗಸಾಧನಗಳ ಪರಿಮಾಣ–ಪ್ರಕಾರಗಳನ್ನು ಅನುಕರಿಸುವುದು ಆತ್ಮಘಾತುಕವಾದುದು. ಅಮೇರಿಕದ ಸಂಯುಕ್ತಸಂಸ್ಥಾನದ ಮನುಷ್ಯನ ಶರೀರಕ್ಕೆ ಉಷ್ಣಶಕ್ತಿಯು ನಮ್ಮ ಶರೀರಕ್ಕೆ ಬೇಕಾಗುವದಕ್ಕಿಂತ ಸುಮಾರು ೩ ಪಟ್ಟು ಹೆಚ್ಚು ಬೇಕು. ಅಂಥ ಆಹಾರ ಅವನಿಗೆ ಅಗತ್ಯವಲ್ಲದೆ, ನಮಗಲ್ಲ.

ಆದುದರಿಂದ ಆಹಾರ, ವಿಹಾರ, ವಿಲಾಸ, ಸುಖಾನುಭವಗಳಲ್ಲಿ ಭಾರತೀಯತೆಯನ್ನು ಬಿಡುವುದು ಅಸಂಸ್ಕೃತವೆಂಬುದು ಜೀವಶಾಸ್ತ್ರ–ಮನಃಶಾಸ್ತ್ರಗಳೆರಡರ ಪ್ರಕಾರವೂ ನಿಷಿದ್ಧ. ಯುರೋಪಿಗೆ ಮೆಕೆಯವಿಲ್ಲಿ ಗಣ್ಯ ರಾಜತಂತ್ರಜ್ಞನಾದರೆ ನಮಗೆ ಕೃಷ್ಣ ಅಥವಾ ಚಾಣಕ್ಯ. ಅವರಿವರ ತಾರತಮ್ಯ ವಿದ್ವಾಂಸರಿಗೆ ಅರಿಯದುದಲ್ಲ. ಹಾಗೆ ಅರಿತುಕೊಳ್ಳದ ವಿದ್ವನ್ಮಾನಿಗಳ ಪರದೇಶೋನ್ಮುಖ ಜಿಜ್ಞಾಸೆ ಸ್ವದೇಶ್ಯಜ್ಞಾನವಿಲ್ಲದುದರಿಂದ ಅವ್ಯವಸ್ಥೆ ಅಪಜಯಗಳಿಗೆ ಕಾರಣವಾದುದನ್ನು ಸ್ವತಂತ್ರಭಾರತ ಕಂಡಿದೆ. ರಾತ್ರಿ ಕಂಡ ಬಾವಿಗೆ ಹಗಲು ಬೀಳುವುದು ಬುದ್ಧಿವಂತಿಕೆಯ ಲಕ್ಷಣವಾದೀತೇ? ಅನುಷೇಧಿಕ ವಿಜ್ಞಾನಗಳ ರಹಸ್ಯಗಳನ್ನು ಬಿಳಿಯರಿಂದ ಕಲಿಯುವ ಮತ್ತು ಸ್ವತಃಸಂಶೋಧಿಸುವ ಪ್ರವೃತ್ತಿಯೊಂದು ಅಬಾಧಿತ. ಅದರ ಬಳಕೆ ಮತ್ತೆ ಭಾರತೀಯವೇ ಆಗಬೇಕಾಗುತ್ತದೆ ಎಂಬುದನ್ನು ಮರೆಯಲಾಗದು.



# ೨೭

# ಅಜ್ಞಾನ ತಿಮಿರದ ಪರಿಹಾರ

ಪಾಶ್ಚಾತ್ಯರ mind, truth, value ಎಂಬ ಪದಗಳಿಗೆ ಪೌರಸ್ತ್ಯ ಪರ್ಯಾಯ ಪದಗಳನ್ನು ಹುಡುಕುವುದು ಕಷ್ಟ; ಹಾಗೇ ಆತ್ಮನ್, ಕರ್ಮ, ತಾಯೋ ಮುಂತಾದ ಪೌರಸ್ತ್ಯ ಪಾರಿಭಾಷಿಕಗಳಿಗೆ ಸಮಾನಾರ್ಥವುಳ್ಳ ಪಾಶ್ಚಾತ್ಯ ಪರ್ಯಾಯಗಳನ್ನು ಹುಡುಕುವುದು ಕಷ್ಟ.... ಎಂಬ ಉದಾಹರಣೆಯಿಂದ ಆ ಈ ಪ್ರತಿಭೆಗಳ ಸಾಂಸ್ಕೃತಿಕ ಲಕ್ಷಣಗಳು ಬೇರೆ ಎಂದ ಈ.ಎ.ಬರ್ಟರ ಶೋಧವು ಅವಿಸ್ಮರಣೀಯ. ಭಾರತದ "ಅನುಭವ" ಬೇರೆ, ಪಾಶ್ಚಾತ್ಯರ "ಅನುಭವ" ಬೇರೆ – ಅರ್ಥವ್ಯಾಪ್ತಿ ಎರಡಕ್ಕೂ ಒಂದೇ ಅಲ್ಲ. "ತತ್ವಜ್ಞಾನ" ಅಥವಾ "ತತ್ವಶಾಸ್ತ್ರ" ಎಂಬುದರ ಅರ್ಥವ್ಯಾಪ್ತಿಗಳೂ ಇಲ್ಲಿ ಬೇರೆ, ಅಲ್ಲಿ ಬೇರೆ (Vide : "Radhakrishnan", p.38). ೧೯೫೧ರಲ್ಲಿ ಇದು ಪ್ರಕಟವಾದರೂ ೧೯೭೧ರ ಭಾರತೀಯ ಮುಖಂಡರನೇಕರು ಓದಿಲ್ಲ, ಅರಿತಿಲ್ಲ. "ಓದದೆಯೆ ಬರೆಯುವವ ರೂಢಿಯೊಳಗುತ್ತಮನು" ಎಂಬ ಲಾಂಗೂಲಾಚಾರ್ಯರ ಸರ್ವಜ್ಞನೀತಿ ಸತ್ಯವಾಗಿ ಹೋಗಿರುವುದು ಇಲ್ಲಿ ಶೋಚನೀಯ. ವಿಜ್ಞಾನ ವಿಭಾಗದ ಅಭ್ಯಾಸವು ಆಂಗ್ಲ ಭಾಷೆಯಲ್ಲಿ ನಡೆದರೂ ಕಲಾವಿಭಾಗದ ಅಭ್ಯಾಸಗಳು ರಾಷ್ಟ್ರಭಾಷೆಯಲ್ಲಿ ನಡೆಯುವ ಏರ್ಪಾಡನ್ನೀಗ ವಿಶ್ವವಿದ್ಯಾಲಯಗಳ ಸ್ನಾತಕೋತ್ತರ ಶಾಖೆಯೂ ಮಾಡಿದಿರುವುದೇಕೆ? ಜೊತೆಗೆ Literary Training ಭಾಷೆಯ ಮೂಲಕ ಕೊಡುವ ಒಣ ತರಬೇತು ಚಾರಿತ್ರ ನಿರ್ಮಾಣಕ್ಕೆ ಸಾಧನವಲ್ಲ– ಅದರ ಸಾಧನತ್ವ ಅತ್ಯಲ್ಪವ್ಯಾಪ್ತಿಯುಳ್ಳದ್ದು. ಆದರೆ ಚಾರಿತ್ರದ ಪ್ರಯತ್ನಪೂರ್ವಕವಾದ ಸುಧಾರಣೆಗೆ ಅದು ಗಣ್ಯ ಸಾಧನವಾದೀತು– ಕೃತಿ ಸಮೇತವಾಗಿದ್ದರೆ. ರೋಮನಗರವಾಸಿಯು ರೋಮಕನಂತಿರುವುದು ಸಹಜ. ಭಾರತದ ವ್ಯವಹಾರ ಪದ್ಧತಿಯನ್ನೀಗ "ಕಾಗದದ ಕುದುರೆ ಓಡಿಸುವುದು" ಎಂದು ಜನ ಆಡಿಕೊಳ್ಳಲು ಅದು ಅಭಾರತೀಯವಾಗಿರುವುದೇ ಕಾರಣ. ಅಭಾರತೀಯ ವ್ಯವಹಾರ ಪ್ರಕಾರಗಳು, ಅಪ್ರಾಮಾಣಿಕತೆಗೆ ಪ್ರೇರಕಗಳು. ಅಭಾರತೀಯ ಕ್ರಮಗಳಿಂದ ಭ್ರಷ್ಟಾಚಾರವನ್ನು ನಿಲ್ಲಿಸಹೋದರೆ ಅದು ಸೂರ್ಯನು ಪಶ್ಚಿಮದಲ್ಲಿ ಉದಯಿಸುವಷ್ಟು ಸಂಭಾವ್ಯವಾದೀತು. "ಆಚಾರಃ ಪರಮೋಧರ್ಮಃ" ಎಂಬುದು ಸರ್ವದೇಶಗಳ ಸಾಂಸ್ಕೃತಿಕ ಸೂತ್ರ. ಆಚಾರ ವಿಚಾರಗಳು ಪರಸ್ಪರ ಪ್ರೇರಕಗಳು. ದಕ್ಷಿಣೆ, ಲಂಚ, ತೆರಿಗೆ, ದಂಡಗಳೆಲ್ಲವುಗಳಲ್ಲೂ

ದುಡ್ಡು ತೆರುವ ಸಾಮಾನ್ಯಾರ್ಥವಿದ್ದರೂ ಅವುಗಳ ಸಾಂಸ್ಕೃತಿಕ ಅರ್ಥಗಳಲ್ಲಿ ಸ್ವಲ್ಪ ಅಂತರವಿದೆಯೇ? ಈ ಸೂಕ್ಷ್ಮವನ್ನರಿತಾಗ ನಮ್ಮ ಆಡಳಿತ–ಶಿಕ್ಷಣಗಳಲ್ಲಿ ಭಾರತೀಯತೆಯನ್ನು ತರಲು ಸಾಧ್ಯವಾದೀತು.

"Religion must establish itself as a rational way of living. If even the spirit is to be at home in this world and not merely a prisoner or fugitive, secular foundation must be laid deep and preserved worthily. Religion must express itself in reasonable thought, fruitful action and right social institutions–ಧರ್ಮವು ವಿಚಾರಯುಕ್ತವಾದ ಜೀವನಮಾರ್ಗವಾಗಿ ಸ್ಥಾಪಿತವಾಗಬೇಕು. ಆತ್ಮವು ಈ ಜಗತ್ತಿನಲ್ಲಿ ಬಂಧಿಯಾಗಿಯೋ ತಪ್ಪಿಸಿಕೊಂಡು ತಿರುಗುವ ಕಳ್ಳನಾಗಿಯೋ ಬಾಳುವ ಸ್ಥಿತಿ ಬಾರದೆ ಅದಕ್ಕೆ ಈ ಜಗತ್ತು ತನ್ನ ಮನೆ ಎಂದೆನ್ನಿಸಬೇಕಾದರೆ ಆಳವಾಗಿ ಲೌಕಿಕ ತಳಪಾಯವನ್ನು ಅದಕ್ಕಾಗಿ ಹಾಕಬೇಕು ಮತ್ತು ಅದನ್ನು ಯೋಗ್ಯ ರೀತಿಯಿಂದ ಕಾಯ್ದುಕೊಂಡು ಹೋಗಬೇಕು. ಧರ್ಮವು ಯುಕ್ತಿ ಯುಕ್ತವಾದ ವಿಚಾರದ, ಸಫಲ ಕೃತಿಯ ಮತ್ತು ಸರಿಯಾದ ಸಾಮಾಜಿಕ ಸಂಸ್ಥೆಗಳ ರೂಪದಲ್ಲಿ ವ್ಯಕ್ತವಾಗಬೇಕು" ಎಂದದ್ದು ಸರ್ ಎಸ್.ರಾಧಾಕೃಷ್ಣರು. ಭೂಗೋಲ, ಇತಿಹಾಸ, ಸಾಮಾಜಿಕ ಮನೋಧರ್ಮಗಳನ್ನು ಕಡೆಗಣಿಸಿ ಜೀವದ ಯೋಜನೆಯನ್ನು ಮತ್ತು ಆಡಳಿತಾದಿ ವ್ಯವಹಾರ ರೀತಿಗಳನ್ನು ರೂಪಿಸುವುದು ಅವಿಚಾರರಮಣೀಯ ಎಂಬಷ್ಟು ವಿವೇಕ ಮೂಡಿದ್ದರೆ, ಭಾರತವಿಂದು ಇಷ್ಟು ಅನ್ಯಾಯಗಳಿಂದ ಪ್ರಜಾ ದಮನಕ್ಕೆ ಕಾರಣವಾಗುತ್ತಿದ್ದಿಲ್ಲ, ಇಲ್ಲಿ ಅನರ್ಥಾಭಿವೃದ್ಧಿಯಾಗುತ್ತಿರಲಿಲ್ಲ, ಇದು ದುರ್ಬಲ ರಾಷ್ಟ್ರವಾಗಿ ಪರಿಣಮಿಸುತ್ತಿದ್ದಿಲ್ಲ. ಹಿಂದು ಧರ್ಮವೀಗ ಹಿಂದು ಆಳರಸರಿಂದ ದಮನಕ್ಕೊಳಗಾಗಿದೆ– ಅದೊಂದು ಮತವೆಂದು ಅವರು ತಪ್ಪಾಗಿ ತಿಳಿದುಕೊಂಡುದರಿಂದ. ಅದರಲ್ಲಿರುವ Secularism ಲೌಕಿಕ ಉದಾರ ನೀತಿಯು ಸರ್ವಗ್ರಾಹ್ಯವಾಗಿದೆ ಎಂಬುದನ್ನು ಕಾಣದೆ ಹೋಗಿ ರಾಷ್ಟ್ರದ ಹೊಣೆಯನ್ನು ಹೊತ್ತವರು ಧೃತರಾಷ್ಟ್ರರಾದದ್ದು ರಾಷ್ಟ್ರಕ್ಷಯದ ವಿವಿಧ ಕಲಹಬೀಜಗಳನ್ನು ಬಿತ್ತಿದೆ.

**"ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ**
**ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।**
**ಅರ್ಹನ್ನಿತ್ಯಥ ಜೈನ ಶಾಸನಪರಾಃ ಕರ್ಮೇತಿ ಮೀಮಾಂಸಕಾಃ**
**ಸೋಽಯಂ ವೋ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ॥"**

ಎಂಬ ಶಾಸನವು ತನ್ನ ಜಾತ್ಯತೀತ ಔದಾರ್ಯವನ್ನೂ ತತ್ವಸತ್ಯವನ್ನೂ ಎಂದೋ ಘೋಷಿಸಿದೆ. ಶೈವ, ವೇದಾಂತಿ, ಬೌದ್ಧ, ನೈಯಾಯಿಕ, ಜೈನ, ಮೀಮಾಂಸಕರೇ ಮೊದಲಾದವರ ಆರಾಧನಾ ಸ್ವಾತಂತ್ರ್ಯಕ್ಕಿಲ್ಲಿ ಎಂದೂ ಭಂಗ ಉಂಟಾದದ್ದಿಲ್ಲ. ಆದರೆ ಅಂದು ಅವರೆಲ್ಲರ ಸಾರ್ವಜನಿಕ ಸಮಯಾಚಾರಗಳ ಏಕರೂಪತೆಯನ್ನು ಸರಕಾರಿ–ಸಾವಕಾರಿ ವೃತ್ತಗಳೆಲ್ಲವೂ ಘೋಷಿಸಿಕೊಂಡು ಬಾರದೆ ಉಳಿದಿಲ್ಲ. ಮತಾಚಾರ–ಧರ್ಮ

(ಸಾಂಸ್ಕೃತಿಕ) ಆಚಾರಗಳಲ್ಲಿ ಒಂದು ಖಾಸಗಿ, ಇನ್ನೊಂದು ಸಾರ್ವಜನಿಕ. ಈ ಸಾರ್ವಜನಿಕತೆಯನ್ನು ಮಹಮ್ಮದೀಯರೂ ಕ್ರೈಸ್ತರೂ ಅನುಸರಿಸುವುದು ರಾಷ್ಟ್ರೀಯತೆಯ ಲಕ್ಷಣ; ಅದು ಮತಾಂತರಕ್ಕೆ ಕಾರಣವೆಂಬ ಕುಂಟುನೆಪವನ್ನು ಸರಕಾರ ಮನ್ನಿಸಬಾರದು. "ವಂದೇ ಮಾತರಂ" ಗೀತವನ್ನು ಗೌರವಿಸದಂಥ ಮನೋಭಾವನೆಯನ್ನು ಗೌರವಿಸುವುದು ಭಾರತೀಯ ಕ್ಲೈಬ್ಯ, ರಾಷ್ಟ್ರೀಯ ದೌರ್ಬಲ್ಯ, ಸುಪ್ರೀಕೋರ್ಟು ಅನುಕೂಲ ನಿರ್ಣಯಕೊಟ್ಟಿದ್ದರೂ ಸಾರ್ವಜನಿಕ ರಸ್ತೆಗಳಲ್ಲಿ ಮಸೀದೆ ಇದೆ ಎಂದು ವಾದ್ಯಬಾರಿಸದಿರುವುದು ಇನ್ನೊಂದು ಕ್ಲೈಬ್ಯ. ಹಾಗೇ ರಾಷ್ಟ್ರೀಯ ಗೌರವಾಚಾರಗಳಲ್ಲಿ ಕ್ರೈಸ್ತಪದ್ಧತಿಯನ್ನು ಹಿಡಿದಿರುವುದು ಮತ್ತೊಂದು ಕ್ಲೈಬ್ಯ. Spirit=Soul=ಆತ್ಮವನ್ನು ಹಿಂದು ಧರ್ಮವು ಇಂಥ ಅನೇಕ ಪರಾಚಾರ–ಪರವಿಚಾರಗಳ ದಾಸ್ಯದ ದೆಸೆಯಿಂದ ಕಳೆದುಕೊಂಡದ್ದು ಲಜ್ಜಾಸ್ಪದ. ಅದೇ ಅದರ ಕ್ಷಯಕ್ಕೆ (ಅರ್ಥಾತ್ ರಾಷ್ಟ್ರ ಶಕ್ತಿಯ ಕ್ಷಯಕ್ಕೆ) ಮತ್ತು ಸ್ವಾಭಿಮಾನ ಶೂನ್ಯತೆಗೆ ಅತ್ಯಂತ ಪ್ರಕಟವಾದ ಕಾರಣ. ಒಳಕಾರಣವು ವಿಚಾರವನ್ನು ಆಳವಾಗಿ ಮಾಡದ ಐಷಾರಾಮ ಪ್ರವೃತ್ತಿಯ, ಸುಖಲೋಲುಪ ನಾಸ್ತಿಕ್ಯದ, ಅಂಧಕಂದಾಚಾರ ಮಗ್ನತೆಯ ಅಥವಾ ಸ್ವಾಚ್ಛಂದ್ಯದ ಸೋಮಾರಿತನದ ರೂಪದಲ್ಲಿದೆ. "ಆಲಸ್ಯಂ ಹಿ ಮನುಷ್ಯಾಣಾಂ ಶರೀರಸ್ಥೋ ಮಹಾರಿಪುಃ" ಎಂಬುದು ತ್ರೈಕಾಲಿಕ ಸತ್ಯವಲ್ಲವೇ?



# ೨೮

# ಆತ್ಮ ಸಾಕ್ಷಿ

"ಬುದ್ಧಿಃ ಕರ್ಮಾನು ಸಾರಿಣೀ" ಎಂಬುದು ಸಾಮಾನ್ಯರ ಜೀವನ ಸತ್ಯವಾಗಿರುವುದರಿಂದ, ಕರ್ಮವು ಸಂಸ್ಕಾರದಾಯಕವಾಗಿರುವುದರಿಂದ, ಸಾರ್ವಜನಿಕ ಆಚಾರಗಳಲ್ಲಿ ರಾಷ್ಟ್ರೀಯ ಏಕಪ್ರಕಾರಕತೆ ಇರುವುದು ಅಪೇಕ್ಷಣೀಯ. Professional Morals–ವೃತ್ತಿಧರ್ಮವೆಂದು ವಕೀಲರು ಹೇಳಿಕೊಂಡು ತಾವೇ ಕಂಡ ಖೂನಿಗಾರನ ಪ್ರಕರಣದ ಬಗೆಗೂ ಸತ್ಯವನ್ನು ಹೇಳದ ರೀತಿಯು ವ್ಯಾಪಾರ, ಕೃಷಿ, ಉತ್ಪಾದನೆ, ರಾಜ್ಯಭಾರ, ಶಿಕ್ಷಣ, ಸಾಕ್ಷಿದಾರಿಕೆ, ನ್ಯಾಯಾಧೀಶತ್ವ ಎಂಬ ಎಲ್ಲವುಗಳಲ್ಲೂ ಒಂದಲ್ಲ ಒಂದು ರೂಪದಿಂದ ಕಂಡುಬರುತ್ತಿರುವುದು ಅಭಾರತೀಯ. ಯಾವ ವಿಶಿಷ್ಟ ಧರ್ಮವೂ ಸಾಮಾನ್ಯ (ಶಾಶ್ವತ) ಧರ್ಮಪಂಚಕಕ್ಕೆ ವಿರೋಧಿಯಾಗಿರಕೂಡದು. ಪಾತ್ರಾಪಾತ್ರವಿವೇಕವನ್ನಾಧರಿಸಿದ ಪಂಚಮಹಾ ಧರ್ಮದ ದೃಷ್ಟಿಯ ವ್ಯಾಪ್ತಿಯು ಯಾವ ವೃತ್ತಿಧರ್ಮಕ್ಕೂ ಇಲ್ಲ ಎಂಬುದು ವಿದ್ಯಾವಂತರಿಗೆ ಕಲಿಸಲ್ಪಟ್ಟಿಲ್ಲ, ಕಾಯಿದೆಗಳು ಆ ಬಗ್ಗೆ ಏನನ್ನೂ ಹೇಳವು, ನ್ಯಾಯದಾನಪದ್ಧತಿ ನಿರ್ಜೀವಯಂತ್ರದಂತೆ ತಟಸ್ಥ! ವರ್ಣಿಗಳೆಂದರೆ ವೃತ್ತಿ ಹಿಡಿದವರು, ಲಿಂಗಿಗಳು ವೃತ್ತಿನಿಯಮಗಳಿಂದ ಹೊರಗಿರುವವರು. ಈ ಎಲ್ಲರೂ ಸಾಮಾನ್ಯಧರ್ಮದ ಹಿಡಿತದೊಳಗೇ ತಮ್ಮ ವೃತ್ತಿ ಹಾಗೂ ವ್ಯಕ್ತಿಧರ್ಮಗಳನ್ನು ರೂಪಿಸಿಕೊಳ್ಳುವುದು ಭಾರತೀಯ. ಇದರಿಂದ ರಾಷ್ಟ್ರಧರ್ಮ (ಸಾಮಾನ್ಯಧರ್ಮ) ಪ್ರಜಾಧರ್ಮಗಳಲ್ಲಿ ಘರ್ಷಣೆಯುಂಟಾಗದು. ವರ್ತನೆಯಲ್ಲಿ ಕಂಡುಬಾರದ ಧರ್ಮವು ಧರ್ಮವಲ್ಲ.

"When finally it is realised that all beings are identified through their common origin in God or Brahman, the whole world becomes an expanded self of the agent and egoism and altruism coincide – ತಮ್ಮ ಸರ್ವಸಾಧಾರಣ ಸಂಭವ ಸ್ಥಳವಾದ ದೇವ ಅಥವಾ ಬ್ರಹ್ಮದ ಮೂಲಕ ಎಲ್ಲ ಚರಾಚರಗಳ ಸಾರಭೂತ ಐಕ್ಯವನ್ನು ಅರಗಿಸಿಕೊಂಡಾಗ, ಇಡಿ ಜಗತ್ತು ಕಾರ್ಯಕರ್ತೃತ್ವದ ವಿಸ್ತೃತ ಆತ್ಮವಾಗುವುದು ಮತ್ತು ಸ್ವಾರ್ಥ–ಪರಾರ್ಥಗಳು ಏಕೀಕೃತವಾಗುವುವು" ಎಂಬ ಎಚ್.ಡಿ.ಭಟ್ಟಾಚಾರ್ಯ ಸೂತ್ರವು ರಾಷ್ಟ್ರೈಕ್ಯದ ಗಾಯತ್ರಿ. "ಅದ್ವೈತಂ ಸುಖ–ದುಃಖಯೋಃ"

ಎಂದು ಭವಭೂತಿ ಹಿಂದೆ ಈ ಮಂತ್ರವನ್ನು ಹೇಳಿದ್ದ. ಆದರೆ ಲೌಕಿಕ ಐಕಾತ್ಮ್ಯವನ್ನಾದರೂ ಸಾಧಿಸುವುದು ಹೇಗೆ? ಇಷ್ಟವಿದ್ದಲ್ಲಿ ಮಾರ್ಗವಿದೆ. ಇಷ್ಟ ಬರುವುದು ಹೇಗೆ? ಬುದ್ಧಿ ಇದ್ದವರಿಗೆ ನಿಶ್ಚಿತವಾದ ಇಷ್ಟ ಬರುವುದು ಸುಲಭ. ಅದು ಇದ್ದವರು ಈಗ ಈ ದೇಶದಲ್ಲಿ ಕಡಿಮೆ. ರಾಷ್ಟ್ರೀಯ ಸಾರ್ವಭೌಮತೆ ಅನಿವಾರ್ಯ ಇಂದು ಎಂಬುದೂ ಅವರಿಗೆ ಹೃದ್ಗತವಾಗಿಲ್ಲ. ಪ್ರಚಾರ ಮಾಡಿದ್ದರಿಂದ ಅತ್ಯಾಪತ್ (ಅದೂ ಸಾಮಾನ್ಯ ಆಪತ್ಕಾಲವಲ್ಲ) ಕಾಲದಲ್ಲಿ ಮಾತ್ರ ಎಲ್ಲಾದರೂ ವಿದೇಶೀಯ ದಾಳಿಗಾರರ ವಿರುದ್ಧವಾಗಿ ಐಕಮತ್ಯವುಂಟಾದೀತು. ಇಲ್ಲವಾದರೆ ಇಲ್ಲವೇ ಇಲ್ಲ. ಈ ಅಪ್ರಿಯ ಸತ್ಯಕ್ಕೆ ಮದ್ದೆಲ್ಲಿಯದು? “ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿಕರ್ಷತಿ.” ಇಂದ್ರಿಯ ಗ್ರಾಮ ಸ್ವರಾಜ್ಯವೇ ಅನೇಕರಿಗಿಲ್ಲಿ ಗ್ರಾಮ ಸ್ವರಾಜ್ಯ!

ಅದಕ್ಕಾಗಿಯೇ ಚತುರುಪಾಯಗಳಲ್ಲಿ ದಂಡ ಎಂಬುದನ್ನು ತಪ್ಪದೆಯೇ ಹೇಳಲಾಗಿದೆ. “ಸರ್ವೋ ದಂಡ ಜಿತೋ ಲೋಕೋ ದುರ್ಲಭೋಹಿ ಶುಚಿರ್ನರಃ” ಎಂದ ಮನು; “ಭಯಾದಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ। ಭಯಾದಿಂದ್ರಶ್ಚಾಗ್ನಿಶ್ಚ ಮೃತ್ಯುರ್ಧಾವತಿ ಪಂಚಮಃ” ಎಂದದ್ದು ಉಪನಿಷತ್ತು. ನಯವು ನಡೆಯದಿದ್ದಲ್ಲಿ ಭಯವೊಂದೇ ಲೋಕ ಸಾಧನ. ಜೀವನದಲ್ಲಿ ಸಹ್ಯ–ಅಸಹ್ಯಗಳೆರಡೂ ಇರುವುದರಿಂದ ಅಸಹ್ಯದ ಪರಿಹಾರ ಸಹ್ಯದಿಂದಾಗದಂಥ ಸಂದರ್ಭಗಳಲ್ಲಿ ಅಸಹ್ಯವನ್ನೇ ಬಳಸಬೇಕಾಗುತ್ತದೆ. “ಮಾಯೆಯನು ಮಾಯೋಪಯೋಗದಲಿ” “ಕಂಟಕೇನೈವ ಕಂಟಕಂ” ಆಪದ್ಧರ್ಮಗಳು. ಇದಕ್ಕೆ ಪ್ರಜಾಪ್ರಭುತ್ವದ ಬೇಲಿಯೂ ಇಲ್ಲ, ವ್ಯಕ್ತಿಸ್ವಾತಂತ್ರ್ಯದ ಅವಲಕ್ಕಿಯನ್ನು ಕುಟ್ಟುವುದೂ ಇಲ್ಲ. ಲೇಖನಿಯಿಂದ ಗೆರೆ ಎಳೆದಷ್ಟೇ ಲೀಲಾಜಾಲವಾಗಿ ಮಹಾನಾಯಕರು ಶಸ್ತ್ರಬಲದಿಂದ ಐಕಮತ್ಯವನ್ನು ಒಮ್ಮೆ ಸಾಧಿಸಿ ಅನಂತರ ಅಶಸ್ತ್ರ ಬಲದಿಂದ ಅದನ್ನು ಸಂವರ್ಧಿಸುತ್ತಾರೆ. ಹಿತಮಿತ ಭಯದಿಂದ ಭಕ್ತಿ ಹುಟ್ಟುವುದು ಕಪಟವಲ್ಲವೆಂಬುದು ಅನುಭವಸಿದ್ಧ. ಭಯಾಭಯಗಳಿಗೆ ದಾನಾದಾನಗಳಿಗಿರುವಂತೆಯೇ ಪಾತ್ರಾಪಾತ್ರ ವಿವೇಕವಿರುವುದು ಸಾಂಸ್ಕೃತಿಕಸೂತ್ರ. ಶಠರೂ ಮೂರ್ಖರೂ ಬೋಧ ಮಾತ್ರದಿಂದ ಯಾವ ಸುಗುಣವನ್ನೂ ಅಳವಡಿಸಿಕೊಳ್ಳುವುದಿಲ್ಲ ಅವರು ಸಮಾಜ ಕಂಟಕರು. ಶಿಕ್ಷೆಯ ಅತ್ಯಂತ ಭೌತಿಕ ಸ್ವರೂಪದ ಉಗ್ರತೆಯೊಂದೇ ಅವರ ಶಿಕ್ಷಣಕ್ಕೆ ಸಾಧನ. ಯಾರನ್ನು ಯಾರೂ ಆಳೆಯಲಾರರು ಎಂಬುದು ಸರ್ವವ್ಯಾವಹಾರಿಕ ಯುಕ್ತಿ ಸೂತ್ರಕ್ಕೂ ವಿರುದ್ಧ. ಕೆಲವರಿಗೆ ಇತರರಿಗಿಂತ ಅಂಥ ಸೂಕ್ಷ್ಮಜ್ಞತೆಯು ಸಂಸ್ಕಾರ–ಪ್ರಕೃತಿಗಳಿಂದ ಲಭಿಸಿರುತ್ತದೆ ಎಂಬುದು ಹಾಗೆ ಲಭಿಸಿದವರಿಗೆ ಸಹ ಗೊತ್ತಾಗಿರುತ್ತದೆ. ಹಾಗೆ ಗೊತ್ತಾಗುವುದೇ ಆತ್ಮಸಾಕ್ಷಿ. ಆತ್ಮಸಾಕ್ಷಿಯು ಪ್ರಯೋಗ ವಿಜ್ಞಾನಾತೀತವಾದಾಕ್ಷಣ ಅಸತ್ಯವಲ್ಲ. ಎಲ್ಲ ಪ್ರಯೋಗ ವಿಜ್ಞಾನಕ್ಕೂ ಮೂಲಾಧಾರ ಆತ್ಮಸಾಕ್ಷಿಯೇ. ಇನ್ನು ಮನಃಸಾಕ್ಷಿಯೊಮ್ಮೆ ಸಂಸ್ಕಾರ ಜನ್ಯತ್ವದ ದೆಸೆಯಿಂದ ಅನವಲಂಬನೀಯವಾದೀತು; ಆತ್ಮಸಾಕ್ಷಿ ಎಂದೂ ಹಾಗಾಗಿಲ್ಲ. ಹುಟ್ಟಿದ–ಸತ್ತ ಜಂತುಗಳ ವ್ಯತ್ಯಾಸವು ಆತ್ಮಾಸ್ತಿತ್ವಕ್ಕೆ ಸಾಧನವಾಗಿರುವುದು ಸರ್ವವೇದ್ಯವಾಗಿರುವಾಗಲೂ ಅದನ್ನು ಪ್ರಶ್ನಿಸುವುದು ಯುಕ್ತಿಯುಕ್ತವಲ್ಲ, ಅದಕ್ಕೆ ಭಗವದ್ಗೀತೆಯ ಆಧಾರ ಅನಗತ್ಯ. ಗಾಳಿ

ಆತ್ಮವಲ್ಲ ಎಂಬುದು ಪ್ರಯೋಗಸಿದ್ಧ. ಕಾವ್ಯಮಯ ಭಾಷೆಯಲ್ಲದು "ಬೆಳಕಿಗಿಂತ ಬೆಳ್ಳಗೆ, ಗಾಳಿಗಿಂತ ತೆಳ್ಳಗೆ" ಇರುತ್ತದೆ. ಆದರದು ಸರ್ವಾಧಾರ, ಸರ್ವಮೂಲ, ಅದಿಲ್ಲದೆ ಹೋದರೆ ಯಾವುದೂ ಇಲ್ಲ! ಅಂಥ ವಸ್ತುವಿನ ಸಾಕ್ಷಿಯು ಅಪ್ರತಿಹತ, ಅತ್ಯಂತ ವೈಜ್ಞಾನಿಕ, ಅದರ ಪ್ರಕಾರ ನ್ಯಾಯಾಧೀಶತ್ವ–ಮಹಾಗುರುತ್ವಗಳು ಗುರುತಿಸಲ್ಪಡುತ್ತವೆ. ಕೇವಲ ಶಬ್ದ, ಅಂಕ, ಸಂಕೇತ (ಪ್ರತೀಕ)ಗಳ ವ್ಯವಹಾರದಿಂದಲ್ಲ. ಅವುಗಳನ್ನಾಧರಿಸಿದ ಊಹೆ, ನಿಗಮನಗಳಿಂದಲ್ಲ. ದಂಡವು ಸರ್ವತ್ರನಿಂದ್ಯವೆಂಬುದು ಅದು ಸರ್ವತ್ರ ವಂದ್ಯವೆಂಬಷ್ಟೇ ಅಧಾರ್ಮಿಕ. ಸಂದರ್ಭ–ಸಂಬಂಧಗಳ ಸೂಕ್ಷ್ಮ ಜ್ಞಾನವಿಲ್ಲದಾಗ ನಿಯಮ–ಅಪವಾದಗಳಲ್ಲಿ ಅದು ಅಥವಾ ಇದು ಅಪಪ್ರಯುಕ್ತ ಇಲ್ಲವೆ ಅಪ್ರಯುಕ್ತವಾಗುತ್ತವೆ. ಪರಿಣಾಮವು ಅದರ ಗುಣವನ್ನು ಸ್ಪಷ್ಟವಾಗಿ ಹೊರಗೆಡಹುತ್ತದೆ.



# ೨೯

# ಪ್ರಶಾಸನದ ಪ್ರಾಮುಖ್ಯ

ಆಡಳಿತದ ಅಧಿಕಾರ, ಜವಾಬುದಾರಿ, ಅಹಂಕಾರ, ಜಂಭಗಳ ಮಿಶ್ರಣದ ದೆಸೆಯಿಂದ ಆತ್ಮಾನಾತ್ಮವಿವೇಕ, ಸದಸದ್ವಿವೇಕಗಳು ಯಾವುದರ ಅತಿರೇಕದ ಅಥವಾ ನ್ಯೂನ್ಯತೆಯ ದೆಸೆಯಿಂದ ಲುಪ್ತವಾಗುತ್ತವೆ ಎಂಬುದು ತಿಳಿಯದಾಗುತ್ತದೆ– ಎಷ್ಟೋ ಸಲ. ಪರಿಸ್ಥಿತಿಯ ನಿಜಸ್ಥಿತಿಯನ್ನು ತಿಳಿಯಲಾರದೆ ತಿಳಿದೆವೆಂದುಕೊಳ್ಳುವ ಪಾತ್ರಗಳ ರಿಪೇರಿಯೇ ಶಿಕ್ಷಣ, ಉಪಶಿಕ್ಷಣ, ಪ್ರಶಿಕ್ಷಣಗಳ ಮೂಲ ಉದ್ದೇಶ. ಆದರೆ ಅವುಗಳ ಕರ್ತರೇ ಅಜ್ಞರಾಗಿರುವ ಸಂದರ್ಭಗಳಲ್ಲಿ ಅವಾವುವೂ ಫಲಿಸವು. ಮೂಲವೇ ಅದೃಢ, ಅಸಮರ್ಪಕ ಎನ್ನಿಸಿರುವಾಗ ಕಾಂಡ, ಕೊಂಬೆ, ಹೂ–ಹಣ್ಣುಗಳು ಹೇಗೆ ಸಮರ್ಪಕವಾದಾವು? ಮೂಲಶಿಕ್ಷಣವೇ Fundamental thinking–ಆಧಾರ ಸತ್ಯಗಳನ್ನೇ ಪ್ರಶ್ನಿಸಿ ಸರ್ವಪೂರ್ವ ಪಕ್ಷಗಳೆದುರಿಟ್ಟು ಸಮರ್ಥ ಉತ್ತರ ಪಕ್ಷಗಳಿಗೆ ಬಂದು ಮುಟ್ಟುವುದು. ಅ, ಆ, ಇ, ಈ ಕಲಿಯುವುದು ಈ ಸಂದರ್ಭದಲ್ಲಿ ಮೂಲಶಿಕ್ಷಣವಲ್ಲ.

ರಾಷ್ಟ್ರದ ವರ್ತಮಾನವು ಅದರ ಸಂಚಿತ–ಪ್ರಾರಬ್ಧಗಳ ಫಲ, ಭವಿಷ್ಯವು ಅದರ ವರ್ತಮಾನವು ಸಂಚಯಿಸುವ ಮತ್ತು ಪ್ರಾರಂಭಿಸುವ ಕರ್ಮಗಳ ಫಲ. ಕರ್ಮಶಕ್ತಿಯು ಜಗದಾಧಾರ – ಆ ಜಗತ್ತು ಒಳ್ಳೆಯದಾಗುವುದು ಅಥವಾ ಕೆಟ್ಟದ್ದಾಗುವುದು ಅದರಿಂದಲೇ. ಪೂರ್ವ ಕರ್ಮ– ಅಪರಕರ್ಮಗಳ ಶಕ್ತಿಗಳು ಸಮವಿರುದ್ಧವಾದಾಗ ಯಾವ ಫಲವೂ ಉಂಟಾಗದು. ಶಕ್ತಿಸಾಮ್ಯ – ಶಕ್ತಿವೈಷಮ್ಯಗಳು ಕರ್ಮಯೋಗ್ಯತೆಗೆ ಒಳಪಟ್ಟಂಥವು. ವ್ಯಕ್ತಿಕರ್ಮದ ಲೆಕ್ಕಾಚಾರವು ಯಾವಾಗಲೂ ಸಮಾಜ ಕರ್ಮದ ಲೆಕ್ಕಾಚಾರಕ್ಕೆ ಅಧೀನ: ಜೀವಶಕ್ತಿಯು ಸರ್ವವ್ಯಕ್ತಿಗಳಿಗೆ ಸಾಧಾರಣವಾದ ಸಾಮಾಜಿಕ ಆತ್ಮಸ್ವರೂಪದಲ್ಲಿ ವಿಶ್ವವ್ಯಾಪಕವಾಗಿರುವುದರಿಂದ ರಾಷ್ಟ್ರವು ಪಾರ್ಥಿವಸಮಾಜದ ಒಂದು ಗಣ್ಯ ಘಟಕ. ನರ ಸಮಾಜವೀಗ ಐಕಾತ್ಮ್ಯಜ್ಞಾನದ ಜಾಗರದಲ್ಲಿಲ್ಲ; ಭಿನ್ನವಾದ ರಾಷ್ಟ್ರಾತ್ಮಜ್ಞಾನದ ಜಾಗರದಲ್ಲಿದೆ. ಈ ವಸ್ತುಸ್ಥಿತಿಯನ್ನು ಗಮನಿಸದೆ ಹೋದರೆ ಅಪಾಯವು ನಿಶ್ಚಿತ. ರಾಷ್ಟ್ರದ ಐಕಾತ್ಮ್ಯಕ್ಕೆ ಆರ್ಥಿಕ ವೈಷಮ್ಯ–ಸಾಂಸ್ಕೃತಿಕ ತಾರತಮ್ಯಗಳು ಮಹಾವಿಘ್ನಗಳು. ಸಂಸ್ಕೃತಿಯು ಸಾಮಾಜಿಕ–ಸಾರ್ವಜನಿಕ ವರ್ತನೆಗಳೆಲ್ಲವನ್ನೂ ಒಳಗೊಳ್ಳುತ್ತದೆ; ಮತಧರ್ಮ–ಭಾಷೆಗಳು ಅದಕ್ಕೆ ಹೊರತಾಗಿಲ್ಲ. ಆದುದರಿಂದಲೇ ಅಖಿಲಭಾರತೀಯತೆಯನ್ನು ಇನ್ನೂ

ದೃಢಗೊಳಿಸಬೇಕಲ್ಲದೆ, Divirsity in unity or unity in diversity ಐಕ್ಯಗತ ವೈವಿಧ್ಯ ಅಥವಾ ವೈವಿಧ್ಯಗತ ಐಕ್ಯ ಎಂಬ ಅತಿವ್ಯಾಪ್ತಿಯ ಸೂತ್ರದ ಹೆಸರಿನಲ್ಲಿ ಅನೈಕ್ಯಪೋಷಣೆಯನ್ನು ಮಾಡುವ ಮತ್ತು ಅಲ್ಪಸಂಖ್ಯಾತರ ಹಾಗೂ ಹಿಂದುಳಿದವರ ಹೆಸರಿನಲ್ಲಿ ಪ್ರತ್ಯೇಕತೆಯನ್ನು ಚಿರಸ್ಥಾಯಿಗೊಳಿಸುವ ಧೋರಣೆ ರಾಷ್ಟ್ರಘಾತುಕವಾದುದು. ಜೊತೆಗೆ, Family Planning ಕುಟುಂಬ ಯೋಜನೆಯ ಪ್ರಚಾರವನ್ನು ಮಕ್ಕಳು ಮರಿಗಳೆದುರು ಮಾಡುವ ಅಸಹ್ಯ ಕ್ರಮದಂಥ ಕ್ರಮಗಳಿಂದ ದೇಶೀಯ ಮರ್ಯಾದೆಯನ್ನೂ ಮಾನಸಿಕ ಆರೋಗ್ಯವನ್ನೂ ಮಕ್ಕಳಲ್ಲಿ ಹಾಗೂ ಯುವಕ–ಯುವತಿಯರಲ್ಲಿ ಉಳಿಯದಂತೆ ಮಾಡುವ ಪರಮ ಅಪಜ್ಞಾನ ಬೇರೆ. ದೇಶ–ಕಾಲ–ಸಂದರ್ಭಗಳ ಯೋಗ್ಯತೆಯನ್ನು ಗಣಿಸದ ಆಚಾರ–ವಿಚಾರಗಳ ಪ್ರಕಟನೆಯು ಸದುದ್ದೇಶ ಸಾಧಕವಾಗದು, ದುಷ್ಪರಿಣಾಮಕಾರಿಯಾಗಿಯೇ ತೀರುವುದು. ಸಾಮಾಜಿಕ ಹೊಣೆಗಾರಿಕೆಯೆಲ್ಲವನ್ನೂ ಸರಕಾರ ಹೊರುವುದೀಗ ಈ ದೇಶದಲ್ಲಿ ಅಸಾಧ್ಯ– ಅದು ಹೊರುತ್ತೇನೆ ಎನ್ನುತ್ತದೆಯಲ್ಲದೆ ಹೊತ್ತಿಲ್ಲ! ಈ ಆಡುವ ಮತ್ತು ಮಾಡುವ ಭೇದವು ಜನಮನದ ಆರೋಗ್ಯವನ್ನು ಯಥೇಷ್ಟ ಕೆಡಿಸಿಬಿಟ್ಟಿರುವಾಗ, ಭಾವೈಕ್ಯದ ತಿರುಬೊಬ್ಬೆ ಬೇರೆ! ಹುಚ್ಚರ ಕೈಗೆ ರಾಜ್ಯಾಧಿಕಾರ ಸಿಕ್ಕಿದ್ದಕ್ಕೂ ಈ ವಿಧದ ವಿಸಂಗತ ವ್ಯವಹಾರದ ಕರ್ತೃತ್ವಕ್ಕೂ ವ್ಯತ್ಯಾಸ ಬಹಳ ಕಡಿಮೆ. ಪ್ರತಿದಿನವೂ ೧೯೭೧ರಲ್ಲಿ ಪತ್ರಿಕೆಗಳಲ್ಲಿ ರಾಜ್ಯಕರ್ತರ ಹೇಳಿಕೆಗಳು ಪ್ರಕಟವಾಗಿವೆ. ಅವುಗಳಲ್ಲಿಯ ಪರಸ್ಪರ ವಿಸಂಗತಿ ಮತ್ತು ಅವರಿವರ ವಸ್ತುಸ್ಥಿತಿಯ ವರ್ಣನೆಗಳಲ್ಲಿಯ ಹಾಗೂ ನಿಷ್ಫಲಾಶ್ವಾಸನಗಳ ಕಾರ್ಯಸ್ಥವಾದ ವಿಸಂಗತಿಗಳನ್ನು ಭಾರತವು ವೇದಕಾಲದಿಂದ ಈವರೆಗೆ ಒಮ್ಮೆಯೂ ಈ ಸಂಖ್ಯೆಯಲ್ಲಿ ಕಂಡಿಲ್ಲವೆಂಬುದು ಐತಿಹಾಸಿಕವಾದ ಅಪ್ರಿಯ ಸತ್ಯ. ಇಷ್ಟು ಕ್ಷುದ್ರರು ರಾಜಕಾರಣಿಗಳಾದದ್ದು ತಪ್ಪು. ಅದನ್ನು ತಿದ್ದಲು ಯಾವ ಮದ್ದೂ ತ್ಯಾಜ್ಯವಲ್ಲ, ಉಳಿದೆಲ್ಲ ವಿಕಲ್ಪಗಳೂ ಈ ಕ್ಷುದ್ರರಾಜ್ಯಭಾರಕ್ಕಿಂತ ಉತ್ತಮ. ಬ್ರಿಟಿಷ್ "ಬ್ರೆಯಿನ್‌ವಾಷ್" ಜೊತೆಗೆ ವ್ಯಕ್ತಿತ್ವದ ಕ್ಷುದ್ರತ್ವ– ಎಂಬೀ ಎರಡರಿಂದ ನಮ್ಮ ಸದ್ಯದ ನಾಯಕರಲ್ಲನೇಕರು ಅನಾಯಕರಾಗಿ ಹೋಗಿರುವುದು ಫಲದೃಷ್ಟ. ದೀರ್ಘಕಾಲಿಕ ಕ್ರಮವಿಕಾಸದ ಮಹಾಯೋಜನೆಯನ್ನು ದೇಶೀಯ ಪದ್ಧತಿಯಂತೆ ತಯಾರಿಸುವುದೂ ಅದನ್ನು ನಿಷ್ಠೆಯಿಂದ ಪಾಲಿಸುತ್ತ ಹೋಗುವಂತೆ ಬಲವಾದ ರಾಜ್ಯಪ್ರಶಾಸನವನ್ನಿಡುವುದೂ ಮಾನವ ಜಾತಿಗೆ ಅಸಾಧ್ಯವಾದುದಲ್ಲ. ಸ್ವಾರ್ಥದ ಅಲ್ಪತೆ ತನಗೆ ಬೇಡವಾದುದನ್ನು ಅಸಾಧ್ಯವೆಂದೋ ಅಯೋಗ್ಯವೆಂದೋ ಅನಾಧುನಿಕವೆಂದೋ ಅವೈಜ್ಞಾನಿಕವೆಂದೋ ತಳ್ಳಿಹಾಕುವುದನ್ನು ಬಗ್ಗುಬಡಿಯಬೇಕು. ಈ ಪದಗಳೆಲ್ಲವನ್ನೂ ಜನವಂಚನೆಗೆ ಸಾಧನವನ್ನಾಗಿ ಬಳಸಿಕೊಳ್ಳಲಾಗಿದೆ. ದೇಶೀಯ ಪದ್ಧತಿಯ ಜ್ಞಾನವು ಮಹಾಭಾರತದ ಶಾಂತಿಪರ್ವದಲ್ಲಿ ಮನುಸ್ಮೃತಿಯ ೬–೭ನೆಯ ಅಧ್ಯಾಯಗಳಲ್ಲಿ, ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ, ಚಾಲುಕ್ಯ ಸೋಮೇಶ್ವರನ ಮಾನಸೋಲ್ಲಾಸದಲ್ಲಿ, ಶುಕ್ರನೀತಿಸಾರದಲ್ಲಿ, ಕಾಮಂದಕೀಯ ನೀತಿಸಾರದಲ್ಲಿ, ಬೃಹಸ್ಪತಿ ನೀತಿಸಾರದಲ್ಲಿ ಮತ್ತು ಇತರ ಪುರಾಣೋಪಪುರಾಣಗಳ ರಾಜಧರ್ಮದ ಅಧಿಕರಣಗಳಲ್ಲಿ ಲಭ್ಯವಾಗುತ್ತದೆ. ಶಿಲಾ–ತಾಮ್ರಶಾಸನಗಳೂ ಅದರ ಆಕರಗಳು. ರಾಷ್ಟ್ರೀಯ ಆತ್ಮಜ್ಞಾನವು ಕೂಲಂಕಷವಾದ ಮತ್ತು ಆಮೂಲಾಗ್ರವಾದ ದೇಶೀಯ ಚರಿತ್ರೆಯ ರಾಜಾರ್ಥ ಧರ್ಮಗಳ

ಅಭ್ಯಾಸವೊಂದರಿಂದ ಮಾತ್ರ ಸಾಧ್ಯ. ಅದನ್ನೀಗ ಯಾರು ಯೋಚಿಸಿದ್ದಾರೆ? ಯಾರಿಗೆ? ಎಲ್ಲಿ? ಪ್ರಶಾಸಕತ್ವಕ್ಕಿದು ಏಕಮಾತ್ರನಿಕಷ; ಪ್ರತಿನಿಧಿತ್ವಕ್ಕಿದು ಮೂಲಾಧಾರ. ಚುನಾವಣೆಯ ತಿಕ್ಕೀಟನ್ನೀಗ ಯಾರಿಗೆ ಕೊಡಲಾಗುತ್ತಿದೆ ಎಂಬುದನ್ನು ಗಮನಿಸಿದರೆ, ಅವರು ಅವಲಂಬಿಸುವ ತಜ್ಞರ ಸ್ವರೂಪವನ್ನು ನೆನೆದುಕೊಂಡರೆ, ಬಂದ ಸ್ವರಾಜ್ಯ ಹೋಗಲು ಬಹಳ ಕಾಲ ಬೇಡ ಎಂಬುದು ಗೊತ್ತಾಗುತ್ತದೆ.



# ೩೦

# ಪದ್ಧತಿಯ ಪ್ರಾಧಾನ್ಯ

ಮಾನಸ ಶಾಸ್ತ್ರದಂತೆ Manner (method) is many times more important than matter– ವಸ್ತುವಿಗಿಂತ ವಸ್ತುವಿನ ವಿನ್ಯಾಸಕ್ಕೇ ಬಹಳ ಸಲ ಹೆಚ್ಚಿನ ಮಹತ್ವವಿರುತ್ತದೆ. ವಿನ್ಯಾಸ, ಸಂವಿಧಾನ, ಯೋಜನೆ, ರಚನೆ, ಸಂಘಟನೆ, ಸಂಯೋಜನೆ, ಕ್ರಮ ಪದ್ಧತಿಗಳು ಹೆಚ್ಚು ಕಡಿಮೆ ಏಕಾರ್ಥಕಗಳು. ಅವು ದೇಶೀಯ ರೀತಿಗಳು. ದೇಶೀಯ ನೀತಿಗಳನ್ನು ವಿದೇಶೀಯ ರೀತಿಗಳ ಮೂಲಕ ಜಯಪ್ರದವಾಗಿ ಜಾರಿಗೆ ತರುವುದು ಅಸಾಧ್ಯವೆಂಬುದು ಶುದ್ಧ ವೈಜ್ಞಾನಿಕ ಸತ್ಯ. ಸ್ವರಾಜ್ಯಾಧಿಕಾರವನ್ನು ಪಡೆದ ಕೆಲ ಚುನಾಯಿತರ ಗತಿಯು–

**"ಮರ್ಕಟಸ್ಯ ಮಧುಪಾನಂ ಮಧ್ಯೇ ವೃಶ್ಚಿಕದಂಶನಂ**
**ತನ್ಮಧ್ಯೇ ಭೂತಸಂಚಾರೋ ಯದ್ವಾತದ್ವಾ ಭವಿಷ್ಯತಿ"**

ಎಂಬಂತಾದುದು ದೇಶೀಯ ಪದ್ಧತಿಗಳ ಅಜ್ಞಾನದಿಂದಲೇ. ಸ್ವದೇಶಾಭಿಮಾನವನ್ನು ವಿದೇಶೀಯ ಪದ್ಧತಿಗಳು ಶೂನ್ಯಕ್ಕೆ ಇಳಿಸಿಯೇ ತೀರುತ್ತವೆ. ವಿದೇಶೀಯ ವೈಜ್ಞಾನಿಕ ಯಂತ್ರೋಪಕರಣಗಳ ಗ್ರಾಹ್ಯತೆ ಕೆಲವೆಡೆ ಇರಬಹುದಾದಷ್ಟರಿಂದ ಎಲ್ಲ ವಿದೇಶೀಯ ಆಚಾರ–ವ್ಯವಹಾರಗಳೂ ಗ್ರಾಹ್ಯವೆಂದು ತಿಳಿದು ದೇಶಕ್ಕೆ ಅಪಚಾರವನ್ನೆಸಗಲಾಗಿದೆ. ಇಂಥ ಮಹಾಪಚಾರವು ಇತಿಹಾಸದಲ್ಲಿ ಇಲ್ಲಿ ಇಷ್ಟು ವ್ಯಾಪಕವಾಗಿ ಎಂದೂ ಆಗಿದ್ದಿಲ್ಲ. Assimilation ರಕ್ತಗತವಾಗುವಿಕೆಗೆ ಮೊದಲು Digestion ಜೀರ್ಣವಾಗುವುದು ಅಗತ್ಯ. ಜೀರ್ಣಿಸಿಕೊಳ್ಳಲಾಗದ ಕಲ್ಲುಗಳನ್ನು ನುಂಗಿ "ಪೂರ್ವಾಷಾಢ" ಹಿಡಿದ ರೋಗಿಯಾಗಿದೆ ಈಗ ರಾಜ್ಯಭಾರ. ಸ್ವದೇಶೀಕರಣದ ರಹಸ್ಯವನ್ನರಿಯದುದಕ್ಕೆ ಕನ್ನಡ ಭಾಷೆಯ ಮೈಸೂರು ರೂಪಗಳಲ್ಲಿ ಅನೇಕ ಉದಾಹರಣೆಗಳು ದೊರಕುತ್ತವೆ. ಅಲ್ಪಜ್ಞತೆಯನ್ನು ಪ್ರಾಜ್ಞತೆಯೆಂದುಕೊಳ್ಳುವ ಅಧಿಕಾರಸ್ಥಾನೀಯ ವಿದ್ವಾಂಸರೀಗ ಹುಟ್ಟಿದ್ದಾರೆ. ೧೯೪೭ರ ಅನಂತರದ ತಲೆಮಾರು ಈ ದುರವಸ್ಥೆಯನ್ನು ಬೆಳೆಯಿಸಿಕೊಂಡು ಬರಲು ಅದರ ಹಿಂದಿನ ತಲೆಮಾರಿನವರಲ್ಲಿಯ ಕೆಲಗಣ್ಯ ದುರವಸ್ಥಿತರು ಕಾರಣರೆಂಬುದನ್ನು ಕಂಡುಕೊಂಡು ಕಸ–ಮುಸುರೆಗಳನ್ನು ಗುಡಿಸಿ ತೊಳೆದು ಒಗೆಯುವಂತೆ ಜನತೆಯೀಗ ಶುದ್ಧೀಕರಣವನ್ನು ಹಿಡಿಯುವುದು ಅಗತ್ಯ. ದಿವಂಗತ ಪಂಡಿತ ಜವಾಹರಲಾಲರು ಸಾಂಸ್ಕೃತಿಕವಾಗಿ ಅಸ್ವದೇಶೀಯರಾಗಿದ್ದುದು ಇಂಥ ಪರಿಸ್ಥಿತಿಗೆ ಅತಿದೊಡ್ಡ ಕಾರಣ. ಯಥಾ ರಾಜಾ ತಥಾ

ಪ್ರಜಾ – ಎಂಬುದು ವ್ಯಾವಹಾರಿಕ ಮನಃಶಾಸ್ತ್ರ ಸೂತ್ರವಲ್ಲವೇ? ಅರವಿಂದ–ಸಾಯಿಬಾಬಾದಿ ಸ್ವಾಮಿಗಳ ಅಥವಾ ಗುರುಗಳ ಮೇಲಿನ ಭಕ್ತಿಯೂ ಹ್ಯಾಟು–ಬೂಟು–ಕೋಟುಗಳೂ ಸಾಮಾನ್ಯವಾಗಿ ಹಂಡ–ಬಂಡ ಮನಸ್ಕರನ್ನು ಹಡೆಯಲಾರಂಭಿಸಿದ್ದಿಲ್ಲಿ ಸುಸ್ಪಷ್ಟ. ಸಂಸ್ಕೃತಿಯ ಅಂತಃಪ್ರಕಾರ ಮತ್ತು ಅದನ್ನು ವ್ಯಕ್ತಪಡಿಸುವ ನಾಗರಿಕತೆಯ ಬಹಿಃಪ್ರಕಾರಗಳು ಸುಸಂಬದ್ಧವೆಂದು ದೇಶೀಯವಾಗಿ ತೋರದಾಗ ಕಪಟಾಚಾರಗಳಿಗೆ ಮನುಷ್ಯರ ಮನಸ್ಸು ಬಹಳ ಸಲ ಇಳಿಯುತ್ತದೆ. ರಾವಣ ಸಂನ್ಯಾಸಿತ್ವವು ಮತಧರ್ಮದಲ್ಲಿ ಮಾತ್ರವಲ್ಲ, ಮಾನವನ ಚಟುವಟಿಕೆಗಳ ಎಲ್ಲ ಕ್ಷೇತ್ರಗಳಲ್ಲೂ ಅವತರಿಸುವುದು ಅನುಭವಸಿದ್ಧ. ಕಪಟವೆಂಬ ವಿಶೇಷಣವನ್ನು ಉಳ್ಳ ಯಾವ ರಾಷ್ಟ್ರೀಯತಾ ಪ್ರದರ್ಶನವೂ ರಾಷ್ಟ್ರೀಯತಾ ದರ್ಶನವೆನ್ನಿಸದು.

ಸ್ವತಂತ್ರ ವಿಚಾರವು ಬಹಳ ಅಗ್ಗವಾದ ವಿಲಾಸವಾಗುವಂತೆ ಪ್ರಚಾರಮಾಡಿದ ನಮ್ಮ ರಾಜ್ಯಕರ್ತರ ಪರತಂತ್ರವಿಚಾರವು ಹೇಯ. ನಿಸರ್ಗತಃ ಮಾನವರ (I.Q.) ಮೇಧಾಶಕ್ತಿಯು ವಿಷಮ; ಅದರ ಸರ್ವಸಮಾನತೆಯನ್ನು ಯಾವ ವಿಜ್ಞಾನವೂ ಸಾಧಿಸಲಾರದು. ಆದುದರಿಂದ ಅಮೇಧಸರಲ್ಲಿ ತಪ್ಪುಕಲ್ಪನೆ ಉಂಟಾಗದಂತೆಯೇ ಜ್ಞಾನಪ್ರಸಾರ ಮಾಡುವುದು ಸುಮೇಧಸರ ಕರ್ತವ್ಯ; ಆಗದಿದ್ದರೆ ಸುಮ್ಮನಿರಬೇಕು. ಈ ರಾಷ್ಟ್ರಧರ್ಮಕ್ಕೀಗ ತಿಲಾಂಜಲಿಯನ್ನಿತ್ತು ದುರ್ಮೇಧಸರಾದವರ ಗಣ್ಯತೆ ಗರ್ಹಣೀಯ. ದುರ್ಮೇಧಸರೇ ರಾಕ್ಷಸರು. ಅವರ ಸಂಹಾರವನ್ನೇ ಪುರಾಣಗಳು ಹಾಡಿವೆ. ಯಾದವೀಯ ಕಲಹವು ಸರ್ವತ್ರ ನಿಂದ್ಯವಲ್ಲ. ಹಾಗೆ ನಿಂದ್ಯವೆಂದು ತಿಳಿದು ಸುಮ್ಮನಿದ್ದಿದ್ದರೆ ಕಂಸಸಂಹಾರವಾಗದೆ ಭಾರತವು ಅನಾಗರಿಕತೆಗಿಳಿದು ಹೋಗುತ್ತಿತ್ತು. ಕಾರಣಾನ್ವೀಕ್ಷಣೆಯೇ ನ್ಯಾಯಶಾಸ್ತ್ರದ ಮೂಲ ಸೂತ್ರ. ಫಲದ ಯೋಗ್ಯತೆಯು ಕಾರಣ (ಉದ್ದೇಶ ಕೂಡ)ದಿಂದ ನಿರ್ಣೇಯ. ಫಲಕ್ಕೂ ಕಾರಣಕ್ಕೂ ನಡುವಿನ ಸೇತುವಾದ ಕಾರ್ಯ (ಕ್ರಿಯಾ) ಸಂತಾನವು (Means) ಕಾರಣಾನುಸಾರವೂ ಫಲಾನುಗುಣವೂ ಆಗಿರಬೇಕು. ಈ ಸೂತ್ರದಲ್ಲಿ Ends and means ಸಿದ್ಧಿ–ಸಾಧನಗಳ ಶುದ್ಧಿತ್ವದ ಸಮಸ್ಯೆಗೆ ಸ್ಥಳವಿಲ್ಲ. ಶುದ್ಧತೆಯು ರಾಷ್ಟ್ರೀಯರ ಸುದೀರ್ಘಕಾಲಿಕ ಹಿತಸಾಧನೆಯ ಸಾಮರ್ಥ್ಯವಲ್ಲದೆ ಕ್ಷಣಿಕ ಲಾಭದಾಯಕತೆಯಲ್ಲ. ದೈರ್ಘ್ಯವು ಶತಸಂವತ್ಸರ ಪರಿಮಾಣಕ್ಕೆ ಅಥವಾ ೧೨೦ ವರ್ಷಗಳಿಗೆ ಪರಿಸೀಮಿತ. ಮಾನವನ ಪರಮಾವಧಿಕ ಆಯುರ್ದಾಯದ ಸಾಮಾನ್ಯ ನಿಯಮದ ವಿಶೇಷೋದಾಹರಣೆಯದು. ೨೪ ತಾಸುಗಳ, ೩೦ ದಿನಗಳ, ೧೨ ತಿಂಗಳುಗಳ, ೫ ಮುಂತಾದ ವರ್ಷಗಳ ಯೋಜನೆಗಳೆಲ್ಲವೂ ಜೀವನದ ಶತಸಾಂವತ್ಸರಿಕ ಯೋಜನೆಯನ್ನು ಭಂಗಿಸುವ ಪರಿಮಾಣಕ್ಕೆ ಕಾರಣಗಳಾಗಿರಬಾರದು. ಹಾಗಾಗಿರುವುದೇ ಇಂದಿನ ಯೋಜನೆಗಳ ಹಾಗೂ ಅವುಗಳ ಅಸಂಬದ್ಧ ಕಾರ್ಯಗಳ ದುಂದಿಗೆ ಕಾರಣ.



# ೩೧

# ಸಿದ್ಧಾಂತ–ವ್ಯವಹಾರಗಳ ವಿವೇಕ

ಪ್ರಯೋಜನದ ವ್ಯಾಪಕಾದರ್ಶದ ಪ್ರಕಾರ ಒಂದು ಕ್ಷಣದ ಅವಿನಿಯೋಗವು ಅಪವಿನಿಯೋಗದಿಂದ ಬಹಳ ಭಿನ್ನಪರಿಣಾಮಕಾರಿಯಲ್ಲ. truth, beauty, goodness, utility ಸತ್ಯ, ಸೌಂದರ್ಯ, ಒಳಿತು, 'ಪ್ರಯೋಜನ'ಗಳೂ ಧರ್ಮ, ಅರ್ಥ, ಕಾಮ, ಮೋಕ್ಷಗಳೂ ಉಕ್ತ ಮಹಾಪ್ರಯೋಜನದ ತೃಪ್ತಿಕಾರಕತೆಯಲ್ಲಿ ಅಡಕವಾಗುವುವು. ಸಚ್ಚಿದಾನಂದವೂ ಅನಂತಸತ್ಯಜ್ಞಾನವೂ ತದ್ಗತ. ತೃಪ್ತಿಗಳು ಸಂಸ್ಕೃತ ಮತ್ತು ಅಸಂಸ್ಕೃತ ಎಂದು ಎರಡು ವಿಧ. ನಾಗರಿಕ ಸಾಧನಗಳನ್ನು ಅಸಂಸ್ಕೃತ ತೃಪ್ತಿಗಳಿಗಾಗಿ ಬಳಸುವುದು ಮೋಸ, ದ್ರೋಹ. ಎಲ್ಲ ಪರದ್ರೋಹಗಳೂ ಅವಿಜ್ಞಾತ (ಪ್ರಚ್ಛನ್ನ) ಸ್ವದ್ರೋಹದಿಂದಲೇ ಆರಂಭವಾಗುವುವು. ಈ ಮಾನಸಶಾಸ್ತ್ರೀಯ ಅಂಕವು ನೀತಿಶಾಸ್ತ್ರದ ಅಡಿಗಲ್ಲು. ಪರೋಪಕಾರವು ಆತ್ಯಂತಿಕವಾಗಿ ಸ್ವೋಪಕಾರ; ಪರನೇ ಸ್ವ ಎಂಬುದು ತತ್ವವಾದುದರಿಂದ. ಆದುದರಿಂದ ವ್ಯಕ್ತಿವಾದದ (Individualism) ಬುಡ ಎಂದೂ ಭದ್ರವಲ್ಲ; ಅದಕ್ಕೆ ಆತ್ಯಂತಿಕತೆ ಇರುವುದು ಸಮಾಜವಾದದ ಐಕಾತ್ಮ್ಯ ತತ್ವದಲ್ಲಿ. ತತ್ವಜ್ಞಾನದಲ್ಲಿ ಮಾಡಿಕೊಂಡ ಸ್ವವಂಚನೆಗಳ ದೆಸೆಯಿಂದ ಭಾರತಕ್ಕಾದಷ್ಟು ಹಾನಿ ಇತರ ಕ್ಷೇತ್ರಗಳಲ್ಲಿ ಮಾಡಿಕೊಂಡ ಸ್ವವಂಚನೆಗಳಿಂದಾಗಿಲ್ಲ. ತತ್ವವು ಆಲೋಚನೆ, ವಿಚಾರ; ವಿಚಾರವು ಆಚಾರಪ್ರೇರಕ; ಆಚಾರವು ತೃಪ್ತಿ–ಅತೃಪ್ತಿಗಳ ಸಾಧನ. ಬ್ರಹ್ಮಾರ್ಪಣವು ಸ್ವತರ್ಪಣವಾದಂತೆ ರಾಷ್ಟ್ರಾರ್ಪಣವೂ ಸ್ವತರ್ಪಣವೇ– ಅದೇ ಫಲತಃ ಬ್ರಹ್ಮಾರ್ಪಣ ಅಥವಾ ಪರಮಾವಧಿಕ ಆತ್ಮತರ್ಪಣವಾದೀತು. ರಾಷ್ಟ್ರವು ಪರಮಾರ್ಥತಃ ಸಹಜೀವಿಗಳ ಸಮೂಹ, ಮಣ್ಣಲ್ಲ, ಕಲ್ಲಲ್ಲ; ಸಹಜೀವಿಗಳ ಭ್ರಾತೃತ್ವವು ಬಿಸಿಲುಗುದುರೆಯಂತೆ ಕೇವಲ ಕಾಲ್ಪನಿಕವಾಗದ ಹಾಗೆ ಅದರ ಪ್ರಕಟನೆ ನಿತ್ಯವೂ ಭೌತಿಕವಾಗಿ ಜೀವ ಸಾಮ್ಯ ನ್ಯಾಯದಿಂದ ಎಲ್ಲರಿಗೂ ಅನುಭವಕ್ಕೆ ಬರುವಂತೆ ಮಾಡುವುದೇ "ಸೋಶಲಿಜಂ, ಸೆಕ್ಯೂಲರಿಜಂ ಮತ್ತು ಡೆಮೊಕ್ರೆಸಿ"ಗಳ ಸಾರಾಂಶ. ಉಕ್ತ ಮೂರು ಪದಗಳಿಗೆ ಈ ಸಾರಾಂಶಕ್ಕೆ ವ್ಯತಿರಿಕ್ತವಾಗುವ ಅರ್ಥವಿಲ್ಲ; ಇದ್ದರೆ ಅವು ತ್ಯಾಜ್ಯ.

ಜೀವಸಾಮ್ಯನ್ಯಾಯವು ದೇಹೇಂದ್ರಿಯಗಳ ಮತ್ತು ಅವುಗಳ ಯೋಗ್ಯತಾ ತಾರತಮ್ಯವನ್ನು ಗಣಿಸುತ್ತದೆ. ಈಗ (೧೯೭೧ರ ಫೆಬ್ರವರಿ) ನಡೆದಿರುವ "ಡೆಮೊಕ್ರಸಿ"ಯ ವಕೀಲಿಯಲ್ಲಿ ವಾಕ್‌ಸ್ವಾತಂತ್ರ್ಯ ಮತ್ತು ಸಂಘಟನ ಸ್ವಾತಂತ್ರ್ಯಗಳು ಕಮ್ಯೂನಿಜಮ್ಮಿನಲ್ಲಿಲ್ಲ ಎಂಬ ಒಂದು ವಾದವು ಅನೇಕರನ್ನು ಮೋಸಗೊಳಿಸಿದೆ. ಹಿಂದಿನ ಗುರುಕುಲಗಳಲ್ಲಿ ಕಾಳಿದಾಸ ಹೇಳಿರುವಂತೆ "ಆಜ್ಞಾ ಗುರೂಣಾಂ ಹ್ಯವಿಚಾರಣೀ ಯಾ" ಎಂಬ

ನಿಯಮವಿದ್ದುದು ಸುರಾಜ್ಯ ಸ್ಥಾಪನೆಗೆ ಕಾರಣವಾಯ್ತು; ಅಸಮರ್ಥ ಗುರುಗಳ ಆಜ್ಞಾಪಾಲನೆ ಮತ್ತು ಸಮರ್ಥ ಗುರುಗಳ ಆಜ್ಞೆಯ ಅಪಾಲನೆಗಳು ನಾಗರಿಕತೆಯ ಅಧಃಪತನಕ್ಕಿಲ್ಲಿ ಕಾರಣವಾದವು. ಗುರುತ್ವವಿಲ್ಲದವರ ವಾದಕ್ಕೂ ಈ ದೇಶದಲ್ಲಿ ಗುರುತ್ವವಿಲ್ಲ. ಪ್ರಶಾಸನಿಕವಾಗಿ ಕಮ್ಯೂನಿಜಮ್ಮನ್ನು ಆಚಾರತಃ ಎಲ್ಲೆಲ್ಲಿ ಎಷ್ಟು ಅಸಹ್ಯವಾಗಿ ಆಚರಿಸುತ್ತಿದ್ದರೂ ಸೈದ್ಧಾಂತಿಕ ಚರ್ಚೆಯಲ್ಲಿ ಮಾನವೀಯತೆಯ (ದಯಾಧರ್ಮದ) ಕೊನೆಯಾದ ಸೋಶಲಿಜಂ ಅಥವಾ ಕಮ್ಯೂನಿಜಂ ಪಾಪಿಷ್ಠತಮವೆಂದು ತಿಳಿಯುವ ಭಾರತೀಯನು ಅರಾಷ್ಟ್ರೀಯ. ಅಂಧಂ ತಮಃ ಪ್ರವಿಶಂತಿಯೇಽ ವಿದ್ಯಾ ಮುಪಾಸತೇ, ಎಂದ ಋಷಿಯು ಕೇವಲ ವಿದ್ಯೆಯ (ಡೆಮಾಕ್ರಸಿಯ) ಉಪಾಸಕರು ಅದಕ್ಕಿಂತ ಹೆಚ್ಚಿನ ಅಂಧಕಾರ ಪ್ರಪಂಚದಲ್ಲಿ ಬೀಳುತ್ತಾರೆ ಎಂದಿರುವುದಿಲ್ಲಿ ಸ್ಮರಣೀಯ. 'ಹಲ್ಲಿ ತಿಂದ ರೋಗ'ವನ್ನು ಜನರಲ್ಲಿ ಹಬ್ಬಿಸಿದೆ ಎಂದು ಗೊತ್ತಾದ ವಾಕ್ ಸ್ವಾತಂತ್ರ್ಯವು ಸಮಾಜಘಾತಕ; ಆದ್ದರಿಂದ ಅದನ್ನು ಸರಕಾರ ನಿಲ್ಲಿಸುವುದು ಧರ್ಮ ಎಂಬುದೊಂದು ನಿದರ್ಶನ. ಇಂಥ Probelm-posers ಸಮಸ್ಯೆ ಇಲ್ಲದಲ್ಲಿ ಸಮಸ್ಯೆ ಹುಟ್ಟಿಸುವವರು ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿ ಹೆಚ್ಚಾದದ್ದೊಮ್ಮೆ ವೃತ್ತ ಪತ್ರಿಕೆಯೊಂದರಲ್ಲಿ ಪ್ರಕಟವಾಗಿತ್ತು. ನರರೋಗಗ್ರಸ್ತರನ್ನು (Neurotics) ತಯಾರು ಮಾಡುವ ವಿದ್ಯಾಲಯ–ಕಾರ್ಯಾಲಯಗಳ ಸ್ವಾತಂತ್ರ್ಯವನ್ನು ಹತ್ತಿಕ್ಕುವುದೂ ಅನಿವಾರ್ಯ. ಸ್ವಾತಂತ್ರ್ಯದ ದುರುಪಯೋಗ ನಡೆದಾಗ ಮಾತ್ರ ಅದರ ಸ್ತಂಭನ ಅಗತ್ಯವೆನ್ನುವುದು ಅವಿಸ್ಮರಣೀಯ. ಮೂಲಭೂತ ಹಕ್ಕುಗಳಿಗೂ ಈ ಮಾತು ಅನ್ವಯಿಸುತ್ತದೆ. ಜನಪೂಜ್ಯರಾದ ವಿದ್ವಾಂಸರ ಅಭಿಪ್ರಾಯ ಮಾತ್ರ ಜನಾಭಿಪ್ರಾಯವೆಂಬುದನ್ನು ಕಲಿತ ಪ್ರಜಾಪ್ರಭುತ್ವವೊಂದೇ ಪ್ರಬುದ್ಧ ಪ್ರಜಾಪ್ರಭುತ್ವ. ಹಾಗೆ ಕಲಿಯದಿರುವ ನಮ್ಮ ಪ್ರಜಾಪ್ರಭುತ್ವವಿಂದು ನಾನಾ ತರದ ಸಂಕಷ್ಟಗಳನ್ನು ದೀನ, ದಲಿತ, ಅನಾಥ, ಅವಿದ್ಯ, ಸುವಿದ್ಯರಿಗೆ ತಂದೊಡ್ಡಿದೆ. ಒಣ ಜನಪ್ರಿಯತೆಯನ್ನು ಆಧರಿಸಿದ ನಾಯಕರನ್ನು ಏಳಿಗೆ ಹೊಂದಗೊಡದಂತೆ ಜನರಲ್ಲಿಯ ಬುದ್ಧಿವಂತರು ತಡೆದಾಗ ಮಾತ್ರ ನೈತಿಕ ವೀರತನವುಳ್ಳವರೆದ್ದು ಪ್ರಬುದ್ಧ ಪ್ರಜಾಪ್ರಭುತ್ವದ ಮೂಲಕ ಸರ್ವೋದಯವನ್ನು ಸಾಧಿಸಿಯಾರು. ವಿಜ್ಞಾನವಿಂದು ನದಿಗಳ ಪ್ರವಾಹಗಳನ್ನು ಬದಲಿಸುತ್ತಿರುವಾಗ ಮಾನವಕೃತವಾದ ಯಾರ ಯಾವ ಹಕ್ಕು ಅಥವಾ ಸ್ವಾತಂತ್ರ್ಯವೂ ಬಹುಸಂಖ್ಯಾತ ಸಜ್ಜನರಿಗೆ ತೊಂದರೆಯುನ್ನುಂಟು ಮಾಡಿದ ಆಪತ್ಕಾಲದಲ್ಲಿ ನಿಷಿದ್ಧವಾಗುವುದು. ಕಳ್ಳಪೇಟಿಗರ ಸ್ವಾತಂತ್ರ್ಯವನ್ನುಳಿಸುವ ಕಾಯದೆಯೂ ಅದರ ಆಚರಣೆಯೂ ಹೇಗೆ ನಿಂದ್ಯವೋ ಹಾಗೇ ಕಡುಲೋಭಿಗಳ ಅರ್ಥಸ್ವಾತಂತ್ರ್ಯವನ್ನು ಹಿಡಿತದಲ್ಲಿಡದ ರಾಷ್ಟ್ರವು ಅಸಂಸ್ಕೃತ. ಸೋಮಾರಿಗಳನ್ನೂ ದುಂದುಗಾರರನ್ನೂ ಮೋಸಗಾರರನ್ನೂ ಸಾಕುವ ಸರಕಾರವೂ ಬಹಿಷ್ಕಾರ್ಯ. ಮನಸ್ಸಿಗೆ ಬಂದಂತೆ ಸ್ವಾರ್ಥಲೋಲುಪನು "ಯಥಾಶಕ್ತಿ" ಕೊಡುಗೆಯನ್ನು ಅನನುಪಾತಿಕವನ್ನಾಗಿ ಮಾಡುತ್ತಿರುವ ನವಭಾರತದಲ್ಲಿ ನಿವ್ವಳನಫೆಯ ನಿಯಂತ್ರಣದ ಮಟ್ಟದ ಸೋಶಲಿಜಮ್ಮಾದರೂ ಕೂಡಲೇ ಜಾರಿಗೆ ಬಾರದಿದ್ದರೆ ರಾಷ್ಟ್ರೀಯತಾ ಪ್ರಚಾರದ ಆಂದೋಲನವು ಜನರನ್ನು ಮರುಳುಗೊಳಿಸುವ ಒಂದು ರಾಜಕೀಯ ತಂತ್ರವೆನ್ನಿಸುತ್ತದೆ.

ಸರ್ವವಿಧದ ರಾಜಕೀಯವೂ ಹಿಂಸಾಂತವಾದ ಸಂದರ್ಭವು ಜಗತ್ತಿನ ಇತಿಹಾಸದ ಹಲವಾರು ಅವಧಿಗಳಲ್ಲಿ ಕಂಡುಬಂದಿದೆ. ಹಿಂಸೆಯು ಆಪದ್ಧರ್ಮ– ನಿತ್ಯ ಧರ್ಮವಲ್ಲ,

ಅಷ್ಟೇ. ಜಗತ್ತಿನ ಯಾವ ನಿತ್ಯಧರ್ಮವೂ ಆಪದ್ಧರ್ಮದ ಸಂದರ್ಭದಲ್ಲಿ ಅನಾಚರಣೀಯ. ಭಾರತದ ಒಟ್ಟು ಸಂಪತ್ತಿನ ಅರ್ಧದಷ್ಟು ಭಾಗವು ಕೇವಲ ೪೫–೫೦ ಖಾಸಗಿ ವ್ಯಕ್ತಿಗಳ ಅಥವಾ ಕುಟುಂಬಗಳ ವಶದಲ್ಲಿರುವುದು ಹೇಗೆ ಉಪೇಕ್ಷಣೀಯವಾದೀತು ರಾಷ್ಟ್ರವಾದಿಗೆ? ಆದುದರಿಂದ ರಾಷ್ಟ್ರತತ್ವವು Polity (Politics and Economics) ರಾಷ್ಟ್ರಾರ್ಥವನ್ನು ಅಥವಾ ಸರ್ವಪ್ರಜೋದಯವನ್ನು (ದುರ್ಜನರಿಗೆ ದೊರಕುವ ಶೀಕ್ಷೆಯೇ ಅವರ ಉದಯ) ಅವಲಂಬಿಸಿದ್ದು. ಸಜ್ಜನರ ಕರ್ಮಫಲ ಸಜ್ಜನರಿಗೆ, ದುರ್ಜನರದು (ಶೋಷಕರದು) ದುರ್ಜನರಿಗೆ ಸಲ್ಲುವಂತಹ ವ್ಯವಸ್ಥೆಯೇ ಸುರಾಷ್ಟ್ರವ್ಯವಸ್ಥೆ. ಶೋಷಣೆಯು ಹಿಂಸೆ, ಅಸತ್ಯ, ಸ್ತೇಯ, ಅಶೌಚ, ಅನಿಂದ್ರಿಯ ನಿಗ್ರಹಗಳ ಮೂಲಕ ಭೌತಿಕ–ಮಾನಸಿಕ ದುಷ್ಪರಿಣಾಮಗಳನ್ನು ಶೋಷಕನ ಸಹಜೀವಿಗಳಿಗೆ ಉಂಟುಮಾಡುತ್ತದೆ. ಶೋಷಿತ ಬಹುಸಂಖ್ಯಾತರ ರಾಷ್ಟ್ರವು ಲಜ್ಜಾಸ್ಪದವಾದ ರಾಷ್ಟ್ರ; ಅದಕ್ಕೆ ಸ್ವಾತಂತ್ರ್ಯವಿರುವುದು ಆಭಾಸಿಕ, ಆಭಾಸಿಕ ಸ್ವಾತಂತ್ರ್ಯಕ್ಕಾಗಿ (ಸ್ಥಾನಮಾನಾಪನ್ನಲೋಭಿಗಳಷ್ಟೇ ಜನರ ಸ್ವಾರ್ಥವೃದ್ಧಿಗನುಕೂಲ ಮಾಡಿಕೊಡಲು) ಹೋರಾಡುವುದು ಬುದ್ಧಿಗೇಡಿತನ. ಬಡತನ, ಪ್ರಾದೇಶಿಕತೆ, ಜಾತೀಯತೆ, ಬಾಂಧವ ವ್ಯಾಮೋಹ, ಭ್ರಷ್ಟಾಚಾರಗಳು ಉಳಿದಿರುವ ವರೆಗೆ ಭಾರತವು ಭಾರತವಲ್ಲ, ಕೂಳಿಗೆ ಕೇಡು ಭೂಮಿಗೆ ಭಾರ ಎನ್ನಿಸಿದ ಮನುಷ್ಯರ ಪ್ರದರ್ಶನಾಲಯ! ರಾಮರಾಜ್ಯದಲ್ಲೂ ಹೀಗೇ ಇತ್ತು, ಜಗತ್ತಿರುವುದೇ ಹೀಗೆ– ಎಂಬಂತಹ ಸೊಕ್ಕಿನ ಮಾತುಗಳು ಅನೈತಿಹಾಸಿಕ. ವೇದೋಕ್ತ ದಾನ–ಧರ್ಮಪದ್ಧತಿಯ ಪುನರಾರಂಭವೀಗ ಜಯದ ಆಶೆಯನ್ನು ಕಳೆದುಕೊಂಡಿರುವುದು ೫೦ ಕೋಟಿಯ ಭಾರತದಲ್ಲೀಗ ವಸ್ತುಸತ್ಯ. ಆದುದರಿಂದ ಸಮಾಜವಾದೀಯ ಸಮಾಜರಚನೆಯು ಆರ್ಥಿಕವಾಗಿಯೂ ಸಾಂಸ್ಕೃತಿಕವಾಗಿಯೂ ಆಡಳಿತದ ಜಾಣತನದ ವಿವಿಧ ಯೋಜನೆಗಳಿಂದ ಶೀಘ್ರವಾಗಿ ಸಾಧಿಸುವ ರಾಷ್ಟ್ರೀಯ ಧೋರಣೆಯೊಂದೇ ಇಂದು ನಿಜವಾದ ರಾಷ್ಟ್ರೀಯ ಧ್ಯೇಯದ ಪ್ರಣಾಲಿ. ಕೇವಲ ಅರ್ಥಯೋಜನೆಯೊಂದೇ ರಾಷ್ಟ್ರೀಯತೆಯ ಸಮರ್ಪಕತೆಯನ್ನು ತಾರದು; ಕೇವಲ ಸಾಂಸ್ಕೃತಿಕ ಸಮೀಕರಣ ಯೋಜನೆಯೊಂದೇ ಅದನ್ನು ಸಾಧಿಸುವುದೂ ಸುಳ್ಳು. ಅರ್ಥ ವ್ಯವಹಾರದ ಭಾರತೀಯತೆಯು ಹಿಂದಿರುಗಲಾರದಷ್ಟು ಅಭಾರತೀಯವಾಗಿ ಹೋಗಿರುವುದರಿಂದ ಅದಕ್ಕೆ ಆಧುನಿಕ ಮದ್ದು (ಅಲ್ಪಸ್ವಲ್ಪ ವಿದೇಶೀಯವಾದರೂ) ಅಗತ್ಯ. ಇನ್ನೂ ಹೆಚ್ಚು ಅದು ಪಾಶ್ಚಾತ್ಯೀಕೃತವಾಗದಂತೆ ತಡೆಯಬೇಕು. ಆದರೆ ಈಗಾದ ಅದರ ಪಾಶ್ಚಾತ್ಯೀಕೃತ ಸ್ವರೂಪಕ್ಕೆ ಧರ್ಮಶಾಸ್ತ್ರಗಳು ಮದ್ದನ್ನು ಹೇಳಲಾರವು. ಅದಕ್ಕೆ ಕರ್ಮಶಾಸ್ತ್ರದ ಪ್ರಯೋಗ ಅತ್ಯವಶ್ಯಕ. ಸರ್ವೋದಯವು ವಿಶ್ವಸ್ತಿಕೆಯ ಆಶೀರ್ವಾದ ಯೋಜನೆಯಿಂದ ಇಂದಿಲ್ಲಿ ಸಿದ್ಧಿಸದು – ಬೊಂಬಾಯಿಯಲ್ಲಿ ಮನೆ ಪಡೆಯಲು ಪಗಡಿ ಕೊಡಬೇಕಾಗಿರುವಾಗ; ಮನೆಕಟ್ಟುವ ಜಾಗದ ೧ ಚದುರ ಅಡಿಗೆ ೧೫೦ ರೂಪಾಯಿಗಳ ವರೆಗೆ ದರವಿರುವಾಗ, ವ್ಯವಹಾರದಲ್ಲಿ ವಿಧಿನಿಯಂತ್ರಣವಿಂದು ಕಾಯದೆಯ ನಿಯಂತ್ರಣ, ಬ್ರಹ್ಮನ ನಿಯಂತ್ರಣವಲ್ಲ. ಬ್ರಹ್ಮನು ಮಾನವರಿಗೆ ಬುದ್ಧಿಯನ್ನು ಕೊಟ್ಟಿದ್ದಾನೆ, ಮಾನವ ವ್ಯವಹಾರದ ನ್ಯಾಯಸೂತ್ರವನ್ನು ನಿರ್ಧರಿಸಿ ಆಚರಿಸಲು ಸ್ವಾತಂತ್ರ್ಯವನ್ನು ಕೊಟ್ಟಿದ್ದಾನೆ– ಎಂಬುದನ್ನು ರಾಷ್ಟ್ರೀಯನು ಮರೆಯಲಾರನು.

# ೩೨

# ಸಾಂಸ್ಕೃತಿಕ ಏಕೀಕರಣ

"Charismatic Personality" ಎಂದರೆ ಏನು? ಎಂಬುದನ್ನು ಭಾರತ, ಚೀನ ಮತ್ತು ರಶಿಯಗಳು ಅರ್ಥಮಾಡಿಕೊಳ್ಳದೆ ಹೋದರೆ, ಅವುಗಳ ರಾಜಕೀಯ ಕಸರತ್ತುಗಳು ಸೋಲದೆ ಉಳಿಯಲಾರವೆಂಬುದು ಐತಿಹಾಸಿಕ ಸತ್ಯ. ಅಂಥ ವ್ಯಕ್ತಿತ್ವವು ಪಂಡಿತ ಜವಾಹರರಿಗಿತ್ತು, ಸರದಾರ ಪಟೇಲರಿಗಿತ್ತು, ಸುಭಾಷಚಂದ್ರ ಭೋಸರಿಗಿತ್ತು; ಈಗ ಇಂದಿರಾ ಗಾಂಧಿಗಿದೆ ಎಂಬುದನ್ನು ಒಬ್ಬ ವಿದ್ವಾಂಸರು ಸೂಚಿಸಿದ್ದಾರೆ. ಭಾರತೀಯ ಮಾನ್ಯ ಸಾಮಾನ್ಯರ ಮೆಚ್ಚಿಗೆಗೆ ಅಂಥ ವ್ಯಕ್ತಿತ್ವವಲ್ಲದೆ ಇನ್ನಾವುದೂ ಪಾತ್ರವಾಗದೆಂಬುದೀಗ ೨೩ ವರ್ಷಗಳಲ್ಲಿ ಸಿದ್ಧವಾಗಿ ಹೋಗಿದೆ. ಈ ಪಾಠವನ್ನು ಅಲ್ಲಗಳೆದು ಕೇಂದ್ರಾಧಿಕಾರ ಪೀಠದ ಮೂಲಕ ರಾಜಕೀಯ, ಆರ್ಥಿಕ, ಸಾಮಾಜಿಕ ಕಾರ್ಯಗಳಲ್ಲಿ ತೊಡಗುವುದೆಲ್ಲ ಯಶಸ್ವಿಯಾಗದು.

ಮನೆತನಸ್ಥಿಕೆಯ ಅಥವಾ ಪೂರ್ವಜರ ಪುಣ್ಯದ ಹಿನ್ನೆಲೆ ಇಲ್ಲದವರ ನಾಯಕತ್ವಕ್ಕಿಲ್ಲಿ ಗೆಲುವಿಲ್ಲ–ಯಾವ ಪಕ್ಷವಾದರೂ ಅಷ್ಟೆ, ಯಾವ ಜಾತಿಯಾದರೂ ಅಷ್ಟೆ, ಯಾವ ಮತಧರ್ಮವಾದರೂ ಅಷ್ಟೆ; ಅದರ ಶಕ್ತಿಯು ಮನೆತನಸ್ಥಿಕೆಯ ಮುಂದೆ ಚಿಕ್ಕದು. ಮನೆತನಸ್ಥಿಕೆಯು ಕೇವಲ ಶ್ರೀಮಂತಿಕೆಯನ್ನೂ ಅವಲಂಬಿಸಿಲ್ಲ, ಕೇವಲ ವಿದ್ಯಾವಂತಿಕೆಯನ್ನೂ ಅವಲಂಬಿಸಿಲ್ಲ, ಕೇವಲ ಆರ್ಷಸರಳತೆಯನ್ನೂ ಅವಲಂಬಿಸಿಲ್ಲ, ಶುದ್ಧ ಶೀಲವಂತಿಕೆಯನ್ನೂ ಅವಲಂಬಿಸಿಲ್ಲ; ಕೇವಲ ವೀರತ್ವವನ್ನೂ ಅವಲಂಬಿಸಿಲ್ಲ, ಈ ಎಲ್ಲವುಗಳ ಒಂದು ಹಿತಮಿತವಾದ ಸಮನ್ವಯವನ್ನು ಅದು ಅವಲಂಬಿಸಿದೆ. ಈ ಲೌಕಿಕ ಆದರ್ಶವು ಭಾರತೀಯರ ಅಥವಾ ಏಶಿಯನ್ನರ ಹೃದಯವನ್ನು ಸುಲಭವಾಗಿ ಸೆರೆಹಿಡಿಯಬಲ್ಲುದು ಮತ್ತು ಅವರು ಅಂಥವರ ವ್ಯಾವಹಾರಿಕ ನಾಯಕತ್ವವನ್ನು ಸುಲಭವಾಗಿ ಒಪ್ಪಿಕೊಳ್ಳುವರು. ಏಕೆ? ಎಂದು ಕೇಳುವುದಿಲ್ಲಿ ಅಪ್ರಸ್ತುತ. ಸಾಮಾಜಿಕ ಮನೋವಿಜ್ಞಾನದಲ್ಲಿ ಅದಕ್ಕೆ ಉತ್ತರ ಸಿಗುತ್ತದೆ–ಅದು ವಸ್ತುಸ್ವಭಾವವೆಂದು.

ಪುಣ್ಯವೆಂಬುದು ಭಾರತೀಯ ಸಂಸ್ಕೃತಿಯ ಮೂಲಬೀಜ. ಅದರಲ್ಲಿ ದೈವಿಕ, ನೈತಿಕ, ತೈಜಸಿಕ ಕಾರಣಗಳ ಫಲಿತಾಂಶವಿದೆ. "ಸಮರ್ಥೋ ಧರ್ಮಮಾಚರೇತ್" ಎಂಬುದು ಧರ್ಮಸಫಲತೆಯ ಸೂತ್ರ. ಸಾಮರ್ಥ್ಯವು "ಯದ್ಯದ್ವಿಭೂತಿಮತ್ ಸರ್ವಂ

ಶ್ರೀಮದೂರ್ಜಿತಮೇವ ವಾ। ತತ್ತದೇವಾವ ಗಚ್ಛ ತ್ವಂ ಮಮ ತೇಜೋಂಶ ಸಂಭವಂ" ಎಂಬ ಗೀತೋಕ್ತಿಯಿಂದ ವ್ಯಾಖ್ಯಾತವಾಗಿದೆ. ಇಂಥ ಸಾಮರ್ಥ್ಯವಿಲ್ಲದವರನ್ನು Isolation ಪ್ರತ್ಯೇಕಿಸಿ ಅಲಕ್ಷಿಸಲಾಗುತ್ತದೆ. ಇದು ಅಪ್ರಿಯವಾದರೇನು ಮಾಡಬೇಕು? ಸತ್ಯವೆಂದು ಸ್ವೀಕರಿಸಿ ನಮ್ರರಾಗಿ ಇಂಥ ನಮ್ಮ ದೇಶೀಯ ಮನಃಸ್ಥಿತಿಯೊಡನೆ ರಾಜಿಮಾಡಿಕೊಂಡು ಬದುಕಬೇಕು! ಅಘಟಿತವನ್ನು ಘಟಿಸಿಯೇನೆಂಬುದಿಲ್ಲಿ ಬುದ್ಧನಿಂದ ಹಿಡಿದು ಬಸವಣ್ಣನವರ ವರೆಗೂ ಸಾಧ್ಯವಾಗಲಿಲ್ಲ. ಗಾಂಧೀಜಿ, ವಿನೋಬಾ ಭಾವೇಜಿ, ತಿಲಕಜಿ, ರವೀಂದ್ರನಾಥ ಠಾಕೂರಜಿಗಳು ಆರ್ಷತೆಯ ಪ್ರಾಧಾನ್ಯದಿಂದ ಅಭಿಜಾತ ವ್ಯಕ್ತಿತ್ವಸಂಪನ್ನರ ರಾಜಗುರುಗಳಷ್ಟೇ ಆಗಬಲ್ಲರು; ನೇರ ಪ್ರಶಾಸಕ ನಾಯಕರಾಗಲಾರರು. ಮನೆತನಸ್ಥಿಕೆಯು ಪುಣ್ಯ, ಆಭಿಜಾತ್ಯ, ಕುಲವಂತಿಕೆ, ಆನುವಂಶಿಕ ಸಂಸ್ಕೃತಿ ಸಂಪನ್ನತೆ.

ಹಿಂದೆ ಖ್ಯಾತಮನೆತನದವರೆಂದುಕೊಂಡ ಎಲ್ಲ ವೀರರೂ ಇಲ್ಲಿ ಜನಬಲಪಡೆದು ರಾಜ್ಯಾಧಿಕಾರವನ್ನು ನಡೆಯಿಸಿದರೆಂಬುದು ೬೦೦೦ ವರ್ಷಗಳ ಸತ್ಯ. ಅಖ್ಯಾತ ಮನೆತನದವರಿಗೆ ಜನಬಲ ಸಿಕ್ಕಿದ್ದು ವಿರಳ. ಚಾರಿತ್ರ, ಬುದ್ಧಿಮತ್ತೆ, ಐಶ್ವರ್ಯ, ದಾನಧರ್ಮ, ಪರೋಪಕಾರ, ಸರಳತೆ, ಧೈರ್ಯ, ಸಾಹಸ, ದೀನೋದ್ಧಾರ ಬುದ್ಧಿಗಳನ್ನುಳ್ಳವರ ಪರಂಪರೆಗೆ ಮಾತ್ರ ಖ್ಯಾತ ಮನೆತನವೆಂಬುದಿಲ್ಲಿ ರೂಢಿ. ಖ್ಯಾತಿಲಾಭಕ್ಕೆ ಖ್ಯಾತಿಯ ಬಂಡವಾಳ ಅಗತ್ಯ. ಇದು ವ್ಯಾವಹಾರಿಕ "ಖ್ಯಾತಿ"ವಾದ. ಪುಣ್ಯವಿಲ್ಲದ ವೀರರು ಕೇವಲ ಅಮರರೋ ಹುತಾತ್ಮರೋ ಆದಾರಲ್ಲದೆ ಆಧಾರವಲ್ಲದೆ ತಮ್ಮ ಅಧಿಕಾರ, ಪ್ರಶಾಸನಗಳ ಪರಂಪರೆಯನ್ನು ಮುಂಬರಿಸಲಾರರು. ಇದು "ಫ್ಯೂಡಲಿಜಮ್ಮಿ"ನ ಸಮರ್ಥನೆಯಲ್ಲ; "ಫ್ಯೂಡಲ್ ಲಾರ್ಡರು" ಪುಣ್ಯವಂತ ವ್ಯಕ್ತಿತ್ವವುಳ್ಳವರಿಂದ ಬಹಳ ಭಿನ್ನರು; ಜಾತಿಯ ಮೇಲ್ತನಕೂಡ ಈ ಸುಲಕ್ಷಿತ ವ್ಯಕ್ತಿತ್ವದಿಂದ ಭಿನ್ನ.

"Qualities of leadership ನೇತೃಗುಣಗಳು" ಎಂಬ ಪಾಶ್ಚಾತ್ಯ ಪದ ಪುಂಜಕ್ಕಿಲ್ಲಿ ಪುಣ್ಯ ಗಾಂಭೀರ್ಯದ ಅರ್ಥವಿಲ್ಲ. 'ಪುಣ್ಯವಂತಿಕೆ' ಎಂದರಿಲ್ಲಿ ಕೇವಲ ಅದೃಷ್ಟ ಶಾಲಿತ್ವದ ತಾತ್ಕಾಲಿಕ ಸಫಲತೆಯಲ್ಲ; ಏಕೆಂದರೆ ಅದು ಮನೆತನದ ಅನೇಕ ತಲೆಮಾರುಗಳ ಬಲದಿಂದ ಬಂದದ್ದು; ಒಂದೇ ತಲೆಮಾರಿನ ಫಲವಲ್ಲ. ದ್ರವ್ಯದಾನವಷ್ಟೇ ದಾನವಲ್ಲ; ನಿಃಸ್ವಾರ್ಥವರ್ತನೆಯೇ ದಾನದ ಅಥವಾ ತ್ಯಾಗದ ಇಲ್ಲವೆ ಸ್ವಜನ ಪ್ರೀತಿಯ ನಿಜವಾದ ಗುರುತೆಂಬುದು ಭಾರತೀಯರ ತಿಳಿವಳಿಕೆ. Enlightened selfishness ಪ್ರಬುದ್ಧ ಸ್ವಾರ್ಥಪರತೆ" ಎಂಬಂಥ ಕಲ್ಪನೆಗಳಿಲ್ಲಿ ಚಿರವಿಶ್ವಾಸವನ್ನು ಜನರಲ್ಲಿ ಹುಟ್ಟಿಸಲಾರವು. ಪುಣ್ಯಾತ್ಮರಲ್ಲಿಡುವ ಭಕ್ತಿಯನ್ನು "ವೀರಪೂಜೆ Hero-worship'' ಎಂದು ಬಣ್ಣಿಸುವುದು ಅಪಾರ್ಥಕಾರಿ. ಏಕೆಂದರೆ, ನಮ್ಮ "ವೀರರು" ಆತ್ಮವಂತರು. ಆತ್ಮದ Personality Quotient ವ್ಯಕ್ತಿತ್ವಮಾನವು ರಾಜಸ ಪ್ರಪಂಚದಲ್ಲಿಯೂ ಪಾಶ್ಚಾತ್ಯ ಕಲ್ಪನೆಯಿಂದ ಭಿನ್ನ. ದಯೆ, ಧರ್ಮ (ನ್ಯಾಯ), ದಾನ, ಯುದ್ಧಶಕ್ತಿಗಳೆಂಬ ಚತುರ್ಮುಖಗಳು ನಮ್ಮ ನಾಯಕರಿಗಿರಬೇಕಾದ ಪುಣ್ಯವಂತಿಕೆಯ ಗುಣ ಪರಂಪರೆ. ದಯೆ, ದಾನ ಧರ್ಮಗಳಷ್ಟೇ ಇರುವುದು ಆಧ್ಯಾತ್ಮಿಕ ವೀರರಿಗೆ; ಲೌಕಿಕರಾದ ವೀರನಾಯಕರಿಗೆ ಅವುಗಳಷ್ಟೇ ಇದ್ದರೆ

ಸಾಲದು. ವ್ಯಕ್ತಿತ್ವದ ಉಕ್ತ ಚತುರ್ಮುಖಗಳು ನಾಯಕ ಚಾರಿತ್ರದ ಆಕರ್ಷಕತೆಯ ಚಿರಸ್ಥಾಯಿತ್ವಕ್ಕೆ ಕಾರಣಗಳು. ಇಂಥ ಚತುರ್ಮುಖ ಬ್ರಹ್ಮತ್ವವು "ಕ್ಷಾತ್ರ"ವೆಂದು ಕರೆಯಲ್ಪಡುತ್ತದೆ. "ಕ್ಷತಾತ್ ಕಿಲ ತ್ರಾಯತೇ ಇತಿ ಕ್ಷತ್ರಶಬ್ದೋ ಭುವನೇಷು ರೂಢಃ". ರಕ್ಷಣಶಕ್ತಿಯುಳ್ಳವರು ನಾಯಕನು. ಅರಕ್ಷಕರನ್ನೆಂದೂ ನಾಯಕರೆಂದು ಬುದ್ಧಿ ಇದ್ದವರು ಒಪ್ಪಲಾರರು. ಉಕ್ತ ಚತುರ್ಮುಖ ವ್ಯಕ್ತಿತ್ವವು ರಕ್ಷಕತ್ವದ ಲಕ್ಷಣ. ಸ್ವದೇಶೀಯನಾಯಕರು ಹೊಣೆಗೇಡಿಗಳೂ ಸ್ವಾರ್ಥಿಗಳೂ ಆಗಿ ರಕ್ಷಕರಾಗದಿದ್ದರೆ ಹಿಂದುಸ್ತಾನದ ಜನರು ಕ್ಲೈವನಂಥ ಪಾಶ್ಚಾತ್ಯ ರಕ್ಷಕನನ್ನು ಸ್ವಾಗತಿಸಿದ್ದಕ್ಕೆ ಸರದಾರ ಪಣಿಕ್ಕರರು ಆಧಾರ ನೀಡಿದ್ದಾರೆ. ಇಲ್ಲಿ ಯಾರೂ ಪುಕ್ಕಟೆಯಾಗಿ ನಾಯಕತ್ವವನ್ನು ಗಳಿಸಿಕೊಳ್ಳಲು ದೇಶಪ್ರೇಮದ ಪ್ರಚಾರಮಾಡಿ ಗೆಲ್ಲಲಾರರು. ಇದು ಭಾರತದಲ್ಲಿ ತ್ರಿಕಾಲಾಬಾಧಿತ ಸತ್ಯ.

ಐಶ್ವರ್ಯವು ಕೇವಲ ಧನವಂತಿಕೆಯಲ್ಲ, Commanding Personality ಆಜ್ಞಾವಿಧಾಯಕ ವ್ಯಕ್ತಿತ್ವ. History does not make a leader; a leader makes history–ಚರಿತ್ರೆ ಎಂಬ ಜಡಕಲ್ಪನೆಯು ಮುಖಂಡನನ್ನು ತಯಾರಿಸದು; ಮುಖಂಡನು ಒಂದು ದೇಶದ ಚರಿತ್ರೆಯನ್ನು ನಿರ್ಮಿಸಲು ಪ್ರಧಾನ ಕಾರಣನಾಗುತ್ತಾನೆ. ರಾಮ–ರಾವಣರು ಚಾರಿತ್ರಿಕ ಪುರುಷರು; ಅವರು ಇತಿಹಾಸವನ್ನು ರೂಪಿಸಿದರು. ಅವರ ಹಿಂದಿನ ಚರಿತ್ರೆಯು ಆವರಣವೆಂಬ ಹೆಸರಿನಿಂದ ಇದ್ದುವಾದರೆ ಆ ಆವರಣವು ಅವರ ಸಹೋದರರಿಂದ ಸಾಧಾರಣ; ಇತರ ಕೆಲ ಅರಸು ಮಕ್ಕಳಿಗೂ ಸಾಧಾರಣ. ಆದರೆ ಅವರೇ ನೇತೃಗಳಾಗಲು ಅವರ ಅಸಾಧಾರಣವಾದ ರಾಜಸ–ತಾಮಸಗುಣಗಳೇ ಕಾರಣ. ಅವರು ಈಶರು, ದಾಸರಲ್ಲ. ಅವರಲ್ಲಿಯ ಪರಸ್ಪರ ವೈರದ ಕಾರಣದ ನ್ಯಾಯಾನ್ಯಾಯವಿವೇಚನೆ ಇಲ್ಲಿ ಅಪ್ರಸ್ತುತ. ಗೆಲುವು ಸೋಲುಗಳೂ ಅಪ್ರಾಕರಣಿಕ. ಅವರ ಸತ್ವಶಾಲಿತ್ವವು ಅವರನ್ನು ಎರಡು ಬಣಗಳ ಮುಖಂಡರನ್ನಾಗಿಮಾಡಿತು. ಗಣರಾಜ್ಯಗಳು ಭಾರತದಲ್ಲಿದ್ದರೂ ಬದುಕಲಿಲ್ಲ; "ಭೇದೇ ಗಣಾವಿನಶ್ಯೇಯುಃ" ಎಂಬುದು ಸಾರ್ವದೇಶಿಕ ಸತ್ಯ. ತಕ್ಕ ಭೇದೋಪಾಯಗಾರ ಅವತರಿಸಿದ ನಿಮಿಷದಲ್ಲಿ ಗಣರಾಜ್ಯವು ಹಾರಿಹೋಗುತ್ತದೆ. ಅಭಿನ್ನ ಪ್ರಜೆಗಳಿದ್ದಲ್ಲಿ, ಇರುವವರೆಗೆ ಯಾವ ರಾಜನೂ ನಿರಂಕುಶನಾಗಲಾರನು. ರಾಜಕೀಯ ತತ್ವಗಳ ಸಾರವಿದು. ಗಾಂಧೀಜಿ ಹೇಳಿದ್ದಿದನ್ನೇ; ಅನ್ಯಾಯ ಪ್ರತಿಭಟನೆಗೆ ಶಕ್ತಿ ಇಲ್ಲದ ಪ್ರಜೆಗಳಿಗೆ ಸ್ವರಾಜ್ಯವಿಲ್ಲ– ಎಂದು. ಅದರಿಂದಲೇ ಪ್ರಜೆಗಳ ಸಾಂಸ್ಕೃತಿಕ ಏಕೀಕರಣವು ಐತಿಹಾಸಿಕವಾಗಿ ಅತ್ಯಂತ ಅನಿವಾರ್ಯವಾಗಿರುವುದು.



# ೩೩

# ಸಂಯುಕ್ತ ಕಾಂಗ್ರೆಸ್ಸಿನ ಹೊಣೆ

ಭಾರತದ ಜನಶಕ್ತಿಯ ಸೂತ್ರಕ್ಕೂ ಪಾಕಿಸ್ತಾನದ (ಅದರಲ್ಲೂ ಪೂರ್ವ ಪಾಕಿಸ್ತಾನದ) ಜನಶಕ್ತಿಸೂತ್ರಕ್ಕೂ ಬಹಳ ವ್ಯತ್ಯಾಸವಿಲ್ಲ. ಶೋಷಕರನ್ನು ಸಹಿಸದ ಗುಣ ಉಭಯ ಸಾಧಾರಣ. ತಾಳ್ಮೆ ಮಾತ್ರ ಇತರ ಜನಾಂಗಗಳಿಗಿಂತ ಹೆಚ್ಚು ಕಾಲಾವಧಿಯದು. ಅದು ಒಮ್ಮೆ ಶಾಪವಾದರೆ, ಒಮ್ಮೆ ವರವಾಗುತ್ತದೆ. ಕಡಿಮೆ ತಾಳ್ಮೆಯುಳ್ಳ ಜನಾಂಗಗಳ ಕಡಿಮೆ ತಾಳ್ಮೆಯೂ ಇದೇ ಪ್ರಕಾರ ದ್ವಿಮುಖವುಳ್ಳದ್ದು. ನಾಯಕರಿದನ್ನು ಅರಿತು ನಡೆಯಬೇಕು. "ಒಲಿದರೆ ನಾರಿ, ಮುನಿದರೆ ಮಾರಿ" ಎಂಬುದು ಇಲ್ಲಿಯ ಜನ ಶಕ್ತಿಯ ಮಹಾಲಕ್ಷಣ. ನಮ್ಮದು ಈ ದೃಷ್ಟಿಯಿಂದ Hotch potch ಕಲಸು ಮೇಲೋಗರದ ಸಂಸ್ಕೃತಿ ಎನ್ನಿಸಿಲ್ಲ. ನಂಬಿದರೆ ಪೂರ್ಣ ನಂಬಿಗೆ, ಇಲ್ಲವಾದರೆ ನಿತ್ಯಸಂಶಯ–ಬ್ರಹ್ಮಪ್ರಪಂಚಗಳ ಸ್ಥಿರತ್ವ, ಚಿರಸ್ಥಾಯಿತ್ವ ಅಥವಾ ಕ್ಷಣಭಂಗುರತ್ವಗಳಿರುವ ಹಾಗೆ; ಪಾತಿವ್ರತ್ಯಕ್ಕಿಳಿದರೆ ಮಹಾಸತಿ, ದ್ರೋಹಕ್ಕಿಳಿದರೆ ಮಹಾಕ್ರೂರ ವೇಶ್ಯೆ. ಆದುದರಿಂದಲೇ ಒಬ್ಬ ವಿದ್ವಾಂಸನು ಹಿಂದು ಆದರ್ಶಗಳು ಸಾಮಾನ್ಯರಾದ ಇತರ ದೇಶೀಯರಿಗೆ ನಿಲುಕದಂಥವುಗಳು ಎಂದೊಮ್ಮೆ ಉದ್ಗರಿಸಿದ್ದುಂಟು. ನಮ್ಮ ಆದರ್ಶಗಳು ಇತರರಿಗೆ (ಯುಟೋಪಿಯ) ಅತ್ಯಾದರ್ಶಗಳಾಗಿ ತೋರುತ್ತವೆ. ಆದರೆ ನಮಗವುಗಳು ಕಷ್ಟಸಾಧ್ಯವಷ್ಟೇ ಎನ್ನಿಸುವುವಲ್ಲದೆ, ಅಸಾಧ್ಯವೆನ್ನಿಸುವುದಿಲ್ಲ. ಆದರ್ಶಾಚಾರಗಳು ಕೆಳಗಿಳಿದ ಕಾಲದಲ್ಲೂ ಆದರ್ಶವಾದವಿಲ್ಲಿ ಕೆಳಗಿಳಿಯದು; ಅಪವಾದಗಳು ನಿಯಮಗಳಾಗಲಾರವು. ತಾವು ಕಳ್ಳರಾಗಿದ್ದರೂ ಪರರನ್ನು ಕಳ್ಳರಾಗಗೊಡೆವು ಎಂಬುದು ಇಲ್ಲಿಯ ಮತದಾರರ ಮನೀಷೆ. ಇದು ನಾಯಕರು ಕಲಿಯಬೇಕಾದ ಪಾಠ. ಆಧುನಿಕ ಭಾರತದ ಪಾಶ್ಚಾತ್ಯ ಮುಖರಿಗೀಗುಟ್ಟು ಗೊತ್ತಿಲ್ಲ. ತಮ್ಮನ್ನು ಜನ ಹೇಗೆ ಅಳೆಯುತ್ತದೆ ಎಂಬುದನ್ನರಿಯದ ಇವರು ಜನಮಟ್ಟದ ಶೀಲ ತಮಗಿದ್ದರೆ ಸಾಕು, ಅದರಿಂದ ಜನತೃಪ್ತರಾಗಬೇಕು ಎಂದು ಬಯಸುತ್ತಾರೆ. ಈ ಅಭಿಪ್ರಾಯವು ವಸ್ತು ಸ್ಥಿತಿಗೆ ವಿರುದ್ಧವಾಗಿದೆ.

ಒಂದು ಮೂಲಭೂತ ವಸ್ತುಸ್ಥಿತಿಯನ್ನು ಅಸ್ವಾಭಾವಿಕ, ಅನಾಗರಿಕ, ಅನಾಧುನಿಕ, ಅವೈಜ್ಞಾನಿಕ ಎಂದು ಮುಂತಾಗಿ ಎಷ್ಟು ದಿನ ಬಯ್ದರೂ ಅದು ಬದಲಾಗದು. ಅವಾಸ್ತವವನ್ನು ವಾಸ್ತವವೆಂದು ಭಾವಿಸಿದ ನಾಯಕತ್ವದ ದೆಸೆಯಿಂದಲೇ ಪಂಚವಾರ್ಷಿಕ ಯೋಜನೆಗಳು

ಅಂತ್ಯದಲ್ಲಿ ಅತಿ ಅತೃಪ್ತಿಕರ ಪರಿಣಾಮಗಳನ್ನು ಹಡೆದವು. ಪ್ರಕೃತಿಯ ಉತ್ತಮಾಧಮ ಮಧ್ಯಮ ಪ್ರಕಾರಗಳನ್ನು ಆಯಾ ದೇಶೀಯ ಸಾಂಸ್ಕೃತಿಕ ಮಾನದಂಡಗಳಿಂದ ಅಳೆಯಬೇಕಲ್ಲದೆ, ಇತರ ಖಂಡಗಳ ಅಥವಾ ದೇಶಗಳ ಸಾಂಸ್ಕೃತಿಕ ಅಳತೆಗೋಲುಗಳಿಂದಲ್ಲ. ೧೯೭೧ರ ಪಾರ್ಲಿಮೆಂಟ್ ಚುನಾವಣೆಯು ಉಕ್ತ ಅಂಶಗಳೆಲ್ಲವುಗಳಿಗೂ ಉದಾಹರಣೆ.

ಪ್ರಾಮಾಣಿಕ ಸ್ವಾವಲಂಬಿತ್ವಕ್ಕೂ ನಿಜವಾದ ಸಭ್ಯತೆಗೂ ಭಾರತದಲ್ಲಿ ನಿಕಟ ಸಂಬಂಧವಿದೆ; ಪರಾವಲಂಬಿಗಳು ಪರದೇಶಿಗಳು. ರಾಜಕೀಯ ಗೆಲುವಿಗಾಗಿ ಪರ ದೇಶೀಯ ದಾನವನ್ನು ಸ್ವೀಕರಿಸುವುದು, ಬಲಾತ್ಕಾರದಿಂದ ನಿಧಿಸಂಗ್ರಹ ಮಾಡುವುದು, ಮತದಾರರಿಗೆ ಲಂಚ ಕೊಡುವುದು ಅಥವಾ ಬೆದರಿಕೆ ಹಾಕುವುದು, ಅನೃತ ಆಶ್ವಾಸನಗಳನ್ನು ನೀಡುವುದು ಮತ್ತು ಹುದ್ದೆದಾನದ ಅನಾಗತವಿಧಾನ ಮುಂತಾದ ಜನಜುಗುಪ್ಸಾಕರ ವ್ಯವಹಾರಗಳನ್ನು ಸಂಯುಕ್ತ ಕಾಂಗ್ರೆಸ್ಸು ಬೆಳೆಯಗೊಟ್ಟದ್ದರಿಂದ ದೇಶವಿಂದು, ರಾಜಕೀಯ–ಆರ್ಥಿಕ–ಸಾಮಾಜಿಕ ರಂಗಗಳಲ್ಲಿ ಬಹಳ ನರಳುತ್ತಿದೆ; ಅಪ್ರಾಮಾಣಿಕ ಸ್ವಾವಲಂಬನದ ಮಾರ್ಗವನ್ನು ಅನುಕೂಲಸ್ಥ ಅಲ್ಪಸಂಖ್ಯಾತರಾದ ವೈಶ್ಯರೂ ಕ್ಷತ್ರಿಯರೂ ಬ್ರಾಹ್ಮಣರೂ ಶೂದ್ರರೂ [೧](ವೃತ್ತಿನಿಷ್ಠವಾಗಿ) ಹಿಡಿಯಲಾರಂಭಿಸಿದ್ದು ನಾಯಕರ ಅನಾಯಕತ್ವದ ವ್ಯವಹಾರಗಳ ದೆಸೆಯಿಂದಲೇ. ಅಪನಾಯಕರನ್ನು ಆಯ್ಕೆ ಮಾಡಬೇಕಾಗಿ ಬಂದ ಇಲ್ಲಿಯವರೆಗಿನ ಪರಿಸ್ಥಿತಿಯ ಒತ್ತಡಕ್ಕೆ ಉಕ್ತ ಪಕ್ಷವೇ ಪ್ರಧಾನ ಕಾರಣ. ಅದೀಗ ಇಲ್ಲವಾದುದು ಕೇವಲ ಸಹಜ.



---

೧ Trade commerce and Industry group, Politicians experts Servents and cultivators.

# ೩೪

# ಜಾತೀಯತಾನಿರ್ಮೂಲನ ಮತ್ತು ಅಹಿಂಸೆ

ಸ್ವಜಾತಿಯ ಅಥವಾ ಸ್ವಮತಧರ್ಮದ ಉತ್ತಮಾಂಶಗಳನ್ನು ಆಚಾರದಲ್ಲಿ ಪರರೆದುರು ಪ್ರಕಟಿಸುವುದೊಂದೇ ಈ ದೇಶದಲ್ಲಿ ಜಾತೀಯತೆ–ಮತೀಯತೆಗಳನ್ನು ಹೊಡೆದು ಹಾಕಬಲ್ಲುದು. ಚೀನದಲ್ಲಿ ಮಾಡಿದಂತೆ ನಮ್ಮವರೆಲ್ಲ Fragrant flowers ಸುಗಂಧ ಕುಸುಮಗಳು ಮತ್ತು ಇತರರೆಲ್ಲರೂ Poisonous weeds ವಿಷಮೂಲಿಕೆಗಳು ಎಂದು ಒಮ್ಮೆಲೇ ವಿಭಜಿಸಿ ಇಲ್ಲಿ ಯಾರೂ ಗೆಲ್ಲಲಾರರು. ಎಲ್ಲ ಜಾತಿ–ಮತಗಳವರೂ ಈ ಪರಾದರಣೀಯತೆಯ ತತ್ವವನ್ನಾಚರಿಸಿದೆ ಹೋದರೆ ದೇಶದಲ್ಲಿ ಅಂತರ್ಯುದ್ಧವಾಗಿ ಸಾಂಸ್ಕೃತಿಕ ಅರಸುತನ–ಆಳುತನಗಳು ನಿರ್ಣಯವಾಗಿ ಹೋಗುವುದು ಐತಿಹಾಸಿಕ ಭವಿಷ್ಯ. ಆಧುನಿಕ ಯುಗದಲ್ಲಿ ನಾಸ್ತಿಕ್ಯವನ್ನೂ ಮಾಂಸಭಕ್ಷಣವನ್ನೂ ಭಾರತದ ೫೫ ಕೋಟಿಗಳಿಗೆ ಕಲಿಸಲಾಗದುದರಿಂದ ಉಕ್ತ ವಿಕಲ್ಪಗಳೆರಡೇ ಉಳಿದಿವೆ. ನಿರ್ಣಾಯಕ ಮಾನದಂಡಗಳನ್ನು ಈ ವರೆಗೆ ಮುಂದೂಡುತ್ತ ಹೋಗಿರುವುದು ಸಾಂಸ್ಕೃತಿಕ ಅಪರಾಧ. ಏಕೆಂದರೆ ಸರ್ವಸಮಷ್ಟಿ ಕಾರ್ಯಗಳೆಲ್ಲೂ ಒಂದಲ್ಲ ಒಂದು ಕಡೆ ದ್ರೋಹಿಗಳು ಅಥವಾ ಪಂಚಮದಳದವರು ತಯಾರಾಗಿಬಿಡುತ್ತಾರೆ. “Secularism Permits peaceful heterogenous co-existence which is tantamount to passive communalism. Integration, on the other hand, demands its surrender –ಲೌಕಿಕ ಜಾತ್ಯತೀತತೆಯು ಅಸಂಬದ್ಧ ಮತಧಾರ್ಮಿಕ ಗುಂಪುಗಳ ಶಾಂತಿಯುತ ಸಹಜೀವನಕ್ಕೆ ಅನುಮತಿ ಕೊಡುತ್ತದೆ; ಅದು ವಾಸ್ತವಿಕವಾಗಿ ನಿಷ್ಕ್ರಿಯಾತ್ಮಕ ಜಾತೀಯತೆ (ಲೌಕಿಕತೆ). ಏಕೀಕರಣವು ತದ್ವಿರುದ್ಧವಾಗಿ ಉಕ್ತ ಸೂತ್ರವನ್ನು ಬಿಟ್ಟುಕೊಡಬೇಕೆನ್ನುತ್ತದೆ” ಎಂಬ ಎಂ.ಆರ್.ಎ.ಬೇಗರ ಮಾತು ತಥ್ಯಪೂರ್ಣವಾದದ್ದು. ಮಂತ್ರಿಗಳು ಮಾಡಹೊರಟ ರಾಷ್ಟ್ರೀಯ ಭಾವೈಕ್ಯದ ಪ್ರಯತ್ನವು ನಿಷ್ಫಲವಾದುದರ ಅರ್ಥ ಇದರಿಂದ ಸ್ಪಷ್ಟವಾಗುತ್ತದೆ.

ಮತಾಚಾರಗಳಲ್ಲಿ ಮಿತವ್ಯಯ, ಅಹಿಂಸೆ, ಶುಚಿತ್ವ, ಸತ್ಯವಂತಿಕೆಗಳಿಗೆ ಬಾಧೆ ಬರುವ ಅಂಶಗಳನ್ನು ಬಿಡಲು ಕಾಯದೆ ರಚಿತವಾಗುವುದು ಅಗತ್ಯ. ಹಿಂಸೆ, ಅಶುಚಿ, ಅಸತ್ಯಗಳನ್ನು ಯಾವ ಮತಜ್ಞನೂ ಎತ್ತಿ ಹಿಡಿಯನು. ಅಹಂಮನ್ಯರಾದ ಮತಜ್ಞರನ್ನು ಉಕ್ತ ಮಾನದಂಡಗಳಿಗೆ ವಿರುದ್ಧವಾಗಿ ಪ್ರಚಾರಮಾಡಹೊರಟಾಗ ಜೈಲಿಗೆ ಕಳಿಸಬೇಕು; ಅಂಥ

ಆಚಾರ ಎಲ್ಲಿ ನಡೆದರೂ, ಉಗ್ರದಂಡನೆಯಾಗಬೇಕು. ಇಲ್ಲವಾದರೆ ನಮ್ಮ ರಾಜಕೀಯ ಐಕ್ಯಕ್ಕೆ ಯಾವ ಸಾಂಸ್ಕೃತಿಕ ಅರ್ಥವೂ ಉಂಟಾಗಲಾರದು. ಭಾರತದಲ್ಲಿ ಮತಾಚಾರ, ಸಾಮಾಜಿಕ ಸಂಬಂಧ, ತತ್ವಜ್ಞಾನ ಮತ್ತು ರಾಜಕೀಯ ಭಾವನೆಗಳು ಓತಪ್ರೋತವಾಗಿರುವುದೇ ಇಂಥ ಸಾಂಸ್ಕೃತಿಕ ಕಟ್ಟುಪಾಡಿನ ಅವಶ್ಯಕತೆ ಉಂಟಾಗಲು ಕಾರಣ. ಈ ಕಟ್ಟುಪಾಡನ್ನು ತರಲು ಯಾರೂ ಮುಂದಾಗದಿದ್ದರೆ ಜಾತೀಯತೆ, ಮತೀಯತೆ, ಅಲ್ಪಸಂಖ್ಯಾತತೆಗಳ ದೆಸೆಯಿಂದ ದೇಶದ ಐಕ್ಯವು ಎಂದೂ ಸ್ಥಾಯಿಯಾಗಲಾರದು; ಎಷ್ಟು ಹೊತ್ತಿಗೂ ಶತ್ರುಗಳ ಭೇದೋಪಾಯಕ್ಕೆ ಬಲಿಯಾಗಿ ದೇಶವು ಪರಾಧೀನವಾಗಬಹುದು. ಜಾತೀಯತೆಯ ನಿಜವಾದ ಅರ್ಥವು Tribalism ಸಂಕುಚಿತ ಕುಲದಂಭ; ಅದು ಮತವೂ ಅಲ್ಲ, ಧರ್ಮವೂ ಅಲ್ಲ. ಅದರ ದೆಸೆಯಿಂದಲೇ ವಿ.ಕೆ.ಸಿಂಹರು ಹೇಳಿರುವಂತೆ Low status of academics in India to-day – ಇಂದಿನ ಭಾರತದಲ್ಲಿ ವಿಶ್ವವಿದ್ಯಾಲಯಗಳು ಬಹಳ ಕೆಳಮಟ್ಟದಲ್ಲಿವೆ. ಅವುಗಳಿಂದ ಸಮಾಜದ ನಿಜವಾದ ನವೀಕರಣ ಮತ್ತು ಸಕ್ರಿಯೀಕರಣಗಳಾಗಿಲ್ಲ.

ಗಾಂಧೀಜಿ ಮತ್ತು ಎಂ.ಎನ್.ರಾಯರು "Spiritual change and moral means ಆತ್ಮಿಕ ಬದಲಾವಣೆಯನ್ನೂ ನೈತಿಕ ಸಾಧನಗಳನ್ನೂ" ಬೋಧಿಸಿದ್ದು ಬಹಳ ಜನರಿಗೆ ಅರ್ಥವಾಗಿಲ್ಲ. ಅಂತಃಕರಣದಲ್ಲಿ ಸಹಜೀವಿಗಳ ಬಗೆಗೆ ನಿಜವಾದ ಸೌಂದರ್ಯ ಸ್ಫುರಿಸುವುದು ಮತ್ತು ಅದಕ್ಕಾಗಿ ನೈತಿಕ ಸಾಧನಗಳನ್ನು ಬಳಸುವುದೂ ಪ್ರಾತ್ಯಕ್ಷಿಕೆಯ ರೂಪದಲ್ಲಿ ಜನರಿಗಷ್ಟೇ ಅಲ್ಲ– ನಾಯಕರಿಗೆ ಕೂಡ ಸಿಗಲಿಲ್ಲ. ಈಗ ನಿರ್ಲಕ್ಷತನದ ಅಸಹ್ಯಸ್ವಾರ್ಥವು ಎಲ್ಲೆಲ್ಲೂ ತಾಂಡವವಾಡುವಂಥ ಪರಿಸ್ಥಿತಿಯನ್ನು ನಮ್ಮ ಸರಕಾರಗಳು ನಿರ್ಮಿಸಿವೆ; ಅವುಗಳ ಸೃಷ್ಟಿಕರ್ತರಾದ ರಾಜ್ಯನಾಯಕರು ತಂದಿದ್ದಾರೆ. ಇದರ ಪರಿಹಾರಕ್ಕೆ ನಾಯಕಾಂತರರು ಬೇಕಾಗಿದ್ದಾರೆ. ಅಂಥವರನ್ನೀಗ ಪಡೆದಿದೆಯೇ ದೇಶ? ಕೆಲ ಮಟ್ಟಿಗೆ ಪಡೆದಿದೆ. ಬಹಳ ಮಟ್ಟಿಗೆ ಪಡೆಯಬೇಕಾಗಿದೆ.

**"ಪ್ರಾಜ್ಞಃ ಶೂರೋ ಧನಸ್ಥಶ್ಚ ಸ್ವಾಮೀ ಧಾರ್ಮಿಕ ಏವ ಚ**
**ತಪಸ್ವೀ ಸತ್ಯವಾದೀ ಚ ಬುದ್ಧಿಮಾಂಶ್ಚಾಪಿ ರಕ್ಷತಿ"**

**(ಶಾಂತಿ–ರಾಜಧರ್ಮ ೧–೮೮–೩೧)**

ಎಂಬುದು ಹೊಸನಾಯಕರಿಗಿರಬೇಕಾದ ವಿಶೇಷಗಳನ್ನು ಹೇಳುತ್ತದೆ; ಸತ್ಯ, ಅರ್ಜವ, ಅಕ್ರೋಧ, ಅನೃಶಂಸತೆಗಳು ಧಾರ್ಮಿಕತೆ ಎನ್ನಿಸುತ್ತವೆ. ನಾಯಕರ ಈ ಏಳು ವಿಶೇಷಗಳಲ್ಲಿ ಒಂದು ಕೊರತೆಯಾದರೂ ಅವರ ಹೊಸತನ ಆಕರ್ಷಕವಾಗದು. Infusing young blood or old blood ಆಡಳಿತದಲ್ಲಿ ಹೊಸಬರು–ಹಳಬರು ಎಂಬುದು ಅರ್ಥಹೀನ ಸೂತ್ರವೆಂಬುದು ಉಕ್ತ ಭೀಷ್ಮೋಕ್ತಿಯಿಂದ ಗೊತ್ತಾಗುತ್ತದೆ. ವೇಶ್ಯೆ, ಪ್ರಾಪಣಿಕ, ನಟ, ವಿಟ ಮುಂತಾದವರಿಗೆ ಸ್ವಾತಂತ್ರ್ಯವನ್ನು ಇತರರಿಗೆ ಕೊಟ್ಟ ಪ್ರಮಾಣದಲ್ಲಿಯೇ ಕೊಡುವುದು ಅನಾಯಕತ್ವಕ್ಕೆ, ಅರಾಜಕತೆಗೆ ಪ್ರೇರಣೆ ಕೊಟ್ಟ ಹಾಗೇ ಸರಿ; ಏಕೆಂದರೆ ಸಮಾಜಘಾತಕ ವರ್ತನೆಯನ್ನು ಅಂಥವರು ಕಲೆ ಎಂದು ವಿಜ್ಞಾನವೆಂದು, ತತ್ವಜ್ಞಾನವೆಂದು ಸಮರ್ಥಿಸಿ,

ಆಚರಿಸಿ ಸಂಸ್ಕೃತಿಘಾತಕರಾಗುತ್ತಾರೆ. ಸಂಸ್ಕೃತಿ ಇಲ್ಲದೆ ಸಮಾಜವಿಲ್ಲ, ಸಮಾಜವಿಲ್ಲದೆ ರಾಷ್ಟ್ರವಿಲ್ಲ ಎಂಬುದು ವ್ಯಾಸನು ಭೀಷ್ಮನ ಮೂಲಕ ಕೊಟ್ಟ ಎಚ್ಚರಿಕೆ (ಶಾಂತಿ–ರಾಜಧರ್ಮ ೧–೮೮–೧೪, ೧೫). ಶೀಲ ಸಂಸ್ಕಾರವು ಭ್ರಷ್ಟಾಚಾರ ನಿರ್ಮೂಲನದ ಆದ್ಯ ಘಟ್ಟ. ಶಿಕ್ಷಣವು ಶೀಲವಿಮುಖವಾದಾಗ ಅದರಿಂದ ದುರ್ಬೀಜಗಳುದಯಿಸಿ ಸಮಾಜಹಿತವನ್ನು ಕಡೆಗಣಿಸಿ ಸರ್ವಭಕ್ಷಕ ರಾಜಕೀಯ–ಸರಕಾರಿ ಅಧಿಕಾರಿಗಳಾಗಿ ಅವು ಪರಿಣಮಿಸುವುದು ಸಹಜ. ಅರ್ಥಲೋಭ, ವ್ಯಸನ ಮಗ್ನತೆ, ವಿಷಮದರ್ಶಿತ್ವ, ಶಾಸ್ತ್ರಜ್ಞಾನದ ಅಭಾವ ಅಥವಾ ಅಪೂರ್ಣತೆ ಇಂದು ಹಲವಾರು ಮಂತ್ರಿಗಳು ಕುತಂತ್ರಿಗಳಾಗಲು ಅಥವಾ ಅಪ್ರಯೋಜಕರಾಗಲು ಕಾರಣ, ಹಲವಾರು ತಜ್ಞರು ಹಾಗಾಗಲೂ ಕಾರಣ.

ಅತಿಲುಬ್ಧತೆ–ಮಹಾಲುಬ್ಧತೆಗಳು ದೇಶದ್ರೋಹಿಗಳನ್ನು ನಿರ್ಮಾಣ ಮಾಡುವುದರಿಂದ ಅವುಗಳನ್ನು ತಡೆಗಟ್ಟಲು ಕಾಯದೆಗಳಿರುವುದು ಆಧುನಿಕ ಅಗತ್ಯ; ಕಾಯದೆಗಳಿದ್ದರೂ ಅವುಗಳನ್ನು ಸಮರ್ಪಕವಾಗಿ ಜಾರಿಗೆ ತರುವ ದಕ್ಷ ರಾಜಪುರುಷರಿರುವುದೂ ಅಷ್ಟೇ ಅಗತ್ಯ. ಅಂಥ ರಾಜಪುರುಷ ನಿರ್ಮಾಣವು ಶಿಕ್ಷಣದ ಮಾರ್ಪಾಡಿನಿಂದ ಮಾತ್ರ ಸಾಧ್ಯ. ಅಂಥದೇನನ್ನೂ ಮಾಡದಿರುವ ಸುಧಾರಣಾ ಪ್ರಚಾರವು ಜನವಂಚನೆ, ರೋಗನಿದಾನವನ್ನರಿಯದೆ ಔಷಧ ಕೊಡುವ ವೈದ್ಯರಿಂದ ಸರ್ವಹಾನಿಯು ಪ್ರಾಪ್ತವಾಗದೆ ಉಳಿದೀತೇ?

**ಯೇನೋಪ ದಿಶ್ಯತೇ ತೇನ ತನ್ನಾನುಷ್ಠಿಯತೇ ಯದಿ ।**

**ಉಪದೇಶೋಽ ಫಲಸ್ತಸ್ಯ ಸ ಯಾತಿ ಲಘುತಾಂ ಜನಃ ॥**

ರಾಜಕೀಯಾದಿ ಸರ್ವ ಸಾರ್ವಜನಿಕ ಕಾರ್ಯಕರ್ತರಿಗೂ ಮೇಲಿನ ಮಾತು ಅನ್ವಯಿಸುತ್ತದೆ. ಇದನ್ನಿಂದು ಬಹಳ ಜನರು ಮರೆತುದೇ ಪ್ರಗತಿಭಂಗಕ್ಕೆ ಕಾರಣವಾಗಿದೆ. Speechification ಒಣ ಉಪದೇಶ ಮಾಡುತ್ತ ಅಥವಾ ಬರೆಯುತ್ತ ಕಾಲಕಳೆಯುವ ಮುಖಂಡತ್ವವು ಜನರಿಗೆ ಈಗ ಬೇಸರದ ಪರಮಾವಧಿಯನ್ನು ಅನುಭವಕ್ಕೆ ತಂದುಕೊಟ್ಟಿದೆ. ಆದುದರಿಂದ ಅವರೀಗ ಮಾಡಬೇಕಾದ್ದೇನನ್ನು? ಸಾಮೂಹಿಕ ನಿಷ್ಕ್ರಿಯಾಪ್ರತೀಕಾರವನ್ನು; ಈ ಅಹಿಂಸಾಕ್ರಮದಿಂದ ಅಧಿಕಾರದಲ್ಲಿರುವ ಕಪಟಿಗಳಿಂದ ಲುಬ್ಧತೆ–ಸ್ವಾರ್ಥಗಳ ದೆಸೆಯಿಂದ ಮಾಡದೆ ಉಳಿದ ಕರ್ತವ್ಯಗಳನ್ನು ಮಾಡಿಸಿಕೊಳ್ಳಬೇಕು. ಷೇಕ್ ಮುಜೀಬರ ರಹ್ಮಾನ್ ಪೂರ್ವಪಾಕಿಸ್ತಾನದಲ್ಲಿ ಈ ಕ್ರಮದಿಂದಲೇ ಸರ್ವಾಧಿಕಾರಿಯನ್ನು ಬಗ್ಗಿಸಿದನು. ಬೇರೆ ಕ್ರಮವು ಇಂದು ಅಸಾಧು, ಅಶಕ್ಯ.



# ೩೫

# ರಾಷ್ಟ್ರೀಯ ಆಚಾರ್ಯರು

"ಈಶ್ವರಶ್ಚ ಮಹಾದಂಡಃ" ಎಂಬ ಭೀಷ್ಮ ಸೂತ್ರದಲ್ಲಿ ಜನರಕ್ಷಕಶಕ್ತಿಸಂಪನ್ನನ ತೇಜಸ್ಸು, ಕರ್ಮ, ಪಾಂಡಿತ್ಯ, ವಾಕ್‌ಶಕ್ತಿ, ತತ್ವಬುದ್ಧಿಗಳು ನಾನಾರೂಪಗಳಲ್ಲಿ ಪ್ರಕಟವಾಗುತ್ತಿದ್ದರೇನೇ ಕಪಟಿಗಳ, ಅನೃತವಾದಿಗಳ ಮತ್ತು ಪರಹಿಂಸಕರ ಪ್ರಾಬಲ್ಯ ಅಡಗುತ್ತದೆ ಎಂಬ ಅಂಶವು ಭಾರತೀಯ ಪ್ರಜಾಮನೋವಿಜ್ಞಾನದ ಸ್ವರೂಪದ ಮೇಲೆ ಬೆಳಕು ಬೀರುತ್ತದೆ. ದಂಡದ

**"ಶ್ರೀಗರ್ಭೋ ವಿಜಯಃ ಶಾಸ್ತಾ ವ್ಯವಹಾರಃ ಸನಾತನಃ ।**

**ಶಾಸ್ತ್ರಂ ಬ್ರಾಹ್ಮಣ ಮಂತ್ರಾಶ್ಚ ಶಾಸ್ತಾ ಪ್ರಾಗ್ವದತಾಂ ವರಃ" ॥**

**(ರಾಜಧ. ೧, ಅಧ್ಯಾಯ ೧೨೧, ಶ್ಲೋ. ೨೦-೨೧)**

ಈ ಅಂಶಗಳೆಲ್ಲವೂ ವಿಪರ್ಯಸ್ತವಾಗಿ ಅರ್ಥಯಿಸುವುದರಿಂದ ವಿಪರ್ಯಾಸ ಹೊಂದುವುವು. ಶ್ರೀಯ, ವಿಜಯದ, ವ್ಯವಹಾರನ್ಯಾಯದ, ಶಾಸ್ತ್ರದ, ಬ್ರಾಹ್ಮಣ ಮಂತ್ರದ ಅರ್ಥಗಳು ಅನುಕೂಲಸಿಂಧು ನ್ಯಾಯದಿಂದ ಅಭಾರತೀಯ ದೃಷ್ಟಿಕೋನ ಉಳ್ಳವರು ಅಭಾರತೀಯವಾಗುವಂತೆ ಹೇಳಿ ಅರೆಬುದ್ಧಿವಂತರನೇಕರನ್ನು ಮರುಳ್ಗೊಳಿಸಿ ಅಪಾರ್ಥತಃ ಆಚರಣೆಗೆ ತರಬಹುದು ಅಥವಾ ತ್ಯಾಜ್ಯವೆಂದು ಬಿಡಬಹುದು. ಇದು ಇಂದು ಭಾರತೀಯ ಸಂಸ್ಕೃತಿಗಾಗುತ್ತಿರುವ ದುರಂತ. ಆಳುವಿಕೆಯ ಗಾಂಭೀರ್ಯದ ಪಂಚಮುಖಗಳನ್ನು ಸಾರತಃ ಅರಿಯದವರ ಅನನುಭವಿಕ ಆಡಳಿತವು ಪ್ರಜಾಕ್ರೋಶಕ್ಕೆ ಕಾರಣವಾಗಿ ಆಮೂಲಕ ಜುಗುಪ್ಸಿತವಾಗಿ ಅಧಃಪಾತ ಹೊಂದುವುದು. Dignity, command, sense of justice, Indian ethics and the opinion of the national teachers ಎಂಬ ಪಂಚಮುಖಗಳು ಆಡಳಿತ ನಿಯಮದ ಆಚರಣೆಯ ರೀತಿಯಲ್ಲಿ ವ್ಯಕ್ತವಾಗಬೇಕು. "ಬ್ರಾಹ್ಮಣರು" ಸ್ವತಂತ್ರವೃತ್ತಿಯ ಸದಾಚಾರಸಂಪನ್ನರಾದ ವಿದ್ವಾಂಸರು; ಅವರು ಮಾತ್ರ ರಾಷ್ಟ್ರಶಿಕ್ಷಕರು; ಜನ್ಮ ಬ್ರಾಹ್ಮಣ್ಯ, ವೃತ್ತಿಬ್ರಾಹ್ಮಣ್ಯಗಳು ಗೌಣ. ಶಾಸ್ತ್ರಗಳೆಲ್ಲವೂ ನೀತಿಶಾಸ್ತ್ರವನ್ನು ಆಧರಿಸಿರುವುದು ಸಾಮಾಜಿಕವಾದುದರಿಂದ ಅದರ ಸ್ಥಾನ ಹಿರಿಯದು. ವ್ಯವಹಾರದ ಸಾಮಾಜಿಕ ನ್ಯಾಯವು ಸಂಸ್ಕೃತಿಯ ಮಟ್ಟವನ್ನು ಅವಲಂಬಿಸಿದ್ದು. ನಿಯಮಾನ್ವಯದ ಯಶಸ್ವಿತೆ ವಿಜಯಯೋಜನೆಯನ್ನು ಆಧರಿಸಿದ್ದು, ಶ್ರೀಮದ್ಗಾಂಭೀರ್ಯವು ನಿಯಮಾನ್ವಯದ ರೀತಿಯ ಫಲಪ್ರದತೆಗೆ ಅವಶ್ಯವಾದ ರೀತಿ. ದಂಡದ (ಆಡಳಿತದ) ಈ ಪಂಚಮುಖ ಅಥವಾ

ಪಂಚಾಂಗಗಳು ನಿತ್ಯ ಮತ್ತು ಅವುಗಳಿಂದ ಕೂಡಿದ ಶಾಸನೋಕ್ತಿಯನ್ನಾಡುವವನು ವಾಗ್ಮಿಗಳಲ್ಲಿ ಅಗ್ರಗಣ್ಯನೂ ಸಮರ್ಥ ಆಡಳಿತಗಾರನೂ ಆಗುವನು. ಈಶ್ವರತ್ವವು ಒಡೆಯತನ, ಸಂಪತ್ತು. ಆಜ್ಞಾಪನ ಸಾಮರ್ಥ್ಯವಿಲ್ಲದ ಅಥವಾ ಇದ್ದೂ ಅದನ್ನೂ ನ್ಯಾಯವಾಗಿ ಬಳಸದ ಮಂತ್ರಿ–ಮಹಾಧಿಕಾರಿಗಳ ದೆಸೆಯಿಂದ ಭಾರತೀಯ ಪ್ರಜಾಪ್ರಭುತ್ವವೀಗ ತತ್ತರಿಸಿಹೋಗಿದೆ. ಅದರ ಪುನಾರಚನೆಗೆ, ಪುನರುದ್ಧಾರಕ್ಕೆ, ಪುನಃ ಪ್ರತಿಷ್ಠಾಪನೆಗೆ ಆದ್ಯತೆಯನ್ನು ಕೊಡಲು ಎಲ್ಲ ಮತದಾರರು ಒತ್ತಾಯಿಸಬೇಕಾದ ಆಪತ್ಕಾಲವಿದು. ಅದರ ಹೆಸರಿನಲ್ಲಿ ಬೊಬ್ಬೆಹೊಡೆಯುವ ಮುಖಂಡರ ಮೋಸಗಾರಿಕೆ ಈಗ ಸರ್ವವಿದಿತವಾಗಿದೆ (೧೯೭೧ರ ಪಾರ್ಲಿಮೆಂಟಿನ ಚುನಾವಣೆಯಲ್ಲಿ ಸ್ಪಷ್ಟವಾಗಿದೆ). ಆದುದರಿಂದ ಮುಖಂಡರನ್ನು ತರಬೇತು ಮಾಡಲು ವಿಶಿಷ್ಟ ಶಾಲೆಗಳನ್ನು ತೆರೆಯುವುದೂ ರಾಷ್ಟ್ರೀಯ ಶಿಕ್ಷಕರನ್ನು ಆ ಬಗೆಗೆ ನಿಯಮಿಸುವುದೂ ಅನಿವಾರ್ಯ. ಆ ಸುದಿನ ಬಂದೀತೇ?



# ೩೬

# ಆತ್ಮ ಸಂಯಮ

'ರಾಮರಾಜ್ಯದಲ್ಲಿಯೂ ಕಳ್ಳರಿದ್ದರು' ಆದುದರಿಂದ ಕಳ್ಳರಿಲ್ಲದಂತೆ ಮಾಡುವುದು ಯಾರಿಗೂ ಅಸಾಧ್ಯ, ಕಳ್ಳರು ಕೈಯಲ್ಲಾದಷ್ಟು ಕದ್ದು ಹೋಗಲಿ– ಇನ್ನೊಬ್ಬರ ಸ್ವತ್ತನ್ನು, ಎಂಬಂತಹ "ಆಧುನಿಕ ಭಾರತೀಯತೆ"ಯು ಕೆಲವರಿಗೆ ಹಿಡಿದ ಒಂದು ಹೃದ್ರೋಗ. 'ಜಗತ್ತೆಲ್ಲಾ ಹೀಗೇ ಇತ್ತು, ಇದೆ, ಇರುವುದು' ಎನ್ನುತ್ತ ತಿರುಗುವ ಹರಿಕಥಾರಾಜಕಾರಣಿಗಳ ಬಾಯನ್ನು ಮುಚ್ಚಿಸದ ಅಧೀರ ಮೇಧಾವಿಗಳು ಹೆಚ್ಚಿದ ಐತಿಹಾಸಿಕ ಅವಧಿಯು ದೇಶವನ್ನು ನರಕವನ್ನಾಗಿ ಮಾರ್ಪಡಿಸುತ್ತದೆ. ದೀನಾನಾಥರ ಬಹುಸಂಖ್ಯೆಯನ್ನು ಕಡೆಗಣಿಸಿ ಸಾರ್ವಜನಿಕವಾದುದನ್ನು ಖಾಸಗಿಯ ಬಳಕೆಯ ವಸ್ತುವೆಂದು ಬಳಸಿಕೊಳ್ಳುವ ಅಧಿಕಾರಿ, ಪ್ರಾಧಿಕಾರಿ, ಮುಖಂಡರ ಪ್ರಭುತ್ವವು ಇರುವ ವರೆಗೆ ನಾಗರಿಕತೆಯು ಅನಾಗರಿಕತೆಗೆ ಬಹಳ ಹತ್ತಿರಕ್ಕೆ ಹೋಗಿರುತ್ತದೆ. ಇಂಥ ಖಗ್ರಾಸ ಗ್ರಹಣಯುಗದಿಂದ ಬಹುಸಂಖ್ಯಾತ ಪ್ರಜೆಗಳು ಜೀವನ್ಮೃತರೂ ಮೃತರೂ ಆಗುತ್ತ ಹೋಗುವ ಪರಿಸ್ಥಿತಿಯು "ಸ್ವರಾಜ್ಯ"ದ ಶುಭಾರ್ಥವನ್ನು ಹೊಲೆಗೆಡಿಸುತ್ತದೆ.

ಅಸತ್ಯ, ವಂಚನೆ, ಲೋಭ, ವಿಶ್ವಾಸದ್ರೋಹ, ಕೃತಘ್ನತೆಗಳಿಂದ ಕಲುಷಿತವಾದ ರಾಜಕೀಯ, ಸಾಮಾಜಿಕ, ಕೌಟುಂಬಿಕ, ಆರ್ಥಿಕ, ವಾಣಿಜ್ಯದ ವ್ಯವಹಾರಗಳು ಅರಾಜಕತೆಗೆ ದಾರಿಮಾಡಿಕೊಡುತ್ತವೆ. "ಹರಕೊಲ್ಲಲ್ ಪರಕಾಯ್ವನೇ?" 'ಬೇಲಿಯೆದ್ದು ಹೊಲನೆಲ್ಲಂ ಮೇದೊಡೆ?" ಎಂಬಂತಹ ನಿರ್ವಿಣ್ಣತೆಯನ್ನು ಪ್ರಾಮಾಣಿಕ ಪ್ರಜೆಗಳಿಗುಂಟು ಮಾಡುವ ದೈತ್ಯರ ಸಂವರ್ಧನೆಯಂತೆಯೇ ವಿನಾಶವೂ ಈಶ್ವರನಿಂದಲೇ ಆಗುವುದು ಕೆಲವೊಮ್ಮೆ ಸ್ಪಷ್ಟವಾಗಿ ಕಾಣುತ್ತದೆ. ಆದುದರಿಂದ ಈಶ್ವರ ಭಕ್ತಿಯು ಪ್ರಬುದ್ಧರಲ್ಲಿ ಇರುವುದು ದೇಶಹಿತಕ್ಕೆ ಸಾಧಕ. ಅಪ್ರಬುದ್ಧ ಭಕ್ತಿಯು ಅಭಕ್ತಿಯಂತೆಯೇ ದುರಾಚಾರಪ್ರೇರಕ.

**"ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಕ್ ಪೃಥಕ್**

**ವಿವಿಧಾಶ್ಚ ಪೃಥಕ್ ಚೇಷ್ಟಾ ದೈವಂ ಚೈವಾತ್ರ ಪಂಚಮಂ"**

ಎಂಬುದನ್ನು ಆಳವಾಗಿ ಜೀರ್ಣಿಸಿಕೊಂಡ ಪ್ರಬುದ್ಧತೆಯೇ ನಿಜವಾದ ಪ್ರಬುದ್ಧತೆ. ಅದೀ ದೇಶದಲ್ಲಿಂದು ಶಿಕ್ಷಣ ಕ್ಷೇತ್ರದಲ್ಲಿಯೇ ಇಲ್ಲವಾಗಿರುವಾಗ ಉಳಿದ ಕ್ಷೇತ್ರಗಳಲ್ಲಿ ಹುಡುಕಿದರೆ ಸಿಕ್ಕೀತೇ? ಅತಿ ದೈವವಾದ, ಅತಿಪೌರುಷವಾದಗಳೆರಡೂ ದೈವಪುರುಷರ

ಆತ್ಯಂತಿಕ ಐಕಾತ್ಮ್ಯವನ್ನು ಮರೆತದ್ದರಿಂದ ಹುಟ್ಟಿವೆ. ಉಭಯ ಪ್ರಾಧಾನ್ಯವು ಮಾನವರಲ್ಲಿ ಅಧಿಕ. ಅದು ಮಾತ್ರ ಪ್ರಬುದ್ಧತೆಗೆ ಆಧಾರ. ಪ್ರಬುದ್ಧರ ಶ್ರದ್ಧೆ ಮತ್ತು ತದನುಗುಣವಾದ ಆಚಾರಗಳು ಅಪ್ರಬುದ್ಧರಿಗೆ ಮಾರ್ಗದರ್ಶಕಗಳು. ಅಪ್ರಬುದ್ಧರಿಗೆ ತಾವು ಅಪ್ರಬುದ್ಧರೆಂಬುದನ್ನು ಸದ್ಗುರುಗಳು ಮಾತ್ರ ತೋರಿಸಿಕೊಡಬಲ್ಲರು. ಅವರಿಗೆ ಆ ಆತ್ಮಜ್ಞಾನವಾದ ಮೇಲೆ ಪ್ರಬುದ್ಧಾತ್ಮಜ್ಞಾನದ ಸಾಧನೆಗೆ ಅರ್ಹತೆ ಸಿಗುತ್ತದೆ. ಪ್ರಜಾಪ್ರಭುತ್ವವಾಗಲಿ, ಸಮಾಜವಾದೀಯ ಪ್ರಭುತ್ವವಾಗಲಿ– ಅರ್ಹತಾ ಸಂಪನ್ನರ ಆಧಿಪತ್ಯಕ್ಕೆ ಅವಕಾಶ ಕೊಟ್ಟ ಹೊರತು ಸತ್ಫಲದಾಯಕವಾಗಲಾರವು. ಅರ್ಹತಾಭಿಜ್ಞಾನವನ್ನು ಸದ್ಗುರುಗಳು ಮಾತ್ರ ಜನರಲ್ಲಿ ಮೂಡಿಸಬಲ್ಲರು. ಸದ್ಗುರುಗಳನ್ನು ಗುರುತಿಸುವುದನ್ನೂ ಸದ್ಗುರುಗಳಿಂದಲೇ ಕಲಿಯಬೇಕಾದ ಸಂದರ್ಭದಲ್ಲಿ ಒಂದು ದೇಶವು ಹೀನಾವಸ್ಥೆಯಲ್ಲಿರುತ್ತದೆ. ಸದ್ಗುರುಗಳು ನಿರಹಂಕಾರಿಗಳಾಗಿರುವುದರಿಂದ "ಶಿಷ್ಯಸ್ತೇಽ ಹಂ ಶಾಧಿ ಮಾಂ ತ್ವಾಂ ಪ್ರಪನ್ನಂ" ಎಂದು ಅಂಥವರಲ್ಲಿ ಬೇಡಿಕೊಂಡ ಹೊರತು ಸದ್ಗುರುಗಳು ಯುಕ್ತಾಯುಕ್ತ ವಿವೇಕವನ್ನು ಹೇಳರು.

**"ಕರೆಯದಲೆ ಬರುವವನ**
**ಬರೆಯದಲೆ ಓದುವನ**
**ಬರಿಗಾಲಿನಿಂದ ನಡೆವವನ ಕರೆತಂದು**
**ಕೆರದೆ ಹೊಡೆಯೆಂದ ಸರ್ವಜ್ಞ"**

ಎಂಬುದನ್ನು ಸದ್ಗುರುಗಳು ಬಲ್ಲರು. ಆದುದರಿಂದ ದೇವರೂ ಸದ್ಗುರುಗಳಂತೆಯೇ ಕರೆಯದೆ ಬಾರ. ಆ ಕರೆಯೇ ಭಕ್ತಿ. ದೇವರಿತ್ತ ಸರ್ವಸಾಧನಗಳನ್ನೂ ಯುಕ್ತಿಯುಕ್ತವಾಗಿ ಬಳಸಿಯೂ ದತ್ತ ಕಾರ್ಯವೊಂದು ಕೈಗೂಡದಿದ್ದಲ್ಲಿ ದೈವಧ್ಯಾನದಲ್ಲಿ ಲೀನರಾಗಿರುವುದು ಆರೋಗ್ಯಮನಸ್ಕರ ಲಕ್ಷಣ. ಇದಿಂದು ಶಿಕ್ಷಣದಲ್ಲಿ ಸಾರಭೂತ ಅಂಗವಾಗಿ ಉಳಿದಿಲ್ಲ. ಮನುಷ್ಯಪ್ರಯತ್ನ ಎಲ್ಲಿಗೆ ನಿಲ್ಲಬೇಕು ಮತ್ತು ದೈವಸಮರ್ಪಣದ ವ್ಯಕ್ತಿ ತಾಟಸ್ಥ್ಯ ಎಲ್ಲಿಂದ ಆರಂಭವಾಗಬೇಕು? – ಎಂಬುದು ವಿಜ್ಞೇಯವಾಗದಾಗ ರಾಷ್ಟ್ರಪಾಲರು ರಾಷ್ಟ್ರಗುರುಗಳ ಸಲಹೆಯಂತೆ ವರ್ತಿಸುವುದು ಯುಕ್ತ. ಗುರು ತಪ್ಪಿದರೆ ಹರ ತಪ್ಪಿದಂತೆಯೇ ಸರಿ.

ಅಂಥ ಗುರುಭಕ್ತಿಗಿಂತಲೂ ಹೆಚ್ಚಾಗಿ ಕೆಲವೊಮ್ಮೆ ಗುರುಭಕ್ತಿಯ ಆಭಾಸ ಅಥವಾ ಅಭಾವವು ಮಾನವನನ್ನು ನರರೋಗಿಯನ್ನಾಗಿ ಕೊಳೆಯಿಸುತ್ತದೆ. ನರರೋಗಿಗಳು ಅವಶಿಗಳು, ಮನಸಾ ಅಸ್ವತಂತ್ರರು. ಅವರು ಸ್ವ–ಪರಹಾನಿಗಳಿಗೆ ಸುಲಭವಾಗಿ ಕಾರಣರಾಗುತ್ತಾರೆ. ಶಾಸ್ತ್ರಜ್ಞತೆ–ಶೀಲವಂತಿಕೆಗಳು ಗುರುವಿಗೂ ಶಿಷ್ಯನಿಗೂ ಮಾನಸಿಕ–ಶಾರೀರಿಕ ಆರೋಗ್ಯಸಾಧನಗಳು. ದುರ್ಗುರು–ಸದ್ಗುರು ಭೇದವನ್ನು ತಮಗಿಂತ ಹೆಚ್ಚು ತಿಳಿದ ಆಪ್ತರಿಂದ ಅರಿತುಕೊಳ್ಳಬೇಕು. ದುರ್ಗುರುಬೋಧವೂ ನರರೋಗ ಹೇತು. ನರರೋಗಿಗಳು ರಾಷ್ಟ್ರರಕ್ಷಣೆಗೆ ಅನರ್ಹರು. ನರವು ಮಿದುಳಿನ ಸಂದೇಶವಾಹಕ. ಮಿದುಳಿನ ದೌರ್ಬಲ್ಯವು ನರರೋಗಕ್ಕೆ ಕಾರಣ. ಶಾಸ್ತ್ರ–ಶೀಲಗಳೇ ಮಿದುಳಿಗೆ "ಟಾನಿಕ್". ಸರ್ವಶಾಸ್ತ್ರಗಳೂ ತತ್ವ–ಶಾಸ್ತ್ರಾಧೀನ ಎನ್ನಿಸಿರುವುದು ಆತ್ಯಂತಿಕವಾಗಿ. ಈ ಅಂಶವನ್ನು ಗಣಿಸದವರು

ಜ್ಞಾನಲವದುರ್ವಿದಗ್ಧರಾಗಿ ಹೋಗುತ್ತಾರೆ. ತತ್ವಶಾಸ್ತ್ರವು ನಮ್ಮ ಜೀವನದ ಆದರ್ಶಗಳ ಯೋಜನಾಬದ್ಧವಾದ ಸಿದ್ಧಾಂತವನ್ನು ರೂಪಿಸಿಕೊಳ್ಳಲು ಸಹಾಯಕ.

"That which is human in man and ultimately divine, we learn, is the higher will, or will to retrain. This is opposed to the lower will or expansive appetite. Standards of the higher will are derived by the imagination which sees the likenesses and analogies in connexion with the power which discriminates- ಮಾನವನಲ್ಲಿ ಮೊದಲು ಮಾನವೀಯವಾಗಿದ್ದು ಕೊನೆಗೆ ದಿವ್ಯವಾಗುವ ಇಚ್ಛಾಶಕ್ತಿ ಎಂದರೆ ದಮ. ಇದು ಕೆಳಮಟ್ಟದ ಇಚ್ಛಾಶಕ್ತಿಗೆ ವಿರುದ್ಧವಾದದ್ದು. ಕೆಳಮಟ್ಟದ ಇಚ್ಛಾಬಲವೆಂದರೆ ವಿಸ್ತರಿಸುತ್ತ ಹೋಗುವ ಆಸೆ–ಪಾಸೆಗಳು, ಭೋಗಲಾಲಸೆಗಳು, ಕಲ್ಪನಾಬಲದಿಂದ ಮೇಲ್ಮಟ್ಟದ ಇಚ್ಛಾಶಕ್ತಿಯ ಉತ್ತರೋತ್ತರ ಉನ್ನತಸ್ತರಗಳನ್ನು ಕಂಡುಕೊಳ್ಳಬಹುದು. ಮೇಲ್ಮಟ್ಟದ ಇಚ್ಛಾಶಕ್ತಿಯೆಂದರೆ ಹೋಲಿಸಿ ಆಯ್ದುಕೊಳ್ಳುವ ವಿವೇಕ ಶಕ್ತಿ" – Yvor winters ಎಂದದ್ದು ಎಂಬ ಒಬ್ಬ ಮಹಾ ವಿಮರ್ಶಕ.

**"ದಮೋ ನಾನ್ಯಸ್ಪೃಹಾ ನಿತ್ಯಂ ಗಾಂಭೀರ್ಯಂ ಧೈರ್ಯ ಮೇವ ಚ**
**ಅಭಯಂ ರೋಗಶಮನಂ ಜ್ಞಾನೇನೈತದವಾಪ್ಯತೇ"**

**–ಮ.ಭಾ.ಆಪದ್ಧರ್ಮಪರ್ವ ೧೬೨ನೇ ಅಧ್ಯಾಯ, ಶ್ಲೋಕ ೧೨**

ದಮ ಅಥವಾ ದಾಂತತೆಯು ಸತ್ಯದ ಅಥವಾ ಧರ್ಮದ ೧೩ ಲಕ್ಷಣಗಳಲ್ಲಿ ಅಗ್ರಗಣ್ಯ. ದಾಂತಿ ಇಲ್ಲದಲ್ಲಿ ಶಾಂತಿ ಇಲ್ಲ. ದಮನವು Repression ಅಲ್ಲ, Suupression. ಎರಡನೆಯದು ಉದಾತ್ತೀಕರಣದ ಮೊದಲ ಹೆಜ್ಜೆ. ಅವಿವೇಕಯುಕ್ತವಾದ ದಮನವು ಅನಾರೋಗ್ಯಕರವಾದರೆ, ವಿವೇಕ ಯುಕ್ತವಾದ ದಮನವು ಆರೋಗ್ಯಕರ, ಒಂದನ್ನು ಇನ್ನೊಂದನ್ನಾಗಿ ತಿಳಿದುಕೊಳ್ಳುವುದು ಅಜ್ಞಾನ. ಮೊದಲನೆಯದು ನಿರೋಧ, ಎರಡನೆಯದು ಬಲಾತ್ಕಾರ ಅಥವಾ ಹಠ. 'ಸ್ಪೃಹೆ' Expectation from others- ಪರರು ನಡೆದುಕೊಳ್ಳಬೇಕಾದುದರ ನಿರೀಕ್ಷೆ. ಅದರ ತ್ಯಾಗವು ದಮದ ಪ್ರಥಮಾಧಾರ; ತ್ಯಾಗವಲ್ಲದಿದ್ದರೂ ತ್ಯಾಗೋನ್ಮುಖತೆಯಾದರೂ ಪೂರ್ವಭಾವಿಯಾಗಿ ಇದ್ದೇ ಇರಬೇಕು. ಅದೊಂದೇ ಯತಿಧರ್ಮದ, ಯೋಗಿಧರ್ಮದ ಅಥವಾ ಯೋಧ ಧರ್ಮದ ಮೂಲಾಧಾರ. ಭಾವೋದ್ರೇಕಗಳ ಅತಿಯನ್ನು ದಮಿಸಲಾರದವರು "ಅವಿವೇಕಃ ಪರಮಾಪದಾಂ ಪದಂ" ಎಂಬ ಪರಿಣಾಮವನ್ನುಂಟುಮಾಡುವ ಅಸಾಂಪ್ರತ ಸಹಸಾಕರ್ಮದ "ಸಾಹಸ"ಕ್ಕಿಳಿದು ಅಪಜಯ ಹೊಂದುತ್ತಾರೆ. ಸಹಸಾಕರ್ಮವು ದೇಶ–ಕಾಲ–ವ್ಯಕ್ತಿ–ಪ್ರಯೋಜನಗಳಿಂದ ನಿರ್ದೇಶ್ಯ. "ಅಭೀತಸ್ಯ ಹಿ ಮೇ ಮೃತ್ಯುಂಃ ಪುತ್ರಜನ್ಮ ಸಮೋಭವೇತ್" ಎಂಬ ಧೈರ್ಯವು ದಾಂತನಿಗೆ ಸಹಜ. ಅಸಾಂದರ್ಭಿಕ ದಮವು ಇತರ ಗುಣಗಳಂತೆಯೇ ಅಧರ್ಮಪ್ರೇರಕವಾಗುತ್ತದೆ.

**"ಯಶ್ಚಾತ್ರ ಧರ್ಮೋ ನಿತ್ಯೋಕ್ತೋ ದಂಡನೀತಿವ್ಯಪಾಶ್ರಯಃ**
**ತಮಶಂಕಃ ಕರಿಷ್ಯಾಮಿ ಸ್ವವಶೋ ನ ಕದಾಚನ""**

**ರಾಜಧ. ಪರ್ವ ೧, ಅಧ್ಯಾಯ ೫೧, ಶ್ಲೋಕ ೧೦೭**

ದಾಂತಿಯು ವಶಿತ್ವ. ವಶಿತ್ವದಿಂದ ಮಾತ್ರ ಯುಕ್ತದಂಡ ವಿಧಾನವು ಸಾಧ್ಯ. ಸ್ವಕಾಮ ಕ್ರೋಧಾದಿಗಳಿಗೆ ವಶವಾಗುವುದು ಅವಶಿತ್ವ. ರಾಜಕೀಯ ಅಥವಾ ಸಾರ್ವಜನಿಕ ಕಾರ್ಯಕರ್ತರೆಲ್ಲರಿಗೂ ವಶಿತ್ವವು ಮೊದಲು ದಕ್ಕಬೇಕಾದ ಶಿಸ್ತು. ಅದಿಲ್ಲದಲ್ಲಿ ವಿಚಾರ–ವಿವೇಕಗಳ ಆಭಾಸಗಳಷ್ಟೇ ಉಳಿದಾವು. ಅಧಿಕಾರಲಾಲಸೆಯ ರಾಜಕಾರಣವಿಂದು ಈ ಆಭಾಸಗಳಿಗೆ ಸಾವಿರಾರು ಉದಾಹರಣೆಗಳನ್ನು ಒದಗಿಸಿದೆ. ಗೃಹಪ್ರಶಾಸನದಿಂದ ರಾಷ್ಟ್ರಪ್ರಶಾಸನದ ವರೆಗೂ ಈ ನೀತಿಯೂ ಮಾರ್ಗದರ್ಶಕವಾಗಿದೆ.



# ೩೭

# ಶೌಚಪಾಲನೆ

"ಶೌಚೇನ ಧನಸಂಚಯಃ" ಎಂಬುದನ್ನು ಪ್ರಶಾಸಕ–ಪ್ರಶಾಸ್ಯರಿಬ್ಬರಲ್ಲೂ ಹಲವರು ಇಂದು ಪಾಲಿಸದಿರುವುದೇ ಭ್ರಷ್ಟಾಚಾರ ಪ್ರಸಾರವನ್ನು ಹೆಚ್ಚಿಸುತ್ತಿದೆ. ಶುಚಿತ್ವವಿಲ್ಲಿ ವಿಧಿಬದ್ಧ ರೀತಿನೀತಿಗಳ ಅನುಸರಣೆಯು ತೋರಬೇಕಾದ ಲೋಭತ್ಯಾಗದಲ್ಲಿದೆ. ಲೋಭವು ಬೇಜವಾಬುದಾರಿಯ ಮೂಲಪ್ರೇರಕ. ಅದನ್ನು ಹೋಗಲಾಡಿಸುವುದು ಕೇಂದ್ರ ಸರಕಾರದ ಆದ್ಯಕರ್ತವ್ಯ.

**"ಕ್ಷಾತ್ರೋ ಧರ್ಮೋ ಹ್ಯಾದಿದೇವಾತ್ ಪ್ರವೃತ್ತಃ**
**ಪಶ್ಚಾದನ್ಯೇ ಶೇಷಭೂತಾಶ್ಚ ಧರ್ಮಾಃ"**

**ರಾಜಧ. ೧, ಅಧ್ಯಾಯ ೬೪, ಶ್ಲೋಕ ೨೧**

ಸರಕಾರದ ಧರ್ಮವು ಆದ್ಯ. ಅದು ಇಲ್ಲವಾದಾಗ ಯಾವ ಧರ್ಮವೂ ಸಮರ್ಪಕವಾಗಿ ಪ್ರಜೆಗಳಿಂದ ಪಾಲಿಸಲು ಸಾಧ್ಯವೆನ್ನಿಸದು. ಸರ್ವಸಂಘಟನೆಗಳ ತಾಯಿ ಸರಕಾರ. ಅದು ಅಶೌಚಕ್ಕಿಳಿದರೆ ಬೇಲಿ ಎದ್ದು ಹೊಲವನ್ನು ಮೇಯತೊಡಗುತ್ತದೆ. ಆದುದರಿಂದ ರಾಷ್ಟ್ರಸೂತ್ರದಲ್ಲಿ ಸರಕಾರಿ ಯಂತ್ರವೆಂಬುದರ ರಚನೆಯು ಅತ್ಯಂತ ಮಹತ್ವವುಳ್ಳದ್ದು. ಪ್ರಜಾಪ್ರಭುತ್ವದಲ್ಲಿ ಅಶುಚಿ ಪ್ರತಿನಿಧಿಗಳಿಂದ ಅಶುಚಿ ಸರಕಾರವೂ ಶುಚಿನಿಷ್ಠ ಪ್ರತಿನಿಧಿಗಳಿಂದ ಶುಚಿಯಾದ ಸರಕಾರವೂ ರಚಿತವಾಗಿ ಕಾರ್ಯನಿರ್ವಹಿಸುತ್ತದೆ. ನಿಷ್ಕಾರ್ಯ–ದುಷ್ಕಾರ್ಯಗಳು ಅಶೌಚಗಳು; ವಿಲಂಬ, ಲಂಚಾದಿಗಳು ದುಷ್ಕಾರ್ಯಗಳು. ಸರ್ವೋದಯ (ಸರ್ವನಿರಪರಾಧಿ ಪ್ರಾಮಾಣಿಕ ಕರ್ಮಶೀಲರ ಉದಯ) ಎಂಬುದು ನಿಷ್ಪಕ್ಷಪಾತವಾಗಿ ಜಾರಿಗೆ ಬರುವಂತೆ ಮಾಡುವುದು ಶೌಚ. ಪಕ್ಷಪಾತವು ಸಮಾನ ಗುಣಿಗಳಲ್ಲಿ ಮಾಡುವ ವೈಷಮ್ಯ. ಅದು ಅಲ್ಪಾತ್ಮರಿಂದಲೇ ಯಾವಾಗಲೂ ನಡೆಯುತ್ತದೆ.

**"ನಿರ್ಮರ್ಯಾದಾನ್ ನಿತ್ಯಮರ್ದೇ ನಿವಿಷ್ಟಾ**
**ನಾಹುಸ್ತಾಂ ಸ್ತಾನ್ವೈ ಪಶುಭೂತಾನ್ ಮನುಷ್ಯಾನ್"**

**ಅದೇ – ಶ್ಲೋಕ ೬**

ಅರ್ಥಾಂಧತೆ–ಕಾಮಾಂಧತೆಗಳು ಸ್ವಚ್ಛಂದಚಾರಿತ್ವಕ್ಕೆ ಚಾಲಕಗಳು. ಅಂಥ ಅಸಂಸ್ಕೃತರ ಪ್ರಶಾಸನವು ದುಃಶಾಸನ ಅದು ಸ್ವದೇಶೀಯರದ್ದಾದರೆ ಇನ್ನೂ ಹೆಚ್ಚು ಜಾಗರೂಕತೆಯಿಂದ ಅದನ್ನು ಕಿತ್ತೊಗೆಯಲು ಪ್ರಜೆಗಳು ಸಂಯುಕ್ತರಾಗಿ ಪೂರ್ವಬಂಗಾಳದವರಂತೆ ಹೋರಾಡಬೇಕು. ಆದುದರಿಂದ ಪ್ರಜಾಸಂಘಗಳು ತಮ್ಮ ರಾಜಕೀಯ ಶಕ್ತಿಯ ನಿಯಾಮಕ ಸ್ಥಾನವನ್ನು ಕಾಯ್ದುಕೊಳ್ಳುವುದು ಪ್ರಥಮ ಪ್ರಶಸ್ತವಲ್ಲವೇ?

**"ದೇಶಧರ್ಮಾಂಶ್ಚ ಕೌಂತೇಯ ಕುಲಧರ್ಮಾಂಸ್ತಥೈವ ಚ**

**ಪಾಲಯನ್ ಪುರುಷವ್ಯಾಘ್ರ ರಾಜಾ ಸರ್ವಾಶ್ರಮೀಭವೇತ್"**

**ಅದೇ ಅಧ್ಯಾಯ ೬೬, ಶ್ಲೋಕ ೨**

ಎಂಬುದರಲ್ಲಿ Secularism ಜಾತ್ಯತೀತ ಲೌಕಿಕತೆಯ ಸಾರವು ಸೂಚಿತವಾಗಿದೆ. ನಿರ್ಧಾರ್ಮಿಕತೆಯು ಜಾತ್ಯತೀತತೆಯಲ್ಲ, ಲೌಕಿಕತೆಯಲ್ಲಿ ಅದು ದುಃಸಂಸ್ಕೃತಿ.

**"ಪತೇದ್ಬಹುವಿಧಂ ಶಸ್ತ್ರ ಬಹುಧಾ ಧರ್ಮಚಾರಿಷು"**

**ಅದೇ ಅಧ್ಯಾಯ ೬೮, ಶ್ಲೋಕ ೧**

ಅಂಥ ಸಂಸ್ಕೃತಿ ಸರಕಾರಕ್ಕಿಲ್ಲದಾಗ ಪ್ರಾಮಾಣಿಕರಿಗೆ ವಿವಿಧ ಹಿಂಸೆ–ಶೋಷಣೆಗಳುಂಟಾಗುತ್ತದೆ. ಪ್ರಾಮಾಣಿಕ ಕರ್ತವ್ಯಶೀಲರ ಹಿಂಸೆಯು ಅನಾಗರಿಕ. ಅನಾಗರಿಕತೆಯು ಅರಾಜಕತೆ– ಅರಾಷ್ಟ್ರಕತೆಗಳಿಗೆಡೆಗೊಡುತ್ತದೆ.

**"ಯಥಾ ಕಾಕಾಶ್ಚ ಗೃಧ್ರಾಶ್ಚ ತಥೈವೋ ಪಧಿಜೀವಿನಃ**

**ಊರ್ಧ್ವಂ ದೇಹವಿಮೋಕ್ಷಾಂತೇ ಭವಂತ್ಯೇತಾಸು ಯೋನಿಷು"**

**ಅದೇ ಅಧ್ಯಾಯ ೧೦೯, ಶ್ಲೋಕ ೨೯**

ಮೋಸಗಾರರು ರಾಜರಾಗಿರಲಿ, ರಂಕರಾಗಿರಲಿ– ಅವರು ಜೀವಿಸುವುದು ಕಾಗೆ–ಹದ್ದುಗಳಂತೆಯೇ. ಈ ಹದ್ದು– ಕಾಗೆಗಳನ್ನು ಮೋಸಮಾಡದಂತೆ ನಿಯಂತ್ರಿಸುವುದೇ ರಾಜ್ಯಶಕ್ತಿಯ ಸುಸ್ವರೂಪ. ಅಂಥ ಜನರಿಲ್ಲದಿದ್ದರೆ ಯಾವ ದೇಶಕ್ಕೂ ಸರಕಾರ ಬೇಕಾಗುತ್ತಿದ್ದಿಲ್ಲ. ಸ್ವತಃ ಮಂತ್ರಿಗಳು ಹದ್ದು– ಕಾಗೆಗಳಂತೆ ವರ್ತಿಸತೊಡಗಿದಾಗ ಅವರ ಅಂಕೆಗೊಳಪಟ್ಟ ಪ್ರಜಾಪ್ರಭುತ್ವವನ್ನು ಸಹಿಸುವುದು ಕಷ್ಟ. ರಾಜಮಾತ್ರ ಹದ್ದು– ಕಾಗೆಗಳಂತೆ ಈ ದೇಶದಲ್ಲಿ ವರ್ತಿಸಿಲ್ಲ, ಪ್ರಜಾಪ್ರಭುತ್ವದ ಅನೇಕ ಮಂತ್ರಿಗಳೂ ಹಾಗೆ ವರ್ತಿಸಿದ್ದಾರೆ. ಆದುದರಿಂದ ಆಳುವವರ ಶೀಲ, ಶಿಕ್ಷಣ, ಬುದ್ಧಿ, ಹೃದಯಗಳು ಸಾರ್ವಜನಿಕವಾಗಿರುವಂತೆ ಅವರನ್ನು ಬಾಲ್ಯದಿಂದಲೂ ತರಬೇತು ಮಾಡಿಡಬೇಕಾದ ಕಾಲ ಈಗ ಬಂದಿದೆ; ಅಂಥ ಕ್ಷಾತ್ರವಿದ್ಯಾಲಯಗಳು ಪ್ರತ್ಯೇಕವಾಗಿ ವಿಚಕ್ಷಣರ ಆಡಳಿತದಲ್ಲಿ ನಡೆಯುವಂತೆ ವ್ಯವಸ್ಥೆ ಮಾಡಬೇಕಾದ ಅಗತ್ಯ ಈಗ ಉಂಟಾಗಿದೆ; ಅವರಷ್ಟೇ ಹುರಿಯಾಳುಗಳಾಗಬಲ್ಲರೆಂಬ ಹೊಸತಿದ್ದುಪಡಿಯನ್ನು ಸಂವಿಧಾನಕ್ಕೆ ಮಾಡಬೇಕಾಗಿದೆ.

ದುರಾಜ್ಯವನ್ನು ಸಾಕುವ ದೇಶಪ್ರೇಮವು ಭಾರತ–ಪಾಕಿಸ್ತಾನಗಳ ಜನರಲ್ಲಿಲ್ಲ. ಇದು

ಐತಿಹಾಸಿಕವಾದ ಭಾರತೀಯ ಸಾಮಾಜಿಕ ಮನೋವಿಜ್ಞಾನದ ನಿಗಮನ. ಕೇವಲ ಪ್ರಜಾಪ್ರಭುತ್ವ, ಲೌಕಿಕತೆ, ಸಮಾಜವಾದ ಮುಂತಾದ ಹೆಸರುಗಳಿಂದ ನಮ್ಮ ಜನರನ್ನು ಬಹಳಕಾಲ ಮರುಳುಮಾಡಲು ಸಾಧ್ಯವಿಲ್ಲ; ಅವು ವಾಸ್ತವಿಕ ಸತ್ಯಗಳಾಗುವಂತೆ ಆಡಳಿತ ನಡೆದರೆ ಮಾತ್ರ ನಮ್ಮ ಜನ ಸುಮ್ಮನಿದ್ದೀತು– ಎಂಬುದಕ್ಕೆ ಪೂರ್ವ ಬಂಗಾಲದ ಬಂಡಾಯವು ನಿದರ್ಶನ. ಲೌಕಿಕ ಧರ್ಮ–ಕಾಮಗಳ ನ್ಯಾಯವು ಆರ್ಥಿಕ ಸಮತೆಯನ್ನು ಅವಲಂಬಿಸುವುದೆಂಬುದನ್ನು ಕೌಟಿಲ್ಯ ಅಂದೇ ಹೇಳಿದ್ದರೂ ಅರ್ಥ ಕಾರಣವನ್ನು ಅಲಕ್ಷಿಸುವ ರಾಜಕಾರಣವು ಈ ವರೆಗೆ ಆಗ–ಈಗ ತಾಂಡವವಾಡುತ್ತ ಬಂದುದು ಆಶ್ಚರ್ಯ. ಮುಖಂಡರ ಅಜ್ಞಾನಕ್ಕೆ ಕನ್ನಡಿಹಿಡಿಯಲು ಉಕ್ತ ಐತಿಹಾಸಿಕ ಅವಧಿಗಳು ಸಾಕು. ಸಾಮ್ರಾಜ್ಯಗಳು ಉರುಳಿದ್ದು ಹೆಚ್ಚಾಗಿ ಅಂಥ ಅವಧಿಗಳಲ್ಲೇ ಎಂಬುದು ಮನನೀಯ.

ಎಲ್ಲರೂ ಎಲ್ಲ ಕೆಲಸಗಳನ್ನೂ ವಿಚಕ್ಷಣತೆಯಿಂದ ಮಾಡುವಂತಹ ತರಬೇತನ್ನು ಯಾವ ದೇಶವೂ ಕೊಡಲಾರದು. ಈ ತಪ್ಪುಕಲ್ಪನೆಯು ಪ್ರಜಾಪ್ರಭುತ್ವವನ್ನು "ಜನರಲ್ ಎಜ್ಯುಕೇಶನ್ನಿನ" ಹೆಸರಿನಲ್ಲಿ ಹಾಳು ಮಾಡುತ್ತದೆ. Heredity and Environment ಆನುವಂಶಿಕ ಮತ್ತು ಆವರಣಿಕ ಸಂಸ್ಕಾರಗಳೆರಡೂ ಸಮಪ್ರಧಾನ್ಯ ಉಳ್ಳವುಗಳೆಂಬ ವಿಜ್ಞಾನವನ್ನು ಧಿಕ್ಕರಿಸುವುದು ನಾಗರಿಕತೆಗೆ ಮಾರಕ.



# ೩೮

# ಅಯೋಗ್ಯ ವಿಧೇಯತೆ

**"ಅಸಭ್ಯಾಃ ಸಭ್ಯ ಸಂಕಾಶಾಃ ಸಭ್ಯಾಶ್ಚಾ ಸಭ್ಯದರ್ಶನಾಃ**

**ದೃಶ್ಯಂತೇ ವಿವಿಧಾ ಭಾವಾಸ್ತೇಷು ಯುಕ್ತಂ ಪರೀಕ್ಷಣಂ"**

ಇಂಥ ಪರೀಕ್ಷೆಯೇ ಅನವಶ್ಯಕವಾಗುವಷ್ಟು ರಾಜಕಾರಣಿಗಳೂ ವೈಶ್ಯವೃತ್ತಿಯವರೂ ಸರಕಾರಿ ನೌಕರರೂ ವಿದ್ವಾಂಸರೂ ಹೆಚ್ಚಿದಾಗ ಆಧುನಿಕತೆ, ವೈಜ್ಞಾನಿಕತೆ, ರಾಷ್ಟ್ರೀಯತೆಗಳು ಅರ್ಥರಹಿತವಾಗುತ್ತವೆ ಪ್ರದರ್ಶನದ ನಾಗರಿಕತೆಯೊಂದು ಟೊಳ್ಳುಗಟ್ಟಿ. ಅದರಲ್ಲಿ ಕಾಳಿಗಿಂತ ಜೊಳ್ಳೇ ಹೆಚ್ಚು. ಅದರಲ್ಲಿ ಶಬ್ದಸೌಂದರ್ಯದ ಆಭಾಸವಷ್ಟೇ ಮೂಢರ ಮನವನ್ನು ಸೆಳೆಯುತ್ತದೆ. ಈ ಮಾಯಾಬಜಾರದಿಂದ ಮುಕ್ತವಾಗಲು ಜನತೆ ಶತಮಾನಗಟ್ಟಲೆ ತಪಸ್ಸು ಮಾಡಬೇಕಾಗುತ್ತದೆ. ಆ ತಪಸ್ಸು ಘೋರವಾದ ರಕ್ತಬಲಿಯ ರೂಪವನ್ನೂ ಕೆಲವೊಮ್ಮೆ ತಾಳಬೇಕಾಗುತ್ತದೆ. ಈ ಅಂಶವನ್ನು ಐತಿಹಾಸಿಕವಾಗಿ ಗಮನಿಸದ ಜನರು ಅಪ್ರಬುದ್ಧರು, ಬಾಲಿಶರು. ಅವರ ಮನೆ, ಮಠ, ಬೀದಿ, ಸೇತು, ವಿಮಾನ, ಬಾಂಬು, ಕಾರಖಾನೆಗಳು ಬುದ್ಧಿವಂತರನ್ನು ಮರುಳ್ಗೊಳಿಸಲಾರವು Quality ಗುಣವಿಲ್ಲದ ಮನುಷ್ಯರ ಮಾಟವೆಲ್ಲ ಬಿಸಿಲುಗುದುರೆ. ಆಕಾಶವನ್ನು ನೆಲದಂತೆಯೂ ಮಿಣುಕುಹುಳವನ್ನು ಬೆಂಕಿಯಂತೆಯೂ ತೋರಿಸಲು ಹೊರಟ ನಾಗರಿಕತೆಯ ಧುರೀಣರು ರಾಕ್ಷಸರು. ಅವರನ್ನು ಗುರುತಿಸಲಾರದ ಮಂದಿಯೊಂದು ಮಂದೆ. ಅದರ ಇರವೂ ಒಂದೇ ಮರಣವೂ ಒಂದೇ!

**"ಅಮಿತ್ರೋ ಮಿತ್ರತಾಂ ಯಾತಿ ಮಿತ್ರಂಚಾಪಿ ಪ್ರದುಷ್ಯತಿ**

**ಸಾಮರ್ಥ್ಯ ಯೋಗಾತ್ಕಾರ್ಯಾಣಾಮನಿತ್ಯಾ ವೈ ಸದಾಗತಿಃ"**

ಸ್ವಕಾರ್ಯೈಕಪರಾಯಣರಿಂದ ತುಂಬಿದ ರಾಷ್ಟ್ರದಲ್ಲಿ ಪಕ್ಷಾಂತರದ ಪಿಡುಗೇಳುವುದು ನಿತ್ಯಧರ್ಮವಾಗಿಬಿಡುತ್ತದೆ. ಅತತ್ವನಿಷ್ಠರೇ ವ್ಯವಹಾರಕುಶಲರೆನ್ನಿಸಿಕೊಳ್ಳುತ್ತಾರೆ. ಅಂಥ ನಾಗರಿಕತೆಗೆ ಧಿಕ್ಕಾರ – ಎಂಬುದನ್ನು ಕಾರ್ಯಸಾಮರ್ಥ್ಯಯೋಗದ ಆಪದ್ಧರ್ಮವು ಸೂಚಿಸುತ್ತದೆ. ಕಾರ್ಯದ ನ್ಯಾಯ ನಿಷ್ಠುರತೆಯ ಯೋಗವು ನಿತ್ಯಧರ್ಮವಲ್ಲದೆ ಸ್ವಕಾರ್ಯ ಸಿದ್ಧಿಗೆ ಯೇನಕೇನ ಪ್ರಕಾರೇನ ಪ್ರಯತ್ನಿಸುವುದಲ್ಲ. ನ್ಯಾಯವು ಜೀವಿಸಾಧಾರಣ, ಅನಿವಾರ್ಯತಾರ್ಥ ಪರಿಬದ್ಧ, ಸಪ್ರಮಾಣ, ಸಾನುಪಾತ, ಸಮತಾಂತರಾರ್ಥದಿಂದ ಆಧೃತ, ಯಥಾ ಶಕ್ತಿನಿಯುಕ್ತ.

ಆತ್ಮಜ್ಞಾನಪ್ರಮಾಣಿತ. ದೇಹಾತ್ಮಭಾವವಿಮುಖ. ಈ ದೃಷ್ಟಿಯಿಂದ ರಾಷ್ಟ್ರಸೂತ್ರದ ಅಂತಿಮಸ್ವರೂಪವು ನ್ಯಾಯಸೂತ್ರವೇ ಆಗುತ್ತದೆ; ಸತ್ಯ, ಋತ, ಅಹಿಂಸೆಗಳ ಸಮನ್ವಿತ ಸಾರಾಂಶವೇ ಆಗುತ್ತದೆ; ಸಂದರ್ಭಸಹಜವಾದ ಸಮಾಧಾಯಕ ವ್ಯವಸ್ಥೆ ಎನ್ನಿಸುತ್ತದೆ; ಅರ್ಥ–ಕಾಮವ್ಯಾಮೋಹ ವಿಮುಖರಿಗೆ ಮಾತ್ರ ಪೂರ್ಣವಾಗಿ ಅರ್ಥವಾಗುವ ಕ್ರಮವೆಂದಾಗುತ್ತದೆ. ಇದರ ಜಾಗತಿಕತೆಯ ಮುಂದೆ ಮಿಕ್ಕೆಲ್ಲ ಸೂತ್ರಗಳೂ ಗೌಣವಾಗಿಬಿಡುತ್ತದೆ.

ಅನ್ಯಾಯವು ಅಯೋಗ್ಯವಿಧೇಯತೆಯ ಫಲ. ಅಯೋಗ್ಯವಾಗಿ ಮನುಷ್ಯರಿರಬಹುದು, ಅವರ ಉಪದೇಶಗಳಿರಬಹುದು ಅಥವಾ ಬರಹಗಳಿರುಬಹುದು. ಅವುಗಳ ಅನುಸರಣೆಯು ಅನ್ಯಾಯ ಅಥವಾ ಅಸಾಮಾಜಿಕವಾಗುತ್ತದೆ. ಏಕೈಕನೂ ಸರ್ವತಂತ್ರ ಸ್ವತಂತ್ರನೂ ಆದ ಒಬ್ಬನು ಈ ನ್ಯಾಯಾನ್ಯಾಯವಿವೇಕದಿಂದ ಹೊರಗೆ – ಅದರಲ್ಲೂ ಅವನ ಜ್ಞಾನವು ಸರ್ವಾತಿರಿಕ್ತವಾಗಿರುವಾಗ.



# ೩೯

# ಸುಧಾರಕರು

Duty to fellow-men is still sacred, though the basis is no longer religious but social. Maintenance of Social order is the supreme duty of man and by social order is to be understood not the perpetuation of existing inequalities, class distinctions and special privileges but a harmonious working of social components in which oppression and injustice have no place, facilities for all-round development are available to all irrespective of their status, wealth and education, and the true motive of righteousness is the love of fellow-men. Social service, cosmopolitanism and the liberation of the Submerged sections form material and spiritual bondage of all kinds sum up the duties of moral man –ಎಂಬುದು ಪಾಶ್ಚಾತ್ಯ ಆಧ್ಯಾತ್ಮಿಕತೆ ಎಂದು ಎಚ್.ಡಿ.ಭಟ್ಟಾಚಾರ್ಯರು ಹೇಳಿ ಅನಂತರ ಭಾರತದ ಬ್ರಾಹ್ಮಣ ಧರ್ಮವು ಅದನ್ನೇ 'ಬ್ರಹ್ಮಾಹಂಕಾರವೆಂದರೂ ಒಂದೇ ಪರೋಪಕಾರಿ ಜೀವನವೆಂದರೂ ಒಂದೇ' ಎಂಬ ಮಾತಿನಲ್ಲಿ ಒಡನುಡಿದಿದೆ ಎಂದಿದ್ದಾರೆ. ಆದರೆ (೧) ಸಹಜೀವಿಗಳ ಬಗೆಗಿನ ಕರ್ತವ್ಯ, (೨) ಸಾಮಾಜಿಕ ಕ್ರಮದ ನಿರ್ವಾಹ, (೩) ವಿಷಮತಾ ನಿವಾರಣ, (೪) ವರ್ಗವಿವೇಕ ನಿರ್ಮೂಲನ, (೫) ವಿಶೇಷಾಧಿಕಾರಗಳ ವಿಶಿಷ್ಟವರ್ಗಗಳಿರುವುದನ್ನು ತೆಗೆದುಹಾಕುವುದು (೬) ಶೋಷಣೆ ಮತ್ತು ಅನ್ಯಾಯಗಳ ಅಭಾವವನ್ನು ಸ್ಥಾಪಿಸುವುದು, (೭) ಸರ್ವರಿಗೂ ಸರ್ವವಿಧದ ಸರ್ವಾಂಗೀಣ ಉನ್ನತಿಗೆ ಸೌಕರ್ಯಗಳನ್ನು ಒದಗಿಸುವುದು, (೮) ಸ್ಥಾನಮಾನ, ಐಶ್ವರ್ಯ ಮತ್ತು ವಿದ್ಯಾ ಮಟ್ಟಗಳು ಅಂಥ ಸೌಕರ್ಯಗಳ ಲಾಭಕ್ಕೆ ನಿಕಷಗಳಾಗದಂತೆ ಮಾಡುವುದು ಮತ್ತು (೯) ಭೌತಿಕ ಹಾಗೂ ಆಧ್ಯಾತ್ಮಿಕ ದಾಸ್ಯದಿಂದ ಹಿಂದುಳಿದವರನ್ನು ಉದ್ಧರಿಸುವುದು ನೈತಿಕ ಮನುಷ್ಯನ ಕರ್ತವ್ಯ– ಎಂದು ದೈವಶ್ರದ್ಧಾರಹಿತವಾಗಿರುವ ಪಾಶ್ಚಾತ್ಯ ಆಧುನಿಕತೆಯನ್ನು ಬಣ್ಣಿಸುವಾಗ ಭಟ್ಟಾಚಾರ್ಯರು ದೈವತ್ವ–ಆಧ್ಯಾತ್ಮಿಕತೆಗಳ ಮತ್ತು ಸಾಂಸ್ಕೃತಿಕ ತಾರತಮ್ಯಗಳ ಅರ್ಥವನ್ನು ಹಾಗೂ ಅಭಿಜ್ಞಾನಿಕ ಅಗತ್ಯವನ್ನೂ ಮರೆತಿದ್ದಾರೆ; ಜೊತೆಗೆ ನೈತಿಕ ಮನುಷ್ಯನಲ್ಲದವನಿಗೆ

ಉಕ್ತ ಯಾವ ಕರ್ತವ್ಯವೂ ಇಲ್ಲ ಎಂದು ಧ್ವನಿಸಿದ್ದಾರೆ. ಈ ದೋಷಗಳನ್ನು ಇಂದು ಎಲ್ಲ ಬರಹಗಾರರೂ ಪ್ರಚಾರಕರೂ ಒಂದಲ್ಲ ಒಂದೆಡೆ ಮಾಡುತ್ತ ಬಂದಿದ್ದಾರೆ. ವಾಸ್ತವಿಕ ಸ್ಥಿತಿಯೊಂದು ಒಬ್ಬನಿಗೆ ಅನ್ಯಾಯವಾಗಿದ್ದರೆ, ಸ್ವಾರ್ಥಹಠಸಂಪನ್ನನಿಗೆ ಅದು ನ್ಯಾಯವೆಂದು ತೋರುವುದರಿಂದ ದ್ವಂದ್ವಾತೀತರಲ್ಲದೆ ಇನ್ನಾರೂ ಸುಧಾರಕರ ಪಾತ್ರವನ್ನು ಸಮರ್ಪಕವಾಗಿ ನಿರ್ವಹಿಸಲಾರರು.



# ೪೦

# ದ್ವಂದ್ವಾತೀತರು

ದ್ವಂದ್ವಾತೀತರು ರಾಜ್ಯಗುರುಗಳು. ಅಂಥವರ ವರ್ಗವನ್ನು ನಾಗರಿಕತೆಯು ಚಿಕ್ಕಂದಿನಿಂದಲೂ ಸಾಕಿ ತರಬೇತುಗೊಳಿಸಿ ಇಟ್ಟುಕೊಳ್ಳದಿದ್ದರೆ ಅಂಥವರು ಸಿಕ್ಕಲಾರರು. ಅದಕ್ಕೆ ಬ್ರಾಹ್ಮವಿದ್ಯಾಲಯಗಳು ಅಗತ್ಯ. ಬ್ರಾಹ್ಮವರ್ಗ ಕ್ಷಾತ್ರವರ್ಗಗಳ ಅಧಿಕಾರಗಳು ಎಂದೂ ಒಂದೇ ಅಲ್ಲ. ಅಧಿಕಾರೈಕ್ಯವು ಸಾಂಸ್ಕೃತಿಕ ವರ್ಗಮಾರಕ; ಸಾಂಸ್ಕೃತಿಕ ವರ್ಗನಿರ್ಮೂಲನವು ಸರ್ವರನ್ನೂ ಅಜ್ಞತೆಗಿಳಿಸುವ ಸಾಧನ. ಸಂಸ್ಕೃತಿಯು ಆನುವಂಶಿಕ ಮತ್ತು ಸಾಂಸಾರಿಕ. ಆದುದರಿಂದ ಸಾಂಸ್ಕೃತಿಕ ಪ್ರಕಾರಗಳು ಸರ್ವಸಾಧಾರಣವಾಗಲಾರವು. ಆಗಕೂಡದು. ಸಂಸ್ಕೃತಿಯು ಮೂಲವಾದ ಪಂಚಮಹಾಧರ್ಮಗಳಷ್ಟೇ ಸರ್ವಸಾಧಾರಣಗಳಾಗಬಲ್ಲವು. ಭಿನ್ನ ಸಾಂಸ್ಕೃತಿಕ ಪ್ರಕಾರಗಳ ಸಹಕಾರವೊಂದೇ ರಾಷ್ಟ್ರಾಭಿವೃದ್ಧಿಯ ಸಾತತ್ಯವನ್ನು ಸಾಧಿಸಬಲ್ಲದು. ಪಂಚಮಹಾಧರ್ಮಗಳ ಶಾಖೆಗಳು ಅನೇಕ; ಅವು ಭಿನ್ನ, ಆದರವು ಧರ್ಮಶಾಖೆಗಳಾದುದರಿಂದ ಪರಸ್ಪರ ಘರ್ಷಣಕ್ಕೆಳಿಯವು. ಧರ್ಮವು Concordantia oppositorum ವಿರುದ್ಧಗಳ ಸಮನ್ವಯವಲ್ಲವೇ? ಸಮನ್ವಯರಹಿತವಾದ ವಿರೋಧವು ತ್ಯಾಜ್ಯ; ಎಲ್ಲ ವಿರೋಧಗಳೂ ತ್ಯಾಜ್ಯವಲ್ಲ; ಸಮನ್ವಿತ ವಿರೋಧಗಳು ನಾಗರಿಕತೆಯ ಆಧಾರಸ್ತಂಭಗಳು. ಸಮನ್ವಯ ಸೂತ್ರವಿರುವುದು ಪಂಚಮಹಾಧರ್ಮಗಳ ಅನ್ವಯವೊಂದರಲ್ಲೇ. ಮಿಕ್ಕ ಧರ್ಮಾಚರಣೆಗಳೆಲ್ಲವೂ ಅವುಗಳಿಗೆ ಯಾವಾಗಲೂ ಅವಿರುದ್ಧವಾಗಿರಬೇಕು. ಈ ವಿವೇಕವೇ ನಿಜವಾದ ಜಾತ್ಯತೀತತೆ. ಸರ್ವಜಾತಿಗಳ ಸರ್ವಾಂಗಿಕ ಸಮಾನತೆಯು ಜಗತ್ತಿನಲ್ಲಿ ಇಲ್ಲ, ಇರುವುದಸಾಧ್ಯ, ಇದ್ದರೆ ಲೋಕ ಜೀವನವು ಸಾಂಸ್ಕೃತಿಕವಾಗಿ ಅಭಿವೃದ್ಧಿ ಹೊಂದದು. ಅರ್ಥವು ಲೋಕಜೀವನದ ಭೌತಿಕ ಮಹಾಸಾಧನವಾದುದರಿಂದ ಅದರ ವೈಷಮ್ಯದ ಅತಿರೇಕವು ಸರ್ವಥಾ ತ್ಯಾಜ್ಯ, ಸಾರ್ವ ನೈತಿಕ ಸಮಾನತೆಯು ಸರ್ವ ವ್ಯಕ್ತಿಗಳಲ್ಲಿ ಎಂದೂ ಇಲ್ಲ. ಹಾಗೆ ಇದ್ದಾಗ ಸರಕಾರಾದಿ ನಿಯಾಮಕ ಸಂಸ್ಥೆಗಳು ಅನಗತ್ಯವಾಗುವುವು. ಹಾಗಾದದ್ದು ಈವರೆಗೆ ಎಲ್ಲೂ ಇಲ್ಲ. ಜಾತಿನಿಂದೆಯೇ ಜಾತೀಯತೆ. ಸಾಂಸ್ಕೃತಿಕ ಜಾತಿವಂತಿಕೆಯ ಪ್ರಕಾರಗಳ ಸಮಾನತಾಭಿಜ್ಞಾನವು ಸರಕಾರಕ್ಕಿರಬೇಕು–ಅಷ್ಟೇ; ನ್ಯಾಯಾಲಯಕ್ಕದು ಇರಬೇಕೆಂದರೆ ನ್ಯಾಯವಾಗಲಾರದು. ಇದೇ ಧರ್ಮ ಸೂಕ್ಷ್ಮ. ಇದನ್ನರಿಯದ ತತ್ವ ಚರ್ಚೆಯು

ಶಾಂತಿಭಂಗಕಾರಕ. ರಾಷ್ಟ್ರಾಭಿವೃದ್ಧಿಮಾರಕ. ಇಂದಿನ ಜನಜೀವನದ ಅತೃಪ್ತಿಗೆ ಅಂಥ ತತ್ವಚರ್ಚೆಯ ಪ್ರಚಾರವು ಒಂದು ಗಣ್ಯಕಾರಣ. 'ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ'– ಧರ್ಮರಹಸ್ಯವು ಬುದ್ಧಿವಂತರಿಗೆ ಮಾತ್ರ ಗಮ್ಯ. ಬುದ್ಧಿವಂತರು ಅತ್ಯಲ್ಪಸಂಖ್ಯಾತರು. ನಿಸರ್ಗವು ಬುದ್ಧಿಮತ್ತೆಯನ್ನು ಜನರಲ್ಲಿ ಸಾಧಾರಣೀಕರಣ ಮಾಡಿಲ್ಲ. ಆದುದರಿಂದ ಬಹುಸಂಖ್ಯಾತರು ಅಹಂಕಾರ ವರ್ಜಿತರಾಗಿ ಬುದ್ಧಿವಂತರ ಶಿಷ್ಯರಾಗಿ ವಿಧೇಯತೆಯಿಂದಿರುವುದೊಂದೇ ಹಿತಕರ. ಬುದ್ಧಿವಂತಿಕೆ ಭಾರತದಲ್ಲಿ ಸಾತ್ವಿಕತೆಯನ್ನು ಬಿಟ್ಟ ಮಾನವಗುಣ ಅಲ್ಲವೇ ಅಲ್ಲ. ಸತ್ವಾತ್ ಸಂಜಾಯತೇ ಜ್ಞಾನಂ!



# ಪರಿಶಿಷ್ಟ – ೧

# ಭಾರತೀಯ ಆದರ್ಶಗಳ ಹದಿನೆಂಟು ಮೂರ್ತರೂಪಗಳು

"ಅನ್ಯಾಯ" ಎಂದರೇನು? ಎಂಬುದನ್ನು ತಿಳಿಯಲು "ನ್ಯಾಯ" ಅಥವಾ "ಧರ್ಮ" ಎಂದರೇನು? ಎಂಬ ತಿಳಿವಳಿಕೆ ಅಗತ್ಯ. ಆತ್ಮವು ಏಕಮೇವಾದ್ವಿತೀಯ ಬ್ರಹ್ಮ, ವಿಶ್ವ ವಿಶಾಲಸತ್ಯ, ಮುಕ್ತಿಪದ, ಮಾನವ ಜೀವನದ ಚರಮಗುರಿ, ಪರಮ ಸಿದ್ಧಿ– ಎಂಬ ನೆಲಗಟ್ಟಿನ ಮೇಲೆ ನಿಂತು ವಿಚಾರ ಮಾಡಿದರೆ ಮಾತ್ರ ದೇಶಧರ್ಮ, ಕಾಲಧರ್ಮ, ವರ್ಣ (ವೃತ್ತಿ)ಧರ್ಮ, ಆಶ್ರಮ (ಜೀವನಾವಸ್ಥಾ) ಧರ್ಮಗಳ ಆಧುನಿಕ ಆಚರಣೀಯಾರ್ಥಗಳು ಸ್ಪಷ್ಟವಾಗುವುವು. ಆಗಲೇ ಅವುಗಳ ನಿತ್ಯಸ್ವರೂಪ– ಆಪತ್ಕಾಲಿಕ ಸ್ವರೂಪಗಳ ತಿಳಿವಳಿಕೆ ಚೆನ್ನಾಗಿ ಆಗುವುದು. ಭಾವನಾಮಗಳಿಂದ ತುಂಬಿದ ಸೈದ್ಧಾಂತಿಕ ಕಲ್ಪನೆಗಳ ಉಪಾಧಿ–ವಿಶೇಷಣಗಳ ಅನುರೋಧ–ವಿರೋಧಗಳ ತರ್ಕ ಸಮನ್ವಯಕ್ಕೆ ತಾತ್ಪರ್ಯ ಗ್ರಹಣಬುದ್ಧಿಯಿಂದ ಮಹಾಜನರ (Great Men) ಜೀವನ ವೃತ್ತಾಂತಗಳ ಧ್ರುವಾಸ್ಮೃತಿಯು ಜನಾಂಗಕ್ಕಿರುವುದು ಅಗತ್ಯ. ನಮಗೆ ಅಶೋಕ ಚಕ್ರಕ್ಕಿಂತ ಸುದರ್ಶನ ಚಕ್ರದ ನೆನಪು ಹೆಚ್ಚು; ನಾಮರಾಜ್ಯಕ್ಕಿಂತ ರಾಮರಾಜ್ಯದ ಕಲ್ಪನೆಯ ಮೇಲೆ ಪ್ರೀತಿ ಹೆಚ್ಚು; ರಾಮ–ಕೃಷ್ಣಾಚಾರವೇ ಭಾರತಾಚಾರ–ಎಂಬ ಹೃದಯಜ್ಞಾನದ ಬೆಲೆ ಹೆಚ್ಚು.

ಋಗ್ವೇದ ಕಾಲದಿಂದ ಈವರೆಗೆ ಅನುಸ್ಮೃತವಾಗಿ ಬಂದ ಸುವರ್ಣಯುಗಗಳ (Golden Ages) ಸಂಖ್ಯೆ ಹದಿನೆಂಟೆಂಬುದು ಪರಂಪರಾಗತವಾದ ದೃಢ ನಂಬಿಗೆ. ಅವುಗಳನ್ನು ೧೮ ಜನ ಸಾರ್ವಭೌಮರು ಪ್ರತಿನಿಧಿಸುತ್ತಾರೆ. ಅವರು ರಾಜಗುಣ ಸಂಪನ್ನ ಋಷಿಗಳು ಅಥವಾ ಋಷಿಗುಣ ಸಂಪನ್ನ ರಾಜರು. ಅವರ ರಾಜ್ಯಭಾರವು ರಾಮರಾಜ್ಯಭಾರ. ಯಾವ ನಮೂನೆಯ ಪ್ರಭುತ್ವವಾದರೂ ಅಂಥ ಜನಜೀವನ ಸಮೃದ್ಧಿ, ಶಾಂತಿ, ಪುಷ್ಟಿ, ತುಷ್ಟಿಗಳ ಸಾರ್ವಜನಿಕತೆಯನ್ನು ಸಾಧಿಸದೆ ಹೋದರೆ ಅದು ತ್ಯಾಜ್ಯ. ಅದರ ಅಸ್ಥಿಪಂಜರವಿಂತಿದೆ:

### ರಾಷ್ಟ್ರಸೂತ್ರ

೧. ವಿಧವೆಯರು ಅಳಲಿಲ್ಲ; ಸರ್ಪಾದಿ ದುಷ್ಟಮೃಗಗಳ ಭೀತಿ ಇಲ್ಲ.

೨. ವ್ಯಾಧಿಭಯ ಉಳಿಯದಾಯ್ತು– ರಾಮನು ರಾಜ್ಯಭಾರ ಮಾಡುತ್ತಿದ್ದಾಗ.

೩. ಕಳ್ಳರಿಲ್ಲವಾದರು – ಯಾರಿಗೂ ಅನರ್ಥಗಳುಂಟಾಗಲಿಲ್ಲ.

೪. ಹಳೆಯವರು ಎಳೆಯರ ಉತ್ತರಕ್ರಿಯೆ ಮಾಡುವ ಸಂದರ್ಭ ಉಂಟಾಗಲಿಲ್ಲ.

೫. ಎಲ್ಲೆಲ್ಲೂ ಸಂತೋಷ ತುಂಬಿತು; ಎಲ್ಲರೂ ಧರ್ಮಕಾರ್ಯಪರರಾದರು.

೬. ರಾಮನ ನಡತೆಯನ್ನು ಪದೇಪದೇ ನೆನೆದು ಜನರು ಪರಸ್ಪರ ಹಿಂಸೆಗೈಯದಾದರು.

೭. ಮಕ್ಕಳು ಮರಿಗಳಿಂದೊಡಗೂಡಿ ಸುದೀರ್ಘಕಾಲ ಪ್ರಜೆಗಳು ಬದುಕಿದರು.

೮. ರಾಮನು ರಾಜ್ಯವಾಳುತ್ತಿದ್ದಾಗ ಅವರ ಬದುಕಿನಲ್ಲಿ ರೋಗ–ಶೋಕಗಳೊದಗಲಿಲ್ಲ.

೯. ಮರ–ಗಿಡ–ಬಳ್ಳಿಗಳು ನಿತ್ಯವೂ ಹೂ–ಹಣ್ಣುಗಳಿಂದ ತುಂಬಿದ್ದವು. ಕೊಂಬೆಗಳಿಂದ ಹಬ್ಬಿದ್ದವು.

೧೦. ಕಾಲಕ್ಕೆ ಸರಿಯಾಗಿ ಮಳೆ ಬೀಳುತ್ತಿತ್ತು; ಗಾಳಿ ಸುಖಕರವಾಗಿ ಬೀಸುತ್ತಿತ್ತು.

೧೧. ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ಶೂದ್ರರೂ ಲೋಭಮುಕ್ತರಾದರು.

೧೨. ತಮ್ಮ ಪ್ರವೃತ್ತಿ ಯೋಗ್ಯವಾದ ಕರ್ಮಗಳನ್ನು ಧರ್ಮಾನುಸಾರಮಾಡಿ ಅವರು ತೃಪ್ತರಾದರು.

೧೩. ರಾಮನು ರಾಜ್ಯಭಾರ ಮಾಡುತ್ತಿದ್ದಾಗ ಪ್ರಜೆಗಳು ಸ್ವ–ಸ್ವಧರ್ಮಗಳಲ್ಲಿ ನಿರತರಾದರು.

೧೪. ಅವರೆಲ್ಲರೂ ಲಕ್ಷಣವಂತರೂ ಧರ್ಮಪರಾಯಣರೂ ಆಗಿದ್ದರು.

ವಾಲ್ಮೀಕಿ ಕೊಟ್ಟ ಈ ೧೪ ರಾಮರಾಜ್ಯದ ಮಹಾಲಕ್ಷಣಗಳು. ಇವುಗಳಲ್ಲಿ ಯಾವುದು ಲುಪ್ತವಾದರೂ ಅಷ್ಟಷ್ಟು ಮಟ್ಟಿಗೆ ಆಯಾ ಪ್ರಭುತ್ವವು ಅಪೂರ್ಣ ಸಂಸ್ಕೃತ, ಅಲ್ಪರಾಮರಾಜ್ಯ. ಹೈಹಯರ ಕಾರ್ತವೀರ್ಯಾರ್ಜುನನ ಆಡಳಿತ ಮೊದಲು ಚೆನ್ನಾಗಿದ್ದರೂ ಕೊನೆಗೆ ಕೆಟ್ಟದ್ದರಿಂದ ಕಡಲತೀರದ ಕೊಡಲಿ ರಾಮನು ಅವನನ್ನು ಮರಣದಂಡನೆಗೆ ಗುರಿಪಡಿಸಿ ಅವನ ರಾಜ್ಯವನ್ನು ಋಷಿರಾಜರಿಗೆ ಹಂಚಿ ಸುವ್ಯವಸ್ಥೆಗೊಳಿಸಿದ್ದಿಲ್ಲಿ ಸ್ಮರಣೀಯ.

ಕಾರ್ತವೀರ್ಯನ ರಾಜ್ಯಭಾರದಲ್ಲಿ ಭಾರತದ ನಾಗರಿಕತೆ ಸತ್ಪಾತ್ರರಿಗೇ ಮೀಸಲಾದ ಯಜ್ಞ, ದಾನ, ತಪ, ಅತಿಥಿ ಸತ್ಕಾರ ಮತ್ತು ಆತ್ಮಸಂಯಮಗಳಿಗೆ ಹೆಸರು ಪಡೆದಿತ್ತು. ಶ್ರೀ ಸಾಯಣಾಚಾರ್ಯರು ಹೇಳಿರುವಂತೆ ಯಜ್ಞವು "ಅಧ್ವರ," ಅಹಿಂಸಾ ಪ್ರಧಾನವಾದ ದೇವತಾರ್ಚನೆ, ಸಚ್ಚಾರಿತ್ರ ಸಂಪನ್ನರಾದ ವಿದ್ಯಾಪ್ರಸಾರಕರಿಗೆ ನೆರವೀಯುವುದು ದಾನ. ರಾಷ್ಟ್ರಹಿತಚಿಂತನಕ್ಕಾಗಿ ಯೋಚಿಸುವ ಮತ್ತು ಯೋಜಿಸುವ ವಿಶ್ವಬಂಧುಗಳು ಮಾಡುವ ಶೋಧವು ತಪ. ಸತ್ಪಾತ್ರರಿಗೆ ತೋರುವ ಆದರ–ಗೌರವಗಳು ಅತಿಥಿ ಸತ್ಕಾರ. ಭೌತಿಕ ಭೋಗಸಾಮಗ್ರಿಗಳ ದಾಸ್ಯದಿಂದ ಮುಕ್ತವಾಗಿರುವ ಶೀಲವು ಆತ್ಮ ಸಂಯಮ. ರಾಜನ ಈ ಪಂಚಧರ್ಮಾಚಾರವು ಪ್ರಜೆಗಳಿಗೆ ಅನುಕರಣೀಯವಾಯಿತು. ಆದರೆ ಜಮದಗ್ನಿಗೆ

ಅನ್ಯಾಯವನ್ನೆಸಗಿದ ಕೂಡಲೇ ಪ್ರಜಾರಕ್ಷಕ ಪರಶುರಾಮ ಆ ದೊರೆಯನ್ನು ಕೊಂದೊಗೆದನು. ಪರಶುರಾಮಧರ್ಮವು ಪ್ರಜಾಧರ್ಮದ ಒಂದು ಪ್ರಧಾನಾಂಗ. ಅನ್ಯಾಯ ಪ್ರತಿಭಟನೆ ಇಲ್ಲದಲ್ಲಿ ಸ್ವರಾಜ್ಯವಿರದು. ಗಾಂಧಿಯವರು ಹೇಳಿದ್ದು ಇದನ್ನೇ.

ಋಗ್ವೇದದ ಸೂಕ್ತವೊಂದರ ದ್ರಷ್ಟಾರನಾದ ಮಾಂಧಾತೃವು ಇಕ್ಷ್ವಾಕುಕುಲದ ಯೌವನಾಶ್ವನ ಮಗ. ಅವನು ಭಾರತದ ಆದರ್ಶನಾಯಕರಲ್ಲಿ ಆದ್ಯ. ಸೌಭರಿ ಋಷಿ ಅವನ ಅಳಿಯ. ಆಯುಸ್ಸಿನ ಮಗ ನಹುಷ; ಪುರೂರವಸ್ಸು ಆಯುವಿನ ತಂದೆ. ನಹುಷನ ಮಗ ಯಯಾತಿ. ವಿದ್ಯಾವಂತರನ್ನು (Great Intellectuals) ಅನಾದರಿಸಿದ್ದರಿಂದ ನಹುಷನ ಆದರ್ಶ ರಾಜ್ಯಭಾರಕ್ಕೆ ವಿಘ್ನ ಒದಗಿತು. ಅಗಸ್ತ್ಯನ ಅನುಗ್ರಹದಿಂದ ಕಾಲಾಂತರದಲ್ಲಿ ಶಾಪಲಬ್ಧ ಸರ್ಪಜೀವನ ಮುಗಿದು ಅವನು ಸ್ವರ್ಗಾರ್ಹನಾದನು. ಪಶ್ಚಾತ್ತಾಪ, ಪ್ರಾಯಶ್ಚಿತ್ತಗಳಿಂದ ಪರಿಹಾರವಾಗದ ಪಾಪವಿಲ್ಲವೆಂಬುದನ್ನು ನಹುಷನ ಚರಿತ್ರೆ ತೋರಿಸಿಕೊಡುತ್ತದೆ. ಹಾಗೇ ಅಧಿಕಾರದ ದರ್ಪಾಹಂಕಾರ ಲೋಭಗಳು ನಿಂದ್ಯ, ದಂಡ್ಯ ಎಂಬುದನ್ನೂ ನಿದರ್ಶಿಸುತ್ತದೆ. ವಿದ್ಯಾವಂತರ ಸಿಟ್ಟೇ ಶಾಪ. ಜನ ಅವರನ್ನು ರಾಜನಿಗಿಂತಲೂ ಹೆಚ್ಚಿನವರೆಂದು ತಿಳಿಯುತ್ತಿದ್ದ ಕಾರಣ ಅಂದು ಈ ದೇಶ ಮಹಾಭಾರತವೆನ್ನಿಸಿತು. ಸೌಭರಿಗೆ ಬಾಗಿದ ಮಾಂಧಾತೃ ಮತ್ತು ಅಗಸ್ತ್ಯನಿಗೆ ಶರಣಾಗತನಾದ ನಹುಷ ಮಹಾಕ್ಷತ್ರಿಯರೆನ್ನಿಸಿದರು.

ಇಕ್ಷ್ವಾಕುವಿನಿಂದ ೨೮ನೆಯವನು ಅಯೋಧ್ಯಾಧೀಶ ಅಂಬರೀಷ. ಇಂದ್ರನಿಗೆ ಹೊಟ್ಟೆಕಿಚ್ಚು ಉಂಟಾಗುವಷ್ಟು ಚೆನ್ನಾಗಿತ್ತು ಅವನ ರಾಜ್ಯಭಾರ. ಆದ್ದರಿಂದ ಅವನ ಯಜ್ಞಧನವನ್ನವನು ಅಪಹರಿಸಿದ. ಆಗ ಶುನಃ ಶೇಫಋಷಿಯು ಅವನಿಗೆ ಯಜ್ಞಧನನಾಗಿ ಬಂದು ಇಂದ್ರನಿಗೆ ಸಂತೋಷವನ್ನುಂಟು ಮಾಡಿ ಕಳಿಸಿದನು. ಋಚೀಕ, ಶುನಃ ಶೇಫ, ವಿಶ್ವಾಮಿತ್ರರೆಂಬ ವಿದ್ಯಾವಂತರು ದೇವಪ್ರಿಯರೆಂದು ಪ್ರಾಚೀನ ಭಾರತದ ಜನತೆ ನಂಬಿತ್ತು. ವಿಶ್ವಮಿತ್ರರ ಆಚಾರ–ಆದೇಶಗಳಂತೆ ಅಂದಿನ ಅರಸರು ಪ್ರಜಾಪಾಲನೆ ಮಾಡುತ್ತಿದ್ದುದು ಭಾರತವನ್ನು ವಿಶ್ವರಾಷ್ಟ್ರತ್ವಕ್ಕೆ ಏರಿಸಿತು. ಶಾಶ್ವತ (ಸಾಮಾನ್ಯ) ಪಂಚಶೀಲ (ಧರ್ಮ)ಗಳ ಪಾಲಕರು ವಿಶ್ವಮಿತ್ರರು, ವಿಶ್ವಬಂಧುಗಳು. ಅವುಗಳಿಗೆ ಚ್ಯುತಿಬಂದಾಗ ಧರ್ಮಗ್ಲಾನಿ ಎಂಬುದು ಭಾರತದ ವೈಜ್ಞಾನಿಕ ಅನುಭವ.

ಸೂರ್ಯವಂಶದ ಬಾಹುವಿನ ಮಗ ಸಗರ. ಹೈಹಯರು ಬಾಹುವನ್ನು ರಾಜ್ಯ ಭ್ರಷ್ಟನನ್ನಾಗಿ ಮಾಡಿದರು. ಹೆಂಡಿರೊಡನೆ ಬಾಹುವು ಕಾಡಿಗೆ ಹೋದನು ಮತ್ತು ಅಲ್ಲೇ ತೀರಿಕೊಂಡನು. ಅವನ ಹೆಂಡತಿ ಸಗರನನ್ನು ಅಲ್ಲೇ ಹಡೆದಳು. ದೊಡ್ಡವನಾದ ಮೇಲೆ ಸಗರನು ಔರ್ವಮಹರ್ಷಿಯಿಂದ ಆಗ್ನೇಯಾಸ್ತ್ರವನ್ನು ಅರಿತುಕೊಂಡು ಆ ಮೂಲಕ ಹೈಹಯರ ಕುಲವನ್ನು ನಾಶಮಾಡಿ ತಂದೆಯ ಸಿಂಹಾಸನವನ್ನು ಮರಳಿ ಪಡೆದು ಶಕ, ಯವನ, ಕಾಂಭೋಜ, ಪಾರದ ಮತ್ತು ಪಲ್ಲವರನ್ನು ಸೋಲಿಸಿ ವಿಶ್ವ ಚಕ್ರವರ್ತಿಯಾದನು. ಅವನಿಗೆ ೬೦,೦೦೦ ಮಕ್ಕಳಿದ್ದರಂತೆ! ಅವನ ಅಶ್ವಮೇಧಯಾಗದ ಕುದುರೆಯನ್ನು ಇಂದ್ರನು ಕದ್ದು ಪಾತಾಳದಲ್ಲಿದ್ದ ಕಪಿಲ ಮುನಿಯ ಸನಿಹದಲ್ಲಿಟ್ಟನು. ಅವನ ೬೦,೦೦೦ ಮಕ್ಕಳು ತಮ್ಮ

ಅಣ್ಣ ಹುಡುಕ ಹೋಗಿ ತಿರುಗಿಬಾರದುದನ್ನು ಕಂಡು ಅಲ್ಲಿಗೆ ಹೋಗಿ ಕಪಿಲನೇ ಕಳ್ಳನೆಂದು ಅವನನ್ನು ಹೊಡೆಯ ಹೋಗಲು ಅವನು ಕಣ್ಬಿಟ್ಟು ಅವರನ್ನು ಸುಟ್ಟು ಭಸ್ಮಮಾಡಿದನು. ಆ ಹುಡುಕಾಟದಲ್ಲಿ ನೆಲ ಅಗೆದು ಆ ೬೦,೦೦೦ ಮಕ್ಕಳು ಸಾಗರವನ್ನು ನಿರ್ಮಿಸಿ ಬಿಟ್ಟಿದ್ದರು! ಅವನ ಮೊಮ್ಮಗನ ಮಗ ಭಗೀರಥನು ತಪಸ್ಸು ಮಾಡಿ ಆ ಬೂದಿಯ ಮೇಲೆ ಭಾಗೀರಥಿ ಹರಿಯುವಂತೆ ಮಾಡಿ ತನ್ನ ೬೦,೦೦೦ ಹಿರಿಯರು ಸ್ವರ್ಗವನ್ನು ಸೇರುವಂತೆ ಮಾಡಿದನು.

ರಾಮರಾಜ್ಯ, ಧರ್ಮರಾಜ್ಯಗಳಂತೆಯೇ ಅವುಗಳಿಗೂ ಮೊದಲು ಹೆಸರುವಾಸಿಯಾದದ್ದು ಸಗರರಾಜ್ಯ, ಸಗರ ಚಕ್ರವರ್ತಿಯ ರಚನಾತ್ಮಕ ಸಾರ್ವಜನಿಕತೆಯ ದೆಸೆಯಿಂದ ಅವನ ಜನಪ್ರಿಯತೆ ಹೆಚ್ಚಿ, ಅವನ ಆಡಳಿತದಿಂದ ಭಾರತವು ಸಾಂಸ್ಕೃತಿಕ ಉನ್ನತಿಯನ್ನು ಪಡೆದದ್ದೇ ಅವನ ಹೆಸರನ್ನು ಅಜರಾಮರಗೊಳಿಸಲು ಕಾರಣವಾಯ್ತು.

ಅದೇ ಪ್ರಕಾರ, ವೇನನ ಮಗ ಪೃಥುವು ಹೆಸರುವಾಸಿಯಾದವನು. ಕೃಷಿ ಸಂವರ್ಧನೆಗೆ ಮಹಾಯೋಜನೆಗಳನ್ನು ಮಾಡಿ ಅನ್ನೋತ್ಪಾದನೆ ಭಾರತದಲ್ಲಿ ಯಥೇಷ್ಟವಾಗಿ ಹೆಚ್ಚಿಸಿದ ಕೀರ್ತಿ ಪೃಥುವಿನದು. ಅವನ ತಂದೆಯ ದುಷ್ಕಾಲವನ್ನು ಮುಗಿಸಲು ಋಷಿಗಳು ಮರಣದಂಡನೆ ವಿಧಿಸಿದರು. ಆ ಪ್ರಕಾರ ತಂದೆ ಸತ್ತಮೇಲೆ ಅರಾಜಕತೆ, ಲೂಟಿ, ದರೋಡೆಗಳು ಜನಜೀವನವನ್ನು ಅಲ್ಲೋಲಕಲ್ಲೋಲಗೊಳಿಸಿದವು. ಈ ಅಧರ್ಮವನ್ನು ಅವನು ಪೂರ್ಣವಾಗಿ ನಿಲ್ಲಿಸಿ ವಿಶ್ವದಲ್ಲಿ ಸತ್ಯ, ನ್ಯಾಯ, ಧರ್ಮಗಳನ್ನು ನೆಲೆಗೊಳಿಸಲು ಶಕ್ತನಾದದ್ದು ಅವನನ್ನು ಅದ್ವಿತೀಯ ಚಕ್ರವರ್ತಿಯೆಂದು ಭಾರತೀಯರು ನೆನಪಿಟ್ಟುಕೊಳ್ಳುವಂತೆ ಮಾಡಿತು. ಪೃಥುವಿನಿಂದ ಪೃಥ್ವಿಯೆಂಬ ಹೆಸರು ಭೂಮಿಗೆ ಬಂತು! ಧರ್ಮಸಂಸ್ಥಾಪನೆ (Establishment of Social Justice) ಮಾಡಿದ ಮಹಾಪ್ರಶಾಸಕರಲ್ಲಿ ಪೃಥು ಅಗ್ರಪಂಕ್ತಿಗೆ ಸೇರಿದವನು.

ಯದುವಿನ ಮೊಮ್ಮಗನ ಮಗ ಹೈಹಯ, ಕಾರ್ತವೀರ್ಯಾರ್ಜುನ ಅವನ ವಂಶದವನು. ಪರಾಕ್ರಮ ಔದಾರ್ಯಗಳಿಂದ, ರಾಜ್ಯಭಾರದ ಧಾರ್ಮಿಕತೆಯಿಂದ ಹೈಹಯ ಹೆಸರುವಾಸಿಯಾದ. ಅವನ ಕುಲ ಅವನ ಹೆಸರಿಂದ ಪ್ರಸಿದ್ಧವಾಯ್ತು.

ಧರ್ಮರಾಯ, ನಳ, ದಶರಥ, ರಾಮ, ಭಾರ್ಗವ (ಪರಶುರಾಮ), ಇಕ್ಷ್ವಾಕು, ವಿಭೀಷಣ, ಭರತ, ಉತ್ಥಾನಪಾದ, ಧ್ರುವರೂ ಹಾಗೇ ಸ್ಥಿರಸ್ಮರಣೀಯರಾದ ಭಾರತೀಯ ಮಹಾಚಕ್ರವರ್ತಿಗಳು ಮತ್ತು ಮಹಾಪ್ರಶಾಸಕರು.

ಪಾಂಡವರ ಪ್ರಮುಖ ಧರ್ಮರಾಜ. ಅವನ ಧರ್ಮದರ್ಶನ ಮತ್ತು ಧರ್ಮ ರಾಜ್ಯಭಾರಗಳು ವ್ಯಾಸಪ್ರಣೀತವಾದ ಮಹಾಭಾರತದಲ್ಲಿ ಸವಿಸ್ತರವಾಗಿ ವರ್ಣಿತವಾಗಿವೆ. ಅವನದು ಕೃಷ್ಣಧರ್ಮ ಅಥವಾ ವ್ಯಾಸಧರ್ಮ. ಭಾರತದ ಆದರ್ಶ ಚಕ್ರವರ್ತಿಗಳ ರಾಜ್ಯಧರ್ಮಸೂತ್ರಗಳು ಒಂದೇ ತೆರನಾಗಿದ್ದದ್ದು ಸಾವಿರಾರು ವರ್ಷಗಳಿಂದ ಕಲಿಯುಗದ ಆರಂಭದವರೆಗೆ ಎಂಬುದು ಭಾರತೀಯರ ಧ್ರುವಾಸ್ಮೃತಿ. "ಸತ್ಯಂ ಮಾತಾ ಪಿತಾ ಜ್ಞಾನಂ ಧರ್ಮೋ ಭ್ರಾತಾ ದಯಾ ಸಖಾಃ । ಶಾಂತಿಃ ಪತ್ನೀ ಕ್ಷಮಾ ಪುತ್ರಃ ಷಡೇತೇ ಮಮ

ಬಾಂಧವಾಃ" ಎಂದ ಧರ್ಮಮೂರ್ತಿ ಧರ್ಮರಾಯ. ಅವನ ಪ್ರಶಾಸಕರಿಗೂ ಅವೇ ಬಂಧುಗಳಾದವು. ಆದ್ದರಿಂದ ಅವನೊಬ್ಬ ಶಕಪುರುಷನಾದನು!

ನಳನು ರಾಮನ ಪೂರ್ವಜನು, ದಶರಥ ರಾಮನ ತಂದೆ. ನಳ, ದಶರಥ ರಾಮರ ರಾಜ್ಯಭಾರದ ಕೀರ್ತಿ ಹೆಚ್ಚುಕಡಿಮೆ ಒಂದೇ ಎನ್ನಬಹುದು. ದಶರಥರಾಜ್ಯ, ರಾಮರಾಜ್ಯಗಳ ವಿವರಗಳು ವಾಲ್ಮೀಕಿಯ ರಾಮಾಯಣದಲ್ಲಿ ಸುದೀರ್ಘವಾಗಿ ವರ್ಣಿಸಲ್ಪಟ್ಟಿವೆ. ಪ್ರಜೆಗಳೆಲ್ಲರ ಉದಯವೇ ತನ್ನ ಉದಯ ಎಂದು ತಿಳಿದು ಅದಕ್ಕಾಗಿ ಜೀವನವನ್ನೇ ಮುಡಿಪಿಟ್ಟ ಶ್ರೀರಾಮಚಂದ್ರ ಚಕ್ರವರ್ತಿಯ ಚರಿತ್ರೆ ಧರ್ಮರಾಜನ ಚರಿತ್ರೆಯಂತೆಯೇ ಲೋಕ ಪ್ರಸಿದ್ಧವಾಗಿದೆ. ಅದು ಭಾರತೀಯರಿಗೆ ಅತಿ ಪ್ರಿಯವೆಂದು ಕಾಣಲು ರಾಮನ ವ್ಯವಹಾರಗಳಲ್ಲಿ ಕಂಡುಬಂದ ಸರ್ವೋದಯ ಧರ್ಮನಿಷ್ಠೆ ಮತ್ತು ಸ್ವಾರ್ಥತ್ಯಾಗದ ಪರಾಕಾಷ್ಠೆ. ಅವನು ಅಂಥ ಪ್ರಶಾಸಕರ ಮೂಲಕವೇ ಆಡಳಿತ ನಡೆಸಿದನು, ಜನರ ಕಣ್ಗೊಂಬೆಯಾದನು!

ಪರಶುರಾಮನ ಪರಾಕ್ರಮ–ಔದಾರ್ಯಗಳು ಅದ್ವಿತೀಯವೆನ್ನಿಸಲು ಅವನಾದರೂ Philospher-Kings ಋಷಿ–ಮುನಿಗಳ ಒಡೆತನದಲ್ಲಿ ರಾಜ್ಯಭಾರ ನಡೆಯುವಂತೆ ಮಾಡಿ ತಪಸ್ಸಿಗೆ ಹೋದ ಮಹಾಮುತ್ಸದ್ದಿತನವೇ ಕಾರಣ.

ವೈವಸತ್ವ ಮನುವಿನ ಮಗ ಇಕ್ಷ್ವಾಕು. ವೈವಸ್ವತನು ಸೂರ್ಯನ ಮಗ. ಸೂರ್ಯ ವಂಶದ ನಳ–ದಶರಥ–ರಾಮಾದಿಗಳನ್ನು ಇಕ್ಷ್ವಾಕುವಂಶದವರೆಂದೂ ಕರೆಯುವುದುಂಟು. ಇದಕ್ಕೆ ಇಕ್ಷ್ವಾಕುವಿನ ಸುರಾಜ್ಯಭಾರದ ಕೀರ್ತಿಯೇ ಕಾರಣ. ಅವನಿದ್ದದ್ದು ತ್ರೇತಾಯುಗದ ಆದಿಯಲ್ಲಿ, ಅವನ ಹೆಸರು ಋಗ್ವೇದೋಕ್ತ. ಅವನಂತೆಯೇ ರಾಮಭಕ್ತ ವಿಭೀಷಣನ ಚಕ್ರಾಧಿಪತ್ಯವೂ ಸಾಮಾಜಿಕ ನ್ಯಾಯವನ್ನು ಅಂದಿನ ಸರ್ವ ಪ್ರಜೆಗಳೊಪ್ಪುವಂತೆ ಸಂಸ್ಥಾಪಿಸಿದ ಪ್ರಸಿದ್ಧಿಗೆ ಪಾತ್ರವಾಯ್ತು. ಭರತನ ಹೆಸರೂ ಅಂಥ ಧರ್ಮವಿಜಯಿ ಚಕ್ರವರ್ತಿಗಳ ಸಾಲಿಗೆ ಸೇರಿದೆ. ಭರತನು ಕೃತಯುಗದ ಆದಿ ಮನ್ವಂತರದ ಮಹಾಸಾರ್ವಭೌಮ. ಋಗ್ವೇದದಲ್ಲಿ ಭರತರ ಪರಾಕ್ರಮದ ಉಲ್ಲೇಖವಿದೆ. ದಶರಥ – ದುಷ್ಯಂತರ ಮಕ್ಕಳಾದ ಭರತರು ಅನಂತರದವರು. ದುಷ್ಯಂತ ಪುತ್ರನಾದ ಭರತನೂ ಸುರಾಜ್ಯ ಸಂಸ್ಥಾಪಕ ಚಕ್ರವರ್ತಿ ಎನ್ನಿಸಿದನು. ಉತ್ತಾನಪಾದನೂ ಅವನ ಮಗ ಧ್ರುವನೂ ಹಾಗೇ ಅವಿಸ್ಮರಣೀಯ ಜನನಾಯಕರಾಗಿದ್ದ ಸಾರ್ವಭೌಮರು. ಉತ್ತಾನಪಾದನು ಮನು–ಶತರೂಪೆಯರ ಮಗ. ಸುನೃತೆ (ಸುನೀತಿ) ಎಂಬ ಅವನ ಹೆಂಡತಿ ಧ್ರುವ, ಕೀರ್ತಿಮಂತ, ಆಯುಷ್ಮಂತ ಮತ್ತು ವಸು ಎಂಬ ಮಕ್ಕಳನ್ನು ಹಡೆದಳು. ಧ್ರುವನು ಜಗತ್ಪ್ರಸಿದ್ಧ ಧ್ರುವತಾರೆಯಾದದ್ದು ಭಗವದುಪಾಸನೆಯಿಂದ. ಭಕ್ತಿ, ಯೋಗ, ಮುಕ್ತಿ, ಕರ್ಮ ಮುಂತಾದವುಗಳಿಗೆ ವಿವಿಧಾರ್ಥಗಳನ್ನು ಹೇಳುವಾಗ ವೈಯಕ್ತಿಕತೆ–ಸಾಮೂಹಿಕತೆಗಳನ್ನು ನೆನೆದು ವ್ಯಕ್ತಿಮುಕ್ತಿಗಿಂತ ಸಮೂಹಮುಕ್ತಿ ಹೆಚ್ಚಿನದೆಂದು ಕೆಲವರ ಮತ. ಭಾರತವು ಅಜರಾಮರಿಸಿದ ವ್ಯಕ್ತಿಗಳು ಯಾವ ಹೆಸರಿನ ಪಂಥದವರಾದರೂ ಶ್ರೀಕೃಷ್ಣನಂತೆ ಲೋಕೋಪಕಾರಿ ನಿಃಸ್ವಾರ್ಥಿಗಳಾದ ವಿಶ್ವಮಾನವತಾಸಂಪನ್ನರು ಎಂಬುದನ್ನು ಸಾಂಸ್ಕೃತಿಕ ಇತಿಹಾಸವನ್ನು ಬಲ್ಲ ಯಾವ

ವಿದ್ವಾಂಸನೂ ಮರೆಯಲಾರ. ಧ್ರುವನು ನಾರಾಯಣನನ್ನೊಲಿಸಿ ಧ್ರುವ ಪದವಿಯನ್ನು ಪಡೆದನೆಂಬ ಕಥೆಯು ನಿರ್ಗುಣಬ್ರಹ್ಮಲೀನನಾದ ಸಾಯುಜ್ಯ ಮುಕ್ತಿ ಸಂಪನ್ನನ ಅವಸ್ಥೆಗೆ ಸರಿಸಮ. ಅವನು ದ್ವಂದ್ವಾತೀತನಾದ, ಸರ್ವೋದಯಪರನಾದ, ವಿಶ್ವವ್ಯಾಪಕನಾದ, ದಿವ್ಯಪರಾಕ್ರಮಿಯಾದ ಪುರುಷೋತ್ತಮ. ಅವನ ಲೋಕಸಂಗ್ರಹ ಕಾರ್ಯವು ಗುಪ್ತ ಅಥವಾ ಪ್ರಕಟ ಪ್ರೇರಣೆಯಿಂದ ಯಾವಾಗಲೂ ನಡೆದೇ ಇರುತ್ತದೆ. ಶ್ರೀ ಅರವಿಂದರು ಸಾವಿತ್ರಿಯನ್ನು Supermind ಅತಿಮಾನಸ (ಸುಪ್ರಮಾನಸ?) ಮಾತೃಶಕ್ತಿಯನ್ನಾಗಿ ಕೊನೆಯಲ್ಲಿ ಕಲ್ಪಿಸಿ ಅವಳು ಲೋಕೋದ್ಧಾರಕ ಅವತಾರಿಣಿ, ಸರ್ವರನ್ನೂ ದಿವ್ಯಜೀವನದತ್ತ ಒಯ್ಯುವ ಮಹಾಶಕ್ತಿ ಎಂದು ತಮ್ಮ ಹಾಗೂ ಶ್ರೀಮಾತೆಯವರ ಪ್ರತಿನಿಧಿಯನ್ನಾಗಿ ಮಾಡಿದ್ದು ಹೊಸತೆಂಬುದು ಪ್ರಚಾರ ಮಾತ್ರ. ಔಪನಿಷಧಿಕ ಆತ್ಮವು ಬ್ರಹ್ಮ, ಬ್ರಹ್ಮವು ತುರೀಯ ಪ್ರಜ್ಞೆ, ಜೀವನ್ಮುಕ್ತನು ದಿವ್ಯ ಮಾನವ, ಶ್ರೀ ಕೃಷ್ಣ ಬ್ರಹ್ಮೇಶ್ವರಾಂತರ್ಗತ, ಬ್ರಹ್ಮೇಚ್ಛಾಪ್ರವರ್ತಕ; ಅವನಿಗೆ ವ್ಯಕ್ತಿ ಸ್ವಾರ್ಥವಿಲ್ಲ. ಬ್ರಹ್ಮನು ದಯಾಳು, ಲೋಕಹಿತಕಾರಕ. ಅವನಲ್ಲೊಂದಾದ ವ್ಯಕ್ತಿಯು ವ್ಯಕ್ತಿಯಲ್ಲ, ದಿವ್ಯಶಕ್ತಿ. ಅವನ ವಿಶ್ವವ್ಯಾಪಕತೆ ಆಂತರಿಕ ಮತ್ತು ಬಾಹ್ಯ. ಆದುದರಿಂದ ಶಾಂಕರ ಮುಕ್ತಿಗಿಂತ ಅಗಲವಾದ ಮುಕ್ತಸ್ಥಿತಿಯು ಕಲ್ಪನಾತೀತ. ಅದೊಂದು Hold-all ಸರ್ವಗ್ರಾಹಿ. ಅದರಿಂದ ಭಿನ್ನವಾದ ಯಾವ ಮುಕ್ತಶಕ್ತಿಯ ಕಲ್ಪನೆಯೂ ಅದಕ್ಕಿಂತ ದೊಡ್ಡದಲ್ಲ. ಆದುದರಿಂದ ಶ್ರೀಕೃಷ್ಣ, ಬುದ್ಧ, ಶಂಕರ, ರಮಣ, ಅರವಿಂದರು ಸರ್ವಮುಕ್ತಿಪ್ರೇರಕರು; ಪಲಾಯನವಾದಿಗಳಲ್ಲ, ಸ್ವಪರಭೇದ ಪ್ರಜ್ಞೆಯುಳ್ಳ ಆಧ್ಯಾತ್ಮಿಕರಲ್ಲ. ಅವರವರ ಉದ್ಯೋಗವನ್ನು ಜೀವನ್ಮುಕ್ತರು ನಿಷ್ಕಾಮ ಕರ್ಮಸಿದ್ಧಾಂತದಂತೆ ಅಥವಾ ನಿವೃತ್ತಿಧರ್ಮತತ್ವದಂತೆ ಸರ್ವೋದಯಕ್ಕಾಗಿ ಪರೋಕ್ಷಾಪರೋಕ್ಷವಾಗಿ ಮಾಡುತ್ತಲೇ ಇರುವುದು ವೇದಾಂತತಾತ್ಪರ್ಯ. ಅವರು ದಿವ್ಯ ಜೀವಿಗಳೆಂದು ಬಹುವಚನವನ್ನು ಅಮುಕ್ತ ಜೀವಿಗಳು ಬಳಸುವುದು ಸರಿ: ಮುಕ್ತರಲ್ಲ.

ದಿವ್ಯ, ಅದಿವ್ಯ, ದಿವ್ಯಾದಿವ್ಯ ಎಂಬ ಮೂರುವರ್ಗಗಳಲ್ಲಿ ಧರ್ಮವೀರ, ದಯಾವೀರ, ದಾನವೀರ, ಯುದ್ಧವೀರರೆಂಬ ನಾಲ್ಕು ಬಗೆಯ ಜನನಾಯಕರೂ ಆದರ್ಶಮಟ್ಟದಲ್ಲಿ "ಪರೋಪಕಾರಾರ್ಥಮಿದಂ ಶರೀರಂ" ಎಂಬ ಪರಮೋಚ್ಚ ತತ್ವದಂತೆ ಬದುಕಿದ್ದರಿಂದ ಮಾತ್ರ ಅವರೇ ದೇಶದಲ್ಲಿ ಅವಿಸ್ಮರಣೀಯರಾದರು. ಸಪ್ತರ್ಷಿಗಳು ಕೂಡ ಪೂರ್ವೋಕ್ತ ೧೮ ಜನ ಸಾರ್ವಭೌಮತಪಸ್ವಿಗಳಂತೆ ಸ್ಮರಣೀಯರೆನ್ನಿಸಿದರು. ಮಹರ್ಷಿಗಳೂ ಮಹಾವೀರರೂ ಮಹಾರಾಜರೂ ಮಹಾಸಾಧುಗಳೂ ಮಹಾತಪಸ್ವಿಗಳೂ ಮಹಾದಾನಿಗಳೂ ಮಹಾಪುರುಷರು (ಅಥವಾ ಮಹಾಸತಿಯರು) ಇಲ್ಲವೇ ದಿವ್ಯಜೀವನ ನಡೆಸಿ ಲೋಕೋದ್ಧಾರವನ್ನು ಮಾಡಿದವರು. ಅವರಿಂದ ಮಾತ್ರ ನಮ್ಮ ದೇಶದ ಸಾಂಸ್ಕೃತಿಕ ಪರಮೋನ್ನತಿ ಸತ್ಯವಾಯಿತು. ಆ ಮಹಾಜನರ ಜೀವನವು ಸಂಸ್ಕೃತಿ ನಿರ್ಣಾಯಕವಲ್ಲದೆ ಕೇವಲ ಮಾತುಗಳಲ್ಲ. ಮಾತುಗಳ ಅರ್ಥದ ನಿರ್ಣಯ ಜೀವನದ ವರ್ತನೆ ಹಾಗೂ ಚರಿತ್ರೆಗಳಿಂದ. ತ್ರಿಕರಣಶುದ್ಧಿಯಿಂದ, ಜೀವದಯೆಯನ್ನು ಧರಿಸಿ–ನ್ಯಾಯಾನ್ಯಾಯ ವಿವೇಕವನ್ನು ಹಿಡಿದು, ಸತ್ವೋದ್ರೇಕದ ಫಲವಾಗಿ–ಜ್ಞಾನ, ಕರ್ಮ, ಭಕ್ತಿ, ವೈರಾಗ್ಯ,

ಯೋಗ, ಯುದ್ಧ, ವಾಣಿಜ್ಯ, ಸೇವೆ, ಪೂಜೆ, ಮೌನ, ಉಪದೇಶ, ಇಷ್ಟ, ಆಪೂರ್ತಗಳ ಮೂಲಕ ನಿಃಸ್ವಾರ್ಥವಾಗಿ ಜನಸೇವೆ ಮಾಡಿದ್ದನ್ನುಳಿದು, ಮಹಾಜನರ ಬರೆಹ ಮತ್ತು ಸೈದ್ಧಾಂತಿಕ ವಿಚಾರಗಳಷ್ಟನ್ನೇ ಗ್ರಹಿಸಿ ಅವರಲ್ಲಿ ತಾರತಮ್ಯವನ್ನು ನಿರ್ಣಯಿಸುವುದು ತೀರ ಅಪಕ್ವಬುದ್ಧಿಯ ಲಕ್ಷಣ, ಭಾವೈಕ್ಯದರ್ಶನಾಪೇಕ್ಷೆಗೆ ವಿರುದ್ಧ.

ಜಗತ್ತೂ ಅದರ ಅಂಗಗಳೂ ಅಪೂರ್ಣ, ಆದುದರಿಂದ ಮಹಾಜನರ ಜೀವನವೂ "ಸರ್ವಗುಣಸಂಪನ್ನ, ಏಕಗುಣ ಹೀನ" ಎಂಬಂತೆ ಕೆಲವೆಡೆ ಕಂಡು ಬರಬಹುದು. ಆದರೆ ಅವರು ತಮ್ಮ ಪರಹಿತೈಕ ಪರಾಯಣತೆಯಿಂದ ಸ್ವಸತ್ವಾಭಿವೃದ್ಧಿ ಮಾಡಿಕೊಂಡು ಕಾಳಿದಾಸವರ್ಣಿಸಿದ ದಿಲೀಪನಂತೆ ಮಾತ್ರ "ಯೋಗಭೋಗಸಮನ್ವಯವನ್ನೋ, ಭೋಗತಿರಸ್ಕಾರವನ್ನೋ, ಕೇವಲ ಯೋಗಪುರಸ್ಕಾರವನ್ನೋ ಹಿಡಿದು ನಡೆದು ಜಗತ್ತಿಗೆ ಮಾರ್ಗದರ್ಶನ ಮಾಡಿರುವುದನ್ನು ಅರಿಯಲಾರದವರಿಗೆ ರಾಷ್ಟ್ರ ಪುನಾರಚನೆಯ ಅಂತಃಸೂತ್ರರೂಪದ ಸಾಂಸ್ಕೃತಿಕ ಮನೋವಿಜ್ಞಾನದ ಗುಟ್ಟುಗೊತ್ತಾಗದು. ಕೇವಲ ವಾದ (ಇಜಂ)ಗಳನ್ನು ಹಿಡಿದು ತರ್ಕಿಸುವ ರಾಜ್ಯಸಿದ್ಧಾಂತ, ಅರ್ಥಸಿದ್ಧಾಂತ, ತತ್ವ ಸಿದ್ಧಾಂತ, ನೀತಿ (ಸಮಾಜ ಜೀವನ) ಸಿದ್ಧಾಂತಗಳಿಂದ ನಮ್ಮ ರಾಷ್ಟ್ರಜೀವನದ ಸಾಂಸ್ಕೃತಿಕ ಹೃದಯದ ಪರಿಚಯ ಚೆನ್ನಾಗಿ ಆಗದು. ಮುಕ್ತಿ, ಸತ್ಯ, ದಿವ್ಯತೆ, ಧರ್ಮ, ಆತ್ಮ, ಬ್ರಹ್ಮ, ಗುಣ, ಅರ್ಥ, ಕಾಮ, ರಸ, ಜ್ಞಾನ, ಕರ್ಮ, ಭಕ್ತಿ, ವೈರಾಗ್ಯ, ಅವತಾರ ಮುಂತಾದ ನಿತ್ಯಪರಿಚಿತ ಪದಗಳ ಸಾಂದರ್ಭಿಕ ಅರ್ಥಭೇದಗಳನ್ನು ಸೂಕ್ಷ್ಮವಾಗಿ ಗ್ರಹಿಸಲಾರದವರಿಂದ ರಾಷ್ಟ್ರೀಯ ಸಂಸ್ಕೃತಿ–ನಾಗರಿಕತೆಗಳ ಮೌಲ್ಯ–ತಾತ್ಪರ್ಯಗಳ ನಿರ್ಣಯವು ನ್ಯಾಯವಾದ ರೂಪದಲ್ಲಿ ದೊರಕಲಾರದು. "ರಾಷ್ಟ್ರಸೂತ್ರ"ದಲ್ಲಿ ಅಡಕವಾದ ತತ್ವ–ರೀತಿ–ನೀತಿಗಳ ಅರ್ಥವಿವರಣೆಗೆ "ಜ್ಞಾನಸೂತ್ರ", "ಕಾವ್ಯಸೂತ್ರ" ಗಳು ಹಿನ್ನೆಲೆಯಾಗಿರುವುದನ್ನು ವಾಚಕಮಿತ್ರರು ಗಮನಿಸಬೇಕೆಂದು ಪ್ರಾರ್ಥಿಸುತ್ತೇನೆ.



# ಪರಿಶಿಷ್ಟ–೨

## ಹಿನ್ನುಡಿ

ಬ್ರಿಟಿಷ್ ಚಕ್ರಾಧಿಪತ್ಯದ ಪೋಷಕರ ಆಡಳಿತ ಸಿಬ್ಬಂದಿಯ ದಬ್ಬಾಳಿಕೆಗೂ ದೇಶಭಕ್ಷಕರ ಸಿಬ್ಬಂದಿಯ ದಬ್ಬಾಳಿಕೆಗೂ ಅಂತರ ಕಡಿಮೆ. ಏಕೆಂದರೆ ದೇಶಭಕ್ತರಲ್ಲಿ ಅನೇಕರಿಂದು ದೇಶಭಕ್ಷಕರಾದುದನ್ನು ನಮ್ಮ ವಿಧಾನಸಭೆಗಳೂ ಸಂಸತ್ತೂ ಎತ್ತಿ ತೋರಿಸಿವೆ.

ಅಹಿಂಸೆಯನ್ನು ಅಚಲಧ್ಯೇಯವೆಂದು ಕಾಂಗ್ರೆಸ್ಸು ಸತ್ಯಾಗ್ರಹದ ಕಾಲದಲ್ಲೇ ನಂಬಿದ್ದಿಲ್ಲ (Autobiography of Javahralal Nehru.p.84); ಆದರೆ ರಾಷ್ಟ್ರದೊಳಗಿನ ವ್ಯವಹಾರಕ್ಕೆ ಅದು ಉತ್ತಮ ಪರಿಣಾಮವನ್ನು ಉಂಟುಮಾಡಬಹುದು. ಅಹಿಂಸಾತ್ಮಕ ಪ್ರತಿಭಟನೆಯಿಂದ ಇಂದು ಒಳಿತೂ ಆಗಿದೆ, ಕೇಡೂ ಆಗಿದೆ, ಅದು ಅತ್ಯಲ್ಪ ಅಹಿಂಸಾತ್ಮಕವಾದದ್ದೂ ಉಂಟು! ದುರ್ಧ್ಯೆಯಕ್ಕದು ಸಾಧನವಾದಾಗ ಮತ್ತು ಅದರ ರೂಪ ಸಮ್ಮಿಶ್ರವಾದಾಗ ಅಹಿಂಸೆಯ ಸಾರ್ವಜನಿಕ ಪ್ರಯೋಗವಿಲ್ಲಿ ಅನಿಷ್ಟಪರಿಣಾಮಗಳನ್ನು ತಂದದ್ದುಂಟು.

ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಸ್ಪಷ್ಟವಾದ ಗೊತ್ತು ಗುರಿಗಳು (ಸ್ವಾತಂತ್ರ್ಯ ರೂಪದ ಸಾಧನಕ್ಕೆ) ಯಾವುವು? ಎಂಬುದರ ಅರಿವು ಬಹಳ ಜನರಿಗಿಲ್ಲದುದರಿಂದ ಭಾರತದಲ್ಲಿ ಜಾತಿಗಳ ವಿಶೇಷ ಹಕ್ಕುಗಳ ಚಾಪಲ್ಯ ಮರವಾಗಿ ಬೆಳೆಯಿತು (Ditto, P. 137) ಅಂದಿನ ಸಾಮಾನ್ಯ ಜನರ ಬೇಡಿಕೆಗಳಲ್ಲಿ ನೌಕರಿಯು ಅಗ್ರಗಣ್ಯವಾಗಿತ್ತು. ಜಾತೀಯ ಮುಖಂಡರಂದು ಮತಧಾರ್ಮಿಕ ಚೌಕಟ್ಟಿನಲ್ಲಿ ಕೇವಲ ಮೇಲು, ಮಧ್ಯಮ ವರ್ಗದವರಿಗೆ ಉಪಕಾರಿಯಾದ ಬೇಡಿಕೆಗಳನ್ನು ಸಾರ್ವಜನಿಕ ಬೇಡಿಕೆಗಳೆಂದು ಪ್ರಚುರಪಡಿಸಿ ಸ್ತೋಮಗಳನ್ನು (Masses) ವಂಚಿಸಿಗೆದ್ದರು. ಈಗಲೂ ಹಾಗೇ ಗೆಲ್ಲುತ್ತಬರಲಾಗಿದೆ. ಹಿಂದುಳಿದವರ ಜಾತಿಬ್ರಹ್ಮ ಅದಕ್ಕೆ ನಿದರ್ಶನ, ಮಸೀದೆಯ ಎದುರಿನ ರಾಜಮಾರ್ಗದಲ್ಲಿ ವಾದ್ಯಮಾಡದಿರಬೇಕೆಂಬ ನಿಯಮ ಅಷ್ಟೇ ಕ್ರೂರವಾದ ಇನ್ನೊಂದು ನಿದರ್ಶನ.

ಒಳ್ಳೆಯ ಮಹೋದ್ದೇಶ ಸಾಧನೆಗಾಗಿ ಪ್ರಾಣಾರ್ಪಣ ಮಾಡುವಷ್ಟರ ಮಟ್ಟಿನ ಧೈರ್ಯ–ಸಾಹಸಗಳು, ಶ್ರದ್ಧಾನಂದ ಗಾಂಧಿ, ನೆಹರುಗಳಿಗೆ ಅತ್ಯಂತ ಪ್ರಿಯವಾಗಿದ್ದುದು ಜನಪ್ರಿಯತೆಗಳಿಸ ಬಯಸುವ ಇಂದಿನ ಮುಖಂಡರಿಗೆ ಅರ್ಥವಾದರೆ ಅವರ ಕಾರ್ಯಸಿದ್ಧಿ ಸುಲಭವಾಗದಿರದು. (Ditto, p. 160). ತನ್ನ ತಾನರಿತುಕೊಳ್ಳುವ ಪ್ರಯತ್ನ ಶೀಲತೆ ನೆಹರುಗಳಿಗಿದ್ದದ್ದೂ (Ditto, p. 204) ಲಕ್ಷ್ಯಕ್ಕೆ ತೆಗೆದುಕೊಳ್ಳಬೇಕಾದ ಸಂಗತಿ. ದೊಡ್ಡ ಶ್ರೀಮಂತರು ಮಹಾತ್ಯಾಗ ಮಾಡಿದರೆ ಅದನ್ನು ಮೆಚ್ಚುವವರು ಭಾರತದಲ್ಲಿ ಬಹಳ

(Ditto, p.205) ಎಂಬುದೂ ಅತ್ಯಂತ ಗಮನಾರ್ಹ. ಲೋಕ ಜೀವನಕ್ಕೆ ಹೆದರಿ ಸಂನ್ಯಾಸಿಯಾಗುವುದು ಯಾವಾಗಲೂ ಯೋಗ್ಯವಲ್ಲ; ತನ್ನ ವ್ಯಕ್ತಿ ಸುಖಕ್ಕೆ ಅದರ ಭೌತಿಕ ಬೆಲೆ ಅಷ್ಟು ಹೆಚ್ಚಿನದಲ್ಲ ಎಂದು ತಿಳಿದು ತಪೋನಿಷ್ಠನಾಗುವುದು ನ್ಯಾಯ, ಪ್ರಶಂಸಾರ್ಹ. ಆದರೆ ಡಾಂಭಿಕತೆ ಎಂಬುದು ಹೊಟ್ಟೆಗೆ ಬೊಜ್ಜು ಬೆಳೆದಷ್ಟು ಬೇಗವಾಗಿಯೂ ಗೊತ್ತಾಗದಂತೆಯೂ ಬೆಳೆಯುತ್ತದೆ! ಅದರ ಬಗ್ಗೆ ಎಷ್ಟು ಎಚ್ಚರವಾಗಿದ್ದರೂ ಸಾಲದು!

ನಮ್ಮ ರಾಷ್ಟ್ರೀಯ ಸ್ವಾತಂತ್ರ್ಯದ ಹೋರಾಟ ಶುರುವಾದದ್ದು ಉಪ್ಪಿನ ಸತ್ಯಾಗ್ರಹದಿಂದ. ಆ ಉಪ್ಪು ಯಾವುದು? ವಿಶ್ವಮಾನವ ನೀತಿಸೂತ್ರ! ಅದಿಲ್ಲದ ನಾಗರಿಕತೆ ಅಸಂಸ್ಕೃತ ಎಂಬುದು ಗಾಂಧಿ ದರ್ಶನ. ಬ್ರಿಟಿಷರು ತಮ್ಮ ಸಾರ್ವಭೌಮ ಸರ್ವಾಧಿಕಾರವನ್ನು ಬಳಸುತ್ತಿದ್ದಾಗಲೇ ಕಾಂಗ್ರೆಸ್ ಮುಖಂಡರು ಸರ್ವಾಧಿಕಾರಿಗಳೆಂದು ಬೆಚ್ಚಿ ಉದ್ಗಾರ ತೆಗೆದದ್ದು (Ditto, P.211) ಗೋಮುಖವ್ಯಾಘ್ರತ್ವದ ಮಹೋದಾಹರಣೆ, ಅದಕ್ಕಿಂತ ನೈತಿಕ ದಿವಾಳಿತನ ಇನ್ನೊಂದಿಲ್ಲ. ಅದೇ ಈಗ ಪ್ರಚುರವಾಗಿದೆ!

ಬ್ರಿಟಿಷ್ ಪಣ್ಯಗಳ ಬಹಿಷ್ಕಾರವು ಸ್ವಾತಂತ್ರ್ಯ ಸಮರದಲ್ಲಿ ನಡೆಯಿತು, ಆದರೀಗ ನಮ್ಮ ಪಣ್ಯ ಹೇಗಿದೆ? ಗುಣಮಟ್ಟ ಗಾತ್ರಗಳಲ್ಲಿ ನೆಲಸಮ! ಏಕೆ? ಹಣವೊಂದೇ ಗುಣವೆಂಬ ಹಣದಿನಿಗಳಿಗೆ ಅನುಕೂಲ ಸಿಕ್ಕಿದ್ದರಿಂದ. ಮದ್ಯದ ಅಂಗಡಿಗಳನ್ನು ಆಗ ಬಹಿಷ್ಕರಿಸಿದರೆ ಈಗ ಪುರಸ್ಕರಿಸಲಾಗಿದೆ. ಏಕೆ? ಅದೇ ಕಾರಣಕ್ಕಾಗಿ. ಲೋಭ ಮೂಲಾನಿ ಪಾಪಾನಿ. ಲೋಭಶ್ಚೇದ ಗುಣೇನ ಕಿಂ? ಲೋಭವರ್ಧಕ ಕಾಯಿದೆಗಳಿಂದು ಬಂದಿವೆ, ಅವು ಅಂಥ ವ್ಯವಹಾರವನ್ನು ತಂದಿವೆ! ಲೋಭ ವಿರೋಧಿಗಳು ನೈನಿತಾಲ್ ಜೈಲಿನಲ್ಲಿ ೨೩೦೦ರಷ್ಟಿದ್ದರಂತೆ. ಈಗ? ಲಂಚಕೊಡಬಲ್ಲ ಲೋಭಿಗಳೇ ಗಂಭೀರಸ್ಥರು, ಗೌರವಸ್ಥರು! ತೆಗೆದುಕೊಂಬ ಲೋಭಿಗಳೂ ಕಡಿಮೆಯವರಲ್ಲ!

ಜೀವಾವಧಿ ಶಿಕ್ಷೆಗಿಂತ ಮರಣದಂಡನೆ ಲೇಸೆಂದು ನೆಹರುಗಳಿಗೆನ್ನಿಸಲು ದೀರ್ಘಾವಧಿಯಕ್ಷಯಕ್ಕಿಂತ ಹೃದಯನಿಂತು ಒಮ್ಮೆಲೇ ಸಾಯುವುದು ಲೇಸು ಎಂಬ ತುಲನಾತ್ಮಕ ವಿಮರ್ಶೆಯೇ ಕಾರಣ. "ನಿಧಾನ ಸೌಧ"ಗಳೂ ನಿಧಾನ ನ್ಯಾಯಾಲಯಗಳೂ ಇಂದು ದೀರ್ಘಕ್ಷಯದ ಸುಖವನ್ನು ಅನೇಕ ಪ್ರಜೆಗಳಿಗೆ ವಿತರಣ ಮಾಡುತ್ತಿರುವುದು ಹಲವಾರು ಕಡೆ ಕಂಡು ಬಂದಿದೆ. ನಿಧಾನವು ನಿಧನಕ್ಕಿಂತ ಕನಿಷ್ಠವೆನ್ನಿಸಿದೆ! ಗಡಿಬಿಡಿ ಹೇಗೋ ಹಾಗೇ ನಿಧಾನವೂ ಹಿಂಸೆಯಲ್ಲಿ ಪರಿಣಮಿಸುತ್ತದೆ. ಗಡಿಬಿಡಿಗೂ ಗಡಿ ಇದೆ, ನಿಧಾನಕ್ಕೂ ಮಿತಿಯಿದೆ, ೧೯೩೩ರಲ್ಲಿ ಭಾರತದ ಕ್ರಿಮಿನಲ್ಲುಗಳ ಸಂಖ್ಯೆ ಹತ್ತು ಲಕ್ಷವಂತೆ. ಕಾಮ–ದಾರಿದ್ರ್ಯ–ಲೋಭಗಳು ಅಭಿಜ್ಞೇಯ ಅಪರಾಧಗಳ ಪ್ರೇರಕಗಳು. ಅವುಗಳನ್ನು ಸಂವರ್ಧಿಸುವ, ವಿದ್ಯೆ, ವ್ಯವಹಾರ, ಆಡಳಿತ, ಕಲಾ ಪ್ರದರ್ಶನಗಳೀಗ ಲಂಗು–ಲಗಾಮುಗಳಿಲ್ಲದೆ ನಡೆಯುತ್ತಿವೆ! ಚಿತ್ರಹಿಂಸೆಗೂ (ಅದಂಡ್ಯ ದಂಡನ ಪ್ರೀತಿಗೂ) ಅಹಿಂಸೆಗೂ (ದಂಡ್ಯರನ್ನು ದಂಡಿಸದಿರುವುದಕ್ಕೂ) ಭಾರತದ ಪೋಲೀಸು ಶಾಖೆಗಳನೇಕ ಇಂದಿಗೂ ಹೆಸರಾಗಿವೆ. ಸ್ವರಾಜ್ಯವು ಯಾರ "ಸ್ವ" ಎಂದೀಗ ಕೇಳಬೇಕಾಗಿ ಬಂದಿರುವುದು ಇದರಿಂದಲೇ!

ಜೈಲಿನ ಕಷ್ಟವನ್ನು ಅನುಭವಿಸಿದ ಸಂಸ್ಕಾರವು ಸತ್ಯಾಗ್ರಹಿಗಳಲ್ಲಿ ಪಾತ್ರಾನು ಕಂಪ ಹೆಚ್ಚಿಸಿತು (Ditto, p. 223). ಆದರೆ ದರಿದ್ರದಲ್ಲಿ ಪರದರಿದ್ರರಿಗೆ ನೆರವಾಗುವ ಬುದ್ಧಿ

ಸಾಕಷ್ಟು ಬಾರದುದರಿಂದಲೇ ವಿಭಜಿಸಿ ಆಳುವ ರಾಜಕೀಯ ದಿನೇ ದಿನೇ, ಜಯಶಾಲಿಯಾಗುತ್ತಿದೆ. ಸದ್ಯೋಲಾಭದ ಚಾಪಲಕ್ಕೆ ಎಂದೋ ಏನೋ ಅಲ್ಪಸ್ವಲ್ಪ ಲಾಭ ಕೊಡಿಸುವ ಪಂಚವಾರ್ಷಿಕ ಯೋಜನೆಯ ಕೆಲ ಅಂಶಗಳು ಕಾರಣ. ಮಣ್ಣಿನ ಬೊಂಬೆಗಳನ್ನು ಮಹಾವೀರರನ್ನಾಗಿ ಮಾಡಿದ ಮಹಾತ್ಮಗಾಂಧಿಯವರ ವರ್ತನೆಯನ್ನು ಮುಖಂಡರನೇಕರು "ಎತ್ತರದಲ್ಲಿ ಎಟುಕದಾಗಿರುವ ದ್ರಾಕ್ಷೆ ಹುಳಿ" ಎಂದು ತಿಳಿದುಕೊಂಡು ನಾನಾವಿಧವಾಗಿ ಟೀಕಿಸುತ್ತ ಬಂದಿದ್ದಾರೆ. ಅವರ ಕಾಟದಿಂದ ಮುಕ್ತವಾಗಬೇಕಾಗಿದೆ ಭಾರತವಿಂದು. ಕೈದಿಗಳ ಸುಧಾರಣೆಯ ಬಗೆಗೆ ಅಂದಿನ ಜೈಲರರು ಲಕ್ಷ್ಯಹಾಕುತ್ತಿದ್ದಿಲ್ಲ; ಬಡವರ ಬಡತನ ನೀಗಿಸಲು ಸುಧಾರಣೆಯ ನಟನೆಯಷ್ಟೇ ನಡೆದಿದೆ ಈಗ. ಅಪ್ರಾಮಾಣಿಕರಿಗೆ ಬುದ್ಧಿ ಇದ್ದರೂ ಒಂದೇ, ಪ್ರಾಮಾಣಿಕರು ಬುದ್ಧಿ ಹೀನರಾದರೂ ಒಂದೇ–ಆಡಳಿಗಾರರಲ್ಲಿ. ಅಪ್ರಾಮಾಣಿಕತೆ–ಬುದ್ಧಿಹೀನತೆಗಳೆರಡೂ ಇದ್ದರೆ ಕೇಳುವುದೇ ಬೇಡ! ಒಂದು ಚಿಕ್ಕ ಗುಂಪು ಅಸಮಾಜವಾದೀಯವಾಗಿ ಬಲಾತ್ಕಾರ ಮಾಡಲು ರಾಜ್ಯಯಂತ್ರವೊಂದು ಸಾಧನ–ಅಂದು ಹೇಗೋ ಇಂದೂ ಹಾಗೇ! ಆಡಿನ ಹಾಲು, ಖರ್ಜೂರ, ಕಿತ್ತಲೆಹಣ್ಣು ಗಾಂಧಿಯವರ ಆಹಾರ; ನಮ್ಮ ಇಂದಿನ ಆ ಈ ಅತಿರಥ–ಮಹಾರಥಿಗಳದ್ದೋ? ಆಹಾರದಂತೆ ಆಚಾರ, ಆಡಳಿತ–ಅಲ್ಲವೇ? ವ್ಯಕ್ತಿತ್ವದ ಬಲವೊಂದರಿಂದಲೇ ಗಾಂಧಿಯವರು ಎದುರಾಳನ್ನು ಗೆಲ್ಲುತ್ತಿದ್ದರು–ಅವನನ್ನು ಬೆದರಿಸಿಯೋ ಲಂಚಕೊಟ್ಟೋ ಅಲ್ಲ! ಅದಿಲ್ಲದ ಸುಧಾರಕರಿಂದ ಈಗ ದೊರಕಿದ್ದೇನು? ಕಳ್ಳರಿಗೆ ಪ್ರೋತ್ಸಾಹ!

ಸತ್ಯಾಗ್ರಹದಕಾಲದಲ್ಲಿ ಅನೇಕ ಬಂಡವಾಳಗಾರರು ನಡೆದುಕೊಂಡದ್ದು ಲಾಂಛನಾಸ್ಪದವಾಗಿತ್ತಂತೆ (Ditto,p.367.). ಈಗ ಅವರೇನೂ ಬದಲಾದಂತೆ ಕಂಡು ಬಂದಿಲ್ಲ. ಲೋಭಲಾಂಛನರಿಗೆ ಯಾವುದು ಲಾಂಛನಾಸ್ಪದ? ಆಡಳಿತಗಾರರಲ್ಲಿಯೂ ಅಂಥವರು ಸೇರಿ "ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ" ಎಂಬುದನ್ನು ಅನುಸರಿಸುತ್ತಿದ್ದಾರೆ. ಗೀತೋಪದೇಶ ಪಾಲಿಸಿದರೆ ಅವರ ತಪ್ಪೇನು?

ಸರ್ವೋದಯದ ಸಮಾಜವಾದದಲ್ಲಿ ತರ್ಕಾತೀತ ಅಂಶ ಅಡಗಿದೆ (Ditto, p.368). ಅನುವಂಶಿಕತೆ, ಆವರಣ ಸಂಸ್ಕಾರ, ಹಳಮೆಯ ಅಜ್ಞಾತ ಪ್ರಭಾವ ಮತ್ತು ಹೊಸಮೆಯ ಪ್ರಚ್ಛನ್ನ ಅಧ್ಯಾರೋಪಗಳನ್ನು ಆಧರಿಸಿದ ಜೀವನತತ್ವ ಪದ್ಧತಿಗಳಿಗೆ ಆ ಮರ್ಮಹೊಳೆಯದು. ಹೊಳೆಯದೆ ಹೋದದ್ದು ತಿಳಿಯುವುದು ಕಷ್ಟ; ಜೀವನದ ಕಹಿ ಅನುಭವ ಮಾತ್ರ ತಿಳಿಸಿಕೊಟ್ಟೀತು–ಅದೂ ಕೆಲವರಿಗೆ ಖಾಯಂ ಆಗಿ.

ತ್ರಿಕರಣಶುದ್ಧವಾದ ತ್ಯಾಗ–ಪಾವಿತ್ರ್ಯಗಳಿಲ್ಲದಲ್ಲಿ ಮತಧರ್ಮವಿಲ್ಲವೆಂದದ್ದು ಗಾಂಧಿಯವರು. ಅವರಿಗದರಿಂದ ಅಂತರ್ವಾಣಿಸಿದ್ಧಿಸಿತ್ತು. ತಪ್ಪು ಮಾಡದ ಶಕ್ತಿ ಅಂತರ್ವಾಣಿಯದು. ಅದು ಸುಸಂಸ್ಕೃತಿಯ ಚರಮಸೀಮೆ ಲೋಕವ್ಯವಹಾರಿಗಳಿಗೆ. ಆ ಶ್ರದ್ಧಾಮಾರ್ಗವು ರಾಷ್ಟ್ರವನ್ನು ಮುನ್ನಡೆಸಿಕೊಂಡು ಹೋಗಲು ಬಹಳಕಾಲ ಶಕ್ತವಾದೀತೇ? ಎಂಬುದು ನೆಹರು ಶಂಕೆ (Ditto, p. 374). ಆ ಶ್ರದ್ಧೆಯನ್ನು ಬಿಟ್ಟುಕೊಟ್ಟಿದ್ದರಿಂದಲೇ ರಾಷ್ಟ್ರವೀಗ ಅನ್ಯಾಯ–ಅನೀತಿಗಳತ್ತ ಬೀಳುತ್ತಿರುವುದನ್ನು ನೋಡಲು ನೆಹರುಗಳೀಗ ಇಲ್ಲ! ಸಂಘಟಿತ ಮತಧರ್ಮಗಳು ನಡೆಸಿದ ದಬ್ಬಾಳಿಕೆ ನಿಂದ್ಯವೆಂಬ ಅನುಭವ ನೆಹರುಗಳದು;

ಸಂಘಟಿತ ರಾಜಕಾರಣಿಗಳು ನಡೆಸುವ ದಬ್ಬಾಳಿಕೆ ವಂದ್ಯವೇ? ಯಾವ ಸದುದ್ದೇಶ ಘೋಷಣೆಯನ್ನೂ ಮೋಸಗಾರರು ದುರುಪಯೋಗ ಮಾಡಿಕೊಳ್ಳಬಲ್ಲರು–ಪ್ರಜಾಪ್ರಭುತ್ವನ್ನು ಮತ್ತು ಸಮಾಜ ವಾದವನ್ನು ಕೂಡ! ಎಚ್ಚರಿಲ್ಲದ ಜನ ಎಲ್ಲಿದ್ದರೂ ಯಜ್ಞ ಪಶುಗಳೇ ಅಲ್ಲವೇ? ಪ್ರಾಶ್ನಿಕರೆಲ್ಲರೂ ಪ್ರಬುದ್ಧರಲ್ಲ. ಅಪ್ರಾಶ್ನಿಕರೆಲ್ಲರೂ ಪೆದ್ದಂಭಟ್ಟರಲ್ಲ!

ರವೀಂದ್ರನಾಥ ಠಾಕೂರರು "ವ್ಯಕ್ತಿತ್ವ" ಎಂಬ ತಮ್ಮ ಗ್ರಂಥದಲ್ಲಿ ಹೇಳಿದ ಮುಕ್ತಿ ವಿವೇಕವನ್ನು ಓದದ ನೆಹರುಗಳಿಗೆ ವೈಯಕ್ತಿಕ ಮುಕ್ತಿಯು ಅಸಾಮಾಜಿಕವೆನ್ನಿಸಿತು (Ditto, p. 377). ಜ್ಞಾನವೆಲ್ಲವೂ ಅರ್ಥಯಿಸುವವವರನ್ನೇ ಅವಲಂಬಿಸಿದೆ– ಎಂಬ ಮಾತು ಎಷ್ಟು ಸತ್ಯ! ಅದಕ್ಕೇ ಅವರೆಂದಿದ್ದಾರೆ "ಶಬ್ದಗಳು ಕೇವಲ ತಮ್ಮಷ್ಟಕ್ಕೇ ಇರುವಾಗ ಬಹಳ ಅಪೂರ್ಣವಾದ ಸಂಪರ್ಕ ಮಾಧ್ಯಮಗಳು" ಎಂದು (Ditto. p. 378). ನಿರ್ಭಯವಾಗಿ ಸತ್ಯಶೋಧದಲ್ಲಿ ತೊಡಗಿಸುವ ಶಕ್ತಿಯು ಮತಧಾರ್ಮಿಕ ಎಂಬುದು ನಿಜಧರ್ಮದ ಲಕ್ಷಣ. ಸತ್ಯದ ಲಕ್ಷಣವು ಶೋಧಕರಿಗೆ ಮೊದಲು ಗೊತ್ತಿರಬೇಕು–ಅಷ್ಟೆ. ನಮಗೆ ಕೀಳೆಂದು ಗೊತ್ತಿರುವ ಕೆಲಸಕ್ಕೆ ನಮ್ಮನ್ನು ಇತರರು ಬಳಸಿಕೊಳ್ಳಲು ಸಮರ್ಥರಾದಾಗ ಅವರಡಿಯಲ್ಲಿ ಮಾಡುವ ಬಾಳುವೆಗಿಂತ ಹೆಚ್ಚಿನ ದುರಂತ ಇನ್ನೊಂದಿಲ್ಲ–ಎಂಬ ಬರ್ನಾರ್ಡ್‌ಷಹನ ತೀರ್ಪನ್ನು ನೆಹರುಗಳು ಒಪ್ಪಿದ್ದರು. ಆದ್ದರಿಂದ ಕೀಳ್ತನವೊಂದು ಸಾಪೇಕ್ಷಸತ್ಯ. ಅದು ಇಂಥ ಕೆಲಸ ಮಾಡುವುದರಲ್ಲಿದೆ ಎಂದು ಗೊತ್ತಾಗಲು ಅದರ ಲಕ್ಷಣಗಳನ್ನು ಶೋಧಕ ಅರಿತಿರಬೇಕು.

"ನಮ್ಮ ಲಾಭಕ್ಕೆ ಅಡ್ಡಿ ಒಡ್ಡಿದಾಗ ಅದನ್ನೆದುರಿಸ ಹೊರಟ ನಾವು ಬಹಳ ಸಲ ನಮ್ಮ ಆಭಿಜಾತ್ಯ, ಸಾಮಾಜಿಕ ಸಭ್ಯತೆಗಳನ್ನು ಬಿಸಾಟು ಅಸತ್ಯಪ್ರಚಾರಕ್ಕಿಳಿವೆವು ಮತ್ತು ಪಾಶವವರ್ತನೆಗಿಳಿದು ಅದನ್ನು ವೈಜ್ಞಾನಿಕ ದಮನ, ಕಾಯಿದೆ–ಸುವ್ಯವಸ್ಥೆಗಳ ರಕ್ಷಣೆ ಎಂದು ಮುಂತಾಗಿ ಹೇಳುತ್ತೇವೆ (Ditto,p.400) ಎಂಬುದು ಬಲಿಷ್ಠರಿಗಿಲ್ಲಿ ಬಹಳ ಸಾರಿ ಕಂಡುಬಂದದ್ದುಂಟು.

ಜಾತೀಯ ಲೆಕ್ಕಾಚಾರದಂತೆ ಸ್ಥಾನನಿನಿರ್ದೇಶಮಾಡಿದ ಮತ್ತು ಜಾತೀಯ ತತ್ವದಂತೆ ಪಕ್ಷರಚನೆ ಮಾಡಗೊಟ್ಟ ಅಂಶಗಳನ್ನು ಅನವಶ್ಯಕ ಪ್ರಾಧಾನ್ಯವಿತ್ತು ಟೀಕಿಸಿದ್ದು ಅಂದು (೧೯೩೬) ತಪ್ಪೆಂದರು ನೆಹರುಗಳು (Ditto, p. 409-10). ಆದರೀಗ ಜಾತಿಗಳ ಅಸ್ತಿತ್ವವಲ್ಲ– ಜಾತೀಯ ಲೆಕ್ಕಾಚಾರ ಆಡಳಿತಗಳ ಎಲ್ಲ ಕ್ಷೇತ್ರಗಳನ್ನೂ ಅದಕ್ಷತೆಗೀಡುಮಾಡಿದ್ದು ಮತ್ತು ಮುಜೀಬಿಸ್ತಾನ ರಚಿತವಾದದ್ದು ನೆಹರುಗಳಿಗೆ ಗಾಂಧಿಯವರ ದಾರ್ಶನಿಕ ಶಕ್ತಿ ಇರಲಿಲ್ಲವೆಂಬುದನ್ನು ಸ್ಪಷ್ಟಪಡಿಸುತ್ತದೆ. ಗಾಂಧಿಯವರಿಗೆ ಅದರಿಂದಲೇ ಅವರು ಮೊದಲು ಮಣಿದು ಅನುಯಾಯಿಗಳಾದದ್ದು!

" Mechanics of history ಚರಿತ್ರೆಯ ಯಂತ್ರಶಾಸ್ತ್ರವು ಪರಂಪರೆಗಳಿಗಿಂತ ಬಲಿಷ್ಠ" (Ditto, p. 412) ಎಂದ ಆಧುನಿಕತಾವಾದವು ಇತಿಹಾಸವು ಪರಂಪರೆಯಿಂದ ಭಿನ್ನ ಎಂಬ ಅಸತ್ಯವನ್ನು ಆಧರಿಸಿದೆ. ಶಬ್ದ ಜಾಲವು ತಾರ್ಕಿಕರನ್ನೂ ಕೆಲವು ಸಲ ಮೋಸಗೊಳಿಸುವುದು ಹೀಗೆ. ಅತಿಸಂಕುಚಿತತೆಯಂತೆಯೇ ಅತಿ ಶಿಥಿಲತೆಯೂ ಮಾರಕ ಎಂಬುದನ್ನು ನೋಡಲು ಭಾರತದಲ್ಲಿ ನೆಹರುಗಳೀಗ ಇಲ್ಲ. ಸಮ ಕ್ರೌರ್ಯದ ದೆವ್ವಗಳಲ್ಲಿ

ಆಯ್ಕೆ ಮಾಡಹೋಗುವವರು ಬುದ್ಧಿಹೀನರು. ಸಾಪೇಕ್ಷ ಉತ್ತಮಿಕೆಯನ್ನು ಅಲ್ಲಿ ಕಾಣುವುದು ಬಹಳ ಸಲ ಭ್ರಾಂತಿ. ಅದರಿಂದಲೇ ಅವರೆಂದರು, "ಇಂದ್ರಿಯನಿಗ್ರಹಕ್ಕಿಂತ ಕಠಿಣವಾದ ಕೆಲಸ ಜಗತ್ತಿನಲ್ಲಿ ಇನ್ನಾವುದೂ ಇಲ್ಲ" ಎಂದು (p.414). ಅನಿಗೃಹೀತ ಇಂದ್ರಿಯರು ಕಾಣುವ ಸತ್ಯ ಮತ್ತು ಮಾಡುವ ತರ್ಕಗಳು ಕೇವಲ ಪೂರ್ವಗ್ರಹ ದೂಷಿತವಾದಂಥವುಗಳು. ಹಾಗೇ ಅನುಕೂಲಸ್ಥರ ತೀರ್ಮಾನಗಳೂ ಅನನುಕೂಲಸ್ಥರ ತೀರ್ಮಾನಗಳೂ ಎಷ್ಟೋ ಸಲ ಪರಸ್ಪರ ವಿರುದ್ಧವಾಗಿರುತ್ತವೆ. ಏಕೆಂದರೆ, ಅನುಕೂಲಸ್ಥರಲ್ಲಿ ಪರೇಂಗಿತಜ್ಞತೆ, ಪರಾನುಕಂಪ ಸಾಕಷ್ಟಿರುವುದಿಲ್ಲ–ಕೆಲವೊಮ್ಮೆ. ಇಂಗ್ಲೆಂಡಿನ ಅಂದಿನ ಉದಾರವಾದ, ಶಾಂತಿವಾದ, ಸಮಾಜವಾದ ಮುಂತಾದವುಗಳೆಲ್ಲವೂ ಭಾರತದಲ್ಲಿ ಬ್ರಿಟಿಷ್ ಚಕ್ರಾಧಿಪತ್ಯ ಇರುವುದನ್ನು ಸಮರ್ಥಿಸುತ್ತ ಹೋದದ್ದು ಉದಾಹರಣೆ (Ditto, p. 420) ಈ ಮಾತಿಗೆ.

"ಭಾರತ ಹಿಂದೆ ರಾಜಕೀಯ ಮತ್ತು ಸೈನಿಕ ಜಯವನ್ನು ಅತಿಶ್ರೇಷ್ಠವೆಂದು ಹೊಗಳಲಿಲ್ಲ; ದುಡ್ಡುಮಾಡುವುದು ಕೀಳೆಂದಿತು. ಧನಿಕತೆಯಷ್ಟರಿಂದ ಯಾರೂ ಕೀರ್ತಿವಂತರಾಗದಾದರು. ಸಮಾಜ ಸೇವಕರಿಗಷ್ಟೇ ಕೀರ್ತಿಮೀಸಲು. ಆದರೀಗ ಪಾಶ್ಚಾತ್ಯ ಬಂಡವಾಳಿಗರ ಬನಿಯ ನಾಗರಿಕತೆ ನಮ್ಮ ಹಿಂದಿನ ನಾಗರಿಕತೆಯನ್ನು ಉರುಳಿಸಿಬಿಟ್ಟಿದೆ. ಹೇಗೆ? ಅದು ತಂದ ವಿಜ್ಞಾನ ಬಡವರಿಗೆ ಅನ್ನಹಾಕುತ್ತದೆ" (Ditto, 432). ವಿಜ್ಞಾನಿಗಿಂದು ನಿರುದ್ಯೋಗ ಬರುವಂತಾದುದನ್ನು ಅಂದು ನೆಹರುಗಳು ಊಹಿಸಲಾರದಾದರು. ಹಾಗೇ ಸಮಾಜವಾದವು ಆ ಬನಿಯತನದ ದೋಷಗಳಿಗೆ ಮದ್ದೆರೆಯುವುದು ಎಂದುಕೊಂಡಿದ್ದ ಅವರಿಗೆ ಈಗ ಕಾಳಸಂತೆ ಬೆವರ ಕಪಾಳಮೋಕ್ಷ ಮಾಡಿರುವುದು ಮತ್ತು ಸರಕಾರಿ ಗುದಾಮುಗಳು ಹಲವೆಡೆ ಮಾಯಾ ಬಜಾರಗಳಾದುದು ಅಂದು ಅವರಿಗೆ ಹೊಳೆಯಲಿಲ್ಲ.

ಧಾರ್ಮಿಕವಲ್ಲದ ಬ್ರಾಹ್ಮಣೀಕರಣವೆಂದರೆ ವರ್ಣರಹಿತ ಸಮಾಜರಚನೆ –ನೆಹರುಗಳ ಪ್ರಕಾರ (Ditto, p. 432). ಇದು ಬೌದ್ಧರೂ ಜೈನರೂ ಮೂರ್ತಿಪೂಜೆ ಮಾಡಬಾರದೆಂದು ಹೊರಟಂತೆ ಮತ್ತು ಬಸವಣ್ಣನವರು ಜಾತಿ ನಿರ್ಮೂಲನಕ್ಕೆ ಹೊರಟಂತೆ–ಎಂಬುದನ್ನು ಜಗತ್ತಿನ ವಿವಿಧ ರಾಷ್ಟ್ರಗಳ ಸುದೀರ್ಘ ಇತಿಹಾಸಗಳು ಇಂದು ಸ್ಪಷ್ಟವಾಗಿ ತೋರಿಸುತ್ತಿವೆ. ಧರ್ಮವಿಲ್ಲದ (ನೈತಿಕತೆ–ಆಧ್ಯಾತ್ಮಿಕತೆಗಳಿಲ್ಲದ) ಬ್ರಾಹ್ಮಣನನ್ನು ಬ್ರಾಹ್ಮಣನೆಂದು ಹೇಳುವವನು ಬ್ರಾಹ್ಮಣನಲ್ಲ. ಅಬ್ರಾಹ್ಮಣರ ಸಹಕಾರಿ ಸಂಘಗಳೀಗ ಏನಾಗಿವೆ ಎಂಬುದನ್ನು ಹೊಸದಾಗಿ ಹೇಳಬೇಕಾಗಿಲ್ಲ.'

ಬ್ರಿಟಿಷರು ಅಂದು ಒಡೆದಾಳಿದರು ಮತ್ತು ಅಲ್ಪಸಂಖ್ಯಾತರ ಸಮಸ್ಯೆಯನ್ನು ಹಡೆದು ಸಾಕಿದರು (Ditto, p.437). ಕಾಂಗ್ರೆಸ್ಸು ಹಾಗೇ ಮಾಡುತ್ತ ಬಂದಿರುವುದನ್ನು ಈಗಲೂ ಚುನಾವಣೆಯಲ್ಲಿ ಹಲವೆಡೆ ಅನೇಕರು ಕಂಡರು, ಆಡಳಿತದಲ್ಲಿಯೂ ಅಂಥ ಉದಾಹರಣೆಗಳಿವೆ. ಮಸಿಹಿಡಿದ ಮಡಿಕೆಯು ಕಾಫಿ ಕಿಟ್ಟಲೆಯನ್ನು ಕಪ್ಪೆಂದು ಹೀಯಾಳಿಸಿತಂತೆ; ಕಾಗೆ ಕೋಗಿಲೆಯನ್ನು ಕರ್ರಗಿದೆಯೆಂದು ಗೇಲಿ ಮಾಡಿತಂತೆ. ಹಾಗೇ ಆಗಲಿಲ್ಲವೇ? ರಾಜಕೀಯ ವ್ಯವಸ್ಥಾಪನೆ ಮಾಡುವ ವಿಚಾರದಲ್ಲೇ ಹಿಂದುಳಿಯುವಿಕೆಯ ಭೂತ ಅಡಗಿದೆ! ಹಿಂದುಳಿದವರ ವಿಚಾರವು ದೇಶವನ್ನು ಹಿಂದುಳಿಸಿದ್ದಿಂದು ಹಲವೆಡೆ ಸ್ಪಷ್ಟವಾಗಿದೆ. ದೂರದರ್ಶಿತ್ವವಿಲ್ಲದ ವಿಚಾರವು ಹಿಂದುಳಿದುದರ ಲಕ್ಷಣ.

ಬ್ರಿಟಿಷರ ಅಧಿಕಾರಶಾಹಿಯು ಗುಲಾಮ ಮನೋವೃತ್ತಿಯನ್ನು, ಉತ್ಸಾಹ ಭಂಗವನ್ನು, ಉನ್ನತಾದರ್ಶ ವಿಮುಖತೆಯನ್ನು, ಬಾಲಬಡಿಕ ವರ್ತನೆಯನ್ನು, ದರ್ಪವನ್ನು, ಅಂಧವಿಧೇಯತೆಯನ್ನು, ಗಿಂಜುವುದನ್ನು ಮತ್ತು ಮೇಲಧಿಕಾರಿಯನ್ನು (ಕೆಲವೊಮ್ಮೆ ಸುಳ್ಳೇ) ತೃಪ್ತಿಗೊಳಿಸುವುದಷ್ಟೇ ಸಾಕೆಂದಿರುವುದನ್ನು ಕಲಿಸಿದ್ದು (Ditto, p.439) ನೆಹರು ನಿಂದಿತವಾಗಿದೆ. ಈ ಸದ್ಗುಣಗಳನ್ನೇ ಈವರೆಗೂ ಸರಕಾರಗಳು ತಮ್ಮ ವಿವಿಧ ನೌಕರರಲ್ಲಿ ಬೆಳೆಯಿಸಿಕೊಂಡು ಬಂದದ್ದು ಎದ್ದು ಕಾಣುತ್ತದೆ ಈಗ. ಏಕೆ? ಗಾಂಧಿತ್ವಕ್ಕೆ ತಿಲಾಂಜಲಿಯಿತ್ತುದರಿಂದ! ಸಚಿವಾಲಯಗಳಲ್ಲಿಂದು ಸರ್ವಾಧಿಕಾರವಿದೆ. ವಿಮರ್ಶ ವಿಮುಖತೆಯಿದೆ, ಅಸಹಿಷ್ಣುತೆಯಿದೆ, ಪರೋಪದೇಶ ಪಾಂಡಿತ್ಯ ಅಧಿಕವಾಗಿದೆ. ಹೊಣೆಗೇಡಿತನ ಹೆಚ್ಚಾಗುತ್ತಿದೆ, ಸ್ವಯಂತೃಪ್ತಿಯಿದೆ, ಸ್ವಯಂಪೂರ್ಣತೆಯ ಭಾವವಿದೆ, ಸಂಕುಚಿತತೆಯಿದೆ, ಹಠವಿದೆ, ಶಾಠ್ಯವಿದೆ, ಅತ್ಯಂತ ಹೆಚ್ಚಿನ ಅಪ್ರಗತಿಪರತೆಯಿದೆ (Ditto, p.442). ಇದು I.C.S.=I See, yes!

ಬ್ರಿಟಿಷರ ಆಳಿಕೆಯಲ್ಲಿ ಅವಕಾಶಾಭಾವದ ದೆಸೆಯಿಂದ ಭಾರತದಲ್ಲಿ ಒಳ್ಳಿದರು ವಿರಳರಾದರು (Ditto, p.445) ಎಂದ ನೆಹರುಗಳೀಗ ಇದ್ದರೆ ಹಾಗೆ ಹೇಳುತ್ತಿದ್ದರೆ?ಅಂದಿದ್ದಷ್ಟು ಸತ್ಯಾಗ್ರಹಿಗಳೂ ಇಂದಿಲ್ಲ. ಅಸತ್ಯಾಗ್ರಹಿಗಳ ತಾಂಡವ ಬುಡದಿಂದ ತುದಿಯುವರೆಗೆ. ಕೇವಲ ಸಂಬಳಾರ್ಥಿಗಳಿರಬಾರದಂತೆ (Ditto, p.445); ಉನ್ನತಾಧಿಕಾರಿಗಳಲ್ಲೇ ಅಂಥವರೀಗ ಹೆಚ್ಚು. ಹಣ ಗುಣವಾಗಬಾರದಂತೆ; ಅದೇ ಆಗಿದೆ ಇಂದು! Money-culture ಹಿರಣ್ಯಾಕ್ಷ ಸಂಸ್ಕೃತಿ ಹಬ್ಬುತ್ತಿದೆ. ಪ್ರಜಾಪ್ರಭುತ್ವೀನ ರಾಜಕಾರಣಿಗಳು ಸೂಕ್ಷ್ಮ ಹೃದಯಿಗಳೂ ಜನೋನ್ಮುಖರೂ ಆಗಿರಬೇಕಂತೆ. ಅವೆರಡು ಗುಣಗಳೇ ಇಂದು ತುಟ್ಟಿಯಾಗಿವೆ. ಭಾರತ ಶುದ್ಧವಾಗಲು ಅಗ್ನಿ ಬೇಕಂತೆ; ಅಂಥ ಅಗ್ನಿ ಇನ್ನೂ ಎದ್ದಿಲ್ಲ.

ತಮ್ಮ ಜೇಬಿಗೆ ಕತ್ತರಿ ಬಂದೀತು ಅಥವಾ ತಮ್ಮ ಪ್ರೀತಿಯ ಪೂರ್ವಗ್ರಹಗಳಿಗೆ ಧಕ್ಕೆಯುಂಟಾದೀತು–ಎಂಬ ಭಯದಿಂದ ಸಾರ್ವಜನಿಕ ಹಿತಕ್ಕೆ ಸಂಬಂಧಿಸಿದ ಅತಿ ಮುಖ್ಯ ಸಮಸ್ಯೆಗಳನ್ನು ಮುಟ್ಟದೆ ಇರುವ ಮಡಿವಂತಿಕೆ (Ditto, p.476) ತಮಗೆ ಸೇರದೆಂದರು ನೆಹರುಗಳು. ಆದರೆ ನಮಗೇಕೆ ಆ "ಬಾನಗಡಿ"? ಎಂದು ತಮ್ಮ ಲಾಭಕ್ಕಷ್ಟೇ ಅಂಟಿಕೊಳ್ಳುವ ಮಹತೋಭಾರಿಗಳೇ ಹೆಚ್ಚಾಗಿದ್ದಾರೆ. ಅವರಿಗೆ ಮಹೋದ್ದೇಶ ನಿಷ್ಠೆಯೂ ಇಲ್ಲ, ಅಂಥ ಉದ್ದೇಶಕ್ಕಾಗಿ ಕೂಡಿದ ಸಹೋದ್ಯೋಗಿಗಳಲ್ಲಿ ನಿಷ್ಠೆಯೂ ಇಲ್ಲ!

"ಸರಳತೆ, ಸಮತೆ, ಇಂದ್ರಿಯನಿಗ್ರಹ ಮುಂತಾದವು ಸದ್ಗುಣಗಳು; ದೇಹ ಶೋಷಣೆ ದುರ್ಗುಣ" (Ditto, p. 510) ಎಂದರು ನೆಹರುಗಳು. ಆದ್ದರಿಂದ ಅದನ್ನು ಇಂದ್ರಿಯದಾಸರಿಂದು ಬೊಜ್ಜು ಬೆಳೆಸಬೇಕೆಂದು ಅರ್ಥ ಮಾಡಿಕೊಂಡರು. ಯಾವುದು ಶೋಷಣೆ, ಯಾವುದಲ್ಲ–ಎಂಬ ಗಡಿಗೆರೆಯನ್ನು ತನಗೆ ಬೇಕಾದಂತೆಯೇ ಪ್ರತಿಯೊಬ್ಬನೂ ಎಳೆದುಕೊಳ್ಳುತ್ತಾನೆ. ಯೆರವಾಡ ಜೈಲಿನಲ್ಲಿ ಗಾಂಧಿಯವರ ಆಹಾರದ ಅಗತ್ಯದೊಡನೆ ಮೋತೀಲಾಲ ನೆಹರುಗಳ ಆಹಾರದ ಅವಶ್ಯಕತೆಗಳನ್ನು (Ditto, p. 230) ಹೋಲಿಸಿದರೆ ಈ ಮಾತಿನ ಅರ್ಥವಾಗುತ್ತದೆ. ಇಬ್ಬರದೂ ಅವರವರಿಗೆ ಕನಿಷ್ಠಾವಧಿಕ ಅವಶ್ಯಕತೆಗಳು. ಆದರೆ ಒಬ್ಬರದು ಮೂರಾದರೆ ಇನ್ನೊಬ್ಬರದು ಮೂವತ್ತು ಮೂರು! ಆಧುನಿಕ ನಾಗರಿಕತೆಗೆ

ತನ್ನ ದೋಷಗಳನ್ನು ಪರಿಹರಿಸಿಕೊಳ್ಳುವ ಶಕ್ತಿಯಿದೆಯಂತೆ (Ditto, P. 511); ಆದರದು ಭಾರತದಲ್ಲಿಲ್ಲ!

ಮಕ್ಕಳಿಗಾಗಿ ಅಲ್ಲದೆ ಇತರ ಕಾರಣಕ್ಕಾಗಿ ಸಂಭೋಗ ಮಾಡಕೂಡದೆಂದೂ ಹಾಗೆ ಮಾಡಿದರೆ ಹೇಡಿತನ ಮತ್ತು ನರ ದೌರ್ಬಲ್ಯಗಳು ಉಂಟಾಗುತ್ತವೆ ಎಂದ ಗಾಂಧಿವಾಣಿ ತಮಗೆ ಸೇರದೆಂದರು ನೆಹರು (Ditto, p. 512). ಅದರ ಫಲವಾಗಿ ಭಾರತೀಯ ವಿದ್ಯಾವಂತರಿಂದು ಹೇಡಿಗಳೂ ನರಸತ್ತವರೂ ಆಗಲಾರಂಭಿಸಿದ್ದಾರೆ ಎಂಬುದಕ್ಕೆ ಅನ್ಯಾಯ ಪ್ರತಿಭಟನೆಯ ಶೌರ್ಯ ಅವರಲ್ಲಿ ಉಡುಗಿ ಹೋಗುತ್ತಿರುವುದೇ ಸಾಕ್ಷಿ. ನ್ಯಾಯವನ್ನು ಪ್ರತಿಭಟಿಸುವ ವಿಕಾರಿಗಳ ಸಂಖ್ಯೆಯಷ್ಟೂ ಅವರ ಸಂಖ್ಯೆಯಿಲ್ಲ! ಇಂದ್ರಿಯ ನಿಗ್ರಹವನ್ನು ಸುಗುಣವೆಂದ ನೆಹರುಗಳು ಲೈಂಗಿಕ ಮನಸ್ವಿತೆಯನ್ನು ಸ್ವಾಭಾವಿಕವಾದ ಗುಣವೆಂದು ಹೇಗೆ ಹೇಳಿದರೋ ಅವರಿಗೇ ಗೊತ್ತು. ಕಾಮಾಚಾರದ ವಾಮಾಚಾರವೀಗ ದೆಸೆದೆಸೆಗೆ ಹಬ್ಬಲು ಇಂಥ ಸಮರ್ಥನೆ ಕಾರಣವಾದರೆ ಆಶ್ಚರ್ಯವೇನು? ಫ್ರೂಡನು ವಿಕೃತಕಾಮಿ ಎಂದು ತಿಳಿದ ಮೇಲೂ ಅವನ ಕಾಮಸ್ವಾಚ್ಛಂದ್ಯವನ್ನು ಎತ್ತಿಹಿಡಿಯುವವರು ಭಾರತೀಯ ನಾಗರಿಕತೆಯನ್ನು ತಕ್ಕಂತೆ ರೂಪಿಸಲು ಸಮರ್ಥರಾದಾರೇ?

'ಬಡವರ ಜೀವನಮಟ್ಟ ಏರಬಾರದು, ಏರಿದರೆ ಅವರು ಇಂದ್ರಿಯ ಲೋಲುಪರೂ ಪಾಪಿಗಳೂ ಆಗುವರು' ಎಂದು ಗಾಂಧಿಯವರು ಹೇಳಿದ್ದರಂತೆ. ಅದು ನೆಹರುಗಳಿಗೆ ಒಪ್ಪಿಗೆಯಾಗಲಿಲ್ಲವಂತೆ (Ditto, p. 516). ಇಲ್ಲಿಯೂ ಹಾಗೇ ಗುರುವಿನ ತಾತ್ಪರ್ಯ ಶಿಷ್ಯನಿಗೆ ಸರಿಯಾಗಿ ಅರ್ಥವಾಗಲಿಲ್ಲ. ಸೌಕರ್ಯಗಳ ಅತಿ–ಮಿತಿಗಳ ಕಲ್ಪನೆಗಳು ಗುರು–ಶಿಷ್ಯರಿಗೆ ಬೇರೆಯಾಗಿದ್ದುದೇ ಕಾರಣ. ಈಗ ಟ್ರಾನಿಸ್ಟರ್ ಇಟ್ಟುಕೊಂಡು ತಿರುಗುವ ಬಡಯುವಕರು ಹುಟ್ಟಿದ್ದು ನೆಹರು ದೃಷ್ಟಿಯನ್ನಾಧರಿಸಿಯೇ! ಹೀಗೆ 'ಕನ್ನಡ ಮಾತಿಗೆ ಹನ್ನೆರಡರ್ಥ' ಆದೀತೆಂದು ನೆಹರುಗಳಿಗೆ ಗೊತ್ತಿರಲಿಕ್ಕಿಲ್ಲ! ನೀತಿ ಮುಕ್ತವಾದ ಜೀವನಮಟ್ಟ ಸುಧಾರಣೆಯನ್ನು ಎತ್ತಿ ಹಿಡಿದದ್ದರಿಂದ ಕಾಯದೆ ಮುಕ್ತವಾದ ಲಾಭಬಡಿಕತನ, ಲಂಚಗುಳಿತನಗಳೀಗ ತಾಂಡವವಾಡಲಾರಂಭಿಸಿವೆ! ಆಧ್ಯಾತ್ಮಿಕ ಮೌಲ್ಯಗಳು ಅಸ್ಪಷ್ಟವಂತೆ, ಅಪ್ರಮೇಯವಂತೆ (Ditto, p. 519). ಆದ್ದರಿಂದ "ಕೈಯಲ್ಲಿದ್ದ ಹಕ್ಕಿಗೆ ಕೈಗೆ ಸೇರದಿರುವ ಎರಡು ಹಕ್ಕಿಗಳಷ್ಟು ಬೆಲೆ" ಎಂದು ನೆಹರು ವಾದ. ಈ ವಾದದ ತರ್ಕವು ಅವರೇ ಒಪ್ಪಿಕೊಂಡ ತರ್ಕಾತೀತ ಅಂಶ ಉಳ್ಳ ಸಮಾಜವಾದಕ್ಕೆ ವಿರುದ್ಧವಾಗಿದೆ. ತರ್ಕಾತೀತ ಅಂಶವೆಂದರೆ, ದಯೆ, ಮಾನವೀಯತೆ. ಆಧ್ಯಾತ್ಮಿಕತೆಯು ಮಾನವೀಯತೆಯ ಮೂಲಸೆಲೆಯನ್ನೇ ಆಧರಿಸಿದ್ದು. "ಅದು ಅವಿದಿತ ಸುಖದುಃಖವುಳ್ಳ ನಿರ್ಗುಣವಸ್ತು"ವಲ್ಲ; ವಿಶ್ವಾತ್ಮಕತೆಗಿರುವ ಪ್ರಸನ್ನತೆ, ಆನಂದ, ನಿಷ್ಪಕ್ಷಪಾತತೆ, ಸರ್ವಭೂತಹಿತಕಾರಿತ್ವ.

ಕಠಿನ ಬಡತನವು ನಿತ್ಯಸ್ಥಿತಿಯಲ್ಲ. ಅದಿರುವಾಗ ಮಿಕ್ಕಮೌಲ್ಯಗಳತ್ತ ಬಡವ ಲಕ್ಷ್ಯ ಹಾಕಲಾರ; ಆದರೆ ಸಾಂಸ್ಕೃತಿಕ ಮೌಲ್ಯಗಳು ನಿತ್ಯ. "ಕ್ಷೀಣಾ ನರಾ ನಿಷ್ಕರುಣಾ ಭವಂತಿ, ಭವೇದ್ವಾ" ಎಂಬುದು ಅಪವಾದ– ಎಂಬುದನ್ನು ಗಾಂಧಿಯವರರಿತಿದ್ದಿಲ್ಲ ಎಂಬಂತೆ ವಾದಿಸಿರುವುದು (Ditto, p.520) ಅಪಶ್ರುತಿ. ಬಹಳಜನ ಶ್ರೀಮಂತರಾಗ ಪರಪುಷ್ಟರಾಗಿದ್ದರು; ಈಗ ಅನೇಕ ಹೊಸ ಪರಪುಷ್ಟರು ಹುಟ್ಟಿ ಬೆಳೆದು ನಿಂತಿದ್ದಾರೆ.

ನೆಹರುಗಳ ಸಮಾಜವಾದ ಅದನ್ನು ನಿಲ್ಲಿಸಲಿಲ್ಲ. ಅದರಿಂದಲೇ ಅವರು ಬಹುಶಃ ಮಿದುಳಿನ ರಕ್ತನಾಳ ಒಡೆದು ದಿವಂಗತರಾದರು! ಹಾಯ್ ಹಾಯ್!

ಕಾಮ, ಧೂಮಪಾನಗಳನ್ನು ಕ್ಷಮ್ಯದೋಷಗಳೆಂದು ಹೇಳಿದ (Ditto, p.521) ನೆಹರುಗಳಿಗೆ ಅವು ಅವರೇ ಬಯ್ಯುವ ಲೋಭ, ನೀಚಸ್ವಾರ್ಥ, ಈರ್ಷ್ಯೆ, ವ್ಯಕ್ತಿ ಸ್ವಾರ್ಥಕ್ಕಾಗಿ ಕ್ರೂರ ಕಲಹ ಮಾಡುವ ಪ್ರವೃತ್ತಿ ಮುಂತಾದ ದುರ್ಗುಣಗಳಿಗೆ ಜನಕಸ್ಥಾನದಲ್ಲಿವೆ ಎಂಬುದು ಗೊತ್ತಾಗದೆ ಹೋದುದು ಗೀತೆಯನ್ನೋದಿ ("ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ..... ಬುದ್ಧಿ ನಾಶಾತ್ ಪ್ರಣಶ್ಯತಿ") ಅರಗಿಸಿಕೊಳ್ಳಲು ಪುರಸೊತ್ತಾಗದುದರಿಂದಲೋ ಏನೋ! ಸಾರ್ವನೀತಿಯಲ್ಲಿ ಭಾರತಕ್ಕೆ out of date ಕಾಲಾತೀತ ಪದಸಂಹತಿಯೆಂದಿಲ್ಲ– ಎಂಬುದನ್ನವರು ಮರೆತರು. ಆದರೆ ಆಸ್ತಿಯ ವೈಯಕ್ತಿಕ ಒಡೆಯತನ ನೀತಿಮಾರಕವೆಂದರೂ ಅಂಥ ಸುಧಾರಣೆಗವರು ಮುಂದಾಗಲಿಲ್ಲ.

ನೆಹರುಗಳು ಪುರಸ್ಕರಿಸದ (Ditto, p. 523) ಖಾದಿ ಗ್ರಾಮೋದ್ಯೋಗ, ಗ್ರಾಮ ಸ್ವಾವಲಂಬನ (ಸ್ವಯಂ ಪೂರ್ಣತೆ) ಮುಂತಾದವುಗಳೀಗ ನಿರುದ್ಯೋಗ ನಿವಾರಣೆ, ಅಧಿಕಾರದ ಮನಾಪೊಲಿಗಳನ್ನು (monopoly) ಕಿತ್ತುಹಾಕಲು, ಮಧ್ಯಸ್ಥ ದಲಾಲರಿಂದ ಬಡವರನ್ನು ಮುಕ್ತಗೊಳಿಸಲು ಅತ್ಯಗತ್ಯವೆಂಬುದು ಸರಕಾರಿರಂಗ, ಸಾವಕಾರಿ ರಂಗಗಳ ಉತ್ಪಾದನೆ–ವಿತರಣ–ನಿಯೋಜನ ವ್ಯವಸ್ಥೆಯ ಅಪರೂಪಗಳಿಂದ ಎಲ್ಲರಿಗೂ ಮನದಟ್ಟಾಗಿದೆ. ನೌಕರಶಾಹಿ–ಬಂಡವಾಳಶಾಹಿಗಳ ಸಹಕಾರವನ್ನು ನಿಲ್ಲಿಸಲು ನೆಹರುಗಳಿಗಾಗಲಿಲ್ಲ; ಅವರ ಮಗಳಿಗಾಗುವುದೋ ಹೇಗೆಂಬುದನ್ನಿಂದ ಕಾದು ನೋಡಬೇಕಾಗಿದೆ! ಸಾವಕಾರರು ಬಡವರುದ್ಧಾರ ಮಾಡರು (Ditto) ಎಂಬ ಅವರ ಭವಿಷ್ಯ ಬಹಳ ಮಟ್ಟಿಗೆ ಸತ್ಯವಾಗಿ ಪರಿಣಮಿಸಿದೆ. ಆಡಳಿತ ಯಂತ್ರವನ್ನು ಬದಲಾಯಿಸಲಾಗದುದರಿಂದ ಅದೂ ಅವರಿಗೆ ಅನುಕೂಲವಾಗಿಯೇ ವರ್ತಿಸುತ್ತ ಬಂತು. ಅನೇಕ ಮಂತ್ರಿಮಂಡಲಗಳೂ Go slow method ನಿಧಾನ ತಂತ್ರವನ್ನು ಹಿಡಿದವು; Mixed Economy ಸಮ್ಮಿಶ್ರ ಆರ್ಥಿಕ ವ್ಯವಸ್ಥೆ ಲಂಚ, ವಂಚನೆಗಳನ್ನು ಹೆಚ್ಚಿಸಿತು. ಇದು ವಿಚಾರದೋಷ; ಅಂಥ ವಿಚಾರ ಮಾಡಲು ದೈವಕಾರಣ! ಪಾನವಿಕಾರ, ಹಸಿವು, ನಿರುದ್ಯೋಗ, ಭ್ರಷ್ಟಾಚಾರ, ಲಾಟರಿ ಮನಸ್ಕತೆ, ರೇಸಿನ ಜಿದ್ದು, ಲೋಭ, ಪರಾನುಕಂಪಾಭಾವ, ವಿನಾಶಕ ಪ್ರವೃತ್ತಿಗಳು ಈಗ ನಾಗರಿಕತೆಯನ್ನು ಉಧ್ವಸ್ತಗೊಳಿಸಿದ್ದು ಬಂಗಾಳದಿಂದ ಮೈಸೂರಿನವರೆಗೆ ನಿದರ್ಶಿಸಲ್ಪಟ್ಟಿದೆ. ಸಮತಾವಾದವು ನೆಲಸಮತೆಗಿಳಿಯಿತು! ವಿಚಾರದಂತೆ ಆಚಾರ ನಡೆಯದಾದದ್ದು ಇದಕ್ಕೆ ಕಾರಣ! ಸಾವಕಾರರು ನಂಬಲರ್ಹರಲ್ಲ (Ditto, p. 528) ವಾದಂತೆಯೇ ಸರಕಾರಗಳೂ ಆದಾವೆಂದು ನೆಹರುಗಳಿಗೆನ್ನಿಸಲಿಲ್ಲವೇನೋ!

ಪ್ರಜಾಪ್ರಭುತ್ವವೂ ಬಂಡವಾಳಶಾಹಿಯೂ ಪರಸ್ಪರ ಹೊಂದವು (Ditto, p. 529), ಹಾಗೇ ಸಮಾಜವಾದವೂ ಸದ್ಯದ, ಕೋರ್ಟು–ಕಚೇರಿ–ಸಚಿವಾಲಯ ನೀತಿಗಳೂ ಪರಸ್ಪರ ಹೊಂದವು. ಅಂಥ ಹೊಂದಿಕೆಯನ್ನು ತರಲಾಗದುದರಿಂದಲೇ ವರ್ಗಕಲಹವು ಅನಿವಾರ್ಯವಾಗಿ ಹೋಯ್ತು. ಅದರಿಂದ ದೇಶದ ಅಭಿವೃದ್ಧಿಕಾರ್ಯವು ವಿಕೃತವಾಯ್ತು; ಮುನ್ನಡೆಯು ಹಿನ್ನಡೆಯಾಗಿ ಪರಿಣಮಿಸಿತು. ಗಾಂಧಿಯವರು ಹೀಗಾಗಬಾರದೆಂದು

ಎಚ್ಚರಿಸಿದ್ದರು (Ditto, p. 535). ಅವರಿಗೆ ಸಾವಕಾರರಲ್ಲಿದ್ದ ನಂಬಿಗೆಯೇನೋ ಅಷ್ಟು ಸಮರ್ಥನೀಯವೆಂದು ಹೇಳುವಂತಿಲ್ಲ– ಎಂಬುದು ನಿಜ.

ಹೃದಯ ಪರಿವರ್ತನವು ಒತ್ತಾಯದ ಅಂಶವನ್ನು ಉಳ್ಳದ್ದೆಂದು ನೆಹರುಗಳ ಅಭಿಮತ (Ditto, p. 537 to p. 552). ಆದರೆ "ಯಾವ ತರಹದ Force ಬಲವೂ ಇಲ್ಲದೆ ಯಾವ ಕಡ್ಡಿಯನ್ನೂ ಅಲ್ಲಾಡಿಸಲಾಗದು" ಎಂಬ ವಿಶ್ವಸೂತ್ರವನ್ನು ಬಲ್ಲ ಗಾಂಧಿಯವರು ಸರ್ವಬಲ ಪ್ರಯೋಗವೂ 'ಹಿಂಸೆ' ಎಂಬರ್ಥವನ್ನೂ ಎಲ್ಲಿಯೂ ಹೇಳಿಲ್ಲ. ಹಿಂಸಾಹಿಂಸೆಗಳ ಭೇದವು Purpose, Manner ಉದ್ದೇಶ ಮತ್ತು ಕ್ರಮ (ರೀತಿ)ಗಳನ್ನು ಆಧರಿಸಿದ್ದು ಎಂಬುದನ್ನು ಅರಿತುಕೊಳ್ಳುವುದಗತ್ಯ. ಶಾಶ್ವತ ಧರ್ಮಗಳ ಧರ್ಮಶಾಸ್ತ್ರಾನುಗುಣವಾದ ಹಿಂಸಾಕೃತ್ಯ, ಹಿಂಸಾಕೃತ್ಯವಲ್ಲ; ಕಾಮವರ್ತನೆ, ಕಾಮುಕತೆಯಲ್ಲ– ಎಂದ ಗೀತಾರ್ಥವು ಮಾತ್ರ ಹಾಗೆ ಪ್ರತ್ಯೇಕಿಸಲು ಒರೆಗಲ್ಲು ಎಂಬುದು ಗಾಂಧಿಯವರಿಗೆ ಗೊತ್ತಿತ್ತು. ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹಗಳು ಶಾಶ್ವತ (ಸಾಮಾನ್ಯ) ಧರ್ಮನೀತಿಗಳು. ಅಹಿಂಸೆಯು ಸತ್ಯವೆಂಬುದು ನೆಹರುಗಳಿಗೆ ಶಂಕಾಸ್ಪದವಾದದ್ದು ಬ್ರಹ್ಮದ ಸತ್ತಾತ್ಮಕತೆಯ ವ್ಯಾಪ್ತಿಯನ್ನು ಗಣಿಸದುದರಿಂದ, ವ್ಯಾಸ ಇದನ್ನು ಬಲ್ಲ, ಗಾಂಧಿಯವರು ಬಲ್ಲರು! ಜಡಹಿಂಸೆಗಿಂತ ನೈತಿಕ ಬಲಾತ್ಕಾರ ಹೆಚ್ಚು ಭಯಂಕರವೆಂದು ಮುಂತಾಗಿ ನೆಹರುಗಳು ಕಲ್ಪನಾ ವಿಲಾಸಕ್ಕಿಳಿದದ್ದು ಅಪ್ರಬೋಧದ ದೆಸೆಯಿಂದ (Ditto, p. 539); ಮಾತಾಡಿದರೆ ಉಸಿರಿಂದ ಗಾಳಿಯಲ್ಲಿರುವ ಜೀವಾಣುಗಳು ಸತ್ತಾವೆಂದು ಬಾಯಿಗೆ ಬಟ್ಟೆ ಕಟ್ಟಿಕೊಂಡು ಮಾತಾಡುವ ಜೈನಯತಿಗಳ ವಕೀಲಿಯನ್ನು ಅವರು ಹಿಡಿದದ್ದು ಆಶ್ಚರ್ಯಕರ. ಶಕ್ತಿರೂಪದ ಹಿಂಸೆ ಸರ್ವತ್ರನಿಂದ್ಯವೆಂದು ಯಾರೂ ಹೇಳಿಲ್ಲ.

"ಹಿಂಸೆ–ಅಸತ್ಯಗಳು ರಾಷ್ಟ್ರಗಳಲ್ಲಿ ಆಕ್ರಮಣಶೀಲ ಎದ್ದಿರುವ ಇಂದಿನ ಕಾಲದಲ್ಲಿ ಅನಿವಾರ್ಯ" ಎಂದು ನೆಹರು (Ditto, p. 541) ಅವರು ಹೇಳಿದ್ದು ವ್ಯಾಸ ಆಪದ್ಧರ್ಮ ಪರ್ವದಲ್ಲಿ ಹೇಳಿದ್ದನ್ನು ಗಾಂಧಿಯವರು ಒಪ್ಪಿದ್ದಿಲ್ಲ– ಎಂಬ ತಪ್ಪು ತಿಳಿವಳಿಕೆಯಿಂದ, ಹೃದಯ ಪರಿವರ್ತನವು ಸಾಮೋಪಾಯ. ಅದರಿಂದ ಜಯ ಸಿಗದಾಗ, ದಾನ, ಭೇದ, ದಂಡಗಳನ್ನು ಗಾಂಧಿಯವರಿಗಿಂತ ಕಡಿಮೆ ವ್ಯಕ್ತಿತ್ವವುಳ್ಳವರು ಕ್ರಮಶಃ ಬಳಸಿದರೆ ಅವರು ತಪ್ಪೆನ್ನುತ್ತಿದ್ದರೆಂದು ಊಹಿಸಲು ಆಧಾರವಿಲ್ಲ. ಸ್ವಮಾನ ರಕ್ಷಣೆಯಲ್ಲಿ ಅವರು ವಿವಿಧ ಕ್ರಮಗಳನ್ನು ಸ್ತ್ರೀಯರಿಗೆ ಉಪದೇಶಿಸಿದ್ದಿಲ್ಲಿ ಸ್ಮರಣೀಯ. ಅಹಿಂಸೆಯು ಹೇಡಿಗಳ ಮುಖವಾಡವಾದೀತು (Ditto, p.546) ಎಂದದ್ದು ಅಹಿಂಸೆಗೆ ಮಾತ್ರವಲ್ಲ ಎಲ್ಲ ಸುಗುಣಗಳಿಗೂ ಅನ್ವಯಿಸುತ್ತದೆ ಎಂಬುದನ್ನು ಮತ–ಧರ್ಮವೆಂದರೆ (ಮಾತ್ರ) ಅಫೀಮು ಎಂದ ಮಾರ್ಕ್ಸನ ಮಾತನ್ನು ತಿದ್ದಿದಂತೆ ತಿದ್ದಬೇಕಾಗುತ್ತದೆ; ಯಾವುದನ್ನೂ ಅಫೀಮನ್ನಾಗಿ ಬಳಸಬಹುದು– ಚಾಣಕ್ಯನಂಥವನು! ಸಮಾಜವಾದವನ್ನೇ ಕೆಲ ರಾಜಕೀಯ ಉಪಪಕ್ಷಗಳೀಗ ಹಾಗೆ ಬಳಸುತ್ತ ಬಂದಿವೆ. ಅದೇ ಇಂದು Slogan Socialism ಘೋಷಣ ಮಾತ್ರದ ಸಮಾಜವಾದವಾಗಿದೆ! Devils always can quote scriptures or sciences to serve their selfish ends; ಧೂರ್ತರು ವೇದದ, ದೇವರ ಅಥವಾ ವಿಜ್ಞಾನದ ಆಣೆ ಮಾಡಿ ತಮಗೆ ಬೇಕಾದುದನ್ನು ಸಮರ್ಥಿಸಿಕೊಂಡಾರು– ಕೇವಲ ವೇದ–ದೇವರುಗಳನ್ನು

ಮಾತ್ರವಲ್ಲ, ವಿಜ್ಞಾನವನ್ನೂ ದುರುಪಯೋಗ ಮಾಡಿಕೊಳ್ಳಬಲ್ಲರು! ವಕೀಲರಿರುವವರೆಗೆ ಯಾವ ಕಾಯದೆ, ತತ್ವ, ಅಥವಾ ನಿಯಮ, ನಿರ್ದುಷ್ಟ ಎನ್ನಿಸೀತು? Social sins ಸಾಮಾಜಿಕ ಅಪರಾಧಗಳಿಗಿಂತ Self-regarding sins ಅಹಂಕಾರದ ಅಪರಾಧ ಹೆಚ್ಚೆಂದು ಗಾಂಧಿಯವರು ಹೇಳಿದ್ದೂ ಹಾಗೇ ನೀತಿವಂತಿಕೆಯ ಮೂಲಭೂತ ಸಾಮಾಜಿಕತೆಯನ್ನು (Ditto, p. 549) ಅರ್ಥ ಮಾಡಿಕೊಳ್ಳಲಾಗದವರಿಗೆ ಅಪಾರ್ಥಕರವಾಯ್ತು. ಅಹಂಕಾರಿಯು ದುರಾಗ್ರಹಿ, ಪರಸ್ವಾತಂತ್ರ್ಯಾಪಹಾರಕ; ಪರಸ್ವಾಪಹರಣವು ಸಾಮಾಜಿಕ ಅಪರಾಧ! ಶಾಶ್ವತಧರ್ಮ(ನೀತಿ)ಗಳು ಬದಲಾಗವು (Ditto, p. 550); ಅಶಾಶ್ವತ ನೀತಿಗಳು ಬದಲಾಗಬೇಕಾದಾಗ ಬದಲಾದಾವು– ಅಷ್ಟೇ. ಹಳೆನೀತಿ–ಹೊಸ ನೀತಿ ಎಂದು ಪಂಚಮಹಾಧರ್ಮಗಳನ್ನು ಪಾಲು ಮಾಡಲು ಸಾಧ್ಯವಿಲ್ಲ– ಎಂಬುದು ಪಾಶ್ಚಾತ್ಯ ನೀತಿಶಾಸ್ತ್ರ ಓದಿದವರಿಗೆ ತಿಳಿಯದು. 'ನೀತಿ' ಎಂಬ ಕಲ್ಪನೆ ಇಡಿ ಬಿಳಿಯರಿಗೀಗ ಅಶಾಶ್ವತ. ಭಾರತದ ಧರ್ಮಶಾಸ್ತ್ರ ಹಾಗೆ ಹೇಳಿಲ್ಲ. ಅದರ ಪ್ರಕಾರ ಕಾಯದೆಗಳೂ ಶಾಶ್ವತ ನೀತಿಗಳ ಅಂಗ, ಅಧೀನ, ಅನುಗುಣ ಎನ್ನಿಸಿರಬೇಕು!

ಪ್ರಜಾಪ್ರಭುತ್ವೀನ ಸಮಾಜವಾದದ ಸಾಮಾಜೀಕರಣ (ರಾಷ್ಟ್ರೀಕರಣ) ಜಯ ಪಡೆಯಲು ಅತ್ಯಂತ ಬಿಗಿಯಾದ ಆಡಳಿತ ಬೇಕು ಮತ್ತು ಅಂಥ ಆಡಳಿತ ನೂರಾರು ವರ್ಷಗಳವರೆಗೂ ಮುಂದೆಯೂ ಹಾಗೇ ಸಾಗುತ್ತಿರಬೇಕು. ರಶಿಯದ ಉದಾಹರಣೆ ಕೆಲಮಟ್ಟಿಗೆ ಈ ಮಾತಿಗಿದೆ. ಆದರೆ ನೆಹರುಗಳು ಹಾಗೆ (Ditto, p. 607) ಹೇಳಿದ್ದಾರಲ್ಲದೆ ಮಾಡಲು ಸಮರ್ಥರಾಗಲಿಲ್ಲ! "ಯೋಜನಾ ಆಯೋಗ"ದಲ್ಲಿ ವಿಕಟ ವಿಸಂಧಿ ಇರುವಂತೆ ಹೇಳಿದ್ದಕ್ಕೂ ಮಾಡಿದ್ದಕ್ಕೂ ಮನ್ವಂತರಾಂತರವುಂಟಾಯ್ತು; Slogan Socialism ಕೇವಲ ಘೋಷಣಾ ಸಾಮ್ಯವಾದ ಜಾರಿಗೆ ಬಂತು. ಅದು ಸರ್ವೋದಯಕರವಾಗಲು ಚಾರಿತ್ರಶುದ್ಧಿಯ ಅಡಿಗಲ್ಲು ನೇತೃಗಳಲ್ಲಿ ಮೊದಲು, ನೇಯರಲ್ಲಿ ಅನುಕ್ರಮವಾಗಿ ಪೂರ್ಣತೆಯತ್ತ ಸಾಗುತ್ತಲೇ ಇರಬೇಕು. ಅದಕ್ಕೆ ಅಗತ್ಯವಾದ ಶೈಕ್ಷಣಿಕ, ಸಾಮಾಜಿಕ, ವಾಣಿಜ್ಯಕ, ಪ್ರಶಾಸನಿಕ ವ್ಯವಹಾರಗಳು ನಿಯಮಬದ್ಧವಾಗಿ ನಡೆಯುವಂತೆ ನೋಡಿಕೊಳ್ಳುವ ಸಾಮರ್ಥ್ಯವುಳ್ಳ ಸರಕಾರಗಳಿರುವುದು ಅತ್ಯನಿವಾರ್ಯ. Character is Destiny ಚಾರಿತ್ರವು (ಅದರಲ್ಲೂ ರಾಷ್ಟ್ರದ ವಿವಿಧಕಾರ್ಯ ಕ್ಷೇತ್ರಗಳ ಮುಖಂಡರಲ್ಲಿ) ಮುಟ್ಟಲಿರುವ ಅದೃಷ್ಟ ಗುರಿಯ ಸಾಧನ– ಎಂಬ ಅಪ್ರತಿಹತ ಸಿದ್ಧಾಂತವನ್ನು ಆಚಾರದಲ್ಲಿ ಅಳವಡಿಸಿಕೊಳ್ಳಲು ಅನುಕೂಲ ಆವರಣವನ್ನು ನಿರ್ಮಿಸಲು ಅಹೋರಾತ್ರ ಶ್ರಮಿಸುವ ಪ್ರತಿಜ್ಞಾಬದ್ಧ ಮಹಾಜನರ ಅವಿರತ ಶ್ರಮವೊಂದು ಮುಕ್ತಿಗಾಗಿ ಮಾಡುವ ತಪೋಮಾರ್ಗ. ಗಾಂಧಿಯವರು ಅಂಥ ತಪಸ್ವಿಗಳು. ಯೋಗಿಗಳು, ನಾಗರಿಕತೆಯ ದಾರ್ಶನಿಕರು, ದ್ರಷ್ಟಾರರು ಎಂಬುದನ್ನೀಯುಗ ಕಂಡಿದೆ. ಅವರನ್ನು ಬರಿದೆ ಹೊಗಳಿ ದೂರವಿಡುವ ಅಥವಾ ಅವರನ್ನು ಅವೈಜ್ಞಾನಿಕವಾಗಿ ಟೀಕಿಸುವ ಬುದ್ಧಿವಂತರ ಸಂಖ್ಯೆ ಹೆಚ್ಚುತ್ತಿರುವುದನ್ನು ಕಂಡು ಮರುಕವುಂಟಾಗಿ ಪ್ರಸ್ತುತ "ರಾಷ್ಟ್ರಸೂತ್ರ"ವನ್ನು ಬರೆಯಲು ಕೈಹಾಕಿದೆ.



# ಮೊದಲ ಮಾತು

ಕ್ರಿ.ಪೂ. ೩ನೆಯ ಶತಮಾನದ ಭಾರತೀಯ ರಾಜ್ಯಶಾಸ್ತ್ರ ಗ್ರಂಥಗಳಲ್ಲಿ ಕೌಟಿಲ್ಯನ ಅರ್ಥಶಾಸ್ತ್ರ, ಮನುಸ್ಮೃತಿಗಳು ಗಣ್ಯ. ಅವುಗಳಿಗೂ ಹಿಂದಿನದು ಮಹಾಭಾರತ. ಈ ಗ್ರಂಥಗಳಲ್ಲಿ ಬಂದಿರುವ ರಾಜ್ಯಶಾಸ್ತ್ರ (ಪೊಲಿಟಿಕ್ಸ್)ವನ್ನು ಓದದವನು ಭಾರತದಲ್ಲಿ ರಾಜ್ಯಭಾರವನ್ನು ಸಮರ್ಪಕವಾಗಿ ನಡೆಸಲು ಅನರ್ಹ. ಕಾಮಂದಕೀಯ ನೀತಿಸಾರ, ಶುಕ್ರನೀತಿಸಾರ ಮತ್ತು ಬೃಹಸ್ಪತಿ ನೀತಿಸಾರಗಳಲ್ಲದೆ ಪುರಾಣಗಳಲ್ಲೂ ರಾಜನೀತಿಶಾಸ್ತ್ರದ* ಅಂಶಗಳು ಬಂದಿವೆ. ಭಾರತೀಯ ನಾಗರೀಕತೆಯೊಂದೇ ಜಗತ್ತಿನಲ್ಲಿ ಕ್ರಿ.ಪೂ.೫೦೦೦ ವರ್ಷಗಳಿಗೂ ಹಿಂದಿನಿಂದ ಅನುಸ್ಯೂತವಾಗಿ ಬಂದಿರುವುದರಿಂದ, ಉಕ್ತಗ್ರಂಥಗಳನ್ನು ಮಾನಸಶಾಸ್ತ್ರೀಯ ವಿಮರ್ಶಕ ದೃಷ್ಟಿಯಿಂದ ಪರಿಶೀಲಿಸಿದರೆ ಮಾತ್ರ ನಮ್ಮ ಜನತಾ ಜನಾರ್ದನನ ಈವರೆಗಿನ ವ್ಯಾವಹಾರಿಕ ಮನಃಪ್ರಣಾಲಿಯ ನಿತ್ಯನೂತನ ಸೂಕ್ಷ್ಮಾಂಶಗಳನ್ನು ಗುರುತಿಸಿ, ಅದಕ್ಕೆ ಸರಿಯಾದ ಪ್ರಶಾಸನ ಪದ್ಧತಿಯನ್ನು ಇಂದಿನ ಪರಿಸರಕ್ಕೆ ತಕ್ಕಂತೆ ಯಶಸ್ವಿಯಾಗಿ ರೂಪಿಸಿಕೊಳ್ಳಲು ಚಿಂತಕರು ಸಮರ್ಥರಾಗುತ್ತಾರೆ. ಅಲ್ಲದಿದ್ದರೆ, ಆಡಳಿತಗಾರರೂ ರಾಜಕೀಯ ಮುಖಂಡರೂ ಹೆಚ್ಚಾಗಿ ಈಗಿರುವಂತೆ ಅನೇಕ ಸಾರ್ವಜನಿಕ ಕಾರ್ಯಯೋಜನೆಗಳ ವಿಚಾರ ಆಚಾರಗಳಲ್ಲಿ ಹಂತಕರಾಗಿ ಪರಿಣಮಿಸುತ್ತಾರೆ. ಪ್ರಾಮಾಣಿಕ, ಅನಲಸ, ಬುದ್ಧಿವಂತ ಮತ್ತು ಪ್ರತ್ಯುತ್ಪನ್ನಮತಿವಂತರಾದ ರಾಷ್ಟ್ರೀಯರು ಈ ಮಾತನ್ನು ಎಂದೂ ಕಡೆಗಣಿಸಲಾರರು.

ಯೂರೋಪೀಯ ನಾಗರಿಕತೆಯ ಇತಿಹಾಸಕಾರರ (Vertical Progress) ಊರ್ಧ್ವ ವಿಕಾಸಗತಿಯ ಸಿದ್ಧಾಂತದ ಅಳತೆಗೋಲಿನಿಂದ ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪಗಳನ್ನು ಅಳೆಯಲು ಹಾಗೂ ತಿಳಿಯಲು ಹೊರಟದ್ದು ಕೇವಲ ಅವೈಜ್ಞಾನಿಕ. ಅದರಿಂದ ಸ್ವತಂತ್ರ ಭಾರತಕ್ಕಾದ ಹಾನಿ ಅಷ್ಟಿಷ್ಟಲ್ಲ. ಇಲ್ಲಿಯ ನಾಗರಿಕತೆಯ ಸೂತ್ರವು ಚಕ್ರನೇಮಿ ಕ್ರಮವುಳ್ಳದ್ದು. ನಮ್ಮ ಇತಿಹಾಸದ ಭೂತಕಾಲದ ನಾಗರಿಕತೆಗಳ ಯುಗ ಒಂದೇ ಒಂದಾಗಿಲ್ಲ. ಹಾಗೇ ರಾಜಕೀಯ ಪದ್ಧತಿಗಳೂ ಒಂದೇ ತೆರನಾಗಿ ನಡೆದು ಬಂದಿಲ್ಲ. ಅಲ್ಲದೆ, ಯೋರೋಪೀಯ ಸಮಾಜ ಮನಃಶಾಸ್ತ್ರದ ಸಂಶೋಧನೆಗಳ ಫಲಿತಾಂಶಗಳಿಗಿಂತ ಭಾರತೀಯ ಸಮಾಜ ಮನಃಶಾಸ್ತ್ರೀಯ ಅಂಶಗಳು ಮೂಲಭೂತವಾಗಿ ತತ್ವದೃಷ್ಟಿಯಿಂದ ತೀರ ಭಿನ್ನ. ಆದುದರಿಂದ ಅಲ್ಲಿಯ ಆಚಾರಸಂಹಿತೆಗಳೆಲ್ಲವೂ ಇಲ್ಲಿ

* ಪ್ರಜಾನುರಂಜನೆಯಿಂದ ಬದ್ಧವಾದ ಆಡಳಿತದ ನ್ಯಾಯ ಸೂತ್ರಗಳ ಸಿದ್ಧಾಂತ ೧೧ನೆಯ ಶತಮಾನದಲಿದ್ದ ಚಾಲುಕ್ಯ ಸೋಮೇಶ್ವರನ "ಮಾನಸೋಲ್ಲಾಸ"ವೂ ಅಭ್ಯಾಸಾರ್ಹ.

ಸಲ್ಲಲಾರವು ಎಂಬುದನ್ನು ಸರಕಾರಗಳು ಇನ್ನು ಮೇಲಾದರೂ ಅರಿತುಕೊಳ್ಳಬೇಕು. ಅಶೋಕ, ಮಯೂರವರ್ಮ, ಹರ್ಷವರ್ಧನ, ಪುಲಿಕೇಶಿ, ಕೃಷ್ಣದೇವರಾಯರೇ ಮೊದಲಾದ ಮಹಾನಾಯಕರ ರಾಜಧರ್ಮಗಳ ಸೂಕ್ಷ್ಮಗಳನ್ನು ಅರಿತು ಅರಗಿಸಿಕೊಳ್ಳುವುದೂ ಅತ್ಯಗತ್ಯ. ಅವರ "ಪ್ರಜಾಪ್ರಭುತ್ವ"ದಲ್ಲಿದ್ದ ಜನಾನುಕೂಲ ಕಾರ್ಯಯೋಜನೆ–ಕಾರ್ಯಾಚರಣೆಗಳ ಸೂತ್ರಗಳಲ್ಲಿ ನಿತ್ಯನೂತನವಾದವುಗಳನ್ನು ಸಹ ತಿರಸ್ಕರಿಸುವ ಮತ್ತು ಅಲಕ್ಷಿಸುವ ಮನಃಪ್ರವೃತ್ತಿಯು ಆಧುನಿಕವೂ ಅಲ್ಲ, ಭಾರತೀಯವೂ ಅಲ್ಲ.

ಸ್ವದೇಶೀಯ ಹಾಗೂ ವಿದೇಶೀಯ ರಾಜ್ಯಶಾಸ್ತ್ರೀಯ ವಾದಗಳನ್ನು (Theories) ತುಲನಾತ್ಮಕವಾಗಿ ವಿಮರ್ಶಿಸುವ ವಿವೇಕ ನಮ್ಮಲ್ಲಿನ್ನೂ ರೂಢಿಗೆ ಬಂದಿಲ್ಲ. ಬ್ರಿಟಿಷರ ರಾಜ್ಯವ್ಯವಹಾರ ನೀತಿಗಳ ಹೊರಮೈಯ ಸ್ವರೂಪವನ್ನು ಅಂಧಶ್ರದ್ಧೆಯಿಂದ ನಂಬಿ ಅನುಕರಿಸುತ್ತ ಬರುವುದನ್ನು ಮಹಾತ್ಮ ಗಾಂಧಿಯವರು ಎದುರಿಸಿ, ಭಾರತೀಯವಾದ ರಾಜನೀತಿ, ಅರ್ಥನೀತಿ, ಸಮಾಜನೀತಿ, ಶಿಕ್ಷಣನೀತಿಗಳನ್ನು ರೂಪಿಸಿಕೊಟ್ಟರು. ಆದರೆ ಅವುಗಳನ್ನು ದಿ. ಪಂಡಿತ ನೆಹರುಗಳಿಂದ ಆರಂಭಿಸಿ ಇಂದಿನ ಪ್ರಧಾನಿಗಳವರೆಗೆ ಯಾರೂ ಮೇಧಾಬಲದಿಂದ ಹೃದ್ಗತ ಮಾಡಿಕೊಳ್ಳುವುದರಲ್ಲಿ ಸಮರ್ಥರಾಗಲಿಲ್ಲ. ಆದುದರಿಂದಲೇ ಭ್ರಷ್ಟಾಚಾರವು ಶಿಷ್ಟಪ್ರಜೆಗಳನ್ನು ಹಿಂಸೆಗೆ ಗುರಿಮಾಡಿತು. "ರಾಜಾ ಕಾಲಸ್ಯ ಕಾರಣಂ; ನಾ ವಿಷ್ಣು: ಪೃಥಿವೀ ಪತಿಃ; ರಾಜಾ ಪ್ರತ್ಯಕ್ಷ ದೇವತಾ" ಮತ್ತು "ವೀರಃ ಸರ್ವಂ ಪಾಲಯತಿ" ಎಂಬ ಮಾತುಗಳನ್ನು ಟೀಕಿಸಿದ ಭಾರತೀಯರಿಗೆ ಇಂದಿನ ಜನತೆಯ ವಾಸ್ತವಿಕ ದೃಷ್ಟಿಕೋನವನ್ನು ಮನಃಶಾಸ್ತ್ರರೀತ್ಯಾ ಅರಿತುಕೊಳ್ಳುವುದು ಅಸಾಧ್ಯವಾಯಿತು. ರಾಜನು ರಾಜ್ಯಶಕ್ತಿಯ ಸಂಕೇತ; ಅವನು ಶ್ರೇಷ್ಠತೆಯ ಗುರುತು; ಜನಸೇವಕತ್ವದ ಆದರ್ಶ; ಹಾಗೇ ಭಾರತದಲ್ಲಿಯ ಅದು ದಂಡ್ಯಾದಂಡ್ಯ ಆಚಾರಗಳ ವಿವೇಕದ ಆದರ್ಶ, ಪ್ರತೀಕ ಎಂಬ ಸತ್ಯವು ಅಪ್ರಿಯವಾಗಿರಲಿ, ಸುಪ್ರಿಯವಾಗಿರಲಿ– ಈ 33 ವರ್ಷಗಳಲ್ಲಿ ಅದನ್ನು ಜನಸ್ತೋಮದ ಹೃದಯದಿಂದ ಕಿತ್ತೊಗೆಯಲು ಸಾಧ್ಯವಾಗಲಿಲ್ಲ. ಈ ಮಾತಿಗೆ ಇಂದಿರಾ ಗಾಂಧಿಯ ಗೆಲುವು ಒಂದು ಪ್ರಾತ್ಯಕ್ಷಿಕೆ.

ಪ್ರಜೋಪಕಾರಿಯಾದ ಪರಿಮಿತಾಧಿಕಾರದ ರಾಜಪ್ರಭುತ್ವದ ಅಂಶಗಳನ್ನು ಕಡೆಗಣಿಸಿದ ಅಹಂಕಾರವು ಮಂತ್ರಿಗಳಲ್ಲಿ ಉದಯುವಾದುದರಿಂದಲೂ ಜನ ಅದನ್ನು ನಿರೀಕ್ಷಿಸಿದ್ದಿಲ್ಲವಾದುದರಿಂದಲೂ ನಮ್ಮ ಅನೇಕ ಮುಖಂಡರ ಪ್ರಜಾಪ್ರಭುತ್ವ, ಸಮಾಜವಾದ, ಆಡಳಿತಯಂತ್ರ ನಿರ್ಮಾಣ, ಪ್ರಶಾಸನ ಪದ್ಧತಿ, ಲೋಕೋಪಕಾರ, ಶಿಕ್ಷಣಪ್ರಚಾರ, ಉದ್ಯಮನೀತಿ, ಯೋಜನಪ್ರಕಾರ ಮುಂತಾದ ಎಲ್ಲವೂ ದೇಶಕ್ಕೆ ಅಧೋಗತಿಯನ್ನೇ ಸಾಪೇಕ್ಷವಾಗಿ ಕ್ರಮಶಃ ತರುತ್ತ ಹೋದವು. ಇಂಗ್ಲೆಂಡಿನಲ್ಲಿರುವ ವಿವಿಧ ನ್ಯಾಯದಾನ, ವೇತನ ವಿತರಣ, ಮತದಾನ, ಮುಖಂಡರ ಜವಾಬುದಾರಿ, ಜನಾಭಿಪ್ರಾಯ, ರಾಷ್ಟ್ರೈಕ್ಯಗಳು ಈಗ ಜಗತ್ತಿಗೇ ಸ್ತುತ್ಯವೆಂದೆನ್ನಿಸಲು ಇಂಗ್ಲೀಷರು ಸ್ವದೇಶೀಯ ರಾಜಧರ್ಮವನ್ನು ಮೂಲಭೂತ ಮಾನಸ ಶಾಸ್ತ್ರೀಯ ಹಿನ್ನೆಲೆಯನ್ನಾಗಿ ಇಟ್ಟುಕೊಂಡೇ ಮುಂಬರಿಯುತ್ತ ಬಂದಿರುವುದು ಕಾರಣ. ಅಲ್ಲಿಯ ಶಿಕ್ಷಣದ ವೈವಿಧ್ಯ ಹಾಗೂ ಆಳ, ಅಗಲ ಮತ್ತು

ತುಲನಾತ್ಮಕ ವಿಮರ್ಶ ಪದ್ಧತಿಗಳಲ್ಲದೆ ವ್ಯಾವಹಾರಿಕತೆಗಳ ಆಂಗ್ಲೇಯತೆಯೂ ಆ ದೇಶವನ್ನು ಇಂದಿಗೂ ಕಾಯುತ್ತಿದೆ.

ಈಗ ಭಾರತಕ್ಕಿರುವ ರಾಜಕೀಯ ಸ್ವದೇಶೀಯತೆಯು ಮಹಾತ್ಮ ಗಾಂಧಿಯವರು ತಮ್ಮ ಲೇಖನಗಳಲ್ಲಿ ವಿವರಿಸಿದ್ದೊಂದೇ ಒಂದು. ಅದನ್ನು ಅನಾದರಿಸುತ್ತ ಬಂದ ಅಥವಾ ಬಾಯುಪಚಾರಕ್ಕೆ ಮಾತ್ರ ಗುರಿಪಡಿಸುತ್ತ ಬಂದ ಕಪಟಾಚಾರವು ಶುದ್ಧವಾದ ಪ್ರಜಾವಂಚನೆ, ವಂಚಿತ ಪ್ರಜೆಗಳು ಭ್ರಾಂತರಾಗಿ ಹೋದುದರಿಂದ ಅವರಿಗೆ ಶ್ರದ್ಧೇಯರಾದ ಮುಖಂಡರೂ ಪ್ರಶಾಸನ ಪ್ರಕಾರಗಳೂ ಪ್ರಾಧಿಕಾರ ವಿಧೇಯತೆಯ ಔಚಿತ್ಯದ ಗತಿಮಿತಿಗಳೂ ಗೊತ್ತೇ ಆಗಲಿಲ್ಲ. ಅದರ ಪರಿಣಾಮವಾಗಿ ಅವರಲ್ಲಿ ವಿಮರ್ಶಶಕ್ತಿಯೇ ಕುಂದಿಹೋಗಿ ಆಸುರೀ ಸಂಪತ್ತಿನ ಆರಾಧಕರನ್ನು ಆರಿಸಿ, ಅವರ ಆಳುಗಳಾಗಿ ನರಳುವ ಸಂದರ್ಭ ಉಂಟಾಯಿತು. ಇನ್ನು ಕುದುರೆಜೂಜು, ಲಾಟರಿ, ಕುಡಿಕತನ, ಗೋಹತ್ಯೆ, ಅಪೂಜ್ಯಪೂಜೆ, ಜಾತೀಯತೆ, ಪ್ರಾಂತಸ್ವಾರ್ಥಗಳ ಪೈಪೋಟಿ, ದುರ್ವ್ಯಕ್ತಿ ಪೂಜೆ, ಅಸಂಬದ್ಧವಾದ ಪ್ರಚಾರ–ಪ್ರಲಾಪಗಳು ದಂಡನೀಯರಾದ ಗುಂಡರ ಹಾಗೂ ಪುಂಡರ ಹಾವಳಿಯನ್ನು ದೇಶದಾದ್ಯಂತವಾಗಿ ಹಬ್ಬಲು ಬಿಟ್ಟಿರುವುದಿಂದು ಯಾವ ಬಗೆಯ ಗಾಂಧಿರಾಜನೀತಿ? ಗ್ರಾಮಸ್ವಯಂಪೂರ್ಣತೆಯ ರಾಜ್ಯ ಪದ್ಧತಿಯನ್ನು ಹೊಗಳಿ ಹೊರಗಿಟ್ಟ (Community Projects) ಸಮುದಾಯ ಯೋಜನೆ ಮತ್ತು (National Extension Scheme) ರಾಷ್ಟ್ರೀಯ ವಿಸ್ತರಣಾ ಯೋಜನೆ ಮುಂತಾದವುಗಳು ಹೇಗೆ ಜನತೆಗೆ ಸಮಾಧಾನ, ಶಾಂತಿ, ಪುಷ್ಟಿಗಳನ್ನು ತಂದಾವು? ಅಜ್ಞಾನ, ರೋಗ, ದಾರಿದ್ರ್ಯಗಳಲ್ಲಿ ಅಗ್ರಜನೆಂದರೆ ಅಜ್ಞಾನ. ರಾಜ್ಯಶಾಸ್ತ್ರದ ಸ್ವದೇಶೀಯತೆಯ ಮಾನಸ ಶಾಸ್ತ್ರೀಯ ಮೂಲಾಂಶಗಳ ಅಜ್ಞಾನ, ಇಲ್ಲಿ ಎಲ್ಲ ಬಗೆಯ ಅಜ್ಞಾನಗಳಿಗೂ ಅರಸ; ಕಲಿತವರೂ ಕಲಿಯದವರೂ ಪ್ರಜಾಪ್ರಭುತ್ವದ ಹೆಸರಿನಲ್ಲಿ "ಅಜ್ಞಾನ ಮಹಾರಾಜಕೀ ಜೈ" ಎನ್ನುತ್ತಿರುವುದು ಲಜ್ಜಾಸ್ಪದ ಹಾಗೂ ಹಾಸ್ಯಾಸ್ಪದ. ನೇತೃಗಳ ಹೃದ್ಗತವಾದ ಈ ಸುಪ್ತ ಪ್ರಜ್ಞೆಯು ರಾಷ್ಟ್ರವಿನಾಶಕಾರಿ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಜಾತಿಗಳಲ್ಲ. ಜಾತಿಗಳ ಆನುವಂಶಿಕತೆ ಉಕ್ತವರ್ಗೀಕರಣಕ್ಕಿಲ್ಲ ಎಂಬ ವೈದಿಕತಾತ್ಪರ್ಯವನ್ನು ಡಾ। ಪಿ.ವಿ. ಕಾಣೆಯವರೂ, ಮಹಾತ್ಮ ಗಾಂಧಿಯವರೂ ಸ್ಪಷ್ಟಪಡಿಸಿದ್ದಾರೆ. ಜಾತಿಗಳು ವೃತ್ತಿ (ಉದ್ಯೋಗ) ಮೂಲ ಉಳ್ಳವುಗಳು. ಮನುಸ್ಮೃತಿಯ ಪ್ರಕಾರ ಅನುಪನೀತ ಬ್ರಾಹ್ಮಣ ಹುಡುಗನು ಬ್ರಾಹ್ಮಣನೂ ಅಲ್ಲ, ಶೂದ್ರನೂ ಅಲ್ಲ, ಕೇವಲ ಶೂದ್ರಸಮಾನ. ವೃತ್ತ್ಯುಪಾಹಿತ ಜನವರ್ಗಗಳು ಸರ್ವತ್ರ ಸರ್ವಕಾಲಗಳಲ್ಲೂ (Trade Guilds) ವಾಣಿಜ್ಯ ಸಂಘಗಳೆಂದು ಪ್ರಸಿದ್ಧವಾಗಿವೆ. ಹುಟ್ಟು ಗುಣಗಳನ್ನೂ, ವೃತ್ತಿಗಳನ್ನೂ (Instincts and Vocations) ಒಟ್ಟಿನಲ್ಲಿ ಸಹಕರಿಸಿ ಸಮನ್ವಿತಗೊಳಿಸುವ ಸಂಸ್ಕರಣತಂತ್ರವೇ ವಿದ್ಯೆ. ಅದರಿಂದ ಮಾತ್ರ ಸಮಾನಗೌರವದ ಸಭ್ಯತೆ ಪ್ರಜೆಗಳಲ್ಲಿ ಬೆಳೆಯುತ್ತದೆ. (Intelligence Quotient) ಬುದ್ಧಿಮಾನ ಹೇಗೋ ಹಾಗೇ (Culture Quotient) ಹೃದಯ ಸಂಸ್ಕಾರಮಾನವೂ ಮನುಷ್ಯನ ತ್ರಿಕರಣಗಳಿಗೆ ಪ್ರೇರಕಗಳಾಗಿವೆ. ಆದುದರಿಂದ ಭಿನ್ನರುಚಿತ್ವಕ್ಕೆ ಲೋಕವು ಹೆಸರಾಗಿದೆ. ಆಗ

ನೈತಿಕಬಲದಿಂದಲೇ ರುಚಿಭೇದ ಸಮನ್ವಯವನ್ನು ತರುವ (Policy) ಧೋರಣೆಯು ಸಾಮರಸ್ಯಕ್ಕಾಗಿ ವ್ಯರ್ಥ ಪ್ರಯಾಸದಲ್ಲಿ ತೊಡಗಬೇಕಾಗಿಲ್ಲ. ಈಗ ಇಂದ್ರಿಯ ಮಾತ್ರ ಗ್ರಾಹ್ಯವಾದ ನ್ಯಾಯ (Justice), ನ್ಯಾಯಾಭಾಸ ಅಥವಾ (Injustice) ಅನ್ಯಾಯ ಎಂಬಂತಹ ರಾಜಕೀಯ ಮನಃಶಾಸ್ತ್ರವು ಎಲ್ಲ ಬಗೆಯ ಲೌಕಿಕ (ವಾದ, ಸಿದ್ಧಾಂತ, ಪ್ರಣಾಲಿಕೆ)ಗಳಿಗೂ ಆಧಾರವಾಗಿದೆ. ರಾಜನೀತಿಯು ಆಯಾ ಐತಿಹಾಸಿಕ ಅವಧಿಗಳಲ್ಲಿ ಯಶಸ್ವಿಯಾಗುವುದು ದೇಶಧರ್ಮದ ರಹಸ್ಯಜ್ಞರ ಬಲದಿಂದ ಮಾತ್ರ.

ಯಾಜ್ಞವಲ್ಕ್ಯ ಸ್ಮೃತಿ ಹೇಳಿದ ಮೌಲ್ಯರಾಜ ಎನ್ನಿಸಿದ ನ್ಯಾಯವು ೨೧ನೆಯ ಶತಮಾನದ ಜಗತ್ತು ಸಹ ಅನುರಿಸಬೇಕಾದ ರಾಜಕೀಯ ಮೂಲದ ಸಾಮಾಜಿಕ ನೀತಿ (Social Ethics):

**ವ್ಯವಹಾರಾನ್ನೃಪಃ ಪಶ್ಯೇದ್ವಿದ್ವದ್ಭಿರ್ಬ್ರಾಹ್ಮಣೈಃ ಸಹ**
**ಧರ್ಮ ಶಾಸ್ತ್ರಾನುಸಾರೇಣ ಕ್ರೋಧಲೋಭ ವಿವರ್ಜಿತಃ**
**ಶ್ರುತಾಧ್ಯಯನಸಂಪನ್ನಾ ಧರ್ಮಜ್ಞಾಃ ಸತ್ಯವಾದಿನಃ**
**ರಾಜ್ಞಾ ಸಭಾಸದಃ ಕಾರ್ಯಾ ರಿಪೌ ಮಿತ್ರೇ ಚ ಯೇ ಸಮಾಃ**
**ಅಪಶ್ಯತಾ ಕಾರ್ಯವಶಾದ್ ವ್ಯವಹಾರಾನ್ನೃಪೇಣ ತು**
**ಸಭ್ಯೈಃ ಸಹ ನಿಯೋಕ್ತವ್ಯೋ ಬ್ರಾಹ್ಮಣಃ ಸರ್ವಧರ್ಮವಿತ್**
**ರಾಗಾಲ್ಲೋಭಾದ್ ಭಯಾದ್ವಾಪಿ ಸ್ಮೃತ್ಯಪೇತಾಧಿಕಾರಿಣಃ**
**ಸಭ್ಯಾಃ ಪೃಥಕ್ ಪೃಥಕ್ ದಂಡ್ಯಾವಿವಾದಾದ್ ದ್ವಿಗುಣಂ ದಮಂ**

ತಪ್ಪಿಗೆ ತಕ್ಕ ಶಿಕ್ಷೆ ಇಲ್ಲದಾಗ ಅರಾಜಕತೆ ಅಥವಾ ರಾಕ್ಷಸ ವ್ಯವಹಾರವು ಸಾಂಕ್ರಾಮಿಕದಂತೆ ಹಬ್ಬಿ ರಾಷ್ಟ್ರದ ಸ್ವಾತಂತ್ರ್ಯ–ಸಂಸ್ಕೃತಿಗಳನ್ನು ನಾಶ ಮಾಡುತ್ತದೆ.

ಮೇಲೆ ಕಾಣಿಸಿದ ಭಾರತೀಯತೆಯ ದೃಷ್ಟಿಕೋನದಿಂದ ಪ್ರಸ್ತುತ ಪ್ರಬಂಧ ಗ್ರಂಥವನ್ನು ಅರ್ಥಮಾಡಿಕೊಳ್ಳುವುದು ಸೂಕ್ತ. "ದೃಷ್ಟಿಯಂತೆ ಸೃಷ್ಟಿ" ಎಂಬುದು ಎಲ್ಲ (Interpretation) ಅರ್ಥವಿವರಣೆಗೂ ಆತ್ಮ. (All knowledge is made or marred by interpretations) ಎಲ್ಲ ಜ್ಞಾನವೂ ವ್ಯಾಖ್ಯಾನಗಳಿಂದ ಸಮರ್ಥಿತ ಅಥವಾ ಅಪಾರ್ಥಿತ ಆಗುತ್ತದೆ ಎಂಬುದನ್ನು ಓದುಗ ತಿಳಿದಿರಬೇಕಾಗುತ್ತದೆ.

---

ರಾಜ=ರಾಷ್ಟ್ರಪತಿ, ರಾಷ್ಟ್ರಾಧ್ಯಕ್ಷ. ಬ್ರಾಹ್ಮಣರು=ವಿವಿಧ ತಾಂತ್ರಿಕ ಹಾಗೂ ಶಾಸ್ತ್ರೀಯ ತಜ್ಞರು. ಧರ್ಮಶಾಸ್ತ್ರ= ಅತಿವಿರಳವಾಗಿ ಎಂದಾದರೊಮ್ಮೆ ಮಾತ್ರ ಬದಲಾಯಿಸಬಹುದಾದ ಸಂವಿಧಾನದ (Rules of Universal Ethics) ಶಾಶ್ವತ ನೀತಿಸೂತ್ರಗಳ ದೇಶೀಯ ಸಾಂಸ್ಕೃತಿಕ ಆಕರ. ಸಭ್ಯ, ಸಭಾಸದ=ಪಾರ್ಲಿಮೆಂಟಿನ ಸದಸ್ಯರು. ಶತ್ರು–ಮಿತ್ರಭೇದಗಳ ಪೂರ್ವಗ್ರಹದ ಸೋಂಕಿಲ್ಲದೆ ನ್ಯಾಯವಿತರಣ ಮಾಡಬಲ್ಲ ಸಂಸ್ಕಾರ ಅವರಿಗೆ ನಿಕಷ. ಮಂತ್ರಿಸ್ಥಾನಾಪನ್ನರಾದ ಬ್ರಾಹ್ಮಣರು (ತಂತ್ರಜ್ಞರು) ತನಗೆ ಪುರುಸೊತ್ತಿಲ್ಲವಾದಾಗ ತನ್ನ ಕೆಲಸಕ್ಕೆ ಹೋಗಲು ತಕ್ಕವರೆಂದು ರಾಷ್ಟ್ರಪತಿ ಅಥವಾ ರಾಜ್ಯಪಾಲ ನಿಯೋಜಿಸಬೇಕು. ಭಾರತದ ಸಂವಿಧಾನದ ಪ್ರಕಾರ ಮಂತ್ರಿಮಂಡಲಗಳೆಲ್ಲವೂ ಆತ್ಯಂತಿಕವಾಗಿ ರಾಷ್ಟ್ರಪತಿಗೂ ರಾಜ್ಯಪಾಲರಿಗೂ ಅಧೀನ. ಲೋಕ=ರಾಜ್ಯಸಭಾಸದರೂ ಪ್ರಾಧಿಕಾರಿಗಳೂ ಸಭ್ಯಾಂತರ್ಗತರೆಂಬುದು ಇಲ್ಲಿ ಅಧ್ಯಾಹೃತ.

ಶ್ರೀಮಾನ್ ದಂತಿಯವರು ಪ್ರಕಾಶಕಧರ್ಮವನ್ನು ಚೆನ್ನಾಗಿ ಅರಿತವರು ಮತ್ತು ನುರಿತವರು; ಕರ್ಮಗಳ ಕಾಯಿದೆಗಳನ್ನು ಬಲ್ಲವರು. ಅವರ ಸಮಾಜಶಿಕ್ಷಣ ಪ್ರಯತ್ನಕ್ಕೆ ಇದೊಂದು ನನ್ನ ಅಲ್ಪ ಕಾಣಿಕೆ. "ಪ್ರತಿಭೆ"ಯು ಸಾರ್ವಕಾಲಿಕ ಸತ್ಯಗಳನ್ನೊಳಗೊಂಡ ಸಾಹಿತ್ಯವಿಮರ್ಶಗ್ರಂಥವಾದರೆ. ಪ್ರಸ್ತುತ "ವಿಚಾರ ವಿಜಯ"ವು ಅದೇ ರೀತಿಯ ರಾಜ್ಯಭಾರ ಸೂತ್ರಗಳ ಸ್ಥೂಲವೂ, ಮೂಲಭೂತವೂ ಆದ ವಿಚಾರಗಳನ್ನು ಸಾಂಸ್ಕೃತಿಕವಾಗಿ ವಿವೇಚಿಸಿದೆ. ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹಗಳನ್ನು ಸಾರ್ವಕಾಲಿಕ ಹಾಗೂ ಸಾರ್ವದೇಶಿಕ ನೀತಿಸೂತ್ರಗಳನ್ನಾಗಿ ಗಣಿಸಿರುವುದಲ್ಲದೆ, ಅವು ಸಕಲ ಶಾಸ್ತ್ರಗಳ ಅಭ್ಯಾಸಕ್ಕೂ ಆಚರಣೆಗೂ ಕಟ್ಟಳೆಗಳಾಗಿವೆ. ಈ ದೃಷ್ಟಿಯಿಂದಲೇ ಮಹಾತ್ಮಗಾಂಧಿಯವರು ರಾಜ್ಯಶಾಸ್ತ್ರ, ಅರ್ಥಶಾಸ್ತ್ರಗಳು ಸಹ ನೀತಿ (Morals) ತತ್ವಗಳಿಗೆ ಬದ್ಧವಾಗಿದ್ದರೆ ಮಾತ್ರ ಗ್ರಾಹ್ಯ ಎಂದು ಅಭಿಪ್ರಾಯಪಟ್ಟಿದ್ದಾರೆ. ಯಾವ ಶಾಸ್ತ್ರವೂ ಲೋಕದಲ್ಲಿ ಭಾರತೀಯ ದೃಷ್ಟಿಯಿಂದ ವ್ಯಷ್ಟಿ ಸಮಷ್ಟಿವ್ಯವಹಾರಗಳೆಲ್ಲವುಗಳಲ್ಲೂ ನೀತಿ ನಿರಪೇಕ್ಷವಲ್ಲ. ಆಧ್ಯಾತ್ಮಿಕ ಸಾಧಕ ಸಹ ಶಮದಮಾದಿ ನೀತಿಸಂಪನ್ನನಾಗಿರಬೇಕು ಎಂದು ಶ್ರೀ ಶಂಕರಾಚಾರ್ಯರು ವಿಧಿಸಿದ್ದಾರೆ. ಇದು ಧರ್ಮ (ನೀತಿ) ಪ್ರಧಾನಭಾರತದ ನಿಲುವು. ಧರ್ಮವು ಅರ್ಥ–ಕಾಮಗಳಿಗೂ ಮುಕ್ತಿಗೂ ಸಾಧಾರಣವಾದ ಶಾಶ್ವತವೂ ಶುದ್ಧವೂ ಆದ ನೀತಿಸಾಧನ (Permanent and pure means). ಮನೋವಾಕ್ ಕಾಯ–ಕರ್ಮಗಳಿಂದ ಈ ಅಂಶವನ್ನು ಅನುಭವ–ಆಚರಣೆಗಳಲ್ಲಿ ತಂದುಕೊಳ್ಳದುದರಿಂದ ಭ್ರಷ್ಟಾಚಾರವು ಮಿತಿಮೀರಿ ಸ್ವದೇಶ, ಪರದೇಶಗಳಿಗೆ ಸದ್ಯ ಅಥವಾ ಕಾಲಾಂತರದಲ್ಲಿ ಹಾನಿಯುಂಟಾಗುವುದು ಸೂರ್ಯಪ್ರಕಾಶದಷ್ಟು ಸತ್ಯ. ಆದುದರಿಂದ, ಅಂದರೆ, ರಾಜ್ಯಶಕ್ತಿಯು ಮಿಕ್ಕ ಎಲ್ಲ ಶಕ್ತಿಗಳಿಗೂ ಲೌಕಿಕವಾಗಿ ಅಧಿಕವ್ಯಾಪ್ತಿಯುಳ್ಳದ್ದಾಗಿರುವುದರಿಂದ, ಅದರ ಭೌತ ಸ್ವರೂಪದ ಪ್ರಯೋಗವು "ಯೋ ದೇಶಕಾಲಕಾರ್ಯವ್ಯಪೇಕ್ಷಯಾ ಪಂಡಿತಃ ಸ ಪುಮಾನ್" ಎಂಬ ಸಾಂದರ್ಭಿಕ ಔಚಿತ್ಯದ ನಿಯಮಕ್ಕೆ ಒಳಪಟ್ಟಿದೆ. ಇಂಥ ಔಚಿತ್ಯವನ್ನು ಧಿಕ್ಕರಿಸಿದ ರಾಜ್ಯಶಕ್ತಿ ಸಂಪನ್ನನನ್ನು ಪದಚ್ಯುತಗೊಳಿಸಬೇಕೆಂಬುದು ಮನೂಕ್ತ. ಪಾತ್ರರನ್ನು ಮುಖಂಡರನ್ನಾಗಿ ಆಯದ, ಸುಮ್ಮನಿರುವ ಅಥವಾ ಅಪಾತ್ರರನ್ನು ಮುಖಂಡರನ್ನಾಗಿ ಆಯುವ ಪ್ರತಿಯೊಂದು ಪ್ರಜಾರಾಜ್ಯ ಯೋಜನೆಯೂ ದುಷ್ಟ, ನಿಂದ್ಯ, ತ್ಯಾಜ್ಯ– ಎಂಬ ಅಮೂಲ್ಯ ಸತ್ಯವನ್ನು ಶ್ರೀ ದಂತಿ ಅವರು ಈ ಗ್ರಂಥದ ಮೂಲಕ ಪ್ರಚುರಪಡಿಸಿ ಕೃತಕೃತ್ಯರಾಗುವುದು ಖಂಡಿತ. ಈ ಮೊದಲ ಮಾತನ್ನು–

**ವೇದವ್ಯಾಸಂ ಗುರುಶ್ರೇಷ್ಠಂ ಸರ್ವಶಾಸ್ತ್ರ ವಿಶಾರದಂ**

**ನತ್ವಾ ಭಕ್ತ್ಯಾ ಪುರೋವಾಕ್ಯಾದ್ ವಿರಮಾಮಿ ಸುದರ್ಶನಂ**

ಎಂಬ ಗುರುವಂದನೆಯಿಂದ ಮುಗಿಸುತ್ತೇನೆ. ಓಂ ಸರ್ವೋದಯಃ ಸಂಭವತು.

–ಗ್ರಂಥಕರ್ತ



# ರಾಜಶಕ್ತಿಯ ಉದಯ

ಇಂದಿನ ಶೋಧದ ಪ್ರಕಾರ ಈಜಿಪ್ಟಿನ ನಾಗರಿಕತೆ ಬಹಳ ಹಳೆಯದು. ನೆಲದಲ್ಲಿ ಉತ್ತು ಬಿತ್ತಿ ಬೆಳೆ ತೆಗೆಯುವುದು ಅಲ್ಲಿಯ ಜನರಿಗೆ ಕ್ರಿ.ಪೂ.೫೦೦೦ ವರ್ಷಗಳ ಹಿಂದೆ ಗೊತ್ತಾಯಿತಂತೆ. ಮೊದಲನೆಯ ಹಂತದಲ್ಲಿ ಕೃಷಿಜ್ಞಾನ ಹರಡಿತು; ಆಮೇಲೆ ಅಲ್ಲಿಯ ಜನರು ಕಾಯದೆಬದ್ಧ ಜೀವನವನ್ನು ನಡೆಸಲು ಕಲಿತರು–ಎಂದು ತಿಳಿದುಬಂದಿದೆ. ಒಕ್ಕಲುತನದ ಉದ್ಯೋಗವು ಗ್ರಾಮಜೀವನವನ್ನು ಅನಿವಾರ್ಯವನ್ನಾಗಿ ಮಾಡಿತು. ಒಬ್ಬ ರೈತನು ಗಡಿಗುಂಟ ಬೇಲಿ ಹಾಕಿಕೊಂಡು ತನ್ನ ಕ್ಷೇತ್ರವೆಂದು ಕಾಯ್ದುಕೊಳ್ಳುವ ಆಲೋಚನೆ ಮುಂದಿನದು. ಅದರಿಂದ ಕಾಯಿದೆ ಅವಶ್ಯಕವಾಯಿತು. ಕಾಯಿದೆಯನ್ನು ಜಾರಿಗೆ ತರುವ ನೇತೃತ್ವದ ಅಗತ್ಯ ಮುಂದಿನ ಹೆಜ್ಜೆ. ಈ ನೇತೃತ್ವವು ಸ್ವಾಮಿತ್ವ, ರಾಜತ್ವಗಳಾಗಿ ಕ್ರಮೇಣ ಪರಿಣಾಮ ಹೊಂದಿತು.

### ಪೂಜಾರಿ ಧರ್ಮಗುರು

ರೈತರ ದಂಧೆಯು ಮತಧಾರ್ಮಿಕ ವಿಚಾರದ ಉದಯಕ್ಕೂ ಜೊತೆ ಜೊತೆಗೇ ಅವಕಾಶವನ್ನು ಕೊಟ್ಟಿತು. ತಾನು ಉತ್ತು ಬಿತ್ತಿದ ಮೇಲೆ ಸಸಿಗಳು ಬೆಳೆಯಲು ಮಳೆ ಬೇಕು, ತಕ್ಕ ಹವಾಮಾನ ಬೇಕು–ದೆವ್ವ ಭೂತಗಳು ಅವನ್ನು ಹಾಳುಮಾಡಬಾರದು–ಇವೆಲ್ಲಾ ಹೇಗೆ ಸಾಧ್ಯ? ಎಂಬ ಆಲೋಚನೆ ತಲೆಯಲ್ಲಿ ಎದ್ದಾಗ ಸೃಷ್ಟಿಯ ವಿವಿಧ ಕಾರ್ಯಗಳಿಗೆ ಒಡೆಯರಾದ ದೇವರುಗಳ ಕಲ್ಪನೆ ಮತ್ತು ಅವರನ್ನು ಒಲಿಸಿಕೊಳ್ಳುವ ಯೋಚನೆ ರೈತರ ತಲೆಯಲ್ಲಿ ಮೂಡಿದವು. ಅಂಥ ಒಲವನ್ನು ದೊರಕಿಸಿಕೊಡುವ ಉಪಾಯವನ್ನು ತೋರಿಸುವ ನೇತೃವಿನ ಅಗತ್ಯ ಆ ಮೇಲೆ ಉಂಟಾಯಿತು. ಅಂಥ ನೇತೃವೇ ಮುಂದೆ ಪೂಜಾರಿ, ಧರ್ಮಗುರು ಎನ್ನಿಸಿ ಸಮಾಜದಲ್ಲಿ ಪ್ರಭುತ್ವವನ್ನು ಕ್ರಮೇಣ ಪಡೆದನು.

ರಾಜನ ಸ್ಥಾನವನ್ನೂ ಧರ್ಮಗುರುವಿನ ಸ್ಥಾನವನ್ನೂ ಒಬ್ಬನೇ ಮೊದಲು ಪಡೆಯುವಂತಾದದ್ದು ಈಜಿಪ್ಟಿನ ವೈಶಿಷ್ಟ್ಯ. ನೈಲ್ ನದಿಯ ವರ್ತನೆಯನ್ನು ಮೊದಲೇ ಜನರಿಗೆ ತಿಳಿಸಿದ ಮತ್ತು ಇಡೀ ವರ್ಷದ ಹವಾಮಾನ ವ್ಯತ್ಯಾಸಗಳನ್ನು ಪೂರ್ವಭಾವಿಯಾಗಿ

ಅವರಿಗೆ ಹೇಳಿದ ಜೋಯಿಸಗಿರಿಯ ಬಲದಿಂದ ಒಬ್ಬನು ಸುಲಭವಾಗಿ ಈಜಿಪ್ಟಿನಲ್ಲಿ ದೇವತ್ವಕ್ಕೆ ಏರಿದನು. ನಿಸರ್ಗದ ಕಾರ್ಯಗಳೆಲ್ಲವುಗಳಿಗೂ ಅವನೇ ಚಾಲಕ ಎಂದು ಜನರು ಕ್ರಮೇಣ ಭಾವಿಸತೊಡಗಿದರು. ಆಗ ಅವನೆಂದ "ನಾನು ನೇರವಾಗಿ ನೇಸರಿಂದ ಹುಟ್ಟಿ ಭೂತಳಕ್ಕಿಳಿದವನ ವಂಶದವ" ಎಂದು. ಜನ ಅದನ್ನೊಪ್ಪಿ ರಾಜನೇ ನಾಗರಿಕತೆಯ ಅಡಿಗಲ್ಲು ಎಂದು ನಂಬಿ, ಅವನನ್ನು ಆರಾಧಿಸತೊಡಗಿತು. ಸೂರ್ಯ ಪೂಜಕನು ಸೂರ್ಯವಂಶದ ರಾಜನಾಗಿ ಆಳತೊಡಗಿದ, ಹೀಲಿಯೋ ಪೋಲಿಸ್ಸಿನಲ್ಲಿ ಸುಮಾರು ಕ್ರಿ.ಪೂ. ೨೭೫೦ರ ಹೊತ್ತಿಗೆ ಐದನೆಯ ಮನೆತನಕ್ಕೆ ಸೇರಿದ್ದ ಯುಸರ್ ಕಫ್ ಎಂಬ ಅರ್ಚಕನು ರಾಜಪಟ್ಟಕ್ಕೆ ಏರಿದನು.

ಯುಸರ್ ಕಫ್ ಎಂಬ ಪೂಜಾರಿಯೇ ಈಜಿಪ್ಟಿನಲ್ಲಿ ತಾನು ದೇವರ ವಂಶದವ ಎಂದ ಪ್ರಥಮ ಫರೆಯೋ (ರಾಜ) ಎಂದು ನಂಬಲಾಗಿದೆ. ಅವನ ಹಿಂದಿನ ಅರಸರನ್ನು ಜನರು ಅವರು ಸತ್ತ ಅನಂತರವೇ ದೇವರಾದರೆಂದು ನಂಬಿದರು.

ಸುಮೇರಿಯದ ನಾಗರಿಕತೆಯ ಆರಂಭ ಸುಮಾರು ಕ್ರಿ.ಪೂ. ೩೦೦೦ದಲ್ಲಿ (ಕೆಲವರ ಪ್ರಕಾರ ೪೦೦೦ ದಲ್ಲಿ) "ಪತೇಸಿ"ಯು ಸುಮೇರಿಯದ ನ್ಯಾಯಾಧಿಕಾರಿ ಮತ್ತು ಅರ್ಚಕ. ಅಲ್ಲಿಯ ಐದನೆಯ ರಾಜಮನೆತನವು ಪತೇಸಿಗಳದು. ಅವರು ರಾಜಾಧಿಕಾರವನ್ನು ಕಸಿದುಕೊಂಡರು.

## ಮನುವಿನ ಮೂಲ

ಭಾರತದ ಸಿಂಧು ಕಣಿವೆಯ ನಾಗರಿಕತೆಯ ಆದಿ ೪೫೦೦ ಕ್ರಿ.ಪೂ. ಅದರೊಟ್ಟಿಗೇ ವೈದಿಕ ನಾಗರಿಕತೆಯ ಆರಂಭವೆಂಬುದು ಈಗ ಐತಿಹಾಸಿಕರ ನಿಶ್ಚಯ. ಅಂದಿನ ರಾಜ್ಯತ್ವದ ಉತ್ಪತ್ತಿಯನ್ನು "ಮಹಾಭಾರತ"ದಲ್ಲಿ ಹೇಳಿದೆ: ಮಾನವ ಧರ್ಮಶಾಸ್ತ್ರವೂ ಒಕ್ಕಣಿಸಿದೆ. ಅವುಗಳ ಪ್ರಕಾರ ಆದಿಯಲ್ಲಿ ಅರಾಜಕತೆ ಎಲ್ಲೆಲ್ಲೂ ಹಬ್ಬಿತ್ತು. ಆದರೆ ಕೆಲಕಾಲ ಕಳೆದ ಬಳಿಕ ಜನರಿಗೆ ರಾಜನ ಅವಶ್ಯಕತೆಯ ಅರಿವುಂಟಾಯಿತು; ಎಲ್ಲೆಡೆಗಳಲ್ಲೂ ಕಳ್ಳ–ಕಾಕರ ಹಾವಳಿಯಿಂದ ಭಯ ಹುಟ್ಟಿತು. ಅದರ ನಿವಾರಣೆಗಾಗಿ ಸಭೆ ಸೇರಿ ಬ್ರಹ್ಮನು ಮನುವನ್ನು ನಿರ್ಮಿಸಿದನು. ಮನುವು ಆದಿರಾಜನಾದ.

## ರಾಜೋತ್ಪತ್ತಿ ಹೇಗೆ

ಐತರೇಯ ಬ್ರಾಹ್ಮಣದಲ್ಲಿ ದೇವತೆಗಳೂ ಅಸುರರೂ ದೊಡ್ಡಪ್ಪ ಚಿಕ್ಕಪ್ಪಂದಿರ ಮಕ್ಕಳೆಂದು ಹೇಳಲಾಗಿದೆ. ಅಸುರರು ದೇವತೆಗಳ "ಭ್ರಾತೃವ್ಯರು". ಮೊದಲು ಜಗತ್ತೆಲ್ಲಾ ಅವರದಾಗಿತ್ತು. ಅದರ ಒಂದು ಭಾಗವನ್ನು ದಾಯಾದರಾದ ದೇವತೆಗಳಿಗೆ ಕೊಟ್ಟರು. ಆ ಮೇಲೆ ಕಾರಣಾಂತರದಿಂದ ದೇವತೆಗಳ ಮೇಲೆ ಮುನಿದು ಅಸುರರು ಅವರ ರಾಜ್ಯವನ್ನು ಕಸಿದುಕೊಂಡರು. ಅವರನ್ನು ಯುದ್ಧದಲ್ಲಿ ಸೋಲಿಸಿ ಕಳೆದುಕೊಂಡ ರಾಜ್ಯವನ್ನು ಪಡೆದುಕೊಳ್ಳಲು ದೇವತೆಗಳು ಯಜ್ಞ ಮಾಡಿ ಅಗತ್ಯವಾದ ದಿವ್ಯಶಕ್ತಿಯನ್ನು ಪಡೆದರು.

ಆದರೂ ಅವರಿಗೆ ಪೂರ್ಣ ಜಯ ದೊರಕಲಿಲ್ಲ, ತಮಗೆ ನೇತೃವಿಲ್ಲದುದರಿಂದಲೇ ಅಪಜಯ ಸಂಭವಿಸಿತೆಂದು ಅರಿತ ಅವರು ತಮ್ಮಲ್ಲಿ ಎಲ್ಲರಿಗಿಂತ ಬಲಿಷ್ಠನಾಗಿದ್ದ ಇಂದ್ರನಿಗೆ ರಾಜ್ಯ ಪಟ್ಟಾಭಿಷೇಕವನ್ನು ಮಾಡಿದರು. ಮತ್ತು ಪ್ರತಿಯೊಬ್ಬ ದೇವತೆಯೂ ತನ್ನಲ್ಲಿದ್ದ ದಿವ್ಯಶಕ್ತಿಯ ಅಂಶವನ್ನು ಇಂದ್ರನಿಗೆ ಧಾರೆಯೆರೆದು ಕೊಟ್ಟನು. ಆಗ ಇಂದ್ರನು ಅಸುರರನ್ನು ಜಯಿಸಿ ದೇವತೆಗಳು ಕಳೆದುಕೊಂಡಿದ್ದ ದೇವಲೋಕವನ್ನು ಮರಳಿ ಪಡೆದನು. ಈ ವೈದಿಕ ಕತೆಯಿಂದ ರಾಜತನದ ಅಧಿಕಾರ ಅಥವಾ ರಾಜಶಕ್ತಿಯು ಪ್ರಬುದ್ಧವಾದ ಬುದ್ಧಿವಂತರು ಬಯಸಿ ಪಡೆದುದು– ಎಂಬುದು ಸ್ಪಷ್ಟವಾಗುತ್ತದೆ.

ಕ್ರೈಸ್ತರ ಹಳೆಯ ಒಡಂಬಡಿಕೆಯು ಹೇಳಿದ ರಾಜೋತ್ಪತ್ತಿಯು "ಮಹಾಭಾರತ"ದ ಹೇಳಿಕೆಗೆ ಅತ್ಯಂತ ಸಮೀಪವಾಗಿದೆ. ಬ್ರಹ್ಮನು ಭಾರತದಲ್ಲಿ ಹೇಗೆ ಮುತ್ತಜ್ಜನೋ ಯೆಹೂದಿಗಳ ದೇವನೂ ಹಾಗೇ ಅವರ ದೇವತೆಗಳ ಮುತ್ತಜ್ಜ. ಅವನಲ್ಲಿ ಯೆಹೂದಿಗಳು, ಅರಾಜಕತೆಗೆ ಹೆದರಿ, ರಾಜನನ್ನು, ದಯಪಾಲಿಸೆಂದು ಬೇಡಿದರು. ಮುತ್ತಜ್ಜನ ಯಜಮಾನಿಕೆಯ ನೇತೃತ್ವವು ರಾಜನೆಂಬ ಸಮಾಜ ನಾಯಕನ ಕಲ್ಪನೆಗೆ ಕಾರಣವಾಯಿತೆಂದೂ ಇತರ ಜನಾಂಗಗಳು ರಾಜರನ್ನಿಟ್ಟುಕೊಂಡು ಬಲಿಷ್ಠರಾಗಿ ಬಾಳುತ್ತಿದ್ದುದನ್ನು ಕಂಡು ಯೆಹೂದಿಗಳಂಥ ಜನರೂ ರಾಜ್ಯಸಂಸ್ಥೆಯನ್ನು ರಾಜನ ನೇತೃತ್ವದಲ್ಲಿ ಕಟ್ಟಿಕೊಂಡರೆಂದೂ ಹೇಳಲಾಗಿದೆ.

## ಯಾರು ಹೆಚ್ಚು?

ಶ್ರೀ ಪಿ. ಬಸುಗಳ ಪ್ರಕಾರ, "ಭಾರತದ ವೈದಿಕ ನಾಗರಿಕತೆಯಲ್ಲಿ ಮೂಲ ಜನನಾಯಕನೂ ಸೇನಾಪತಿಯೂ ಪುರೋಹಿತನೂ (ಅರ್ಚಕನೂ) ರಾಜನೇ ಆಗಿದ್ದನು; ಆದರೆ ಋಗ್ವೇದದಲ್ಲೇ ಪುರೋಹಿತ ಸಂಸ್ಥೆಯ ಪ್ರತ್ಯೇಕ ಬೆಳವಣಿಗೆ ಕಂಡುಬರುತ್ತದೆ; ರಾಜಶಕ್ತಿಯಿಂದ ಪುರೋಹಿತಶಕ್ತಿಯು ಹೇಗೆ ಯಾವಾಗ ಬೇರ್ಪಟ್ಟಿತೆಂಬುದಕ್ಕೆ ಆಧಾರ ಸಿಕ್ಕುವುದಿಲ್ಲ. ಆದರೆ ಋಗ್ವೇದದ ಮೊದಲನೆಯ ಸೂಕ್ತದಲ್ಲಿ ಅಗ್ನಿಯನ್ನು ಪುರೋಹಿತ (ಪುರಃ–ಮುಂದೆ, ಹಿತ–ಇಡಲ್ಪಟ್ಟವ) ಎಂದು ಹೇಳಿರುವುದರಿಂದ ಪುರೋಹಿತ ಸಂಸ್ಥೆಯೇ ಮೊದಲಿನದೆಂದೂ ಅದರಿಂದ ಆಮೇಲೆ ರಾಜಶಕ್ತಿಯು ಬೇರ್ಪಟ್ಟು ಪ್ರತ್ಯೇಕ ಸಂಸ್ಥೆಯಾಗಿ ಬೆಳೆಯಿತೆಂದೂ ಹೇಳುವುದೇ ಹೆಚ್ಚು ಉಚಿತವಾಗಿ ತೋರುತ್ತದೆ. ಏಕೆಂದರೆ ಬಸುಗಳಿಗೆ ತಿಳಿದಿರುವಂತೆ ಭಾರತದಲ್ಲಿ ರಾಜನು ಕ್ಷತ್ರಿಯ; ಅವನು ದೇವರಲ್ಲ, ಬ್ರಾಹ್ಮಣರು ಅವನಿಗೆ "ಪೂಜ್ಯರು"–ಬ್ರಾಹ್ಮಣರಿಗೆ ಅವನು "ಪೂಜ್ಯ"ನಲ್ಲ– ಅವರು ಅವನ ಪಾದವನ್ನು ಹಿಡಿಯರು; ಬ್ರಹ್ಮತೇಜಸ್ಸು ಕ್ಷಾತ್ರತೇಜಸ್ಸಿಗಿಂತ ಬಲವುಳ್ಳದ್ದೆಂಬ ವಿಶ್ವಾಮಿತ್ರನ ಮಾತು, "ಖಡ್ಗಕ್ಕಿಂತ ಲೇಖನಿಯೇ ಅಧಿಕ ಬಲವುಳ್ಳದ್ದು" ಎಂಬ ಗಾದೆಯನ್ನು ನೆನಪಿಗೆ ತಂದುಕೊಡುತ್ತದೆ. ಅಗ್ನಿಸೂಕ್ತವು ಅಗ್ನಿಯನ್ನು ತಂದೆಗೆ ಹೋಲಿಸಿರುವುದರಿಂದ ಮನೆಯಲ್ಲಿ ನಡೆಯುತ್ತಿದ್ದ ತಂದೆಯ ಯಜಮಾನಿಕೆಯು ರಾಜ್ಯದ ತಂದೆಯೆಂದು ತೋರಿರಬಹುದಾದ ರಾಜನ ಕಲ್ಪನೆಗೆ ಎಡೆಗೊಟ್ಟಿರುವ ಸಂಭವವೂ ಅದರಿಂದಲೇ ಸೂಚಿತವಾಗುತ್ತದೆ.

ಪ್ರಾಚೀನ ಜನಾಂಗಗಳ ದೇವರುಗಳಿಗೆ ಮನುಷ್ಯ ಸಹಜವಾದ ಹಲವಾರು ದೌರ್ಬಲ್ಯಗಳಿರುತ್ತಿದ್ದವು. ಆದುದರಿಂದ ಅವುಗಳಲ್ಲಿ ಅನೇಕ ಜನಾಂಗಗಳು ರಾಜನನ್ನು ದೇವರೆಂದು ತಿಳಿದುಕೊಳ್ಳುವುದರಲ್ಲಿ ಬಹಳ ಕಷ್ಟಪಡಬೇಕಾಗಲಿಲ್ಲ. ಆದರೆ ಭಾರತದಲ್ಲಿ ಮಾತ್ರ ರಾಜನು ದೇವರಿಗಿಂತ ಕೆಳಗಿನವ. ಉಳಿದ ಪ್ರಾಚೀನ ಜನಾಂಗಗಳ ರಾಜರಂತೆ ಈತನು Law-giver ಕಾಯದೆ ಪಾಸು ಮಾಡಬಲ್ಲವನಾಗಿರಲಿಲ್ಲ. ಕಾಯದೆಗಿಲ್ಲಿ ವೇದ–ಸ್ಮೃತಿಗಳು ಪ್ರಥಮಮೂಲ; ಅವು ಬ್ರಹ್ಮ ಶಕ್ತಿಯ ವಿವರಣೆಗೆ (Interpretation of Thinkers) ಒಳಪಟ್ಟಿದ್ದವು. ರಾಜ ಶರೀರದಲ್ಲಿ "ಇಂದ್ರ, ಅನಿಲ, ಯಮ, ಸೂರ್ಯ, ಅಗ್ನಿ, ವರುಣ, ಚಂದ್ರ ಮತ್ತು ಕುಬೇರರ ಅಂಶಗಳಿವೆ" ಎಂದಿರುವುದೂ ಅವನು ನರರೂಪದ ವಿಷ್ಣುವೆಂದಿರುವುದೂ ಅವನ ಆಜ್ಞೆಯನ್ನು ಜನರು ಉಲ್ಲಂಘಿಸಬಾರದು–ಎಂಬಿಷ್ಟೇ ಉದ್ದೇಶದಿಂದ ಹೇಳಿದ್ದೆಂಬುದು ಮನುಸ್ಮೃತಿಯಿಂದ ಸ್ಪಷ್ಟವಾಗುತ್ತದೆ:–

"So in India the King was less than a god and less, in some ways, than the Brahmins" ಎಂದು ಸಿ.ಎನ್. ಪಾರ್ಕಿನ್‌ಸನ್ ಹೇಳಿರುವುದು ಮೇಲಿನ ಸಿದ್ಧಾಂತವನ್ನು ಸಮರ್ಥಿಸುತ್ತದೆ.

ರಾಜನನ್ನು ದೇವರೇ ಎಂದು ತಿಳಿದ ಈಜಿಪ್ಟಿನ ಪ್ರಾಚೀನ ಜನರಂಥವರು ಅವನು ಸತ್ತಾಗ ದೇವರು ಹೇಗೆ ಸಾಯುತ್ತಾನೆ? ಎಂಬ ಸಂಶಯವನ್ನು ತಾಳಲಿಲ್ಲವೆ? ತಾಳಿದ್ದರೆ ಅದರ ಪರಿಹಾರಕ್ಕೆ ಅವರು ಯಾವ ಗ್ರಾಹ್ಯವಾದ ವಿವರಣೆಯನ್ನು ಹುಡುಕಿಕೊಂಡರು–ಎಂಬುದಕ್ಕೆ ಐತಿಹಾಸಿಕ ಆಧಾರ ಸಿಕ್ಕುವುದಿಲ್ಲ. "ಕಡಲುಗಳ್ಳರು ಕೂಡ ನಾವಿಕರೊಡೆಯನನ್ನು ಆರಿಸಿಕೊಳ್ಳುತ್ತಾರೆ" ಎಂದು ಬರ್ನಾಡ್ ಷಾ ಹೇಳಿದ್ದನ್ನು ಖಂಡಿಸಲು ಪಾರ್ಕಿನ್‌ಸನ್ನನು–ಹಿಂದೆ ದಕ್ಷಿಣ ಸುಡಾನಿನ ನ್ಯೂರರು ರಾಜನಿಲ್ಲದೆ (ಆಡಳಿತಗಾರನಿಲ್ಲದೆ) ಬಹುಕಾಲ ಬದುಕಿದ್ದರು–ಎಂದಿರುವುದು ಸರಿಯಾದ ಉತ್ತರವಲ್ಲ. "Might is right–ಬಲವೇ ನ್ಯಾಯ" ಎಂಬ ಕಾಡಿನ ಕಾಯಿದೆ ಪ್ರಾಣಿಗಳಿಗೂ, ಮನುಷ್ಯರಿಗೂ ಸಮಾನವಾಗಿ ಇದ್ದುದರ ಸತ್ಯವನ್ನು ಅಲ್ಲಗಳೆಯಲಾಗದುದರಿಂದ, ಯಾವ ಮುಖಂಡನೂ ಇಲ್ಲದೆ ಒಂದು ಜನಸಮೂಹ ಬಹಳ ಕಾಲ ಪ್ರಾಥಮಿಕ ವ್ಯವಸ್ಥೆಯಿಂದಾದರೂ ಬದುಕಿ ಇತ್ತು ಎಂದು ಹೇಳುವುದು ಅತ್ಯಂತ ಅಸಂಭವ. ಮುಖಂಡತನವನ್ನು ಕೆಲವರು ಅಜ್ಜನಲ್ಲಿ, ಕೆಲವರು ಅಪ್ಪನಲ್ಲಿ, ಮತ್ತೆ ಕೆಲವರು ದೇವನಲ್ಲಿ (ಅವನ ಪ್ರತಿನಿಧಿಯಾದ ಪುರೋಹಿತನಲ್ಲಿ), ಇನ್ನೂ ಕೆಲವರು ಸೇನಾಪತಿಯಲ್ಲಿ ಗುರುತಿಸಿ, ಮನ್ನಿಸಿ, ಅವನ ಅಂಕೆಗೊಳಗಾಗಿ, ಅವನ ಸಂಘಟನ–ಮಾರ್ಗದರ್ಶನಗಳ ಮೂಲಕ ತಮ್ಮನ್ನೂ ತಮ್ಮ ಆಸ್ತಿಯನ್ನೂ ಕಾಯ್ದುಕೊಳ್ಳದೆ ಬಹಳಕಾಲ ಉಳಿಯಲು ಸುತ್ತಲಿನ ಬರ್ಬರ ಜೀವಜಾತದ ನೈಸರ್ಗಿಕ ದುಷ್ಪ್ರವೃತ್ತಿ ಎಂದೂ ಬಿಡಲಾರದು. ಅಂಥ ಮುಖಂಡನನ್ನು ಗೌಡನೆನ್ನಬಹುದು. ಕಪ್ತಾನನೆನ್ನಬಹುದು, ಗುರುವೆನ್ನಬಹುದು, ಹಿರಿಯಮಣಿ ಎನ್ನಬಹುದು, ರಾಜನೆನ್ನಬಹುದು, ಮುಖ್ಯಮಂತ್ರಿ ಎನ್ನಬಹುದು– ಈ ಎಲ್ಲ ಹುದ್ದೆಗಳಿಗೂ ನೇತೃತ್ವವು ಸಾಧಾರಣ; ಅಧಿಕಾರ, ರಕ್ಷಕತ್ವವು ಸಾಮಾನ್ಯಗುಣ; ಈ ಸಾಧಾರಣವಾದ ಅಧಿಕಾರದ ದೇಶವ್ಯಾಪ್ತಿ, ಪ್ರಕರಣವ್ಯಾಪ್ತಿಗಳಿಂದಲೂ

ಇದರ ಮೂಲ ಅಂಶಗಳ ಭೇದದಿಂದಲೂ ರಾಜಾದಿ ವಿವಿಧ ಪ್ರಭುತ್ವಗಳು ರೂಪಿತವಾಗಿವೆ– ಎಂಬುದನ್ನು ರಾಜ್ಯಶಾಸ್ತ್ರದ ಅಭ್ಯಾಸಿಗಳು ಎಲ್ಲೂ ಅಲ್ಲಗಳೆದಿಲ್ಲ. ಆದುದರಿಂದ ORIGIN OF STATE ರಾಜ್ಯಶಕ್ತಿಯ ಉದಯದ ಬಗ್ಗೆ ಪ್ರಾಚೀನ ಜನಾಂಗದ ಮಾನವ ಶಾಸ್ತ್ರೀಯ ಮೂಲ ಪ್ರವೃತ್ತಿಗಳಿಗೂ ಇಂದಿನ ಜನರ ಮೂಲಪ್ರವೃತ್ತಿಗಳಿಗೂ ಜಾತಿಭೇದವಿಲ್ಲ. ಸನ್ಯಾಸಿಗಳ ಸಮುದಾಯದಲ್ಲಾದರೂ ಒಮ್ಮೆ ಮುಖಂಡನ ಅವಶ್ಯಕತೆ ಉದಯವಾಗದಿರದು. The state will wither away ರಾಜ್ಯವು (ಸರಕಾರವು) ಲಯ ಹೊಂದುವುದು ಎಂಬ "ಸೋಶಲಿಸಮ್ಮಿನ" ಹಗಲುಗನಸಿಗೂ ಪ್ರಾಚೀನ ಜನಸಮುದಾಯದಲ್ಲಿ ಎಂದಾದರೂ ಒಮ್ಮೆ ಮುಖಂಡನಿದ್ದಿದ್ದಿಲ್ಲ ಎಂಬ ಊಹೆಗೂ ಬಹಳ ವ್ಯತ್ಯಾಸವಿಲ್ಲ.



# ೨

# ರಾಜಶಕ್ತಿಯ ವಿಕಾಸ

ಕೃಷಿಕ ನಾಗರಿಕತೆಗೆ ರಾಜನು ಅವಶ್ಯಕನಾದ ಹಾಗೇ ಪಶುಪಾಲಕ ನಾಗರಿಕತೆಗೂ ರಾಜನ ಆವಶ್ಯಕತೆಯುಂಟಾಯಿತು. ಒಕ್ಕಲಿಗೆ ಧಾನ್ಯವು ಧನವಾದರೆ, ಪಶುಪಾಲನಿಗೆ ಪಶುಗಳೇ ಆಸ್ತಿ. ಅವನಿಗೆ ಮನೆ–ಮಾರುಗಳ ಸ್ಥಾಯಿತ್ವವಿದ್ದರೆ, ಇವನಿಗೆ ಶಿಬಿರ ಜೀವನದ ಸಂಚಾರಿತ್ವವಿದೆ. ಮೇವಿದ್ದಲ್ಲಿಗೆ ದನ–ಕರು–ಕುರಿ–ಆಡುಗಳನ್ನು ಅಟ್ಟಿಕೊಂಡು ಹೋಗುವ ಸಮುದಾಯಕ್ಕೆ ಲಾಭನಷ್ಟಗಳು ಅಸ್ತಿಮಿತ ಮತ್ತು ಹೆಚ್ಚು ಅನಿರೀಕ್ಷಿತ. ಕಾಲಕಾಲಕ್ಕೆ ಹೆಚ್ಚು ಮೇವಿರುವ ಹೊಸ ಹೊಸ ಸ್ಥಳಗಳನ್ನು ಅಂದಾಜು ಮಾಡಿ ಅಲ್ಲಿಗೆ ತನ್ನವರನ್ನು ಕರೆದೊಯ್ಯುವ ಮಾರ್ಗದರ್ಶಕ ಮುಖಂಡನೇ ಸಂಚಾರಿಗಳ ಅರಸ. ಕ್ರೈಸ್ತದೇವಶಾಸ್ತ್ರದಲ್ಲಿ ಅವನೇ The good shepherd ಅವಿಪಾಲ, ಕುರುಬ. ಈತನಿಗೆ ಅರಮನೆಯಿಲ್ಲ; ಪಶುಗಳ ದೊಡ್ಡ ಹಿಂಡಿನಿಂದ ಮಾತ್ರ ಇವನ ಅರಸುತನವನ್ನು ಗುರುತಿಸಬಹುದು. ಜ್ಞಾನ ವಿವೇಕಗಳೇ ಇವನ ಪರಾಕ್ರಮ. ದೊಡ್ಡ ಹಿಂಡಿನ ಒಡೆಯನು ಬೇಗನೆ ಶ್ರೀಮಂತನಾಗಬೇಕೆಂದು ವ್ಯಾಪಾರಕ್ಕಾರಂಭಿಸುವುದು ಸಹಜ; ಇಂಥವನನ್ನು ದೇವತಾಸ್ವರೂಪನೆಂದು ಇವನ ಅನುಯಾಯಿಗಳು ಭಾವಿಸಲಾರರು. ಮಧ್ಯ ಏಶಿಯದ ಅನೇಕ ಪ್ರಾಚೀನ ಸಮುದಾಯಗಳಲ್ಲಿ ಇಂಥ ರಾಜರು ಇರುತ್ತಿದ್ದರು.

## ಯುದ್ಧದ ಹುಟ್ಟು

ಸಂಚಾರಿಗಳು ಸ್ಥಾಯಿಗಳನ್ನು ಕೀಳ್ಗಳೆಯುತ್ತಾರೆ; ಮತ್ತು ಅವರ ಗುಂಪುಗಳಲ್ಲಿ ಸ್ಥಾನ ತಾರತಮ್ಯಗಳು ಅಧಿಕ; ಸಂಚಾರಿಗಳಲ್ಲಿ ಬಡತನ ಹೆಚ್ಚು; ವೇಗವಾಗಿ ತಿರುಗುವ ಒಂಟೆ ಕುದುರೆಗಳ ಸವಾರಿ ಸುಲಭ; ಸ್ಥಾಯಿಗಳಲ್ಲಿ ಶ್ರೀಮಂತಿಕೆ ಹೆಚ್ಚು. ಅವರ ಆಸ್ತಿ ಶಿಥಿಲರಕ್ಷಣೆಗೆ ಒಳಪಟ್ಟಿರುವುದು ಸಾಮಾನ್ಯ. ಆದುದರಿಂದ ಈ ಎರಡು ವರ್ಗಗಳಲ್ಲಿ ಕಲಹ, ಕದನ ಉಂಟಾದದ್ದು ಹೆಚ್ಚು, ಅಂಥ ಕದನಗಳಲ್ಲಿ ಸಂಚಾರಿಗಳಿಗೆ ಗೆದ್ದರೆ ಅತಿ ಲಾಭ. ಸೋತು ಓಡಿಹೋದರೆ ಬಹಳ ನಷ್ಟವಾಗದು; ಸ್ಥಾಯಿಗಳಿಗೆ ಗೆದ್ದರೆ ಸ್ವಲ್ಪ ನಷ್ಟ, ಸೋತರೆ ಸರ್ವನಾಶ. ಆದುದರಿಂದ ಯುದ್ಧ ಹುಟ್ಟಿದ್ದು ಬಹುಶಃ ಸಂಚಾರಿ ಜನಾಂಗಗಳಲ್ಲೇ ಮೊದಲು ಎಂದು ಊಹಿಸಲಾಗಿದೆ. ಅರಿಸ್ಟೋತಲನು (ARISTOTLE) ಮೈದಾನದಿರುಕರು

ಸಾಮಾನ್ಯವಾಗಿ ಪರಾಕ್ರಮಿಗಳು ಎಂದು ಅಭಿಪ್ರಾಯಪಟ್ಟದ್ದು ಬಹುಶಃ ಈ ಅಂಶವನ್ನು ಗಮನಿಸಿಯೇ ಇರಬೇಕು.

## ಹಲವು ವೃತ್ತಿಗಳು

ಯುದ್ಧದ ನೇತೃತ್ವವನ್ನು ರಾಜನೇ ವಹಿಸಿದಲ್ಲೆಲ್ಲಾ ರಾಜನು ಯುದ್ಧ ವೀರನೆನಿಸಿ ಜನಪ್ರಿಯತೆಯನ್ನೂ ಹೆಚ್ಚಿನ ಅಧಿಕಾರವನ್ನೂ (ಗೆದ್ದಾಗ) ಪಡೆಯುತ್ತಿದ್ದನು. ಅವನು ಅರಮನೆಯಲ್ಲೇ ಉಳಿದು ಸೇನಾಪತಿಯೊಬ್ಬನನ್ನು ಡೇವಿಡ್ಡನಂತೆ ನಿಯಮಿಸಿ ಯುದ್ಧ ಮಾಡಿಸಿದಾಗ ಅವನಿಗೆ ಗೆಲವು ಅಷ್ಟು ಆಕರ್ಷಣೆಯನ್ನು ಕೊಡಿಸುತ್ತಿದ್ದಿಲ್ಲ. ಜನರ ಐಕ್ಯಕ್ಕೆ ರಾಜನು ಸಂಕೇತ ಎನಿಸಿದ್ದು ಯುದ್ಧಗಳು ನಡೆದಾಗ; ಸಂರಕ್ಷಣೆಗಾಗಿ ಕೋಟೆಗಳನ್ನು ಕಟ್ಟಿದಾಗ, ರಾಜನ ಪ್ರಭುತ್ವವು ಯಾವಾಗಲೂ ಆಸ್ಥಾನ ದೊರೆಗಳನ್ನು (Nobles) ನಿರ್ಮಿಸಿಕೊಳ್ಳುತ್ತಿತ್ತು. ಯುದ್ಧಗಳು ಅಂಥ ದೊರೆಗಳ ಸಂಖ್ಯೆ, ಪ್ರತಿಷ್ಠೆ, ಪ್ರಭಾವಗಳನ್ನು ಹೆಚ್ಚಿಸುತ್ತಿದ್ದವು. ರಾಜಬಂಧುಗಳಲ್ಲದೆ ಇತರರೂ ಸೈನ್ಯದಲ್ಲಿ ಸರದಾರರ ಒಂದು ವರ್ಗವು ಸಾಮಾನ್ಯರಿಂದ ಭಿನ್ನವಾಗಿ ಬೆಳೆದು ನಿಲ್ಲುವಂತಾಯಿತು. ಯುದ್ಧವೀರರ ಚರಿತ್ರೆಯು ಮಹಾಕಾವ್ಯಗಳ (EPICS) ಉದಯಕ್ಕೂ ಕಾರಣವಾಯಿತು. ರಾಜನ ಜೊತೆಗೆ ವೀರ ಸರದಾರರೂ ಕೆಲಮಟ್ಟಿಗೆ (ಸಾಹಸ ಪ್ರದರ್ಶನದಿಂದ) ದೇವಾಂಶ ಸಂಭೂತರೆಂಬ ನಂಬಿಗೆ ಕ್ರಮೇಣ ಉದಯಿಸಿತು. ಅವರು ಸಾಮಾನ್ಯರಲ್ಲ ಮಾನ್ಯರು–ಎನ್ನಿಸಿದರು. ಯುದ್ಧವೀರರ ಪತ್ನಿಯರಿಗೆ ಪಾತಿವ್ರತ್ಯದ ಅಗತ್ಯವನ್ನು ತೊಡಿಸಲಾಯಿತು. ಸೆರೆಯಾಳುಗಳಿಂದ ಗುಲಾಮರನ್ನಿಟ್ಟುಕೊಳ್ಳುವುದು ರೂಢಿಯಾಯಿತು. ತೆರಕಾರತನವೂ ಯುದ್ಧದಿಂದ ಜನರ ಮೇಲೆ ಹೇರಲ್ಪಟ್ಟಿತು; ಕರವಸೂಲಿಗೆ ಲೆಕ್ಕಪತ್ರ, ಅಂದಾಜು, ಅಳತೆ, ಪುರಾವೆ, ದಾಖಲೆಗಳು ಬೇಕಾದವು. ಇದರಿಂದ ಲೆಕ್ಕಿಗರ (Accountants) ವರ್ಗ ಹುಟ್ಟಿತು. ಯುದ್ಧದ ಪೂರ್ವಯೋಜನೆಯಲ್ಲಿ ಬರುವ ಭೂಪಟಗಳ ಸಿದ್ಧತೆ, ಮಾರ್ಗಪ್ರತಿಬಂಧಗಳ ನಾಶಕ್ರಮ, ವಾಹನ ಸಜ್ಜೆ ಮುಂತಾದವುಗಳಿಗಾಗಿ ವಿಶೇಷಜ್ಞರೂ ತಾಂತ್ರಿಕರೂ ಅಗತ್ಯವಾದರು. ಗಾಯಗೊಂಡ ಪ್ರಾಣಿಗಳಿಗೂ ಯೋಧರಿಗೂ ಚಿಕಿತ್ಸೆಯನ್ನು ಒದಗಿಸಲು ವೈದ್ಯರ ವರ್ಗ ರೂಪಿತವಾಯ್ತು. ಗೆದ್ದ ಜಾಗಗಳ ಆಡಳಿತಕ್ಕೆ ನುರಿತ ಆಡಳಿತಗಾರರು ಬೇಕಾದರು. ಇದೇ ಪ್ರಕಾರ ಇನ್ನೂ ಹಲವಾರು ಬಗೆಯ ಉದ್ಯಮಿಗಳ, ತಾಂತ್ರಿಕರ, ಕಲಾಕಾರರ ಉದಯಕ್ಕೆ ಯುದ್ಧವು ಹಿಂದೆ ಕಾರಣವಾಯಿತು. ಈ ವರ್ಗಗಳ ಬೆಳವಣಿಗೆಯು ರಾಜಶಕ್ತಿಯ ವಿಸ್ತಾರವನ್ನು ತ್ವರಿತಗೊಳಿಸಿದಂತೆ ರಾಜಶಾಸನವನ್ನೂ ಜಟಿಲಗೊಳಿಸುತ್ತಾ ಹೋಯ್ತು.

ಚತುರಂಗಬಲದೊಡನೆ ರಾಜನು ಯುದ್ಧಕ್ಕೆ ಹೊರಟಾಗ ಅವನೊಡನೆ ಹೋಗುತ್ತಿದ್ದ ವಿವಿಧ ಉದ್ಯೋಗಿಗಳನ್ನು ಯಕ್ಷನಾಟಕಗಳಲ್ಲಿ ಸ್ಪಷ್ಟವಾಗಿ ಕೇಳಬಹುದು. ಮಾವುತ, ಮಲ್ಲ, ಬಂಡಿಯವ, ಅಭಿಚರ, ಜಾಂಘಿಕ, ಪುರೋಗ, ಮಂದರ, ಜಂಘಾಲ, ಜೈತ್ರ, ಅಭ್ಯಮಿತ್ರ, ಊರ್ಜಸ್ವ, ಅನುಕಾಮೀನ ಅತ್ಯಂತೀನ, ವೈದ್ಯ, ವಾದಕ, ವೈತಾಳಿಕ, ಮಾಗಧ, ಪಾಠಕ, ಗಣಕ, ಲೇಖಕ, ಮುಂತಾದವರು. ಶಸ್ತ್ರ, ಕವಚ–ವಾಹನಗಳ ನಿರ್ಮಾಣಕ್ಕಾಗಿ ವಿಜ್ಞಾನ–ಕಲೆ–ಹಿಂದಿಗಿಂತ ಹೆಚ್ಚು ಪ್ರಮಾಣಗಳು ದೊರಕುತ್ತವೆ. ರಾಜಪ್ರಭುತ್ವದಲ್ಲಿ ಯುದ್ಧವು

ಹಿಂದೆ ನಾಗರಿಕತೆಯ ವಿಸ್ತರಣಕ್ಕೆ ಕಾರಣವಾಯಿತು; ಹಾಗೂ ವಿನಾಶಕ್ಕೆ ಕಾರಣವಾದದ್ದೂ ಉಂಟು.

## ಮೊದಲ ಯುದ್ಧ

ಕ್ರಿ.ಪೂ. ೨೭೫೦ರಲ್ಲಿ ಅಗದೆಯ ಸರಗೋನನು ಸುಮೇರಿಯವನ್ನು ಗೆಲ್ಲಲು ಮಾಡಿದ ರಥ ಯುದ್ಧವು ಅಭಿಲಿಖಿತವಾದ ಮೊದಲನೆಯ ಜಗತ್ ಪ್ರಸಿದ್ಧ ಯುದ್ಧ. ಕ್ರಿ.ಪೂ. ೩–೩೧/೨ ಸಾವಿರ ವರ್ಷಗಳ ಹಿಂದೆಯೇ ಸುಮೇರಿಯನ್ನರು (Cuneiform) ಕೋನಲಿಪಿಯ ಮೂಲಕ ಬರೆಯುವುದನ್ನು ಕಲಿತಿದ್ದರು. ಚೀನದ ಬರವಣಿಗೆಯ ಆರಂಭಕಾಲ ಸುಮಾರು ಕ್ರಿ.ಪೂ. ೨೦೦೦; ಚೀನೀಯರದು ಚಿತ್ರಲಿಪಿ (Pictography). ಆಗ ಸಿರಿಯದಲ್ಲಿ ೨೨ ವ್ಯಂಜನಗಳ ವರ್ಣಮಾಲೆ ರೂಪಿತವಾಯ್ತು; ಫಿನಿಷಿಯನ್, ಗ್ರೀಕ್ ಮತ್ತು ರೋಮನ್ ವರ್ಣಮಾಲೆಗಳು ಅದರ ಮುಂದಿನ ವಿಕಾಸ ರೂಪಗಳು.

ಆಡಳಿತ, ಓದುಬರಹ ಮತ್ತು ಗುಮಾಸ್ತವರ್ಗಗಳು ಪರಸ್ಪರ ನಿಕಟವರ್ತಿಗಳಾಗಿ ರಾಜಪ್ರಭುತ್ವದಲ್ಲಿ ಹುಟ್ಟಿ ಬೆಳೆದಂಥವು. ಈ ಅಂಶವು ಕೃಷಿ ಮತ್ತು ದನಗಾಹಿ (ಕುರಿಗಾಹಿ) ನಾಗರಿಕತೆಗಳೆರಡಕ್ಕೂ ಸಾಧಾರಣ. ರಾಜನ ಆಸ್ಥಾನ ದೊರೆಗಳ ವರ್ಗದ ಜೊತೆಗೆ ಲೇಖನ ದೊರೆಗಳ (ನೌಕರರ, ಗುಮಾಸ್ತರ ಕಾರಕೂನರ, ಪ್ರಾಧಿಕಾರಿಗಳ ಪ್ರಶಾಸಕರ ವರ್ಗವೂ ಸಹಜವಾಗಿ ತಲೆಯೆತ್ತಿತು.) ರಾಜಪ್ರಭುತ್ವವು ಕ್ಷಯಹೊಂದಿ ವಿರಾಜಪ್ರಭುತ್ವ ಬಂದ ಈಗಲೂ ಲೇಖನ ದೊರೆತನವೊಂದು (Secretariat) ಉಳಿದು ಬೆಳೆಯುತ್ತಿರುವುದು ಎಲ್ಲರಿಗೂ ಕಾಣಿಸುವ ಸಂಗತಿ.

ಆರ್ಯ ಪೂರ್ವ ಕಾಲೀನ ಕಂದಮಿಳರಲ್ಲಿ "ಕೋ" ಎಂದರೆ "ದೇವ" ಮತ್ತು "ದೊರೆ" ಎಂಬ ಎರಡೂ ಅರ್ಥಗಳಾಗುತ್ತಿದ್ದವು. ಕೋಟೆ ಕಟ್ಟಿಕೊಂಡಿದ್ದವನು "ಕೋ". ದೇವನಿಗೆ ಈ ಜಗತ್ತೇ ಕೋಟೆ. ದೇವಾಲಯ (ಕೋಯಿಲ್) ಅದರ ಪ್ರತೀಕ. ಹಾಗೆ ದೊರೆಯು ನಾಡಿಗರಿಗೆ ದೇವ, ಸ್ವಾಮಿ, ಒಡೆಯ; ಅವನ ಕೋಟೆ ದೇವಾಲಯವನ್ನು ಪ್ರತಿನಿಧಿಸುತ್ತದೆ.

ಇಂದಿನ ಭಾರತ ಪ್ರದೇಶದೊಳಗೆ ಸ್ಪಷ್ಟವಾದ ಆರ್ಯಾಗಮನದ ಕಾಲವು ಸುಮಾರು ಕ್ರಿ.ಪೂ. ೩೦೦೦. ಅದರ ಹಿಂದಿನದು ಸಿಂಧು ಕೊಳ್ಳದ ಸಂಮಿಶ್ರ ನಾಗರಿಕತೆಯ ಕಾಲ; ಕಟ್ಟಳೆಗಳು ಅಂದಿನ ಕಂದಮಿಳರ ಹಾಗೂ ಆರ್ಯರ ಸಂಮಿಶ್ರ ಸಮಾಜದ ಕಾಯಿದೆಗಳು.

ಋಗ್ವೇದ ಕಾಲದ ವೈದಿಕ ಸಂಸ್ಕೃತಿಯಲ್ಲಿ "ರಾಜನ್" ಎಂದರೆ "ದೊರೆ", "ಸಾರ್ವಭೌಮ", ರಾಜಪುತ್ರ" ಅಥವಾ "ಪ್ರಮುಖ" ಎಂಬ ಅರ್ಥವಿತ್ತು. ಆಮೇಲೆ ಅದಕ್ಕೆ "ಸೈನಿಕ ಜಾತಿಯವ (ಕ್ಷತ್ರಿಯ)" ಎಂಬ ಅರ್ಥವು ಆಶ್ವಲಾಯನ ಶ್ರೌತಸೂತ್ರದ ಕಾಲದಲ್ಲಿ ರೂಢವಾಯಿತು. ಮಹಾಭಾರತವು ಯುಧಿಷ್ಠಿರನನ್ನು "ರಾಜ"ನೆಂದಿತು. ರಾಜನೆಂದರೆ ಸರಕಾರ, "ಮಾರ್ಗದರ್ಶನ" ಎಂಬ ಅರ್ಥಗಳೂ ಋಗ್ವೇದದ ೧೦ನೆಯ ಮಂಡಲದ ಅವಧಿಯಲ್ಲಿ ರೂಢಿಯಲ್ಲಿದ್ದವು. "ಕ್ಷತ್ರ" ಎಂದರೆ "ಪ್ರಭುತ್ವ", "ಶಕ್ತಿ"

"ಶ್ರೇಷ್ಠತೆ" ಎಂಬ ಅರ್ಥಗಳು ಋಗ್ವೇದ ಕಾಲೀನ: "ನಾರ್ಡಿಕ–ಆರ್ಯನ್ನರು" ಸಂಚಾರಿ ಪಶುಪಾಲಕರಾಗಿದ್ದರೆಂಬುದು ಐತಿಹಾಸಿಕರ ಊಹೆಯಾಗಿರುವುದರಿಂದ ಅವರಿಗಿಂತ ಹಿಂದೆ ಭಾರತದಲ್ಲಿದ್ದ ಕೃಷಿಕ ನಾಗರಿಕತೆಯ ಜನರನ್ನು ಅವರು ಸುಲಭವಾಗಿ ಸೋಲಿಸಿರಬಹುದಾಗಿದೆ. ಅವರ ಇಂದ್ರನು "ದೇವ" ಮತ್ತು "ರಾಜ"; ಅದರಲ್ಲೂ ಸ್ವತಃ ಯುದ್ಧ ಮಾಡುವ ನೇತೃ. ಅಗ್ನಿಯು ಯಜ್ಞದೇವನಾದ ಪುರೋಹಿತ. ಅವನು ಮೊದಲು ರಾಜಾಧಿಕಾರವನ್ನು ಚಲಾಯಿಸಿರಬಹುದಾದರೂ ಅನಂತರ ಅವನು ಇಂದ್ರನ ಅನುಯಾಯಿ. ಇಂದ್ರನು "ಬ್ರಾಹ್ಮ" ವೃತ್ತಿಯಲ್ಲಿ ಮೊದಲು ಇದ್ದಿರಬಹುದಾದರೂ ಆಮೇಲೆ ಕ್ಷಾತ್ರ" (Military) ವೃತ್ತಿಗೇ ಅವನು ಹೆಸರಾದನು. ರಾಜತ್ವದ ಕಲ್ಪನೆಯ ೨ನೆಯ ಮಜಲಿನ ವಿಕಾಸದಲ್ಲಿ ರಾಜರು ತಮ್ಮ ಅಧಿಕಾರ ದೈವದತ್ತ (Divine Right of Kingship) ಎಂದು ಘೋಷಿಸಿದ್ದು ಯೂರೋಪಿನ ಅನೇಕ ದೇಶಗಳಲ್ಲಿ ಕಂಡುಬಂದಿದೆ.

ಅ) ರಾಜಪ್ರಭುತ್ವವು ದೇವರ ಆಜ್ಞೆಯಿಂದ ರೂಢವಾದ ಸಂಸ್ಥೆ.

ಬ) ಅರಸರ ಆನುವಂಶಿಕ ವಾರಸುದಾರಿಕೆಯು ಯಾವ ಕಾಲಕ್ಕೂ ನಿರ್ನಾಮವಾಗತಕ್ಕದ್ದಲ್ಲ.

ಕ) ರಾಜರು ದೇವರಿಗೆ ಮಾತ್ರ ಜವಾಬುದಾರರು.

ಡ) ಪ್ರತಿಭಟಿಸದೆ ಯಾವಾಗಲೂ ರಾಜಾಜ್ಞೆಯಂತೆ ನಡೆದುಕೊಂಡಿರುವುದು ಪ್ರಜೆಗಳ ಧರ್ಮ–ಎಂಬಿವು ದೈವಿಕ ರಾಜಾಧಿಕಾರದ ಚತುಃಸೂತ್ರಿ.

ಇದು ಸ್ಪಷ್ಟವಾಗಿ ಮೊದಲು ಆವಿರ್ಭೂತವಾದದ್ದು ಬ್ರಿಟನ್ನಿನಲ್ಲಿ–ಕ್ರಿ.ಶ. ೧೦೮೦ ಮತ್ತು ೧೧೧೦ರ ನಡುವೆ. ಈ ತತ್ವದ ಪ್ರಚಾರಕನು ಯಾರ್ಕಿನ ಆರ್ಚ ಬಿಷಪ್ಪನ ಮನೆಯಲ್ಲಿ ಇರುತ್ತಿದ್ದನು.

## ನಿರಂಕುಶತ್ವ

ಬುದ್ಧನ ಕಾಲದ ಅನಂತರ ಭಾರತದಲ್ಲಿ ರಾಜರ ದೈವಾಂಶ ಸಂಭವದ ಉಲ್ಲೇಖ ಬರುತ್ತದೆ–ಮಹಾಭಾರತ ಮತ್ತು ಮನುಸ್ಮೃತಿಗಳಲ್ಲಿ. ಅದರ ಪ್ರಕಾರವು ಮೇಲಿನ ನಾಲ್ಕರಲ್ಲಿ ಮೊದಲನೆಯ ಸೂತ್ರವನ್ನು ಸಂಪೂರ್ಣವಾಗಿ ಆಧರಿಸಿದ್ದು; ಆದರೆ ಉಳಿದ ಮೂರು ಸೂತ್ರಗಳನ್ನು ನಿರಪವಾದವಾಗಿ ಒಪ್ಪಿಕೊಳ್ಳುವುದಿಲ್ಲ. ಪರಸ್ಪರ ವಿರುದ್ಧವೆನ್ನಿಸಬಹುದಾದ "ಸಾಂಕುಶ ರಾಜಪ್ರಭುತ್ವವನ್ನಲ್ಲದೆ ನಿರಂಕುಶ ರಾಜಪ್ರಭುತ್ವವನ್ನು ನಮ್ಮ ರಾಜಧರ್ಮಶಾಸ್ತ್ರಗಳು ಹೇಳಿಲ್ಲ. ಆನುವಂಶಿಕತೆಯ ಪ್ರಾರಂಭವು ಆಯ್ಕೆಯಿಂದ ಮತ್ತು ಆಯ್ಕೆಯು ಆಪದ್ಧರ್ಮ ಎಂಬುದು ಸಿದ್ಧಾಂತ. ಆದರೆ ವ್ಯಾವಹಾರಿಕವಾಗಿ ಕೆಲ ಉದ್ಧಟರಾಜರು ಸರ್ವಾಧಿಕಾರಿಗಳಂತೆ ವರ್ತಿಸಿದ್ದರೆ ಆಶ್ಚರ್ಯವಲ್ಲ. ಪ್ರಜಾಪ್ರಭುತ್ವದಲ್ಲಿಯೂ ಉದ್ಧಟ ಉಚ್ಚಾಧಿಕಾರಿ ನಿರಂಕುಶ ಪ್ರಭುವಾದ ಉದಾಹರಣೆಗಳಿಲ್ಲವೆ? ಭಾರತದ ರಾಜರು ಧರ್ಮಶಾಸ್ತ್ರದಲ್ಲಿ ಹೇಳಿದ ಕಾಯಿದೆಗಳನ್ನು ಜಾರಿಮಾಡಬೇಕಾಗಿತ್ತಲ್ಲದೆ, ಸ್ವತಃ ಕಾಯಿದೆ ಪಾಸುಮಾಡುವ ಹಕ್ಕು ಅವರಿಗೆ ಇರಲಿಲ್ಲ. ನಿರಂಕುಶನಾದ ರಾಜ ಕೂಡ ರಾಜಾಜ್ಞೆಯನ್ನಷ್ಟೇ ತನಗೆ ಬೇಕಾದಾಗ

ಹೊರಡಿಸಬಹುದಾಗಿತ್ತು. ರಾಜಾಜ್ಞೆಯು ಹೆಚ್ಚೆಂದರೆ ಒಬ್ಬ ರಾಜನ ಆಳ್ವಿಕೆಯ ಅವಧಿಗಷ್ಟೇ ಪರಿಸೀಮಿತವಾಗಿರುತ್ತಿತ್ತು. ಪ್ರಜೆಗಳ ಸಂರಕ್ಷಣೆಯ ಹೊಣೆಗೆ ಪ್ರತಿಯಾಗಿ ರಾಜರು ಕರ ಕಂದಾಯಗಳನ್ನು ಹೇರಲು ಹಕ್ಕುಳ್ಳವರಾಗಿದ್ದರು ಎಂದು ಧರ್ಮಶಾಸ್ತ್ರಗಳಿಂದ ತಿಳಿದುಬರುತ್ತದೆ. ಪ್ರಜೆಗಳ ಆಜ್ಞಾಪಾಲನೆಯು ನಾಲ್ಕು ಸೂತ್ರಗಳನ್ನು ಅವಲಂಬಿಸಿತ್ತು: ೧) ದೇವತೆಗಳ ಅಂಶವು ರಾಜರಲ್ಲಿ ಇದ್ದದ್ದು; ೨) ವಿತ್ತ, ಜೀವಿತ, ಸ್ವಾತಂತ್ರ್ಯಗಳನ್ನು ಸಂರಕ್ಷಿಸಿಕೊಡುವ ಪ್ರಯೋಜನ; ೩) ಅವನು ದಂಡಿಸಿಯಾನು ಎಂಬ ಭಯ; ೪) ಮತ್ತು ರಾಜನೂ ಪ್ರಜೆಗಳೂ ಅನಾದಿ ಕಾಲದಿಂದ ರಾಜ್ಯವೆಂಬ ಸಂಸ್ಥೆಯ ಅಂಗಗಳು ಎಂಬ ಪರಸ್ಪರ ಒಡಂಬಡಿಕೆ–ರಾಜ ಪ್ರಜೆಗಳ ಪರಸ್ಪರ ಅವಲಂಬನದಲ್ಲಿ ಶ್ರದ್ಧೆ ಇಬ್ಬಣಗಳಲ್ಲೂ ಇರುವುದು. ರಾಜ್ಯವು ಸಪ್ತ ಅಂಗಗಳಿಂದ ರೂಪಿತವಾದದ್ದು: ೧) ರಾಜ್ಯ, ೨) ಮುಖ್ಯಮಂತ್ರಿ, ೩) ರಾಜನ ನಂಬಿಗಸ್ಥರಾದ ಇತರ ಮಿತ್ರರಾಜರ ಅನುಕೂಲ ಧೋರಣ, (೪) ಸಮೃದ್ಧವಾದ ಕೋಶ (Financial Adequacy), ೫) ಪ್ರಜೆಗಳ ಸಹಕಾರ. (೬) ಕೋಟೆಕೊತ್ತಲಗಳಿಂದ ಸುಭದ್ರವಾದ ರಾಜಧಾನಿ ಮತ್ತು (೭) ಬಲಿಷ್ಠವಾದ ಸೈನ್ಯ:– ಈ ಏಳು ಅಂಗಗಳಲ್ಲಿ ಎಲ್ಲವುಗಳಿಗೂ ಸಮಾನ ಪ್ರಾಧಾನ್ಯವಿದೆ; ಪ್ರತಿಯೊಂದು ಅಂಗವೂ ಇನ್ನೊಂದರಷ್ಟೇ ಅನಿವಾರ್ಯ, ಅಪರಿಹಾರ್ಯ; ಒಂದು ಅಂಗ ನ್ಯೂನವಾದರೂ ರಾಜ್ಯದ ರಾಜ್ಯತ್ವವು ಚ್ಯುತಿ ಹೊಂದುತ್ತದೆ. ಒಂದು ಅಸಮರ್ಪಕವೆನ್ನಿಸಿದರೂ ರಾಜ್ಯರಥ ಕುಂಟುತ್ತ ಸಾಗುವ ಸ್ಥಿತಿಯುಂಟಾಗುತ್ತದೆ ಎಂಬುದು ಮನು, ಕೌಟಿಲ್ಯ ಮುಂತಾದ ರಾಜ್ಯಶಾಸ್ತ್ರಜ್ಞರ ಸಿದ್ಧಾಂತಸಾರ; ಆದುದರಿಂದ ರಾಜಕೀಯ ಜೀವನದಲ್ಲಿ ರಾಜನ ಅಸ್ತಿತ್ವದ ಪ್ರಾಮುಖ್ಯವು ೭ನೆಯ ಒಂದರಷ್ಟು.

"ಅತ್ಯಂತ ಕಡಿಮೆ ಕ್ಷೇತ್ರ ಪರಿಮಿತಿಯನ್ನು ತನ್ನ ಆಡಳಿತ ಕಕ್ಷೆಯಲ್ಲಿಟ್ಟುಕೊಳ್ಳುವ ಸರಕಾರವು ಅತ್ಯುತ್ತಮವಾಗಿ ರಾಜ್ಯಭಾರ ನಡೆಸುವ ಸರಕಾರ" ಎಂಬಂತಹ ನಂಬಿಗೆ ಭಾರತದ ರಾಜಪ್ರಭುತ್ವಕ್ಕಿತ್ತು ಎಂಬುದಕ್ಕೆ ಕ್ರಿಸ್ತಶಕದ ಆದಿಕಾಲದ ಅರಸೊತ್ತಿಗೆಯಲ್ಲಿ ಸಹ ಗ್ರಾಮ, ನಗರ, ಪಂಚಾಯತಗಳಿಂದ ವ್ಯಾಪಕವಾದ ಆಡಳಿತಾಧಿಕಾರವೇ ಸಾಕ್ಷಿ. ಆದರೆ ರಾಜನ ಮತ್ತು ಅವನ ಅಧಿಕಾರಿಗಳ ಹೊಣೆ ಏಳು ಅಂಗಗಳಲ್ಲಿ ಉಳಿದ ಎಲ್ಲವುಗಳಿಗಿಂತಲೂ ಅತ್ಯಧಿಕ ಎಂಬುದನ್ನು ಮನು, ವ್ಯಾಸರು ಒತ್ತಿ ಒತ್ತಿ ಹೇಳಿದ್ದಾರೆ. ಕದ್ದುಕೊಂಡು ಹೋದ ಮಾಲು ಪ್ರಜೆಗೆ ರಾಜಪುರುಷರ ಪ್ರಯತ್ನದಿಂದ ಸಿಕ್ಕದೆ ಹೋದರೆ ಆ ಕಳ್ಳತನದ ಶಾಪವು ರಾಜನಿಗೆ ತಟ್ಟುತ್ತದೆ; ರಾಜನು (ಸರಕಾರವು) ಕಳೆದುಕೊಂಡ ಪ್ರಜೆಗೆ ನಷ್ಟ ಭರ್ತಿಮಾಡಿಕೊಡಬೇಕು ಎಂಬುದು ಮನುಮತ; ರಾಜಧರ್ಮವು ಇತರ ಎಲ್ಲ ಧರ್ಮಗಳ ಆಚರಣೆ ಸರಿಯಾಗಿ ಸರ್ವತ್ರ ಸಾಗುವಂತೆ ನೋಡಿಕೊಳ್ಳುವುದರಲ್ಲೇ ಸಫಲತೆಯನ್ನು ಕಾಣಬಲ್ಲದು ಎಂಬುದು ವ್ಯಾಸ, ಕೌಟಿಲ್ಯರ ನಿರ್ಣಯಸಾರ.

ಸಾಮಾನ್ಯವಾಗಿ ಕ್ರಿ.ಶ. ೭ನೆಯ ಶತಮಾನದ ಅನಂತರ ಭಾರತದ ಇತಿಹಾಸದಲ್ಲಿ ಶಾಸ್ತ್ರೀಯ ರಾಜಪ್ರಭುತ್ವವು ಸರ್ವತ್ರ ಸರಿಯಾಗಿ ವ್ಯವಹಾರದಲ್ಲಿ ಇತ್ತು ಎಂದು ಹೇಳಲು ಸಾಧ್ಯವಿಲ್ಲ. ವಿಜಯನಗರದ ಕೃಷ್ಣದೇವರಾಯ, ಶಿವಾಜಿ ಮತ್ತು ಅವರ ಹಿಂದೆ ದಕ್ಷಿಣ

ಭಾರತದಲ್ಲಿ ಜನಪ್ರಿಯರಾದ ಕೆಲ ಹಿರಿಯ ಮನೆತನಗಳ ದೊರೆಗಳು ಶಾಸ್ತ್ರೀಯ ಸಮರ್ಪಕತೆಯನ್ನು ಸಾಂದರ್ಭಿಕವಾಗಿ ಶಕ್ಯವಿದ್ದಷ್ಟು ಸಾಧಿಸಿದವರು ಎಂದು ಹೇಳಬಹುದು. ಬ್ರಿಟಿಷ್ ಯುಗದಲ್ಲಿ ಆರ್ನೂರಕ್ಕೂ ಹೆಚ್ಚಾಗಿದ್ದ ಸಂಸ್ಥಾನಿಕರು ಸ್ವದೋಷ ಪರದೋಷಗಳ ದೆಸೆಯಿಂದ ರಾಜಪ್ರಭುತ್ವದ ಅತ್ಯಂತ ಕನಿಷ್ಠ ಉದಾಹರಣೆಗಳನ್ನಿತ್ತರು ಎಂಬದು ಲೋಕಪ್ರಸಿದ್ಧವಾಯಿತು.



## ೩

# ಭಾರತದಲ್ಲಿ ರಾಜಶಕ್ತಿಯ ವಿಕಾಸದ ೨ನೆಯ ಹೆಜ್ಜೆ

ಭಾರತದಲ್ಲಿ ಬ್ರಹ್ಮಧರ್ಮಾಧೀನವಾಗಿದ್ದ ರಾಜ್ಯಪ್ರಭುತ್ವವು ಮತಧರ್ಮಗಳ ಮೇಲೆ ಪ್ರಭುವಾಗಲಾರಂಭಿಸಿದ್ದು ಬೌದ್ಧ, ಜೈನ ಮತಗಳು ಉದಯಿಸಿದಾಗ; ರಾಜನು ತಾನೇ ಸರ್ಕಾರ ಎಂದು ಸ್ವಾಧಿಕಾರವನ್ನು ಚಲಾಯಿಸಲು ತೊಡಗಿದ್ದು ಕ್ರಿ.ಪೂ. ೪೦೦ರಲ್ಲಿ ಎನ್ನಬಹುದು. ಕ್ರಿ.ಪೂ.೪೦೦ರಿಂದ ಕ್ರಿ.ಶ.೪೦೦ರ ನಡುವಿನ ಅವಧಿಯು ಭಾರತದ (Heroic Age) ವೀರಯುಗ, ಸಾಂಸ್ಕೃತಿಕ ದೃಷ್ಟಿಯಿಂದ ಶೃಂಗಾರ ಸಾಹಸಯುಗ (Romantic Age) ಮತ್ತು ಕಾವ್ಯದೃಷ್ಟಿಯಿಂದ ಅಭಿಜಾತಯುಗ (Classical Age).

ಮೌರ್ಯ ಸಾಮ್ರಾಜ್ಯವು ಕ್ರಿ.ಪೂ. ೪ನೆಯ ಶತಮಾನದಲ್ಲಿ ಸ್ಥಾಪಿತವಾಯಿತು. ಅದು ಭಾರತದ ಇತಿಹಾಸ ಕಾಲದ ಪ್ರಥಮ ಸಾಮ್ರಾಜ್ಯ. ಉತ್ತರ ಭಾರತದ ರಾಜ್ಯಗಳ ಒಳಜಗಳ ಆ ಸಾಮ್ರಾಜ್ಯದ ಉತ್ಪತ್ತಿಗೆ ಕಾರಣವಾಯಿತು. ಅದರ ಸಂಸ್ಥಾಪಕನಾದ ಚಂದ್ರಗುಪ್ತಮೌರ್ಯನು ಜೈನಾನುಯಾಯಿ; ಅದರ ಪ್ರಸಿದ್ಧ ಚಕ್ರವರ್ತಿಯಾದ ಅಶೋಕನು ಬೌದ್ಧಮತಾನುಯಾಯಿ. ಹಿಂದು, ಜೈನ, ಬೌದ್ಧ ಮತಗಳ ಅನುಯಾಯಿಗಳು ಪರಸ್ಪರ ಸಹಿಷ್ಣುಗಳಾಗಿ ಬಾಳುವುದು ಅವಶ್ಯಕವೆಂದು ತೋರಿದ್ದರಿಂದ ಅಶೋಕ ಚಕ್ರವರ್ತಿಯು ರಾಜಕೀಯ ಅಧಿಕಾರದ ಪರಮಾವಧಿಯನ್ನು ವಹಿಸಿಕೊಂಡನು. ಆದರೂ ಅವನ ಆಡಳಿತವನ್ನು ನಿರಂಕುಶ ಪ್ರಭುತ್ವವೆನ್ನಲು ಸಾಧ್ಯವಾಗದು. ಏಕೆಂದರೆ ಪರಮತ ದ್ವೇಷದ ವಿರುದ್ಧವಾಗಿ ಅವನ ಆಜ್ಞೆಯಿತ್ತಲ್ಲದೆ, ಅವರವರ ಪಾರಂಪರಿಕ ಧರ್ಮಶಾಸ್ತ್ರಗಳ ವಿರುದ್ಧವಾಗಿ ಅಲ್ಲ. ಆಯಾ ಮತ-ಜಾತಿಗಳ ಧರ್ಮಶಾಸ್ತ್ರಗಳ (Law Books) ವಿಧಿ-ನಿಷೇಧ ನೀತಿಗಳಂತೆಯೇ ಅವುಗಳ ಅನುಯಾಯಿಗಳು ನಡೆದುಕೊಳ್ಳಬೇಕಾಗಿತ್ತು. ಆದರೂ ಹಿಂದಿನ ಅರಸರಿಗಿಲ್ಲವಾಗಿದ್ದ ಮತಾತೀತ ಅಥವಾ ಮತೋತ್ತರ ಅಧಿಕಾರವು ಅವನಲ್ಲಿ ಇದ್ದುದರಿಂದ ಅವನದು ಅವರಿಗಿಂತ ಹೆಚ್ಚು ಅಧಿಕಾರವನ್ನುಳ್ಳ ಪ್ರಭುತ್ವವೆನ್ನಿಸಿತು.

ಹಿಂದುಮತ ರಾಜಪ್ರಭುತ್ವದ ಈ ಅತಿಶಯವನ್ನು ಸ್ವೀಕರಿಸಿತು. ಕೌಟಿಲ್ಯನ ಅರ್ಥಶಾಸ್ತ್ರವು ಈ ಅಂಶವನ್ನು ಒಳಗೊಂಡಿದೆ. ಕಾಳಿದಾಸನು ತನ್ನ ರಘುವಂಶವೆಂಬ ಮಹಾಕಾವ್ಯದಲ್ಲಿ ಪ್ರಜೆಗಳನ್ನು ವಿನೀತರನ್ನಾಗಿ ಇಡುವ ಆಳಿಕೆ ದಿಲೀಪನದಾಗಿತ್ತು ಎಂದಿದ್ದಾನೆ. ಕೇವಲ ಆರ್ಥಿಕ ಸಾಮಾಜಿಕ ಸಂಬಂಧಗಳನ್ನೊಳಗೊಂಡ ಆಧುನಿಕ ಆಳಿಕೆ ಇದರಿಂದ ಪಾಠ

ಕಲಿಯಬೇಕಾಗಿದೆ. ಅದರಲ್ಲೂ ಹರತಾಳ, ಮುಷ್ಕರ, ಪಕ್ಷಪಾತ ಧೋರಣೆಗಳು ಜಾತಿ–ಮತ ಕೇಂದ್ರೀಕೃತವಾದ ಪ್ರಚ್ಛನ್ನ ಉದ್ದೇಶಗಳಿಂದ ಏಳುತ್ತಿರುವ ಇಂದಿನ ಹಲಕೆಲ ಪ್ರಾಂತ ರಾಜ್ಯಗಳಲ್ಲಿ ಮಂತ್ರಿಗಳು ಕೂಡ ಶುದ್ಧವಾದ ಲೌಕಿಕ ದೃಷ್ಟಿಯುಳ್ಳವರಲ್ಲವೆನ್ನಿಸಿರುವಾಗ, ಕೇಂದ್ರ ಸರಕಾರವು ಸಾರ್ವನೀತಿಯ ನಿಯಮಗಳನ್ನು ಸರ್ವತ್ರ ಹೇರುವ ಕೆಲಸವನ್ನು ಕೈಗೆ ತೆಗೆದುಕೊಳ್ಳದಿರುವುದು ಭ್ರಷ್ಟಾಚಾರಕ್ಕೆ ಪುಷ್ಟಿ ಕೊಟ್ಟಂತಾಗದೆ? ಎಂಬುದು ವಿಚಾರ ಮಾಡತಕ್ಕ ವಿಷಯ.

ಅರ್ಥಶಾಸ್ತ್ರದ ಪ್ರಕಾರ ಮತ, ವ್ಯವಹಾರ, ಮಹಾತ್ಮರ ಚಾರಿತ್ರ, ರಾಜಶಾಸನಗಳು ಕಾಯಿದೆಯ ಆಕರಗಳು; ಈ ಆಕರಗಳಲ್ಲಿ ಯಾವುದಾದರೊಂದು ವಿಷಯದ ಬಗ್ಗೆ ಭಿನ್ನಾಭಿಪ್ರಾಯ ಉಂಟಾದಾಗ ಮತದಂಡವೇ ಪರಮ ಮಾನದಂಡ. ಆದರೆ ಧರ್ಮಗ್ರಾಹ್ಯವೆನ್ನಿಸಿಕೊಂಡ ಒಂದು ಕಾರ್ಯವು ನ್ಯಾಯ ವಿರುದ್ಧವೆನ್ನಿಸಿದರೆ ಆಗ ನ್ಯಾಯದ ತೀರ್ಮಾನಕ್ಕೆ ಧಾರ್ಮಿಕತರ್ಕವು ಒಳಪಡಬೇಕಾಗುತ್ತಿತ್ತು. ನ್ಯಾಯಾನ್ಯಾಯ ವಿವೇಕವು ರಾಜಾಧೀನ. ರಾಜನು ಶಾಸ್ತ್ರಜ್ಞನಾಗಿರಬೇಕಾಗಿತ್ತು. ಅಶೋಕನ ಕಾಲಾನಂತರ ಹಿಂದು, ಬೌದ್ಧ ಧರ್ಮೀಯರಲ್ಲಿ ಸ್ಪರ್ಧೆಯುಂಟಾಯಿತು. ಆಳರಸರು ತಮತಮಗೆ ಬೇಕಾದ ಮತೀಯ ಮುಖಂಡರನ್ನು ಎತ್ತಿ ಹಿಡಿಯಲಾರಂಭಿಸಿದರು. ಆ ಮೂಲಕ ಅವರ ಅಧಿಕಾರ ಹೆಚ್ಚಾಯಿತು. ಅವರು ದೇವರು ಕಳಿಸಿದ ಧರ್ಮರಕ್ಷಕರೆಂದು ಆಯಾ ಮತದವರು ಅಲ್ಲಲ್ಲಿ ತಿಳಿದುಕೊಳ್ಳಲಾರಂಭಿಸಿದರು. ಈ ಪರಿಸ್ಥಿತಿಯಲ್ಲೂ ವಿಧರ್ಮೀಯರಿಗೆ ಅನ್ಯಾಯವಾಗದಿರಲು ಸ್ಥಳೀಯ ಸಂಪ್ರದಾಯಗಳನ್ನು ಎಲ್ಲ ರಾಜರೂ ಮನ್ನಿಸುವ ಪದ್ಧತಿಯನ್ನು ಇಟ್ಟುಕೊಂಡದ್ದೇ ಕಾರಣ. ಅದರ ಫಲವಾಗಿ ಕಾಯಿದೆಯು ರಾಜಕೀಯ, ಸಾಮಾಜಿಕ ಎಂಬ ಎರಡು ಮುಖಗಳಿಂದ ಹೆಚ್ಚು ಹೆಚ್ಚು ಲೌಕಿಕ ಸ್ವರೂಪವನ್ನು ತಾಳುತ್ತಾ ಹೋಯಿತು. ಜಮೀನುದಾರಿಕೆ ಅದರ ಆಧಾರವಾಯಿತು. ಆದರೆ ಇದನ್ನು (Feudal Federalism) ಜಮೀನುದಾರ (ಸರಂಜಾಮಿ) ಸಂಯುಕ್ತ ರಾಜ್ಯ ಪದ್ಧತಿ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಅಂದಿನ ಸಮಾಜವು ಜಾತಿನೀತಿಯನ್ನು ಆಧರಿಸಿದ್ದಾಗಿತ್ತು. ಸೋತ ರಾಜರಿಗೆ ಚಕ್ರವರ್ತಿಯು ಕಪ್ಪಕಾಣಿಕೆ ಕೊಡುವ ಕರಾರಿನ ಮೇಲೆ ಪುನಃ ಅವರವರ ರಾಜ್ಯಗಳನ್ನು ಬಿಟ್ಟುಕೊಡುವ ದಿಗ್ವಿಜಯ ಪದ್ಧತಿಯ ಫಲವಾಗಿ ಅಂದಿನ ರಾಜ್ಯ ಪದ್ಧತಿಯನ್ನು (Unitary) ಏಕಸೂತ್ರಬದ್ಧ ಎಂದು ಹೇಳಲು ಸಾಧ್ಯವಾಗದು. ಒಂದು ಹೆಸರನ್ನು ಕೊಡಬಹುದಾದರೆ ಅದು (Tributary System) ಉಪರಾಜ್ಯ ಸಂಘ ಅಥವಾ ಮಂಡಲ (ಚಕ್ರ) ಪದ್ಧತಿ ಎಂಬುದು.

ಭಾರತದಲ್ಲಿ ಕಾಲಕ್ರಮೇಣ ರಾಜ್ಯ ಸಪ್ತಾಂಗಗಳಲ್ಲಿ ಒಂದಾಗಿದ್ದ ರಾಜನ ಸ್ವಾಮಿತ್ವವು (Sovereignty ಸಾರ್ವಭೌಮತ್ವವು) ರಾಜ್ಯದ ಸರ್ಕಾರದ ಪ್ರಥಮವೂ ಅತಿ ಮುಖ್ಯವೂ ಆದ ಸಂಕೇತವಾಯಿತು; ಆದರೆ ಅವನ ಸಂಪೂರ್ಣ ಪ್ರಭುತ್ವವಿದ್ದುದು ಅವನ ರಾಜ್ಯದ ಮೇಲೆ ಮಾತ್ರ. ಮಾಂಡಲಿಕ (ಸಾಮಂತ) ರಾಜ್ಯಗಳ ಮೇಲೆ ಅವನ ನೇರವಾದ ಪ್ರಭುತ್ವವನ್ನು ಆಡಳಿತದಲ್ಲಿ ಎಲ್ಲೂ ಕಾಣಲು ಸಿಕ್ಕದಾಗಿತ್ತು.

"ರಾಷ್ಟ್ರ"ದ ಕಲ್ಪನೆ ಹುಟ್ಟಿದ್ದು ಭಾರತಕ್ಕೆ ಹೊರಗಿನಿಂದ ಬಂದ ಮೂಲ ಆರ್ಯಕುಲದ ಪರಿವ್ರಾಜಕ ಜನಗಳಿಂದ ಎಂದು ನಂಬಲಾಗಿದೆ. ದಸ್ಯುದ್ವೇಷ, ಭೂಸ್ವಾಮ್ಯ ಮತ್ತು ವರ್ಣಗಳ ಸಂರಕ್ಷಣೇಚ್ಛೆ, ಸ್ವಜನ ಹಿತದ ಪರಿರಕ್ಷಣೆ ಹಾಗೂ ಪರಭೂಮಿಗಳ ಆಕ್ರಮಣಗಳನ್ನು ಮಾಡುವ ಅವಶ್ಯಕತೆ ಮುಂತಾದವು ಅವರಲ್ಲಿ ತಾವು ಒಂದು ರಾಷ್ಟ್ರ ಎಂಬ ಭಾವವನ್ನು ಹುಟ್ಟಿಸಿರಬಹುದು ಎಂಬುದು ಕೆಲವರ ಮತ. ಬಹುಶಃ ಇತರ ದೇಶಗಳ ಇತಿಹಾಸಗಳಲ್ಲಿ "ರಾಷ್ಟ್ರ"ಕ್ಕೆ ಇಂಥ ಮೂಲವಿರಬಹುದು. ಒಂದು ವಂಶದವರು ತಮ್ಮನ್ನು ರಾಷ್ಟ್ರವೆಂದು ಕರೆದುಕೊಂಡಿರಬಹುದು; ಅಂಥ ರಾಷ್ಟ್ರಗಳು ಸಪ್ತಸಿಂಧು ಪ್ರದೇಶದಲ್ಲಿ ಬಹಳವಾಗಿರಬಹುದು. ಆದರೆ ಯಾವ ಭಾರತೀಯ ರಾಷ್ಟ್ರವೂ ಸಂಪೂರ್ಣ ಏಕವಂಶೀಯವಾಗಿರಲಿಲ್ಲ ಎಂದು ಸಿದ್ಧ ಮಾಡಲಾಗಿದೆ.

"ಅಹಂ ರಾಷ್ಟ್ರಂ ಸಂಗಮನೀ ಜನಾನಾಂ" ಎಂಬಂತಹ ಮಾತುಗಳಿಂದ ರಾಷ್ಟ್ರವೆಂದರೆ ಜನರ ಐಕ್ಯಭಾವ (ಐಕ್ಯಕಲ್ಪನೆ) ಎಂದಾಗುತ್ತದೆ. ಅದೊಂದು ಸಮೂಹವಾಚಕ, ರಾಜಕೀಯ ಭೌಗೋಲಿಕ (ರಾಜ್ಯಕೀಯ) ಜನಮಂಡಲವೊಂದಕ್ಕೆ ರಾಷ್ಟ್ರವೆಂಬ ಪದವನ್ನು ಅನ್ವಯಿಸಲಾಗುತ್ತಿತ್ತೆಂಬುದನ್ನು ಹೇಳಬಹುದಾದರೂ (ಆರ್ಯರು ಹೊರಗಿಂದ ಬಂದವರೆಂಬುದಕ್ಕೆ ಡಾರ್ವಿನ್ನನ ವಿಕಾಸವಾದಕ್ಕಿರುವಷ್ಟೇ ತರ್ಕಶುದ್ಧತೆ ಇಂದಿಗೂ ಇರುವುದರಿಂದ) ವರ್ಣ–ವಂಶಗಳ ಹಿನ್ನೆಲೆ ರಾಷ್ಟ್ರಕ್ಕಿತ್ತೆಂಬುದು ಕೇವಲ ಕಲ್ಪನೆ. ಭಾರತದಿಂದ ಜಗತ್ತಿನ ಇತರ ಕಡೆಗಳಿಗೆ ಆರ್ಯರು ಹೋಗಿ ನೆಲಸಿದರೆಂಬುದಕ್ಕೆ ಸಮಸಾಮರ್ಥ್ಯವಿರುವುದಲ್ಲದೆ ಒಂದೆರಡು ಪ್ರಮಾಣಗಳು ಹೆಚ್ಚಾಗಿಯೂ ಸಿಗುತ್ತವೆ. "ದಸ್ಯು" ಮತ್ತು "ದಾಸ" ಎಂಬ ಪದಗಳ ಅರ್ಥವು ಅಸಂಸ್ಕೃತರೆಂದಾದೀತಲ್ಲದೆ (ಅನಾರ್ಯರೆಂದಾದೀತಲ್ಲದೆ) ಬಣ್ಣದ ಅಥವಾ ಕುಲದ ಭೇದವನ್ನು ಆ ಪದಗಳು ಸೂಚಿಸವು. ಆರ್ಯಪದಕ್ಕೆ (Respectable) ಗೌರವಾರ್ಹನೆಂಬುದೇ ಮುಖ್ಯಾರ್ಥ. ''ಆರ್ಯವರ್ಣ'', ''ಆರ್ಯಕುಲ'' ಎಂಬ ಪದಪ್ರಯೋಗಗಳು ವೈದಿಕ ವಾಙ್ಮಯದಲ್ಲಿ ದುರ್ಲಭ. ಸ್ಪಷ್ಟವಾದ ವೇದಾಧಾರವಿಲ್ಲದೆ ಮೊನಿಯರ್ ವಿಲ್ಯಮ್ಸರು ಆರ್ಯಪದವು ಕುಲವಾಚಕ ಎಂದದ್ದನ್ನು ಗಮನಿಸುವುದು ಅಗತ್ಯ. "ದಾಸವರ್ಣ" ಎಂದರೆ "ದಾಸವರ್ಗ"ವಾದೀತಲ್ಲದೆ, ಕಪ್ಪು ಅಥವಾ ತೌಡಿನ ಬಣ್ಣ ಎಂದಾಗದು. ಈ ಚರ್ಚೆಯನ್ನು ವಿಸ್ತರಿಸುವುದಿಲ್ಲಿ ಅಪ್ರಸ್ತುತ.

ಕೌಟಿಲ್ಯನ ಪ್ರಕಾರ ಆರ್ಯನೆಂದರೆ ಸ್ವತಂತ್ರ ಪ್ರಜೆ, ದಾಸನೆಂದರೆ ಗುಲಾಮ. ಈ ಅರ್ಥಗಳು ಪಾಣಿನಿಸಂಮತವೆಂದು ವಿದ್ವಾಂಸರ ಅಭಿಪ್ರಾಯ. ವಿ.ಎಸ್. ಅಗ್ರವಾಲರ "ಪಾಣಿನಿಗೆ ಗೊತ್ತಿದ್ದ ಭಾರತ" ಎಂಬ ಗ್ರಂಥವನ್ನು ನೋಡಿರಿ.

ಋಗ್ವೇದದಲ್ಲಿ ದಾಸ ಅಂದರೆ Savage, Barbarian, Infidel, Slave. ದಸ್ಯು ಅಂದರೆ Enemy of the gods, Barbarian, Impious man, Inferior, Inhuman, Ugli-faced, Robber–ಎಂಬುದು ಮೊನಿಯರ್ ವಿಲಿಯಂಸರು ತಮ್ಮ ಕೋಶದಲ್ಲಿ ಕೊಟ್ಟ ಇತರ ಅರ್ಥಗಳು.

"ಅರಾಜಕ ರಾಷ್ಟ್ರವೆಂಬ ಇತಿಹಾಸ ಪುರಾಣಪ್ರಯೋಗಕ್ಕೆ Kingless Society ರಾಜನಿಲ್ಲದ ಸಮಾಜ ಎಂದು ಅರ್ಥ. "ಜನಪದ"ಕ್ಕಿದ್ದಷ್ಟು ರಾಜಕೀಯ ಬಣ್ಣ ಅಂದು ರಾಷ್ಟ್ರಕ್ಕಿದ್ದಂತಿಲ್ಲ. ಜನಪದವು ಸರ್ಕಾರವುಳ್ಳ ಒಂದು ರಾಜ್ಯವೆಂದೂ, ಒಂದು ಸಾಂಸ್ಕೃತಿಕ ಘಟಕವೆಂದೂ ಅಂದಿನ ಜನರ "ಅರ್ಥಪ್ರಣಾಳಿ". ಅಲ್ಲೂ ಸಾಂಸ್ಕೃತಿಕ ಅರ್ಥಾಂಶಕ್ಕೆ ಹೆಚ್ಚು ಪ್ರಾಧಾನ್ಯ. ಅಂದಿನ ಜನಪದಗಳು ಹೆಚ್ಚಾಗಿ ಭಾಷಾವಾರು ದೇಶಗಳಾಗಿದ್ದುವು. "ರಾಷ್ಟ್ರ"ಕ್ಕಿರುವ ಸಾಮಾಜಿಕ ಅರ್ಥವು ಪ್ರಧಾನ ಸಧರ್ಮಿಗಳ ಗುಂಪು, ಸಮಾಜ ಎಂದು. ಮನುಸ್ಮೃತಿಯ ಪ್ರಕಾರ ರಾಷ್ಟ್ರವು ರಾಜ್ಯದ ಐದು ದ್ರವ್ಯಪ್ರಕೃತಿ (ಅಂಗ)ಗಳಲ್ಲಿ ಒಂದು. "ರಾಜ್ಯ"ದಲ್ಲಿ ರಾಜನ ಅರ್ಥವು ಪ್ರಧಾನವಾದರೆ "ರಾಷ್ಟ್ರದಲ್ಲಿ ಪ್ರಜೆ" ಎಂಬ ಅರ್ಥವು ಪ್ರಧಾನ. ಎರಡಕ್ಕೂ (State) ರಾಜ್ಯಸಂಸ್ಥೆ, ರಾಜಕೀಯ ಅಧಿಕಾರದ ಮೂಲಕ ಆಡಳಿತ ನಡೆಸುವ ಸಂಸ್ಥೆ ಎಂಬುದು ತಾತ್ಪರ್ಯ. "ಜನಪದ"ದಲ್ಲಿರುವ ರಾಜ್ಯಾರ್ಥವು ಭೌಗೋಲಿಕ ಗಡಿಯ ಅರ್ಥವನ್ನು ಗಣ್ಯವಾಗಿ ಉಳ್ಳದ್ದು. ಅಂದಿದ್ದವುಗಳು (೧) ವೈದಿಕ ಸಮಾಜ, (೨) ಆರ್ಯರು, (೩) ರಾಷ್ಟ್ರೀಯರು ಮತ್ತು (೪) ಕುರು ಪಾಂಚಾಲ ಮುಂತಾದ ಜನಪದಗಳು (Countries).

ಐತಿಹಾಸಿಕರ ಬಹುಮತದ ಪ್ರಕಾರ ಮೊದಲು ಅಭಾರತೀಯರಾಗಿದ್ದ ಆರ್ಯರು ತಮ್ಮಿಂದ ಭಿನ್ನರಾದ ಕುಲದವರ ಆಳಿಕೆಯಲ್ಲಿದ್ದ ಭೂಮಿಯನ್ನು ಬಲದಿಂದ ಪಡೆದುಕೊಂಡು ರಾಜ್ಯಗಳನ್ನು ಸ್ಥಾಪಿಸಿ ಆಳಲಾರಂಭಿಸಿದರು ಎಂಬುದನ್ನು ಗ್ರಹಿಸಿದರೆ, ಭಿನ್ನಕುಲ (೧) ಒಂದೋ ಅನೇಕವೋ? (೨) ಅವು ನಿರ್ದಿಷ್ಟವಾಗಿ ಯಾವುದು? (೩) ಎಲ್ಲೆಲ್ಲಿ ಯಾವ ಯಾವ ಬಗೆಯ ರಾಜ್ಯಗಳನ್ನು ಆ ಕುಲದವರು ಕಟ್ಟಿಕೊಂಡಿದ್ದರು? (೪) ಅವರಿಂದ ಯಾವ ಯಾವ ರಾಜಕೀಯ ಕಲ್ಪನೆಗಳನ್ನೂ, ಪದ್ಧತಿಗಳನ್ನೂ ಈ ಆಕ್ರಮಣಕಾರರು ಕಲಿತುಕೊಂಡರು? ಎಂಬ ನಾಲ್ಕು ಪ್ರಶ್ನೆಗಳಿಗೆ ಉತ್ತರ ಈಗ ಸಿಗುವಂತಿಲ್ಲ.

ಡಾ। ಎಚ್.ಎನ್. ಸಿಂಹರು ಆರ್ಯ ಭಾರತದಲ್ಲಿ ರಾಷ್ಟ್ರಗಳು ಬಹಳವಾಗಿದ್ದವು ಎಂದಿರುವುದರಿಂದ ವೇದಕಾಲೀನ ರಾಷ್ಟ್ರಗಳು ಕೇವಲ ರಾಜ್ಯಗಳು–ಬೇರೆ ಬೇರೆ ಅರಸರ ಆಳಿಕೆಗೆ ಒಳಪಟ್ಟಿದ್ದ ಮತ್ತು ವಿವಿಧ ಕುಲ(Race)ದವರನ್ನು ಒಳಗೊಂಡಿದ್ದ ಭೌಗೋಲಿಕ ಭಾಗಗಳು ಎಂದು ತಿಳಿಯಬಹುದಾಗಿದೆ. ಬ್ರಿಟಿಷರ ಆಳಿಕೆ ಭಾರತದಲ್ಲಿ ಪ್ರಾರಂಭವಾಗುವುದಕ್ಕಿಂತ ಮೊದಲು ೬೦೦ ಚಿಲ್ಲರೆ ಸ್ವತಂತ್ರ ಅಥವಾ ಸಾಮಂತ ರಾಜ್ಯಗಳಿದ್ದುದು ವೇದಕಾಲೀನ ರಾಜ್ಯಗಳಿಗಿಂತ ಭಿನ್ನವಾದ ರಾಜ್ಯಗಳಿದ್ದ ರಾಜ್ಯಕಲ್ಪನೆಗೆ ಉದಾಹರಣೆಯಗಲಾರದು. ಅಂದಿನ ಕಾಲದಿಂದ ೧೯ನೆಯ ಶತಮಾನದವರೆಗೂ "ರಾಜ್ಯವು" (Political Unit) ರಾಜ್ಯಕೀಯ ಘಟಕ ಎಂಬರ್ಥವನ್ನು ಉಳಿಸಿಕೊಂಡು ಬಂದದ್ದು ಸ್ಪಷ್ಟ. ರಾಜತ್ವದ ಕಲ್ಪನೆ ಅಥವಾ ಅರ್ಥ ಮಾತ್ರ ವೈದಿಕೋತ್ತರದ್ದೆನ್ನಿಸುವ ಮೌರ್ಯ ಯುಗದಲ್ಲಿ ಹೆಚ್ಚು ವಿಸ್ತಾರವಾಯಿತು.



೪

# ರಾಜಪ್ರಭುತ್ವದಲ್ಲಿ ಶಾಸನಾಧಿಕಾರ

ವೇದಕಾಲದಲ್ಲಿ ರಾಜನನ್ನು ರಾಜಮನೆತನದವರಲ್ಲಿ ಆಯ್ದುಕೊಳ್ಳುವ ನಿತ್ಯಧರ್ಮ ಮತ್ತು ಆಯ್ದ ರಾಜನೊಬ್ಬ ದುರ್ವರ್ತನೆಯನ್ನು ಹಿಡಿದರೆ ಅವನನ್ನು ದೇಶದಿಂದ ಹೊರಗೆ ಹಾಕುವ ಆಪದ್ಧರ್ಮ ರೂಢಿಯಲ್ಲಿದ್ದವು. ಇದು ಪ್ರಬುದ್ಧ ರಾಜಪ್ರಭುತ್ವ. ನಮ್ಮ ಪ್ರಜಾಪ್ರಭುತ್ವವೀಗ Ombudsman ಪ್ರಶಾಸಕವಿಮರ್ಶಿಕೆಯನ್ನು ಸ್ಥಾಪಿಸಲು ಪ್ರಾರಂಭಿಸಿದರೆ ಅದು ಅಂಥ ಪ್ರಬುದ್ಧತೆ ಉದಯಿಸುವ ಪ್ರಥಮ ಚಿಹ್ನೆ. ಸಾರ್ವಜನಿಕ ಸೇವೆಯಲ್ಲಿ ಅನುಭವಿಕರೂ ಸುವಿದ್ಯರೂ ಆದವರನ್ನು ಮಾತ್ರ ಮಂತ್ರಿಮಂಡಳದಲ್ಲಿ ತೆಗೆದುಕೊಳ್ಳಬೇಕೆಂಬ ನಿಯಮ ಬಂದರೆ ಅದು ಅಂಥ ಮತ್ತೊಂದು ಚಿಹ್ನವಾದೀತು. ಪ್ರಜಾಪ್ರತಿನಿಧಿಗಳಾಗುವವರು ಚುನಾವಣೆಗೆ ಮೊದಲು ಸರ್ವಾಸ್ತಿ ಘೋಷಣೆಯನ್ನು ಮಾಡಿಯೇ ನಿಲ್ಲಬೇಕೆಂದಾಗುವುದು ಪ್ರಬುದ್ಧತೆಯ ತೃತೀಯ ಚಿಹ್ನೆ. ರಾಜ್ಯವನ್ನು "ದಶಪುರುಷ"ವೆಂದಿರುವ ಐತರೇಯ ಬ್ರಾಹ್ಮಣದ ಪ್ರಕಾರ ಯಾವ ರಾಜ್ಯದಲ್ಲೂ ೧೦ಕ್ಕಿಂತ ಹೆಚ್ಚು ಮಂತ್ರಿಗಳಿರಬಾರದು ಎಂಬುದು ಧ್ವನಿತವಾಗುತ್ತದೆ. ಹತ್ತು ತಲೆಮಾರುಗಳವರೆಗೆ ರಾಜ್ಯವಿರುತ್ತದೆ ಎಂದು ಆನುವಂಶಿಕತೆಯನ್ನು ಹತ್ತಕ್ಕೆ ಪರಿಶೀಲಿಸುವುದು ಅದರ ಅರ್ಥವಲ್ಲ. The Vedic Age, P.432 ರಲ್ಲಿರುವಂತೆ ಇದು ಪ್ರಬುದ್ಧತೆಯ ಚತುರ್ಥ ಚಿಹ್ನೆ. ಪ್ರಾಚೀನ ರಾಜಪ್ರಭುತ್ವದಲ್ಲಿ ಇದ್ದ ಹಾಗೆ ಅಧಿಕಾರವನ್ನು ಚೆನ್ನಾಗಿ ವಿಕೇಂದ್ರೀಕರಿಸಿ ಮಹಾಧಿಕಾರ ಸಂಪನ್ನರ ವರ್ತನೆಯನ್ನು ಅವರಿಗೆ ತಿಳಿಯದಂತೆ ಸಿ.ಐ.ಡಿ.ಗಳ ಮೂಲಕ ಪರಿಶೀಲಿಸುತ್ತಿರುವ ಮಂತ್ರಿಕ್ರಮ ಪಂಚಮ ಚಿಹ್ನೆ.

ವೇದಯುಗಗಳಲ್ಲಿ ಸಭೆ ಸಮಿತಿಗಳು ರಾಜ್ಯದ ವ್ಯವಹಾರಗಳನ್ನು ನಿಯಂತ್ರಿಸುತ್ತಿದ್ದವು. ಇಂದಿನ ಲೋಕಸಭೆ ವಿಧಾನಸಭೆಗಳು ಕೇವಲ ಕಾಯಿದೆ ಪಾಸು ಮಾಡಿ ಕುಳಿತುಕೊಳ್ಳುತ್ತವೆ. ಅಂದಿನ "ಸಭೆ" ರಾಜಪುರುಷರ ಸಾರ್ವಜನಿಕ ಕಾರ್ಯನಿರ್ವಹಣದ ಪ್ರತ್ಯವೇಕ್ಷಣ ಮಾಡಿ ರಾಜನ ಮಂತ್ರಿಗಳ ಮೂಲಕ ತಪ್ಪುಗಳನ್ನು ತಿದ್ದಿಸಬಲ್ಲುದಾಗಿತ್ತು. ವೈಯಕ್ತಿಕವಾಗಿ ಸಭಾಸದರು ರಾಜ ಮತ್ತು ರಾಜಾಧಿಕಾರಿಗಳ ಮೇಲೆ ಪ್ರಭಾವ ಬೀರಲು ಹೋಗುತ್ತಿದ್ದಿಲ್ಲ. ಮಂತ್ರಿಗಳ ಆ ಸಭೆ ಇಂದಿನ "ಡಿಪಾರ್ಟ್‌ಮೆಂಟಲ್" ಕಾರ್ಯದರ್ಶಿಗಳ ಮತ್ತು ನ್ಯಾಯಾಲಯಗಳ ಕೆಲಸವನ್ನು ಮಾಡುತ್ತಿತ್ತು ಎನ್ನಬಹುದು.

## ಸಭ್ಯಯಜ್ಞ

ಪ್ರಜಾಗಣ್ಯರ ಸಭೆ ಸೇರಿದಾಗ "ಸಭ್ಯ"ವೆಂಬ ಯಜ್ಞವನ್ನು ಮಾಡುತ್ತಿದ್ದ ಪ್ರಾಚೀನ ಭಾರತೀಯರ ವ್ಯಾವಹಾರಿಕತೆಯ ಮಾನಸ ಶಾಸ್ತ್ರಜ್ಞಾನವನ್ನು ಅರ್ಥ ಮಾಡಿಕೊಳ್ಳುವುದು ಅಗತ್ಯ. ರಾಜ್ಯವೊಂದರ ಜನಜೀವನವನ್ನು ರೂಪಿಸಲು ಕುಳಿತುಕೊಳ್ಳುವ ರಾಜಾದಿ ಪ್ರಮುಖರ ಚಿತ್ತಶುದ್ಧಿಗೆ ಪರಿಣಾಮಕರವಾದ Ritual ಧಾರ್ಮಿಕ ಕರ್ಮ ಅದಾಗಿತ್ತು. ಸಮಷ್ಟಿಹಿತದ ಕಾರ್ಯದ ಹೊಣೆ ಹೊತ್ತ ಪ್ರತಿಯೊಬ್ಬ ವ್ಯಕ್ತಿ ಇಂದೂ ಅಂಥ ಯಾವುದಾದರೊಂದು ಮನಸ್ಸಿಗೊಪ್ಪುವ ಚಿತ್ತಶುದ್ಧೀಕರಣ ಸಾಧನವನ್ನು ಸಾಮೂಹಿಕ ಭಾಗಿತ್ವಕ್ಕೆ ತಕ್ಕ ಹಾಗೆ ರೂಪಿಸಿಕೊಳ್ಳುವುದು ಯೋಜನಾಪರ ರಾಜನೀತಿಜ್ಞರಿಗೆ ಅಸಮ್ಮತವಾಗಲಾರದು. ಒಂದೊಂದು ಪರಿಸರಕ್ಕೆ ಯುಗಧರ್ಮಾನುಸಾರ ಒಂದೊಂದು ಸಾಧನ ಸಮರ್ಥವೆನ್ನಿಸೀತು. ಯಜ್ಞದ ಸ್ಥಾನದಲ್ಲಿ ಅಷ್ಟೇ ಮಾನಸಶಾಸ್ತ್ರೀಯ ಸಾಮರ್ಥ್ಯವುಳ್ಳ ಆಧುನಿಕ ಕರ್ಮವೊಂದನ್ನು ರೂಪಿಸಿಕೊಂಡರೆ "ಅಸೆಂಬ್ಲಿ"ಗಳಲ್ಲಿ ಇಂದು ಅನೇಕ ಸಲ ಕಂಡುಬರುವ ಅಕ್ರಮವರ್ತನೆಯ ಕಾರಣಗಳು ಕಡಿಮೆಯಾದಾವು.

ಅಂದು ರಾಜನು ಸಾಂಕೇತಿಕವಾಗಿ ರಾಜಕೀಯ ಶಾಸನಿಕ ಮತ್ತು ಪ್ರಶಾಸನಿಕ ಪರಮಾಧಿಕಾರಿಯಾದರೂ ಅವನು Convention ಸಮಯದ ಪ್ರಕಾರ ಇಂದಿನ ಅಧ್ಯಕ್ಷ ಸಾಮಾನ್ಯನಂತೆ ವರ್ತಿಸುವುದು ನಿರೀಕ್ಷಿತವಾಗಿತ್ತು. ಅಂದಿನ ಸಭೆಗಳು ಹೆಚ್ಚಾಗಿ ನ್ಯಾಯಾಧಿಕರಣದ ಕಾರ್ಯಗಳಿಗಾಗಿಯೇ ಹೆಚ್ಚು ಸಲ ಸೇರುತ್ತಿದ್ದವು ಎಂಬುದು ಗಮನಾರ್ಹ. "ಸಭಾಸದರು ನ್ಯಾಯಶಾಸ್ತ್ರಜ್ಞರಾಗಿರಬೇಕೆಂಬುದು ಅದರಿಂದ ಪರೀಕ್ಷಿತವಾಗುತ್ತದೆ. ಪಂಚಾಯತದಾರಿಕೆಯ ಹೊಣೆಯನ್ನು ಮತ್ತು ದೇಶ–ಕಾಲ–ವರ್ಣ ಆಶ್ರಮ ಧರ್ಮಗಳ ಸಾಮಾನ್ಯ ಜ್ಞಾನವನ್ನು ಅಗತ್ಯವಾದ ಮಟ್ಟಿಗೆ ಅವರು ಪಡೆದು ಸುವಿದ್ಯರಾಗಿರಬೇಕಾಗಿದ್ದುದು ಚುನಾವಣೆಯ ಅಭ್ಯರ್ಥಿಗಳಿಗೆ ಇಂದು ಕಡ್ಡಾಯದ ಶರ್ತವಾದರೆ ನಮ್ಮ ಸಭೆಗಳೀಗ ಪ್ರಬುದ್ಧವೆನಿಸಬಹುದಾಗಿವೆ. Decision Making ತೀರ್ಮಾನವನ್ನು ತೆಗೆದುಕೊಳ್ಳುವ ಬಗೆಯು ಪಂಚಾಯತ ಸದಸ್ಯರ ತರಬೇತಿನ ಪಠ್ಯದಲ್ಲಿರುವುದು ಅದರ ಅಗತ್ಯವನ್ನು ಸೂಚಿಸುತ್ತದೆ. ಎಷ್ಟೋ "ಮೀಟಿಂಗು"ಗಳು ಬರಿಗುಲ್ಲು "ನಿದ್ದೆಗೇಡು" ಎಂಬಂತಾಗುವ ಸಂದರ್ಭಗಳಿಗೆ ಅದೊಂದೇ ಮದ್ದು.

## ರಾಜಪ್ರಭುತ್ವ ಮತ್ತು ಪ್ರಜಾಪ್ರಭುತ್ವ

ಚುನಾಯಿತನಾದರೂ ನಮ್ಮ ದೇಶದ ರಾಷ್ಟ್ರಪತಿಯು ಇಂದು ಸಾಂಕೇತಿಕವಾಗಿ ಮೇಲೆ ಹೇಳಿದ ರಾಜನಿಗಿದ್ದಂಥ ಸರ್ವ ಕಾಯದೆಬದ್ಧ ಅಧಿಕಾರಗಳನ್ನೂ ಉಳ್ಳವನಾಗಿದ್ದಾನೆ. ಈತನು ಪಾರ್ಲಿಮೆಂಟಿನಿಂದ ಚುನಾಯಿತ, ಆತನು ವಂಶತಃ ಪ್ರಜಾಸಭೆಯಿಂದ ಚುನಾಯಿತ. ಇಂಗ್ಲೆಂಡಿನ ರಾಣಿಯೂ ಅಂಥ ಸರ್ವಾಧಿಕಾರದ ಸಂಕೇತ. ಅಲ್ಲಿಯ ಪಾರ್ಲಿಮೆಂಟು ಒಂದು ಸಮಯಸೃಷ್ಟವಾದ ಸಭೆ. ಆನುವಂಶಿಕ ಅಧಿಕಾರದ "ಗ್ಯಾರಂಟಿ" ಇಲ್ಲದುದರ ಫಲವಾಗಿ ಮುಂದಿನ ಐದು ವರ್ಷಗಳಲ್ಲಿ ತಮ್ಮ ಆಳಿಕೆ

ಮುಂದುವರಿಯಬೇಕೆಂಬ ಒಂದೇ ಒಂದು ಮಹತ್ವಾಕಾಂಕ್ಷೆಯಿಂದ ಸಾರ್ವಜನಿಕ ವ್ಯವಹಾರದಲ್ಲಿ ಒಳಿತು–ಕೆಡಕುಗಳ ಭೇದವನ್ನು ಅಲಕ್ಷಿಸಿ ಅಪವರ್ತನೆಯ ಮೂಲಕ ಸ್ಥಾನಭದ್ರ ಮಾಡಿಕೊಳ್ಳಲು ಹೊರಡುವ ಹಲಕೆಲ ಮುಖಂಡರನ್ನು ಸಾಕುವ ಪ್ರಜಾಪ್ರಭುತ್ವವು ರಾಜಪ್ರಭುತ್ವದಲ್ಲಿದ್ದ ದೋಷಗಳನ್ನು ಪರಿಹರಿಸಹೋಗಿ ಅಷ್ಟೇ ಮಾರಕ ಪರಿಣಾಮಗಳನ್ನು ಉಂಟುಮಾಡುವ ಇತರ ದೋಷಗಳನ್ನು ಉಳಿಸಿಕೊಂಡಿರುವುದು ಸೂಕ್ಷ್ಮಜ್ಞರಿಗೆ ಹೊಳೆಯದಿರದು. ರಾಜನಿಗೆ ಸೈನ್ಯಬಲವಿದ್ದಂತೆ ರಾಷ್ಟ್ರಪತಿಗೂ ರಾಷ್ಟ್ರದ ಮುಖ್ಯಮಂತ್ರಿಗೂ ಅಂದಿಗಿಂತ ಹೆಚ್ಚು ಸುಸಜ್ಜಿತವೂ ಅಪ್ರತಿಭಟನೀಯವೂ ಆದ ಸೈನ್ಯಬಲವಿದೆ. ಆಂತರಿಕ ಶೋಷಣೆಗೆ ಅದನ್ನು ಬಳಸದಿರುವುದು ಅವರ ಸದ್ಬುದ್ಧಿಯನ್ನಷ್ಟೇ ಅವಲಂಬಿಸಿದೆ. ಆದುದರಿಂದ ರಾಜಪ್ರಭುತ್ವಕ್ಕಿಂತ ಪ್ರಜಾಪ್ರಭುತ್ವವು ಜನಹಿತವನ್ನು ನಿಷ್ಪಕ್ಷಪಾತವಾಗಿ ವಿಶ್ವಮಾನವ ನೀತಿತತ್ವಗಳ ಪ್ರಕಾರ ಸಾಧಿಸಬೇಕಾದರೆ ಅದಕ್ಕೆ Socialism ಸಮಾಜ (ಸಾಮ್ಯ)ವಾದವನ್ನು ಜೋಡಿಸಬೇಕು ಎಂಬ ಆಲೋಚನೆ ದಿವಂಗತ ನೆಹರುಗಳಂಥ ತತ್ವಚಿಂತಕರಲ್ಲಿ ಮೂಡಿತು. ಭಾರತದ ಪ್ರಾಚೀನ ರಾಜನೀತಿಶಾಸ್ತ್ರಜ್ಞರು ಪ್ರಭುತ್ವದ ಬದಲಾವಣೆಯನ್ನು ಚರ್ಚಿಸದೆ ರಾಜಪ್ರಭುತ್ವದ ಸುಧಾರಣೆಗೇ ಹೆಚ್ಚು ಚಿಂತನ ಮಾಡಿದ್ದು ಕಂಡುಬರುತ್ತದೆ.

## ‘ಸಭಾಪಾಲ’ ಯಾ ಸ್ಪೀಕರ್

ಇಂದಿನ ಅಸೆಂಬ್ಲಿಯಲ್ಲಿ “ಸ್ಪೀಕರ್” ಇರುವಂತೆ ಅಂದಿನ ಸಭೆಗಳಿಗೆ “ಸಭಾಪಾಲ” ಇರುತ್ತಿದ್ದನು. “ಸಭೆಸಮಿತಿಗಳ” ಕಾರ್ಯಗಳ ಭೇದ ಮಾತ್ರ ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ಧೋರಣ ರೂಪಣ ಮತ್ತು ಕಾಯದೆ ಪಾಸು ಮಾಡುವ ಕೆಲಸಗಳು “ಸಮಿತಿಗೆ” ಮೀಸಲು ಎಂದು ಅನುಮಾನಿಸಲು ಸಾಧ್ಯವಾಗುವುದರಿಂದ “ಸಮಿತಿ”ಯೇ ಸಭೆಗಿಂತ ಹೆಚ್ಚಾಗಿ ಇಂದಿನ ಪಾರ್ಲಿಮೆಂಟನ್ನೂ ವಿಧಾನಸಭೆಯನ್ನೂ ಹೋಲುತ್ತದೆ ಎನ್ನಬಹುದಾಗಿದೆ.

ವೈದಿಕ ಯುಗದಲ್ಲಿ ಇಂಥ ಸಾರ್ವಜನಿಕ ಸಭೆಗಳಿದ್ದರೂ ರಾಜ್ಯದ ಅಧಿಕಾರದ ವ್ಯಾಪ್ತಿಯು ಹೆಚ್ಚುತ್ತ ಹೋಯಿತೆಂದು ಕಲೆ ಐತಿಹಾಸಿಕರ ಮತ. ಅದು ಇಂದಿನ ಕೆಲ ಪ್ರತಿನಿಧಿಗಳಲ್ಲಿ ಅಥವಾ ಮಂತ್ರಿಗಳಲ್ಲಿ ಮನಸ್ವಿ ಕಾರಭಾರ ನಡೆಸುವ ಶಕ್ತಿ ಅಧಿಕವಾದುದಕ್ಕೆ ಸರಿಸಮಾನ. ಏಕೆಂದರೆ, ಅಂದೂ ಅನೇಕ ವೇಳೆ ಹತ್ತು ಸಮಸ್ತರು ರಾಜಕೀಯ ಪ್ರಜ್ಞೆಗೆ ಪ್ರಾಧಾನ್ಯ ಕೊಟ್ಟಿರಲಿಲ್ಲ. ಇಂದೂ ಅವರ ವಂಶದವರು ಕೊಡುತ್ತಿಲ್ಲ.

Eternal Vigilance is the watchword of good administration ಸುರಾಜ್ಯಭಾರ ನಡೆಯಲು ನಿತ್ಯವೂ ಎಚ್ಚರವಾಗಿರಬೇಕು ಎಂಬುದು ಎಲ್ಲ ಪ್ರಭುತ್ವರೂಪಗಳಿಗೂ ಅನಿವಾರ್ಯವಾದ ಪ್ರಜಾಧರ್ಮವಲ್ಲವೇ ಜೊತೆಗೆ ಒಂದು ರಾಜ್ಯದ ಅಗಲ ಹೆಚ್ಚಾಗುತ್ತ ಹೋದ ಹಾಗೆ ಅದರ ಆಡಳಿತದ ಶಿಸ್ತು ಸಡಿಲವಾಗುತ್ತ ಹೋಗುವುದು ಎಲ್ಲ ಪ್ರಭುತ್ವಗಳಿಗೂ ಸಮಾನ. ಅಧಿಕಾರ ವಿಕೇಂದ್ರೀಕರಣವೊಂದೇ ತಜ್ಞರಿಗೆ ಈಗ ಗೊತ್ತಿರುವ ಪರಿಹಾರೋಪಾಯ. ಭಾರತದ ಇಂದಿನ ಪ್ರತಿಯೊಂದು ರಾಜ್ಯವೂ ಗ್ರೀಕ್ ಪ್ರಜಾಪ್ರಭುತ್ವದ ಕಲ್ಪನೆಯ ಪ್ರಕಾರ

ಅಳೆದರೆ ಅಳತೆಗೆ ಮೀರಿದ ವಿಸ್ತಾರ ಮತ್ತು ಜನಸಂಖ್ಯೆಗಳನ್ನು ಉಳ್ಳದ್ದು. ಒಂದು ಪ್ರಕರಣದಲ್ಲಿ ಕೊನೆಯ ನಿರ್ಣಯವನ್ನು ತೆಗೆದುಕೊಳ್ಳುವ ಅಧಿಕಾರವೇ ನಿಜವಾದ ಅಧಿಕಾರ; ಇತರ ಅಧಿಕಾರಿ ಅಥವಾ ಸಂಸ್ಥೆಯೊಂದು ಅಂಥ ನಿರ್ಣಯವನ್ನು ಬದಲಿಸಬಹುದು ಎಂಬಂತಿದ್ದರೆ ಆ ನಿರ್ಣಯಕಾರನ ಅಧಿಕಾರವು ನಿಜವಾದ ಅಧಿಕಾರವಲ್ಲ; ಎರಡನೆಯ ನಿರ್ಣಯಕಾರನ ಅಧಿಕಾರವೇ ಆಗ ನಿಜವಾದ ಅಧಿಕಾರವೆನ್ನಿಸುತ್ತದೆ. Executive ಕಾರ್ಯಪಾಲಕನಿಗೆ ನಿಯಮಗಳ ಪ್ರಕಾರ ಅಂಥ ಕೊನೆಯ ನಿರ್ಣಯವನ್ನು ಕೊಡಬಹುದಾದ ಪ್ರಕರಣಗಳನ್ನು ನಿರ್ದಿಷ್ಟ ಮಾಡಿಕೊಟ್ಟಿರಬೇಕಾಗುತ್ತದೆ. ಇಲ್ಲವಾದರೆ ನೌಕರರ ಸೋಪಾನ ಪಂಕ್ತಿಯು ಕೇವಲ ಟಪ್ಪಾಲುಕಟ್ಟೆಗಳ ಸಾಲಾಗಿ ಪರಿಣಮಿಸುತ್ತದೆ. ಈ ಅಂಶವನ್ನು ಆಧುನಿಕ ಭಾರತದ ಆಡಳಿತ ಧೋರಣವನ್ನು ರೂಪಿಸುವವರು ಅರಿತುಕೊಳ್ಳಬೇಕಾಗಿದೆ.

ಮೂಲಭೂತವಾದ ವಿಶ್ವಮಾನವ ನೀತಿತತ್ವಗಳಿಗೆ ರಾಜನೂ ಸಾಮಾನ್ಯ ಪ್ರಜೆಯಂತೆಯೇ ಬದ್ಧನು ಎಂಬ ಅಂಶವನ್ನು ಹಿಂದು ರಾಜ್ಯಧರ್ಮಶಾಸ್ತ್ರಕಾರರು ಬ್ರಾಹ್ಮಣಗಳ ಕಾಲದಲ್ಲೇ ಘೋಷಿಸಿದ್ದು ಗಮನಾರ್ಹ. ಎಲ್ಲೋ ಒಂದೆಡೆ ಮಾತ್ರ ರಾಜಸೂಯ ಯಾಗ ಮಾಡಿದರೆ ರಾಜನ ದಂಡನೀಯತೆ ಪರಿಹಾರವಾಗುತ್ತದೆ ಎಂದು ಹೇಳಲಾಗಿದೆ. ಅಂದಿನ ರಾಜರು ಗಣ್ಯ ಬ್ರಾಹ್ಮಣರಂತೆಯೇ ಆ ಕಾಲದ ರಾಜಧರ್ಮ, ಅರ್ಥಧರ್ಮ, ಸಮಾಜಧರ್ಮ, ಪ್ರಶಾಸನಧರ್ಮ, ತತ್ವಜ್ಞಾನಗಳನ್ನು ಅಭ್ಯಸಿಸಿದವರಾಗಿರುತ್ತಿದ್ದರು. ಪ್ಲೇಟೋ ಹೇಳಿದ Philosopher Kings ರಾಜರ್ಷಿಗಳು ಅವರಲ್ಲಿ ದೊರಕುತ್ತಾರೆ. ಆದುದರಿಂದ ಅಂದಿನ Golden Age ರಾಮರಾಜ್ಯವು ಕವಿಕಲ್ಪನೆ ಎನ್ನಲು ಸಾಧ್ಯವಿಲ್ಲ; ಮಾಂಧಾತ, ನಹುಷ, ಅಂಬರೀಷ, ಸಗರ, ಪೃಥು, ಹೇಹಯ, ಧರ್ಮರಾಜ, ನಳ, ದಶರಥ, ರಾಮ, ಪರಶುರಾಮ, ಇಕ್ಷ್ವಾಕು, ವಿಭೀಷಣ, ಭರತ, ಉತ್ತಾನಪಾದ, ಧ್ರುವ, ಜನಕ ಮುಂತಾದ ಅರಸರು ಭಾರತದ ಪರಂಪರೆಯಲ್ಲಿ ಪುಣ್ಯಶ್ಲೋಕರೆನ್ನಿಸಿದುದು ಇಲ್ಲಿ ಸ್ಮರಣೀಯ. ಋಗ್ವೇದದ ಕಾಲ ಕಡಿಮೆಯೆಂದರೆ ಕ್ರಿ.ಪೂ. ೩,೦೦೦ ಅಂದರೆ ಇಂದಿಗೆ ೪,೯೮೦ ವರ್ಷಗಳಾದವು! ಅಂದಿನಿಂದ ಮೊನ್ನೆ ಮೊನ್ನಿನವರೆಗೆ ನಮ್ಮಲ್ಲಿ ರಾಜಪ್ರಭುತ್ವವಿತ್ತು!

ರಾಜಪ್ರಭುತ್ವದಲ್ಲಿ ರಾಷ್ಟ್ರೀಯತೆ ಇದ್ದದ್ದು ಮತ್ತು ಇಲ್ಲದ್ದು ಎಂಬ ಭೇದವನ್ನು ಯೂರೋಪಿನ ಇತಿಹಾಸದಲ್ಲಿ ವಿಂಗಡಿಸಿದ್ದಾರೆ. ಫ್ರಾನ್ಸಿನ ೧೪ನೆಯ ಲೂಯಿಯನ್ನು ರಾಷ್ಟ್ರೀಯ ರಾಜನೆಂದು ಉದಾಹರಿಸುತ್ತಾರೆ. ಆದರೆ ಭಾರತದಲ್ಲಿ ಪುಣ್ಯಶ್ಲೋಕರಾಗಿರುವ ಎಲ್ಲ ರಾಜರೂ ಉಕ್ತ ಅರ್ಥದಲ್ಲಿ ರಾಷ್ಟ್ರೀಯರೇ. "ಅಹಂ ರಾಷ್ಟ್ರಂಸಂಗಮನೀ ಜನಾನಾಂ" ಎಂಬುದು ವೇದೋಕ್ತಿ. "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರಿಯಸೀ" ಎಂಬುದೂ ಹಾಗೇ ಪ್ರಾಚೀನ ಕಾಲದಲ್ಲಿ ಎದ್ದ ಉದ್ಗಾರ. ಇದು ಯಾವ ಶತಮಾನ, ಅದು ಯಾವ ಶತಮಾನ? ರಾಜಕೀಯ ರಾಷ್ಟ್ರೀಯತೆ ಯೂರೋಪಿನಲ್ಲಿ ರಾಜಪ್ರಭುತ್ವದ ಕಾಲದಲ್ಲಿ ಇದ್ದುದಕ್ಕಿಂತ ಇಲ್ಲೇ ಹೆಚ್ಚಾಗಿತ್ತು. ರಾಜನನ್ನು ಜನನಾಯಕನೆಂದು ತಿಳಿಯುವ ರೂಢಿ ಇಲ್ಲಿ ಅನಾದಿಕಾಲದ್ದು. ಭರತನ ನಾಟ್ಯಶಾಸ್ತ್ರದ ಮೂಲವು ಸುಮಾರು ಕ್ರಿ.ಪೂ. ೩–

೪ನೆಯ ಶತಮಾನದವರೆಗೂ ಹೋಗುತ್ತದೆ. ಸಂಸ್ಕೃತ ನಾಟಕ ಪರಂಪರೆಯಲ್ಲಿ "ರಾಜಾ", "ವೀರ" ಮತ್ತು "ನೇತಾ" ಎಂಬ ಮೂರೂ ಕಥಾನಾಯಕನ ಪಾತ್ರದಲ್ಲಿ ಸಮ್ಮಿಳಿತವಾಗಿವೆ. "ಪ್ರಜಾನುರಂಜನಾದ್ ರಾಜಾ" ಎಂಬುದು ಅಪ್ರತಿಹತ ರಾಜಲಕ್ಷಣ. ಪ್ರಜೆಗಳೇ ರಾಷ್ಟ್ರ. ಪ್ರಜೆಗಳ ಐಕ್ಯದ ಗುರುತೆಂದರೆ ರಾಜನೇ ಆಗಿದ್ದ. ಯೂರೋಪಿನಲ್ಲಿ ಅನೇಕ ರಾಷ್ಟ್ರಗಳಿದ್ದಂತೆ ಭಾರತದಲ್ಲೂ ಇದ್ದವು. ಅಲ್ಲಿಯ ಯೂರೋಪೀಯ ಐಕ್ಯಭಾವನೆಯಂತೆಯೇ ಇಲ್ಲಿಯೂ ಭಾರತೀಯತೆಯ ಐಕ್ಯಭಾವವಿತ್ತು. ಯೂರೋಪಿನಲ್ಲಿ ಸಾಂಸ್ಕೃತಿಕ ರಾಷ್ಟ್ರಭಾಷೆ ಇದ್ದಿಲ್ಲ; ಭಾರತಕ್ಕೆ ಇತ್ತು–ಅದೇ ಸಂಸ್ಕೃತ. ಚೀನದ ಚಕ್ರವರ್ತಿಗಳೂ ತಮ್ಮ ಚಕ್ರಾಧಿಪತ್ಯವನ್ನು ರಾಷ್ಟ್ರೀಯ ಭಾವನೆಯ ಮೇಲೆ ನಿಲ್ಲಿಸಿದ್ದರು ಎಂದು ಹೇಳಲಾಗುತ್ತಿದೆ. ಏಕಭಾಷಿಕತೆಯು ರಾಷ್ಟ್ರೀಯತೆಯ ಅತಿ ದೊಡ್ಡ ಪ್ರೇರಕ. ಹಿಂದಿಯ ಅಂತಃಪ್ರಾಂತೀಯತೆ ಅದರಿಂದಲೇ ಸಾಧು.

ನಿರಂಕುಶನಾದ ರಾಜನೂ ಸರ್ವಾಧಿಕಾರಿಯೂ ಸ್ವಯಂಪ್ರಭುವೂ ರಾಜಕೀಯವಾಗಿ ಬಹಳ ಹತ್ತಿರದ ಸಂಬಂಧಿಕರು. ರಾಜಕೀಯ ಪ್ರಜ್ಞೆ ಚೆನ್ನಾಗಿ ಜಾಗ್ರತವಾಗದಿರುವ ಪ್ರಜಾಸ್ತೋಮವನ್ನು ಆಳುವ ಪ್ರತಿನಿಧಿಗಳು ಸ್ವಯಂಪ್ರಭುಗಳಿಗೆ ಹಾಗೇ ಸಮೀಪದ ಬಂಧುಗಳು. ನೈತಿಕ ಮಹಾಮೌಲ್ಯಗಳನ್ನು ಆಧರಿಸದ ರಾಜ್ಯಶಾಸ್ತ್ರವು ಶಾಸ್ತ್ರವೇ ಅಲ್ಲ. ನೀತಿಯು ಸಲಹೆಗಾರನ ಸ್ಥಾನದಲ್ಲಿರುವುದು ರಾಜಪ್ರಭುತ್ವದಲ್ಲಿ ಹೆಚ್ಚು. ಪ್ರಜಾಪ್ರಭುತ್ವದ ಸಮಾಜವಾದದಲ್ಲಿ ಮಾನವೀಯ ಶಾಶ್ವತ ನೀತಿಗಳು ಕ್ರಮೇಣ ಕಾಯದೆಗಳಾಗುತ್ತ ಹೋಗುವುದು ವಿಶೇಷ.



೫

# ಪಾಳೆಯಗಾರಿಕೆ ಮತ್ತು ದೈವಪ್ರಭುತ್ವ

ಆಸ್ಥಾನ ದೊರೆಗಳಿಲ್ಲದ ರಾಜ್ಯ ಎಲ್ಲೂ ಇದ್ದಿಲ್ಲ. ರಾಜಸ್ಥಾನದ ವೈಭವ, ದರ್ಬಾರು ಹೆಸರಾದದ್ದು. ರಾಜನ ಅಣ್ಣ–ತಮ್ಮಂದಿರು, ಮಕ್ಕಳು, ಮೊಮ್ಮಕ್ಕಳು, ಮಂತ್ರಿಗಳು, ಸೇನಾಪತಿಗಳು, ಭಾವನೆಂಟರು, ಸೋದರ ಮಾವಂದಿರು ಮುಂತಾದವರು ಆಸ್ಥಾನಾಲಂಕಾರರಾಗಿರುತ್ತಿದ್ದರು. ರಾಜ್ಯದಲ್ಲಿ ಅವರನ್ನು ದೂರ ಇಟ್ಟಾಗ ಅವರು ಇದ್ದಲ್ಲೇ ಬೇರುಬಿಟ್ಟು ಸ್ವತಂತ್ರ ಪಾಳೆಯಗಾರರಾಗಿ ಬಿಡುತ್ತಿದ್ದರು. ಮನೆಯಲ್ಲೇ ಇಟ್ಟುಕೊಂಡರೆ ವಾರಸುದಾರಿಕೆಯ ಒಳಸಂಚುಗಳನ್ನು ಮಾಡಿ ಗದ್ದಲ ಎಬ್ಬಿಸಿ, ಕೊಲೆ, ಯುದ್ಧ ಬಲಾತ್ಕಾರಗಳಿಗೆ ಕಾರಣರಾಗುತ್ತಿದ್ದರು. ಆಸ್ಥಾನವು ಮೊದಲು ರಾಜನಿರ್ಮಿತ; ಆಮೇಲೆ ಆಸ್ಥಾನವೇ ರಾಜನಿರ್ಮಾಪಕವಾಗುತ್ತದೆ ಎಂಬುದು ಮಧ್ಯಯುಗದ ಅನುಭವ.

ಆಸ್ಥಾನದ ದೊರೆಗಳು ಸ್ವತಂತ್ರರಾದಾಗ ಅವರು ಸಂಸ್ಥಾನಿಕರು ಅಥವಾ ಪಾಳೆಯಗಾರರೆನ್ನಿಸುತ್ತಿದ್ದರು. ರಾಜನಿಗಿರುವ ಎಲ್ಲ ಉಪಾಧಿಗಳೂ ಈ ಮರಿರಾಜರಿಗಿರುತ್ತಿದ್ದವು. ಈ ಜಮೀನುದಾರರು ಯೂರೋಪಿನಲ್ಲಿ ವೈಶಿಷ್ಟ್ಯವನ್ನು ತಳೆದಷ್ಟು ಇನ್ನೆಲ್ಲೂ ತಳೆಯಲಿಲ್ಲ. ಒಬ್ಬೊಬ್ಬನಿಗೆ ಒಂದೊಂದು ಕೋಟೆ ಒಂದಿಷ್ಟು ಜನ ಸರದಾರರು; ಒಂದು ಸೈನ್ಯ; ಕೋಟೆಯೊಳಗೆ ಮರಿಯರಮನೆ; ಎಲ್ಲಾದರೂ ರಾಜನ ಬಲ ಹೆಚ್ಚಾದಾಗ ಅವನಿಗೀ ದೊರೆಗಳು ಸಾಮಂತರು; ಅವನು ಚಕ್ರವರ್ತಿ; ಇವರು ಉಪರಾಜರಾಗಿ ತರುವುದು ಕಪ್ಪಕಾಣಿಕೆಗಳನ್ನು; ರಾಜ ದುರ್ಬಲನಾದ ಮರುದಿನ ಇವರು "ಝೋಂಡಾ ಉಂಚಾ ರಹೇ ಹಮಾರಾ" ಎನ್ನುತ್ತಿದ್ದರು. ಮೊದಲಿಂದ ರಾಜವಂಶೀಯರಾಗಿ ಪಿತ್ರಾರ್ಜಿತ ಅರಸೊತ್ತಿಗೆಯನ್ನು ನಡೆಸುತ್ತ ನಡುವೆ ಯಾವನಾದರೂ ಬಲಿಷ್ಠನಾಗಿ ತನ್ನ ಚಕ್ರವರ್ತಿತ್ವವನ್ನು ಹೇರಿ ಅವರನ್ನು ಸಾಮಂತಿಕೆಗೆ ಇಳಿಸುವುದು ಬೇರೆ. ಭಾರತವು ಈ ಬಗೆಯ ಸಾಮಂತಿಕೆಗೇ ಪ್ರಸಿದ್ಧ. ಈ ಸಾಮಂತರಲ್ಲಿ ಯಾರು ಯಾರು ಯಾವಾಗ ಬಲಿಷ್ಠರಾದರೂ ಅವರು ಸಾರ್ವಭೌಮರು; ಮಿಕ್ಕವರು ಸಾಮಂತರು; ರಾಜವಂಶಗಳಿಗೆ ಹೆಸರಾದ ಭರತಖಂಡದ ದೇಶಗಳು; ಅಂಗ, ವಂಗ, ಕಳಿಂಗ, ಕಾಂಭೋಜ, ತೆಲುಂಗ, ಕೊಂಗ, ಬಾಹ್ಲೀಕ, ಬರ್ಬರ, ಬ್ರಹ್ಮ, ಭೋಜ, ಕಾಶ್ಮೀರ, ಕೇರಳ, ಕರ್ಣಾಟ, ಕರಹಾಟ, ಚೌಟ, ಪಾಂಡ್ಯ, ಚೋಳ, ಓಡ್ರ, ಮತ್ಸ್ಯ, ಗೌಳ, ವಿದರ್ಭ, ಕುಂತಲ, ಕೊಂಕಣ, ಕುರು, ಮಗಧ, ಸೌರಾಷ್ಟ್ರ, ಗುರ್ಜರ,

ಸೌವೀರ, ಮಹಾರಾಷ್ಟ್ರ, ಸಿಂಧು, ಸುಹ್ಮ, ತ್ರಿಗರ್ತ, ಕೋಸಲ, ಹೈಹಯ, ನೇಪಾಳ, ಲಾಂಗಲ, ಮಾಲವ, ಮಲೆಯಾಳ, ವರಲ, ಶೂರಸೇನ, ಮದ್ರ, ಪಾಂಚಾಲ, ಯವನ, ತುರುಷ್ಕ, ತ್ರೈಕೂಟ, ಪುನ್ನಾಟ, ಅಮರಕ, ಚೇದಿ, ನಿಷಧ, ತೌಳವ, ಸಿಂಹಳ, ವರಹಾಟ, ಕೇಕಯ, ಪ್ರಾಗ್ಜ್ಯೋತಿಷ, ಗಾಂಧಾರ. ಪಾಳೆಯಗಾರ, ಮಂಡಲೇಶ್ವರ, ಮಹಾಮಂಡಲೇಶ್ವರ, ಸಾಮಂತ, ಮಹಾ ಸಾಮಂತ, ಮಹಾ ಸಾಮಂತಾಧಿಪತಿ, ರಾಜ, ಮಹಾರಾಜ, ರಾಜಾಧಿರಾಜ, ರಾಜಪರಮೇಶ್ವರ ಅಥವಾ ಚಕ್ರವರ್ತಿ (ಸಾರ್ವಭೌಮ, ಸಮ್ರಾಟ್) ಎಂಬಿವು ಉತ್ತಮೋತ್ತರ ಪದವೀ ವಾಚಕಗಳು.

ಮಧ್ಯಯುಗೀನ ಯೂರೋಪಿಯನ್ ಪಾಳೆಯಗಾರರು ಬ್ರಿಟಿಷ್ ಯುಗದ ಭಾರತೀಯ ಸಂಸ್ಥಾನಿಕರಿಗೆ ಸಮಸಂಖ್ಯರಾಗಿದ್ದರು. ಅವರ ಕೋಟೆ, ಕೊತ್ತಲ, ಸರದಾರ, ಸವಾರ, ಮುಂತಾದ ಪರಿವಾರದಲ್ಲಿ ಸರದಾರರ (Knights) ವರ್ಗ ವಿಶಿಷ್ಟವಾಗಿತ್ತು. Squire, Page, Groom, armourer, Spare horses and pack horses ಎಂಬಿವು ಸರದಾರನೊಬ್ಬನ ಷಡಂಗಗಳು. ಸರದಾರರು ಅಶ್ವಾರೋಹಿಗಳು, ಖಡ್ಗಧಾರಿಗಳು, ಭರ್ಚಿಧರರು, ಶಿರಸ್ತ್ರಾಣ, ಉರಸ್ತ್ರಾಣ, ಗಲತ್ರಾಣ, ಪಾದತ್ರಾಣ, ಭುಜತ್ರಾಣ, ಕಟಿತ್ರಾಣಗಳನ್ನು ಧರಿಸಿದವರು ಮತ್ತು ವಿಶೇಷತಃ ಸ್ತ್ರೀದಾಕ್ಷಿಣ್ಯ ಸಂಪನ್ನರು. (Spuire) ಭಾವಿ ಸರದಾರ, ಬೆಂಗಾವಲಿಗ; Page ಕುಮಾರಸೇವಕ, Groom ಕಾಸ್ತಾರ (ಕುದುರೆ ಚಾಕರ), Spare horses ರಕ್ಷಾಕವಚ ಮುಂತಾದುವುಗಳನ್ನು ಹೊತ್ತು ಬೆನ್ನಿಗೆ ತಿರುಗುವವ, Pack horses ಬದಲಿ ಕುದುರೆಗಳು ಮತ್ತು ಹೇರು ಕುದುರೆಗಳು ಸಾಮಾನು ಹೊರುವ ಕುದುರೆಗಳು) ಯಾವಾಗಲೂ ಸರದಾರನನ್ನು ಅನುಸರಿಸಿ ಹೋಗಬೇಕಾಗಿತ್ತು. ಅವನು ಸಾಹಸಕೃತ್ಯದ ಅವಕಾಶವನ್ನು ಹುಡುಕಿಕೊಂಡು ಹೋಗುವ ಅಭ್ಯಾಸವುಳ್ಳವನಾಗಿದ್ದನು. "None but the brave deserve the fair. ವೀರನಿಗೆ ಮಾತ್ರ ಸುಂದರಿಯನ್ನು ಕೈಹಿಡಿವ ಅರ್ಹತೆ" ಎಂಬುದು ಅವನಿಂದ ಹುಟ್ಟಿದ ಗಾದೆ. ಆರ್ತತ್ರಾಣ ಪರಾಯಣತೆ ಅವನ ಹೆಮ್ಮೆಗೆ ಕಾರಣ. ಅವನು ಸ್ವಯಂವರಕ್ಕೆ ಹೋಗುವ ರಾಜಪುತ್ರನ ಠೀವಿಯಲ್ಲಿ ಇರುತ್ತಿದ್ದನು. ಅವನು ಮೂರ್ತಿಮಂತ (Romantic Spirit) ಶೃಂಗಾರ ಸಾಹಸಿಕನಾಗಿರುತ್ತಿದ್ದನು. "ಹೀರೋ" ಎಂದರೆ ಅವನೇ. "ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ" ಎಂಬುದು ಅವನ ಜೀವನಸೂತ್ರ.

ಸರದಾರ ವರ್ಗದ ಜೊತೆಗೆ ಮಠಾಧಿಪತಿ ವರ್ಗ, ನಗರ ನೇತೃವರ್ಗ, ವಿಶ್ವವಿದ್ಯಾನಿಲಯದ ಪಂಡಿತ ವರ್ಗಗಳೂ ಮರಿರಾಜರ ಕಾಲದ ಆವರಣವನ್ನು ನಿರ್ಮಿಸುವುದರಲ್ಲಿ ಮುಖ್ಯ ಪಾತ್ರವನ್ನು ವಹಿಸಿದವು. ಕವಿ, ಗಮಕಿ, ವಾದಿ, ವಾಗ್ಮಿಪ್ರವರರು ಮತ್ತು ಪಂಡಿತರು ನಮ್ಮ ಆಸ್ಥಾನಗಳಲ್ಲಿ ರಾರಾಜಿಸಿದಂತೆಯೇ ಯೂರೋಪಿನ ಪಾಳೆಯಗಾರರ ಆಸ್ಥಾನಗಳಲ್ಲೂ ರಾರಾಜಿಸಿದರು. ಅವುಗಳ classical grandeur ಶ್ರೀಮದ್ಗಂಭೀರವಾದ ವೈಭವವು ಶೃಂಗಾರಕಾವ್ಯ, ವೀರಕಾವ್ಯಗಳ ನಿರ್ಮಾಣಕ್ಕೆ ಅವಕಾಶವನ್ನು ಒದಗಿಸಿದವು. ಇಡೀ ದೇಶವೊಂದರ ಭದ್ರತೆಯ ದೃಷ್ಟಿಯಿಂದ ಸ್ವತಂತ್ರ ಪಾಳೆಯಪಟ್ಟುಗಳ ಅಸ್ತಿತ್ವವು ಯಾವಾಗಲೂ ಸುರಕ್ಷಿತವಲ್ಲ. ವಿದೇಶೀಯ ದಾಳಿಗಾರರಿಗೆ ಅದು ಯಾವಾಗಲೂ

ಸ್ವಾಗತ ನೀಡುವ ಸನ್ನಿವೇಶ. ಆದರೆ ಶಾಂತಿಕಾಲದಲ್ಲಿ ಸಾಂಸ್ಕೃತಿಕ ಬೆಳವಣಿಗೆಗೆ ವಿಸ್ತಾರವಾದ ಅವಕಾಶ ಅವುಗಳಿಂದ ದೊರಕುತ್ತಿತ್ತು. ಶಾಂತಿ ಮಾತ್ರ ಬಹಳ ನಶ್ವರ. ಪ್ರತಿಷ್ಠಿತ ವರ್ಗಗಳ ನಿರ್ಮಾಣವು ಪ್ರಜೆಗಳಲ್ಲಿ ಉದಯವಾದದ್ದು ಪಾಳೆಯಪಟ್ಟುಗಳಲ್ಲೇ ಹೆಚ್ಚು.

ರಾಜಪ್ರಭುತ್ವದ ಜೊತೆಗೇ ಬೆಳೆದು ಬಂದ ಇನ್ನೊಂದು ಪ್ರಭುತ್ವವೆಂದರೆ ದೈವಪ್ರಭುತ್ವ. ಬ್ರಿಟಿಷರ ಕಾಲದಲ್ಲಿ ತಿರುವಾಂಕೂರಿನ ಅರಸರ ಸ್ಥಾನ, ದೇವರ ಸೇವಕರದ್ದಾಗಿತ್ತು. ರಾಜ್ಯವೆಲ್ಲಾ ಅನಂತಪದ್ಮನಾಭ ದೇವರದ್ದು; ರಾಜನು ಅವರ ಸೇವಕ. ತಿಬೇಟಿನಲ್ಲಿ ಹಿಂದೆ ದೈವಪ್ರಭುತ್ವವು ಸ್ಥಾಪಿಸಲ್ಪಟ್ಟಿತ್ತು. ಲಾಮನು ಬುದ್ಧದೇವರ ಸೇವಕನೆಂದು ರಾಜ್ಯವನ್ನು ಆಳುವವನು, ಇವನ ಬಲವೆಂದರೆ ೫೦೦೦ ಮಠಗಳಲ್ಲಿ ವಾಸಿಸುತ್ತಿದ್ದ ೪ ಲಕ್ಷ ಭಿಕ್ಷುಗಳು. ಪೋಪರ ಪದ್ಧತಿಯಂತೆ ಈ ಬೌದ್ಧಪದ್ಧತಿ ಬಹುಕಾಲ ಬಾಳಿತು.

ಬೈಜಾಂಟಿಯಂ ಪ್ರದೇಶದಲ್ಲಿ ಹೀಗೇ ದೈವವಾದಿ ಪ್ರಭುತ್ವವು ರೂಢವಾಗಿತ್ತು; ರೋಮ್ ಕೂಡಾ ಮೊದಲು ಈ ಪ್ರಭುತ್ವದಲ್ಲಿ ಇತ್ತು. ರೋಮಿನ ಚಕ್ರವರ್ತಿಗಳು ದೇವರಂತೆ ಗೌರವದಿಂದ ಪೂಜಿಸಲ್ಪಡುತ್ತಿದ್ದರು. ಕ್ರೈಸ್ತಗುರುಗಳ ಬಲದಿಂದ ಅವರು ರಾಜ್ಯಗಳನ್ನೂ, ಸಾಮ್ರಾಜ್ಯಗಳನ್ನೂ ವೈಭವದಿಂದ ಆಳಿದರು. ಜನರ ನೀತಿ, ನಡತೆ, ಶಿಕ್ಷಣ ಮತ್ತು ನಂಬಿಕೆಗಳು ಸರಕಾರದಿಂದ ರೂಪಿಸಲ್ಪಡುತ್ತಿದ್ದವು. ದಿಲೀಪ ಮಹಾರಾಜನು ಹೀಗೇ ಮಾಡುತ್ತಿದ್ದನೆಂದು ಕಾಳಿದಾಸನು ವರ್ಣಿಸಿದ್ದಾನೆ. ಇಂದಿನ ಎಷ್ಟೋ ಪ್ರಜಾಪ್ರಭುತ್ವಗಳೂ ನಾನಾ ವಿಧಾನಗಳಿಂದ ತಮ್ಮ ರಾಜಕೀಯ ಹಾಗೂ ಆಡಳಿತ ನೇತೃಗಳಿಗೆ ಪ್ರಿಯವಾದ “ಇಜಂ”ಗಳನ್ನು ಜನರಲ್ಲಿ ಪ್ರಚುರಪಡಿಸುತ್ತಿವೆ.

ದೈವಪ್ರಭುತ್ವದಲ್ಲಿ ಮತಧಾರ್ಮಿಕ ಹಿಂಸೆ ಇತ್ತು; ವಿಮತೀಯರಿಗಲ್ಲಿ ಗೌಣಸ್ಥಾನ. ಮತಧರ್ಮದ ಅನುಯಾಯಿಗಳಂತೆಯೇ ಶುದ್ಧ ರಾಜಕೀಯವೆಂದು ಹೇಳಿಕೊಳ್ಳುವ ತತ್ವದ ಹಾಗೂ ಸಂಪ್ರದಾಯದ ಅನುಯಾಯಿಗಳ ರಾಜ್ಯಭಾರದಲ್ಲೂ ಈಗ ಅನೇಕ ಕಡೆಗಳಲ್ಲಿ ಭಿನ್ನತತ್ವಾರಾಧಕರಿಗೆ ಅಲ್ಪಸ್ಥಾನವನ್ನೇ ಕೊಡಲು ಅಹೋರಾತ್ರ ಶ್ರಮಿಸಲಾಗುತ್ತಿದೆ. ಕಾಯಿದೆಯಿಂದ ಇದೇ ಎಂದು ಹೇಳಲಾದ ಎಷ್ಟೋ ಸಮಾನತೆಗಳನ್ನು ವ್ಯಾವಹಾರಿಕವಾಗಿ ಇಲ್ಲ ಎನ್ನಲಾಗುತ್ತಿದೆ. ಪ್ರಾಚೀನ ಭಾರತದಲ್ಲಿ ಇಂಥ ಧರ್ಮದ ಆಗ್ರಹ ಇದ್ದಿಲ್ಲ. ವಿನ್ಸೆಂಟ್ ಎ. ಸ್ಮಿತ್ತರ ಪ್ರಕಾರ ಅಶೋಕನ ಬೌದ್ಧ ಸಾಮ್ರಾಜ್ಯದಲ್ಲಿ ವ್ಯಕ್ತಿ ಸ್ವಾತಂತ್ರ್ಯವನ್ನು ಆಕ್ರಮಿಸುವ ಧಾರ್ಮಿಕ ಆಜ್ಞೆಗಳನ್ನು ಜನರ ಮೇಲೆ ಹೇರಲಾಗಿತ್ತು. ಈ ಮಾತಿನ ಸತ್ಯಾಸತ್ಯ ಅಂಶಗಳನ್ನು ಅಶೋಕನ ಸಾಕ್ಷಾತ್ ಆಡಳಿತದ ದಾಖಲೆಗಳಿದ್ದರೆ ಅವೇ ನಿರ್ಣಯಿಸಬೇಕು. ಇಸ್ಲಾಮಿನ ಖಲೀಫ ರಾಜ್ಯಭಾರವು ರೋಮಿನವರಂತೆಯೇ ದೈವವಾದದಿಂದ ಬದ್ಧವಾಗಿತ್ತು. ಮೊಗಲರ ಕೊನೆಯ ಕಾಲದಲ್ಲಿ ಇಸ್ಲಾಂರಾಜ್ಯ ಪದ್ಧತಿಯನ್ನು ಹಿಂದುಗಳ ಮೇಲೆ ಹೇರಲಾಯ್ತು. ಅದರ ಪ್ರಕಾರ ಹಿಂದುಗಳಿಗೆ ಮುಸಲ್ಮಾನರಿಗಿದ್ದ ಮಾನ ಸನ್ಮಾನಗಳು ಇಲ್ಲ; ಕೆಲ ಹಕ್ಕುಗಳೂ ಇಲ್ಲವಾದವು.

ಆದರೆ ಈ ಸಂದರ್ಭದಲ್ಲಿ ಒಂದು ಅಂಶವನ್ನು ಯಾರೂ ಮರೆಯಬಾರದು. Law and Order ಶಾಸನ ವಿಧೇಯತೆಯನ್ನು ಸಮರ್ಥಿಸುವ ಯಾವನೂ ಹಿಂದು

ಅಥವಾ ಮುಸಲ್ಮಾನ (ಇಲ್ಲವೇ ಬೌದ್ಧ) ಚಕ್ರವರ್ತಿಗಳು–೧. ಅಹಿಂಸೆ, ೨. ಸತ್ಯ, ೩. ಅಸ್ತೇಯ, ೪. ಶೌಚ, ೫. ಇಂದ್ರಿಯ ನಿಗ್ರಹಗಳೆಂಬ ವಿಶ್ವಮಾನವೀಯ ನೀತಿಗಳನ್ನು ಜನರು ಪಾಲಿಸುವಂತೆ ಬಿಗಿಕಟ್ಟು ಮಾಡಿದ್ದನ್ನು ಮಾತ್ರ ವ್ಯಕ್ತಿಸ್ವಾತಂತ್ರ್ಯದ ಆಕ್ರಮಣ, ಅಪಹರಣ ಎಂದು ಹೇಳಲು ಅಧಿಕಾರವುಳ್ಳವನಲ್ಲ. ಆಧುನಿಕ ಭಾರತದ ಪಾನಪ್ರತಿಬಂಧ, ವೇಶ್ಯಾವೃತ್ತಿ ನಿರ್ಬಂಧ, ಅಶ್ಲೀಲ ಚಲನಚಿತ್ರ ಬಹಿಷ್ಕಾರ, ಬಹುಪತ್ನೀವಿವಾಹ ನಿರೋಧ, ಜಮೀನುದಾರಿ ನಿರ್ಮೂಲನ ಮುಂತಾದ ಎಷ್ಟೋ ಸುಧಾರಣೆಗಳನ್ನು ವ್ಯಕ್ತಿ ಸ್ವಾತಂತ್ರ್ಯದ ಅಪಹಾರ ಎಂದು ಕಾಯಿದೆಬದ್ಧವಾಗಿ ಸಿದ್ಧಮಾಡಬಹುದು. ಕಾಯಿದೆಯ ಸ್ವಾತಂತ್ರವನ್ನು (ನೀತಿ ನಿರಪೇಕ್ಷತೆಯನ್ನು) ಮೂಲಾಧಾರವನ್ನಾಗಿ ಇಟ್ಟುಕೊಂಡ ಕಾಯದೆ ಪಂಡಿತರಲ್ಲಿ ಇಂಥ ವಾದಿಗಳು ಇದ್ದಾರೆ. ವಿಶ್ವಮಾನವೀಯವಾದ ಮೂಲಧರ್ಮಗಳ (ನೀತಿತತ್ವಗಳ) ಪಾಲನೆಯ ಬಗ್ಗೆ ಎಷ್ಟೋ ಪ್ರಜಾಪ್ರಭುತ್ವಗಳಿಂದು ಬಿಗಿಕಟ್ಟನ್ನು ಇಡದುದರಿಂದ ಅವುಗಳ ಆಡಳಿತ ಜನರಲ್ಲಿ ಆಕ್ರೋಶವನ್ನೆಬ್ಬಿಸಿದೆ.

ದೈವಪ್ರಭುತ್ವದ ಪರಮೋದಾಹರಣೆಯಾದ “ಕಾಲ್ವಿನಿಜಂ” ಪ್ರಕಾರ ನಾಟಕಗೃಹಗಳು ಬಹಿಷ್ಕಾರ್ಯವಾಗಿದ್ದವು. ಏಕೆಂದರೆ, ಅವುಗಳಲ್ಲಿ ರಂಗು, ರೂಪ, ಗಾಯನ, ವಾದನ, ಹಾಡುಗಾರಿಕೆ, ಭೋಗಲಂಪಟತೆ, ಕಾಮವಿಕಾರ, ಪಾಪಚಿಂತನ, ವ್ಯರ್ಥ ದ್ರವ್ಯವ್ಯಯ, ಕಾಲವ್ಯಯ ಉಂಟಾಗುತ್ತವೆ. ಔರಂಗಜೇಬನು ಸಂಗೀತವನ್ನು ಬಹಿಷ್ಕರಿಸಿದ್ದ. ಇಂಥ ಪ್ರಭುತ್ವಗಳು ಸಾಮಾನ್ಯವಾಗಿ ಅನಪಾಯಕಾರಿಗಳೆನ್ನಿಸುವ ಭೋಗಗಳನ್ನು ತ್ಯಾಗಮಾಡಿ, ಅವುಗಳಿಗೆ ಬದಲಾಗಿ ತಮ್ಮ ಶಕ್ತಿವಂತಿಕೆಯಲ್ಲೂ ಕ್ರೂರವಾಗಿ ಶಕ್ತಿಪ್ರಯೋಗ ಮಾಡುವುದರಲ್ಲೂ ತೃಪ್ತಿಹೊಂದುವಂಥ ಆಡಳಿತಗಾರರನ್ನು ನಿರ್ಮಿಸಿದವು ಎಂದು ಕೆಲವರ ವಿಮರ್ಶೆ. ದೇವರ ಹೆಸರಿನಲ್ಲಿ ಅಧಿಕಾರವಂತ ಶಾಸಕನು ಮತಧರ್ಮದ ನಿತ್ಯಾಚಾರಗಳನ್ನು ಉಗ್ರವಾಗಿ ಎಲ್ಲ ಪ್ರಜೆಗಳ ಮೇಲೂ ಹೇರುವ ಜುಗುಪ್ಸಾಕರ ಸನ್ನಿವೇಶವನ್ನು ಇಂದು ಯಾರೂ ಸ್ವಾಗತಿಸರು. ಆದರೆ ಬ್ರಹ್ಮ ದೇಶದ ಸರಕಾರಿ ಮತಧರ್ಮ ಈಗ ಬೌದ್ಧ; ಸಿಂಹಳದ್ದು ಅದೇ ಧರ್ಮ; ಪಾಕಿಸ್ತಾನದ್ದು ಇಸ್ಲಾಂ; ರಶಿಯದ “ಕಮ್ಯೂನಿಜಂ” ಮತಧರ್ಮದ ಸಾಲಿಗೇ ಸೇರುತ್ತದೆ ಎಂದು ಕೆಲವರ ಮತ. ವಿಮತೀಯರ ಮೇಲೆ ಸ್ವಮತಾಗ್ರಹ ಎಷ್ಟರಮಟ್ಟಿಗೆ ಎಲ್ಲೆಲ್ಲಿ ಬಿದ್ದಿವೆ? ಎಂಬುದು ಪರಿಶೀಲನೀಯ.

ಮತಧರ್ಮದಂತೆಯೇ ವರ್ಣಧರ್ಮವನ್ನು ಬಲಾತ್ಕಾರವಾಗಿ ವಿವರ್ಣೀಯರ ಮೇಲೆ ಅಧಿಕೃತವಾಗಿ ಹೇರಿದ ಉದಾಹರಣೆಯು ದಕ್ಷಿಣ ಆಫ್ರಿಕದಲ್ಲಿ ದೊರಕುತ್ತದೆ. ೨೦ನೆಯ ಶತಮಾನದಲ್ಲಿ ವರ್ಣಪ್ರಭುತ್ವವು ಅತ್ಯಂತ ಹೇಯವೆಂದು ಗಣಿಸಲ್ಪಟ್ಟಿದೆ. ಅದನ್ನು ನಿಲ್ಲಿಸಲು ದಂಡವೊಂದೇ ಉಪಾಯವೆನ್ನಿಸಿರುವುದು ಈಗ ಜಗತ್ತಿಗೆ ಗೊತ್ತಾಗಿದೆ. ವರ್ಣದ್ವೇಷದ ಮತ್ತು ಜಾತಿದ್ವೇಷದ ಹೊಗೆ ಏಳುವುದು ರಾಜಪ್ರಭುತ್ವದಲ್ಲಿ ಮಾತ್ರ ಎಂದು ಹೇಳಲು ಈಗ ಯಾರಿಗೂ ಬಾಯಿ ಇಲ್ಲ.

‘‘ಕಮ್ಯೂನಿಜಮ್ಮನ್ನು’’ ದೈವವಾದಿ ಎಂಬವರ ತರ್ಕ ಹೀಗಿದೆ: ಲೆನಿನ್ ಮಹಾಶಯನನ್ನು ದೇವತ್ವಕ್ಕೆ ಏರಿಸಿ ಪ್ರಚಾರ ಮಾಡಲಾಗುತ್ತಿದೆ. ಕ್ರೆಮ್ಲಿನ್ ಈಗ ಕಾಶಿ

ಅಥವಾ ಮೆಕ್ಕ ಎಂದು ವರ್ಣಿಸಲಾಗುತ್ತಿದೆ; ಇದು Hysteria ಹುಚ್ಚು. ತಂದೆ, ಸೂರ್ಯ, ಚೈತನ್ಯದಾಯಕ ಶಕ್ತಿ, ವಸಂತಋತು ಮುಂತಾದ ಪದಗಳಿಂದ ಈಜಿಪ್ಟಿನ ಪ್ರಾಚೀನ ಚಕ್ರವರ್ತಿಗಳನ್ನು ಸ್ತುತಿಸಿದಂತೆ ಮನುಷ್ಯ ಮಾತ್ರರಾದ ಮುಖಂಡರನ್ನು ಸ್ತುತಿಸತೊಡಗುವ ಪ್ರಭುತ್ವವು ದೈವವಾದಿಯಲ್ಲದೆ ಇನ್ನೇನಾದೀತು? ಇಂಥ ತಾರ್ಕಿಕರು Hero worship ವೀರಪೂಜೆಯನ್ನೂ ಪಾತಿವ್ರತ್ಯವನ್ನೂ ಹುಚ್ಚು ಎಂದೇ ಕರೆಯುತ್ತಾರೆ. ಭಕ್ತಿಯು ಇವರಿಗೆ ರಸವಲ್ಲ; ಸುಂದರವಾದ ಭಾವ ಕೂಡ ಅಲ್ಲ. ಆದುದರಿಂದ ಅಭಿರುಚಿಯನ್ನು ಆಧರಿಸಿ ಆಡುವ ಮಾತನ್ನು ತರ್ಕವೆಂದು ತಿಳಿದು ತರ್ಕದಿಂದ ಖಂಡಿಸಹೋಗುತ್ತಾರೆ. ಯಾರ ಜಾಗರಿತ ಅವಸ್ಥೆಯ ಮನಸ್ಸಿನಲ್ಲಿ ಯಾವ ಕಲ್ಪನೆ ಕೇಂದ್ರಬಿಂದುವನ್ನು ಆಕ್ರಮಿಸಿ, ಅತಿ ಹೆಚ್ಚುಕಾಲ ಉಳಿದಿರುವುದೋ ಅದೇ ಅವರ ದೇವರು; ಧನಜಪ ಹಿಡಿದವರಿಗೆ ಧನವೇ ದೇವರು; "ವಿಜ್ಞಾನದ" ಜಪವನ್ನು ಹಿಡಿದವರಿಗೆ ವಿಜ್ಞಾನವೇ ದೇವರು; "ಪುರಾಣ" ಜಪಮಗ್ನರಿಗೆ ಪುರಾಣವೇ ದೇವರು; ರಾಷ್ಟ್ರಜಪ ಸರ್ವೋತ್ತಮವೆಂದು ಹಿಡಿದವರಿಗೆ ರಾಷ್ಟ್ರವೇ ದೇವರು; ವೇಶ್ಯಾಜಪ ಮಾಡುವವರಿಗೆ ವೇಶ್ಯೆಯೇ ದೇವರು. ಅಂತರಂಗದ ಸತ್ಯವೇ ವಸ್ತುಸತ್ಯ, ಬಹಿರಂಗದ ವ್ಯವಹಾರವು ಕಂಡವರ ಕಲ್ಪನಾನುಸಾರವಾದ ಅರ್ಥವನ್ನು ಸೂಚಿಸುವುದು. ಮತಧರ್ಮವನ್ನು ಅಫೀಮು ಎಂದದ್ದು ಮಾರ್ಕ್ಸ್ ಮಹಾಶಯ; ಅಫೀಮಿನ ಪರಿಣಾಮವನ್ನು ಉಂಟುಮಾಡದ "ಇಜಂ" ಯಾವುದಿದೆ? ಹಾಗೇ ಯತಿಗೆ ಭೂಪತಿಯು ಹುಚ್ಚನಾಗಿ ತೋರುವನು. ಭೂಪತಿಗೆ ಯತಿಯು ಹುಚ್ಚನಾಗಿ ತೋರಬಹುದು. ಆವೇಶ, ಅಭಿಮಾನ, ನಿಷ್ಠೆಗಳಿಲ್ಲದೆ ಯಾವ ಆದರ್ಶವನ್ನೂ ಮನುಷ್ಯನು ಸಾಧಿಸಲು ಕಲಿಯಲಾರ. ಭಾವನಾವಿಮುಖವಾದ ಬುದ್ಧಿಯು ಜೀವನದಲ್ಲಿ ಅರ್ಥಹೀನ. Intensity of Emotion ಭಾವನೆಯ ಸಾಂದ್ರತೆಯ ಶಕ್ತಿಯು ಆಧುನಿಕ ಜೀವಶಾಸ್ತ್ರೀಯ ನೀತಿವೌಲ್ಯಗಳನ್ನು ಗಟ್ಟಿಯಾಗಿ ಅಪ್ಪಿಕೊಂಡಾಗ Materialism ಭೌತವಾದದ ಅಸಮಾಜವಾದೀಯ ರಾಜಕೀಯ ವಿಚಾರಗಳೇ ದೇವರೆನ್ನಿಸಿ, ಸಮಾಜವಾದೀಯ ಮತ್ತು ರಾಜಪ್ರಭುತ್ವೀನ ಆಚಾರ, ವಿಚಾರ, ಉಚ್ಚಾರಗಳು ಹುಚ್ಚಾಗಿ ತೋರುತ್ತವೆ. ಪೂರ್ವಗ್ರಹ ನಿಷ್ಠವಲ್ಲದ ಜೀವನ ಸಿದ್ಧಾಂತವಿಲ್ಲ. ಪೂರ್ವಗ್ರಹಗಳು ಸಾಮಾಜಿಕ ಸಂಸ್ಕಾರಜನ್ಯ. ಆದುದರಿಂದ ಕಮ್ಯೂನಿಸ್ಟ್ ಸಂಸ್ಕಾರಸಂಪನ್ನರಿಗೆ "ಬೂರ್ಜ್ವಾಜಿ" ಹೆಚ್ಚಾಗಿ ತೋರುವುದು ಆಶ್ಚರ್ಯವಲ್ಲ. ಮತಧರ್ಮಗಳ ಬಗ್ಗೆ ಗೌರವವಿರುವವರಿಗೆ ಜೀವಶಾಸ್ತ್ರೀಯ ಭೌತವಾದ ಎಂಬ ಪ್ರಾಕೃತ ನೀತಿ ನಿಯಮಗಳಿಂದ ಬದ್ಧವಾದ ಅಭಿರುಚಿ–ಅಭಿಪ್ರಾಯಗಳು ಹುಚ್ಚಾಗಿ ತೋರಿದರೆ ಅಸ್ವಾಭಾವಿಕವೆನ್ನಲು ಬರದು. ಪ್ರಾಪಂಚಿಕರ ಬುದ್ಧಿಗೆ ಒಪ್ಪಿಗೆಯಾಗುವ ಯಾವ ಮೌಲ್ಯವೂ Aesthetic ರಸನಿಷ್ಠ ವಿಚಾರದ ಮಹಾವೃತ್ತದ ಹೊರಗೆ ಕಾಲಿಡಲಾರದು ಎಂಬುದು ನಿಷ್ಠುರವಾದ ಮಾನಸಶಾಸ್ತ್ರೀಯ ಸತ್ಯ. ಆದುದರಿಂದ ಪ್ರಯೋಜನವಿಮುಖವಾದ ತರ್ಕವು ತರ್ಕವೇ ಅಲ್ಲ. "ಕಮ್ಯೂನಿಜಂ" ಅಫೀಮೂ ಅಲ್ಲ, ದೈವವಾದಿಯೂ ಅಲ್ಲ– ಪ್ರಸಿದ್ಧಾರ್ಥದಲ್ಲಿ.



# ೬

# ಪ್ರಜಾಪ್ರಭುತ್ವ

ಪ್ರಜಾಪ್ರಭುತ್ವದದ ಸ್ಥೂಲ ಲಕ್ಷಣಗಳನ್ನುಳ್ಳ ರಾಜಕೀಯ ವ್ಯವಸ್ಥೆಯ ಅತಿ ಪ್ರಾಚೀನ ನಿದರ್ಶನ ಸಿಗುವುದು ಭಾರತದಲ್ಲಿ. ಆದರೆ ಅಂದಿನ ಆ ಗಣರಾಜ್ಯಗಳ ಚೌಕಟ್ಟಿನ ಸ್ಪಷ್ಟವಾದ ವಿವರಗಳು ದೊರಕುವುದಿಲ್ಲ ಎಂಬುದು ಪಾರ್ಕಿನ್ ಸನ್ ಮುಂತಾದವರ ಮತ. ಋಗ್ವೇದದಲ್ಲಿ (ಕ್ರಿ.ಪೂ.೩೦೦೦) ಗಣಗಳ ಉಲ್ಲೇಖವಿದೆ. ಗಣದ ಪತಿ 'ಗಣಪತಿ' ಅಥವಾ ರಾಷ್ಟ್ರಪತಿ. ಅವನು ಗಣಶ್ರೇಷ್ಠ., ಇದಕ್ಕಿಂದ ಹೆಚ್ಚು ಅದರಲ್ಲಿ ಇಲ್ಲ. ಆದರೆ ಮಹಾಭಾರತದ ಶಾಂತಿಪರ್ವದ ರಾಜಧರ್ಮಾನುಶಾಸನವೆಂಬ ಉಪಪರ್ವದಲ್ಲಿ ೧೦೭ನೆಯ ಅಧ್ಯಾಯವು ಗಣವೃತ್ತವನ್ನು ಹೆಚ್ಚು ವಿವರಪೂರ್ವಕವಾಗಿ ಕೊಟ್ಟಿದೆ. ಈ ಗ್ರಂಥದ ಆದಿಯು ಕ್ರಿ.ಪೂ.೪ನೆಯ ಶತಮಾನ.

## ಗಣವೃತ್ತ

ಗಣಗಳ ಮತ್ತು ಕುಲಗಳ ಯಜಮಾನನು ಗಣರಾಜ ಎನ್ನಿಸುತ್ತಾನೆ. ಲೋಭಕ್ರೋಧಗಳು ಗಣದಲ್ಲಿ ಪರಸ್ಪರ ವೈರವನ್ನು ಹುಟ್ಟಿಸುತ್ತವೆ. ಶತ್ರುಗಳ ಭೇದೋಪಾಯಕ್ಕೆ ಬಲಿಯಾದಾಗ ಗಣಗಳು ನಾಶಹೊಂದುತ್ತವೆ. ಗಣಗಳಲ್ಲಿ ಒಡಕುಹುಟ್ಟಿದಾಗ ಅವನ್ನು ಗೆಲ್ಲುವುದು ಬಹು ಸುಲಭ. ಆದುದರಿಂದ ಗಣಗಳು ಯಾವಾಗಲೂ ಸಾಂಘಿಕ ಶಕ್ತಿಯನ್ನು ಬೆಳೆಯಿಸಿಕೊಳ್ಳಲು ಪ್ರಯತ್ನಿಸುತ್ತಲೇ ಇರಬೇಕು. ಪರಸ್ಪರರ ಅಭಿಪ್ರಾಯಗಳನ್ನು ಕೇಳುವ ತಾಳ್ಮೆಯನ್ನು ಬೆಳೆಸಿಕೊಂಡು ಪರಸ್ಪರ ಮೋಸ ಮಾಡುವುದನ್ನು ಬಿಟ್ಟರೆ, ಯಾವಾಗಲೂ ಗಣರಾಜ್ಯದ ಪ್ರಜೆಗಳು ಸುಖಿಗಳಾಗುತ್ತಾರೆ ಎಂಬುದು ಜ್ಞಾನವೃದ್ಧರ ಮತ. ಇದ್ದದ್ದನ್ನು ಇದ್ದಂತೆಯೇ ನೋಡುವ ಬುದ್ದಿಯನ್ನು ತಳೆದು, ತಮ್ಮಂತೆಯೇ ಪರರು ಎಂದು ತಿಳಿದು, ನಿಜವಾದ ನೀತಿವಂತರನ್ನು ಗುರುತಿಸಿ ಮನ್ನಿಸಿ, ಶಾಸ್ತ್ರೀಯವಾಗಿ ವ್ಯವಹಾರಗಳು ನಡೆಯುವಂತೆ ವ್ಯವಸ್ಥೆ ಮಾಡಿಕೊಂಡರೆ ಅವರು ಅಭಿವೃದ್ಧಿಯನ್ನು ಹೊಂದುತ್ತಾರೆ. ಅಣ್ಣ–ತಮ್ಮಂದಿರನ್ನೂ, ಮಕ್ಕಳು–ಮರಿಗಳನ್ನೂ ಸರಿಯಾದ ನಿಗ್ರಹದಲ್ಲಿ ಇಟ್ಟುಕೊಂಡು ಅವರಿಗೆ ವಿದ್ಯೆ, ಬುದ್ಧಿ, ವಿನಯಗಳನ್ನು ಬೆಳೆಯಿಸಿಕೊಳ್ಳುವ ಅನುಕೂಲ ಮಾಡಿಕೊಟ್ಟು ವಿನೀತರನ್ನಾಗಿ ಮಾಡಿ, ಅವರನ್ನು ಅನಂತರ ಆದರಿಸುವ ಗಣಪ್ರಜೆಗಳು ಏಳಿಗೆ ಹೊಂದುತ್ತಾರೆ. ಅವರು ಪ್ರಾಜ್ಞರನ್ನೂ, ಶೂರರನ್ನೂ, ಮಹೋತ್ಸಾಹವಂತರನ್ನೂ ವಿವಿಧ ಲೋಕೋಪಕಾರಿ ಕರ್ಮಗಳಲ್ಲಿ ಸ್ಥಿರವಾದ ಪೌರುಷವುಳ್ಳವರನ್ನೂ ಸನ್ಮಾನಿಸುವ ರೂಢಿಯನ್ನು ಇಟ್ಟುಕೊಂಡು ಯಾವಾಗಲೂ

ಯುಕ್ತರಾಗಿದ್ದರೆ (ಸಂಯುಕ್ತರೂ ಔಚಿತ್ಯಜ್ಞರೂ ಆಗಿದ್ದರೆ) ಉತ್ತಮ ಗತಿಯನ್ನು ಪಡೆಯುತ್ತಾರೆ. ಕ್ರೋಧ, ಭೇದ, ಭಯ, ದಂಡ, ಕರ್ಷಣ (Prevailing upon), ನಿಗ್ರಹ, ವಧೆಗಳನ್ನು ಪರಸ್ಪರರತ್ತ ಮಾಡುತ್ತ ಹೋದರೆ ಗಣಗಳು ಹಗೆಗಳ ವಶವಾಗುವುದು ಐದು ನಿಮಿಷ. ಒಡಕಿಗೆ ತುತ್ತಾದ ಗಣನಾಗರಿಕರು ಅರ್ಥವನ್ನು ಕಳೆದುಕೊಂಡು ಅನರ್ಥವನ್ನು ಎದುರಿಸಲು ಕೇವಲ ವೈಯಕ್ತಿಕವಾದ ತಮ್ಮ ಶಕ್ತಿಯನ್ನು ಪ್ರಯೋಗಿಸಬೇಕಾಗುತ್ತದೆ. ಅಂಥವರು ಪರಸ್ಪರ ವಂಚನೆಗಿಳಿದು ತಮ್ಮ ಕುಲವನ್ನೇ ನಾಶಮಾಡಿಕೊಳ್ಳುತ್ತಾರೆ. ಗಣರಾಜ್ಯಕ್ಕೆ ಬಾಹ್ಯಶತ್ರುಗಳ ಭಯವು ಅಷ್ಟೇನೂ ಅಪರಿಹಾರ್ಯವಾಗದು; ಅಂತಃಶತ್ರುಗಳಿಂದ ಉಂಟಾಗುವ ಭಯವು ದುರ್ನಿವಾರ್ಯ. ಅದರಿಂದ ರಾಜ್ಯವನ್ನು ರಾಷ್ಟ್ರದ್ರೋಹಿಗಳಿಂದ ಸಂರಕ್ಷಿಸಿಕೊಳ್ಳುವುದೇ ಅತ್ಯಂತ ಮಹತ್ವವುಳ್ಳದ್ದು. ಅಂತಃಶತ್ರುಗಳು ನಿಮಿಷಾರ್ಧದಲ್ಲಿ ರಾಜ್ಯದ ಬೇರನ್ನೇ ಕಡಿದುಹಾಕುತ್ತಾರೆ. ಕ್ರೋಧ, ಲೋಭ ಮೋಹಗಳಿಂದ ಪರಸ್ಪರ ಮಾತಾಡುವುದನ್ನೇ ಬಿಡುವಷ್ಟರವರೆಗೆ ಕೆಲವರು ಹೋಗುತ್ತಾರೆ. ಅದು ಗಣರಾಜ್ಯವು ಸೋಲಿನತ್ತ ಒಲೆದಿದೆ ಎಂಬುದರ ಸೂಚಕ.

ಗಣರಾಜ್ಯದ ಪ್ರಜೆಗಳು ಜಾತಿಯಲ್ಲೂ ಕುಲದಲ್ಲೂ ಸಮಾನರು; ಆದರೆ ಉದ್ಯೋಗ, ಬುದ್ಧಿ, ರೂಪ, ದ್ರವ್ಯಗಳಲ್ಲಿ ಭಿನ್ನರು. ಇಂಥವರು ಭೇದ ಪ್ರಯೋಗದಿಂದಲೂ ಲಂಚ ಕೊಡುವುದರಿಂದಲೂ ಐಕ್ಯವನ್ನು ಬಿಟ್ಟು ಅನೈಕ್ಯವನ್ನು ಹಿಡಿಯುವಂತೆ ಹಗೆಗಳು ಯೋಜಿಸಬಹುದು. ಆದುದರಿಂದ "ಏನೇ ಬರಲಿ ಒಗ್ಗಟ್ಟಿರಲಿ" ಎಂಬುದು ಅವರ ಗಾಯತ್ರಿಯಾಗಬೇಕು.

ಇದು ಮಹಾಭಾರತ ಹೇಳಿದ ಗಣಧರ್ಮ. ಇದರಿಂದ ಗಣರಾಜ್ಯದ ಅಸ್ತಿತ್ವ ಮತ್ತು ಅದರ ಅಸ್ತಿವಾರಗಳ ಪರಿಚಯ ಚೆನ್ನಾಗಿ ಆಗುತ್ತದೆ. ಗಣರಾಜ್ಯದ ಆಡಳಿತ ವಿವರಗಳೂ ಸಂಘ–ಸಂಸ್ಥೆಗಳೂ ಇಲ್ಲಿ ಬಂದಿಲ್ಲ. ತಾತ್ವಿಕ ದೃಷ್ಟಿಯಿಂದ ಅವುಗಳಿಗೆ ಬಹಳ ಮಹತ್ವವಿಲ್ಲ. ಆಡಳಿತದ ಸಿಬ್ಬಂದಿಗಳನ್ನು ಯಾವ ಪ್ರಭುತ್ವ ಇಟ್ಟುಕೊಳ್ಳುವುದಿಲ್ಲ? ಪ್ರತಿಯೊಂದು ವಿಷಯವನ್ನೂ ಗಣಶ್ರೇಷ್ಠನ ಅಧ್ಯಕ್ಷತೆಯಲ್ಲಿ ಚೆನ್ನಾಗಿ ವಿವೇಚಿಸಿ ಕಾರ್ಯಾರಂಭ ಮಾಡುವ ಜನರು ಆಯ್ದ ಮಂತ್ರಿಮಂಡಲವು ಸರ್ವಾನುಮತದ ನಿಯಮವನ್ನು ತಪ್ಪದೆ ಪಾಲಿಸುವುದು ಅತ್ಯಂತ ಅನಿವಾರ್ಯ ಎಂಬುದು ಸ್ಪಷ್ಟವಾಗುತ್ತದೆ. ವ್ಯಾವಹಾರಿಕವಾಗಿ ಬಂದ ಬಹುಮತವೂ ಸರ್ವಮತವಾಗಿ ಮಾರ್ಪಡುವಂತೆ ನೋಡಿಕೊಳ್ಳಬೇಕು; ಅನಂತರವೇ ಕಾರ್ಯವನ್ನು ಆರಂಭಿಸಬೇಕು ಎಂಬುದು ಗಣರಾಜ್ಯದ ಅಧಿಕಾರ ಸೂತ್ರ.

"ಗಣ" ಎಂದರೆ ಕುಲ (Tribe); ವರ್ಗ (Class) ದಳ (A small body of troops) "ಗಣಕರ್ಮ"ವೆಂದರೆ ಸಾರ್ವಜನಿಕ ಕೆಲಸ. ಗಣಪ ಅಥವಾ ಗಣನಾಯಕನು ಸಭಾಧ್ಯಕ್ಷ ಅಥವಾ ನಿಗಮಾಧ್ಯಕ್ಷ. "ಗಣಪತಿ"ಗೂ ಅದೇ ಅರ್ಥ. "ಗಣಪುಂಗವ" ಎಂದರೂ ಗಣಪತಿಯೇ;. "ಗಣಪೂಜ್ಯ" ಗಣಪೂರ್ವ", "ಗಣಪ್ರಮುಖ" ಎಂದರೂ (Mass Leader) ಜನತಾ ಮುಖಂಡ ಎಂದೇ ಆಗುತ್ತದೆ. "ಗಣಾಧಿಶ, ಗಣೇಶ್ವರ, ಗಣಾಧ್ಯಕ್ಷ" ಎಂಬ ಪದಗಳಿಗೆ "ಸೇನಾಪತಿ" ಎಂಬ ಅರ್ಥವಿದೆ. ಗಣಾಚಾರ್ಯನು ಜನತಾಶಿಕ್ಷಕ. "ಗಣಭೋಜನ" ಎಂದರೆ ಎಲ್ಲರೊಡನೆ ಕುಳಿತು ಉಣ್ಣುವುದು. "ಗಣಾನ್ನವು" ಸರ್ವರಿಗಾಗಿ

ಮಾಡಿದ ಆಹಾರ. "ಗಣ್ಯ"ನು ಸಮಷ್ಟಿಗೆ, ವರ್ಗಕ್ಕೆ ಅಥವಾ ಸೈನ್ಯಕ್ಕೆ ಸೇರಿದವನು. ದಕ್ಷಿಣ ಭಾರತದ ಒಂದು ಸಾಮ್ರಾಜ್ಯಕ್ಕೆ ಗಣರಾಜ್ಯವೆಂಬ ಹೆಸರಿತ್ತಂತೆ. ಇದು ಪ್ರಾಚೀನ ಗಣಾರ್ಥಪರಂಪರೆ.

## ನಗರ–ರಾಜ್ಯ

ಇನ್ನು ಮುಂದೆ ಅಥೆನ್ಸಿನ ಪ್ರಾಚೀನ ಚರಿತ್ರೆಯನ್ನು ನೋಡೋಣ. ಅಲ್ಲಿ (City States) ನಗರ ರಾಜ್ಯಗಳು ಇದ್ದವಂತೆ. ಅಲ್ಲಿಯ ಸಮಾಜದ ವಿಶಿಷ್ಟ ಅಂಶವೆಂದರೆ ವ್ಯಕ್ತಿ ಕೇಂದ್ರೀಕೃತ ವ್ಯವಹಾರ. ಭಾರತ–ಚೀನಗಳ ಸಮಾಜಧರ್ಮಗಳು ಸಮಾಜಕೇಂದ್ರೀಕೃತ. ರಾಧಾಕಮಲ ಮುಖರ್ಜಿ ಹೇಳುವಂತೆ ಪಶ್ಚಿಮದ ಎಲ್ಲ ಪ್ರಭುತ್ವಗಳೂ ಹಿಂದೆ ಹೆಚ್ಚಾಗಿ ಪರಮಸರ್ವಾಧಿಕಾರಗಳನ್ನು ಗಳಿಸಿಕೊಂಡು ಜೀವನದ ಸರ್ವ ಕಾರ್ಯಕ್ಷೇತ್ರಗಳಲ್ಲೂ ಕೈ ಹಾಕಿದುದರಿಂದ ನಾಗರಿಕತೆಯನ್ನು ತಪ್ಪುದಾರಿಗೆ ಎಳೆದವು. ಭಾರತ–ಚೀನಗಳಲ್ಲಿ ಸಮಾಜದ ಗಣಗಳು ತಮ್ಮ ತಮ್ಮ ಪ್ರತ್ಯೇಕ ನೀತಿ ನಿಯಮಗಳನ್ನು ರಚಿಸಿಕೊಂಡು ಸಾಮುದಾಯಿಕ ವೈವಿಧ್ಯದ ಫಲವಾಗಿ ಹೆಚ್ಚು ಸ್ವತಂತ್ರ ಗಣಜೀವನ ನಡೆಸುವ ಅನುಕೂಲ ಒದಗಿತು. ಗಣಧರ್ಮಗಳ ಸಂಕುಚಿತತೆಯನ್ನು ಮೀರಿದ ಸಾರ್ವಧರ್ಮ ನಿಯಮಗಳು ಗಣಗಳಲ್ಲಿ ಸಹಕಾರ, ಪ್ರೀತಿಗಳು ಬೆಳೆಯುವಂತೆ ಮಾಡಿದವು.

## ಪ್ರಭುತ್ವಪದ್ಧತಿ

ಅಥೆನ್ಸಿನಲ್ಲಿ ಮೊದಲು ದೇವತಾತ್ಮನಾದ ಅರಸ ಆಳುತ್ತಿದ್ದ. ಆಮೇಲಿನ ಹಂತದಲ್ಲಿ ರಾಜಕುಟುಂಬದ ಸದಸ್ಯನನ್ನು ಆಯ್ಕೆ ಮಾಡುವುದು ಆರಂಭವಾಯ್ತು. ಅನಂತರ ರಾಜನಿಗೆ ಸಹಾಯ ಮಾಡಲೆಂದು ಸೇನಾಪತಿಯನ್ನೂ ನ್ಯಾಯಾಧೀಶನನ್ನೂ ಆಯ್ದು ಕೊಟ್ಟಿತು. ಕ್ರಿ.ಪೂ. ೭೫೩ರ ಹೊತ್ತಿಗೆ ಸರದಾರರ ಕುಟುಂಬದಿಂದ ನ್ಯಾಯಾಧೀಶನನ್ನು ಆಯುವ ರೂಢಿ ಬೆಳೆಯಿತು. ಅಧಿಕಾರಾವಧಿಯನ್ನು ೧೦ರಿಂದ ೧ ವರ್ಷಕ್ಕೆ ಇಳಿಸಲಾಯ್ತು. ಅನಂತರ ಕುಬೇರ ವಿದ್ವತ್ಸಭೆಯ ನಿಯಂತ್ರಣ ಶುರುವಾಯ್ತು. ಕ್ರಿ.ಪೂ. ೬೮೩ರ ಹೊತ್ತಿಗೆ ಅಥೆನ್ಸಿನಲ್ಲಿ ರಾಜಪ್ರಭುತ್ವ ಹೋಗಿ ಕುಬೇರ ಪ್ರಭುತ್ವ (Aristocracy) ಬಂತು. ಪೂರ್ವದೇಶದ ಅಳೆಗೋಲನ್ನು ಹಿಡಿದು ನೋಡಿದರೆ, ಗ್ರೀಕರು ಅಂಥ ಧಾರ್ಮಿಕರೆನ್ನಿಸಿದ್ದಿಲ್ಲ. ಆದುದರಿಂದ ಕುಬೇರಪ್ರಭುತ್ವಕ್ಕೆ (Sanction) ಪವಿತ್ರಾಧಿಕಾರಿಕ ಮನ್ನಣೆ ಇಲ್ಲವಾಗಿ ಅದು ಸಡಿಲವಾಗುತ್ತ ಹೋಯಿತು. ಅದು ಕೊನೆಗೊಂಡದ್ದು ಕ್ರಿ.ಪೂ.೬೦೦ರಲ್ಲಿ. ಆಗ ರಾಜಪ್ರಭುತ್ವದ ಚೌಕಟ್ಟನ್ನು ಸೋಲೋನ್ ತಯಾರಿಸಿದ. ಕ್ಲಿಸ್ತೆನೀಸ್ ಅದನ್ನು ಪೂರ್ಣ ರೂಪಕ್ಕೆ ಮುಟ್ಟಿಸಿದ. ಅಥೆನ್ಸಿನ ಪ್ರಜಾಪ್ರಭುತ್ವವು ಕ್ರಿ.ಪೂ. ೩೮೩ರ ವರೆಗೆ ಬಾಳಿತು.

## ಪ್ರಜಾಪ್ರಭುತ್ವದುದಯ

ಪ್ರಜಾಪ್ರಭುತ್ವದ ಪ್ರವೇಶನಕ್ಕಾಗಿ ಸೊಲೋನನೂ ಕ್ಲಿಸ್ತೆನೀಸನೂ ಮಾಡಿದ ಮೊದಲನೆಯ ಕಾರ್ಯವೆಂದರೆ ಉಪಕುಲ (Clans)ಗಳನ್ನು ಅಮುಖ್ಯಗೊಳಿಸಿದ್ದು. ಉಪಕುಲಗಳಂಥ

ಸಂಘಟಿತ ಸಮುದಾಯಗಳೂ ವಿದ್ವತ್ಸಭೆಯೂ (ಏರೋಪೇಗಸ್ ಎಂಬ ೯ ಸದಸ್ಯರ ಮಂಡಲ) ಅವನ ಪ್ರಕಾರ ಅಡ್ಡಿ ಆತಂಕಗಳು. ಆದುದರಿಂದ ಅವುಗಳನ್ನು ಕಿತ್ತು ಹಾಕಿ ಜನರನ್ನು ೧೦ (Demos) ಪುರಗಣಗಳನ್ನಾಗಿ ವಿಂಗಡಿಸಲಾಯಿತು. ಆ ಪುರಗಣಗಳು ಉಪಕುಲ ಸಂಬಂಧಗಳಿಂದ ಮುಕ್ತವಾಗಿದ್ದವು. ಅಂಥ ಪ್ರಜಾಪ್ರಭುತ್ವವು (Direct) ನೇರವೂ, (Representative) ಪ್ರಾತಿನಿಧಿಕವೂ ಆದ ಪ್ರಜಾಪ್ರಭುತ್ವದ ವರ್ಗಕ್ಕೆ ಸೇರುತ್ತದೆ. ಪೆರಿಕ್ಲೀಸನ ಕಾಲದಲ್ಲಿ (Ecclesia) ಎಂಬ ಗಣಸಭೆಯಲ್ಲಿ ೨೦,೦೦೦ ಸದಸ್ಯರಿದ್ದರು. ವರ್ಷದಲ್ಲಿ ೪೦ ಸಲ ಸಭೆ ಸೇರಿದ್ದಕ್ಕಾಗಿ ಅವರಿಗೆ ಪ್ರತಿಸಲವೂ ಗೌರವಧನವನ್ನು ಕೊಡಲಾಯಿತು. ಗಣಸಭೆ ಆಯ್ದ ೫೦೦ ಸದಸ್ಯರ ಮಂಡಲವು (ಕಾರ್ಯನಿರ್ವಾಹಕ ಸಮಿತಿ ಅಥವಾ ಸರಕಾರವು) ಐದು ದಿನಗಳಿಗೊಮ್ಮೆ ೫೦ರ ಐದು ಗುಂಪಾಗಿ ಒಡೆದು ಸಭೆ ಸೇರುತ್ತಿತ್ತು. ನ್ಯಾಯ, ಯುದ್ಧ, ದ್ರವ್ಯ, ವಿದ್ಯೆ, ಮತಧರ್ಮ, ನೌಕಾತಾಣ್ಯ, ಲೆಕ್ಕಪತ್ರಗಳ ವಿಲೇವಾರಿಗಳನ್ನು ಉಪಸಮಿತಿಗಳು ನೋಡಿಕೊಳ್ಳುತ್ತಿದ್ದವು. ಇವುಗಳಿಗಿಂತ ಕೆಳದರ್ಜೆಯ ವಿಷಯಗಳ ವ್ಯವಹರಣೆಗೆ ಅಗತ್ಯವಾದ ಅಧಿಕಾರಿಗಳನ್ನು ಲಾಟರಿಕ್ರಮದಿಂದ ಆಯ್ಕೆ ಮಾಡಲಾಗುತ್ತಿತ್ತು. ಎಲ್ಲ ಸಮಿತಿಗಳ ಒಟ್ಟು ಸದಸ್ಯ ಸಂಖ್ಯೆ ಸುಮಾರು ೧,೨೦೦ರಿಂದ ೧,೪೦೦ರವರೆಗೆ ಆಗುತ್ತಿತ್ತು. "ಜೂರಿ"ಗಳಂತೆ ಗಣಸಭೆಯ ೫೦೦ ಸದಸ್ಯರು ಬೇರೆ ಬೇರೆ ಗುಂಪುಗಳಾಗಿ ಕುಳಿತು ನ್ಯಾಯಪ್ರಕರಣಗಳನ್ನು ಪರಿಶೀಲಿಸಿ ತೀರ್ಮಾನಗಳನ್ನು ಕೊಡುತ್ತಿದ್ದರು.

## ಅಥೆನ್ಸಿನಲ್ಲಿ

ಅಂದು ಅಥೆನ್ಸ್ ರಾಜ್ಯದ ಒಟ್ಟು ಜನಸಂಖ್ಯೆ ೩ ಲಕ್ಷ, ೨೦ ಸಾವಿರ. ಅದರಲ್ಲಿ ೨೦,೦೦೦ ಜನರಿಗೆ ಸಂಪೂರ್ಣವಾದ ರಾಜಕೀಯ ಹಕ್ಕುಗಳಿದ್ದವು. ಗುಲಾಮರಿಗೆ, ವಿದೇಶೀಯರಿಗೆ, ಅಪ್ರಾಪ್ತ ವಯಸ್ಕರಿಗೆ ಮತ್ತು ಸ್ತ್ರೀಯರಿಗೆ ಮತಾಧಿಕಾರವಿದ್ದಿಲ್ಲ. ಕೆಲ ರಾಜನೀತಿ ವಿಮರ್ಶಕರ ಮತಾನುಸಾರ ಗುಣದೋಷಗಳ ಲೆಕ್ಕದಂತೆ ಅಥೆನ್ಸಿನ ಅಂದಿನ ಐತಿಹಾಸಿಕ ಸಂದರ್ಭದಲ್ಲಿ ಪ್ರಜಾಪ್ರಭುತ್ವವು ಪರಮಾವಧಿ ಜಯಶಾಲಿಯಾಗಿ ನಡೆಯಿತು. ಈ ಮತದ ಪ್ರಕಾರ ಪ್ರಜಾಪ್ರಭುತ್ವದ ಇಂದಿನ ಇತರ ಚೌಕಟ್ಟುಗಳು ಅಷ್ಟು ಯಶಸ್ವಿಗಳಾಗಲಾರವು ಎಂಬುದು ಅನಿವಾರ್ಯವಾದ ತೀರ್ಮಾನ; ಅದರ ಪ್ರಜಾಪ್ರಭುತ್ವೀನ ನ್ಯೂನತೆಗಳು ಇಂತಿವೆ: (೧) ಬಡವ–ಶ್ರೀಮಂತರಿಬ್ಬರಿಗೂ ಮತಾಧಿಕಾರ ದೊರಕಿದ್ದು; ಅದರ ಫಲವಾಗಿ ಬಡವರು ಶ್ರೀಮಂತರಿಗೆ ಹೆಚ್ಚು ತೆರಿಗೆಯನ್ನು ವಿಧಿಸಿ ಅವರನ್ನು ಅಸಂತೋಷಗೊಳಿಸಿದರು; ಅದರಿಂದ ಶ್ರೀಮಂತರು ಪ್ರತ್ಯೇಕ ಸಂಘವನ್ನು ಕಟ್ಟಿಕೊಂಡರು ಮತ್ತು ಆ ಮೂಲಕ ರಾಜಕೀಯ ಸುಧಾರಣೆಗಳನ್ನು ಮಾಡಲು ಯತ್ನಿಸಿದರು. ಇದನ್ನು ರಾಜದ್ರೋಹ (ಪ್ರಜಾದ್ರೋಹ) ಎಂದು ಗಣಿಸಿ ಅನೇಕ ಶ್ರೀಮಂತರನ್ನು ಕ್ರಿ.ಪೂ. ೪೧೦–೪೦೫ರ ನಡುವೆ ಶಿಕ್ಷೆಗೆ ಗುರಿಪಡಿಸಲಾಯ್ತು. ಯುರಿಪಿಡಿಸ್ ಅಗಥಾನ್ ಮುಂತಾದವರು ಮೆಸಿಡೋನಿಯಕ್ಕೆ ಓಡಿಹೋದರು. ಹೀಗೆ ಶ್ರೀಮಂತರ ಅಥವಾ ಕುಬೇರರ ವಿದ್ರೋಹಿ ಚಟುವಟಿಕೆಗಳ ಫಲವಾಗಿ ಅಥೆನ್ಸಿನ ಪ್ರಜಾಪ್ರಭುತ್ವವು ಸೋತಿತು.

## ಭಾರತದಲ್ಲಿ

ಇಂದು ಭಾರತದಲ್ಲಿ ಶ್ರೀಮಂತ ಬಡವರಿಬ್ಬರೂ ಸಮಾನ ಮತದಾರರಾಗಿ ಹಲವಾರು ರಾಜಕೀಯ ಪಕ್ಷಗಳಲ್ಲಿ ಸದಸ್ಯರಾಗಿದ್ದಾರೆ. ಪ್ರಜಾಪ್ರಭುತ್ವೀನ ಸಮಾಜವಾದವು ಆಳುವ ಪಕ್ಷದ ಧೋರಣೆಯಾಗಿದೆ. ಯಾವ ಪಕ್ಷದಲ್ಲಿ ಹೀಗೆ ಧನಿಕ–ದರಿದ್ರರಿಬ್ಬರ ಪ್ರತಿನಿಧಿಗಳು ಇದ್ದಾರೋ ಆ ಪಕ್ಷವು ಧನಿಕರಿಗೆ ಅಪ್ರಿಯವಾದ ಸಮಾಜವಾದೀಯ ಆರ್ಥಿಕ ಸುಧಾರಣೆಗಳನ್ನು ತರಲು ಅತ್ಯಂತ ಕಷ್ಟಪಡಬೇಕಾದೀತು ಇಲ್ಲವೆ ಒಡೆದು ಸೋತು ಹೋಗಬೇಕಾದೀತು ಎಂಬುದು ಅನಿವಾರ್ಯವಾಗುವುದು ಸಹಜವಲ್ಲವೆ?

ಅಥೆನ್ಸಿನ ಪ್ರಜಾಪ್ರಭುತ್ವದ ೨ನೆಯ ದೋಷವೆನ್ನಿಸುವ Top Heavy Administration "ಸಿವಿಲ್ ಸರ್ವೆಂಟ್ಸ್" ಸಂಖ್ಯೆ ಅತಿಯಾದ ವೆಚ್ಚಕ್ಕೆ ಕಾರಣವಾದದ್ದು. ಉತ್ಪಾದಕ ನೌಕರರ ಹಾಗೂ ಪ್ರಜೆಗಳ ಸಂಖ್ಯೆಯನ್ನು ಕಡಿಮೆ ಮಾಡಿದಂತಾಗಿ ಸರಕಾರದ ಕೋಶ ಬರಿದಾಯಿತು. ಇಂದು ಭಾರತದಲ್ಲಿ ಈ ದೋಷ ಕಂಡುಬಂದಿದೆ. ಇದರ ಪರಾಮರ್ಶೆಯಾಗಬೇಕಾಗಿದೆ. ಆಮೇಲೆ, ವಿದೇಶಧೋರಣೆ ವಿದೇಶವ್ಯವಹಾರಗಳಲ್ಲೂ ಅಥೆನ್ಸ್ ಸರಿಯಾದ ನೀತಿಯನ್ನು ಅನುಸರಿಸಲಿಲ್ಲ. ಈ ಅಂಶವನ್ನೂ ಭಾರತೀಯ ವಿದೇಶ ನೀತಿ ವಿಶಾರದರು ಪರಾಮರ್ಶಿಸುವುದು ಅತ್ಯಗತ್ಯವೆಂಬ ಪರಿಸ್ಥಿತಿ ಈಗ ಉಂಟಾಗಿದೆ.

ಪೆರಿಕ್ಲೀಸನೊಬ್ಬ ಚಾರಿತ್ರಸಂಪನ್ನನೂ, ತೇಜಸ್ವಿಯೂ, ವಿವೇಕಿಯೂ, ನಿರ್ವಂಚಕನೂ ಆದ ಸರಕಾರನೇತೃವಾಗಿದ್ದ. ಆದುದರಿಂದ ಕ್ರಿ.ಪೂ. ೪೬೬–೪೨೮ರ ನಡುಗಾಲವನ್ನು ಅಥೆನ್ಸಿನ ಪ್ರಜಾಪ್ರಭುತ್ವದ ಉಚ್ಛ್ರಾಯ ಕಾಲ ಎನ್ನಲಾಯಿತು. ಆಮೇಲೆ ಬಂದ ಮುಖಂಡರು ಮೇಲಿನ ನಾಲ್ಕು ಗುಣಗಳಲ್ಲಿ ಬಹಳ ಹಿಂದುಳಿದವರಾಗಿದ್ದುದು ಅಲ್ಲಿಯ ಪ್ರಜಾಪ್ರಭುತ್ವವು ನಿರ್ನಾಮ ಹೊಂದಲು ಕಾರಣವಾಯ್ತು. ಭಾರತದ ಸರಕಾರೀಯ ಧುರೀಣರ ಗುಣಗಳೀಗ ವ್ಯಾವಹಾರಿಕ ಒರೆಗಲ್ಲಿಗೆ ಗುರಿಯಾಗಿವೆ. ಗುಣಪೂಜೆ ಅಳಿದು ಹಣಪೂಜೆ ಹೆಚ್ಚಿದರೆ ಪ್ರಜಾಪ್ರಭುತ್ವಕ್ಕೆ ಯಾವ ದೇಶದಲ್ಲೂ ಜಯ ಲಭಿಸದು. ಗ್ರೀಸಿನ ಪೌರ ಗಣರಾಜ್ಯಗಳು ಒಂದೊಂದಾಗಿ, ಕಾಲ ಕಳೆದ ಹಾಗೆ ಹತ್ತಿರದ ರಾಜಪ್ರಭುತ್ವಗಳ ದಾಳಿಗಳಿಗೆ ತುತ್ತಾಗಿ ನಾಮಶೇಷವಾದದ್ದು ಒಂದು ಉದಾಹರಣೆ. ಆದುದರಿಂದ ನಮ್ಮ ಕೇಂದ್ರ ಸರಕಾರವು ತನ್ನ ಮೂಲಭೂತ ಅಧಿಕಾರ ತಾರತಮ್ಯವನ್ನು ಉಳಿಸಿಕೊಂಡಿದೆ; ಕೆಲವೊಮ್ಮೆ ಹೆಚ್ಚಿಸಿಕೊಳ್ಳಲು ಕೂಡ ಪ್ರಯತ್ನಿಸುತ್ತ ಬಂದಿದೆ. ಆದರೆ ವಿದೇಶ ಧೋರಣದಲ್ಲಿ ಇರುವಷ್ಟು ಅಧಿಕಾರ ಅದಕ್ಕೆ ಅಂತಃ ಪ್ರಾಂತೀಯ ವಿಷಯಗಳಲ್ಲಿ ಇಲ್ಲ. ಈ ದೋಷದ ಫಲವಾಗಿಯೇ ವಿದ್ಯೆ–ವೇತನಗಳ ಕ್ಷೇತ್ರಗಳಲ್ಲಿರುವ ವೈಷಮ್ಯವು ಪ್ರಾಂತ ಪ್ರಾಂತಗಳಲ್ಲಿ ಕಂಡುಬಂದು ಅಸಂತೋಷಕ್ಕೆ ಎಡೆಗೊಟ್ಟಿದೆ. ಈ ಸಮಸ್ಯೆಯು ಪರಿಹಾರದ ದಾರಿ ಕಾಯುತ್ತ ಕುಳಿತು ೩೩ ವರ್ಷಗಳಾಗುತ್ತ ಬಂದಿದೆ. ವಿದೇಶ ವ್ಯವಹಾರದ ಅನೀತಿವಂತಿಕೆಯೊಡನೆ, ಯುದ್ಧಗಳನ್ನು ನಡೆಸುವುದರಲ್ಲೂ ಕ್ಲೀಯಾನನಂಥ ರಾಜಕೀಯ ಮುಖಂಡರು ತಾವೇ ಯುದ್ಧತಜ್ಞರೆಂದು ಭಾವಿಸಿ ನಡೆದುಕೊಂಡದ್ದು ಅಥೆನ್ಸಿನ ಪ್ರಜಾಪ್ರಭುತ್ವಕ್ಕೆ ಗೋರಿಯನ್ನು ಕಟ್ಟಿತು. ಈ ಕ್ಷೇತ್ರದಲ್ಲೂ ಭಾರತವು ಗಂಭೀರವಾಗಿ ಪರ್ಯಾಲೋಚಿಸಬೇಕಾದ ಕಾಲವು ಸನ್ನಿಹಿತವಾಗಿದೆ.

ಅಥೆನ್ಸಿನ ಪ್ರಜಾಪ್ರಭುತ್ವಕ್ಕೆ ಸಾಮ್ರಾಜ್ಯವಿತ್ತು. ಇಂದಿನ ವಿದೇಶೀಯ ಪ್ರಜಾಪ್ರಭುತ್ವಗಳಿಗೆ ಉಪನಿವೇಶನಗಳಿಲ್ಲವೇ? ಅನಾಕ್ರಮಣಕ್ಕೆ ಪ್ರಜಾಪ್ರಭುತ್ವ ಬದ್ಧವಾದಂತಿಲ್ಲ. ಪ್ಲೇಟೋ ಪ್ರಜಾಪ್ರಭುತ್ವದ ಬಗ್ಗೆ ಆಗಲೇ ಊಹಿಸಿದ ಸ್ಥಿತಿ ಈಗಲೂ ಕೆಲವೆಡೆ ಸತ್ಯವಾಗಿ ಪರಿಣಮಿಸಿದೆ; ಕ್ರಮೇಣ ಪ್ರಜಾಪ್ರಭುತ್ವವು ಅರಾಜಕತೆಯಾಗಿ ಹೋದೀತು ಎಂದು ಅವನು ಹೇಳಿದ. ಯಜಮಾನರು ಹೇಳಿದ ಮಾತನ್ನು ಆಳು ಕೇಳಲಿಕ್ಕಿಲ್ಲ. ಹೆಂಡಂದಿರು ಗಂಡಂದಿರ ಮಾತು ಕೇಳಲಿಕ್ಕಿಲ್ಲ. ಸಾಕಿದ ಪ್ರಾಣಿಗಳು ಕೂಡ ಸ್ವಾತಂತ್ರ್ಯವನ್ನು ಸಾರಿಯಾವು ಎಂದು. ಗುಲಾಮರನ್ನಿಟ್ಟುಕೊಂಡಿದ್ದ ಅಥೆನ್ಸ್ ಪ್ರಜಾಪ್ರಭುತ್ವದ ಹಣೆಯ ಬರೆಹವೂ ಹಾಗೇ ಆಯಿತು.

## ಪ್ರಭು–ಪ್ರಜೆ

ಪ್ರಭು ಚೆನ್ನಾಗಿದ್ದರೆ, ಒಳ್ಳೆಯ ಆಡಳಿತದ ವ್ಯವಸ್ಥೆಯನ್ನು ಮಾಡಿದರೆ, ಪ್ರಜೆಗಳು ಚೆನ್ನಾಗಿರುತ್ತಾರೆ. ಪ್ರಭು ಕೆಟ್ಟರೆ ಪ್ರಜೆ ಕೆಟ್ಟ. ಪ್ರಭು ಕೆಡದಂತೆ ನೋಡಿಕೊಳ್ಳುವ ಅಂಕುಶವು ಪ್ರಜಾಪ್ರಭುತ್ವದಲ್ಲಿ ಪ್ರಜಾಧೀನವಾಗಿರುತ್ತದೆ. ಪ್ರಭುವಿಗೆ ಸ್ವನಿಯಂತ್ರಣ, ಪರನಿಯಂತ್ರಣ ಎಂಬ ಎರಡು ಸಮಪ್ರಧಾನವಾದ ಕರ್ತವ್ಯಗಳಿರುತ್ತವೆ. ಪ್ರಜಾಪ್ರಭುತ್ವದಲ್ಲಿ ಅವನ ಮೊದಲನೆಯ ಕರ್ತವ್ಯವನ್ನು ಪ್ರಜೆ ಹೊರುತ್ತಾನೆ. ಆದುದರಿಂದ ಅವನು "ಪ್ರಭುವಿನ ಪ್ರಭು"ವಾಗುವುದು ತಾತ್ವಿಕ ಸ್ಥಿತಿ. ಆದರೆ ಒಬ್ಬನು ಹಲವರನ್ನು ನಿಯಂತ್ರಿಸುವುದಕ್ಕಿಂತ ಒಬ್ಬನನ್ನು (ಒಂದು ಚಿಕ್ಕ ಗುಂಪನ್ನು) ಹಲವರು (ದೊಡ್ಡ ಗುಂಪು) ನಿಯಂತ್ರಿಸುವುದು ಒಮ್ಮೆ ಮಾತ್ರ ಸುಲಭವಾದೀತಲ್ಲದೆ ಪದೇ ಪದೇ ಸುಲಭವಾಗದು. ಆದುದರಿಂದ ಎರಡೂ ಕರ್ತವ್ಯಗಳನ್ನು ನಿರ್ವಹಿಸುವುದರಲ್ಲಿ ಮತದಾರರಾದ ಎಲ್ಲ ಪ್ರಜೆಗಳೂ ಸಮರ್ಥರಾದಾಗ ಮಾತ್ರ ಪ್ರಜಾಪ್ರಭುತ್ವವು ಯಶಸ್ವಿಯಾಗುತ್ತದೆ. ಬಹುಸಂಖ್ಯ ಪ್ರಜೆಗಳಲ್ಲಿ ಸ್ವನಿಯಂತ್ರಣದ ಶಕ್ತಿಯು ಬೆಳೆಯದೆ ಇರುವಾಗ ಅಥವಾ ಬೆಳೆದದ್ದು ಅಳಿದಾಗ ಅವರು ತಮ್ಮ ಅಲ್ಪಸಂಖ್ಯ ಪ್ರತಿನಿಧಿಗಳನ್ನು (ಅವರು ಕೆಟ್ಟಾಗ) ದುರಸ್ತು ಮಾಡಲಾರರು. ನೇರವಾದ (Direct) ಪ್ರಜಾಪ್ರಭುತ್ವವಿರಲಿ, (Indirect) ಪರ್ಯಾಯ ಪ್ರಜಾಪ್ರಭುತ್ವವಿರಲಿ ಪ್ರತಿಯೊಬ್ಬ ಮತದಾರನೂ ಪ್ರತಿದಿನದ ಪ್ರತಿಯೊಂದು ಸರಕಾರೀ ವ್ಯವಹಾರವನ್ನೂ ಪ್ರತ್ಯಕ್ಷವಾಗಿ, ಮೇಲೆ ನಿಂತು, ಮಾರ್ಗದರ್ಶಕತ್ವ ವಹಿಸಿ, ನಡೆಸುವುದು ಅವ್ಯವಹಾರ್ಯ. ಜೊತೆಗೆ ಪ್ರಯೋಗ ಮಾಡಲು ಅಧಿಕಾರವೊಂದು ಕೇಂದ್ರೀಕೃತವಾದಾಗ ಸಮರ್ಥವಾದಷ್ಟು ವಿಕೇಂದ್ರೀಕೃತವಾದಾಗ ಸಮರ್ಥವಾಗದು ಎಂಬುದು ರಾಜ್ಯ(ರಾಷ್ಟ್ರ) ವ್ಯಾಪಕವಾದ ವ್ಯವಹಾರಗಳಲ್ಲಿ ನಿತ್ಯಸತ್ಯ. ಅಲ್ಪಸಂಖ್ಯರಿಗೆ ಸ್ವನಿಯಂತ್ರಣವು ಸ್ವಾಭಾವಿಕವಾಗುವಂತೆ ಶಿಕ್ಷಣವನ್ನು ಕೊಡಲು ವ್ಯವಸ್ಥೆಯನ್ನು ಮಾಡುವುದು ಸುಲಭ. ಬಹುಸಂಖ್ಯರಿಗೆ ಅಂಥ ವ್ಯವಸ್ಥೆಯನ್ನಿಡುವುದು ಕಷ್ಟ. ಸ್ವನಿಯಂತ್ರಣವನ್ನು ಚೆನ್ನಾಗಿ ಮಾಡಿಕೊಳ್ಳಲಾರದವರು ಪರನಿಯಂತ್ರಣವನ್ನು ಪರಹಿತಕರವಾಗಿ ಮಾಡಲು ಎಂದೂ ಸಮರ್ಥರಾಗಲಾರರು. ಪರಹಿತ(ಪ್ರಜಾಹಿತ)ಕರವಾಗದ ಪ್ರಭುತ್ವವು ದುಷ್ಟಪ್ರಭುತ್ವ. ಒಂದು ಅಧಿಕಾರದಲ್ಲಿ ಅನೇಕರು ಸಮಪಾಲುಗಾರರಾದಾಗ ಆ ಅಧಿಕಾರದ ಚಲಾವಣೆಯು ಅಯಶಸ್ವಿಯಾಗುವ ಸಂಭವ ಹೆಚ್ಚು. ಅಧಿಕಾರದ ದ್ರೌಪದೀತ್ವವು ಪ್ರತಿನಿಧಿಗಳಲ್ಲಿ ಹೊಣೆಗೇಡಿತನವನ್ನು ಬೆಳೆಯಿಸುತ್ತದೆ.



# ೭

# ಪ್ರಜಾಪ್ರಭುತ್ವ ಮತ್ತು ಸರ್ವಾಧಿಕಾರ ಬುದ್ಧಿ

## ಸರ್ವಾಧಿಕಾರ

"ಕಾಲಕಾಲಕ್ಕೆ ಧೀರೋದಾತ್ತರು ಹುಟ್ಟುತ್ತಾರೆ; ಅವರನ್ನೇ ಎಲ್ಲವೂ ಅವಲಂಬಿಸುತ್ತದೆ" ಎಂದು ಕಾರ್ಲೈಲ್ ಮಹಾಶಯ (ಸಾರರೂಪದಲ್ಲಿ) ಹೇಳಿದ್ದಕ್ಕೂ "ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ; ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ" ಎಂದು ಕೃಷ್ಣ ಹೇಳಿದ್ದಕ್ಕೂ ಬಹಳ ಅಂತರವಿಲ್ಲ. (Hero-Worship) ವೀರಪೂಜೆ ಮಾನವಕೋಟಿಗೆ ಸಹಜವಾದ ಪ್ರವೃತ್ತಿ. ಸರ್ವಾಧಿಕಾರಿ ಅದರಿಂದ ಹುಟ್ಟುತ್ತಾನೆ, ಬೆಳೆಯುತ್ತಾನೆ; ಸರ್ವ ಅಧಿಕಾರಗಳನ್ನೂ ತನ್ನಲ್ಲಿ ಆಹ್ವಾನಿಸಿಕೊಂಡು ಚಲಾಯಿಸುತ್ತಾನೆ. ಹಾಗಾದರೆ ವೀರರನ್ನು ಗೌರವಿಸದೆ ಇರಬೇಕೇ? ಎಂದು ಪ್ರಶ್ನಿಸಿದರೆ, "ಗೌರವಿಸಬೇಕು, ಆದರೆ ಪೂಜಿಸಬಾರದು" ಎಂದು ಉತ್ತರ ಕೊಡುವುದು ಇಂದು ಕೆಲವರ ರೂಢಿ.

"ಪೂಜೆ–ಗೌರವಗಳ" ಜಾತಿಯೊಂದೇ, ಪ್ರಮಾಣ ಬೇರೆ. ದೇವರು ಪೂಜ್ಯ, ಮನುಷ್ಯರು ಗೌರವಾರ್ಹರು ಎಂಬುದೊಂದು ಮತ. ''ಗುರುರ್ಬ್ರಹ್ಮಾ ಗುರುರ್ವಿಷ್ಣುಃ, ಗುರುಃಸಾಕ್ಷಾನ್ಮಹೇಶ್ವರಃ" ಎಂಬವರು ಗುರುತ್ವ ನರರಲ್ಲಿ ಇದ್ದರೆ ಅದು ದೇವತ್ವಕ್ಕೆ ಕಡಿಮೆಯಲ್ಲ ಎನ್ನುತ್ತಾರೆ. ಪೂಜೆಯಲ್ಲಿ Element of self-surrender ಆತ್ಮಾರ್ಪಣ ಬುದ್ಧಿ ಇದೆ. ಗೌರವದಲ್ಲಿ ಅರ್ಧ ಆತ್ಮಾರ್ಪಣೆ ಮಾತ್ರ ಇದೆ. Judgement, Confidence, Faith ದೃಢ ತೀರ್ಮಾನ, ದೃಢವಿಶ್ವಾಸ, ದೃಢಶ್ರದ್ಧೆಗಳ ಮಾನಸಿಕ ಹಿನ್ನೆಲೆಗಳು ಬೇರೆಯಾಗಿರಬಹುದು; ಆದರೆ ಅವುಗಳ ಕಾರ್ಯಕಾರಿತ್ವದ ಸಾಮರ್ಥ್ಯ ಒಂದೇ. ಪೂಜ್ಯತೆ ಗೌರವಾರ್ಹತೆಗಳಿಗೆ ಮೇಲಿನ ಮನಸ್ಥಿತಿಗಳು ಆಧಾರ. ಆದುದರಿಂದ ಅವು ವ್ಯಕ್ತಿಯೊಬ್ಬನಲ್ಲಿಯ ಅವಿಶ್ವಾಸ. ಅರೆವಿಶ್ವಾಸ, ಪೂರ್ಣವಿಶ್ವಾಸಗಳಲ್ಲಿ ಅಡಗಿವೆ.

ಉತ್ಕಟವಾದ ಅತ್ಯಯ ಪ್ರಸಂಗದಲ್ಲಿ ಪೂರ್ಣಶ್ರದ್ಧೆಯನ್ನು ಹುಲ್ಲುಕಡ್ಡಿಯ ಮೇಲೆ ಅಥವಾ ದೆವ್ವದ ಮೇಲೆ ಕೂಡಾ ಇಡಬೇಕಾಗಿ ಬರಬಹುದು. ಜೀವನದಲ್ಲಾಗಲಿ, ರಾಜಕೀಯ ವ್ಯವಹಾರದಲ್ಲಾಗಲಿ ಶ್ರದ್ಧೆಯು ಶಾಂತಿಗೆ ಅನಿವಾರ್ಯವಾದುದರಿಂದ. ಆದರೆ ಸಾಮಾನ್ಯ ಪ್ರಸಂಗಗಳಲ್ಲಿ "ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು" ಎಂಬುದೇ ವಿವೇಕ.

ಅನಂತರ, ಎಷ್ಟು ನೋಡಿದರೂ ಒಬ್ಬನಲ್ಲಿ ದೇವತ್ವವನ್ನು ನೋಡುವುದು ಬುದ್ಧಿ ಇದ್ದವರಿಗೆ ಕಷ್ಟ. Emergency ಆಪತ್ತು ದೇಶವೊಂದಕ್ಕೆ ಒದಗಿದಾಗ ತಾತ್ಕಾಲಿಕ ಸರ್ವಾಧಿಕಾರಿಯನ್ನು ಎಲ್ಲ ದೇಶಗಳೂ ನಿಯಮಿಸಿಕೊಳ್ಳುತ್ತವೆ. ಅದನ್ನೇ ಸರ್ವಕಾಲಕ್ಕೆ ಅನ್ವಯಿಸಿದರೆ ಸರ್ವಾಧಿಕಾರಿ ಪ್ರಭುತ್ವವಾಗುತ್ತದೆ.

ಹಿಂದಿನ ನಿರಂಕುಶ ಚಕ್ರವರ್ತಿಯಂತೆ ಆಳುವವನು ಇಂದಿನ ಸರ್ವಾಧಿಕಾರಿ. ಹಿಟ್ಲರ್, ಮುಸ್ಸೋಲಿನಿ, ಸ್ಟಾಲಿನ್ನರನ್ನು ಸರ್ವಾಧಿಕಾರಿಗಳೆನ್ನುತ್ತಾರೆ. ತನ್ನ ಇಚ್ಛೆಯನ್ನು ಜನರ ಇಚ್ಛೆಯೆಂದು ತನ್ನ ಅನುಯಾಯಿಗಳಲ್ಲಿ ಪ್ರಚಾರ ಮಾಡಿಸುತ್ತಾನೆ ಸರ್ವಾಧಿಕಾರಿ. ರಾಜಕೀಯ ಅಜ್ಞಾನಿಗಳ ಪ್ರತಿನಿಧಿಗಳು ಪ್ರಜಾಪ್ರಭುತ್ವದಲ್ಲಿ ಹಾಗೇ ಮಾಡುತ್ತಾರೆ. ಆದರೆ ಅವರು ಒಬ್ಬರಲ್ಲ ಕೆಲವರು ಅಷ್ಟೆ.

ಜರ್ಮನಿಯ ತತ್ವಜ್ಞಾನಿ ಫ್ರೆಡರಿಕ್ ನೀಟ್ಷೆಯು (೧೮೪೪–೧೯೦೦) ಹೇಳಿದ (Superman) ಅತಿಮಾನವ ಸಿದ್ಧಾಂತವು ಸರ್ವಾಧಿಕಾರದ ಪ್ರತಿಪಾದನೆ ಎಂದು ಅನೇಕರ ತಿಳಿವಳಿಕೆ. ಅದರ ಪ್ರಕಾರ ಉಚ್ಚರ ನೀತಿಗಳು ಮತ್ತು ನೀಚರ ನೀತಿಗಳು ಎಂದು ಮಾನವ ನೀತಿಗಳಲ್ಲಿ ಎರಡು ವಿಭಾಗಗಳಿರುವುದು ನಿತ್ಯ. ಅವರ ವಿಧಿ ನಿಷೇಧಗಳೇ ಬೇರೆ, ಇವರ ವಿಧಿ ನಿಷೇಧಗಳೇ ಬೇರೆ. ಆಳಲು ತಕ್ಕವರಾಗುವವರ ವರ್ತನಾ ವಿವೇಕವು ಆಳಿಸಿಕೊಳ್ಳಲು ಸಿದ್ಧರಾಗುವವರ ವರ್ತನಾ ವಿವೇಕಕ್ಕಿಂತ ಭಿನ್ನ. ವೈಯಕ್ತಿಕವಾಗಿ ಅವರಿಗಿರುವ ವರ್ತನಾ ಸ್ವಾತಂತ್ರ್ಯದ ಪ್ರಮಾಣ ಇವರಿಗಿಲ್ಲ. ಈ ತತ್ವಜ್ಞಾನವು ಬಹಳ ಜನರಿಗೆ ಪ್ರಿಯವಾಗಲಿಲ್ಲ. ಜಾರ್ಜ್ ಬರ್ನಾಡ್ ಶಹ ಮೆಚ್ಚಿದ. ಅವನಂತೆಯೇ ಆಡಳಿತದ ಅವ್ಯವಸ್ಥೆಯನ್ನು ಕಂಡು ಅಸಹ್ಯಪಟ್ಟುಕೊಂಡ ಪ್ರಜಾಪ್ರಭುತ್ವೀನರನೇಕರು Benevolent Dictatorship ಬಹುಜನ ಹಿತಕರವಾದ ಸರ್ವಾಧಿಕಾರಿ ಸರಕಾರ ಬೇಕೆಂದು ಪರೋಕ್ಷವಾಗಿಯೂ ಪ್ರತ್ಯಕ್ಷವಾಗಿಯೂ ಹರಸುತ್ತಿರುವುದೀಗ ಸ್ಪಷ್ಟ. ಸರ್ವಾಧಿಕಾರಿ ಪ್ರಭುತ್ವವು ಒಮ್ಮೆ ಸೈನಿಕವಾದರೂ ಆದೀತು. ಇನ್ನೊಮ್ಮೆ ಅಸೈನಿಕವಾದರೂ ಆದೀತು. ಅತಿಯಾದ ಭ್ರಷ್ಟಾಚಾರದ ಪರಿಹಾರ ಮತ್ತು ಸಮರ್ಥ ಪ್ರತಿಬಂಧಕೋಪಾಯಗಳ ಪೂರ್ವಭಾವಿ ಯೋಜನೆಗಳು ಸಮರ್ಥ ಸಜ್ಜನನ ಸರ್ವಾಧಿಕಾರದಲ್ಲಿ ಸಾಧ್ಯ ಎಂದು ಸಿದ್ಧಾಂತಿಸಬೇಕು. ಮೊದಲೊಬ್ಬ ಸಜ್ಜನನಾಗಿದ್ದು ಅದಿಕಾರ ಪಟ್ಟವನ್ನು ಏರಿದ ಮೇಲೆ ದುರ್ಜನನಾದರೆ? ಅಥವಾ ಒಬ್ಬ ಸಜ್ಜನನಾಗಿಯೇ ಕಡೆಯ ತನಕ ಆಳಿದರೂ ಅವನ ಬಳಿಕ ಅಂಥ ಸಜ್ಜನನನ್ನು ಹೇಗೆ ಯಾರು ಹುಡುಕಿ ತರಬಲ್ಲರು? ಎಂಬೀ ಸಂಶಯಗಳು ಸರ್ವಾಧಿಕಾರಿ ಪ್ರಭುತ್ವದ ವಿರುದ್ಧವಾಗಿ ನಿಲ್ಲುತ್ತವೆ. ಹೇಗೆ ಒಂದು ಸಂಸ್ಥೆ (Institution) ಹತ್ತುಕಾಲ (ಸುಮಾರು ೨೦೦–೩೦೦ ವರ್ಷಗಳವರೆಗಾದರೂ) ಸಮರ್ಪಕವಾಗಿ ನಡೆಯಬೇಕು ಎಂದು ಆಲೋಚಿಸ ಹೊರಟರೆ, ಸಂಪೂರ್ಣ ನಿರಪಾಯಸ್ಥಿತಿಯನ್ನು ಯಾರೂ ಪೂರ್ವಭಾವಿಯಾಗಿ ಯೋಜಿಸಿ ಗೆದ್ದುದು ಕಂಡು ಬಂದಿಲ್ಲ. ಸರ್ವೋಚ್ಚ ಸ್ಥಾನದಲ್ಲಿ ಇಡಲ್ಪಡುವ ವ್ಯಕ್ತಿ ಅಥವಾ ಗುಂಪು ಸರ್ವೋಚ್ಚ ಅಧಿಕಾರವನ್ನು ಹೊಂದಿರುವುದು ದಕ್ಷತೆಯ ದೃಷ್ಟಿಯಿಂದ ಅನಿವಾರ್ಯ. ಅಂಥ ಅಧಿಕಾರದ ದುರುಪಯೋಗ ನಡೆದೀತು

ಎಂಬ ದೃಷ್ಟಿಯಿಂದ ಅದಕ್ಕೆ ಸಮರ್ಥ ಪ್ರತಿಬಂಧವನ್ನು (ಬೇಕಾದಾಗ ಜಾರಿಗೆ ತರುವಂತೆ) ವ್ಯವಸ್ಥೆ ಮಾಡುವುದು ಅಗತ್ಯ. ರಾಜ್ಯಶಾಸ್ತ್ರದಲ್ಲಿ ಈ ಅನಿವಾರ್ಯ ಅಗತ್ಯಗಳನ್ನು ಹೊಂದಿಸುವುದೇ ಅತಿ ದೊಡ್ಡ ಸಮಸ್ಯೆ, ಯಾವ ಹೊಂದಿಕೆಯೂ ಯಾವಾಗಲೂ ಸಮರ್ಪಕವಾಗಿ ಉಳಿಯಲಾರದು. ಆಯಾ ಐತಿಹಾಸಿಕ ಸಂದರ್ಭಕ್ಕೆ ಆಯಾ ತರದ ಹೊಂದಿಕೆ: ಇಷ್ಟೇ.

ಮನಃಶಾಸ್ತ್ರಕಾರರು ಮನುಷ್ಯನ ಚಾರಿತ್ರವನ್ನೂ (Character), ಬುದ್ಧಿಮತ್ತೆಯನ್ನೂ (Intgelligence) ಅಳೆಯಬಹುದೆನ್ನುತ್ತಾರೆ. ರಾಜಕೀಯ ಹಾಗೂ ಆಡಳಿತ ವ್ಯವಹಾರಗಳಲ್ಲಿ ನಿಯುಕ್ತರಾಗುವವರನ್ನು ಅತ್ಯುತ್ತಮವಾದ ಮಾನಸಶಾಸ್ತ್ರೀಯ ಪ್ರಯೋಗಶಾಲೆಯಲ್ಲಿ ಪರೀಕ್ಷಿಸಿದ ಅನಂತರವೇ ನಿಯೋಜಿಸುವ ಪದ್ಧತಿಯನ್ನು ಬಳಕೆಗೆ ತರುವುದು ಒಂದು ವ್ಯವಹಾರ್ಯವಾದ ಉಪಾಯ. ಎರಡನೆಯ ಮಹಾಯುದ್ಧದ ಕಾಲದಲ್ಲಿ ಅಮೇರಿಕದ ಸಂಯುಕ್ತ ಸಂಸ್ಥಾನವು ಈ ಪದ್ಧತಿಯನ್ನು ಮಿಲಿಟರಿ ಆಫೀಸರರನ್ನು" ನಿಯಮಿಸಿಕೊಳ್ಳುವಾಗ ಬಳಸಿ ಯಶಸ್ವಿಯಾಯಿತು. ಸುಪರಿಷ್ಕೃತವಾದ (Aptitude Test) ಪ್ರವೃತ್ತಿ ಪರೀಕ್ಷೆಗೆ ಉದ್ಯೋಗಿಗಳಾಗ ಬಯಸುವವರನ್ನು ಗುರಿಪಡಿಸುವುದು ದೇಶದಾದ್ಯಂತವಾಗಿ ರೂಢಿಗೆ ಬಂದರೆ ಸಾರ್ವಜನಿಕ ವ್ಯವಹಾರಗಳು ಹೆಚ್ಚು ಸಮರ್ಪಕವಾಗಿ ನಡೆಯುವಂತಾಗಬಹುದು. ಹಾಗೇ ಚುನಾವಣೆಗೆ ನಿಲ್ಲುವವರನ್ನೂ ಮಾನಸಶಾಸ್ತ್ರೀಯ ಪರೀಕ್ಷೆಗೆ ಒಳಪಡಿಸಿದರೆ ಒಳ್ಳೆಯದಾದೀತು.

## ಅಧ್ಯಕ್ಷನ ಸ್ಥಾನ

ಅಮೇರಿಕದ ಪ್ರಜಾಪ್ರಭುತ್ವದಲ್ಲಿ ಅಧ್ಯಕ್ಷನ ಸ್ಥಾನವು ವಿಶಿಷ್ಟವಾದದ್ದು. ಆತನು ಪಕ್ಷಾತೀತನಾಗಿ ಆಯ್ಕೆ ಹೊಂದಬೇಕೆಂದು ಮೊದಲು ನಿರೀಕ್ಷಿಸಲಾಗಿತ್ತು. ಆದರೆ ಅದು ಕ್ರಮೇಣ ಇತರ ಆಂಗ್ಲಭಾಷಿಕ ದೇಶಗಳಂತೆ ದ್ವಿಪಕ್ಷೀಯ ಪ್ರಜಾಸತ್ತೆಯಾಗಿ ಪರಿಣಮಿಸಿತು. ಅಲ್ಲಿಯ ಅಧ್ಯಕ್ಷನು ಒಂದು ಪಕ್ಷದ ನಾಯಕನಾದರೂ ಇತರ ದೇಶಗಳ ಪ್ರಜಾಪ್ರಭುತ್ವಗಳ ಮುಖ್ಯಮಂತ್ರಿಗಳಿಗಿಂತ ಹೆಚ್ಚಿನ ಸ್ಥಾನವನ್ನು ಉಳ್ಳ ಅಧಿಪತಿ.

ಕಾಂಗ್ರೆಸ್ಸಿನಲ್ಲಿ ಅಧ್ಯಕ್ಷನಿಗೆ ಹೆಚ್ಚಿನ ಪಕ್ಷೀಯ ಬೆಂಬಲವಿರುತ್ತದೆ. ಆದರೂ ಆತನು ಇಡೀ ರಾಷ್ಟ್ರದ ಸಾಮೂಹಿಕ ಐಕ್ಯದ ಸಂಕೇತ. ರಾಷ್ಟ್ರಹಿತಕ್ಕೂ ಪಕ್ಷಹಿತಕ್ಕೂ ವಿರೋಧ ಉಂಟಾದಾಗ ಅಧ್ಯಕ್ಷನು ರಾಷ್ಟ್ರಹಿತವನ್ನೇ ಎತ್ತಿ ಹಿಡಿಯಬೇಕು. ಮಂತ್ರಿಸಂಪುಟವು ಆಂಡ್ರೋ ಜಾನ್ಸನ್ನನ ಕಾಲದಲ್ಲಿ ಸಂಪೂರ್ಣವಾಗಿ ಅಧ್ಯಕ್ಷಾಧೀನವಾಯಿತು. ಶಾಸನಸಭೆಯಲ್ಲಿ ಪಾಸಾದ ಮಸೂದೆಯನ್ನು ಪ್ರತಿಷೇಧಿಸುವ ಅಧಿಕಾರವನ್ನೂ ಅವನು ವಹಿಸಿದನು. ಅದು ಬೇಕಾದರೆ ಆಮೇಲೆ ಮೂರನೆಯ ಎರಡಂಶ ಬಹುಮತದಿಂದ ಮತ್ತೊಮ್ಮೆ ಈ ಮಸೂದೆಯನ್ನು ಪಾಸು ಮಾಡಿಕೊಳ್ಳಬೇಕಾಗಿ ಬಂದಿತು. ರಾಜ್ಯಸಂಸ್ಥಾನಗಳು ರಾಷ್ಟ್ರೀಯ ಕಾಯಿದೆಗಳನ್ನು ಪ್ರತಿಭಟಿಸದಂತೆ ನೋಡಿಕೊಳ್ಳುವ ಅಧಿಕಾರವನ್ನು ಅವನು ಚಲಾಯಿಸಿದನು.

## ಕಾರ್ಯವ್ಯಾಪ್ತಿ

ಸುಪ್ರೀಂ ಕೋರ್ಟಿನ ಆದೇಶವನ್ನು ಅಥವಾ ರಾಷ್ಟ್ರೀಯ ಕಾಯಿದೆಯನ್ನು ಪಾಲಿಸುತ್ತಿದ್ದ ಸಂಸ್ಥೆಗಳ ಅಧಿಕಾರಿಗಳನ್ನು ಸೈನಿಕಕ್ರಮದಿಂದ ಹಣಿದು ಹದಕ್ಕೆ ತರುವ ಅಧಿಕಾರವನ್ನೂ ಅನಂತರ ಬಂದ ಅಧ್ಯಕ್ಷರು ಬಳಸಿದರು. ಸಿನೇಟಿನ ಮೂರನೆಯ ಎರಡಂಶ ಬಹುಮತದಿಂದ ಅಧ್ಯಕ್ಷನು ರಾಷ್ಟ್ರದ ವಿದೇಶ ಧೋರಣವನ್ನು ರೂಪಿಸಿಕೊಳ್ಳಬೇಕು. ವಿದೇಶಗಳ ವಿರುದ್ಧವಾಗಿ ಯುದ್ಧವನ್ನು ಸಾರುವ ಅಧಿಕಾರವು ಕಾಂಗ್ರೆಸ್ಸಿಗೆ ಮಾತ್ರ ಇದೆ. ಮೇಲೆ ಸಂಯುಕ್ತ ರಾಷ್ಟ್ರ ಸಂಘದ ವ್ಯವಹಾರಗಳಲ್ಲಿ ಭಾಗಿಯಾದಾಗ ಅಮೇರಿಕದ ಸೈನ್ಯಬಲವನ್ನು ಅಧ್ಯಕ್ಷನ ಮತದ ಪ್ರಕಾರ ಬಳಸುವ ರೂಢಿ ಉಂಟಾಯಿತು. ೧೯೫೦ರ ಕೊರಿಯ ಯುದ್ಧದ ಸಂದರ್ಭವು ಇದಕ್ಕೆ ಉದಾಹರಣೆ. ಟ್ರೂಮನ್, ಐಸೆನ್ ಹಾವರ್ ಮತ್ತು ಕೆನೆಡಿಗಳ ಅಧ್ಯಕ್ಷಾಧಿಕಾರದ ವ್ಯಾಪ್ತಿ ಅತ್ಯಧಿಕವೆನ್ನಿಸಿದವು. ಕಾಂಗ್ರೆಸ್ಸಿನ ಒಪ್ಪಿಗೆಯು ಕೇವಲ ಔಪಚಾರಿಕವಾಯಿತು; ಅಧ್ಯಕ್ಷರು ಅಂತಾರಾಷ್ಟ್ರೀಯ ಯುದ್ಧಗಳನ್ನು ಸಾರ್ವಜನಿಕ ಅಭಿಪ್ರಾಯಕ್ಕೆ ಅನುಗುಣವಾಗಿ ನಡೆಸಲು ಆರಂಭಿಸಿದರು. ಆದರೆ ಶಾಂತಿಕಾಲದಲ್ಲಿ ಕಾಂಗ್ರೆಸ್ಸು ತನ್ನ ಅಧಿಕಾರವನ್ನು ಬಳಸಿ ಅಧ್ಯಕ್ಷನ ಅಧಿಕಾರವ್ಯಾಪ್ತಿಯನ್ನು ಕಡಿಮೆಗೊಳಿಸುತ್ತದೆ.

ವ್ಯಾವಹಾರಿಕ ದಕ್ಷತೆಯ ದೃಷ್ಟಿಯಿಂದ ಇಂಗ್ಲೆಂಡಿನ ಪಾರ್ಲಿಮೆಂಟರಿ ಪ್ರಜಾಪ್ರಭುತ್ವಕ್ಕಿಂತ ಅಮೇರಿಕದ ಅಧ್ಯಕ್ಷೀಯ ಪ್ರಜಾಪ್ರಭುತ್ವವು ಹೆಚ್ಚು ಪುರಸ್ಕಾರ್ಯ ಎಂದು ಕೆಲವರ ಮತ. ಏಕೆಂದರೆ ಅಮೇರಿಕದ ಅಧ್ಯಕ್ಷನ ಸ್ವಾತಂತ್ರ್ಯವು ಇಂಗ್ಲೆಂಡಿನ ಮುಖ್ಯಮಂತ್ರಿಗಿಂತ ಹೆಚ್ಚು. ಅವನು "ಅರ್ಧ ಸರ್ವಾಧಿಕಾರಿ" ಎಂದರೂ ಸಲ್ಲುತ್ತದೆ.

ಯಾವ ಪ್ರಭುತ್ವದಲ್ಲೇ ಆಗಲಿ, ಪ್ರಜೆಗಳು ಒಕ್ಕಟ್ಟಾಗಿ ಬದುಕುವುದು ಮತ್ತು ಒಮ್ಮತದಿಂದ ಎತ್ತಿಹಿಡಿಯಲಾದ ಕಾಯಿದೆಗಳನ್ನು ಉಲ್ಲಂಘಿಸದೆ ನಡೆದುಕೊಳ್ಳುವುದು ಸರ್ವೋದಯಕಾರಕವಾದುದು. ಇಂಥ ಸುಸ್ಥಿತೆಗೆ ಪ್ರಜೆಗಳು ಸಂಸ್ಕೃತರಾಗಿರುವುದು ಮೂಲಭೂತವಾದದ್ದು. ಸಂಸ್ಕೃತಿಯ ಆತ್ಮವಿರುವುದು ಪರಹಿತೈಕ ಪರಾಯಣತೆ ಯೊಂದರಲ್ಲಿಯೇ ಎಂಬುದು ವಿಚಾರವನ್ನು ಪರಮಾವಧಿಯಾಗಿ ಮಾಡುವವರಿಗೆ ಗೊತ್ತಾಗದಿರದು. ಪರಹಿತದ ಸಿದ್ಧಾಂತವು ಶುದ್ಧವಾಗಿ ನೈತಿಕ. ನೀತಿನಿರ್ಣಯಕ್ಕೆ ಮನಃಶಾಸ್ತ್ರ, ತತ್ವಶಾಸ್ತ್ರ, ಇತಿಹಾಸ, ಭೂಗೋಳಶಾಸ್ತ್ರ, ವಿಜ್ಞಾನ, ರಸಶಾಸ್ತ್ರಗಳ ಕೂಲಂಕಷವಾದ ಅಭ್ಯಾಸವು ಪ್ರಜೆಗಳಿಗೆ ಅತ್ಯವಶ್ಯಕ. ಈ ಷಟ್‌ಶಾಸ್ತ್ರಗಳನ್ನರಿತ ಪ್ರಜಾಪ್ರಮುಖರ ಅನುಭವ ಸಮನ್ವಯದಿಂದ ಆಯಾ ದೇಶ–ಕಾಲ–ಸಂದರ್ಭಗಳಿಗೆ ತಕ್ಕ ಆಳಿಕೆಯನ್ನು ರೂಪಿಸಲಾದೀತು. ಈ ಸುಸಜ್ಜಿತತೆ ಇಲ್ಲದೆ ಯಾರು ಯಾರ ಪ್ರಭುತ್ವವನ್ನು ಎತ್ತಿಹಿಡಿದರೂ ಫಲಕಾರಿಯಾಗದು.

## ರಾಜಕೀಯ ಚಿಂತನೆಯ ಸ್ವರೂಪ

ನಮ್ಮ ದೇಶದ ಚಿಂತಕರೀಗ ಆವರಣಾಭ್ಯಾಸವನ್ನು ವೈಜ್ಞಾನಿಕವಾಗಿ ಮಾಡಿದಂತೆ ತೋರುವುದಿಲ್ಲ. ಮೇಲ್ಮಟ್ಟದ ಆರ್ಥಿಕ ಸ್ಥಿತಿಯ ಅನುಕೂಲಗಳಿಗೆ ವಶರಾದ ಯಾರೂ ವೈಜ್ಞಾನಿಕವಾಗಿ ಸರ್ವೋದಯಕರವಾದ ಆಳಿಕೆಯ ರೂಪವನ್ನು ಕಲ್ಪಿಸಲಾರರು.

"ಸಹಜೀವಿಗಿಲ್ಲದ ಐಹಿಕ ಸುಖಸಾಧನ ನನಗೆ ಬೇಡ" ಎಂದು ವ್ರತನಿಷ್ಠನಾಗಿ ಬಾಳುವ ಚಿಂತಕನ ಚಿಂತನವೊಂದೇ ಅವಲಂಬನೀಯವಾದ ರಾಜಕೀಯ–ಆರ್ಥಿಕ ಶಾಸನತತ್ವವನ್ನೂ, ಆಚಾರನಿಯಮಗಳನ್ನೂ ರೂಪಿಸಿಕೊಡಬಲ್ಲುದು. ಅಂಥ ವ್ರತಸ್ಥರಾಗಿದ್ದ ಮಹಾತ್ಮರು ನಮ್ಮಲ್ಲಿ ಆಗಿಹೋದರು. ಅವರ ಉಪದೇಶದ ಸಾರಭೂತ ಅಂಶವನ್ನು ಸಮನ್ವಿತವಾಗಿ ಕಾಣಲಾರದ ರಾಜಕೀಯ ಚಿಂತಕರು ಶಬ್ದಚ್ಛಲ ಹಿಡಿದು ಅಪಾರ್ಥಮಾಡಿಕೊಂಡು ಅದರಿಂದ ದೂರಸರಿದದ್ದು ಕಂಡುಬಂದಿದೆ.

ಕ್ರಿಯಾಪ್ರೇರಕವಾದ ಎಲ್ಲವೂ ಶಕ್ತ, ಪ್ರೇರಣೆಯೇ ಶಕ್ತಿ ಅಥವಾ ಬಲ. ಸರ್ವರ ಸಮಹಿತಕ್ಕಾಗಿ ಬಳಸುವ ನೈತಿಕ, ವೈಧಿಕ (Legal) ಮತ್ತು ದೈಹಿಕ ಶಕ್ತಿಯು ಸರ್ವತ್ರ ಸಾತ್ವಿಕ. ನಿಷ್ಕ್ರಿಯ ವಿಚಾರದಿಂದ ಬಾಳು ನಿಷ್ಫಲವಾಗುತ್ತದೆ. ಸ್ವಾರ್ಥದ ಅರಾಷ್ಟ್ರ ವ್ಯಾಪಕವಾದ ಸಿದ್ಧಿಗಳಿಗಾಗಿ, ರಾಷ್ಟ್ರಹಾನಿಕರವಾಗಿ, ಯಾವ ಬಗೆಯ ಬಲವನ್ನು ಪ್ರಯೋಗಿಸಿದರೂ ಅದಿಂದು ತಾಮಸ; ಇಂದಿನ ಭಾರತವು "ಒಂದು ಉಪರಾಷ್ಟ್ರಸಂಘ" ಎಂಬ ಅಭೇದ್ಯ ಸತ್ಯವನ್ನೂ ಉಪಮತ (ಧರ್ಮ) ಸಮ್ಮೇಳನ ಎಂಬ ಅನಿವಾರ್ಯ ಸತ್ಯವನ್ನೂ ಆಧರಿಸದೆ ರಾಜಕೀಯ ಚೌಕಟ್ಟನ್ನು ರಾಷ್ಟ್ರಕ್ಕೆ ತೊಡಿಸಹೋದುದರಿಂದಲೇ ಗಡಿ ಜಗಳ ಮುಂತಾದ ಅಪಥ್ಯಕರವಾದ ಕಾಲಹರಣ ಪ್ರಕರಣಗಳೂ, ವಾದವಿವಾದಗಳೂ, ವಿರಸ ವಿಪರೀತ ರಸಗಳೂ ಈರ್ಷ್ಯಾಸೂಯಾಯುಕ್ತವಾದ ವರ್ತನೆಗಳೂ ಉರಿದೇಳುತ್ತಲಿವೆ. ಮತ–ಪ್ರಾಂತಗಳು ಐತಿಹಾಸಿಕ ಅವಶೇಷಗಳು. ಅವುಗಳನ್ನು ಮೀರಿ ನಿಲ್ಲುವ ಸಂಸ್ಕಾರವು ಜನರಲ್ಲಿ ಇಲ್ಲ. ಅಂಥ ಸಂಸ್ಕಾರವನ್ನು ಕೊಡುವ ಯೋಜನೆಯನ್ನು ಯಾರೂ ಮಾಡಿಲ್ಲ. ಆಚಾರವಿಲ್ಲದ ಪ್ರಚಾರವನ್ನಷ್ಟೇ ಮಾಡಲಾಗುತ್ತಿದೆ. ಇದು ದುರ್ದೈವ; ರಾಜಕೀಯ ವಿಧಿವಾದ (Fatalism) ಅಥವಾ ಯದ್ ಭವಿಷ್ಯವಾದ (Unpreparedness, Thoughtless, Indifference).

ಹಿಲೇರ್ ಬೆಲ್ಲಕ್ ಮತ್ತು ಎಚ್.ಜಿ. ವೆಲ್ಸ್ ಕೂಡ ಸರ್ವಾಧಿಕಾರಿ ಪ್ರಭುತ್ವವನ್ನು ಎತ್ತಿಹಿಡಿದು (Procrastination and Corruption) ವಿಲಂಬ ಮತ್ತು ಭ್ರಷ್ಟಾಚಾರಗಳ ಪರಿಹಾರ ಆ ಪ್ರಭುತ್ವವೊಂದರಿಂದಲೇ ಸಾಧ್ಯ ಎಂದು ಕಂಡುಬಂದುದೇ ಸರ್ವಾಧಿಕಾರಿ ಪ್ರಭುತ್ವವು ಚಿಂತಕರನ್ನು ಆಕರ್ಷಿಸಲು ಕಾರಣ. ಚೇಂಬರ್ ಲೇನ್ ಹೇಳಿದ: "ಸತ್ಯವಾಗಿ ನೋಡಿದರೆ ಜಗತ್ತಿನ ಎಲ್ಲ ರಾಷ್ಟ್ರಗಳೂ ಪಾರ್ಲಿಮೆಂಟುಗಳ ವ್ಯವಹಾರವನ್ನು ಕಂಡು ಅತ್ಯಂತ ಬೇಸತ್ತು ಹೋಗಿವೆ, ಸುಸ್ತಾಗಿವೆ. ಪವಿತ್ರವಾದ ಸರ್ವಮತಾಧಿಕಾರದಿಂದ ದಣಿದು ಹೋಗಿವೆ; "ಅಸೆಂಬ್ಲಿ"ಗಳಲ್ಲಿ ಪ್ರತಿನಿಧಿಗಳು ಪ್ರದರ್ಶಿಸುವ ವಾಕ್‌ಪೌರುಷವು ಹೊಸ ಜಲಪ್ರಳಯದ ಹಾಗೆ ಜಗತ್ತನ್ನೇ ಮುಳುಗಿಸುವುದೇನೋ ಎಂಬ ಭಯವನ್ನು ಹುಟ್ಟಿಸುವ ಪರಿಸ್ಥಿತಿ ಅಸಹ್ಯವಾಗಿದೆ." ಎಷ್ಟೋ ವೇಳೆ ಲೋಕಸಭೆ, ವಿಧಾನಸಭೆಗಳಲ್ಲಿ "ಅರ್ಥವಿಲ್ಲ, ಸ್ವಾರ್ಥವಿಲ್ಲ ಬರಿಯ ಭಾವಗೀತ" ಎಂಬಂತಾದ ಪಕ್ಷ, ಉಪಪಕ್ಷ, ಪ್ರತಿಪಕ್ಷ, ಅಧಿಪಕ್ಷಗಳ ವಾಕ್‌ಸಂಗ್ರಾಮದ ಅನುಭವ ಭಾರತೀಯನಿಗೆ ಇದೆ: ರಾಷ್ಟ್ರದ ಅಮೂಲ್ಯವಾದ ವೇಳೆಯನ್ನು ಅನಾವಶ್ಯಕವಾಗಿ ಹಾಳುಮಾಡಿದ ಮತ್ತು ದುರ್ನಿರ್ಣಯಗಳನ್ನು ತೆಗೆದುಕೊಂಡು

ಜನಜೀವನಕ್ಕೆ ಅಪಾರ ಹಾನಿಯನ್ನು ಉಂಟುಮಾಡಿದ ಹೃದಯವಿದ್ರಾವಕ ಸಂವೇದನೆಯುಂಟಾದ ನೆನಪಿದೆ. ಅವಿವೇಕಿಗಳ ಬಹುಮತದ ನಿರ್ಣಯವು ಲಾಟರಿ ನಿರ್ಣಯಕ್ಕಿಂತಲೂ ಕೆಲವೊಮ್ಮೆ ಹೆಚ್ಚು ಹಾನಿಕರ; ಯಾರಿಗೆ? ಅವರಿಗೂ: ಯೌವನ, ಧನ, ಅಧಿಕಾರಗಳು ಅಶಿಷ್ಟರಿಗಿದ್ದಾಗ; ಇರುವಂತಹ ಅಥವಾ ಬರುವಂತಹ ಅನುಕೂಲವನ್ನು ಸಾಮಾಜಿಕರಾದ ಮತದಾರರು ಕಲ್ಪಿಸಿಕೊಟ್ಟಾಗ; ಅವರ ನಿರ್ವೀರ್ಯ ನಿಲುಮೆಯನ್ನು, ಅಪಲಾಪವನ್ನು, ಅಸದಾಗ್ರಹವನ್ನು, ಅಹಂಮದ ಪ್ರದರ್ಶನವನ್ನು, ಅರಾಷ್ಟ್ರೀಯ ವರ್ತನೆಯನ್ನು ಸಹಿಸುವುದು ಮತದಾರರಲ್ಲಿಯ ಅಲ್ಪಸಂಖ್ಯ ವಿವೇಕಿಗಳಿಗೆ ಅತ್ಯಂತ ಕಷ್ಟಕರ. ಅವುಗಳ ಪರಿಣಾಮವನ್ನು ಅನುಭವಿಸುವುದು ಬಹುಸಂಖ್ಯ ಅವಿವೇಕಿಗಳಿಗೂ ಅತಿ ಕಷ್ಟಕರ ಎನ್ನಿಸುತ್ತದೆ. ಆಗ ಎಲ್ಲರೂ ಸ್ಪಷ್ಟವಾಗಿಯೋ, ಅಸ್ಪಷ್ಟವಾಗಿಯೋ ಸರ್ವಾಧಿಕಾರದ ಸಾಂಕುಶ ಅಥವಾ ನಿರಂಕುಶ ರೂಪವನ್ನು ಬಯಸುವರು. ಬಾಂಡಲೆಯ ಮೇಲೆ ಕುಳಿತು ಬಹಳ ಕಾಲ ಚಿತ್ರಹಿಂಸೆಯನ್ನು ಅನುಭವಿಸುವುದಕ್ಕಿಂತ ಒಲೆಯಲ್ಲಿ ಬಿದ್ದು ಸಾಯವುದೇ ಲೇಸು ಎಂಬಂತಾದಾಗ ಯಾವ ಪ್ರಭುತ್ವದ ಮೇಲೆಯೂ ಯಾರಿಗೂ ಅಭಿಮಾನ ಉಳಿಯದು. ಪ್ರಭುತ್ವವೊಂದರ ಗುಣದೋಷಗಳ ಪರಸ್ಪರ ಪ್ರಮಾಣವು ಆಯಾ ಜನಾಂಗಗಳ ಮನುಷ್ಯರ ಮನಸ್ಸಿನ ಮೇಲೆ ಈವರೆಗೆ ಆಗಿರುವ ಸಂಸ್ಕಾರದ ಮಟ್ಟವನ್ನು ಹೊಂದಿಸಿಕೊಂಡು ಸರಾಸರಿ ಯಶಸ್ಸನ್ನು ಪಡೆಯಲು ಸಮರ್ಥವಾದರೆ ಸಾಕು ಎಂಬುದು ವ್ಯಾವಹಾರಿಕ ವಿಚಾರ. (National Psychology) ರಾಷ್ಟ್ರೀಯ ಮನೋಧರ್ಮದ ಲಕ್ಷಣಗಳನ್ನು ಗುರುತಿಸಿ, ಅದರ ರಾಜ್ಯಸಿದ್ಧಿಯ ಸ್ವರೂಪಕ್ಕೆ ನೇರವಾಗಿ ಸಂಬಂಧಿಸಿದ ಸದಾಚಾರ ಸದ್ವಿಚಾರಗಳನ್ನು ವ್ಯಾವಹಾರಿಕವಾಗಿ ಗೌರವಿಸುವ ಬುದ್ಧಿಯನ್ನು ಬೆಳೆಯಿಸಿಕೊಳ್ಳದ ಚಿಂತಕನ ರಾಜ್ಯರೂಪದ ಚಿಂತನವು ಹಡೆವ ಎಲ್ಲ ಸಿದ್ಧಾಂತಗಳೂ ಅವನ ದೇಶದ ಹಿತಕ್ಕೆ ಘಾತಕವಾಗುವುದು. ಸರ್ವಶಕ್ತನಾದ ಏಕ ನಾಯಕನ ಆಳಿಕೆಯನ್ನು ಜಾರ್ಜಿಸ್ ಸೊರೆಲ್ (೧೮೪೭–೧೯೨೨) ಮೇರಿನೆಟ್ಟಿ, ಪಾಮಿರಿ ಮುಂತಾದ ಚಿಂತಕರು ಸಮರ್ಥಿಸಿದ್ದರು. ಪಾರ್ಲಿಮೆಂಟರಿ ಡೆಮೊಕ್ರೆಸಿಯ ದೆಸೆಯಿಂದ ಅತ್ಯಂತ ಅಸಮರ್ಪಕ ಆಡಳಿತ ನಡೆದುದನ್ನು ಕಂಡು ಅವರು ಬೇಸತ್ತು ಅದರ ಬಗ್ಗೆ ಸಂಪೂರ್ಣವಾಗಿ ಆಶಾರಹಿತರಾದರು. ಅವರ ಕಲ್ಪನೆಯ ಪ್ರಕಾರ ಸರ್ವಾಧಿಕಾರವು ರಾಷ್ಟ್ರಜೀವನದ ಸುಖ–ಸಂತೋಷಗಳನ್ನು ಕೊಡಲು ಆದರ್ಶ ಧೀರೋದಾತ್ತ ಸರ್ವಾಧಿಕಾರಿಯನ್ನು ಅಧಿಕಾರಪಟ್ಟದಲ್ಲಿ ತಂದು ನಿಲ್ಲಿಸಬೇಕು. ವ್ಯಕ್ತಿ ಪ್ರಾಧಾನ್ಯದ ನಾಗರಿಕತೆಯು ಬಹಳ ನಶ್ವರ. ಸಂಸ್ಥಾಪ್ರಧಾನ ನಾಗರಿಕತೆಯು ಚಿರಕಾಲ ಬಾಳೀತು ಎಂಬುದನ್ನು ಯಾರೂ ಅಲ್ಲಗಳೆಯಲಾರರು; ಆದರೆ ಅಸಮರ್ಥರಿಂದ ಸಂಸ್ಥೆಯೊಂದು ತುಂಬಿಹೋದಾಗ, ಅದರ ನರಕಪ್ರಶಾಸನವನ್ನು ದೀರ್ಘಕಾಲ ತಾಳಿಕೊಂಡು ಇರುವುದು ಅಸಾಧ್ಯವಾಗುವುದು. ಆಗ ಸಮರ್ಥ ವ್ಯಕ್ತಿಯನ್ನು ಅದರ ನಿರ್ಮೂಲನಕ್ಕಾಗಿ ಜನರು ಬೆಂಬಲಿಸಿ ನಿಲ್ಲಬೇಕಾಗುವುದು. ದೇಶ, ಕಾಲ, ಸಂದರ್ಭಗಳಲ್ಲವೇ ಈ ಪ್ರಪಂಚ ಜೀವನದ ನ್ಯಾಯವನ್ನೂ ಶುಚಿತ್ವವನ್ನೂ ನಿರ್ಣಯಿಸಲು ಆಧಾರಗಳು? ಬ್ರಹ್ಮದೇಶದಲ್ಲಿ ಸೈನ್ಯಾಧಿಕಾರ ಬಂದದ್ದನ್ನು ಅಲ್ಲಿಯ ಮುತ್ಸದ್ದಿಗಳು ಅದು ಪ್ರಜಾಪ್ರಭುತ್ವದ ವಿಕಾಸ ಮಾರ್ಗದಲ್ಲಿಯ ಒಂದು

ಅನಿವಾರ್ಯವಾದ ಮೆಟ್ಟಲು ಎಂದು ಭಾವಿಸಿದರು. ಈಜಿಪ್ಟಿನಲ್ಲಿ ಆದದ್ದೂ ಹಾಗೇ. ಪೂರ್ವದೇಶಗಳಲ್ಲಿ ಹೊಸದಾಗಿ ಸ್ವಾತಂತ್ರ್ಯ ಪಡೆದ ಹಲವಾರು ರಾಷ್ಟ್ರಗಳಲ್ಲಿ ಅಂಥ ಕ್ರಾಂತಿಗಳು ಸಂಭವಿಸಿವೆ.

ರಾಷ್ಟ್ರವೊಂದರ ಮುಖ್ಯವಾದ ರಾಜಕೀಯ ಸೂತ್ರಧಾರನು ರಾಜನಾಗಿರಲಿ, ಪ್ರಜಾಸತ್ತಾತ್ಮಕ ಮುಖ್ಯಮಂತ್ರಿಯಾಗಿರಲಿ, ಅಧ್ಯಕ್ಷನಾಗಿರಲಿ, ಚಕ್ರವರ್ತಿಯಾಗಿರಲಿ ಅಥವಾ ಸರ್ವಾಧಿಕಾರಿಯಾಗಿರಲಿ; ಅವಿದ್ವಾಂಸನೂ ಅಪ್ರಾಮಾಣಿಕನೂ ಆದಾಗ ಅವನ ಅತ್ಯುಗ್ರ ಅಥವಾ ಅತಿ ಶಿಥಿಲ ಆಡಳಿತದಿಂದ ರಾಷ್ಟ್ರದ ಪ್ರಜೆಗಳು ದುಃಖಿಗಳಾಗುತ್ತಾರೆ. ಅವರು ಅವನನ್ನು ಮನೆಗೆ ಕಳಿಸಲೇಬೇಕಾಗುತ್ತದೆ. ಈ ಐವರಲ್ಲಿ ಯಾರನ್ನು ಮನೆಗೆ ಕಳಿಸುವುದು ಸುಲಭ? ಎಂಬ ಪ್ರಶ್ನೆಯು ಹೊಣೆಗಾರ ಪ್ರಜೆಗಳಿರುವ ರಾಜ್ಯ(ರಾಷ್ಟ್ರ)ದಲ್ಲಿ ಮಾತ್ರ ಕೆಲಸಕ್ಕೆ ಬರುವಂಥಾದ್ದು. ಬೇಜವಾಬ್ದಾರಿಯ ಮಹಾಭಾಗರು (ಬಹುಸಂಖ್ಯರು) ತುಂಬಿರುವ ರಾಷ್ಟ್ರದಲ್ಲಿ ಯಾವ ಯಾವ ಬಗೆಯ ಪರಮಾಧಿಕಾರ ಪದ್ಧತಿ ಜಾರಿಯಲ್ಲಿದ್ದರೂ ಅಂಥ ಪ್ರಶ್ನೆಯು ಉದ್ಭವಿಸದು. ಅಲ್ಲಿ ಯಾವಾಗಲೂ ಇಲಿ ಹುಲಿಯಾಗಿಯೇ ತೀರುತ್ತದೆ.

ರಾಜಕೀಯ ಜವಾಬ್ದಾರಿಯನ್ನು ಚೆನ್ನಾಗಿ ತಿಳಿದಿರುವ ಮಹಾಭಾಗರಿರುವ ರಾಷ್ಟ್ರದಲ್ಲಿ ಪ್ರಜಾಪ್ರಭುತ್ವವು ಖಂಡಿತವಾಗಿಯೂ ಶ್ರೇಷ್ಠ ಎಂದು ಹೇಳಬಹುದು. ಇತರ ಪ್ರಭುತ್ವಗಳಿದ್ದಲ್ಲಿ ಸಹ ಜವಾಬ್ದಾರಿಯುಳ್ಳ ಪ್ರಜೆಗಳು ಬಹಳ ಹಾನಿಗೀಡಾಗರು. ಅವರು ಯೋಗ್ಯರನ್ನೇ ಆಯ್ದು ಪರಮಾಧಿಕಾರದ ಕೇಂದ್ರದಲ್ಲಿ ಸ್ಥಾಪಿಸಬಲ್ಲರು ಮತ್ತು ಅಯೋಗ್ಯ ಎಂದು ತೋರಿದ ಉಚ್ಚಾಧಿಕಾರಿಯನ್ನು ಒಕ್ಕಟ್ಟಿನಿಂದಲೇ, ಎಷ್ಟೇ ಕಷ್ಟವಾಗಲಿ, ಮನೆಗೆ ಕಳಿಸಬಲ್ಲರು. ಅಂಥವರಿಗೆ ಪ್ರಜಾಪ್ರಭುತ್ವದಲ್ಲಿ ಯೋಗ್ಯರ ಆಯ್ಕೆ ಮತ್ತು ಅಯೋಗ್ಯರ ಸ್ಥಾನಚ್ಯುತಿಗಳನ್ನು ನೆರವೇರಿಸುವುದು ಸುಲಭವಾಗುವಂಥ ಯೋಜನೆಯನ್ನು ಅಥವಾ ಪದ್ಧತಿಯನ್ನು ಸುಲಭವಾಗಿ ರೂಪಿಸಿಕೊಳ್ಳಲೂ ಅನುಕೂಲ ಹೆಚ್ಚುತ್ತದೆ. ಪ್ರಜಾಸತ್ತೆಗಳಲ್ಲಿ ಹಲವಾರು ಬಗೆಗಳಿವೆ; ಇನ್ನೂ ಹತ್ತು ಹೊಸಬಗೆಗಳನ್ನು ರೂಪಿಸಬಹುದು. ಸ್ವಾನುಭವವಿಲ್ಲದ, ಇದ್ದರೂ ಅದನ್ನು ಅರ್ಥಮಾಡಿಕೊಳ್ಳದ ಅಥವಾ ಅದರಿಂದ ಪಾಠ ಕಲಿಯಲಾರದ ಪ್ರಜಾಪ್ರಮುಖರು ಯಾವ ಯೋಗ್ಯ ತೀರ್ಮಾನವನ್ನೂ ತೆಗೆದುಕೊಳ್ಳಲಾರರು. ಅಂಥವರು "ದೇವರೇ ಗತಿ ಆಂಡ್ ಕಂಪೆನಿ"ಯ ಸದಸ್ಯರು. ಗುಂಡರೇ ಅಂಥವರ ಸರ್ವಾಧಿಕಾರಿಗಳಾಗಿ ನಿಲ್ಲುವರು!



# ೮

# ನಮ್ಮ ಪ್ರಜಾಪ್ರಭುತ್ವದ ವರ್ತಮಾನ ಪರಿಸ್ಥಿತಿ

ಕ್ರಿ.ಶ. ೧೬೮೮ರಲ್ಲಿ ಇಂಗ್ಲೆಂಡಿನ ದೈವಿಕ ರಾಜತ್ವವು ಕೊನೆಗೊಂಡಿತು. ೩ನೆಯ ಜಾರ್ಜ್ ದೊರೆಯ ಆಳಿಕೆಯಲ್ಲಿ ಪಾರ್ಲಿಮೆಂಟಿನ ಅಧಿಕಾರ ಪ್ರತಿಷ್ಠೆಗಳು ಮತ್ತು ರಾಜತ್ವದ ಔಪಚಾರಿಕ ರೂಪವು ಭದ್ರವಾಗಿ ನೆಲೆಗೊಂಡವು. "ಟೋರಿ" ಮತ್ತು "ವಿಗ್" ಎಂಬ ಎರಡು ರಾಜಕೀಯ ಪಕ್ಷಗಳು ಏಳಿಗೆ ಹೊಂದಲಾರಂಭಿಸಿದವು. ೧೯೧೪ರ ವರೆಗೆ "ವಿಗ್" ಪಕ್ಷವು "ಲಿಬರಲ್" ಎಂಬ ಹೆಸರಿನಿಂದ ಇಂಗ್ಲೆಂಡಿನ ರಾಜಕೀಯ ಜೀವನದಲ್ಲಿ ಮಹತ್ವದ ಪಾತ್ರವನ್ನು ವಹಿಸಿತು. ಆದರೆ ೧೯ನೆಯ ಶತಮಾನದ ಆದಿಯಲ್ಲಿ ಜನಿಸಿದ "ಲೇಬರ್" ಪಕ್ಷವು "ಲಿಬರಲ್" ಪಕ್ಷಕ್ಕೆ ಪ್ರತ್ಯಾದೇಶವಾಗಿ ಪರಿಣಮಿಸಿತು. "ಟೋರಿ"ಯು "ಕನ್‌ಸರ್‌ವೇಟಿವ್" ಎನ್ನಿಸಿತು.

ಇಂಗ್ಲೆಂಡಿನಲ್ಲಿ ರಾಜನಿದ್ದಾನೆ; ಆದರೆ ಅದು ರಾಜಪ್ರಭುತ್ವವಲ್ಲ. ಅಲ್ಲಿರುವುದು ಪಕ್ಷವಾದದ ಪ್ರಜಾಪ್ರಭುತ್ವ ಎಂದು ಬಹಳ ಜನರು ನಂಬುತ್ತಾರೆ. ಭಾರತದಲ್ಲಿ ರಾಷ್ಟ್ರಾಧ್ಯಕ್ಷರಿದ್ದಾರೆ; ಆದರಿದನ್ನು ಅಮೇರಿಕದ ಮಾದರಿಯ ಪ್ರಜಾಪ್ರಭುತ್ವ ಎಂದು ಯಾರೂ ಗಣಿಸುವುದಿಲ್ಲ. ಏಕೆಂದರೆ ಇಲ್ಲಿಯ ರಾಷ್ಟ್ರಪತಿಯು ಇಂಗ್ಲೆಂಡಿನ ರಾಜನಿಗೆ ಸಮಾನ ಎಂದು ಹೇಳಲಾಗಿದೆ. ಆದರೆ ಸಂವಿಧಾನದಲ್ಲಿ ರಾಷ್ಟ್ರಪತಿಯ ಅಥವಾ ರಾಷ್ಟ್ರಾಧ್ಯಕ್ಷನ ಕಾಯಿದೆಬದ್ಧ ಅಧಿಕಾರ ಬಹಳ ವ್ಯಾಪಕವಾದದ್ದಾಗಿದೆ. ಅಂದರೆ ಇಂಗ್ಲೆಂಡಿನ ರಾಜನಿಗೆ ಹಿಂದೆ ಇದ್ದಷ್ಟೇ ಅಧಿಕಾರ ಇದೆ. ಅಮೇರಿಕದ ಸಂಯುಕ್ತ ಸಂಸ್ಥಾನದ ಅಧ್ಯಕ್ಷನಿಗಿಂತ ಅಧಿಕಾರ ಹೆಚ್ಚಾಗಿದೆ. ವಿಚಾರ–ಆಚಾರಗಳ (Theory and Practice) ಈ ವ್ಯತ್ಯಾಸದಿಂದ ಇಂಗ್ಲೆಂಡಿನ ರಾಜಕೀಯ ಆರೋಗ್ಯವು ಕೆಟ್ಟಿಲ್ಲ; ಇಂಡಿಯದ ಆರೋಗ್ಯ ತೃಪ್ತಿಕರವಾಗಿದೆ ಎಂದು ಹೇಳುವುದು ಸುಲಭವಲ್ಲ.

ಇಂಗ್ಲೆಂಡಿನ ಮಾದರಿಯನ್ನು ನೋಡಿಯೇ ಅನೇಕರಿಂದು ದ್ವಿಪಕ್ಷದ ಪ್ರಜಾಪ್ರಭುತ್ವ ಬಹಳ ಯೋಗ್ಯ ಎಂದು ನಂಬುತ್ತಾರೆ. ಈ ನಂಬಿಕೆ ನಿರಾಧಾರವಾದುದು ಎನ್ನಲು ದ್ವಿಪಕ್ಷ ಪದ್ಧತಿ ಇರುವ ಇತರ ರಾಷ್ಟ್ರಗಳ ಪರಿಸ್ಥಿತಿಯನ್ನು ಪರಿಶೀಲಿಸಿದರೆ ತಿಳಿದುಬರುವ ಅಂಶವೇ ಆಧಾರ. ಅಮೇರಿಕದಲ್ಲಿ "ಡೆಮೊಕ್ರೆಟಿಕ್" ಮತ್ತು "ರಿಪಬ್ಲಿಕನ್" ಪಕ್ಷಗಳು ಮುಖ್ಯ. ಆದರೆ ಪ್ರಜಾಪ್ರಭುತ್ವದ ನೈತಿಕ ಗುರಿಯಾದ ಆರ್ಥಿಕ ಸಮತಾಸಾಧನೆಗೆ ಯಾರ

ಬೆಂಬಲವೂ ಇಲ್ಲ. ಭಾರತದಲ್ಲಿ "ಕಾಂಗ್ರೆಸ್" ಮತ್ತು "ಕಮ್ಯೂನಿಸ್ಟ್" ಪಕ್ಷಗಳು ಗಣ್ಯವೆನ್ನಿಸಿದವು. ಆದರೆ ೨ನೆಯದು ೧ನೆಯದರ ಸಮಬಲವಾಗಿ ನಿಲ್ಲಲಿಲ್ಲ. ಆರ್ಥಿಕ ಸಮತೆಯು ಕೇವಲ ವಾದವಾಗಿಯೇ ಉಳಿದಿವೆ. ಏಕೆಂದರೆ ಹೆಗ್ಗಣಗಳನ್ನು ಒಳಗಿಟ್ಟು ನಮ್ಮ ಪ್ರಭುತ್ವವು ಚೀಲಗಳನ್ನು ಹೊಲಿಯುತ್ತ ಹೋಗಿದೆ. ಇಂಗ್ಲೆಂಡು ಅಮೇರಿಕಗಳು ತಮ್ಮ ಧೋರಣೆಗಳು ಸೋಲದಂತೆ ಸಾಗಿಸಿಕೊಂಡು ಹೋಗಲು ಸಾಮಾನ್ಯವಾಗಿ ಶಕ್ತವಾಗಲು ಅವು ಹೆಗ್ಗಣಗಳನ್ನು ಇಲ್ಲಿಯಷ್ಟು ಬೆಳೆಯಗೊಡದಿರುವುದೇ ಕಾರಣ. ಇದರಿಂದ ಪ್ರಭುತ್ವಜಾತಿಗಳಿಂದ ಹೇಗೋ ಹಾಗೇ ಪಕ್ಷಸಂಖ್ಯೆಯಿಂದ ರಾಷ್ಟ್ರವೊಂದರ ಬಾಳಿನ ಸೋಲು–ಗೆಲುವುಗಳು ನಿರ್ಧರಿಸಲ್ಪಡುವುದಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಹೆಗ್ಗಣವೊಂದು ಅರಾಷ್ಟ್ರೀಯತೆಯ ಸಂಕೇತ. ಅದರಲ್ಲಿ ಅನೇಕ ಉಪಜಾತಿಗಳಿವೆ. ಆಡಳಿತದ ಧೋರಣೆ, ಕಾಯದೆ ಮತ್ತು ರೀತಿನೀತಿಗಳ ಯೋಗ್ಯತೆಯೊಂದೇ ಅವುಗಳ ವಂಚನಾಶಕ್ತಿಯನ್ನು ಅದುಮಿ ಹಿಡಿಯಬಲ್ಲುದು. ಆದರೆ ಆಡಳಿತ ವೃತ್ತದಲ್ಲಿರುವ ಬಹುಸಂಖ್ಯ ಮನುಷ್ಯರಿಗೆ ಆಳುವ ಪಕ್ಷದ ರಾಜಕೀಯ, ಆರ್ಥಿಕ, ಸಾಮಾಜಿಕ ಧೋರಣೆ, ಕಾರ್ಯಕ್ರಮಗಳಲ್ಲಿ ಶ್ರದ್ಧೆ ಸಾಕಷ್ಟಿಲ್ಲವಾದರೆ? ಅಥವಾ ಅವರು ಸ್ವಭಾವತಃ ಮಹಾಮೂಷಕ ಪ್ರವೃತ್ತಿಯವರಾದರೆ? ಅಧಿಕಾರಕ್ಕೆ ಬಂದ ಪಕ್ಷವೊಂದು ತನ್ನ ಘೋಷಣ ಪತ್ರದಲ್ಲಿ ಕಾಣಿಸಿದ ಕಾರ್ಯಕ್ರಮಗಳ ಬಗ್ಗೆ ಶ್ರದ್ಧೆಯುಳ್ಳವರನ್ನೇ ೧–೨ನೆಯ ವರ್ಗಗಳ ನೌಕರಿಗಳಿಗೆ ಸೇರಿಸಿಕೊಳ್ಳುವುದನ್ನೂ ಶ್ರದ್ಧಾಹೀನರನ್ನು ಆ ವರ್ಗಗಳ ಸ್ಥಾನದಿಂದ ಚ್ಯುತಗೊಳಿಸುವುದನ್ನೂ ಕಾಯಿದೆಬದ್ಧಗೊಳಿಸುವುದು ಆಡಳಿತ ಸುಧಾರಣೆಯ ಒಂದು ಕ್ರಮ. ಎರಡನೆಯದಾಗಿ, ಸಾರ್ವಜನಿಕ ಹಿತದ ಕಾರ್ಯಗಳನ್ನು ಮಾಡಿದವರಿಗೇ ಪಕ್ಷದ ತಿಕೀಟನ್ನು ಕೊಡುವ ಚುನಾವಣಾ ಪದ್ಧತಿಯನ್ನು ಬಹಳ ಬಿಗಿಯಾಗಿ ಜಾರಿಗೆ ತರಬಹುದು. ೩ನೆಯದಾಗಿ, ಬಲವಾದ ನಿಷ್ಠಾವಂತ ಗುಪ್ತಚಾರ ಸೈನ್ಯವನ್ನು ಸಂಘಟಿಸಿಕೊಂಡು ಚುನಾವಣೆಯ ಶುದ್ಧೀಕರಣಕ್ಕೆ ಕೈಹಾಕಬಹುದು. ಚುನಾವಣೆಯಲ್ಲಿ ನಡೆಯುವ ಗುಪ್ತ ಅಕ್ರಮಗಳ ಹೊರೆಯೇ ಇಂದು ಭ್ರಷ್ಟಾಚಾರದ ಮಾನಸಗಂಗೋತ್ರಿಯಾಗಿದೆ. ಗೌರವ ಸೇವೆಯ ಸ್ಥಾನಗಳನ್ನು ರಾಜಕೀಯದಲ್ಲಿ ಕಡಿಮೆ ಮಾಡುವುದು ಇನ್ನೊಂದು ಸುಧಾರಣೆ. ಪಾಸಾಗಲಿರುವ ಪ್ರತಿಯೊಂದು ಕಾಯಿದೆಯನ್ನೂ ಹೈಕೋರ್ಟು ಮುಟ್ಟದ ಸುಸಂಸ್ಕೃತ ನ್ಯಾಯಾಧೀಶರ ಪರಾಮರ್ಶೆಗೊಳಪಡಿಸಿಯೇ ಪಾಸು ಮಾಡುವುದು ಮತ್ತೊಂದು ಅತ್ಯಗತ್ಯವಾದ ಸುಧಾರಣೆ. ಪ್ರಾಮಾಣಿಕ ಹಾಗೂ ದಕ್ಷ ಅಧಿಕಾರಿಗಳಿಗೆ ಅವರ ಸೇವಾಂತ್ಯದಲ್ಲಿ ಸರಕಾರಿ ಸತ್ಕಾರವನ್ನೇರ್ಪಡಿಸುವುದು ಇನ್ನೂ ಒಂದು ಒಳ್ಳೆಯ ಕ್ರಮ.

ಅಧಿಕಾರಿಗಳ ಸಂಖ್ಯೆಯನ್ನು ಮಿತಗೊಳಿಸುವುದೂ, ಶಾಖೆಗಳನ್ನು (Coordinate) ಸಮವಾಯಗೊಳಿಸುವುದೂ ಅಧಿಕಾರವನ್ನು ಉಪಪ್ರಾದೇಶಿಕವಾಗಿ ವಿಕೇಂದ್ರಿಕರಿಸುವುದೂ, ಏಕಮಾನ ಶಿಕ್ಷಣಪದ್ಧತಿಯನ್ನು ನೈತಿಕ ಪ್ರಾಧಾನ್ಯದೊಡನೆ ದೇಶದಾದ್ಯಂತ ದೇಶೀಯ ಭಾಷೆಗಳ ಮೂಲಕ ಎಲ್ಲರೂ ಪಡೆಯುವಂತೆ ಮಾಡುವುದೂ ಕೋರ್ಟು ಕಚೇರಿಗಳು ಎಲ್ಲೆಡೆಗಳಲ್ಲೂ ದೇಶೀಯ ಭಾಷಾ ಮಾಧ್ಯಮವನ್ನು ಬಳಸುವಂತೆ ಮಾಡುವುದೂ

ಎಂದೋ ಆಗಬೇಕಾಗಿದ್ದ ಸುಧಾರಣೆಗಳು. ಯಾವ ಪಕ್ಷದ ಚುನಾವಣಾ ಘೋಷಣೆಯೂ ಈ ಸುಧಾರಣೆಗಳನ್ನು ಒಳಗೊಳ್ಳುತ್ತಿಲ್ಲ. ಇದನ್ನು ಕಂಡಾಗ ಪ್ರಾಮಾಣಿಕ ಪ್ರಜಾಪ್ರಭುತ್ವವಾದಿಗಳಿಗೆ ಸ್ವಲ್ಪ ನಿರಾಶೆಯುಂಟಾಗದಿರದು. ಬಳಕೆಗಾರರ ಅರಕ್ಷಿತತೆ ದಿನೇ ದಿನೇ ವೃದ್ಧಿ ಹೊಂದುತ್ತಿರುವುದನ್ನು ತಡೆಗಟ್ಟದೆ ಹೋದರೆ ನಮ್ಮ ಪ್ರಜಾಪ್ರಭುತ್ವಕ್ಕೆ ಸೋಲು ಕಟ್ಟಿಟ್ಟದ್ದು. ಅವರು ಶ್ರೀ ಮೊರಾರ್ಜಿ ಆಯೋಗದ ಪ್ರಕಟನೆಯನ್ನೂ, ಅದು ಜಾರಿಗೆ ಬರುವುದನ್ನೂ ಚಾತಕಪಕ್ಷಿಯಂತೆ ನಿರೀಕ್ಷಿಸುತ್ತಿದ್ದ ಕಾಲ ಮುಗಿಯಿತು ಎನ್ನಬಹುದು. ಆದರೆ ಅವೆರಡೂ ಈಗ ಮೊರಾರ್ಜಿಗೇ ವಿಸ್ಮೃತವಾಗಿ ಹೋದಂತೆ ತೋರುತ್ತದೆ.

ಸ್ತೇನಬುದ್ಧಿಯು (Corrupt mentality) ಭಾರತದಲ್ಲಿ ಅನಾದಿಕಾಲದಿಂದ ಇದ್ದ ಅರಾಷ್ಟ್ರೀಯ ಅಥವಾ ಅಸಾಮಾಜಿಕ ಪ್ರವೃತ್ತಿ. ಅದು ರಾಷ್ಟ್ರೀಯತೆಯ ಪರಮಶತ್ರು. ಇತಿಹಾಸದ ವಿವಿಧ ಅವಧಿಗಳಲ್ಲಿ ಅದು ವಿವಿಧ ಅವತಾರಗಳನ್ನು ತಾಳಿ ದಾಳಿಮಾಡಿದೆ. ಆಧುನಿಕ ಭಾರತವು ಅದನ್ನು ಅಡಗಿಸುವ ಶೈಕ್ಷಣಿಕ ಮತ್ತು ಪ್ರಶಾಸನಿಕ ಕ್ರಮಗಳನ್ನು ಕಂಡುಹಿಡಿದು ಉಗ್ರವಾಗಿ ಜಾರಿಗೆ ತರದಿದ್ದರೆ, ಹಿಂದಿನಂತೆಯೇ ಇಂದೂ ತೂತುಕರಟದಿಂದ ನೀರು ಹೊಯ್ದಂತಾಗದಿರದು; ವಿಪತ್ತುಗಳು ಅನಿರೀಕ್ಷಿತವಾಗಿ ಧುತ್ತೆಂದು ಎದುರು ನಿಲ್ಲಬಹುದು. ಸಮರ್ಥ ಸಂಸ್ಥಾರಚನೆಯ ಕೌಶಲವನ್ನು ರಾಷ್ಟ್ರೀಯತೆಗೆ ಅನುಗುಣವಾಗಿ ಬೆಳೆಯಿಸಿಕೊಳ್ಳದಿದ್ದರೆ, ನವಭಾರತವು ದುಃಖಪರಂಪರೆಗೆ ಗುರಿಯಾಗಬೇಕಾದೀತು. ಕೇವಲ ಬಾಯಬಲದಿಂದ ಏನೂ ಆಗಲಾರದು. ಹರಟುವ ಬಾಯಿಯನ್ನು ಬಂದು ಮಾಡಿ ಕಾರ್ಯಕ್ಕಿಳಿಯುವ ಸದಾಚಾರವನ್ನು ರೂಢಿಸಿಕೊಳ್ಳಬೇಕು. ಆತ್ಮಸ್ತುತಿಯನ್ನು ತ್ಯಜಿಸುವ ಪಕ್ಷಪ್ರಚಾರದ ಕ್ರಮವನ್ನು ಪ್ರತಿಯೊಂದು ಪಕ್ಷವೂ ಅನುಸರಿಸಲು ತೊಡಗಬೇಕು. "ಸತ್ಯಮೇವ ಪುರಸ್ಕಾರ್ಯಂ ಕದಾಚಿದಪಿ ನಾನೃತಂ" ಎಂಬುದು ನಮ್ಮ ರಾಷ್ಟ್ರದ ಪ್ರತಿಜ್ಞಾಬದ್ಧಧ್ಯೇಯವಾಗಬೇಕು.



೯

# ಪ್ರಜಾಪ್ರಭುತ್ವದ ಯಶಕ್ಕೆ ದಾರಿ

ಭಾರತದಲ್ಲಿ ರಾಜಪ್ರಭುತ್ವವಿತ್ತು, ಗಣರಾಜ್ಯವಿತ್ತು; ನಿರಂಕುಶರೆನ್ನಬಹುದಾದ ಸಾರ್ವಭೌಮರೂ ಪ್ರಜಾಪ್ರಭುತ್ವ ನಾಯಕರೂ ಆಗಿಹೋದರು. ಒಳಿತು–ಕೆಡಕುಗಳ ಅತಿಶಯಗಳನ್ನು ಈ ದೇಶ ಅನುಭವಿಸಿತು. ಆದರೆ ಜೀವನದ ವಿವಿಧ ಕ್ಷೇತ್ರಗಳಲ್ಲಿ ಸ್ತೇನ ಪ್ರವೃತ್ತಿಯನ್ನು ನಿರ್ಮೂಲ ಮಾಡುವ ಉಪಾಯವನ್ನು ಅದು ಕಂಡುಕೊಳ್ಳಲಾರದಾಯಿತು. "ಸ್ತೇನಾನಾಂ ಪತಯೇ ನಮಃ" ಎಂದು ನಮಸ್ಕಾರ ಹಾಕಿದರೂ ಸ್ತೈನ್ಯವು ಹಿಂದಕ್ಕೆ ಹೆಜ್ಜೆ ಇಡಲಿಲ್ಲ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅತ್ಯಾಧುನಿಕವೆನ್ನಬಹುದಾದ ಸ್ತೈನ್ಯ ಪ್ರತಿಬಂಧಕ ಉಪಾಯಗಳನ್ನು ಹೇಳಿದೆ. ರಷ್ಯಾ, ಅಮೇರಿಕ, ಇಂಗ್ಲೆಂಡುಗಳಲ್ಲಿ ಅಂಥ ಎಷ್ಟೋ ಉಪಾಯಗಳು ಜಾರಿಯಲ್ಲಿವೆ. ನಮ್ಮ ರಾಜಕೀಯ ನಾಯಕರು ಅತ್ತ ಕಣ್ಣು ಹಾಯಿಸಲಿಲ್ಲ. ರಾಜ್ಯಶಾಸ್ತ್ರದ ಅಭ್ಯಾಸದಿಂದ ಕಂಡುಬರುವ ಮುಖ್ಯವಾದ ಅಂಶವೇನೆಂದರೆ (Human Material) ಮಾನವದ್ರವ್ಯವನ್ನು ಪಳಗಿಸುವ ಕಲೆ ನಿಷ್ಠಾವಂತ ನಾಯಕರಿಗೆ ಚೆನ್ನಾಗಿ ಗೊತ್ತಿದ್ದರೆ ಯಾವ ನಾಗರಿಕ ಪ್ರಭುತ್ವದಿಂದಾದರೂ ಲೋಕಕ್ಷೇಮವನ್ನು ಸಾಧಿಸಬಹುದು ಎಂಬುದೇ.

ಪ್ರಜಾಪ್ರಭುತ್ವದಲ್ಲಿ ಶಿಕ್ಷಣಕ್ಕಿರುವ ಮಹತ್ವ ಇನ್ನೊಂದಕ್ಕಿಲ್ಲ. ಅದರ ಸೋಲು–ಗೆಲುವುಗಳು ನೀತಿವಂತಿಕೆಯ ಮಟ್ಟವನ್ನೇ ಅವಲಂಬಿಸಿವೆ. ಸ್ವಾತಂತ್ರ್ಯದ ಮಟ್ಟಿನಲ್ಲಿ ನೀತಿಯನ್ನು ಕಡೆಗಣಿಸಿದ್ದೇ ಭಾರತದ ಇಂದಿನ ರಾಜಕೀಯ, ಆರ್ಥಿಕ, ಸಾಮಾಜಿಕ ಅವ್ಯವಸ್ಥೆಗಳಿಗೆ ಕಾರಣ. ಕೇವಲ ವೇದಿಕೆಯ ಮೇಲೆ ಓಷ್ಠಾಧರ ವ್ಯಾಯಾಮವನ್ನು ನಡೆಸಿ ಯಾವ ಪ್ರಭುತ್ವವೂ ತನ್ನ ಬುನಾದಿಯನ್ನು ಭದ್ರಗೊಳಿಸಿಕೊಳ್ಳಲಾರದು. ನೀತಿವಿಮುಖ ಅರ್ಥಶಾಸ್ತ್ರವನ್ನು ಮಹಾತ್ಮಾ ಗಾಂಧಿಯವರು ಉಗ್ರವಾಗಿ ಖಂಡಿಸಿದ್ದಾರೆ. ಗಾಂಧಿಜಯಂತಿಯನ್ನಾಚರಿಸುವ ನಾಯಕರೆಲ್ಲರಿಗೂ ಇದು ಗೊತ್ತಿದೆಯೇ?

ಮದ್ಯ, ಮಾಂಸ, ದ್ಯೂತಗಳ ಆರಾಧನೆ ಮತ್ತು ಅಕ್ರಮವರ್ತನೆಗಳಿಗೆ ಅವಕಾಶ ಸುಲಭವಾಗಿ ಸಿಗುವವರೆಗೆ ನಮ್ಮ ದೇಶ ಯಾವ ಆರೋಗ್ಯಕರವಾದ ಸಂಸ್ಥೆಯನ್ನೂ ಶಾಶ್ವತವಾಗಿ ನಡೆಸಿಕೊಂಡು ಹೋಗಲಾರದು. ಲಾಭಬಡಿಕತನವನ್ನು ಬಗ್ಗುಬಡಿಯದೆ ನಮಗೆಂದೂ ಮಂಗಲವು ಲಭಿಸಲಾರದು.

ಭೋಗಲಂಪಟತೆಯನ್ನು ಲೌಕಿಕ ಆದರ್ಶವೆಂದು ಪ್ರಚಾರಕ್ಕೆ ಹೊರಟು, ಲಂಚ, ಕಳ್ಳಪೇಟೆಗಳನ್ನು ಹೆಚ್ಚಿಸಿಕೊಂಡ ಆಧುನಿಕತೆಯು ಭಾರತದ ರಾಷ್ಟ್ರೀಯತೆಯ ಬೇರನ್ನು ಕತ್ತರಿಸುತ್ತಿದೆ. ಪರಹಿತೈಕಪರಾಯಣತೆಯು ನಮ್ಮ ಸಂಸ್ಕೃತಿಯ ಅನಾದಿಕಾಲದ ಹೆಮ್ಮೆ. ಅದೀಗ ಮಣ್ಣುಮುಕ್ಕಿ ಹೋಗುತ್ತಿದೆ. ಅನೇಕ ಬಾರಿ ರಾಜಕೀಯವೊಂದು ಜೂಜಾಟ ಮತ್ತು ಹರಾಜು ಎನ್ನಿಸಿದೆ. ಅಪ್ರಿಯಸತ್ಯವನ್ನು ಜೀರ್ಣಿಸಿಕೊಳ್ಳುವ ಶಕ್ತಿ ಹಲವು ಜನ ಮುಖಂಡರಲ್ಲಿ ಬತ್ತಿ ಹೋಗುತ್ತಿದೆ. ಅಸತ್ಯವಾದವನ್ನು ಸತ್ಯವಾದವೆಂದು ಹಿಡಿದು ಅಪ್ರಿಯುವಾದುದೆಲ್ಲವೂ ಅಸತ್ಯವೆಂದು ಆಗ್ರಹಿಸುವ ಅಸಾಮಾಜಿಕ ಬುದ್ಧಿ ತಾಂಡವವಾಡುತ್ತಿದೆ. ಭಾವಿಪೀಳಿಗೆ ಮುಗ್ಧತೆಯಿಂದ ವೈಯಕ್ತಿಕ ಸ್ವಾರ್ಥ ಸುಖದ ಕನಸಿನಲ್ಲಿ ಮೈಮರೆತು ಅರಾಜಕ ಪ್ರವೃತಿಯನ್ನು ಹಿಡಿದಿದೆ. ಭಾರತಕ್ಕೆ ರಾಜಕೀಯ ಆರೋಗ್ಯವೆಂಬುದರ ಕಲ್ಪನೆ ಇನ್ನೂ ಚೆನ್ನಾಗಿ ಆಗಿಲ್ಲ. ಅದಕ್ಕಾಗಿ ಅದು ಇನ್ನೂ ಅನೇಕ ವರ್ಷಗಳವರೆಗೆ ತಪಸ್ಸು ಮಾಡಬೇಕಾಗಿದೆ. "ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ನಿಬೋಧತ" ಎಂಬ ಮಹಾವಾಣಿ ನಮ್ಮನ್ನು ಎಚ್ಚರಿಸಲಿ, ನಮಗೆ ನಮ್ಮ ಸಾಂಸ್ಕೃತಿಕ ಆತ್ಮದ ಜ್ಞಾನವನ್ನು ಮಾಡಿಕೊಡಲಿ ಎಂದು ಪ್ರತಿಯೊಬ್ಬ ಪ್ರಜೆಯೂ ಇಂದು ನಿತ್ಯಪ್ರಾರ್ಥನೆ ಕೈಕೊಳ್ಳಬೇಕು. ಅಪ್ರಾರ್ಥಿತವಾಗಿ ಆತ್ಮಜ್ಞಾನವೆಂದಾದರೂ ಲಭ್ಯವೇ?

ನಮ್ಮ ಪ್ರಜಾಪ್ರಭುತ್ವದ ಚೌಕಟ್ಟು ಸಂಪೂರ್ಣವಾಗಿ (Federal) ಸಂಯುಕ್ತ ಪದ್ಧತಿಯದೂ ಅಲ್ಲ. ಇದು ಸಂಪೂರ್ಣ (Unitary) ಏಕಾತಪತ್ರ ಪ್ರಭುತ್ವವೂ ಅಲ್ಲ. ಪ್ರಾಂತೀಯ ಸ್ವಾಯತ್ತತೆ ಒಂದು ವಿಧದ ತ್ರಿಶಂಕು ಪದವಿಯದಾಗಿದೆ. ಇದರ ಪರಿಣಾಮವಾಗಿ ಪ್ರಾಂತೀಯ ರಾಜ್ಯಗಳ ಅಂತಃಕಲಹಗಳು ಹೆಚ್ಚಾಗುತ್ತ ಹೋಗಿವೆ. ಇಲ್ಲಿ ಕೇಂದ್ರಾಧಿಕಾರಕ್ಕೆ ಸೇರಿದ ವಿಷಯಗಳ ಸಂಖ್ಯೆ ಅಸಮರ್ಪಕವಾಯಿತೆಂದು ತೋರುತ್ತದೆ.

ನಮ್ಮಲ್ಲಿ ಜನತೆ–ಸರಕಾರಗಳ, ಸರಕಾರ–ಪಕ್ಷಗಳ, ಪಕ್ಷ–ಜನತೆಗಳ ನಡುವಣ ಸಂಬಂಧವು ಸಾಕಷ್ಟು ಆರೋಗ್ಯಕರವಾಗಿಲ್ಲ. ಇದಕ್ಕೆ ಪ್ರಜಾಪ್ರಭುತ್ವ ನಮಗೆ ಹೊಸದಾದುದೇ ಕಾರಣ ಎಂದು ಕೆಲವರೆನ್ನುತ್ತಾರೆ. ಇದೊಂದು ಪಾಕ್ಷಿಕ ಸತ್ಯ. ಇನ್ನೊಂದು ಪಕ್ಷದ ಮಾತೆಂದರೆ ಬ್ರಿಟಿಷ್ ಆಳ್ವಿಕೆಯಲ್ಲಿ ಜನರಿಗಾದ ಪರಂಪರಾವಿಚ್ಛೇದ. ನಮ್ಮ ಮುಖಂಡತ್ವದ ಸಾಂಪ್ರದಾಯಿಕ ಉತ್ಪತ್ತಿಯ ಆವರಣ ಹೋಗಿದೆ. ಹೊಸ ಆವರಣವನ್ನು ನಿರ್ಮಿಸಿಕೊಳ್ಳಲು ತಕ್ಕ ಪ್ರಯತ್ನವನ್ನು ಚೆನ್ನಾಗಿ ಮಾಡಲಿಲ್ಲ. ಅದರಿಂದ ತಿಕೀಟಿಗಾಗಿ ಜೋತಾಡುವ ಹುರಿಯಾಳುಗಳ ಆತ್ಮವಿಶ್ವಾಸರಹಿತತೆ ಚುನಾವಣೆಯ ಅನೇಕ ಕ್ಷೇತ್ರಗಳಲ್ಲಿ ಕಂಡುಬಂದಿದೆ. ರಾಷ್ಟ್ರೀಯ ಸಮಾಜನಿರ್ಮಾಣದ ಬಾಯಿಮಾತು ಕಾರ್ಯತಃ ಹೆಚ್ಚು ಹೆಚ್ಚು ವಿರೋಧವನ್ನು ಕಾಣಲಾರಂಭಿಸಿದೆ. ಯಾವ ಪಕ್ಷವು ಚೆನ್ನಾಗಿ ಸಂಘಟಿತವಾಗಿದೆ ಎಂಬುದು ಕಾರ್ಯತಃ ಕಂಡುಬಾರದಂತಾಗಿದೆ. ಅಂತಃಪಕ್ಷೀಯ ಹಾಗೂ ಪಕ್ಷಾಂತರಿಕ ಕಲಹಗಳು ಆಗ ಈಗ ಹುಡುಗಾಟದ ಮಟ್ಟದಲ್ಲಿ ನಡೆದದ್ದು ಉಂಟು. ನಮ್ಮ ದೇಶವು ವಾರ್ಷಿಕ ಆಯಾತಕ್ಕಾಗಿ ತೆರುವ ಹಣದ ಮೊತ್ತವು ನಿರ್ಯಾತದ ಗಳಿಸಿದ ಹಣದ ಮೊತ್ತಕ್ಕಿಂತ ಯಾವಾಗಲೂ ಬಹಳ ಕಡಿಮೆಯಾಗಿರುವುದು ನಮ್ಮ ವಿವಿಧ ವಿಷಮ ಪರಿಸ್ಥಿತಿಗಳಿಗೆ ಪರಮ ಪ್ರಮಾಣ.

ಕಾಶ್ಮೀರ ನಾಗಪ್ರದೇಶಗಳ ರಾಜಕೀಯ ಅದೃಢ ಸ್ಥಿತಿಯೂ ಅದೇ ಪ್ರಕಾರ ನಮ್ಮ ರಾಜ್ಯಭಾರ ನಿರ್ವಾಹದ ದೊಡ್ಡ ಕಲಂಕವಾಗಿ ನಿಂತಿತ್ತು; ಕಾಶ್ಮೀರ ಈಗಲೂ "ಷೇಕ್" ಆಗಿದೆ.

ಉಪವಾಸ, ಸತ್ಯಾಗ್ರಹ, ಪ್ರಾಯೋಪವೇಶ, ಮುಷ್ಕರಗಳ ದುರುಪಯೋಗಕ್ಕೆ ಜನತೆ ಸರಕಾರಗಳೆರಡೂ ಎಷ್ಟೋ ಕಡೆ ಕಾರಣಗಳಾದದ್ದುಂಟು. ಪರಸ್ಪರ ದೂರುವುದೊಂದನ್ನು ಬಿಟ್ಟರೆ ಸ್ವದೋಷವನ್ನು ತಿಳಿದುಕೊಂಡು ತಿದ್ದಿಕೊಳ್ಳುವ ಬುದ್ಧಿಯು ಹುಟ್ಟದಂಥ ಆವರಣವನ್ನು ನಮ್ಮ ಪ್ರಭುತ್ವವು ನಿರ್ಮಿಸಿಕೊಟ್ಟಿದೆ. ಬ್ರಿಟಿಷ್ ಕಾಲದ ಆಡಳಿತವನ್ನು ಪೂರ್ತಿ ಬಿಡಲಿಲ್ಲ, ಗಾಂಧಿ ಮಾರ್ಗವನ್ನು ಪೂರ್ತಿ ಹಿಡಿಯಲಿಲ್ಲ, ನೆಹರುಗಳು ತಮ್ಮ ಉಪದೇಶದಂತೆ ನಡೆಯಲು ಯತ್ನವನ್ನೇ ಮಾಡಲಿಲ್ಲ; ಕಾಮರಾಜರ ಸಲಹೆಗಳೆಲ್ಲವನ್ನೂ ಪಾಲಿಸಿ ನೋಡಲೂ ಇಲ್ಲ. ಸರಕಾರಿ ಅಧಿಕಾರದ ವಿಕೇಂದ್ರೀಕರಣವಾಗುವುದರ ಬದಲು ರಾಜಕೀಯ ಶಕ್ತಿಯ ವಿಕೇಂದ್ರೀಕರಣವಾಗಲು ಅವಕಾಶ ಕೊಟ್ಟದ್ದೇ ಈ (Equality of lthe unequal talents) ಹಿಟ್ಟು–ಬೂದಿಗಳ ಒಟ್ಟಿನ ಅಳತೆಗೆ ಕಾರಣವಾಗಿದೆ. ನಮ್ಮ ಪ್ರಜಾಸತ್ತೆಯ ಈ (Half and half song) ಅರ್ಧಾರ್ಧ ಗೀತವು ಪೂರ್ಣತೆಯನ್ನು ಮುಟ್ಟಲು ಇಡೀ ದೇಶದಲ್ಲಿ ಏಕಕಾಲದಲ್ಲಿ ಸುಧಾರಣೆಗಳನ್ನು ತರಬೇಕಲ್ಲದೆ, (Piece-meal) ಪಾಕ್ಷಿಕವಾಗಿ ತರುವುದು ಫಲಕಾರಿಯಾಗದು ಎಂಬುದಕ್ಕೆ ಪಾನಪ್ರತಿಬಂಧ ಪ್ರಯತ್ನವೊಂದು ಮಹಾ ಪ್ರಮಾಣವೆನ್ನಬಹುದು.

ಅನೇಕ ಸಂದರ್ಭಗಳಲ್ಲಿ ಸಮಿತಿ, ವರದಿ, ಹೇಳಿಕೆಗಳ ಮೇಲೆಯೇ ಸುಧಾರಣೆಯ ಸತ್ಯತೆ ನಿಲ್ಲುವಂತಾದದ್ದು ಯಾವ ಪ್ರಭುತ್ವಕ್ಕೂ ಶೋಭಿಸುವಂಥಾದ್ದಲ್ಲ. ಧ್ಯೇಯದ ಕಾರ್ಯಾಂಗವಿವರಗಳ ಪೂರ್ಣಕಲ್ಪನೆಯಿಲ್ಲದೆ ತಂದ ಸುಧಾರಣೆಯು ವಿರುದ್ಧ ಪರಿಣಾಮಗಳನ್ನು ಉಂಟುಮಾಡಿದ್ದಕ್ಕೆ "ಟೆನೆನ್ಸಿ"ಯೊಂದು ಉದಾಹರಣೆ; ಭೂಸುಧಾರಣೆ ಎರಡನೆಯ ಉದಾಹರಣೆ. ಆಹಾರಾಭಾವ, ಅತಿದರಗಳು ಬೆಳೆಯುತ್ತಿರುವುದು ಪ್ರಜಾಪ್ರಭುತ್ವಕ್ಕೆ ಸಹಜವೆಂದು ನಿತ್ಯವೂ ಘೋಷಿಸುತ್ತ ಹೋಗುವುದು ಜನವಂಚನೆ ಎಂಬುದನ್ನು ನಮ್ಮ ಹೊಣೆಗಾರ ನಾಯಕರು ಬಲ್ಲರು; ಆದರೂ ಅವರಲ್ಲಿ ಹಲವರು ಅದನ್ನೇ ಪದೇ ಪದೇ ಹೇಳುತ್ತಿದ್ದಾರೆ.

ಇಂತಹ ಅವ್ಯವಸ್ಥೆಗಳು ಪ್ರಜಾಪ್ರಭುತ್ವದ ಯೋಗ್ಯತೆ, ಅಯೋಗ್ಯತೆಗಳನ್ನು ನಿರ್ಣಯಿಸಲಾರವು. ಅವು ನಿರ್ಣಯಿಸುವುದು ಮುಖಂಡರ ಯೋಗ್ಯತೆ, ಅಯೋಗ್ಯತೆಗಳನ್ನು ಮಾತ್ರ. ಮುಖಂಡರನ್ನು ಆಯುವ ಜನಯೋಗ್ಯತೆಯನ್ನು ಅವು ನಿಷ್ಕರಿಸಿ ಹೇಳಲಾರವು. ಪ್ರಜಾಪ್ರಭುತ್ವವನ್ನು ಮೊಟ್ಟಮೊದಲು ಜಾರಿಗೆ ತಂದ ದೇಶೀಯ ಮುಖಂಡರ ಮುಖಂಡತ್ವವು ಜನತೆಯ ರಾಜಕೀಯ ಮತಾಧಿಕಾರದ ಪ್ರಬುದ್ಧ ಪ್ರಯೋಗವನ್ನು ಅವಲಂಬಿಸಿದ್ದಿಲ್ಲ ಎಂಬುದು ನೆನಪಿನಲ್ಲಿ ಇಟ್ಟುಕೊಳ್ಳಬೇಕಾದ ಸಂಗತಿ. ಆ ಮುಖಂಡರು ಸತ್ಯಾಗ್ರಹಿಗಳಾಗಿ ದುಡಿದಿದ್ದರಲ್ಲದೆ, ರಾಜಕೀಯ ಪ್ರಶಾಸನದ ಧುರೀಣರಾಗಿದ್ದಿಲ್ಲ. ಅಂಥವರು ಪ್ರಶಾಸನ ಶಾಸ್ತ್ರವನ್ನರಿಯದೆ ಆಡಳಿತವನ್ನು ನಡೆಸುತ್ತ ಬಂದುದರಿಂದ ಉಂಟಾದ ಮುಖಂಡತ್ವದ ನಿರ್ಮಾಪನ, ನೌಕರರ ನಿಯಮನ ಮತ್ತು ಮಾರ್ಗದರ್ಶನ ಹಾಗೂ ಇವುಗಳ

ದೆಸೆಯಿಂದಾದ ವಿಪರಿಣಾಮಗಳು ಕೇವಲ ಐತಿಹಾಸಿಕ ದುರ್ದೈವ ಪರಂಪರೆಯಷ್ಟೇ ಆಗಿವೆ.

ಪ್ರಜಾಪ್ರಭುತ್ವದ ಕಲ್ಪನೆ ನಮ್ಮ ಮುಖಂಡರಲ್ಲಿ ಗಣ್ಯರಾದವರಿಗೆ ಚೆನ್ನಾಗಿ ಇದೆ. ಆದರೆ ಅದರ ಕಾರ್ಯಕ್ಷೇತ್ರದ ಏರುತಗ್ಗುಗಳ ಅರಿವು ಅವರಲ್ಲಿ ಬಹಳ ಜನರಿಗಿಲ್ಲ. ಅಗಣ್ಯರನ್ನು ಹೆಸರಿಸುವುದು ಅನಗತ್ಯ, ಅವರು ಯೇನಕೇನ ಪ್ರಕಾರೇಣ ಗಣ್ಯತೆಯನ್ನು ಕಸಿದುಕೊಂಡು, "ಬೆಂದ ಮನೆಗೆ ಹಿರಿದದ್ದೇ ಲಾಭ" ಎಂಬ ತತ್ವವನ್ನು ನಂಬಿದವರು. ಪ್ರಜಾಸತ್ತೆಯಲ್ಲಿ ಶ್ರದ್ಧೆಯುಳ್ಳ ರಾಜಕೀಯ ಪಕ್ಷವು ಪಕ್ಷಶುದ್ಧೀಕರಣವನ್ನು ಮೊದಲು ಕೈಕೊಳ್ಳಬೇಕು. ಹಿರಿಯ ಸಾಹಿತಿಗಳಾದ ಶ್ರೀಮಾನ್ ತಾತಾಚಾರ್ಯ ಶರ್ಮರ ತತ್ವನಿಷ್ಠ, ನ್ಯಾಯನಿಷ್ಠುರತೆಗಳು ನಮ್ಮ ರಾಜಕೀಯ ಮುಖಂಡರಲ್ಲಿ ಬೆಳೆಯಬೇಕು. ಹಾಗೆ ಬೆಳೆಯಲು ಈ ತಲೆಮಾರು ಸಾಲದೆಂದು ತೋರುತ್ತದೆ!

ಆಚಾರಶುದ್ಧಿಯಿಲ್ಲದ ಯಾರೂ ಈ ದೇಶದಲ್ಲಿ ಸುಧಾರಣೆಯನ್ನು ಬೋಧಿಸಿ ಜಾರಿಗೆ ತರಲಾರರು. ಗಾಂಧಿಯವರಲ್ಲಿ ಇದ್ದ ತತ್ವನಿಷ್ಠೆ ಅಸಾಧ್ಯವೆನ್ನಿಸಿದರೆ, ಸಫಲ ಮುಖಂಡತ್ವವಿಲ್ಲಿ ಎಂದೂ ಬೆಳೆದು ನಿಲ್ಲದು. ತಿಲಕ, ಗಾಂಧಿ, ಗೋಖಲೆ, ಸುಭಾಸರ ನಾಮಸಂಕೀರ್ತನವೊಂದೇ ಮೇಲಿಂದ ಮೇಲೆ ನಡೆದರೆ ಯಾವ ಫಲವೂ ಸಿಗದು. ಜಯಂತಿ, ಪುಣ್ಯತಿಥಿಗಳನ್ನು ಆಗ ಈಗ ಸಂಘಟಿತವಾಗಿ ಆಚರಿಸಿಬಿಟ್ಟರೆ ಏನೂ ಲಭಿಸದು. ಬಾಲಕರಿಗೆ ನಿತ್ಯವೂ ನೈತಿಕ ವರ್ತನೆಯನ್ನು ಕಲಿಸಬೇಕು. ಅನೈತಿಕ ಪ್ರವೃತ್ತಿಗೆ ಪ್ರೇರಕಗಳಾದ ಶ್ರವಣದರ್ಶನ–ಪ್ರದರ್ಶನಗಳನ್ನು ಕೂಡಲೇ ನಿಲ್ಲಿಸಬೇಕು. ಪಾರನೈತಿಕತೆಯ ಅಸಾಂದರ್ಭಿಕ ಸಮರ್ಥನೆಯು ನ್ಯಾಯಬಾಹಿರವಾಗಬೇಕು. ಆಗ ಮುಂದಿನ ತಲೆಮಾರಾದರೂ ಸಮರ್ಥ ಧುರೀಣರನ್ನು ಪಡೆದು ನಮ್ಮ ಪ್ರಜಾಪ್ರಭುತ್ವವನ್ನು ಯಶಸ್ವಿಗೊಳಿಸೀತು.

**"ಕಾಲೋ ವಾ ಕಾರಣಂ ರಾಜ್ಞೋ**
**ರಾಜಾ ವಾ ಕಾಲ ಕಾರಣಂ**
. . . . . . . . . . . . . .
**ರಾಜಾ ಕಾಲಸ್ಯ ಕಾರಣಂ"**

**–ಮ.ಭ.**



# ಹರಕೆ

ಶಿರಸಿಯ ಶ್ರೀ ಬಿ.ಎಚ್. ಶ್ರೀಧರ. ಎಂ.ಎ. ಇವರು ಪ್ರೌಢ ಪಂಡಿತರು. ಸಂಸ್ಕೃತಕ್ಕೂ–ಕನ್ನಡಕ್ಕೂ ಬಾಂಧವ್ಯ ಇದೆ. ದಾಯಾದಿತನ ಇಲ್ಲ ಎಂದು ಪ್ರತಿಪಾದಿಸಿದ್ದಾರೆ ಈ ಪ್ರಬಂಧದಲ್ಲಿ, ಸಾಧಾರವಾಗಿ, ತಕ್ಕಮಟ್ಟಿನ ಸಾಕಲ್ಯದಿಂದ. ಸಾಕಲ್ಯವು ಶಕಲ–ಸಕಲವಾಗುವುದಿಲ್ಲ. ಅದು ಎಕ್ಕ–ಸಕ್ಕ ಅಲ್ಲ. ಅಸ್ತವ್ಯಸ್ತವಾಗದು. 'ಹರಿ–ಹರ' ಏನೇ ಅಂದಿರಲಿ, ವ್ಯಾಸರಿಗೆ ಹರಿ–ಹರ ಸಾಮರಸ್ಯ ಕಂಡಿದೆ. ಅದು ಭಾಗವತ ಭಕ್ತಿಯೋಗ. 'ವಸಿಷ್ಠ–ಪರಾಶರ–ಶಕ್ತಿ–ವ್ಯಾಸ–ಶುಕ' ಈ ಪಂಚಕದ ಮೂಲಕ್ಕೆ 'ನಾರಾಯಣ ವಿಧಿ–(ಬ್ರಹ್ಮ)' ಇದ್ದಾರೆ. ಇದು ಶ್ರೀರಾಮ ಬ್ರಹ್ಮಚೈತನ್ಯ' ದೃಷ್ಟಿ. 'ನಾಕು ತಂತಿ'ಯ ಕವನಗಳಲ್ಲಿ ಈ ತುರೀಯಾತೀತ ದರ್ಶನ ಇದೆ. 'ದೇವಾಸುರರ ದಾಯಾದಿತನ ಬೇರೆ. ತಂದೆ–ತಾಯಿಯರ ಕಂದನ– ಆನಂದ ಗ್ರಂಥಿಯ' ಮರ್ಮ ಬೇರೆ. ಮೂರನ್ನು ಒಂದಾಗಿ ಕಾಣುವದು 'ಸಂಯಮ'. ಇದು ತುರೀಯಾತೀತದ 'ಅಂಗುಷ್ಠ' ಮಾತ್ರವಾಗಿದೆ.

ಸಂಸ್ಕೃತದಲ್ಲಿ ಆಗಮ ಮಾರ್ಗವಿದೆ. ಶೈವಾಗಮಗಳು ಸಂಸ್ಕೃತದಲ್ಲಿವೆ; ದ್ರಾವಿಡದಲ್ಲಿಲ್ಲ. ದ್ರಾವಿಡವೂ ದೇಶ್ಯವಿರಲಿಲ್ಲ. ಹೊರಗಿನಿಂದ ಬಂದದ್ದೇ. ಚೋಳ–ಚೇರ–ಪಾಂಡ್ಯ ತ್ರಿಕೂಟವು–ವರಾಹ ಧ್ವಜದ ಪ್ರತಿಪಕ್ಷಿ ಎನಿಸಿ ಮತ್ತೆ ಮತ್ತೆ ಸೋತಿದೆ. ನೈಗಮಿಕವು ಆಗಮಿಕದಿಂದ ಗ್ರಸ್ತವಾಗುತ್ತದೆ–ಅಸ್ತವಾಗುವುದಿಲ್ಲ. ಇದು ಅತ್ರಿಯ ತುರೀಯ ದರ್ಶನ. ಇದರಿಂದಾಗಿ ಋಭು ದೇವತೆಗಳು ದೇವಪಂಕ್ತಿಗೆ ಸೇರುತ್ತಾರೆ. ವಿಶ್ವಕರ್ಮ–ತ್ರಿಶಿರ–ಕುರುಕ್ಷೇತ್ರವಾಗುತ್ತಾನೆ.

ವಿಶ್ವರೂಪನು–೧೯ ಮುಖದವನು. ಸೃಷ್ಟಿ–ಸೃಷ್ಟಾರರ ಏಕಕೂಟ ಇಲ್ಲಿದೆ. 'ಈಶಾವ್ಯಾಸಂ ಇದಂ ಸರ್ವಂ' 'ವಾಸುದೇವಃ ಸರ್ವಂ' ಧರಣಿಯು ದೇವಕಿ ವಸುದೇವರನ್ನು ಗರ್ಭೀಕರಿಸಿದ್ದಾಳೆ. 'ಧಾರಣೆಯಿಂದ ಧರ್ಮ.'

ಸಂಸ್ಕೃತ–ಪ್ರಾಕೃತ–ಅಪಭ್ರಂಶ–ಪೈಶಾಚಿ ಈ ನಾಲ್ಕರಿಂದ ಛಪ್ಪನ್ನ ದೇಶಭಾಷೆಗಳಾಗಿವೆ. ಪಾಶ್ಚಿಮಾತ್ಯರಿಂದ ಹೇರಲ್ಪಡುತ್ತಿರುವ 'Cultural Anthropology' ಒಂದು ವಿವಾದ್ಯಮಾನ ಕ್ರೀಡಾ ಸಂಭ್ರಮ. ಇದು ದಾಯಾದಿತನ. ಬಾಂಧವ್ಯಕ್ಕೆ ಗಂಡಾಂತರ ಇಲ್ಲಿದೆ. "Though the United States has spent billions of dollars on foreign aid programs, It has captured neither the affection nor the esteem of the rest of the world. Much of the foreigner's animosity has been generated by the way Americans behave" ಎಂದಿದ್ದಾನೆ–ಎಡ್ವರ್ಡ. ಟಿ.ಹಾಲ್.,

'ಸಂಸ್ಕೃತಿ' ಶಬ್ದವು ಕೋಶಕ್ಕೆ ಹೊರತಾದದ್ದು, ಇದು 'ಅಸಂಭವ': 'ಸಂಭೂತ್ಯಾ ಅಮೃತಮ್ ಅಶ್ನುತೇ' ಈ ಸಂಭೂತಿಗೆ. ಪ್ರತ್ಯಭಿಜ್ಞಾನದ ನೆಲೆ ಅದು. ಅದು ೨೬ ಉತ್ಕೃತಿಯ ಗೋಪುರ–ಶಿಖರ.

ಆಗಮಿಕ ನೈಗಮಿಕ ನೆಲೆಯನ್ನು ಪಾಶ್ಚಿಮಾತ್ಯರು, ಮುಖ್ಯವಾಗಿ ಆಂಗ್ಲಭಾಷಾ ಪಂಚಾಯತನ ವಾದಿಗಳು ತಿಳಿದುಕೊಳ್ಳಬೇಕು. ಪಂಚಾಗ್ನಿ ಪ್ರತಿಷ್ಠೆಯ ಪರಮಾರ್ಥವೇ ಭಕ್ತಿ ಪ್ರಪಂಚ. ಹದಿನೆಂಟರ ಪಂಚಾಯತಿಯು ಸ್ವಾರ್ಥಿಗಳ ಕೋಲಾಹಲ; ಮೂರುದಿನದ ಜಾತ್ರೆ ಮಾತ್ರ. ಜೀವನ ಸಾರ್ಥಕ್ಯದ ಯಾತ್ರೆಗೆ ಭಗವಂತನೇ ತಳಹದಿ. ಅವನೇ ಗೋಪುರ, ಕನ್ನಡ ನಾಡಿನ ಆಚಾರ್ಯ ಪುರುಷರು ಈ ಸಂಸ್ಕೃತಿಗೆ 'ಮೂಲಸ್ತಂಭ'ವಾಗಿದ್ದಾರೆ. 'ವರಾಹ'ದ ಮೂಲಾನ್ವೇಷಣೆಯಂತೆ, 'ಹಂಸ'ದ ಊರ್ಧ್ವಾನ್ವೇಷಣೆ. ಮೂಲಸ್ತಂಭದ ಆಚೆ–ಈಚೆ ಮಾತ್ರ. ಸಮೀಚೀನತ್ವದ ಹಿಮಾಲಯವು ಸೀಮಾರೇಖೆ: ಅದು ಭದ್ರ: ಸುಭದ್ರ. 'ಸಂಸ್ಕೃತ–ಕರ್ಣಾಟ'ಗಳ ಹೃದಯ ಸಂಭವವು ಸಂಜ್ಞಾನಸಿದ್ಧ. ಸಿದ್ಧವು ಅನಾದಿ ಅನಂತ. ಅದನ್ನು ದೇವಾಸುರಕ್ಕೆ ಎಳೆದರೆ, ಮಾನವನು ವಿತಂಡವಾದಕ್ಕೆ ಈಡಾಗುತ್ತಾನೆ. ಇತ್ತಂಡ ಕ್ಷೇಮವಲ್ಲ. ಮುಕ್ಕೋಟಿ ಯೋಗಸಿದ್ಧ. ಕನ್ನಡದ ಮೂಲಕ್ಕಿರುವ ಸಂಸ್ಕೃತದ ಭದ್ರತೆ ಇಲ್ಲಿದೆ. ಇಂಗ್ಲೀಷ ಭಾಷೆ ಅವಿವೇಕಕ್ಕೆ ಎಳೆದು ವಿಚಾರ ವಿಕೃತಿಗಳಿಗೆ ಮಹತ್ತ್ವ ಕೊಟ್ಟಾಗ, ಆಗಮನಿಗಮೈಕ್ಯದ ನಿವಿತ್ತು ಧೀರರ ನಿಲುವಾಗುತ್ತದೆ. ವೀರರ ಬೊಬ್ಬಾಟವಾಗುವುದಿಲ್ಲ. ಭಕ್ತಿ ಪ್ರೀತಿ ಇದ್ದಲ್ಲಿ ಇದೆ–ಶಾಂತಿ. ಅದು ಪ್ರಕಾಶವಿದೆ. ಅದು ಪ್ರಾಣಭೂತ ಕನ್ನಡ!

**"ಅತ್ತಿಗೆ ಹೇಳಿಸಂಗೀತಂ ತಂಗೀತಂ ಮನಸಾಹಸಂ**

**ಭಾವಕೇಳೀ ಮನೋಲ್ಲಾಸಂ ನಾದಿನೀ ಬಿಸಿನೀರತಾ"**

ಇದು ಕನ್ನಡ–ಸಂಸ್ಕೃತ ಹೃದಯ. ಇಲ್ಲಿ ಪದವಿವೇಕ ಬೇಕು. ಹೊಟ್ಟೆಯುರಿ ಹೊತ್ತಿಸಿದರೆ ಯಾವ ಲಾಭ?

**ಭದ್ರಂ–ಶುಭಂ–ಮಂಗಲಂ**

**'ಶ್ರೀಮಾತಾ' ಸಾಧನಕೇರಿ**

ಧಾರವಾಡ–೫೮೦೦೦೮

೧೧.೧.೧೯೮೧ **ದ.ರಾ.ಬೇಂದ್ರೆ**

---

ಆಧಾರ: ಕರ್ಣಾಟಕ ಕವಿಚರಿತೆ ೩ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ ೧೬೬–೧೬೭, ಮುಮ್ಮಡಿ ಕೃಷ್ಣರಾಜಸ್ತುತಿಯಲ್ಲಿ ಸಂಸ್ಕೃತ–ಕನ್ನಡ ಶೋಭೆ ಇದೆ.

# ನೀನಿಲ್ಲದೆಲ್ಲಿಯದು ಬದುಕು?

ಪೃಥಿವಿಯಾ ಪ್ರಥಮಪ್ರಭಾತದಲಿ
ಇತಿಹಾಸ ದೃಷ್ಟಿಗಸ್ಪಷ್ಟ ಅಜ್ಞಾತ ಪ್ರಾಚೀನದಲಿ
ಚಿರಧವಲ ಹಿಮಶೈಲ ಪೃಥುಲೋರುಪ್ರೇಂಖದಲಿ
ನವಜಾತ ಶಿಶುವಾಗಿ ನಲಿದ ಮಂಗಲಮಯೀ
ಆರ್ಯಮಾತೆಯ ಮೊದಲ ತೊದಲ ನಾಗರಿಕತೆಯ
ಸಾಮಗಾನದ ವಾಣಿಯಿಂದ ಮಾಡಿದ ಮೂರ್ತಿ
ನೀನೆಲೌ ಸಂಸ್ಕೃತದ ವಾಗ್ದೇವಿ!
ಆರ್ಯರಾಗಿಹ ನಾವು ನಿನ್ನ
ಮೊಲೆವಾಲ ಸವಿಯಿಲ್ಲದೆಯೆ ಬದುಕುವೆವೆ?
ನೀನಿಲ್ಲದೆಲ್ಲಿಯದು ಭರತಖಂಡದ ಬದುಕು
ಸಂಪತ್ತು ಸಂಸ್ಕೃತಿ?

–ಕುವೆಂಪು

ಭಾರತವು ಸಂಸ್ಕೃತದಂಥ ಅದ್ಭುತ ಭಾಷೆಯನ್ನು ಜಗತ್ತಿಗೆ ನೀಡಿದ ಮಹಾನ್ ದೇಶ. ಆದರೆ ಈ ದೇಶದ ನೆಲೆದಲ್ಲೇ ಆ ಭಾಷೆಗೆ ಆಗುತ್ತಿರುವ ಅನ್ಯಾಯವನ್ನು ನಾವು ಅಮೇರಿಕನ್ನರು ಗಮನಿಸುತ್ತಿದ್ದೇವೆ. ಮುಂದೊಂದು ದಿನ ಯಾರಾದರೂ ಈ ದೇಶದಲ್ಲಿ ಸಂಸ್ಕೃತ ಕಲಿಯಬೇಕೆಂದು ಬಯಸಿದರೂ, ಕಲಿಯಲು ಅವಕಾಶವಿಲ್ಲದಂಥ ವಾತಾವರಣ ಇಲ್ಲಿ ನಿರ್ಮಾಣವಾಗಬಹುದು. ಆದರೆ ಹಾಗಾದರೆ ಅದಕ್ಕಾಗಿ ನೀವು ನಿರಾಶರಾಗಬೇಕಾಗಿಲ್ಲ. ನಿಮಗೆ ಸಂಸ್ಕೃತ ಕಲಿಯಬೇಕೆಂದು ಆಸೆಯಿದ್ದರೆ ಆಗ ನಮ್ಮ ದೇಶಕ್ಕೆ ಬನ್ನಿ. ನಾವು ನಿಮಗೆ ಕಲಿಸಿ ಕೊಡುತ್ತೇವೆ. ಅಷ್ಟು ಕಾಲ ನಾವು ಸಂಸ್ಕೃತವನ್ನು ಜೋಪಾನವಾಗಿ ಸಂರಕ್ಷಿಸಿ ಬೆಳೆಸುತ್ತಿರುತ್ತೇವೆ. **–ಪ್ರೊ. ಎಡ್ವಿನ್ ಜೆರೊ, ಚಿಕಾಗೊ**

ಸಂಸ್ಕೃತವು ನಮ್ಮ ರಕ್ತದಲ್ಲಿ ಪ್ರವಹಿಸುತ್ತದೆ. ಸಂಸ್ಕೃತ ಭಾಷೆ ಮಾತ್ರವೇ ದೇಶದ ಏಕತೆಯನ್ನು ಸ್ಥಾಪಿಸಲು ಸಾಧ್ಯ **– ಸಿ.ವಿ.ರಾಮನ್**

ನಾನು ಸಂಸ್ಕೃತವನ್ನು ಓದಿದ್ದರಿಂದ ನನ್ನ ಕನ್ನಡ ಹೆಚ್ಚು ಸರಳವಾಗಿದೆ; ಸುಂದರವಾಗಿದೆ; ಸಮೃದ್ಧವಾಗಿದೆ. **–ಖಾದ್ರಿ ಶಾಮಣ್ಣ**

ಸಂಸ್ಕೃತಭಾಷೆಯ ಜ್ಞಾನವಿಲ್ಲದೇ ಕನ್ನಡದಲ್ಲಿ ಅಗತ್ಯವಾಗಿರುವ ವೈಜ್ಞಾನಿಕ ಸಾಹಿತ್ಯಸೃಷ್ಟಿ ಹೇಗೆ ಸಾಧ್ಯ? **–ಎಚ್. ವಿ. ಶ್ರೀರಂಗರಾಜು.**

ಭಾರತವರ್ಷದ ಸಂಸ್ಕೃತಿಗೆ ಸಂಸ್ಕೃತವು ತಾಯಿಬೇರು. ಇತರ ಭಾಷೆಗಳಿಗೆ ಹೇಗೋ ಹಾಗೆಯೇ ಕನ್ನಡದ ಬೆಳವಣಿಗೆಗೆ ಸಂಸ್ಕೃತವು ಕೇವಲ ಅವಶ್ಯಕ.

**–ಮಾಸ್ತಿ ವೆಂಕಟೇಶ ಅಯ್ಯಂಗಾರ**

ಕನ್ನಡಿಗರಿಗೆ ಸಂಸ್ಕೃತವು ಅತಿಕಷ್ಟವಲ್ಲ. ಸಂಸ್ಕೃತವನ್ನು ಪಾಠಶಾಲೆಗಳ ಮೊದಮೊದಲನೆಯ ತರಗತಿಗಳಲ್ಲಿ ಅದೊಂದು ಪ್ರತ್ಯೇಕ ವಿಷಯವೆಂದು ಇಟ್ಟುಕೊಳ್ಳದೆ ಅದನ್ನು ಕನ್ನಡಪಾಠದ ಒಂದು ಅಂತರ್ಭಾಗವೆಂದೇ ಎಣಿಸಬೇಕು. **–ಡಿ.ವಿ.ಜಿ**

ಸಂಸ್ಕೃತ ವ್ಯಾಸಂಗವು ಕಡಿಮೆಯಾಗುವುದು ಎಳೆಯ ಮಗುವಿಗೆ ತಾಯಿಯ ಹಾಲು ಕಡಿಮೆಯಾದ ಹಾಗೆ. **–ಎ.ಆರ್.ಕೃಷ್ಣಶಾಸ್ತ್ರಿ**

ಸಂಸ್ಕೃತ ಮೃತಭಾಷೆಯಲ್ಲ, ಅದು ಅಮರ **–ಕುವೆಂಪು**

ಮುಂದಿನ ಪೀಳಿಗೆಯಲ್ಲಿ ಸಂಸ್ಕೃತ ಎಲ್ಲರಿಗೂ ಬೇಕು. ಎಲ್ಲರೂ ಓದಬೇಕು.

**–ದೇವುಡು**

ತಪಸ್ವಿನಿಯಾದ ಭಾರತಮಾತೆಯ ಪ್ರಭಾವಲಯದಂತಿದ್ದು ಕನ್ನಡ ಸಾಹಿತ್ಯಕ್ಕೂ ಕಾಂತಿಯನ್ನು ತುಂಬಿರುವ ಸಂಸ್ಕೃತಸಾಹಿತ್ಯವು ನಮ್ಮದೂ ಹೌದೆಂದು ಸೌಜನ್ಯ ತೋರೋಣ.

**–ಸಿ.ಕೆ.ವೆಂಕಟರಾಮಯ್ಯ**

ಸಂಸ್ಕೃತದಿಂದ ಕನ್ನಡದ ಬೆಳವಣಿಗೆಯು ಕುಂಠಿತವಾಗಿಲ್ಲ. ಸಂಸ್ಕೃತದ ಸಹಕಾರವಿಲ್ಲದೆ ಕನ್ನಡದಲ್ಲಿ ಪ್ರಾವೀಣ್ಯವನ್ನು ಪಡೆಯುವುದು ಸುಲಭವಲ್ಲ. **–ಎಂ.ವಿ. ಸೀತಾರಾಮಯ್ಯ**

ಸಂಸ್ಕೃತವು ಭಾರತವನ್ನೇ ಒಂದಾಗಿ ಬೆಸೆದಿರುವ ಭಾಷೆ: ಭಾರತೀಯ ಸಂಸ್ಕೃತಿಯ ಸಂವಾಹಕ; ಭಾರತೀಯ ಜ್ಞಾನ–ವಿಜ್ಞಾನಗಳ ಗಣಿ: ಭಾರತೀಯ ಭಾಷೆಗಳಿಗೆ ಅಕ್ಷಯಪಾತ್ರೆ.

**–ಸಿದ್ದಯ್ಯ ಪುರಾಣಿಕ**

ಮಾತೃಭಾಷೆಯ ಜೊತೆಯಲ್ಲಿಯೇ ಸಂಸ್ಕೃತ ಭಾಷಾ ಶಿಕ್ಷಣವು ಶಿಕ್ಷಣದ ಅವಿಭಾಜ್ಯ ಅಂಗವಾಗಬೇಕು **–ಎಂ.ಸಿ.ಛಗಲಾ**

ಸಂಸ್ಕೃತವು ಪ್ರತಿಯೊಬ್ಬ ಭಾರತೀಯನ ಜೀವನದ ಅಂಗವೆನಿಸಬೇಕು
**–ಕೆ.ಎಂ.ಪಣಿಕ್ಕರ**

# ಅರಿಕೆ

ಪ್ರಸ್ತುತ ಗ್ರಂಥವು ಒಂದು ಚಿಕ್ಕದಾದ ಪ್ರಕರಣ ಗ್ರಂಥ: ಸಂದರ್ಭಕ್ಕಾಗಿ ಸಂಕ್ಷಿಪ್ತವಾಗಿ ಬರೆದದ್ದು, ಈ ಗ್ರಂಥಕರ್ತನ "ಜ್ಞಾನಸೂತ್ರ", "ಕಾವ್ಯಸೂತ್ರ" ಮತ್ತು ರಾಷ್ಟ್ರಸೂತ್ರ"ಗಳೂ ಇಂಥವೇ* ಆಗಿವೆ. ಅಂದರೆ ಈಗ ಇರುವ ಪುಟ ಸಂಖ್ಯೆಯನ್ನು ೧೦ ರಿಂದಲೋ ೧೫ ರಿಂದಲೋ ಗುಣಿಸಿದರೆ ಗ್ರಂಥವು ಪ್ರತಿಪಾದಿಸುವ ವಸ್ತುವಿಗೆ ಸರಿಯಾದ ನ್ಯಾಯವನ್ನು ದೊರಕಿಸಿ ಕೊಟ್ಟಂತಾದೀತು. ಇದೊಂದು ಸಿಂಧುವನ್ನು ಬಿಂದುವಿನ ರೂಪದಲ್ಲಿ ಪ್ರಕಟಿಸಿದ ಹಾಗೆ–ಎಂಬುದು ತಾತ್ಪರ್ಯ.

ಕನ್ನಡವು ನನ್ನ ತಾಯ್ನುಡಿ. ಸಂಸ್ಕೃತವು ನನ್ನ ತಂದೆನುಡಿ. "ವಾಗರ್ಥಾವಿವಸಂಪೃಕ್ತೌ" ಆಗಿರುವುದು ಇಂದಿನ ಕನ್ನಡ: ಕನ್ನಡ ಸಾಹಿತ್ಯ ಪರಿಷತ್ತಿನ "ಕೌಸ್ತುಭ" ಹೀಗೇ ಇದೆ. ಬಾನುಲಿ, ಬೆಳ್ಳಿಹಬ್ಬಗಳೂ ಸರಿ: ಆಕಾಶವಾಣಿ, ರಜತಮಹೋತ್ಸವಗಳೂ ಸರಿ. ಏಕೆಂದರೆ, "ಹರ್ ಬಂಡರ್ ಗೀತ"ದಲ್ಲಿ ಡಾ. ದ.ರಾ.ಬೇಂದ್ರೆಯವರು–

**"ಕನ್ನಡವೂ ಭಾರತವೂ ಜಗವೆಲ್ಲವು ಒಂದೇ**

**ಒಂದೇ ಒಂದೇ ಒಂದು ಕರ್ಣಾಟಕ ಒಂದೇ"**

ಎಂದದ್ದು ಚಿರಸ್ಮರಣೀಯ. ಕರ್ಣಾಟಕವನ್ನು ಕರ್ನಾಟಕವೆಂದು ಬರೆಯುವುದು ಪಾಣಿನಿ ಹೇಳಿದ ವಿಶ್ವಸಾಮಾನ್ಯವಾದ ಸ್ಥಾನಪ್ರಯತ್ನ ವಿವೇಕವನ್ನು ಆಧರಿಸಿದ ಸ್ಥಾನಿವದಾದೇಶೋನಲ್ವಿಧೌ" (೧–೧–೫): "ಸ್ಥಾನೇಂತರತಮಃ" (೧–೧–೫೦) ಮತ್ತು "ಅಚಃ ಪರಸ್ಮಿನ್ ಪೂರ್ವ ವಿಧೌ" (೧–೧–೫೭) ಮುಂತಾದ ಸೂತ್ರಗಳ ಅಂತಃಸಾರಕ್ಕೆ ವಿರುದ್ಧ. ಕರ್ಣನನ್ನು ಕರ್ನನೆಂದೂ ಸ್ವರ್ಣವಲ್ಲಿಯನ್ನು ಸ್ವರ್ನವಲ್ಲಿ ಎಂದೂ ಬರೆಯುವುದು ಪ್ರಾಕೃತವೂ ಅಲ್ಲ. ತದ್ಭವವೂ ಅಲ್ಲ. ಅದು ಅಸಹಜವಾದುದರಿಂದ ಅಶಾಸ್ತ್ರೀಯ. "ರಷಾಭ್ಯಾಂನೋಣಃ ಸಮಾನ ಪದೇ" (೮–೪–೧) ಎಂಬ ಉತ್ಸರ್ಗವು ಭಾಷಾಶಾಸ್ತ್ರ ಸಹಜ. ಆದುದರಿಂದಲೇ "ಪ್ರಬುದ್ಧ ಕರ್ಣಾಟಕ"ವಿನ್ನೂ "ಪ್ರಬುದ್ಧ ಕರ್ನಾಟಕ"ವಾಗಿಲ್ಲ.

---

* ಜ್ಞಾನಸೂತ್ರವು ಶಿರಸಿಯ ವಿದ್ಯಾರಣ್ಯ ಪ್ರಕಾಶನದ ಪಾಶ್ಚಾತ್ಯ–ಪೌರಸ್ತ್ಯ ತತ್ವಶಾಸ್ತ್ರಗಳ ತುಲನಾತ್ಮಕ ಗ್ರಂಥ. ಕಾವ್ಯಸೂತ್ರವೂ ಅದೇ ಪ್ರಕಾಶನದ್ದು: ಅದು ಪಾಶ್ಚಾತ್ಯ ಪೌರಸ್ತ್ಯ ಸಾಹಿತ್ಯ ಸಿದ್ಧಾಂತಗಳ ತುಲನಾತ್ಮಕ ವಿಮರ್ಶಗ್ರಂಥ. ರಾಷ್ಟ್ರಸೂತ್ರವು ಹುಬ್ಬಳ್ಳಿಯ ದಾಜೀಬಾನ ಪೇಟೆಯಲ್ಲಿರುವ ಧ್ಯಾನೇ (ಜ್ಞಾನೇ)ಶ್ವರ ಮುದ್ರಣಾಲಯದ ಪ್ರಕಾಶನ; ಅದರಲ್ಲಿ ಭಾರತೀಯ ಸಂಸ್ಕೃತಿಯ ಬೇರುಗಳನ್ನು ರಾಜ್ಯಶಾಸ್ತ್ರದ ಅಂಗವಾಗಿ ವಿವರಿಸಲಾಗಿದೆ. Dnyaneshwara ಬಹುಶಃ ಜ್ಞಾನೇಶ್ವರನೇ ಆಗಿರಬೇಕು.

ಕನ್ನಡದ "ಜಾಯಮಾನ" ಎಂದು ಹಠ ಹಿಡಿಯುವವರು ಸ್ಥಾನ ಪ್ರಯತ್ನ ವಿವೇಕದ ಸ್ಥಾನಿವದಾದೇಶದ ವಿಶ್ವಸಾಧಾರಣತೆಯನ್ನು ಮನವರಿಕೆ ಮಾಡಿಕೊಂಡರೆ, ಕನ್ನಡ ಭಾಷಾಭಿವೃದ್ಧಿಯನ್ನು ಸಹಜತೆಗೆ ಎರವಾಗದಂತೆ ಸಾಧಿಸಬಹುದು. ಸಂಸ್ಕೃತದ ಜ್ಞಾನ ಇಲ್ಲದವರಿಗೆ ಕನ್ನಡದ ನ್ಯಾಯ್ಯ ಬೆಳವಣಿಗೆಯು ಹೇಗಾಗಬೇಕೆಂಬುದು ಗೊತ್ತೇ ಆಗದು. ಕನ್ನಡದ ಬಹುಸಂಖ್ಯಾತ ಸ್ತ್ರೀ ಪ್ರತ್ಯಯಗಳೆಲ್ಲವೂ ಸಂಸ್ಕೃತ ಜನ್ಯ ಎಂಬುದನ್ನರಿಯದವರೇ ಲತಾಳು, ಸೀತಾಳು, ಅಕ್ಕಳು, ಅಮ್ಮಳು ಎಂದೂ ಕುಸುಮಾ ಶೆಟ್ಟಿ, ರಮಾಭಟ್ಟ, ರಾಧಾ ಹೆಗ್ಗಡೆ, ನಲಿನೀ ಶಾಸ್ತ್ರಿ ಎಂದೂ ಅಸಹಜ ಪ್ರಯೋಗಗಳನ್ನು ಮಾಡುವರು. ನೆಹರೂರವರು, ಕುವೆಂಪುರವರುಗಳು ಹುಟ್ಟಿದ್ದೂ ಇಂಥ "ಸೃಜನ" ಶೀಲರಿಂದಲೇ. ಹೀಗೆ ಕನ್ನಡಿತಿಯ ಮೈಮೇಲೆ ಕೈಹಾಕುವ ಜಾರಜಾತಕದವರನ್ನು ತಿದ್ದಲೆಂದೇ ಪ್ರಸ್ತುತ ಪುಸ್ತಕವನ್ನು ರಚಿಸಲಾಗಿದೆ. ಸಂಸ್ಕೃತ ಭಾಷೆಯ ಸಂಸ್ಕಾರವನ್ನು ದ್ವೇಷಿಸುವವರು "ಪುಲಿಗೆರೆಯ ಸಾಜಮಾದ ತಿರುಳ್ಗನ್ನಡ"ದಲ್ಲಿ ಬರೆದ "ವಿಕ್ರಮಾರ್ಜುನವಿಜಯ"ವನ್ನು ಅಭ್ಯಾಸಮಾಡಬೇಕು. ಆದರದು ಆದ್ಯಂತವಾಗಿ ತಿರುಳ್ಗನ್ನಡ; ತತ್ಸಮ–ತದ್ಭವಗಳನ್ನು ಹೆಕ್ಕಿ ಬಿಸುಟು ಮಿಕ್ಕದ್ದು ಮಾತ್ರ ತಿರುಳ್ಗನ್ನಡ ಎಂಬುದು ಆದಿಕವಿ ಪಂಪನ ಅಭಿಪ್ರಾಯವಲ್ಲ; ಅಹುದೆಂದು ಸಾಧಿಸುವುದು ಹಠ. ಏಕೆಂದರೆ ಮನುಷ್ಯನಿಗೆ "ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ." ಆದುದರಿಂದ ಆದಿಪಂಪನು ತನ್ನ ವರ್ಣನೆಯನ್ನು

**"ಕದಳೀಗರ್ಭಶ್ಯಾಮಂ**

**ಮೃದುಕುಟಿಲಶಿರೋರುಹಂ ಸರೋರುಹವದನಂ**

**ಮೃದುಮಧ್ಯಮತನು ಹಿತಮಿತ**

**ಮೃದುವಚನ ಲಲಿತಮಧುರಸುಂದರವೇಷಂ"**

ಎಂಬ ಇಷ್ಟಾರ್ಥ ವ್ಯವಚ್ಛಿನ್ನ ಪದಾವಲಿಯಿಂದಲೇ ಮಾಡಿಕೊಂಡಿದ್ದಾನೆ. ತತ್ಸಮ ತದ್ಭವ ರಹಿತವಾದ ಕನ್ನಡವು ಅವನಿಗೆ ಬರುತ್ತಿರಲಿಲ್ಲವೇ? ಅವನಿಗೆ ಲಲಿತ, ಸುಲಭ, ಸರಳ ಎಂಬೆಲ್ಲವೂ ಸಂಸ್ಕೃತ ಪದಗಳೆಂಬುದು ಗೊತ್ತು. ಆದರೆ ಅವನು "ಲಭೇತ ಸಿಕತಾಸು ತೈಲಮಪಿ ಯತ್ನತಃ ಪೀಡಯನ್" ಎಂಬ ಮೂರ್ಖಪ್ರಯತ್ನಶೀಲನಾಗಿ ಕಲ್ಲಲ್ಲಿ ನಾರೆತ್ತುವಂಥ ಅತ್ಯಾಂಡಯ್ಯ ಮಾರ್ಗವನ್ನು ಹಿಡಿದು "ಕನ್ನಡ ಡಿಂಡಿಮ"ವನ್ನು ಬಾರಿಸಲಿಲ್ಲ. ಇಡಿಯ ಕೃತಿಯೊಂದರಲ್ಲಿ ಈಗಲೂ ಅಂಥ ಪ್ರಯತ್ನ ಮಾಡಿ ಯಾರೂ ಕನ್ನಡಿಗರ ಹೊಗಳಿಕೆಗೆ ಪಾತ್ರರಾಗಲಾರರು. ಆದುದರಿಂದ ವಸ್ತು ಸತ್ಯವೆನಿಸಿರುವ ಸುದ್ದಕನ್ನಡ+ಸಕ್ಕದಗಳ ಅವಿನಾಭಾವವನ್ನು ಸಾರಿ ಹೇಳಿ ಸಂಸ್ಕೃತದ ಸ್ಥೂಲಾಭ್ಯಾಸವಾದರೂ ಸುದ್ಧ ಕನ್ನಡ ಲೇಖಕನಿಗೆ ಬೇಕೇ ಬೇಕು ಎಂಬುದನ್ನು ಪ್ರಸ್ತುತ ಗ್ರಂಥವು ಪ್ರತಿಪಾದಿಸಲು ಎತ್ತಿಕೊಂಡಿದೆ. ಅದರ "ಯಶಾಪಯಶ" ಕೂಡ "ಪೌರ್ವಾತ್ಯ–ಪಾಶ್ಚಿಮಾತ್ಯ" ಎಂಬ ಪದಗಳಂತೆಯೇ ಸಂಸ್ಕೃತಕ್ಕೆ ಋಣಿ.

"ಕುಲ್ಯತೇ ಸಮೀಪಂ ನೀಯತೇ ಅನೇನ ಇತಿ ಕೋಲು:" ಎಂಬ ಅತಿವಾದಕ್ಕಿಲ್ಲಿ ಎಡೆಗೊಟ್ಟಿಲ್ಲ. ಆದರೆ ಪ್ರಕ್ಷಾಳನ ಸ್ಥಳವು ಬಚ್ಚಲಾದುದನ್ನು ಮರೆತಿಲ್ಲ. ಶೆಂದಮಿಳ್

ಚಳವಳದಂತೆ ಐಕಿಲ್ ವೆಟ್ಟನ್ನು ಬಳಸಬೇಕೆಂಬ ಆಗ್ರಹ ಇಲ್ಲಿಲ್ಲ, ಆಂಗ್ಲಭಾಷೆಯು ತನ್ನ ಬೆಳವಣಿಗೆಗೆ ಅಗತ್ಯವಾದ ಪರಭಾಷಾ ಪದಗಳನ್ನೂ ಪರವ್ಯಾಕರಣ ನಿಯಮಗಳನ್ನೂ ಲ್ಯಾಟಿನ್–ಗ್ರೀಕ್ ಗ್ರಂಥಗಳಿಗೆ ಪ್ರಾಧಾನ್ಯವನ್ನಿತ್ತು ನ್ಯಾಯವಾಗಿ ತೆಗೆದುಕೊಂಡು ಬರುತ್ತಿರುವಂತೆ ನಮ್ಮ ಭಾರತೀಯ ಭಾಷೆಗಳು ನಡೆದುಬಂದ ಅದೇ ತರಹದ ಸ್ವಾಭಾವಿಕ ಮಾರ್ಗವನ್ನು ಅನುಸರಿಸಲು ನಿಜವಾದ ಕನ್ನಡಿಗನು ಅಡ್ಡಿಯನ್ನುಂಟುಮಾಡಲಾರ; "ಹಾವನೂರಿ"ಸಿ ರಾಷ್ಟ್ರೀಯ–ಪ್ರಾಂತೀಯ ಸಾಂಸ್ಕೃತಿಕ ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಉದ್ದೇಶಿಸಲಾರ. "ಸಂಸ್ಕೃತಭಾಷೆ" ಎಂಬ ಪದವನ್ನು "ಅನ್ಯಭಾಷೆ"ಯಂತೆ ತತ್ಪುರುಷ ಸಮಾಸವೆಂದು ತಿಳಿದುಕೊಳ್ಳುವ ಹಠಹಿಡಿಯಲಾರ; ಕನ್ನಡದ ಡಿಂಡಿಮವನ್ನು ಕನ್ನಡದ ಗಂಟೆ+ ಎನ್ನುವ ಅಕಾವ್ಯಮಯತೆಗೆ ಇಳಿಸಲಾರ. ತನಗೆ ಬಾರದ ಭಾಷೆಗಳೆಲ್ಲವೂ ತನ್ನ ಪಾಲಿಗೆ ಮೃತ ಎಂಬುದನ್ನರಿಯದೆ, ಸಂಸ್ಕೃತವೊಂದೇ "ಮೃತ" ಎಂದು ಬೊಬ್ಬೆಹೊಡೆದು ಅರಸಿಕತೆಯನ್ನು ಹೊರಗೆಡಹನು, ಅಜ್ಞಾನವನ್ನು ಪ್ರದರ್ಶಿಸನು. ಆದುದರಿಂದ ಅಂಥ ಪ್ರವೃತ್ತಿಯೆಲ್ಲಾದರೂ ಹೊರಬಿದ್ದರೆ, ಅದನ್ನು ತಡೆಯಲು ಈ ಗ್ರಂಥವು "ಅಳಿಲು ಭಕ್ತಿ ಮಳಲು ಸೇವೆ" ಮಾಡಲು ಹೊರಟಿದೆ. ಈ ಅರಿಕೆಗೆ ಪೋಷಕವಾಗಿ–

> **"ಇತರ ತಾಪಶತಾನಿ ಯಥೇಚ್ಛಯಾ**
>
> **ವಿತರ ತಾನಿ ಸಹೇ ಚತುರಾನನ॥**
>
> **ಅರಸಿಕೇಷು ಕವಿತ್ವನಿವೇದನಂ**
>
> **ಶಿರಸಿ ಮಾ ಲಿಖ ಮಾ ಲಿಖ ಮಾ ಲಿಖ॥"** ಎಂದು

ವಾಗೀಶನನ್ನು ಪ್ರಾರ್ಥಿಸಿ–

> **ಕತ್ತುರಿಯಲ್ತೇ ಕನ್ನಡ**
>
> **ಮಸ್ತಮಿಸಿದ ಸೂರ್ಯನಲ್ಲವಯ್ಯಾ ಜಗದೊಳ್।**
>
> **ಮಸ್ತಕದಲಿ ತುರಿಯುರಿಗಳ**
>
> **ನಸ್ತಿತ್ವಕ್ಕೆ ತಾರದೆಂದು ಮೆಂದನುಗೆಯ್ವಂ॥**

ಶಿರಸಿ, ಉ.ಕ.– **ಬಿ.ಎಚ್.ಶ್ರೀಧರ**

೧–೧–೧೯೮೧

---

+ ತಂಬಟೆ (Literal)

# ಸಂಸ್ಕೃತ–ಕನ್ನಡ ಭಾಷೆಗಳ ಬಾಂಧವ್ಯ

## ಉಪಕ್ರಮ

ಪರರಾಷ್ಟ್ರಗಳಲ್ಲಿ ಭಾರತಕ್ಕೆ ಮೊದಲು ಗೌರವವನ್ನು ತಂದುಕೊಟ್ಟದ್ದು ನಮ್ಮ ನಾಡಿನಲ್ಲಿ ಸಾವಿರಾರು ವರ್ಷಗಳ ಹಿಂದೆ ಸಂಸ್ಕೃತದಲ್ಲಿ ಬರೆಯಲ್ಪಟ್ಟಿದ್ದ ವೇದ, ಉಪನಿಷತ್ತು ಮತ್ತು ಇತಿಹಾಸ, ಪುರಾಣ ಹಾಗೂ ಮಹಾಕಾವ್ಯಗಳೆಂಬುದು ಜಗತ್ತಿಗೆ ತಿಳಿದ ವಿಷಯ. ಮಾನವರ ಕೊಡು–ಕೊಳ್ಳುವ ವ್ಯವಹಾರಗಳು ಎಂದಿನಿಂದಲೂ ಪ್ರಸಿದ್ಧ. ಭಾಷೆಯು ಇದಕ್ಕೆ ಅಪವಾದವಾಗಿಲ್ಲ. ೨೦ ನೆಯ ಶತಮಾನದಲ್ಲಂತೂ ಅಂಥ ಕೊಡುಕೊಳ್ಳುವ ವ್ಯವಹಾರಗಳು ಬಹಳ ವಿಸ್ತಾರವಾಗುತ್ತ ಹೋಗಿವೆ. ಅದರಿಂದಲೇ ದಿವಂಗತ ಜವಾಹರಲಾಲ ನೆಹರು ಅವರು International Interdependence ಅಂತಾರಾಷ್ಟ್ರೀಯ ಪರಸ್ಪರಾಬಲಂಬನ ಎಂಬ ತತ್ತ್ವವನ್ನು ಘಂಟಾಘೋಷವಾಗಿ ಸಾರಿದರು. ಯಾವ ದೇಶವೂ ಸರ್ವತಂತ್ರ ಸ್ವತಂತ್ರವಲ್ಲ ಎಂಬುದಕ್ಕೆ ಇಂದಿನ ಪೆಟ್ರೋಲ್ ಬೇಡಿಕೆಯೊಂದು ಉದಾಹರಣೆ.

ಭಾರತವು ಕ್ರಿಸ್ತ ಪೂರ್ವಕಾಲದಿಂದಲೂ ಅನಾಕ್ರಾಮಕ ದೇಶವೆಂದು ಇತಿಹಾಸ ಹೇಳುತ್ತದೆ. ಇಲ್ಲಿದ್ದಷ್ಟು ವಿಶ್ವಜನೀನ ವೃತ್ತಿ ಪ್ರವೃತ್ತಿಗಳು ಇನ್ನೆಲ್ಲೂ ಇರಲಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ತತ್ತ್ವಜ್ಞಾನ, ನಾಟಕಾದಿ ಕಲೆ ಮುಂತಾದವುಗಳಲ್ಲಿ ಪ್ರಾಚೀನ ಗ್ರೀಸ್ ದೇಶಕ್ಕೂ ಭಾರತಕ್ಕೂ ನಡುವೆ ಅನೇಕ ಕೊಡುವ ಹಾಗೂ ಕೊಳುವ ವ್ಯವಹಾರಗಳು ನಡೆದಿದ್ದವು ಎಂದು ಇತಿಹಾಸಜ್ಞರು ಹೇಳಿದ್ದಾರೆ. ಜ್ಯೋತಿಃಶಾಸ್ತ್ರದ ಆಧಾರದ ಮೇಲೆ ಸಂಶೋಧನೆ ನಡೆಸಿದ ದಿವಂಗತ ಬಾಲಗಂಗಾಧರ ತಿಲಕರ ಹಾಗೂ ಜರ್ಮನ್ ವಿದ್ವಾಂಸ ಯಾಕೊಬಿ ಅವರ ಅಭಿಪ್ರಾಯಗಳು ವೇದವಾಙ್ಮಯದ ಪ್ರಾಚೀನತೆಯ ಕಾಲನಿರ್ಣಯದಲ್ಲಿ ಕ್ರಿ.ಪೂ. ೪೫೦೦ ವರ್ಷಗಳು ಎಂಬಲ್ಲಿ ಕೂಡುತ್ತವೆ. ನಮ್ಮ ರಾಷ್ಟ್ರದ ಪ್ರಸಿದ್ಧ ವಿದ್ವಾಂಸರಾದ ದಿವಂಗತ ಡಾಕ್ಟರ್ ಶ್ರೀಕಂಠಶಾಸ್ತ್ರಿಗಳ ಹಾಘೂ ಅವರ ಶಿಷ್ಯೋತ್ತಮರಾದ ಪ್ರೊ. ಎಸ್.ಆರ್.ರಾವ್ ಅವರ ಸಂಶೋಧನೆಯ ಪ್ರಕಾರ ದ್ರಾವಿಡವೆಂದು ಕರೆಯುತ್ತ ಬರಲಾಗಿದ್ದ ಮೊಹೆಂಜೊದಾರೋ ಮತ್ತು ಹರಪ್ಪ ಪ್ರದೇಶಗಳ ಸಂಸ್ಕೃತಿ ಮೊದಲಿಂದಲೂ ಸಂಮಿಶ್ರವಾಗಿತ್ತಲ್ಲದೆ ಕೇವಲ ಆರ್ಯ ಅಥವಾ ಕೇವಲ ದ್ರಾವಿಡ ಆಗಿತ್ತು ಎನ್ನಲು ಬರುವುದಿಲ್ಲವೆಂದು ತಿಳಿದು ಬಂದಿದೆ. ಸಂಸ್ಕೃತ ಭಾಷಿಕರಾದ ಭಾರತೀಯ ಆರ್ಯರೂ ಸಂಸ್ಕೃತೇತರ ಭಾಷೆಗಳನ್ನಾಡುವ ಇತರರೂ ಅಂದೇ ಸರ್ವಾಂಶಗಳಲ್ಲೂ ಸಂಮಿಶ್ರರಾಗಿದ್ದರೆಂಬುದು ಮಥಿತಾರ್ಥ.

ಇಂದು ಭಾರತದಲ್ಲಿ ಪ್ರಸಿದ್ಧವಾಗಿ ಆಡುತ್ತಿರುವ ಯಾವ ಭಾಷೆಯ ಇತಿಹಾಸವೂ ಸಂಸ್ಕೃತದ ಪೂರ್ವಜ ಎಂಬುದಕ್ಕೆ ಆಧಾರಗಳು ದೊರಕಿಲ್ಲ. ಸಂಸ್ಕೃತಕ್ಕೆ ಸಮಕಾಲೀನ ಅಥವಾ ಉತ್ತರಕಾಲೀನ ಎಂದೇ ವಿದ್ವಾಂಸರು ಹೇಳುತ್ತ ಬಂದಿದ್ದಾರೆ. ಕ್ರಿಸ್ತಪೂರ್ವ ಕಾಲದಲ್ಲಿ ಭಾರತದಲ್ಲಾದಷ್ಟು ದೊಡ್ಡಪ್ರಮಾಣದ ಮಾನವ ಕುಲಸಮನ್ವಯ ಮತ್ತೆಲ್ಲಿಯೂ ಆದಂತೆ ತೋರುವುದಿಲ್ಲ. ಇಂದಿನ ರಾಷ್ಟ್ರಮಾನ್ಯ ಭಾಷೆಗಳಲ್ಲಿ ಸಂಸ್ಕೃತವನ್ನು ಬಿಟ್ಟರೆ ತಮಿಳು, ಬಂಗಾಳಿ, ಹಾಗೂ ಕನ್ನಡ ಭಾಷೆಗಳಲ್ಲಿ ಉಪಲಬ್ಧವಾಗಿರುವ ವಾಙ್ಮಯಗಳೇ ಬಹಳ ಪುರಾತನವಾದವುಗಳೆಂದು ಪ್ರಸಿದ್ಧಿಯಿದೆ. ಅವುಗಳು ಸಂಸ್ಕೃತದಿಂದ ಏನನ್ನೂ ತೆಗೆದುಕೊಳ್ಳದೆ ಅಥವಾ ಸಂಸ್ಕೃತಕ್ಕೆ ಏನನ್ನೂ ಕೊಡದೆ ಸುಮಾರು ಕ್ರಿ.ಶ ಎರಡು ಸಾವಿರ ವರ್ಷಗಳವರೆಗೆ ಬೆಳೆದು ಬಂದವು ಎಂದು ಯಾವ ಇತಿಹಾಸಕಾರನೂ ಹೇಳಲಾರನು. ಶ್ರೀ ಆರ್.ಆರ್. ದಿವಾಕರರ ಪ್ರಕಾರ ಮಾನವನ ಸಮಸ್ತ ಚಟುವಟಿಕೆಗಳಿಗೂ "ಸಂಸ್ಕೃತಿ" ಎಂಬುದೊಂದೇ ಸರಿಯಾದ ಹೆಸರು. ಭಾಷೆಯು ಸಂಸ್ಕೃತಿಯ ಒಂದು ಪ್ರಧಾನವಾದ ಅಂಗ. ಭಾರತದ ಗಡಿ ಇಂದಿಗಿಂತ ಎರಡು ಪಟ್ಟು ಹಿಂದೆ ವಿಸ್ತಾರವಾಗಿತ್ತೆಂದು ಕೊಡಗಿನ ಮುತ್ತಣ್ಣನವರು ತಮ್ಮ ಗ್ರಂಥದಲ್ಲಿ* ಹೇಳಿದ್ದಾರೆ. ಇಂದಿನ ಪಾಕಿಸ್ತಾನ, ಇರಾನ, ಇರಾಕ್ ಮುಂತಾದ ಪ್ರದೇಶಗಳೆಲ್ಲವನ್ನೂ ಎತಿಯೋಪಿಯನ್ ವ್ಯಾಪಾರಿಗಳು ಭಾರತವೆಂದೇ ಗಣಿಸುತ್ತಿದ್ದರಂತೆ. ಅದು ಇಸ್ಲಾಂ ಮತ ಹುಟ್ಟುವುದಕ್ಕೂ ಪೂರ್ವದ ಕಾಲ. ಅದರಿಂದಲೋ ಏನೋ ಯೂರೋಪು–ಅಮೇರಿಕಗಳ ಕೆಲ ವಿಶ್ವವಿದ್ಯಾನಿಲಯಗಳಲ್ಲಿ ಹೇಗೋ ಹಾಗೇ ಇಂದಿನ ಅಫಗಾನಿಸ್ತಾನದಲ್ಲೂ ಸಂಸ್ಕೃತವನ್ನು ಕಲಿಸುವ ವಿಶ್ವವಿದ್ಯಾನಿಲಯವಿದೆ.

## ಉಪನ್ಯಾಸ

ಸಂಸ್ಕೃತಭಾಷೆಗೂ ಇಂಡೋ ಯುರೋಪಿಯನ್ ಭಾಷೆಗಳೂ ನಿಕಟ ಸಂಬಂಧವಿರುವುದನ್ನು ಭಾಷಾಶಾಸ್ತ್ರವು ಮೊದಲು ಹೊರಗೆಳೆಯಿತು. ಅನಂತರ ತುಲನಾತ್ಮಕ ಸಂಶೋಧನೆಗಳಿಂದ ಭಾರತೀಯ ಭಾಷೆಗಳೆಲ್ಲವುಗಳಲ್ಲೂ ಅತ್ಯಂತ ನಿಕಟವಾದ ಸಂಬಂಧವಿರುವ ಸ್ವಾಭಾವಿಕತೆಯನ್ನು ಎತ್ತಿ ಹೇಳಲಾಯಿತು, ಉತ್ತರ ಭಾರತದ ಪ್ರಸಿದ್ಧ ಭಾಷೆಗಳೆಲವೂ ದಕ್ಷಿಣ ಭಾರತದ ಮರಾಠಿಯಂತೆಯೇ ಸಂಸ್ಕೃತವಂಶೀಯ ಎಂಬುದಿಂದು ಸರ್ವಸಂಮತ. ಉಳಿದ ಪ್ರಸಿದ್ಧ ಭಾಷೆಗಳಾದ ತಮಿಳು, ತೆಲುಗು, ಕನ್ನಡ, ಕೊಂಕಣಿ, ಮಲೆಯಾಳಿ ಭಾಷೆಗಳ ಪ್ರಾಚೀನ ಅರ್ವಾಚೀನ ಗ್ರಂಥಗಳನ್ನು ಅವಲೋಕಿಸಿದರೆ ಸಂಸ್ಕೃತದ ಮೂಲಕ ತಿಳಿದು ಬಂದಿರುವ ಅನೇಕ ಸಾಂಸ್ಕೃತಿಕ ಅಂಶಗಳನ್ನು ನಾವಿಂದು ಗುರುತಿಸಿದ್ದೇವೆ. ಸಂಸ್ಕೃತ ಹಾಗೂ ಗ್ರೀಕ್ ಭಾಷೆಗಳಲ್ಲಿಯ ನಾಟಕಗಳ ಅಂಗಗಳಲ್ಲಿ ಸಾಮ್ಯಾಂಶಗಳಿರುವುದಕ್ಕಿಂತಲೂ ಹೆಚ್ಚು ಪ್ರಮಾಣದ ಸಾಮ್ಯಾಂಶಗಳು ನಮ್ಮ ಭಾಷೆಗಳಲ್ಲಿರುವುದನ್ನು ನಾವು ಜೀವನದಲ್ಲಿ ಇಂದಿಗೂ ಕಾಣುತ್ತಿದ್ದೇವೆ. "ಗಚ್ಛತ್ವಾರ್ಯ: ಪುನರ್ದರ್ಶನಾಯ" ಎಂಬ ಸಂಸ್ಕೃತದ ಬಳಕೆಗೆ "ನಾವು ಹೋಗಿ ಬರುತ್ತೇವೆ" ಎಂಬ

* Indo-Ethiopian Relations for centuries

ಕನ್ನಡ ಸತ್ ಸಂಪ್ರದಾಯವು ಸಮಾನವಾದದ್ದು. ಇದೇ ಪ್ರಕಾರ ಪದ, ಅರ್ಥ, ವಿಚಾರ, ಶಾಸ್ತ್ರ, ಕಾವ್ಯ, ಕಲೆ, ಮತಧರ್ಮ, ರೀತಿ, ನೀತಿ, ವೃತ್ತಿ, ಪ್ರವೃತ್ತಿಗಳೆಲ್ಲವುಗಳಲ್ಲೂ ಭಾರತೀಯರಾಗಿರುವ ಹಿಂದು, ಮುಸಲ್ಮಾನ, ಕ್ರೈಸ್ತ, ಪಾರಸಿಕ, ಜೈನ, ಬೌದ್ಧ, ಮುಂತಾದ ಭಿನ್ನಜನಾಂಗಗಳೆಲ್ಲವುಗಳ ಸಂಸ್ಕೃತಿಯಲ್ಲೂ ವಿವಿಧ ಪ್ರಮಾಣಗಳಲ್ಲಿ ಬೇಕಾದಷ್ಟು ಸಾಮ್ಯಾಂಶಗಳನ್ನು ನಾವು ಕಾಣುತ್ತೇವೆ. ನಮ್ಮ ನಮ್ಮ ವೈಯಕ್ತಿಕ ಹೆಸರುಗಳಲ್ಲೇ ನೂರಕ್ಕೆ ೮೦–೯೦ರಷ್ಟು ಸಾಧಾರಣಾಂಶಗಳನ್ನು ನಾವು ಕಾಣಬಹುದು. ಉಪನಾಮಧೇಯಗಳಲ್ಲಿದು ಇನ್ನಷ್ಟು ಸ್ಪಷ್ಟ. ಉದಾಹರಣೆ ಚೌಧರಿ ಮುಂತಾದವುಗಳು.

ಒಂದು ಮಾತನ್ನು ಈ ನಡುವೆ ಸ್ಪಷ್ಟಪಡಿಸಬೇಕಾಗಿದೆ. ಅದೇನೆಂದರೆ ಇಂಗ್ಲೀಷಿನಂತೆಯೇ ಸಂಸ್ಕೃತವೂ ಒಂದು ಭಾಷೆ. ಇಂಗ್ಲೀಷ್ ಶಬ್ದಕೋಶದಲ್ಲಿ ಆಂಗ್ಲೇತರ ಪದಗಳನ್ನು ಹೇಗೆ ಸೇರಿಸಿಕೊಂಡು ಬರಲಾಗುತ್ತದೆಯೋ ಹಾಗೇ ಸಂಸ್ಕೃತವೂ ತನ್ನ ಬೆಳವಣಿಗೆಯಲ್ಲಿ ಸಂಸ್ಕೃತೇತರ ಭಾಷೆಗಳಲ್ಲಿ ಪ್ರಮುಖವಾದವುಗಳಿಂದ ಎಷ್ಟೋ ಪದಗಳನ್ನು ತೆಗೆದುಕೊಂಡಿರಲೇಬೇಕು ಎಂಬುದನ್ನು ಗೃಹೀತವೆಂದು ತಿಳಿದುಕೊಳ್ಳಲಾಗಿದೆ. "ದೀನಾರ, ಹೋರಾ" ಮುಂತಾದ ಕೆಲವು ಪದಗಳು ಉದಾಹರಣೆಗೆ ಸಿಕ್ಕುತ್ತವೆ. ಆದುದರಿಂದ ಭಾರತೀಯವಾದ ಸಮಕಾಲೀನ ಪ್ರಮುಖ ಭಾಷೆಗಳಿಂದ ಸಂಸ್ಕೃತವು ಎಷ್ಟು ಪದಗಳನ್ನು ತೆಗೆದುಕೊಂಡಿತ್ತೆಂಬುದು ಸ್ಪಷ್ಟವಿಲ್ಲ. ಆದರದು ತೆಗೆದುಕೊಂಡೇ ಇರಬೇಕು. ಕಾಲ್ಡ್‌ವೆಲ್ ಮಹಾಶಯನು ಅಕ್ಷರ ಸಂಖ್ಯೆ ಕಡಿಮೆ ಇರುವ ತಮಿಳು ಭಾಷೆಯು ಪರಭಾಷೆಗಳಿಂದ ತೆಗೆದುಕೊಂಡ ಪದಗಳನ್ನು ಗುರುತಿಸುವುದು ಅಸಾಧ್ಯವಾಗಿದೆ ಎಂದು ಹೇಳಿರುವುದಿಲ್ಲಿ ಸ್ಮರಣೀಯ. ಭಾಷಾಶಾಸ್ತ್ರಕ್ಕೆ ಕೈಮೀರಿದ ಪ್ರಕರಣಗಳೆಷ್ಟೋ ಇವೆ. ಸಂಸ್ಕೃತಕ್ಕೆ ಇತರ ಭಾರತೀಯ ಭಾಷೆಗಳ ವಾಙ್ಮಯಗಳು ಎಷ್ಟು ಋಣಿಗಳಾಗಿವೆಯೋ ಅಷ್ಟೇ ಸಂಸ್ಕೃತವು ಅವುಗಳಿಗೆ ಋಣಿಯಾಗಿವೆ ಎನ್ನಲು ಸ್ಪಷ್ಟವಾದ ಆಧಾರಗಳ ಸಂಖ್ಯೆ ಅಧಿಕವಾಗಿರದಿದ್ದರೂ ಸಂಸ್ಕೃತ ಲೇಖಕರೆಲ್ಲರೂ ಭಾರತೀಯರೇ ಆಗಿರುವುದರಿಂದ ಅವರು ತಮ್ಮ ಹಾಗೂ ತಮ್ಮ ಸುತ್ತುಮುತ್ತಲಿನ ಇತರ ಭಾಷಿಕರಿಂದ ತಮ್ಮ ಸಂಸ್ಕೃತ ಲೇಖನಗಳಿಗೆ ಬೇಕಾದ ವಿಚಾರ, ಪದ, ಪದಸಂಹತಿ ಮುಂತಾದವುಗಳನ್ನು ಪಡೆದಿರಲೇಬೇಕು ಎಂಬುದು ಸ್ವತಃ ಸಿದ್ಧ. ಪ್ರೊ. ಪಾಂಡುರಂಗಿಯವರೂ ಪ್ರೊ. ಗುರುಪಾದ ಹೆಗಡೆ ಅವರೂ ತಮ್ಮ ಲೇಖನಗಳಲ್ಲಿ ಕನ್ನಡಿಗರು ಬರೆದ ಸಂಸ್ಕೃತ ಗ್ರಂಥಗಳನ್ನು ಉದಾಹರಿಸಿದ್ದಾರೆ. ಇನ್ನು, ಒಂದು ಭಾಷೆಯು ಇನ್ನೊಂದರಿಂದ ಪದಗಳನ್ನು ತೆಗೆದುಕೊಳ್ಳುವಾಗ ಉಚ್ಚಾರಗಳ ಬದಲಾವಣೆಗಳಾಗುವುದು ಅನಿವಾರ್ಯ. ಆಂಗ್ಲರ ಬಾಯಲ್ಲಿ ಚಿತ್ರ ದುರ್ಗವು "ಚಿಟ್ಟಲ್‌ಡ್ರಗ್" ಎಂಬುದಾಗಿಯೂ ಶ್ರೀ ರಂಗಪಟ್ಟಣವು "ಸೆರಿಂಗ ಪೆಟಾಮ್" ಎಂಬುದಾಗಿಯೂ ವಿಶಾಖ ಪಟ್ಟಣವು "ವಿಜಾಗಪೆಟಾಮ್" ಎಂಬುದಾಗಿಯೂ ಧಾರವಾಡವು "ಧಾರವಾರ್" ಎಂಬುದಾಗಿಯೂ ಪರಿವರ್ತನಹೊಂದಿದ್ದು ಸುವಿದಿತ. ಇಂಥ ಸಾಧ್ಯತೆಯನ್ನು ಅಲ್ಲಗಳೆಯಲು ಸಾಧ್ಯವಾಗದುದರಿಂದಲೇ "ಬ್ರಹ್ಮ" ಎಂಬ ಪದದಿಂದ "ಏಬ್ರಹಾಮ್" ಮತ್ತು "ಇಬ್ರಾಹೀಮ್" ಎಂಬ ಪದಗಳು ಹುಟ್ಟಿದವೆಂದು ಹೇಳಿದ್ದುಂಟು. ಇಂಥ ಕೆಲ ಉದಾಹರಣೆಗಳು

ವಿವಾದಾಸ್ಪದವಾಗಿಯೇ ಉಳಿಯುವವು ಎನ್ನಿಸಿದರೂ ಅವಿವಾದಾಸ್ಪದವಾದ ತದ್ಭವಗಳೆಷ್ಟೋ ದೊರಕುವುದೂ ಅಷ್ಟೇ ಸತ್ಯವಾಗಿದೆ. ತಮಿಳಿನ "ಪಂದಲ್" ಕನ್ನಡದಲ್ಲಿ "ಹಂದರ" ಇಂಗ್ಲೀಷಿನಲ್ಲಿ "ಪೆಂಡಾಲ್" ಎಂದು ಬಳಸಲ್ಪಟ್ಟಿದೆ. ಸಂಸ್ಕೃತದಲ್ಲಿ ನೀರಿಗೆ ೩೦ಕ್ಕೂ ಹೆಚ್ಚಿನ ಪದಗಳಿದ್ದರೂ ಕನ್ನಡದ "ನೀರ್" ಎಂಬ ಪದವನ್ನದು ತೆಗೆದುಕೊಂಡಿದೆ ಎಂಬುದು ಅನೇಕ ವಿದ್ವಾಂಸರ ಅಭಿಪ್ರಾಯ. ಕನ್ನಡದಲ್ಲಿ ನೀರಿಗೆ "ನೀರೆ"ಂಬುದೊಂದೇ ಶಬ್ದವಿದೆ. ಆದರೆ ಗ್ರೀಕ್ ಸಮುದ್ರ ದೇವತೆಯನ್ನು "ನೇರಿಯಸ್" ಎಂದು ಕರೆದಿರುವುದು ಪುನಃ ಸಂದೇಹಕ್ಕೆ ಎಡೆಗೊಟ್ಟಿದೆ. ಹೀಗೆ ತಳಕು ಹಾಕಿಕೊಂಡ ಭಾಷಾ ಸಮಸ್ಯೆಗಳು ಭಿನ್ನ ಭಾಷಿಕರ ನಿಕಟ ಸಂಪರ್ಕವನ್ನು ಎತ್ತಿ ತೋರಿಸುತ್ತದೆ. ಕನ್ನಡದ ಒಬ್ಬ ದೊಡ್ಡ ಕವಿಯಾದ ರಾಘವಾಂಕನು ತನ್ನನ್ನು "ಉಭಯಕವಿ ಕಮಲ ರವಿ" ಎಂದು ಬಣ್ಣಿಸಿಕೊಂಡಿರುವುದು ಅಂದಿನ ಕನ್ನಡಿಗರಲ್ಲನೇಕರ ಸವ್ಯಸಾಚಿತ್ವಕ್ಕೆ ಉದಾಹರಣೆಯನ್ನು ನೀಡುತ್ತದೆ. ಈಗಲೂ ನಮ್ಮಲ್ಲಿ ಬಹುಭಾಷಾವಿದ್ವಾಂಸರೂ ಬಹುಭಾಷಾತಜ್ಞರಾದ ಕವಿಗಳೂ ಇದ್ದಾರೆ. ಅದರಲ್ಲೂ ಕನ್ನಡ ಸಂಸ್ಕೃತಗಳ ಸಂಬಂಧವು ಕನ್ನಡ ಮತ್ತು ಇತರ ಭಾಷೆಗಳೊಳಗೆ ಇರುವ ಸಂಬಂಧಕ್ಕಿಂತ ಹೆಚ್ಚು ನಿಕಟವಾದುದೆಂಬುದನ್ನು ಈವರೆಗಿನ ಕನ್ನಡ ಗ್ರಂಥಗಳು ಉದಾಹರಿಸುತ್ತವೆ. ಕಾಕುತ್‌ಸ್ಥವರ್ಮನು ಬರೆಯಿಸಿದ ಹಲ್ಮಿಡಿಯ ಶಾಸನವು ಕ್ರಿ.ಶ ೪೫೦ರದ್ದು. ಅದರಲ್ಲೇ ಕನ್ನಡ ಸಂಸ್ಕೃತ ಪದಗಳ ಸಂಮಿಶ್ರಣವನ್ನು ಕಾಣಬಹುದು. ಅದಕ್ಕೂ ಹಿಂದಿನ ವಿವಾದಾಸ್ಪದವಾದ ಉದಾಹರಣೆ ಎಂದರೆ ದಿ.ಗೋವಿಂದ ಪೈಗಳು ದೊರಕಿತೆಂದು ಹೇಳಿದ ಗ್ರೀಕರ ಕನ್ನಡ ಪ್ರಹಸನವೊಂದು. ಅದರಲ್ಲೂ ಸಂಸ್ಕೃತಜನ್ಯವಾದ ಪದವೊಂದೂ ಇಲ್ಲವೆನ್ನಲು ಸಾಧ್ಯವಿಲ್ಲ. ಈ ಅಂಶಗಳನ್ನು ಅವಲೋಕಿಸಿದರೆ ಪದ ಭಂಡಾರವು ಅಂದಿನಿಂದಲೇ ಕನ್ನಡ–ಸಂಸ್ಕೃತಗಳಿಗೆ ಸಾಧಾರಣವಾದ ಅನೇಕಾನೇಕ ಪದಗಳಿಂದ ತುಂಬಿತ್ತೆಂದು ದೃಢವಾಗಿ ಅಭಿಪ್ರಾಯಪಡಬಹುದು. "ಗಲ್ಲ" ಎಂಬ ಪದವು ಸಂಸ್ಕೃತ–ಕನ್ನಡಗಳೆರಡಕ್ಕೂ ಸಾಧಾರಣ; ಅದರ ಅರ್ಥ ಎರಡು ಭಾಷೆಗಳಲ್ಲೂ "ಕೆನ್ನೆ" ಎಂದೇ ಆಗಿದೆ. ಅದೇ ಪ್ರಕಾರ–

| **ಸಂಸ್ಕೃತ** | **ಕನ್ನಡ** | **ಸಂಸ್ಕೃತ** | **ಕನ್ನಡ** |
|---|---|---|---|
| ಗುಂಜಾ | ಗುಂಜೆ | ರಾಗ | ರಾಗ |
| ಗೀತಾ | ಗೀತೆ | ಧಾಟೀ | ಧಾಟಿ |
| ಗುಣ | ಗುಣ | ತಾಲ | ತಾಳ |
| ಮಣಿ | ಮಣಿ | ಧಾತು | ಧಾತು |
| ಮಂಚ | ಮಂಚ | ದೂರ | ದೂರ |
| ಪಟ್ಟ | ಪಟ್ಟ | ದಿಕ್ | ದಿಕ್ಕು |
| ಮೇಲ | ಮೇಳ | ಜನ | ಜನ |

| | | | |
|---|---|---|---|
| ಲಕ್ಷ | ಲಕ್ಷ | ಜಾತಿ | ಜಾತಿ |
| ಕೋಟಿ | ಕೋಟಿ | ತಪಸ್ | ತಪಸ್ಸು |
| ದೇವ | ದೇವ | ಜಪ | ಜಪ |
| ಧರ್ಮ | ಧರ್ಮ | ಪೂಜಾ | ಪೂಜೆ |
| ಆತ್ಮ | ಆತ್ಮ | ಹೋಲೀ | ಹೋಳಿ |
| ಜೀವ | ಜೀವ | ಹಠ | ಹಟ |
| ಪರಮಾತ್ಮ | ಪರಮಾತ್ಮ | ಕಥೆ | ಕತೆ |
| ರೂಪ | ರೂಪ | ಭಂಡ | ಭಂಡ |
| ರುಂಡ | ರುಂಡ | | |
| ಲಕ್ಷಣ | ಲಕ್ಷಣ | ನೀತಿ | ನೀತಿ |

ಎಂಬಂತಹ ತತ್ಸಮ ಅಥವಾ ಸಮ ಸಂಸ್ಕೃತಪದಗಳನ್ನು ಪರಿಶೀಲಿಸಿದರೆ ಕನ್ನಡದ ಹುಟ್ಟು (ಭೂಲೋಕದಲ್ಲಿ) ಮೊದಲಾಯಿತೋ ಸಂಸ್ಕೃತ ಹುಟ್ಟಿದ ಮೇಲಾಯಿತೋ ಎಂಬ ನಿತ್ಯಸಂದಿಗ್ಧವಾದ ಐತಿಹಾಸಿಕ ಪ್ರಶ್ನೆ ಏಳುತ್ತದೆ. ಸದ್ಯ ದ್ರಾವಿಡರನ್ನು ಮೆಡಿಟರೇನಿಯನ್ ಜನಾಂಗ ಎಂದು ಹೇಳುತ್ತಿರುವುದರಿಂದ "ಪೆಂಡಿಟರೇನಿಯನ್" ಅಥವಾ ಭೂಮಧ್ಯ ಸಮುದ್ರದ ದ್ರಾವಿಡ ನಾಮಧೇಯ ಯಾವುದಾಗಿತ್ತು? ಎಂದು ಕೇಳಬೇಕಾಗುತ್ತದೆ. ಅದಕ್ಕೀಗ ಉತ್ತರ ಸಿಕ್ಕದು. ಸ್ವತಃ "ದ್ರಾವಿಡ" ಎಂಬ ಪದಕ್ಕೆ "ತಮಿಳ" ಎಂಬ ಅರ್ಥ ಮಾತ್ರ ಕನ್ನಡ ನಿಘಂಟಿನಲ್ಲಿದೆ; "ದ್ರಾವಿಡ"ವನ್ನೂ ಸಂಸ್ಕೃತ ಪದವೆಂದು ತೋರಿಸಲಾಗಿದೆ (ಕನ್ನಡ ನಿಘಂಟು–ಮಂಗಳೂರಿನ ಶಾರದಾ ಪ್ರೆಸ್ಸಿನಲ್ಲಿ ೧೯೫೧ರಲ್ಲಿ ಅಚ್ಚಾದದ್ದು ಈ ಮಾತಿಗೆ ಆಧಾರ). ಎಲ್ಲರಿಗೂ ಗೊತ್ತಿರುವಂತೆ ಗ್ರಂಥಸ್ಥವಾಙ್ಮಯಗಳಲ್ಲಿ ಋಗ್ವೇದವು ಅತಿ ಪ್ರಾಚೀನವಾದದ್ದು–ನಮ್ಮ ದೇಶದಲ್ಲಲ್ಲ–ಇಡಿ ಜಗತ್ತಿನಲ್ಲಿಯೇ. ಹೀಗಿರುವುದರಿಂದ ಮತ್ತು ನಮ್ಮ ದೇಶದಲ್ಲಿ ಶುದ್ಧ ಆರ್ಯರಾಗಲಿ, ಶುದ್ಧ ದ್ರಾವಿಡರಾಗಲಿ, ಕಾಯೇನ ವಾಚಾ ಮನಸಾ ಇಲ್ಲದಿರುವುದರಿಂದ ಸಂಸ್ಕೃತ ಕನ್ನಡಗಳ ಪ್ರತ್ಯೇಕೀಕರಣಕ್ಕೆ ಪ್ರಯತ್ನಿಸುವುದರಿಂದ ಕನ್ನಡದ ವರ್ತಮಾನ ಸಂಸ್ಕೃತಿಗೆ ಉಂಟಾಗುವ ಹಾನಿ ಅಪಾರ. ಅಲ್ಲದೆ ಅಂಥ ಪ್ರಯತ್ನವು ಅಶಕ್ಯವೂ ಹೌದು, ಅನೈಸರ್ಗಿಕವೂ ಹೌದು. ಅಂಡಯ್ಯ ಕೂಡ ತದ್ಭವ (ಪ್ರಾಕೃತ) ಪದಗಳನ್ನು ಹೊರಗಿಟ್ಟು ಕನ್ನಡದಲ್ಲಿ ಬರೆಯಲಾರದಾದದ್ದು ಸ್ಪಷ್ಟ. ತದ್ಭವಗಳ ಸಂಖ್ಯೆ ಕನ್ನಡದಲ್ಲಿ ಅಸಂಖ್ಯಾತವೆಂಬಷ್ಟಿದೆ. ಈ ಬಳಕೆಯನ್ನು ಆಧರಿಸಿದರೆ, ಸಂಸ್ಕೃತದ ಮೂಲ ಜ್ಞಾನವಿಲ್ಲದವನು ಕನ್ನಡದಲ್ಲಿ ಎಂದೂ ಪರಿಪೂರ್ಣ ವಿದ್ವಾಂಸ, ಪಂಡಿತ ಎನ್ನಿಸಿಕೊಳ್ಳಲಾರ ಎಂಬುದು ಖಚಿತವಾಗುತ್ತದೆ. 'ಆರತಿ' ಎಂಬ ಪದದ ಮೂಲ "ಆರಾತ್ರಿಕ" ಎಂಬ ಸಂಸ್ಕೃತ ಪದ ಎಂಬುದನ್ನು ಎಷ್ಟು ಜನರು ಬಲ್ಲರು? ಲಂಡ ಎಂಬುದಕ್ಕೆ ಲಡ್ಡೆ ಎಂಬುದು ಮೂಲ. "ಹಾಲುಹೈನ" ಎಂಬಲ್ಲಿಯ ಹೈನದ ಮೂಲರೂಪ ಹೈಯಂಗವೀನ.

| ತದ್ಭವ | ಸಂಸ್ಕೃತ | ತದ್ಭವ | ಸಂಸ್ಕೃತ |
|---|---|---|---|
| ಹರೆಯ | ಪ್ರಾಯ | ಚಕ್ಕುಲಿ | ಶಷ್ಕುಲೀ |
| ಬಡ್ಡಿ | ವೃದ್ಧಿ | ಸಕ್ಕರೆ | ಶರ್ಕರಾ |
| ಹಚ್ಚಡ | ಪ್ರಚ್ಛದ | ಬೆತ್ತ | ವೇತ್ರ |
| ಸೊನ್ನೆ | ಶೂನ್ಯ | ಬಸವ | ವೃಷಭ |
| ಸೆಜ್ಜೆ | ಶಯ್ಯಾ | ಬೇತಾಳ | ವೇತಾಲ |
| ಸಲಾಕೆ | ಶಲಾಕಾ | ವೇಳೆ | ವೇಲಾ |
| ಸನ್ನೆ | ಸಂಜ್ಞಾ | ಬೀದಿ | ವೀಥೀ |
| ಸಂಚಕಾರ | ಸತ್ಯಂಕಾರ | ಬಾಲ | ವಾಲ |
| ಸಿಕ್ಕ | ಶಿಕ್ಯ | ಬತ್ತಿ | ವರ್ತಿ |
| ರನ್ನ | ರತ್ನ | ಬುತ್ತಿ | ಭುಕ್ತಿ |
| ಜೋಗಿ | ಯೋಗಿ | ಬಿಡೆ | ವ್ರೀಡಾ |
| ಸಂಜೆ | ಸಂಧ್ಯಾ | ಬಿಕ್ಕೆ | ಭಿಕ್ಷಾ |
| ಮುತ್ತು | ಮುಕ್ತಾ | ಭತ್ತೆ | ಭೃತ್ಯಾ |
| ಮಸಿ | ಮಷೀ | ಪಯಣ | ಪ್ರಯಾಣ |
| ಮಲ್ಲಿಗೆ | ಮಲ್ಲಿಕಾ | ಆಣೆ | ಆಜ್ಞಾ |
| ಮನ್ನಣೆ | ಮಾನನ | ಹಣತೆ | ಪ್ರಣೀತಾ |

ಎಂಬಂತಹ ತದ್ಭವಗಳು ಅನೇಕಾನೇಕ. ಹಾಗೆಯೇ ಇಂಗ್ಲೀಷಿನಿಂದ medium ಎಂಬುದನ್ನು ಮಾಧ್ಯಮ ಎಂದು ಪರಿವರ್ತಿಸಿಕೊಂಡ ಬಗೆಯೂ ಕನ್ನಡದಲ್ಲಿ ಹೇರಳವಾಗಿದೆ.

| ಸಂಸ್ಕೃತ | ಕನ್ನಡ | ಅರ್ಥ |
|---|---|---|
| ಪುಷ್ಪಬಾಣ | ಪೂಗೋಲ | ಮನ್ಮಥ |
| ಮೂಷಕವಾಹನ | ಇಲಿದೇರ | ಗಣಪತಿ |
| ಕ್ಷಿರೋದತನಯಾ | ಇಂಗಡಲಣುಗಿ | ಲಕ್ಷ್ಮಿ |
| ಫಾಲಾಕ್ಷ | ಪಣೆಗಣ್ಣ | ಶಿವ |
| ಗೋಪಾಲ | ತುರುವಳ | ದನಗಾಹಿ |
| ಶಕ್ರಚಾಪ | ಇಂದಿರವಿಲ್ | ಕಾಮನಬಿಲ್ಲು |
| ಪಂಕಜ | ಕೆಸರ್ಮಲ್ಲಿಗೆ | ತಾವರೆ |
| ಗಂಧವಹ | ಕಂಪುವಳ | ಗಾಳಿ |

| | | |
|---|---|---|
| ತಾರಾಪಥ | ಮೀಂಬಟ್ಟೆ | ಆಕಾಶ |
| ಚತುರ್ಮುಖ | ನಾಲ್ಮೊಗ | ಬ್ರಹ್ಮ |
| ಷಣ್ಮುಖ | ಆರುಮೊಗ | ಸ್ಕಂದ |
| ಕಮಲಾಕ್ಷ | ತಾವರೆಗಣ್ಣ | ವಿಷ್ಣು |
| ಪಕ್ಷಿರಾಜ | ಪಕ್ಕಿಗಳಾಣ್ಮ | ಗರುಡ |
| ತಾರಾನಾಥ | ಮೀಂಗಳೆರೆಯ | ಚಂದ್ರ |
| ಕಮಲಮಿತ್ರ | ತಾವರೆಗೆಳೆಯ | ಸೂರ್ಯ |
| ಹೈಮವತೀ | ಐಕಿಲ್ವೆಟ್ಟಣುಗಿ | ಪಾರ್ವತಿ |
| ಘನೋಪಲ | ಮುಗಿಲ್ಗಲ್ಲು | ಆಲಿಗಲ್ಲು |
| ಫಲಿತರಸಾಲ | ಬಂದಮಾವು | ಹಣ್ಣಾದ ಮಾವಿನಮರ |

# ೧

# ಸಂಸ್ಕೃತ-ಕನ್ನಡಗಳ ಕಾವ್ಯಸಂಬಂಧ

ಸಂಸ್ಕೃತದಲ್ಲಿರುವ ಕಾವ್ಯಗಳಿಂದ ಕಥಾವಸ್ತುಗಳನ್ನು ಆಯ್ದುಕೊಂಡು ಸ್ವಪ್ರತಿಭೆಯಿಂದ ತಕ್ಕ ಬದಲಾವಣೆಗಳನ್ನು ಮಾಡಿಕೊಂಡು, ನವ್ಯತೆಯನ್ನು ಮೆರೆದ ಕನ್ನಡ ಕವಿಗಳು ಸ್ತುತ್ಯರು. ಅಂಥ ಕವಿಗಳ ಕಾವ್ಯಗಳ ಪಟ್ಟಿ ದೊಡ್ಡದು. ಅಚ್ಚ ಗನ್ನಡ ಕವಿಗಳೆಂದು ಹೇಳಲ್ಪಟ್ಟಿರುವ ಹರಿಹರ-ರಾಘವಾಂಕರು ಸಹ ಈ ಬಗೆಯಿಂದಲೇ ಪ್ರಸಿದ್ಧರಾಗಿದ್ದಾರೆ. ಹರಿಹರನು "ಗಿರಿಜಾ ಕಲ್ಯಾಣ"ದ ಕಥೆಗೆ ಕಾಳಿದಾಸನ "ಕುಮಾರ ಸಂಭವ"ವನ್ನು ಆಶ್ರಯಿಸಿದನೆಂದಮೇಲೆ ಹೆಚ್ಚಿಗೆ ಹೇಳಬೇಕಾದುದೇನಿದೆ? ಆದರೂ ಪ್ರಸ್ತುತ ಪ್ರಸಂಗದಲ್ಲಿ ಒಂದು ಚಿಕ್ಕ ಐತಿಹಾಸಿಕ ವಿವರಣೆಯನ್ನು ಕೊಡಬೇಕಾಗಿದೆ.

ಉಪಲಬ್ಧ ಕನ್ನಡ ಮಹಾಕಾವ್ಯಗಳಲ್ಲಿ ಆದಿಪಂಪನ "ವಿಕ್ರಮಾರ್ಜುನ ವಿಜಯವು" ಗಣ್ಯವಾದದ್ದು. ಇದರಲ್ಲಿ ಕವಿಯು ಪಾಂಡವರ ಜನನದಿಂದ ಕೌರವರ ವಧೆಯವರೆಗೆ ಸಂಸ್ಕೃತದಲ್ಲಿರುವ ವೇದವ್ಯಾಸ ಕೃತವಾದ ಮಹಾಭಾರತದ ಕಥೆಯನ್ನು ಸಂಕ್ಷೇಪವಾಗಿ ಹೇಳಿ ಕೊನೆಯಲ್ಲಿ ಅರ್ಜುನನಿಗೆ ಪಟ್ಟಾಭಿಷೇಕವಾದಂತೆ ವರ್ಣಿಸಿದ್ದಾನೆ. ಮಹಾಭಾರತದಲ್ಲಿ ಕೌರವರ ವಧೆಯ ಅನಂತರ ಪಟ್ಟಾಭಿಷೇಕವಾದದ್ದು ಧರ್ಮರಾಯನಿಗೆ, ಅದರ ಅಷ್ಟಾದಶಪರ್ವಗಳ ಪ್ರಧಾನ ರಸವು ಶಾಂತ. ಇದರ ೧೪ ಆಶ್ವಾಸಗಳ ಮುಖ್ಯ ರಸವು ವೀರ. ಇದರಲ್ಲಿ ಕೃಷ್ಣನಿಗಿಂತ ಅರ್ಜುನ ಮುಖ್ಯ; ಅವನೇ ಕಥಾ ನಾಯಕ. ಎಲ್ಲ ಕವಿಗಳೂ ಇಂಥ ಬದಲಾವಣೆಯನ್ನು ಮಾಡಿಲ್ಲ. ರಾಘವಾಂಕನ ಶಿವಭಕ್ತಿಯು ಹರಿಶ್ಚಂದ್ರೋಪಾಖ್ಯಾನವನ್ನಾಧರಿಸಿ ಬರೆದ "ಹರಿಶ್ಚಂದ್ರಕಾವ್ಯ"ದಲ್ಲಿ ಹರಿಶ್ಚಂದ್ರನನ್ನೇ ಕಥಾ ನಾಯಕನನ್ನಾಗಿ ಉಳಿಸಿಕೊಳ್ಳಲು ವಿಘ್ನವಾಗಲಿಲ್ಲ. ಪಂಪನೊಡೆಯ ಅರಿಕೇಸರಿಯನ್ನು ಅರ್ಜುನನಲ್ಲಿ ಏಕೀಕರಿಸಿದ್ದರಿಂದ ಪಂಪ ಭಾರತಕ್ಕೆ ಅರ್ಜುನನೇ ಕಥಾನಾಯಕನಾಗ-ಬೇಕಾಯ್ತು. ಈತನ ಕಾಲ ಸುಮಾರು ಕ್ರಿ.ಶ ೯೪೧.

ಸುಮಾರು ಕ್ರಿ.ಶ ೯೯೦ ರಲ್ಲಿದ್ದ ೧ನೆಯ ನಾಗವರ್ಮನು "ಕರ್ಣಾಟಕ ಕಾದಂಬರಿ"ಯನ್ನು ಬಾಣಭಟ್ಟನ ಸಂಸ್ಕೃತ "ಕಾದಂಬರಿ"ಯನ್ನು ಆಧರಿಸಿ ಬರೆದನು. ವರ್ಣನ ವಿಸ್ತಾರದಲ್ಲಿ ಪಂಪನಂತೆಯೇ ಇವನು ಮೂಲಕ್ಕಿಂತ ಕಡಿಮೆಯನ್ನೇ ಮಾಡಿದನೆನ್ನಬಹುದು. ಅವನ ಸ್ವತಂತ್ರ ಶೈಲಿ ಗಾಂಭೀರ್ಯ ಇವನಿಗಿಲ್ಲ; "ವಿಕ್ರಮಾರ್ಜುನ

ವಿಜಯ"ದಂತೆಯೇ ಇದೂ ಚಂಪೂ ಕಾವ್ಯ. ಇವನಿಗಿಂತ ಹಿಂದಿದ್ದ ಮಹಾಕವಿ ದಂಡಿಯು ಚಂಪೂಲಕ್ಷಣವನ್ನೇನೋ ಹೇಳಿದ್ದನು. ಆದರೆ ಕಾಲಕ್ರಮದಲ್ಲಿ ಉತ್ತಮ ಚಂಪೂ ಕಾವ್ಯ ಸಿಗುವುದು ಕನ್ನಡದಲ್ಲೇ. ಕಥಾವಸ್ತು ಮೂಲ ಕಾದಂಬರಿಯದು. ವರ್ಣನಾದಿ ಉಳಿದ ಅಂಗಗಳು ನಾಗವರ್ಮನವು ಎನ್ನಬಹುದು.

ಕನ್ನಡ ಮಹಾಕವಿ ರನ್ನನ ಕಾಲ ಕ್ರಿ.ಶ ೯೯೩. ಈತನ ಪ್ರಸಿದ್ಧಿಗೆ ಇವನು ಬರೆದ "ಸಾಹಸಭೀಮವಿಜಯ" ಅಥವಾ "ಗದಾಯುದ್ಧ"ವೆಂಬ ಗದ್ಯ ಪದ್ಯಮಯ ಚಂಪೂಕಾವ್ಯವೇ ಕಾರಣ. ಇದರ ವಸ್ತುವನ್ನು ವೇದವ್ಯಾಸನ ಮಹಾಭಾರತದಿಂದ ತೆಗೆದುಕೊಳ್ಳಲಾಗಿದೆ. ಈತನೂ ಪಂಪನಂತೆಯೇ ರಸೋಚಿತವಾದ ಬದಲಾವಣೆಗಳನ್ನು ಅಲ್ಲಲ್ಲಿ ಮಾಡಿಕೊಂಡಿದ್ದಾನೆ. ಇದರಲ್ಲಿ ಭೀಮಸೇನನೇ ಕಥಾನಾಯಕ. ಇದರ ಪ್ರಧಾನ ರಸವೂ ವೀರವೇ. ಭೀಮನಿಗೆ ಯುದ್ಧ ಮಾಡಲಿರುವ ಧರ್ಮ ಬಲವು ಕೌರವನಿಗಿಲ್ಲ. ಆದರೂ ಈ ಕವಿಯು ಕೌರನ ಕೆಲ ಸದ್ಗುಣಗಳನ್ನೂ ಭೀಮನ ರೌದ್ರವನ್ನೂ ಎತ್ತಿ ಒತ್ತಿ ಹೇಳಿದ್ದಾನೆ. ಈ ಕವಿಯು ಕನ್ನಡ ಕಾವ್ಯದ ವಾಕ್ ಪ್ರೌಢಿಯನ್ನೂ ಗೌರೀ ಶಂಕರ ಶಿಖರಕ್ಕೇರಿಸಿದ್ದಾನೆ. ನಿಷ್ಪಕ್ಷಪಾತ ವಿಮರ್ಶಕರಾರೂ ಇದನ್ನು ಅನುಮೋದಿಸದಿರರು. ರನ್ನಗನ್ನಡವೆಂದರೆ ರನ್ನಗನ್ನಡ. ಕುಮಾರ ವ್ಯಾಸನ ಕನ್ನಡ ಎಷ್ಟೇ ಓಜೋಗುಣಯುಕ್ತವಾಗಿದ್ದರೂ ಈತನ ಕನ್ನಡದ ಓಜಸ್ಸಿನ ಅಚ್ಚುಕಟ್ಟುತನಕ್ಕೆ ಸರಿದೊರೆಯಾಗಲಾರದು. ರಾಘವಾಂಕನ ಭಾಷಾ ಶುದ್ಧಿ ಭಾಷಾ ಪರಿಪಕ್ವತೆಗಳಿಗೆ ಇವನೇ ಮೇಲ್ಪಂಕ್ತಿ ಹಾಕಿಕೊಟ್ಟನೆನ್ನಬಹುದಾಗಿದೆ. ರನ್ನನ ಠೀವಿಯೇ ಠೀವಿ; ಅವನ ರೀತಿಯೇ ರೀತಿ. ಈತನ ಕನ್ನಡ ಕನ್ನಡಸರಸ್ವತಿಯ ಮೂಗುತಿಯೆನ್ನಬಹುದು. ಮುದ್ದಣ ಆಮೇಲೆ ಹೇಳಿದ ಕರ್ಮಣಿ ಸರದೊಳ್ ಚೆಂಬವಳಮಂ ಕೋದಂತೆ ತತ್ಸಮಗಳನ್ನು ತದ್ಭವ ದೇಶ್ಯಗಳೊಡನೆ ಇವನು ಬೆಸೆದಿದ್ದಾನೆ.

ಆಮೇಲೆ ಸುಮಾರು ಕ್ರಿ.ಶ ೧೧೦೦ರಲ್ಲಿದ್ದ ನಾಗಚಂದ್ರನು ಬರೆದ "ರಾಮಚಂದ್ರ ಚರಿತ ಪುರಾಣ" ಎಂಬ ಚಂಪೂ ಮಹಾಕಾವ್ಯವು ಪ್ರಸಿದ್ಧ. ಇದರ ವಸ್ತು ವಾಲ್ಮೀಕಿಯು ಸಂಸ್ಕೃತದಲ್ಲಿ ಬರೆದ ಶ್ರೀಮದ್ರಾಮಾಯಣ ಮಹಾಕಾವ್ಯದಿಂದ ಆಯ್ದುಕೊಂಡದ್ದು. ಇಲ್ಲಿಯೂ ಕವಿಯು ಸ್ವಪ್ರಿಯ ಸಂದರ್ಭಗಳಿಗೆ ಉಚಿತವಾದ ವಸ್ತು, ಪಾತ್ರ, ಸನ್ನಿವೇಶಗಳ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಶ್ರೀ ರಾಮಚಂದ್ರನಿಲ್ಲಿ ಕಥಾನಾಯಕ ಮತ್ತು ರಾವಣನು ಪ್ರತಿನಾಯಕ. ರನ್ನನ ಕೌರವನಂತೆ ಅಭಿನವ ಪಂಪನೆಂದು ಬಿರುದು ಪಡೆದ ಈ ಕವಿಯ ರಾವಣನು ತನ್ನ ಸ್ವಭಾವದಲ್ಲಿ ಆದಿಯಿಂದ ಅಂತ್ಯದವರೆಗೂ ಜನ್ಮತಃ ದುಷ್ಟ ಎನ್ನಿಸುವುದಿಲ್ಲ. ಇದು ಈ ಕವಿ ತೋರಿಸಿದ ದೊಡ್ಡ ವೈಶಿಷ್ಟ್ಯ. ಈ ಚಂಪುವಿನ ೧೬ ಆಶ್ವಾಸಗಳೂ ಹಿಂದೆ ಹೇಳಿದ ಮಹಾಕಾವ್ಯಗಳಂತೆಯೇ.

**ಪರಮಬ್ರಹ್ಮಶರೀರ ಪುಷ್ಟಿ ಜನತಾಂತರ್ದೃಷ್ಟಿ ಕೈವಲ್ಯಭೋ**
**ಧರಮಾ ಮೌಕ್ತಿಕ ಹಾರಯಷ್ಟಿ ಕವಿತಾವಲ್ಲೀ ಸುಧಾವೃಷ್ಟಿ ಸ।**
**ರ್ವರಸೋತ್ಪಾದ ನವೀನ ಸೃಷ್ಟಿ ಬುಧಹರ್ಷಾಕೃಷ್ಟಿ ಸರ್ವಾಂಗ ಸುಂ**
**ದರಿ ವಿದ್ಯಾನಟಿ ನಾಟ್ಯಮಂ ನಲಿಗೆ ಮತ್ಕಾವ್ಯಸ್ಥಲೀ ರಂಗದೊಳ್॥**

ಎಂಬುದು ಕನ್ನಡದ ಪ್ರಸಿದ್ಧ ಕವಿಗಳೆಲ್ಲರ ಆದರ್ಶ ಎಂದರೆ ತಪ್ಪಾಗದು. ಈ ಆದರ್ಶವನ್ನು ಮೊದಲ ಬಾರಿಗೆ ಉಗ್ಗಡಿಸಿದ ಶ್ರೇಯಸ್ಸು ನಾಗಚಂದ್ರನಿಗೆ ಸಲ್ಲುತ್ತದೆ. ಕುಮಾರವ್ಯಾಸನು "ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ" ಎಂದು ಹೇಳಿದ ಮೇಲೂ ರಾಮಾಯಣವನ್ನಾಧರಿಸಿದ ಕನ್ನಡ ಕಾವ್ಯಗಳು ಹೊರಬಿದ್ದದ್ದು ರಾಮಾಯಣವನ್ನು ಹೊಸ ಹೊಸದಾಗಿ ಆಕರ್ಷಕತೆಯಿಂದ ಹೇಳುವ ಕನ್ನಡ ಪ್ರತಿಭೆಗೆ ನಿದರ್ಶನ. ಆದುದರಿಂದ ಸಂಸ್ಕೃತಕವಿ ವಾಲ್ಮಿಕಿ ಕನ್ನಡಿಗನೇ ಆಗಿದ್ದಿರಬಹುದೋ ಏನೋ ಎಂದು ಯಾರಾದರೂ ಇನ್ನು ಮುಂದೆ ಸಂಶೋಧಿಸಿ ಹೇಳಿದರೆ ಆಶ್ಚರ್ಯವಾಗದು.

ಸುಮಾರು ಕ್ರಿ.ಶ ೧೧೪೦ ರಲ್ಲಿದ್ದಿರಬಹುದಾದ ಕನ್ನಡಕವಿ ಕರ್ಣಪಾರ್ಯನು ಬರೆದ "ನೇಮಿನಾಥ ಪುರಾಣ"ದಲ್ಲಿ ಕೃಷ್ಣಾವತಾರದ ಕಥೆಯೂ ಪಾಂಡವರ ಕಥೆಯೂ ಭಾರತ ಯುದ್ಧದ ಕಥೆಯೂ ಬಂದಿವೆ. ಈ ಕಥೆಗಳ ಮೂಲ ಆಕರಗಳು ಸಂಸ್ಕೃತದಲ್ಲಿದ್ದದ್ದು ಸುಪ್ರಸಿದ್ಧ, ಕ್ರಿ.ಶ ೧೧೪೫ರಲ್ಲಿದ್ದಿರಬಹುದಾದ ದುರ್ಗಸಿಂಹನೆಂಬ ಕನ್ನಡ ಕವಿಯು ಸಂಸ್ಕೃತ ಪಂಚತಂತ್ರವನ್ನಾಧರಿಸಿ ಪದ್ಯಕಾವ್ಯವನ್ನು ಬರೆದನು. ಇದರ ರೂಪವೂ ಚಂಪುವೇ. ಈತನಾದರೂ ವಸುಭಾಗ ಭಟ್ಟನ ಮೂಲ ಕೃತಿಯನ್ನು ಸಂಸ್ಕೃತದಿಂದ ತೆಗೆದುಕೊಂಡು ಕನ್ನಡದಲ್ಲಿ ಹೊಸತಾಗಿ ತೋರುವಂತೆ ರಚಿಸಿದನು. ಕ್ರಿ.ಶ ೧೧೬೦ರಲ್ಲಿದ್ದ ಚೆನ್ನಬಸವಕವಿ ಬರೆದ ರುದ್ರಭಾರತದಲ್ಲಿ ನಡುನಡುವೆ ಸಂಸ್ಕೃತದಿಂದ ತೆಗೆದುಕೊಂಡು ಕನ್ನಡದಲ್ಲಿ ಹೊಸತಾಗಿ ತೋರುವಂತೆ ರಚಿಸಿದನು. ಕ್ರಿ.ಶ ೧೧೬೦ರಲ್ಲಿದ್ದ ಚೆನ್ನಬಸವಕವಿ ಬರೆದ ರುದ್ರಭಾರತದಲ್ಲಿ ನಡುನಡುವೆ ಸಂಸ್ಕೃತ ಶ್ಲೋಕಗಳು ಉದಾಹೃತವಾಗಿರುವುದು ರಾಘವಾಂಕನು ತಾನು "ಉಭಯ ಕವಿ ಕಮಲ ರವಿ" ಎಂದು ಕೊಂಡದ್ದನ್ನು ನೆನಪಿಗೆ ತರುತ್ತದೆ. ನಮ್ಮ ಕನ್ನಡ ಕವಿಗಳನೇಕರು ಈವರೆಗೂ ಸಂಸ್ಕೃತ ಕನ್ನಡಗಳೆರಡನ್ನೂ ಬಲ್ಲವರಾಗಿದ್ದಾರೆ ಎಂಬುದು ಅವರ ಕನ್ನಡ ಶೈಲಿಯಲ್ಲಿ ಸ್ಪಷ್ಟವಾಗಿ ಗೊತ್ತಾಗುತ್ತದೆ. ಡಾ.ಕೆ.ವಿ.ಪುಟ್ಟಪ್ಪನವರ ಹಾಗೂ ಕವಿ ಪು.ತಿ.ನರಸಿಂಹಾಚಾರ್ಯರ ಕೃತಿಗಳನ್ನು ಓದಿ ಈ ಮಾತಿಗೆ ನಿದರ್ಶನಗಳನ್ನು ಕಂಡುಕೊಳ್ಳಬಹುದು. ೧೧೭೦ರಲ್ಲಿದ್ದ ನೇಮಿಚಂದ್ರನು ಬರೆದ "ಲೀಲಾವತಿ" ಎಂಬ ಕಾವ್ಯವು ಕಥಾನಿರೂಪಣೆಯಲ್ಲಿ ಸುಬಂಧು ಸಂಸ್ಕೃತದಲ್ಲಿ ಬರೆದ "ವಾಸವದತ್ತೆ"ಯ ಕಥೆಯನ್ನು ಹೋಲುತ್ತದೆ.

ಕ್ರಿ.ಶ ೧೧೬೫ರಲ್ಲಿದ್ದ ರಾಘವಾಂಕನೆಂಬ ಪ್ರಸಿದ್ಧ ಕವಿಯು ಬರೆದ ವಾರ್ಧಕ ಷಟ್‌ಪದಿಯ "ಹರಿಶ್ಚಂದ್ರ ಕಾವ್ಯ" ಎಂಬ ಮಹಾಕೃತಿಗೆ ಸಂಸ್ಕೃತದ ಹರಿಶ್ಚಂದ್ರೋ ಪಾಖ್ಯಾನ"ವು ಆಧಾರ. ಅವನ ಕನ್ನಡ ಬಹಳ idiomatic ಸಹಜ ಮೇಳನುಡಿಗಳಿಂದ ಕೂಡಿದ್ದು ಎಂದು ಹೆಸರಾಗಿದೆ. ಆದರೂ ಅವನ ಕಾವ್ಯದ ಮೊದಲನೆಯ ಪದವು "ಶ್ರೀಪತಿಗೆ" ಎಂಬುದಾಗಿದೆ. "ಶ್ರೀಪತಿಗೆ ಸೊಬಗನ್" ಎಂದು ಅವನು ಆರಂಭಿಸಿದಂತೆಯೇ ಆ ಪದ್ಯದಲ್ಲಿ (ಇಡಿ ಕಾವ್ಯದಲ್ಲಿರುವಂತೆ) ೧೦೦ಕ್ಕೆ ೫೦ರಷ್ಟು ತತ್ಸಮ ಅಥವಾ ಸಂಸ್ಕೃತ ಪದಗಳನ್ನು ಬಳಸಿದ್ದಾನೆಂದು ಧಾರಾಳವಾಗಿ ಹೇಳಬಹುದು. ಅವನು ತನ್ನನ್ನು 'ಉಭಯ ಕವಿ ಕಮಲ ರವಿ" ಎಂದು ಹೇಳಿಕೊಂಡಿರುವುದನ್ನು ಪರಾಮರ್ಶಿಸಿದರೆ ಸಂಸ್ಕೃತದಲ್ಲಿಯೂ

ಅವನು ಕಾವ್ಯವನ್ನು ರಚಿಸಿರಬಹುದೆಂದು ಭಾಸವಾಗುತ್ತದೆ. ಹರಿಶ್ಚಂದ್ರ ಕಾವ್ಯದ ಒಂದು ಪ್ರತಿಯ ಆದಿಭಾಗದಲ್ಲಿರುವ ಗದ್ಯವು ಇಂತಿದೆ.

"ಇದು ಸಮಸ್ತಕಳಾಧರ ಕ್ರಮನಿಷ್ಠ ಸಂಕ್ರಂದನಾದಿ ಸುರನಿಕರ ಮಣಿಮಕುಟ ಮಯೂಖ ಮಾಲಾಪುಂಜ ರಂಜಿತ ಚರಣ ಕಿಂಜಲ್ಕ ಮಂಜರೀ ಪಿಂಜರಿತ ದಿಶಾವಲಯಂ ಸಕಲದೈವ ದೀಕ್ಷಾಕರ್ತೃ ನಿಖಿಲದೈವ ರಕ್ಷಾದಕ್ಷ ದೈನ್ಯದೈವ ಶರಣಾಗತ ವಜ್ರಪಂಜರ ದರ್ಪಿಷ್ಠ ದೈವಸರ್ಪ ಮಯೂರ ಗರ್ವಿತಗರ್ವಶಾಪಹರಣ ಸಮಸ್ತ ದೈವ ಸಾರ್ವಭೌಮನೆನಿಪ ಪಂಪಾಧೀಶ್ವರ ವಿರೂಪಾಕ್ಷ ವರ್ಣನಮಾಗೆ ಸರಸಕವಿ ಸಾರ್ವಭೌಮಂ ಚತುರ ಕವಿ ಚತುರ್ ಮುಖಂ ಭಾವಕವಿ ಭಾಳಲೋಚನಂ ವರ್ಣಕ ಕವಿ ವರ್ಣಾವತಂಸಂ ವಸ್ತುಕ ಕವಿ ಮಸ್ತಕ ನ್ಯಸ್ತಹಸ್ತಂ ಅದಟಕವಿ ಮಾನಮರ್ದನಂ ಗರ್ವಿತಕವಿ ಗಿರಿವಜ್ರದಂಡಂ ಉಭಯಕವಿ ಶರಭ ಭೇರುಂಡಂ ವರ್ತಮಾನಕವಿ ವೇಶ್ಯಾಭುಜಂಗಂ ಕರ್ಣಾಟಕಾವ್ಯ ಲಕ್ಷಣದೀಕ್ಷಾಚಾರ್ಯಂ ಶಿವಯೋಗ ಚಕ್ರೇಶ್ವರ ಲೋಕಾರಾಧ್ಯ ಸಾಕಾರ ಸುಧರ್ಮ ಮರ್ತ್ಯಲೋಕದ ಮಹಾದೇವನೆನಿಪ ಹಂಪೆಯ ಹರಿಹರ ದೇವರ ಕುಮಾರನೆನಿಪ ಉಭಯಕವಿ ಕಮಲಾದಿತ್ಯ ಹಂಪೆಯ ರಾಘವಾಂಕ ವರ್ಣನವಪ್ಪ ಹರಿಶ್ಚಂದ್ರ ಪ್ರಬಂಧಂ"

ಮತ್ತೊಂದು ಪ್ರತಿಯ ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ.

"ಇಂತೀ ಪಂಪಾಪುರದ ವಿರೂಪಾಕ್ಷಲಿಂಗದಾ ಚರಣ ನೀರಜ ಗಂಧಸಿಂಧೂರ ಪಾವನ ಭ್ರಮರನೆನಿಪ ಅದಟಕವಿ ಚೌದಂತ ಹಂಪೆಯ ರಾಘವಾಂಕ ವಿರಚಿತಮಪ್ಪ ಹರಿಶ್ಚಂದ್ರ ಚಾರಿತ್ರದೊಳ್"

"ಇವನ ಪ್ರಬಂಧವು ಪ್ರೌಢವಾಗಿಯೂ ಅರ್ಥಗಾಂಭೀರ್ಯವುಳ್ಳದಾಗಿಯೂ ದೇಶ್ಯ ಪದ ಭೂಯಿಷ್ಠವಾಗಿಯೂ ಇದೆ. ಷಟ್ಪದಿ ಗ್ರಂಥಗಳನ್ನು ಬರೆವುದಕ್ಕೆ ಈತನೇ ಆದಿಕವಿಯೆಂದು ವೀರಶೈವರ ಗ್ರಂಥಗಳಲ್ಲಿ ಹೇಳಿದೆ" ಎಂದವರು ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹಾದೂರ್ ಆರ್ ನರಸಿಂಹಾಚಾರ್ಯರು.

ಕ್ರಿ.ಶ ೧೨೦೯ರಲ್ಲಿದ್ದನೆನ್ನಲಾಗಿರುವ ಪ್ರಸಿದ್ಧ ಕನ್ನಡ ಕವಿ ಜನ್ನನು ಬರೆದ "ಯಶೋಧರ ಚರಿತೆ"ಗೆ ಸಂಸ್ಕೃತದಲ್ಲಿರುವ ವಾದಿರಾಜನ ಯಶೋಧರಚರಿತೆಯು ಆಧಾರ ಎಂದು ಪ್ರೊ ವಿ. ಸೀತಾರಾಮಯ್ಯನವರು ಹೇಳಿದ್ದಾರೆ. ೧೨೫೪ರಲ್ಲಿದ್ದ ಮಹಾಬಲ ಕವಿ ಬರೆದ "ನೇಮಿನಾಥ ಪುರಾಣ"ದಲ್ಲಿ ಸಂಸ್ಕೃತ ಮೂಲದ ಹರಿವಂಶ ಕುರುವಂಶಗಳ ಕಥೆಗಳನ್ನು ಹೇಳಲಾಗಿದೆ. ೧೨೭೫ರಲ್ಲಿದ್ದ ಕನ್ನಡ ಕವಿ ಕುಮುದೇಂದುವು "ಕುಮುದೇಂದು ರಾಮಾಯಣ"ವನ್ನೂ ೧೩೦೦ರಲ್ಲಿದ್ದ ಚೌಂಡರಸನು "ಅಭಿನವ ದಶಕುಮಾರಚರಿತೆ"ಯನ್ನೂ ಬರೆದರು. ಈ ಎರಡರಲ್ಲೂ ಮೂಲ ಸಂಸ್ಕೃತ ಗ್ರಂಥಗಳಲ್ಲಿಲ್ಲದ ಕನ್ನಡ ನವ್ಯತೆ ಇರುವುದು ಸಹಜವಾಯಿತು. ೧೪೧೦ರಲ್ಲಿದ್ದ ದೇವ ರಾಜನೆಂಬ ಕನ್ನಡ ಕವಿಯು ಸಂಸ್ಕೃತದ ಅಮರುಕ ಶತಕದ ಭಾಷಾಂತರವನ್ನು ಪರಿವರ್ಧಿನೀ ಷಟ್ಪದಿಯಲ್ಲಿ ಮಾಡಿದನು. ೧೪೨೪ರ ಕಾಲದ ಭಾಸ್ಕರ ಕವಿಯು ೧೦೦೦ ಭಾಮಿನೀಷಟ್ಪದಿಗಳುಳ್ಳ ೧೮ ಸಂಧಿಗಳಲ್ಲಿ ವಾದೀಭಸಿಂಹಸೂರಿ ಸಂಸ್ಕೃತದಲ್ಲಿ ರಚಿಸಿದ್ದ "ಜೀವಂಧರ ಚರಿತೆ"ಯನ್ನು

ಚೆನ್ನಾಗಿ ಕನ್ನಡಿಸಿದನು. ೧೩ನೆಯ ಶತಮಾನಕ್ಕೆ ಸ್ವಲ್ಪ ಹಿಂದೆ ಅಥವಾ ಮುಂದೆ ಇದ್ದನೆನ್ನಲಾದ ಕುಮಾರವ್ಯಾಸನು ಸಂಸ್ಕೃತಭಾರತದ ಮೊದಲ ೧೦ ಪರ್ವಗಳನ್ನು ಯಥೋಚಿತ ಬದಲಾವಣೆಗಳೊಡನೆ, ಕೃಷ್ಣನ ಪಾತ್ರಕ್ಕೆ ಅತಿಪ್ರಾಧಾನ್ಯವನ್ನು ಕೊಟ್ಟು ಭಾಮಿನೀ ಷಟ್ಪದಿಯಲ್ಲಿ ಬರೆದದ್ದು ಸುಪ್ರಸಿದ್ಧ. ಅವನಿಗೆ ಸಮಕಾಲೀನ ಎನ್ನಬಹುದಾದ ಬತ್ತಲೇಶ್ವರ ಕವಿಯು ಭಾಮಿನೀಷಟ್ಪದಿಯಲ್ಲಿ "ಕೌಶಿಕ ರಾಮಾಯಣ"ವೆಂಬ ರಾಮಾಯಣವನ್ನು ಬರೆದು ಪ್ರಸಿದ್ಧನಾದನು. ಈ ಇಬ್ಬರ ಕನ್ನಡ ಶೈಲಿಗಳೂ ನಡುಗನ್ನಡದ ಮೂಲಕ ಹಳಗನ್ನಡದ ಮೇರು ಕೃತಿಗಳ ಪ್ರಭಾವವನ್ನು ಬೀರುತ್ತವೆ. ವಾಲ್ಮೀಕಿ ರಾಮಾಯಣದ ಕಥೆಯೇ ಬತ್ತಲೇಶ್ವರ ರಾಮಾಯಣಕ್ಕೂ ಆಧಾರ. ಈತನೂ ಕುಮಾರ ವ್ಯಾಸನಂತೆಯೇ ಸಂಸ್ಕೃತದಲ್ಲಿರುವ ಮೂಲ ಗ್ರಂಥವನ್ನು ಭಾಷಾಂತರ ಮಾಡಲು ಹೋಗದೆ ತನ್ನದೇ ಆದ ವಾಕ್‌ಪ್ರೌಢಿಯಿಂದ ಕಾವ್ಯರಚನೆ ಮಾಡಿದನು. ೧೫ನೆಯ ಶತಮಾನದಲ್ಲಿ ನಾರಾಯಣ ಎಂಬ ಕನ್ನಡ ಕವಿಯು ಸಂಸ್ಕೃತ ಭಾಗವತ ಮಹಾಪುರಾಣದ ತಾತ್ಪರ್ಯವನ್ನು ನಿರೂಪಿಸುವ "ಭಾಗವತ ಸಂಹಿತಾರ್ಥ" ಎಂಬ ಗದ್ಯಕಾವ್ಯವನ್ನು ಬರೆದನು. ಅದೇ ಶತಮಾನದಲ್ಲಿ ನರಹರಿ ಎಂಬ ಕನ್ನಡ ಕವಿಯು ತೊರವೆ ರಾಮಾಯಣವನ್ನು ಬರೆದು 'ಕುಮಾರವಾಲ್ಮೀಕಿ' ಎಂದು ಪ್ರಸಿದ್ಧನಾದನು. ಕ್ರಿ.ಶ ೧೫೧೦ರಲ್ಲಿದ್ದ ತಿಮ್ಮಣ್ಣ ಕವಿಯು ಸಂಸ್ಕೃತ ಭಾರತದ ಉತ್ತರ ಭಾಗವನ್ನು ಎಂದರೆ ಶಾಂತಿ ಪರ್ವವನ್ನು ಮೊದಲಗೊಂಡು ೭ ಪರ್ವಗಳ ಕಥೆಯನ್ನು ಭಾಮಿನಿಯಲ್ಲಿ ಬರೆದು ಕೀರ್ತಿಶೇಷನಾದ. ಇದೂ ಮೂಲದ ಅಕ್ಷರಾರ್ಥದ ಭಾಷಾಂತರವಲ್ಲ. ೧೫೩೦ರಲ್ಲಿದ್ದ ಚೌಟುವಿಠಲನಾಥನು ಸಂಸ್ಕೃತದಲ್ಲಿರುವ ಭಾಗವತ–ಭಾರತಗಳ ಸ್ವಲ್ಪ ಭಾಗಗಳನ್ನು ತನ್ನದೇ ಆದ ರೀತಿಯಿಂದ ಕನ್ನಡದಲ್ಲಿ ಬರೆದನು. "ನಿತ್ಯಾತ್ಮ ಶುಕಯೋಗಿ" ಎಂಬುದು ಇವನ ಬಿರುದು. ಇವನ ಎರಡು ಕಾವ್ಯಗಳೂ ಭಾಮಿನೀ ಷಟ್‌ಪದಿಯಲ್ಲಿವೆ. ೧೫೫೦ರಲ್ಲಿದ್ದನೆನ್ನಲಾದ ಸಾಳ್ವ ಕವಿಯು ಮಹಾಭಾರತದ ೧೬ ಪರ್ವಗಳನ್ನು ಕನ್ನಡದ ಭಾಮಿನೀ ಷಟ್‌ಪದಿಯಲ್ಲಿ ಬರೆದು ಪ್ರಸಿದ್ಧನಾದನು. ಈತನೂ ಕನ್ನಡ ಪರಂಪರೆಯಂತೆ ಸ್ವತಂತ್ರ ಪ್ರತಿಭೆಯನ್ನೇ ಅದರಲ್ಲಿ ಮೂಡಿಸಿದನು. ಇದರಿಂದ ಕಂಡು ಬರುವುದೇನೆಂದರೆ "ತಿಣುಕಿದನು ಫಣಿರಾಯ ಭಾರತ ಕಥೆಯ ಭಾರದೊಳಂದು" ಎಂದು ಅಣಕವಾಡಬಹುದಾಗಿದೆ. ಆದರೆ ಅಂಥ ಅಣಕ ನಿಜವಾಗಿ ಒಪ್ಪದು. ಏಕೆಂದರೆ ಕನ್ನಡದ ರಾಮಾಯಣದ ಕವಿಗಳಂತೆಯೇ ಭಾರತದ ಕವಿಗಳಾದರೂ ತಮ್ಮ ವಿಶಿಷ್ಟ ವರ್ಣನಾ ವೈಖರಿಗಳಿಂದ ರಸಿಕರನ್ನು ಮೆಚ್ಚಿಸಿದ್ದಾರೆ.

ಮುಂದೆ ಕಾಣುವುದು ಚಾಯಣಭಾರತ. ಇದೊಂದು ಅಸಮಗ್ರಪ್ರತಿ. ವಾರ್ಧಕದಲ್ಲಿ ಚಾಯಣನು ಸುಮಾರು ೧೫೫೦ರಲ್ಲಿ ಬರೆದಿರಬಹುದಾಗಿದೆ. ಇದು ಸಾಕಷ್ಟು ಪ್ರಸಿದ್ಧವಲ್ಲ. ಇವನಿಗೇನೋ "ಸುಕುಮಾರ ಭಾರತಿ" ಎಂಬ ಬಿರುದು ಅಂದು ದೊರಕಿತ್ತಂತೆ. ಅದೇ ಪ್ರಕಾರ ಮಹಾಭಾರತದ ಶಾಂತಿಪರ್ವದ ಆದಿಭಾಗದಲ್ಲಿ ಹೇಳಿರುವ ಕರ್ಣ ವೃತ್ತಾಂತವನ್ನು ೧೬೦೦ರಲ್ಲಿದ್ದ ಪ್ರಧಾನಿ ತಿರುಮಲಾರ್ಯನು ಸಾಂಗತ್ಯದ ೪ ಸಂಧಿಗಳಲ್ಲಿ ಬರೆದಿದ್ದಾನೆ. ಸಂಸ್ಕೃತ ಮಹಾಭಾರತದ ಶಾಂತಿಪರ್ವದ ಆದಿಭಾಗವು ಇದಕ್ಕೆ ಆಕರ. ೧೬೨೦ರ ಜಕ್ಕಭೂಪಾಲನೂ ಭಾರತ ಕಥಾ ಸಂಗ್ರಹವನ್ನು ಬರೆದಿದ್ದಾನೆ. ೧೬೫೦ರಲ್ಲಿ ತಿರುಮಲೆ

ವೈದ್ಯನು ಉತ್ತರ ರಾಮಾಯಣವನ್ನು ರಚಿಸಿದ್ದಾನೆ. ಅದರಲ್ಲಿ ಭಾಮಿನೀ ಷಟ್ಪದಿಯಲ್ಲಿ ಬರೆದ ೧೦ ಸಂಧಿಗಳಿವೆ.

ಮಹಾಭಾರತಾಂತರ್ಗತವಾದ ಭಗವದ್ಗೀತೆಯನ್ನೇ ಪ್ರತ್ಯೇಕವಾಗಿ ತೆಗೆದುಕೊಂಡು ೧೯ ಅಧ್ಯಾಯಗಳಲ್ಲಿ ೭೩೭ ಭಾಮಿನೀ ಷಟ್ಪದಿಗಳಲ್ಲಿ ಬರೆದ ವಿಶೇಷವು ೧೬೫೦ರಲ್ಲಿದ್ದ ನಾಗರಸನ ಕಾವ್ಯದಲ್ಲಿದೆ. ಅನಂತರ ಅವನ ಸಮಕಾಲೀನನಾಗಿರಬಹುದಾದ ತಿಮ್ಮರಸನು ಮಾರ್ಕಂಡೇಯ ರಾಮಾಯಣವನ್ನು ಬರೆದಿದ್ದಾನೆ. ಅದಿರುವುದು ೩೦ ಸಂಧಿಗಳ ೧೫೦೦ ವಾರ್ಧಕ ಷಟ್‌ಪದಿಗಳಲ್ಲಿ. ಹಾಗೇ ಕನ್ನಡಕವಿಯೋಗೀಂದ್ರನೆಂಬಾತನು ೧೬೫೦ರಲ್ಲಿ ಉತ್ತರರಾಮಾಯಣವನ್ನು ಕುಸುಮಷಟ್ಪದಿಯಲ್ಲಿ ಬರೆದನು. ಅದಕ್ಕೆ ೪೮ ಸಂಧಿಗಳಿವೆ. ೧೬೫೫ರಲ್ಲಿದ್ದ ಮಹಾಕವಿ ಷಡಕ್ಷರದೇವನು ಕನ್ನಡ ಮಹಾಕಾವ್ಯಗಳ ಜೊತೆಗೆ "ಕವಿಕರ್ಣರಸಾಯನ"ವೆಂಬ ಸಂಸ್ಕೃತಗ್ರಂಥವನ್ನು ಬರೆದುದಾಗಿ ಹೇಳಿಕೊಂಡಿದ್ದಾನೆ. ಈ ಕವಿಯು "ಉಭಯಕವಿ ಕಮಲರವಿ." ತತ್ಸಮ ಬಾಹುಲ್ಯದ ದೆಸೆಯಿಂದ ಸಂಸ್ಕೃತದ ಸರಿಯಾದ ಜ್ಞಾನವಿಲ್ಲದವರು ಇವನು ಕನ್ನಡದಲ್ಲಿ ಬರೆದ" ರಾಜಶೇಖರವಿಲಾಸ" "ಬಸವರಾಜ ವಿಜಯ" ಮತ್ತು "ಶಬರಶಂಕರ ವಿಲಾಸ"ಗಳನ್ನು ಮಾತನಾಡಿಸಲಾರರೆಂಬುದು ಅಪ್ರತಿಹತ ಸತ್ಯ.

ಕ್ರಿ.ಶ ೧೬೭೨ರಲ್ಲಿದ್ದ ಚಿಕ್ಕುಪಾಧ್ಯಾಯನ ೨೮ ಕನ್ನಡ ಕೃತಿಗಳಲ್ಲಿ ಸಂಸ್ಕೃತ ಮೂಲದ "ಅಮರುಕ ಶತಕ" ಸಾಂಗತ್ಯದಲ್ಲಿ ಬರೆದ ಶೃಂಗಾರ ಶತಕ ಮತ್ತು ವಿಷ್ಣುಪುರಾಣಗಳು ಗಣ್ಯ. ಜೊತೆಗೆ ಸಂಸ್ಕೃತದಲ್ಲಿರುವ ಬ್ರಹ್ಮಾಂಡ ಪುರಾಣದ ಪುಣ್ಯ ಕ್ಷೇತ್ರಮಾಹಾತ್ಮ್ಯವನ್ನೂ ಇವನು ಕನ್ನಡಿಸಿದ್ದಾನೆ. ಹಾಗೇ ಆ ಪುರಾಣದ "ಶ್ರೀರಂಗ ಮಹಾತ್ಮ್ಯೆ"ವನ್ನು ಕನ್ನಡಗದ್ಯದಲ್ಲೀತ ಬರೆದನು. ಸಂಸ್ಕೃತ ಹರಿವಂಶವನ್ನಾಧರಿಸಿ ಅಶ್ವಮೇಧಿಕ ಪರ್ವದಲ್ಲಿ ಹೇಳಿದ ಶೇಷಧರ್ಮವನ್ನೂ ಈ ಕವಿಯು ಚಿಕ್ಕದೇವರಾಜನ ಸಂತೋಷಾರ್ಥವಾಗಿ ಕನ್ನಡಿಸಿದನು. ೭೦೦೦ ಶ್ಲೋಕಗಳಿಂದ ಕೂಡಿದ ಜನಪ್ರಿಯ "ಶುಕಸಪ್ತತಿ" ಗ್ರಂಥವನ್ನು ಇವನು ಕನ್ನಡಕ್ಕಿಳಿಸಿದ್ದು ವಿಶೇಷವಾಗಿ ಉಲ್ಲೇಖನೀಯ. ಇವನ "ಪಶ್ಚಿಮ ರಂಗ ಮಹಾತ್ಮ್ಯ"ವೂ ಬ್ರಹ್ಮಾಂಡ ಪುರಾಣವನ್ನು ಆಕರವಾಗಿ ಉಳ್ಳದ್ದು. "ಕಮಲಾಚಲ ಮಹಾತ್ಮ್ಯ"ಕ್ಕೆ ಭವಿಷ್ಯೋತ್ತರ ಪುರಾಣವೂ" ಹಸ್ತಿಗಿರಿ ಮಹಾತ್ಮ್ಯ"ಕ್ಕೆ ಬ್ರಹ್ಮಾಂಡ ಪುರಾಣವೂ "ರುಕ್ಮಾಂಗದ ಚರಿತೆ"ಗೆ ನಾರದೀಯ ಪುರಾಣವೂ ಆಕರಗಳು. ಯಾದವಗಿರಿ ಮಹಾತ್ಮ್ಯದ ಸಾಂಗತ್ಯಕ್ಕೆ ನಾರದೀಯ ಪುರಾಣವೂ ಅದೇ ಪ್ರಕಾರ ಸಂಸ್ಕೃತದಲ್ಲಿರುವ ಆಕರ. ೧೬೭೭ರ ತಿಮ್ಮ ಕವಿಯೂ ಇದೇ ಮಾರ್ಗವನ್ನು ಅನುಸರಿಸಿದನು; ಹಾಗೇ ಮಲ್ಲಿಕಾರ್ಜುನ ಕವಿಯೂ ಸಂಸ್ಕೃತ ಪುರಾಣಗಳಿಂದ ಆಯ್ದು "ಶ್ರೀ ರಂಗ ಮಹಾತ್ಮ್ಯ"ವನ್ನು ಕನ್ನಡದಲ್ಲಿ ಬರೆದನು.

ಕ್ರಿ.ಶ ೧೬೮೦ರಲ್ಲಿದ್ದ ಸಿಂಗರಾರ್ಯನೆಂಬ ಕನ್ನಡ ಕವಿ "ಮಿತ್ರಾವಿಂದಾ ಗೋವಿಂದ" ಎಂಬ ಹೆಸರಿನಲ್ಲಿ ಸಂಸ್ಕೃತದ "ರತ್ನಾವಲೀ" ನಾಟಕವನ್ನು ಅನುಸರಿಸಿ ಬರೆದದ್ದು ಐತಿಹಾಸಿಕ ಪ್ರಾಮುಖ್ಯವನ್ನು ಪಡೆಯಿತು. ಇದನ್ನು ಕನ್ನಡದ ಮೊದಲ ನಾಟಕ ಎಂದರು ನರಸಿಂಹಾಚಾರ್ಯರು.

ಕನ್ನಡದ ಅತ್ಯಂತ ಜನಪ್ರಿಯ ಕವಿಗಳಲ್ಲಿ ಒಬ್ಬನಾದ ಲಕ್ಷ್ಮೀಶನು ಕ್ರಿ.ಶ ೧೭೦೦ರಲ್ಲಿ "ಜೈಮಿನಿ ಭಾರತ"ವನ್ನು ಘನ ಗಂಭೀರವಾದ ವಾರ್ಧಕ ಷಟ್‌ಪದಿಯಲ್ಲಿ ಬರೆದನು. ಇದಕ್ಕೆ ಸಂಸ್ಕೃತದ ಜೈಮಿನಿ ಭಾರತದ ಅಶ್ವಮೇಧಿಕ ಪರ್ವವು ಆಧಾರ. "ಪ್ರಾಯಿಕವಾಗಿ ಇದನ್ನು ಓದದ ಕನ್ನಡಿಗರೇ ಇಲ್ಲ" ಎಂದು ಕ್ರಿ.ಶ ೧೯೧೯ರಲ್ಲಿ ದಿ.ಆರ್. ನರಸಿಂಹಾಚಾರ್ಯರು ತಮ್ಮ "ಕನ್ನಡ ಕವಿ ಚರಿತೆ"ಯ ಎರಡನೆಯ ಸಂಪುಟದ ಪೀಠಿಕೆಯಲ್ಲಿ ಹೇಳಿದ್ದು ಅಂದಿನ ಐತಿಹಾಸಿಕ ಸತ್ಯ. ಇಂದದು ಸುಳ್ಳಾಗದು.

ಆಮೇಲೆ ೧೭೦೦ರಲ್ಲಿದ್ದ ಬಸವ ರಾಜೇಂದ್ರ ಎಂಬ ಕನ್ನಡ ಕವಿಯ ೨೨ ಅಧ್ಯಾಯಗಳ "ಮಹಾ ವಿಭೂತಿ ಮಹಿಮೆ"ಗೆ ಸಂಸ್ಕೃತದ ಸ್ಕಾಂದ ಪುರಾಣದ ಶಂಕರ ಸಂಹಿತೆಯ ಶಿವ ರಹಸ್ಯ ಕಾಂಡಾಂತರ್ಗತವಾದ ಉಪದೇಶಕಾಂಡವು ಆಕರ. ಅದೇ ಕಾಲದಲಿದ್ದ ಕನ್ನಡ ಕವಿ ಕೃಷ್ಣನು ಸಂಸ್ಕೃತ ಭಾಗವತದ ದಶಮಸ್ಕಂಧದ ಕಥೆಯನ್ನು ಸುಂದರವಾದ ಕನ್ನಡ ಭಾಮಿನಿಯಲ್ಲಿ ಸ್ವತಂತ್ರವಾಗಿ ಬರೆದನು. ಹಾಗೇ ವೆಂಕಟಾಚಾರ್ಯ ಶಿಷ್ಯನೆಂಬ ಕವಿಯು ಸಂಸ್ಕೃತ ಮೂಲವುಳ್ಳ "ಯಾದವಗಿರಿ ಮಾಹಾತ್ಮ್ಯ" ವೆಂಬ ಕಾವ್ಯವನ್ನು ಬರೆದನು. ಅದೇ ಕಾಲದ ಅದ್ವೈತಾನಂದ ಕವಿಯ "ಭಗವಚ್ಚರಿತ್ರೆ"ಗೆ ಸಂಸ್ಕೃತದ ಭಾಗವತಪುರಾಣವು ಆಧಾರವೆನ್ನಬಹುದು.

ಕ್ರಿ.ಶ ೧೮೨೩ರಲ್ಲಿದ್ದ ಲಕ್ಷ್ಮಕವಿಯು ವಾರ್ಧಕ ಷಟ್ಪದಿಯಲ್ಲಿ ಸಂಸ್ಕೃತ ಭಾರತದ ಕನ್ನಡಾವತಾರವನ್ನು ಬರೆದನು. ಇವನ "ರುಕ್ಮಾಂಗದ ಚರಿತೆ"ಗೆ ನಾರದೀಯ ಪುರಾಣವು ಆಕರ. ಇದರ ೯೫೩ ವಾರ್ಧಕಗಳನ್ನು ೧೭ ಸಂಧಿಗಳಿಂದ ವರ್ಗೀಕರಿಸಲಾಗಿದೆ. ಕನ್ನಡದ ದೇವ ಕವಿಯು ೧೭೨೫ರಲ್ಲಿ ಸಂಸ್ಕೃತದ ಕ್ಷೇಮೇಂದ್ರ ಕವಿಯ ಬೃಹತ್ಕಥಾಮಂಜರಿಯ ೧೮ನೆಯ ಲಂಬಕದ ಬತ್ತೀಸ ಪುತ್ತಳೀ ಕಥಾ ಪ್ರಬಂಧವನ್ನು ಕನ್ನಡಿಸಿದನು. ಇದೊಂದು ಸವಿಗನ್ನಡ ಗದ್ಯ. ೧೭೨೫ರ ಸುಮಾರಿನಲ್ಲಿದ್ದ ವೀರಶೈವ ಮಹಾದೇವ ಕವಿಯು ಬ್ರಹ್ಮೋತ್ತರ ಖಂಡವನ್ನು ಕನ್ನಡ ಭಾಮಿನಿಯಲ್ಲಿ ಬರೆದನು. ೧೭೪೦ರಲ್ಲಿ ಕಳಲೆ ನಂಜರಾಜ ಕವಿಯು ಭವಿಷ್ಯೋತ್ತರ ಪುರಾಣೋಕ್ತವಾದ ಹರದತ್ತಾಚಾರ್ಯ ಮಹಾತ್ಮ್ಯವನ್ನು ಕನ್ನಡಿಸಿದನು; ಸ್ಕಾಂದ ಪುರಾಣದಲ್ಲಿಯ ೯೦ನೆಯ ಅಧ್ಯಾಯದ ಭಾಷಾಂತರವನ್ನು ೫೨ ಅಧ್ಯಾಯಗಳಲ್ಲಿ ಮಾಡಿ ಅದಕ್ಕೆ "ಭಕ್ತವಿಲಾಸ ದರ್ಪಣ"ವೆಂದು ಕರೆದದ್ದೂ ಅಲ್ಲದೆ, ಪದ್ಮ ಪುರಾಣಾಂತರ್ಗತವಾದ ಶಿವಗೀತೆಯನ್ನು ೧೨ ಅಧ್ಯಾಯಗಳಲ್ಲಿ ಭಾಷಾಂತರಿಸಿದನು.

ಸಂಸ್ಕೃತದ ರಾಮಾಯಣ ಮಹಾಭಾರತಗಳನ್ನು ಬಿಟ್ಟರೆ ಅದರಲ್ಲಿ ಪ್ರಸಿದ್ಧವಾಗಿದ್ದ ಅಷ್ಟಾದಶ ಪುರಾಣಗಳಲ್ಲಿ ಬಂದ ಹಲವಾರು ಕಥೆಗಳನ್ನು ಭಾವಾಂತರವಾಗಿಯೋ ಭಾಷಾಂತರವಾಗಿಯೋ ಕನ್ನಡಿಸಿದ ಕರ್ಣಾಟಕಸ್ಥ ಕವಿಗಳ ಈವರೆಗಿನ ಪಂಕ್ತಿಗೆ "ಕಮಲಾಚಲ ಮಾಹಾತ್ಮ್ಯ"ವನ್ನು ಭವಿಷ್ಯೋತ್ತರ ಪುರಾಣದಿಂದ ಆಯ್ದು ಕನ್ನಡಿಸಿದ ಶ್ರೇಯಸ್ಸು ೧೭೪೦ರ ಸುಮಾರಿನಲ್ಲಿದ್ದ ಮೈಸೂರರಸರ ಬಳಗದ ಗೋಪಾಲರಾಜ ಕವಿಗೆ ಸಲ್ಲುತ್ತದೆ. ೧೭೫೦ರಲ್ಲಿ ಚಂದ್ರಶೇಖರ ಮತ್ತು ಪದ್ಮನಾಭ ಎಂಬಿಬ್ಬರು ಕಬ್ಬಿಗರು ಸೇರಿ ೩೭ ಸಂಧಿಗಳಿಂದ ಒಟ್ಟು ೫೨೬೮ ಪದ್ಯಗಳನ್ನುಳ್ಳ ಜೈನ ಸಾಂಪ್ರದಾಯಿಕ ಸಾಂಗತ್ಯದಲ್ಲಿ "ರಾಮಚಂದ್ರ ಚರಿತ್ರ"ಎಂಬ

ರಾಮಾಯಣವನ್ನು ರಚಿಸಿದರು. ಆದುದರಿಂದ ರಾಮಾಯಣದ ಆಕರ್ಷಕತೆ ಕರ್ಣಾಟಕದಲ್ಲಿ ಅತಿಹೆಚ್ಚು ಎಂದರೆ ತಪ್ಪಾಗದು. ಅದೇ ಸುಮಾರಿಗೆ, ಬಬ್ಬೂರು ರಂಗಕವಿಯು ಹಿಂದೆ ಹೇಳಿದ ವಾಲ್ಮೀಕಿ ರಾಮಾಯಣ, ಕೌಶಿಕ ರಾಮಾಯಣ ಎಂಬವುಗಳಿಂದ ಭಿನ್ನವಾದ "ಪರಶುರಾಮ ರಾಮಾಯಣ"ವನ್ನು ೪೩ ಸಂಧಿಗಳಲ್ಲಿ ೧೫೪೩ ಪದ್ಯಗಳುಳ್ಳ ವಾರ್ಧಕದಲ್ಲಿ ಬರೆದನು. ಆದರಿದು ಪರಶುರಾಮ ಹೇಳಿದ ಅಥವಾ ಹೇಳಿಸಿದ ರಾಮಾಯಣವಲ್ಲ; ಇದಕ್ಕೆ "ಪರಶು ರಾಮಾಯಣ" ಎಂದು ಕರೆಯುವುದು ಉತ್ತಮ. ಇದಾದರೂ ಸಂಸ್ಕೃತ ಪುರಾಣವನ್ನೇ ವಸ್ತುವಿಗೆ ಆಕರವನ್ನಾಗಿ ತೆಗೆದುಕೊಂಡಿದೆ. ಹಾಗೇ ಭಾರತಕ್ಕೆ ವಸ್ತುಋಣಿಯಾಗಿ ಕೋನಯ್ಯ ಕವಿಯು "ಕೃಷ್ಣಾರ್ಜುನ ಸಂಗರ" ಎಂಬ ಭಾಮಿನೀ ಕಾವ್ಯವನ್ನು, ೧೭೨೧ ಪದ್ಯಗಳನ್ನುಳ್ಳ ೨೭ ಸಂಧಿಗಳಲ್ಲಿ ರಚಿಸಿದನು. ಕವಯಿತ್ರಿ ಹೆಳವನ ಕಟ್ಟೆ ಗಿರಿಯಮ್ಮನು ಸಂಸ್ಕೃತದಲ್ಲಿದ್ದ ವಸ್ತುಪಾತ್ರಗಳನ್ನಾಧರಿಸಿ "ಚಂದ್ರಹಾಸನ ಕಥೆ" "ಸೀತಾ ಕಲ್ಯಾಣ" "ಉದ್ದಾಲಕನ ಕಥೆ"ಗಳೆಂಬ ಹಾಡುಗಬ್ಬಗಳನ್ನು ಬರೆದಳು. ಇದೇ ಪ್ರಕಾರ ಸಂಸ್ಕೃತ ರಾಮಾಯಣ ಗಂಗೆಯು ತಿಮ್ಮಾಮಾತ್ಯನ "ರಾಮಾಭ್ಯುದಯ ಕಥಾಕುಸುಮ ಮಂಜರಿ" ಎಂಬ ಕನ್ನಡ ರಾಮಾಯಣವನ್ನು ಕವಲು ನದಿಯನ್ನಾಗಿ ಹರಿಯಿಸಿತು. ಇದರ ಛಂದಸ್ಸು ಭಾಮಿನಿ.

೧೯ನೆಯ ಶತಮಾನದ ಪ್ರಸಿದ್ಧ ಕವಿ ಮುದ್ದಣನು ರಚಿಸಿದ್ದು "ಶ್ರೀರಾಮ ಪಟ್ಟಾಭಿಷೇಕ" ಹಾಗೂ "ರಾಮಾಶ್ವಮೇಧ". ಇವುಗಳ ಆಕರವು ಪುನಃ ಸಂಸ್ಕೃತದಲ್ಲಿರುವ ವಾಲ್ಮೀಕಿ ರಾಮಾಯಣವು. "ರಾಮಾಶ್ವಮೇಧ"ಕ್ಕೆ "ಶೇಷರಾಮಾಯಣ" ಎಂಬ ಹೆಸರೂ ಉಂಟಂತೆ. ಮೊದಲನೆಯದು ವಾರ್ಧಕ ಕಾವ್ಯ, ಎರಡನೆಯದು ಮಹಾಗದ್ಯಕಾವ್ಯ. ಸಂಸ್ಕೃತದಲ್ಲಿ ಸುಪ್ರಸಿದ್ಧನಾಗಿದ್ದ ಜಯದೇವ ಕವಿಯ ಪಾಂಚಾಲೀ ಶೈಲಿಯ "ಗೀತ ಗೋವಿಂದ" ಕಾವ್ಯವನ್ನು ವೆಂಕಟ ಕವಿಯು ಕನ್ನಡಕ್ಕೆ ಭಾಷಾಂತರಿಸಿ "ಕರ್ಣಾಟಕಾಷ್ಟಪದಿ" ಎಂಬ ಹೆಸರಿನಿಂದ ಪ್ರಕಟಿಸಿದನು. ವೃತ್ತಗಳನ್ನು ಷಟ್‌ಪದಿಗಳಿಗೂ ಗೀತಗಳನ್ನು ಹಾಡುಗಳಿಗೂ ಇಳಿಸಿದ್ದು ಈ ಗ್ರಂಥಕರ್ತನ ಚಾತುರ್ಯ. ರಾಮಸೂರಿಯೆಂಬ ಕನ್ನಡ ಕವಿ ಅದೇ ಯುಗದಲ್ಲಿ (೧೭೫೦) ಭಾರತವನ್ನಾಧರಿಸಿ "ಇಂದ್ರಕೀಲ ಚೌಪದ" ಎಂಬ ಚಿಕ್ಕ ಕಾವ್ಯವನ್ನು ಚೊಕ್ಕಟವಾಗಿ ರಚಿಸಿದನು. ಚೌಪದವೆಂಬ ಚತುಷ್ಪಾದ ಛಂದಸ್ಸು ಇಂದು ಚಟುಕುಗಳಿಗೆ ಜನಪ್ರಿಯ ಕವಚವಾಗಿದೆ. ಉದಾ: ದಿನಕರ ಚಟುಕುಗಳು.

೧೦೮೧ ಸೊಲ್ಲುಗಳಿರುವ ಕನ್ನಡ "ಮಾರ್ಕಂಡೇಯ ಪುರಾಣ"ವು ಛಂದೋಬದ್ಧವಾದ (ಅರ್ಥಾತ್ ಭಾಮಿನೀ ಷಟ್‌ಪದಿಯಲ್ಲಿರುವ) ಜ್ಯೋತಿಃಶಾಸ್ತ್ರ. ಶಾಸ್ತ್ರ ಪ್ರಕರಣದಲ್ಲಿ ಮುಂದೆ ಇದರ ಉಲ್ಲೇಖ ಬರುತ್ತದೆ. ಪುರಾಣಗಳೆಲ್ಲ ಕಾವ್ಯಗಳೇನೋ ಹೌದು, ಆದರೆ ಅವುಗಳ ಉದರೋದಧಿಯಲ್ಲಿ ಶಾಸ್ತ್ರಗಳೂ ಅಡಕವಾಗಿರುವುದನ್ನು ಮರೆಯುವಂತಿಲ್ಲ. ಹರಿದಾಸ ಕವಿಯು ಭಾಮಿನೀ ಷಟ್ಪದಿಯಲ್ಲಿ ಬರೆದ "ಮೂಲ ಬಲ ರಾಮಾಯಣ" ಎಂಬ ಕಾವ್ಯದಲ್ಲಿ ಶ್ರೀ ರಾಮನು ರಾವಣ ಕುಂಭಕರ್ಣರ ಮೂಲಬಲವನ್ನು ಸಂಹರಿಸಿದ ಕಥೆ ಬಂದಿದೆ. ಅವನ "ಸಂಕ್ಷೇಪ ಭಾಗವತ"ದಲ್ಲಿಯ ೫೩ ಭಾಮೀನಿ ಷಟ್‌ಪದಿಯಲ್ಲಿ ಆತ್ಮಾರಾಮ ಭಾಗವತದ ಸಂಕ್ಷಿಪ್ತ ರೂಪವಿದೆ.

ಸಂಸ್ಕೃತ ಭಗವದ್ಗೀತೆಯನ್ನೇ ಆರಿಸಿಕೊಂಡು ಅದರ ಭಾವಾನುವಾದ ಮಾಡಿದ ಎರಡನೆಯ ಕವಿ ನೈರಕ್ಷರಕುಕ್ಷಿ. ಅವನ ಕಾವ್ಯನಾಮದ ನಿರಹಂಕಾರಸೂಚಕತೆಯು ಇಂದಿನ (೨೫೦ ವರ್ಷಗಳ ಮೇಲಿನ) ದುರಹಂಕಾರ ಪ್ರದರ್ಶನಕ್ಕೆ ಸವಾಲಾಗಿದೆ. ಅದು ಭಾಮಿನೀ ಷಟ್‌ಪದಿಯ ೬೨೯ ನುಡಿಗಳಿಂದ ಅರ್ಥಾತ್ ೩೭೭೪ ಸಾಲುಗಳಿಂದ ಕೂಡಿದೆ.

ಮತ್ತೆ ಕನ್ನಡ ರಾಮಾಯಣ. ೧೭೫೧ರಲ್ಲಿದ್ದ ವಿಟ್ಠಲ ಕವಿ ಕನ್ನಡದಲ್ಲಿ ರಾಮಾಯಣ ಬರೆದ ಸಂಗತಿ ೧೯೨೯ರದ್ದು. ಈಗ ಅದು ಯಾಣದ ಬತ್ತಲೇಶ್ವರ ಕವಿ ಬರೆದ "ಕೌಶಿಕ ರಾಮಾಯಣ" ಎಂದು ಡಾ. ಶಿವರಾಮ ಕಾರಂತರಿಂದ ಸಿದ್ಧಮಾಡಲ್ಪಟ್ಟಿದೆ. ೧೭೭೦ರಲ್ಲಿ ವೆಂಕಾವಮಾತ್ಯನೆಂಬ ಕವಿಯು ೯೮೬೫ ವಾರ್ಧಕಗಳಲ್ಲಿ ರಾಮಾಯಣವನ್ನೂ ಹನೂಮದ್ವಿಲಾಸವನ್ನೂ ಬರೆದನು. ಇವು ಸಂಸ್ಕೃತ ಮೂಲದಿಂದ ಬರೆದ ವಾರ್ಧಕ ಭಾಮಿನೀ ಷಟ್‌ಪದಿಕಾವ್ಯಗಳು.

೧೭೭೭ರ ಪರಮದೇವನು ವಾರ್ಧಕ ಷಟ್‌ಪದಿಯಲ್ಲಿ "ತುರಂಗ ಭಾರತ" ವೆಂಬ ಕನ್ನಡ ಕಾವ್ಯವನ್ನು ಬರೆದನು. ಅದರಲ್ಲಿ ೯೬ ಸಂಧಿಗಳೂ ೪೭೨೦ ವಾರ್ಧಕ ಪದ್ಯಗಳೂ ಇವೆ. ಮಹಾಭಾರತವೇ ಇದಕ್ಕೂ ಕಥಾಕರ; ಯಥಾಪೂರ್ವ ಕನ್ನಡ ಸ್ವಂತಿಕೆಯಿಂದ ಕೂಡಿದೆ. ಆಮೇಲೆ, ದೇವಚಂದ್ರ ಜೈನನು "ರಾಮಕಥಾವತಾರ"ವನ್ನು ೧೬ ಆಶ್ವಾಸಗಳಲ್ಲಿ ಬರೆದುದು ಪಂಪರಾಮಾಯಣದ ಅನುಕರಣ ಎಂದು ಗೊತ್ತಾಗಿದೆ. ೧೮೦೦ಕ್ಕೆ ಬಂದರೆ, ಬ್ರಹ್ಮಣಾಂಕನೆಂಬ ಕನ್ನಡ ಕವಿಯು "ಜಿನಭಾರತ" ಬರೆದನು. ಇದರ ಭಾಮಿನಿಯ ಸಂಖ್ಯೆ ೪೬೨೮.

೧೮೧೦ರಲ್ಲಿ ಚಂದ್ರ ಸಾಗರವರ್ಣಿಯು "ಪರಶುರಾಮ ಭಾರತ"ವನ್ನೂ "ಜಿನ ರಾಮಾಯಣ'ವನ್ನೂ ಬರೆದನು. ಇವು ಜೈನಪರಂಪರಾನುಸಾರವಾಗಿರುವುದು ಸ್ಪಷ್ಟ. ಪರಶುರಾಮ ಭಾರತಕ್ಕೆ ಪರಶುರಾಮನ ಕಥೆಯೇ ಆಧಾರ. ಇವು ಸಾಮಾನ್ಯ ಕಾವ್ಯಗಳು. ಸಂಸ್ಕೃತ ಮೂಲಗಳಲ್ಲಿರುವ ಗ್ರಂಥಗಳಲ್ಲಿ ಬರುವ ವಸ್ತುಪಾತ್ರ ಸನ್ನಿವೇಶಗಳನ್ನು ಜೈನರು ಬಹಳವಾಗಿ ಬದಲಾಯಿಸಿಕೊಂಡಿರುತ್ತಾರೆ. ೧೭೯೪–೧೮೬೮ರ ನಡುವೆ ಇದ್ದ ಮುಮ್ಮಡಿ ಕೃಷ್ಣರಾಜನು ಆಧ್ಯಾತ್ಮ ರಾಮಾಯಣ, ಉತ್ತರರಾಮ ಚರಿತೆ, ಕಾದಂಬರಿ, ಕಾಶೀಖಂಡ, ಕೃಷ್ಣ ಕಥಾ ರತ್ನಾಕರ, ಕೃಷ್ಣಕಥಾ ಸಾರಸಂಗ್ರಹ ದಶಕುಮಾರಕಥಾಕಲಾನಿಧಿ. ನಳೋಪಾಖ್ಯಾನ. ಪಂಚತಂತ್ರ, ಭಗವದ್ಗೀತೆ, ಭಾಗವತ, ಭಾರತ, ಮಾಳವಿಕಾಗ್ನಿಮಿತ್ರೀಯ, ರತ್ನಾವಳಿ ಅಥವಾ ವತ್ಸರಾಜನ ಕಥೆ ರಾಮಕಥಾ ಕಲ್ಪವೃಕ್ಷ, ವಿಕ್ರಮೋರ್ವಶೀಯ, ಶಂಕರ ಸಂಹಿತೆ, ಶಕುಂತಲೋಪಾಖ್ಯಾನ, ಹರಿವಂಶ, ಹರಿಶ್ಚಂದ್ರೋಪಾಖ್ಯಾನ ಮುಂತಾದ ೪೯ ಕನ್ನಡ ಕೃತಿಗಳನ್ನು ಸಂಸ್ಕೃತ ಪರಂಪರೆಗೆ ಅನುಗುಣವಾಗಿ ಬರೆದಿದ್ದಾನೆ. ಈತನ "ಭಾರತ"ದ ಆರಂಭದ ಗದ್ಯದ ಮಾದರಿ ಹೀಗಿದೆ:

"ಶ್ರೀಮತ್ ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲ ದೇಶಾವತಂಸ ಕರ್ಣಾಟಕ ಜನಪದಾಧಿಷ್ಠಾನ ಭೂತ ಶ್ರೀ ಮನ್ಮಹೀಶೂರ ಮಹಾಸಂಸ್ಥಾನ ಮಧ್ಯ

ದೇದೀಪ್ಯಮಾನ ಅವಿಕಲ ಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯ ರತ್ನಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢ ಪ್ರತಾಪ ಅಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲ ಪಯಃಪಾರಾವಾರ ಕಳಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಾಂಬಾ ಗರ್ಭ ಸುಧಾಂಬುಧಿ ರಾಕಾ ಸುಧಾಕರಾಯಮಾಣ ಶ್ರೀ ಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಆತ್ರೇಯಸಗೋತ್ರ ಅಶ್ವಲಾಯನ ಸೂತ್ರ ಋಕ್ ಶಾಖಾನು ವರ್ತಿಗಳಾದ ಶ್ರೀ ಮನ್ಮಹೀಶೂರ ಪುರವರಾಧೀಶ್ವರ ಶ್ರೀ ಕೃಷ್ಣರಾಜ ಒಡೆಯರವರು ಲೋಕಪ್ರಸಿದ್ಧವಾದ ಶ್ರೀ ಮನ್ಮಹಾಭಾರತವನ್ನು ಬುಧಜನ ಸಂಮತಿಯಿಂದ ಕರ್ಣಾಟಕಭಾಷಾವಚನ ರಚನೆಯುಳ್ಳ "ಶ್ರೀಮತ್ ಕೃಷ್ಣರಾಜ ವಾಣೀವಿಲಾಸ"ವೆಂಬ ಅಂಕಿತದಿಂದ ವಿಸ್ತರಿಸುವುದರಲ್ಲಿ ಆದಿಪರ್ವತವನ್ನ ವಿವರಿಸುವರದೆಂತೆನೆ"

೧೮೨೩ರಲ್ಲಿ ಕೆಂಪುನಾರಾಯಣನೆಂಬ ಕನ್ನಡ ಕವಿಯು "ಮುದ್ರಾರಾಕ್ಷಸ"ವೆಂಬ ಸಂಸ್ಕೃತನಾಟಕದ ಕನ್ನಡ ಭಾಷಾಂತರವನ್ನು ಮಾಡಿದನು. ಇದು ಒಳ್ಳೆಯ ಕನ್ನಡ ಗದ್ಯವೆಂದು ಹೇಳಲ್ಪಡುತ್ತದೆ. ೧೮೩೦ರಲ್ಲಿದ್ದ ಗುರುಕೃಷ್ಣ ಕವಿಯ "ಕೃಷ್ಣ ಬಾಲಲೀಲೆ" ಎಂಬ ಕನ್ನಡ ಚೌಪದಿ ಕಾವ್ಯಕ್ಕೆ ಸಂಸ್ಕೃತ ಭಾಗವತ ಪುರಾಣವು ಆಧಾರ. ಮೈಸೂರಿನ "ಅಳಿಯ ಲಿಂಗರಾಜ"ಎಂಬ ಕವಿಯ (೧೮೨೩–೧೮೭೪) ೪೭ ಕನ್ನಡ ಕೃತಿಗಳೆಲ್ಲವುಗಳೂ ಸಂಸ್ಕೃತ ಮೂಲವನ್ನುಳ್ಳವುಗಳು.

೧೮೫೭ರಲ್ಲಿದ್ದ ವೆಂಕಟರಮಣಯ್ಯನೆಂಬ ಕನ್ನಡ ಕವಿಯು ಸಂಸ್ಕೃತ–ಕನ್ನಡಗಳಲ್ಲದೆ" ಸಂಸ್ಕೃತಾಂಧ್ರಕರ್ಣಾಟಕ" ಭಾಷೆಗಳಲ್ಲಿ ಸರಳ ಕವಿಸಾರ್ವಭೌಮವೆನ್ನಿಸಿದ್ದು ಸ್ಮರಣೀಯ. ೧೮೫೭ರಲ್ಲಿ ಅವನು ೧೧೪೧ ಪದ್ಯಗಳ "ಗಯೋಪಾಖ್ಯಾನ" ಎಂಬ ಚಂಪೂಮಹಾಕಾವ್ಯವನ್ನು ರಚಿಸಿದ್ದು ಉಲ್ಲೇಖನೀಯ. ೧೮೬೦ರಲ್ಲಿ ನ್ಯಾಪತಿ ಲಕ್ಷ್ಮೀ ನರಸಿಂಹನು ರಾಮ "ಕಥಾರಂಜನ"ವನ್ನು ಕನ್ನಡದಲ್ಲಿ ಬರೆದನು. ೧೮೬೭ರಲ್ಲಿ ಈ ಗ್ರಂಥದ ಸುಂದರಕಾಂಡವು ಅಚ್ಚಾಗಿದೆ.

ಕ್ರಿ.ಶ. ೧೮೭೦ರಲ್ಲಿ ಗಂಗಾಧರ ಮಡಿವಾಳೇಶ್ವರನು ಕಾದಂಬರೀ ಕಥೆಯನ್ನು ಬರೆದನು. ಸಂಸ್ಕೃತದ ಬಾಣಭಟ್ಟನ ಮಹಾಕಾವ್ಯವಾದ ಕಾದಂಬರಿ ಇದಕ್ಕೆ ಮೂಲ. ಈ ಕವಿ ಹೇಳಿದ ಒಂದು ಮಾತು ನಿತ್ಯ ಮನನೀಯ:

**ಲಕ್ಷಣದಿ ಪದವನುಸಿರ್ದೊಡೆ**
**ರಕ್ಷಿಪುದಾಕೃತಿಯು ಪೇಳ್ದ ಕವಿಯಂ ಸತತಂ।**
**ಲಕ್ಷಣದಪ್ಪಿದೊಡಾಕೃತಿ**
**ಭಿಕ್ಷವ ಬೇಡಿಪುದು ಜಗದೊಳಿದು ಸಿದ್ಧಾಂತಂ॥**

ಚಿರಸ್ಥಾಯಿಯಾಗದ ಬರೆಹಗಳ ಕರ್ತಾರರ ಗತಿಗಿದು ಒಂದೇ ತಲೆಮಾರಿನಲ್ಲಲ್ಲದಿದ್ದರೂ ಮುಂದೆ ಅಥವಾ ಪುನರ್ಜನ್ಮದಲ್ಲಿ ಒದಗತಕ್ಕದ್ದು ನಾಗರಿಕತೆಯಲ್ಲಿ ಸಿದ್ಧ.

ವೆಂಕಟವರದಾಚಾರ್ಯನು ಮಹಾಭಾರತದ ಆದಿಪರ್ವದ ಆಧಾರದಿಂದ "ತಪತೀಪರಿಣಯ" ಎಂಬ ನಾಟಕವನ್ನು ೧೮೭೫ರಲ್ಲಿ ಬರೆದನು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಬಸವಪ್ಪಶಾಸ್ತ್ರಿಯು ಸಂಸ್ಕೃತ ಮೂಲಗಳಿಂದ ಸಾವಿತ್ರೀ ಚರಿತ್ರೆ, ಭರ್ತೃಹರಿ ಸುಭಾಷಿತ, ನೀತಿಸಾರ ಸಂಗ್ರಹ, ದಮಯಂತೀ ಸ್ವಯಂವರ, ಶಾಕುಂತಲ, ಚಂಡಕೌಶಿಕ, ಉತ್ತರರಾಮಚರಿತ ಮುಂತಾದ ಕನ್ನಡ ಕೃತಿಗಳನ್ನು ರಚಿಸಿ ಪ್ರಸಿದ್ಧನಾದನು. ಎಸ್.ಜಿ. ನರಸಿಂಹಾಚಾರ್ಯನು "ಅಜನೃಪಚರಿತೆ" ಮತ್ತು "ದಿಲೀಪಚರಿತೆ"ಗಳನ್ನು "ರಘುವಂಶ" ಮಹಾಕಾವ್ಯದಿಂದ ಕನ್ನಡಕ್ಕೆ ಪರಿವರ್ತಿಸಿದನು. ಇವು ಷಟ್ಪದಿಗಳಲ್ಲಿವೆ. ನಂಜನಗೂಡಿನ ಅನಂತನಾರಾಯಣ ಶಾಸ್ತ್ರಿಯು ಸಂಸ್ಕೃತ ಮೂಲದಿಂದ ನಾಗಾನಂದ ನಾಟಕವನ್ನೂ ಕರ್ಪೂರ ಮಂಜರೀ ಪರಿಣಯ ನಾಟಕವನ್ನೂ ಸತ್ಯವತೀ ಚರಿತೆಯನ್ನೂ ಕನ್ನಡದಲ್ಲಿ ಬರೆದನು. ಹಾಗೇ ಅಂಬಳೆ ಲಕ್ಷ್ಮೀ ನರಸಿಂಹ ಶಾಸ್ತ್ರೀಯು "ವಿದುರನೀತಿ"ಯನ್ನು ರಚಿಸಿದನು. ಸಿ.ಆರ್. ಚೆಲ್ಲಮ್ಮನು ರುಕ್ಮಿಣೀ ಪರಿಣಯ, ಪಾರಿಜಾತಾಪಹರಣ, ದ್ವಾದಶ ಮಂಜರೀ ಸ್ತೋತ್ರ ಮುಂತಾದ ಕನ್ನಡ ಕೃತಿಗಳನ್ನು ಸಂಸ್ಕೃತ ಪರಂಪರೆಯನ್ನಾಧರಿಸಿ ಬರೆದಳು. ಗೊರೂರು ನರಸಿಂಹಾಚಾರ್ಯನು ಕನ್ನಡ ವಿಶ್ವಗುಣಾದರ್ಶ, ಕನ್ನಡ ಭರ್ತೃಹರಿ ಶತಕ, ಕನ್ನಡ ಕೃಷ್ಣ ಚರಿತಾಮೃತ ಮುಂತಾದ ಕಾವ್ಯಗಳನ್ನು ಅದೇ ಪ್ರಕಾರ ರಚಿಸಿದನು. ನಂಜನಗೂಡು ಸುಬ್ಬಾಶಾಸ್ತ್ರಿಯೂ ಹಾಗೇ ಸೀತಾಚರಿತ್ರೆ. ಉತ್ತರ ಸೀತಾ ಚರಿತ್ರೆ ಎಂಬ ಕಾವ್ಯಗಳನ್ನು ಷಟ್ಪದಿಯಲ್ಲಿ ಬರೆದನು.

ಮುಳಬಾಗಿಲಿನ ಧೋಂಡೋ ನರಸಿಂಹನು ಸಂಸ್ಕೃತ ಮೂಲಗಳಿಂದ ಕಥಾವಸ್ತುವನ್ನಾಯ್ದುಕೊಂಡು ಹಿತೋಪದೇಶ, ಉತ್ತರ ರಾಮಚರಿತ ನಾಟಕ, ಮಾಳವಿಕಾಗ್ನಿಮಿತ್ರ, ಮೃಚ್ಛಕಟಿಕೆ, ವೇಣೀಸಂಹಾರಗಳನ್ನು ಕನ್ನಡಿಸಿದನು. ಗರಣಿ ಕೃಷ್ಣಾಚಾರ್ಯನು ಮೃಚ್ಛಕಟಿಕೆ, ನಾಗಾನಂದ ನಾಟಕ ಕಥೆ, ನೀತಿಶತಕಗಳನ್ನು ಕನ್ನಡದಲ್ಲಿ ರಚಿಸಿದನು. ಜಯರಾಮಾಚಾರ್ಯನು ಚಂಡಕೌಶಿಕ ನಾಟಕ, ಮದಾಲಸಾಪರಿಣಯ, ವೇಣೀಸಂಹಾರ ನಾಟಕಗಳನ್ನು ಕನ್ನಡಿಸಿದನು.

ಈ ಮಹಾಶಯರಲ್ಲದೆ ಇತರ ನೂರಾರು ಕವಿಗಳು ಸಂಸ್ಕೃತ ಮೂಲಗಳನ್ನಾಧರಿಸಿ ಕಥೆ, ಹಾಡು, ಕೀರ್ತನ, ಯಕ್ಷಗಾನ ಪ್ರಸಂಗ ಮುಂತಾದವುಗಳನ್ನು ಇಂದಿನವರೆಗೂ ಕನ್ನಡದಲ್ಲಿ ಬರೆಯುತ್ತ ಬಂದಿದ್ದಾರೆ. ಇದರಿಂದ ಗೊತ್ತಾಗುವದಿಷ್ಟು:

೧. ಸಂಸ್ಕೃತವು ಭಾರತೀಯೇತರರ ಅಥವಾ ಕನ್ನಡೇತರರ ಭಾಷೆಯಲ್ಲ.

೨. ಸಂಸ್ಕೃತ ಕವಿಗಳಲ್ಲನೇಕರ ಮಾತೃ ಭಾಷೆಯು ಸಂಸ್ಕೃತ ಭಾಷೆಯಾಗಿರಲಿಲ್ಲ.

೩. ಕನ್ನಡಿಗರು ಸಂಸ್ಕೃತ–ಕನ್ನಡಗಳೆರಡರಲ್ಲೂ ಉತ್ತಮ ಕೃತಿಗಳನ್ನು ರಚಿಸಿದ್ದುಂಟು.

೪. ಸಂಸ್ಕೃತ–ಕನ್ನಡ ಕಾವ್ಯರಚನಾ ಪರಂಪರೆಗಳಲ್ಲಿ ಸಾಧಾರಣಾಂಶಗಳು ನೂರಕ್ಕೆ ತೊಂಬತ್ತರಷ್ಟು.

೫. "ಇದು ಕನ್ನಡಕ್ಕೆ ಸಂಸ್ಕೃತದ ಕೊಡುಗೆ" ಎಂದು ಹೇಳುವಾಗ ಯಾರೂ ಸಂಸ್ಕೃತ ಕೃತಿಕಾರರೆಲ್ಲರೂ ಕನ್ನಡೇತರರು ಅಥವಾ ಭಾರತೀಯೇತರರು ಎಂದು ತಿಳಿದುಕೊಳ್ಳಲು ಆಧಾರವಿಲ್ಲ.

೬. ಇಂಗ್ಲೀಷ್ ಕಾವ್ಯದ ಪರಂಪರೆಗೂ ಭಾರತೀಯ ಕಾವ್ಯ ಪರಂಪರೆಗೂ ಇರುವಷ್ಟು ವ್ಯತ್ಯಾಸವು ಸಂಸ್ಕೃತ ಕಾವ್ಯ ಪರಂಪರೆಗೂ ಕನ್ನಡ ಕಾವ್ಯ ಪರಂಪರೆಗೂ ನಡುವೆ ಇರುವುದಿಲ್ಲ.

೭. ಕನ್ನಡ–ಸಂಸ್ಕೃತ ಸಂಸ್ಕೃತಿಗಳು ಎರಡಾಗಿ ನಡೆದು ಬಂದಿಲ್ಲ; ಒಂದಾಗಿಯೇ ನಡೆದು ಬಂದಿವೆ.

೮. ವ್ಯಕ್ತಿ ಪ್ರತಿಭಾ ವೈಶಿಷ್ಟ್ಯವು ಸಂಸ್ಕೃತದಲ್ಲಿರುವಂತೆಯೇ ಕನ್ನಡ ಸಾಹಿತ್ಯದಲ್ಲಿಯೂ ಉದಾಹೃತವಾಗಿದೆ.

೯. ಸಂಸ್ಕೃತ–ಕನ್ನಡ ಭಾಷೆಗಳ ಮತ್ತು ಆ ಭಾಷೆಗಳಲ್ಲಿ ಬರೆದ ಸಾಹಿತ್ಯ ಕೃತಿಗಳ ಸಂಬಂಧವು ಆಂಗ್ಲ ಪ್ರಭಾವವು ಅನೈಸರ್ಗಿಕವಾಗಿ ಬೀಸುವ ಇತ್ತೀಚಿನ ಕಾಲದವರೆಗೆ ಸೌದರ್ಯದ ಸೌಂದರ್ಯದಿಂದ ಕೂಡಿತ್ತು.

೧೦. ಈ ಮಾತಿಗೆ ಪದ, ವಾಕ್ಯ, ಪ್ರಮಾಣ, ಲಕ್ಷಣ, ಛಂದೋವ್ಯಾಕರಣಾದಿ ಶಾಸ್ತ್ರಗಳ ಭಾವಾಂತರ–ಭಾಷಾಂತರಗಳ ನಿದರ್ಶನಗಳನ್ನು ಮುಂದೆ ನೋಡಬಹುದು. ಮುದ್ದಣನ ಮಾತಿನಲ್ಲಿ ಹೇಳುವುದಾದರೆ, ಕರ್ಮಣಿ ಸರದೊಳ್ ಚೆಂಬವಳಮಂ ಕೋದಂತೆ ಇರುವುದು ಕನ್ನಡ ಶೈಲಿಯಲ್ಲಿ ಮೊದಲಿನಿಂದ ಈವರೆಗೆ ನಡೆದು ಬಂದ ಹಾದಿ. ಕಾವ್ಯವೊಂದು ಕಲೆಯಾದುದರಿಂದ ಭಾಷಾಗತವಾದ ಪದವರಣ–ಪದಮಿಶ್ರಣಗಳು ದಂಡಿಹೇಳಿದಂತೆ, ವಿದ್ವದುದ್ವೇಗಕರವಾಗದಿದ್ದರೆ ಸರಿ. ಅದರ ಔಚಿತ್ಯಕ್ಕೆ ಮತ್ತಾವ ಒರೆಗಲ್ಲೂ ಬೇಕಾಗಿಲ್ಲ. ಕಲಾಮೌಲ್ಯಗಳ ನಿಕಷಗಳು ಭಾರತಸಾಧಾರಣ; ಅದು ವಿಶ್ವಸಾಧಾರಣವಾದರೂ ಆಶ್ಚರ್ಯಪಡಬೇಕಾಗಿಲ್ಲ–ವಿಶ್ವಮಾನ್ಯ ಕೃತಿಗಳಲ್ಲಿಯ ಹಲವು ಅಂಶಗಳಲ್ಲಿ ಇದು ಸತ್ಯ.



೨

# ಸಂಸ್ಕೃತ–ಕನ್ನಡಗಳಲ್ಲಿ ರಚಿತವಾದ ಶಾಸ್ತ್ರಗ್ರಂಥಗಳ ಐತಿಹಾಸಿಕ ಮತ್ತು ಸಾಂಸ್ಕೃತಿಕ ಸಂಬಂಧ

ಕಾವ್ಯಕಲೆಗೆ ಅತಿನಿಕಟವರ್ತಿಯಾದದ್ದು ವಿಮರ್ಶಶಾಸ್ತ್ರ. ಅದನ್ನು ನಮ್ಮ ದೇಶವು "ಅಲಂಕಾರ ಶಾಸ್ತ್ರ" ಎಂದು ಕರೆಯುತ್ತ ಬಂದಿದೆ. ವಾಙ್ಮಯದಲ್ಲಿ ಕಾವ್ಯ ಮತ್ತು ಶಾಸ್ತ್ರ ಎಂದು ನಮ್ಮ ದೇಶದವರು ಸಾವಿರಾರು ವರ್ಷಗಳಿಂದ ಪರಿಚ್ಛೇದಿಸಿ ಹೇಳಿದ್ದು ಅಪ್ರಹತವಾದ ವ್ಯವಹಾರ ಸತ್ಯ. ಅದು ತರ್ಕ ಶುದ್ಧ. ವಿಮರ್ಶೆಯು ಶಾಸ್ತ್ರವಲ್ಲವೆಂಬವರೇಕೆ ಇಂದು ಸೌಂದರ್ಯವನ್ನು ಸೌಂದರ್ಯಶಾಸ್ತ್ರ (Aesthetics) ಎಂದು ನಾಚಿಕೆ ಇಲ್ಲದೆ ಒಪ್ಪಿಕೊಳ್ಳುತ್ತಾರೆ? ಆಂಗ್ಲರೂಢಿಗಳೆಲ್ಲವೂ ಭಾರತೀಯ ರೂಢಿಗಳಷ್ಟು ಈ ಕ್ಷೇತ್ರದಲ್ಲಿ ತರ್ಕಶುದ್ಧವಾಗಿಲ್ಲ ಎಂಬುದನ್ನು ಕನ್ನಡ "ಕಾವ್ಯಸೂತ್ರ" ಓದಿ ಕಂಡುಕೊಳ್ಳಬಹುದು.

ಅಲಂಕಾರಶಾಸ್ತ್ರವು ಸಾಧಾರಣ ಲಕ್ಷಣಗಳನ್ನೂ ನಿಯಮಗಳನ್ನೂ ಆಯಾ ದೇಶದ ಸಾಂಸ್ಕೃತಿಕ ಪರಂಪರೆಗನುಗುಣವಾಗಿ ಹೇಳಬಹುದು; ಅಥವಾ ವೈಯಕ್ತಿಕ ಕೃತಿಗಳ ವಿಮರ್ಶೆಯನ್ನೂ ಅವುಗಳನ್ನು ಅನ್ವಯಿಸಿ ಮಾಡಬಹುದು. ಈ ಉಭಯ ಮುಖತ್ವವು ಅಲಂಕಾರ ಅಥವಾ ವಿಮರ್ಶೆಯ ವಿಶಾಲ ಲಕ್ಷಣ. ಸಂಸ್ಕೃತ ಕಾವ್ಯಗಳ ವ್ಯಾಖ್ಯಾನಗಳು ವೈಯಕ್ತಿಕ ಗ್ರಂಥಗಳ ವಿಮರ್ಶೆಗಳಾದರೆ, ಸಂಸ್ಕೃತ ಅಲಂಕಾರ ಶಾಸ್ತ್ರಗ್ರಂಥಗಳು ಕಾವ್ಯಶಾಸ್ತ್ರಗಳು. ಕಾವ್ಯಕಲಾ ತಂತ್ರ ವಿವರಣೆಗಳು. ವ್ಯವಹಾರ ಮೊದಲು, ಕಲೆ ಆಮೇಲೆ, ಶಾಸ್ತ್ರ ಅನಂತರ ಎಂಬುದು ಲೋಕದ ಎಲ್ಲ ಭಾಷೆಗಳ ಸಾಮಾನ್ಯ ಕಾಲಾನುಕ್ರಮ. ವ್ಯಾವಹಾರಿಕ ಭಾಷೆಯೊಂದು ಕಾವ್ಯಭಾಷೆಗೂ ಜನಕ, ಶಾಸ್ತ್ರಭಾಷೆಗೂ ಜನಕ. ಸಂಸ್ಕೃತ–ಕನ್ನಡ ಭಾಷೆಗಳಲ್ಲಿ ಶಬ್ದಾಕ್ಷರಶಃ ಯಮಳತ್ವವಿರುವುದನ್ನು ಮಹಾಕವಿ ಪಂಪನೂ ಕುವೆಂಪುಗಳೂ ನಿದರ್ಶಿಸಿರುವುದರಿಂದ ಅದು ವಾದಗ್ರಸ್ತ ವಿಷಯವಾಗಿ ಉಳಿದಿಲ್ಲ.

ಕ್ರಿ.ಶ ೮೧೪–೮೭೭ರ ನಡುವೆ ಇದ್ದ ನೃಪತುಂಗನು "ಕವಿರಾಜಮಾರ್ಗ" ಎಂಬ ಅಲಂಕಾರ ಗ್ರಂಥವನ್ನು ಮೊದಲು ಕನ್ನಡದಲ್ಲಿ ಬರೆದನು. ಇವನು ಸಂಸ್ಕೃತದಲ್ಲಿಯೂ ವಿದ್ವಾಂಸನಾಗಿದ್ದನು. ಇವನ ಹಿಂದಿನ ಸಂಸ್ಕೃತ ಅಲಂಕಾರಿಕರು ದಂಡಿ ಮತ್ತು ಭಾಮಹ. ಆದುದರಿಂದ ಇವನ ಗ್ರಂಥದ ಮೂರು ಪರಿಚ್ಛೇದಗಳಾದ (೧) ದೋಷಾನುವರ್ಣನ

ನಿರ್ಣಯ, (೨) ಶಬ್ದಾಲಂಕಾರ, ಮತ್ತು (೩) ಅರ್ಥಾಲಂಕಾರಗಳಲ್ಲಿ ದಂಡಿಯ ಅಭಿಪ್ರಾಯಗಳ ಪ್ರಭಾವಬಿದ್ದಿದೆ. ದಂಡಿಯು ಬರೆದದ್ದು (ಸಂಸ್ಕೃತ) "ಕಾವ್ಯಾದರ್ಶ" ಎಂಬ ಅಲಂಕಾರ ಗ್ರಂಥ. ಈತನ ದಶಕುಮಾರಚರಿತೆಯನ್ನೋದಿದವರಿಗೆ (ಗಂಜಿ ಊಟ, ಕೋಳಿ ಅಂಕ ಅಥವಾ ಕೋಳಿ ಪಡೆಗಳನ್ನು ಉಲ್ಲೇಖಿಸಿರುವುದರಿಂದ) ಇವನು ಕಡಲುಗನ್ನಡ ಸೀಮೆಯವನೆಂದು ಅಥವಾ ದಾಕ್ಷಿಣಾತ್ಯನೆಂದು ಊಹಿಸಲು ಸಾಧ್ಯವಿದೆ. ಕಾವ್ಯಾದರ್ಶವೊಂದು ಪ್ರಸಿದ್ಧ ಅಲಂಕಾರ ಲಕ್ಷಣ ಗ್ರಂಥವಾಗಿರುವುದನ್ನು ಒಪ್ಪಲು "ರಸಗಂಗಾಧರ"ವನ್ನು ಓದಿದರೆ ಕಾರಣಗಳು ಸಿಕ್ಕುವುವು. ಇಷ್ಟು ಘನ ವಿದ್ವಾಂಸನಾದ ದಂಡಿಯ ವಿಮರ್ಶದೃಷ್ಟಿಕೋನವನ್ನು "ಕವಿರಾಜಮಾರ್ಗ"ದಲ್ಲಿ ನಾವು ಕಂಡರೆ ಆಶ್ಚರ್ಯವಾಗದು. ಸಂಸ್ಕೃತದ ಅಲಂಕಾರ ಪ್ರಸ್ಥಾನಕ್ಕೂ ಕನ್ನಡ ಅಲಂಕಾರ ಪ್ರಸ್ಥಾನಕ್ಕೂ ನಿಕಟ ಸಂಬಂಧವಿರುವುದು ಇದರಿಂದ ಸಹಜ. "ಇಷ್ಟಾರ್ಥವ್ಯವಚ್ಛಿನ್ನ ಪದಾವಲಿಯು ಕಾವ್ಯ" ಎಂಬ ದಂಡಿಯ ಮತವು ನೃಪತುಂಗಗ್ರಾಹ್ಯ. ಡಾ. ರೆನೆವೆಲೆಕ್ ಮತ್ತು ಆಸ್ಟಿನ್ ವಾರೆನ್ನರು ಬರೆದ "Theory of Literature ಸಾಹಿತ್ಯ ಸಿದ್ಧಾಂತ" ಎಂಬ ಆಧುನಿಕ ಗ್ರಂಥವಾದರೂ "ಕಾವ್ಯವು ವಿಶಿಷ್ಟ ಶೈಲಿಯಲ್ಲಿ ಬರೆದ ವಾಕ್ಯ ಸಮೂಹ" ಎಂಬ ಅಭಿಪ್ರಾಯವನ್ನು ಪ್ರತಿಪಾದಿಸುತ್ತದೆ. ಗದ್ಯದ ಅಥವಾ ಪದ್ಯದ ಇಲ್ಲವೆ ಅವೆರಡರ ಮಿಶ್ರಣದ ವಾಕ್ಯಗಳಲ್ಲದೆ ಶಾಸ್ತ್ರೇತರವಾದ (ವ್ಯವಹಾರೇತರವಾದ) ಸಾಹಿತ್ಯದಲ್ಲಿ (ಕಾವ್ಯಕಲೆಯಲ್ಲಿ) ಈಗಲಾದರೂ ಇನ್ನೇನಿದೆ? ಅಂಥ ವಾಕ್ಯಗಳು ಸೌಂದರ್ಯ ಅಥವಾ ರಸ (ಈ ವಿಶಾಲಾರ್ಥಕ್ಕೆ ಪ್ರೊ. ಹಿರಿಯಣ್ಣನವರ "Art Experience" ಎಂಬ ಗ್ರಂಥವನ್ನು ಓದಿರಿ)ವನ್ನು ದ್ಯೋತಿಸುತ್ತಿದ್ದರೆ ಸರಿ–ಅಷ್ಟೆ. ಈ ಸಾರ್ವಕಾಲಿಕ ತತ್ವವು ಸಾರ್ವದೇಶಿಕವಾಗಲು ಯಾವ ಅಡ್ಡಿಯಿದೆ? ಟೀ.ಎಸ್. ಎಲಿಯಟ್ಟನ ಭಾಷೆಯಲ್ಲಿ ಈ ರಸ = Art-Emotion ಕಲಾಭಾವನೆ; ಇದು Life-Emotion ಜೀವನದ ವ್ಯಾವಹಾರಿಕ ಸತ್ಯಪ್ರಜ್ಞೆಯ ಭಾವನೆಯಿಂದ ಭಿನ್ನ. ಆದುದರಿಂದ ವ್ಯವಹಾರಶಾಸ್ತ್ರಗಳ ಭಾಷಾಶೈಲಿಗಳಿಂದ ಕಾವ್ಯ (ಸಾಹಿತ್ಯ) ಭಾಷಾಶೈಲಿಯು ಭಿನ್ನ ಎಂಬುದನ್ನು ಯಾರೂ ಯಾವಾಗಲೂ ಖಂಡಿಸಲಾರರು. ಇಂಥ ಆಲೋಚನೆಗಳು ಸಂಸ್ಕೃತ–ಕನ್ನಡಗಳಿಗೆ ಸಾಧಾರಣ. "ಕವಿರಾಜಮಾರ್ಗ"ವನ್ನು ನೃಪತುಂಗನೇ ಸ್ವತಃ ಬರೆದಿರಲಿ ಅಥವಾ ಶ್ರೀವಿಜಯನೇ ಬರೆದಿರಲಿ–ಅದರ ವಿಚಾರಸರಣಿಗಳು ಸಂಸ್ಕೃತದ ಆಲಂಕಾರಿಕ ವಿಚಾರಸರಣಿಗಳ ಮುಖ್ಯಾಂಶಗಳಿಂದ ಭಿನ್ನವಾಗಿಲ್ಲ–ಎಂಬುದು ಈ ಉಭಯ ಸರಸ್ವತಿಗಳ ಸಾಮ್ಯಕ್ಕೆ ಪ್ರಮಾಣ.

ಕ್ರಿ.ಶ ೧೧೫೦ರಲ್ಲಿದ್ದ ಉದಯಾದಿತ್ಯನೆಂಬ ಕನ್ನಡ ವಿಮರ್ಶಶಾಸ್ತ್ರಜ್ಞನು "ಉದಯಾದಿತ್ಯಾಲಂಕಾರ" ಎಂಬ ಕನ್ನಡ ಅಲಂಕಾರ ಗ್ರಂಥವನ್ನು ಬರೆದನು. ಇದರಲ್ಲಿ (೧) ಕಾವ್ಯಭೇದ. (೨) ರೀತಿ, (೩) ರಸ, (೪) ಕಾವ್ಯಗುಣಗಳು ಮತ್ತು (೫) ಅಲಂಕಾರಗಳ ಬಗೆಗೆ ವಿವರಣೆ–ಉದಾಹರಣೆಗಳನ್ನು ಕೊಡಲಾಗಿದೆ. ಈ ಗ್ರಂಥಕ್ಕೆ ಸಂಸ್ಕೃತದ "ಚಂದ್ರಾಲೋಕ" ಮತ್ತು "ಕಾವ್ಯಾದರ್ಶ"ಗಳು ಆಕರಗಳು. "ಸಂಸ್ಕೃತದಲ್ಲಿ ಸಲ್ಲುವುದು ಕನ್ನಡದಲ್ಲಿಯೂ ಸಲ್ಲುವುದು" ಎಂಬ ಮಾತಿಗಿದು ನಿದರ್ಶನ.

ಕ್ರಿ.ಶ ೧೧೪೫ರಲ್ಲೇ ೨ನೆಯ ನಾಗವರ್ಮನು "ಕಾವ್ಯಾವಲೋಕನ" ಎಂಬ ಕನ್ನಡ ಅಲಂಕಾರ ಗ್ರಂಥವನ್ನು ಬರೆದಿದ್ದನು. ಅವನಿಗೂ ಪೂರ್ವದ ಸಂಸ್ಕೃತ ಸೂರಿಗಳೇ ಗುರುಗಳು.

## ಉದಯಾದಿತ್ಯ

**ಉದೆಗನೊಳಾಂಪರಾರ್ ಮುಳಿದೊಡಂತಕನಾಂತೊಡೆ ಕಂಡದಿಂಡೆಯಂ**
**ಕೆದರುವನೊಡ್ಡಿದಾನೆಗಳ ನಿರ್ಕಡಿ ಮಾಡುವನಾತನೊಳ್ಸಸಂ।**
**ಬೆದರಿಸದಾರ ನೋಡಿಸದದಾರನದಾರನುದಾತ್ತ ದೈನ್ಯದೊಳ್**
**ಪುದಿಯಿಸದಾರ ನಾಗಿಸದು ತಾಪಸವೃತ್ತಿಯನಬ್ಜಲೋಚನೇ॥**

ಇದು ವೀರರಸಕ್ಕೆ ಉದಾಹರಣೆ.

## ನಾಗವರ್ಮ

**ಇದು ಸೌಂದರ್ಯಗುಣ ಪ್ರಕಾಶಮಿದು ತಾನಗ್ರಾಮ್ಯತಾಧಾನಮಿಂ**
**ತಿದು ಭಾಸ್ವತ್ ಪರಭಾಗರಮ್ಯಮಿದು 'ಬಂಧಾಶೇಷವಿಚ್ಛಿತ್ತಿಗಾ।**
**ಸ್ಪದಮೆಂತಿಂದು ಚಿತಪ್ರಯೋಗಮಿಥಿಯಿಂ ಸಯ್ತಿರ್ಪಿನಂ ತಿರ್ದಿಪೇ**
**ಳ್ವುದು ಪೂಮಾಲೆಯನಿಂಬಿನಿಂ ಸಮೆವವೋಲ್ ಸತ್ಕಾವ್ಯಮಂ ಕಬ್ಬಿಗಂ॥**

ಇದು ಕಾವ್ಯಕ್ಕಿರಬೇಕಾದ ಅಂಗಗಳನ್ನು ಎತ್ತಿ ಹೇಳುತ್ತದೆ. ಈ ಎಲ್ಲ ಅಂಗಗಳನ್ನೂ ಸಂಸ್ಕೃತದ ಅಲಂಕಾರಪ್ರಸ್ಥಾನ, ರೀತಿ ಪ್ರಸ್ಥಾನ, ರಸ (ಧ್ವನಿ) ಪ್ರಸ್ಥಾನಗಳು ಆಗಲೇ ಪ್ರಸಿದ್ಧ ಮಾಡಿವೆ. ಅಣ್ಣನ ಸುಭಾಷಿತವನ್ನು ತಮ್ಮನು ಅನುಸರಿಸಿದರೆ ಹೇಗೆ ಅದು ದಾಸ್ಯವೆನ್ನಿಸದೋ ಹಾಗೇ ಸಂಸ್ಕೃತ ವಿಮರ್ಶೆಯ ತತ್ವಗಳನ್ನು ಕನ್ನಡವು ಪ್ರತಿಪಾದಿಸಿದರೆ ಅದು ಎರವಲೆಂದಾಗದು. ಸಂಸ್ಕೃತ ಭಾಷಿಕರೂ ಕನ್ನಡ ಭಾಷಿಕರೂ ಭಿನ್ನಜನಾಂಗದವರಲ್ಲ, ಭಿನ್ನಕುಲದವರಲ್ಲ, ಭಿನ್ನನಾಗರಿಕತೆ–ಸಂಸ್ಕೃತಿಗಳಿಗೆ ಸೇರಿದವರಲ್ಲ ಎಂಬುದೇ ಉಕ್ತ ಅಭಿಪ್ರಾಯಕ್ಕೆ ಆಧಾರ. ನಾಗವರ್ಮನೂ ದಂಡಿಯ ಅನುಯಾಯಿ.

ಈ ನಡುವೆ ೧೨೦೦ರಲ್ಲಿ ಕವಿಕಾಮನು ಬರೆದ 'ಶೃಂಗಾರರತ್ನಾಕರ' ಅಥವಾ 'ರಸವಿವೇಕ' ಎಂಬ ಅಲಂಕಾರ ಗ್ರಂಥವೂ ಉಲ್ಲೇಖನೀಯ.

ಸುಮಾರು ಕ್ರಿ.ಶ ೧೫೦೦ರಲ್ಲಿ ಮಾಧವನೆಂಬ ಕನ್ನಡ ಕಾವ್ಯಶಾಸ್ತ್ರಕಾರನು "ಮಾಧವಾಲಂಕಾರ" ಎಂಬ ವಿಮರ್ಶಶಾಸ್ತ್ರ ಗ್ರಂಥವನ್ನು ರಚಿಸಿದನು. ಇದು ಮಹಾಕವಿ ದಂಡಿಯ ಸಂಸ್ಕೃತ "ಕಾವ್ಯಾದರ್ಶ"ದ ಕನ್ನಡಭಾಷಾಂತರ: ೩ ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. ಉದಾಹರಣೆ:

## ಮೂಲ

**ಆದಿರಾಜಯಶೋಬಿಂಬಮಾದರ್ಶಂ ಪ್ರಾಪ್ಯ ವಾಙ್ಮಯಂ।**
**ತೇಷಾಮಸನ್ನಿಧಾನೇಽಪಿನ ಸ್ವಯಂ ಪಶ್ಯನಶ್ಯತಿ॥**

**ಭಾಷಾಂತರ**

**ನುತಪೂರ್ವ ರಾಜಕೀರ್ತಿ। ಪ್ರತಿಬಿಂಬ ಶಬ್ದಮುಕುರದೊಳ್ ನೆಲೆಗೊಂಡಾ।**

**ಕ್ಷಿತಿಪಾಲರಳಿದೊಡೇಂ ಕೇ। ಡತಿಶಯದಿಂ ಕೀರ್ತಿಬಿಂಬಮಾಕಲ್ಪಾಂತಂ॥**

ಇದಕ್ಕೂ ಮೊದಲು ೧೨೦೦ರಲ್ಲಿ ಕವಿಕಾಮನು "ರಸವಿವೇಕ" ಎಂಬ ವಸ್ತುವನ್ನು "ಶೃಂಗಾರ ರತ್ನಾಕರ" ಎಂಬ ಕನ್ನಡ ಅಲಂಕಾರ ಶಾಸ್ತ್ರಗ್ರಂಥದಲ್ಲಿ ವಿವರಿಸಿದ್ದನು. ಇದರ ಪರಿಚ್ಛೇದಗಳು ನಾಲ್ಕು: (೧) ನವರಸವ್ಯಾವರ್ಣನ, (೨) ಭಾವಭೇದ ನಿರ್ಣಯ, (೩) ನಾಯಕ ನಾಯಿಕಾ ವಿಕಲ್ಪವಿಸ್ತರ ಮತ್ತು (೪) ಸಖ ಸಖೀ ಸಂಭೋಗ ವಿಪ್ರಲಂಭ ಪ್ರೇಮಾವಸ್ಥಾದಿವಿಸ್ತರ. ಕನ್ನಡದಲ್ಲಿ ರಸಪ್ರಕರಣವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಗ್ರಂಥಗಳಲ್ಲಿ ಇದೇ ಮೊದಲನೆಯದು. ಸಂಸ್ಕೃತದಲ್ಲಿ ರಸಧ್ವನಿಯನ್ನು ಎತ್ತಿ ಹೇಳಿದ ಕಾವ್ಯಶಾಸ್ತ್ರಕಾರನೆಂದರೆ ೯ನೆಯ ಶತಮಾನದಲ್ಲಿದ್ದ ಧ್ವನಿಕಾರ ಆನಂದವರ್ಧನ. ನಾಟ್ಯಾಚಾರ್ಯನಾದ ಭರತನು ರಸದ ಬಗ್ಗೆ ಸಂಸ್ಕೃತದಲ್ಲಿ ಕ್ರಿ.ಪೂ. ೨ನೆಯ ಶತಮಾನದಲ್ಲಿ ನಾಟಕ (ರೂಪಕ) ಗಳಿಗೆ ಪರಿಸೀಮಿತವಾಗಿ ಹೇಳಿದ್ದನು. ಅವನು ಹೇಳಿದ ರಸಗಳ ಪಟ್ಟಿಯಲ್ಲಿ ಶಾಂತೇತರವಾದ ೮ ರಸಗಳಿವೆ. ಆಲಂಕಾರಿಕ ಆನಂದವರ್ಧನನ ಕಾವ್ಯ ರಸಗಳ ಸಂಖ್ಯೆ ಶಾಂತವನ್ನು ಸೇರಿಸಿಕೊಂಡು ೯.

ಕನ್ನಡ ಕವಿ ಸಾಳ್ವನು ೧೫೫೦ ರಲ್ಲಿ "ರಸರತ್ನಾಕರ" ಎಂಬ ಅಲಂಕಾರ ಅಥವಾ ವಿಮರ್ಶಗ್ರಂಥವನ್ನು ಬರೆದನು. ರಸಪ್ರಕ್ರಿಯೆಯು ಇದರ ಪ್ರತಿಪಾದ್ಯ ವಸ್ತು. ಶೃಂಗಾರ ಪ್ರಪಂಚ, ರಸವಿವರಣ, ನಾಯಕ ನಾಯಿಕಾ ವಿವರಣ ಮತ್ತು ಭವಾಧಿಕರಣ ಎಂಬ ೪ ಆಶ್ವಾಸಗಳಿದರಲ್ಲಿವೆ. ೧೦ನೆಯ ಶತಮಾನದಲ್ಲಿ ಅಭಿನವ ಗುಪ್ತನೆಂಬ ಸಂಸ್ಕೃತ ವಿದ್ವಾಂಸನು ರಸವಸ್ತುವನ್ನು ವಿಸ್ತಾರವಾಗಿ ವ್ಯಾಖ್ಯಾನಿಸಿದ್ದನು. ಅನಂತರ ಸಂಸ್ಕೃತದಲ್ಲಿ ರಾಜಶೇಖರನ ಕಾವ್ಯಮೀಮಾಂಸೆ, ಧನಂಜಯ ಮತ್ತು ಧನಿಕರ "ದಶರೂಪಕ," ಕುಂತಕನ "ವಕ್ರೋಕ್ತಿಜೀವಿತ," ಕ್ಷೇಮೇಂದ್ರನ "ಔಚಿತ್ಯವಿಚಾರ ಚರ್ಚೆ", ಭೋಜನ "ಸರಸ್ವತೀಕಂಠಾಭರಣ," ಮತ್ತು "ಶೃಂಗಾರ ಪ್ರಕಾಶ," ಮಹಿಮಭಟ್ಟನ "ವ್ಯಕ್ತಿವಿವೇಕ," ಮಮ್ಮಟನ "ಕಾವ್ಯಪ್ರಕಾಶ" ವಿರುಯ್ಯಕನ "ಅಲಂಕಾರಸರ್ವಸ್ವ," ಹೇಮಚಂದ್ರನ "ಕಾವ್ಯಾನುಶಾಸನ," ಒಂದನೆಯ ಮತ್ತು ಎರಡನೆಯ ವಾಗ್‌ಭಟರ "ವಾಗ್‌ಭಟಾಲಂಕಾರ" ಹಾಗೂ "ಕಾವ್ಯಾನುಶಾಸನ", ಜಾಯೇಂದ್ರನ "ಚಂದ್ರಾಲೋಕ," ವಿದ್ಯಾನಾಥನ "ಪ್ರತಾಪರುದ್ರೀಯ," ವಿದ್ಯಾಧರನ "ಏಕಾವಲಿ," ವಿಶ್ವನಾಥನ "ಸಾಹಿತ್ಯ ದರ್ಪಣ," ಶಾರದಾತನಯನ "ಭಾವಪ್ರಕಾಶ" ಸಿಂಗಭೂಪಾಲನ" ರಸಾರ್ಣವಸುಧಾಕರ" ಮತ್ತು ಭಾನುದತ್ತನ "ರಸಮಂಜರಿ" ಮತ್ತು "ರಸತರಂಗಿಣಿ" (೧೪ನೆಯ ಶತಮಾನ) ಮತ್ತು ಕೇಶವಮಿಶ್ರನ "ಅಲಂಕಾರಶೇಖರ" ಎಂಬ ಗ್ರಂಥಗಳು ಪ್ರಕಟವಾಗಿದ್ದವು. ಸಂಸ್ಕೃತದ ಅಖಿಲಭಾರತತೆಯ ದೆಸೆಯಿಂದ ಈ ಗ್ರಂಥಗಳಲ್ಲಿ ಕೆಲವಾದರೂ ಸಾಳ್ವನ ಅಭಿಪ್ರಾಯವನ್ನು ರೂಪಿಸಲು ಪ್ರೇರಿಸಿರಲೇ ಬೇಕು. ಆದರೆ ಅದು ಎಷ್ಟರಮಟ್ಟಿಗೆ ಎಂಬುದು ಸಂಶೋಧನೀಯ.

"ಶಾರದಾವಿಲಾಸ" ಎಂಬುದು ಕನ್ನಡದ ಮೊದಲನೆಯ ಧ್ವನಿವಿಷಯಕವಾದ ಗ್ರಂಥ. ಇದರ ಪ್ರಥಮಾಶ್ವಾಸ ದೊರೆತಿಲ್ಲ. ಇದರ ಕರ್ತನೂ ಸಾಳ್ವನೇ. ಉಪಲಬ್ಧವಾಗಿರುವುದು "ಧ್ವನಿವ್ಯಂಗ್ಯವಿವರಣ" ಎಂಬ (ಇದರ)೨ನೆಯ ಆಶ್ವಾಸ ಮಾತ್ರ. ಈ ಗ್ರಂಥದಲ್ಲಿ ಕಾವ್ಯಪ್ರಕಾಶಿಕೆ, ಸಾಹಿತ್ಯಸುಧಾರ್ಣವ ಎಂಬ ಪ್ರಾಚೀನಗ್ರಂಥಗಳನ್ನು ಉಲ್ಲೇಖಿಸಲಾಗಿದೆ. ಭಾರತದ ಆಧುನಿಕ ಭಾಷೆಗಳಲ್ಲಿರುವ ದೇಶೀಯ ಮೂಲದ ಶಾಸ್ತ್ರ ವಾಙ್ಮಯದ ಐತಿಹಾಸಿಕ ಆಕರಗಳು ಪ್ರತ್ಯಕ್ಷಾಪ್ರತ್ಯಕ್ಷವಾದ ಸಂಸ್ಕೃತದವೇ ಆಗಿರುವುದರಿಂದ, ಸಂಸ್ಕೃತದಲ್ಲಿ "ಧ್ವನ್ಯಾಲೋಕ"ವನ್ನು ಬರೆದವನು ಆನಂದವರ್ಧನನೇ ಆಗಿರುವುದರಿಂದ ಆ ಗ್ರಂಥದ ಧ್ವನಿಪ್ರತಿಪಾದನೆಯ ತರ್ಕವಿತರ್ಕಗಳಿಂದ ಸಾಳ್ವನಿಲ್ಲಿ ಸ್ಫೂರ್ತಿಯನ್ನು ಪಡೆದಿರಲೇ ಬೇಕು–ಎಂಬುದರಲ್ಲಿ ಸಂದೇಹವಿಲ್ಲ. ೨೦ನೆಯದಕ್ಕಿಂತ ಹಿಂದಿನ ಶತಮಾನಗಳಲ್ಲಿ ಸಂಸ್ಕೃತ ಬಾರದ ಭಾರತೀಯನಿಗೆ ಪಾಂಡಿತ್ಯ, ಶಾಸ್ತ್ರಜ್ಞಾನ, ವಿದ್ವತ್ತೆ, ಇತ್ತೆಂಬುದನ್ನು ಭಾರತದಲ್ಲಿ (ಹಾಗೇ ಕರ್ನಾಟಕದಲ್ಲಿ) ಯಾರೂ ಒಪ್ಪುತ್ತಿರಲಿಲ್ಲ. ಈಗ ಆ ಪರಿಸ್ಥಿತಿ ಬದಲಾಗಿದೆ ಎನ್ನಲು ಭಾಷಾ ಸಂಬಂಧಿ ಶಾಸ್ತ್ರಗಳ ಕ್ಷೇತ್ರದಲ್ಲಂತೂ ಸಾಧ್ಯವೇ ಇಲ್ಲ. ಸಂಸ್ಕೃತಕ್ಕೆ ಭಾರತೀಯ ಭಾಷೆಗಳೆಲ್ಲವುಗಳ ಸಂಬಂಧ ಮಾತ್ರವಲ್ಲ ಯೂರೋಪಿನ ಭಾಷೆಗಳೆಲ್ಲವುಗಳ ಸಂಬಂಧವೂ ವ್ಯುತ್ಪತ್ತಿ ಶಾಸ್ತ್ರಾನುಸಾರವಾಗಿ ಈಗಲೂ ಇದೆ. ಇಲ್ಲಿ ಅದು ಸರ್ವಪ್ರಾಂತಗಳಲ್ಲೂ ವಿದ್ಯಾವಂತರ ಭಾಷೆಯಾಗಿತ್ತು. ಆದುದರಿಂದ ಅದರಲ್ಲಿ ಮೊದಲು ಬರೆದು ಪ್ರಸಿದ್ಧವಾದ ಗ್ರಂಥಗಳ ಪ್ರಭಾವವು ಕಿಂಚಿತ್ತಾದರೂ ಬೀಳದ ದೇಶಭಾಷಾವಾಙ್ಮಯವೇ ಇಲ್ಲ ಎಂದರೆ ಅತಿಶಯೋಕ್ತಿಯಾಗಲಾರದು.

ಕ್ರಿ.ಶ ೧೬೦೦ರಲ್ಲಿದ್ದ ತಿಮ್ಮನು "ಅಲಂಕಾರ ರಸ ಸಂಗ್ರಹ" ಎಂಬ ಗ್ರಂಥವನ್ನು ಬರೆದನು. ಅದಕ್ಕೆ "ನವರಸಾಲಂಕಾರ" ಎಂಬ ಇನ್ನೊಂದು ಹೆಸರೂ ಉಂಟು. ಸಾಳ್ವನ "ರಸರತ್ನಾಕರ"ದಿಂದ ಈತನು ಸೂತ್ರಗಳನ್ನೂ, ವಾಕ್ಯಗಳನ್ನೂ ಉದಾಹರಿಸಿದ್ದಾನೆ. ಈ ಗ್ರಂಥ ಚಂಪೂರೂಪದಲ್ಲಿದೆ. ಇದರ ಪ್ರತಿಪಾದ್ಯವಿಷಯವು ರಸಪ್ರಕ್ರಿಯೆ. ನಾಯಕ–ನಾಯಿಕಾ ಲಕ್ಷಣಗಳೂ ವ್ಯಭಿಚಾರಿ ಅಥವಾ ಸಂಚಾರಿ ಭಾವಾದಿಗಳೂ ಇದರಲ್ಲಿ ವಿವರಿಸಲ್ಪಟ್ಟಿವೆ. ಕವಿಕಾಮನ ಮತ, ನಾಗವರ್ಮನ ಮತ ಎಂದು ಆ ವಿದ್ವಾಂಸರ ಗ್ರಂಥಗಳಿಂದಲೂ ಸೂತ್ರಗಳು ಅನುವಾದಿಸಲ್ಪಟ್ಟಿವೆ. ಉದಾಹರಣ ಪದ್ಯಗಳೆಲ್ಲವೂ ಪಂಪ, ಪೊನ್ನ, ನಾಗಚಂದ್ರ, ನೇಮಿಚಂದ್ರ ಮೊದಲಾದ ಪ್ರಾಚೀನ ಕನ್ನಡ ಮಹಾಕವಿಗಳ ಕಾವ್ಯಗಳಿಂದ ಆಯ್ದು ಕೊಡಲ್ಪಟ್ಟಿವೆ. ಸಂಸ್ಕೃತ ಭಾರತದ ರಸಸಿದ್ಧಾಂತದ ಜಯಭೇರಿಗಿದೂ ಒಂದು ಉದಾಹರಣೆ.

ಇದಕ್ಕೆ ಸ್ವಲ್ಪ ಮೊದಲು ಅಂದರೆ ಕ್ರಿ.ಶ ೧೫೦೦ರಂದು ಕನ್ನಡದ ಈಶ್ವರ ಕವಿಯು "ಕವಿಜಿಹ್ವಾಬಂಧನ" ಎಂಬ ತನ್ನ ಛಂದೋಗ್ರಂಥದಲ್ಲಿಯ ೪ನೆಯ ಪರಿಚ್ಛೇದದಲ್ಲಿ ಭಾವ, ಅಲಂಕಾರ ಮುಂತಾದವುಗಳನ್ನು ವಿವರಿಸಿದ್ದನು; ೨ನೆಯ ಪರಿಚ್ಛೇದದಲ್ಲಿ ಪ್ರಾಸ–ವಡಿಗಳನ್ನು ವಿವರಿಸಿದ್ದನು. ಅಲಂಕಾರ, ಭಾವ ಮುಂತಾದ ಕಲ್ಪನೆಗಳ ಆಕರ ಪೂರ್ವಿಕರ ಸಂಸ್ಕೃತ–ಕನ್ನಡ ಗ್ರಂಥರಾಶಿ.

೧೬೪೫–೧೭೦೬ರ ನಡುವೆ ಇದ್ದ ಕನ್ನಡ ಪಂಡಿತ ತಿರುಮಲ್ಯಾರ್ಯನು ತನ್ನ "ಅಪ್ರತಿಮವೀರ ಚರಿತೆ" ಎಂಬ ಗ್ರಂಥದಲ್ಲಿ ಕಾವ್ಯಲಕ್ಷಣ, ಶಬ್ದಗುಣ, ಅರ್ಥಗುಣ (ಸಂಸ್ಕೃತದಲ್ಲಿ ವಾಮನನ ಅಲಂಕಾರ ಗ್ರಂಥವನ್ನು ರೀತಿಪ್ರಸ್ಥಾನವನ್ನು ನೋಡಿರಿ). ರೀತಿ, ಶಯ್ಯೆ, ಪಾಕ, ವೃತ್ತಿ, ಶಬ್ದಾಲಂಕಾರ, ಅರ್ಥಾಲಂಕಾರ, ರಸಾಲಂಕಾರಗಳು ವಿವೃತವಾಗಿವೆ. ಇದರಲ್ಲಿ "ಚಂದ್ರಾಲೋಕ," "ವಾಮನವೃತ್ತಿ," "ಕಾವ್ಯಪ್ರಕಾಶ" ಮೊದಲಾದ ಸಂಸ್ಕೃತ ಗ್ರಂಥಗಳಿಂದ ಲಕ್ಷಣಗಳನ್ನು ತೆಗೆದುಕೊಂಡು ಅವುಗಳಿಗೆ ಕನ್ನಡದಲ್ಲಿ ವೃತ್ತಿಯನ್ನು ಬರೆದು ಉದಾಹರಣೆಗಳನ್ನು ಈ ಶಾಸ್ತ್ರಕಾರನು ಕೊಟ್ಟಿದ್ದಾನೆ. ಇವನಿಂದ ೧೭ನೆಯ ಶತಮಾನದಲ್ಲಿ ತಮಿಳಿನ ಪ್ರಸಿದ್ಧ ವಿದ್ವಾಂಸನಾದ ಅಪ್ಪಯ್ಯದೀಕ್ಷಿತನು "ಕುವಲಯಾನಂದ"ವೆಂಬ ವಿಮರ್ಶೆಗ್ರಂಥವನ್ನು ೧೫೪೯–೧೬೧೩ರ ನಡುವೆಯೇ ಬರೆದು ಪ್ರಸಿದ್ಧನಾಗಿದ್ದನು. ಈ ಸಂಸ್ಕೃತ ಅಲಂಕಾರ ಗ್ರಂಥವು ಈಗಲೂ ಪಾಠಶಾಲೆಗಳಲ್ಲಿ ಜನಪ್ರಿಯವಾಗಿದೆ. ತಮಿಳುನಾಡು ನಮ್ಮ ನೆರೆಯನಾಡೆಂಬುದು ಇಲ್ಲಿ ಸ್ಮರಣೀಯ. ಹಾಗೇ ಆಂಧ್ರಪ್ರದೇಶದವನಾಗಿದ್ದ ಜಗನ್ನಾಥ ಪಂಡಿತರಾಜನೂ ಸಂಸ್ಕೃತದಲ್ಲಿ ಅತಿ ಪ್ರಸಿದ್ಧವಾದ "ರಸಗಂಗಾಧರ" ಎಂಬ ಅಲಂಕಾರ ಗ್ರಂಥವನ್ನು ೧೬೫೯ (?) ರ ಹೊತ್ತಿಗೆ ಬರೆದು ಪ್ರಸಿದ್ಧನಾಗಿದ್ದನು. ಈತನು ನಮ್ಮ ನೆರೆನಾಡಿನ ತೆಲುಗು ವಿದ್ವಾಂಸ, ದಂಡಿಯಂತೆಯೇ ಈತನು ಉದ್ದಾಮ ಸಂಸ್ಕೃತ ಕವಿ.

ಈ ಹಿನ್ನೆಲೆಯಲ್ಲಿ ೧೮೬೭ರಲ್ಲಿದ್ದ ಲಿಂಗರಾಜನೆಂಬ ಕನ್ನಡ ಪಂಡಿತನು "ನರಪತಿವಿಜಯ" ಎಂಬ ಗ್ರಂಥವನ್ನು ಬರೆದು ಅದರಲ್ಲಿ ಸಂಸ್ಕೃತಕ್ಕೆ ಸಾಧಾರಣವಾದ ಶಬ್ದಾಲಂಕಾರ, ಅರ್ಥಾಲಂಕಾರಗಳನ್ನು (Figures of Speech) ವಿವರಿಸಿದನು. ಇದಕ್ಕೆ ಆಧಾರ ಸಂಸ್ಕೃತದ "ಚಂದ್ರಾಲೋಕ." ೧೭೩೪ರಲ್ಲಿದ್ದ ಜಾಯೇಂದ್ರನು "ಕರ್ಣಾಟಕ ಕುವಲಯಾನಂದ" ಮತ್ತು "ರಸಮಂಜರಿ" (ಇಂದಿನ ಆಕಾಶವಾಣಿಯ "ರಸಮಂಜರಿ" ಅಲ್ಲ) ಎಂಬೆರಡು ಕನ್ನಡ ವಿಮರ್ಶ ಗ್ರಂಥಗಳನ್ನು ಬರೆದನು. ಕರ್ಣಾಟಕ ಕುವಲಯಾನಂದವು ಸಂಸ್ಕೃತ ಕುವಲಯಾನಂದದ ಕನ್ನಡ ಭಾಷಾಂತರ, ಅದೊಂದು ಷಟ್‌ಪದಿ ಗ್ರಂಥ. ಅದರಲ್ಲಿ ಸೋದಾಹರಣವಾಗಿ ೧೦೧ ಅಲಂಕಾರಗಳು (Figures of Speech) ವಿವೃತವಾಗಿವೆ. ಸೂತ್ರಗಳು ಶರಷಟ್ಪದಿ ಅಥವಾ ಸಾಂಗತ್ಯ ಛಂದದಲ್ಲಿವೆ. ಉದಾಹರಣೆಗಳನ್ನು ಹೆಚ್ಚಾಗಿ ಕನ್ನಡದ ಸೌಂದರಪುರಾಣ, ಉದ್ಭಟಕಾವ್ಯ, ಚಾಯಣ ಭಾರತ, ಚಿತ್ರಭಾರತ, ಭಿಕ್ಷಾಟನ ಕಾವ್ಯ, ಚೇರಮ ಕಾವ್ಯ, ಭಾವ ಚಿಂತಾರತ್ನ, ಜೈಮಿನಿ ಭಾರತ ಮೊದಲಾದ ಕನ್ನಡ ಷಟ್‌ಪದಿ ಗ್ರಂಥಗಳು ಇವುಗಳಿಂದ ಕೊಡಲಾಗಿದೆ. ಈ ಉದಾಹರಣೆಗಳು ಅನುವಾದಗಳು ಅಥವಾ ಉದ್ಧಾರ ಪದ್ಯಗಳು. ಒಂದೊಂದು ಅಲಂಕಾರವನ್ನು ವಿವರಿಸಲು ಮೂರು ಮೂರು ಉದಾಹರಣೆಗಳನ್ನು ಉದ್ಧರಿಸಿ ಕೊಡಲಾಗಿದೆ. ಈ ವಿಮರ್ಶಕನ "ರಸಮಂಜರಿ" ಎಂಬ ಕಾವ್ಯಶಾಸ್ತ್ರ ಗ್ರಂಥದ ಇನ್ನೊಂದು ಹೆಸರು "ಶೃಂಗಾರ ತಿಲಕ." ಇದೂ ಒಂದು ಕನ್ನಡ ಷಟ್‌ಪದಿ ಗ್ರಂಥ. ದಿ. ಎಂ. ಎಸ್. ಬಸವಲಿಂಗಯ್ಯನವರ ಪ್ರಕಾರ ಕನ್ನಡ ಕಾವ್ಯಶಾಸ್ತ್ರ ಗ್ರಂಥಗಳಲ್ಲಿ (ಈವರೆಗೆ ಹೇಳಿದವುಗಳಲ್ಲಿ) ನಾಗವರ್ಮನ "ಕಾವ್ಯಾವಲೋಕನ"ವು ಕಾವ್ಯಾಭ್ಯಾಸಿಗಳಿಗೆ ಅತ್ಯಂತ ಅವಶ್ಯವಾದ ಅಭ್ಯಸನೀಯ ಗ್ರಂಥ.

ಸಾಹಿತ್ಯ ವಿಮರ್ಶೆಯ ಅನಂತರ ವ್ಯಾಕರಣಾದಿ ಶಾಸ್ತ್ರಗಳಲ್ಲಿ ಸಂಸ್ಕೃತಕ್ಕೂ ಕನ್ನಡಕ್ಕೂ ಇರುವ ಸಂಬಂಧವನ್ನು ಪರಿಶೀಲಿಸೋಣ.

ಶಾಸ್ತ್ರ ಅಥವಾ ವಿಜ್ಞಾನ ಎಂಬ ಬೌದ್ಧಿಕ ಚಟುವಟಿಕೆಗಳ ಕ್ರೋಢೀಕರಣದಲ್ಲಿ ಪಾರಿಭಾಷಿಕ ಪದಗಳು ಜಗತ್ತಿನ ಎಲ್ಲ ಭಾಷೆಗಳಲ್ಲೂ ಅಗತ್ಯ ಎಂಬುದು ತಿಳಿದ ಸಂಗತಿ. ಉದಾಹರಣೆಗಾಗಿ ವ್ಯಾಕರಣ ಶಾಸ್ತ್ರವನ್ನು ತೆಗೆದುಕೊಂಡರೆ ಕರ್ತೃ, ಕರ್ಮ, ಕ್ರಿಯೆ, ನಾಮ, ಧಾತು, ಉಪಸರ್ಗ, ನಿಪಾತ, ಪ್ರಕೃತಿ, ಪ್ರತ್ಯಯ, ಲಿಂಗ, ವಚನ, ವಿಭಕ್ತಿ, ಪದ, ಅರ್ಥ, ಸಂಧಿ, ಸಮಾಸ, ಪ್ರಕೃತಿಭಾವ ಮುಂತಾದ ವಿವಿಧ ವೈಯಾಕರಣ ಪಾರಿಭಾಷಿಕಗಳು ಸಂಸ್ಕೃತಕ್ಕೂ ಕನ್ನಡಕ್ಕೂ ಒಂದೇ ಆಗಿವೆ. ಅವುಗಳನ್ನು ಸಂಸ್ಕೃತೇತರವಾದ ಶುದ್ಧ ಕನ್ನಡಕ್ಕೆ ಈವರೆಗೆ ಯಾರೂ ಪರಿವರ್ತಿಸಲಿಲ್ಲ. ಪರಿವರ್ತಿಸುವ ಅವಶ್ಯಕತೆಯೂ ಇಲ್ಲ. ಪಾರಿಭಾಷಿಕವಾಗಿ ವಾಕ್ಯ (Sentence) ಮತ್ತು ವಾಕ್ಯೋಚ್ಚಯ ಅಥವಾ ಮಹಾವಾಕ್ಯ ಎನ್ನಲು ಕೂಡ ಕನ್ನಡವು ಶುದ್ಧ (ತದ್ಭವ–ತತ್ಸಮ ಭಿನ್ನವಾದ)ವಾಗಿ ತನ್ನದೇ ಆದ ಪರ್ಯಾಯ ಪದಗಳನ್ನು ಸಿದ್ಧಗೊಳಿಸಲಿಲ್ಲ.

ಸಂಸ್ಕೃತದಲ್ಲಿ ಪಾಣಿನಿಗಿಂತಲೂ ಹಿಂದೆ ಶಾಕಲ್ಯ, ಆಪಿಶಲಿ, ವ್ಯಾಡಿ ಮುಂತಾದ ವ್ಯಾಕರಣಕಾರರಿದ್ದರೆಂದು ಗೊತ್ತಾಗಿದೆ. ಪಾಣಿನಿಯ ಕಾಲವು ಕ್ರಿ.ಪೂ. ೫೬ನೆಯ ಶತಮಾನ ಎಂದು ಸಂಶೋಧಕರ ಮತ. ಕ್ರಿ. ಪೂ. ಯುಗದಲ್ಲಿ ಯಾವ ಕನ್ನಡ ವ್ಯಾಕರಣವಿದ್ದಿತೋ ದೇವರೇ ಬಲ್ಲ. ಮಾನವರಿಗಿನ್ನೂ ಉಪಲಬ್ಧವಾಗಿಲ್ಲ. ಉಪಲಬ್ಧ ಕನ್ನಡ ವ್ಯಾಕರಣ ಗ್ರಂಥಗಳಲ್ಲಿ ನಯಸೇನ ಕೃತವಾದ ಒಂದು ವ್ಯಾಕರಣವಿದ್ದಂತೆ ತಿಳಿಯುತ್ತದೆ. ಅದು ದೊರೆತಿಲ್ಲ. ಉಪಲಬ್ಧ ಪ್ರಾಚೀನ ಕನ್ನಡ ವ್ಯಾಕರಣ ಗ್ರಂಥಗಳಲ್ಲಿ ಶಬ್ದಸ್ಮೃತಿ, ಶಬ್ದಮಣಿದರ್ಪಣ, ಭಾಷಾಭೂಷಣ ಮತ್ತು ಶಬ್ದಾನುಶಾಸನ ಎಂಬ ನಾಲ್ಕೇ ಗ್ರಂಥಗಳು ಗಣ್ಯ ಎಂದಿದ್ದಾರೆ ಕನ್ನಡ ಕವಿ ಚರಿತಕಾರರು. ಆದರೆ "ಶಬ್ದಸ್ಮೃತಿ"ಯ ವಿವರಗಳನ್ನವರು ಕೊಟ್ಟಿಲ್ಲ. ಸುಮಾರು ಕ್ರಿ.ಶ ೧೨೬೦ರಲ್ಲಿದ್ದ ಕೇಶಿರಾಜನ "ಶಬ್ದಮಣಿದರ್ಪಣ"ವನ್ನು ಅವರು ವಿವರಿಸಿದ್ದಾರೆ. ಅದರಲ್ಲಿ ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಎಂಬ ಎಂಟು ವಿಭಾಗಗಳಿವೆ. ಕೊನೆಯಲ್ಲಿ "ಪ್ರಯೋಗ ಸಾರವೆಂಬ ಶಬ್ದಾರ್ಥನಿರ್ಣಯಂ" ಎಂಬ ಒಂಬತ್ತನೆಯ ವಿಭಾಗವೊಂದು ಸೇರಿದೆ ಕನ್ನಡಕ್ಕೆ ವಿಶಿಷ್ಟವಾದ ಅಂಶಗಳು ಅವನ ಪ್ರಕಾರ ಇಷ್ಟೇ:

**"ಗಮಕ ಸಮಾಸದಿಂ ೞಟಕುಳಕ್ಷಳದಿಂ ಶ್ರುತಿಸಹ್ಯಸಂಧಿಯಿಂ।**
**ಸಮುಚಿತಮಾಗಿ ಬರ್ಪ ಸತಿ ಸಪ್ತಮಿಯಿಂ ಸಮಸಂಸ್ಕೃತೋಕ್ತಿಯಿಂ**
**ವಮಹಪಭೇದದಿಂ ವಿರಹಿತಾವ್ಯಯ ಸಂಸ್ಕೃತ ಲಿಂಗದಿಂ ಪದೋ**
**ತ್ತಮ ಶಿಥಿಲತ್ವದಿಂ ಯತಿವಿಲಂಘನದಿಂದರಿದಲ್ತೆ ಕನ್ನಡಂ॥"**

ಮಿಕ್ಕ ಅಂಶಗಳೆಲ್ಲವೂ ಸಂಸ್ಕೃತ ಭಾಷೆಗೂ ಕನ್ನಡ ಭಾಷೆಗೂ ಒಂದೇ ಎಂದಾಯಿತು. ಆ ಅಂಶಗಳ ಬಹುಸಂಖ್ಯಾತತೆಯ ದೆಸೆಯಿಂದ ವ್ಯಾಕರಣದಲ್ಲಿ – ಅದರ ಮೂಲಭೂತ

ನಿಯಮಗಳಲ್ಲಿ–ಕನ್ನಡವು ಸಂಸ್ಕೃತ ಮೂಲವ್ಯಾಕರಣಗಳನ್ನು ಬಿಟ್ಟಿರಲಾರದು–ಎಂಬುದು ಸಿದ್ಧವಾಗುತ್ತದೆ.

ನೃಪತುಂಗನು ಕವಿರಾಜಮಾರ್ಗದಲ್ಲಿ ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದ ಕೆಲವಂಶಗಳನ್ನು ಅಲ್ಲಲ್ಲಿ ಹೇಳಿದ್ದರೂ ಕರ್ಣಾಟಕ ವ್ಯಾಕರಣವನ್ನು ಕ್ರಮವಾದ ಅನುಪೂರ್ವಿಯೊಡನೆ ಗ್ರಂಥರೂಪದಲ್ಲಿ ಮೊದಲು ಬರೆದವನು ನಾಗವರ್ಮನು. ಆತನು ಈ ಶಾಸ್ತ್ರವನ್ನು ಕಾವ್ಯಾವಲೋಕನದ ಮೊದಲನೆಯ ಅಧ್ಯಾಯವಾದ ಶಬ್ದಸ್ಮೃತಿಯಲ್ಲಿನ ಸಂಗ್ರಹವಾಗಿಯೂ ಭಾಷಾಭೂಷಣದಲ್ಲಿ ಅದಕ್ಕಿಂತ ಸ್ವಲ್ಪ ವಿಸ್ತಾರವಾಗಿಯೂ ಉಪಪಾದಿಸಿದ್ದಾನೆ. ನಾಗವರ್ಮನ ಶಬ್ದಸ್ಮೃತಿಯನ್ನೇ ಅನುಸರಿಸಿದರೂ ಕೇಶಿರಾಜನು ಕೆಲವು ಹೊಸ ವಿಷಯಗಳನ್ನು ಸೇರಿಸಿ ವಿಸ್ತರಿಸಿ ಮೇಲೆ ಹೇಳಿದ ತನ್ನ ವ್ಯಾಕರಣ ಗ್ರಂಥವನ್ನು ರಚಿಸಿದನು. ನಾಗವರ್ಮನ ಗ್ರಂಥದಲ್ಲಿ ಉದಾಹೃತವಾದ ಪದ್ಯಗಳೇ ಹೆಚ್ಚಾಗಿ "ಶಬ್ದಮಣಿದರ್ಪಣ"ದಲ್ಲಿ ಉದಾಹೃತವಾಗಿವೆ. ಕನ್ನಡ ಭಾಷೆಯಲ್ಲಿ ಕರ್ಣಾಟಕ ಶಬ್ದಶಾಸ್ತ್ರವನ್ನು ಪ್ರತಿಪಾದಿಸುವ ಗಣ್ಯಗ್ರಂಥ ಇದೊಂದೇ ಎಂಬುದು ಕವಿಚರಿತಕಾರರ ಮತ. ನಾಗವರ್ಮನ ಕಾಲ ಸುಮಾರು ಕ್ರಿ.ಶ ೧೧೪೫. "ಶಬ್ದಸ್ಮೃತಿ"ಯೆಂಬ ವಿಭಾಗದಲ್ಲಿ ಸಂಧಿ, ನಾಮ, ಸಮಾಸ ತದ್ಧಿತ, ಆಖ್ಯಾತ ಎಂಬ ಐದು ಅಧ್ಯಾಯಗಳಿವೆ. ಕಾವ್ಯಾವಲೋಕನದ "ಕಾವ್ಯ ಮಲವ್ಯಾವೃತ್ತಿ" ಎಂಬ ವಿಭಾಗದಲ್ಲಿ ಪದಪದಾರ್ಥಸಂಧಿದೋಷನಿಶ್ಚಯ, ವಾಕ್ಯ–ವಾಕ್ಯಾರ್ಥದೋಷ ಅನುಕೀರ್ತನ ಎಂಬ ಎರಡು ಪ್ರಕರಣಗಳಿವೆ.

ನಾಗವರ್ಮನ "ಕರ್ಣಾಟಕ ಭಾಷಾಭೂಷಣ" ಎಂಬ ಗ್ರಂಥದಲ್ಲಿ ಸೂತ್ರಗಳನ್ನೂ ವೃತ್ತಿಯನ್ನೂ ಸಂಸ್ಕೃತ ಭಾಷೆಯಲ್ಲಿ ಬರೆದು ಪೂರ್ವಕವಿಗಳ ಕನ್ನಡ ಗ್ರಂಥಗಳಿಂದ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಗ್ರಂಥದ ಪರಿಚ್ಛೇದಗಳು ಇಂತಿವೆ: ಸಂಜ್ಞೆ, ಸಂಧಿ, ವಿಭಕ್ತಿ, ಕಾರಕ, ಶಬ್ದರೀತಿ, ಸಮಾಸ, ತದ್ಧಿತ, ಆಖ್ಯಾತನಿಯಮ, ಅವ್ಯಯನಿರೂಪಣ ಮತ್ತು ನಿಪಾತನಿರೂಪಣ. ಅವನು ರಚಿಸಿದ "ವಸ್ತುಕೋಶ" ಎಂಬ ಗ್ರಂಥವು ಕನ್ನಡಿಗರಿಗೆ ಸಂಸ್ಕೃತದ ಜ್ಞಾನವು (ವ್ಯಾಕರಣ ಸಮೇತವಾಗಿ) ಎಷ್ಟು ಅವಶ್ಯಕ ಎಂಬುದನ್ನು ಸಿದ್ಧಮಾಡಿದೆ. ಅದು ಕನ್ನಡದಲ್ಲಿ ಉಪಯೋಗಿಸುವ ಸಂಸ್ಕೃತಪದಗಳಿಗೆ ಅರ್ಥವನ್ನು ಹೇಳುವ ಪದ್ಯರೂಪದ ಸಂಸ್ಕೃತಕರ್ಣಾಟಕ ನಿಘಂಟು, ಆ ಗ್ರಂಥದಲ್ಲಿ ಏಕಾರ್ಥಕಾಂಡ, ನಾನಾರ್ಥಕಾಂಡ, ಸಾಮಾನ್ಯಕಾಂಡ ಎಂದು ಮೂರು ಕಾಂಡಗಳಿವೆ.

ನಾಗವರ್ಮನ "ಭಾಷಾಭೂಷಣ"ವನ್ನನುಸರಿಸಿಯೇ ಭಟ್ಟಾಕಳಂಕನು ಕ್ರಿ.ಶ. ೧೬೦೪ರಂದು "ಕರ್ಣಾಟಕ ಶಬ್ದಾನುಶಾಸನ" ಎಂಬ ಕನ್ನಡ ವ್ಯಾಕರಣ ಗ್ರಂಥವನ್ನು ಸಂಸ್ಕೃತಭಾಷೆಯಲ್ಲಿ ಬರೆದನು. ಇದರಲ್ಲಿ ೪ ಪಾದಗಳಿವೆ; ೫೯೨ ಸೂತ್ರಗಳಿವೆ; ಭಾಷಾಮಂಜರಿಯೆಂಬ ವೃತ್ತಿಯೂ ಮಂಜರೀ ಮಕರಂದವೆಂಬ ವ್ಯಾಖ್ಯಾನವೂ ಇವೆ. ಪೂರ್ವ ಕವಿಗಳ ಕನ್ನಡ ಗ್ರಂಥಗಳಿಂದ ಉದಾಹರಣೆಗಳನ್ನು ಕೊಡಲಾಗಿದೆ. ಇದು "ಕರ್ಣಾಟಕ ಭಾಷಾಭೂಷಣ"ಕ್ಕಿಂತ ಹೆಚ್ಚು ವಿಸ್ತಾರವಾಗಿಯೂ ಪ್ರೌಢವ್ಯಾಖ್ಯಾನ ಸಮೇತವಾಗಿಯೂ ಇದೆ: "ಶಬ್ದಮಣಿದರ್ಪಣ"ಕ್ಕಿಂತಲೂ ಹೆಚ್ಚು ವಿಷಯಗಳನ್ನು

ಒಳಗೊಂಡಿದೆ. ಕನ್ನಡ ಭಾಷೆಗೆ ಇದು ಅತ್ಯುತ್ತಮ ವ್ಯಾಕರಣ ಗ್ರಂಥ ಎಂದಿದ್ದಾರೆ ರಾ. ಬ. ಆರ್. ನರಸಿಂಹಾಚಾರ್ಯರು.

ಸುಮಾರು ೧೮೩೦ರಲ್ಲಿ ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯನು ಹಳಗನ್ನಡ ನುಡಿಗನ್ನಡಿ, ಶಬ್ದಮಂಜರಿ, ಧಾತುಮಂಜರಿ ಎಂಬ ಗ್ರಂಥಗಳನ್ನು ಬರೆದನು. ಹೊಸಗನ್ನಡ ನುಡಿಗನ್ನಡಿಯನ್ನು ೧೮೩೮ಕ್ಕೆ ಹಿಂದೆಯೇ ಆತ ಬರೆದಿದ್ದೇನೆ ಎಂದು ಹೇಳಿದ್ದಾನೆ. ೨೦ನೆಯ ಶತಮಾನದಲ್ಲಿ ದಿ.ತೀ.ನಂ ಶ್ರೀಕಂಠಯ್ಯನವರ ಕನ್ನಡ ವ್ಯಾಕರಣವು ಪ್ರಚುರ. ಈ ನಡುವೆ "ಕನ್ನಡ ಲಘುವ್ಯಾಕರಣ"ವನ್ನು ಬರೆದ ವೆಂಕಟರಂಗೋ ಕಟ್ಟಿಯೂ "ಕನ್ನಡ ವ್ಯಾಕರಣ'ವನ್ನು ಬರೆದ ಕೇರಿಯೂ "ವ್ಯಾಕರಣ ಬೋಧಿನಿ"ಯನ್ನು ಬರೆದ ಮೇಬನ್ನನೂ "ಕನ್ನಡ ವ್ಯಾಕರಣ"ವನ್ನು ಬರೆದ ಕಿಟ್ಟೆಲ್ಲನೂ ಸ್ಮರಣೀಯರು. ಹಾಗೇ ಕೆರೆಲ್ಲನ "ಕರ್ಣಾಟಕವ್ಯಾಕರಣ"ವೂ ಉಲ್ಲೇಖನೀಯ.

ಕ್ರಿ.ಶ ೧೯೨೭ರಲ್ಲಿ "ಕನ್ನಡ ಕೈಪಿಡಿ" ಎಂಬ ಗ್ರಂಥವು ದಿ.ಬಿ.ಎಂ ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಪ್ರಕಟವಾಯಿತು. ಅದರ ಒಂದನೆಯ ಭಾಗದಲ್ಲಿ ಹಳಗನ್ನಡದ ವ್ಯಾಕರಣವೂ ಎರಡನೆಯ ಭಾಗದಲ್ಲಿ ಕರ್ಣಾಟಕ ಛಂದಸ್ಸೂ ಮೂರನೆಯ ಭಾಗದಲ್ಲಿ ಅಲಂಕಾರ ಅಥವಾ ಸಾಹಿತ್ಯ ವಿಮರ್ಶೆ ಸೂತ್ರ ಗ್ರಂಥಗಳ ವಿವರಣೆಯೂ ನಾಲ್ಕನೆಯ ಭಾಗದಲ್ಲಿ ಕನ್ನಡ ಭಾಷೆಯ ಚರಿತ್ರೆಯೂ ಐದನೆಯ ಭಾಗದಲ್ಲಿ ಕನ್ನಡಸಾಹಿತ್ಯದ ಚರಿತ್ರೆಯೂ ಬರೆಯಲ್ಪಟ್ಟವೆ, ವ್ಯಾಕರಣ ವಿಭಾಗದಲ್ಲಿ ಸಂಜ್ಞಾಪ್ರಕರಣ. ಸಂಧಿಪ್ರಕರಣ, ನಾಮಪದ ಪ್ರಕರಣ, ಕ್ರಿಯಾಪದ ಪ್ರಕರಣ, ಅವ್ಯಯ ಪ್ರಕರಣ, ತದ್ಧಿತಪ್ರಕರಣ. ಕೃದಂತಪ್ರಕರಣ, ಸಮಾಸಪ್ರಕರಣ, ತದ್ಭವಪ್ರಕರಣ, ಪ್ರಯೋಗಪ್ರಕರಣ, ಕರ್ಣಾಟಕಧಾತುಗಳು ಮತ್ತು ತತ್ಸಮ ತದ್ಭವಗಳು ಎಂಬ ವಿಷಯಗಳು ಬಂದಿವೆ.

ತತ್ಸಮ–ತದ್ಭವಗಳನ್ನು ಬಿಟ್ಟರೆ ಕನ್ನಡಭಾಷೆಯು ವ್ಯವಹಾರ್ಯವೇ? ಎಂಬುದಕ್ಕೆ ದಿ.ಆರ್ ನರಸಿಂಹಾಚಾರ್ಯರೆಂದದ್ದನ್ನು ಕೇಳೋಣ; "ಕನ್ನಡದಲ್ಲಿ ಸಾಮಾನ್ಯ ವ್ಯವಹಾರಕ್ಕೆ ಸಾಕಾಗುವಷ್ಟು ದೇಶ್ಯಶಬ್ದಗಳು ಇವೆ. ಆದರೂ ಶಾಸ್ತ್ರ ವಿಚಾರಗಳನ್ನು ಅಚ್ಚಗನ್ನಡಪದಗಳಿಂದಲೇ ನಿರ್ವಹಿಸುವುದು ಸಾಧ್ಯವಿಲ್ಲ; ಸಂಸ್ಕೃತ ಶಬ್ದಗಳ ಸಹಾಯವು ಬೇಕಾಗುತ್ತದೆ... ಸಂಸ್ಕೃತ ಶಬ್ದಗಳು ವಿಕಾರವಿಲ್ಲದೆ ಕನ್ನಡಕ್ಕೆ ಸೇರಿರುವುದು ಮಾತ್ರವಲ್ಲದೆ ಅವು ವಿಕಾರವನ್ನು ಹೊಂದಿ ತದ್ಭವಗಳೆಂಬ ಹೆಸರಿನಿಂದಲೂ ಹೇರಳವಾಗಿ ಬಂದು ಸೇರಿವೆ... ದ್ರಾವಿಡ ಭಾಷೆಗಳಿಗೆ ಸಂಸ್ಕೃತ ಶಬ್ದಗಳೂ ಪ್ರಾಕೃತ ಶಬ್ದಗಳೂ ಬಂದು ಸೇರಿರುವಂತೆ ಸಂಸ್ಕೃತ ಭಾಷೆಗೂ ಕೆಲ ಕೆಲವು ದ್ರಾವಿಡ ಶಬ್ದಗಳು ಹೋಗಿ ಸೇರಿ ಸಂಸ್ಕೃತ ಪದಗಳೆಂದೇ ಭಾವಿಸಲ್ಪಟ್ಟಿವೆಯೆಂದೂ ಅಂಥ ಶಬ್ದಗಳಿಗೆ ಸಂಸ್ಕೃತದಲ್ಲಿ ವ್ಯುತ್ಪತ್ತಿಯುನ್ನು ಹೇಳಲಿಕ್ಕಾಗದಿರುವುದೇ ಮೊದಲಾದ ಕಾರಣಗಳಿಂದ ಅವು ಸಂಸ್ಕೃತ ಶಬ್ದಗಳಲ್ಲವೆಂದೂ ಕೆಲವರು... ಅಭಿಪ್ರಾಯ ಪಡುತ್ತಾರೆ." ಆದರೆ ದ್ರಾವಿಡ ಭಾಷೆಗಳಲ್ಲಿಯ ಎಲ್ಲ ಸಂಸ್ಕೃತ ಸಂಬಂಧರಹಿತವಾದ ಪದಗಳಿಗೆ ವ್ಯುತ್ಪತ್ತಿಯನ್ನು ಹೇಳಲು ಸಾಧ್ಯವಾಗಿರದುದೂ ತಿಳಿದುಕೊಳ್ಳಬೇಕಾದ ಸಂಗತಿ. ಸತ್ಯವು ಇಲ್ಲಿ ಎತ್ತಬೇಕಾದರೂ ಒಲೆದಿರಲಿ–ಈಗ ಕನ್ನಡವು

ಸಂಸ್ಕೃತ–ಕನ್ನಡ ವ್ಯಾಕರಣಗಳೆರಡನ್ನೂ ಸರಿಯಾಗಿ ಬಳಸಿಕೊಳ್ಳುವುದು ಪ್ರಯೋಗಕ್ಕೆ (ಅಂದರೆ ಸರಿಯಾಗಿ ಅರ್ಥವಾಗಬೇಕಾದರೆ) ಅಗತ್ಯ. ಇದಕ್ಕೆ ಒಂದು ಪತ್ರಿಕೆಯ ಸುದ್ದಿಯ ಪ್ರಕಟಣೆಯಿಂದ ನಿದರ್ಶನವನ್ನು ಪರಿಶೀಲಿಸೋಣಃ

"ಬರುವ ವರ್ಷದ ಆರ್ಥಿಕ ಮುನ್ನೋಟ ಆಶಾದಾಯಕವಾಗಿರುವುದಿಲ್ಲ. ಕಳೆದ ವರ್ಷ ೧೩ ಕೋಟಿ ೩೦ ಲಕ್ಷ ಟನ್ನುಗಳಷ್ಟು ಆಹಾರ ಉತ್ಪಾದನೆಯಾಗಿ ಹೊಸ ವಿಕ್ರಮ ಸ್ಥಾಪಿಸಲ್ಪಟ್ಟಿತ್ತು. ಅದು ಬರುವ ವರ್ಷ ೧೨ ಕೋಟಿ ೩೦ ಲಕ್ಷ ಟನ್ನುಗಳಿಗೆ ಇಳಿಯಲಿದೆ. ದೇಶದ ವಿವಿಧ ಭಾಗಗಳಲ್ಲಿ ಅಭಾವ ಸ್ಥಿತಿ ಉಂಟಾಗಿರುವುದೇ ಇದಕ್ಕೆ ಕಾರಣ. ಆಹಾರ ಧಾನ್ಯ ಸಂಗ್ರಹ ಸಾಕಷ್ಟು ಇದೆಯಾದರೂ ಸರಿಯಾದ ವ್ಯವಸ್ಥಾಪಕತ್ವದ ಅಭಾವದಿಂದಾಗಿ ಇದೊಂದೇ ಬೆಲೆ ಏರಿಕೆಯನ್ನು ತಡೆಯದು. ಅಲ್ಲದೆ ಬೇಳೆಕಾಳು ಮುಂತಾದ ಬೆಳೆಗಳ ಸಂಗ್ರಹವೂ ವಿಪುಲವಾಗಿರುವುದಿಲ್ಲ... ಸಕ್ಕರೆ ಬೆಲೆ ಇಳಿದಿರುವುದರಿಂದ ಬರಲಿರುವ ವರ್ಷ ಅದರ ಉತ್ಪಾದನೆಯು ಕಳೆದ ವರ್ಷದ ೫೯ ಲಕ್ಷ ಟನ್ನುಗಳಿಂದ ೪೫.೪೮ ಟನ್ನುಗಳಿಗೆ ಇಳಿವ ಸಾಧ್ಯತೆ ಉಂಟಾಗಿದೆ, ಇದೇ ಕಾಲಕ್ಕೆ ಮಾಸಿಕ ಬಳಕೆಯು ೬ ಲಕ್ಷ ಟನ್ನುಗಳಿಗೆ ಏರಿದ್ದು ಬರಲಿರುವ ವರ್ಷ ಇದರಲ್ಲಿ ಕಡಿತ ಮಾಡಬೇಕಾಗಬಹುದು. ಇದರಿಂದ ಬಳಕೆದಾರನಿಗೆ ತೊಂದರೆ ಖಂಡಿತ." ಈ ಅನುಚ್ಛೇದದ ತಿದ್ದಿದ ರೂಪ:

"ಬರುವ ವರ್ಷದ ಆರ್ಥಿಕ ಮುನ್ನೋಟವು ಆಶಾದಾಯಕವಾಗಿಲ್ಲ. ಕಳೆದ ವರ್ಷ ೧೩ ಕೋಟಿ ೩೦ ಲಕ್ಷ ಟನ್ನುಗಳಷ್ಟು ಆಹಾರವು ಉತ್ಪಾದಿಸಲ್ಪಟ್ಟುದರಿಂದ ಹೊಸ ವಿಕ್ರಮವನ್ನು ಸ್ಥಾಪಿಸಲು ಸಾಧ್ಯವಾಯಿತು. ಅದು ಬರುವ ವರ್ಷ ೧೨ ಕೋಟಿ ೩೦ ಲಕ್ಷ ಟನ್ನುಗಳಿಗೆ ಇಳಿಯಲಿದೆ. ದೇಶದ ವಿವಿಧ ಭಾಗಗಳಲ್ಲಿ ಅಭಾವ ಸ್ಥಿತಿ ಉಂಟಾಗಿರುವುದೇ ಇದಕ್ಕೆ ಕಾರಣ. ಆಹಾರಧಾನ್ಯ ಸಂಗ್ರಹ ಸಾಕಷ್ಟು ಇದೆಯಾದರೂ ಸರಿಯಾದ ವ್ಯವಸ್ಥಾಪಕತ್ವದ ಅಭಾವದಿಂದಾಗಿ ಇದೊಂದೇ ಬೆಲೆಯೇರಿಕೆಯನ್ನು ತಡೆಯಲಾರದು. ಅಲ್ಲದೆ, ಬೇಳೆಕಾಳು ಮುಂತಾದ ಬೆಳೆಗಳ ಸಂಗ್ರಹವೂ ವಿಪುಲವಾಗಿರುವುದಿಲ್ಲ... ಸಕ್ಕರೆಯ ಬೆಲೆ ಇಳಿದಿರುವುದರಿಂದ ಬರಲಿರುವ ವರ್ಷ ಅದರ ಉತ್ಪಾದನೆಯು ಕಳೆದವರ್ಷದ ೫೯ ಲಕ್ಷ ಟನ್ನುಗಳಿಂದ ೪೫ (ದಶಮಾಂಶ). ೪೮ ಟನ್ನುಗಳಿಗೆ ಇಳಿಯುವ ಸಂಭವ ಉಂಟಾಗಿದೆ. ಇದೇ ಕಾಲಕ್ಕೆ ಮಾಸಿಕ ಬಳಕೆಯು ೬ ಲಕ್ಷ ಟನ್ನುಗಳಷ್ಟು ಏರಿರುವುದರಿಂದ ಬರಲಿರುವ ವರ್ಷ ಇದರಲ್ಲಿ ಕಡಿತ ಮಾಡಬೇಕಾಗಬಹುದು. ಇದರಿಂದ ಬಳಕೆಗಾರನಿಗೆ ತೊಂದರೆ ಖಂಡಿತ."

ಇದರಲ್ಲಿ ೩೧ ಪದಗಳು ತತ್ಸಮ; ೫ ಸಲ ಬಳಸಲಾದ ಟನ್ನು ಎಂಬ ಶಬ್ದವು ಆಂಗ್ಲಸಮ; ಸುಮಾರು ೪೦ ದೇಶ್ಯಪದಗಳಿವೆ; ಸಕ್ಕರೆ ಎಂಬ ಒಂದೇ ಒಂದು ತದ್ಭವ ಶಬ್ದವಿದೆ. ಇಲ್ಲಿರುವ ವಾಕ್ಯಗಳ ರಚನಾಕ್ರಮವು ಕರ್ತೃ ಕರ್ಮ–ಕ್ರಿಯೆ ಎಂಬ ವ್ಯಾಕರಣ ನಿಯಮವನ್ನು ಅನುಸರಿಸಿದೆ. ಇದು ಸಂಸ್ಕೃತ–ಕನ್ನಡ ಭಾಷೆಗಳೆರಡಕ್ಕೂ ಸಾಧಾರಣವಾದ ಉತ್ಸರ್ಗನಿಯಮ; ಸಂಸ್ಕೃತ ವ್ಯಾಕರಣದ ಕಾರಕ ಪ್ರಯೋಗ ವಿಧಾನವನ್ನಿದು ಬಿಟ್ಟಿಲ್ಲ– ವಿಭಕ್ತಿಗಳೆಲ್ಲವೂ ಯಥಾರ್ಥವಾಗಿ ಬಳಸಲ್ಪಟ್ಟಿವೆ. ಕನ್ನಡ ವ್ಯಾಕರಣದ ಪ್ರತ್ಯೇಕ ವೈಶಿಷ್ಟ್ಯವಿಲ್ಲಿಲ್ಲ.

ದಿನಾಂಕ ೨೨–೧೦–೭೯ರಂದು ಬಳಸಿದ ಕನ್ನಡದ ಸ್ವರೂಪವು ಈ ಬಗೆಯದಾದರೆ, ಇದರಲ್ಲಿ ತತ್ಸಮ ಅಥವಾ ಸಮಸಂಸ್ಕೃತ ಪದಗಳು ನೂರಕ್ಕೆ ಸುಮಾರು ೪೦ ರಷ್ಟು ಇವೆ; ಸಮಾಂಗ್ಲ ಪದಗಳು ನೂರಕ್ಕೆ ೬ ರಷ್ಟು ಇವೆ. ಮಿಕ್ಕ ದೇಶ್ಯಗಳು ಸುಮಾರು ೫೪ ರಷ್ಟೆನ್ನಬಹುದು. ಅಂದರೆ ಸಂಸ್ಕೃತ–ಇಂಗ್ಲೀಷುಪದಗಳು ಹೆಚ್ಚು ಕಡಿಮೆ ಅರ್ಧದ ಹತ್ತಿರಕ್ಕೆ ಬರುತ್ತವೆ, ಪದಗಳ ಇಂಥ ಬಳಕೆಯಲ್ಲದೆ ವ್ಯಾಕರಣ ನಿಯಮಗಳತ್ತ ಲಕ್ಷ್ಯ ಹಾಕಿದರೆ ಅವು ನೂರಕ್ಕೆ ನೂರು ಎಂಬಷ್ಟು ಸಂಸ್ಕೃತ ವ್ಯಾಕರಣ ನಿಯಮಗಳಂತಿವೆ. ಇಂಗ್ಲೀಷು ಭಾಷೆಯ ವ್ಯಾಕರಣ ನಿಯಮಗಳಿಲ್ಲಿ ತಮ್ಮ ಯಾವ ವೈಶಿಷ್ಟ್ಯವನ್ನೂ ಮೂಡಿಸಿಲ್ಲ. ಆದುದರಿಂದ ಕೋಶ–ವ್ಯಾಕರಣಗಳ ದೃಷ್ಟಿಯಿಂದ ಇಂದಿನ ಆಡುಮಾತಾದ ಕನ್ನಡವು ಸಂಸ್ಕೃತಕ್ಕಲ್ಲದೆ ಇತರ ಯಾವ ಭಾಷೆಗೂ ಅಷ್ಟು ನಿಕಟವರ್ತಿಯಾಗಿಲ್ಲ ಎಂದು ಧಾರಾಳವಾಗಿ ಹೇಳಬಹುದು. ತುಳು, ಮಳೆಯಾಳ, ತಮಿಳು, ತೆಲುಗುಗಳಿಗೆ ದೇಶ್ಯಗಳಲ್ಲಿ ಕೆಲವು ಹೋಲಬಹುದು–ಅಷ್ಟೆ; ಅದೂ ಪದಗಳ ವ್ಯುತ್ಪತ್ತಿಯ ದೃಷ್ಟಿಯಿಂದ. ಆ ಭಾಷೆಗಳ ಮೂಲಭೂತ ವ್ಯಾಕರಣ ನಿಯಮಗಳೂ ಬಹುಮಟ್ಟಿಗೆ ಸಂಸ್ಕೃತದವುಗಳಿಗೇ ಹೆಚ್ಚು ನಿಕಟವರ್ತಿಗಳಾಗಿವೆ.

ದ್ರಾವಿಡ ಭಾಷೆಗಳು ಸಂಸ್ಕೃತ ಕುಲದವುಗಳಲ್ಲವೆಂದು ಒಪ್ಪಿಕೊಂಡರೂ ಅವುಗಳಿಗೆ ಸಂಸ್ಕೃತದ ಸಾವಿರಾರು ವರ್ಷಗಳ ಸಹವಾಸದ ಪರಿಣಾಮವಾಗಿ ಕೋಶ, ವ್ಯಾಕರಣ, ಛಂದಸ್ಸು, ಅಲಂಕಾರ, ವೈದ್ಯವಿದ್ಯೆ, ಜ್ಯೋತಿಃಶಾಸ್ತ್ರ, ಪಾಕವಿಜ್ಞಾನ, ತತ್ವಶಾಸ್ತ್ರ ಮುಂತಾದವುಗಳಲ್ಲಿ ಸಂಸ್ಕೃತ ಸಾಧಾರಣತೆ ಸುಮಾರು ಅರ್ಧಕ್ಕೂ ಹೆಚ್ಚಾಗಿದೆ ಎಂಬುದು ಇಂದು ಸ್ಪಷ್ಟಪಟ್ಟಿದೆ. ಇಂಥ ಶಾಸ್ತ್ರಗಳ ವಿಸ್ತಾರವನ್ನು ಸಂಕ್ಷಿಪ್ತವಾಗಿ ಮುಂದೆ ಕೊಡಲಾಗುವುದು. ಈ ಅಂಶದಿಂದ ಸಂಸ್ಕೃತಾಭ್ಯಾಸವು ಕನ್ನಡಕ್ಕೆ ನಿಯತ ಸಾಹಚರ್ಯವುಳ್ಳದ್ದೆಂಬುದು ಖಚಿತವಾಗುತ್ತದೆ. ಏಕೆಂದರೆ, ಕನ್ನಡಕ್ಕೆ ಸಂಸ್ಕೃತ ನಿಯಮಗಳನ್ನು ಅನ್ವಯಿಸಬಹುದು; ಆದರೆ ಸಂಸ್ಕೃತಕ್ಕೆ ಕನ್ನಡಕ್ಕೆ ವಿಶಿಷ್ಟವಾದ ವ್ಯಾಕರಣ ನಿಯಮಗಳನ್ನು ಅನುಸರಿಸಲು ಅಥವಾ ಅನ್ವಯಿಸಲು ಸಾಧ್ಯವಿಲ್ಲ. ಭಾಷಾಶರೀರದ ಕಥೆ ಇಂತಾದರೆ ಅದರ ಹೂರಣವಾದ ವಿಚಾರ ಸಂಪತ್ತು ಇನ್ನಷ್ಟು ಸಮಸಂಸ್ಕೃತವಾಗಿದೆ. ಕನ್ನಡದ "ಕಲ್ಪನೆ" ಅಥವಾ "ವಿಚಾರ" ("ಆಲೋಚನೆ") ದಲ್ಲಿ ಮೊದಲೇ ಸಂಸ್ಕೃತದಲ್ಲಿದ್ದ ಐತಿಹಾಸಿಕಾಂಶಗಳ ಒಲವು ಅಪ್ರತಿಹತವಾದುದು. ಆಂಗ್ಲವಿಚಾರಗಳ ಆಯಾತವು ಅಲ್ಪ, ಪ್ರಶ್ನಾರ್ಹ ಅಥವಾ ವಿತತ್ಸಮಾನ ಎನ್ನಿಸಿರುವ ಉದಾಹರಣೆಗಳು ಹಲವಾರಿವೆ.

ಛಂದಃಶಾಸ್ತ್ರದಲ್ಲಿರುವ ಕನ್ನಡ–ಸಂಸ್ಕೃತಗಳ ಸಂಬಂಧವನ್ನು ಅವಲೋಕಿಸುವುದಿನ್ನು ಕ್ರಮಪ್ರಾಪ್ತ.

ಒಂದನೆಯ ನಾಗವರ್ಮನು ಸುಮಾರು ಕ್ರಿ.ಶ ೯೯೦ರಲ್ಲಿ "ಛಂದೋಂಬುಧಿ" ಎಂಬ ಗ್ರಂಥವನ್ನು ರಚಿಸಿದನು. ಕನ್ನಡ ಛಂದಸ್ಸಿಗೆ ನಮಗೆ ದೊರೆತಿರುವ ಲಕ್ಷಣ ಗ್ರಂಥಗಳಲ್ಲಿ ಇದೇ ದೊಡ್ಡ ಪುರಾತನ ಕನ್ನಡ ಗ್ರಂಥ. ಈಶ್ವರನು ಉಮೆಗೆ ಉಪದೇಶ ಮಾಡಿದ ಛಂದಸ್ಸು ಪಿಂಗಳನಿಂದ ಭೂಲೋಕದಲ್ಲಿ ವಿಸ್ತ್ರತವಾದಂತೆಯೂ ಅದನ್ನು

ತಾನು ಕಲಿತು ತನ್ನ ಹೆಂಡತಿಗೆ ಉಪದೇಶ ಮಾಡಿದಂತೆಯೂ ಹೇಳಿರುವುದರಿಂದ ಈ ಕವಿ ಪಿಂಗಳನನ್ನು ಅನುಸರಿಸಿದನೆಂದು ಗೊತ್ತಾಗುತ್ತದೆ. ಆದರೆ ಸಂಸ್ಕೃತ–ಪಿಂಗಳ ಪ್ರಾಕೃತಪಿಂಗಳ ಎಂದು ಇಬ್ಬರು ಪಿಂಗಳರು ಇದ್ದರೆಂದು ಕೆಲವರು ಹೇಳಿದ್ದಾರೆ. ಆದರೆ ಒಬ್ಬ ಪಿಂಗಳನೇ ಸಂಸ್ಕೃತ ಛಂದಸ್ಸನ್ನೂ ಪ್ರಾಕೃತಛಂದಸ್ಸನ್ನೂ ಬರೆದಂತೆ ಪ್ರತೀತಿಯಿದೆ. ಈ ಕವಿ ಈ ಎರಡು ಲಕ್ಷಣಗ್ರಂಥಗಳನ್ನೂ ಅನುಸರಿಸಿದಂತೆ ತೋರುತ್ತದೆ. ಆದರೆ ಅನುಪೂರ್ವಿಯಲ್ಲಿಯೂ ವೃತ್ತಗಳ ಹೆಸರಿನಲ್ಲಿಯ ಪಿಂಗಳ ಛಂದಸ್ಸಿಗೂ ಇವನ ಗ್ರಂಥಕ್ಕೂ ವ್ಯತ್ಯಾಸಗಳಿವೆ. ವೃತ್ತರತ್ನಾಕರ, ಶ್ರುತಬೋಧ ಎಂಬ ಗ್ರಂಥಗಳಲ್ಲಿರುವಂತೆಯೇ ವೃತ್ತದ ಲಕ್ಷಣಗಳನ್ನು ಹೇಳುವ ಪದ್ಯ ಎಂದು ಆ ವೃತ್ತಕ್ಕೆ ಲಕ್ಷ್ಯವಾಗುವಂತೆ ಹೇಳಿದ್ದಾನೆ. ಈ ಗ್ರಂಥವು ಆರು ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. ಪೀಠಿಕಾನಂತರ ಸಂಜ್ಞಾಧಿಕಾರ ಮತ್ತು ಸಮವೃತ್ತ ವಿವರಣಗಳಿವೆ. ಪ್ರಾಸಗಳ ವಿಷಯವನ್ನು ಮೊದಲ ಅಧಿಕಾರದಲ್ಲಿ ಹೇಳುವಾಗ ಹೆಚ್ಚಾಗಿ ನೃಪತುಂಗನು ಕೊಟ್ಟ ಉದಾಹರಣ ಪದ್ಯಗಳನ್ನೇ ಎತ್ತಿ ಹೇಳಿದ್ದಾನೆ ಭಾಷೆಗಳ ವಿಷಯದಲ್ಲಿ–

"ಸಂಸ್ಕೃತಂ ಪ್ರಾಕೃತಮಪಭ್ರಂಶಂ ಪೈಶಾಚಿಕಮೆಂಬ ಮೂರುವರೆ ಭಾಷೆಗಳೊಳ್ ಪುಟ್ಟುವ ದ್ರವಿಡಾಂಧ್ರ ಕರ್ಣಾಟಾದಿ ಷಟ್‌ಪಂಚಾಶತ್ ಸರ್ವವಿಷಯುದ ಭಾಷಾಜಾತಿಗಳಕ್ಕುಂ" ಎಂದು ಉದ್ಗರಿಸಿದ್ದಾನೆ. ಅನಂತರ ಕನ್ನಡಕ್ಕೆ ವಿಶಿಷ್ಟವಾದ ಜಾತಿಗಳನ್ನು–

**"ಮದನವತಿಯಕ್ಕರಂ ಚೌ**
**ಪದಿ ಗೀತಿಕೆ ಯೇಳೆ ತಿವದಿಯುತ್ಸಾಹಂ ಷ।**
**ಟ್ಪದಿಯಕ್ಕರಿಕೆ ಕರಂ ಚೆ**
**ಲ್ವೊದವಿದೆ ಛಂದೋವತಂಸಮಬ್ಜದಳಾಕ್ಷೀ।"**

ಎಂಬ ಪದ್ಯದಲ್ಲಿ ಹೇಳಿದ್ದಾನೆ. ಸಮವೃತ್ತ ವಿವರಣವೆಂಬ ಎರಡನೆಯ ಅಧಿಕಾರದಲ್ಲಿ ಉಕ್ತೆಯಿಂದ ಉತ್ಕೃತಿಯವರೆಗೆ ೨೬ ಛಂದಸ್ಸುಗಳನ್ನು ಈ ಕವಿ ವಿವರಿಸಿದ್ದಾನೆ. ಮೂರನೆಯ ಆಶ್ವಾಸದಲ್ಲಿ ಇತರ ಸಮವೃತ್ತಗಳನ್ನೂ ಅರ್ಧಸಮ ಮತ್ತು ವಿಷಮ ವೃತ್ತಗಳನ್ನೂ ಮಾತ್ರಾಚ್ಛಂದಸ್ಸುಗಳನ್ನೂ ಮಾತ್ರಾಗಣಚ್ಛಂದಸ್ಸುಗಳನ್ನೂ ನಾಗವರ್ಮನು ಬಿತ್ತರಿಸಿದ್ದಾನೆ. ನಾಲ್ಕನೆಯ ಆಶ್ವಾಸ (ಅಧಿಕಾರ)ದಲ್ಲಿ ಇತರ ಮಾತ್ರಾಗಣಚ್ಛಂದಸ್ಸುಗಳನ್ನೂ ಐದನೆಯದರಲ್ಲಿ ಕನ್ನಡ ಮಾತ್ರಾಗಣಚ್ಛಂದಸ್ಸುಗಳನ್ನೂ ಆರನೆಯ ಆಶ್ವಾಸದಲ್ಲಿ ಷಟ್ ಪ್ರತ್ಯಯಗಳನ್ನೂ ವಿವರಿಸಿದ್ದಾನೆ ಕನ್ನಡ ಚಂಪೂಕಾವ್ಯಗಳಲ್ಲಿ ವಿಶೇಷವಾಗಿ ದೊರಕುವ ಷಡ್ವಿಧವೃತ್ತಗಳನ್ನು ಕಂಡು ಹಿಡಿಯುವ ಸುಲಭೋಪಾಯವನ್ನೂ ಈತ ತಿಳಿಸಿದ್ದಾನೆ:

**"ಗುರುವೊಂದಾದಿಯೊಳುತ್ಪಲಂ ಗುರು ಮೊದಲ್ಮೂರಾಗೆ ಶಾರ್ದೂಲಮಾ**
**ಗುರು ನಾಲ್ಕಾಗಿರಲಂತು ಸ್ರಗ್ಧರೆ ಗುರುದ್ವಂದ್ವಂ ಲಘುದ್ವಂದ್ವಮಾ।**
**ಗಿರೆ ಮತ್ತೇಭಮದೊಂದೆ ನಾಲ್ಕು ಲಘುವಿಂದಾ ಚಂಪಕಂ ಮತ್ತಮಾ**
**ಹರಿಣೀ ವೃತ್ತಮದಕ್ಕುಮಯ್ದು ಲಘುವಿಂ ಪಂಕೇಜ ಪತ್ರೇಕ್ಷಣೇ॥"**

ಎಂದಲ್ಲದೆ, ಅಂತ್ಯದಲ್ಲಿ–

**"ಗಿರಿಬಾಣಾನಲ ಚಂದ್ರದಿಗ್ಗಜಖರಾಂಭೋರಾಶಿಯುಗ್ಮಂಗಳಂ**
**ಬರೆ ದಟ್ಟಲ್ ತೆಗೆದಾಗಳಬ್ಧಿಗುಣ ರತ್ನಾದ್ರಿದ್ವಯಂ ದ್ರವ್ಯಭೂ।**
**ಶರಮೆಂಬೀಕ್ರಮದಿಂದ ಮೋಜೆಯೊಳೆ ಕೇಳ್ ಪಂಜ್ಕ್ತಕ್ರಮಂ ತಪ್ಪದಿಂ**
**ತಿರದೋದಲ್ ಸಲೆಗೂಢ ಲೇಖನಮಿದುಂ ಪಂಕೇಜ ಪತ್ರೇಕ್ಷಣೇ॥"**

ಎಂದು ನಾಗವರ್ಮನು ಮುಗಿತಾಯಗೊಳಿಸಿದ್ದಾನೆ.

ಈ ಗ್ರಂಥದಿಂದ ಛಂದಃಶಾಸ್ತ್ರದಲ್ಲಿ ವೃತ್ತಗಳ ದೆಸೆಯಿಂದ ಕನ್ನಡ ಪರಿಪುಷ್ಟವಾದುದನ್ನು ಕಾಣುತ್ತೇವೆ. ಚಂಪುವು ಕನ್ನಡದ ಕೊಡುಗೆಯೆಂದು ಹೇಳಲು ಉದಾಹರಣೆಗಳ ಕಾಲವು ಸಾಕ್ಷಿ. ಜಾತಿಯು ಸಂಸ್ಕೃತಕ್ಕೆ ಹೋದುದಕ್ಕೆ ಉದಾಹರಣೆಯಿದೆ. ಇದೊಂದು ಸಂಸ್ಕೃತದ ರಗಳೆ (ಲಲಿತರಗಳೆ): ಇದಿಂತಿದೆ:

**"ವಿಕಚಕರ್ಣೋತ್ಪಲಸ್ಪರ್ಧಿತರಲೇಕ್ಷಣಾಃ**
**ಕೇಲಿತಾಲಕ್ವಣತ್ ಕನಕಮಯಕಂಕಣಾಃ।**
**ಸರಸನಖರಾಜಿವಿಚ್ಛುರಿತಭುಜಮಂಡಲಾಃ**
**ಕಾಂಚಿಕೋಲ್ಲಾಸವಶದರ್ಶಿತೋರುಸ್ಥಲಾಃ॥**
**ಸ್ವೈರಸಂಜಲ್ಪನಸ್ಮೇರಬಿಂಬಾಧರಾಃ**
**ಕರ್ಣಕಂಡೂಮಿಷದ್ವಲಿತಕಕ್ಷಾಂತರಾಃ।**
**ಪೃಥುನಿತಂಬ ಸ್ಖಲಲ್ಲಟಹಗತಿವಿಕ್ರಮಾಃ**
**ಸಹಜಶೃಂಗಾರರಸ ಭರತಿಮುಖವಿಭ್ರಮಾಃ॥**
**ಪೀನಕುಚಕುಂಭದರ್ಪಾತ್ರುಟತ್ ಕಂಚುಕಾಃ**
**ಶಾಲಿವಪ್ರೇಷುಯಾಂತ್ಯಃ ಕ್ಷಣಂ ಗೋಪಿಕಾಃ।**
**ಪಾಂಥಸಾರ್ಥೇಷು ನಯನೋತ್ಸವಂ ಕುರ್ವತೇ**
**ಯತ್ರ ತಾಪಂ ಪುನಶ್ಚಿರ ಮುಪಾತನ್ವತೇ॥**

ಡಾಕ್ಟರ್ ಎ. ವೆಂಕಟಸುಬ್ಬಯ್ಯನವರ ಗ್ರಂಥದಲ್ಲಿ ಈ ಉದಾಹರಣೆಯಿದೆ. ಇದರಿಂದ ಸಂಸ್ಕೃತಕ್ಕೂ ಕನ್ನಡದ ಕೊಡುಗೆ ಇದೆ ಎಂಬುದು ದೃಢಪಡುತ್ತದೆ. ಇನ್ನು "ಛಂದೋಂಬುಧಿ"ಯು ಸಂಸ್ಕೃತ ಕೊಟ್ಟ ವೃತ್ತ ದಾನವನ್ನು ವಿಸ್ತಾರವಾಗಿ ಕನ್ನಡದಲ್ಲಿ ವಿವರಿಸಿಬಿಟ್ಟಿದೆ.

ಕ್ರಿ.ಶ ೧೫೦೦ರಲ್ಲಿದ್ದ ಈಶ್ವರ ಕವಿಯ "ಕವಿಜಿಹ್ವಾಬಂಧನ"ದಲ್ಲಿ ನಾಲ್ಕು ಪರಿಚ್ಛೇಗಳ ಮೂಲಕ ಗಣಗಳೂ ಪ್ರಾಸುವಡಿಗಳೂ ಅಕ್ಷರಗಳೂ ಭಾವ, ಅಲಂಕಾರ, ಕಂದ, ಷಟ್ಪದಿಗಳ ಲಕ್ಷಣಗಳನ್ನು ಹೇಳಿದ್ದು ಸ್ಮರಣೀಯ.

ಕ್ರಿ.ಶ ೧೬೫೦ರಲ್ಲಿದ್ದಿರಬಹುದಾದ ಗುಣಚಂದ್ರನು ತನ್ನ "ಛಂದಃಸಾರ"ದಲ್ಲಿ (೧) ಸಂಜ್ಞಾಪ್ರಕರಣ, (೨) ಮಾತ್ರಾಚ್ಛಂದೋಲಕ್ಷಣ, (೩) ಸಮವೃತ್ತ ಪ್ರಕರಣ, (೪) ಸಂಕೀರ್ಣ

ಪ್ರಕರಣ, (೫) ತಾಳವೃತ್ತಾದಿ ಎಂಬ ೫ ಅಧ್ಯಾಯಗಳಲ್ಲಿ ಛಂದಃ ಶಾಸ್ತ್ರವನ್ನು ವಿವರಿಸಿದನು. ಸಂಕೀರ್ಣ ಪ್ರಕರಣದಲ್ಲಿ ದಂಡಕ, ಷೋಡಶಮಾತ್ರಾದ್ವಿಪಾದ, ಷೋಡಶ ಮಾತ್ರಾಚತುಷ್ಪಾದ, ಪಾದಪಾದ ಭಿನ್ನ ಮಾತ್ರ ದ್ವಿಪಾದಿ, ಅರ್ಧಸಮವೃತ್ತ, ವಿಷಮವೃತ್ತ, ಪ್ರಸ್ತಾರ, ನಷ್ಟ, ಉದ್ದಿಷ್ಟ, ಲಗಕ್ರಿಯೆ, ಸಂಖ್ಯಾನ ಎಂಬ ಅಂಶಗಳನ್ನು ವಿವರಿಸಲಾಗಿದೆ. ಒಂದನೆಯ ನಾಗವರ್ಮನ ಗ್ರಂಥಕ್ಕಿಂತಲೂ ಗುಣಚಂದ್ರನ ಗ್ರಂಥ ದೊಡ್ಡದಲ್ಲವಾದರೂ ಕನ್ನಡ ಛಂದೋಗತಿಯ ಪುರಾತನತೆಯ ದೆಸೆಯಿಂದ ನಮ್ಮ ಲಕ್ಷ್ಯವನ್ನು ಸೆಳೆಯುತ್ತದೆ ಈತ ಹೇಳಿದ–

ಯತಿ

**ಗಣನಿಯಮದಿಂದ ಯತಿಯಂ**
**ಗಣಿಸುವರಾ ಗಣವು ಕೆಡಲು ಯತಿಯುಂ ಕೆಡುಗುಂ।**
**ಗಣಯತಿಯಿಲ್ಲದ ಕವಿತೆಯು**
**ತಣಿಪುವುದೇ ವಿಬುಧತಲೆಯ ನಿಯಮಸ್ಥಳದೊಳ್॥**

ಪಥ್ಯೆ

**ದಳಗಳೊಳಾದ್ಯಂ ಪಾದಂ**
**ಪೊಳೆಯಲ್ ತ್ರ್ಯಂಶಾಢ್ಯಮಾಗಿರಲ್ ಪಥ್ಯಾಖ್ಯಂ।**
**ಅಳವಟ್ಟಿತರಾಂಘ್ರಿಗಳೊಳು**
**ತಿಳಿಗಣಗಳ ನಿಯಮವಿಲ್ಲ ಬುಧಮತದಿಂದಂ॥**

ತಾಳ

**ಧ್ರುವತಾಳ ಮಟ್ಟತಾಳಂ**
**ತಿವುಡಂ ರೂಪಕಮುಮಷ್ಟ ಝಂಪೆಯುಮೇಕಂ!**
**ತಿವುಗು ಮಿಂತೇಳುವಿಧಂ**
**ಸೇವಿಸುವರ್ ವೃತ್ತಬಂಧರಚನಗಳಿಂದಂ॥**

ತ್ರಿವುಡೆ

**ಪ್ರಾಸಗಳು ಮೂರಾಗಿ ಲೇಸಿನಿಂ ಬರುತಿರಲು**
**ಮಾಸದೇ ಮಾತ್ರೆಗಳ ತ್ರಿವುಡೆ ತಾನೊಗೆಗುಂ॥**

ಎಂಬ ಅಂಶಗಳು ಕನ್ನಡಕ್ಕಿರುವ ಸಂಸ್ಕೃತ ಸಂಬಂಧವನ್ನು ಎತ್ತಿಹೇಳುತ್ತವೆ.

೧೯ನೆಯ ಶತಮಾನದಲ್ಲಿದ್ದ ಮುಳಬಾಗಿಲಿನ ಧೋಂಡೋ ನರಸಿಂಹನು ವ್ಯಾಕರಣಕ್ಕೆ ಸಂಬಂಧಿಸಿದ "ಕನ್ನಡ ಕೈಪಿಡಿ" ಮತ್ತು "ನುಡಿಗಟ್ಟು"ಗಳನ್ನಲ್ಲದೆ "ಛಂದಃಸಾರ" ಎಂಬ ಛಂದೋಗ್ರಂಥವನ್ನೂ ಬರೆದನು. ಈ ಎಲ್ಲವುಗಳಿಗೂ ಸಂಸ್ಕೃತ ಪರಂಪರೆ ಅಥವಾ ಸಂಸ್ಕೃತ ಪರಂಪರೆಯನ್ನಾಧರಿಸಿದ ಕನ್ನಡ ಶಾಸ್ತ್ರಪರಂಪರೆಗಳೇ ಆಧಾರವೆಂಬುದು ಸುವಿದಿತ.

# ಇತರ ಶಾಸ್ತ್ರಗ್ರಂಥಗಳು

ಸುಮಾರು ಕ್ರಿ.ಶ ೧೩೦೦ ರಲ್ಲಿದ್ದಿರಬಹುದಾದ ಅಮೃತನಂದಿಯು ವೈದ್ಯ ನಿಘಂಟನ್ನು ಕನ್ನಡದಲ್ಲಿ ಬರೆದಿದ್ದಾನೆ. ಇದರಲ್ಲಿ ಸಂಸ್ಕೃತ ಮೂಲ ಪದಗಳಿಗೆ ಕನ್ನಡದ ಪರ್ಯಾಯ ಪದಗಳಿವೆ. ವೈದ್ಯಶಾಸ್ತ್ರಕ್ಕೆ ಸಂಸ್ಕೃತದಲ್ಲಿ ಮೂಲಗ್ರಂಥಗಳನ್ನು ಚರಕ, ಸುಶ್ರುತ ಮುಂತಾದವರು ಬರೆದು ಒಂದು ಭಾರತೀಯ ವೈದ್ಯಶಾಸ್ತ್ರ ಪರಂಪರೆಯನ್ನು ಆಗಲೇ ನಿರ್ಮಿಸಿದ್ದರಿಂದ ಕನ್ನಡ ವೈದ್ಯಕೀಯ ಗ್ರಂಥಕರ್ತರು ಅದರ ಪ್ರಭಾವಕ್ಕೆ ಒಳಗಾಗದೆ ಉಳಿಯದಾದರು. ೧೧೪೫ರಲ್ಲಿದ್ದ ಎರಡನೆಯ ನಾಗವರ್ಮನ "ವಸ್ತುಕೋಶ" ಎಂಬ ನಿಘಂಟನ್ನು ಮನಸ್ಸಿನಲ್ಲಿಟ್ಟುಕೊಂಡು ೧೩೯೮ರಲ್ಲಿದ್ದ ಅಭಿನವ ಮಂಗರಾಜನು "ಅಭಿನವನಿಘಂಟು" ಅಥವಾ "ಮಂಗಾಭಿದಾನ" ಎಂಬ ಕನ್ನಡ ನಿಘಂಟನ್ನು ಬರೆದನು. ಇದು ವಾರ್ಧಕ ಷಟ್‌ಪದಿಯಲ್ಲಿದೆ. ಇದರಲ್ಲಿ ಸ್ವರ್ಗ, ಭೂ,ಪಾತಾಳ, ಸಾಮಾನ್ಯ, ನಾನಾರ್ಥ ಎಂಬ ೫ ಕಾಂಡಗಳಿವೆ. ಒಂದೊಂದು ಕಾಂಡವೂ ವರ್ಗಗಳಾಗಿ ಭಾಗಿಸಲ್ಪಟಿದೆ. ಈ ಗ್ರಂಥದಲ್ಲಿ ಸಂಸ್ಕೃತ ಶಬ್ದಗಳಿಗೆ ಕನ್ನಡ ಅರ್ಥಗಳನ್ನು ಕೊಡಲಾಗಿದೆ.

ಸುಮಾರು ೧೪೦೦ರಲ್ಲಿದ್ದ ಆಯತವರ್ಮನು ತನ್ನ "ಕನ್ನಡ ರತ್ನ ಕರಂಡಕ" ಎಂಬ ತತ್ವಶಾಸ್ತ್ರಗ್ರಂಥವನ್ನು ಬರೆದನು. ಭಾರತಕ್ಕೆ ವೇದೋಪನಿಷದಾದಿಗಳು ತತ್ವಶಾಸ್ತ್ರಕ್ಕೆ ಮೂಲ. ಅವುಗಳ ಖಂಡನೆ–ಮಂಡನೆಗಳು ಮುಂದಿನ ತತ್ವಶಾಸ್ತ್ರಗ್ರಂಥಗಳಿಗೆ ಪ್ರೇರಕಗಳಾದವು. ಜೈನ ತತ್ವಶಾಸ್ತ್ರವು ಈ ಮಾತಿಗೆ ಹೊರತಲ್ಲ. "ಕನ್ನಡ ರತ್ನ ಕರಂಡಕ" ಎಂಬ ಚಂಪೂಗ್ರಂಥದಲ್ಲಿ ಸಮ್ಯಗ್ ದರ್ಶನ ಸ್ವರೂಪ ನಿರೂಪಣ, ಸಮ್ಯಕ್ ಜ್ಞಾನ ಸ್ವರೂಪ ನಿರೂಪಣ, ಸಮ್ಯಗ್ ಚಾರಿತ್ರ ಸ್ವರೂಪ ನಿರೂಪಣ ಎಂದು ಮೂರು ಪರಿಚ್ಛೇದಗಳಿವೆ. ಜೈನ ತತ್ವಶಾಸ್ತ್ರವು ಸ್ಯಾದ್ವಾದ. ಅದು ಅನೈಕಾಂತಿಕತೆಯ ನಾನಾತ್ವವಾದ. ಮುಕ್ತರೆಲ್ಲರೂ ಅದರಲ್ಲಿ ಪರಿಪೂರ್ಣ ಪರಮಾತ್ಮರು. ಇದು ಅವೈದಿಕ. ೧೧೬೦ರಲ್ಲಿದ್ದ ಬಸವನು ಷಟ್‌ಸ್ಥಲವಚನ, ಶಿಖಾರತ್ನವಚನ, ಕಾಲಜ್ಞಾನವಚನ, ಮಂತ್ರಗೋಪ್ಯಗಳೆಂಬ ವೀರಶೈವ ಗ್ರಂಥಗಳನ್ನು ಬರೆದರೆ ಚೆನ್ನಬಸವನು ಷಟ್‌ಸ್ಥಲವಚನ, ಕರಣಹಸುಗೆ, ಮಿಶ್ರಾರ್ಪಣ, ಪದಮಂತ್ರಗೋಪ್ಯ, ಕಾಲಜ್ಞಾನ, ರುದ್ರಭಾರತದ ಸೃಷ್ಟಿ ಎಂಬ ತತ್ಸದೃಶ ವೀರಶೈವ ಗ್ರಂಥಗಳನ್ನು ಬರೆದನು. ವೀರಶೈವ ಮತಕ್ಕೆ ಬ್ರಹ್ಮಸೂತ್ರದ ಶ್ರೀಕಂಠ ಮತ್ತು ಶ್ರೀಕರ ಭಾಷ್ಯಗಳು ದೊಡ್ಡ ಆಧಾರ ಗ್ರಂಥಗಳು. ಅದರ ಸ್ಥೂಲನಾಮವು ಶಕ್ತಿ ವಿಶಿಷ್ಟಾದ್ವೈತ. ವಿಶಿಷ್ಟಾದ್ವೈತದ ಮೂಲಕಲ್ಪನೆ ರಾಮಾನುಜೀಯವೆಂಬುದು ಪ್ರಸಿದ್ಧ. ರಾಮಾನುಜನದು ಬ್ರಹ್ಮಸೂತ್ರದ ಶ್ರೀಭಾಷ್ಯ. ಅವರಿವರ ಸಮಕಾಲೀನತೆಯಿಂದ ವಿಶಿಷ್ಟಾದ್ವೈತ (Qualified Monism) ಕಲ್ಪನೆ ವೀರಶೈವ–

ವೀರವೈಷ್ಣವ ಮತ ಧರ್ಮಗಳಿಗೆ ಸಾಧಾರಣವೆಂದೂ ಈಯೆರಡಕ್ಕೂ ಬ್ರಹ್ಮಸೂತ್ರಾದಿ ಸಂಸ್ಕೃತಗ್ರಂಥಗಳು ಸ್ಫೂರ್ತಿಯ ಆಕರಗಳೆಂದೂ ನಿರ್ವಿವಾದವಾಗಿ ಹೇಳಬಹುದು. ಆದರೆ ಅಂತ್ಯಸ್ಥಿತಿಯು ಲಿಂಗೈಕ್ಯವಾಗಿರುವುದರಿಂದ ವೀರಶೈವವು "ವೀರಶೈವಾದ್ವೈತ"ವೆಂದೇ ಹೇಳಬಹುದು.

ಸುಮಾರು ೧೧೨೦ರಲ್ಲಿದ್ದ ರಾಜಾದಿತ್ಯನು ಗಣಿತ ಶಾಸ್ತ್ರದ ಗ್ರಂಥಗಳಾದ ವ್ಯವಹಾರಗಣಿತ, ಕ್ಷೇತ್ರಗಣಿತ, ವ್ಯವಹಾರ ರತ್ನ, ಲೀಲಾವತಿ, ಚಿತ್ರಹಸುಗೆ, ಜೈನಗಣಿತ ಸೂತ್ರ ಟೀಕೋದಾಹರಣ ಮೊದಲಾದ ಗಣಿತ ಗ್ರಂಥಗಳನ್ನು ಬರೆದನು. ಭಾರತದಲ್ಲಿ ಗಣಿತ ಶಾಸ್ತ್ರದ ದೊಡ್ಡ ಸಂಸ್ಕೃತ ಗ್ರಂಥವೆಂದು 'ಭಾಸ್ಕರಾಚಾರ್ಯನ "ಲೀಲಾವತಿ"ಯು ಮೊದಲೇ ಪ್ರಸಿದ್ಧವಾಗಿತ್ತು. ಪ್ರಸ್ತುತ ಕನ್ನಡ ಗಣಿತ ಶಾಸ್ತ್ರಕಾರನ ಗ್ರಂಥರಾಶಿಯಲ್ಲಿ "ಲೀಲಾವತಿ" ಎಂಬ ಗ್ರಂಥವೂ ಇರುವುದರಿಂದ ಸಂಸ್ಕೃತ ಗಣಿತಜ್ಞ ಭಾಸ್ಕರಾಚಾರ್ಯನಿಂದ ಈತನು ಪ್ರಭಾವಿತನಾಗಿರಲೇಬೇಕು.

ಕ್ರಿ.ಶ ೧೩೬೦ರಲ್ಲಿದ್ದ ಜೈನ ಕವಿ ಮಂಗರಾಜನು "ಖಗೇಂದ್ರ ಮಣಿ ದರ್ಪಣ" ಎಂಬ ವೈದ್ಯಶಾಸ್ತ್ರ ಗ್ರಂಥವನ್ನು ಬರೆದನು. ಇದು ಕಂದ–ವೃತ್ತಗಳಲ್ಲಿರುವ ಕನ್ನಡ ವಿಷ ವೈದ್ಯ ಗ್ರಂಥ. ವೈದ್ಯಗ್ರಂಥಗಳನ್ನು ಬರೆದಿರುವ ಆರ್ಯರ ಹಲವು ಮತಗಳಲ್ಲಿ ತನಗೆ ತಿಳಿದವುಗಳನ್ನು ತಾನು ಇದರಲ್ಲಿ ಸಂಗ್ರಹಿಸಿ ಬರೆದೆನೆಂದು ಈತ ಹೇಳಿದ್ದಾನೆ. ಐತಿಹಾಸಿಕವಾಗಿ ಜೈನ ಪರಂಪರೆಯು ವೈದಿಕ ಪರಂಪರೆಗೆ ಉತ್ತರ ಕಾಲೀನ. ಅದು ಕನ್ನಡವಲ್ಲದೆ ಸಂಸ್ಕೃತ ಗ್ರಂಥಗಳಿಂದಲೂ ತುಂಬಿದೆ. ಆದುದರಿಂದಲೇ ಈತನು–

**ಪರಜಿನವಚನಾಂಭೋರಾಶಿಯೊಳ್ ತಮ್ಮ ಧೀಮಂ**

**ದರಸುಮಥನ ಜಾತಂ ವೈದ್ಯಶಾಸ್ತ್ರಾಮೃತಂ ತದ್।**

**ಪರಮುನಿಪತಿಯಪ್ಪೀ ಪೂಜ್ಯಪಾದೋಕ್ತಿಯೊಳ್ ಸ್ಥಾ**

**ವರವಿಷಹರಮಂ ಸಂಕ್ಷೇಪದಿಂದೊಪ್ಪೆ ಪೇಳ್ದೆಂ॥**

ಎಂದು ತನ್ನ ಗ್ರಂಥ ಋಣದ ಒಂದಂಶವನ್ನು ಹೇಳಿಕೊಂಡಿದ್ದಾನೆ.

ಸೈಗೊಟ್ಟಶಿವಮಾರನೆಂಬ ಗಂಗರಾಜನು ಸುಮಾರು ಕ್ರಿ.ಶ ೮೦೦ ರಲ್ಲಿ ಗಜಶಾಸ್ತ್ರ (Elephantology) ವೊಂದನ್ನು ಬರೆದ ಬಗ್ಗೆ ನಗರದ ಶಾಸನವೊಂದರಿಂದ ತಿಳಿದು ಬರುತ್ತದೆ. ಗಜಶಾಸ್ತ್ರ–ಅಶ್ವಶಾಸ್ತ್ರಗಳು ಸಂಸ್ಕೃತದಲ್ಲಿ ಮೊದಲೇ ಪ್ರಸಿದ್ಧವಾಗಿರುವುದರಿಂದ ಕನ್ನಡದ ಶಾಸ್ತ್ರಕಾರರು ಅವುಗಳನ್ನು ಅವಲಂಬಿಸಿರುವುದು ನಿಃಸಂದೇಹ. ಅದೇ ಮೇರೆಗೆ ಕೀರ್ತಿವರ್ಮನು ಸುಮಾರು ೧೧೨೫ರಲ್ಲಿ ಗೋವೈದ್ಯ (Veterinary Science)ವನ್ನು ಬರೆದನು. ಅದು ಅಸಮಗ್ರವೂ ಅಶುದ್ಧವೂ ಆದ ಪ್ರತಿಯಲ್ಲಿದೆ. ಗದ್ಯದಲ್ಲಿ ಈ ಗ್ರಂಥವು ಗೋಗಳ ವ್ಯಾಧಿಗೆ ಔಷಧಗಳನ್ನೂ ಯಂತ್ರಗಳನ್ನೂ ಬರೆಹಾಕುವ ಕ್ರಮಗಳನ್ನೂ ವಿಸ್ತಾರವಾಗಿ ಬಣ್ಣಿಸುತ್ತದೆ. ಇದರ ಆಕರವು ನಿರ್ದಿಷ್ಟವಾಗಿಲ್ಲ–ಸಂಸ್ಕೃತ ಪುರಾಣಗಳಲ್ಲಿ ಯಾವುದಾದರೊಂದರ ಭಾಗವಾಗಿರಬಹುದೆಂಬುದು ಊಹೆ. ಸಂಸ್ಕೃತದ ಅಷ್ಟಾದಶ

ಮಹಾಪುರಾಣಗಳೂ ಶತೋತ್ತರ ಉಪಪುರಾಣಗಳೂ ಕ್ರಿಶ ಮೂರನೆಯ ಶತಮಾನದಿಂದಲೇ ವಿಶ್ವಕೋಶಗಳೆನ್ನಿಸಿ ಮೆರೆಯುತ್ತ ಬಂದಿರುವುದರಿಂದ ಮತ್ತು ಭಾರತದ ಎಲ್ಲೆಡೆಯೂ ವ್ಯಾಪಿಸುತ್ತ ಹೋದುದರಿಂದ ಸಂಸ್ಕೃತೇತರ ಗ್ರಂಥಕರ್ತರೆಲ್ಲರೂ ಭಾರತದಲ್ಲಿ ಅವುಗಳಿಂದ ಒಂದಲ್ಲ ಒಂದು ವಿಧದಿಂದ ಸಹಾಯವನ್ನು ಪಡೆದೇ ಗಜಾಶ್ವಗೋವೈದ್ಯ, ಮಾನವ ವೈದ್ಯ, ಗಣಿತಶಾಸ್ತ್ರ, ಜ್ಯೋತಿಃಶಾಸ್ತ್ರ, ವ್ಯಾಕರಣಚ್ಛಂದೋಲಂಕಾರಾದಿಶಾಸ್ತ್ರ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ನೀತಿಶಾಸ್ತ್ರ, ತತ್ವಶಾಸ್ತ್ರಗಳನ್ನು ರಚಿಸಿರುವುದು ಅವಿವಾದಾಸ್ಪದ. ಸಂಸ್ಕೃತ ಗ್ರಂಥ ಕರ್ತರಾದರೂ ಭಾರತದ ನಾನಾ ಪ್ರದೇಶಗಳಿಗೆ ಸೇರಿದವರಾಗಿದ್ದಾರೆ. ಎಲ್ಲರೂ ಯಾವುದಾದರೂ ಒಂದೇ ಒಂದು ಪ್ರಾಂತ ಅಥವಾ ಪ್ರದೇಶಕ್ಕೆ ಸೇರಿದವರಾಗಿರಲಿಲ್ಲ. ಆದುದರಿಂದಲೇ ಸಂಸ್ಕೃತವು ಅನಾದಿಯಿಂದಲೂ ಭಾರತದ ಅಂತಃಪ್ರಾಂತೀಯ ಭಾಷೆಯಾಗಿತ್ತು. ಅದರ ಸ್ಥಾನವನ್ನು ಇಂಗ್ಲೀಷು ಅನಂತರ ಕಸಿದುಕೊಂಡಿತು. ಹಿಂದಿ ಈಗ ಇಂಗ್ಲೀಷಿನ ಅಂತಃಪ್ರಾಂತೀಯತೆಯನ್ನು ಕಸಿದುಕೊಳ್ಳಲು ಯತ್ನಿಸುತ್ತಿದೆ. ಆದರೆ ಈ ಇಂಗ್ಲೀಷ–ಹಿಂದಿಗಳ ಪರ ಮತ್ತು ವಿರೋಧಿಗಳ ಪ್ರಚಾರವು ಕಾಲಾಂತರದಲ್ಲಿ ಪರಸ್ಪರ ಪ್ರತಿಹತಗಳಿಂದ ನಿಷ್ಕ್ರಿಯವಾಗಿ ಸಂಸ್ಕೃತಕ್ಕೇ ಮೊದಲಿನ ಸ್ಥಾನವನ್ನು ತಂದುಕೊಡುವುದು ಅತ್ಯಂತ ಸಂಭವ.

ಕ್ರಿ.ಶ ೧೦೪೯ರಲ್ಲಿದ್ದ ಶ್ರೀಧರಾಚಾರ್ಯನು "ಜಾತಕತಿಲಕ" ಎಂಬ ಜ್ಯೋತಿಃಶಾಸ್ತ್ರವನ್ನು ಬರೆದನು. ಅದರಲ್ಲಿರುವವು ಕಂದಗಳು ಮತ್ತು ವೃತ್ತಗಳು. ಸಂಸ್ಕೃತದಲ್ಲಿ ವರಾಹ ಮಿಹಿರಾದಿಗಳು ಹಿಂದೆಯೇ ಜ್ಯೋತಿಃಶಾಸ್ತ್ರಗಳನ್ನು ಬರೆದಿದ್ದರು. ಶ್ರೀಧರಾಚಾರ್ಯನು–

**ಅಮಿತಾರ್ಥಂ ಸಕಲಾಚಾ**

**ರ್ಯಮತಾಂತಃ ಸಾರಮತಿಗಭೀರಂ ಹೃದಯಂ।**

**ಗಮಮನ್ಯಶಾಸ್ತ್ರನಿರಪೇ**

**ಕ್ಷಮೆಂಬಿನಂ ಖ್ಯಾತಮಾಯ್ತು ಜಾತಕತಿಲಕಂ॥**

ಎಂದು ಪೂರ್ವಾಚಾರ್ಯರೆಲ್ಲರ ನೆರವನ್ನೂ ಪಡೆದೆನೆಂದಿದ್ದಾನೆ, ಇದರಲ್ಲಿ ಸಂಜ್ಞೆ, ಮಹಾಬಲ, ಗರ್ಭ, ಜನ್ಮ, ತಿರ್ಯಗ್ಜನ್ಮ, ಅರಿಷ್ಟ, ಅರಿಷ್ಟಭಂಗ, ಆಯುರ್ದಾಯ, ದಶಾಂತರ್ದಶೆ, ಅಷ್ಟಕವರ್ಗ, ಜೀವ, ರಾಜಯೋಗ, ರಾಶಿ, ಲಗ್ನಭಾವ, ದ್ರೇಕ್ಕಾಣ, ದೃಷ್ಟ, ಅನಿಷ್ಟ, ಸ್ತ್ರೀಜಾತಕ, ನಿರ್ಯಾಣ, ನಷ್ಟಜಾತಕ, ನಾಭಿಸಂಯೋಗ, ಚಂದ್ರಯೋಗ, ದ್ವಿತ್ರಿಯೋಗ, ದೀಕ್ಷಾಯೋಗ–ಎಂಬ ೨೪ ಅಧಿಕಾರಗಳಿವೆ. ಈ ವಿಷಯಗಳೆಲ್ಲ ಕರ್ಣಾಟಕದ ಜೋಯಿಸರೆಲ್ಲರಿಗೂ ಸಂಸ್ಕೃತ ಮೂಲಗಳಿಂದ ಸುಪರಿಚಿತವಾದಂಥವುಗಳು.

ಸುಮಾರು ೧೪೦೦ರಲ್ಲಿದ್ದ ಅಭಿನವಚಂದ್ರನು "ಅಶ್ವಶಾಸ್ತ್ರ" ಎಂಬ ಗ್ರಂಥವನ್ನು ಬರೆದನು. ಈತನು ತನಗಿಂತ ಹಿಂದಿದ್ದ ಅಶ್ವಶಾಸ್ತ್ರಕಾರರಲ್ಲಿಯ ಕೆಲವರ ಮತವನ್ನು ಹೊಸಗನ್ನಡದಿಂದ ಹೇಳುತ್ತೇನೆಂದು ಉದ್ಗರಿಸಿದ್ದಾನೆ:

**"ಅನುಪಮಹಯಶಾಸ್ತ್ರಾಗಮ**

**ವನನಿಧಿಯೊಳ್ ಸಿಂಹದತ್ತಕೃತಿಲಕ್ಷಣಮಂ।**

**ದಿನಕರತನಯನ ರೇವಂ**

**ತನ ಮತಮಂ ಪೇಳ್ವೆನೆಸೆಯೆ ಪೊಸಗನ್ನಡದಿಂ॥"**

ಇದರಲ್ಲಿ ೧೬ ಅಧ್ಯಾಯಗಳಿವೆ; ೮೮೮ ಪದ್ಯಗಳಿವೆ: ಪದ್ಯಗಳು ಹೆಚ್ಚಾಗಿ ಕಂದಚ್ಛಂದದಲ್ಲಿವೆ. ಇದರಲ್ಲಿ ಸರ್ವಾಂಗ ಪರೀಕ್ಷೆ, ವರ್ಣ, ಸುಳಿ, ಹಲ್ಲಿನಿಂದ ವಯಸ್ಸನ್ನು ನಿರ್ಣಯಿಸುವುದು, ಹಯವಯೋಲಕ್ಷಣ, ಪೋಷಣವಿಧಿ, ಚಿಕಿತ್ಸೆ ಮೊದಲಾದ ವಿಷಯಗಳನ್ನು ಹೇಳಲಾಗಿದೆ.

ಕ್ರಿ.ಶ ೧೨೦೦ರಲ್ಲಿದ್ದ ದೇವೇಂದ್ರಮುನಿಯು ಬಾಲಗ್ರಹ ಚಿಕಿತ್ಸೆಯನ್ನು ಬರೆದನು. ೧೨೫೦ರಲ್ಲಿದ್ದ ಹರಭಕ್ತನು ಕನ್ನಡದಲ್ಲಿ ವೇದಭಾಷ್ಯವನ್ನು ಬರೆದನೆಂದು ಚೆನ್ನಬಸವ ಪುರಾಣದಿಂದ ತಿಳಿದು ಬರುತ್ತದೆ. ಆದರೆ ಅದೀಗ ಉಪಲಬ್ಧವಾಗಿಲ್ಲ. "ಸೂಪಶಾಸ್ತ್ರ" ಎಂಬ ಪಾಕಶಾಸ್ತ್ರಗ್ರಂಥವನ್ನು ಜಯಬಂಧುನಂದನನು ಕ್ರಿ.ಶ ೮೦೦ರಲ್ಲಿ ಕನ್ನಡದಲ್ಲಿ ಬರೆದನು. ಅದೊಂದು ಚಂಪೂಗ್ರಂಥ. ಇದರ ಆಕರ ತಿಳಿಯದು. ಬಹುಶಃ ಇದನ್ನು ನಾವು ಕನ್ನಡದ ಕೊಡಿಗೆ ಎಂದು ಹೇಳಬಹುದಾಗಿದೆ.

೧೬೨೩ರಲ್ಲಿದ್ದ ಸೋಸಲೆ ರೇವಣಾಚಾರ್ಯನು ಶಾರೀರಪ್ರಕಾಶಿಕೆ, ಅಂತಃಕರಣ ಪ್ರಕಾಶಿಕೆ, ಸ್ವಸ್ವರೂಪಪ್ರಕಾಶಿಕೆ. ಪರಮಾತ್ಮಪ್ರಕಾಶಿಕೆ, ನಿಜದೀಪ್ತಿಪ್ರಕಾಶಿಕೆ ಎಂಬ ೫ ವೀರಶೈವ ತತ್ವಜ್ಞಾನದ ಗ್ರಂಥಗಳನ್ನು ಬರೆದನು. ಇವು ಒಂದೇ ಗ್ರಂಥದ ೫ ಭಾಗಗಳಾಗಿರಬಹುದೆಂದು ಕವಿಚರಿತಕಾರರು ಹೇಳಿದ್ದಾರೆ. ಕ್ರಿ.ಶ ಒಂದನೆಯ ಶತಮಾನದಿಂದ ಉತ್ತರ–ದಕ್ಷಿಣ ಭಾರತಗಳಲ್ಲಿ ಶೈವ ಮತವು ನಾನಾತತ್ವಭೇದಗಳಿಂದ ಬೆಳೆಯುತ್ತ ಬಂದು ಕರ್ಣಾಟಕದಲ್ಲಿ ಕೊನೆಯದಾಗಿ ಸ್ಪಷ್ಟರೂಪ ತಾಳಿತು. "ಶ್ರೀ ಮದ್ವೇದವೇದ ಶಿರಃ ಶಿವಾಗಮ ಪುಣ್ಯ ಪುರಾಣ ಪ್ರಭೃತಿ ಪ್ರಭೂತ ಪ್ರಥಿತ ಪ್ರಮಥ ಸಂಗೀತ ಗೀತಾನವದ್ಯ ಶ್ರೀ ವೀರಶೈವ ಷಟ್‌ಸ್ಥಲ ಶಿವಯೋಗ ಶಿವಾದ್ವೈತ ಸತ್‌ಪದ ಪ್ರತಿಷ್ಠಾಪನಾಚಾರ್ಯವರ್ಯ" ಎಂಬ ಬಿರುದು ಇವನಿಗಿರುವುದರಿಂದ ಇವನು ವೈದಿಕ ವಾಙ್ಮಯವನ್ನು ಚೆನ್ನಾಗಿ ಓದಿರಬೇಕು. ಅಲ್ಲಮಪ್ರಭುವಿನಂತೆಯೇ "ವಿಶಿಷ್ಟ" ಇಲ್ಲದ ಶಿವಾದ್ವೈತವನ್ನು ಇವನು ಪ್ರತಿಪಾದಿಸಿರುವುದು ಸ್ಪಷ್ಟ.

ಮೇಲೆ ಹೇಳಿದ ಗ್ರಂಥದಷ್ಟೇ ಗಣ್ಯವಾದ ಇನ್ನೊಂದು ಕನ್ನಡ ತತ್ವಶಾಸ್ತ್ರ ಗ್ರಂಥವೆಂದರೆ, ರಂಗನಾಥ ಅಥವಾ ಮಹಾಲಿಂಗರಂಗ ಕವಿಯ "ಅನುಭವಾಮೃತ". ಇದರ ಕಾಲ ೧೬೭೫. ಇದು ಭಾಮಿನೀ ಷಟ್‌ಪದಿಯಲ್ಲಿದೆ. ಅಧ್ಯಾಯಗಳು ೧೧, ಪದ್ಯಗಳು ೮೦೧. ಇದರ ಪ್ರತಿಪಾದನೆಯ ವಿಷಯಗಳೆಂದರೆ, ಅಧಿಕಾರನಿರ್ಣಯ, ವೈರಾಗ್ಯ, ತ್ವಂಪದ ನಿರ್ಣಯ, ತತ್‌ಪದನಿರ್ಣಯ, ಅಸಿಪದನಿರ್ಣಯ, ಸಪ್ತಭೂಮಿಕೆಗಳು, ಪರಮಾತ್ಮಪದನಿರ್ಣಯ, ಮಾಯಾಮಿಥ್ಯಾತ್ವ, ಜೀವತ್ರಯ, ಜೀವನ್ಮುಕ್ತಿ,

ನಿರ್ಗುಣಾರಾಧನೆಗಳು. ಸಂಸ್ಕೃತದಲ್ಲಿ ಈ ವಿಷಯಗಳ ಬಗ್ಗೆ ಅನೇಕಾನೇಕ ಪಾಂಡಿತ್ಯ ಪೂರ್ಣವಾದ ಗ್ರಂಥಗಳಿವೆ. ಆ ಮೊಸರಿನ ಸಮುದ್ರವನ್ನು ಕಡೆದು ಈ ಕವಿಯು ಇಂಥ ಬೆಣ್ಣೆಯ ಮುದ್ದೆಯನ್ನು ತೆಗೆದದ್ದು ಸರ್ವಥಾ ಶ್ಲಾಘ್ಯ. ಇವನು ಕಠಿನವಾದ ಅದ್ವೈತವನ್ನು ಹೀಗೆ ತಿಳಿಗನ್ನಡ ಭಾಮಿನಿಯಲ್ಲಿ ಸುಶ್ರಾವ್ಯವಾಗಿ ಬರೆದದ್ದು ತತ್ವಶಾಸ್ತ್ರಗ್ರಂಥರಾಶಿಗೇ ಒಂದು ಒಳ್ಳೆಯ ಕಾಣಿಕೆ. ಈತನ ಈ ಪದ್ಯವು ಸಾರ್ಥಕಃ

**ಸುಲಿದ ಬಾಳೆಯ ಹಣ್ಣಿನಂದದಿ**

**ಕಳೆದ ಸಿಗುರಿನ ಕಬ್ಬಿನಂದದಿ**

**ಇಳಿಸಿದುಷ್ಣದ ಹಾಲಿನಂದದಿ ಸುಲಭವಾಗಿರ್ಪ**

**ಲಲಿತವಹ ಕನ್ನಡದ ನುಡಿಯಲಿ**

**ತಿಳಿದು ತನ್ನೊಳು ತನ್ನ ಮೋಕ್ಷವ**

**ಗಳಿಸಿ ಕೊಂಡೊಡೆ ಸಾಲದೇ ಸಂಸ್ಕೃತದೊಳಿನ್ನೇನು॥**

ಗಡುಚಾದ ಸಂಸ್ಕೃತ ಗ್ರಂಥಗಳಲ್ಲಿ ಹೇಳಿದ ವೇದಾಂತೇತರ ವಿಷಯಗಳನ್ನೂ ಇಷ್ಟೇ ಲಲಿತವಾಗಿ ಹೇಳ ಹೊರಡಲು ಇನ್ನೂ ಅವಕಾಶವಿದೆ. ಏಕೆಂದರೆ ರಾಜ್ಯದ ಎಲ್ಲ ವ್ಯವಹಾರಗಳನ್ನೂ ಈಗ ಕನ್ನಡದಲ್ಲಿಯೇ ಮಾಡಲು ತಳಪಾಯವನ್ನಿಡಲಾಗಿದೆ. ಅನಿವಾರ್ಯವಾದ ಪಾರಿಭಾಷಿಕಗಳಿಗೆ ಸಂಸ್ಕೃತವು ಮೊದಲ ಆಕರ. ಕೇಂದ್ರ ಸರಕಾರ ಹಿಂದೆಯೇ ಹೊರಡಿಸಿದ್ದ ಒಂದು ಪರಿಪತ್ರದಲ್ಲಿ ಪಾರಿಭಾಷಿಕ ಪದಗಳನ್ನು ನಿರ್ಮಿಸುವಾಗ ಮತ್ತು ಬಳಸುವಾಗ ನೂರಕ್ಕೆ ೬೦ ರಷ್ಟು ಸಂಸ್ಕೃತ ಆಕರಗಳಿಂದ, ನೂರಕ್ಕೆ ೩೦ ರಷ್ಟು ಇಂದಿನ ಪ್ರಸಿದ್ಧ ಪ್ರಾದೇಶಿಕ ಭಾಷೆಗಳಿಂದ ಮತ್ತು ನೂರಕ್ಕೆ ೧೦ ರಷ್ಟು ಇಂಗ್ಲೀಷಿನಿಂದ ತೆಗೆದುಕೊಳ್ಳಬೇಕೆಂದು ವಿಧಿಸಿದ್ದು ನ್ಯಾಯವೆಂದು ಸಂಸ್ಕೃತ–ಕನ್ನಡಗಳ ಸಂಬಂಧವನ್ನು ರಂಗನಾಥಕವಿಯಂತೆ ತಿಳಿದ ಯಾರೂ ಹೇಳದಿರಲಾರರು. ಸಂಸ್ಕೃತ ಮೂಲವನ್ನು ಓದುವ ಅಗತ್ಯವಿಲ್ಲದಷ್ಟು ಶುದ್ಧವಾಗಿ, ಮೂಲಕ್ಕೆ ದ್ರೋಹ ಬಗೆಯದೆ ಕನ್ನಡದಲ್ಲಿ ಶಾಸ್ತ್ರಗ್ರಂಥಗಳು ಹೊರಬೀಳಲು ಇದು ಸದವಕಾಶ. ಇಂಥ ಪ್ರಯತ್ನದಲ್ಲಿ ಗಣ್ಯ ಹೆಸರಿಂದು ಶ್ರೀ ಎಸ್.ವಿ.ಪರಮೇಶ್ವರ ಭಟ್ಟರದ್ದು. ಅವರ ಸೇವೆ ಕಾವ್ಯಪ್ರಪಂಚದ್ದು. ಶಾಸ್ತ್ರಪ್ರಪಂಚಕ್ಕೆ ಅಂಥ ಸೇವೆ ಸಲ್ಲಿಸುವವರು ಡಾಕ್ಟರ್ ಕೆ. ಕೃಷ್ಣಮೂರ್ತಿಗಳನ್ನು ನಿದರ್ಶನವನ್ನಾಗಿ ತೆಗೆದುಕೊಳ್ಳಬಹುದು.

ಕ್ರಿ. ಶ. ೧೪೫೦ರಲ್ಲಿದ್ದ ಪರಂಜ್ಯೋತಿಯತಿಯು “ಅನುಭವ ಮುಕುರ” ಎಂಬ ತತ್ವಶಾಸ್ತ್ರ ಗ್ರಂಥವನ್ನು ತ್ರಿಪದಿಯಲ್ಲಿಬರೆದನು. ಇದರಲ್ಲಿ ೧೬ ಸಂಧಿಗಳೂ ೧೦೨ ಸೂತ್ರಗಳೂ ೯೯೫ ತ್ರಿಪದಿಗಳೂ ಇವೆ. ಈ ಯತಿಯು “ವಿದ್ಯಾಶ್ರಮ” ಎಂಬ ಗುರುವಿನ ಶಿಷ್ಯ. ಈ ಗ್ರಂಥವು ಅದ್ವೈತವೇದಾಂತವನ್ನು ಸುಲಲಿತವಾಗಿ ಪ್ರತಿಪಾದಿಸುತ್ತದೆ. ಇದರ ಆಕರಗಳೂ ಸಂಸ್ಕೃತದಲ್ಲಿರುವ ಅದ್ವೈತ ವಾಙ್ಮಯ ಎಂಬುದನ್ನು ಹೊಸದಾಗಿ ಹೇಳಬೇಕಾಗಿಲ್ಲ.

ಕ್ರಿ.ಶ ೧೪೩೦ರಲ್ಲಿದ್ದ ಮಗ್ಗೆಯ ಮಾಯಿದೇವನು ಅನುಭವ ಸೂತ್ರ, ಪ್ರಭುಗೀತೆ, ಏಕೋತ್ತರಮಾಯಿಶತಸ್ಥಲ ಷಟ್‌ಪದಿ, ಷಟ್‌ಸ್ಥಲಗದ್ಯ, ಶತಕತ್ರಯ, ಮಗ್ಗೆಯ ಮಾಯಿದೇವ ವಚನ ಎಂಬ ೬ ತತ್ವ ಗ್ರಂಥಗಳನ್ನು ವಿರಚಿಸಿದನು. ಈ ಗ್ರಂಥಗಳು ವೀರಶೈವ ಸಿದ್ಧಾಂತಕ್ಕೆ ಅನುಸಾರವಾಗಿ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಬೋಧಿಸುತ್ತವೆ. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳ ಕಲ್ಪನೆಗೆ ಉಪಲಬ್ಧವಾಗಿರುವ ಗ್ರಂಥಗಳು ಸಂಸ್ಕೃತ ಮೂಲದವುಗಳ ಹರಿಪಾರಮ್ಯ–ಹರಪಾರಮ್ಯಗಳಲ್ಲಿ ಒಂದನ್ನು ಹಿಡಿದು ಹರಿಯೇ ಪರಬ್ರಹ್ಮ ಅಥವಾ ಹರನೇ ಪರಬ್ರಹ್ಮ ಎಂಬ ಮತಗಳು ಜನಿಸಿದ್ದು ಸರ್ವವಿದಿತ. ಶಿವೈಕ್ಯವನ್ನು ಪರಮಸಿದ್ಧಿ ಎಂದು ಹೇಳುವ ವೀರಶೈವ ಸಿದ್ಧಾಂತವು ಪರಬ್ರಹ್ಮೈಕ್ಯವೇ ಮುಕ್ತಿ ಎಂಬ ಅದ್ವೈತ ಕಲ್ಪನೆಗೆ ಸರಿಸಮಾನವಾಗಿದೆ. ಶಕ್ತಿ ವಿಶಿಷ್ಟಾದ್ವೈತವೆಂದು ಕರೆದಾಗಲೂ "ಶಕ್ತಿ–ಶಕ್ತಿಮತೋರಭೇದಃ" ಎಂಬ ಸೂತ್ರದ ಪ್ರಕಾರ ಆತ್ಯಂತಿಕವಾಗಿ ಅದು ಅದ್ವೈತವೇ ಆಗುವುದು. ಆದರೆ ಅದ್ವೈತದಲ್ಲಿ "ಜೀವನ್ಮುಕ್ತಿ"ಯೊಂದು ವಿಶಿಷ್ಟ. ಮರಣೋತ್ತರ ಮುಕ್ತಿಯು ಸರ್ವ ಸಾಧಾರಣ. ಮರಣೋತ್ತರ ಮುಕ್ತಿಯಲ್ಲಿಯೂ ಸಾಯುಜ್ಯ ಅಥವಾ ಪರಮ ಸತ್ಯವಾದ ಪರಬ್ರಹ್ಮದೊಡನೆ ಅನಂತ ಐಕ್ಯವು ಮತ್ತು ಪೂರ್ಣವಾದ ಐಕ್ಯವು ಅದ್ವೈತಕ್ಕೆ ವಿಶಿಷ್ಟ.

ಕ್ರಿ. ಶ ಸುಮಾರು ೧೭೦೦ರಲ್ಲಿದ್ದ ಶ್ರೀ ಶೈಲಾಚಾರ್ಯನು ಬರೆದ "ತತ್ವತ್ರಯ ವಿವರಣ" ಎಂಬ ತತ್ವಶಾಸ್ತ್ರವು ಚಿತ್, ಅಚಿತ್ ಮತ್ತು ಈಶ್ವರ ಎಂಬ ಮೂರು ವಿಶಿಷ್ಟಾದ್ವೈತ ತತ್ವವಿವೇಕವನ್ನು ಪ್ರತಿಪಾದಿಸುವ ಕನ್ನಡ ಗ್ರಂಥ. ಇದರ ಸಂಸ್ಕೃತದ ಮೂಲವು ರಾಮಾನುಜನ ಶ್ರೀಭಾಷ್ಯ. ಪರಬ್ರಹ್ಮ ಸಾರೂಪ್ಯವು ಇದರ ಮುಕ್ತಿ ಲಕ್ಷಣ. ಜೈನರ ಮುಕ್ತರೆಲ್ಲರೂ ಪರಮೇಶ್ವರರೇ ಎಂದು ಹೇಳುವುದನ್ನಿದು ಹೋಲುತ್ತದೆ. ವೇದಾಂತದ ಸಂಸ್ಕೃತ ಗ್ರಂಥಗಳೊಡನಿರುವ ಕನ್ನಡ ಸಂಬಂಧಕ್ಕೆ ಇದೂ ಒಂದು ಉದಾಹರಣೆ.

ಕ್ರಿ.ಶ ೧೭೦೦ರಲ್ಲೇ ಇದ್ದ ಸಪ್ಪಣ್ಣನು "ಕೈವಲ್ಯ ಕಲ್ಪವಲ್ಲರಿ" ಎಂಬ ವೀರಶೈವ ಸಿದ್ಧಾಂತ ಗ್ರಂಥವನ್ನು ಬರೆದನು. ಇದರಲ್ಲಿ ೫ ಸ್ಥಲಗಳೂ, ೧೭೭ ವಚನ (ಗದ್ಯ) ಸಂಪುಟಗಳೂ ೭೧೦ ವಿರಳ ಪದಗಳೂ ಇವೆ. ಇವನಿಗೆ "ಸರ್ಪಭೂಷಣ" ಎಂಬ ಹೆಸರೂ ಇದ್ದಿತ್ತಂತೆ. ಈ ಗ್ರಂಥವಿಡೀ ಹಾಡಿನ ರೂಪದಲ್ಲಿದೆ. ಇದೂ ತಾತ್ವಿಕ ಕಲ್ಪನೆ (ideas)ಗಳಲ್ಲಿ ಸಂಸ್ಕೃತದೊಡನೆ ಸಂಬಂಧಿಸಿರುವುದಕ್ಕೆ ನಿದರ್ಶನ. ವೀರಶೈವಾಗಮಗಳೆಲ್ಲವೂ ಸಂಸ್ಕೃತದಲ್ಲಿರುವುದು ಸುಪ್ರಸಿದ್ಧ. ನಿಗಮ (ವೇದವಾಙ್ಮಯ)ದಿಂದ ಭಿನ್ನವಾದ ತಾತ್ವಿಕಗ್ರಂಥಗಳಲ್ಲಿ ಆಗಮಗಳು ಗಣ್ಯ. ಈ ಇಬ್ಬಗೆಯ ಗ್ರಂಥಗಳೂ ಮೂಲತಃ ಸಂಸ್ಕೃತಭಾಷೆಯಲ್ಲಿವೆ.

ಕ್ರಿ.ಶ ೧೪೪೮ರಲ್ಲಿ ವಿಜಯಣ್ಣನು "ದ್ವಾದಶಾನುಪ್ರೇಕ್ಷೆ" ಎಂಬ ಜೈನಸಿದ್ಧಾಂತ ಗ್ರಂಥವನ್ನು ಸಾಂಗತ್ಯದಲ್ಲಿ ರಚಿಸಿದನು. ಇದಕ್ಕೆ ೧೨ ಪರಿಚ್ಛೇದಗಳೂ ೧೪೪೮ ಪದ್ಯಗಳೂ ಇವೆ. ಇದರಲ್ಲಿ ಅಧ್ರುವಾನುಪ್ರೇಕ್ಷೆ, ಶರಣಾನುಪ್ರೇಕ್ಷೆ, ಏಕತ್ವಾನುಪ್ರೇಕ್ಷೆ, ಅನ್ಯತ್ವಾನುಪ್ರೇಕ್ಷೆ, ಸಂಸಾರಾನುಪ್ರೇಕ್ಷೆ, ಲೋಕಾನುಪ್ರೇಕ್ಷೆ, ಅಶುಚಿತ್ವಾನುಪ್ರೇಕ್ಷೆ. ಆಸ್ರವಾನುಪ್ರೇಕ್ಷೆ, ಸಂವರಾನುಪ್ರೇಕ್ಷೆ,

ನಿರ್ಜರಾನುಪ್ರೇಕ್ಷೆ, ಧರ್ಮಾನುಪ್ರೇಕ್ಷೆ, ಭೋಧಿದುರ್ಲಭಾನುಪ್ರೇಕ್ಷೆ ಎಂಬ ೧೨ ಅನುಪ್ರೇಕ್ಷೆಗಳು ಅಥವಾ ಚಿಂತನೆಗಳು ನಿರೂಪಿಸಲ್ಪಟ್ಟಿವೆ. ಈ ಚಿಂತನೆಗಳ ಅಂತ್ಯವು ಜೈನ ಮುಕ್ತಿ ವಿವೇಕದಲ್ಲಿದೆ. ಈ ತತ್ವ ಶಾಸ್ತ್ರಕಾರನು ಪಾರ್ಶ್ವಕೀರ್ತಿಯ ಶಿಷ್ಯ. ಜೈನತತ್ವ ಗ್ರಂಥಗಳಲ್ಲಿ ಜೈನರೇ ಹಿಂದೆ ಬರೆದ ಸಂಸ್ಕೃತ ತತ್ವಗ್ರಂಥಗಳಲ್ಲಿಯ ಅಂಶಗಳನ್ನು ಕನ್ನಡ ಭಾಷೆಯಲ್ಲಿ ತಾತ್ಪರ್ಯವಾಗಿ ಕಾಣಬಹುದು ಅಥವಾ ವಿವರಣೆಯಾಗಿ ಕಾಣಬಹುದು.

೧೯ನೆಯ ಶತಮಾನದಲ್ಲಿದ್ದ ಶಿವರಾಮ ಶಾಸ್ತ್ರಿಯು ವೇದಾಂತ ಮುಕ್ತಿ ಮಾರ್ಗಪ್ರದೀಪಿಕೆ, ಬ್ರಹ್ಮಾನಂದ ಬೋಧೆ, ಶಂಕರಾನಂದತತ್ವ–ಎಂಬ ಅದ್ವೈತ ಗ್ರಂಥಗಳನ್ನು ಕನ್ನಡದಲ್ಲಿ ಬರೆದರೆ ಎಚ್.ವಿ. ನಂಜುಂಡಯ್ಯನು ಕನ್ನಡ ಅರ್ಥಶಾಸ್ತ್ರವನ್ನು ಮೊದಲಬಾರಿಗೆ ಬರೆದನು. ಇದರ ಆಕರ ಕವಿಚರಿತೆಯಲ್ಲಿ ಅನುಕ್ತ. ಇಂಗ್ಲಿಷ್ ಅರ್ಥಶಾಸ್ತ್ರಗಳೇ ಇದಕ್ಕೆ ಮೂಲವಾಗಿರಬಹುದು. ಡಾಕ್ಟರ್ ಶ್ಯಾಮಾಶಾಸ್ತ್ರಿಗಳು ಮಾಡಿದ ಕೌಟಿಲ್ಯನ "ಅರ್ಥಶಾಸ್ತ್ರ"ದ ಇಂಗ್ಲಿಷ್ ಭಾಷಾಂತರವೇ ಕರ್ಣಾಟಕದಲ್ಲಿ ಸಂಸ್ಕೃತಾಕರದ ಅರ್ಥಶಾಸ್ತ್ರದ ಆಂಗ್ಲ ಪರಿವರ್ತನ. ಆನಂತರ ಕನ್ನಡ ಪರಿವರ್ತನ ಸಮಗ್ರವಾಗಿ, ಮೂಲಾನುರೋಧಿಯಾಗಿ ಆದದ್ದು ಸಂದೇಹಾಸ್ಪದ.

ಈವರೆಗೆ ಕೊಟ್ಟದ್ದು ಸ್ಥಾಲೀ ಪುಲಾಕ ನ್ಯಾಯದ ಉದಾಹರಣೆಗಳು. ಕೊಟ್ಟ ಪರಿಮಿತಿಯ ದೆಸೆಯಿಂದ ಸಮಗ್ರ ಕನ್ನಡ–ಸಂಸ್ಕೃತ ಗ್ರಂಥಗಳ ಅವಲೋಕವನ್ನು ಇಲ್ಲಿ ಮಾಡಿಲ್ಲ. ಇನ್ನು ಮುಂದೆ ೨೦ನೆಯ ಶತಮಾನದ ಲೇಖಕರು ಉಕ್ತ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿದ ವಿಷಯಗಳ ಸಾರವನ್ನು ಕೊಡಲಾಗುತ್ತದೆ.

"ದ್ರಾವಿಡ ಭಾಷಾ ವ್ಯಾಸಂಗ" ಎಂಬ ಗ್ರಂಥದಲ್ಲಿ (೧೯೭೬) "ದ್ರಾವಿಡ" ಎಂಬುದು ಒಂದು ಜನಾಂಗವೆನ್ನಲಾಗಿದೆ. ಪ್ರಸಿದ್ಧ ಐತಿಹಾಸಿಕ ಗ್ರಂಥಕರ್ತರು ಅದಕ್ಕೆ ಬದಲಾಗಿ "ಮೆಡಿಟರೇನಿಯನ್ ಜನಾಂಗ (ಕುಲ)" ಎಂದುದನ್ನು ಹಿಂದೆಯೇ ಉಲ್ಲೇಖಿಸಲಾಗಿದೆ. ಜೊತೆಗೆ " Ethnology ಕುಲಶಾಸ್ತ್ರ" ಎಂಬುದೀಗ ಜಗತ್ತಿನಲ್ಲಿ ವಿಜ್ಞಾನವೆಂಬ ಮನ್ನಣೆಯನ್ನು ಕಳೆದುಕೊಂಡಿದೆ. ಅದಕ್ಕೆ ಬದಲಾಗಿ "Anthropology ಮಾನವಶಾಸ್ತ್ರ" ಎಂಬ ಹೊಸ ವಿಜ್ಞಾನವನ್ನು ಎತ್ತಿ ನಿಲ್ಲಿಸಲಾಗಿದೆ. ಅದಿನ್ನೂ ಬಾಲ್ಯಾವಸ್ಥೆಯಲ್ಲೇ ಇದೆ. ಜೊತೆಗೆ ಈವರೆಗಿನ ಒಂದೇ ಒಂದು ದ್ರಾವಿಡ ಕೇಂದ್ರವೆಂದು ಹೇಳುತ್ತ ಬರಲಾದ ಹರಪ್ಪ–ಮೊಹೆಂಜೊದಾರೊ ಪ್ರದೇಶದ ನಾಗರಿಕತೆಯ ಅವಶೇಷಗಳು ಶುದ್ಧ "ದ್ರಾವಿಡ" ಅಥವಾ "ಮೆಡಿಟರೆನಿಯನ್". ಆಗಿಲ್ಲ ಎಂದು ಪ್ರಾಕ್ತನ ವಿಮರ್ಶ ವಿಚಕ್ಷಣರಾದ ಡಾ. ಎಸ್. ಆರ್ ರಾವ್ ಅವರು "ಲೋಥಲ್" ಉತ್ಖನನ ಸಂಶೋಧನೆಯನ್ನು ವಿವರಿಸಿದ ತಮ್ಮ "Lothal and the Indus civilisation'' ಎಂಬ ಗ್ರಂಥದಲ್ಲಿ (೧೯೭೩) ತಿಳಿಸಿದ್ದಾರೆ; ಅದರ ಸಂಮಿಶ್ರ ಸ್ವರೂಪವನ್ನು ಅವರು ಸ್ಪಷ್ಟಪಡಿಸಿದ್ದಾರೆ. ಲೋಥಲ್ ಅವಶೇಷಗಳು ಕ್ರಿ.ಪೂ ೨೦೦೦ ವರ್ಷಗಳವುಗಳಾದರೆ ಹರಪ್ಪ (ಹರಿಯೂಪೀಯ) ಮೊಹೆಂಜೊದಾರೊ ಅವಶೇಷಗಳು ಕ್ರಿ.ಪೂ ೪೦೦೦ ವರ್ಷಗಳ ಹಿಂದಿನವು. ("Vedic Age'' ಎಂಬ ಭಾರತೀಯ ವಿದ್ಯಾ ಭವನದ ಪ್ರಕಟಣೆಯನ್ನೂ Sources of Karnataka History Voll ಎಂಬ ಗ್ರಂಥವನ್ನೂ

ನೋಡಬಹುದು. "ಭಾರತೀಯಸಂಸ್ಕೃತಿ" ಎಂಬ ಗ್ರಂಥವನ್ನು ಈ ವಿಷಯಕ್ಕಾಗಿ ಓದಬಹುದು. (Published by the Wesli Press Mysore for the Mysore University) ಜಗನ್ನಾಥ ಪಂಡಿತನು "ದ್ರಾವಿಡ" ಅಥವಾ "ದ್ರವಿಡ" ಎಂಬ ಪದವನ್ನು ತಮಿಳರಿಗಷ್ಟೇ ಅನ್ವಯಿಸಿದ್ದಾನೆ. ಅದು ಭಾಷಾಭೇದವಷ್ಟೇ, ಕುಲಭೇದವಲ್ಲ ಎಂದು ಹಲವು ವಿದ್ವಾಂಸರ ಮತ. ಡಾ. ಆರ್. ಎಸ್. ಪಂಚಮುಖಿಯವರ ಪ್ರಕಾರ ಕನ್ನಡವು "ಪೈಶಾಚಿ" ಎಂಬ ಸಂಸ್ಕೃತಜನ್ಯ ಪ್ರಾಕೃತದ ಒಂದು ವಿಕಾಸ. ಇದು ಸಂಸ್ಕೃತ–ಕನ್ನಡಗಳ ಸಂಬಂಧವನ್ನು ಇನ್ನೂ ಹತ್ತಿರಕ್ಕೆ ತರುತ್ತದೆ.

ಮೇಲಿನ ಗ್ರಂಥದಲ್ಲಿ ಕನ್ನಡ ಲಿಪಿ ಸ್ವತಂತ್ರವೆಂದು ಬರೆದುದಕ್ಕೆ ಬ್ರಾಹ್ಮೀಲಿಪಿಯ ವಿಕಾಸ ಕ್ರಮವನ್ನು ತಿಳಿಸುವ ಲಿಪಿಶಾಸ್ತ್ರವು ವಿರುದ್ಧ ಸಾಕ್ಷಿಯನ್ನು ಕೊಡುತ್ತದೆ. "ದ್ರಾವಿಡ ಭಾಷಾವ್ಯಾಸಂಗ" ಎಂಬ ಹೆಸರೇ ಸಂಸ್ಕೃತ ಪದಗಳಿಂದ ಕೂಡಿದ್ದಲ್ಲದೆ, ಉಕ್ತ ಗ್ರಂಥದಲ್ಲಿಯ ಪ್ರಕರಣಗಳ ಹೆಸರುಗಳು ಮತ್ತು ಪಾರಿಭಾಷಿಕ ಪದಗಳು ಈ ಎಲ್ಲವೂ ತತ್ಸಮ ಅಥವಾ ವಿಭಕ್ತಿ ರಹಿತವಾದ ಸಂಸ್ಕೃತ ಪದಗಳ ಸಮಾಸಗಳು. ಈ ಅಂಶವನ್ನು ಗಮನಿಸಿದರೆ ಕನ್ನಡದ ಇಂದಿನ ಸ್ವರೂಪದಲ್ಲಿ ಅದು ಸಂಸ್ಕೃತವನ್ನು ಬಿಟ್ಟಿರಲಾರದು ಎಂಬುದು ಸ್ಪಷ್ಟವಾಗುತ್ತದೆ. ಕನ್ನಡವು ಮೂಲತಃ ಸಂಸ್ಕೃತ ಜನ್ಯವಲ್ಲದೆ ಹೋದರೂ ಇಂದಿನ ಕನ್ನಡ ವ್ಯವಹಾರಕ್ಕೆ ತತ್ಸಮ ಪದಗಳ ಸಹಾಯವು ಅನಿವಾರ್ಯವೆನ್ನದಿದ್ದರೆ ವದತೋವ್ಯಾಘಾತ ಉಂಟಾಗುತ್ತದೆ. ಉಕ್ತ ಗ್ರಂಥದಲ್ಲಿ ವ್ಯಂಜನ ಪಲ್ಲಟವು ಕನ್ನಡಾದಿ ದ್ರಾವಿಡ ಭಾಷೆಗಳ ವೈಶಿಷ್ಟ್ಯವೆಂಬುದಕ್ಕೆ ಸಂಸ್ಕೃತದಲ್ಲಿರುವ "ನಾಲಿಕೇರ" ಮತ್ತು "ನಾರಿಕೇಲ" ಎಂಬ ಪದಗಳು ಪ್ರತ್ಯುದಾಹರಣೆಗಳಾಗಿದೆ; ಅಲರ್–ಅಲರುಗಳಿಗವು ಸಮಾನವಾಗಿವೆ.

"ದ್ರಾವಿಡಭಾಷೆಗಳಲ್ಲಿ ನಾಮಪ್ರಕೃತಿಗಳ ರೂಪಕ್ಕಿಂತ ಅರ್ಥಕ್ಕೆ ಅನುಗುಣವಾಗಿಯೇ ಲಿಂಗನಿರ್ಣಯ ನಡೆಯುತ್ತದೆ" ಎಂದು ಮೇಲೆ ಹೇಳಿದ ಗ್ರಂಥಕ್ಕೆ ದ್ರಾವಿಡೇತರವಾದ ಇಂಡೋ ಯೂರೋಪಿಯನ್ (ಸಂಸ್ಕೃತ) ಗುಂಪಿಗೆ ಸೇರಿದ ಇಂಗ್ಲೀಷಿನಲ್ಲಿಯೂ ಅರ್ಥಲಿಂಗವಲ್ಲದೆ ಶಬ್ದಲಿಂಗವಿಲ್ಲ ಎಂಬುದನ್ನು ಸೇರಿಸಿದರೆ ಮಾತ್ರ ಸತ್ಯಸ್ಥಿತಿಯು ಗೊತ್ತಾಗುತ್ತದೆ. ಉಕ್ತಗ್ರಂಥವು ಸಂಸ್ಕೃತ ಬಳಸುವ ಆರ್ಯರು ಭಾರತಕ್ಕೆ ಹೊರಗಿನಿಂದ ಬಂದವರೆಂಬ ಅಭಿಪ್ರಾಯವನ್ನು ತಳೆದಿದೆ (ಪುಟ ೧೮೨). ಆದರೆ ಈ ಅಭಿಪ್ರಾಯವು ತರ್ಕಶುದ್ಧವಾಗಿಲ್ಲ ಎಂಬುದನ್ನು ಮೆಕ್‌ಡೊನಲ್ಲರು "ವೇದಿಕ ರೀಡರಿ"ಗೆ ಬರೆದ ಮುನ್ನುಡಿಯನ್ನು ಓದಿ ವಿಮರ್ಶಿಸಿದರೆ ಗೊತ್ತಾಗುತ್ತದೆ.

ಶ್ರೀ ಟಿ. ಕೇಶವಭಟ್ಟರ "ಸಂಶೋಧನರತ್ನಮಾಲಿಕೆ" ಎಂಬ ಗ್ರಂಥದಲ್ಲಿ "ಇಂದಿಗೆ ಪ್ರಚಲಿತವಿರುವ ಭಾರತೀಯ ಭಾಷೆಗಳಲ್ಲಿರುವ ಅಕ್ಷರ ಸಂಜ್ಞೆಗಳಿಗೆ ಅಶೋಕನ ಕಾಲದಲ್ಲಿ ಪ್ರಚಲಿತವಾಗಿದ್ದ "ಬ್ರಾಹ್ಮೀಲಿಪಿ" ಮೂಲವೆಂದು ನಿರ್ಣಯಿಸಲಾಗಿದೆ" ಎಂದು ಸ್ಪಷ್ಟವಾಗಿ ಹೇಳಲಾಗಿದೆ. ದಕ್ಷಿಣದ ಬಾಹ್ಮೀಲಿಪಿಯಿಂದ ಕನ್ನಡ, ತೆಲುಗು ಗ್ರಂಥಲಿಪಿಗಳೂ ರೂಪುದಾಳಿದವು (ಪುಟ ೪). ಕನ್ನಡದ "ಅಕ್ಷರ"ವು ಸಂಸ್ಕೃತಪದ. ಕ್ರಿ.ಶ. ೧೯೬೦ರಲ್ಲಿದ್ದ ಸಿದ್ದನಂಜೇಶನೆಂಬ ಕವಿಯು ತನ್ನ "ರಾಘವಾಂಕ ಚಾರಿತ್ರ"ದಲ್ಲಿ ಪ್ರಣವದಿಂದಲೇ ಪಂಚಾಕ್ಷರಿ

ಹುಟ್ಟಿದುದನ್ನು ವಿವರಿಸಿ, ಆ ಪಂಚಾಕ್ಷರಗಳಿಂದಲೇ ವರ್ಣಮಾಲೆಯ ೫೧ ಅಕ್ಷರಗಳಾದುವೆಂದು ಹೇಳಿದ್ದಾನೆ.

"ಸಂಸ್ಕೃತದಲ್ಲಿ ವಿಭಕ್ತಿಗಳು ಏಳು. ಕನ್ನಡದಲ್ಲಿಯೂ ವೈಯಾಕರಣರು ಸಪ್ತವಿಭಕ್ತಿಗಳನ್ನು ವಿವರಿಸಿದ್ದಾರೆ" (ಉಕ್ತಗ್ರಂಥದ ೪೧ನೆಯ ಪುಟ). ನಾಗವರ್ಮ, ಕೇಶಿರಾಜ, ಭಟ್ಟಾಕಲಂಕರ ಕನ್ನಡ ವ್ಯಾಕರಣಗಳನ್ನು ಇದಕ್ಕಾಗಿ ನೋಡಬಹುದು, ಆಧುನಿಕ ಕನ್ನಡ ಭಾಷಾಶಾಸ್ತ್ರಾಭ್ಯಾಸಕ್ಕೆ ಶ್ರೀ ಟಿ. ಕೇಶವಭಟ್ಟರ "ಸಂಶೋಧನ ರತ್ನ ಮಾಲಿಕೆ" ಪೂರಕ ಗ್ರಂಥ ಎಂಬುದಕ್ಕಿಂತ ಪೀಠಿಕಾ ಗ್ರಂಥ ಎಂದರೆ ಹೆಚ್ಚು ಉಚಿತ. ಪೀಠಿಕೆಯಿಂದ ಮುಂಬರಿಯುತ್ತ ಹೋದಾಗ ಮಾತ್ರ ಸಂಶೋಧನೆಯು ಪೂರ್ವಗ್ರಹರಹಿತವೂ ಅವ್ಯಾಹತವೂ ಆಗುವುದು. ಏಕೆಂದರೆ ಇಂದು ನಾವು ಬಳಸುತ್ತಿರುವ ಶುದ್ಧವಾದ ಗ್ರಾಂಥಿಕ ಕನ್ನಡ ಭಾಷೆಯ ವರ್ಣಮಾಲೆ ಹೆಚ್ಚುಕಡಿಮೆ ಸಂಸ್ಕೃತವರ್ಣಮಾಲೆಯಂತೆಯೇ ಇದೆ. ದೀರ್ಘ ಋಕಾರ, ಲೃಕಾರಗಳನ್ನು ಮಾತ್ರಬಿಡಬಹುದು. ಉಳಿದ ಅಕ್ಷರಸಂಖ್ಯೆಗೆ ಎಕಾರ–ಒಕಾರಗಳನ್ನು ಸೇರಿಸಿಕೊಳ್ಳಲೇಬೇಕಾಗಿರುವುದರಿಂದ ಪ್ರಸಿದ್ಧ ಸಂಸ್ಕೃತ ವರ್ಣಮಾಲೆಯಲ್ಲಿದ್ದಷ್ಟೇ ಅಕ್ಷರಗಳು ಲಭಿಸುವುವು. ಇಂದಿನ ಆಡುಗನ್ನಡ–ಬರೆಗನ್ನಡಗಳನ್ನು ಹಿಂದಿನ (ಕ್ರಿಸ್ತಪೂರ್ವದ) ರೂಪಗಳ ವೈಶಿಷ್ಟ್ಯಕ್ಕೆ ತಿರುಗಿಸುವುದು ಅಸಾಧ್ಯ, ಅಸ್ವಾಭಾವಿಕ. ದೇಶ್ಯ ಪದಗಳಿಗೆ ಸಹ ಸಂಸ್ಕೃತ ವ್ಯಾಕರಣದ ಸಾಧಾರಣ ನಿಯಮಗಳು ತಲೆಕಟ್ಟಿನಂತಿರುವುದನ್ನು ಕೇಶವಭಟ್ಟರ ಸಂಶೋಧನೆಯು ತೋರಿಸಿಕೊಟ್ಟಿದೆ.

ಡಾ. ರಂ. ಶ್ರೀ. ಮುಗಳಿಯವರು, "ಬಳಕೆಯ ಕನ್ನಡದಲ್ಲಿ ಇದಕ್ಕಿಂತ (ಕ್ರಿ.ಶ ೪೫೦ ರ ಹಲ್ಮಿಡಿ ಶಾಸನಕ್ಕಿಂತ) ಪೂರ್ವದಲ್ಲಿಯೇ ಸಂಸ್ಕೃತ ಪದಗಳು ಸೇರಿ ಕನ್ನಡವೇ ಎನ್ನುವಷ್ಟು ಒಂದಾಗಿರಬೇಕು" ಎಂದ ಮಾತಿನಿಂದ ಕನ್ನಡ ಮಾತೆಂಬುದು ಅಮಿಶ್ರಿತಕಾಲದಲ್ಲಿ ಸುಸಂಸ್ಕೃತರ ವ್ಯವಹಾರಕ್ಕೆ ಬೇಕಾದಷ್ಟು ಪದಸಂಪತ್ತಿನಿಂದ ಕೂಡಿರಲಿಲ್ಲ– ಎಂಬುದು ಸ್ಪಷ್ಟವಾಗುತ್ತದೆ.

ಶ್ರೀ ಪ್ರ.ಗೋ. ಕುಲಕರಣಿಯವರು ತಮ್ಮ "ಕನ್ನಡಭಾಷೆಯಚರಿತ್ರೆ"ಯಲ್ಲಿ "ಕವಿರಾಜ ಮಾರ್ಗದ ರಚನೆಯ ಕಾಲಕ್ಕೆ ವ್ಯಾಕರಣ ಗ್ರಂಥಗಳಾವುವೂ ಕನ್ನಡದಲ್ಲಿ ರಚಿತವಾಗಿರಲಿಲ್ಲವೆಂದು ಹೇಳುವುದು ಯೋಗ್ಯವೆನ್ನಿಸುತ್ತದೆ ಎಂದಿರುವುದು ಗಮನಾರ್ಹ. ಆದುದರಿಂದ ಅಲ್ಲಿಯವರೆಗಿನ ಜಾನಪದೀನ ಹಾಡುಗಳನ್ನುಳ್ಳ ಹಳಗನ್ನಡಕ್ಕೆ ಸಾಂಸ್ಕೃತಿಕ ದೃಷ್ಟಿಗಿಂತ ಹೆಚ್ಚಾಗಿ ಸಮಾಜ ಶಾಸ್ತ್ರೀಯ ದೃಷ್ಟಿಯಿಂದ ಕೆಲಮಟ್ಟಿಗೆ ಬೆಲೆ ಕೊಡಬಹುದು– ಅಷ್ಟೇ. ಕ್ರಿ.ಶ ೪೫೦ರ ಹಲ್ಮಿಡಿ ಶಿಲಾಶಾಸನ, ೪೮೦ರ ಸಿರಿಗುಂದದ ಶಿಲಾಶಾಸನ, ೫೭೮ರ ಬಾದಾಮಿಯ ಶಿಲಾಶಾಸನ. ೬೭೫ರ ಕಿಗ್ಗದ ಶಿಲಾಶಾಸನ, ೬೮೫ರ ಶಿಕಾರಿಪುರದ ಶಿಲಾಶಾಸನ, ೬೯೨ರ ಸೊರಬ ತಾಮ್ರ ಶಾಸನ, ೭೦೦ರ ಶ್ರವಣ ಬೆಳುಗೊಳ ಶಿಲಾಶಾಸನ, ಅದೇ ಕಾಲದ ಅಲ್ಲಿಯ ಇನ್ನೊಂದು ಶಿಲಾಶಾಸನ, ೭೯೯ರ ಐಹೊಳೆಯ ಶಿಲಾಶಾಸನ ಮತ್ತು ೭೫೦–೭೭೦ರ ಉದಯಾವರ ಶಿಲಾಶಾಸನಗಳನ್ನು ಅವಲೋಕಿಸಿದರೆ, ಕೋಶ– ವ್ಯಾಕರಣಗಳ ದೃಷ್ಟಿಯಿಂದ ಡಾ. ಮುಗಳಿಯವರೆಂದಂತೆ ಸಂಸ್ಕೃತ ಸಂಮಿಶ್ರಣವು ಅಂದು

ಜನಜನಿತವಾಗಿ ರೂಢಿಗೊಂಡದ್ದು ಸ್ಪಷ್ಟವಾಗುತ್ತದೆ. ಅದರಿಂದಲೇ ಶ್ರೀ ಕುಲಕರಣಿಯವರು ಹಳಗನ್ನಡದಲ್ಲಿ ಮೊದಲು "ಉದ್ಗ್ರಂಥಗಳನ್ನು ರಚಿಸಿದ ಜೈನಕವಿಗಳು ಸಂಸ್ಕೃತ–ಕನ್ನಡಗಳೆರಡರಲ್ಲಿಯೂ ಉದ್ದಾಮ ಪಂಡಿತರಾಗಿದ್ದರು. ಸಂಸ್ಕೃತದಲ್ಲಿ ವರ್ಧಮಾನ ಪುರಾಣವನ್ನು ರಚಿಸಿದ ಅಸಗನು ೯೪೫ರಲ್ಲಿ ಕನ್ನಡದಲ್ಲಿಯೂ ಕಾವ್ಯಗಳನ್ನು ರಚಿಸಿದ್ದನು. ಪೊನ್ನನು ಉಭಯಕವಿಯೆಂದು ಬಿರುದು ಪಡೆದಿದ್ದನು. ರನ್ನನಿಗೂ ಈ ಬಿರುದಿದ್ದಿತು. ಉಭಯಭಾಷಾಪಂಡಿತರಾದ ಈ ಕವಿಗಳು ಸಂಸ್ಕೃತ ವೃತ್ತಗಳನ್ನು ಹೆಚ್ಚಾಗಿ ಬಳಸಿಕೊಂಡು ಕನ್ನಡದಲ್ಲಿ ಚಂಪೂಕಾವ್ಯಗಳನ್ನು ರಚಿಸಿದರು. ಈ ಚಂಪೂ ಕಾವ್ಯಗಳಿಗೆ "ವಸ್ತುಕ" ಎಂದೂ ಹೇಳುವುದುಂಟು. ಇವುಗಳ ಭಾಷೆ ಪ್ರೌಢ; ಕಂದ ಹಾಗೂ ಸಂಸ್ಕೃತ ಅಕ್ಷರ ವೃತ್ತಗಳು ಈ ಕಾವ್ಯಗಳಲ್ಲಿ ಹೆಚ್ಚಾಗಿ ಬಳಸಲ್ಪಡುತ್ತವೆ. ಗದ್ಯಭಾಗವು ಅಲ್ಲಲ್ಲಿ ಅಷ್ಟಿಷ್ಟು; ಅಕ್ಕರ, ಚವುಪದಿ ತ್ರಿಪದಿ ಮೊದಲಾದ ಕನ್ನಡ ವೃತ್ತ ಜಾತಿಗಳು ಎಲ್ಲಿಯೋ ಅಲ್ಲೊಂದಿಲ್ಲೊಂದು" ಎಂಬ ಸೋದಾಹರಣ ಸಿದ್ಧಾಂತವನ್ನು ಮಂಡಿಸಿದ್ದಾರೆ.

೧೩ನೆಯ ಶತಮಾನದಿಂದ ನೂರಕ್ಕೆ ೯೦ಕ್ಕೂ ಹೆಚ್ಚು ತತ್ಸಮಗಳಿರುವ ಚಂಪೂ ಕನ್ನಡವನ್ನು ಹಿಂದಕ್ಕಟ್ಟಲಾರಂಭಿಸಿದ್ದು ರಾಘವಾಂಕನಿಂದ ಆರಂಭವಾದ ಷಟ್‌ಪದಿ ಪದ್ಧತಿ. ಇಲ್ಲಿ ೯೦ರಿಂದ ೭೦, ೬೦, ೫೦ರ ವರೆಗೆ ಇಳಿದುದು ಭಿನ್ನ ಭಿನ್ನ ಷಟ್ಪದಿ ಕಾವ್ಯಗಳ ಭಿನ್ನ ಭಿನ್ನ ಪದ್ಯಗಳಲ್ಲಿ ಕಂಡು ಬಂದರೂ ಇಡಿಯ ಕಾವ್ಯವೊಂದನ್ನು ಅವಲೋಕಿಸಿದರೆ ೫೦ಕ್ಕೂ ಸ್ವಲ್ಪ ಹೆಚ್ಚೇ ಎನ್ನುವಷ್ಟು ತತ್ಸಮ ಪದ ಪ್ರಯೋಗವನ್ನು ಕಾಣಬಹುದು. ಕಾವ್ಯದಲ್ಲಿ ಇಷ್ಟು ಸಾಧ್ಯವಾಯಿತಲ್ಲದೆ ಶಾಸ್ತ್ರದಲ್ಲಿ ಅಂದಿನಿಂದ ಇಂದಿನವರೆಗೂ ಸಾಧ್ಯವಾಗಲಿಲ್ಲ; ಶಾಸ್ತ್ರದಲ್ಲಿ ಆಂಡಯ್ಯತನವು ನಡೆಯದು; ಕೇವಲ ತದ್ಭವ–ದೇಶ್ಯಗಳಿಂದ ಕೆಲಸ ಸಾಗದು ಎಂಬುದಕ್ಕೆ ಇಂದು ಕನ್ನಡದಲ್ಲಿ ಬರೆದು ಪ್ರಕಟವಾದ ಯಾವ ಶಾಸ್ತ್ರಗ್ರಂಥವನ್ನೂ ಬೇಕಾದರೂ ಓದಿ ನೋಡಬಹುದು. ಕರ್ಣಾಟಕ–ಸರಕಾರದ ಗೆಜೆಟ್ಟನ್ನು ನೋಡಿದರೂ ಸಾಕು. ಶಾಸ್ತ್ರೀಯ ಪಾರಿಭಾಷಿಕಗಳು ಆಡಳಿತದಲ್ಲಿ ಸಂಪೂರ್ಣ ತತ್ಸಮಗಳೇ ಆಗಿರುವುದು ತಿಳಿದುಬರುತ್ತದೆ. ಹಾಲಿಗೆ ನೀರನ್ನು ಬೆರೆಸಿಕೊಟ್ಟ ಆರೋಪಿಯೊಬ್ಬನು ಕೋರ್ಟಿನಲ್ಲಿ "ನಾನು ಅವರಿಗೆ ಪಯಸ್ಸನ್ನು ಕೊಟ್ಟೆನು" ಎಂದರೆ ಹಾಲುಕೊಟ್ಟೆನೆಂದೂ ಆದೀತು, ನೀರು ಕೊಟ್ಟೆನೆಂದೂ ಆದೀತು. "ಅಂಚೆಮನೆಯಲ್ಲಿ ನಾನು ಆಗ ಇದ್ದೆ" ಎಂದರೆ ಪೋಸ್ಟಾಫೀಸಿನಲ್ಲಿದ್ದೆನೆಂದೂ ಆದೀತು, ಹಂಸನಿವಾಸವಾದ ಕೆರೆಯಲ್ಲಿದ್ದೆನೆಂದೂ ಆದೀತು. ಆದುದರಿಂದ ಪಾರಿಭಾಷಿಕಗಳಿಗೆ ದ್ವಂದ್ವಾರ್ಥವಿರಬಾರದು ಎಂಬ ನಿಯಮವನ್ನು ಮಾಡಲಾಗಿದೆ; ಇದ್ದರೆ ಅನುದ್ದಿಷ್ಟಾರ್ಥಕ್ಕೆ ಎಡೆಗೊಟ್ಟು ವಿಚಾರ ವ್ಯವಹಾರವನ್ನು ಗೊಂದಲಕ್ಕೀಡು ಮಾಡುತ್ತದೆ.

ಹೊಸಗನ್ನಡದ ಭಾಷಾಶುದ್ಧಿಗೆ ನಡುಗನ್ನಡ ಸರಿಯಾದ ಮಾರ್ಗದರ್ಶನ ಮಾಡಬಲ್ಲದು. ಇದರ ಕಾಲ ೨೦ನೆಯ ಶತಮಾನ. ಮುದ್ದಣನು ನಡುಗನ್ನಡ ಕಾಲದ ಕೊನೆಯ ದೊಡ್ಡಕವಿ ಎನ್ನಬಹುದು. ವ್ಯಾಕರಣವು ಹೇಗೆ ಬೆಳೆವ ಭಾಷೆಯ ಕೊರಳಿಗೆ ಉರುಳಾಗಬಾರದೋ ಹಾಗೇ ಬಳಕೆಯ ಭಾಷೆಯೂ ವ್ಯಾಕರಣದ ಕೊರಳಿಗೆ

ಉರುಳಾಗಬಾರದು–ಹಾಗೆ ಆದರೆ ಅದು ಅನರ್ಥಕ್ಕೆ ಒಯ್ಯುತ್ತದೆ ಎಂಬುದನ್ನು "ಸಂಶೋಧನ ರತ್ನಮಾಲಿಕೆ"ಯ ೮೨ನೆಯ ಪುಟದಲ್ಲಿ ಸೋದಾಹರಣವಾಗಿ ವಿವರಿಸಿದ್ದು ಇಲ್ಲಿ ಸ್ಮರಣೀಯ. ಅಪಪ್ರಯೋಗಗಳ ಉದಾಹರಣೆಗಳನ್ನು ಅದರಲ್ಲಿ ಹೀಗೆ ಕೊಡಲಾಗಿದೆ.

| **ಅಪಪ್ರಯೋಗ** | **ಸರಿಯಾದ ಪ್ರಯೋಗ** |
|---|---|
| ನೋಡಲೆತ್ನಿಸು | ನೊಡಲು ಯತ್ನಿಸು |
| ಬೆಗ್ಗಾಡು | ಬೆಂಗಾಡು |
| ಕಗ್ಗಾಳು | ಕರಿಗಾಳು, ಕಾರ್ಗಾಳು |
| ಶಾಲೆನಲ್ಲಿ | ಶಾಲೆಯಲ್ಲಿ |
| ಕೈನಲ್ಲಿ | ಕೈಯಲ್ಲಿ |
| ನೆಹರುರವರು | ನೆಹರುವವರು ಅಥವಾ ನೆಹರುಗಳು |
| ಮನೆನಲ್ಲಿ | ಮನೆಯಲ್ಲಿ |
| ಕಮಲಳು | ಕಮಲನು ಅಥವಾ ಕಮಲೆಯು |
| ಕುವೆಂಪುರವರು | ಕುವೆಂಪುಗಳು |
| ಎಂ.ಎ.ನಲ್ಲಿ | ಎಂ.ಎ.ಯಲ್ಲಿ |

**ಮತ್ತು ಹೊಸತಾಗಿ ವ್ಯಾಕರಣ ರಚನೆ ಮಾಡುವವರು ಭಾಷಾಧರ್ಮವನ್ನು ತಿಳಿದಿರಲೇಬೇಕು– ಭಾಷಾಶಾಸ್ತ್ರವನ್ನು ಅಭ್ಯಾಸ ಮಾಡಿರಬೇಕು** ಎಂದು ಉಕ್ತ ಗ್ರಂಥದಲ್ಲಿ ಹೇಳಿದ್ದು ಅನುಲ್ಲಂಘನೀಯ. ಆದರೆ ಭಾಷಾಶಾಸ್ತ್ರ ಬರೆಯುವವರೇ "ಧ್ವನಿಮೆಗಳು" ಎಂಬುದನ್ನು "ಧ್ವನಿಮಾಗಳು" ಎಂದು ಬರೆದರೆ ಏನು ಹೇಳಬೇಕು? ಅಂಥವರಲ್ಲಿ ಕೆಲವರಿಂದು ಡಾಕ್ಟರೇಟುಗಳನ್ನು ಪಡೆದು ಸರಕಾರದಿಂದ ಪುರಸ್ಕೃತರಾದ ತಮಾಷೆ ನಡೆದದ್ದುಂಟು! ಹೀಗಾಗಲು "ಭಾಷಾಧರ್ಮ" ಎಂದರೆ ಏನೆಂಬುದು ತಿಳಿಯದಿರುವವರು ಭಾಷಾಶಾಸ್ತ್ರವನ್ನು ಬರೆಯಲು ಹೊರಟದ್ದೇ ಕಾರಣ. ಅದರಿಂದಲೇ ಶ್ರೀ ಕುಲಕರಣಿಯವರು ತಮ್ಮ ಅಮೂಲ್ಯ ಗ್ರಂಥದಲ್ಲಿ "ಇಂದಿನ ಗದ್ಯ ಗ್ರಂಥಗಳಲ್ಲಿ ಬಳಸಲ್ಪಡುವ ಎಲ್ಲ ಬಗೆಯ (ಕನ್ನಡ) ಭಾಷೆಯು ಹೊಸಗನ್ನಡ ಗದ್ಯಭಾಷೆಯೆಂದು ಕರೆಯಿಸಿಕೊಳ್ಳಲು ಅರ್ಹವಾಗಿರುವುದಿಲ್ಲ" ಎಂದು ಹೇಳಿದ್ದು ಸತ್ಯ. ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು–

"ಆಂಗ್ಲ ಭಾಷೆಯಲ್ಲಿ ಹಳ–ನಡು–ಹೊಸ ಎಂಬ ಮೂರು ಅವಸ್ಥೆ ಇವೆ. ಹಿಂದಿನ ಆಂಗ್ಲಗಳ ನಾಲ್ಕು ನಾಲ್ಕು ವಾಕ್ಯಗಳನ್ನು ಬರೆದು ಎದುರಿನಲ್ಲಿರಿಸಿದರೆ ಇಂದಿನ ವಿದ್ಯಾವಂತ ಆಂಗ್ಲನಿಗೆ ಅಪರಿಚಿತನಾಗಿ ಕಾಣುತ್ತವೆ. ಹಳ ಆಂಗ್ಲ ಭಾಷೆ, ನಡುವಿನ ಆಂಗ್ಲಭಾಷೆ

ಅವನಿಗೆ ಅರ್ಥವಾಗುವುದಿಲ್ಲ. ಕನ್ನಡದಲ್ಲಿ ಇಂಥ ವಿಸ್ತಾರವಾದ ಮಾರ್ಪಾಡು ಆಗಿಲ್ಲ" ಎಂದದ್ದು ಡಾ. ಕೆ.ವಿ. ಪುಟ್ಟಪ್ಪನವರ ಗದ್ಯ–ಪದ್ಯಗಳಲ್ಲಿ ಉದಾಹೃತವಾಗಿದೆ. ಕುಲಕರಣಿಗಳು ಕುವೆಂಪುಕೃತ ಪದ್ಯಕಾವ್ಯಗಳೆಲ್ಲವನ್ನೂ ಗಮನಕ್ಕೆ ತೆಗೆದುಕೊಂಡಂತಿಲ್ಲ. ಆದ್ದರಿಂದ ಅವರು ಕನ್ನಡದಲ್ಲಿ ೪ ಭೇದಗಳನ್ನು ಹೇಳಹೊರಟರು. ಹಾಗೆ ಹೊರಟಾಗಲೂ ಆ ಭೇದಗಳು ಇಂಗ್ಲೀಷಿನಲ್ಲಿರುವಷ್ಟಿಲ್ಲ ಎನ್ನದಿರುವುದು ಅಶಾಸ್ತ್ರೀಯ.

"ಸ್ವಮೂಲದಿಂದ ಉತ್ಪನ್ನವಾದ ಶಬ್ದಗಳನ್ನು ಮಾತ್ರ ಬಳಸಿಕೊಂಡು ಬೆಳೆದ ಭಾಷೆಗಳು ಜಗತ್ತಿನಲ್ಲಿ ಒಂದೂ ಇಲ್ಲ" – (ಕನ್ನಡ ಭಾಷೆಯ ಚರಿತ್ರೆ, ಪುಟ ೨೧೭) ಎಂಬುದು ಸತ್ಯ. ಹಾಗೇ "ಇಂದು ಸಂಸ್ಕೃತವು ಸಾಮಾಜಿಕ ಭಾಷೆಯಾಗಿ ಉಳಿದಿಲ್ಲ. ಕನ್ನಡಿಗರ ಮೇಲೆ ಅದರ ಪ್ರಭಾವವೂ ಹೆಚ್ಚಾಗಿ ಇಲ್ಲ. ಆದರೂ ಭಾರತೀಯ ಭಾಷೆಗಳಿಗೆ ಅವಶ್ಯಕವಿದ್ದ ಹಲವು ಪಾರಿಭಾಷಿಕ ಶಬ್ದಗಳನ್ನು ಸಂಸ್ಕೃತವೇ ಪೂರೈಸುತ್ತಲಿದೆ. ಅಂತಹವುಗಳನ್ನು ಕನ್ನಡದಲ್ಲಿಯೂ ಬಳಸಲಾಗುತ್ತಿದೆ. ಅದು ಅವಶ್ಯಕವೂ ಆಗಿದೆ. ಹೀಗೆ ಇಂದಿಗೂ ಹೊಸ ಹೊಸ ಸಂಸ್ಕೃತ ಶಬ್ದಗಳು ಕನ್ನಡಕ್ಕೆ ಸೇರುತ್ತಲಿವೆ. ಹಳಗನ್ನಡ ವೈಯಾಕರಣಿಗಳು ದೂರಿರಿಸಿದ ಕೆಲವು ಅವ್ಯಯಗಳು ಸಹ ಹೊಸಗನ್ನಡದಲ್ಲಿ ಬಳಕೆಯಲ್ಲಿ ಬಂದಿವೆ. ಉದಾಹರಣೆಗಳು: ಅಗತ್ಯ, ಅಥವಾ, ಏವಂಚ, ಕ್ರಮೇಣ, ಪರಂತು, ಪ್ರಾಯಶಃ ಪ್ರಾಯೇಣ, ಬಹುಶಃ, ಮುಖತಃ, ಯದ್ಯಪಿ, ಸದ್ಯ, ಸ್ವತಃ ಇತ್ಯಾದಿ. ಸಂಸ್ಕೃತವನ್ನು ದೂರಿರಿಸುವುದು (ದೂರವಾಗಿಸುವುದು) ಸಾಧ್ಯವಿಲ್ಲ. ಯೋಗ್ಯವೂ ಅಲ್ಲ" ಎಂದಿರುವುದೂ ಸತ್ಯ, ನ್ಯಾಯ. ಈ ಗ್ರಂಥಕರ್ತರು ಬಳಸಿದ "ಮಧ್ಯಂತರ" "ದೂರಿರಿಸು" ಎಂಬ ಒಂದೆರಡು ಪದಗಳು ಕನ್ನಡ ಭಾಷಾಧರ್ಮಕ್ಕೆ ಹೊರತು. "ಮಧ್ಯಂತರ" ಮರಾಠಿ ಪದ್ಧತಿಯ ಶಬ್ದ ಸಂಸ್ಕೃತ–ಕನ್ನಡ ವ್ಯಾಕರಣಗಳಿಗಿದು ವಿರುದ್ಧ. ಅದೇ ಪ್ರಕಾರ ದೂರ, ದೂರು ಎಂಬ ಎರಡು ಕನ್ನಡ ಪದಗಳನ್ನು ವಿಂಗಡಿಸಿ ತಿಳಿದುಕೊಳ್ಳದುದರಿಂದ ಇವರು "ದೂರಿರಿಸು" ಎಂದು ಬಳಸಿದ್ದಾರೆ. ಸಂಸ್ಕೃತ–ಕನ್ನಡ ಸಂಧಿಗಳ ನಿಯಮುಗಳನ್ನರಿಯದವರು ಇಂದು "ಒಟ್ಟಾಭಿಪ್ರಾಯ" ಎಂದು ಬರೆಯುತ್ತಾರೆ. ಅದು "ಒಟ್ಟಭಿಪ್ರಾಯವೆಂದಾಗುವುದು ವ್ಯಾಕರಣಶುದ್ಧ. ಹಾಗೇ ಕನ್ನಡ ಸಾಹಿತ್ಯ ಪರಿಷತ್ತು ಹೊರಡಿಸುವ "ಕನ್ನಡನುಡಿ"ಯಲ್ಲಿ ಕೆಲ ಕನ್ನಡಾನಭಿಜ್ಞರು ಬಳಸುವಂಥ "ನೇಮಕಾತಿ" (ಕನ್ನಡ ನುಡಿ, ಸಂಪುಟ ೪೨, ಸಂಚಿಕೆ ೧೯, ೨೦–ಅಕ್ಟೋಬರ್ ೧೬, ೧೯೭೯) "ನೇಮಕ" ಎಂದಿದ್ದರೆ ಸರಿ; ಹಾಗಲ್ಲದೇ ಅದು ವಾಪಸಾತಿ, ರದ್ದಿಯಾತಿ, ಹಾಜರಾತಿ ಮುಂತಾದ ಅಪಪ್ರಯೋಗಗಳನ್ನು ಅನುಸರಿಸಿದರೆ ಅಂಥ ಪ್ರಯೋಗಕಾರರಿಗೆ ಕನ್ನಡ ಭಾಷಾಧರ್ಮ ಗೊತ್ತಿಲ್ಲ ಎನ್ನಬೇಕಾಗುತ್ತದೆ. ಅಂಥ ಪದಗಳನ್ನು ವಾಪಸು ರದ್ದು, ಹಾಜರಿ ಎಂದು ಬಳಸುವುದು ಭಾಷಾಧರ್ಮಜ್ಞತೆಗೆ ಸಹಜ. ಹಾಗೇ ಮಧ್ಯಂತರದಂತೆ "ವಿವಂಚನೆ" ಎಂಬ ಮರಾಠಿ ಪದವು ಕನ್ನಡದಲ್ಲಿ ಅಪಾರ್ಥಕರ; ವಿಶೇಷವಾದ ವಂಚನೆಯೆಂದೇ ಅರ್ಥವಾಗುತ್ತದೆ. ಅದೇ ಮೇರೆಗೆ ಹಂಚಿಕೆಗೆ ಉಪಾಯವೆಂಬ ಅರ್ಥವಿರುವಾಗ ಅದನ್ನು "ಹಂಚುವಿಕೆ" ಎಂಬ ಅರ್ಥದಲ್ಲಿ ಬಳಸುವುದೂ ಅನನುಕೂಲಕರ. ಇನ್ನು ಪ್ರಾಮುಖ್ಯತೆ, ಪ್ರಾವೀಣ್ಯತೆ, ಪ್ರಾಧಾನ್ಯತೆಗಳನ್ನು ಬಳಸುವವರನ್ನು

ಕಂಡರೆ ಕನ್ನಡಿಗರು ಸುಸಂಸ್ಕೃತರಾಗಬೇಕಾದರೆ, ಸಂಸ್ಕೃತ ಜ್ಞಾನದ ಬುನಾದಿಯು ಅನಿವಾರ್ಯ ಎನ್ನಲೇಬೇಕಾಗುತ್ತದೆ. ಆದುದರಿಂದ ಸಂಧಿ, ಸಮಾಸ, ಶಬ್ದರೂಪಗಳಲ್ಲಿರುವ ಕನ್ನಡ–ಸಂಸ್ಕೃತ ಬಗೆಗಳನ್ನು ತಿಳಿದಿರುವುದು ಅಗತ್ಯವೆಂಬ ಅಭಿಪ್ರಾಯದಿಂದಲೇ ಡಾ. ಡಿ. ವಿ. ಜಿ. ಯವರು ತಮ್ಮ "ಸಾಹಿತ್ಯ ಶಕ್ತಿ"ಯಲ್ಲಿ ಪ್ರತಿಯೊಬ್ಬ ಕನ್ನಡಿಗನೂ ಸಂಸ್ಕೃತ–ಕನ್ನಡಗಳೆರಡರ ಒಂದೇ ಪ್ರಶ್ನೆ ಪತ್ರಿಕೆಯನ್ನು ಉತ್ತರಿಸಬೇಕಾಗುವಂತಹ ಕನ್ನಡ ಭಾಷಾಭ್ಯಾಸದ ಕ್ರಮವನ್ನು ಸೂಚಿಸಿದರು. ಅದರತ್ತ ಪ್ರಯತ್ನಿಸಲು ಹೋಗದೆ ಸಂಸ್ಕೃತವನ್ನೂ ಬ್ರಾಹ್ಮಣರನ್ನೂ ಗಂಟುಹಾಕಿ ಟೀಕಿಸುವ ಕನ್ನಡಿಗನು ನಿಜವಾದ ಕನ್ನಡಿಗನೇ? ಎಂದೂ ಅಲ್ಲ. "ಕನ್ನಡ ಭಾಷಾ ಚರಿತ್ರೆ" ಹೇಳಿರುವಂತೆ ಸಂಸ್ಕೃತ ಪದಪ್ರಯೋಗಗಳನ್ನು ಮೊದಲಿನಿಂದಲೇ ಹೆಚ್ಚಿಸುತ್ತ ಬಂದವರು ಜೈನ ಮಹಾಕವಿಗಳು. ಅದು ಯಾರಿಂದಲೇ ಆಗಲಿ–ಇಂದಿನ ಪರಿಸ್ಥಿತಿಯಲ್ಲಿ ಸಂಸ್ಕೃತ–ಕನ್ನಡಗಳಲ್ಲಿ ವಿವಾಹ ವಿಚ್ಛೇದವು ಅಸಾಧ್ಯ, ಅನಗತ್ಯ ಎಂಬುದು ನಿಜವಾದ ವಿದ್ವಾಂಸರಿಗೆ ಗೊತ್ತು.

ಮೇಲೆ ಹೇಳಿದ "ಕನ್ನಡ ನುಡಿ"ಯ ಇತರ ಅಸಾಧು ಪ್ರಯೋಗಗಳನ್ನು ಈ ಕೆಳಗೆ ಕೊಡಲಾಗಿದೆ:

| **ಅಸಾಧು** | **ಸಾಧು** |
|---|---|
| ಹಾಗು | ಹಾಗೂ |
| ಮಹಾನ್ ವ್ಯಕ್ತಿಯ | ಮಹಾವ್ಯಕ್ತಿಯ |
| ಪರಿಷತ್ ಅಧ್ಯಕ್ಷರ | ಪರಿಷತ್ತಿನ ಅಧ್ಯಕ್ಷರ |
| ರಾಷ್ಟ್ರಪಿತಸಮಾನರು | ರಾಷ್ಟ್ರಪಿತೃಸಮಾನರು |
| ಸೇವಾಕರ್ತ | ಸೇವಾಕರ್ತರು |
| ನಾಗರಾಜಯ್ಯ ಅವರು | ನಾಗರಾಜಯ್ಯನವರು |
| ಶೀಘ್ರಲಿಪಿಗಾರ | ಶೀಘ್ರಲಿಪಿಕಾರ |
| ಹುಟ್ಟುಕನ್ನಡಿಗರು | ಹುಟ್ಟುಗನ್ನಡಿಗರು |
| ಉತ್ತೇಜನ ಬಹುಮಾನ | ಉತ್ತೇಜಕ ಬಹುಮಾನ |
| ಯೋಜನೆ ಇದೆ | ಯೋಜನೆಯಿದೆ |
| ವಾಪಸ್ಸು | ವಾಪಾಸು |
| ಇಲ್ಲಿಯವರೆವಿಗೂ | ಇಲ್ಲಿಯವರೆಗೂ |
| ಕಛೇರಿ | ಕಚೇರಿ |
| ತಕ್ಷಣ | ತತ್‌ಕ್ಷಣ |
| ವಿದ್ಯಾಇಲಾಖೆ | ವಿದ್ಯಾಶಾಖೆ, ವಿದ್ಯೆಯಿಲಾಖೆ |

| | |
|---|---|
| ೧೯೭೭ನೇ | ೧೯೭೭ನೆಯ |
| ರಾಜ್ಯಾಡಳಿತಭಾಷೆ | ರಾಜ್ಯದಾಡಳಿತದ ಭಾಷೆ |
| ಪರೀಕ್ಷಾ ಅರ್ಜಿ | ಪರೀಕ್ಷೆಯ ಅರ್ಜಿ |
| ನಂತರ | ಅನಂತರ |
| ಶಿಕ್ಷಣ ಇಲಾಖೆ | ಶಿಕ್ಷಣದ ಇಲಾಖೆ |
| ಅಂತರರಾಷ್ಟ್ರೀಯ | ಅಂತಾರಾಷ್ಟ್ರೀಯ |
| ಚಳುವಳಿ | ಚಳವಳಿ |
| ಕೊಡುತ್ತಾರೆಂಬುದು, | ಕೊಡುತ್ತಾರೆಯೆಂಬುದು |
| ಕೊಡುತ್ತದೋ | ಕೊಡುತ್ತದೆಯೋ |
| ಜನಗಣತಿ | ಜನಗಣನೆ |
| ಪುನರ‍್ರಚಿಸಿಲ್ಲ | ಪುನಾರಚಿಸಿಲ್ಲ |
| ಸರಿ | ಸರಿಯಾಗಿ |
| ಸೇವೆಯನ್ನಂತು | ಸೇವೆಯನ್ನಂತೂ |
| ಪಾತ್ರವಂತು | ಪಾತ್ರವಂತೂ |
| ಅಭಿವ್ಯಕ್ತಿತೆ | ಅಭಿವ್ಯಕ್ತತೆ, ಅಭಿವ್ಯಕ್ತಿ |
| ಮೇನನ್‍ರಂಥ | ಮೆನನ್ನರಂಥ |
| ದೃಷ್ಟಿಯಿಂದಂತು | ದೃಷ್ಟಿಯಿಂದಂತೂ |
| ಬಿಹಾರಿನಲ್ಲಿ | ಬಿಹಾರದಲ್ಲಿ |
| ತಲಪಿಸಬೇಕೆಂಬ | ತಲುಪಿಸಬೇಕೆಂಬ |
| ಸ್ಥರ | ಸ್ತರ |
| ಆಗಾಗ್ಯೆ | ಆಗಾಗ |
| ವಿಡಂಬನೆ ಆಗುವುದರ | ವಿಡಂಬನೆಯಾಗುವುದರ |
| ವಿನಾಯಿತಿ | ವಿನಾಯತಿ |
| ಸರ್ವೇಸಾಧಾರಣ | ಸರ್ವಸಾಧಾರಣ |
| ಹತ್ತೂ ಜನರಂತೆ | ಹತ್ತುಜನರಂತೆ |
| –ಇತ್ಯಾದಿ | |

"ಅಸಾಧು" ಎಂಬ ಪದವನ್ನು ಇಲ್ಲಿ ಬಳಸಿದ್ದು ದಂಡಿಯು ಹೇಳಿದಂತೆ ಧೀಮಂತರಿಗೆ ಉದ್ವೇಗವನ್ನುಂಟುಮಾಡುವಂಥದು ಎಂಬ ಅರ್ಥದಲ್ಲಿ ಮಾತ್ರ. ಅಂದರೆ ನ ಕಾರಕ್ಕೆ ಆದೇಶವಾಗಿ ಬಂದ ಅ ಕಾರಕ್ಕೆ ಇರುವ ಆರು ಅರ್ಥಗಳಲ್ಲಿ "ಅಪ್ರಾಶಸ್ತ್ಯ" ಎಂಬುದಿಲ್ಲಿ ಗ್ರಾಹ್ಯ. ಈ ಸಂದರ್ಭದಲ್ಲಿ ಭಾಷೆಗಳು ಸಂಸ್ಕೃತಿಗಳ ಅಂಗಗಳಲ್ಲಿ ಗಣ್ಯವಾಗಿರುವುದರಿಂದ ಪ್ರಸಿದ್ಧ ಶಾಸ್ತ್ರಜ್ಞ ಟಿ.ಎಸ್.ಎಲಿಯಟ್ ಹೇಳಿರುವುದನ್ನು ಗಮನಿಸೋಣ;

"Now it is obvious that one unity of culture is that of the people who live together and speak the same language; because speaking the same language means thinking and feeling, and having emotions, rather differently from people who use a different language. But the cultures of different peoples do affect each other: in the world of future it looks as if every part of the world would affect every other part- ಒಟ್ಟಿಗೆ ಬಾಳುತ್ತ ಒಂದೇ ಭಾಷೆಯನ್ನು ಆಡುತ್ತ ಇರುವ ಜನರಲ್ಲಿ ಒಂದು ವಿಧದ ಐಕ್ಯವಿರುವುದು ಸ್ಪಷ್ಟ. ಏಕೆಂದರೆ, ಒಂದೇ ಭಾಷೆಯನ್ನಾಡುವುದೆಂದರೆ ಇತರ ಭಾಷಿಕರಿಗಿಂತ ಭಿನ್ನವಾಗಿ ವಿಚಾರ ಮಾಡುವುದು, ಅನುಭವ ಹೊಂದುವುದು ಮತ್ತು ಭಾವನೆಗಳನ್ನು ತಾಳುವುದು ಎಂದರ್ಥ. ಆದರೆ ಬೇರೆ ಬೇರೆ ಜನರ ಸಂಸ್ಕೃತಿಗಳು ಪರಸ್ಪರ ಪ್ರಭಾವವನ್ನು ಪರಸ್ಪರರ ಮೇಲೆ ಬೀರಿಯೇ ಬೀರುತ್ತವೆ; ಭಾವಿ ಜಗತ್ತಿನಲ್ಲಿ ಜಗತ್ತಿನ ಪ್ರತಿಯೊಂದು ವಿಭಾಗವೂ ಪ್ರತಿಯೊಂದು ಇತರ ವಿಭಾಗದ ಮೇಲೂ ಪರಿಣಾಮ ಬೀರುವುದು ಖಂಡಿತ ಎಂದು ತೋರುತ್ತದೆ (ಪುಟ ೧೨೦–೧೨೧, Notes towards the definition of culture). ಕನ್ನಡಿಗರೂ ಸಂಸ್ಕೃತ ಭಾಷಿಕರೂ ಕನ್ನಡಿಗರೇ ಅಥವಾ ಭಾರತೀಯರೇ ಆಗಿರುವುದರಿಂದ ಅವರ ಚಿಂತನ, ಭಾವನ ಮತ್ತು ಅನುಭವಗಳು ಏಕಕಾಲದಲ್ಲಿ ಭಿನ್ನ ಭಾಷಾ ಮಾಧ್ಯಮಗಳ ಮೂಲಕ ಹೊರಬೀಳುತ್ತ ಬಂದದ್ದು ಆಶ್ಚರ್ಯವಲ್ಲ. ಈ ಅಂಶವನ್ನು ಗಮನಿಸಿಯೇ ದಿ. ಎ. ಆರ್. ಕೃಷ್ಣಶಾಸ್ತ್ರಿಗಳ ಸಂಸ್ಕೃತ ಗುರುಗಳು ಮೈಸೂರಿನ ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ "ಸಂಸ್ಕೃತವು ಅನ್ಯಭಾಷೆ" ಎಂಬ ಮಾತಿಗೆ "ಅನ್ಯಾ ಚಾಸೌ ಭಾಷಾ=ಭಿನ್ನಭಾಷೆ" ಎಂಬಷ್ಟೇ ಅರ್ಥವಲ್ಲದೆ, "ಅನ್ಯೇಷಾಂ ಭಾಷಾ ನ ಚಾಸೌ"=ಅನ್ಯ ಜನರ ಭಾಷೆಯಲ್ಲ." ಎಂದೇ ಅರ್ಥವೆಂದು ಕನ್ನಡಿಗರು ತಿಳಿದುಕೊಳ್ಳಬೇಕಾಗಿದೆ–ಎಂದು ಘಂಟಾಘೋಷವಾಗಿ ಹೇಳಿಸಿದ್ದು. ಇದು ಇತಿಹಾಸ ಪ್ರಸಿದ್ಧವಾಗಿ ಎಲ್ಲರಿಗೂ ತಿಳಿದ ಸಂಗತಿ. ಇದನ್ನು ಮರೆತರೆ ಸಂಸ್ಕೃತವು ಕನ್ನಡಿಗೇತರರ ಅಥವಾ ಭಾರತೀಯೇತರರ ಭಾಷೆ ಎಂಬ ಭ್ರಾಂತಿಯುಂಟಾಗುತ್ತದೆ. ಕನ್ನಡ ಸಂಸ್ಕೃತಿಗಳು ಯಮಳ ಭಾಷೆಗಳು, ಅವಳಿಜವಳಿಗಳು ಎಂಬುದನ್ನು ವಿದ್ವಾಂಸರು ಎಂದೂ ಅಲ್ಲಗಳೆಯಲಾರರು. ಅವು "ಧಾರವಾಡ–ಹುಬ್ಬಳ್ಳಿ" ಎಂಬ ಮಹಾನಗರದಂತಿವೆ.

ಮಹಾಕವಿ ಟೀ. ಎಸ್. ಎಲಿಯಟ್ಟನ ಇನ್ನೊಂದು ಮಾತೂ ಇಲ್ಲಿ ಸಂಗ್ರಾಹ್ಯ: ಇಲ್ಲಿ ಬರುವ ಯೂರೋಪಿಗೆ ಬದಲು ಭಾರತ ಎಂದಿಟ್ಟುಕೊಂಡರಾಯಿತು–"My last appeal is to the men of letters of Europe, who have a special responsibility for the preservation and transmission of our common culture. We may hold very

different political views, our common responsibility is to preserve our common culture uncontaminated by political influences. It is not a question of sentiment: it does not matter so much whether we like each other or praise each other's writings. What matters is that we should recognise our relationship and mutual dependence upon each other. What matters is our inability, without each other to produce these excellent works which mark a superior civilisation... We can at least try to save something of those goods of which we are common trustees; the legacy of Greece, Rome and Israel and the legacy of Europe throughout the last 2000 years. In a world which has seen such material devastation as ours, these spiritual possessions are also in imminent peril- ನನ್ನ ಕೊನೆಯ ಅಪೀಲು ಯುರೋಪಿನ ಸಾಹಿತಿಗಳಿಗೆ; ಅವರಿಗೆ ತಮಗೆ ಸಾಧಾರಣವಾದ ಸಂಸ್ಕೃತಿಯನ್ನು ಉಳಿಸುವ ಮತ್ತು ಪ್ರಸಾರ ಮಾಡುವ ಜವಾಬುದಾರಿಯಿದೆ. ನಾವು ಭಿನ್ನ ಭಿನ್ನ ರಾಜಕೀಯಾಭಿಪ್ರಾಯಗಳನ್ನಿಟ್ಟು ಕೊಂಡಿರಬಹುದು. ರಾಜಕೀಯ ಪ್ರಭಾವಗಳಿಗೊಳಗಾಗದೆ ನಮ್ಮ ಸರ್ವ ಸಾಮಾನ್ಯವಾದ ಸಂಸ್ಕೃತಿಯನ್ನು ಸಂಮಿಶ್ರಿತವಾಗದಂತೆ ರಕ್ಷಿಸಿಕೊಳ್ಳುವುದು ನಮ್ಮ ಸರ್ವಸಾಧಾರಣವಾದ ಹೊಣೆ, ಇದು ಭಾವನಾ ಪರವಶತೆಯ ಮಾತಲ್ಲ. ನಾವು ಪರಸ್ಪರರನ್ನೂ ಪರಸ್ಪರರ ಕೃತಿಗಳನ್ನೂ ಮೆಚ್ಚದಿದ್ದರೂ ಅಡ್ಡಿಯಿಲ್ಲ, ಹೊಗಳದಿದ್ದರೂ ಅಡ್ಡಿಯಿಲ್ಲ. ಮುಖ್ಯವಾದ ಸಂಗತಿಯೆಂದರೆ, ನಮ್ಮ ಪರಸ್ಪರ ಸಂಬಂಧವನ್ನೂ ಅವಲಂಬನವನ್ನೂ ಮನ್ನಿಸುವುದು; ಉತ್ತಮ ನಾಗರಿಕತೆಯ ಗುರುತುಗಳೆನ್ನಿಸುವ ಅಂಥ ಮಹಾಕೃತಿಗಳನ್ನು ಪರಸ್ಪರ ಸಂಪರ್ಕವಿಲ್ಲದೆ ರಚಿಸಲಾಗದಿರುವ ಅಂಶ... ಕೊನೆಯ ಪಕ್ಷ ನಾವು ಕೆಲವು ಸರ್ವಸಾಧಾರಣ ವಸ್ತುಗಳನ್ನು ರಕ್ಷಿಸಿಕೊಳ್ಳಬಲ್ಲೆವು. ಗ್ರೀಸಿನ, ರೋಮಿನ ಮತ್ತು ಇಸ್ರೇಲಿನ (ಭಾರತದ ವಿಷಯದಲ್ಲಿ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗಿನ ಘಟಿಕಾಸ್ಥಾನಗಳಿಂದ ಪ್ರಸಿದ್ಧವಾಗಿದ್ದ ನಗರಗಳ–ಲೇ.) ಹಾಗೂ ಯೂರೋಪಿನ (ಭಾರತದ ವಿಷಯದಲ್ಲಿ ಭಾರತದ–ಲೇ) ೨೦೦೦ ವರ್ಷಗಳ (ನಮ್ಮಲ್ಲಿ ೬೦೦೦ ವರ್ಷಗಳ–ಲೇ) ಪಿತ್ರಾರ್ಜಿತ ಸಂಸ್ಕೃತಿಯನ್ನು ನಾವು ಉಳಿಸಿಕೊಳ್ಳಬೇಕು. ಭೌತಿಕ ಸಂಪತ್ತಿನ ಅತ್ಯಧಿಕ ವಿನಾಶವನ್ನು ಕಂಡ ಈ ಜಗತ್ತಿನಲ್ಲಿ ಆಧ್ಯಾತ್ಮಿಕ (ಅರ್ಥಾತ್ ಸಾಂಸ್ಕೃತಿಕ–ಲೇ) ಸೊತ್ತುಗಳೂ ಸದ್ಯದಲ್ಲೇ ನಾಶಹೊಂದಿಯಾವೆಂಬ ಅಂಶವನ್ನು ನಾವು ಗಮನಿಸಬೇಕು." ಈ ಮಾತಿಗೆ ಸುಸಂಸ್ಕೃತ ಕನ್ನಡಿಗರು ಎದುರು ಮಾತಾಡಿಯಾರೇ? ಎಂದಿಗೂ ಆಡರು.

ಅನ್ಯಾರ್ಥದಲ್ಲಿಯೂ ಕನ್ನಡದಲ್ಲಿ ಬಳಕೆಯಲ್ಲಿರುವ ಸಂಸ್ಕೃತ ಶಬ್ದಗಳು.

| **ಸಂಸ್ಕೃತ ಶಬ್ದ** | **ಸಂಸ್ಕೃತಾರ್ಥ** | **ಕನ್ನಡದ ಅರ್ಥ** |
|---|---|---|
| ಅವಸರ | ಸಮಯ, ಪ್ರಸಂಗ | ತ್ವರೆ, ಆತುರ |
| | ಅವಕಾಶ, ವಿರಾಮ, | |
| | ಪ್ರಶಸ್ತ, ಆಪ್ತಾಲೋಚನೆ, | |

| | | |
|---|---|---|
| ಅಪರೂಪ | ಕುರೂಪ, ವಿಕೃತರೂಪ | ಅನರ್ಘ್ಯ, ವಿರಲ, ಅಪೂರ್ವ |
| ಅಲಕ್ಷ್ಯ | ಅಗೋಚರ, ಅನಭಿಜ್ಞಾತ, ಅವಿಶಿಷ್ಟಲಕ್ಷಣ, ಅಲ್ಪ, ಅನಾಭಾಸಿತ, ಅಗೌಣ | ಅನಾದರ, ತಾತ್ಸಾರ |
| ಖಂಡಿತ | ಕೃತ್ತ, ನಷ್ಟ, ಸಿದ್ಧದೋಷ, ಪ್ರತಿವಾದಹತ, ತ್ಯಕ್ತ | ನಿಷ್ಕೃಷ್ಟ ನಿಶ್ಚಿತ, ನಿಜ |
| ದಾಹ | ತಾಪ, ಜ್ವರ | ಬಾಯಾರಿಕೆ |
| ದಾಹಶಾಂತಿ | ತಾಪಶಮನ | ಬಾಯಾರಿಕೆಯನ್ನು ಹಿಂಗಿಸಿಕೊಳ್ಳುವುದು |
| ನಿಜ | ಸಹಜ, ಸ್ವಾಭಾವಿಕ, ಸ್ವಂತದ ವಿಶಿಷ್ಟ, ಶಾಶ್ವತ, ಚಿರಸ್ಥಾಯಿ | ಸತ್ಯ |
| ನಿದಾನ | ಪ್ರಗ್ರಹ, ಮೂಲಕಾರಣ, ರೋಗವಿಜ್ಞಾನ, ರೋಗ ಪರೀಕ್ಷೆ, ಸಮಾಪ್ತಿ, ಶುದ್ಧತೆ | ಮೆಲ್ಲಗೆ, ಸಾವಕಾಶ |
| ಪಂಡಿತ | ವಿದ್ವಾಂಸ | ಉಪಾಧ್ಯಾಯ, ವೈದ್ಯ |
| ಬ್ರಹ್ಮಾಂಡ | ಪ್ರಪಂಚ | ದೊಡ್ಡ, ಬಹಳ |
| ಭದ್ರ | ಶುಭ, ಪ್ರಗತಿ, ಉತ್ಥಾನ, ಉದ್ಧಾರ | ಗಟ್ಟಿ, ಎಚ್ಚರಿಕೆ |
| ಮರ್ಯಾದಾ (ದೆ) | ಎಲ್ಲೆ, ತುದಿ, ತೀರ, ಅಂಕ, ಲಕ್ಷಣ, ನೀತಿನಿಯಮ, ಔಚಿತ್ಯ ಸೀಮೆ, ಸ್ವೀಕೃತ ನಿರ್ಬಂಧ | ಗೌರವ, ಮನ್ನಣೆ |
| ಲೋಭ | ದುರಾಶೆ, ಬಯಕೆ | ಪ್ರೇಮ |
| ವಿಪರೀತ | ವಿರುದ್ಧ, ಪ್ರತಿಕೂಲ ಅಸತ್ಯ, ಅಗ್ರಾಹ್ಯ | ಅತ್ಯಧಿಕ |
| ಸರಾಗ | ವರ್ಣಯುಕ್ತ, ರಕ್ತವರ್ಣಲಿಪ್ತ ಲಾಕ್ಷಾಲಿಪ್ತ, ಮೋಹಯುಕ್ತ | ಸುಲಭ, ನಿರ್ವಿಘ್ನ |
| ಸ್ನೇಹ | ಪ್ರೇಮ, ದಯೆ, ತೈಲಯುಕ್ತತೆ ಆರ್ದ್ರತೆ, ಮೇದಸ್ಸು | ಗೆಳೆತನ |

ಇಂಥ ಸಂಸ್ಕೃತ ಶಬ್ದಗಳ ಸಂಸ್ಕೃತಾರ್ಥ–ಕನ್ನಡದ ಅರ್ಥಗಳೆರಡನ್ನೂ ಕನ್ನಡ ಬಳಸುತ್ತದೆ. ಲೋಭವು ಮರಾಠಿಯಿಂದ ಪ್ರೇಮವಾಗಿ ಉತ್ತರ ಕರ್ಣಾಟಕಕ್ಕೆ ಬಂದದ್ದು. ಸ್ನೇಹದಲ್ಲಿ ಅರ್ಥಸಾಮ್ಯವನ್ನು ಒಂದೇ ಒಂದು ಅರ್ಥದಲ್ಲಿ ಕನ್ನಡ ತೆಗೆದುಕೊಂಡಿದೆ.

ಇನ್ನೊಂದು ವಿಷಯಃ–ವಿಕಾರಕ್ಕೆಡೆಯಿರದ ಸಂಸ್ಕೃತ ಶಬ್ದಗಳನ್ನು ಶಕ್ಯವಿದ್ದಷ್ಟು ಮಟ್ಟಿಗೆ ಶುದ್ಧರೂಪದಲ್ಲಿಯೇ ಬಳಸಬೇಕೆಂಬ ಪ್ರವೃತ್ತಿಯನ್ನು ಕನ್ನಡಿಗರು ಹಿಂದಿನಿಂದ ಇಂದಿನವರೆಗೂ ಕಾಯ್ದುಕೊಂಡು ಬಂದಿದ್ದಾರೆ. ಸಂಸ್ಕೃತದ ಸಮಸ್ತಪದವು ಒಂದಕ್ಕಿಂತ ಹೆಚ್ಚು ಶಬ್ದಗಳಿಂದ ಕೂಡಿದ್ದಾಗಲೂ ಅದು ಒಂದು ಸ್ವತಂತ್ರ ಅರ್ಥವನ್ನು ಕೊಡುವುದರಿಂದ ಅಂಥ ಪದದಲ್ಲಿ ಸಂಯುಕ್ತಗೊಳಿಸುವ ಪದಗಳು ಕೇವಲ ಸಂಸ್ಕೃತ ಪದಗಳೇ ಆಗಿರಬೇಕು ಇಲ್ಲವೇ ಎಲ್ಲವೂ ಕನ್ನಡ ಶಬ್ದಗಳೇ ಆಗಿರಬೇಕು ಎಂಬುದನ್ನೂ ಅನುಲ್ಲಂಘನೀಯ ಉತ್ಸರ್ಗ ನಿಯಮವನ್ನಾಗಿ ಕನ್ನಡಿಗರು ಸ್ವೀಕರಿಸಿದ್ದಾರೆ. ನೃಪತುಂಗನ ಕಾಲದಿಂದಲೂ ಇದು ನಡೆದುಬಂದದ್ದು. ಅರಿಸಮಾಸಗಳು ಕನ್ನಡದಲ್ಲಿ ಅಪವಾದಗಳು (Exceptions).

ಶ್ರೀ ಪ್ರ.ಗೋ. ಕುಲಕರಣಿಯವರು ಇಂದಿನ ಪ್ರಸಿದ್ಧ ಸಾಹಿತಿಗಳಲ್ಲಿಯ ಕೆಲವರು ಮಾಡಿದ ನಿಂದ್ಯ ಪ್ರಯೋಗಗಳನ್ನು ಹೀಗೆ ಕೊಟ್ಟಿದ್ದಾರೆ:–

| **ನಿಂದ್ಯ** | **ವಂದ್ಯ** |
|---|---|
| ವೃತ | ವ್ರತ |
| ಧೃವ | ಧ್ರುವ |
| ಚಿನ್ಹ | ಚಿಹ್ನ |
| ಮಧ್ಯಾನ್ಹ | ಮಧ್ಯಾಹ್ನ |
| ಎತ್ನಿಸು | ಯತ್ನಿಸು |
| ರಾತ್ರೆ | ರಾತ್ರಿ |
| ಪ್ರಾಮುಖ್ಯತೆ | ಪ್ರಾಮುಖ್ಯ |
| ಪಾಶ್ಚಿಮಾತ್ಯ | ಪಾಶ್ಚಾತ್ಯ |
| ಪೌರ್ವಾತ್ಯ | ಪೌರಸ್ತ್ಯ |
| ಶೃತಿ | ಶ್ರುತಿ |

–ಇತ್ಯಾದಿ

ಇಷ್ಟಲ್ಲದೆ, ಕೈಲಾಸಂ ಅವರ ನಾಟಕಗಳಲ್ಲಿ ಕಂಡು ಬರುವ "ಆಂಗ್ಲ ಕನ್ನಡವೆರಡರೊಳ್ ನಾ ರ್‍ಯಾಂಗ್ಲರಾಗಿಹೆನ್" ಎಂದು ಹೆಮ್ಮೆಪಡುವ "ಬಟ್ಲರ್ ಕನ್ನಡ" ವನ್ನು ಅವರು ಸರ್ವಥಾ ತ್ಯಾಜ್ಯವೆಂದಿದ್ದಾರೆ. ಏಕೆಂದರೆ ಅದು ಕನ್ನಡ ಭಾಷೆಗೆ ಅಗೌರವ ತರುತ್ತದೆ. ಸಂಸ್ಕೃತೇತರ ಭಾಷೆಗಳಿಂದ ಪದಗಳನ್ನು ತೆಗೆದುಕೊಳ್ಳಬೇಕಾದ ಅವಶ್ಯಕತೆಯುಂಟಾದಾಗ

"ಹಾಸ್ಪಿಟಲ್ಲನ್ನು" "ಆಸ್ಪತ್ರೆಯನ್ನಾಗಿ" ಕನ್ನಡ ಭಾಷಾಧರ್ಮಕ್ಕೆ (ಧ್ವನಿಪೇಟಿಕೆಯ ಸ್ವಾಭಾವಿಕತೆಗೆ) ಅನುಗುಣವಾಗಿ ತದ್ಭವಿಸಿಯೇ ತೆಗೆದುಕೊಳ್ಳುವುದು ಗ್ರಾಹ್ಯವೆಂಬುದನ್ನು ಯಾರೂ ಮರೆಯಬಾರದು. ಏಕೆಂದರೆ ದ್ರಾವಿಡಭಾಷೆಯ ವ್ಯಾಕರಣಗಳು ವಿಭಕ್ತ್ಯಾದಿ ಅನೇಕ ವಿಷಯಗಳಲ್ಲಿ ಸಂಸ್ಕೃತ ವ್ಯಾಕರಣಗಳನ್ನು ಅನುಸರಿಸುತ್ತ ಬಂದಿವೆ. ಇರುವ ಅಲ್ಪಶತಾಂಶ ಕನ್ನಡ ವೈಶಿಷ್ಟ್ಯವನ್ನು ಬಿಡಬೇಕೆಂದು ಯಾರೂ ಹೇಳರು. ಆದರೆ ಆ ಅಂಶವು ಕನ್ನಡ ವ್ಯಾಕರಣದ ಪ್ರಸಿದ್ಧ ಗ್ರಂಥಗಳಲ್ಲಿ ಹೇಳಿದ ಮಾದರಿಯದಾಗಿರಬೇಕು. ಇಲ್ಲವಾದರೆ ಬೆಳೆಯ ಜೊತೆಗೆ ಕಳೆಯೇ ಎದ್ದುಕಾಣುವಂತಾದೀತು. ಅಪವಾದಾತ್ಮಕ ವಿಷಯಗಳು ಇಂಥವುಃ– ಅಚ್ಚಗನ್ನಡದಲ್ಲಿ ಆಕಾರಂತ ಶಬ್ದಗಳು ಇಲ್ಲ. ಪ್ರತ್ಯಯದಿಂದಾದ ಕ್ರಿಯಾರೂಪಗಳು ಹೊಸಗನ್ನಡದಲ್ಲಿಲ್ಲ. ಕನ್ನಡದಲ್ಲಿಯೂ ದ್ರಾವಿಡ ವರ್ಗದ ಇನ್ನಿತರ ಭಾಷೆಗಳಲ್ಲಿಯೂ ಶುದ್ಧವಾದ ವರ್ತಮಾನ ಕಾಲವನ್ನು ನಿರ್ದೇಶಿಸುವ ಪ್ರತ್ಯಯವು ಹಿಂದೆ ಇರಲಿಲ್ಲ. ಆದರೆ ಇಂದು ಇದೆ–ಇರಬೇಕಾಗಿದೆ. ಹಾಗೇ ಕನ್ನಡ ಗದ್ಯದಲ್ಲಾಗಲಿ ಪದ್ಯದಲ್ಲಾಗಲಿ ಪದಮಧ್ಯ ಸಂಧಿಯಂತೆಯೇ ಪದಾಂತ ಸಂಧಿಯನ್ನೂ ಉತ್ಸರ್ಗವೆಂದೇ ತಿಳಿಯುವದು ಶೈಲಿ ಗಾಂಭೀರ್ಯವನ್ನು ಹೆಚ್ಚಿಸುತ್ತದೆ. ವಿಸಂಧಿ ದೋಷವು ಗದ್ಯಕ್ಕಿಂತ ಪದ್ಯದಲ್ಲಿ ಹೆಚ್ಚು ಶೈಥಿಲ್ಯವನ್ನು ತರುತ್ತದೆ ಎಂಬುದು ಸಹೃದಯರಿಗೆ ತಿಳಿದ ಸಂಗತಿ. ಸಂಧಿಗೆ ಉಚ್ಚಾರ ಸೌಲಭ್ಯ ಮತ್ತು ಸುಶ್ರಾವ್ಯತೆಗಳು ನಿಕಷಗಳು.

ಕನ್ನಡ, ತುಳು, ತೆಲುಗು, ತಮಿಳು, ಮಲೆಯಾಳ ಮುಂತಾದ ಸೋದರೀ ಭಾಷೆಗಳಿಂದ ಅಥವಾ ಸಖೀಭಾಷೆಗಳಿಂದ ಸಂಸ್ಕೃತ ಪಡೆದುಕೊಂಡ ಅಂಶಗಳು ಸಂಖ್ಯೆಯಲ್ಲಿ ಅಲ್ಪವೆಂದೆನ್ನಿಸಿದರೂ ಐತಿಹಾಸಿಕವಾಗಿ ಬಹಳ ಗಣ್ಯ. "ದ್ರಾವಿಡ ಭಾಷೆಗಳಿಂದ" ಎನ್ನಬಹುದಲ್ಲದೆ ಕೇವಲ ಕನ್ನಡದಿಂದ ಎಂದು ಹೇಳಲು ಸಾಧ್ಯವಾಗದ ಕೊಡುಗೆಗಳೆಂದರೆ–

೧) ಸಂಸ್ಕೃತದಲ್ಲಿ ಕಂಡು ಬರುವ ಮೂರ್ಧನ್ಯ ವ್ಯಂಜನಗಳು

೨) ಸಮಸ್ತ ಪದಗಳಲ್ಲಿ ಪೂರ್ವಪದಾಂತ್ಯ ಕಚಟತಪ ಕಾರಗಳು ಸರಳ ವ್ಯಂಜನಗಳಾಗಿ ಗಜಡದಬಗಳೆನ್ನಿಸುವುದು (ಜಶ್ತ್ವಸಂಧಿ) ದ್ರಾವಿಡದ ಪದಮಧ್ಯ ಪರುಷ ವ್ಯಂಜನಗಳು ಸರಳಗಳಾಗಿ ಪರಿವರ್ತಿಸುವುದು ಸಂಸ್ಕೃತದ ಅನುಕರಣದಿಂದ ಎಂಬುದು ಇನ್ನೊಂದು ಅಭಿಪ್ರಾಯ.

೩) ದ್ರಾವಿಡದ "ದ+ವನ್" ಎಂಬುದನ್ನು ಸಂಸ್ಕೃತದ "ಕೃತವಾನ್" ಎಂಬಂತಹ ರೂಪಗಳ ನಿರ್ಮಾಣದಲ್ಲಿ ಅನುಕರಿಸಲಾಗಿದೆ ಎಂಬುದು ಇನ್ನೊಂದು ಅಂಶ.

೪) "ಪೃಥ್ವಿ"ಯು ಪೃಥಿವೀ ಎಂದೂ "ಸ್ವರ್ಣವು" ಸುವರ್ಣವೆಂದೂ ಸಂಯುಕ್ತ ವ್ಯಂಜನದ ವಿಂಗಡಣೆಯಾಗುವದು ಸಂಸ್ಕೃತಮಾಡಿದ ದ್ರಾವಿಡಾನುಕರಣ– ಅದೂ ಪ್ರಾಕೃತದ ಮೂಲಕ–ಎಂಬುದೊಂದು ಮತ.

೫) ಲೌಕಿಕ ಸಂಸ್ಕೃತದ ಕೆಲ ಕ್ರಿಯಾಪದ ರೂಪಗಳು ದ್ರಾವಿಡ ಪ್ರಭಾವಿತ ಎಂಬುದಿನ್ನೊಂದು.

೬) ಹಿಂದೆ ಹೇಳಿದ ಚಂಪೂಕಾವ್ಯರೂಪಕ್ಕೆ ಕನ್ನಡವೇ ಮೊದಲು. ದಂಡಿಯೇನೋ "ಗದ್ಯಪದ್ಯಮಯಂ ಕಾಚಿತ್ ಚಂಪೂರಿತ್ಯಭಿಧೀಯತೆ" ಎಂದು ಹೇಳಿದ್ದುಂಟು. ದಂಡಿಯಕಾಲ ಸುಮಾರು ಕ್ರಿ.ಶ ೬೦೦–೭೦೦ರ ನಡುವೆ.

೭) ಕನ್ನಡಲಲಿತರಗಳೆಯ ಸಂಸ್ಕೃತಾನುಕರಣವನ್ನು ಆಗಲೇ ಕೊಡಲಾಗಿದೆ.

ಸಂಸ್ಕೃತ–ಪ್ರಾಕೃತ–ಅಪಭ್ರಂಶ ಎಂಬ ಭಾಷಾ ವಿಕಾಸವು ಉತ್ಸರ್ಗವಾದರೂ ಸಂಸ್ಕೃತದ "ವಿಕೃತ"ವು ಪ್ರಾಕೃತದಲ್ಲಿ "ವಿಕಟ"ವಾಗಿ ಪುನಃ ಸಂಸ್ಕೃತವನ್ನು ಸೇರಿಕೊಂಡಿತೆಂಬುದು ಕೆಲ ವಿದ್ವಾಂಸರ ಮತ. ಆದರೆ ನೇರವಾಗಿ ಕನ್ನಡ ಪದಗಳನ್ನು ಸಂಸ್ಕೃತ ತೆಗೆದುಕೊಂಡದ್ದಕ್ಕೆ ಕೊಟ್ಟ ಉದಾಹರಣೆಗಳೆಲ್ಲ "ಇದಮಿತ್ಥಂ" ಎಂಬ ರೀತಿಯವುಗಳಲ್ಲವಾದುದರಿಂದ ಅವುಗಳನ್ನು ಸಂಸ್ಕೃತ ಕನ್ನಡ ಸಾಧಾರಣ ಎಂದು ಹಿಂದೆ ಹೇಳಲಾಯಿತು.

ಮೇಲಿನ ಹಲವಾರು ನಿದರ್ಶನಗಳಿಂದ ಕನ್ನಡವು ಸಂಸ್ಕೃತ ಜನ್ಯವಲ್ಲವೆಂದಾದರೂ ಅದಕ್ಕೆ ಹಿಂದಿನಂತೆಯೇ ಇಂದೂ ಸಂಸ್ಕೃತದ ಸಂಬಂಧ ಅನಿವಾರ್ಯ ಎಂಬುದು ಸ್ಪಷ್ಟವಾಗುತ್ತದೆ. ಸಂಸ್ಕೃತದಲ್ಲಿರುವ ಶಾಸ್ತ್ರವಾಙ್ಮಯದ ವೈಪುಲ್ಯ ವೈವಿಧ್ಯಗಳು ಕನ್ನಡದಲ್ಲಿಲ್ಲವಾದುದರಿಂದಲೂ ಸಂಸ್ಕೃತವು ಕನ್ನಡೇತರ ಪ್ರದೇಶದಲ್ಲಿ ಮಾತ್ರ ಹುಟ್ಟಿ ಬೆಳೆದ ಭಾಷೆಯಲ್ಲವಾದುದರಿಂದಲೂ ಅದರ ನಿಕಟತೆಯು ಆಧುನಿಕ ಕನ್ನಡಕ್ಕೆ ಅದರ ಅಖಿಲ ಭಾರತೀಯ ಅಂಶದ ಸಿದ್ಧಿಗೆ ಶಾಸ್ತ್ರವಾಙ್ಮಯಾಭಿವೃದ್ಧಿಗೆ ಕಾವ್ಯಗಾಂಭೀರ್ಯಶೋಭೆಗೆ ಅಗತ್ಯ ಎಂಬುದು ಸ್ವತಃ ಸಿದ್ಧ. ಇದು ಕೇವಲ ಕನ್ನಡಕ್ಕೆ ಮಾತ್ರವಲ್ಲ–ಭಾರತೀಯ ಆಡುಮಾತುಗಳೆಲ್ಲವುಗಳಿಗೂ ಈ ಅಗತ್ಯವಿದೆ. ಆದಿಪಂಪನು ತನ್ನ ಕಾವ್ಯಗಳನ್ನು "ಸಾಜಮಾದ ಪುಲಿಗೆರೆಯ ತಿರುಳ್ಗನ್ನಡ"ದಲ್ಲಿ ಬರೆದನೆಂದುಕೊಂಡದ್ದನ್ನು ನೋಡಿದರೆ ಇಂದು ಕೆಲವರು ಹೇಳುವ ಸಂಸ್ಕೃತ ಭೂಯಿಷ್ಠತೆಯು ಮಿಥ್ಯಾರೋಪವಾಗುತ್ತದೆ. ಭಾಮಹ ಹೇಳಿರುವಂತೆ ಶ್ರುತಿ ದುಷ್ಟ, ಅರ್ಥದುಷ್ಟ, ಕಲ್ಪನಾದುಷ್ಟ ಮತ್ತು ಶ್ರುತಿಕಷ್ಟ ಎನ್ನಿಸುವ ಪದಗಳು ಯಾವ ಭಾಷೆಯವುಗಳಾದರೂ ತ್ಯಾಜ್ಯ ಎಂಬುದನ್ನು ಕನ್ನಡ ಬರಹಗಾರರು ತಿಳಿದರೆ ಸಾಕು; ಹಾಗೇ ಇಂಗ್ಲೀಷು ಮುಂತಾದ ಅಭಾರತೀಯ ಭಾಷೆಗಳಿಂದ ನಿವಾರ್ಯವಾಗಿ ಪದಗಳನ್ನು ತೆಗೆದುಕೊಳ್ಳುವುದು ದುರಭ್ಯಾಸ ಎಂಬುದನ್ನು ಅರಿತರೆ ಸಾಕು.

ಭಾರತ ಸರಕಾರವು ಪ್ರಕಟಿಸಿದ "Provisional list of Technical Terms in Hindi" ಎಂಬ ಕೋಶಮಾಲೆಯಲ್ಲಿರುವ ಪದಸ್ವೀಕಾರ, ಪದ ನಿರ್ಮಾಣಗಳ ನಿಯಮವು ಕನ್ನಡಕ್ಕೂ ಗ್ರಾಹ್ಯ ಎಂಬುದಕ್ಕೀಗ ಪೋಲೀಸನು "ಆರಕ್ಷಕ"ನಾಗಿರುವುದು ಸಾಕ್ಷಿ. ಪೋಲೀಸನು ಪೋಲೀಸನಾಗಿಯೇ ಇರಬಹುದಾಗಿತ್ತು. ಆದರೆ ಕಾಲಿದಾಸನು ಅವರನ್ನು ರಕ್ಷಿಗಳೆಂದು ಕರೆದಿರುವುದನ್ನವಲೋಕಿಸಿಯೋ ಏನೋ ಹಿಂದಿಯು "ಆರಕ್ಷಕ" ಪದಗಳನ್ನು ನಿರ್ಮಿಸಿಕೊಂಡಿತು. ಉಕ್ತ ಮಾಲೆಗಳಲ್ಲಿರುವುದನ್ನು ಸಂಸ್ಕೃತದಲ್ಲಿರುವ ವಿವಿಧ ಶಾಸ್ತ್ರಗಳನ್ನು ಚೆನ್ನಾಗಿ ಓದಿದವರಿಗೆ ಕೊಟ್ಟರೆ, ಇನ್ನೂ ಶ್ರುತಿಸುಭಗ, ಉಚ್ಚಾರಣಸುಲಭ ಎನ್ನಿಸುವ ಪದಗಳನ್ನು ಪಾರಿಭಾಷಿಕಗಳ ಪಟ್ಟಿಗೆ ಸೇರಿಸಿಕೊಟ್ಟಾರು. ಸಂಸ್ಕೃತದ ಘನ ವಿದ್ವಾಂಸನಿಲ್ಲದ ಸಮಿತಿಗಳು ಯಾವ ಭಾರತೀಯ ಭಾಷೆಗೇ ಆಗಲಿ ದೇಶೀಯವೂ ಲಲಿತವೂ ಸಮ್ಯಗರ್ಥ

ಸಂಪನ್ನವೂ ಆಗಿರುವ ಪಾರಿಭಾಷಿಕಗಳನ್ನು ನೀಡಲಾರವು. ಡಾ.ಡಿ.ವಿ.ಗುಂಡಪ್ಪನವರು ಚುನಾವಣೆಗೆ ನಿರ್ವಾಚನಕ್ಕಿಂತ "ವರಣ" ಎನ್ನುವುದುತ್ತಮ ಎಂದಿದ್ದರು. "ಚುನಾವಣೆ"ಯೂ ನಿರ್ವಾಚನಕ್ಕಿಂತ ಉತ್ತಮ. ಈ ಅಂಶಗಳತ್ತ ಗಮನವಿತ್ತ ಕನ್ನಡನಾಡಿನ ಸಂಸ್ಕೃತ–ಕನ್ನಡಪಂಡಿತರು ಹಿಂದಿಗೆ ಸಹ ಈ ಕಾರ್ಯದಲ್ಲಿ ಹೆಚ್ಚು ಸಹಾಯಕರಾದಾರು. ನ್ಯಾಯಪಾಲಿಕೆ, ಕಾರ್ಯಪಾಲಿಕೆ, ನಗರಪಾಲಿಕೆಗಳಿಗಿಂತ ನ್ಯಾಯಾಂಗ, ಕಾರ್ಯಾಂಗ, ನಗರಸಭೆಗಳು ಎಲ್ಲ ಭಾರತೀಯ ಭಾಷೆಗಳಿಗೂ ಹೆಚ್ಚು ಗ್ರಾಹ್ಯವಾದಾವು. ಕರ್ಣಾಟಕದ ಸಂಸ್ಕೃತ–ಕನ್ನಡ–ಆಂಗ್ಲ ವಿದ್ವಾಂಸರಿಗೆ ನಮ್ಮ ರಾಜ್ಯ ಸರಕಾರವು ಪಟ್ಟಗಟ್ಟಿ ದಿಲ್ಲಿಯ ಶಾಖೆಗೆ ಕಳಿಸಿಕೊಡಬೇಕು.

ಪದ್ಮ ವಿಭೂಷಣ ಡಾ. ಶಿವರಾಮ ಕಾರಂತರು ಪ್ರಚುರಪಡಿಸಿದ ಯಕ್ಷಗಾನ ಪ್ರಪಂಚದ ಜಾನಪದೀನ ಕನ್ನಡದ ವರ್ತಮಾನ ಸ್ವರೂಪಕ್ಕೆ ದಿ. ಬವಲಾಡಿ ಹಿರಿಯಣ್ಣ ಹೆಬ್ಬಾರರು ರಚಿಸಿದ ಪ್ರಸಿದ್ಧ (ಕಾವ್ಯಾಲಯ, ಮೈಸೂರು) ವಾದ "ಭಾನುಮತೀಕಲ್ಯಾಣ"ವೆಂಬ ಯಕ್ಷಗಾನ ನೃತ್ಯನಾಟಕದ ಪದ್ಯಗಳ ಕನ್ನಡ ಶೈಲಿಯು ಇಂದು ಪ್ರಾತಿನಿಧಿಕ. ಅವರು ಹಿಂದೆ ಬರೆದು ಜನಪ್ರಿಯಗೊಳಿಸಿದ "ಪಾಂಡವವಿಜಯ" ಮತ್ತು "ವಿಶ್ವಾಮಿತ್ರ ಪ್ರತಾಪ"ಗಳ ಶೈಲಿಯಿಂದ ಇದರ ಶೈಲಿಯು ಭಿನ್ನವಾಗಿಲ್ಲವಾದುದರಿಂದ ಮತ್ತು ಇದು ಅವರು ಬರೆದ ಕೊನೆಯ ಪರಿಪಕ್ವ ಯಕ್ಷಗಾನ ನೃತ್ಯನಾಟಕವಾದುದರಿಂದ ಇದರ ಕೆಲವು ಪದ್ಯಗಳನ್ನು ಮಾದರಿಗಾಗಿ ಉದಾಹರಿಸಿದರೆ ೨೦ನೆಯ ಶತಮಾನದ ಗ್ರಾಮೀಣ ಕನ್ನಡದ ಉನ್ನತ ಮಟ್ಟದಲ್ಲಿರುವ ಸಂಸ್ಕೃತ–ಕನ್ನಡಗಳ ಬಾಂಧವ್ಯದ ಪರಿಚಯ ಚೆನ್ನಾಗಿ ಆಗುವುದು.

**ರಾಗ ಮಧ್ಯಮಾವತಿ, ತಾಳ–ತ್ರಿಪುಟ**

ಜಲ ಕೇಳಿಯಾಡಿದರು॥ ಯಾದವರೆಲ್ಲ
ಜಲ ಕೇಳಿಯಾಡಿದರು ॥ಪಲ್ಲ॥
ಸತಿಯರು ಪತಿಗಳೊಳು। ಬೆರೆತು ಜತೆ
ಜತೆಯಾಗಿ ತಮ್ತಮ್ಮೊಳು। ಅತಿಹರುಷದಲಿ ಹಿ
ಗ್ಗುತ ಸರಸೋಕ್ತಿಯಾ।ಡುತ ನಸುನಗುತ ನಿ
ಲ್ಲುತ ಕೈಯ ಬೊಗಸೆಯೊಳ್। ಸತಿಪತಿಗೆ ಪತಿಸತಿಗೆ ನೀರೆರೆ
ಚುತ ಮುಖಾಂಬುಜ ಕೇಳ್ವಸಮಯದ
ಮಿತಿಯನುಸುರುತ ಮುಳುಗುತೇಳುತ
ನುತಿಸಿ ನಿಂದಿಸಿಕೊಳುತ ನಲಿಯುತ ॥೧॥

ನಳಿನಾಕ್ಷನಾಜ್ಞೆಯೊಳು। ನಾವಗಳಲ್ಲಿ
ಹೊಳದವನೇಕಗಳು।
ಕೆಲರು ಧೀವರ ವೇಷ। ಗಳಲೊತ್ತಿಹಾಯ್ಸುತ್ತ

ಕೆಲಬರಾ ನಾವೆಗಳೊಳಗೇರಿ ನಲಿಯುತ್ತ
ಲಲನೆಯರು ದನಿದೋರಿ ಪಾಡುತ
ಘಳುಘುಳಿಪ ಕಲ್ಲೋಲವಾರಿಯ
ಸುಳಿಗಳಲಿ ದುಮ್ಮಿಕ್ಕಿಯಲ್ಲಿಯ
ಮುಳುಗುತಿನ್ನೊಂದೆಡೆಯಲೇಳುತ ॥೨॥

ಶರಧಿಯೊಳಿಂತವರು। ಕ್ರೀಡಿಸಿ ಪರಿ
ಪರಿಯಿಂದ ಬಳಿಕೆಲ್ಲರು।
ಹರುಷದಿ ಮಡಿವಸ್ತ್ರಾ। ಭರಣ ಸಗಂಧಕ
ಸ್ತುರಿಗಳಿಂದೊಲಿದು ಶೃಂ। ಗರಿಸಿ ಕೊಂಡಮಲ ಕ
ರ್ಪೂರದ ವೀಳ್ಯವ ಸವಿದು ರೈವತ
ಗಿರಿಗೆ ಸಾರಿದು ನೃತ್ಯಗಾಯನ।
ಮುರಜ ತಾಳ ಮೃದಂಗ ತಾಡನ
ಭರದ ಕಾರ್ಯಗಳಿಂದ ನಲಿದರು ॥೩॥

ತತ್ಸಮ ಹೆಚ್ಚಾಗಿರುವ ಪದ್ಯಗಳು ಜಾನಪದವಲ್ಲ; ಗ್ರಾಮ್ಯಗಳಿಂದ ತುಂಬಿದ ಹಾಡುಗಳಷ್ಟೇ ಜಾನಪದೀನ–ಎಂಬವರಿಗಿದು ಸವಾಲು. ಮುದ್ದಣ ಬರೆದ "ಕುಮಾರ ವಿಜಯ"ವನ್ನೂ ಬೇಕಾದರೆ ಅಂಥವರು ಓದಲಿ ಎಂದು ನಮ್ರ ಬಿನ್ನಹ.

ಯಕ್ಷಗಾನದ ಗದ್ಯ ಸಂಭಾಷಣೆ ಅತಿಕಾಯನ ಕಾಳಗ

**ಅತಿಕಾಯ:** "ಅಯ್ಯಾ, ನನ್ನ ತಂದೆಯವರೀಗ ಯೇನು ಮಾಡುತ್ತಾರಂದರೆ–ತಾನು ತ್ರೈಲೋಕ್ಯವೀರನಾಗಿರುತ್ತೇನೆ. ತನಗೆ ಬ್ರಹ್ಮಾದಿ ದೇವತೆಗಳೆಲ್ಲರೂ ವಶವರ್ತಿಗಳಾಗಿರುತ್ತಾರೆ ಎಂಬ ಮಹತ್ತಾದ ಅಹಂಕಾರವು ತಲೆಗಡರಿದ್ದರಿಂದ ಕಾಲಾಕಾಲ, ಸ್ಥಾನಾಸ್ಥಾನ, ನ್ಯಾಯಾನ್ಯಾಯ, ಯುಕ್ತಾಯುಕ್ತ ವಿಚಾರಗಳಿಲ್ಲದೆ ಕೇವಲ ಗರ್ವೋದ್ರೇಕದ ಮಾತುಗಳನ್ನೇ ಆಡುತ್ತಾರೆ. ಆದರೆ ಆ ಮಾತುಗಳೆಲ್ಲವೂ ನನಗೆ ಅತ್ಯಂತ ಕರ್ಣಕರ್ಕಶವಾಗುವುದರಿಂದ ಅವರಿಗೆ ನಾನು ತಿಳಿದ ಮಟ್ಟಿಗೆ ಕೆಲವು ನೀತಿವಚನಗಳನ್ನು ಹೇಳುತ್ತೇನೆ: ತಂದೆಯವರ ಪಾದಗಳಿಗೆ ಸಾಷ್ಟಾಂಗ ವಂದನೆ ಮಾಡಿದ್ದೇನೆ."

**ರಾವಣ:** "ಯಾರದು? ಅತಿಕಾಯನೋ? ಏಳುಯೇಳು. ನಮ್ಮ ಕಾರ್ಯಭಾರವೆಲ್ಲವೂ ನಿನಗೆ ಗೊತ್ತಾಯಿತಲ್ಲವೋ? ಈಗಲೇ ಹೊರಡಲಿಕ್ಕೆ ಸಿದ್ಧನಾಗು."

**ಅತಿಕಾಯ:** "ಸ್ವಾಮಿ, ನಿಮ್ಮೀ ಕಾರ್ಯಭಾರವೆಲ್ಲವೂ ಚೆನ್ನಾಗಿ ತಿಳಿಯಲಿಲ್ಲ. ಅತ್ಯಂತ ಕ್ರುದ್ಧರಾಗಿ ಯುದ್ಧಕ್ಕೆ ಹೋಗುತ್ತೇನೆಯೆಂಬ ಗದ್ದಲ ಮಾತ್ರ ಕೇಳುವದಲ್ಲದೆ ಯಾರ ಮೇಲೆಯೆಂಬುದು ಸರಿಯಾಗಿ ಕೇಳಲಿಲ್ಲ. ಅದನ್ನು ತಿಳಿಸಬೇಕು ಸ್ವಾಮಿ."

**ರಾವಣ:** "ಅತಿಕಾಯನೆ ಕೇಳು: ಆ ರಾಮನೆಂಬ ಹುಲುಮನುಷ್ಯನು ಕೆಲವು ಮಂಗಗಳ ಹಿಂಡನ್ನು ಕಟ್ಟಿಕೊಂಡು ನಮ್ಮಲ್ಲಿಗೆ ಬಂದಿರುವನಷ್ಟೇ. ಆತನೊಡನೆ ತೊಡಗಿದ ಯುದ್ಧದಲ್ಲಿ ನಿನ್ನೆ ನಮ್ಮ ಕಡೆಯಿಂದ ಹೋಗಿರುವ ಕೆಲವು ರಾಕ್ಷಸರು ನಾಶವಾಗಿದ್ದಾರೆಯೆಂಬ ವರ್ತಮಾನ ಬಂದಿರುವ ಕಾರಣ, ನಾನು ಸ್ವತಃ ಆ ರಾಮನ ಯುದ್ಧಕ್ಕೆ ಹೋಗಿ ಅವರನ್ನೆಲ್ಲಾ ಕೊಂದು ಬರಬೇಕೆಂತ ಹೊರಡುತ್ತೇನೆ. ನೀನು ಸಹ ಸೇನಾಸಮೇತನಾಗಿ ಹೊರಡು."

**ಅತಿಕಾಯ:** "ಏನು? ರಾಮನ ಮುಂದೆ ಯುದ್ಧಕ್ಕೆ ಹೋಗುತ್ತೀರಾ? ಅರಿಕೆ ಮಾಡುತ್ತೇನೆ: ಸ್ವಾಮಿ, ನೀವು ಈ ಪ್ರಕಾರ ಯಾಕೆ ಮರುಳಾಗುತ್ತೀರಿ? ಯಾವ ಸತ್ಕಾರ್ಯವನ್ನು ಕೈಕೊಂಡಿರಿ? ಇದು ಯಾವ ಧರ್ಮ? ಆ ರಘುನಾಥನಾದ ರಾಮದೇವರಲ್ಲಿ ನಿಮಗೆ ಯುದ್ಧವೇ? ನೀವು ಆತನನ್ನು ಗೆಲ್ಲುವಿರೇ? ಅಯ್ಯೋ–ಇಂಥಾ ಮರುಳು ನಿಮ್ಮಂಥವರಿಗೆ ಹಿಡಿಯಬಹುದೇ? ಲೋಕದಲ್ಲಿರುವ ಅಲ್ಪರಾದವರಿಗೆ ಇಂಥಾ ಭ್ರಮೆ ಹಿಡಿದು ಅದರಿಂದವರು ಕೆಟ್ಟು ಹೋಗುವುದಾದರೆ ಅಷ್ಟೊಂದು ವಿಶೇಷವಲ್ಲ. ಯಾಕೆಂದರೆ, ಅವರನ್ನು ಯಾರೂ ಹೇಳುವವರೂ ಇಲ್ಲ. ಕೇಳುವವರೂ ಇಲ್ಲ. ನಿಮ್ಮ ಸಂಗತಿ ಹಾಗಲ್ಲ. ಸಮಸ್ತ ಲೋಕದಲ್ಲಿ ವಿಖ್ಯಾತರಾಗಿರುತ್ತೀರಿ. ಅಂದರೆ, ಬ್ರಹ್ಮರ್ಷಿಗಳಾದ ವಿಶ್ರವಸ್ಸೆಂಬ ಮಹಾತಪಸ್ವಿಗಳ ಮಗನಾದ ಕಾರಣ ಉತ್ತಮ ಕುಲದಲ್ಲಿ ಹುಟ್ಟಿದವರೂ ಚತುರ್ವೇದ–ಷಟ್‌ಶಾಸ್ತ್ರ–ಅಷ್ಟಾದಶ ಪುರಾಣಗಳಲ್ಲೆಲ್ಲಾ ಪಾರಂಗತರಾದವರೂ ತಪೋಬಲದಿಂದ ಬ್ರಹ್ಮರುದ್ರಾದಿ ದೇವರನ್ನು ಒಲಿಸಿಕೊಂಡು ಅವರಿಂದ ಮಹಾ ಮಹಾ ವರಗಳನ್ನು ಪಡಕೊಂಡವರೂ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳಲ್ಲೆಲ್ಲಾ ಹೋಗಿ ದಿಗ್ವಿಜಯವನ್ನು ಮಾಡಿಕೊಂಡು ಬಂದವರೂ ಆಗಿರುವಿರಾದ ಕಾರಣ–ತ್ರೈಲೋಕ್ಯವೀರ, ದೈತ್ಯಕುಲೋದ್ಧಾರ, ಪಾರಾವಾರಗಭೀರ, ರಾವಣೇಶ್ವರ ಎಂತ ಅನೇಕ ವಿಧಾನಗಳಿಂದ ಸಮಸ್ತ ಜನಾಂಗವು ನಿಮ್ಮನ್ನು ಕೊಂಡಾಡುವುದರಿಂದ ನೀವು ಲೋಕೈಕವಿಖ್ಯಾತರಾದ ಮಹಾಪುರುಷರಾಗಿರುತ್ತೀರಿ. ಇಂಥ ಮಹನೀಯರಾದವರು ಇಂಥ ಮರುಳಾಟ ಮಾಡುವದು ಯೋಗ್ಯವೇ? ಮಾಡುವದರಿಂದಾಗುವ ಕೇಡೇನೆಂದರೆ–

"ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ" ಅಂದರೆ, ಶ್ರೇಷ್ಠನಾದವನು ಯಾವ ಯಾವದನ್ನಾಚರಿಸುತ್ತಾನೋ ಸಾಮಾನ್ಯರು ಅದನ್ನೇ ಆಚರಿಸುತ್ತಾರೆ; ಮತ್ತು "ಮಹಾಜನೋ ಯೇನ ಗತಃ ಸ ಪಂಥಾಃ" ಅಂದರೆ, ಮಹಾತ್ಮನಾದವನು ಯಾವ ಮಾರ್ಗದಲ್ಲಿ ಹೋಗುತ್ತಾನೆಯೋ ಅದೇ ಸನ್ಮಾರ್ಗವೆಂದು ಬಹುಜನರು ತಿಳಿಯುತ್ತಾರೆ. ನೀವೆಂದರೆ ಶ್ರೇಷ್ಠರೂ ಮಹಾಜನರೂ ಆದ ಕಾರಣ ನಿಮ್ಮ ಆಚಾರವೇ ಸದಾಚಾರ, ನಿಮ್ಮ ಮಾರ್ಗವೇ ಸನ್ಮಾರ್ಗ ಎಂದು ಭೂರಿ ಜನರು ತಿಳಕೊಂಡು ನಿಮ್ಮನ್ನು ಅನುಸರಿಸಬೇಕಾಯಿತಲ್ಲವೇ? ಹಾಗೆ ಅನುಸರಿಸಿದ ಪಕ್ಷದಲ್ಲಿ ಲೋಕವೆಲ್ಲವೂ ಏಕಕಾಲದಲ್ಲಿ ನಾಶೋನ್ಮುಖವಾಗುವುದರಲ್ಲಿ ಸಂದೇಹವಿಲ್ಲ. ಆದಕಾರಣ, ಆ ಶ್ರೀಮಂತನಾದ ರಾಮಚಂದ್ರನಲ್ಲಿ ಸಾಮವಲ್ಲದೆ ಸಂಗ್ರಾಮಕ್ಕೆ ಹೋಗುವದು ಸರಿಯಲ್ಲ."

ರಾವಣ: "ಎಲೈ ಕುಮಾರಕನೇ, ನೀನು ನನ್ನ ಆಜ್ಞೆಯ ಪ್ರಕಾರ ಯುದ್ಧಕ್ಕೆ ಹೋಗುವುದನ್ನು ಬಿಟ್ಟು ಈ ಪ್ರಕಾರ ಯುದ್ಧ ಮಾಡಬಾರದೆಂದು ಹೇಳುವೆಯಷ್ಟೇ. ಅವನು ಎಂಥವನು ಅವನಲ್ಲಿ ಯಾವ ವಿಶೇಷವುಂಟು ಹೇಳು."

ಅತಿಕಾಯ: "ಸ್ವಾಮೀ, ಆ ರಾಮನು ಎಂಥವನೆಂದರೆ, ಸಕಲ ಲೋಕೈಕನಾಯಕನು: ಅಂದರೆ, ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಳ, ಪಾತಾಳಗಳೆಂಬ ಕೆಳಗಿನ ಸಪ್ತಲೋಕಗಳೂ ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯಲೋಕಗಳೆಂಬ ಮೇಲಿನ ಸಪ್ತಲೋಕಗಳೂ ಕೂಡಿ ಚತುರ್ದಶ ಲೋಕಗಳೆಂಬುದು ನಿಮಗೆ ಗೊತ್ತುಂಟಷ್ಟೇ? ಇದೊಂದು ಬ್ರಹ್ಮಾಂಡ. ಇಂಥಾ ಬ್ರಹ್ಮಾಂಡಗಳು ಕೋಟ್ಯನುಕೋಟಿಯಿರಬಹುದು. ಅಂಥಾ ಕೋಟಿ ಬ್ರಹ್ಮಾಂಡಗಳಿಗೆಲ್ಲಾ ಈ ರಾಮನೆಂಬವನೊಬ್ಬನೇ ನಾಯಕನಾಗಿರುತ್ತಾನೆ: ಮತ್ತು ಸರ್ವಾತ್ಮಕನು=ಅಂದರೆ, ಅಂಥ ಬ್ರಹ್ಮಾಂಡಗಳೊಳಗೆ ಇಂದ್ರ, ಅಗ್ನಿ, ಯಮ, ನಿಋುತಿ, ವರುಣ, ವಾಯು, ಕುಬೇರ, ಈಶಾನರೆಂಬ ಅಷ್ಟದಿಕ್ಪಾಲಕರೂ ವಿದ್ಯಾಧರರೂ ಅಪ್ಸರರೂ ಯಕ್ಷರೂ ಕಿನ್ನರರೂ ರಕ್ಷರೂ ಗಂಧರ್ವರೂ ಕಿಂಪುರುಷರೂ ಪಿಶಾಚರೂ ಗುಹ್ಯಕರೂ ಸಿದ್ಧರೂ ಇರುತ್ತಾರೆ: ಮತ್ತು ಸೂರ್ಯ, ಚಂದ್ರ, ಗುರು, ಶುಕ್ರ, ಮೊದಲಾದ ನವಗ್ರಹರೂ ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮಾದಿ ಸಪ್ತಋುಷಿಗಳೂ ಅನಲ, ಅನಿಲ, ಪ್ರತ್ಯೂಷ, ಪ್ರಭಾಸಾದಿ ಅಷ್ಟವಸುಗಳೂ ಶಿವ, ಶಂಭು, ಗಿರೀಶ ಮೊದಲಾದ ಏಕಾದಶ ರುದ್ರರೂ ಮಿತ್ರ. ಅರ್ಯಮ, ತ್ವಷ್ಟ್ರ, ಧಾತೃ ಮುಂತಾದ ದ್ವಾದಶಾದಿತ್ಯರೂ ದೇವ–ದಾನವ, ಮಾನವ–ಕ್ರಿಮಿ–ಕೀಟ–ಪಶು ಮುಂತಾಗಿ ಎಂಭತ್ತನಾಲ್ಕು ಲಕ್ಷಪ್ರಾಣಿಗಳುಂಟಷ್ಟೆ, ಇವೆಲ್ಲಕ್ಕೂ ರಾಮನೇ ಚೈತನ್ಯಾತ್ಮನಾಗಿರುತ್ತಾನೆ: ಮತ್ತು ತರು, ಗಿರಿ, ಪಾಷಾಣ ಮೃತ್ತಿಕಾದಿ ಸಮಸ್ತ ಸ್ಥಾವರ ಪದಾರ್ಥಗಳಿಗೂ ಕೂಡಾ ರಾಮನೇ ಚೇತನಾತ್ಮನಾದ ಕಾರಣ, ಚರಾಚರ ಚೈತನ್ಯಾತ್ಮ, ಸರ್ವಾತ್ಮ, ಸರ್ವತೋಮುಖ ಎಂದು ಹೇಳುತ್ತಾರೆ: ಮತ್ತು ಸತ್ವ, ರಜಸ್, ತಮಸ್ ಎಂಬ ಗುಣತ್ರಯದ ಕಾರ್ಯಗಳ ಬಗ್ಗೆ ಬ್ರಹ್ಮ ವಿಷ್ಣು ಮಹೇಶ್ವರರರೆಂಬ ತ್ರಿಮೂರ್ತಿಗಳಾಗಿ ಸಮಸ್ತ ಲೋಕಗಳಿಗೆ ಸೃಷ್ಟಿ, ಸ್ಥಿತಿ, ಲಯ ಎಂಬ ಮೂರು ಕಾರ್ಯಗಳನ್ನು ಕಲ್ಪಿಸಿ ರಜೋಗುಣಪ್ರಧಾನನಾದ ಬ್ರಹ್ಮರೂಪದಿಂದ ಸೃಷ್ಟಿ ಮಾಡುತ್ತಾ ಸತ್ವ ಗುಣಪ್ರಧಾನನಾದ ವಿಷ್ಣುರೂಪದಿಂದ... ಸರ್ವಲೋಕಗಳನ್ನು ರಕ್ಷಿಸುತ್ತಾ ಕಡೆಗೆ ತಮೋಗುಣಪ್ರಧಾನವಾದ ರುದ್ರರೂಪದಿಂದ ಸಮಸ್ತಲೋಕಗಳಿಗೆ ಪ್ರಳಯವನ್ನುಂಟುಮಾಡುತ್ತಾ ಇರುವ ಭಗವಂತನು ಇದೇ ರಾಮನಾಗಿರುತ್ತಾನೆ. ಅಲ್ಲದೇ ಈತನು ಈ ಸಂಸಾರವೆಂಬ ಘೋರ ಸಾಗರದಲ್ಲಿ ನಮ್ಮಂಥವರಿಗೆ... ಚತುರ್ವಿಧ ಮುಕ್ತಿಯನ್ನು ಕೊಟ್ಟು ಅವರ ಕಷ್ಟಗಳನ್ನು ಪರಿಹರಿಸುತ್ತಿರುವುದರಿಂದಲೇ (ಈ ರಾಮನನ್ನು) ಮುಕ್ತಿದಾಯಕ, ಮುಕ್ತಿನಾಥ ಎಂದು ವರ್ಣಿಸುತ್ತಾರೆ... ಆದ್ದರಿಂದ ಇಂಥಾ ಮಹಾತ್ಮನಲ್ಲಿ ಭ್ರಾಂತ ಬುದ್ಧಿಯಿಂದ ಹಿಡಿದ ವೈರವನ್ನು ಬಿಟ್ಟು ಬಿಡಬೇಕು."

***

ಗ್ರಾಮೀಣ ಕನ್ನಡಿಗರ ಈ ಶತಮಾನದ ಕನ್ನಡ ಭಾಷೆಗಿದು ಪ್ರಾತಿನಿಧಿಕವೂ ಉತ್ತಮವೂ ಆದ ಕಾವ್ಯಕಲಾತ್ಮಕ ಉದಾಹರಣೆ. ಇದನ್ನು ಪುರವಾಸಿಗಳೂ ಕನ್ನಡದ ಸುದ್ದಗೆಯ ಆವೇಶದಿಂದ ಕುಣಿವವರೂ ಓದಬೇಕೆಂದು ಸಂಕ್ಷೇಪಿಸಿ ಕೊಡಲಾಗಿದೆ. ದೋಷೈಕದೃಷ್ಟಿಯ "ಕೌಸ್ತುಭ" ನಾಮಧೇಯ ಸೂಚಕರು ಶ್ರೀಸಾಮಾನ್ಯನ ಕನ್ನಡವು ಹೇಗಿತ್ತೆಂಬುದನ್ನು ಗಮನಿಸಬೇಕು. ದಡ್ಡರು ಎಲ್ಲಿದ್ದರೂ ಹೇಗಿದ್ದರೂ ಯಾವ ಪದವೀಧರರಾದರೂ ಯಾವ ಜಾತಿಯವರಾದರೂ ಎಂಥ ಪುರಸ್ಕಾರವನ್ನು ಪಡೆದವರಾದರೂ ದಡ್ಡರೇ ಎಂಬುದಕ್ಕೆ ಇಂದು ಕೆಲವೆಡೆಯ ಕಾಲೇಜುಗಳಲ್ಲಿ ಕನ್ನಡ ಮಾಧ್ಯಮದಿಂದ ಕೂಡ ಸರಿಯಾಗಿ ವಿವಿಧ ಶಾಸ್ತ್ರಗಳನ್ನು ಕಲಿಸಲಾಗದ "ಪ್ರೊಫೆಸರು"ಗಳನ್ನು ಭೇಟಿಯಾದರೆ ಮಾತ್ರ "ಕನ್ನಡ ಡಿಂಡಿಮ"ವನ್ನು ಬಾರಿಸಲು ನಾವು ಎಷ್ಟು ಪ್ರಯತ್ನವನ್ನು, ಎಷ್ಟು ಕಾಲ, ಹೇಗೆ ಮಾಡಬೇಕೆಂಬುದನ್ನು ವೈಜ್ಞಾನಿಕವಾಗಿ ತಿಳಿದುಕೊಳ್ಳಲು ಸಾಧ್ಯವಾದೀತು. ಕನ್ನಡ ಎಂ.ಎ., ಇಂಗ್ಲಿಷ್ ಎಂ.ಎ.ಗಳನ್ನು ಅವರ ಕನ್ನಡ ಪಾಂಡಿತ್ಯದ ಒಳಹೊಕ್ಕು ನೋಡಬೇಕು–ಆಗ ಮಾತ್ರ ಸಂಸ್ಕೃತ–ಕನ್ನಡಗಳ ಅನಿವಾರ್ಯ ಸಂಬಂಧವು ಸಮಗ್ರವಾಗಿಯೂ ಅಗಾಧವಾಗಿಯೂ ಅರ್ಥವಾಗುತ್ತದೆ: ಇಲ್ಲವಾದರೆ ಎಂದೂ ಅರ್ಥವಾಗಲಾರದು.

ಬವಳಾಡಿ ಅಥವಾ ಬಹುಲಪುರದ ದಿ. ಹಿರಿಯಣ್ಣ ಹೆಬ್ಬಾರರ ಅಣ್ಣಂದಿರಾದ ದಿ. ವೆಂಕಟರಮಣ ಹೆಬ್ಬಾರರು ಉಭಯ ಕವಿಗಳೂ ಷಟ್ ಶಾಸ್ತ್ರಜ್ಞರೂ ಆಗಿದ್ದರು. ಅವರು ತಮ್ಮ ಅನುಭವದ ಪ್ರಕಾರ ಕನ್ನಡ "ಜೈಮಿನಿ ಭಾರತ"ದ ಕನ್ನಡ ಕಾವ್ಯಶೈಲಿಗೆ ಅಗ್ರಾಸನ ಕೊಟ್ಟಿದ್ದರು. ಅವರು ಶಾಲೆಯ ಕಟ್ಟೆಯನ್ನು ಹತ್ತದಿದ್ದ ಗ್ರಾಮೀಣರು. ಕಡಲ್ಗನ್ನಡನೆಲವು ಕನ್ನಡಭಾಷೆಯ ಮೂಲಸ್ಥಾನ ಎಂಬುದು ಅವರ ಅಭಿಪ್ರಾಯವಾಗಿತ್ತು. ಐತಿಹಾಸಿಕರಿಗೆ ಗೊತ್ತಿರುವ ಕದಂಬಗನ್ನಡವು ಕ್ರಿ.ಶ ೨೮೦ರಲ್ಲಿ ಕ್ರಮಬದ್ಧವಾಗಿ ಆರಂಭವಾಗಿ ಕ್ರಿ.ಶ ೪೫೦ರ ಹೊತ್ತಿಗೆ ರಾಜಭಾಷೆ (ಪ್ರಾಂತಭಾಷೆ) ಎನ್ನಿಸಿಕೊಂಡಿತು. ೬ನೆಯ ಶತಮಾನದ ಕದಂಬ ರವಿವರ್ಮ ಚಕ್ರವರ್ತಿಯ ತಾಮ್ರ ಶಾಸನದಲ್ಲಿ ನರ್ಮದೆಯು ಅವನ ಚಕ್ರಾದಿಪತ್ಯದ (ಅಂದರೆ ಕನ್ನಡದ ನೆಲದ) ವಾಯವ್ಯ ಸೀಮೆಯಾಗಿತ್ತೆಂದು ಹೇಳಿರುವುದು ಇಲ್ಲಿಯವರೆಗೆ ಯಾವ ಸದ್ಯದ ಇತಿಹಾಸಕಾರನ ಗಮನಕ್ಕೂ ಬಂದಂತಿಲ್ಲ ("ರೇವಾವಧಿ ಜಯಂತೀಯಂ"). ಹಾಗೇ ಮಹಾತ್ಮ ಗಾಂಧಿಯವರು ಆಧುನಿಕಭಾರತೀಯ ಲಿಪಿಗಳಲ್ಲೆಲ್ಲ ಕನ್ನಡಲಿಪಿಯೇ ಅತ್ಯಂತ ಸುಂದರ ಎಂದಿದ್ದೂ ಗೊತ್ತಿದ್ದಂತಿಲ್ಲ. ಸಂಸ್ಕೃತ–ಹಿಂದಿಗಳ ನಿಂದೆಯಿಂದ ಮಾತ್ರ ಕನ್ನಡದ ಉದ್ಧಾರ ಎಂದು ತಿಳಿದವರನ್ನು ನೋಡಿ ನನಗೆ ಪುರಂದರದಾಸರಂತೆ ನಗೆಬರುತ್ತದೆ.

ಡಾ. ಶ್ರೀಕಂಠಶಾಸ್ತ್ರಿಗಳ "Sources of Karnataka History Vol. 1" ದರಲ್ಲಿ ಒಬ್ಬ ಕನ್ನಡ ಜೈನ ಅಲಂಕಾರಿಕನು ತನ್ನ ಅಲಂಕಾರ ಗ್ರಂಥದಲ್ಲಿ ಕೊಟ್ಟ ಉದಾಹರಣೆಗಳು ಶ್ಲೇಷದಿಂದ ಕನ್ನಡ–ಸಂಸ್ಕೃತಗಳೆರಡರಲ್ಲೂ ಬೇರೆ ಬೇರೆ ಅರ್ಥವನ್ನು ಕೊಡುತ್ತಿದ್ದವೆಂದು ಉಲ್ಲೇಖಿಸಿದ್ದು ನನಗೆ ನೆನಪು. ಆದರೆ ಆ ಉದಾರಣೆಗಳೀಗ ನನ್ನೆದುರಿಗಿಲ್ಲ. ಅದರ ಬದಲು ದಿ.ವೆಂಕಟರಮಣ ಹೆಬ್ಬಾರರು ಹೇಳುತ್ತಿದ್ದ ಅಂಥ ಅನುಷ್ಟುಪ್ ಶ್ಲೋಕ ನೆನಪಾಗುತ್ತದೆ.

---

ಈ ಕೋಶದ ಹಸ್ತ ಪ್ರತಿಯು ಮೈಸೂರಿನ "ಓರಿಯಂಟಲ್ ಲೈಬ್ರರಿ"ಯ ಗ್ರಂಥ ಭಂಡಾರದಲ್ಲಿತ್ತು.

**"ಅತ್ತಿಗೇ ಹೇಳಿ ಸಂಗೀತಂ ತಂಗೀತಂ ಮನಸಾಹಸಂ।**

**ಭಾವಕೇಳೀ ಮದೋಲ್ಲಾಸಂ ನಾದಿನೀ ಬಿಸಿನೀರ ತಾ॥**

ಸಂಸ್ಕೃತದ ಪದವಿಭಜನೆ ಹೀಗೆ:

**ಅತ್ತಿ ಗೇಹೇ। ಅಳಿ ಸಂಗೀತಂ। ತಂ।ಗೀತಂ। ಮನಸಾ। ಹಸಂ।**

**ಭಾವಕೇಳೀ ಮದೋಲ್ಲಾಸಂ। ನಾದಿನೀ। ಬಿಸಿನೀರ ತಾ॥**

**ಕನ್ನಡದ ಪದವಿಭಜನೆ ಹೀಗೆ:**

**ಅತ್ತಿಗೆ। ಹೇಳಿ। ಸಂಗೀತಂ। ತಂಗೀ ತಮ್ಮನ। ಸಾಹಸಂ।**

**ಭಾವ। ಕೇಳಿ। ಮದೋಲ್ಲಾಸಂ। ನಾದಿನೀ। ಬಿಸಿನೀರ। ತಾ॥**

ಈ ಉದಾಹರಣೆಯು ಕನ್ನಡ-ಸಂಸ್ಕೃತಗಳ ಸಂಬಂಧವನ್ನು "ಸಿಮೆಂಟ್-ಕಾಂಕ್ರೀಟ"ನಂತೆ ದೃಢ ಪಡಿಸುತ್ತದೆ ಅಥವಾ ಗೋಲ್ ಗುಂಬಜನ್ನು ಕಟ್ಟಿದ ಗಾರೆಯಂತೆ ಗಟ್ಟಿಯಾಗಿದೆ ಎಂಬುದನ್ನು ತೋರಿಸುತ್ತದೆ.

ಕನ್ನಡ ಮೂಲ ಶಬ್ದಗಳ ಬಳಕೆಯನ್ನು ಕನ್ನಡಿಗರೇ ಕಡಿಮೆ ಮಾಡುತ್ತ ಹೋದುದು ಏತಕ್ಕೋ ಏನೋ ಗೊತ್ತಿಲ್ಲ. ಆದರೀಗ ಅಂಥ ಅಪ್ರಯುಕ್ತ ಕನ್ನಡ ಪದಗಳಿಂದ ಬರೆದರೆ ಅಂಥ ಕನ್ನಡ ಬರೆಹವು ಸಾಮಾನ್ಯರಿಗೆ ಅರ್ಥವಾಗದೆಂದು ತೋರುತ್ತದೆ. ಹಳಗನ್ನಡ ಕೋಶ* ವೊಂದರಲ್ಲಿ ಗುಂಪು, ರಾಶಿ ಎಂಬುದಕ್ಕಿರುವ ಪರ್ಯಾಯ ಪದಗಳಿಂದ ಈ ಭಾಷಣವನ್ನು ಮುಗಿಸುವುದು ನ್ಯಾಯವೆನ್ನಿಸುತ್ತದೆ.

೧) ಬಂಬಲ್, ೨) ತುಱುಗಲ್, ೩) ವಂಗಡಂ, ೪) ಗಡಣಂ, ೫) ಮೊಗ್ಗರಂ, ೬) ಬಿಂದಂ, ೭) ಒಬ್ಬುಳಿ, ೮) ಜಂಗುಳಿ, ೯) ದೊಂದುಳಿ, ೧೦) ಸಂದಣಿ, ೧೧) ಒಗ್ಗು, ೧೨) ಪಸರಂ, ೧೩) ಇಟ್ಟಳಂ, ೧೪) ಲಾವಣಿ, ೧೫) ಓಳಿ, ೧೬) ಗೊಂಚಿ, ೧೭) ಒಟ್ಟಿಲ್, ೧೮) ಒಟ್ಟಜೆ, ೧೯) ತಿಂತಿಣಿ, ೨೦) ಹೊರಳಿ, ೨೧) ಕದಲೆ, ೨೨) ಸಂತೆ, ೨೩) ಜಾಳಿಗೆ, ೨೪) ಕಿಕ್ಕಿಂದಂ ೨೫) ನೆರವಿ, ೨೬) ಬಳಗಂ ೨೭) ಮೊತ್ತಂ, ೨೮) ಸೇಣಿ, ೨೯) ತಂಡಂ, ೩೦) ಗುಂಡು, ೩೧) ಪಿಂಡು, ೩೨) ತೆರಳ್ಕೆ ೩೩) ಹಂತಿ, ೩೪) ಸಾಲ್ ೩೫) ಮೊಕ್ಕಳಂ, ೩೬) ತೋಮಂ, ೩೭) ತೆಮ್ಮಲ್, ೩೮) ಗುಮ್ಮಿ, ೩೯) ಗೊಂದಣಿ, ಮತ್ತು ೪೦) ಉಂದಲ್- ಈ ೪೦ ಸಮೂಹಂ ಎಂದಿದೆ. ಈ ಪಟ್ಟಿಯಲ್ಲಿ ತತ್ಸಮ ಅಥವಾ ಸಮಸಂಸ್ಕೃತ ಪದವೊಂದೂ ಇಲ್ಲ; ಕೆಲವು ತದ್ಭವಗಳನ್ನು ಮಾತ್ರ ಗುರುತಿಸಬಹುದು. ಅಲ್ಲಿಯೂ ಆ "ತತ್ತಿ"ನಲ್ಲಿ "ತತ್ತು" ಕೆಲವೆಡೆ ಕನ್ನಡವೇ ಆಗಿರಬಹುದು. ಇದು ಸಂಶೋಧನೀಯ. ಈ ೪೦ ಸಮೂಹ ವಾಚಕಗಳಲ್ಲಿ ಬಹುಪದಗಳು ಇಂದಿನ ಕನ್ನಡಿಗರಾದ ಹಳ್ಳಿಗರಿಗೂ ಪಟ್ಟಣಿಗರಿಗೂ ಪರಿಚಿತವಲ್ಲ ಎಂದರೆ ತಪ್ಪಾಗದು. ಹೀಗೆ ಭಾರತೀಯ ಸಂಸ್ಕೃತಿಯ ಸಮಗ್ರ ಮಾಧ್ಯಮವೆನ್ನಬಹುದಾದ ಸಂಸ್ಕೃತದ ಸಂಬಂಧವು ಕನ್ನಡಕ್ಕೆ ಮತ್ತು ಇತರ ಭಾರತೀಯ ಭಾಷೆಗಳಿಗೆ ಅಗತ್ಯ, ಸಂವರ್ಧನೀಯ, ಎಂದರೆ ಈಗ ತಪ್ಪಾದೀತೇ?

"ಅಹುದಾದರಹುದೆನ್ನಿ, ಅಲ್ಲವಾದರಲ್ಲವೆನ್ನಿ
ಬಹುಜನರು ನೆರೆ ತಿಳಿದು ಹೇಳಿ ಮತ್ತಿದನು."
ಮುದ್ದಣ ಪೇಳಿದುದಂ ಪುನ–
ರುದ್ಧರಿಸುವೆನಿಲ್ಲಿ ಬೇಸರಿಸದಿರೆ ಗೆಳೆಯರ್।
ಸದ್ಬುದ್ಧಿಯಿಂದ ಕನ್ನಡ
ವಿದ್ವಾಂಸರ್ ತೂಗಿ ನೋಡಲೆಂದೀ ಕೃತಿಯೊಳ್
ಸಕ್ಕದ ಕನ್ನಡವೆರಸಿದ
ತಕ್ಕಿಂದೇ ಬರೆದ ಕನ್ನಡಗ್ರಂಥಗಳೊಳ್।
ಮಿಕ್ಕುಗು ಕರ್ಮಣಿಸರದೊಳ್
ಪೊಕ್ಕಂತಹ ಚೆಂಬವಳದಂತೋಜೆ॥

ಮತ್ತೆ: ಹೊಸಗನ್ನಡದೊಳ್ ಕುವೆಂಪುಕಾವ್ಯಂ
ಬೆಸೆದಿರ್ಪಾ ನಡುಗನ್ನಡ ಪ್ರಯೋಗಂ।
ಹೊಸತಾಯ್ತು ನಿಜಂ ಪೊದಳ್ದು ನಿಚ್ಚಂ
ಜಸ ಬಂತೋ ಪಳಗನ್ನಡೋಳಿಯಿಂದಂ॥



# ೩

# ಉಪಸಂಹಾರ

ಪತಂಜಲಿಯ ಭಾಷ್ಯದ ಆಧಾರದ ಮೇಲೆ ಇಂದಿನ ವಿದ್ವಾಂಸರು ಸಂಸ್ಕೃತವು ಒಂದು ಕಾಲದಲ್ಲಿ ಆಡುಮಾತಾಗಿತ್ತು ಎಂದುದನ್ನು ಸಮರ್ಥಿಸಿದ್ದಾರೆ. ೧೯೬೮ರಲ್ಲಿ ಪ್ರಕಟವಾದ "ಗಿರಿಜಾಕಲ್ಯಾಣಸಂಗ್ರಹ"ದ ಪ್ರಸ್ತಾವನೆಯಲ್ಲಿ ಹಿಂದೆ ಕವಿಗಳ ಯೋಗ್ಯತೆಯನ್ನು ಅವರು ಬರೆದ ಕಾವ್ಯಗಳ ಕ್ಲಿಷ್ಟತೆಯ ಮೇಲಿಂದ ಅಳೆಯುತ್ತಿದ್ದರು" ಎಂದ ಬಾಯಿಯಿಂದಲೇ "ಉತ್ತಮಶೈಲಿಯ ಎಲ್ಲ ಗುಣಗಳು ಹರಿಹರನ ಶೈಲಿಯಲ್ಲಿ ಅವೆ" ಎಂದೂ ಅದಕ್ಕೆ ನಿದರ್ಶನ ಅಥವಾ ಸಮರ್ಥನೆ ಎಂಬಂತೆ–

**"ಸೇವ್ಯಂ ಸೌಖ್ಯಂ ಪ್ರಸನ್ನಂ ನವರಸವಿಭವಂ ಪುಣ್ಯಪುಂಜಂ ಶುಭಂ ವಾ**
**ಗ್ದೇವ್ಯಾವಾಸಂ ವಿವೇಕೋನ್ನತಜಲನಿಧಿಸಂಸಾರವಿಶ್ರಾಮದೇಶಂ।**
**ದಿವ್ಯಜ್ಞಾನೋಕ್ತಿಮಾರ್ಗಂ ನಿರತಿಶಯಪದಂ ಕೂರ್ತು ಪೇಳ್ವಳ್ತಿಯಿಂದಂ**
**ಕಾವ್ಯಂ ಕಲ್ಪಾಂತರಸ್ಥಾಯಿಯೆನಿಪ ನುಡಿ ಸತ್ಯಂ ಕವೀಶಾಧಿಪತ್ಯಂ॥**

ಹರಿಹರನ ಈ ನುಡಿಯನ್ನೇ ಉದ್ಧರಿಸಿ ಕೊಡಲಾಗಿದೆ. ಈ ಪ್ರಸ್ತಾವನಾಕಾರರ ವಿವೇಕವನ್ನು ಪ್ರಶ್ನಿಸಬೇಕಾಯ್ತು. "ಗಿರಿಜಾಕಲ್ಯಾಣ"ವೆಂಬ ಕಾವ್ಯವು ಪ್ರಸಾದಗುಣವುಳ್ಳದ್ದೆಂದು ಕೊನೆಯಲ್ಲಿ ಒಪ್ಪಿಕೊಳ್ಳುವ ವಿದ್ವಾಂಸನು ಅದರಲ್ಲಿಯ "ಕ್ಲಿಷ್ಟತೆ."ಯನ್ನು ಎತ್ತಿ ಹೇಳಲು ಹಕ್ಕುಳ್ಳವನಲ್ಲ. ಇಂದಿನ ಕನ್ನಡ ಲೇಖಕರನೇಕರ ಅವಿವೇಕವಾಣಿಗಿದು ಸರಿದೊರೆ, ತಮಗರ್ಥ ಮಾಡಿಕೊಳ್ಳಲು ಶಬ್ದಕೋಶವನ್ನು ನೋಡಲೇ ಬೇಕಾದ ಭಾಷಾಭಿಜ್ಞತೆಯುಳ್ಳವರು ಪ್ರೌಢರೋ ಬಾಲಕರೋ? ಗೀ ಗೀ ಪದ, ಲಾವಣಿ ಮುಂತಾದ ಜನಪದ ಸಾಹಿತ್ಯದಿಂದಲೇ ಕನ್ನಡಕ್ಕೆ ದೇಶವಿದೇಶಗಳಲ್ಲಿ ಕೀರ್ತಿ ದೊರಕಿದೆಯೇ? ಅಂಥವುಗಳಿಂದಲೇ ಜಗನ್ಮಾನ್ಯ ಭಾಷೆ ಎನ್ನಿಸಿದ ಒಂದು ಭಾಷೆ ಜಗತ್ತಿನಲ್ಲಿದೆಯೇ? "ನನಗೆ ಗೊತ್ತಿರುವುದಷ್ಟೇ ಪೂರ್ಣವೂ ಸತ್ಯವೂ ಆದ ಜ್ಞಾನ: ನನಗೆ ಗೊತ್ತಿಲ್ಲದುದೆಲ್ಲವೂ ಅಪೂರ್ಣ ಮತ್ತು ಅಸತ್ಯ" ಎಂಬ ದನಗಾಹಿಯ ಮಾತಿಗಿಂತ ಮೇಲಿನ ಅಭಿಪ್ರಾಯವು ಹೆಚ್ಚು ಬೆಲೆಯುಳ್ಳದ್ದಲ್ಲ. ಇಂಥವರನ್ನು Who is the common man? ಸಾಮಾನ್ಯನೆಂದರೆ ಯಾರು? ಎಂದು ಕೇಳಬೇಕಾಗುತ್ತದೆ. ಏಕೆಂದರೆ ಹೇಗೆ ಇಬ್ಬರು ವಿದ್ಯಾವಂತರ ಶಬ್ದ ಸಂಗ್ರಹಗಳಲ್ಲಿ ವ್ಯತ್ಯಾಸವಿರುತ್ತದೆಯೋ

ರಸಗ್ರಹಣಶಕ್ತಿಯಲ್ಲಿ ವ್ಯತ್ಯಾಸವಿರುತ್ತದೆಯೋ ಹಾಗೆ ಅವಿದ್ಯಾವಂತರಲ್ಲೂ ಅಂತರವಿರುತ್ತದೆ. ಈ ಎರಡುವರ್ಗಗಳಲ್ಲಿಯೂ ಶಬ್ದಾದ್ಯರ್ಥಗ್ರಹಣ ಶಕ್ತಿಯಲ್ಲಿಂದು ನೂರಾರು ಮಟ್ಟಗಳಿವೆ. ಕನ್ನಡವು ಒಂದನೆಯ ಇಯತ್ತೆಯಿಂದ ಎಂ.ಎ.ವರೆಗೆ ಇರುವಂತೆ ಅಥವಾ ಒಂದೇ ಒಂದು ಭಾಷೆಯನ್ನು ಸಾಕಷ್ಟು ಚೆನ್ನಾಗಿ ಅಭ್ಯಸಿಸಿದವರಿಗೂ ಒಂದಕ್ಕಿಂತ ಹೆಚ್ಚು ಪರಸ್ಪರ ಸಂಬಂಧಯುಕ್ತವಾದ ಭಾಷೆಗಳನ್ನು ಅಭ್ಯಾಸಮಾಡಿದವರಿಗೂ ಗ್ರಹಣಶಕ್ತಿಯಲ್ಲಿ ಬಹಳ ಅಂತರವಿರುತ್ತದೆ. ಪಂಪನು ಕನ್ನಡಕ್ಕೆ ಹೇಗೆ ಒಬ್ಬನೋ ಷೇಕ್ಸ್‌ಪಿಯರನು ಇಂಗ್ಲೀಷಿಗೆ ಒಬ್ಬನೇ. ಹಾಗೇ ೫೦೦ ರಿಂದ ೫೦,೦೦೦ ಪದಗಳವರೆಗೆ ಒಂದು ಭಾಷೆಯನ್ನು ಕಲಿತವರಲ್ಲಿ ಶಬ್ದಾರ್ಥಜ್ಞಾನಿಗಳಿರಬಹುದು. ಅವತಾರಪುರುಷರು ಹೇಗೆ ವಿರಳರೋ ಹಾಗೇ ಪಂಡಿತಕವಿಗಳೂ ವಿರಳರು. ಗಮಕಿಗಳು ಅವರ ಕಾವ್ಯಗಳನ್ನು ಎಂದಿನಿಂದಲೂ ರಸಿಕರಿಗೆ ಮನಂಬುಗುವಂತೆ ವಿವರಿಸುತ್ತ ಬಂದಿದ್ದಾರೆ. ಭಾರತಕ್ಕೆ ಇಂದಿನ ಯಾವ ಆಡುಮಾತಿನ ಭಾಷೆಯಲ್ಲಿ ರಚಿತವಾದ ಕೃತಿಯಿಂದಲೂ ಜಾಗತಿಕ ಬಹುಮಾನ, ಗೌರವ ಬಂದಿಲ್ಲ ದಿ. ರವೀಂದ್ರನಾಥರ ಬಂಗಾಳಿಯ ಗೀತಾಂಜಲಿಯನ್ನು ಬಿಟ್ಟು. ಹಾಗೇ ಸಂಸ್ಕೃತದ ಮಹಾಕವಿ, ಮಹಾನಾಟಕಕಾರ, ಮಹಾತತ್ವಜ್ಞಾನಿಗಳಿಂದ ಬಂದಷ್ಟು ಜಾಗತಿಕ ಕೀರ್ತಿ ಭಾರತಕ್ಕೆ ಈವರೆಗೆ ಬಂದಿಲ್ಲ. ಹಾಗೇ ಕರ್ಣಾಟಕಕ್ಕೆ ಕೀರ್ತಿ ತಂದದ್ದು ಪಂಪ, ಹರಿಹರ, ರಾಘವಾಂಕ, ಕುಮಾರವ್ಯಾಸರ ಪ್ರೌಢಕನ್ನಡವಲ್ಲದೆ ಒನಕೆವಾಡುಗಳಲ್ಲ. ಪದಕ್ಲಿಷ್ಟತೆ ಕ್ಲಿಷ್ಟತೆಯೇ ಅಲ್ಲ; ಭಾವಕ್ಲಿಷ್ಟತೆಯೇ ನಿಜವಾದ ಕ್ಲಿಷ್ಟತೆ, ಗೊಂದಲ, ಸಂಕೀರ್ಣತೆ.



# ಅನುಬಂಧ

ಅನ್ಯಭಾಷಾ ಸಾಹಿತ್ಯಗಳಿಗೆ ಸಂಬಂಧಿಸಿದ ವಿಮರ್ಶೆಯಲ್ಲಿ ಸಂಸ್ಕೃತವನ್ನೇ ಪ್ರತ್ಯೇಕವಾಗಿರಿಸುವುದು ತಪ್ಪಾಗಲಾರದು. ನಮ್ಮ ಸಾಹಿತ್ಯದ ಆರಂಭ ಕಾಲದಿಂದಲೂ ಸಂಸ್ಕೃತವು ಪ್ರೇರಣೆಯನ್ನು ಒದಗಿಸಿಕೊಡುತ್ತ ಬಂದಿದೆ. ಸಂಸ್ಕೃತದೊಂದಿಗಿನ ನಮ್ಮ ಸಂಬಂಧ ಬರಿಯ ಸಾಹಿತ್ಯಕ್ಕೆ ಸಂಬಂಧಿಸಿದ್ದಾಗಿರದೆ ನಮ್ಮ ವೈಚಾರಿಕ, ಸಾಂಸ್ಕೃತಿಕ, ಸಾಮಾಜಿಕ ಜೀವನಕ್ಕೂ ಕೂಡಿದ್ದಾಗಿದೆ. ಕಾಳಿದಾಸನನ್ನು ಮೆಚ್ಚದ, ಅವನ ಆದರ್ಶವನ್ನು ಹೊಂದದ ನಮ್ಮ ಲೇಖಕ ಯಾರಿದ್ದಾನೆ? ಹೊಸಬೆಳಗಿಗೆ ಮೊದಲು ನಮ್ಮ ಕಾವ್ಯಮೀಮಾಂಸೆ ಏನಾದರೂ ಇದ್ದರೆ ಅದು ಸಂಸ್ಕೃತ ಅಲಂಕಾರ ಗ್ರಂಥಗಳದ್ದಲ್ಲದೆ ಇನ್ನಾವುದರದು?

–ಡಾ. ಹಾ. ಮಾ. ನಾಯಕ

ಕ್ರಿ.ಶ. ೧೯೫೭ರಲ್ಲಿ ಕಡವ ಶಂಭುಶರ್ಮನು ಅಶ್ವಘೋಷ ಕವಿ ರಚಿಸಿದ್ದ ಸಂಸ್ಕೃತದ "ಸೌಂದರನಂದ" ಎಂಬ ಮಹಾಕಾವ್ಯವನ್ನು ಕನ್ನಡಕ್ಕೆ ಛಂದೋಬದ್ಧವಾಗಿ ಭಾಷಾಂತರಿಸಿದನು. ಅದರ ಮುನ್ನುಡಿಯಲ್ಲಿ "ಇದರಲ್ಲಿ ಮೂಲಪದ್ಯದ ಪ್ರತಿ ಶಬ್ದ–ವಿಭಕ್ತಿಗಳ ಅನುವಾದ ಕ್ರಮವು ಅನುಸರಿಸಲ್ಪಟ್ಟಿದೆ. ಸಂಸ್ಕೃತ ಭಾಷೆಯಂತೆ ಬಿಗುವಾದ ಹಳಗನ್ನಡ ವ್ಯಾಕರಣಬದ್ಧ ಭಾಷೆ ಬಳಸಲ್ಪಟ್ಟಿದೆ. ೪, ೧೦, ೧೩, ೧೫ ನೆಯ ಸರ್ಗಗಳು ಮಾತ್ರ ನಡುಗನ್ನಡ ಭಾಷೆಯಲ್ಲಿವೆ."

–ಕಡವ ಶಂಭುಶರ್ಮ

ಕನ್ನಡದಲ್ಲಿಯೇ ಉಪಲಬ್ಧವಿದ್ದ ಗ್ರಂಥಗಳಲ್ಲಿ ಮೊದಲನೆಯದಾದ ಕವಿರಾಜ ಮಾರ್ಗವೆಂಬ ಗ್ರಂಥವು... ದಂಡಿ ಕಾವ್ಯಾದರ್ಶಕ್ಕೆ ಋಣಿಯಾಗಿದೆ... ೧೫೦ನೆಯ ಪರಿಚ್ಛೇದದಲ್ಲಿ... ನೃಪತುಂಗನು... ಭಾಮಹನನ್ನು ಬಹುಕಡೆಗೆ ಅನುಸರಿಸಿರುವನು. ಅವರ ಅಂಧಾನುಕರುಣೆ ಮಾಡಿಲ್ಲ. ಸಂಸ್ಕೃತ ಲಾಕ್ಷಣಿಕರಿಗೆ ಗೊತ್ತಿಲ್ಲದ ಕಾರಕಾದಿ ದೋಷಗಳನ್ನು ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿ ಹೆಚ್ಚಿನ ವಿಷಯವನ್ನು ಹೇಳಿರುವನು... ಕನ್ನಡ ಕಾವ್ಯಾಲಂಕಾರಶಾಸ್ತ್ರವು ಸಂಸ್ಕೃತ ಗ್ರಂಥಗಳನ್ನೇ ಆಧರಿಸಿ ರಚಿತವಾಗಿದೆ. ಆದರೂ ಸಂಸ್ಕೃತದಲ್ಲಿಲ್ಲದ ಹಲವು ವಿಷಯಗಳು ಅವುಗಳಲ್ಲಿ ಬಂದಿವೆ.

ಕನ್ನಡದಲ್ಲಿಯ ಹಾಡುಗಬ್ಬಗಳಲ್ಲಿ... ಹ್ರಸ್ವದೀರ್ಘೋಚ್ಚಾರ ತಾಳಕ್ಕನು ಸರಿಸಿಯಿರಬೇಕು... ಕ್ರಿ.ಶ. ೧೦ನೆಯ ಶತಮಾನದ ಸುಮಾರಿಗೆ ಈ ದೇಶೀಯ ವೃತ್ತ ಮತ್ತು ಗಣಗಳನ್ನು ಜಯಕೀರ್ತಿಯು ಸಂಸ್ಕೃತದಲ್ಲಿ ಬರೆದಿರುವುದು ಆಗ ಇದ್ದ ಕನ್ನಡದ ಪ್ರಭಾವವನ್ನು

ಸ್ಪಷ್ಟಪಡಿಸುವದು... ಕನ್ನಡ ಗ್ರಾಂಥಿಕ ಭಾಷೆಯ ಬೆಳವಣಿಗೆಗೆ ಸಂಸ್ಕೃತವು ಸಹಾಯ ಮಾಡಿದಂತೆ ಪ್ರಾಕೃತ ಮತ್ತು ಅಪಭ್ರಂಶ ಭಾಷೆಗಳಲ್ಲಿರುವ ಜೈನ ಸಾಹಿತ್ಯದ ಕಥಾವಸ್ತುಗಳನ್ನು ಪ್ರಧಾನವಾಗಿಟ್ಟುಕೊಂಡು ಕನ್ನಡದಲ್ಲಿ ಮಹಾಕಾವ್ಯಗಳನ್ನು (ಕನ್ನಡ ಕವಿಗಳು) ರಚಿಸಿದರು.

–ಡಾ. ಶಿ.ಚೆ. ನಂದೀಮಠ

ಕವಿರಾಜಮಾರ್ಗವು ರಚಿತವಾಗುವ ವೇಳೆಗೆ ಸಂಸ್ಕೃತದಲ್ಲಿ ಭಾಮಹ, ದಂಡಿ, ವಾಮನ, ಉದ್ಭಟ–ಇವರ ಗ್ರಂಥಗಳು ನಿಃಸಂದೇಹವಾಗಿ ಪ್ರಚುರವಾಗಿದ್ದವು... ಕವಿರಾಜಮಾರ್ಗದ ಕರ್ತೃವೇ ಬಹುಶಃ ಕನ್ನಡದಲ್ಲಿ "ಚಂಪುವಿನ ಆದ್ಯಪ್ರವರ್ತಕ"ನೆಂದೂ ಹೇಳಬೇಕಾಗಬಹುದು... ಕನ್ನಡ ಲಕ್ಷಣ ಗ್ರಂಥಗಳಲ್ಲಿ ಉಕ್ತವಾಗಿರುವ ವಿಷಯಗಳ ಎಲ್ಲ ಮೂಲರೇಖೆಗಳೂ ಬಲುಮಟ್ಟಿಗೆ ಎಲ್ಲ ವಿವರಗಳೂ ಸಂಸ್ಕೃತದಿಂದಲೇ ಬಂದವು... ನಮ್ಮದೇಶದಲ್ಲಿ ಹಿಂದೆ ಎಲ್ಲ ಶಾಸ್ತ್ರಗಳಿಗೂ ಸಂಸ್ಕೃತವೇ ನೆಲೆವೀಡಾಗಿದ್ದ ಕಾರಣ. ಲಕ್ಷಣ ಗ್ರಂಥಗಳನ್ನು ಕನ್ನಡದಲ್ಲಿ ಓದಿಕೊಂಡು ವಿಷಯ ಗ್ರಹಣ ಮಾಡಬೇಕಾದ ಅವಶ್ಯಕತೆ ವಿದ್ಯಾವಂತರಿಗೆ ಸಾಮಾನ್ಯವಾಗಿ ಇರುತ್ತಿರಲಿಲ್ಲ.

ಪ್ರೊ. ತೀ. ನಂ. ಶ್ರೀಕಂಠಯ್ಯ

ಬೇಂದ್ರೆಯವರ ಈಚಿನ ಕಾವ್ಯವನ್ನು ಆಸ್ವಾದಿಸಲು ನಮ್ಮ ಶಾಸ್ತ್ರಪುರಾಣಗಳ, ವೇದ–ಉಪನಿಷತ್ತುಗಳ ಇತರ ತತ್ವಶಾಸ್ತ್ರಗಳ ಪರಿಚಯ ಅಗತ್ಯ. ದಣಿವಿಲ್ಲದೆ ಬೆಟ್ಟ ಹತ್ತುವುದು ಸಾಧ್ಯವಿಲ್ಲ. ಅವರ ಹಳೆಯ ಕವಿತೆಗಳನ್ನು ಚೆನ್ನಾಗಿ ಅಧ್ಯಯನ ಮಾಡಿರುವವರಿಗೆ, ಅವರ ಈಚಿನ ಕವಿತೆಗಳಲ್ಲೂ ಅದೇ ಮಾರ್ದನಿ ಕೇಳಿಸುತ್ತದೆ. ಹಳೆಯ ಲೇಖಕರು ಹೊಸಲೇಖಕರನ್ನು ಅಧ್ಯಯನ ಮಾಡದೆ ತಿರಸ್ಕರಿಸುತ್ತಿದ್ದಾರೆ ಎಂದು ಟೀಕಿಸುವವರು ಮೊದಲು ಹಳೆಯ ಲೇಖಕರನ್ನು ಅಭ್ಯಾಸ ಮಾಡಬೇಕು. ಹಳಬರು ಹೊಸಬರನ್ನು ಓದದಿದ್ದರೆ ಏನೂ ನಷ್ಟವಿಲ್ಲ. ಆದರೆ ಹೊಸಬರು ಮಾತ್ರ ಹಳೆಯವರನ್ನು ಅಭ್ಯಾಸ ಮಾಡದಿದ್ದರೆ, ಅವರ ವಿಶ್ಲೇಷಣೆ, ಮರುಪರಿಚಯ ಇವುಗಳಲ್ಲಿ ತೊಡಗದಿದ್ದರೆ ಸಾಹಿತ್ಯಕ್ಕೆ ದೊಡ್ಡ ನಷ್ಟ ಸಂಭವಿಸುತ್ತದೆ. ಏಕೆಂದರೆ ಇದರಿಂದ ಪರಂಪರೆಯೇ ಕಡಿದು ಹೋಗುತ್ತದೆ. ಪರಂಪರೆಯನ್ನು ಕಳೆದುಕೊಂಡ ಸಾಹಿತ್ಯ ಕೇವಲ ಕುಂಡದ ಗಿಡವಾಗಿ ಬೆಳೆಯುತ್ತದೆ.

–ಸು.ರಂಗಸ್ವಾಮಿ

The Process of acquiring a cultural complex is governed by the inherited archetypes of an individual. These archetypes are hidden in the Collective Unconscious of the newly born individual. It is because of these archetypes that cultural patterns differ from one group to another group of individuals. The unanimous contents of these archetypes jerk into the conscious plane and exert coersive influence on the ego in an imperceptible manner

- from"ಶ್ರೀ ಅರವಿಂದಾವಲೋಕನ"

ಸಂಸ್ಕೃತದ ಈ ಸ್ವೀಕರಣಗಳು ಕನ್ನಡ ಶಬ್ದಕೋಶದ ಬಹು ಪ್ರಧಾನ ಭಾಗಗಳಾಗಿವೆ. ಅವುಗಳಿಲ್ಲದೆ ಕನ್ನಡವು ಉನ್ನತ ಭಾವಗಳನ್ನಾಗಲಿ ಉದಾತ್ತ ಅಭಿಪ್ರಾಯಗಳನ್ನಾಗಲಿ ಅಭಿವ್ಯಕ್ತ ಮಾಡಲಾರದು.

–ಡಾ. ಎಂ. ಚಿದಾನಂದಮೂರ್ತಿ

ಇಂಥ (ಸಂಸ್ಕೃತದಲ್ಲಿರುವಂಥ) ಸಾಹಿತ್ಯದ ಬೆಂಬಲವು ಕನ್ನಡಕ್ಕೆ ಮೊದಲಿನಿಂದ ಇತ್ತು. ಈ ತಳಹದಿಯ ಮೇಲೆಯೇ ಕರ್ಣಾಟಕದಲ್ಲಿ ಕಾರ್ಯವು ಪ್ರಾರಂಭವಾಯಿತು. ಇದಲ್ಲದೆ ಸಂಸ್ಕೃತದಲ್ಲಿ ಗ್ರಂಥಗಳನ್ನು ಬರೆದ ಅನೇಕ ಆಚಾರ್ಯರು ಕರ್ಣಾಟಕದವರು ಶಂಕರಾಚಾರ್ಯ, ಮಧ್ವಾಚಾರ್ಯ, ವಿದ್ಯಾರಣ್ಯ ಇಂಥ ಮಹನೀಯರನ್ನು ಆರ್ಯಾವರ್ತದ ಉದ್ಧಾರಕ್ಕಾಗಿ ದಯಪಾಲಿಸಿದ ಕರ್ಣಾಟಕಮಾತೆಯು ಎಂಥ ಉಚ್ಚ ಸಂಸ್ಕೃತಿಯ ತಾಯ್ನಾಡಾಗಿರಬೇಡ?

–ಡಾ. ವಿ. ಕೃ. ಗೋಕಾಕ

ಕವಿ ವರ್ತಮಾನ ವಾತಾವರಣದಲ್ಲಿ ಬಾಳಬೇಕಾಗಿರುವುದರಿಂದ ಶೈಲಿ, ಶಬ್ದ ನಡಗೆ ಬೆಡಗುಗಳಲ್ಲಿ ಮಾತ್ರ ಲೋಕ ಶರಣ್ಯನಾಗಿ, ತನ್ನ ಆತ್ಮಕ್ಕೆ ವಂಚನೆಯನ್ನು ಮಾಡಿಕೊಳ್ಳದೆ ತನ್ನ ಕರ್ಮದಿಂದ ತನಗೆ ಸುಖ ಲಭಿಸಲೆಂದು ಬಯಸಿ ರಸ ಶರಣ್ಯನಾಗಿ ತನ್ನ ಕಾವ್ಯವನ್ನು ನಿರ್ಮಿಸಿದ ಪಕ್ಷದಲ್ಲಿ ಕೃತಾರ್ಥನಾಗುತ್ತಾನೆ. ಹಾಗಲ್ಲದೆ ಭಾವಗಳ ವಿಷಯದಲ್ಲಿಯೂ ಈತ ಪ್ರವರ್ತಮಾನಕ್ಕೆ ವಶ್ಯನಾದರೆ ಆತನ ಕೃತಿ ರಸಪ್ರದವಾಗುವುದು ಕಷ್ಟ. ಆದುದರಿಂದ ಕವಿಗಳು ಕ್ರಾಂತದರ್ಶಿಗಳು ಆದದ್ದನ್ನು ಕಾಣತಕ್ಕವರು ಎಂದು ನಮ್ಮ ಹಿಂದಿನವರು ಹೇಳುತ್ತಿದ್ದುದು. ಇದನ್ನೇ ಇನ್ನೊಂದು ತೆರದಲ್ಲಿ ಹೇಳಬಹುದಾದರೆ, ಅದ್ಯತನ ವಿಮುಕ್ತಿಯನ್ನು ತಾವಿಚ್ಛಿಸಿದಂದು ಪಡೆಯುವಂಥವರು ಕವಿಗಳಾಗುವುದಕ್ಕೆ ಅರ್ಹರು ಎಂದೆನ್ನಬಹುದು.

–ಪ್ರೊ. ಎಂ. ಗೋಪಾಲಕೃಷ್ಣ ಅಡಿಗ

ಪೂರ್ವಾನುಭವವನ್ನೇ ಸ್ಮರಣೆಯಿಂದ ಪುನರನುಭೂತಿಗೆ ತಂದುಕೊಂಡು ಭಾವ–ರಸಾಸ್ವಾದನ ಮಾಡುವ ಕಾವ್ಯಕೃತಿ ಒಂದು ಬಗೆಯದು. ಅನನುಭೂತವಾದ ಭಾವಗಳನ್ನು ಅನುಭವಕ್ಕೆ ಎಟಕುವಂತೆ ಶಬ್ದಶಕ್ತಿ ಸಾಮರ್ಥ್ಯದಿಂದ ಜೀವನ ಬೇರೆ ಭೂಮಿಕೆಗೆ ಎತ್ತುವದು ಇನ್ನೊಂದು ಬಗೆಯ ಕಾವ್ಯಕೃತಿ... ಅನುಭವ ಎಷ್ಟೇ ವಿಶಿಷ್ಟ ಸ್ವರೂಪದ್ದಾಗಿದ್ದರೂ ಅದರ ಸಾಹಿತ್ಯೀಕರಣವಾದೊಡನೆ ಅದರ ಸಾಮಾನ್ಯೀಕರಣವೂ ಆಗುತ್ತದೆ–ಅಂದರೆ–ಅಸಾಮಾನ್ಯವನ್ನು ಸಾಮಾನ್ಯಕ್ಕೆ ತಂದು ಮುಟ್ಟಿಸುವ ಕಾರ್ಯವೂ ಸಾಮಾನ್ಯವನ್ನು ಅಸಾಮಾನ್ಯತೆಗೆ ಎತ್ತುವ ಕಾರ್ಯವೂ ಸಾಹಿತ್ಯ ಮುಖೇನ ಯಾವಾಗಲೂ ನಡೆದಿರುತ್ತದೆ.

–ಡಾ. ಡಿ.ಆರ್. ಬೇಂದ್ರೆ

ಆಧುನಿಕ ಕಾವ್ಯವು– ಅಲ್ಲ, ಯಾವುದೇ ವಿಶಿಷ್ಟ, ಉತ್ತಮ, ದುರೂಹವಾದ ಕ್ಲಿಷ್ಟ ಕವಿತೆಯು–ವಿಮರ್ಶಾವಿಚಕ್ಷಣನೊಬ್ಬನ ಮಧ್ಯಸ್ಥಿಕೆಯಿಲ್ಲದಿದ್ದರೆ ಅವನ ವ್ಯಾಖ್ಯಾನ, ಭಾಷ್ಯ,

ಮೀಮಾಂಸೆ ಸಿಗದಿದ್ದರೆ, ಓದುಗರ ಪಾಲಿಗೆ ಒಡೆಯದ ಒಗಟಾಗಿಯೇ ಉಳಿಯುತ್ತದೆ. ಪ್ರಾಚೀನ ಲಿಪಿಯನ್ನು ಅರ್ಥಮಾಡಿ ಹೇಳುವ ತಜ್ಞನಂತೆ ಇಂದು ವಿಮರ್ಶಕನು ಕವಿಯ ಇಂಗಿತವನ್ನು, ಅವನ ಕಾವ್ಯಕುಸುಮದಲ್ಲಿ ಹುದುಗಿದ "ನಾಳಿನ ಹಣ್ಣಿನ ರುಚಿ"ಯನ್ನು ಸಹೃದಯನಿಗೆ, ರಸಿಕನಿಗೆ ತೆರೆದು ತೋರಿಸಿ ತಿಳಿಸಿ ಹೇಳುವ "ಗಂಧವಹ"ನ ಕೈಕೊಳ್ಳಲೇಬೇಕಾಗುತ್ತದೆ. ಏಕೆಂದರೆ ಇತ್ತೀಚೆಗೆ ಕಾವ್ಯವು ಒಂದು ಕವಿಯ ಕರಪಲ್ಲವಿಯಂತೆ ತೀರ ವೈಯಕ್ತಿಕ ಭಾಷೆಯಾಗಿ ಬಿಟ್ಟಿದೆ.

–ಗೌರೀಶ ಕಾಯ್ಕಿಣಿ

ಕುವೆಂಪು ಅವರು ಕಾವ್ಯ ಮೀಮಾಂಸೆಯ ತತ್ವ ಪ್ರತಿಪಾದನೆಗಾಗಿಯೇ ಬರೆದಿರುವ ಪ್ರಬಂಧಗಳು ಹತ್ತಾರು ಮಾತ್ರ. ಆದರೆ ಅವರ ತತ್ವಪ್ರತಿಪಾದನೆಗೆ ಅವರು ಬರೆದಿರುವ ಸಾಹಿತ್ಯವೆಲ್ಲ ನಿದರ್ಶನವೇ ಎಂದರೂ ಸಲ್ಲುತ್ತದೆ, ತಮ್ಮ ಸಾಹಿತ್ಯರಚನೆಯ ನಿದರ್ಶನದಿಂದಲೇ ತತ್ವವನ್ನು ಪ್ರತಿಷ್ಠಾಪಿಸಲು ಹೊರಡದೆ– ಇದರಲ್ಲಿ ನಾನಾರೀತಿಯ ಆರೋಪಗಳಿಗೆ ಎಡೆಯುಂಟು– ಸರ್ವಸಮ್ಮತವಾದ ಪ್ರಾಚೀನ ಸಾಹಿತ್ಯದಿಂದಲೇ ತಮ್ಮ ಸಿದ್ಧಾಂತಗಳಿಗೆ ದೃಷ್ಟಾಂತಗಳನ್ನು ಒದಗಿಸಿ ಉಪಪಾದಿಸಿರುವುದು ಕುವೆಂಪು ಅವರ ಅದ್ವಿತೀಯ ವೈಶಿಷ್ಟ್ಯವೆನ್ನಬಹುದು. ಪಂಪ, ರಾಘವಾಂಕ, ಕುಮಾರವ್ಯಾಸರಂತಹ ಕನ್ನಡ ಮಹಾಕವಿಗಳ ಪ್ರಯೋಗಗಳಂತೆ ವಾಲ್ಮೀಕಿ, ಕಾಳಿದಾಸಾದಿ ಸಂಸ್ಕೃತ ಮಹಾಕವಿಗಳ ಪ್ರಬಂಧಗಳೂ ಕುವೆಂಪು ಅವರ ಕಾವ್ಯಮೀಮಾಂಸೆಯ ಸಾರ್ಥಕ್ಯವನ್ನು ಬೆಳಗುವ ನಿದರ್ಶನಗಳಾಗುತ್ತವೆ.

–ಡಾ. ಕೆ. ಕೃಷ್ಣಮೂರ್ತಿ

ಸಂಸ್ಕೃತ ಭಾಷೆಯ ವೈದಗ್ಧ್ಯ ಗುಣಧರ್ಮ, ಸಂಪತ್ತು, ಭಾಷಾಮರ್ಯಾದೆಯ ಒಳಗುಟ್ಟುಗಳನ್ನು ಅರ್ಥಮಾಡಿಕೊಂಡವರು ಕುವೆಂಪು. ಕೆಲವು ಉದಾಹರಣೆಗಳಿಂದ ಮೇಲೆ ಹೇಳಿದ ಅಂಶಗಳನ್ನು ಅರಿಯಬಹುದು.

ಸ್ವಪ್ನ ಕಾಮಿನಿ, ಮಧೂನ್ಮಾದಿನಿ, ರಸಹ್ಲಾದಿನಿ, ಭರತಭೋಧಿನಿ, ಕಲೋನ್ಮಾದಿನಿ, ರಸಹ್ರಾದಿನಿ, ಚಿರವನವಾಸಿನಿ, ಸುಮನಸಸಂಗಿನಿ, ವಿಶ್ವದೇಹಿನಿ, ಸ್ವರ್ಣಸ್ವಪ್ನರಂಗಿನಿ, ಭಾವನಾಂಗಿನಿ, ಅಂತರ್ಯಾಮಿನಿ, ಋತ ಅಧಿಕಾರಿಣಿ, ಪ್ರೇಮೋನ್ಮಾದಿನಿ, ಮೃತ್ಯುಮಾಧುರಿ, ಅರೂಪಸುಂದರಿ, ರಸಯೋಗಿನಿ, ಆತ್ಮಾಹ್ಲಾದಕಾರಿಣಿ, ಆತ್ಮೋದ್ಧಾರ ಕಾರಿಣಿ, ಫಣಿರಮಣಿ, ಸುರತರಂಗಿಣಿ, ಕಲ್ಲೋಲಿನಿ, ನಿರಂತರ ಕ್ರಾಂತದರ್ಶಿನಿ, ಋತ ದರ್ಶಿನೀ, ಋತಚಿನ್ಮಯೀ, ಭೋಗಿನಿ, ಕಠೋರ ಕೋಮಲೆ, ನೀಲಿಮಾದಿಗಂಬರೆ, ಸಾಗರಾಂಬರೆ, ಶರಧಿಶರೀರೆ, ಗಿರಿವನವದನೆ, ಗಗನಾಂಬರೆ, ನಯನ ಸರೋವರ, ಮೇಘತಿಲೋತ್ತಮೆ, ಸಲಿಲತಿಲೋತ್ತಮೆ, ಲೋಕಾಂತರವಿಹಾರೆ, ಅಮೃತಾಹಾರೆ, ರಕ್ತತರ್ಪಣತೃಪ್ತೆ, ದಿವ್ಯಸಾಮಾನ್ಯೆ, ಕ್ರತುದೀಕ್ಷಿತೆ, ಬ್ರಹ್ಮಹೃದಯ ಸದ್ಮೆ, ಮನೋನ್ಮಾದಿನಿ.

–ಎಚ್. ಎಸ್. ಸುಜಾತ

ಹೋಮರನ ಎರಡು ಮಹಾಕಾವ್ಯಗಳೊಂದಿಗೆ ಕುವೆಂಪು ಅವರ "ರಾಮಾಯಣದರ್ಶನ"ವನ್ನು ಹೋಲಿಸುವಾಗ ಈ ಅಂಶಗಳನ್ನು ನೆನಪಿಡಬೇಕು. ಕುವೆಂಪು ಅವರ ಹಿಂದೆ ಭಾರತದಲ್ಲಿನ ಮಹಾಕಾವ್ಯಪರಂಪರೆ ಇದೆ, ಜಗತ್ತಿನ ಮಹಾಕಾವ್ಯಗಳ ಶ್ರೀಮಂತ ಜಗತ್ತಿದೆ, ವೇದಕಾಲದ ಋಷಿಗಳಿಂದ ಅರವಿಂದರವರೆಗೆ ಭಾರತದ ತತ್ವಜ್ಞಾನಿಗಳು ಅನುಗ್ರಹಿಸಿದ ಚಿಂತನೆಯ ಗಣಿ ಇದೆ. ಹೋಮರ್ ತನ್ನ ಕಾಲದ ನೂರಾರು ಪೌರಾಣಿಕ ಕಥೆಗಳಿಗೆ ಕೈಚಾಚಿ ಅವನ್ನು ಬಳಸಿಕೊಂಡ. ಕುವೆಂಪುವಿಗೆ ರಾಮಾಯಣದ ಕರ್ತೃ ವಾಲ್ಮೀಕಿ ಗುರು.

–ಎಲ್. ಎಸ್. ಶೇಷಗಿರಿರಾವ್

ದೇವಭಾಷೆಯಾಗಿ ಸಂಸ್ಕೃತವು ಇದ್ದ ಸ್ಥಿತಿಯಲ್ಲೇ ಸಾಗಿ ಬಂದಿರುವುದಿಲ್ಲ. ವೇದಋಚೆಯಲ್ಲಿ ಸಂಸ್ಕೃತ ಭಾಷೆಯೇ ಬೇರೆ, ಪಾಣಿನಿಯ ವ್ಯಾಕರಣದ ಸಂಸ್ಕೃತ ಭಾಷೆಯೇ ಬೇರೆ, ಲೌಕಿಕ ಸಂಸ್ಕೃತವೇ ಬೇರೆ. ಇನ್ನಿತರ ಭಾಷೆಗಳಂತೆ ಸಂಸ್ಕೃತ ಭಾಷೆಯೂ ಪರಿವರ್ತನ ಹೊಂದುತ್ತಲೇ ಬಂದಿದೆ... ಸಂಸ್ಕೃತವು ವ್ಯಾವಹಾರಿಕ, ರಾಜಕೀಯ ಮತ್ತು ಸಾಹಿತ್ಯಿಕ ಭಾಷೆಯಾಗಿ ಪ್ರಚಾರದಲ್ಲಿದ್ದಿತು... ಸಂಸ್ಕೃತವು ಇಂದು ಧಾರ್ಮಿಕ ಐಕ್ಯವನ್ನು ಕಾಯ್ದುಕೊಂಡು ಬರುವ ಒಂದೇ ಒಂದು ಭಾಷೆಯಾಗಿದೆ... ಸಂಸ್ಕೃತವು ಮೃತಭಾಷೆಯಲ್ಲ. ಜೀವಂತ ಭಾಷೆ, ಕ್ರಿ.ಪೂ. ೩೦೦೦ ವರ್ಷಗಳಿಂದ ಇಂದಿನವರೆಗೆ ಭಾರತದಲ್ಲಿ ನಡೆದು ಬಂದ ಭಾಷೆ.

–ಪ್ರ. ಗೋ. ಕುಲಕರಣಿ

ಹೀಗೆ ಹಳಗನ್ನಡದಲ್ಲಿರುವ ಅಲಂಕಾರ ಗ್ರಂಥಗಳೆಲ್ಲಾ ಸಂಸ್ಕೃತ ಗ್ರಂಥಗಳನ್ನು ಅನುಸರಿಸಿ ಬರೆಯಲ್ಪಟ್ಟವು. ಕನ್ನಡ ಅಲಂಕಾರಿಕರು ಪ್ರಾಯಶಃ ತಮ್ಮ ಗ್ರಂಥಗಳಲ್ಲಿ ಯಾವ ಹೊಸಸಂಗತಿಯನ್ನು ಎತ್ತಿಯಾಗಲಿ, ವಿಚಾರಮಾಡಿಯಾಗಲಿ ಹೇಳಿಲ್ಲ.

–ಡಾ. ಎ.ಆರ್. ಕೃಷ್ಣಶಾಸ್ತ್ರಿಗಳು ಮತ್ತು ಕೆ. ವರದಾಚಾರ್ಯರು.

ಸ್ವಪರಂಪರೆಯನ್ನು ಅವಲಂಬಿಸದ ಬೆಳವಣಿಗೆ ಸಹಜವಾಗದು, ಸುಷ್ಠುವಾಗದು. ಅಂತೆಯೇ ಲಲಿತ ಕಲಾಶಾಸ್ತ್ರದ ನಮ್ಮ ಪೂರ್ವಪರಂಪರೆಯನ್ನು ತಿಳಿದಲ್ಲದೆ ನಮಗೆ ಇಂದು ಅಗತ್ಯವಾದ ನೂತನಕಲಾಶಾಸ್ತ್ರ, ಸಹಜ ಅರಳಿದಂತೆ, ಹುಟ್ಟಿ ಬೆಳೆಯಲಾರದು. ನಾಟ್ಯಕಲೆಯ ವಿಷಯವನ್ನು ತೆಗೆದುಕೊಂಡರೂ ಅಷ್ಟೆ; ನಮ್ಮಲ್ಲಿ ಈ ಶತಮಾನದ ನೂತನ ನಾಟ್ಯಶಾಸ್ತ್ರ ಹುಟ್ಟಿ ಬೆಳೆಯ ಬೇಕಾದರೆ ಮೊದಲಿಗೆ ನಮ್ಮ ಭಾರತೀಯ ನಾಟ್ಯಶಾಸ್ತ್ರದ ಪರಂಪರೆ ಸ್ಪಷ್ಟವಾಗಿ ತಿಳಿಯಬೇಕು. ಅದಕ್ಕೆ ಮುಖ್ಯವಾಗಿ ಸಂಸ್ಕೃತದಲ್ಲಿರುವ ನಾಟ್ಯವಿಷಯಕ ಗ್ರಂಥಗಳೆಲ್ಲವೂ ಪ್ರಾದೇಶಿಕ ಭಾಷೆಗಳಲ್ಲಿ ಅನುವಾದವಾಗಬೇಕು.

–ಕೆ.ವಿ.ಸುಬ್ಬಣ್ಣ

ಮತ್ತೂ ಹೆಚ್ಚಿನ ಸಂತೋಷದ ಸಂಗತಿ ಎಂದರೆ: ಉಪನಿಷತ್ತಿನ ಮಂತ್ರಗಳನ್ನು ದೇವನಾಗರಿಯಲ್ಲಿಯೂ ಕನ್ನಡ ಅಕ್ಷರದಲ್ಲಿಯೂ ಅಚ್ಚು ಮಾಡಿಸಿದ್ದಾರೆ. ಸಂಸ್ಕೃತ ಮೂಲದ

ಜೊತೆಗೆ ಕನ್ನಡದಲ್ಲಿಯೂ ಇಂಗ್ಲಿಷಿನಲ್ಲಿಯೂ ಅರ್ಥಗಳನ್ನು ಒದಗಿಸಿ ಕೊಟ್ಟಿದ್ದಾರೆ. ಈ ಉಪಕಾರಕ್ಕಾಗಿ ಬೆಂಗಳೂರಿನ ವಿಶ್ವವಿದ್ಯಾಲಯಕ್ಕೆ ನಮ್ಮ ಅಭಿನಂದನೆಗಳು ಸಲ್ಲಬೇಕು, ಸಂಸ್ಕೃತಕ್ಕೆ, ಕನ್ನಡಕ್ಕೆ, ಇಂಗ್ಲೀಷಿಗೆ ಸಲ್ಲಬೇಕಾದ ಸ್ಥಾನ ಈಗ ಈ ಸಣ್ಣ ಆರಂಭದಿಂದ ಮೊದಲಾಗಿದೆ. ಇದು ಹೀಗೆ ಮುಂದುವರಿಯಲಿ, ವಿದ್ಯಾರ್ಜನೆಯ ಮಾಧ್ಯಮ ಕನ್ನಡವಾಗಲಿ, ಸಂಸ್ಕೃತವೂ ಇಂಗ್ಲಿಷೂ ಕನ್ನಡದ ವಿಶಾಲವಾದ ವಕ್ಷಃಸ್ಥಳಕ್ಕೆ ಆಜಾನುಬಾಹುಗಳಾಗಲಿ, ಸ್ವಸ್ತಿ.

–ಜಿ.ಪಿ. ರಾಜರತ್ನಂ

ನಮ್ಮ ಭಾಷೆ, ನಮ್ಮ ವಿಚಾರ, ನಮ್ಮ ರೀತಿ–ನೀತಿಗಳು, ನಮ್ಮ ಗಾದೆಯ ಮಾತುಗಳು ನಮ್ಮ ಅಜ್ಜಿಯರು ಹೇಳುವ ಕಥೆಗಳು–ಇವೆಲ್ಲವೂ ಆರ್ಯರ ಸಂಸ್ಕೃತಿಯೊಡನೆ ಕಲಬೆರಕೆಯಾಗಿ, ಆರ್ಯ–ದ್ರಾವಿಡವೆಂಬ ಭೇದವೇ ಮಾಯವಾಗಿ ಸಂಸ್ಕೃತ ಸಾಹಿತ್ಯದ ಮಾರ್ಗವಾಗಿ ನಮಗೆ ಜೀವನ ಶಕ್ತಿಗಳಾಗಿ ದೊರೆತಿವೆ. ಸಂಸ್ಕೃತ ಭಾಷೆಯನ್ನರಿಯದಿದ್ದರೆ ಒಂದೆಡೆ, ಬೇಕಾದ ವಿಚಾರಕ್ಕೆ ತಕ್ಕ ಶಬ್ದ ಸಾಮಗ್ರಿ ಇಲ್ಲದೆ ಹೋದರೆ, ಇನ್ನೊಂದೆಡೆ ನಮ್ಮಲ್ಲಿಯ ಸಾಮಾನ್ಯ ಜನರ ಮಾಧ್ಯಮ ನಮಗೆ ಇಲ್ಲದಂತಾಗುವುದು. ಸಂಸ್ಕೃತದ ಅಗತ್ಯದ ಬಗ್ಗೆ ಕನ್ನಡಿಗರಲ್ಲಿ ಆಂಡಯ್ಯನ ಕಾಲದಿಂದಲೂ ಭಿನ್ನಾಭಿಪ್ರಾಯವಿದೆ; ಆದರೆ ಅಭಿಪ್ರಾಯ ಭಿನ್ನವಾದರೆ ಸಂಸಾರವು ಕೂಡಿಯೆ ನಡೆಯುವುದು ಅನಿವಾರ್ಯವೆಂಬ ಸಾಂಪ್ರದಾಯಿಕ ಗಂಡ–ಹೆಂಡತಿಯ ಜೊತೆಯಂತೆ ಸಂಸ್ಕೃತ–ಕನ್ನಡಗಳ ಜೊತೆ ಇದೆ.

–ವಸ್ತುಕೋಶ, ಪ್ರಬುದ್ಧ ಕರ್ಣಾಟಕ, ೧೯೫೬ ಸಂಪುಟ ೩೭, ಸಂಚಿಕೆ ೪

ಇನ್ನು ಇತ್ತೀಚೆಗೆ ವಿಶ್ವವಿದ್ಯಾನಿಲಯಗಳಲ್ಲಿ ಓದುವ ಸ್ನಾತಕರನ್ನು ಬಿಟ್ಟರೆ ನಮ್ಮ ಹಳಗನ್ನಡ ಸಾಹಿತ್ಯ ಕೃತಿಗಳ ಆಳವಾದ ಅಭ್ಯಾಸವನ್ನು ಜನತೆಯು ಮಾಡಲಿಲ್ಲ. ಇಷ್ಟೇ ಅಲ್ಲ, ಎಷ್ಟೋ ತರುಣ ಲೇಖಕರೂ ಹಳೆಯ ಸಾಹಿತ್ಯದ ಪರಿಚಯವನ್ನು ಹೊಂದಿಲ್ಲ. ನಮ್ಮ ಹಿಂದಿನ ಸಾಹಿತ್ಯ ಪರಂಪರೆಯ ಸಮೃದ್ಧವಾದ ಅಡಿಗಲ್ಲಿನ ಮೇಲೆಯೇ ನಮ್ಮ ಮುಂದಿನ ಸಾಹಿತ್ಯವು ರೂಪುಗೊಳ್ಳುತ್ತ ಹೋಗಬೇಕು. ಪರಕೀಯ ಭಾಷೆ, ಸಾಹಿತ್ಯಗಳಿಂದ ಹೊಸ ಹೊಸ ದೃಷ್ಟಿಗಳು ಮೂಡಲಿ; ಆದರೆ ಅವೆಲ್ಲ ನಮ್ಮ ಸಂಸ್ಕೃತಿ ಪರಂಪರೆಗಳಿಗೆ ಒಗ್ಗುವಂತೆ ಬೆಳೆಯಲಿ.

–ಡಾ. ಆ. ನೇ. ಉಪಾಧ್ಯೆ

ಸಿದ್ಧರಾಮನ ವಚನಗಳಲ್ಲಿ, ಶಬ್ದದಲ್ಲಿ ಅರ್ಥಸಮೃದ್ಧಿ ಇದೆ. ಪದವಿನ್ಯಾಸ ಸಹಜವಾಗಿದೆ. ಭಾವ ತುಂಬಿ ತುಳುಕುತ್ತದೆ. ಭಾವಾಭಿವ್ಯಕ್ತಿಗೆ ಉಚಿತವಾದ ಪೋಷಕವಾದ ಲಯವಿದೆ. ಒಟ್ಟಂದದ ಅನುಭವದಲ್ಲಿ ಪ್ರಸಾದ ಗುಣ ಉಂಟಾಗುತ್ತದೆ. ಭಾವದ ಆಳ ಹಾಗೂ ಎತ್ತರ ಬೆರಗು ತರಿಸುವಂತಹದಿದೆ. ಕನ್ನಡ–ಸಂಸ್ಕೃತಗಳ ಹಿತಮಿತವಾದ ಬೆರಕೆ ಭಾಷೆಯ ಸೌಂದರ್ಯವನ್ನು ಹೆಚ್ಚಿಸಿದೆ.

–ವಿ.ಎ. ದಿವಾಣಜಿ

ಆದರೆ ವಚನಕಾರರು (ಅವರಲ್ಲಿ ಕೆಲವರಾದರೂ ಆಳವಾದ ಸಂಸ್ಕೃತ ಪಾಂಡಿತ್ಯವನ್ನು ಗಳಿಸಿದ್ದರೆನ್ನಲು ವಚನಗಳಲ್ಲಿಯೇ ಆಧಾರವನ್ನು ಕಾಣಬಹುದು). ತಮ್ಮ ಆಧ್ಯಾತ್ಮಿಕ ವಿಚಾರ, ಚರ್ಚೆ, ಧಾರ್ಮಿಕಬೋಧನೆ, ಅನುಭಾವಿಕ ಅನುಭವಗಳ ಅಭಿವ್ಯಕ್ತಿ–ಇವೆಲ್ಲವನ್ನೂ ಕನ್ನಡದಲ್ಲಿಯೇ ನಡೆಸಿದರು.

–ಪಿ.ವಿ. ನಾರಾಯಣ

ಗಿರಿಜಾಕಲ್ಯಾಣವನ್ನು ಬರೆಯುವ ಹೊತ್ತಿಗೆ ಹರಿಹರನ ಮುಂದೆ ಆಗಲೇ ಪಂಚಮಹಾಕಾವ್ಯಗಳಲ್ಲಿ ಒಂದೆಂದು ಪ್ರಸಿದ್ಧವಾಗಿದ್ದ ಕುಮಾರ ಸಂಭವ, ಪ್ರಾಯಶಃ ಆಗ ದೊರೆಯುತ್ತಿದ್ದ ಉದ್ಭಟನ ಕುಮಾರ ಸಂಭವವೂ ಇದ್ದುವು. ಮತ್ತೆ, ಲಿಂಗ ಪುರಾಣ ಶಿವ–ಸ್ಕಾಂದ–ಪದ್ಮ–ಸೌರಪುರಾಣಗಳು ಆ ವೇಳೆಗಾಗಲೆ ಹಲವು ಕವಲಾಗಿ ಬೆಳೆದಿದ್ದವು. ಅವುಗಳ ಸಾರಸತ್ವವನ್ನು ಬಿಡದೆ, ಸವಾಲನ್ನೂ ನಿರ್ಲಕ್ಷಿಸದೆ ಮೇಲಾಗಿ ತನ್ನ ಪ್ರತಿಭೆಯನ್ನೂ ಮರೆಸದೆ ಈ ಕಾವ್ಯ ರಚಿಸಬೇಕಿತ್ತು.

–ಎಸ್. ನಾರಾಯಣ ಶೆಟ್ಟಿ

(ಹರಿಹರನ) ರಕ್ಷಶತಕದ ಮೊದಲ ನಾಲ್ಕು ಪದ್ಯಗಳು ಶಂಕರಾಚಾರ್ಯರ ಶಿವಾಪರಾಧಕ್ಷಮಾಪಣಸ್ತೋತ್ರದ ಮೊದಲ ಮೂರು ಪದ್ಯಗಳ ಭಾವವನ್ನೇ ಪ್ರತಿಬಿಂಬಿಸುತ್ತದೆ.

–ಕೋ ಚೆನ್ನಬಸಪ್ಪ

(ಹರಿಹರನ ಗಿರಿಜಾಕಲ್ಯಾಣದಲ್ಲಿ) ದೇಶಿಗಿಂತ ಸಂಸ್ಕೃತದ ಬಳಕೆಯೇ ಮಿಗಿಲು

–ಡಿ.ವಿ. ಶೇಷಗಿರಿರಾವ್

ಹರಿಹರ ತನ್ನ ಕೃತಿಯಲ್ಲಿ ಹಲವು ಸ್ವತಂತ್ರ ಕಲ್ಪನೆಗಳನ್ನು ಜೋಡಿಸಿ ಒಂದು ಹೊಸತನವನ್ನು ಮೆರೆದಿರುವನಾದರೂ ಕಾಳಿದಾಸನ ಕೃತಿಯ ಪ್ರಭಾವ ಅವನ ಕೃತಿಯ ಮೇಲೆ ಬೀಳದೆ ಇಲ್ಲ.

–ಕೆ.ವೆಂಕಟರಾಮಪ್ಪ

ಕೆರೆಯ ಪದ್ಮರಸನು ಕನ್ನಡದಲ್ಲಿ ದೀಕ್ಷಾಬೋಧೆಯೆಂಬ ಕೃತಿಯನ್ನೂ ಸಂಸ್ಕೃತದಲ್ಲಿ ಸಾನಂದಚರಿತ್ರೆಯೆಂಬ ಕೃತಿಯನ್ನೂ ರಚಿಸಿದ್ದಾನೆ.

–ಎನ್. ವಿ. ವಿಮಲ

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಷಟ್ಪದೀ ಕಾವ್ಯಪ್ರಕಾರವು ವಿಶಿಷ್ಟವೂ ವಿಪುಲವೂ ಆದುದು... ಈ ಸಂಗತಿಗಳಿಗೆ ಪೋಷಕವಾಗಿ ಸಂಸ್ಕೃತದಲ್ಲಿರುವ "ಸಂಗೀತ ರತ್ನಾಕರ"ದ ಕರ್ತೃವಾದ ಶಾರ್ಙ್ಗದೇವನ (ಕ್ರಿ.ಶ ಸುಮಾರು ೧೨೫೦) ಲಕ್ಷಣ ಪದ್ಯಗಳು ಹೀಗಿವೆ:

**ಷಷ್ಠಸ್ತೃತೀಯಾಸ್ತ್ರಿಗಣ ಪೃಥಗ್ ದ್ವಿ ದ್ವಿ ಗಣಾಃ ಪರೇ**

**ಚತ್ವಾರಶ್ಚರಣಾ ಬಾಣ ಪ್ರಾಸ್ತ, ಷಷ್ಠತೃತೀಯಕೌ।**

**ಶೇಷಾಸ್ತು ಮಾನ್ಮಥಗಣಾ ಯಸ್ಯಾಂ ಸಾ ಷಟ್ಪದೀ ಮತಾ**

**ಕರ್ಣಾಟಭಾಷಯಾ ತಾಲವರ್ಜಿತಾ ನಾದಮುಕ್ತಿಕಾ॥**

–ಡಾ. ಜಿ. ವರದರಾಜರಾವ್

ವೀರೇಶನ ಕಥೆಯು ಸ್ಕಾಂದಪುರಾಣ, ಶಿವಪುರಾಣ, ಲಿಂಗಪುರಾಣ, ವಾಯವೀಯ ಸಂಹಿತೆ, ಭಾರತ ಮತ್ತು ಭಾಗವತ ಮೊದಲಾದ ಪ್ರಾಚೀನ ಪುರಾಣಗಳಲ್ಲಿ ಅಡಕವಾಗಿದೆ. ಇವುಗಳ ಆಧಾರದಿಂದ ಭಕ್ತಕವಿಯಾದ ಹರಿಹರನು ತನ್ನ ಮನೋಧರ್ಮಕ್ಕನುಸಾರವಾಗಿ ಕೆಲವು ಮಾರ್ಪಾಡುಗಳೊಂದಿಗೆ ಲಲಿತರಗಳೆಯಲ್ಲಿ ವೀರಭದ್ರದೇವರ ರಗಳೆಯನ್ನು ರಚಿಸಿದ್ದಾನೆ.

–ಸಂಗಮನಾಥ ಜಿ. ಹೆಂಡಿ

(ನೇಮಿಚಂದ್ರನ) ಲೀಲಾವತಿ ಲೌಕಿಕ ಕಾವ್ಯ. ಆದರೂ ಇದರಲ್ಲಿ ಬರುವ ಕಥೆ ರಾಮಾಯಣ–ಮಹಾಭಾರತಗಳಿಂದ ಎತ್ತಿಕೊಂಡದ್ದಾಗಿರದೆ... ಪರಂಪರಾಗತವಾಗಿ ಹರಿದು ಬಂದ ಸಂಸ್ಕೃತ–ಪ್ರಾಕೃತ ಭಾಷೆಗಳಲ್ಲಿ ಆಗಲೇ ಪ್ರಚಾರವಾಗಿದ್ದ ಒಂದು ದಂತಕಥೆಯಾಗಿದೆ.

–ಬಿ.ಎಸ್. ಕುಲಕರ್ಣಿ

ಮಹಾಭಾರತ, ವಿಷ್ಣುಪುರಾಣಗಳಲ್ಲಿ ಅದರಲ್ಲೂ ಹೆಚ್ಚಾಗಿ ಭಾಗವತ ಪುರಾಣದಲ್ಲಿ ಬರುವ ಕೃಷ್ಣನ ಚರಿತ್ರೆಯು ಜೈನಕವಿಗಳನ್ನು ವಿಶೇಷವಾಗಿ ಕನ್ನಡ ಜೈನಕವಿಗಳನ್ನು ಆಕರ್ಷಿಸಿದಂತಿದೆ.

–ಬಿ.ಎಸ್. ಕುಲಕರ್ಣಿ

ಇವರಲ್ಲಿ ಮೊದಲನೆಯ ನಾಗವರ್ಮ ಮತ್ತು ದುರ್ಗಸಿಂಹರು ಚಂಪೂಕೃತಿಗಳನ್ನು ತಮ್ಮದೇ ಆದ ವಿಶಿಷ್ಟ ಹಾಗೂ ಸುಲಲಿತ ಶೈಲಿಯಲ್ಲಿ ರಚಿಸಿದ್ದರೂ ಇವು ಸ್ವತಂತ್ರ ಪ್ರತಿಭೆಯನ್ನು ಬೆಳಗಿಸುವ ಪ್ರಯತ್ನಗಳಾಗಿಲ್ಲ; ಅನುವಾದಗ್ರಂಥಗಳಾಗಿವೆ. ಬೇರೊಂದು (ಬೇರೆಯೊಂದು) ಸಾಹಿತ್ಯರೂಪದಲ್ಲಿ ಪರಿವರ್ತನೆಗೊಂಡಿದ್ದರೂ ವಿಷಯ ನಿರೂಪಣೆಯ ಕಲಾರೀತಿಯಲ್ಲಿ ಅವು ಸಂಸ್ಕೃತದ ಗಣ್ಯಕವಿಗಳ ಕೃತಿಗಳ ಛಾಯಾನುವರ್ತಿಗಳೇ ಆಗಿವೆ.

–ಎಸ್. ಆರ್. ಮಳಗಿ

ಸಂಸ್ಕೃತ ಭಾಷೆಯಲ್ಲಿರುವ "ರಸಕಲಿಕಾ" ಎಂಬ ಗ್ರಂಥವು ರುದ್ರಭಟ್ಟನದಿರಲಾರದು... ಅಥವಾ ರಸಕಲಿಕೆಯಲ್ಲಿ ಅನುವಾದಿಸಲ್ಪಟ್ಟ ಶೃಂಗಾರಸೂತ್ರಗಳಿಗೆ (ನೇಮಿಚಂದ್ರನ ಲೀಲಾವತಿಯು) ದೃಷ್ಟಾಂತವಾದಂತಿರಬೇಕು.

–ಪ್ರೊ. ಜಿ. ವೆಂಕಟಸುಬ್ಬಯ್ಯ

ನೇಮಿಚಂದ್ರನು ತನ್ನ ನೇಮಿನಾಥಪುರಾಣದಲ್ಲಿ ದಿಗಂಬರ ಜೈನಪಂಥದ ಕಥಾಸಂಪ್ರದಾಯವನ್ನು ಅನುಸರಿಸುತ್ತಾನೆ. ಸಂಸ್ಕೃತ ಮಹಾಪುರಾಣದಲ್ಲಿ ಈ ಸಂಪ್ರದಾಯದ ಕಥೆಗಳು ನಿರೂಪಣೆಗೊಂಡಿವೆ.

–ಪ್ರೊ. ಜಿ. ವೆಂಕಟಸುಬ್ಬಯ್ಯ

"ಅಗ್ಗಳನು ತನ್ನ ಚಂದ್ರಪ್ರಭ ಚರಿತೆಗೆ... ವೀರನಂದಿಕೃತವಾದ ಸಂಸ್ಕೃತ ಚಂದ್ರಪ್ರಭಚರಿತೆ ಆಕರವಾಗಿರಬೇಕು" ಎಂಬ ಅಂಶವನ್ನು ಈ ಎರಡೂ ಕಾವ್ಯಗಳಲ್ಲಿ ಬರುವ ಸಾಧಾರಣವಾದ ಹೋಲಿಕೆಗಳಿಂದ ಸ್ಪಷ್ಟಪಡಿಸಿದ್ದಾರೆ.

–ಸಿ. ಬಸಪ್ಪ

ಪಾರ್ಶ್ವನಾಥಪುರಾಣವು ಹದಿನಾರು ಆಶ್ವಾಸಗಳಿಂದ ಕೂಡಿದ ದೊಡ್ಡ ಚಂಪೂಕಾವ್ಯ. ಇದರ ಕಥಾವಸ್ತು ಸಂಸ್ಕೃತದಲ್ಲಿ ಗುಣಭದ್ರ ಮಹಾಕವಿಯಿಂದ ರಚಿತವಾದ ಮಹಾಪುರಾಣದಲ್ಲಿ, ಹತ್ತನೆಯ ಶತಮಾನದಲ್ಲಿ ಚಾವುಂಡರಾಯನಿಂದ ರಚಿತವಾದ ಕನ್ನಡ ಗದ್ಯಗ್ರಂಥಗಳಲ್ಲಿ ದೊರೆಯುತ್ತದೆ.

–ಸಿ. ಬಸಪ್ಪ

(ಜನ್ನನ) ಯಶೋಧರ ಚರಿತೆಯ ಕಥೆ ಬಹಳ ಪ್ರಾಚೀನವಾದದ್ದು. ಪ್ರಾಕೃತ ಸಂಸ್ಕೃತ ಕಾವ್ಯಗಳಲ್ಲಿ ಈ ಕಥಾವಸ್ತು ಬಳಕೆಯಾಗಿದೆ.

–ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

ವೈದಿಕ ಸಾಹಿತ್ಯದೊಳಗಿನ ಲೌಕಿಕ ಕಾಮನಿಗೆ ಸಂಬಂಧಿಸಿದ ಈ ಅಸ್ಫುಟವಾದ ಚಾರಿತ್ರಿಕ ಅಂಶವನ್ನು ಎತ್ತಿಕೊಂಡು ಆಂಡಯ್ಯನು ಆಗಮಿಕ (ಜೈನ) ಸಾಹಿತ್ಯ ಪ್ರಣೀತವಾದ ಕಲ್ಪನೆಯ ಅರಿವಿನಿಂದ ಲೌಕಿಕ ಕಾಮನ ಪಾತ್ರವನ್ನು ಉನ್ನತಗೊಳಿಸಲು ಪ್ರಯತ್ನಿಸಿರುವನು.

–ಸದಾನಂದ ನಾಯಕ

ಅಚ್ಚಗನ್ನಡವೆಂದರೆ ಶುದ್ಧವಾದ ದೇಶಿಯ ಪದವು ಮಾತ್ರವೇ ಅಲ್ಲ; ಅಪಭ್ರಂಶಕ್ಕೂ ತತ್ಸಮಕ್ಕೂ ತತ್ಸಮಸಮಾಸಕ್ಕೂ ಇಲ್ಲವೆ ಇವುಗಳೊಡನೆ ದೇಶಿಯ ಪದವನ್ನು ಬೆರೆಸಿ ಮಾಡಿದ ಸಮಾಸಕ್ಕೂ "ಅಚ್ಚಗನ್ನಡ"ವೆಂದು ಕೇಶಿರಾಜನು ಪರ್ಯಾಯದಿಂದ ತಿಳಿದಿರುವನು.

–ಸದಾನಂದ ನಾಯಕ

ಹಸ್ತಿಮಲ್ಲನ ನಾಟಕಗಳು ಸಂಸ್ಕೃತ ಸಾಹಿತ್ಯದಲ್ಲಿ ಮಹತ್ವಪೂರ್ಣ ಕೃತಿಗಳಾಗಿವೆ. ಆದರೆ ಆದಿಪುರಾಣವನ್ನು ಬರೆಯುವಲ್ಲಿ ಅವನು ತನ್ನ ಸಂಸ್ಕೃತ ಪಾಂಡಿತ್ಯವನ್ನು ಮೆರೆಯಲು (ಮೆರೆಯಿಸಲು )ಪ್ರಯತ್ನಿಸಿಲ್ಲ.

–ಎಸ್. ಪಿ. ಪಾಟೀಲ

ಇದುವರೆಗಿನ ಪರಿಶೀಲನೆಯಿಂದ ಕ್ರಿ.ಶ ೧೧೫೦ ರಿಂದ ೧೩೫೦ರವರೆಗಿನ ಕಾಲಖಂಡದಲ್ಲಿ ಕನ್ನಡಿಗರು ಅನ್ಯಭಾಷೆಗಳಾದ ತೆಲುಗಿನಲ್ಲಿ ಸ್ವಲ್ಪಮಟ್ಟಿಗೂ ಸಂಸ್ಕೃತದಲ್ಲಿ ಸಮೃದ್ಧವಾಗಿಯೂ ಸಾಹಿತ್ಯರಚನೆ ಮಾಡಿದ್ದರೆಂಬುದು ವಿದಿತವಾಗುತ್ತದೆ. ಸಂಸ್ಕೃತದ ರಚನೆಗಳು ಹೆಚ್ಚಾಗಿ ವೇದಾಂತ ವಿಷಯಕವಾಗಿವೆ; ಕಾವ್ಯ, ನಾಟಕ, ಅಲಂಕಾರ, ವ್ಯಾಕರಣ ಮುಂತಾದ ಸಾಹಿತ್ಯ ಹಾಗೂ ಸಾಹಿತ್ಯಶಾಸ್ತ್ರಕ್ಕೆ ಸಂಬಂಧಿಸಿದವು ಸ್ವಲ್ಪ ಮಟ್ಟಿಗೆ ಗೋಚರವಾಗಿವೆ.

–ಟಿ. ಕೇಶವಭಟ್ಟ

"ಅಥ ಬಭೂವ ದ್ವಿಜಕುಲಂ ಪ್ರಾಂಶು ಚರದ್‌ಗುಣೇಂದ್ವಂಶುಮಂಡಲಂ ತ್ರ್ಯಾರ್ಷವರ್ತ್ಮ ಹಾರಿತೀಪುತ್ರಂ ಋಷಿಮುಖ್ಯ ಮಾನವ್ಯ ಗೋತ್ರಜಂ। ವಿವಿಧ ಯಜ್ಞಾವಭೃತ ಪುಣ್ಯಾಂಬು ನಿಯತಾಭಿಷೇಕಾರ್ದ್ರ ಮೂರ್ಧಜಂ। ಪ್ರವಚನಾವ ಗಾಹನಿಷ್ಣಾತಂ ವಿಧಿವತ್ ಸಮಿದ್ಧಾಗ್ನಿ ಸೋಮಪಂ। ಪ್ರಣವಪೂರ್ವ ಷಡ್ವಿಧಾಧ್ಯಯನ+ಅನರ್ಘ ಮಾನಾಂತರಾಲಯಂ। ಆಕೃಶ ಚಾತುರ್ಮಾಸ್ಯ ಹೋಮೇಷ್ಟಿ ಪಶುಪಾರ್ವಣ ಶ್ರಾದ್ಧಪೌಷ್ಟಿಕಂ। ಅತಿಥಿನಿತ್ಯ ಸಂಶ್ರಿತಾವಸಥ ಸವನತ್ರಯಾವಂಧ್ಯ ನೈತ್ಯಕಂ। ಗೃಹ ಸಮೀಪದೇಶ ಸಂರೂಢ ವಿಕಸತ್ ಕದಂಬೈಕಪಾದಪಂ ತದುಪಚಾರಾತ್ ತದಾ ಅಸ್ಯ ತರೋಃ ಸಾನಾಮ್ಯಂ ಸಾಧ್ಯರ್ಮಂ ಅಸ್ಯ ತತ್। ಪ್ರವವೃತೇ ಸತೀರ್ಥ್ಯವಿಪ್ರಾಣಾಂ ಪ್ರಾಚುರ್ಯತಃ ತದ್ವಿಶೇಷಣಂ॥ ಏವಮಾಗತೇ ಕದಂಬಕುಲೇ ಶ್ರೀಮಾನ್ ಬಭೂವ ದ್ವಿಜೋತ್ತಮಃ। ನಾಮತೋ ಮಯೂರ ಶರ್ಮೇತಿ ಶ್ರುತಶೀಲಶೌಚಾದ್ಯಲಂಕೃತಃ॥ ಯಃ ಪ್ರೇಯಾಯ ಪಲ್ಲವೇಂದ್ರಪುರೀಂ ಗುರುಣಾ ಸಮಂ ವೀರಶರ್ಮಣಾ। ಅಧಿಜಿಗಾಂಸುಃ ಪ್ರವಚನಂ ನಿಖಿಲಂ ಘಟಿಕಾಂ ವಿವೇಶ ಆಶುತರ್ಕಕಃ॥ ತತ್ರ ಪಲ್ಲವಾಶ್ವಸಂಸ್ಥೇನ ಕಲಹೇನ ತೀವ್ರೇಣ ರೋಷಿತಃ। ಕಲಿಯುಗೇ ಅಸ್ಮಿನ್ನಹೋ ಬತ ಕ್ಷತ್ರಾತ್ ಪರಿಪೇಲವಾ ವಿಪ್ರತಾ ಯತಃ। ಗುರು ಕುಲಾನಿ ಸಮ್ಯಗಾರಾಧ್ಯ ಶಾಖಾಮಧೀತ್ಯಾಪಿ ಯತ್ನತಃ ಬ್ರಹ್ಮಸಿದ್ಧಿರ್ ಯದಿನೃಪಾಧೀನಾ ಕಿಮತಃ ಪರಂ ದುಃಖಮಿತ್ಯತಃ। ಕುಶಸಮಿದ್ ದೃಷತ್ ಸ್ರುಗಾಜ್ಯ ಚರುಗ್ರಹಣಾದಿ ದಕ್ಷಿಣೇನ ಪಾಣಿನಾ। ಉದ್ಬಬರ್ಹ ದೀಪ್ತಿಮತ್ ಶಸ್ತ್ರಂ ವಿಜಿಗೀಷ ಮಾಣೋ ವಸುಂಧರಾಂ॥ ಯೋಽಂತಪಾಲಾನ್ ಪಲ್ಲವೇಂದ್ರಾಣಾಂ ಸಹಸಾವಿನಿರ್ಜಿತ್ಯ ಸಂಯುಗೇ ಅಧ್ಯುವಾಸ ದುರ್ಗಮಾಮಟವೀಂ ಶ್ರೀಪರ್ವತದ್ವಾರ ಸಂಶ್ರಿತಾಂ॥ ಆದದೇ ಕರಾನ್ ಬೃಹದ್‌ಬಾಣಪ್ರಮುಖಾದ್ ಬಹೂನ್ ರಾಜ ಮಂಡಲಾನ್॥ ಏವಮೇಭಿಃ ಪಲ್ಲವೇಂದ್ರಾಣಾಂ ಭ್ರುಕುಟೀ ಸಮುತ್ಪತ್ತಿಕಾರಣೈಃ ಸ್ವಪ್ರತಿಜ್ಞಾಪಾಲನೋತ್ಥಾನಲಘುಭಿಃ ಕೃತಾರ್ಥೈಶ್ಚ ವೇಷ್ಟಿತೋ ಭೂಷಣೈರಿವಾ ಬಭೌ ಬಲವದ್ಯಾತ್ರಾಸಮುತ್ಥಾಸನೇನ ಚ॥ ಅಭಿಯುಯುಕ್ಷಯಾ ಗತೇಷು ಭೃಶಂ ಕಾಂಚೀನರೇಂದ್ರೇಷ್ವರಾತಿಷು। ವಿಷಮದೇಶ ಪ್ರಯಾಣ ಸಂವೇಶ ರಜನೀಷ್ವವಸ್ಕನ್ನ ಭೂಮಿಷು। ಪ್ರಾಪ್ಯ ಸೇನಾಸಾಗರಂ ತೇಷಾಂ ಪ್ರಾಹನ್ ಬಲೀ ಶ್ಯೇನವತ್ ತದಾ॥ ಆಪದನ್ನಾನ್ ಧಾರಯಾಮಾಸ ಭುಜಖಡ್ಗಮಾತ್ರ ವ್ಯಪಾಶ್ರಯಃ॥ ಪಲ್ಲವೇಂದ್ರಾಸ್ತಸ್ಯ ಶಕ್ತಿಮಿಮಾಂ ಲಬ್ಧ್ವಾ ಪ್ರತಾಪಾನ್ವಯಾ ಅಪಿ ನಾಸ್ಯಹಾನಿ ನಿಃಶ್ರೇಯಸೀತ್ಯುಕ್ತ್ವಾ ಯಂ ಹಿ ಮಿತ್ರಮೇವಾಶುವವ್ರಿರೇ" ಹಲ್ಮಿಡಿಯ ಕನ್ನಡ ಶಾಸನವನ್ನು ಕ್ರಿ.ಶ ೪೫೦ರಲ್ಲಿ ಬರೆಯಿಸಿದ ಕದಂಬ ಶಾಂತಿವರ್ಮನ ತಾಳಗುಂದ ಶಾಸನದಿಂದ.



# ಸಂಸ್ಕೃತದ ಬಗೆಗೆ ಐನ್‌ಸ್ಟೀನ್

೧೯೪೮ರಲ್ಲಿ ಭಾರತೀಯ ತರುಣ ವಿಜ್ಞಾನಿಗಳಾದ ಡಾ. ಬಿ.ಎಂ. ಗುಪ್ತಾ ಅವರು ಪ್ರಿನ್ಸಟನ್‌ದಲ್ಲಿ ಡಾ. ಐನ್‌ಸ್ಟೀನರನ್ನು ಕಾಣಲು ಹೋಗಿದ್ದರು. ಐನ್‌ಸ್ಟೀನರು ಅತಿಥಿಗಳ ಸ್ವಾಗತವನ್ನು ಸಂಸ್ಕೃತದಲ್ಲಿಯೇ ಮಾಡಿದರು. ಆಗ ಡಾ. ಗುಪ್ತಾರು ಗಾಬರಿಗೊಂಡು 'ನನಗೆ ಸಂಸ್ಕೃತ ತಿಳಿಯದು' ಎಂದು ಐನ್‌ಸ್ಟೀನರಿಗೆ ವಿನಯಪೂರ್ವಕ ತಿಳಿಸಿದರು. ಆಗ ಐನ್‌ಸ್ಟೀನರು "ತತ್ವಜ್ಞಾನಿಗಳ ತವರುಮನೆಯಾದ ಭಾರತದಿಂದ ನೀವು ಬರುತ್ತಿದ್ದೀರಿ. ಆದರೂ ಸಂಸ್ಕೃತವನ್ನು ಕಲಿಯುವ ಬಯಕೆ ನಿಮಗಾಗಲಿಲ್ಲವೇ? ಬನ್ನಿ, ನನ್ನ ಪುಸ್ತಕ ಭಂಡಾರವನ್ನು ನಿಮಗೆ ತೋರಿಸುವೆನು. ಅದರಲ್ಲಿ ಭಾರತೀಯ ದರ್ಶನಗಳ ಪ್ರಮುಖ ಗ್ರಂಥಗಳೆಲ್ಲವೂ ಮುಖ್ಯವಾಗಿ ಭಗವದ್ಗೀತೆಯೂ ಇರುವುದು ಕಾಣುವುದು. ವೈಜ್ಞಾನಿಕ ಆನ್ವೇಷಣೆ ಮತ್ತು ನನ್ನ ಸಿದ್ಧಾಂತಗಳ ರೂಪಣಕ್ಕೆ ನನಗೆ ಭಗವದ್ಗೀತೆಯಿಂದ ಅಪಾರ ಸ್ಫೂರ್ತಿ ಸಿಕ್ಕಿದೆ" ಎಂದರು.



# ಗ್ರಂಥಋಣ


1. ಕನ್ನಡ ಕವಿಚರಿತೆ (ಆರ್.ನರಸಿಂಹಾಚಾರ್ಯರಿಂದ)
2. ಕನ್ನಡ ಸಾಹಿತ್ಯ ಚರಿತ್ರೆ (ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಣೆ)
3. "ಕದಂಬ ವೈಭವ" ಎಂಬ ಕನ್ನಡ ಖಂಡಕಾವ್ಯವನ್ನೊಳಗೊಂಡ 'ಪ್ರಬುದ್ಧ ಕರ್ಣಾಟಕ'ದ ಸಂಪುಟಗಳು
4. ಕನ್ನಡ ಭಾಷೆಯ ಚರಿತ್ರೆ (ಪ್ರ.ಗೋ.ಕುಲಕರಣಿಯವರಿಂದ)
5. ಶಬ್ದಮಣಿದರ್ಪಣ (ಕೇಶಿರಾಜನಿಂದ)
6. ಶಬ್ದಾನುಶಾಸನ (ಭಟ್ಟಾಕಲಂಕನಿಂದ)
7. ಸಂಶೋಧನ ತರಂಗ (ಟಿ.ಕೇಶವಭಟ್ಟರಿಂದ)
8. ಸ್ವಾರಸ್ಯ (ಜಿ.ಪಿ.ರಾಜರತ್ನರಿಂದ)
9. ಕನ್ನಡ–ಕನ್ನಡಕೋಶ (ಸೇಡಿಯಾಪು ಕೃಷ್ಣಭಟ್ಟರು ಮತ್ತು ಇತರರಿಂದ)
10. ಡಾ.ಎ.ವೆಂಕಟಸುಬ್ಬಯ್ಯನವರ ಸಂಶೋಧನ ಪ್ರಬಂಧಗಳು
11. ಮೈಸೂರು ಗೆಜೆಟಿಯರ್ (ಹಯವದನರಾಯರಿಂದ)
12. ಕನ್ನಡ ಮುನ್ನುಡಿಗಳು (ವಿವಿಧ ಕನ್ನಡ ವಿದ್ವಾಂಸರಿಂದ)
13. ಗೋವಿಂದ ಪೈ ವಾಙ್ಮಯ
14. ಸಂಶೋಧನತರಂಗ (ಡಾ.ಚಿದಾನಂದ ಮೂರ್ತಿಯವರಿಂದ)
15. ಸಾಹಿತ್ಯಸಮೀಕ್ಷೆ (ಡಾ.ಹಾ.ಮಾ.ನಾಯಕರಿಂದ)
16. ಸಹ್ಯಾದ್ರಿ (ವಿವಿಧ ಲೇಖಕರಿಂದ)
17. ರಾಮಾಯಣ ದರ್ಶನ (ಕುವೆಂಪು ಅವರಿಂದ)
19. ಭಾರತೀಯ ಕಾವ್ಯಮೀಮಾಂಸೆ (ತೀ.ನಂ.ಶ್ರೀ ಅವರಿಂದ)
20. ಕನ್ನಡ ಕೈಪಿಡಿ (ವಿವಿಧ ಕನ್ನಡ ವಿದ್ವಾಂಸರಿಂದ)
21. ವಚನ ಸಾಹಿತ್ಯ (ಪ್ರಭುದೇವ ಮುಂತಾದವರಿಂದ)
22. ಕನ್ನಡಕುವಲಯಾನಂದ (ಶಿ.ಚೆ.ನಂದೀಮಠ ಸಂಪಾದಿತ)

23. ಸಾಹಿತ್ಯಶಕ್ತಿ (ಡಿ.ವಿ.ಜಿ. ಅವರಿಂದ)
24. ಸಾಹಿತ್ಯದ ವಿರಾಟ್ ಸ್ವರೂಪ (ವರಕವಿ ಬೇಂದ್ರೆಯವರಿಂದ)
25. ಇಂದಿನ ಸಾಹಿತ್ಯದ ಗೊತ್ತುಗುರಿಗಳು (ವಿ.ಕೃ.ಗೋಕಾಕರಿಂದ)
26. ತಪೋನಂದನ (ಕುವೆಂಪು ಅವರಿಂದ)
27. ಕಾವ್ಯಸೂತ್ರ (ಬಿ.ಎಚ್.ಶ್ರೀ.)
28. ಕೌಸ್ತುಭ (ಕ.ಸಾ.ಪ. ವಜ್ರಮಹೋತ್ಸವ ಸಂಚಿಕೆ)
29. ವೈದಿಕ ಸಾಹಿತ್ಯಚರಿತ್ರೆ (ಎನ್.ಎಸ್.ಅನಂತರಂಗಾಚಾರ್ಯರಿಂದ)
30. ಜ್ಞಾನೋಪಾಸಕ (ವಿವಿಧ ಲೇಖಕರಿಂದ)
31. Kadamba Kula by George Moraes
32. History of Ancient Indian Literature by M.Winternitz
33. Macdonell's foreword to his Vedic Reader
34. History of Classical Sanskrit Literature by A.B.Keith
35. History of Sanskrit Drama by A.B.Keith
36. The Arctic Home of the Aryans by B.G.Tilak
37. History of the Culture and the people of India (Bhavan's Pub.)
38. South Indian Inscriptions (Kannada & Sanskrit)
39. Proceedings of the Third All India conference of Dravidian Linguistics
40. A History of Karnataka by Dr.P.B.Desai
41. Studies in Indian History and Culture (Several Scholars)
42. Indo-Ethiopian Relations for Centuries by I.M.Muttanna
43. Sahityadarpana edited by Dr.P.V.Kane
44. Sources of Karnataka History by Dr.S.Srikantha Shastri
45. Ancient Karnataka by Dr.B.A. Saletore
46. Wilson Philological Lectures
47. Grammar of the Old Kanarese Language by Dr. A.N.Narasimhaiya
48. Pre-Aryan and Pre-Dravidian by Dr.Barnet
49. History of Indian Philosophy by Dr.S.Radhakrishnan
50. The Major Bhashyas on the Brahmasutra of Badarayana and other Prakarana Granthas.

# ನಿವೇದನೆ

ಯಾವುದೇ ದೇವಾಲಯವನ್ನು ಹೊಕ್ಕರೂ ಹೊಕ್ಕವನು ತಾನೇ ಅಲ್ಲಿರುವ ವಿಗ್ರಹಗಳನ್ನು ಗುರುತಿಸುವ ಜ್ಞಾನವುಳ್ಳವನಾಗಿರಬೇಕು ಎಂಬುದೇ ಈ ಗ್ರಂಥದ ಉದ್ದೇಶವಾಗಿದೆ. ಇಂದಿನ ಮುದ್ರಣದ ಖರ್ಚು ಮುಂತಾದವುಗಳನ್ನು ಗಮನಿಸಿ ಗ್ರಂಥದ ವಿಸ್ತಾರವನ್ನು ಕಡಿಮೆ ಮಾಡಲಾಗಿದೆ. ಇಲ್ಲವಾದರೆ ಈ ಗ್ರಂಥವು ಇನ್ನಷ್ಟು ಶಾಸ್ತ್ರೀಯ ವಿವರಣೆಗಳನ್ನೂ ಚಿತ್ರೋದಾಹರಣೆಗಳನ್ನೂ ಒಳಗೊಂಡಿರುವಂತೆ ಮಾಡಿದ ಯೋಜನೆಯನ್ನು ಜಾರಿಗೆತರಲಾಗುತ್ತಿತ್ತು.

ಗರ್ಭಗುಡಿಯಲ್ಲಿರುವ ಮುಖ್ಯ ದೇವತೆಯಿಂದ ಹಿಡಿದು ದ್ವಾರಪಾಲಕರವರೆಗೆ ಅವರವರ ಆಯುಧ, ವಾಹನ, ಅಲಂಕಾರ, ಆಸನ ಮುಂತಾದವುಗಳು ವಿವಿಧ ಮತ್ತು ವಿಶಿಷ್ಟ. ಸಾಧಾರಣಗಳ ನಡುವೆ ವಿಶಿಷ್ಟಗಳನ್ನು ಗಮನಿಸಿ ವಿಗ್ರಹಗಳನ್ನು ಗುರುತಿಸುವುದು ಸುಲಭ; ಜೊತೆಗೆ ಅವರವರ ಪೌರಾಣಿಕ ಹಿನ್ನೆಲೆ ಗೊತ್ತಿದ್ದರೆ ಮತ್ತೂ ಸುಲಭ. ಭಾರತದಲ್ಲಿ ಯಜ್ಞಸಂಸ್ಥೆಯು ಜನ ಪ್ರಿಯತೆ ಕಳೆದುಕೊಂಡಾಗಲೇ ದೇವರ ದೇವಸ್ಥಾನಗಳು ಬಂದು ಹೋಮ, ನೇಮಗಳು ಪರ್ಯಾಯವಾದವು, ಪೂಜೆ–ಪುರಸ್ಕಾರಗಳು ರೂಢಿಗೆ ಬಂದವು, ರಥೋತ್ಸವಾದಿಗಳು ರಂಜಕವಾದವು– "ವೀಣಾ ಭೇರಿ ಮೃದಂಗ ಕಾಹಲಕಲಾ ನೃತ್ಯಂಚ ಗೀತಂ ತಥಾ" ಮುಂತಾದ ಕಲಾಪ್ರದರ್ಶನಗಳು ದೇವರ ಹೆಸರಿನಲ್ಲಿ ನಡೆಯತೊಡಗಿದವು. ಇವೆಲ್ಲಾ ೨೫೦೦ (ಕ್ರಿ. ಪೂ) ವರ್ಷಗಳಿಂದೀಚೆಗೆ. ದೇವಾರಾಧನೆಯ ಪೂರ್ಣಾಂಗಗಳು ಈ ಮಾನಸ ಪೂಜೆಯಲ್ಲಿ ವಿವರವಾಗಿ ಬಂದಿದೆ:–

**"ರತ್ನೈಃ ಕಲ್ಪಿತಮಾಸನಂ ಹಿಮಜಲೈಃ ಸ್ನಾನಂಚ ದಿವ್ಯಾಂಬರಂ**
**ನಾನಾರತ್ನವಿಭೂಷಿತಂ ಮೃಗಮದಾಮೋದಾಂಕಿತಂ ಚಂದನಂ।**
**ಜಾತೀ ಚಂಪಕಬಿಲ್ವಪತ್ರರಚಿತಂ ಪುಷ್ಪಪಂಚಧೂಪಂ ತಥಾ**
**ದೀಪಂ ದೇವದಯಾನಿಧೇ ಪಶುಪತೇ ಹೃತ್‌ಕಲ್ಪಿತಂ ಗೃಹ್ಯತಾಂ॥**
**ಸೌವರ್ಣೇ ಮಣಿಖಂಡರತ್ನರಚಿತೇ ಪಾತ್ರೇ ಘೃತಂ ಪಾಯಸಂ**
**ಭಕ್ಷ್ಯಂ ಪಂಚವಿಧಂ ಪಯೋದಧಿಯುತಂ ರಂಭಾಫಲಂ ಪಾನಕಂ।**
**ಶಾಕಾನಾಮಯುತಂ ಜಲಂ ರುಚಿಕರಂ ಕರ್ಪೂರ ಖಂಡೋಜ್ವಲಂ**
**ತಾಂಬೂಲಂ (ಮನಸಾ) ಮಯಾವಿರಚಿತಂ ಭಕ್ತ್ಯಾಪ್ರಭೋಸ್ವೀಕುರು।**

ಛತ್ರಂಚಾಮರಯೋರ್ಯುಗಂ ವ್ಯಜನಕಂಚಾದರ್ಶಕಂ ನಿರ್ಮಲಂ
ವೀಣಾಭೇರಿಮೃದಂಗಕಾಹಲ ಕಲಾನೃತ್ಯಂಚ ಗೀತಂ ತಥಾ।
ಸಾಷ್ಟಾಂಗಂ ಪ್ರಣತಿಸ್ತುತಿರ್ಬಹುವಿಧಾವೇತತ್ಸಮಸ್ತಂ ಮಮ
ಸಂಕಲ್ಪೇನ ಸಮರ್ಪಿತಂ ತವವಿಭೋ ಪೂಜಾಂ ಗೃಹಾಣಪ್ರಭೋ॥

ಆತ್ಮಾ ತ್ವಂ ಗಿರಿಜಾ ಮತಿಃ ಸಹಚರಾಃ ಪ್ರಾಣಾಃ ಶರೀರಂ ಗೃಹಂ
ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ।
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಸ್ ಸ್ತೋತ್ರಾಣಿ ಸರ್ವಾಗಿರಃ
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ॥

–ಬಿ.ಎಚ್.ಶ್ರೀಧರ

# ನಿವೇದನಂ

I

ಆಯುಧ ಭೂಷಣ ವಾಹನ–
ರೂಪಂ ಚಾವಯವ ಚೇಷ್ಟಾಲಕ್ಷ್ಯಾ
ಮೂರ್ತಿರ್ವರಧೀ ಕಲ್ಪಿತ–
ಸುನಾಮಧೇಯಾ ಸುನಿಶ್ಚಿತಾ ಮಾನೇ ಚ ॥೧॥

ಮನುಜಸ್ಯ ಮನಃ ಕಲ್ಪಿತ–
ಮಿಾಶೇವ ಧಿಯಾ ಪರೋಕ್ಷಶಕ್ತ್ಯಾಹಂತ್ವಾತ್।
ವಿಕೃತಿವಿಶೇಷಂ ತೇನ ಚ
ಸಹಸ್ರದೇವಾಕೃತಿಪ್ರಪಂಚಃ ಸುಕೃತಃ ॥೨॥

ಶೂನ್ಯಸಮದೃಶ್ಯಮಾನಾತ್
ವ್ಯೋಮೋಪಾಧ್ಯಾ ವಿದ್ಯೃಷ್ಟಿರಾದೌ ಸೃಷ್ಟಾ ।
ತಚ್ಚೋಪಾದಾನಹರಃ
ಕರೋತಿ ರೂಪಾಣ್ಯನೇಕಧಾ ನರಶಿಲ್ಪೀ ॥೩॥

ನರಸದೃಶಂ ನರಭಿನ್ನಂ
ರೂಪಂ ಕಾರ್ಯಾಣಿ ಸಾವಯವಮತಿಚಿತ್ರಂ
ಉಪಮಾನೇನ ಪ್ರಾಕೃತ–
ಮತಿಶೇತೇ ದಿವ್ಯ ರಮ್ಯತಾವಿಷ್ಕಾರೇ ॥೪॥
ದಿವ್ಯಸ್ಫೂರ್ತಿಬಲಾದ್ಯೋ

ನ ವಿಶ್ವರೂಪಂ ವಿಚಿತ್ರಮಂಗೋಪಾಂಗಂ ॥
ನವರಸಭಾವವ್ಯಂಜನ
ಚತುರಃ ಶಿಲ್ಪೀ ಸಮರ್ಚನಾರ್ಥೇ ಕೃತವಾನ್ ॥೫॥

ಶೂನ್ಯೋಪಾಸನಕುಶಲಾ
ವಿರಲಾಲೋಕೇ ಯತಸ್ತತಃ ತತ್ಪ್ರೀತ್ಯರ್ಥೇ ॥
ಕುರುತೇ ರೂಪಂ ಶಿಲ್ಪೀ
ನಿರಾಕೃತೇರ್ಬ್ರಹ್ಮಣಃ ಸತ್ಯಸ್ಯ ॥೬॥

ಕಶ್ಚಿದ್ದೇವೋ ಬ್ರಹ್ಮಚಾರೀ ವ್ರತೀಸ್ಯಾತ್
ಕಶ್ಚಿತ್ ಪತ್ನೀರಾಜಮಾನಃ ಪ್ರಸಿದ್ಧಃ ॥
ಕಶ್ಚಿದ್ ಯೋಧಾ ಸದ್‌ಗುರುಃ ಸತ್‌ಪಿತಾಸ್ಯಾತ್
ಶಿಷ್ಟೋದ್ಧಾರೇ ಸರ್ವದೇವಾಃ ಸುಲಗ್ನಾಃ ॥೭॥

ದಿವ್ಯೋ ಮಾನವ್ಯೋ ದಾ–
ನವ್ಯೋ ಭಕ್ತೋ ಸ್ವಕಾರ್ಯಸಿದ್ಧ್ಯರ್ಥೇ ವಾ ॥
ಬ್ರಹ್ಮೇಂದ್ರರುದ್ರವಿಷ್ಣೂನ್
ಯಜತೇ ಕಾಯೇನ ಮಾನಸೇನ ಚ ವಚಸಾ ॥೮॥

ಅವಲಂಬತೇ ಹಿ ಭಕ್ತೇಃ
ಶ್ರದ್ಧಾಯಾಃ ಶುದ್ಧಿಪೂರ್ಣತಾಂ ಭಕ್ತಸ್ಯ ॥
ಇಷ್ಟಸ್ಯ ಸತಃ ಸಿದ್ಧಿರ್
ಮಾನಸಶಾಸ್ತ್ರೀಯ ಶೋಧಸಿದ್ಧಮಿದಂ ಸ್ಯಾಥ್ ॥೯॥

ಆಗಮವಿಪಿನ ಮಯೂರ್ಯೋ
ದೇವ್ಯಸ್ತಾವತ್ ತ್ರಿಲೋಕವಂದ್ಯಾ ದುಷ್ಟಾನ್ ॥
ಘ್ನಂತಿ ಸುಶಿಕ್ಷಣಫಲದಾಃ
ಸದಯಾಃ ಸರ್ವತ್ರ ಭಕ್ತಿಗಮ್ಯಾಭುವನೇ ॥೧೦॥

## II

ಅಹಿಂಸಯಾ ಕೃತಾ ಪೂಜಾ ಧ್ಯಾನಯುಕ್ತಾ ಮನೀಷಿಣಾಂ
ಇಷ್ಟಪ್ರದಾ ತದ್ವಿರುದ್ಧಾ ಹಂತಿ ಪೂಜಕಮಂತತಃ ॥೧॥
ಪ್ರಿಯಂ ನ ಹಿತಮಶ್ನೋತಿ ಪರಹಿಂಸಾ ಪರಾಯಣಃ
ದೇಹಸ್ವಾರ್ಥೀ ತಿರಸ್ಕೃತ್ಯ ಧರ್ಮಂಯಃ ಸ ವಿಮೂಢಧೀಃ ॥೨॥
ಧರ್ಮೋ ಋತಂ ಸತ್ಯಮುಖಂ ಜ್ಞಾನಾಜ್ಞಾನವಿವೇಕದೃಕ್
ಸುಕ್ರಮೋಽಂತೇ ದುರ್ವಿಧಾನಾದ್ವಿನಶ್ಯತಿ ಚ ದುಷ್ಕ್ರಮಃ ॥೩॥
ಶಿಷ್ಟಾನಾಂ ದೈನಿಕಾಚಾರೇಷ್ವಗ್ರಃ ಸುಜನ ತರ್ಪಣಂ
ಅನಂತರಂ ಚಾರ್ಚನಂ ಚ ದಿವ್ಯಚಿಂತನಮಗ್ನತಾ ॥೪॥
ಅಂತಃಶುಚಿಃ ಸ್ಯಾತ್ ಪ್ರಥಮಾ ದ್ವಿತೀಯಾ ಕರ್ಮಶುದ್ಧತಾ
ಸತ್‌ಕರ್ಮಣ್ಯನುರಾಗಸ್ಯ ಪ್ರೇರಕಂ ಧ್ಯಾನಮರ್ಚನಂ ॥೫॥
ಸುಶಿಲ್ಪಿಕೃತ ಮೂರ್ತಿಃ ಸ್ಯಾತ್ ಸ್ವಾಕಾರೇಣೇಂಗಿತೇನ ಚ
ವಿಭೂತಿರ್ ದೇವದೇವಸ್ಯ ಸಾ ಶ್ರದ್ಧಾದಾರ್ಢ್ಯಕಾರಿಕಾ ॥೬॥
ಶ್ರದ್ಧಾಮೂಲಂ ಸರ್ವಕರ್ಮ ಬಾಲ್ಯಾನ್ನಾಸ್ತ್ಯವಲಂಬನಂ
ಸದೃಶಂ ತಸ್ಯ ತಿತಉಸ್ ತತ್ಪಾವಯತಿ ಶೇಮುಷೀ ॥೭॥
ಬುದ್ಧಿಃ ಕರ್ಮಾನುಸಾರಿತ್ವಾದ್ದುಷ್ಟ–ಶಿಷ್ಟ ಪ್ರಕಾರಿಕಾ
ಸುಕೃತೀ ಸಹವಾಸೇನ ಸುಬುದ್ಧಿಂ ಲಭತೇ ನರಃ ॥೮॥
ಸಾ ಪ್ರಾರ್ಥನಾ ಚಾಗ್ರಗಣ್ಯಾ ಪೂಜಂತೇ ಗೃಹಮೇಧಿನಾಂ
ಗೃಹೇಷು ಧ್ಯಾನ ಯೋಗೇನ ಶಿಲ್ಪಿಕಲ್ಪಿತ ವಿಗ್ರಹಂ ॥೯॥
ಅದ್ಭುತಂ ಶಿಲ್ಪ ಚಾತುರ್ಯಂ ಶಿಲ್ಪೀ ಬ್ರಹ್ಮಾ ಚತುರ್ಮುಖಃ
ಆಗಮಾನಾಂ ಪುರಾಣಾನಾಂ ತಾತ್ಪರ್ಯಗ್ರಹಣೇ ಪಟುಃ ॥೧೦॥
ಆಪಾತತೋಽಶ್ಲೀಲಮೂರ್ತಿರಂತತಃ ಶುದ್ಧದೈವತಂ
ಭಕ್ತ ಬುದ್ಧಿಪರೀಕ್ಷಾರ್ಥಂ ದ್ರಷ್ಟೃಭಿಃ ಕಲ್ಪಿತಂ ಪುರಾ ॥೧೧॥
ಸತ್ಯೇನ ದೇವಕಾಯಶ್ಚ ಸೂರ್ಯಜ್ಯೋತಿಃ ಸ್ವರೂಪವಾನ್
ಅಮರಾ ನಿರ್ಜರಾ ದೇವಾಸ್ತ್ರಿದಶಾವಿಬುಧಾಃ ಸುರಾಃ ॥೧೨॥

ಮಾನವ್ಯ ಚಿತ್ತ ದೌರ್ಬಲ್ಯ ಪರಿಹಾರಾಯ ಕಲ್ಪಿತಾಃ
ಮೃದಾ ದಾರುವಿಶೇಷೇಣ ಶಿಲಯಾ ದೇವವಿಗ್ರಹಾನ್ ॥೧೩॥
ಲೋಹಪ್ರಭೇದೈಶ್ಚತಥಾ ಕುರ್ವಂತಿ ವಿವಿಧಾಕೃತೀಃ
ತಸ್ಮಾತ್ ಪುನಃಪ್ರತಿಷ್ಠಾಂ ಚ ಕುರ್ವಂತಿ ಚ ಪುರೋಹಿತಾಃ ॥೧೪॥
ದೈವೀಕಲಾ ಪೂರಣಾಯ ದೇವಾಗಾರೇಷು ತದ್ವಿಧಾಃ
ಕಾಲೇ ಕಾಲೇ ಯಥಾಶಾಸ್ತ್ರಂ ಪಾವಿತ್ರ್ಯಾವಾಹನಾಯ ಚ ॥೧೫॥
ಪಾವಿತ್ರ್ಯಂ ಸಕಲಂ ಕಾಲಾದ್ ವಿಸ್ಮರಂತಿ ಜನಾ ಯತಃ
ಅನುಸ್ಮರಣಸಿದ್ಧ್ಯರ್ಥಂ ಪುನರಾವಾಹನಂ ತತಃ ॥೧೬॥

ತಾ: ೧–೩–೧೯೮೮ **– ಭಾರದ್ವಾಜ ಶ್ರೀಧರಸ್ಯ**
ಶಿರಸಿ (ಉ.ಕ.) **ಶಿರೀಷ ಪುರವಾಸಿನಃ**

# ಪರಿವಿಡಿ

**ವಿಷಯ**

# ಉಪಕ್ರಮ

೧. ದ್ರವಿಡ, ದ್ರಾವಿಡ=ಕೀಳು ಕ್ಷತ್ರಿಯರು; ವೃಷಭಸ್ವಾಮಿ ಪೌತ್ರರು; ದಕ್ಷಿಣಭಾರತದ ಒಂದು ಜಿಲ್ಲೆಯವರು; ಆಂ.ಧ್ರ-ಕರ್ನಾಟಕ-ಗುರ್ಜರ-ತೈಲಂಗ-ಮಹಾರಾಷ್ಟ್ರರು; ಕೃಷ್ಣಪುತ್ರ; ಒಬ್ಬ ಗ್ರಂಥಕರ್ತೃ; ವೈಯಾಕರಣರದೊಂದು ವರ್ಗ; ಒಂದು ರಾಗಿಣಿಯ ಹೆಸರು; ಒಂದು ಉಪನಿಷತ್ತು; ದ್ರಾವಿಡ ಕುಲ; ಪೂರ್ವೋಕ್ತ ಪಂಚದ್ರಾವಿಡ ಕುಲಗಳು ಹಾಗೂ ಪಂಚದ್ರಾವಿಡ ಭಾಷೆಗಳು; ಸಸ್ಯವಿಶೇಷ; ಸಣ್ಣ ಜಾತಿಯ ಏಲಕ್ಕಿ ಎಂಬ ೧೫ ಅರ್ಥಗಳು ದ್ರಮಿಡ ಅಥವಾ ತಮಿಳ ಎಂಬ ಶಬ್ದಕ್ಕಿದೆ. ಆಧುನಿಕರು ಕುಲವಾಚಕವಾದಾಗ ದ್ರವಿಡರನ್ನು Mediterranean People ಭೂಮಧ್ಯ ಸಾಮುದ್ರಿಕರು ಎಂದು ಹೇಳುವುದುಂಟು. ಶ್ರೀ ಅರವಿಂದರು ದ್ರಾವಿಡ ಭಾಷೆ-ಕುಲಗಳನ್ನು ಆರ್ಯಜವೆಂದು ಸಪ್ರಮಾಣವಾಗಿ ಸಾಧಿಸಿದ್ದರಿಂದ ಶಿಲ್ಪದಲ್ಲಿ ದ್ರಾವಿಡವು ಗಾಂಧಾರ, ವೇಸರ ಶೈಲಿಗಳ ಸಹೋದರ ಎಂದು ತಿಳಿಯುತ್ತೇವೆ; ಅದು ಆರ್ಯಭಿನ್ನಕುಲೀನವಲ್ಲ.

೨. ಗಾಂಧಾರ=ಗಾಂಧಾರಿಗಳ (ಕಾಂದಹಾರಿಗಳ) ಒಬ್ಬ ದೊರೆ; ಸಪ್ತಸ್ವರಗಳಲ್ಲಿ ಮೂರನೆಯದು; ಒಬ್ಬ ವಿದ್ಯಾದೇವತೆ; ಒಂದು ಜಾತಿಯ ನೊಣ; ಶಿಲ್ಪದಲ್ಲಿ ಔತ್ತರೇಯ ಪ್ರದೇಶದ ಒಂದು ಶೈಲಿ; ಗಂಧರ=ವಿಶ್ವಾವಸು, ವಾಯುಕೇಶ; ದಿವ್ಯ ಜಲವಾಯುಪ್ರದೇಶ; ಗಂಧರ್ವನು ಸೋಮಪಾಲಕನು, ಸೋಮವಿಜ್ಞಾನಿ, ಸೋಮೌಷಧನಿರ್ಮಾಪಕ ಅಥವಾ ಸ್ವತಃ ಸೋಮ (ಚಂದ್ರ ಯಾ ದಿವ್ಯೌಷಧ); ಯಮಯಮಿಗಳೆಂಬ ಪ್ರಥಮ ಮಾನವದ್ವಯದ ತಂದೆ; ಗಂಧರ್ವರು ವರುಣಸೇವಕರು (ಅಪ್ಸರೆಯರು ಸೋಮಸೇವಿಕೆಯರು); ನಕ್ಷತ್ರಗತಿನಿಯಾಮಕರು; ದಿವ್ಯಗಾಯಕರು; ಪ್ರಜಾಪತಿಪುತ್ರರು; ದೇವರ್ಷಿ ಪುರೋಹಿತರು; (ಪ್ರಜಾಪತಿ=ಬ್ರಹ್ಮ=ಕಶ್ಯಪ) ಮುನಿ; ೧೪ನೆಯ ಕಲ್ಪ; ಭಾರತದ ಒಂಭತ್ತು ಖಂಡಗಳಲ್ಲಿ ಒಂದು; ಶಿಲ್ಪದಲ್ಲಿ ಗಾಂಧಾರವು ವೇಸರ ದ್ರಾವಿಡಗಳಿಂದ ಬೇರೆಯಾದ ಶೈಲಿ.

೩. ವೇಸರ=ಗಾಂಧಾರ ಕುದುರೆಯಾದಾಗ ವೇಸರವು ಹೇಸರಕತ್ತೆ. ಶಿಲ್ಪದಲ್ಲಿ ಗಾಂಧಾರ-ದ್ರಾವಿಡಮಧ್ಯವರ್ತಿ, ಉಭಯಲಕ್ಷಣಗಳನ್ನು ತೋರಿಸಲರ್ಹತೆಯುಳ್ಳದ್ದು. ಒರಿಸ್ಸದಲ್ಲಿ ೪ನೆಯದೆಂದು ಹೇಳಬಹುದಾದ ನಾಗರಶೈಲಿ ರೂಢ.

೪. ದ್ರಾವಿಡೇತರ ಶೈಲಿಯಲ್ಲಿ ಗರ್ಭಗುಡಿಗೆ ಶಿಖರವೇ ಪ್ರಧಾನವು. ಬೌದ್ಧರ ಗಾಂಧಾರವು ಕುಸುರುಗೆಲಸಕ್ಕೇ ಮೀಸಲು. ವೇಸರವು ಶಿಖರ ಪ್ರಧಾನ (ವಿಮಾನಪ್ರಧಾನ); ಅದಕ್ಕೆ

ದ್ರಾವಿಡದ ಶಿಖರರಹಿತ ದ್ವಾರಗೋಪುರಗಳಿಲ್ಲ. ಗಾಂಧಾರವನ್ನು ಬೌದ್ಧಶಿಲ್ಪವೆಂದರೂ ಎನ್ನಬಹುದು; ದ್ರಾವಿಡವನ್ನು ದಾಕ್ಷಿಣಾತ್ಯ ಶಿಲ್ಪವೆಂದೂ ಹೇಳಬಹುದು. ವೇಸರ ಸಂಮಿಶ್ರ, ಪರಿವರ್ತನೀಯ, ಕಲ್ಯೈಕೋದ್ದೇಶಬದ್ಧ; ಕದಂಬಾದಿ ರಾಷ್ಟ್ರಕೂಟ ಹೊಯ್ಸಳಾಂತ ಕರ್ಣಾಟಕೀಯವು ವೇಸರ ಅಥವಾ ನಾಗರ; ಈ ಶಿಖರಗಳಲ್ಲಿ ವೈವಿಧ್ಯವಿದೆ.

೫. ಇವೆಲ್ಲಾ ಗಣ್ಯವಾಗಿ ಸೌಧರಚನಾ ಶೈಲಿಗಳಾದುದರಿಂದ ಭಿನ್ನವಾಗಿವೆ. ಇವು ವಾಸ್ತುಶಿಲ್ಪಗಳು. ಗರ್ಭಗುಡಿಯು ಯಜ್ಞವೇದಿಕೆಯ ಪರ್ಯಾಯವು. (ಸು. ಕ್ರಿ.ಶ ೪ನೆಯ ಶತಮಾನದಲ್ಲಿ ಆರಂಭ) ಗರ್ಭಗುಡಿಯ ಈ ರೂಪಗಳನ್ನು ಬ್ರಹ್ಮಾದಿಸ್ಥಾನಗಳ ಮೂಲಕ ರಚನಾಯೋಜನೆಯಲ್ಲಿ ಅದು ತೋರಿಸುತ್ತದೆ. ದೇವತಾಮೂರ್ತಿಗಳ ಆಕೃತಿಗಳು, ಆಯುಧಗಳು ಮತ್ತು ವಾಹನಗಳು ಮಾತ್ರ ಸರ್ವಭಾರತಸಾಧಾರಣ. ಲಿಂಗವು ನಿರಾಕಾರ ಸೂಚಕ, ಮೂರ್ತಿಯು ಸಾಕಾರ ಸೂಚಕ. ಪೀಠಗಳಲ್ಲಿ ಚತುರ್ಭುಜಾಕೃತಿಯವು ನಾಗರ; ಅಷ್ಟಪಟ್ಟಿಯಾಕೃತಿಯವು ದ್ರಾವಿಡ; ವೃತ್ತಾಕೃತಿಯವು ವೇಸರ; ಧಾರಾಪೀಠವು ಸರ್ವಸಾಧಾರಣ. ಉಪವಿಭಾಗಸಮೇತವಾಗಿ ಎಲ್ಲ ಪೀಠಜಾತಿಗಳ ಸಂಖ್ಯೆಯು ಒಟ್ಟು ೧೪–ಚತುರ್ಭುಜದಿಂದ ಷೋಡಶಭುಜದವರೆಗೆ ಇವು ಅಪರಿವರ್ತನೀಯ. ಮೂರ್ತಿಗಳ ಅಭಯ–ವರದಹಸ್ತಾದಿಗಳೂ ಹಾಗೇ ಏಕೈಕ ಮಾದರಿಯವುಗಳು. ಚಿನ್ಮುದ್ರಾ–ಧ್ಯಾನಮುದ್ರಾದಿಗಳೂ ತದ್ವದಪರಿವರ್ತನೀಯ. ಆಯಾ ದೇವತೆಗಳ ವಾಹನ–ಆಯುಧಾದಿಗಳೂ ಪರ್ಯಾಯರಹಿತ. ಕಿರೀಟಗಳ ವೈವಿಧ್ಯವು ವೇಸರಸೂಚಕವಾದರೂ ಸರ್ವಸಾಧಾರಣ; ವೈಯಕ್ತಿಕ ಶಿಲ್ಪಿ ಇವುಗಳ ರಚನೆಯ ವೈವಿಧ್ಯದ ಯೋಜನೆಯ ಔಚಿತ್ಯ ನಿರ್ಣಯದಲ್ಲಿ ಸ್ವತಂತ್ರನಾಗಿ ತೋರುತ್ತಾನೆ; ಅಲಂಕಾರ ನಿರ್ಮಾಣದಲ್ಲೂ ಹಾಗೇ. ಮೂಲತಃ ಅಷ್ಟದಿಕ್ಪಾಲಕರೂ ತ್ರಿಮೂರ್ತಿಗಳೂ ಸಪತ್ನೀಕರಾಗಿ ಸುನಿಶ್ಚಿತಸ್ವರೂಪವುಳ್ಳವರು; ಅವರ ಆಭರಣಗಳು ಭಿನ್ನವಾಗಬಲ್ಲವು. ಇಂದ್ರಾದಿಗಳ ಬಗೆಗಿನ ಯಜ್ಞಕ್ಕೆ ಪರ್ಯಾಯವಾಗಿ ಕ್ರಿ.ಪೂ. ೪ನೆಯ ಶತಮಾನದಲ್ಲಿ ತ್ರಿಮೂರ್ತಿಗಳು ಮುಖ್ಯರೂ, ಇಂದ್ರಾದಿಗಳು ದೇವಸ್ಥಾನದ ಕಾವಲುಗಾರರೂ ಆದರು. ದೇವತೆಗಳಲ್ಲಿ ತ್ರಿಮೂರ್ತಿಗಳು ಸಪತ್ನೀಕರಾಗಿ ಪ್ರಧಾನ ಆದರು. ಸೃಷ್ಟಿ–ಸ್ಥಿತಿ–ಲಯಕರ್ತರಾದ ತ್ರಿಮೂರ್ತಿಗಳು ಅವರವರ ಕ್ಷೇತ್ರಗಳಲ್ಲಿ ಏಕೈಕ ವೀರರು; ಅವರ ಪತ್ನಿಯರು ಅವರ ಸಾಕಾರ ಶಕ್ತಿಗಳು; ಈ ಮಹಾದೇವತ್ರಯದಲ್ಲಿ ಸದಾ ಸಹಕಾರವೇ ಗಣ್ಯ ಮತ್ತು ಅತ್ಯಂತಿಕ. ದೇವತೆಗಳಾದ ಅವರೂ ಅವಿಚ್ಛಿನ್ನಾಕಾರರು, ನಿತ್ಯ ಯೌವನಯುಕ್ತರು ಮತ್ತು ಅನಿಮಿಷರು ಹಾಗೂ ಸತ್ವವಿಭೂತಿಪ್ರಧಾನರು; ಅಲ್ಲದೆ ಮೃತ್ಕಾಯ, ದಾರುಕಾಯ, ಅಶ್ಮಕಾಯ ಹಾಗೂ ಲೋಹಕಾಯಗಳನ್ನುಳ್ಳವರು. ಲಿಂಗ (ಸಾಲಿಗ್ರಾಮಾದಿ) ರೂಪಗಳಲ್ಲಿ ಲಿಂಗಭೇದವಿಲ್ಲ.* ರೂಢಿಬಲದಿಂದ ಶಿವ–ಬ್ರಹ್ಮರಿಗೆ ಲಿಂಗವನ್ನೂ, ವಿಷ್ಣುವಿಗೆ ಸಾಲಿಗ್ರಾಮವನ್ನೂ ಮೀಸಲಿಡಲಾಗಿದೆ. ಆದರೆ ಪ್ರಾಚೀನ ಕಾಲದಲ್ಲಿ ಸರ್ಜನಸೂಚಕತೆಯ

---

* ಅವು ಸ್ತ್ರೀ–ಪುರುಷದೇವತೆಗಳಿಬ್ಬರಿಗೂ ಸಂಕೇತವಾಗಿವೆ.

ಪೀಠಸ್ಥತೆ ಇಲ್ಲ.+ ಲಿಂಗಗಳು ಮೇಲ್ಮುಖ (ಊರ್ಧ್ವಮುಖ) ಆಗಿರುತ್ತವೆ. ಸರ್ವದೇವತೆಗಳೂ ಊರ್ಧ್ವರೇತಸರಲ್ಲದೆ ಅದಿವ್ಯರಂತೆ ಅಧೋರೇತಸರಲ್ಲ. ಅವರ ಸಂತತಿ ಹೆಚ್ಚಾಗಿ ಮನಃಸಂಕಲ್ಪರೇತೋಜಾತ. ರೇತಃ ಕಾಮಃ ಕ್ರಿಯಾಶಕ್ತಿರಿತ್ಯನರ್ಥಾಂತರಂ; ಪ್ರಣೋದರೂಪಂ. ಅವತಾರದ ಉದ್ದೇಶವು ಭಗವದ್ಗೀತೆಯಲ್ಲಿ ಹೇಳಿದ ಭಯವನ್ನು ತಪ್ಪಿಸುವುದು– "ಉತ್ಸೀದೇಯುರಿಮೇಲೋಕಾಃ" "ಧರ್ಮಸಂಸ್ಥಾಪ ನಾರ್ಥಾಯ"; ಮಾನವತೆಯ ದೈವೀಕರಣ– ("The aim of life is always better life morally") ಅದರಿಂದಲೇ ಮಾನಸಾರ ಮಹರ್ಷಿಯು ಮನಸ್ಸಿನ ಅವ್ಯಗ್ರತೆಯ ಯಾ ಕೇಂದ್ರೀಕರಣದ ಸಲುವಾಗಿ ಸಾಧಕರಿಗೆ (Spiritual Aspirants) ಶಿಲ್ಪಾಕಾರವು ಅಗತ್ಯವೆಂದದ್ದು ಸಮರ್ಥನೀಯ. ಬುದ್ಧ್ಯತೀತ ಆದಿಕಾರಣವನ್ನು ಗ್ರಹಿಸಲು ಬೇಕಾದ ಬುದ್ಧಿಸ್ವರೂಪವನ್ನು ರೂಪಿಸಿಕೊಳ್ಳುವುದೇ ಉಪಾಸನಾದಿ ಸಾಧನಗಳ ಉದ್ದೇಶವು. ಪ್ರತಿಯೊಂದೂ ಇಲ್ಲಿ ಅಸೀಮ ಸತ್ಯದ ಸಂಕೇತ. ಇದಕ್ಕೆ ವೇದವೇ ನಿದರ್ಶನವಾಗಿದೆ. ಅದು ಆದಿಕಾರಣದ ಬಹುತ್ವವನ್ನು ಖಂಡಿಸಿದೆ, ಆದರೆ ದುರ್ಬಲಾತ್ಮರ ಮೇಲಿನ ಕರುಣೆಯಿಂದ ಜ್ಞಾನಯುಕ್ತ ಭಕ್ತಿಗೆ ಗುರಿಯನ್ನಾಗಿ ತಿಳಿದುಕೊಳ್ಳಲು ದೇವತಾನಾಮರೂಪಗಳನ್ನು ಆದಿಕಾರಣಕ್ಕೆ ಹೇಳಿದೆಯಲ್ಲವೇ? "ಸರ್ವಕಾರಣಮಿಾಶ್ವರಂ" (The source or cause of all kinds of energies is the Supreme One)

೬. ಶಿಲ್ಪ=ರಂಗುರಂಗಾಗಿ ಮಾಡುವುದು, ಬಣ್ಣಬಣ್ಣದ ನೋಟ, ಅಲಂಕರಣ, ಆಭರಣ, ಕಲಾಕೃತಿ ("ಕಲಾಸಂಕಲನ ಪ್ರಜ್ಞಾ ವಿದ್ಯಾಃ ಶಿಲ್ಪಾದಿ ಕರ್ಮಸು"), ಮಾನವನ ಕೈಕೆಲಸ, ಮಾನವನಿರ್ಮಿತ ಕುಶಲಕರ್ಮ, ಗುಡಿಗಾರಿಕೆ, ಬಡಿಗಕಲೆ, ವಾಸ್ತುಶಿಲ್ಪ, ಸುವರ್ಣಶಿಲ್ಪ, ಕಮ್ಮಾರಿಕೆ, ನಟನೆ, ನರ್ತನ, ಸಂಗೀತ, ವೈದ್ಯಕೀಯ, ಕವಿತಾನಿರ್ಮಾಣ ಮುಂತಾದ ಬಾಹ್ಯ ಕಲೆಗಳಲ್ಲದೆ, ಮುತ್ತು ಕೊಡುವುದು, ಆಲಿಂಗನ, ಹಾವಭಾವಾದಿಪ್ರದರ್ಶನ ಮುಂತಾದ ಗುಪ್ತಕಲೆಗಳೂ "ಶಿಲ್ಪಗಳು." ಪುಂಸ್ತ್ರೀ ವಿಗ್ರಹಗಳ ಭಂಗಿಗಳು ಬೇರೆಯಾಗಿರುವುದು ಹೆಚ್ಚು. "ಶಿಲ್ಪಸರ್ವಸ್ವಸಂಗ್ರಹ" ಎಂಬುದು ಒಂದು ಪ್ರಸಿದ್ಧ ಶಿಲ್ಪಶಾಸ್ತ್ರಗ್ರಂಥ; ಹಾಗೇ ಶಿಲ್ಪಾರ್ಥ ಸಾರವೂ. ಶಿಲ್ಪಿ =Professional Architect or Sculptor. ಶಿಲ್=ಶಿಲತಿ= ಹೆಕ್ಕು, ಸಂಕಲಿಸು. ಅದೇ ಮೇರೆಗೆ ಮೂರ್ತ=ಸಾಕಾರ, ಸಕ್ರಿಯ; ಒಂದು ನಿರ್ದಿಷ್ಟ ಆಕೃತಿಯುಳ್ಳ ಪದಾರ್ಥ; ಜಾತವಾದ ಅವಯವಿ. ಪೃಥಿವಿ, ಅಪ್, ತೇಜಸ್ಸು, ವಾಯುಗಳು ಮೂರ್ತದ್ರವ್ಯಗಳು; ಗಡಿಮಿತಿಗಳಿರುವ ವಸ್ತುಗಳು. ರೂಪವೆಂದರೆ ಆಕೃತಿ ಹಾಗೂ ಬಣ್ಣ; ನಿರ್ಮೂರ್ತಕ್ಕಿವುಗಳಿಲ್ಲ; ರೂಪ=ಗುಣ; ಪ್ರತಿರೂಪ; ದನಕರು; ಧ್ವನಿ ಯಾ ವರ್ಣ. ಆಕಾರಯೋಜಕ ವಿನ್ಯಾಸಕಾರ ಇತ್ಯಾದಿ. ಶಿಲ್ಪಾಜೀವನು ಶಿಲ್ಪಿಯಾದರೆ, ರೂಪಾಜೀವೆಯು ಸೂಳೆ. ಕ್ರಿಯಾವತ್ವಂ ಮೂರ್ತತ್ವಂ; ಸಾಕಾರವು ನಿರಾಕಾರದ ಕಾರ್ಯಸಾಧನ.

---

+ ಪೀಠವು ಸ್ತ್ರೀಯೋನಿಯಲ್ಲ. ಲಿಂಗವು ಪುರುಷಜನನೇಂದ್ರಿಯವಲ್ಲ; ಅದು ನಿಜವಾಗಿದ್ದರೆ ಸ್ತ್ರೀ ದೇವತೆಯನ್ನೇಕೆ ಪುಂಜನನೇಂದ್ರಿಯ ರೂಪದ ಪೀಠದಲ್ಲಿ ಪ್ರತಿಷ್ಠಾಪಿಸಲಿಲ್ಲ? ಲಿಂಗವನ್ನು ಏಕೆ ತಲೆ ಕೆಳಗೆ ಮಾಡಿ ಪೀಠದಲ್ಲಿ ಪ್ರತಿಷ್ಠೆ ಮಾಡಲಿಲ್ಲ?

೭. ಶಿಲ್ಪದಲ್ಲಿ ಅವಯವವು ರೂಪ ಯಾ ಅಲಂಕಾರ. ಮೂರ್ತಿ ಜೀವಂತವಾಗಿ ತೋರಬೇಕಾದರೆ ಅದರ ಕಣ್ಣು–ಬಾಯಿಗಳ ಭಾವಾವಿಷ್ಕಾರವು ಭಾರತದಲ್ಲಿ ಬಹುಮುಖ್ಯ. ಕೈಕಾಲುಗಳ ಭಂಗಿಗಳೂ ಹಾಗೇ. ಬಡೋದೆಯ ವಸ್ತುಸಂಗ್ರಹಾಲಯದಲ್ಲಿ ನವರಸಗಳನ್ನು ಮುಖಾದಿಗಳ ಮೂಲಕ ಮೂಡಿಸುವ ಭಿತ್ತಿಚಿತ್ರಗಳಿವೆ. ಮುದ್ರೆಗಳು ಅಂತರ್ಭಾವ ವ್ಯಂಜಕಗಳು; ಅವುಗಳಲ್ಲಿ ಕಣ್ಣು–ತುಟಿಗಳು ಮುಖ್ಯ. "ಮೂರ್ತೀ ರಸಾತ್ಮಿಕಾ ಶಿಲ್ಪಾಕೃತಿಃ" ರಸವಿಲ್ಲದಲ್ಲಿ (ರಸಪ್ರೇರಕತೆ ಇಲ್ಲದಲ್ಲಿ) ಕಲಾತ್ವವೇ ಇಲ್ಲ. ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಬೀಭತ್ಸ, ರೌದ್ರ, ಶಾಂತಿಗಳು ನವರಸಗಳು. ವಾಜಸನೇಯಿಸಂಹಿತೆಯಲ್ಲಿ 'ಶಿಲ್ಪ' ಶಬ್ದವು ಮೊದಲು ಪ್ರಯುಕ್ತವಾದುದು. ಶಿಲ್ಪಶಾಸ್ತ್ರವೆಂಬುದು ಕಾವ್ಯಶಾಸ್ತ್ರವಿದ್ದಂತೆ ಶಿಲ್ಪವಿದ್ಯಾವಿವರಣೆಯಾಗಿರುತ್ತದೆ.

೮. ಉತ್ತರ ಭಾರತದಲ್ಲಿ ದೇವರು ದೊಡ್ಡವನು; ಆದರೆ ಸಾಮಾನ್ಯವಾಗಿ ದೇವಸ್ಥಾನ ಸಣ್ಣದು. ದಕ್ಷಿಣದಲ್ಲಾದರೋ ದೇವರೂ ದೊಡ್ಡವನು, ದೇವಸ್ಥಾನವೂ ದೊಡ್ಡದು. ಶ್ರೀ ಅರವಿಂದರು ಪಾಂಡಿಚೇರಿಯಲ್ಲಿ ಕಂಡ "ಋತಂಬೃಹತ್" ಎಂಬ ದಿವ್ಯ ಸಾಕ್ಷಾತ್ಕಾರಕ್ಕಿವು ಸಂಕೇತ. ಈ ಬೃಹದಾಕಾರದ ಹಾಗೂ ಕುಸುರುಗೆಲಸದ ಕಲಾಪ್ರೇರಣೆಯು ಖಂಡಿತವಾಗಿಯೂ ಅವರ ದರ್ಶನಕ್ಕೆ ಪ್ರೇರಣೆ ಕೊಟ್ಟಿರಬೇಕೆನ್ನಿಸುತ್ತದೆ. "ಮೂರ್ತಿಶಿಲ್ಪ" ಎಂದರೆ ಏನೆಂಬುದನ್ನು ಜಗತ್ತು ಇಲ್ಲಿಯೇ ನೋಡಬೇಕು; ದೇವಾಲಯದ ಬೃಹದ್ ಗಾತ್ರವು ಕಾಂಚಿಯಿಂದ ಬನವಾಸಿಯ ಮಧುಕೇಶ್ವರ ದೇವಾಲಯದವರೆಗೂ ಎದ್ದುಕಾಣುತ್ತದೆ. ದೇವರ ಲಿಂಗವು ಪಟ್ಟದಕಲ್ಲಿನಲ್ಲೂ, ಬನವಾಸಿಯಲ್ಲೂ ಕಣ್ಣೆದುರೆದ್ದು ನಿಲ್ಲುತ್ತದೆ. ಹೆನ್ರಿಫೋರ್ಡ್, ರಾಕ್‌ಫೆಲ್ಲರುಗಳನ್ನು ಮೀರಿಸಿದ ತಿರುಪತಿಯ ತಿಮ್ಮಪ್ಪನು ಅಮೇರಿಕೆಯಲ್ಲಿ ಶಾಖೆಯನ್ನು ತೆರೆಯುತ್ತಾನೆ! ಯಕ್ಷಗಾನ ಆಟಗಳ ವೇಷ–ಭೂಷಣ, ಆಯುಧ, ಕಥಾವಸ್ತು, ನೃತ್ಯ, ಸಂಗೀತಾದಿಗಳಿಗೆ ಮೂಲಾದರ್ಶವಾಗಿದೆ ಮೂರ್ತಿಶಿಲ್ಪ. ಈ ಆದರ್ಶಗಳ ವಿಕಾರಗಳೀಗ ಯಕ್ಷರಂಗದಲ್ಲಿ ಅಧಿಕವಾಗುತ್ತಿವೆ. ಇದು ತಪ್ಪಬೇಕು.

೯. ಸಾಕಾರೋಪಾಸನೆಯ ವಿಕೃತತೆಯನ್ನು ದೆವ್ವ–ಭೂತಗಳ, ಹರಕೆ–ಹಾಡಿಗಳ, ಬಲಿ–ವಧೆಗಳ ರೂಢಿಯಲ್ಲಿ ಕಾಣಬಹುದು. ಇದು ನಿಂದ್ಯ–ತಾಮಸಿಕವಾದುದರಿಂದ. ಆದರೆ 'ಮೆಸ್ಮೆರಿಜಂ'ಗತವಾದ ಮನಃಶಾಸ್ತ್ರದಂತೆ ಗುರೂಕ್ತ ಅಥವಾ ಬಲಿಷ್ಠ. ರೂಢಿಬದ್ಧ ದೇವತಾಕೃತಿ–ನಿರಾಕೃತಿ ಚಿಹ್ನಗಳ ಅಳತೆ ಯಾವಾಗಲೂ ಶಾಸ್ತ್ರಸಿದ್ಧವಾಗಿದ್ದರೆ ಮಾತ್ರ ಸಫಲ ಎಂಬುದು ಗೀತೋಕ್ತ ("ಯಃ ಶಾಸ್ತ್ರವಿಧಿಮುತ್ಸೃಜ್ಯ ಕ್ರಿಯತೇ ಕಾಮಕಾರತಃ" ಇತ್ಯಾದಿ). ಆದುದರಿಂದ ಭಾರತೀಯ ಬುದ್ಧ, ಜಿನ, ಶಿವ, ವಿಷ್ಣು ಹಾಗೂ ಅವರ ಪತ್ನಿಯರನ್ನು ನಾವು ಎಲ್ಲಿ ಹೋದರೂ ಸುಲಭವಾಗಿ ಗುರುತಿಸಲು ಅನುಕೂಲವಾದ ಶಾಸ್ತ್ರಲಕ್ಷಣಗಳನ್ನು ಶಿಲ್ಪಶಾಸ್ತ್ರವು ತಿಳಿಸುತ್ತದೆ. ಇದು ಭಾರತೀಯ ಭಾವೈಕ್ಯದ ಶಿಲಾಲಿಪಿ; ಲಿಂಗವು ಸಮಾನ ಗೌರವದ ಭಾವೈಕ್ಯ ಶಿಲಾಲೇಖ.

೧೦. ದಿ. ಸುರೇಂದ್ರನಾಥ ದಾಸಗುಪ್ತರು ಹೇಳಿದ ಪೌರಾಣಿಕ ಕ್ರಾಂತಿಯ ವಿಚಾರವನ್ನೂ ಉತ್ತರ ಭಾರತದಲ್ಲಿ ದೊರೆತ ಮೊದಲ ದೇವಾಲಯದ ಅವಶೇಷದ ಕಾಲವನ್ನೂ ಮಾನಸಾರ ಮಹರ್ಷಿಯ ಶಿಲ್ಪವ್ಯಾಖ್ಯೆಯನ್ನೂ ದಿ. ಸ್ಟೆಲ್ಲಾ ಕ್ರಾಂರಿಸ್ಕ್ ಬರೆದ "Indian Architecture and Sculpture" ಎಂಬ ಗ್ರಂಥವನ್ನೂ ದಿ. ಗೋಪೀನಾಥರಾಯರ The South Indian Iconography ಎಂಬ ಉದ್ಗ್ರಂಥವನ್ನೂ, ಶ್ರೀ ಅರವಿಂದರ "The Secret of the Veda" ಎಂಬ ಮರ್ಮಿಕ ಹೆಬ್ಬೊತ್ತಗೆಯನ್ನೂ ಓದಿ ಜೀರ್ಣಿಸಿ, ರಕ್ತಗತಮಾಡಿಕೊಂಡು ಅನಂತರ ಇತರ ಪುರಾಣೋಕ್ತಿಗಳನ್ನೂ ಇತರ ಶಿಲ್ಪಶಾಸ್ತ್ರಗಳನ್ನೂ ಅಳೆದು ನೋಡಿ, "God made man on his own image but Man made God on his own images" ಎಂಬ ಮಹಾತ್ಮಾ ಗಾಂಧಿದರ್ಶನವನ್ನು ಈ ಗ್ರಂಥಕ್ಕೆ ಹಿನ್ನೆಲೆಯನ್ನಾಗಿ ತೆಗೆದುಕೊಳ್ಳಲಾಗಿದೆ. ಮಹಾಭಾರತ–ರಾಮಾಯಣಗಳಂತೂ ಅವಿಸ್ಮರಣೀಯ. ಅರ್ಜುನನ ಸ್ಥಂಡಿಲೋಪಾಸನೆ, ರಾಮನ ಆದಿತ್ಯಹೃದಯ ಜಪ ಎಂಬಿವು ಮೂರ್ತಿಗಳ ಅರ್ಚನೆ ಹಾಗೂ ಧ್ಯಾನಗಳಿಗೆ ಮಹೋದಾರಣೆಗಳಾಗಿವೆ. ಆದರೆ ಈಯೆಲ್ಲಾ "ಏಕೋಽಹಂ ಬಹುಸ್ಯಾಂ ಪ್ರಜಾಯೇಯ" ಎಂಬುದರ ಎದುರಿಗೆ ಅರ್ಚಕನು ವೇದಾರ್ಥಾನುಸಾರವಾಗಿ "ಬಹುರಹಂ ರೂಪೇಷುನಾಮಸು ಚ ಏಕ ಏವೋಽಹಂ ಪಾರಮಾರ್ಥಿಕತಯಾ" ಎಂಬ ಮಾತನ್ನು ಮರೆಯದಿರಬೇಕು; ಇಲ್ಲವಾದರೆ ಅವನು ಭೂತಸರ್ಪಪಿಶಾಚಾದಿಗಳ ಪೂಜೆಗಿಳಿದು ಅಧಃಪಾತ ಹೊಂದದಿರನು.

**"ಏಕಂ ಸದ್ವಿಪ್ರಾ ಬಹುಧಾ ವದಂತಿ**
**ಅಗ್ನಿಂ ಯಮಂ ಮಾತರಿಶ್ವಾನಮಾಹುಃ..."**
**"ಸರ್ವಂ ಖಲ್ವಿದಂ ಬ್ರಹ್ಮ; ತಜ್ಜಲಾನಿತಿ ಶಾಂತ ಉಪಾಸೀತ"**
**"ಸದೇವಸೋಮ್ಯೇದಮಗ್ರೇ ಆಸೀತ್**
**ಏಕಮೇವಾದ್ವಿತೀಯಂ ಬ್ರಹ್ಮ"**
**"ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ"**
**"ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚಭವ್ಯಂ"**

೧೧. ಆಗಮ=ಪರಂಪರಾಗತ ವಿದ್ಯೆ; ಬ್ರಾಹ್ಮಣ ಗ್ರಂಥಗಳು, ಸಾಂಪ್ರದಾಯಿಕ ಪವಿತ್ರ ಗ್ರಂಥ; ಶಿವ–ಶಕ್ತಿಯರ ಯೌಗಿಕ ಪೂಜಾ ವಿಧಾನ, ಪೂಜಾತಂತ್ರ; ಆನುಬಂಧಿಕ ಪಠ್ಯ ಎಂಬೀ ಅರ್ಥಗಳಲ್ಲಿ ಪ್ರಸ್ತುತವಾದುದು ಪೂಜಾವಿಧಾನವೆಂಬುದು. ೬೪ ಆಗಮಗಳು (ತಂತ್ರಗಳು) ಇದ್ದ ಪ್ರತೀತಿಯಿದ್ದರೂ ಉಪಲಬ್ಧ ಸಾಂದರ್ಭಿಕ ತಂತ್ರಗಳು ಯಾ ಆಗಮಗಳು ೨೮. ಇವೇ ನಮ್ಮ ಪರಂಪರಾಗತ ಶಿಲ್ಪಶಾಸ್ತ್ರಗಳ ಆಧಾರಗಳು. ಆಗಮಗಳು ಪುರಾಣಗಳ ಮಾತಾಪಿತರು.

೧೨. ಮೂರ್ತಿಶಿಲ್ಪಗಳ ಮೂಲ ಹೆಚ್ಚಾಗಿ ಪೌರಾಣಿಕ; ಮೂರ್ತಿಗಳು ಏಕಮೇವಾದ್ವಿತೀಯ ಸತ್ಯದ ಸಾಂದರ್ಭಿಕ ಅವತಾರಗಳು (DESCENT OF THE DIVINE). "ಧರ್ಮ ಸಂಸ್ಥಾಪನಾರ್ಥಾಯ" ಎಂಬುದು ಅವತಾರ ಕಲ್ಪನೆಯ ಬೀಜವು. ಆಸುರೀ ಸಂಪನ್ನಾಶವೇ ವಿಷ್ಣು–ಶಿವಾದಿಗಳ ಹಾಗೂ ಅವರ ಪತ್ನಿಯರ ಮತ್ತು ಗಣಗಳ ಅವತಾರದ ಉದ್ದೇಶವಾಗಿದೆ. ಆಸುರಿಯು ತಮಸ್ಸು, ಅಜ್ಞಾನ, ಭೌತಮಹತ್ವಾಕಾಂಕ್ಷೆಯಿಂದ ಹಿಂಸೆಗಿಳಿವ ದುರಹಂಕಾರ. ಅದೇ ಪಾಪ, ಅಧರ್ಮ, ಲೋಕಹಿತವಿರುದ್ಧವಾದ ಆಚಾರ. ರುದ್ರ–ವಿಷ್ಣುಗಳಿಬ್ಬರೂ ದೈತ್ಯಸಂಹಾರಕರು, ಅಸಾಧುಹಂತಾರರು.

೧೩. ವಿಗ್ರಹ, ಮೂರ್ತಿ, ಬೇರ ಎಂದರೆ ಒಂದೇ. ಅದು ಧರ್ಮವೀರರ ಮಹಾವಿಕ್ರಮಗಳ ಸ್ಮಾರಕ ಸಂಕೇತ. "ರಾಮಾದಿವತ್ ಪ್ರವರ್ತಿತವ್ಯಂ ನ ತು ರಾವಣಾದಿವತ್" ಎಂಬುದು ವಿಗ್ರಹಾರಾಧನೆಯು ಕಲಿಸುವ ಪಾಠ. ಈ ಉದ್ದೇಶವಿಲ್ಲದ ವಿಗ್ರಹಾರಾಧನೆ ಪೂರ್ಣ ಸಫಲವೆನ್ನಲು ಬಾರದು. ಪ್ರತೀಕ ಪೂಜೆಯು ಸಾಧಕನ ಐಕಾಗ್ರ್ಯವನ್ನಾಧರಿಸಿರುವುದರಿಂದ ಮತ್ತು ಅಹಂಕಾರ ತ್ಯಾಗಕ್ಕೆ ಬದ್ಧವಾಗಿರುವುದರಿಂದ ಅದನ್ನು ಉಪಾಸನೆ, ಭಕ್ತಿಯೋಗ ಎಂದೆಲ್ಲಾ ಹೇಳಿದರೂ ಅದು ಯಜ್ಞದ ಉದ್ದೇಶವನ್ನೇ ಉಳ್ಳದ್ದಾಗಿದೆ. ಯಜ್ಞವು ಸ್ವಸಮರ್ಪಣೆ.

೧೪. ಮೂರ್ತಿಗಳ ನಿಲುವುಗಳು; ಅಕಂಪಿತ, ಕಂಪಿತ, ಧೂತ, ವಿಧೂತ, ಪರಿವಾಹಿತ, ಆಧೂತ, ಅವಧೂತ, ಆಚಿತ, ನಿಕುಂಚಿತ, ಪರಾವೃತ್ತ, ಉತ್‌ಕ್ಷಿಪ್ತ, ಅಧೋಗತ, ಲಲಿತ ಎಂಬ ೧೩ ಶಿರೋಭಂಗಿಗಳು. ಭ್ರುಕುಟೀ ಮುಖಗಳು ೭; ವಿಭಾವ, ಅನುಭಾವ, ಸ್ಥಾಯಿ, ಸಂಚಾರಿ ಎಂಬೀ ನಾಲ್ಕು ಅವಸ್ಥಾ ದೃಷ್ಟಿಭೇದಗಳು; ಕಣ್‌ಗುಡ್ಡೆಯ ನಮೂನೆಗಳು ಒಂಭತ್ತು; ಮೂಗಿನ ಮುಖಗಳು ೧೬; ನಿಃಶ್ವಾಸಭೇದಗಳು ೯; ತುಟಿಗಳ ಮುದ್ರೆಗಳು ೧೬; ಗಲ್ಲದ ನಮೂನೆಗಳು ೭; ಕುತ್ತಿಗೆಯ ನಿಲುವುಗಳು ೯; ಕ್ರುದ್ಧ ಮುಖಮುದ್ರೆಗಳು ೧೬; ಹಸ್ತಭಂಗಿಗಳು ಮುಖ್ಯವಾಗಿ ೨; ಅವುಗಳಲ್ಲದೆ ಪತಾಕ, ತ್ರಿಪತಾಕ, ಕರ್ತರೀಮುಖ, ಅರ್ಧಚಂದ್ರ, ಉತ್ಕರಾಲ ಮತ್ತು ಶುಕತುಂಡ, ಮುಷ್ಟಿ, ಶಿಖರ, ಕಪಿತ್ಥ, ಖೇಟಕಾಮುಖ, ಸೂಚ್ಯಾಸ್ಯ, ಪದ್ಮಕೋಶ, ಅಹಿಶಿರ, ಮೃಗಶೀರ್ಷಕ, ಕಾಂಬೂಲ, ಕಾಲಪದ್ಮ, ಚತುರಭ್ರಮರ, ಹಂಸಾಸ್ಯ, ಹಂಸಪಕ್ಷ, ಸಂದಂಶ, ಮುಕುಲ, ಊರ್ಣನಾಭ, ತಾಮ್ರಚೂಡ– ಎಂಬ ೨೪ ಉಪಭೇದಗಳಿವೆ. ಅಸಂಯುತ ಕರಭಂಗಿಗಳು ೧೩–ಅವಾವುವೆಂದರೆ; ಅಂಜಲಿ, ಕಪೋತ, ಕರ್ಕಟ, ಸ್ವಸ್ತಿಕ, ಕಟಕ, ವರ್ಧಮಾನ, ಅಸಂಗ, ನಿಷಧ, ದೋಲ, ಪುಷ್ಪಪುಟ, ಪ್ರಕರ, ಗಜದಂತ, ಬಹಿಸ್ತಂಭಗಳು. ಎದೆಯ ಆಕೃತಿಗಳು–ಆಭುಗ್ನ, ನರ್ತನ ಇತ್ಯಾದಿ ಐದು. ಹೊಟ್ಟೆ–ದುರತಿಕ್ಷಾಮ, ಖಂಡ, ಪೂರ್ಣ ಎಂದು ತ್ರಿವಿಧ; ಎದೆಯ ಮೇಲಿಡುವುದು ಐದು ಬಗೆಯ ಹಸ್ತಮುದ್ರೆಗಳು. ತ್ರಿಭಂಗಿಯಂತೆ ಆಭುಗ್ನವೊಂದು ನರ್ತನಭಂಗಿ–ಮಗ್ಗುಲುಗಳ ವರಸೆಗಳು ಐದು. ಹಾಗೆ ತೊಡೆಯ ನಿಲುವುಗಳೂ ಐದು; ಪಾದನ್ಯಾಸಗಳು

ಅನೇಕ; ಅವುಗಳ ಬಗ್ಗೆ ನಾಟ್ಯಶಾಸ್ತ್ರವನ್ನೋದಬೇಕು. ಏಕೆಂದರೆ, ಶಿಲ್ಪಶಾಸ್ತ್ರದ ವಿಗ್ರಹಗಳ ಭಾವ–ಹಾವಾದಿಗಳಿಗೆ ಅದೇ ಪರಮಾಧಾರ.

೧೫. ಮೇಲೆ ಹೇಳಿದ ಅಂಗೋಪಾಂಗ* ವಿನ್ಯಾಸಗಳು ಅಭಿವ್ಯಕ್ತಗೊಳಿಸುವುದು ೯ ಸ್ಥಾಯಿಭಾವಗಳನ್ನು, ೧೧ ಸಾತ್ವಿಕ ಭಾವಗಳನ್ನು ಮತ್ತು ೩೩ ಸಂಚಾರಿ ಭಾವಗಳನ್ನು. ದೇವತಾ ಮೂರ್ತಿಗಳಲ್ಲೂ ಉತ್ತಮಾಧಮ ಮಧ್ಯಮ ಅಥವಾ ಸಾತ್ವಿಕ, ತಾಮಸ, ರಾಜಸ ಮಾದರಿಗಳಿವೆ, ಬ್ರಹ್ಮಗುಣ, ವಿಷ್ಣುಗುಣ, ರುದ್ರಗುಣಗಳುಳ್ಳವುಗಳಾಗಿವೆ. ಕ್ಷುದ್ರದೇವತೆಗಳು, ಮಹಾದೇವತೆಗಳು ಎಂಬ ಭೇದವನ್ನು ಮಾಡಲಾಗಿದೆ. ಈ ಭೇದಗಳೆಲ್ಲಾ ಸಾಂಸ್ಕೃತಿಕ ತಾರತಮ್ಯದಿಂದ ಕಲ್ಪಿತವಾದವುಗಳು. ಆದರೆ "ರುದ್ರಾಣಾಮಸ್ಮಿ ಶಂಕರಃ" ಎಂದು ಗೀತೆ ಹೇಳಿರುವುದರಿಂದ ವಿಷ್ಣು–ಶಿವರಲ್ಲಿ ತಾರತಮ್ಯವಿಲ್ಲ. ಶಿವನು ವಿಷ್ಣುವಿನ ಅಕ್ಕನ ಗಂಡ; ಬ್ರಹ್ಮನು ವಿಷ್ಣುವಿನ ಮಗ ಎನ್ನುತ್ತದೆ ಪುರಾಣ. ಶಿವನಿಲ್ಲಿ ರುದ್ರನು.

೧೬. ಮನಃಶಾಸ್ತ್ರದಂತೆ, ಎಷ್ಟು ಜನ ಭಕ್ತರಿದ್ದಾರೋ ಅಷ್ಟು ದೇವತಾಕಲ್ಪನೆಗಳಿವೆ. ಒಬ್ಬೊಬ್ಬ ದೇವತೆಯ ಕಲ್ಪನೆಯೂ ವಿವಿಧ ಜನರಿಗೆ ವಿವಿಧವಾಗಿ ತೋರಬಹುದು. ಆದರೆ ಈ ಅವ್ಯವಸ್ಥೆಯನ್ನು ತಪ್ಪಿಸಲೆಂದು ಶಿಲ್ಪಶಾಸ್ತ್ರಜ್ಞರು ಆ ಕಲ್ಪನೆಗಳನ್ನು ವಿಶಿಷ್ಟ ಲಕ್ಷಣಗಳಿಂದ ಪರಿಸೀಮನಗೊಳಿಸಿದ್ದಾರೆ. ಆದರೂ–

**"ಗುಡ್ಡ ಗುಡ್ಡ ಸ್ಥಾವರ ಲಿಂಗ**
**ಅವಕ ಅಭ್ಯಂಗ**
**ಮಾಡ್ತಾವನ್ನೋ ಹಂಗ"**

ಎಂದು ಅಂಬಿಕಾತನಯದತ್ತರು ಹೇಳಿದ್ದು ಸತ್ಯ. ಮೂರ್ತಿಪೂಜಕರಲ್ಲವೆಂಬವರಿಗೂ ಪ್ರಾರ್ಥನೆಗೆ ಆಯಾ ಮತಸ್ಥಾಪಕ ವರ್ಣಿಸಿದ ಲಕ್ಷಣಗಳನ್ನುಳ್ಳ ಪ್ರತೀಕವೋ, ಪ್ರತಿಮೆಯೋ ಸಂಕೇತವೋ, ಚಿಹ್ನವೋ ಮನದಲ್ಲಿ ಇದ್ದೇ ಇರುತ್ತದೆ.

ಒಂದು ಸಣ್ಣ ಚುಕ್ಕೆ ಕೂಡಾ ಆಕಾರವೇ. ಈ ಅರ್ಥದಲ್ಲಿ ಜಗತ್ತಿನಲ್ಲಿ ಅಮೂರ್ತ್ಯುಪಾಸಕರೇ ಇಲ್ಲ. ಇದ್ದವರು ಜ್ಞಾನಿಗಳು; ಆರ್ತ, ಜಿಜ್ಞಾಸು, ಅರ್ಥಾರ್ಥಿಗಳಲ್ಲ. ಸ್ವಾಮಿ ವಿವೇಕಾನಂದರೆಂದರು: "ಸಾಮಾನ್ಯವಾಗಿ ನಮ್ಮ ಭಕ್ತಿಯು ಪ್ರಯೋಜನೋದ್ದೇಶವುಳ್ಳದ್ದು (utilitarian), ದೇವರು ಸರ್ವಶಕ್ತನಾದುದರಿಂದ ಮತ್ತು ಪೂರ್ಣ ದಯಾಶೀಲನಾದುದರಿಂದ ನಮ್ಮ ದುಃಖಗಳನ್ನು ಪರಿಹರಿಸಿ ಸುಖಗಳನ್ನು ಕೊಡಲಿ ಎಂಬುದು ಹತ್ತು ಸಮಸ್ತರ ಉದ್ದೇಶ. ಇದು ನಿಜವಾದ ಭಕ್ತಿಯಲ್ಲ, ಆದರೆ ಕ್ಷಮ್ಯ. ಶ್ರೀ ಶಂಕರಾಚಾರ್ಯರೂ ಉಪನಿಷತ್ತುಗಳೂ ವಿವರಿಸಿದಂತೆ ಈ ಉಪಾಸನೆಗಳು ಉತ್ತರೋತ್ತರ ಉದಾತ್ತತರ ಭಾವನೆಗಳನ್ನು ಬೆಳೆಸಿಕೊಳ್ಳಲು ನೆರವಾಗಬಹುದು.

---

* ಅಂಗಗಳು ಆರು, ಉಪಾಂಗಗಳು ಹನ್ನೊಂದು=೧೭. ಈ ಅಂಗ ಪ್ರತ್ಯಂಗಗಳ ಮೂಲಕ ಭಾವಾಭಿವ್ಯಕ್ತಿಯನ್ನು ಮಾಡುತ್ತಿರುವಂತೆ ಮೂರ್ತಿರಚನೆ ಮಾಡುವುದೇ ಮೂರ್ತಿವಿದ್ಯೆಯು.

“ತಪೋಯಜ್ಞದಾನಾದಿಭಿಃ ಶುದ್ಧ ಬುದ್ಧಿಃ” ಎಂದಂತೆ ಪೂಜೆಗಳ ಉನ್ನತೋನ್ನತತರ ಪ್ರಜ್ಞಾಸ್ತರಗಳ ಸಿದ್ಧಿಯಿಂದ ಸಂಪ್ರಜ್ಞಾತ ಸಮಾಧಿಯ ವಿವಿಧ ಹಂತಗಳನ್ನು ದಾಟಿ ಜನ್ಮಜನ್ಮಾಂತರದಲ್ಲಾದರೂ ಅಸಂಪ್ರಜ್ಞಾತ ಸಮಾಧಿಯೆಂಬ ಪರಾಕಾಷ್ಠೆಯನ್ನು ಜೀವಾತ್ಮನು ತಲುಪಬಹುದು, ಇದೇ ಆರ್ಯಧರ್ಮದ ಮಹತ್ತಮ ಆಶಾವಾದವು.



---

ಟಿಪ್ಪಣಿ: “ಭಕ್ತಾರ್ಥಂ ಸಗುಣೋ ಜಾತೋ ನಿರಾಕಾರೋಽಪಿ ಚಿನ್ಮಯಃ”
“ಚಿನ್ಮಯಸ್ಯಾದ್ವಿತೀಯಸ್ಯ ನಿಷ್ಕಲಸ್ಯಶರೀರಿಣಾಂ
ಉಪಾಸಕಾನಾಂ ಕಾರ್ಯಾರ್ಥಂ ಬ್ರಹ್ಮಣೋ ರೂಪಕಲ್ಪನಾ”
“ಅಹಂಕಾರಾವೃತಂ ವಿಶ್ವಂ ಸಂಬದ್ಧೇನಾನೃತೇ ನ ಹಿ”
“ಆಪ್ತವಕ್ತ್ರಾಗತಂ ಶಾಸ್ತ್ರಂ ಆಗಮಶ್ಚಾಭಿಧೀಯತೇ
ಆಗಮಪ್ರತಿಮಾನಂ ಚ ತತ್ವನಿರ್ಣಾಯಕಂ ಸದಾ”

## ೧

# ಮೂರ್ತಿಗಳ ತ್ರಿಗುಣಾತ್ಮಕತೆ

ಭಾರತೀಯರ ಪ್ರಕಾರ ಪ್ರತಿಯೊಂದಕ್ಕೂ ಮೂರು ಪ್ರಜ್ಞಾಸ್ತರಗಳ ನೆಲೆಗಳು ಇರುತ್ತವೆ: ಭೌತಿಕ ಅಥವಾ ಸ್ಥೂಲ, ಸೂಕ್ಷ್ಮ ಮತ್ತು ಕಾರಣ ಎಂದು. ಸ್ಥೂಲವು ಪಾಂಚಭೌತಿಕ; ಸೂಕ್ಷ್ಮವು ಭಾವನೆ ಮತ್ತು ಇಂದ್ರಿಯ ಪ್ರತ್ಯಕ್ಷಗಳ ಒಕ್ಕೂಟದ ಆಕಾರ, ಇವುಗಳ ಆಚೆಗಿನದು ಆತ್ಮಿಕ ನೆಲೆ ಅಥವಾ ಆಧಾರ. ಭಾರತೀಯ ಶಿಲ್ಪದಲ್ಲಿ ಭೌತಿಕ ನೈಜತೆಯು ಅಮುಖ್ಯವಾದುದು. ಆತ್ಮವನ್ನು (Spirit) ಭಾವನೆಗಳೂ ಪ್ರತ್ಯಕ್ಷಾನುಭವಗಳೂ ಬಲವಾಗಿ ಸೆಳೆದಿಡುತ್ತವೆ. ಆ ಸೆಳೆತದಿಂದ ಆತ್ಮಕ್ಕೆ ಆಕೃತಿಯುಂಟಾದಂತೆ ಭಾಸವಾಗುತ್ತದೆ. ಆ ಆಕೃತಿಯ ಕಲಾತ್ಮಕ ಹಾಗೂ ಸ್ಥೂಲದ್ರವ್ಯಸ್ವರೂಪವನ್ನು ತಾಳಿರುವ ಭಾವವು ನೋಟಕನಲ್ಲಿ ಮೂಡುತ್ತದೆ. ಏಕೆಂದರೆ, ಅದು ಸ್ಥೂಲದ್ರವ್ಯ ನಿರ್ಮಿತವಾದದ್ದು. ಈ ಆಕಾರವು ಅದರಿಂದ ಹಿಂಜಬಲ್ಲ ರೂಪವಾಗಿ ತೋರಿ ಮೂರ್ತಿಗಳೆನ್ನಿಸಿಕೊಂಡು ಪೂಜಾರ್ಹವಾಗುತ್ತದೆ. ಮೂರ್ತವು ಮೂರ್ತಿ, "ಸರ್ವವಿಭುದ್ರವ್ಯಸಂಯೋಗಿ" ಮತ್ತು ಕ್ರಿಯಾಪ್ರೇರಕ: ಪಾರ್ಥಿವ ಮೂರ್ತಿಯೊಂದೇ ಈ ಲಕ್ಷಣಕ್ಕೆ ಬದ್ಧ. ಮಣ್ಣು, ಕಲ್ಲು, ಮರ ಮತ್ತು ಲೋಹಗಳು ಕಾರ್ಯಜ ಮತ್ತು ಕಾರ್ಯೋಪಾದಾನವಾದವುಗಳು. ಅವುಗಳಿಂದ ಮೂರ್ತಿ, ವಿಗ್ರಹ, ಬೇರ ಎಂಬ ಅರ್ಥದ ಪುರ ಅಥವಾ ದೇಹ ಯಾ ಆಕೃತಿ ಶಿಲ್ಪದಲ್ಲಿ ಮೂಡುತ್ತದೆ. "ಪುರಿ ಶೇತೇ ಇತಿ ಪುರುಷಃ". ಆದುದರಿಂದ ಜೀವತ್ ಪದಾರ್ಥದ ಭಾವನೆಗಳನ್ನೂ ಸಂವೇದನೆಗಳನ್ನೂ ವಿಗ್ರಹವು ಸೂಚಿಸುತ್ತದೆ. ಅವು ತಾಮಸ ರಾಜಸ ಅಥವಾ ಸಾತ್ವಿಕ; ಆದರೆ ಅತಿಮಾನುಷ ಶಕ್ತಿಸಂಪನ್ನ; ಆ ಶಕ್ತಿಯು ತಾರತಮ್ಯವುಳ್ಳದ್ದು; ಅಥವಾ ಅಸಾಧಾರಣ ಕಾರ್ಯಸಾಮರ್ಥ್ಯವುಳ್ಳದ್ದು. ಆದುದರಿಂದ ಅವು ಮಾನುಷಪೂಜ್ಯ, ಮನುಷ್ಯರಿಂದ ಆರಾಧ್ಯ ಹಾಗೂ ಪ್ರಾರ್ಥನೀಯ. ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗಗಳು ಅಥವಾ ವಿದ್ಯಾಧರ, ಅಪ್ಸರಸ್, ರಕ್ಷಸ್, ಗಂಧರ್ವ, ಕಿನ್ನರಗಳು ಪೂಜಕನ ತ್ರಿಗುಣಾನುಗುಣವಾಗಿ ಪೂಜಿಸಲ್ಪಡುತ್ತಾ ಬಂದಿವೆ.



# ೨

# ವಿಗ್ರಹಗಳ ವಿನ್ಯಾಸಗಳು

ವಿಗ್ರಹಗಳಿಗೆ ಶಿರ, ಪಾಣಿ, ಉರ (ಎದೆ), ಪಾರ್ಶ್ವ, ಕಟಿ, ಅಂಘ್ರಿ (ಪಾದ) ಎಂಬಿವು ಅಂಗಗಳು; ಹುಬ್ಬು, ದೃಷ್ಟಿ, ಕಣ್ಗೊಂಬೆ, ಮೂಗು, ತುಟಿ, ಗಲ್ಲ, ಬಾಯಿ, ಕುತ್ತಿಗೆ, ಹಸ್ತ, ತೊಡೆ ಮತ್ತು ಬೆರಳುಗಳು ಎಂಬಿವು ಉಪಾಂಗಗಳು. ಅವುಗಳ ಭಂಗಿ, ವಿನ್ಯಾಸ, ದಿಕ್ಕುಗಳು ಭಾವಸೂಚಕಗಳು. ಶಿರೋವಿನ್ಯಾಸಗಳು ೧೩; ಭ್ರೂವಿನ್ಯಾಸಗಳು ಏಳು ಬಗೆಯವುಗಳು: ದೃಷ್ಟಿ ವಿನ್ಯಾಸಗಳು ೩; ಅವು ೩೬ ಭಾವಗಳನ್ನು ಸೂಚಿಸುತ್ತವೆ; ಅವುಗಳಲ್ಲಿ ರಸ ಜನ್ಯವಾದವುಗಳು ಎಂಟು ಯಾ ಒಂಭತ್ತು; ನೇತ್ರತಾರಕೆಯ ವಿನ್ಯಾಸಗಳು ಒಂಭತ್ತು; ಓಷ್ಠಕರ್ಮಗಳು ೧೬; ಗಲ್ಲಗಳ ಕ್ರಿಯೆಗಳು ಏಳು; ಬಾಯಿಯ ವರಸೆಗಳು ೧೬; ಕುತ್ತಿಗೆಯ ವಿನ್ಯಾಸಗಳು ಒಂಭತ್ತು ರೀತಿಗಳವು; ಅಸಂಯುತ ಹಸ್ತಕ್ರಿಯೆಗಳು ೨೪; ಸಂಯುತ ಹಸ್ತಕರ್ಮಚಿತ್ರಣವು ೧೩ ತರಹದವುಗಳಾಗಿ ವಿಂಗಡಿಸಲ್ಪಟ್ಟಿದೆ– ಉದಾ: ಕಟಕ, ವರ್ಧಮಾನ, ಅಸಂಗ, ನಿಷಧ, ದೋಲ, ಪುಷ್ಪಪುಟ, ಪ್ರಕರ ಮುಂತಾದವು; ಗಜದಂತ, ಹಸ್ತಿಸ್ತಂಭಗಳು ಉಪವಿನ್ಯಾಸಗಳು. ಉರೋವಿನ್ಯಾಸಗಳು ಪಂಚವಿಧ; ಉದರದವು ತ್ರಿವಿಧ; ಪಾರ್ಶ್ವಕರ್ಮವು ಪಂಚವಿಧ–ಜಂಘಾವಿನ್ಯಾಸಗಳೂ ಅಷ್ಟೇ. ಪಾದ ವಿನ್ಯಾಸಗಳು ಅನೇಕ; ಇವೆಲ್ಲಾ ನೃತ್ಯಶಾಸ್ತ್ರೋಕ್ತ.



# ೩

# ಉಪಾಸ್ಯಮೂರ್ತಿಗಳು ಅಭಿವ್ಯಕ್ತಿಸಾಧನಗಳು ಮತ್ತು ಇಷ್ಟಪ್ರಾಪಕಗಳು

ವಿಗ್ರಹಗಳಲ್ಲಿ ಅವವುಗಳ ಇಂಗಿತವನ್ನು ಮೂಡಿಸುವವನು ಭಾರತೀಯ ಶಿಲ್ಪಿ. ಜಗತ್ತು ಈಶಕಲ್ಪಿತವಾದರೆ ವಿಗ್ರಹಲೋಕವು ಶಿಲ್ಪಿಕಲ್ಪಿತವಾದುದು. ಉದ್ದಿಷ್ಟಭಾವವನ್ನು ರೂಪಿಸುವುದು, ಧ್ವನಿಸುವಂತೆ ಮಾಡುವುದು ಅವನ ಕೆಲಸ. "God has almost become the pantheistic deity of the Vedantins- ದೇವರು ವೇದಾಂತಿಗಳ ಬಹುದೇವತಾರಾಧನೆಗೆ ಅಥವಾ ಸರ್ವದೇವತಾರಾಧನೆಗೆ ಪಾತ್ರವಾದದ್ದು ಮಾನಸಶಾಸ್ತ್ರೀಯ, "ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ತಸ್ಯ ತಸ್ಯಾಚಲಾಂ ಭಕ್ತಿಂ ತಾಮೇವ ವಿದಧಾಮ್ಯಹಂ" ಎಂದಿದೆ ಗೀತೆ (೭ನೆಯ ಅಧ್ಯಾಯದ ೨೧ನೆಯ ಶ್ಲೋಕ).

ಪ್ರಸಿದ್ಧ ದೇವರುಗಳು: ಬ್ರಹ್ಮನು ಹಂಸವಾಹನನು; ವಿಷ್ಣುವಿನ ನಾಭಿ ಎಂಬ ಕಮಲದಿಂದ ಹುಟ್ಟಿದವನು; ಅದಕ್ಕೂ ಪೂರ್ವದಲ್ಲಿ ಅಂಡಜನು– ಅರ್ಥಾತ್ ಬ್ರಹ್ಮಾಂಡಸ್ವರೂಪದಲ್ಲಿದ್ದ ಶಿವನ ಮಗ. ಅವನ ಹೆಂಡತಿ ಸರಸ್ವತಿ; ಅವಳು ಅವನು ಮಾಡಿದ ಯಜ್ಞದಿಂದ ಜನಿಸಿದವಳು. ಅವನದು ಸತ್ಯ ಲೋಕವು. ಅವನ ಪತ್ನಿಗೆ ಪುತ್ರರಿಲ್ಲ. ಅವನಿಗಿರುವವರು ಸನಕಾದಿ ಮಾನಸ ಪುತ್ರರು. ಅವನು ಸೃಷ್ಟಿಕರ್ತನು. ಅವನಿಗೆ ನಾಲ್ಕು ಮುಖಗಳು. ಹಂಸವು ಅವನ ವಿಶಿಷ್ಟ ಗುರುತು. ಅವನನ್ನು ಆತ್ಮಭೂ (ಸ್ವಯಂಜಾತ) ಎಂದೂ ಹೇಳಲಾಗಿದೆ. ಸರಸ್ವತಿಯು ಸರ್ವಕಲಾಧಿದೇವತೆಯು; ಅವಳು "ವೀಣಾಪಾಣಿ, ಶುಕ್ಲಾಂಬರೆ, ನೂಪುರಧಾರಿಣಿ, ಕಾಂಚೀದಾಮವತಿ, ಕಂಕಣವತಿ, ರತ್ನಹಾರಾಲಂಕೃತೆ, ಕರ್ಣಪೂರವತಿ, ಪುಸ್ತಕಪಾಣಿ."

ಕೌಸ್ತುಭಧಾರಿಯಾದ ಹಾಗೂ ಎದೆಗೂದಲಿನಲ್ಲಿ ಸುಳಿ ಇರುವ ಶ್ರೀವತ್ಸಲಾಂಛನದ ವಿಷ್ಣುವೂ ಸ್ವಯಂಭೂ; ಅವನು ಗರುಡವಾಹನನು. ಶಂಖ, ಚಕ್ರ, ಗದಾ, ಪದ್ಮಗಳನ್ನು ನಾಲ್ಕು ಕೈಗಳಲ್ಲಿ ಹಿಡಿದಿರುವವನು. ಅವನು ಶಾರ್ಙ್ಗಧನುರ್ಧಾರಿ. ಅವನ ಹೆಂಡಿರು ಶ್ರೀದೇವಿ–ಭೂದೇವಿಯರು. ಶ್ರೀಯು ಕಮಲಸ್ಥೆ, ಕಮಲಹಸ್ತೆ; ಶೇಷಶಾಯಿಯಾದಾಗ ವಿಷ್ಣುವಿನ ಪಾದಸೇವೆ ಮಾಡುವವಳು.

ಮನ್ಮಥನು ಕೃಷ್ಣ (ವಿಷ್ಣು) ಪುತ್ರ. ಅವನವು ಐದು ಹೂಬಾಣಗಳು. ಅವನ ಪತ್ನಿಯು ರತಿ. ಈ ದಂಪತಿಗಳು ಶೃಂಗಾರಾಧಿದೇವತೆಗಳು. ಇವರದು ಸಪತ್ನೀಕರಾದ ಬ್ರಹ್ಮ–ವಿಷ್ಣು–ಮಹೇಶ್ವರರ ಸ್ಥಾನಗಳಿಗಿಂತ ಕೆಳಗಿನ ಸ್ಥಾನವು.

ಜುಟಾಜೂಟಧರ ಮುಕ್ಕಣ್ಣ ಶಿವನು ಪಾರ್ವತೀಪತಿಯು, ಚಂದ್ರಶೇಖರನು, ತ್ರಿಶೂಲಾಯುಧನು, ಪಿನಾಕಧನುರ್ಧಾರಿ, ವೃಷಭವಾಹನನು; ವೃಷಭವು ಶಿವನ ಹೆಗ್ಗುರುತು; ಹಾಗೇ ತ್ರಿಶೂಲವೂ, ಬಾಲಚಂದ್ರನೂ. ಇವು ಶಿವನ ಮುಖ್ಯ ಲಕ್ಷಣಗಳು. ಕಂಚಿಯ ಏಕಾಮ್ರೇಶ್ವರ ಮೂರ್ತಿಯೊಂದು ನಿದರ್ಶನ; ಸಿದ್ದಲಿಂಗೇಶ್ವರರು ಗೋಕರ್ಣದ ವೀರಶೈವ ಮಠದ ಹತ್ತಿರ ಲಿಂಗದ ಮೇಲೆ ಕಡೆದಿಟ್ಟ ಶಿವಮೂರ್ತಿ ಇನ್ನೊಂದು ದೃಷ್ಟಾಂತ; ನಟರಾಜನದು ಮತ್ತೊಂದು ಉದಾಹರಣೆ.

ಪಾರ್ವತಿಯು ನಾರಾಯಣಿ. ಆದುದರಿಂದ ವಿಷ್ಣು ಶಿವರಿಬ್ಬರ ಆಯುಧವನ್ನೂ ಆಕೆ ಬಳಸುತ್ತಾಳೆ. ಸಿಂಹವಾಹನವು ಅವಳ ಹೆಗ್ಗುರುತು; ಆದರೆ ಅವಳ ಮೂರ್ತಿಯು ನಿರ್ವಾಹನವಾಗಿಯೂ ಪೀಠಸ್ಥವಾಗಿಯೂ ಇರಬಹುದು. ಕೃಷ್ಣನ ವಿಶ್ವರೂಪ ಮತ್ತು ಅವಳ ಮಹಿಷಾಸುರಮರ್ದಿನೀತ್ವ ಇವುಗಳಲ್ಲಿ ಆಯುಧ ವೈವಿಧ್ಯ, ಮೂರ್ತಿವೈವಿಧ್ಯ, ಬಾಹುಗಳ ಸಂಖ್ಯೆ ಮತ್ತು ದೈತ್ಯಮರ್ದನಗಳು ಸಾಧಾರಣವಾಗಿರುವುದುಂಟು.

ವಿಷ್ಣುವಿನ ಕೃಷ್ಣಾವತಾರದ ವಿಶ್ವರೂಪವನ್ನು ಬಿಟ್ಟರೆ ಮಿಕ್ಕ ೯ ಅವತಾರಗಳು ಸುದೃಶ್ಯ, ಸುಪ್ರಸಿದ್ಧ ಲಕ್ಷಣಗಳನ್ನು ಉಳ್ಳವುಗಳು; ಅರ್ಥಾತ್ ಅಪೂರ್ಣಾವತಾರಗಳು; ಮತ್ಸ್ಯ, ಕೂರ್ಮ, ವರಾಹ, ವಾಮನ–ತ್ರಿವಿಕ್ರಮ, ನರಸಿಂಹ; ರಾಮ, ಪರಶುರಾಮ, ಬುದ್ಧ (ದ್ವಾಪರಕಾಲೀನ) ಮತ್ತು ಕಲ್ಕಿಗಳು ನಿದರ್ಶನಗಳು. ಇವೆಲ್ಲಾ ವಿಷ್ಣುವಿನ ಅಂಶಾವತಾರಗಳು. ಶಿವಾವತಾರಗಳು ಅನೇಕ ಮತ್ತು ಪೂರ್ಣ; ಮೊದಲಿನ ವರ್ಗದವು ತದ್ಭವಗಳಾದರೆ, ಎರಡನೆಯವು ಅಂತ್ಯದಲ್ಲಿ ತತ್ಸಮಗಳು. ಶಿವಗಣಗಳ ಸಂಖ್ಯೆಯೂ ಹೇರಳ ಹಾಗೂ ತ್ರಿಗುಣಗಳಲ್ಲಿ ಯಾವುದಾದರೂ ಒಂದನ್ನು ಸಂದರ್ಭಾನುಸಾರ ಅವುಗಳಲ್ಲಿ ಕಾಣಬಹುದು. ವಿಷ್ಣುವು ಕೇವಲ ಸತ್ವಗುಣಪ್ರಧಾನನೆಂದೂ ಬ್ರಹ್ಮನು ರಜೋಗುಣಪ್ರಧಾನನೆಂದೂ ರುದ್ರನು ತಮೋದೇವತೆಯೆಂದೂ ಹೇಳುವುದು ರೂಢಿಯ ಮಾತಲ್ಲದೆ, ಪೌರಾಣಿಕ ನಿದರ್ಶನಗಳಿಂದ ಸಮರ್ಥನೀಯವಾಗಿಲ್ಲ.

**“ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ**

**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ”**

ಎಂಬುದು ಸರ್ವದೇವತಾಸಾಧಾರಣವಾದ ನೀತಿ. ಕ್ಷುದ್ರದೇವತೆಗಳು ಮಾತ್ರ ಈ ಮಾತಿಗೆ ಕೆಲವೊಮ್ಮೆ ಅಪವಾದಗಳಾಗಿ ಕಾಣಿಸುತ್ತವೆ. ದೇವತೆಗಳೆಲ್ಲರೂ ವರದರು, ಇಷ್ಟಾರ್ಥಪ್ರಾಪಕರು.

ವಿಷ್ಣು–ಶಿವರಿಬ್ಬರಿಗೂ ಮಾತಾಪಿತೃಗಳಿಲ್ಲ; ಅವರು ಪರಬ್ರಹ್ಮನ ಮಾನಸಪುತ್ರರು. ಶಿವನ ಹೆಂಡತಿಯರ ಮಕ್ಕಳು ಅಯೋನಿಜರು. ದೇವೀತ್ವದ ಐಕ್ಯವು ದೇವತ್ವದಲ್ಲಿ

ಕಂಡುಬರುವುದು ವಿರಳ. ಉದಾ: ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡೆಯರು ಎಂಬ ಸಪ್ತ ಮಾತೃಕೆಯರು. ಇನ್ನು ವಿಷ್ಣುವಿನ ಕೆಲ ಅವತಾರಗಳ ಪತ್ನಿಯರು ಲಕ್ಷ್ಮಿಯ ಅವತಾರಗಳು; ಹಾಗೇ ಶಿವನ ಕೆಲ ಅವತಾರಗಳ ಪತ್ನಿಯರು ಪಾರ್ವತಿಯ ಅವತಾರಗಳು. ಅವರವರ ಗಂಡಂದಿರ ಆಯುಧಗಳು ಅವರವರ ಹೆಂಡಂದಿರಿಗೆ ಲಭ್ಯವಾಗಿರುವ ಸಹಜತೆ ಕೆಲವೆಡೆ ಕಂಡುಬರುತ್ತದೆ. ವಿಷ್ಣುವಿಗಿಂತ ಹೆಚ್ಚಾಗಿ ಶಿವನ ಹೆಂಡತಿಗೂ ಮಕ್ಕಳಿಗೂ ಈ ಲಕ್ಷಣಗಳು ಹೆಚ್ಚಾಗಿ ಅನ್ವಯಿಸುತ್ತವೆ. ಸೂರ್ಯನು ಶಿವ–ವಿಷ್ಣುಗಳಂತೆ ಮಹಾದೇವತೆ; ಏಕೆಂದರೆ ಅವನು ಕಾರ್ಯಬ್ರಹ್ಮ. ಮಹಾದೇವತೆಗಳ ಮತ್ತು ಅವರ ಪತ್ನಿಯರ ಹಾಗೂ ಮಹಾಪುತ್ರರ ಹೆಸರುಗಳಿಂದಲೇ ದೇವಾಲಯಗಳು ಪ್ರಸಿದ್ಧವಾಗಿವೆ. ಆ ದೇವಾಲಯಗಳಲ್ಲಿ ಇತರ ದೇವತೆಗಳು ಗೌಣ; ಅವುಗಳಿಗೆ ಗರ್ಭಗುಡಿಗಳಲ್ಲಿ ಸ್ಥಾನವಿಲ್ಲ. ದೇವಸ್ಥಾನಗಳೆಲ್ಲಾ ಯಜ್ಞವೇದಿಕೆಯ ಹೊಸ ಪರ್ಯಾಯಗಳೆಂಬುದನ್ನು ಗರ್ಭಗುಡಿಯ ರಚನೆಯಲ್ಲಿ ಕಾಣಬಹುದು. ಅಲ್ಲಿ ಸ್ತ್ರೀಪುರುಷ ದೇವತೆಗಳೆಲ್ಲರೂ ಯೋನಿಯ ಯಾ ಪೀಠದ ಮೇಲೆ ನಿಂತಿರುತ್ತಾರೆ ಅಥವಾ ಕುಳಿತಿರುತ್ತಾರೆ. ಲಿಂಗಗಳು ಸ್ತ್ರೀದೇವತೆ, ಪುರುಷದೇವತೆ ಎಂಬ ಭೇದವಿಲ್ಲದೆ ಪ್ರತಿನಿಧಿಸುತ್ತವೆ. ಬ್ರಹ್ಮ–ವಿಷ್ಣು–ಶಿವರನ್ನೂ, ನಿರಾಕಾರ ಪರಬ್ರಹ್ಮವನ್ನೂ ಪ್ರತಿನಿಧಿಸುತ್ತವೆ. ಆದರೆ ಅವುಗಳಿಗೆ ಶಿವಪ್ರಾಧಾನ್ಯವನ್ನು ಹೇಳುವುದು ರೂಢಿ. ಏಕೆಂದರೆ ಲಿಂಗದಂತೆಯೇ ನಿರವಯವಿಯಾದ ಶಾಲಗ್ರಾಮವನ್ನು ವಿಷ್ಣುವಿಗೇ ಮೀಸಲಾಗಿಡುತ್ತಾಬಂದುದರಿಂದ ಮಾತ್ರ. ಶಾಲಗ್ರಾಮದ ಸಮವೃತ್ತವು ವಿಶ್ವಪಥಸೂಚಕವಲ್ಲ; ಲಿಂಗದ ದೀರ್ಘವೃತ್ತಾಕಾರವು ವಿಶ್ವಪಥ ಸೂಚಕ. ಈ ಸೂಚನೆಯು ಪೂರ್ಣವಾಗಿರುವುದು ಚಿತ್ತಾರಿಮಠಗಳಲ್ಲಿರುವ ಬ್ರಹ್ಮನ ಚಲಲಿಂಗದಲ್ಲಿಯೇ. ಒರಳಿನಲ್ಲಿ ಒರಳುಗಲ್ಲನ್ನು ತಿರುಗಿಸುವಂತೆ ನಾವದನ್ನು ಬೇಕಾದರೆ ತಿರುಗಿಸಬಹುದು.



# ೪

# ಅಷ್ಟದಿಕಲ್ಪಾಲಕರು*

ಅಷ್ಟದಿಕ್ಪಾಲಕರಲ್ಲಿ ಪೂರ್ವಾಧಿಪತಿ ಇಂದ್ರ. ಅವನು ಉಚ್ಚೈಃಶ್ರವಸ್ ಎಂಬ ಕುದುರೆಯನ್ನು ಹತ್ತಿರುವವನು. ಅವನ ಪತ್ನಿ ಶಚೀದೇವಿ. ಇಂದ್ರನು ಮೇಘವಾಹನನಾಗಿರುವುದೂ ಉಂಟು. ಅವನ ಆಯುಧವು ವಜ್ರ. ಮಾತಲಿಯು ಅವನ ರಥಕ್ಕೆ ಸಾರಥಿ; ಅವನ ಉದ್ಯಾನವನಕ್ಕೆ ನಂದನವನ ಎಂದು ಹೆಸರು. ವೈಜಯಂತವು ಅವನ ಅರಮನೆಯು. ಜಯಂತನು ಅವನ ಮಗ; ಪಟ್ಟಣವು ಅಮರಾವತಿ. ಇಂದ್ರನು ಗಜಾರೂಢನಾಗಿರುವುದು ಹೆಚ್ಚು. ಆ ಆನೆಯ ಹೆಸರು ಐರಾವತ. ವಿಮಾನವು ವ್ಯೋಮಯಾನಕ್ಕೆ; ಅದರ ಹೆಸರು ಪುಷ್ಪಕ. ಸುಧರ್ಮವೆಂಬ ದೇವಸಭೆಗೆ ಅವನು ಅಧ್ಯಕ್ಷ. ಅವನು ಇತರ ದೇವತೆಗಳೊಡನೆ ಕುಡಿಯುವುದು ಅಮೃತವನ್ನು. ದಾರುಕನು ಅವನ ಸಾರಥ್ಯ ವಹಿಸುವುದೂ ಉಂಟು. ಅವನ ಮಂತ್ರಿಯು ಉದ್ಧವ. ಅಶ್ವಿನೀ ಸುತರಿಬ್ಬರೂ ಅವನ ಸ್ವರ್ಗದ ವೈದ್ಯರು. ಘೃತಾಚಿ, ಮೇನಕೆ, ರಂಭೆ, ಊರ್ವಶಿ, ತಿಲೋತ್ತಮೆ, ಸುಕೇಶಿ, ಮಂಜುಘೋಷೆ ಮುಂತಾದ ಅಪ್ಸರೆಯರು ಅವನ ಸಭೆಯ ನರ್ತಕಿಯರು.

ಅಗ್ನಿಯು ಆಗ್ನೇಯದಿಗಧೀಶನು. ರೋಹಿತವು ಅವನ ಕುದುರೆ. ಅವನು ಸರ್ವವನ್ನೂ ಶುದ್ಧ ಮಾಡುವವನು. ಅವನ ಹೆಂಡತಿ ಸ್ವಾಹೆ. ಅವನು ಯಜ್ಞಾಹುತಿ ಭಕ್ಷಕ, ಹವ್ಯಕವ್ಯಗಳನ್ನು ಯಜ್ಞಮುಖೇನ ದೇವತೆಗಳಿಗೂ ಪಿತೃಗಳಿಗೂ ಮುಟ್ಟಿಸುವ ಜ್ವಾಲಾಕೇಶಿ. ಅವನ ವಾಹನವು ಟಗರು.

ದಕ್ಷಿಣಾಧಿಪತಿ ಯಮ. ಪಿತೃಗಳಿಗೆ ಅವನು ವಿಶಿಷ್ಟಪಾಲಕ. ಅವನು ಧರ್ಮದ (ನ್ಯಾಯದ) ಅಧೀಶ. ಅವನು ಕಾಲನು ಅರ್ಥಾತ್ ವೇಳೆಯ ಮಾಪಕ. ಅವನ ಆಯುಧವು ದಂಡವು; ಕೋಣವು ಅವನ ವಾಹನವಾಗಿರುವುದು ಹೆಚ್ಚು.

ನಿಋತಿಯು ನೈಋತ್ಯ ದಿಕ್ಕಿನ ಪಾಲಕ. ಅವನು ನರವಾಹನ; ಕುಲದಲ್ಲಿ ಅವನು ರಾಕ್ಷಸ; ಅದರೆ ಗುಣದಲ್ಲಿ ಅವನು ದಿವ್ಯನು. ಅದುದರಿಂದ ಅವನದು ರಾಕ್ಷಸಸೈನ್ಯವು.

* ವೇದದಲ್ಲಿ ಅಷ್ಟದಿಕ್‌ಪಾಲಕರೇ ಪ್ರಧಾನರು; ಪುರಾಣಾಗಮಾದಿಗಳಲ್ಲಿ ಅವರು ಅಪ್ರಧಾನರಾದರು; ಮುಖ್ಯರು ಅಮುಖ್ಯರಾದರು, ಅಮುಖ್ಯರು ಮುಖ್ಯರಾದರು.

ಕುಂತವು ಅವನ ಆಯುಧವಾಗಿರುವುದುಂಟು.

ವರುಣನು ದಕ್ಷಿಣದಿಗಧೀಶನು. ಅವನ ಆಯುಧವು ಪಾಶ. ಅವನು ಜಲ ಮತ್ತು ಜಲಚರಗಳ ಅರಸು. ಅವನದು ಯಕ್ಷಸೇನೆ. ಅವನು ಪಾಪಿಗಳ ದಂಡನೆಯ ವಿಶಿಷ್ಟ ಅಧಿಕಾರಿ. ಯಮನು ಕೊಡುವ ಶಿಕ್ಷೆಯನ್ನು ಅಮಲು ಜಾರಿಗೆ ತರುವ ದೂತರ ನಾಯಕ. ಮೊಸಳೆ ಅವನ ವಾಹನವಾಗಿದೆ. ಘಾಶಿಶಿಕ್ಷೆಯು ಅವನ ಕಾಲದಿಂದ ಬಂದದ್ದು.

ವಾಯವ್ಯದ ವಾಯುವು ಜಿಂಕೆಯನ್ನು ವಾಹನವನ್ನಾಗಿ ಮಾಡಿಕೊಂಡವನು. ಅದು ಅವನ ವಿಶಿಷ್ಟ ಲಕ್ಷಣ. ರೂಢಿಯಲ್ಲಿ ದೇವತೆಗಳೆಲ್ಲಾ ಗಾಳಿಗಳು, ಅದೃಶ್ಯಮರುದ್‌ಗಣಗಳು, ಆದರವು ಅಸ್ಪೃಶ್ಯಗಳಲ್ಲ. ಕಲಾ ಪ್ರತಿಭೆಯು ಅವುಗಳಿಗೆ ರೂಪಗಳನ್ನು ತೊಡಿಸಿತು. ವೇಗವೇ ಅವರ ಪರಮಾಯುಧವಾಗಿರುವುದರಿಂದ ಇತರ ಆಯುಧಗಳು ಗೌಣ. ಎಲ್ಲ ದೇವತೆಗಳಿಗೂ ಹೆಚ್ಚಾಗಿ ಎರಡಕ್ಕಿಂತ ಹೆಚ್ಚು ತೋಳುಗಳಿರುತ್ತವೆ ಅಥವಾ ಒಂದಕ್ಕಿಂತ ಹೆಚ್ಚು ಮುಖಗಳೂ (ತಲೆಗಳೂ) ಇರುವುದುಂಟು. ಈ ಸಂಖ್ಯಾಧಿಕ್ಯವು ಅವುಗಳ ಅತಿಮಾನವಸತ್ತೆಯ ಸಂಕೇತ.

ಕುಬೇರನು ಯಕ್ಷರ ಹಾಗೂ ಕಿನ್ನರರ ಮತ್ತು ರಾಕ್ಷಸರ ರಾಜನು, ಉತ್ತರದಿಕ್‌ಪಾಲಕನು. ಅವನು ಯಾವಾಗಲೂ ಕುದುರೆಯ ಸವಾರನಾದರೂ ಪುಷ್ಪಕ ವಿಮಾನವು ಅವನ ವ್ಯೋಮಯಾನವು. ಮನುಷ್ಯರ ಮೇಲೂ ಅವನು ಸವಾರಿ ಮಾಡುವುದುಂಟು. ಖಡ್ಗಕುಂತಾದ್ಯಾಯುಧಧರನಾದ ಅವನು ಐಶ್ವರ್ಯವಂತ ದೇವತೆ.

ಈಶಾನ್ಯದ ಈಶಾನನು ವೃಷಭವಾಹನ, ಈಶ್ವರನ ಅಂಶಾವತಾರ, ತ್ರಿಶೂಲಾದ್ಯಾಯುಧಧರನು. ಅವನು ಶಿವನ ಅಥವಾ ರುದ್ರನ ಯಾವ ಆಯುಧವನ್ನು ಬೇಕಾದರೂ ಹಿಡಿದಿರಬಹುದು. ವಿಷ್ಣುಲೋಕವು ವೈಕುಂಠವಾದರೆ ಶಿವಲೋಕವು ಕೈಲಾಸವು.

ಆಯಾ ದೇವತೆಯ ಪತ್ನಿ ಅವನವನ ಶಕ್ತಿಯು. ಅದಕ್ಕೆ ಎಲ್ಲರೂ ಅರ್ಧನಾರೀಶ್ವರರಾಗಬೇಕೆಂದಿಲ್ಲ, ಆಗಿಲ್ಲ. ಶಿವನೊಬ್ಬನೇ ಅರ್ಧನಾರೀಶ್ವರನು. ಪತಿಪತ್ನಿಯರಲ್ಲಿ ಅದ್ವೈತಭಾವವಿರುವುದು ಸಾಧಾರಣವು. ಎಲ್ಲ ದೇವತೆಗಳೂ ತಮ್ಮ ಎಲ್ಲ ಕೈಗಳಲ್ಲೂ ಭಿನ್ನಭಿನ್ನ ಆಯುಧಗಳನ್ನು ಹಿಡಿದಿರುತ್ತಾರೆ; ಎಲ್ಲರಿಗೂ ರಥಗಳಿರುತ್ತವೆ. ಆದರೆ ದೇವಾಲಯಗಳಲ್ಲಿ ಅವರು ರಥಾರೂಢರಾಗಿರುವುದಿಲ್ಲ.

ಆದಿತ್ಯರು ಹನ್ನೆರಡಾಗಿದ್ದಾರೆ, ರುದ್ರರು ೧೧ ಆಗಿದ್ದಾರೆ, ಮರುತ್ತುಗಳು ೪೯ ಆಗಿದ್ದಾರೆ ಎಂಬುದು ಅವರವರ ನಾಮರೂಪಭೇದಗಳ ದೆಸೆಯಿಂದ. ಹಾಗೇ ವಸುಗಳು ಅಷ್ಟ, ಋಷಿಗಳು ಸಪ್ತ ಎಂಬುದೂ ಅವರವರ ನಾಮ ರೂಪಗಳಭೇದದಿಂದ.

**ಟಿಪ್ಪಣಿ:** ೧. ಭಾರತದ ಶಿಲ್ಪವನ್ನು ೮ ಪ್ರಸ್ಥಾನಗಳನ್ನಾಗಿ ವಿಂಗಡಿಸುವುದು ಆಧುನಿಕ. ನಾಗರದಿಂದ ೫ ಉಪಪ್ರಸ್ಥಾನಗಳೂ ವೇಸರದಿಂದ ೩ ಉಪಪ್ರಸ್ಥಾನಗಳೂ ವಿಕಾಸಗೊಂಡವು. ಕರ್ನಾಟಕದಲ್ಲಿ ನಾಗರ–ದ್ರಾವಿಡಗಳಲ್ಲಿ ನಾಗರದ ಕೊನೆಯ ೩ ಉಪಪ್ರಸ್ಥಾನಗಳ ಮತ್ತು ವೇಸರದ ಮೂರೂ ಉಪಪ್ರಸ್ಥಾನಗಳ ಉದಾಹರಣೆಗಳು ದೊರಕುತ್ತವೆ. ನಾಗರ, ಉಪನಾಗರ, ವೇಸರ, ಉಪವೇಸರ, ದ್ರಾವಿಡ, ಉಪದ್ರಾವಿಡ ಎಂದು ಇವನ್ನು ಕರೆಯಬಹುದು. ಶಾಲಿವಾಹನರೂ, ಕದಂಬರೂ,

ಚಾಲುಕ್ಯರೂ, ಹೊಯ್ಸಳರೂ, ನಾಗರೋಪನಾಗರಗಳನ್ನೂ–ಪಲ್ಲವರೂ ವಿಜಯನಗರದ ಚಕ್ರವರ್ತಿಗಳೂ, ದ್ರಾವಿಡೋಪದ್ರಾವಿಡಗಳನ್ನೂ ದಕ್ಷಿಣಭಾರತದಲ್ಲಿ ಪ್ರೋತ್ಸಾಹಿಸಿದರು. ಕದಂಬ, ಹೊಯ್ಸಳ, ಚಾಲುಕ್ಯರ ಉಪನಾಗರ ಪದ್ಧತಿಯನ್ನು ಕರ್ನಾಟಕದಲ್ಲಿ ಬಹಳವಾಗಿ ಕಾಣುವುದರಿಂದ ಅದನ್ನು ಕರ್ನಾಟಕ ಶಿಲ್ಪವೆಂದು ಕರೆಯಬಹುದು.

೨. ದೇವತೆಗಳ ಶಕ್ತಿಗಳೇ ದೇವಿಯರು. ಪತಿಗೆ ರೂಪ, ಶೀಲ, ಲಾವಣ್ಯಾದಿಗಳಲ್ಲಿ ತಕ್ಕವಳು ಪತ್ನಿ (ಶಕ್ತಿ). ಈ ಪತಿಪತ್ನಿಯರ ಉದ್ದೇಶಗಳು ಹೆಚ್ಚಾಗಿ ಅನೇಕ ಸಂದರ್ಭಗಳಲ್ಲಿ ಒಂದೇ ಅಂತ್ಯದಲ್ಲಿ ಸರ್ವಸಂದರ್ಭಗಳಲ್ಲೂ ಒಂದೇ. ದೇವತಾದಂಪತಿಗಳು ಏಕಜೀವ ದೇಹದ್ವಯ ನ್ಯಾಯವನ್ನವಲಂಬಿಸಿರುತ್ತಾರೆ. ಪತಿಗೆ ಪತ್ನಿ ಸದಾ ಸಹವಾಸಿನಿ. ಸಹಚರಿ, ಸಹಕಾರಿಣಿ ಮತ್ತು ಪತಿಯ ಸಾಧೂದ್ದೇಶಗಳೆಲ್ಲವನ್ನೂ ಎತ್ತಿಹಿಡಿದು ಬೆಂಗಾವಲಿಗೆ ನಿಲ್ಲುವವಳು. ವಿಧೇಯಳಾಗಿರುವವಳು. ಈ ದೇವದಂಪತಿಗಳ ಪ್ರಾಧಾನ್ಯ–ಗೌಣತ್ವಗಳೇ ಮಾನವರಿಗೆ ಆದರ್ಶ ಎಂಬುದು ತ್ರಿಕಾಲಾಬಾಧಿತ ಮನೋವೈಜ್ಞಾನಿಕ ಸತ್ಯವು. ಪತಿಯ ವಾಹನ, ಆಯುಧ, ಆಭರಣಗಳಿಗನುಗುಣವಾಗಿ ಸದಾ ದೇವಪತ್ನಿ ಇರುವುದು ಹೆಚ್ಚು. ಅರ್ಥಾತ್ ಪತಿ ರಜೆಯ ಮೇಲಿದ್ದಾಗ ಅವನ ಎಲ್ಲ ಕೆಲಸವನ್ನೂ ಅವಳು ಮಾಡಬಲ್ಲವಳಾಗಿರುತ್ತಾಳೆ. ಹೆಸರಿನಲ್ಲೂ ಬ್ರಹ್ಮ–ಬ್ರಹ್ಮಾಣಿಯರಂತೆ ಸಮನಾಮವುಳ್ಳವರೇ ಬಹಳ. ಮಹಾತ್ಮಾ ಗಾಂಧಿಯವರೆಂದಂತೆ ವೀರಪತಿಗಳು ಮಡಿದಾಗ ಯಾ ಅವರು ಹೇಳಿದಾಗ ಮಾತ್ರ ವೀರಪತ್ನಿಯರು ಅವರ ಜವಾಬುದಾರಿಯನ್ನು ಯುದ್ಧದಲ್ಲಿ ಹೊರಬೇಕೆಂಬುದೇ ಪತಿ–ಪತ್ನಿಯರ ಸಾಮ್ಯಸೂತ್ರ. ದುಹೇರಿ ಕಾರಭಾರವು ಅವ್ಯಾವಹಾರಿಕವು.



೫

# ಉಪನ್ಯಾಸ

## ಪ್ರತಿ ದೇವತಾಮೂರ್ತಿಗಳ ವಿವರಗಳು

೧. ವಿಷ್ಣುವು ಸೌರದೇವತೆ, ಉತ್ತಮಾಧಮಮಧ್ಯಮ ಎಂಬ ಭೇದಗಳನ್ನುಳ್ಳದ್ದು. ಇದರ ಯೋಗಸ್ಥಾನಕಮೂರ್ತಿಯು ಪೀಠದ ಮೇಲೆ ನಿಂತಿರುತ್ತದೆ; ಹಿಂಗೈಯಲ್ಲಿ ಚಕ್ರವನ್ನೂ ಮುಂಗೈಯಲ್ಲಿ ಅಭಯವರದಮುದ್ರೆಗಳನ್ನೂ ಧರಿಸಿರುವುದಲ್ಲದೆ, ಮುಂದಿನ ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿರುತ್ತದೆ. ಹಿಂದಿನ ಎಡಗೈಯಲ್ಲಿ ಶಂಖವಿರುತ್ತದೆ. ಭೃಗು–ಮಾರ್ಕಂಡೇಯರನ್ನು ಇಲ್ಲವೆ ಭೂದೇವಿ ಮಾರ್ಕಂಡೇಯರನ್ನು ಎಡ ಅಥವಾ ಬಲ ಬದಿಗಳಲ್ಲಿ ನಿಲ್ಲಿಸಿರುವುದೂ ಉಂಟು.

೨. ವಿಷ್ಣುವಿನ ಭೋಗಸ್ಥಾನಕಮೂರ್ತಿಯೂ ಚತುರ್ಭುಜಯುಕ್ತವು. ಅದು ಹಿಂಗೈಗಳೆರಡರಲ್ಲಿ ಚಕ್ರ–ಶಂಖಗಳನ್ನೂ ಮುಂದಿನ ಎಡಗೈಯನ್ನು ಸೊಂಟದ ಮೇಲಿಟ್ಟುಕೊಂಡೂ (ಇದೇ ಕಟಕಭಂಗಿ) ಬಲಬದಿಯಲ್ಲಿ ಶ್ರೀದೇವಿಯು ನೇತಾಡುತ್ತಿರುವ ನಾಲ್ಕು ಕೈಗಳಲ್ಲಿ ಒಂದರಲ್ಲಿ ಕಮಲವನ್ನು ಹಿಡಿದಿರುವಂತೆ ಯಾ ಎಡಬದಿಯಲ್ಲಿ ಭೂದೇವಿಯು ತನ್ನ ನಾಲ್ಕು ಕೈಗಳಲ್ಲಿ ಎಡ–ಬಲಗಳೆರಡರಲ್ಲಿ ನೈದಿಲೆಯನ್ನು ಹಿಡಿದಿರುವುಂತೆಯೂ ಕಡೆದಿಡಲ್ಪಟ್ಟಿರುತ್ತದೆ. ಬಲ–ಎಡ ಬದಿಗಳಲ್ಲಿ ಭೃಗು–ಮಾರ್ಕಂಡೇಯರ ಮೂರ್ತಿಗಳನ್ನು ನಿಲ್ಲಿಸಲಾಗಿರುವುದೂ ಉಂಟು.

೩. ವಿಷ್ಣುವಿನ ವೀರಸ್ಥಾನಕ ಮೂರ್ತಿಯೂ ಎರಡು ಕೈಗಳಲ್ಲಿ ಒಂದೊಂದರಲ್ಲಿ ಚಕ್ರವನ್ನೂ ಶಂಖವನ್ನೂ ಹಿಡಿದಿರುವಂತೆಯೂ ಉಳಿದೆರಡು ಕೈಗಳು ಖಾಲಿಯಾಗಿರುವಂತೆಯೂ ರೂಪಿಸಲಾಗಿರುತ್ತದೆ.

೪. ವಿಷ್ಣುವಿನ ಆಭಿಚಾರಿಕಸ್ಥಾನಕ ಮೂರ್ತಿಗೆ ೨ ಯಾ ೪ ಕೈಗಳಿರುತ್ತವೆ. ಆದರದು ದಿಙ್ಮುಖ; ಅದರ ಬಟ್ಟೆಗಳು ಕಪ್ಪು. ದುರ್‌ನಕ್ಷತ್ರೋದಯ ಕಾಲದಲ್ಲಿ ಅದನ್ನು ಪ್ರತಿಷ್ಠಿಸಲಾಗಿರುತ್ತದೆ.

೫. ವಿಷ್ಣುವಿನ ಯೋಗಾಸನಮೂರ್ತಿಯು ಸಿಂಹಾಸನಾರೂಢವು. ಅದಕ್ಕೆ ಚತುರ್ಭುಜ, ಜಟಾಮಕುಟ, ಬ್ರಹ್ಮಾಸನ ಯಾ ಪದ್ಮಾಸನ; ಮುಂಗೈಗಳು ಯೋಗಮುದ್ರೆಯಲ್ಲಿರುತ್ತವೆ;

ಶಂಖ–ಚಕ್ರಗಳಿಲ್ಲ; ಯಜ್ಞೋಪವೀತವಿದೆ; ಕಿವಿಗಳಲ್ಲಿ ಕರ್ಣಕುಂಡಲಗಳಿವೆ. ತೋಳುಗಳಿಗೆ ಕೇಯೂರಾಭರಣಗಳಿವೆ; ಕುತ್ತಿಗೆಯಲ್ಲಿ ಹಾರವಿದೆ; ಅರ್ಧನಿಮೀಲಿತನಯನಗಳು ಕಾಣುತ್ತವೆ. ಹಿಂದೆ ಹೇಳಿದಂತೆ ಭೃಗು–ಮಾರ್ಕಂಡೇಯರಾಗಲಿ, ಮಾರ್ಕಂಡೇಯ–ಭೂದೇವಿಯರಾಗಲಿ ಎಡ ಅಥವಾ ಬಲ ಬದಿಯಲ್ಲಿ ನಿಂತಿರುವುದುಂಟು. ಇನ್ನೊಂದು ಗ್ರಂಥದ ಪ್ರಕಾರ ವಿಷ್ಣುವಿನ ದೃಷ್ಟಿಯು ನಾಸಾಗ್ರನಿಷ್ಠವಾಗಿರುತ್ತದೆ; ಯೋಗಿ ಪೂಜಾರ್ಹವಾಗಿ ಮುಂಬದಿ–ಹಿಂಬದಿಗಳ ಕೈಗಳಲ್ಲಿ ಪದ್ಮ, ಗದೆಗಳನ್ನು ಈ ವಿಷ್ಣುವು ಧರಿಸಿರುತ್ತಾನೆ.

೬. ವಿಷ್ಣುವಿನ ಭೋಗಾಸನಮೂರ್ತಿಯು ಬಲ–ಎಡಗಳಲ್ಲಿ ಲಕ್ಷ್ಮಿ–ಭೂದೇವಿಯರನ್ನು ಕುಳ್ಳಿರಿಸಿಕೊಂಡು ಚತುರ್ಭುಜಗಳಿಂದ ಶೋಭಿಸುತ್ತದೆ. ಆಸನಕ್ಕೆ ಸಿಂಹ; ಚಕ್ರ ಮತ್ತು ವರದಹಸ್ತ ಅಥವಾ ಅಭಯಹಸ್ತ ಬಲಬದಿಯ ಕೈಗಳಲ್ಲೂ, ಎಡಗೈಗಳಲ್ಲಿ ಶಂಖ ಮತ್ತು ಒಕ್ಕೈ ಸೊಂಟದ ಮೇಲೂ ಕಾಣಿಸುತ್ತವೆ. ಲಕ್ಷ್ಮಿಯ ಎಡಗಾಲು ಪೀಠದ ಮೇಲೆ ಮಡಿಚಿಕೊಂಡಿರುತ್ತದೆ; ಬಲಗಾಲು ಇಳಿಯಬಿಡಲಾಗಿರುತ್ತದೆ. ಭೂದೇವಿಯ ಕೈಯಲ್ಲಿ ನೈದಿಲೆಇರುತ್ತದೆ. ಈ ದೇವಿಯರ ಮಿಕ್ಕ ಕೈಗಳು ಕಟಕಭಂಗಿಯಲ್ಲಿ ಸಿಂಹಾಸನದ ಮೇಲೆ ವಿಶ್ರಮಿಸಿರುತ್ತವೆ.

೭. ವೀರಾಸನಮೂರ್ತಿಯಲ್ಲಿ ವಿಷ್ಣುವು ಸಿಂಹಾಸನಾರೂಢನು. ಎಡಗೈ ಸ್ವಲ್ಪ ಬಾಗಿರುತ್ತದೆ; ಬಲಗೈ ಸ್ವಲ್ಪ ಉದ್ದವಾಗಿ ಚಾಚಿಕೊಂಡಿರುತ್ತದೆ. ಮಾರ್ಕಂಡೇಯ–ಭೃಗುಗಳಂತೆ ಶ್ರೀದೇವಿ–ಭೂದೇವಿಯರು ಮೊಣಕಾಲೂರಿ ನಮಸ್ಕರಿಸುತ್ತಿರುತ್ತಾರೆ. ಒಂದು ಕೈಯಲ್ಲಿ ಈ ವಿಷ್ಣುವಿಗೆ ಚಕ್ರವಿದೆ; ಮತ್ತೊಂದರಲ್ಲಿ ಅಭಯ ಮುದ್ರೆಯಿದೆ. ಒಂದು ಎಡಗೈ ಶಂಖವನ್ನು ಹಿಡಿದಿರುತ್ತದೆ. ಇನ್ನೊಂದು ಎಡಗೈ ಸಿಂಹಕರ್ಣಭಂಗಿಯಲ್ಲಿರುತ್ತದೆ. ಬ್ರಹ್ಮನೂ ಮಾರ್ಕಂಡೇಯನೂ ವಿಗ್ರಹದ ಬಲಗಡೆಗೂ, ಶಿವ–ಭೃಗುಗಳು ಎಡಗಡೆಗೂ ಇರುತ್ತಾರೆ. ಕಾಮಿನೀ–ವ್ಯಾಜನೀಯರು ಚಾಮರ ಬೀಸುತ್ತಾರೆ. ಸನಕ, ಸನತ್ಕುಮಾರ, ತುಂಬುರು, ನಾರದ, ಸೂರ್ಯ, ಚಂದ್ರರು ಈ ವೀರಾಸನ ಮೂರ್ತಿಯ ಸುತ್ತಲೂ ನಿಂತಿರುತ್ತಾರೆ. ಇದು ಉತ್ತಮ ಮೂರ್ತಿ; ಮಧ್ಯಮ–ಅಧಮ ಮೂರ್ತಿಗಳ ಸುತ್ತಲೂ ಇಷ್ಟು ಪರಿವಾರ ದೇವತೆಗಳಿರುವುದಿಲ್ಲ.

೮. ಆಭಿಚಾರಿಕಾಸನಮೂರ್ತಿಗೆ ೨ ಅಥವಾ ೪ ಕೈಗಳಿರುತ್ತವೆ; ಕುಳಿತಿರುವುದು ವೇದಿಕಾಸನದಲ್ಲಿ. ಆ ಆಸನದಲ್ಲಿ ಅಲಂಕೃತ ಹೊಸ್ತಿಲೊಂದು ಅಮುಖ್ಯ ದೇವತೆಗಳಿಗಾಗಿ ರಚಿಸಲ್ಪಟ್ಟಿರುತ್ತದೆ. ತಾಮಸಪ್ರಕಾರಕ ಮುಖ; ಮೈಯು ಪೈಶಾಚಪದೋನ್ಮುಖವಾಗಿ ವಧ್ಯಶತ್ರುವನ್ನೆದುರಿಸುತ್ತಿರುತ್ತದೆ.

೯. ಯೋಗಶಯನ ಮೂರ್ತಿಯ ೩/೪ ಭಾಗವು ಶೇಷಶಾಯಿಯಾಗಿರುತ್ತದೆ; ಮಿಕ್ಕ ೧/೪ ಭಾಗವು ಸ್ವಲ್ಪ ಎದ್ದಿರುತ್ತದೆ. ಬಲಗೈಯು ತಲೆದಿಂಬಿನ ಸಮೀಪದಲ್ಲಿ ಮುಕುಟವನ್ನು ಮುಟ್ಟುವಂತಿರುತ್ತದೆ. ಮೊಣಕೈ ಗಂಟಿನಲ್ಲಿ ಬಾಗಿದ ಮತ್ತೊಂದು ಕೈಯು ಕಟಕಭಂಗಿಯಲ್ಲಿರುತ್ತದೆ; ಅಥವಾ ಈ ಎಡಗೈಯು ಮೈಗೆ ಸಮಾನಾಂತರದಲ್ಲಿದ್ದು ಮೊಣಕಾಲನ್ನು ಮುಟ್ಟುವಂತಿರುತ್ತದೆ; ಬಲಗಾಲು ನೀಡಿರುತ್ತದೆ. ಮತ್ತು ಎಡಗಾಲು ಸ್ವಲ್ಪ ಬಾಗಿರುತ್ತದೆ. ಕಣ್ಣುಗಳು ತೆರೆದಂತಿರಬೇಕು. ಭೃಗು–ಮಾರ್ಕಂಡೇಯರು ಬದಿಗಳಲ್ಲೂ

ಮಧು–ಕೈಟಭರು ಪಾದಗಳ ಸನಿಹದಲ್ಲೂ ನಿಂತಿರಬೇಕು. ಬ್ರಹ್ಮನು ವಿಷ್ಣುವಿನ ನಾಭಿಕಮಲದಿಂದ ಮೂಡಿಬಂದಿರಬೇಕು. ಹಿಂಗೋಡೆಯಲ್ಲಿ ಗರುಡ ವಿಷ್ವಕ್ ಸೇನ ಮತ್ತು ಸಪ್ತರ್ಷಿಗಳು ಅಂಜಲಿಹಸ್ತರಾಗಿರುತ್ತಾರೆ. ಶಿವ–ಬ್ರಹ್ಮರು ಉತ್ತರ–ದಕ್ಷಿಣ ಭಿತ್ತಿಗಳ ಮೇಲೆ ಕುಳಿತುಕೊಂಡಿರುತ್ತಾರೆ. ಇದು ಉತ್ತಮ ಮೂರ್ತಿ.

೧೦. ಭೋಗಶಯನಮೂರ್ತಿಗೆ ಚತುರ್ಬಾಹುಗಳು; ವಿಗ್ರಹವು ಮಲಗಿರುವುದು ೯ರಂತೆ, ಎರಡು ಕಾಲುಗಳ ನಡುವಿನ ದೂರವು ೨೦ ಅಂಗುಲಗಳಷ್ಟು; ಒಂದು ಮೊಣಕಾಲ ಪಾದಸಂಧಿಯಿಂದ ಇನ್ನೊಂದರ ನಡುವಿನ ದೂರವು ೪ ಅಂಗುಲಗಳಷ್ಟು; ಮೊಣಕಾಲುಗಳೆರಡರ ಅಂತರ ೧೪ ಅಂಗುಲಗಳಷ್ಟು. ಮುಖದ ಹಾಗೂ ಬ್ರಹ್ಮಸೂತ್ರದ ನಡುವಣ ದೂರವು ೩ ಅಂಗುಲಗಳಷ್ಟು. ಲಕ್ಷ್ಮಿಯು ಗಂಡನ ತಲೆಬದಿಗೆ ಕುಳಿತಿರುತ್ತಾಳೆ; ವಿಷ್ಣುವಿನ ಭುಜಗಳಿಗೆ ತಾಗಿ ಕುಳಿತ ಅವಳು ಬಲಗೈಯಲ್ಲಿ ಕಮಲವನ್ನು ಹಿಡಿದಿರುತ್ತಾಳೆ ಮತ್ತು ಎಡಗೈ ಕಟಕಹಸ್ತದಲ್ಲಿರುತ್ತದೆ. ಈ ವಿಷ್ಣುವಿರುವುದು ಪದ್ಮಾಸನ ಹಾಕಿಕೊಂಡು–ಬಲಗಾಲು ಎಡಗಾಲಿನ ಮೇಲಿರುತ್ತದೆ. ಭೂದೇವಿಯು ಪಾದಗಳ ಹತ್ತಿರ ಕುಳಿತಿರುತ್ತಾಳೆ ಅವಳು ಅವನ ಎಡಪಾದವನ್ನು ಮುಟ್ಟಿಕೊಂಡಿರುತ್ತಾಳೆ ಅವಳ ಬಲಗೈಯು ನೀಲೋತ್ಪಲವನ್ನು ಹಿಡಿದುಕೊಂಡಿದ್ದರೆ, ಎಡಗೈಯು ಕಟಕಹಸ್ತಭಂಗಿಯಲ್ಲಿರುತ್ತದೆ. ಈ "ಕೌತುಕ ಬೇರ"ದ ಆಕೃತಿಯ ವಿಷ್ಣುವಿನ ಬಲಗಡೆ ಮಾರ್ಕಂಡೇಯನೂ ಎಡಗಡೆಯಲ್ಲಿ ಭೃಗುವೂ ಇರುತ್ತಾರೆ. ವಿಷ್ಣುವಿನ ನಾಭಿಕಮಲದಿಂದೆದ್ದ ಬ್ರಹ್ಮನ ಬಲಕ್ಕೆ ಐದು ಜನ ಆಯುಧಪುರುಷರೂ ಗರುಡನೂ ಇರುತ್ತಾರೆ.

೧೧. ವೀರಶಯನಮೂರ್ತಿಯು ತನ್ನ ಬಲದೋಳಿನ ಮೇಲೆ ತಲೆಯಿಟ್ಟುಕೊಂಡು ಮಲಗಿರುತ್ತಾನೆ; ಮತ್ತೊಂದು ಬಲದೋಳಿನಿಂದ ಚಕ್ರವನ್ನೂ ಹಿಡಿದಿರುತ್ತಾನೆ. ಒಂದು ಎಡಗೈಯು ಶಂಖವನ್ನು ಹಿಡಿದಿದ್ದರೆ, ಇನ್ನೊಂದು ಅವನ ಶರೀರಕ್ಕೆ ಸಮಾನಾಂತರದಲ್ಲಿ ಚಾಚಿಕೊಂಡಿರುತ್ತದೆ. ಲಕ್ಷ್ಮಿಯೂ ಭೂದೇವಿಯೂ ಅವನ ಪಾದಯುಗಲದ ಬಳಿ ಇರುತ್ತಾರೆ. ಮಧು–ಕೈಟಭ ಎಂಬೀರ್ವರು ಶರಣಾಗತಿಭಂಗಿಯಲ್ಲಿ ಅವನ ಪಾದವನ್ನು ಹಿಡಿದಿರುತ್ತಾರೆ. ಇದು "ಕೌತುಕಬೇರ"; ಇದರ ಬಲ–ಎಡ ಬದಿಗಳಲ್ಲಿ ಮಾರ್ಕಂಡೇಯ ಮತ್ತು ಭೃಗುಗಳಿರುತ್ತಾರೆ.

೧೨. ಆಭಿಚಾರಿಕಶಯನಮೂರ್ತಿಯು ನೆಲದ ಮೇಲೆ ಆದಿಶೇಷನ ಮೈಯೇರಿಕೊಂಡು ಮಲಗಿರುತ್ತದೆ; ಆದಿಶೇಷನ ಎರಡು ಹೆಡೆಗಳೂ ಬಹಳ ಎದ್ದಿರುವುದಿಲ್ಲ; ಅವನ ಮೇಲೆ ವಿಷ್ಣುಮೂರ್ತಿ ಅಂಗಾತ್ತನೆ ಗಾಢನಿದ್ರೆಯಲ್ಲಿ ಲೀನನಾಗಿರುತ್ತಾನೆ; ಮುಖ ನಿಷ್ಕಲ; ದೂತದೇವತೆಗಳಾರೂ ಇರುವುದಿಲ್ಲ. ಮೂರ್ತಿಯ ಉತ್ತಮ ಮಧ್ಯಮ ಮಾದರಿಯಲ್ಲಿ ಒಂದೇ ತೆಕ್ಕೆ ಮತ್ತು ಒಂದೇ ಹೆಡೆಯ ಹಾವೂ ಅದರ ಅಧಮ ಮಾದರಿಯಲ್ಲಿ ಹಾವಿನ ಹಾಸಿಗೆಯ ರಾಹಿತ್ಯವೂ ಕಂಡುಬರುತ್ತದೆ.

ಕಿರೀಟ, ಮಕುಟ, ಹಾರ, ಕುಂಡಲ, ಯಜ್ಞೋಪವೀತಗಳು ವಿಷ್ಣುವಿನ ಆಭರಣಗಳು.



# ೬

# ವಿಷ್ಣುವಿನ ದಶಾವತಾರಗಳು

ಅವತಾರಗಳು ತ್ರಿವಿಧ; ಕೃಷ್ಣ–ರಾಮರ ಅವತಾರಗಳು ವಿಷ್ಣುವಿನ ಪೂರ್ಣಾವತಾರಗಳು; ಪರಶುರಾಮನು ಅವನ ಆವೇಶಾವತಾರವು; ಮಿಕ್ಕವು ಅಂಶಾವತಾರಗಳು. ವಿಷ್ಣುವಿನ ಆಜ್ಞೆಯಂತೆ ಶಂಖ–ಚಕ್ರಗಳು ಋಷಿಗಳ ಅವತಾರವನ್ನು ತಾಳಿರುತ್ತವೆ.

೧. **ಮತ್ಸ್ಯಾವತಾರ:** ಮೀನಿನ ಯಾ ಅರ್ಧಮೀನ–ಅರ್ಧಮನುಷ್ಯನ ಆಕಾರ– ಹಿಂಭಾಗ ಮೀನು, ಮುಂಭಾಗ ಮಾನುಷ. ಅದಕ್ಕೆ ನಾಲ್ಕು ಕೈಗಳು– ಎರಡು ಕೈಗಳಲ್ಲಿ ಹಿಡಿದದ್ದು ಶಂಖ–ಚಕ್ರಗಳು, ಇನ್ನೆರಡು ಅಭಯ–ವರದ ಹಸ್ತಗಳು; ತಲೆಯ ಮೇಲೆ ಕಿರೀಟ ಮಕುಟ; ಮತ್ತು ಧರಿಸಿದ್ದು ವಿಷ್ಣು ಸಾಧಾರಣ ಆಭರಣಗಳನ್ನು.

೨. **ಕೂರ್ಮಾವತಾರ:** ಆಮೆಯ ಆಕರ ಯಾ ಅರ್ಧಕೂರ್ಮ ಅರ್ಧ ಮಾನುಷ ಸ್ವರೂಪ; ಕೈಗಳು ನಾಲ್ಕು ಅವೆಲ್ಲಾ ಮತ್ಸ್ಯಾವತಾರದಂತೆಯೇ.

೩. **ವರಾಹಾವತಾರ:** (Emusha Boar S.B) ಶಂಖ–ಚಕ್ರ ಅಥವಾ ಗದಾ–ಪದ್ಮಧರ. ಅಂಜಲಿಹಸ್ತೆಯಾಗಿ ಭೂದೇವಿ ಅದರ ಬಲಗಾಲ ಮೇಲೆ ಕುಳಿತಿರುತ್ತಾಳೆ. ಅವತಾರದ ಒಳವಿಂಗಡಣೆ; (೧) ಭೂವರಾಹ ಆದಿಶೇಷನೊಡನೆ, ಆದಿವರಾಹ ಯಾ ನೃವರಾಹ (ಮನುಷ್ಯಮುಖಯುಕ್ತ, ಚತುರ್ಭುಜ); (೨) ಯಜ್ಞವರಾಹ– ಸಿಂಹಾಸನಸ್ಥ, ಬಲಗಡೆ ಲಕ್ಷ್ಮಿ, ಎಡಗಡೆ ಭೂದೇವಿ; (೩) ಪ್ರಳಯಾವತಾರ–ಸಿಂಹಾಸನಸ್ಥ, ಬಲಗಡೆ ಭೂದೇವಿ, ಆಮೇಲೆ ಎಡಗಡೆ ಬ್ರಹ್ಮ–ಅವನಿಲ್ಲಿ ತ್ರಿಮುಖ ಮತ್ತು ಚತುರ್ಭುಜ; ಅನಂತರ ಅಂಜಲಿಹಸ್ತನೂ, ಜಟಾಧರನೂ ಆದ ಶಿವ.

೪. **ನರಸಿಂಹ:** ಗುಹೆಯಿಂದ ಹೊರಹೊರಡುವ ಭಂಗಿಯಲ್ಲಿರುತ್ತಾನೆ.

(೧) ಗಿರಿಜಾನರಸಿಂಹ–ಪದ್ಮಾಸನಸ್ಥ; ಅವನಿಗೆ ಉತ್ಕುಟಿಕಾಭಂಗಿ, ಸೊಂಟಕ್ಕೆ ಯೋಗಪಟ್ಟಿಕೆ; ಮುಂಗಾಲಿನಿಂದ ಮುಂಬರಿಯುತ್ತಿರುತ್ತಾನೆ. ಈತನು ಕೇವಲ ನರಸಿಂಹ; ಇವನಿಗೆ ೨ ಅಥವಾ ೪ ತೋಳುಗಳು, ಮೇಲಿನ ಬಲಗೈಯಲ್ಲಿ ಚಕ್ರ, ಮೇಲಿನ ಎಡಗೈಯಲ್ಲಿ ಶಂಖ ಇದ್ದರೆ ಇವನು ಯೋಗನರಸಿಂಹ, ಅರ್ಧನರ, ಅರ್ಧಸಿಂಹ–ಶಂಖವನ್ನು ಉಳಿದ ಇಳಿಬಿಟ್ಟ ಕೈಗಳು ಅಥವಾ ಅವು ಗದಾ–ಪದ್ಮಗಳನ್ನವು ಹಿಡಿದಿರಬಹುದು. ಇವನು ಸಿಂಹಾಸನಸ್ಥನಾಗಿದ್ದರೂ ಇರಬಹುದು–ಆಗ ಇವನು ಚತುರ್ಭುಜನು, ಎಡಮುಂಗಡೆಯ

ಸೊಂಟದಲ್ಲಿ ಕೈಯಿಟ್ಟುಕೊಂಡ ಕಟ್ಯವಲಂಬಿಯಾದಾಗ ಗಿರಿಜಾನರಸಿಂಹ. ಗಿರಿಜಾನರಸಿಂಹನ ವೈವಿಧ್ಯ ಇಷ್ಟು.

**(೨) ಸ್ಥೌಣನರಸಿಂಹ:** ಕಂಬದಿಂದ ಹೊರಹೊರಡುತ್ತಿರುವವನು; ಅಥವಾ ಕುಳಿತ ಚತುರ್ಭುಜನಾಗಿಯೂ ಇರಬಹುದು. ಹಿಂಗೈಗಳಲ್ಲಿ ಶಂಖ–ಚಕ್ರ ಹಿಡಿದಿರಬಹುದು ಯಾ ಅಭಯ–ವರದ ಹಸ್ತಗಳುಳ್ಳವನಾಗಿ ಮುಂದಿನೆಡಗೈಯನ್ನು ಮೊಣಕಾಲಮೇಲಿಟ್ಟುಕೊಂಡಿರಬಹುದು; ಸಿಂಹಾಸನಾರೂಢನೂ, ದಟ್ಟವಾದ ಕೇಸರಗಳನ್ನೂ ಕುತ್ತಿಗೆಯಲ್ಲಿ ಬೆಳೆಸಿಕೊಂಡಿರುತ್ತಾನೆ. ಮತ್ತು ಹರಿತವಾದ ಹಲ್ಲುಗಳನ್ನು ತೋರಿಸುತ್ತಿರುತ್ತಾನೆ. ಇಲ್ಲವಾದರೆ ಈ ನರಸಿಂಹನ ಕೈಗಳು ೧೨ ಯಾ ೧೬ ಇರಬಹುದು; ಹಿರಣ್ಯಕಶಿಪುವನ್ನು ಮಲಗಿಸಿಕೊಂಡು ಅವನ ಹೊಟ್ಟೆಯನ್ನು ಎರಡೂ ಕೈಗಳಿಂದ ಬಗೆಯುತ್ತಿರಬಹುದು; ಬಲಗೈಯೊಂದು ಅಭಯಹಸ್ತ ಮತ್ತು ಇನ್ನೊಂದು ಬಲಗೈಯಲ್ಲಿ ಕುಂಡಲ ತಾಗುವವರೆಗೆ ಬಿಚ್ಚುಗತ್ತಿಯನ್ನು ಹಿಡಿದಿರಬಹುದು; ಎಡಗೈ ಹಿರಣ್ಯಕಶಿಪುವಿನ ಮಕುಟವನ್ನು ಹಿಡಿದಿರುತ್ತದೆ; ಇನ್ನೊಂದು ಎಡಗೈ ಹಿರಣ್ಯಕಶಿಪುವನ್ನು ಹೊಡೆಯಲು ಮೇಲಕ್ಕೆ ಎತ್ತಿರುತ್ತದೆ. ಶ್ರೀದೇವಿ, ಭೂದೇವಿ, ನಾರದರು ಸುತ್ತುವರಿದಿರುತ್ತಾರೆ. ಈ ನರಸಿಂಹನು ಶಂಖ, ಚಕ್ರ, ಗದೆ, ಪದ್ಮಗಳನ್ನು ಹಿಡಿದಿರುತ್ತಾನೆ. ಅಲ್ಲದೆ ಶ್ರೀದೇವ್ಯಾದಿಗಳ ಮೇಲೆ ಲೋಕಪಾಲಕರು ಇರುತ್ತಾರೆ. ಇವನಿಗೆ ಅಷ್ಟಹಸ್ತಗಳಿರುತ್ತವೆ. ಅವುಗಳಲ್ಲಿ ಎರಡು ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆಯುತ್ತಿರುತ್ತವೆ; ನಾಲ್ಕು ಶಂಖ, ಚಕ್ರ, ಗದೆ, ಪದ್ಮಗಳನ್ನು ಹಿಡಿದಿರುತ್ತವೆ ಇನ್ನೆರಡು ಕೈಗಳು ಹಿರಣ್ಯಕಶಿಪುವಿನ ಕರುಳನ್ನು ಹಿಡಿದಿರುತ್ತವೆ ಅದು ಮಾಲಾಕಾರವಾಗಿರುತ್ತದೆ. ಈ ಮೂರ್ತಿ ಕುಳ್ಳಿರುವುದು ಆಲೀಢಾಸನದಲ್ಲಿ.

**(೩) ಯಾನಕ ನರಸಿಂಹ:** ಇವನು ಗರುಡವಾಹನ ಯಾ ಆದಿಶೇಷಶಾಯಿ; ಇವನಿಗೆ ನಾಲ್ಕು ಕೈಗಳು; ಎರಡು ಕೈಗಳು ಶಂಖಚಕ್ರಗಳನ್ನು ಹಿಡಿದಿರುತ್ತವೆ. ಇನ್ನೆರಡು ಕೈಗಳು ಕಾರ್ಯಮಗ್ನವಾಗಿರುತ್ತವೆ. ಈ ನರಸಿಂಹನ ತಲೆಯನ್ನು ಐದು ತಲೆಯ ಆದಿಶೇಷನು ತನ್ನ ಐದು ಹೆಡೆಗಳಿಂದ ಕೊಡೆ ಹಿಡಿದಂತೆ ಕಾಯುತ್ತಿರುತ್ತಾನೆ. ಇಂಥ ಮೂರ್ತಿಯು ಶಾಸ್ತ್ರೋಕ್ತ; ಆದರೆ ಇದಕ್ಕೆ ಸಾಕ್ಷಾತ್ ನಿದರ್ಶನಗಳಿಲ್ಲ, ಇನ್ನೂ ಆರುವಿಧಗಳ ನರಸಿಂಹಮೂರ್ತಿಗೋ ಶಾಸ್ತ್ರಾಧಾರವಿಲ್ಲವೇ ಇಲ್ಲ.

**(೪) ಲಕ್ಷ್ಮೀನರಸಿಂಹ:** ಈ ಮೂರ್ತಿಯು ಪದ್ಮಾಸನಸ್ಥ; ಇದರ ಬಲಗಾಲು ಇಳಿಬಿದ್ದಿರುತ್ತದೆ; ಎಡಗಾಲು ಲಕ್ಷ್ಮಿಯ ಆಸನವಾಗಿರುತ್ತದೆ; ಅವಳ ಕಾಲುಗಳೆರಡೂ ಕೆಳಗೆ ಇಳಿಬಿದ್ದಿರುತ್ತವೆ. ಅವಳ ಎರಡು ಪಾದಗಳೂ ಪದ್ಮಾವಲಂಬಿಗಳಾಗಿರುತ್ತವೆ. ಲಕ್ಷ್ಮೀ ನರಸಿಂಹನ ಮೇಲಿನ ಬಲಗೈ ಚಕ್ರಧಾರಿ; ಕೆಳಗಿನ ಬಲಗೈ ಅಭಯಹಸ್ತ; ಎಡಕೆಳಗೈ ದೇವಿಯನ್ನು ಆಲಿಂಗಿಸಿರುತ್ತದೆ; ಮೇಲಿನ ಎಡಗೈ ಶಂಖಧಾರಿಯಾಗಿರುತ್ತದೆ. ಲಕ್ಷ್ಮಿಯ ಬಲಗೈ ನರಸಿಂಹನನ್ನು ಅಪ್ಪಿಕೊಂಡಿರುತ್ತದೆ; ಅವಳ ಎಡಗೈ ಕಮಲವನ್ನು ಹಿಡಿದಿರುತ್ತದೆ. ನರಸಿಂಹನ ಹಾಗೂ ಲಕ್ಷ್ಮಿಯ ಕಾಲುಗಳ ನಡುವೆ ಆಲಿಢಾಸನದಲ್ಲಿ ಗರುಡನು ಲಾಂಛನವಾಗಿರುತ್ತಾನೆ.

**೫. ವಾಮನ ತ್ರಿವಿಕ್ರಮಾವತಾರ: (೧) ಬ್ರಹ್ಮಚಾರಿ** ವಾಮನ: ಎತ್ತರ ೫೬ ಅಂಗುಲಗಳು=ಪಂಚತಾಲ. ಎರಡು ಕೈಗಳು ಕಮಂಡಲು ಮತ್ತು ಛತ್ರಗಳನ್ನು ಹಿಡಿದಿರುತ್ತವೆ. ತಲೆಯ ಮೇಲೆ ಜುಟ್ಟವಿರುತ್ತದೆ; ಕಿವಿಗಳು ಕುಂಡಲಧಾರಿಗಳು. ಅವನು ಕೃಷ್ಣಾಜಿನಧರನು. ಆ ಕೃಷ್ಣಾಜಿನವೇ ಅವನ ಉಪವೀತ. ಸೊಂಟಕ್ಕೆ ಕೌಪೀನ; ಮೂರನೆಯ ಬಲಗೈ ಬೆರಳಲ್ಲಿ ಪವಿತ್ರವಿರುತ್ತದೆ. ಅವನ ಒಂದು ಕೈಯಲ್ಲಿ ಪುಸ್ತಕವಿರುತ್ತದೆ.

ಅಥವಾ

ಈ ಬ್ರಹ್ಮಚಾರಿಯೊಬ್ಬ ಕುಬ್ಜನಾಗಿರುತ್ತಾನೆ; ಗೂನುಬೆನ್ನಿನವನು; ಮುಂಚಾಚಿದ ಮೊಣಕಾಲುಗಳುಳ್ಳವನು ಮತ್ತು ಅವನ ಹೊಟ್ಟೆ ದೊಡ್ಡದಾಗಿರುತ್ತದೆ.

**(೨) ತ್ರಿವಿಕ್ರಮ:** ಎಡಗಾಲು ಹೊಕ್ಕಳಿಗೆ ಸಮನಾಗಿ ಎತ್ತಿರುತ್ತದೆ. ಅಥವಾ ಬಲಮೊಣಕಾಲಿನೆತ್ತರಕ್ಕೆ ಎತ್ತಲ್ಪಟ್ಟಿರುತ್ತದೆ ಇಲ್ಲವೆ ಹಣೆಯೆತ್ತರಕ್ಕೇರಿರುತ್ತದೆ ಇವು ತ್ರಿವಿಧವಾಗಿರುವುದು ಲಕ್ಷ್ಯ. ತ್ರಿವಿಕ್ರಮನ ಎತ್ತರವು ೧೨೪ ಅಂಗುಲಗಳು ಯಾ ಉತ್ತಮ ದಶತಾಲಗಳಷ್ಟು. ಅವನಿಗೆ ನಾಲ್ಕು ಯಾ ಎಂಟು ಕೈಗಳು; ಒಂದು ಎತ್ತಿದ ಕೈಯಲ್ಲಿ ಶಂಖ, ಇನ್ನೊಂದರಲ್ಲಿ ಚಕ್ರ. ಮಿಕ್ಕೆರಡು ಕೈಗಳು ಅಡ್ಡ ಚಾಚಿಕೊಂಡಿರುತ್ತವೆ. ಅಥವಾ ಅಭಯ–ವರದ ಹಸ್ತಗಳಾಗಿರುತ್ತವೆ. ಎಂಟು ಕೈಗಳಲ್ಲಿ ಶಂಖಾದಿ ನಾಲ್ಕು + ಶಾರ್ಙ್ಗ, ಹಲಗಳಿರುತ್ತವೆ ಮಿಕ್ಕ ಮೂರು ಕೈಗಳು ಯಥಾಪೂರ್ವ. ಎಡಗಾಲು ಲೋಕತ್ರಯವನ್ನು ಅಳೆಯುತ್ತವೆ. ಹಿಂದೆ ಕಲ್ಪವೃಕ್ಷ; ಇಂದ್ರನು ಹಿಂದೆ ತ್ರಿವಿಕ್ರಮನಿಗೆ ಕೊಡೆ ಹಿಡಿದಿರುತ್ತಾನೆ. ವರುಣ–ವಾಯುಗಳು ಚಾಮರ ಹಿಡಿದಿರುತ್ತಾರೆ ಎಡಬಲಗಳಲ್ಲಿ. ಸೂರ್ಯ–ಚಂದ್ರರು ಬಲ–ಎಡಬದಿಗಳಲ್ಲಿ ಇರುತ್ತಾರೆ. ಹತ್ತಿರದಲ್ಲೇ ಸನಕ, ಸನಂದನ, ಸನತ್ಕುಮಾರ, ಸನಾತನರಿರುತ್ತಾರೆ. ಸನಾತನನು ಸನ್ಯಸ್ತನು. ಬ್ರಹ್ಮನು ತನ್ನ ಕಮಂಡಲು ಜಲದಿಂದ ತ್ರಿವಿಕ್ರಮನು ಎತ್ತಿದ ಕಾಲನ್ನು ಹಿಡಿದುಕೊಂಡು ತೊಳೆಯುತ್ತಿರುತ್ತಾನೆ. ತಮೋರುದ್ರನು ಅಂಜಲಿ ಹಸ್ತನಾಗಿ ಒಂದು ಬದಿಗಿರುತ್ತಾನೆ. ನಮುಚಿಯು ತ್ರಿವಿಕ್ರಮನು ಎತ್ತಿರದ ಬಲಗಾಲನ್ನು ನಮಸ್ಕರಿಸುತ್ತಿರುತ್ತಾನೆ. ತ್ರಿವಿಕ್ರಮನ ಎಡಬದಿಯಲ್ಲಿ ಗರುಡನು ಶುಕ್ರನನ್ನು ಹಿಡಿದುಕೊಂಡಿರುತ್ತಾನೆ.

ವಾಮನನಿದಿರು ಬಲಿಯಿರುತ್ತಾನೆ. ಬಲಿಯ ಕೈಯಲ್ಲಿ ಬಂಗಾರದ ಸ್ಥಾಲಿಯಲ್ಲಿ ನೀರಿರುತ್ತದೆ, ಬಲಿಯ ಹಿಂದೆ ಅವನ ಹೆಂಡತಿ ಇರುತ್ತಾಳೆ. ಜಾಂಬವನು ತ್ರಿವಿಕ್ರಮನ ತಲೆಯ ಮೇಲಿರುತ್ತಾನೆ. ಅವನು ಭೇರಿಯನ್ನು ಬಾರಿಸುತ್ತಿರುತ್ತಾನೆ.

ಅಥವಾ

ತ್ರಿವಿಕ್ರಮನು ಎಡಗಾಲ ಮೇಲೆ ನಿಂತು ಕೈಗಳಲ್ಲಿ ದಂಡ, ಪಾಶ, ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿರುತ್ತಾನೆ, ಯಾವ ಆಯುಧವನ್ನೂ ಆಯುಧಪುರುಷನನ್ನಾಗಿ ತೋರಿಸುವುದಿಲ್ಲ. ತ್ರಿವಿಕ್ರಮನ ಕೌತುಕಬೇರವು ಚತುರ್ಭುಜ. ಅವನ ಮುಖಗಳು ದ್ವಿವಿಧ; ಮೇಲಕ್ಕೆ ಎತ್ತಿದ್ದು; ಅವನ ಕಣ್ಗಳು ಸ್ವಲ್ಪ ಅಗಲವಾಗಿರುತ್ತವೆ. ಅರೆಮೊಗದವನಾದರೆ ಇನ್ನೂ ಅಗಲವಾಗಿ ತೆರೆದ ಕಣ್ಣುಗಳು ಇರುತ್ತವೆ.

**೬. ಪರಶುರಾಮಾವತಾರ:** ೧೨೦ ಅಂಗುಲಗಳಷ್ಟು ಎತ್ತರ, ಅಂದರೆ ಮಧ್ಯಮದಶತಾಲಮಾನ. ಬಲಗೈಯಲ್ಲಿ ಕೊಡಲಿ. ಎಡಗೈ ಸೂಚೀಭಂಗಿಯಲ್ಲಿರುತ್ತದೆ; ಏನನ್ನೋ ತೋರಿಸುವಂತಿರುತ್ತದೆ. ತಲೆಯ ಮೇಲೆ ಜಟಾಮಕುಟ, ಮೈಮೇಲೆ ಬ್ರಹ್ಮಸೂತ್ರ ಮತ್ತು ಆಭರಣಗಳು. ಖಡ್ಗ, ಬಾಣ, ಬಿಲ್ಲು, ಪರಶುಗಳನ್ನು ನಾಲ್ಕು ಕೈಗಳು ಹಿಡಿದಿರುತ್ತವೆ. ಕೊಡಲಿರಾಮನು ಧರಿಸಿರುವುದು ಕೃಷ್ಣಾಜಿನವನ್ನು, ಪರಶುರಾಮನ ಕೌತುಕಬೇರವು ಹೀಗೂ ಇರಬಹುದು ಯಾ ವಿಷ್ಣುವಿನ ಸಾಮಾನ್ಯ ವಿಗ್ರಹದಂತೆ ಚತುರ್ಭುಜವಾಗಿಯೂ ಇರಬಹುದು.

**೭. ರಾಘವ ರಾಮಾವತಾರ:** ಎತ್ತರದಲ್ಲಿ ರಾಮನು ಪರಶುರಾಮನ ಸದೃಶನು. ಕೈಗಳೆರಡು; ಬಲಗೈಯಲ್ಲಿ ಅಂಬು, ಎಡಗೈಯಲ್ಲಿ ಬಿಲ್ಲು. ತ್ರಿಭಂಗಿಯ ವಿಗ್ರಹ; ಕಿರೀಟ ಮಕುಟಧಾರಿ; ಆಭರಣಾಲಂಕೃತ. ಸರ್ವಾರ್ಧ ತಾಲಮಾನದಂತೆ (೯॥) ಸೀತೆ ಬಲಗಡೆಗಿರುತ್ತಾಳೆ; ದೇಹಕ್ಕೆ ಬಾಗು ಇಲ್ಲ. ಕೂದಲನ್ನು ಗಂಟುಕಟ್ಟುಕೊಂಡಿರುತ್ತಾಳೆ– ಕರಂಡ ಮಕುಟಧಾರಿಣಿ; ಎಡಗೈಯಲ್ಲಿ ನೀಲೋತ್ಪಲವನ್ನು (ಕೋಳೆಹೂವನ್ನು) ಹಿಡಿದಿರುತ್ತಾಳೆ– ಬಲಗೈ ಇಳಿಬಿದ್ದಿರುತ್ತದೆ. ರಾಮನನ್ನು ಸಂತೋಷದಿಂದ ನೋಡುತ್ತಿರುತ್ತಾಳೆ.

ರಾಮನ ಎಡಕ್ಕೆ ಲಕ್ಷ್ಮಣನಿರುತ್ತಾನೆ–ದಶತಾಲ=೧೧೬ ಅಂಗುಲಗಳಷ್ಟು ಎತ್ತರದ ವಿಗ್ರಹ. ಉಳಿದೆಲ್ಲವುಗಳಲ್ಲೂ ಲಕ್ಷ್ಮಣನು ರಾಮಸದೃಶನು. ರಾಮನ ಬಲಕ್ಕೆ, ರಾಮನೆದುರು ಹನುಮಂತನು ನಿಂತಿರುತ್ತಾನೆ. ಅವನ ಎತ್ತರ ೮೪ ಅಂಗುಲಗಳ ಸಪ್ತಕಾಲಮಾನವು; ದ್ವಿಭುಜ ಮೂರ್ತಿ–ಒಂದು ಕೈಯನ್ನು ಬಾಯಮೇಲೆ ಇಟ್ಟುಕೊಂಡಿರುತ್ತದೆ; ಇನ್ನೊಂದು ಮೊಣಕಾಲವರೆಗೆ ಇಳಿಬಿದ್ದಿರುತ್ತದೆ. ಅಥವಾ ಈ ವಿಗ್ರಹಗಳ ಜೊತೆಗೆ ಕಿರೀಟಮಕುಟರಹಿತರಾಗಿ ಲಕ್ಷ್ಮಣನಂತೆಯೇ ಕಾಣುವ ಹಾಗೆ ಭರತ–ಶತ್ರುಘ್ನರಿರುತ್ತಾರೆ. ರಾಮ ಸೀತೆಯರನ್ನುಳಿದು ಮಿಕ್ಕೆಲ್ಲರ ತಲೆಗಳೂ ನಡುಗಡೆ ಜುಟ್ಟವುಳ್ಳವುಗಳಾಗಿರಬೇಕು. ಭರತನು ರಾಮನ ಬಲಗಡೆಯಲ್ಲಿ ಧನುರ್ಬಾಣಗಳನ್ನು ಯಾ ಕತ್ತಿ ಮತ್ತು ಗುರಾಣಿಗಳನ್ನು ಹಿಡಿದಿರುತ್ತಾನೆ. ರಾಮನಂತೆಯೇ ಭರತನು ಶ್ರೀವತ್ಸಲಾಂಛನನಾಗಿರುತ್ತಾನೆ. ಶ್ರೀವತ್ಸ (Cruciform ಅರ್ಥಾತ್ ಎದೆ ನಡುವಿನ ಸುಳಿಗುರುಳು); ಅಲ್ಲದೆ, ಕೌಸ್ತುಭರತ್ನ ಧರನಾಗಿರುತ್ತಾನೆ. ಲಕ್ಷ್ಮಣ ಸದೃಶನಾಗಿ ಶತ್ರುಘ್ನನು ರಾಮನೆಡಕ್ಕಿರುತ್ತಾನೆ.

**೮. (೧) ಬಲರಾಮ ಮತ್ತು ಕೃಷ್ಣ:** ಬಲರಾಮನನ್ನು ಪ್ರತ್ಯೇಕನಾದ ಸ್ವತಂತ್ರ ದೇವನನ್ನಾಗಿ ಮೂರ್ತಿಸಿದುದು ವಿರಳ. ಮಧ್ಯಮ ದಶಕಾಲ ಮಾನದ ೧೨೦ ಅಂಗುಲಗಳ ಎತ್ತರದ ಮೂರ್ತಿ ಅವನದು. ಅವನು ಮುಸಲಾಯುಧ, ಹಲಾಯುಧಗಳನ್ನು ಬಲ ಮತ್ತು ಎಡ ಕೈಗಳಲ್ಲಿ ಹಿಡಿದಿರುತ್ತಾನೆ; ನೆತ್ತಿಯ ಮೇಲೆ ಜುಟ್ಟ ಕಟ್ಟಿಕೊಂಡಿರುವಾತನು. ಅಥವಾ ಅವನ ಕಣ್ಣುಗುಡ್ಡೆಗಳು ಉರುಳುತ್ತಿರುತ್ತವೆ. ಒಂದೇ ಕಿವಿಯಲ್ಲಿ ಕುಂಡಲವಿರುತ್ತದೆ. ಅಥವಾ ಅವನು ಎರಡೇ ಕೈಗಳಿದ್ದರೆ ಗದೆ ಹಲಗಳನ್ನು ಹಿಡಿದಿರುತ್ತಾನೆ, ನಾಲ್ಕಿದ್ದರೆ ಹಿಂದಿನ ಬಲಗೈಯಲ್ಲಿ ಮುಸಲ (ಒನಕೆ); ಎದುರಿನ ಬಲಗೈಯಲ್ಲಿ ಚಕ್ರ, ಹಿಂದಿನ ಎಡಗೈಯಲ್ಲಿ ಹಲ (ನೇಗಿಲು), ಎದುರಿನ ಎಡಗೈಯಲ್ಲಿ ಶಂಖ ಇವುಗಳನ್ನು ಹಿಡಿದಿರುತ್ತಾನೆ. ಅವನ

ಬಲಗಡೆ ಅವನ ಹೆಂಡತಿ ರೇವತೀದೇವಿಯು ತನ್ನ ಬಲಗೈಯಲ್ಲಿ ಪದ್ಮವನ್ನು ಹಿಡಿದಿರುತ್ತಾಳೆ. ಬಲರಾಮನ ಕೌತುಕಬೇರವು ಹೀಗೂ ಇರಬಹುದು ಅಥವಾ ನಾಲ್ಕು ಕೈಗಳಲ್ಲಿ ಕೇವಲ ಶಂಖ, ಚಕ್ರ, ಗದಾ, ಪದ್ಮ, ವನಮಾಲಾಧಾರಿಯಾಗಿಯೂ ಇರಬಹುದು.

೨, ೪ ಯಾ ೮ ಕೈಗಳನ್ನುಳ್ಳ ದುರ್ಗೆ ಬಲರಾಮ–ಕೃಷ್ಣರ ನಡುವೆ ಇರಬಹುದು. ಅವಳ ಕೈಗಳಲ್ಲಿ ತಾವರೆ, ಪುಸ್ತಕ, ಅಕ್ಷಮಾಲೆ ವರದಮುದ್ರೆ, ಕಮಂಡಲು, ಧನುಸ್ಸು, ಕನ್ನಡಿ, ಬಾಣಗಳಿರುತ್ತವೆ.

**(೨) ಕೃಷ್ಣ:** ಮಧ್ಯಮದಶತಾಲಮಾನದ ೧೨೦ ಅಂಗುಲ ಎತ್ತರ; ಕಿರೀಟವನ್ನು ಅಥವಾ ಜುಟ್ಟವನ್ನು ಧರಿಸಿರುತ್ತಾನೆ; ಬಲಗೈಯಲ್ಲಿ ವಿಲಕ್ಷಣವಾಗಿ ಬಾಗಿರುವ ದಂಡ; ಎತ್ತಿದ ಎಡಗೈ ಮೊಣಕೈ ಹತ್ತಿರಕ್ಕೆ ಹೋಗಿರುತ್ತದೆ– ಈ ಕೈ ಶಂಖ ಹಿಡಿದಿರಬಹುದು ಯಾ ಕೆಳಗೆ ಇಳಿಬಿದ್ದಿರಬಹುದು. ಉಳಿದೆಲ್ಲ ವಿವರಗಳಲ್ಲೂ ಕೃಷ್ಣನು ಬಲರಾಮನನ್ನು ಹೋಲುತ್ತಾನೆ; ಆದರೆ ಅವನ ಹೆಂಡತಿ ರುಕ್ಮಿಣಿ ಅವನ ಬಲಗಡೆ ನಿಂತಿರುತ್ತಾಳೆ ಅವಳ ಕೂದಲು ವೈಲಾಸಿಕವಾಗಿ ಮೇಲಕ್ಕೆ ಕಟ್ಟಲ್ಪಟ್ಟಿರುತ್ತದೆ; ಅವಳು ಹೂ ಮುಡಿದುಕೊಂಡಿರುತ್ತಾಳೆ. ಅವಳ ಎಡಗೈ ಕಮಲ ಹಿಡಿದಿರುತ್ತದೆ; ಬಲಗೈ ಇಳಿಬಿದ್ದಿರುತ್ತದೆ. ಕೃಷ್ಣನ ಎಡಕ್ಕೆ ಸತ್ಯಭಾಮೆ ಇರುತ್ತಾಳೆ. ಅವಳ ತಲೆಗೂದಲು ರುಕ್ಮಿಣಿಯ ತಲೆಗೂದಲ ಹಾಗೇ ವೈಲಾಸಿಕ ರೀತಿಯಲ್ಲಿ ಬಾಚಲ್ಪಟ್ಟಿರುತ್ತದೆ; ತನ್ನ ಬಲಗೈಯಲ್ಲಿ ಸತ್ಯಭಾಮೆಯು ಕಮಲಧರೆ; ಅವಳ ಎಡಗೈ ಇಳಿಬಿದ್ದಿರುತ್ತದೆ; ಅಥವಾ ಈ ಇಬ್ಬರು ದೇವಿಯರೂ ಕರಂಡಮುಕುಟ ಧಾರಿಣಿಯಾಗಿರಬಹುದು. ಕೃಷ್ಣ ನೆಡಕ್ಕೆ ಗರುಡನು ನಿಂತಿರುತ್ತಾನೆ; ಅವನ ಹಸ್ತಗಳು ಅಂಜಲಿರೂಪದಲ್ಲಿರುತ್ತವೆ. ಕೃಷ್ಣನ ಯಾ ವಿಷ್ಣುವಿನ ಕೌತುಕಬೇರವೂ ಹೀಗೇ ಇರುತ್ತದೆ: ಅಥವಾ ಕೃಷ್ಣನು ಚಕ್ರವನ್ನೂ ರುಕ್ಮಿಣಿಯು ನೀಲೋತ್ಪಲವನ್ನೂ ಹಿಡಿದಿರುತ್ತಾರೆ.



# ೭

# ಉಪಭೇದಗಳು

**೧. ಕೃಷ್ಣನ ನವನೀತ ನೃತ್ತಮೂರ್ತಿ:** ಬಲಗೈಯಲ್ಲಿ ಬೆಣ್ಣೆ ಮುದ್ದೆಯನ್ನು ಹಿಡಿದು ಅಥವಾ ಅಭಯ ಮುದ್ರೆಯನ್ನು ತೋರಿಸುತ್ತ ನವನೀತ ಕೃಷ್ಣ ನಿಂತಿರುತ್ತಾನೆ. ಬಲಗಾಲು ನೃತ್ಯಭಂಗಿಯಲ್ಲಿರುತ್ತದೆ ಮೇಲೆತ್ತಿ ಒಳಮುಖವಾಗಿ ಬಾಗಿರುತ್ತದೆ.

**(೨) ಗಾನಗೋಪಾಲಮೂರ್ತಿ ಯಾ ವೇಣುಗೋಪಾಲಮೂರ್ತಿ;** ಮೂರ್ತಿಯು ದನಗಾಹಿಗಳಿಂದ ಸುತ್ತುವರಿಯಲ್ಪಟ್ಟಿರುತ್ತದೆ. ನೆಲದ ಮೇಲೆ ಎಡಗಾಲನ್ನಿಟ್ಟು ಕೃಷ್ಣನು ನೆಟ್ಟಗೆ ನಿಂತಿರುತ್ತಾನೆ; ಬಲಗಾಲು ಹೆಬ್ಬೆರಳಿಂದ ನೆಲವನ್ನು ಮುಟ್ಟುವಂತಿರುತ್ತದೆ; ಎರಡೂ ಕೈಗಳಿಂದ ಕೊಳಲನ್ನು ಹಿಡಿದು ಅದರ ಒಂದು ತುದಿಯನ್ನು ಬಾಯಿಗೆ ತಗುಲಿಸಿಕೊಂಡಂತಿರುತ್ತದೆ. ನವಿಲು ಗರಿಗುಚ್ಛವು ತಲೆಯ ಮೇಲಿನ ಅಲಂಕಾರವಾಗಿರುತ್ತದೆ. ಈ ಕೃಷ್ಣನ ಮೂರ್ತಿ ನಿಂತಿರುವುದು ತ್ರಿಭಂಗಿಯಲ್ಲಿ.

**(೩) ಮದನಗೋಪಾಲಮೂರ್ತಿ:** ಇದು ಉಪವೇಣು ಗೋಪಾಲಮೂರ್ತಿ; ಇದು ತೆಂಕಾಶಿಯಲ್ಲಿದೆ. ಇದಕ್ಕೆ ಅಷ್ಟಭುಜಗಳು. ಪದ್ಮ, ಪರಶು ಮತ್ತು ಚಕ್ರಗಳು ಬಲಗೈಗಳಲ್ಲಿರುತ್ತವೆ; ಇಕ್ಷುಚಾಪ, ಪಾಶ ಮತ್ತು ಶಂಖಗಳು ಎಡಗೈಗಳಲ್ಲಿರುತ್ತವೆ. ಉಳಿದೆರಡು ಕೈಗಳಲ್ಲಿ ಕೊಳಲುಗಳು.

**(೪) ಪಾರ್ಥಸಾರಥಿ ಕೃಷ್ಣ:** ಒಂದು ಕೈಯಲ್ಲಿ ಲಗಾಮುಗಳನ್ನೂ ಚಾವಟಿಯನ್ನೂ ಹಿಡಿದುಕೊಂಡು, ರಥ ಹತ್ತುವ ಭಂಗಿಯಲ್ಲಿ ಈ ಮೂರ್ತಿ ಇರುತ್ತದೆ. ಬಲಗಾಲು ನೆಲದ ಮೇಲೂ ಎಡಗಾಲು ರಥಮುಖದ ಮೇಲೂ ನಿಂತಿರುತ್ತದೆ. ರಥದಲ್ಲಿ ಅದರ ಗೋಪುರದ ಮೇಲೆ ಧ್ವಜ ಪತಾಕೆ ಇರುತ್ತದೆ ಮತ್ತು ಅದಕ್ಕೆ ಉತ್ತಮಾಶ್ವಗಳನ್ನು ಕಟ್ಟಲಾಗಿರುತ್ತದೆ. ಧನುರ್ಧಾರಿ ಅರ್ಜುನನು ನೆಲದ ಮೇಲೆ (ಅಥವಾ ರಥಿಕ ಸ್ಥಾನದಲ್ಲಿ) ಅಂಜಲಿಹಸ್ತನಾಗಿರುತ್ತಾನೆ. ಕೃಷ್ಣನ ಬಲಗೈ ವ್ಯಾಖ್ಯಾನ ಮುದ್ರೆಯಲ್ಲಿರುತ್ತದೆ. ನಿಜವಾದ ಚಿತ್ರವು ಏತದ್ಭಿನ್ನವು. ಟ್ರಿಪ್ಲಿಕೇನಿನ ಪಾರ್ಥಸಾರಥಿ ವಿಗ್ರಹಕ್ಕೆ ರಥವಿಲ್ಲ, ರಥಿಕ ಅರ್ಜುನನಿಲ್ಲ ಆದರೆ ಕೇವಲ ಕೃಷ್ಣಪರಿವಾರ ಮಾತ್ರವಿದೆ.

**(೫) ಕಾಲೀಯಾಹಿಮರ್ದನ ಕೃಷ್ಣ:** ಇದು ನವನೀತನೃತ್ಯಕೃಷ್ಣ ಮೂರ್ತಿಗೆ ಸದೃಶವಾಗಿದೆ. ಮೂರ್ತಿಯ ಎಡಗಾಲು ಕಾಲೀಯಶಿರಃಸ್ಥವಾಗಿದೆ. ಈ ಕೃಷ್ಣ ಜಟ್ಟಿಗಳ ಕಾಚವನ್ನು ಧರಿಸಿದ್ದಾನೆ; ಕಾಚವು ಕಸೂತಿ ಕೆಲಸದಿಂದ ಸುಂದರವಾಗಿದೆ; ಬಲಗೈ ಅಭಯ ಹಸ್ತವಾಗಿದೆ, ಎಡಗೈ ಕಾಲಿಯನ ಬಾಲವನ್ನು ಎತ್ತಿಹಿಡಿದುಕೊಂಡಿದೆ. ಬಲಗಾಲನ್ನೀ ಕೃಷ್ಣನು ಒದೆಯುವ ಭಂಗಿಯಲ್ಲಿ ಉತ್ಕ್ಷೇಪಿಸಿದ್ದಾನೆ.

**(೬) ಗೋವರ್ಧನಧರ ಕೃಷ್ಣ:** ಬಲಗೈಯಲ್ಲಿ ಗೋವರ್ಧನ ಪರ್ವತವನ್ನು ಎತ್ತಿ ಹಿಡಿದಿದೆ ಈ ವಿಗ್ರಹ ಕೆಲವೊಮ್ಮೆ ಇದು ಅದನ್ನು ಎಡಗೈಯಲ್ಲೇ ಎತ್ತಿಹಿಡಿದಿರುವುದುಂಟು. ದೇಹವನ್ನು ಬಲಕ್ಕೆ ಯಾ ಎಡಕ್ಕೆ ಚಾಚಿಕೊಂಡಿರುವುದುಂಟು ಪರ್ವತ ಧಾರಿತ್ವಕ್ಕನುಗುಣವಾಗಿ. ದನಗಳೂ ದನಗಾಹಿಗಳೂ ದನಗಾಹಿನಿಯರೂ ಸುತ್ತಮುತ್ತಲೂ ನಿಂತಿರುತ್ತಾರೆ. ಗೋವರ್ಧನಗಿರಿಯ ಮೇಲೆ ಕಾಡು, ವನ್ಯಮೃಗವೃಂದ ಮತ್ತು ವ್ಯಾಧರು ಕಾಣುತ್ತಾರೆ.

**(೭) ಬಾಲಕೃಷ್ಣ ಯಾ ವಟಪತ್ರಶಾಯಿ ಕೃಷ್ಣ:** ಮೂರ್ತಿಗೆ ಅಂಬೆಗಾಲ ಭಂಗಿ; ಕೆಲವೊಮ್ಮೆ ಕೈಯಲ್ಲಿ ಬೆಣ್ಣೆಮುದ್ದೆ ಇರುತ್ತದೆ. ಮೂರ್ತಿಯು ಆಲದೆಲೆಯ ಮೇಲೆ ಮಲಗಿರುತ್ತದೆ.

**(೮) ಸಂತಾನ ಗೋಪಾಲಕೃಷ್ಣ: ಯಶೋದಾಂಕಶಾಯಿ;** ಅವಳ ಮೊಲೆಗಳತ್ತ ಒಂದು ಕೈ ಚಾಚಿಕೊಂಡಿರುತ್ತದೆ. ಇನ್ನೊಂದು ಅವಳ ಮೊಲೆಯ ಮೇಲಿರುತ್ತದೆ.

**(೯) ಹಿಂದು ಬುದ್ಧಮೂರ್ತಿ:** ಪಾದಗಳು ಪದ್ಮಾಂಕಿತ, ಹಾಗೇ ಹಸ್ತಗಳೂ–ಈ ಧ್ಯಾನಿಬುದ್ಧ ವಿಗ್ರಹ–ಪದ್ಮಾಂಕಿತ, ತಲೆಯ ಮೇಲೆ ಪುಟ್ಟಪುಟ್ಟ ತಿಲಕ ವೃತ್ತಗಳು; ಶರೀರವು ದಿವ್ಯ ಸುಂದರ. ಪದ್ಮಾಸನವೇ ಆಸನ. ಕಿವಿಗಳಲ್ಲಿ ಪದಕಗಳು ತೂಗಾಡುತ್ತವೆ. ವಸ್ತ್ರವು ಕಾಷಾಯ. ಹೊದಿಕೆಯು (ವಲ್ಲಿಯು) ವಲ್ಕಲ (ನಾರುಮಡಿ). ವರದ–ಅಭಯ ಹಸ್ತಗಳು. ಮೂರ್ತಿಯ ಭಂಗಿಯು ಯೋಗಾರೂಢನದು. ಎಡಗೈಯು ತೊಡೆಯ ಮೇಲಿರುತ್ತದೆ. ಹಿಂದು ಬೌದ್ಧಾವತಾರವಾದದ್ದು ಕೃಷ್ಣಾವತಾರವಾದ ಬಳಿಕ– ಅಂದರೆ ದ್ವಾಪರಯುಗದಲ್ಲೇ ಜಲಂಧರ ಸಂಹಾರಕ್ಕಾಗಿ ದಿಗಂಬರನಾಗಿ ಅನಂತರ ಯೋಗವನ್ನು ಹಿಡಿದದ್ದು. ತುಳಸೀಪೂಜೆಗಿದು ಮೂಲವು. ಈ ಬುದ್ಧನು ಪ್ರಭಾವಳಿಯಿಂದ ಕೂಡಿರುತ್ತಾನೆ. ಜಯದೇವಗೀತೋಕ್ತಬುದ್ಧನು ಕಲಿ ಯುಗದ ಸುಪ್ರಸಿದ್ಧ ಬುದ್ಧ; ಇಲ್ಲಿ ವಿಷ್ಣುವಿಗ್ರಹ ಬುದ್ಧಾವತಾರ ಸೂಚಕವಾಗಿ ಬದಿಯಲ್ಲಿರುವುದುಂಟು ಹಾಗೇ ದತ್ತಾತ್ರೇಯ, ಯೋಗೇಶ್ವರ ಯಾ ಚೆನ್ನಕೇಶವಗಳೂ ವಿಷ್ಣುವಲಯ (ಪರಿಧಿ) ಪರಿವಾರ (ಪ್ರಭಾವಲಯ)ವಾಗಿ ಬುದ್ಧನನ್ನು ಸುತ್ತಿಕೊಂಡಿರುವುದುಂಟು. ವಿಷ್ಣುವಿನ ಇತರ ಎಲ್ಲ ಅವತಾರಗಳೂ ಕೆಲವೆಡೆ ಬುದ್ಧನ ಪರಿವಾರ ದೇವತೆಗಳಾಗಿ ಕೆತ್ತಲ್ಪಟ್ಟಿರುವುದೂ ಕಂಡುಬರುತ್ತದೆ. ಪ್ರಭಾವಳಿಯು (ವಲಯವು) ಮೂಲ ವಿಗ್ರಹದ ಹಿನ್ನೆಲೆಯಾಗಿರುತ್ತದೆ. ಜೈನರ ೨೪ ತೀರ್ಥಂಕರರು ಈ ಹಿಂದು ಧ್ಯಾನಿಬುದ್ಧನನ್ನು ಹೋಲುತ್ತಾರೆ; ಮಹಾಪುರುಷರ ೩೨ ಲಕ್ಷಣಗಳಿವರಿಗಿವೆ.

ಬೌದ್ಧರ ಬುದ್ಧನಿಗೆ ವಸ್ತುತಃ ವಿಷ್ಣು ಮುಂತಾದವರ ಸಂಬಂಧವಿಲ್ಲ. ಅವನು ಕುರುಳ್ಗಳಸವಣನಂತಿದ್ದರೂ ಮಲ್‌ವಸ್ತ್ರಾಚ್ಛಾದನದಿಂದ (ಧ್ಯಾನದಲ್ಲಿದ್ದೇ) ಪ್ರತ್ಯೇಕವಾಗಿ ಲಕ್ಷ್ಯನಾಗುತ್ತಾನೆ.

ಬಟ್ಟೆಯನ್ನು ಉಪವೀತದಂತೆ ಹೊದೆದಿರುವುದು ಬುದ್ಧನ ಮುಖ್ಯ ಲಕ್ಷಣವಾಗಿದೆ; ಹಾಗೇ ನೆತ್ತಿಯ ಮೇಲೆ ಜುಟ್ಟವಿಟ್ಟುಕೊಂಡಿರುವುದೂ ಗಣ್ಯವು. ಜೈನ ವಿಗ್ರಹಗಳೆಲ್ಲಾ ಸಂಪೂರ್ಣವಾಗಿ ನಗ್ನ ಮತ್ತು ಅವಕ್ಕೆ ಜುಟ್ಟ (ಶಿಖೆ) ಇರುವುದೇ ಇಲ್ಲ. ವಿಷ್ಣುವಿನ ಶ್ರೀವತ್ಸಲಾಂಛನ ಮಾತ್ರ ಸರ್ವಸಾಧಾರಣ. ಈ ಗುರುತು ಇಲ್ಲಿ ಎದೆಯ ಬಲಗಡೆ ಚಿಕ್ಕ ತ್ರಿಕೋನ ರೂಪದಲ್ಲಿರುತ್ತದೆ; ಇದರ ತುದಿಯು ಮೇಲ್ಮುಖವಾಗಿರುತ್ತದೆ.

**೧೦. ಕಲ್ಕ್ಯವತಾರ:** ಅಗ್ನಿಪುರಾಣ ವಿಷ್ಣುಪುರಾಣಗಳು ಕಲ್ಕಿವರ್ಣನೆಗೆ ಆಧಾರ ನೀಡುತ್ತವೆ. ಶಂಬಲಗ್ರಾಮದ ವಿಷ್ಣುಯಶಸ್ಸಂಬವನಿಗೆ ಮಗನಾಗಿ ಕಲ್ಕಿ ಜನಿಸುತ್ತಾನೆ; ವೈಖಾನಸಾಗಮದ ಪ್ರಕಾರ ಕಲ್ಕಿಯು ಹಯವದನ (ಅಶ್ವತ್ಥಾಮಸದೃಶ). ಅವನಿಗೆ ನಾಲ್ಕು ಕೈಗಳು. ಅವುಗಳಲ್ಲಿ ಶಂಖ, ಚಕ್ರ, ಖಡ್ಗ, ಖೇಟಕಗಳಿರುತ್ತವೆ. ಕಲ್ಕಿಯ ಕೌತುಕಬೇರ ರಚನೆಗೂ ಇದೇ ಮಾದರಿಯು. ಇಲ್ಲವಾದರೆ ಇತರ ಕೆಲವೆಡೆ ಕಲ್ಕಿಯು ಧನುರ್ಬಾಣಗಳನ್ನು ಧರಿಸಿ ಕುದುರೆಯನ್ನೇರಿ ಅಗ್ನಿಪುರಾಣ ಹೇಳಿದಂತೆ ರಚಿತನಾಗಬಹುದು– ಖಡ್ಗ, ಬಾಣ, ಚಕ್ರ, ಶಂಖಗಳನ್ನು ಹಿಡಿದಿರಲೂ ಬಹುದು. ವಿಷ್ಣು ಧರ್ಮೋತ್ತರ ಪುರಾಣದಂತೆ ಕಲ್ಕಿಯು ದ್ವಿಭುಜನಾಗಿರಲೂ ಬಹುದು.

ವಿಷ್ಣುವಿನ ೨೪ ಬಗೆಯ ವಿಗ್ರಹಗಳು ಇವು; ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ: ಪದ್ಮನಾಭ, ದಾಮೋದರ, ಸಂಕರ್ಷಣ, ವಾಸುದೇವ, ಪ್ರದ್ಯುಮ್ನ ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನರಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಹರಿ, ಶ್ರೀಕೃಷ್ಣ ಈ ಎಲ್ಲ ವಿಗ್ರಹಗಳೂ ತಮ್ಮ ತಮ್ಮ ನಾಲ್ಕು ಕೈಗಳಲ್ಲಿ ಬೇರೆ ಬೇರೆ ರೀತಿಗಳಿಂದ ಶಂಖ, ಚಕ್ರ, ಗದೆ, ಪದ್ಮಗಳನ್ನು ಹಿಡಿದಿರುತ್ತವೆ ಭುಜಸಂಖ್ಯಾನುಸಾರ ಅಥವಾ ಅವತಾರೋದ್ದೇಶಾನುಸಾರ.

**ವಿಷ್ಣು ಶಕ್ತಿಗಳು ೧೪:** ಕೇಶವ–ಕೀರ್ತಿ, ನಾರಾಯಣ–ಕಾಂತಿ, ಮಾಧವ–ತುಷ್ಟಿ, ತ್ರಿವಿಕ್ರಮ–ಶಾಂತಿ, ವಾಮನ–ಕ್ರಿಯೆ, ಅಚ್ಯುತ–ದಯೆ, ಶ್ರೀಧರ–ಮೇಧೆ, ಹೃಷಿಕೇಶ–ಹರ್ಷ, ಪದ್ಮನಾಭ–ಶ್ರದ್ಧೆ, ದಾಮೋದರ–ಲಜ್ಜೆ, ವಾಸುದೇವ–ಲಕ್ಷ್ಮಿ, ಸಂಕರ್ಷಣ–ಸರಸ್ವತಿ, ಪ್ರದ್ಯುಮ್ನ–ಪ್ರೀತಿ, ಅನಿರುದ್ಧ–ರತಿ.

ಮಾನುಷವಾಸುದೇವ, ದೈವಿಕವಾಸುದೇವ ಎಂಬುದು ವಾಸುದೇವದ್ವೈವಿಧ್ಯವು.

**ವಿಷ್ಣುವಿನ ಗೌಣಾವತಾರಗಳು:** ಪುರುಷ, ಕಪಿಲ, ಯಜ್ಞಮೂರ್ತಿ ಅಥವಾ ಯಜ್ಞೇಶ, ವ್ಯಾಸ, ಧನ್ವಂತರಿ, ದತ್ತಾತ್ರೇಯ, ವೈಕುಂಠ ಅಥವಾ ವೈಕುಂಠನಾಥ, ತ್ರೈಲೋಕ್ಯಮೋಹನ, ಅನಂತ, ವಿಶ್ವರೂಪ, ಲಕ್ಷ್ಮೀನಾರಾಯಣ, ಹಯಗ್ರೀವ, ಆದಿಮೂರ್ತಿ (ಆದಿಶೇಷಶಾಯಿ), ಜಲಶಾಯಿ, ಧರ್ಮ, ವರದರಾಜ ಅಥವಾ ಕರಿವರದ, ರಂಗನಾಥ, ವೆಂಕಟೇಶ, ಪಂಡರಿನಾಥ ಯಾ ವಿಠೋಬ, ಜಗನ್ನಾಥ, ನರನಾರಾಯಣ ಯಾ ಹರಿಕೃಷ್ಣ, ಮನ್ಮಥ ಪ್ರದ್ಯುಮ್ನ) ಎಂಬೀ ೨೨.

ವಿಶ್ವಕರ್ಮಸೂತ್ರಾನುಸಾರವಾಗಿ ಲಕ್ಷ್ಮಿಯು ವಿಷ್ಣುವಿನ ಎಡಕ್ಕೆ– ಲಕ್ಷ್ಮೀನಾರಾಯಣ ವಿಗ್ರಹದಲ್ಲಿ. ಲಕ್ಷ್ಮಿಯ ಬಲಗೈ ನಾರಾಯಣನ ಕೊರಳನ್ನು ಸುತ್ತಿಕೊಂಡಿರುತ್ತದೆ. ನಾರಾಯಣನ ಎಡಗೈ ಅವಳನ್ನು ಆಲಿಂಗಿಸಿರುತ್ತದೆ, ನಡುವನ್ನು ಸುತ್ತಿಕೊಂಡಿರುತ್ತದೆ. ಲಕ್ಷ್ಮಿಯ ಎಡಗೈಯು ಕಮಲಧಾರಿ; ಪಕ್ಕದಲ್ಲಿ ಸಿದ್ಧಿಯು ಚಾಮರಧಾರಿಣಿಯಾಗಿ ನಿಂತಿರುತ್ತಾಳೆ; ಸ್ವಲ್ಪ ಕೆಳಗೆ ಗರುಡನು ಬಲಬದಿಯಲ್ಲಿ ಇರುತ್ತಾನೆ. ಶಂಖ ಚಕ್ರಗಳ ಆಯುಧಪುರುಷರು ವಿಷ್ಣುವಿನ ಪಕ್ಕಕ್ಕಿರುತ್ತಾರೆ. ಈ ನಾರಾಯಣ ವಿಷ್ಣುವಿನ ಮುಂದೆ ಬ್ರಹ್ಮ–ರುದ್ರ (ಶಿವ)ರು ಅಂಜಲಿಹಸ್ತ ಉಪಾಸಕರಾಗಿ ನಿಂತಿರುತ್ತಾರೆ. ಬ್ರಹ್ಮನ ಸೊಂಟಕ್ಕೆ ಅಗಲವಾದ ಪಟ್ಟಿ (Belt) ಇರುತ್ತದೆ; ರುದ್ರನಿಲ್ಲಿ ಯೋಗಪಟ್ಟಧಾರಿಯೂ ಅಸ್ಥಿಪಂಜರಧರನೂ ಆಗಿರುತ್ತಾನೆ.

**ದೇವತೆಗಳ ಸಾಮಾನ್ಯ ಆಯುಧಗಳು:** ವಜ್ರ, ಶಕ್ತಿ, ದಂಡ, ಖಡ್ಗ, ಪಾಶ, ಅಂಕುಶ, ಗದೆ, ತ್ರಿಶೂಲ, ಪದ್ಮ, ಚಕ್ರ ಮತ್ತು ಧ್ವಜ ಎಂದು ಹನ್ನೊಂದು.

## II

**ಮಹೇಶ್ವರನ ಲೀಲಾಮೂರ್ತಿಗಳು ೨೫:** ಚಂದ್ರಶೇಖರ, ಉಮಾಸಹಿತ, ವೃಷಭಾರೂಢ, ನೃತ್ತ, ಕಲ್ಯಾಣಸುಂದರ, ಭಿಕ್ಷಾಟನ, ಕಾಮದಹನ, ಕಾಲಾಂತಕ, ಜಲಂಧರಸಂಹಾರ (ವಧ), ಗಜಾರಿ; ವೀರಭದ್ರ; ಶಂಕರ–ನಾರಾಯಣ, ಅರ್ಧನಾರೀಶ್ವರ, ಕಿರಾತ, ಕಂಕಾಲ, ಚಂಡೇಶಾನುಗ್ರಹ, ವಿಷಾಪಹರಣ, ಚಕ್ರದಾಸ, ವಿಘ್ನೇಶ್ವರಾನುಗ್ರಹ, ಸೋಮಾಸ್ಕಂದ, ಏಕಪಾದ, ಸುಖಾಸನ, ದಕ್ಷಿಣಾಮೂರ್ತಿ ಮತ್ತು ಲಿಂಗೋದ್ಭವ ಮೂರ್ತಿಗಳು. ಚಂದ್ರಶೇಖರ ಪದದಿಂದ ಹಿಡಿದು ಸುಖಾಸನ ಪದದವರೆಗಿನ (ತತ್ಸಹಿತವಾಗಿ) ಪದಗಳ ಮುಂದೆ ಮೂರ್ತಿ ಎಂಬ ಪದವನ್ನು ಸೇರಿಸಬೇಕು. ಶಂಕರನಾರಾಯಣನು ಹರಿಹರನು. ಅರ್ಧನಾರೀನಟೇಶ್ವರ ಎಂಬ ವಿಗ್ರಹಗಳೂ ಸೇರಿದರೆ ಅವು ೨೭ ಆಗುತ್ತದೆ.



## ೮

## ರುದ್ರ–ಶಿವನ ಪಂಚ ಆಸನಗಳು

ಸದ್ಯೋಜಾತ, ವಾಮದೇವ; ಅಘೋರ, ತತ್ಪುರುಷ, ಈಶಾನ.



## ೯

## ಏಕಾದಶ ರುದ್ರರು

(೧) ಅಂಶುಮದ್‌ಭೇದಾಗಮದಂತೆ–ಮಹಾದೇವ, ಶಿವ, ಶಂಕರ, ನೀಲಲೋಹಿತ, ಈಶಾನ, ವಿಜಯ, ಭೀಮ, ದೇವದೇವ, ಭವೋದ್ಭವ, ರುದ್ರ, ಕಪಾಲೀಶ.

(೨) ವಿಶ್ವಕರ್ಮ ಶಿಲ್ಪದ ಪ್ರಕಾರ ಅಜ, ಏಕಪಾದ, ಅಹಿರ್ಬುಧ್ನ್ಯ, ವಿರೂಪಾಕ್ಷ, ರೇವತ, ಹರ, ಬಹುರೂಪ, ತ್ರ್ಯಂಬಕ, ಸುರೇಶ್ವರ, ಜಯಂತ, ಮತ್ತು ಅಪರಾಜಿತ.

(೩) ರೂಪಮಂಡನದಲ್ಲಿ ಹೇಳಿದಂತೆ–ತತ್ಪುರುಷ, ಅಘೋರ, ಈಶಾನ, ವಾಮದೇವ, ಸದ್ಯೋಜಾತ, ಮೃತ್ಯುಂಜಯ, ಕಿರಣಾಕ್ಷ, ಶ್ರೀಕಂಠ, ಅಹಿರ್ಬುಧ್ನ್ಯ, ವಿರೂಪಾಕ್ಷ ಮತ್ತು ಬಹುರೂಪ. ಇಲ್ಲಿ ತ್ರ್ಯಂಬಕನನ್ನೂ ಸೇರಿಸಿ ದ್ವಾದಶರುದ್ರರನ್ನಾಗಿ ಲೆಕ್ಕಿಸಲಾಗಿದೆ.



# ೧೦

# ಸದಾಶಿವಮೂರ್ತಿಭೇದಗಳು

**(೧) ಉಪವಿಷ್ಟ, ಜಟಾಮಕುಟಧರಪಂಚಮುಖ, ದಶಭುಜ, ಅಭಯ–ವರದಹಸ್ತ;** ಇತರ ಕೈಗಳು ಅಕ್ಷಮಾಲೆ, ಪಾಶ, ಖಡ್ಗ, ಟಂಕೆ ಯಾ ಪರಶು, ಕಮಂಡಲು ಮತ್ತು ಅನ್ಯ ಪದಾರ್ಥಗಳನ್ನು ಹಿಡಿದಿರಬಹುದು.

**(೨) ಪೂರ್ವೋಕ್ತ ಪಂಚಮುಖಗಳಲ್ಲಿ ಒಂದೊಂದರ ಸುತ್ತಲೂ ಜ್ವಾಲಾಜಿಹ್ವೆಗಳು ಆಟವಾಡುತ್ತಿರುವುದು (ಇದನ್ನು ಉಗ್ರಸದಾಶಿವಮೂರ್ತಿ ಎಂದೂ ಕರೆಯುತ್ತಾರೆ);** ಈ ದ್ವಿತೀಯ ಸದಾಶಿವಮೂರ್ತಿಗಿರುವುದು ೧೮ ಕೈಗಳು; ಅವು ಶೂಲ, ಖೇಟಕ, ಮುಸಲ, ಘಂಟೆ, ಕಪಾಲಗಳನ್ನೂ ಇತರ ಆಯುಧಗಳನ್ನೂ ಹಿಡಿದಿರುತ್ತವೆ. ಕೊರಳ ಹಾರಗಳು ಕಾಲುಗೆಜ್ಜೆ ಗಂಟಿನವರೆಗೆ ನೇತಾಡುತ್ತಿರುತ್ತವೆ.

**(೩) ಮಹಾಸದಾಶಿವಮೂರ್ತಿ:** ಈ ಮಹೇಶ್ವರಮೂರ್ತಿಗೆ ೨೫ ತಲೆಗಳು, ೫೦ ಭುಜಗಳು; ಈ ಭುಜಗಳೆಲ್ಲಾ ಆಯುಧಪಾಣಿಗಳು. ಇದ್ದ ಪಂಚಮುಖಗಳು ಪಂಚಬ್ರಹ್ಮರನ್ನು ಪ್ರತಿನಿಧಿಸುತ್ತವೆ. ಈ ಪ್ರತಿಯೊಂದೂ ಮತ್ತೈದರಿಂದ ಪ್ರತಿನಿಧಿತವಾಗಿದೆ. ಆದುದರಿಂದ ೫x೫=೨೫ ರುಂಡಗಳು ಪ್ರತಿಯೊಂದು ಮುಖವೂ ತ್ರ್ಯಂಬಕ. ಕಿವಿಗಳಲ್ಲಿ ಕುಂಡಲಗಳು ರಾರಾಜಿಸುತ್ತವೆ. ಹಾಗೇ ಸರ್ವಾಲಂಕಾರವೂ ವಿಶಿಷ್ಟ. ಈಶಾನ, ತತ್‌ಪುರುಷ, ಅಘೋರ, ವಾಮದೇವ ಮತ್ತು ಸದ್ಯೋಜಾತ ಎಂಬಿವೇ ಆ ಪಂಚಬ್ರಹ್ಮರು. ಇವೆಲ್ಲಾ ಹುಟ್ಟಿದ್ದು ನಿಷ್ಕಲಶಿವನಾದ ಪರಬ್ರಹ್ಮಸ್ವರೂಪದ ವಾಸುದೇವನಿಂದ. ಈ ಅಷ್ಟಮೂರ್ತಿಗಳಿಗೆ ಶರ್ವ, ಈಶಾನ, ಉಗ್ರ, ಭವ, ಮಹಾದೇವ, ಭೀಮ, ಶಿವ, ಪಶುಪತಿ ಎಂಬಿವು ಅನುಕ್ರಮವಾಗಿ ಅಧಿಷ್ಠಾನದೇವತೆಗಳು. ಇತರ ವಿವಿಧ ಹಸ್ತಧೃತ ಆಯುಧಗಳು: ಢಕ್ಕೆ, ಖಟ್ವಾಂಗ, ಮಾತುಲುಂಗ, ಸರ್ಪ, ವಿದ್ಯೆ (ಜ್ಞಾನಮುದ್ರೆ), ಮುದ್ಗರ, ಧನುಸ್ಸು, ಚಕ್ರ, ತರ್ಜನಿಗಳು ಏಕಪಾರ್ಶ್ವದಲ್ಲಿ (ಒಂದು ಕಾಲಿನ ಬದಿಗೆ).

**(೪) ಮಹೇಶಮೂರ್ತಿ:** ನಾಲ್ಕು ದೃಶ್ಯಮುಖಗಳು ಒಂದು ಅದೃಶ್ಯ ಮುಖ ಇದಕ್ಕಿರುತ್ತದೆ; ೨ ಕಾಲುಗಳೂ ೧೦ ತೋಳುಗಳೂ ಇದಕ್ಕಿವೆ. ಪಾರ್ಶ್ವದಲ್ಲಿ ಶಕ್ತಿವಿಗ್ರಹವಿರುತ್ತದೆ; ಕೈಗಳಲ್ಲೆಲ್ಲಾ ಆಯುಧಗಳು, ಈ ಶಕ್ತಿಗೆ ಮೂರು ಕಂಗಳು ಮತ್ತು ೪ ತೋಳುಗಳು. ಇದಕ್ಕೆ ಕರಂಡಮಕುಟ

ಹಾಗೂ ಆಭರಣಗಳು ಭೂಷಣಗಳು. ಅಭಯ, ವರದ, ನೀಲೋತ್ಪಲ ಮತ್ತು ಅಕ್ಷಮಾಲೆಗಳು ಹಸ್ತಧಾರ್ಯಗಳು.

**(೫) ತ್ರಿಮೂರ್ತಿ:** ಇದೂ ಒಂದು ಮಹೇಶ್ವರಮೂರ್ತಿಯ ಭೇದವು. ಇದರ ಶಿರಸ್ತ್ರಯವೂ ಜಟಾಮುಕುಟಭೂಷಿತ. ಅಂಶುಮದ್‌ಭೇದಾಗಮ, ವಿಶ್ವಕರ್ಮಶಿಲ್ಪ, ರೂಪಮಂಡನ ಗ್ರಂಥಗಳು ಮೂರು ಭಿನ್ನ ನಾಮಾಂಕಿತ ಏಕಾದಶರುದ್ರರನ್ನು ಈ ಮೂರ್ತಿ (ರುಂಡ) ತ್ರಯಕ್ಕೆ ಹೇಳಿವೆ.



# ೧೧

# ರುದ್ರನ ಸಂಹಾರವಿಗ್ರಹಗಳು

ಕಾಮಾಂತಕಮೂರ್ತಿ, ಗಜಾಸುರಸಂಹಾರಮೂರ್ತಿ, ಕಾಲಾರಿಮೂರ್ತಿ, ತ್ರಿಪುರಾಂತಕಮೂರ್ತಿ, ಶರಭೇಶಮೂರ್ತಿ, ಬ್ರಹ್ಮಶಿರಶ್ಛೇದಮೂರ್ತಿ, ಭೈರವ ಮೂರ್ತಿ, ಮಲ್ಲಾರಿಶಿವಮೂರ್ತಿ, ಜಲಂಧರಮೂರ್ತಿ, ವೀರಭದ್ರಮೂರ್ತಿ, ಅಂಧಕಾಸುರವಧಮೂರ್ತಿ ಎಂಬೀ ೧೧ ರುದ್ರನ (ಶಿವನ) ಸಂಹಾರ ಮೂರ್ತಿಗಳು.



# ೧೨

# ವಿಷ್ಣುಧರ್ಮೋತ್ತರೋಕ್ತ ಭೈರವಮೂರ್ತಿ ಪ್ರಕಾರಗಳು

ಸಾಮಾನ್ಯ ಲಕ್ಷಣಗಳು: ಲಂಬೋದರ, ವೃತ್ತರಕ್ತನೇತ್ರ, ಪಾರ್ಶ್ವದಂತ (ಕೋರೆದಾಡೆಗಳನ್ನುಳ್ಳಾತ), ವಿಶಾಲನಾಸಿಕವಿವರ, ರುಂಡ (Skull) ಮಾಲಾಧರಕಂಠ, ಸರ್ಪಾಲಂಕಾರ, ಗಜಚರ್ಮಾಂಬರಧರ, ಆಯುಧಧರ ಮತ್ತು ವಿವಿಧ ಪಾಣಿಗಳುಳ್ಳದ್ದಾಗಿರುವುದು ಮತ್ತು ಒಂದು ಹಾವಿನಿಂದ ಪಾರ್ವತಿಯನ್ನು ಹೆದರಿಸುತ್ತಿರುವುದು ಇಷ್ಟು.

(೧) ವಟುಕಭೈರವ: ಅಷ್ಟಭುಜ, ಖಟ್ವಾಂಗಧರ, ಪಾಶಹಸ್ತ, ಶೂಲಪಾಣಿ, ಡಮರುಗೈ, ಕಪಾಲಹಸ್ತ, ಸರ್ಪಭೂಷಣ, ಮಾಂಸಪಾಣಿ ಮತ್ತು ಅಭಯಹಸ್ತ; ಪಕ್ಕದಲ್ಲಿ ಶ್ವದೇವ (ನಾಯಿ) ನಿರುತ್ತಾನೆ.

ಅಥವಾ

ಭೈರವವಟುವು ಕೆಂಜಡೆಯವನು, ತ್ರ್ಯಕ್ಷ (ರೂಪಮಂಡನಾನುಸಾರ) ಕೆಮ್ಮೈಯಾತನು; ಶ್ವವಾಹನ (ಶ್ವಾರೂಢ), ಸಮಗ್ರನಗ್ನ ಮತ್ತು ಭೂತ ಗಣಾವೃತ.

**(೨) ಸ್ವರ್ಣಾಕರ್ಷಣ ಭೈರವ;** ಚತುರ್ಭುಜ, ತ್ರ್ಯಕ್ಷ, ಸರ್ವಾಭರಣ, ಸ್ವರ್ಣರತ್ನಭರಿತ ಪಾತ್ರಹಿಡಿದ ಕೈಗಳನ್ನುಳ್ಳಾತನು. ಚಾಮರ, ತೋಮರ ಮತ್ತು ಮಹಾಶೂಲಗಳು ಹೆಗಲುಗಳ ಮೇಲಿರುತ್ತವೆ.

(೩) ಅಷ್ಟವರ್ಗೀಯ ಅಷ್ಟಪ್ರಕಾರಕ ಭೈರವಮೂರ್ತಿಗಳು ಒಟ್ಟು ೬೪. ಆ ಅಷ್ಟವರ್ಗಗಳಾವುವೆಂದರೆ ಅಸಿತಾಂಗಭೈರವ, ರುರುಭೈರವ, ಚಂಡಭೈರವ, ಕ್ರೋಧಭೈರವ, ಉನ್ಮತ್ತಭೈರವ, ಕಪಾಲಭೈರವ, ಭೀಷಣಭೈರವ ಮತ್ತು ಸಂಹಾರಭೈರವ ಎಂದು.



# ೧೩

# ವೀರಭದ್ರ ವಿಗ್ರಹ

ವೀರಭದ್ರನು ಸಹಾಸ್ರಾಕ್ಷ, ಸಹಸ್ರಶೀರ್ಷ, ಮಹಾಭುಜಬಲ, ಎಡಬಲ ದವಡೆಗಳಿಂದ ಹೊರಟ ಕೋರೆದಾಡೆಗಳನ್ನುಳ್ಳಾತನು; ಹತ್ತು ಕೈಗಳಲ್ಲಿ ಬಾಣ, ಪರಶು, ಖಡ್ಗ, ಬಿಲ್ಲು, ಒನಕೆ, ಹಗ್ಗ (ಉರುಗಳು), ಉರುಟುಗುರಾಣಿ, ಅಂಬು, ಕತ್ತಿಗಳನ್ನು ಹಿಡಿದು, ಜಟಾಮಕುಟಧಾರಿಯಾಗಿ ದಕ್ಷಪ್ರಜಾಪತಿಯ ತಲೆಯ ಮೇಲೆ ನಿಂತಿರುತ್ತಾನೆ.

## ಇತರ ಮುಖ್ಯ ರುದ್ರಮೂರ್ತಿಗಳು

(೧)ಗಂಗಾಧರಮೂರ್ತಿ (೨) ಅರ್ಧನಾರೀಶ್ವರಮೂರ್ತಿ, (೩) ಹರ್ಯರ್ಧ ಮೂರ್ತಿ ಅಥವಾ ಬಾದಾಮಿಯ ಹರಿಹರಮೂರ್ತಿ ಮತ್ತು ಪುಣೆಯ ಹರಿಹರ ಮೂರ್ತಿ, (೪) ಕಲ್ಯಾಣಸುಂದರಮೂರ್ತಿ, (೫) ಕಂಚಿನ ವೃಷಭಾರೂಢ ಮೂರ್ತಿ, (೬) ವಿಷಾಪಹಾರಮೂರ್ತಿ.



# ೧೪

# ರುದ್ರನ ನೃತ್ತಮೂರ್ತಿಗಳು

(೧) ನಟರಾಜ, (೨) ನೃತ್ತಮೂರ್ತಿ (೩) ಕಟಿಸಮಮೂರ್ತಿ, (೪) ಲಲಿತಮೂರ್ತಿ, (೫) ಲಲಾಟತಿಲಕಮೂರ್ತಿ, (೬) ಚತುರಮೂರ್ತಿ ಮತ್ತು (೭) ತಲಸಂಸ್ಫೋಟಿತಮೂರ್ತಿ.

ದಕ್ಷಿಣಾಮೂರ್ತಿ



ಜ್ಞಾನದಕ್ಷಿಣಾಮೂರ್ತಿ, ಯೋಗದಕ್ಷಿಣಾಮೂರ್ತಿ, ವೀಣಾಧರದಕ್ಷಿಣಾಮೂರ್ತಿ

ಅಲ್ಲದೆ ಕಂಕಾಲಮೂರ್ತಿ, ಭಿಕ್ಷಾಟನಮೂರ್ತಿ

## ರುದ್ರನ ಅನುಗ್ರಹಮೂರ್ತಿಗಳು

(೧) ಚಂಡೇಶ್ವರಾನುಗ್ರಹಮೂರ್ತಿ (೨) ವಿಷ್ಣ್ವನುಗ್ರಹಮೂರ್ತಿಯಾ ಚಕ್ರದಾನಮೂರ್ತಿ, (೩) ನಂದೀಶಾನುಗ್ರಹಮೂರ್ತಿ, (೪) ಕಿರಾತಾರ್ಜುನ ಮೂರ್ತಿ, (೫) ವಿಘ್ನೇಶ್ವರಾನುಗ್ರಹಮೂರ್ತಿ, (೬) ರಾವಣಾನುಗ್ರಹಮೂರ್ತಿ.

## ಅವೈದಿಕ ರುದ್ರಭೈರವನ ಅಷ್ಟಮೂರ್ತಿಗಳು

ಕಾಪಾಲಿಕ ಭೈರವನು ಸ್ಫಟಿಕಧಾರಿ, ಅರ್ಧಚಂದ್ರಾಭರಣ, ಜಟಾಧಾರಿ; ಇವನು ಸೃಷ್ಟಿ–ಸ್ಥಿತಿ–ಲಯಕಾರಕನು. ಇವನ ಅವತಾರಗಳೆಂಟು:

(೧) ಅಸಿತಾಂಗ, (೨) ರುರು, (೩) ಚಂಡ, (೪) ಕ್ರೋಧ, (೫) ಉನ್ಮತ್ತ, (೬) ಕಾಪಾಲ, (೭) ಭೀಷ್ಮ, (೮) ಸಂಹಾರಭೈರವ ಈ ಭೈರವರಿಗೆ ಸಮಾನರಾದ ದೇವತೆಗಳೆಂದರೆ: (೧) ವಿಷ್ಣು, (೨) ಬ್ರಹ್ಮ, (೩) ಸೂರ್ಯ, (೪) ರುದ್ರ, (೫) ಇಂದ್ರ, (೬) ಚಂದ್ರ, (೭) ಯಮ ಮತ್ತು (೮) ಪರಬ್ರಹ್ಮ.

## ಮಾಲವ–ಆಭೀರ ದೇಶೀಯ ಭೈರವರು

(೧) ತಾಂಡವಭೂಷಣ, (೨) ಭಸ್ಮೋದ್ಧೂಲಿತ ಜಟಾಮಕುಟಧಾರಿ, (೩) ಅಸ್ಥಿಹಾರ, (೪) ಸ್ಫಟಿಕ–ಪುತ್ರದೀಪಮಣಿಹಾರ, (೫) ಉಪವೀತಧರ ಮತ್ತು ಅಗ್ನಿಹಸ್ತ, (೬) ಗೆಜ್ಜೆಗುಣಿತದ ಡಮರುಧಾರಿ. ಈ ಎಲ್ಲ ಭೈರವರೂ ತ್ರ್ಯಂಬಕರು.

## ಮಾನಿಯರ್ ವಿಲಿಯಂಸ್ ಹೇಳಿದ ಭೈರವರು

(೧) ಮಹಾಭೈರವ, (೨) ಸಂಹಾರಭೈರವ, (೩) ಅಸಿತಾಂಗಭೈರವ, (೪) ರುರುಭೈರವ, (೫) ಕಾಲಭೈರವ, (೬) ಕ್ರೋಧಭೈರವ, (೭) ತಾಮ್ರ ಚೂಡ ಯಾ ಕಪಾಲಭೈರವ, (೮) ಚಂದ್ರಚೂಡ ಯಾ ರುದ್ರಭೈರವ.

ಅಥವಾ

(೧) ವಿದ್ಯಾರಾಜಭೈರವ, (೨) ಕಾಮರಾಜಭೈರವ, (೩) ನಾಗರಾಜ ಭೈರವ, (೪) ಸ್ವಚ್ಛಂದರಾಜಭೈರವ, (೫) ಲಂಬಿತರಾಜಭೈರವ, (೬) ದೇವರಾಜ ಭೈರವ, (೭) ಉಗ್ರರಾಜಭೈರವ ಮತ್ತು (೮) ವಿಘ್ನರಾಜಭೈರವ.

## ಭೈರವನ ಅಸಿತಾಂಗಗಣ

ವಿಶಾಲಾಕ್ಷ, ಮಾರ್ತಾಂಡ, ಮೋದಕಪ್ರಿಯ, ಸ್ವಚ್ಛಂದ, ವಿಘ್ನಸಂತುಷ್ಟ, ಖೇಚರ ಮತ್ತು ಸಚರಾಚರ. ಇವರೆಲ್ಲಾ ತ್ರಿಶೂಲ–ಡಮರು–ಪಾಶ–ಖಡ್ಗ ಹಸ್ತರು.

## ಭೈರವನ ರುರುಗಣ

ಕ್ರೋಡದಂಷ್ಟ್ರ, ಜಟಾಧರ, ವಿಶ್ವರೂಪ, ವಿರೂಪಾಕ್ಷ, ನಾನಾರೂಪಧರ, ವಜ್ರಹಸ್ತ ಮತ್ತು ಮಹಾಕಾಯ. ಇವರೆಲ್ಲಾ ಅಕ್ಷಮಾಲಾ–ಅಂಕುಶ–ಪುಸ್ತಕ–ವೀಣಾಪಾಣಿಗಳು.

## ಭೈರವನ ಚಂಡಗಣ

ಚಂಡ, ಪ್ರಳಯಾಂತಕ, ಭೂಮಿಕಂಪ, ನೀಲಕಂಠ, ವಿಷ್ಣು, ಕುಲಪಾಲಕ, ಮುಂಡಪಾಲ, ಕಾಮಪಾಲ, ಇವರು ಅಗ್ನಿ–ಶಕ್ತಿ–ಗದೆ–ಕುಂಡಗಳನ್ನು ಧರಿಸಿದವರು.

## ಭೈರವನ ಕ್ರೋಧ ಗಣ

ಕ್ರೋಧ, ಪಿಂಗಲೇಕ್ಷಣ, ಅಭ್ರರೂಪ, ಧರಾಪಾಲ, ಕುಟಿಲ, ಮಂತ್ರ ನಾಯಕ, ರುದ್ರ ಮತ್ತು ಪಿತಾಮಹ. ಇವರು ಖಡ್ಗ–ಖೇಟಕ–ಮಹಾಖಡ್ಗ– ಪರಶುಧಾರಿಗಳು;

## ಉನ್ಮತ್ತ ಭೈರವಗಣ

ಉನ್ಮತ್ತ ವಟುನಾಯಕ, ಶಂಕರ, ಭೂತಬೇತಾಳ, ತ್ರಿಣೇತ್ರ, ತ್ರಿಪುರಾಂತಕ, ವರದ, ಪರ್ವತಾವಾಸ, ಇವರು ಕುಂಡ–ಖೇಟಕ–ಪರಿಘ–ಭಿಂಡಿಪಾಲಧರರು.

## ಕಪಾಲ ಭೈರವಗಣ

ಕಾಪಾಲ, ಶಶಿಭೂಷಣ, ಹಸ್ತಿಚರ್ಮಾಂಬರಧರ, ಯೋಗೀಶ, ಬ್ರಹ್ಮ–ರಾಕ್ಷಸ, ಸರ್ವಜ್ಞ, ಸರ್ವದೇವೇಶ, ಸರ್ವಭೂತಹೃದಿಸ್ಥಿತ. ಇವರಿಗೆ ಹಿಂದಿನ ಭೈರವಾಯುಧಗಳೇ ಅನ್ವಯಿಸುತ್ತವೆ.

## ಭೀಷ್ಮ ಭೈರವಗಣ

ಭೀಷಣ, ಭಯಹರ, ಸರ್ವಜ್ಞ, ಕಾಲಾಗ್ನಿಮಹಾರೌದ್ರ, ದಕ್ಷಿಣ, ಮುಖರ ಮತ್ತು ಅಸ್ಥಿರ. ಇವರ ಆಯುಧಗಳು ಯಥಾಪೂರ್ವ.

## ಸಂಹಾರ ಭೈರವಗಣ

ಅತಿರಿಕ್ತಾಂಗ, ಕಾಲಾಗ್ನಿ, ಪ್ರಿಯಂಕರ ಘೋರನಾದ, ವಿಶಾಲಾಕ್ಷ ಯೋಗೀಶ, ದಕ್ಷಸಮಸ್ಥಿತ. ಇವರ ಆಯುಧಗಳೂ ಯಥಾಪೂರ್ವ.



# ೧೫

# ಪ್ರತ್ಯೇಕ ವಿಗ್ರಹಸ್ಥ ದೇವಿಯರು

(೧) ಶ್ರೀಚಕ್ರದೇವಿ, (೨) ಮಹಾದೇವಿ, (೩) ನೀಲಕಂಠಿ (೪) ದುರ್ಗೆ, (೫) ಕ್ಷೇಮಂಕರಿ (೬) ಹರಸಿದ್ಧಿ, (೭) ರುದ್ರಾಂಶದುರ್ಗೆ, (೮) ವನದುರ್ಗೆ, (೯) ಅಗ್ನಿದುರ್ಗೆ, (೧೦) ಜಯದುರ್ಗೆ (೧೧) ವಿಂಧ್ಯವಾಸಿನಿದುರ್ಗೆ, (೧೨) ರಿಪುಮಾರಿಕಾದುರ್ಗೆ, (೧೩) ಮಹಿಷಾಸುರಮರ್ದಿನಿ ಯಾ ಕಾತ್ಯಾಯನಿ, (೧೪) ಚಂಡಿಕೆ, (೧೫) ನಂದೆ, (೧೬) ನವದುರ್ಗೆ, (೧೭) ಭದ್ರಕಾಳಿ, (೧೮) ಮಹಾಕಾಳಿ, (೧೯) ಅಂಬೆ, (೨೦) ಅಂಬಿಕೆ, (೨೧) ಮಂಗಲೆ, (೨೨) ಸರ್ವಮಂಗಲೆ, (೨೩) ಕಾಳರಾತ್ರಿ, (೨೪) ಲಲಿತೆ, (೨೫) ಗೌರಿ, (೨೬) ಉಮೆ, (೨೭) ಪಾರ್ವತಿ, (೨೮) ರಂಭೆ, (೨೯) ತೋತಲೆ, (೩೦) ತ್ರಿಪುರೆ (ಗೌರೀ ದೇವಸ್ಥಾನದ ಅಷ್ಟದಿಕ್ಪಾಲಿಕೆಯರು), (೩೧) ಭೂತ ಮಾತೆ, (೩೨) ಯೋಗನಿದ್ರೆ, (೩೩) ವಾಮೆ (೩೪) ಜ್ಯೇಷ್ಠೆ, (೩೫) ರೌದ್ರಿ, (೩೬) ಕಾಲಿಕೆ, (೩೭) ಕಲವಿಕರಣಿಕೆ, (೩೮) ಬಲವಿಕರಣಿಕೆ, (೩೯) ಬಲಪ್ರಮಥನಿ, (೪೦) ಸರ್ವಭೂತಧಮನಿ, (೪೧) ಮನೋನ್ಮನಿ, (೪೨) ವಾರುಣಿ, (೪೩) ರಕ್ತಚಾಮುಂಡೆ, (೪೪) ಶಿವದೂತಿ, (೪೫) ಯೋಗೇಶ್ವರಿ, (೪೬) ಭೈರವಿ, (೪೭) ತ್ರಿಪುರಭೈರವಿ, (೪೮) ಶಿವೆ, (೪೯) ಕೀರ್ತಿ, (೫೦) ಮಹಾಸಿದ್ಧಿ, (೫೧) ಮಹರ್ಧಿ, (೫೨) ಕ್ಷಮೆ, (೫೩) ದೀಪ್ತಿ, (೫೪) ರತಿ, (೫೫) ಭದ್ರೆ, (೫೬) ಜಯೆ, (೫೭) ವಿಜಯೆ, (೫೮) ಕಾಲೀಮುಖಿ, (೫೯) ಘಂಟಾಕರ್ಣಿ, (೬೦) ಜಯಂತಿ, (೬೧) ದಿತಿ, (೬೨) ಅರುಂಧತಿ, (೬೩) ಅಪರಾಜಿತೆ, (೬೪) ಸುರಭಿ, (೬೫) ಕೃಷ್ಣೆ, (೬೬) ಇಂದ್ರಾಕ್ಷಿ, (೬೭) ಅನ್ನಪೂರ್ಣೆ, (೬೮) ತುಲಸೀದೇವಿ, (೬೯) ಅಶ್ವಾರೂಢೆ, (೭೦) ಭುವನೇಶ್ವರಿ, (೭೧) ಬಾಲೆ, (೭೨) ರಾಜಮಾತಂಗಿ, (೭೩) ಲಕ್ಷ್ಮಿ, (೭೪) ಮಹಾಲಕ್ಷ್ಮಿ (೭೫) ಶ್ರೀದೇವಿ, (೭೬) ಭೂದೇವಿ, (೭೭) ಸರಸ್ವತಿ, (೭೮) ಸಪ್ತಮಾತೃಕಾಗಣಿ, (೭೯) ಜ್ಯೇಷ್ಠಾದೇವಿ, (೮೦) ಚಾಮುಂಡೆ.



# ೧೬

# ಗಣಪತಿ ಪ್ರತಿಮೆಗಳು

ಗಣಪತಿಯು ರುದ್ರನ ಆಕಾಶಭಾಗದ ಸಂಕೇತವು. ಅವನ ವಿಗ್ರಹವು ಪದ್ಮಾಸನದ ಅಥವಾ ಇಲಿಯ ಯಾ ಸಿಂಹದ ಮೇಲೆ ಕುಳಿತಿರುತ್ತದೆ. ಅಥವಾ ನಿಂತಿರುತ್ತದೆ. ಅದು ದ್ವಿಭಂಗದ ಯಾ ತ್ರಿಭಂಗದ ನಿಲುಮೆಯಲ್ಲಿರುತ್ತದೆ; ಸಮಭಂಗಿಯಲ್ಲಿರುವುದೂ ಉಂಟು.

ಉಪವಿಷ್ಟ ಗಣಪತಿಯ ಎಡಗಾಲು ಮಡಿಚಿಕೊಂಡು ಪೀಠದ ಮೇಲೆ ವಿರಮಿಸಿರುತ್ತದೆ ಮತ್ತು ಬಲಗಾಲು ಎಡತೊಡೆಯ ಮೇಲೆ ವಿರಮಿಸುವಂತೆ ಕರ್ತರಿಭಂಗಿಯಲ್ಲಿರುತ್ತದೆ; ಸಾಕ್ಷಾತ್ತಾಗಿ ಬಲಗಾಲು ಬಾಗಿ ಒಂದು ಪೀಠದ ಮೇಲೆ ನಿಂತಿರುತ್ತದೆ. ಗಣಪತಿಗೆ ಕಣ್ಣುಗಳು ಎರಡು ಯಾ ಮೂರು, ಭುಜಗಳು ೪, ೬, ೧೦ ಯಾ ೧೬. ಅವನು ಸರ್ಪ ಯಜ್ಞೋಪವೀತಿ ಸರ್ಪಮೇಖಲಾಧರನು.

**(೧) ಬಾಲಗಣಪತಿ:** ಮಾವಿನ ಹಣ್ಣನ್ನೂ ಬಾಳೆಹಣ್ಣನ್ನೂ ಹಲಸಿನ ಹಣ್ಣನ್ನೂ ಕಬ್ಬಿನಕೋಲನ್ನೂ ತನ್ನ ೪ ಕೈಗಳಲ್ಲಿ ಹಿಡಿದಿರುವನಲ್ಲದೆ ತನ್ನ ಸೊಂಡಿಲಿನಲ್ಲಿ ಬೇಲದ ಹಣ್ಣನ್ನೂ ಹಿಡಿದುಕೊಂಡಿರುತ್ತಾನೆ.

**(೨) ತರುಣ ಗಣಪತಿ:** ಪಾಶ, ಅಂಕುಶ, ಜಂಬೂಫಲ, ಸಾಸಿವೆ ಮತ್ತು ಬಿದಿರುಗೋಲುಗಳನ್ನು ಹಿಡಿದಿರುತ್ತಾನೆ.

**(೩) ಭಕ್ತಿವಿಘ್ನೇಶ್ವರ:** ತೆಂಗಿನಕಾಯಿ, ಮಾವಿನಹಣ್ಣು, ಕಲ್ಲುಸಕ್ಕರೆ, ಪಾಯಸದ ಲೋಟಗಳನ್ನು ತನ್ನ ೪ ಕೈಗಳಲ್ಲಿ ಹಿಡಿದಿರುತ್ತಾನೆ.

**(೪) ವೀರವಿಘ್ನೇಶ್ವರ:** ವೇತಾಳ (VAMPIRE) ಶಕ್ತ್ಯಾಯುಧ, ಬಾಣ, ಖಡ್ಗ, ಖೇಟಕ (ಗುರಾಣಿ), ಮುದ್ಗರ (ಕೊಡತಿಗೆ), ಗದೆ, ಅಂಕುಶ, ಪಾಶ, ಶೂಲ, ಕುಂಡ, ಕೊಡಲಿ, ಧ್ವಜ ಮುಂತಾದವುಗಳನ್ನು ತನ್ನ ೧೬ ಕೈಗಳಲ್ಲಿ ಹಿಡಿದಿರುತ್ತಾನೆ.

**(೫) ಶಕ್ತಿಗಣೇಶ:** ಪದ್ಮಾಸನಾಸೀನ. ಪೃಷ್ಠಗಳಲ್ಲಿ ಪರಸ್ಪರ ಸಂಪರ್ಕವಿಲ್ಲ. ಪಾಶ ಮತ್ತು ವಜ್ರ ಅಥವಾ ದಂತ, ಅಂಕುಶ, ಪಾಶ, ಅಕ್ಷಮಾಲೆಗಳನ್ನು ನಾಲ್ಕು ಕೈಗಳಲ್ಲೂ, ಮೋದಕವನ್ನು ಸೊಂಡಿಲ ತುದಿಯಲ್ಲೂ ಶಕ್ತಿ ಗಣೇಶನು ಹಿಡಿದಿರುತ್ತಾನೆ. ಶಕ್ತಿಗಣೇಶ್ವರನ ಪ್ರಭೇದಗಳು; ಅಷ್ಟಭುಜದ ಲಕ್ಷ್ಮೀಗಣಪತಿ, ಉಚ್ಛಿಷ್ಟಗಣಪತಿ, ಮಹಾಗಣಪತಿ, ಊರ್ಧ್ವಗಣಪತಿ, ಪಿಂಗಳಗಣಪತಿ ಎಂದು. ಲಕ್ಷ್ಮೀಗಣಪತಿಯು ಗಿಳಿ, ದಾಳಿಂಬ, ಕಮಲ,

ರತ್ನಖಚಿತ ಹೇಮಜಲಪಾತ್ರ, ಅಂಕುಶ, ಪಾಶ, ಕಲ್ಪಕಲತೆ, ಬಾಣವೆಂಬ ಸಸ್ಯಮುಕುಲಗಳಿಂದ ಅಲಂಕೃತನಾಗಿರುತ್ತಾನೆ. ಅವನು ಸೊಂಡಿಲಿನಿಂದ ನೀರು ಸುರಿಸುತ್ತಿರುತ್ತಾನೆ.

ಅಥವಾ

ಮುಕ್ಕಣ್ಣು, ದಂತ–ಚಕ್ರ–ಅಭಯ ಹಸ್ತ, ನಾಲ್ಕನೆಯ ಕೈಯಲ್ಲಿ ಲಕ್ಷ್ಮಿಯನ್ನು ಅಪ್ಪಿಕೊಂಡಿರುವುದು, ಅವಳೂ ಅವನನ್ನು ತಬ್ಬಿಕೊಂಡಿರುವುದಲ್ಲದೆ ಕೈಯಲ್ಲಿ ತಾವರೆಯನ್ನು ಹಿಡಿದುಕೊಂಡಿರುವುದು– ಈ ಲಕ್ಷಣಗಳಿರಬಹುದು. ಉಚ್ಛಿಷ್ಟಗಣಪತಿಗೆ ಪದ್ಮ, ದಾಳಿಂಬ, ವೀಣೆ, ಒಂದು ಮುಷ್ಟಿ ಭತ್ತ ಹಾಗೂ ಅಕ್ಷಮಾಲೆಗಳು ಲಕ್ಷಣಗಳಾಗಿರಬಹುದು.

ಅಥವಾ

ಅಂಬು, ಬಿಲ್ಲು, ಪಾಶ, ಅಂಕುಶ ಹಿಡಿದಿರುವುದೂ ಪದ್ಮಾಸನಸ್ಥನಾಗಿರುವುದೂ ಸಿದ್ಧಿಯೊಡನೆ ಕುಳ್ಳಿರಲು ಯತ್ನಿಸುತ್ತಿರುವುದೂ ಲಕ್ಷಣಗಳಾಗಬಹುದು.

ಅಥವಾ

ಉಪವೇಶನ, ಪಾಶ–ಅಂಕುಶ–ಕಬ್ಬಿನ ತುಂಡುಗಳನ್ನು ಮೂರು ಕೈಗಳಲ್ಲಿ ಹಿಡಿದು ನಾಲ್ಕನೆಯದರಲ್ಲಿ ಮಗ್ನದೇವಿಯ ಮಧ್ಯಸ್ಥಾನವನ್ನು ಹಿಡಿದಿರುವುದು ಮೂರು ಕಿವಿಗಳು, ರತ್ನಮಕುಟ, ಮಗ್ನದೇವಿ ಅವನ ತೊಡೆಯ ಮೇಲೆ ಕುಳಿತಿರುವುದು. ಈ ಮಗ್ನೆಯ ಹೆಸರು ವಿಘ್ನೇಶ್ವರಿ. ಸಾಕ್ಷಾತ್ತಾಗಿ ಪಾಶಾಂಕುಶಗಳನ್ನೂ ಲಡ್ಡುಗಳನ್ನೂ ಮೂರು ಕೈಗಳಲ್ಲಿ ಹಿಡಿದ ಈ ಉಚ್ಛಿಷ್ಟ ಮೂರ್ತಿಯು ನಾಲ್ಕನೆಯದರಿಂದ ತನ್ನ ಸೊಂಡಿಲಿಗೆ ತಾಗಿರುವ ಮಗ್ನದೇವಿಯ ಹಿಂದಿನ ಪೃಷ್ಠಭಾಗಗಳನ್ನು ಆಲಂಗಿಸಿಕೊಂಡಿರುತ್ತದೆ. ದೇವಿಯ ಬಲಗೈಯು ಈ ಗಣಪತಿಯ ಮಧ್ಯಸ್ಥಾನವನ್ನು ಹಿಡಿದುಕೊಂಡಿರುತ್ತದೆ. ಎಡಗೈಯಲ್ಲಿ ದೇವೀವಿಗ್ರಹವು ಕಮಲವನ್ನು ಹಿಡಿದಿರುತ್ತದೆ. ಮಹಾಗಣಪತಿಯ ವಿಗ್ರಹವು ಮೂರನೆಯದು. ಅದಕ್ಕೆ ದಶಭುಜಗಳು. ಅವುಗಳಿಂದ ಅದು ಕಮಲ, ದಾಳಿಂಬ, ರತ್ನಖಚಿತಜಲಪಾತ್ರ, ಗದೆ, ತನ್ನ ಮುರಿದ ದಂತ, ಇಕ್ಷುಖಂಡ, ಭತ್ತದ ಚುಂಗುಗಳು ಮತ್ತು ಪಾಶ ಇವುಗಳನ್ನು ಹಿಡಿದುಕೊಂಡಿರುತ್ತದೆ. ಶಕ್ತಿದೇವಿಯು ಅವನ ತೊಡೆಯನ್ನೇರಿ ಕಮಲಧಾರಿಣಿಯಾಗಿ ಕುಳಿತಿರುತ್ತಾಳೆ. ಆಮೇಲಿನ ಗಣೇಶೋಪವಿಭಾಗವು ನಾಲ್ಕನೆಯದು. ಅದರ ಹೆಸರು ಊರ್ಧ್ವಗಣಪತಿ ಎಂದು. ಅದು ಕಲ್ಹಾರ, ಭತ್ತದ ಚುಂಗುಗಳು, ಇಕ್ಷುಚಾಪ, ಬಾಣ, ದಂತ ಇವುಗಳನ್ನು ಐದು ಕೈಗಳಲ್ಲಿ ಹಿಡಿದುಕೊಂಡು ಆರನೆಯದರಿಂದ ಶಕ್ತಿದೇವಿಯ ಹಿಂಬದಿಯ ಕೆಳಪೃಷ್ಠಭಾಗಗಳನ್ನು ಅಪ್ಪಿಕೊಂಡಿರುತ್ತದೆ. ಪಿಂಗಲಗಣಪತಿಯು ಶಕ್ತಿಗಣೇಶನ ಐದನೆಯ ಹಾಗೂ ಕೊನೆಯ ಉಪವಿಭಾಗ. ಇದಕ್ಕೂ ಆರು ಕೈಗಳು; ಅವುಗಳಿಂದ ಅದು ಮಾವಿನಹಣ್ಣು, ಪುಷ್ಪಗುಚ್ಛ, ಕಬ್ಬಿನತುಂಡು, ಸಾಸಿವೆ, ಮೋದಕ, ಕೊಡಲಿ ಇವುಗಳನ್ನು ಹಿಡಿದು ಲಕ್ಷ್ಮೀದೇವಿಯನ್ನು ತನ್ನೆಡಕ್ಕೆ ಕುಳ್ಳಿರಿಸಿಕೊಂಡಿರುತ್ತದೆ.

**(೬) ಹೇರಂಬಗಣೇಶ:** ಇವನಿಗೆ ಪಂಚಗಜಮುಖ ಈ ಐದುಮುಖಗಳು ನಾಲ್ಕು ದಿಕ್ಕುಗಳತ್ತ ಹಾಗೂ ಆಕಾಶದತ್ತ ಅನುಕ್ರಮವಾಗಿ ತಿರುಗಿವೆ. ಇವನು ಸಿಂಹವಾಹನನು.

ಪಾಶ, ದಂತ, ಅಕ್ಷಮಾಲೆ, ಪರಶು, ತ್ರಿಶಿರ ಮುದ್ಗರ, ಮೋದಕ, ವರದ, ಅಭಯ ಎಂಬಿವನ್ನು ಇವನ ಎಂಟು ಕೈಗಳು ತೋರಿಸುತ್ತವೆ.

**(೭) ಪ್ರಸನ್ನಗಣಪತಿ:** ಇವನಿಗೆ ತ್ರಿಭಂಗ, ಪದ್ಮಾಸನ; ಪಾಶಾಂಕುಶ ವರದ ಅಭಯ ಹಸ್ತಗಳು; ಸೊಂಡಿಲಿನಿಂದ ದಂತ–ಮೋದಕಗಳನ್ನು ಎತ್ತಿ ಬಾಯಿಗೆ ಹಾಕಿಕೊಳ್ಳುವಂತಿರುತ್ತದೆ ಇವನ ಮೂರ್ತಿ.

**(೮) ಧ್ವಜಗಣಪತಿ:** ಇವನು ಚತುರ್ಭುಜ; ಪುಸ್ತಕ, ಅಕ್ಷಮಾಲೆ, ದಂಡ ಮತ್ತು ಕಮಂಡಲುಗಳಿಂದ ಇವನನ್ನು ಗುರುತಿಸಬಹುದು.

**(೯) ಉನ್ಮತ್ತೂಚ್ಛಿಷ್ಟಗಣಪತಿ:** ಇವನಿಗೆ ಮುಕ್ಕಣ್ಣು. ಇವನು ಪಾಶಾಂಕುಶ, ಮೋದಕ ಪಾತ್ರೆ ಮತ್ತು ದಂತಗಳನ್ನು ನಾಲ್ಕು ಕೈಗಳಲ್ಲಿ ಹಿಡಿದಿರುತ್ತಾನೆ. ಪದ್ಮವೇ ಇವನ ಆಸನ. ಇವನ ಗಜಮುಖವು ಮದಜಲಮಯವಾಗಿರುತ್ತದೆ.

**(೧೦) ವಿಘ್ನರಾಜಗಣಪತಿ:** ಇವನು ಪಾಶಾಂಕುಶಧರನು; ಇಲಿಯ ಮೇಲೆ ಕುಳಿತು ಮಾವಿನ ಹಣ್ಣನ್ನು ತಿನ್ನುತ್ತಿರುತ್ತಾನೆ.

**(೧೧) ಭುವನೇಶಗಣಪತಿ:** ಇವನು ಅಷ್ಟಭುಜನು. ಶಂಖ, ಇಕ್ಷು ಚಾಪ, ಪುಷ್ಪಬಾಣಗಳು, ಮುರಿದ ದಂತ, ಪಾಶ, ಅಂಕುಶ ಮತ್ತು ಭತ್ತದ ಎಳೆಸಸಿಗಳನ್ನು (ಬೆದೆಗಳನ್ನು) ತನ್ನೆಂಟು ಕೈಗಳಲ್ಲಿ ಹಿಡಿದಿರುತ್ತಾನೆ.

**(೧೨) ನೃತ್ತಗಣಪತಿ:** ಕುಣಿಯುತ್ತಾನೆ. ಇವನೂ ಅಷ್ಟಭುಜನು. ತನ್ನ ಎಂಟು ಕೈಗಳಿಂದ ಪಾಶ, ಅಂಕುಶ, ಕಡುಬು, ಕುಠಾರ, ದಂತ, ವಲಯ (Quoit), ಅಂಗುಲೀಯ (ಉಂಗುರ)ಗಳನ್ನು ಧರಿಸಿದ್ದಾನೆ; ಕೊನೆಗೈ ಬೇಕಾದ ಹಾಗೆ ತೂಗುತ್ತಿರುತ್ತದೆ. ಎಡಗಾಲು ಬಾಗಿ ಪದ್ಮಾಸನದ ಮೇಲಿರುತ್ತದೆ; ಬಲಗಾಲು ಮೇಲೆದ್ದು ಗಾಳಿಯಲ್ಲಾಡುತ್ತದೆ. ಸಾಕ್ಷಾತ್ತಾಗಿ ಎದುರಿಗೆ ಕಾಣುವುದು ನಾಲ್ಕು ಕೈಗಳು.

**(೧೩) ಹರಿದ್ರಾಗಣಪತಿ:** ಎಂದರೆ ರಾತ್ರಿ ಗಣಪತಿ. ಇವನಿಗೆ ನಾಲ್ಕು ಕೈಗಳು ಅವುಗಳಲ್ಲಿ ಪಾಶಾಂಕುಶ ಮೋದಕ ದಂತಗಳಿವೆ. ಇವನು ತ್ರ್ಯಂಬಕ.

**(೧೪) ಭಾಲಚಂದ್ರಗಣಪತಿ:** ಚಂದ್ರನನ್ನೀತನು ಹಣೆಯ ಮೇಲೆ ಧರಿಸಿದ್ದಾನೆ.

**(೧೫) ಶೂರ್ಪಕರ್ಣಗಣಪತಿ:** ಶೂರ್ಪಕರ್ಣ ಇವನಿಗೆ ವಿಶಿಷ್ಟ. ಶೂರ್ಪ ಕರ್ಣ ಎಂದರೆ ಮೊರಗಿವಿ.

**(೧೬) ಏಕದಂತಗಣಪತಿ:** ಇವನಿಗೆ ಬಲಗಡೆ ದಂತವಿಲ್ಲ.



# ೧೭

# ಸುಬ್ರಹ್ಮಣ್ಯಮೂರ್ತಿ

**ಸುಬ್ರಹ್ಮಣ್ಯಸ್ವಾಮಿ ವಿಗ್ರಹವು ತ್ರಿವಿಧವಾಗಿದೆ. ಮೊದಲಿನದರ ಉಪವಿಭಾಗಗಳು:**

(೧) ಪದ್ಮದ ಅಥವಾ ನವಿಲಿನ ಮೇಲೆ ಕುಳಿತ ಮೂರ್ತಿ. ಬಲಗೈಯಲ್ಲಿ ತಾವರೆಯನ್ನು ಧರಿಸಿ ಎಡಗೈಯು ಕಟ್ಯವಲಂಬಿತವಾಗಿರುವುದು ಈ ಸುಬ್ರಹ್ಮಣ್ಯ ಮೂರ್ತಿಯ ಲಕ್ಷಣಗಳು.

ಅಥವಾ

ಬಲಗೈ ಅಭಯ ಮುದ್ರೆಯಲ್ಲಿರುವುದು ಮತ್ತು ಎಡಗೈ ಕಮಲ ಹಿಡಿದಿರುವುದು ವೈಕಲ್ಪಿಕ ಲಕ್ಷಣಗಳು.

(೨) ಬಲಗೈಯಲ್ಲಿ ಈ ಸುಬ್ರಹ್ಮಣ್ಯನು ದಂಡವನ್ನೂ ಎಡಗೈಯಲ್ಲಿ ಕಮಲವನ್ನೂ ಹಿಡಿದಿರುತ್ತಾನೆ.

(೩) ಬಲಗೈಯಲ್ಲಿ ಶಕ್ತ್ಯಾಯುಧವನ್ನೂ ಎಡಗೈಯಲ್ಲಿ ವಜ್ರಾಯುಧವನ್ನೂ ಧರಿಸಿರುವುದು ಇದರ ಮೂರನೆಯ ವಿಧವು.

(೪) ಬಲಗೈಯಲ್ಲಿ ಶಕ್ತ್ಯಾಯುಧವನ್ನೂ ಎಡಗೈಯಲ್ಲಿ ಕೋಳಿಯನ್ನೂ ಹಿಡಿದಿರುವುದು ಚತುರ್ಥ ವಿಧವಾಗಿದೆ.

ಎರಡನೆಯ ಸುಬ್ರಹ್ಮಣ್ಯ ಮೂರ್ತಿ ಒಂದೇ ವಿಧವಾದದ್ದು. ಅದಕ್ಕೆ ಆರು ಕೈಗಳಿರುತ್ತವೆ. ಅಭಯಹಸ್ತ, ಖಡ್ಗಹಸ್ತ, ಶಕ್ತಿಹಸ್ತಗಳು ಬಲಗೈ ಮೂರಾದರೆ ಖೇಟಕ, ಅಕ್ಷಮಾಲೆ, ಕೋಳಿಗಳನ್ನು ಎಡಗಡೆಯ ಮೂರು ಕೈಗಳಲ್ಲಿ ಹಿಡಿದಿರುವದೊಂದು ಬಗೆ. ಎಂಟು ಕೈಗಳಿಂದ ವಜ್ರ, ಶಕ್ತಿ, ಅಭಯ, ವರದ, ಖಡ್ಗ, ಖೇಟಕ, ಬಾಣ ಮತ್ತು ಧನುಸ್ ಇವುಗಳನ್ನು ತೋರಿಸುತ್ತಿರುವುದು ಇನ್ನೊಂದು ಬಗೆ.

ಮೂರನೆಯ ಬಗೆಯ ಸುಬ್ರಹ್ಮಣ್ಯ ಮೂರ್ತಿಯು ಅಷ್ಟಭುಜನು. ಆ ಎಂಟು ಕೈಗಳಲ್ಲಾತ ವಜ್ರ, ಶಕ್ತಿ, ಅಭಯ, ವರದ, ಖಡ್ಗ, ಖೇಟಕ, ಬಾಣ, ಧನುಸ್ಸುಗಳನ್ನಾದರೂ ತೋರಿಸುತ್ತಿರಬಹುದು; ಅಥವಾ ಪದ್ಮ, ವಜ್ರ, ಶಕ್ತಿ, ಅಭಯ, ವರದ, ಖಡ್ಗ ಖೇಟಕ, ಪಾಶಗಳನ್ನಾದರೂ ತೋರಿಸುತ್ತಿರಬಹುದು.

ಶಕ್ತಿಧರ; ಸ್ಕಂದ, ಸೇನಾಪತಿ, ಸುಬ್ರಹ್ಮಣ್ಯ, ಗಜವಾಹನ, ಶರವಣಭವ; ಕಾರ್ತಿಕೇಯ, ಕುಮಾರ, ಷಣ್ಮುಖ, ತಾರಕಾರಿ, ಸೇನಾನಿ, ಬ್ರಹ್ಮಶಾಸ್ತ್ರ, ವಲ್ಲೀಕಲ್ಯಾಣಸುಂದರ, ಬಾಲಸ್ವಾಮಿ, ಕ್ರೌಂಚಭೇತ್ತ, ಶಿಖಿವಾಹನ ಎಂಬೀ ೧೬ ಸುಬ್ರಹ್ಮಣ್ಯದೇವರ ಹೆಸರುಗಳು.



# ೧೮

# ಅಧಿಕಾರನಂದಿ ಅಥವಾ ನಂದಿಕೇಶ್ವರ

ನಂದಿಕೇಶ್ವರನು ಪದ್ಮಾಸನದ ಮೇಲೆ ನಿಂತಿರುತ್ತಾನೆ. ತನ್ನ ಹಿಂಗೈಗಳಲ್ಲಿ ಪರಶುವನ್ನೂ ಮೃಗ (ಜಿಗರೆ)ವನ್ನೂ ಹಿಡಿದಿರುತ್ತಾನೆ. ಮುಂಗೈಗಳು ಅಂಜಲಿಸ್ವರೂಪದಲ್ಲಿವೆ. ಈ ದೇವನೂ ಇವನ ಪತ್ನಿಯೂ ದೇವಾಲಯದ ಬಾಗಿಲ ಬಳಿ ಇರುತ್ತಾರೆ.

## ಚಂಡೇಶ್ವರ

ಚಂಡೇಶ್ವರನು ರುದ್ರನ ಒಂದು ಭೂತಗಣ. ಅವನು ಪದ್ಮಾಸನಸ್ಥನು. ಅವನದು ರುದ್ರಕಳೆ, ಬಣ್ಣವು ಕಪ್ಪು, ಸರ್ಪ ಯಜ್ಞೋಪವೀತಿ; ಅರ್ಧ ಚಂದ್ರಾಲಂಕೃತ ಜಟಾಮಕುಟ ಅವನದು. ಅವನು ಚತುರ್ಮುಖನು, ಚತುರ್ಭುಜನು, ದ್ವಾದಶಾಕ್ಷನು. ಬಲಗೈಗಳಲ್ಲಿ ಅಕ್ಷಮಾಲೆ ಮತ್ತು ತ್ರಿಶೂಲ ಮತ್ತು ಟಂಕ ಕಮಂಟಲುಗಳು ಎಡಗೈಗಳಲ್ಲಿ.

ಅಥವಾ

ಅವನು ವೀರಾಸನಸ್ಥನು. ಹಿಂಗೈಗಳಲ್ಲಿ ಪಿನಾಕಧನುಸ್ಸನ್ನೂ ಅಮೋಘ ಬಾಣವನ್ನೂ ಹಿಡಿದುಕೊಂಡು ಮುಂಗೈಗಳಲ್ಲಿ ವರದ–ಅಭಯ ಹಸ್ತಗಳನ್ನು ತೋರಿಸುತ್ತಾನೆ.

ಅಥವಾ

ಅವನು ಉತ್ಕುಟಿಕಾಸನಸ್ಥನು ಇಲ್ಲವೆ ನಾಲ್ಕು ಕೈಗಳಲ್ಲಿ ಟಂಕ, ಪಾಶ, ಶೂಲ, ಅಭಯಗಳನ್ನು ಪ್ರದರ್ಶಿಸುತ್ತಾನೆ.

ಅಥವಾ

ಅವನ ಜೊತೆಗೆ ನೀಲೋತ್ಪಲಧಾರಿಣಿಯಾದ ಧರ್ಮನೀತಿ ಇರುತ್ತಾಳೆ. ಇಲ್ಲವೆ ಅವನು ತ್ರ್ಯಂಬಕನಾಗಿ ರುದ್ರದೇವಾಲಯದ ಈಶಾನ್ಯ ದಿಕ್ಕಿನಲ್ಲಿ ಪ್ರಾಕಾರದ ಬಳಿಯಲ್ಲಿ ಯಜ್ಞೋಪವೀತ ಧರಿಸಿ ಬಲಗೈಯಲ್ಲಿ ಕೊಡಲಿ ಹಿಡಿದು ಎಡಗೈಯನ್ನು ಸೊಂಟದ ಮೇಲಿಟ್ಟುಕೊಂಡಿರಬಹುದು.



# ೧೯

# ಬ್ರಹ್ಮದೇವ ಮೂರ್ತಿ

**ಸಾಮಾನ್ಯ ಲಕ್ಷಣ:** ವಿಷ್ಣು, ಶಿವರ ಸರಿಜೋಡಿಯಾದವನು ಬ್ರಹ್ಮ. ಅವನು ಚತುರ್ಭುಜನು. ಜಟಾಮಕುಟ, ಯಜ್ಞೋಪವೀತ, ಕಟಿಸೂತ್ರ, ಮೃಗಚರ್ಮ (ಕೃಷ್ಣಾಜಿನ)ವನ್ನು ಉಪವೀತದಂತೆ ಧರಿಸಿರುವುದು, ಕಿವಿಗಳಲ್ಲಿ ಕುಂಡಲಗಳು. ಈತನು ವಿಷ್ಣುವಿನ ಯಾ ರುದ್ರನ ದೇವಾಲಯದ ಉತ್ತರ ಪ್ರಾಕಾರದ ಬಳಿ ಇರುತ್ತಾನೆ.

**ವಿಶೇಷ ಲಕ್ಷಣ:** ಅವನದು ಪದ್ಮಾಸನ ಯಾ ಹಂಸಾಸನ ಯಾ ಲಂಬಕೂರ್ಚಾಸನ ಅಥವಾ ಯೋಗಾಸನನಾಗಿರಬಹುದು. ಚತುರ್ಮುಖನಾದ ಅವನ ಮುಖಗಳು ನಾಲ್ಕು ದಿಕ್ಕುಗಳತ್ತ ತಿರುಗಿಸುತ್ತವೆ. ಅವನು ಧರಿಸಿರುವುದು ಅಕ್ಷಮಾಲೆ, ಕೂರ್ಚೆ ಬಲಗೈಗಳಲ್ಲಿ; ಕುಶಕಮಂಡಲುಗಳನ್ನು ಎಡಗೈಗಳಲ್ಲಿ. ಸ್ರುಕ್–ಸ್ರುವಗಳು ಬಲಗೈಗಳಲ್ಲಿ; ಆಜ್ಯಸ್ಥಾಲಿ, ಕುಶಗಳು ಎಡಗೈಗಳಲ್ಲಿ. ಮುಂದಿನ ಕೈ (ಮುಂಗೈ)ಗಳಲ್ಲಿ ಅಭಯ–ವರದ ಮುದ್ರೆಗಳು; ಹಿಂಗೈಗಳಲ್ಲಿ ಅಕ್ಷಮಾಲೆ ಕಮಂಡಲುಗಳು ಅಥವಾ ಅವನ ಕರ್ತರ್ನ್ಯಾಸನ (Crossed Legs) ವನ್ನಾಧರಿಸಿದ ಮತ್ತು ಮೇಲ್ಮುಖವಾಗಿರುವ ಮುನ್ನೆರಡು ಹಸ್ತದ ಮೇಲಿಟ್ಟಿರುವ ಕೆಳಮೊಗದ ಮುಂಬಲ ಹಸ್ತವುಳ್ಳವನೂ ಹಿಂಗೈಗಳಲ್ಲಿ ಅಕ್ಷಮಾಲೆಯನ್ನೂ ಕಮಂಡಲವನ್ನೂ ಹಿಡಿದವನೂ ಆಗಿರಬಹುದು. ಅಥವಾ ಮುಂಬಲಗೈ ವರದಹಸ್ತ, ಕರ್ತರ್ನ್ಯಾಸನ (ಪದ್ಮಾಸನ), ಹಿಂಬಲಗೈ ಸ್ರುವವನ್ನು ಹಿಡಿದಿರುವುದು, ಹಿನ್ನೆಡಗೈ ಸ್ರುಕ್ಕನ್ನು ಹಿಡಿದಿರುವುದು, ಮುನ್ನೆಡಗೈ ಕಮಂಡಲವನ್ನು ಹಿಡಿದಿರುವುದು ಇದೂ ಒಂದು ಬಗೆ.

**ಬ್ರಹ್ಮನಿಗೆ ಗಡ್ಡವಿದೆ, ಕಣ್ಣು ಮುಚ್ಚಿರುತ್ತದೆ;** ಅವನಿಗೆ ಸಾವಿತ್ರಿ ಸರಸ್ವತಿಯರು ಪತ್ನಿಯರು. ಸಾವಿತ್ರಿಗೆ ನಾಲ್ಕು ತಲೆಗಳು ಮತ್ತು ನಾಲ್ಕು ಕೈಗಳು, ಅವಳು ಅಕ್ಷಮಾಲೆ; ಪುಸ್ತಕ, ಪದ್ಮ ಮತ್ತು ಕಮಂಡಲುಗಳನ್ನು ಧರಿಸಿರಬೇಕು.

**ಬ್ರಹ್ಮನ ಆಯುಧಗಳು:** ಪಾಶವು ಅಧಿಕಾಯುಧವು ಅಥವಾ ಐಚ್ಛಿಕಾ ಯುಧವು. ಕಟಿಬಂಧದ ಬದಲು ಉದರಬಂಧವಿರಬಹುದು. ಉದರವು ಮಹೋದರವಾಗಿರುತ್ತದೆ. ಕಟ್ಯವಲಂಬಿತಹಸ್ತನಾಗಿರುತ್ತಾನೆ ಬ್ರಹ್ಮನು; ಜಟಾಮುಕುಟದ ಬದಲು ಕಿರೀಟಮಕುಟಧಾರಿಯಾಗಿರಬಹುದು.



# ೨೦

# ಅಷ್ಟದಿಕ್ಪಾಲಕರು

## ಇಂದ್ರ

ಇಂದ್ರನು ಕಿರೀಟಕುಂಡಲ ಹಾರ ಕೇಯೂರಾಲಂಕೃತನು. ಆತನ ಬಲಗೈಯಲ್ಲಿ ಶಕ್ತ್ಯಾಯುಧವೂ ಎಡಗೈಯಲ್ಲಿ ಅಂಕುಶವೂ ಇರುತ್ತವೆ. ಸಿಂಹದ ಅಥವಾ ಐರಾವತದ ಮೇಲೆ ಅವನು ಕುಳಿತಿರುತ್ತಾನೆ. ಇಂದ್ರಾಣಿ ಯಾ ಶಚೀದೇವಿಯು ಉತ್ಪಲಧಾರಿಣಿಯಾಗಿ ಅವನೊಡನೆ ಕುಳಿತಿರುತ್ತಾಳೆ. ಎಡಬಲಗಳಲ್ಲಿ ಇಬ್ಬರು ಗಂಧರ್ವ ಸ್ತ್ರೀಯರು ಚಾಮರ ಬೀಸುತ್ತಿರುತ್ತಾರೆ.

ಅಥವಾ

ಇಂದ್ರನು ವಜ್ರ, ಅಂಕುಶ ಯಾ ನೀಲೋತ್ಪಲ ಹಿಡಿದಿರುತ್ತಾನೆ. ಒಕ್ಕೈಯಿಂದ ಇಂದ್ರಾಣಿಯು ಇಂದ್ರನನ್ನು ಅಪ್ಪಿಕೊಂಡಿರುತ್ತಾಳೆ. ಅವಳ ಇನ್ನೊಂದು ಕೈಯಲ್ಲಿ ಸಂತಾನಮಂಜರಿಯನ್ನು ಹಿಡಿದುಕೊಂಡಿರುತ್ತಾಳೆ. ಇಂದ್ರನ ಗಜವಾಹನಕ್ಕೆ ನಾಲ್ಕು ದಂತಗಳಿರುತ್ತವೆ. ಇಂದ್ರನ ಮುಂಗೈಗಳೆರಡು ಅನುಕ್ರಮವಾಗಿ ಅಭಯವರದ ಹಸ್ತಗಳಾಗಿರುತ್ತವೆ, ಹಿಂಗೈಗಳೆರಡರಲ್ಲಿ ಅವನು ಅಂಕುಶ ವಜ್ರಗಳನ್ನು ಹಿಡಿದಿರುತ್ತಾನೆ.

ಅಥವಾ

ಇಂದ್ರನು ಭದ್ರಪೀಠಸ್ಥನಾಗಿರಬಹುದು. ಮುಂಗೈಗಳೆರಡರಲ್ಲಿ ಆತನು ವರದಹಸ್ತನೂ ಅಕ್ಷಮಾಲಾಧರನೂ ಆಗಿರುತ್ತಾನೆ. ಹಿಂದಿನ ಎಡ-ಬಲಗೈಗಳಲ್ಲಿ ವಜ್ರ ಅಂಕುಶಪಾಣಿಯಾಗಿರುತ್ತಾನೆ. ಅವನೀಗ ಜಟಾಮಕುಟಾಲಂಕೃತನೂ ಯಜ್ಞೋಪವೀತಿಯೂ ಆಗಿ ಹಾರಹಾಕಿಕೊಂಡು ಮೆರೆಯುತ್ತಾನೆ.

## ಅಗ್ನಿ

ಅಗ್ನಿಯು ಜಟಾಮಕುಟಧಾರಿಯು, ಚತುರ್ಭುಜನು, ತ್ರ್ಯಕ್ಷನು ಮತ್ತು ಮೇಷವಾಹನನು. ಮುಂದಿನ ಕೈಗಳಲ್ಲಿ ಅವನು ವರದಹಸ್ತನೂ ಅಭಯಹಸ್ತನೂ ಆಗಿದ್ದಾನೆ. ಹಿಂದಿನ

ಕೈಗಳಲ್ಲಿ ಸ್ರುಕ್ಕನ್ನೂ ಶಕ್ತ್ಯಾಯುಧವನ್ನೂ ಹಿಡಿದಿರುತ್ತಾನೆ. ಅಥವಾ ಅವನು ಬ್ರಹ್ಮಸೂತ್ರ (ಜನಿವಾರ) ಧರನು; ಮೀಸೆ ಅವನಿಗಿದೆ; ಅಕ್ಷಮಾಲೆ ಕಮಂಡಲುಗಳನ್ನು ಹಿಡಿದಿರುತ್ತಾನೆ. ಅಥವಾ ಅವನಿಗೆ ನಾಲ್ಕು ಕೈಗಳಿದ್ದರೆ ಅವುಗಳಲ್ಲಿ ಮುಂದಿನ ಬಲಗೈ ಒಂದರಲ್ಲಿ ಜ್ವಾಲೆಗಳನ್ನೂ ಎರಡನೆಯದರಲ್ಲಿ ತ್ರಿಶೂಲವನ್ನೂ, ಹಿಂದಿನ ಎಡಗೈಗಳಲ್ಲಿ ಒಂದರಲ್ಲಿ ಅಕ್ಷಮಾಲೆಯನ್ನೂ, ಎರಡನೆಯದರಲ್ಲಿ ಸ್ವಾಹಾದೇವಿಯನ್ನೂ ಎತ್ತಿಹಿಡಿದಿರುತ್ತಾನೆ. ಈ ಅಗ್ನಿಗೆ ನಾಲ್ಕು ಕೋರೆದಾಡೆಗಳಿರುತ್ತವೆ. ನಾಲ್ಕು ಗಿಳಿಗಳು ಅವನ ತೇರನ್ನು ಹಾರಿಸಿ ಒಯ್ಯುತ್ತಿರುತ್ತವೆ. ಅವನಿಲ್ಲಿ ಧೂಮಕೇತು. ಸ್ವಾಹಾದೇವಿಯು ರತ್ನಪಾತ್ರೆ (ನವರತ್ನ ತುಂಬಿದ)ಯನ್ನು ಹಿಡಿದುಕೊಂಡಿರುತ್ತಾಳೆ. ಅವನು ಹಾಕಿ ಕುಳಿತುಕೊಂಡಿರುವುದು ಅರ್ಧ ಚಂದ್ರಾಸನವನ್ನು.

ಸಾಕ್ಷಾತ್ತಾಗಿ ಅಗ್ನಿಗೆರಡು ಅಜಶಿರಸ್ಸುಗಳಿರುತ್ತವೆ; ಸಪ್ತಭುಜಗಳಿರುತ್ತವೆ; ಚರಣತ್ರಯವಿರುತ್ತದೆ. ಕೈಗಳಲ್ಲಿ ನಾಲ್ಕು ಬಲಕ್ಕೂ ಮೂರು ಎಡಕ್ಕೂ ಇರುತ್ತವೆ. ಅವನು ಮನುಷ್ಯಮುಖಧಾರಿ ಮತ್ತು ಮೇಷದ ಬದಲು ಗೂಳಿಯನ್ನು ಹತ್ತಿಕೊಂಡಿರುತ್ತಾನೆ.

## ಯಮ

ಯಮನು ವೈವಸ್ವತನು ಅರ್ಥಾತ್ ಸೂರ್ಯಪುತ್ರನು ಮತ್ತು ಚತುರ್ಭುಜನು; ದ್ವಿಭುಜನಾದರೂ ಆಗಿರಬಹುದು. ಕೈಗಳಲ್ಲಿ ಅವನು ಖಡ್ಗವನ್ನೂ ಖೇಟಕವನ್ನೂ ಹಿಡಿದಿರಬಹುದು ಅಥವಾ ಹಣ್ಣುಸುಳಿಯೆಲೆಗಳನ್ನು ಹಿಡಿದಿರಬಹುದು ಅಥವಾ ದಂಡಪಾಶಗಳನ್ನು ಧರಿಸಿರಬಹುದು. ಯಮನು ಕಿರೀಟ ಮಕುಟಧಾರಿಯು; ರಕ್ತಪುಷ್ಪಹಾರ ಹಾಕಿಕೊಂಡಿರುತ್ತಾನೆ. ಸಿಂಹವನ್ನೋ ಕೋಣನನ್ನೋ ವಾಹನವನ್ನಾಗಿ ಮಾಡಿಕೊಂಡಿರುತ್ತಾನೆ. ಯಮನ ಎಡ–ಬಲಗಳಲ್ಲಿ ಮೃತ್ಯುದೇವತೆ ಮತ್ತು ಸಂಹಿತಾದೇವತೆಗಳು ನಿಂತಿರುತ್ತಾರೆ. ಎರಡೂ ಕಡೆಗಳಲ್ಲಿ ಇಬ್ಬರು ಸ್ತ್ರೀಯರು (ಒಂದು ಕಡೆ ಒಬ್ಬೊಬ್ಬರಂತೆ) ಚಾಮರ ಬೀಸುತ್ತಿರುತ್ತಾರೆ. ಅವನೆದುರು ಧರ್ಮ–ಅಧರ್ಮ ಎಂಬ ಇಬ್ಬರು ಬ್ರಾಹ್ಮದೇವತೆಗಳಿರುತ್ತಾರೆ. ಅವನ ಅರಮನೆಯ ಬಾಗಿಲಿದಿರು ಚಿತ್ರಗುಪ್ತ ಕಾಳಿಯರು ಕಾವಲಿಗಿರುತ್ತಾರೆ.

ಯಮಪತ್ನಿಯು ಧೂಮೋರ್ಣೆಯು. ಅವಳಿಗೆ ಎರಡು ಕೈಗಳಿರುತ್ತವೆ. ಯಮನು ದಂಡಪಾಣಿಯಾಗಿರುತ್ತಾನೆ; ಖಡ್ಗಪಾಣಿಯೂ ಆಗಿರುತ್ತಾನೆ. ಇವಿರುವುದು ಅವನ ಬಲಗೈಗಳಲ್ಲಿ; ಎಡಗೈಗಳಲ್ಲಿ ಉರಿಯುತ್ತಿರುವ ತ್ರಿಶೂಲ ಮತ್ತು ಅಕ್ಷಮಾಲೆಗಳಿರುತ್ತವೆ.

ಚಿತ್ರಗುಪ್ತನು ಪಾಶ್ಚಾತ್ಯ ವೇಷಧರ (ಆಪೀಚ್ಯವೇಷಧಾರಿ); ಕೈಯಲ್ಲಿ ಲೆಕ್ಕಣಿಕೆಯನ್ನೂ (ಕಬ್ಬಿಣದ ಕಂಟವನ್ನೂ)ಓಲೆಗರಿಯನ್ನೂ ಹಿಡಿದುಕೊಂಡಿರುತ್ತಾನೆ. ಯಮನ ಎಡಕ್ಕೆ ಪಾಶಧಾರಿಯಾದ ಕಾಲದೇವನು ನಿಂತಿರುತ್ತಾನೆ.

ಅವನು ಸಾಕ್ಷಾತ್ತಾಗಿ ತನಗಿರುವ ಎರಡೇ ಕೈಗಳಲ್ಲಿ (ಎಡಗೈ ಬಲಗೈಗಳಲ್ಲಿ) ಗದೆ–ಪಾಶಗಳನ್ನೂ ತಲೆಯ ಮೇಲೆ ಕರಂಡ ಮಕುಟವನ್ನೂ ಧರಿಸಿದ ವೃಷಭಾರೂಢನಾಗಿರುತ್ತಾನೆ.

## ನಿಋೃತಿ

ಇಂದ್ರ, ಅಗ್ನಿ, ಯಮರು ಪೂರ್ವ, ಆಗ್ನೇಯ ಮತ್ತು ದಕ್ಷಿಣ ದಿಕ್ಕುಗಳ ಪಾಲಕರಾದರೆ ನಿಋೃತಿಯು ನೈಋತ್ಯ ದಿಕ್ಕಿನ ಪಾಲಕನು. ಇವನು ಭದ್ರಪೀಠಸ್ಥ ಯಾ ಸಿಂಹವಾಹನ ಅಥವಾ ನರವಾಹನನು ಇಲ್ಲವೆ ಗರ್ದಭಾರೂಢನು. ಇವನು ದಂಡಪಾಣಿಯು. ಬಲ–ಎಡಗೈಗಳಲ್ಲಿ ಕತ್ತಿಯನ್ನೂ ಗುರಾಣಿಯನ್ನೂ ಹಿಡಿದಿರುತ್ತಾನೆ. ಇವನಿಗೆ ದೇವಿ, ಕೃಷ್ಣಾಂಗಿ, ಕೃಷ್ಣವದನೆ ಮತ್ತು ಕೃಷ್ಣಪಾಶೆ ಎಂಬ ನಾಲ್ಕು ಪತ್ನಿಯರಿದ್ದಾರೆ.

## ವರುಣ

ವರುಣನು ಪಶ್ಚಿಮದಿಗಧೀಶನು, ಕರಂಡಮಕುಟಧಾರಿ, ಬ್ರಹ್ಮಸೂತ್ರ (ಜನಿವಾರ) ಧರ, ಮಕರಾರೂಢ (ಮಕರ=ಯೌಗಿಕ ಜಲಚರ) ಅಥವಾ ಮೊಸಳೆಸವಾರ; ೨ ಯಾ ೪ ಕೈಗಳು ವರದಹಸ್ತ, ಪಾಶಹಸ್ತ; ಅಥವಾ ವರದ–ಪಾಶ–ಸರ್ಪ–ಕಮಂಡಲುಹಸ್ತನು.

ಅಥವಾ

ವರುಣನು ಹಂಸವಾಹನನು, ಚತುರ್ಭುಜನು, ಬೆಳ್ಗೊಡೆಯನ್ನು ಹಿಡಿದುಕೊಂಡವನು; ಅವನೆಡಕ್ಕೆ ಮೀನಧ್ವಜ; ಪದ್ಮಪಾಶಗಳು ಬಲಗೈಗಳಲ್ಲೂ ಶಂಖರತ್ನಪಾತ್ರೆಗಳು ಎಡಗೈಗಳಲ್ಲೂ ರಾರಾಜಿಸುತ್ತವೆ. ವರುಣಪತ್ನಿಯು ನೀಲೋತ್ಪಲಧಾರಿಣಿ ಮತ್ತು ಬಲಗೈಯಿಂದ ಆಕೆ ವರುಣನನ್ನು ತಬ್ಬಿಕೊಂಡಿರುತ್ತಾಳೆ. ಗಂಗೆ–ಯಮುನೆಯರು ಬಲ–ಎಡಗಡೆಗಳಲ್ಲಿ ನಿಂತಿರುತ್ತಾರೆ. ಗಂಗೆ ಮೀನಾರೂಢೆ ಅಥವಾ ಮಕರಾರೂಢೆ ಮತ್ತು ಒಕ್ಕೈಯಲ್ಲಿ ಚಾಮರವನ್ನೂ ಇನ್ನೊಂದರಲ್ಲಿ ಪದ್ಮವನ್ನೂ ಹಿಡಿದುಕೊಂಡಿರುತ್ತಾಳೆ. ಯಮುನೆಯು ಆಮೆಯನ್ನೇರಿರುತ್ತಾಳೆ ಮತ್ತು ತನ್ನೆರಡು ಕೈಗಳಲ್ಲಿ ಚಾಮರ–ನೈದಿಲೆಗಳನ್ನು ಹಿಡಿದುಕೊಂಡಿರುತ್ತಾಳೆ (ನೀಲೋತ್ಪಲ=ನೈದಿಲೆ= ಕೋಳೆಹೂವು).

ಅಥವಾ

ಸಾಕ್ಷಾತ್ತಾಗಿ, ವರುಣನ ಬಲಗೈಯು ಸೂಚೀಹಸ್ತಭಂಗಿಯಲ್ಲಿದೆ. ಗಂಗೆ ಮತ್ತು ಯಮುನೆಯರು ವರುಣನ ಬಲ–ಎಡ ಬದಿಗಳಲ್ಲಿ ಪೂರ್ಣಕುಂಭ ಧಾರಿಣಿಯರಾಗಿ ನಿಂತಿರುತ್ತಾರೆ.

## ವಾಯು

ವಾಯುವು ವಾಯವ್ಯ ದಿಗಧಿಪತಿ; ಚತುರ್ಭುಜ ಯಾ ದ್ವಿಭುಜನು. ಅವನಿಗೆ ಬಲಗೈಯಲ್ಲಿ ಧ್ವಜ (Banner) ಮತ್ತು ಎಡಗೈಯಲ್ಲಿ ದಂಡ; ಬಲಗೈ ಪತಾಕಾಹಸ್ತಮುದ್ರೆಯಲ್ಲಿರುತ್ತದೆ ಅಥವಾ ಅದು ಅಂಕುಶವನ್ನು ಹಿಡಿದಿರುತ್ತದೆ. ಅವನು ಸಿಂಹದ ಯಾ ಜಿಂಕೆಯ ಸವಾರ ಅಥವಾ ಕೈಗಳಲ್ಲಿ ಚಕ್ರ ಹಾಗೂ ಧ್ವಜಗಳನ್ನು ಹಿಡಿದಿರುತ್ತಾನೆ. ವಾಯುವಿನ ಬಾಯಿ ತೆರೆದಿರುತ್ತದೆ; ಅವನ ಎಡಕ್ಕೆ ಅವನ ಪತ್ನಿಯು ಕುಳಿತಿರುತ್ತಾಳೆ.

## ಕುಬೇರ

ಕುಬೇರನು ಉತ್ತರ ದಿಕ್‌ಪಾಲಕನು; ಬ್ರಹ್ಮನ ಮೊಮ್ಮಗನು. ಅವನು ಪುಲಸ್ತ್ಯಪುತ್ರನು; ಪುಲಸ್ತ್ಯನ ಐವರು ಹೆಂಡಿರಲ್ಲಿ ಒಬ್ಬಳ ಮಗನು. ಅವನಿಗೆ ಕಿರೀಟಮಕುಟ ಯಾ ಕರಂಡಮಕುಟ ಮತ್ತು ಕರ್ಣಕುಂಡಲಗಳು ಹಾರಗಳು ಕೊರಳಿಗೆ; ಆ ಹಾರಗಳು ಬಂಗಾರದ ನಿಷ್ಕಗಳಿಂದ ಯಾ ನಾಣ್ಯಗಳಿಂದ ಕೂಡಿದವುಗಳು. ಅವನು ಚತುರ್ಭಜ ಅಥವಾ ದ್ವಿಭುಜ. ಆತನು ವರದಾಭಯ ಹಸ್ತಗಳಿಂದ ಶೋಭಿಸುತ್ತಾನೆ ಅಥವಾ ಎಡಗೈಯಲ್ಲಿ ಗದೆ ಹಿಡಿದಿರುತ್ತಾನೆ. ಇಲ್ಲವೆ ತನ್ನ ಪತ್ನಿಯಾದ ವಿಭವೆಯನ್ನು ಒಂದು ಕೈಯಲ್ಲಿ ಆಲಿಂಗಿಸಿಕೊಂಡಿರುತ್ತಾನೆ ಮತ್ತು ಇನ್ನೊಬ್ಬ ಪತ್ನಿಯಾದ ವೃದ್ಧಿಯನ್ನು ಇನ್ನೊಂದು ಕೈಯಿಂದ ತಬ್ಬಿಕೊಂಡಿರುತ್ತಾನೆ. ಅವರಿಬ್ಬರೂ ಅವನ ಎಡ–ಬಲದೊಡೆಗಳನ್ನೇರಿ ಕುಳಿತಿರುತ್ತಾರೆ. ಮಿಕ್ಕ ಕೈಗಳಲ್ಲಿ ಗದೆ ಶಕ್ತ್ಯಾಯುಧಗಳನ್ನು ಹಿಡಿದುಕೊಂಡಿರುತ್ತಾನೆ ಈ ದೇವ.

ಅಥವಾ

ಕುಬೇರನು ಆಪೀಚ್ಯ್ಯವೇಷ (ಪಾಶ್ಚಾತ್ಯ ವೇಷ) ಧರಿಸಿ, ಕವಚ ಹಾಕಿಕೊಂಡು ಒಂದು ಜೊತೆ ಮೀಸೆಯನ್ನು ಬಿಟ್ಟಿರಬಹುದು; ಮತ್ತು ಕೋರೆದಾಡೆಗಳಿಂದ ಶೋಭಿಸುತ್ತಿರಬಹುದು. ಎಲ್ಲ ಆಧಾರ ಗ್ರಂಥಗಳಲ್ಲೂ ಅವನಿಗೆ ದೊಡ್ಡ ಲಂಬೋದರವಿರುವುದು ಉಕ್ತ. ಪದ್ಮಪೀಠದ ಮೇಲೆ ಕುಳಿತ ಆತನು ಅದನ್ನು ಬಿಟ್ಟು ನರವಾಹನನೂ ಆಗಬಹುದು. ಟಗರನ್ನೂ ಅವನ ವಾಹನನೆನ್ನುವದುಂಟು. ಅವನ ಎಡಬಲಗಳಲ್ಲಿ ಶಂಖನಿಧಿ ಪದ್ಮನಿಧಿಗಳಿರುತ್ತವೆ. ಈ ನಿಧಿಗಳು ಭೂತಾಕಾರವುಳ್ಳವುಗಳು. ಈ ಭೂತಗಳು ಪದ್ಮಹಸ್ತರು, ಕರಂಡಮಕುಟರು, ಪದ್ಮಪೀಠಸ್ಥರು, ಅಥವಾ ಕುಬೇರನೆಡಬಲಗಳಲ್ಲಿ ಅಷ್ಟ ವಿಧದ ನಿಧಿಗಳೂ ಯಕ್ಷರೂ ಸುತ್ತುವರಿದಿರಬಹುದು.

ಒಂದು ಕೈಯಿಂದ ಕುಬೇರ ಪತ್ನಿಯರಾದ ವೃದ್ಧಿ ವಿಭವೆಯರು ಅವನನ್ನು ಅಪ್ಪಿಕೊಂಡಿರುತ್ತಾರೆ; ಇತರ ಕೈಗಳಿಂದ ರತ್ನತುಂಬಿದ ರತ್ನಪಾತ್ರೆಗಳನ್ನು ಹಿಡಿದುಕೊಂಡಿರುತ್ತಾರೆ. ಅಥವಾ ರೂಪಮಂಡನಾನುಸಾರವಾಗಿ ಆನೆಯು ಕುಬೇರನ

ವಾಹನವು; ಅವನು ಗದೆ, ದುಡ್ಡಿನ ಚೀಲ, ದಾಳಿಂಬ ಮತ್ತು ಕಮಂಡಲುಗಳನ್ನು ತನ್ನ ನಾಲ್ಕು ಕೈಗಳಲ್ಲಿ ಹಿಡಿದುಕೊಂಡಿರಬೇಕು.

ಬೌದ್ಧರ ವರುಣನ ಎಡದೊಡೆಯ ಮೇಲೆ ಎಡಬದಿಯಲ್ಲಿ ಮುಂಗುಸಿ ಕುಳಿತಿರುತ್ತದೆ.

## ಈಶಾನ

ಈಶಾನ್ಯಾಧಿನಾಥನು ಈಶಾನನು. ಇವನು ತ್ರ್ಯಂಬಕನು, ವ್ಯಾಘ್ರ ಚರ್ಮಾತ್ತವಾಸಸ್ಸು, ಜಟಾಮಕುಟಧರ ಮತ್ತು ಸರ್ಪಸ್ವರೂಪದ ಬ್ರಹ್ಮ ಸೂತ್ರವನ್ನೋ (ಯಜ್ಞೋಪವೀತವನ್ನೋ) ಸಾದಾ ಜನಿವಾರವನ್ನೋ ಧರಿಸಿರುತ್ತಾನೆ. ಇವನ ಜಟೆಯಲ್ಲಿ ಅರ್ಧಚಂದ್ರನಿರುತ್ತಾನೆ. ಇವನು ಪದ್ಮಾಸನಸ್ಥನು. ಅಥವಾ ವೃಷಭಾಸನಸ್ಥನು; ಎರಡು ಕೈಗಳಲ್ಲಿ ತ್ರಿಶೂಲ–ಕಪಾಲ (ತಲೆಬುರುಡೆಯ ಅಸ್ಥಿಪಂಜರ)ಗಳನ್ನೋ ಹಿಡಿದಿರಬಹುದು; ಅಥವಾ ಎಡಗೈಯಲ್ಲಿ ವರದಹಸ್ತಮುದ್ರೆ ತೋರುವಂತಿರುತ್ತದೆ. ಕಪಾಲವು ತಲೆಬುರುಡೆಯ ಅರ್ಧಪಾಲು, ತಟ್ಟೆಯಂತಿರುತ್ತದೆ. ನಾಲ್ಕು ಕೈಗಳಿದ್ದರೆ–ಇಗ್ಗೈಗಳು ವೀಣಾವಾದನ ಮಾಡುತ್ತಲೂ ಮತ್ತಿನ್ನೆರಡು ವರದಾಭಯ ಹಸ್ತಗಳಾಗಿಯೂ ಇರುತ್ತವೆ. ವೀಣಾಪಾಣಿತ್ವವಿಲ್ಲಿ ತಪ್ಪೆಂದು ಗೋಪೀನಾಥರಾಯರೆನ್ನುತ್ತಾರೆ (South Indian Iconography - p.538).

ಈ ಅಷ್ಟದಿಕ್ಪಾಲಕರು ವೇದಕಾಲದಲ್ಲಿ ಮಹಾದೇವತೆಗಳಾಗಿದ್ದರು; ಪುರಾಣ ಕಾಲದಲ್ಲಿ ಅವರ ಪ್ರಾಧಾನ್ಯವನ್ನು ತ್ರಿಮೂರ್ತಿಗಳು ಕಸಿದುಕೊಂಡರು ಮತ್ತು ಎಂಟು ದಿಕ್ಕುಗಳನ್ನು ಕಾಯುವ ನಿರ್ದೇಶಕರನ್ನಾಗಿ ನಿಯಮಿಸಿದರು.



# ೨೧

# ಅಶ್ವಿಗಳು

ಸೌಭ್ರಾತ್ರಕ್ಕೆ ಹೆಸರಾದ ಅಶ್ವಿನೀದೇವತೆಗಳು ವೇದೋಕ್ತ. ಅವರ ಆಯುರ್ವೇದ ವೈದ್ಯತ್ವವು ರುದ್ರನ ಹಾಗೂ ಧನ್ವಂತರಿಯ ವೈದ್ಯತ್ವದ ಜೊತೆಗೇ ಗಣ್ಯವಾಗಿರುತ್ತದೆ. ಈ ಅಶ್ವಿಗಳು ಯಮಳರು, ಇವರಲ್ಲೊಬ್ಬ ನಾಸತ್ಯನು ಮತ್ತು ಇನ್ನೊಬ್ಬನು ದಸ್ರನು "ನಾಸತ್ಯಾವಶ್ವಿನೌದಸ್ರೌ" ಇತ್ಯಮರಕೋಶೋಕ್ತಿ. ಆಗ ಇಬ್ಬರೂ ನಾಸತ್ಯರು ಅಥವಾ ದಸ್ರರೆನ್ನಿಸುತ್ತಾರೆ.

ಸೂರ್ಯ ಪತ್ನಿಯಾದ ಹೆಂಗುದುರೆ ಅಶ್ವಿಗಳ ತಾಯಿ. ಈ ಯಮಳರು ಮೂರ್ತೀಕೃತ ಪ್ರಾಣಾಪಾನರು. ಪ್ರಾಣಾಪಾನಗಳು ಪ್ರಾಣಿಜೀವನವನ್ನು ಪಾಲಿಸುವ ಜೈವಿಕ ವಾಯುಶಕ್ತಿಗಳು. ಅವುಗಳ ಒಟ್ಟು ಸಂಖ್ಯೆ: ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂದು ಐದು. ದೇಹದ ಅಂತಃಸ್ಥಲಗಳ ಮೇಲಿಂದ ಅವಕ್ಕೆ ಈ ಐದು ಹೆಸರುಗಳು ಬಂದಿವೆ. ಅವು ಪ್ರಜ್ಞೆಯ ಕ್ರಿಯಾಶಕ್ತಿಗಳು. ಆದುದರಿಂದ ಅವನ್ನು ಒಟ್ಟಾಗಿ ಉಸಿರು ಯಾ ಪ್ರಾಣಪ್ರಜ್ಞೆ ಎನ್ನುವುದೂ ಉಂಟು.

ಮುಖ್ಯವಾಗಿ ಅಶ್ವಿಗಳು ದೇವಾಹಾರವಾದ ಅಮೃತದ ಯಾ ರಾಧಸ್ಸಿನ ಕಾವಲುಗಾರರಾದ ದೇವವೈದ್ಯರು. ಸ್ವಯಂಪ್ರಧಾನರಾಗಿ ಕುಳಿತ ಅಶ್ವಿನೀ ದೇವತೆಗಳ ಮೂರ್ತಿಗಳು ಭಾರತದಲ್ಲಿಲ್ಲ. ಅವರಿಗೆ ಭಿತ್ತಿಯೇ ಸ್ಥಾನ. ಅವರನ್ನು ಸೂರ್ಯಸೇವಕರನ್ನಾಗಿ ಕಡೆದಿಡಲಾಗಿದೆ. ವೇದಾಂತದಲ್ಲಿ ಸೂರ್ಯನು ಹಿರಣ್ಯಗರ್ಭನು, ಕಾರ್ಯಬ್ರಹ್ಮನು, ಸೃಷ್ಟಪದಾರ್ಥಗಳ ಆತ್ಮ. ಪ್ರತಿಯೊಂದು ನಕ್ಷತ್ರವೂ ಒಂದೊಂದು ಸೂರ್ಯ. ಪ್ರತಿಯೊಬ್ಬ ಸೂರ್ಯನಿಗೂ ಗ್ರಹಗಳಿವೆ. ಅವನವನಿಗವನವನ ಬ್ರಹ್ಮಾಂಡವಿದೆ. ಅವನು ಸ್ವಯಂಪ್ರಭನಾದ ದೃಶ್ಯ ಮೂರ್ತಿಯಾಗಿ ಆಯಾ ಬ್ರಹ್ಮಾಂಡದಲ್ಲಿ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವ ತ್ರಿಮೂರ್ತಿಶಕ್ತಿಸ್ವರೂಪನು.

ಅಶ್ವಿಗಳು ಹಯವದನರು (ಹಯಗ್ರೀವರು). ಸಿಂಹಾಸನದ ಮೇಲೆ ಅವರು ಜೊತೆಗೆ ಕುಳಿತಿರುತ್ತಾರೆ; ಜಟಾಮಕುಟ ಯಜ್ಞೋಪವೀತ ಹಾರಾದ್ಯಲಂಕೃತರು. ಅವರ ಹಾರ ಹಳದಿ ಹೂವುಗಳದ್ದು. ಅವರು ದಿವ್ಯಾಭರಣಭೂಷಿತರು. ಇಬ್ಬರೂ ದ್ವಿಭುಜರು. ಬಲ–ಎಡಗೈಗಳು ಅಭಯ ಪುಸ್ತಕಹಸ್ತಗಳು, ಅವರ ಬಲಗಾಲುಗಳು ಪೀಠದಿಂದ ಕೆಳಗೆ ಇಳಿಬಿಟ್ಟಿರುವಂಥವುಗಳು; ಎಡಗಾಲುಗಳು ಮಡಚಿಕೊಂಡಿರುತ್ತವೆ. ಎಡಗಾಲನ್ನು

ಬಲತೊಡೆಗಳ ಮೇಲೆ ಹಾಕಿಕೊಂಡು ಕುಳಿತಿರುವುದು ತಾತ್ಪರ್ಯವು. ಈ ಇಬ್ಬರ ಇಬ್ಬದಿಗಳಲ್ಲಿ ಮೃತಸಂಜೀವನಿ ಮತ್ತು ವಿಶಲ್ಯಕರಣಿ ಎಂಬ ಸ್ತ್ರೀದೇವತೆಗಳು ಚಾಮರ ಬೀಸುತ್ತಿರುತ್ತಾರೆ. ಇವರ ಎಡಕ್ಕೆ ಕತ್ತಿ–ಗುರಾಣಿಗಳನ್ನು ಹಿಡಿದು ಧನ್ವಂತರಿಯೂ ಆತ್ರೇಯನೂ ನಿಂತಿರುತ್ತಾರೆ. ಇವರು ಮುಂಡಾಸು ಸುತ್ತಿಕೊಂಡಿರುತ್ತಾರೆ. ಅಥವಾ ಅಭಯಮುದ್ರೆಗೆ ಬದಲಾಗಿ ಔಷಧಪಾತ್ರೆ ಹಿಡಿದಿರುವುದುಂಟು ಮತ್ತು ರೂಪ ಸಂಪತ್ತು ಮತ್ತು ಆಕೃತಿ ಎಂಬ ದೇವತೆಗಳು ಅವರ ಬಲ–ಎಡಗಳಲ್ಲಿ ಪಾತ್ರಹಸ್ತರಾಗಿರುತ್ತಾರೆ.

## ಸೂರ್ಯ

ಸೂರ್ಯನಿಗೆ ಕೋಣಾರ್ಕವೇ ಉದಾಹರಣೆ. ಸೌರತಂತ್ರಾನುಸಾರವಾಗಿ ಮಾಠರ, ಪಿಂಗಲ, ದಂಡ ಎಂಬವರು ಆತನ ಪಾರಿಪಾರ್ಶ್ವಕರು. ಸಪ್ತಾಶ್ವರಥಾರೂಢನಾದ ಅವನ ಎಡಗಡೆ ಇಂದ್ರನಿರುತ್ತಾನೆ. ಅವನ ದಂಡನಾಯಕನ ಹೆಸರು "ದಂಡ" ಎಂದು. ಅವನ ಬಲಗಡೆ ಅಗ್ನಿ ಇರುತ್ತಾನೆ. ಪಿಂಗಲ ನೆಂಬಾತನು ಎಡಗಡೆ ಅವನ ದೂತನಾಗಿ ಇರುವ ದೇವತೆಯು. ಯಮನು ಅವನ ಬಲಗಡೆ ಇರುತ್ತಾನೆ; ಈ ಯಮನಿಗೆ ಮಾಠರನೆಂದು ಹೆಸರು. ಅರುಣನು ಸೂರ್ಯನ ರಥದ ಅನೂರು ಸಾರಥಿಯು, ಗರುಡನ ಅಣ್ಣನು. ಸೂರ್ಯನು ಪ್ರಭಾವಲಯ ಅವನ ಪರಿಧಿ. ಸೂರ್ಯನ ಪತ್ನಿಯರು ಹಲವರು. ಸೂರ್ಯನ ಮಗನು ವೈವಸ್ವತಮನು. ಅವನ ತೇರಿನ ಏಳು ಕುದುರೆಗಳು ಹೆಂಗುದುರೆಗಳು. ಅವುಗಳೇ ಹರಿತ್ತುಗಳು ಎಂದು ಕರೆಯಲ್ಪಡುವ ರಂಜಲು ಮರದ ಎಲೆಯ ಬಣ್ಣವುಳ್ಳಂಥವು; ಹರಿತಃ=ದಿಕ್ಕುಗಳು ಎಂಬರ್ಥ ಇಲ್ಲಿಗನ್ವಯಿಸದು.



# ೨೨

# ಉಪದೇವತೆಗಳು

## ೧. ಅಷ್ಟವಸುಗಳು:

ಪ್ರತಿಯೊಬ್ಬನಿಗೂ ಇಗ್ಗೈಗಳು, ಇಕ್ಕಣ್ಣುಗಳು, ಕರಂಡಮಕುಟಗಳು, ಕೋರೆದಾಡೆಗಳು, ನುಣುಪಾದ ಕೂದಲು, ಆಭರಣಗಳು, ಉಪವಿಷ್ಟ ಯಾ ಉತ್ಥಿತ ಮೂರ್ತಿಗಳು ಮತ್ತು ಖಡ್ಗಪಾಣಿ ಯಾ ಖೇಟಕಪಾಣಿ. ಇವು ಅನುಕ್ರಮವಾಗಿ ಬಲಮುಂಗೈ–ಎಡಮುಂಗೈಗಳ ಗುರುತುಗಳು.

(೧) ಧರವಸುವು ಪದ್ಮ–ಅಕ್ಷಮಾಲಾಧರ ಮತ್ತು ಹಲ–ಶಕ್ತಿಗಳನ್ನು ಹಿಡಿದವನು.

(೨) ಧ್ರುವವಸುವು ಕಮಲಾಕ್ಷಮಾಲಾ–ಚಕ್ರಧರ ಮತ್ತು ಕಮಂಡಲು– ಚಕ್ರಪಾಣಿ

(೩) ಸೋಮವಸುವು ಪದ್ಮ–ಮುಕ್ತಾಹಾರಧರ, ಅಂಕುಶ–ಶಕ್ತಿಪಾಣಿ

(೪) ಆಪವಸುವು ಹಲ–ಶಕ್ತ್ಯಾಯುಧಧರ, ಅಂಕುಶ–ಶಕ್ತಿಪಾಣಿ.

(೫) ಅನಿಲವಸುವು ಅಂಕುಶ–ಅಕ್ಷಮಾಲಾಧರ, ಶಕ್ತಿ–ಉಪವೀತಧಾರಿ.

(೬) ಅನಲವಸುವು ಅಕ್ಷಮಾಲಾ–ಸ್ರುವಧರ, ಕಪಾಲ–ಶಕ್ತಿಪಾಣಿ

(೭) ಪ್ರತ್ಯುಷವಸುವು ಖಡ್ಗ–ಅಂಕುಶಧರ, ಖೇಟಕ–ಶಕ್ತಿಪಾಣಿ

(೮) ಪ್ರಭಾಸವಸುವು ದಂಡ–ಕಪಾಲಪಾಣಿ, ಅಂಕುಶ–ಶಕ್ತಿಧರ.

## ೨. ಸಪ್ತನಾಗದೇವರುಗಳು:

(೧) ವಾಸುಕಿ=ಅನಂತ=ಮಹಾಶೇಷ; ಭೂಮಿಯನ್ನು ಹೊತ್ತವನು

(೨) ತಕ್ಷಕ=ಹೆಡೆಯಲ್ಲಿ ಸ್ವಸ್ತಿಕ ಚಿಹ್ನವುಳ್ಳವನು.

(೩) ಕಾರ್ಕೋಟಕ=೩ ಬಿಳಿಗೆರೆ ಹೆಡೆಯಲ್ಲಿರುವವನು.

(೪) ಪದ್ಮ=ಬಿಳಿಗೆರೆ ಮತ್ತು ಹವಳದ ಆಭರಣವುಳ್ಳವನು.

(೫) ಮಹಾಪದ್ಮ=ಹೆಡೆಯ ಮೇಲೆ ತ್ರಿಶೂಲ ಚಿಹ್ನವುಳ್ಳಾತನು

(೬) ಶಂಖಪಾಲ=ಹೆಡೆಯ ಮೇಲೆ ಬಿಳಿಗೆರೆಯುಳ್ಳಾತನು

(೭) ಕುಳಿಕ=ಹೆಡೆಯ ಮೇಲೆ ಅರ್ಧಚಂದ್ರ ಚಿಹ್ನವುಳ್ಳವನು.

ಈ ನಾಗರು ಕಶ್ಯಪ–ದಾಕ್ಷಾಯಣಿಯರ ಪುತ್ರರು. ಶ್ರಾವಣದ ಶುಕ್ಲ ಪಂಚಮಿಯು ಅವರ ಜನನಕಾಲ. ನಾಗನ ಕಲ್ಲುಗಳು ಭಾರತದಲ್ಲಿ ಎಲ್ಲೆಡೆ ಅಶ್ವತ್ಥನ ಕಟ್ಟೆಗಳಲ್ಲಿ ಪ್ರತಿಷ್ಠಿತವಾಗಿರುವುದು ಉತ್ಸರ್ಗವಾಗಿದೆ.

ನಾಗದೇವನು ನಾಗರ ರಾಜನು. ಅವನು ತ್ರ್ಯಂಬಕ, ಚತುರ್ಭುಜ, ಕರಂಡಮಕುಟಧಾರಿ ಅಥವಾ ವಿವಿಧಾಭರಣವಿಭೂಷಿತ, ಪದ್ಮಪೀಠಸ್ಥ; ಅವನ ಮುಂಗೈಗಳು ವರದಾಭಯಹಸ್ತಗಳು ಮತ್ತು ಹಿಂಗೈಗಳು ಎರಡು ಹಾವುಗಳ ತಲೆಯ ಮೇಲಿರುತ್ತವೆ. ನಾಗರಾಜನ ತಲೆಯ ಮೇಲೆ ಪಂಚಫಣಾಲಂಕೃತನಾಗನಿರುತ್ತಾನೆ.

ಅಥವಾ

ತಲೆಯ ಮೇಲೆ ರತ್ನಹೊತ್ತ ಈ ನಾಗರು ಅರ್ಧ ಮಾನವರೂಪಿಗಳು; ಹೊಕ್ಕುಳ ಕೆಳಗೆ ಹಾವಿನರೂಪವುಳ್ಳವರು, ತಲೆಯನ್ನು ಒಂದು, ಮೂರು, ಐದು ಅಥವಾ ಏಳು ಹೆಡೆಗಳು ಮುಚ್ಚಿಕೊಂಡಿರುತ್ತವೆ. ನಾಗರೆಲ್ಲಾ ದ್ವಿಜಿಹ್ವರು. ಅವರದ್ದು ಮಾನಷ್ಯಬಾಯಿಗಳು. ನಾಗರು ಕತ್ತಿಯನ್ನೂ ಗುರಾಣಿಯನ್ನೂ ಕೈಯಲ್ಲಿ ಹಿಡಿದಿರುತ್ತಾರೆ; ಹಾಗೇ ಅವರು ಅಕ್ಷಮಾಲಾ–ಕಮಂಡಲುಧಾರಿಗಳು.

ಸಾಕ್ಷಾತ್ತಾಗಿ ನಾಗದೇವನು ಬಲಗೈಯಲ್ಲಿ ಖಡ್ಗಧರ, ಎಡಗೈಯಲ್ಲಿ ತನ್ನ ಸತಿಯನ್ನು ಆಲಿಂಗಿಸಿಕೊಂಡಿರುತ್ತಾನೆ. ನಾಗಿಣಿಗೆ ಕರಂಡಮಕುಟ, ಅದನ್ನು ಹೆಡೆಯು ಮುಚ್ಚಿರುತ್ತದೆ; ಅದರಲ್ಲಿ ಮೂರು ತಲೆಗಳಿರುತ್ತವೆ.

## ೩. ಸಾಧ್ಯರು:

ಸಾಧ್ಯರು ದ್ವಾದಶರು. ಅವರೆಲ್ಲಾ ಬೆಳಕಿನ ಕಿರಣಗಳು. ಮಾನ, ಮಂತ್ರ, ಪ್ರಾಣ, ನರ, ಅಪಾನ, ವೀರ್ಯವಾನ್, ವಿನಿರ್ಭಯ, ನಯ, ದಂಶ, ನಾರಾಯಣ, ವೃಷ ಮತ್ತು ಪ್ರಭ ಎಂಬಿವು ಅವರ ಹೆಸರುಗಳು. ಇವರೆಲ್ಲಾ ಧರ್ಮಪುತ್ರರಾದ ಮಹಾತ್ಮರು. ಇವರೆಲ್ಲಾ ಪದ್ಮಾಸನಸ್ಥರು, ಅಕ್ಷಮಾಲಾ ಕಮಂಡಲುಧಾರಿಗಳು.

## ೪. ಅಸುರರು:

ಅಸುರರು ಕಶ್ಯಪಪುತ್ರರು. ಸುರರ ಜ್ಯೇಷ್ಠಭ್ರಾತೃಗಳು. ಅಸುರ=ಜಲಸೇಚಕ ಮೋಡವು. ನಿರುಕ್ತದಂತೆ ಗಂಧರ್ವರು, ಪಿತೃಗಳು, ದೇವತೆಗಳು ಅಸುರರು ಮತ್ತು ರಕ್ಷಸ್ಸುಗಳು ಪಂಚಜನರೆನ್ನಿಸುತ್ತಾರೆ. ಸಾಯಣಾಚಾರ್ಯಾನುಸಾರವಾಗಿ ದೇವತೆಗಳು, ಮಾನವರು, ಹಾವುಗಳು, ಗಂಧರ್ವಾಪ್ಸರಸ್ಸುಗಳು ಮತ್ತು ಪಿತೃಗಳು ಪಂಚಜನರು. ಅಸುರರು ಕೋರೆದಾಡೆಗಳನ್ನುಳ್ಳ ರಾಕ್ಷಸರು ನಾನಾ ಆಯುಧಪಾಣಿಗಳು. ನಾನಾಲಂಕಾರಭೂಷಿತರು ಮತ್ತು ಕಿರೀಟ ಕುಂಡಲಧಾರಿಗಳು.

### ೫. ಅಪ್ಸರಸ್ಸುಗಳು:

ಘೃತಾಚೀ, ರಂಭಾ, ವಿಮಲಾ, ಊರ್ವಶೀ, ತಿಲೋತ್ತಮಾ, ಮೇನಕೆಯರು ಒಟ್ಟು ಏಳೇ ಜನರು. ಮುಷ್ಟಿಗ್ರಾಹ್ಯಕಟಿಯುಳ್ಳ, ವಿಶಾಲವಾದ ಕಂಗಳುಳ್ಳ, ಹೆಮ್ಮೊಲೆಯ, ಸ್ಮೇರವದನೆಯರಾದ ಮತ್ತು ಸುಂದರಾಭರಣ ಧಾರಿಣಿಯರಾದ ಹಾಗೂ ಭದ್ರಪೀಠದಲ್ಲಿ ಸಮಭಂಗಿಯಲ್ಲಿ ನೆಟ್ಟಗೆ ನಿಂತಿರುವ ನಿತ್ಯಯೌವನವುಳ್ಳ ದೇವಕನ್ನಿಕೆಯರು.

### ೬. ಪಿಶಾಚರು:

ಅತ್ಯಂತ ಕ್ಷೀಣಶರೀರವುಳ್ಳ, ಮೂಳೆ–ನರನಾಡಿ–ಚರ್ಮ ಮಾತ್ರ ಎದ್ದು ಕಾಣುವಂತಿರುವ, ಒರಟುಗೂದಲಿನ ಮಂಡೆ ಬಿಚ್ಚಿಕೊಂಡ ಭಯೋತ್ಪಾದಕರು.

### ೭. ವೇತಾಳರು:

ಅತಿ ಎತ್ತರದ, ಒಣಗಿ ಅಪ್ಪಚ್ಚಿಯಾದ ಹೊಟ್ಟೆಯ, ಗಲ್ಲದೆಲುಬು ಎದ್ದುಕಾಣುವಂತಿರುವ ಪಿಶಾಚಸದೃಶರು.

### ೮. ಪಿತೃಗಳು:

ಮರೀಚಿ ಮುಂತಾದ ಋಷಿಗಳೂ ಇತರ ಮುನಿಗಳೂ ಹಿರಣ್ಯಗರ್ಭ ನಾಮಕ ಮನುವಿನ ಮಕ್ಕಳೂ ಸೇರಿ ಏಳು ಪಿತೃಗಣಗಳಿರುತ್ತಾರೆ:

(೧) ವಿರಾಟ್ ಪುತ್ರರೂ ಸಾಧ್ಯಪಿತೃಗಳೂ ಆದ ಸೋಮಸದ್‌ವರ್ಗ.

(೨) ದೇವತಾಪಿತೃಗಳಾದ ಅಗ್ನಿಷ್ವಾತ್ತ ವರ್ಗ. ಇವರು ಮರೀಚಿಯ ಮಕ್ಕಳು.

(೩) ದೈತ್ಯರ ಪಿತೃಗಳೂ ದಾನವರೂ ಅತ್ರಿಸುತರಾದ ಯಕ್ಷರೂ, ಉರಗರೂ, ರಾಕ್ಷಸರೂ ಸೇರಿದ್ದು ಬರ್ಹಿಷದ್ವರ್ಗ.

(೪) ಶುಕ್ರಾಚಾರ್ಯರ ಮಕ್ಕಳೂ ಸೋಮಪಾಯಿಗಳೂ ಬ್ರಾಹ್ಮಣರ ತಂದೆಯವರೂ ಆದ ಪುರೋಹಿತವರ್ಗ.

(೫) ಕ್ಷತ್ರಿಯಪಿತೃಗಳಾದ ಹವಿರ್ಭುಗ್ವರ್ಗ.

(೬) ಪುಲಸ್ತ್ಯಸುತರೂ ವೈಶ್ಯರ ಗೋತ್ರರ್ಷಿಗಳೂ ಆದ ಆಜ್ಯಪವರ್ಗ.

(೭) ವಾಸಿಷ್ಠರೂ ಶೂದ್ರಪಿತೃಗಳೂ ಆದ ಸುಕಲಿ ವರ್ಗ.

ಆಗಮಗಳ ಪ್ರಕಾರ ಪಿತೃಗಣಗಳು ಮೂರೇ ಮೂರು: ಪಿತೃ, ಪಿತಾಮಹ ಮತ್ತು ಪ್ರಪಿತಾಮಹ ಎಂದು. ಅವರು ಮಣೆಯ ಮೇಲೆ ಕುಳಿತುಕೊಂಬವರು ಅಥವಾ ಭದ್ರಪೀಠಸ್ಥರು. ಪ್ರತಿಯೊಬ್ಬನೂ ಬ್ರಹ್ಮಸೂತ್ರಧಾರಿ. ತಲೆಯಲ್ಲಿ ಕೇಶಬಂಧ; ಆಭರಣಾಲಂಕೃತ; ಭಸ್ಮೋದ್ಧೂಲಿತ ಶರೀರಿ, ಊರು ಗೋಲನ್ನು ಹಿಡಿದವನು; ಛತ್ರಪಾಣಿ; ದ್ವಿಭುಜ;

ಎಡಗೈಯನ್ನು ಬಾಗಿದ ಎಡಮೊಣಕಾಲಿನವರೆಗೆ ಚಾಚಿಕೊಂಡವನು; ಬಲಗೈಯಲ್ಲಿ ಸೂಚೀಹಸ್ತಮುದ್ರೆ ಅಥವಾ ಕುಶಾಸನ ಮತ್ತು ಪಿಂಡಪಾತ್ರಧಾರಿಯು.

## ೯. ಸಪ್ತರ್ಷಿಗಳು:

ಪಿತೃಗಳ ಹಾಗೂ ಇತರರ ಜನಕರಾದ ಸೂರ್ಯಕಿರಣಗಳು. ನಿರುಕ್ತಾನು ಸಾರವಾಗಿ ಭೃಗು, ಅಂಗಿರಸ್, ಅತ್ರಿ: ವೈಖಾನಸ, ಮರೀಚಿ, ಕ್ರತುಗಳು. ಅವರೊಂದಿಗೆ ಪುಲಸ್ತ್ಯ, ಪುಲಹ, ವಸಿಷ್ಠರನ್ನೂ ಸೇರಿಸಲಾಗಿದೆ. ಭೃಗುವು ಬ್ರಹ್ಮಾಗ್ನಿಕುಂಡದಲ್ಲಿ ಹುರಿಯಲ್ಪಟ್ಟವರು. ಅಂಗಿರಸ್ಸರು ಬೆಂಕಿಕೆಂಡದಿಂದ ಹುಟ್ಟಿದವರು. ಅತ್ರಿಯು ಮೂರಲ್ಲದ (ನಾಲ್ಕೆಂಬ) ಅಗ್ನಿಕುಂಡಜಾತ; ಅಗ್ನಿಕುಂಡದ ಬುಡದ ನೆಲದಲ್ಲಿ ಹುಟ್ಟಿದವರು ವೈಖಾನಸರು ಎಂಬುದು ಯಾಸ್ಕಾಭಿಪ್ರಾಯ. ಬ್ರಹ್ಮಾಂಡ ಪುರಾಣಾನುಸಾರ ಮರೀಚಿ, ಕ್ರತು, ಅತ್ರಿ, ಪುಲಸ್ತ್ಯ, ಪುಲಹ ಮತ್ತು ವಸಿಷ್ಠರು ಬ್ರಹ್ಮಯಾಗ ನಡೆದಾಗ ದಕ್ಷಿಣೆಯಿಂದ ಜನಿಸಿದವರು. ಇವರೆಲ್ಲರೂ ಬ್ರಹ್ಮನ ಮಾನಸಪುತ್ರರೆಂದು ನಂಬಿಗೆ.

**"ಕಶ್ಯಪೋऽತ್ರಿ ಭರದ್ವಾಜೋ ವಿಶ್ವಾಮಿತ್ರೋऽಥ ಗೌತಮಃ**
**ಜಮದಗ್ನಿರ್ವಸಿಷ್ಠಶ್ಚ ಸಾಧ್ವೀ ಚೈವಾಪ್ಯರುಂಧತೀ"**

ಎಂಬುದು ಪ್ರಸಿದ್ಧ. ಇವರಲ್ಲಿ ವಸಿಷ್ಠ–ಅರುಂಧತಿಯರು ಒಬ್ಬರೆಂದು ಗೃಹೀತ. ಹಾಗೇ ಇತರ ಮಾನಸಪುತ್ರರ ಸಪ್ತವರ್ಗಗಳೂ ಇವೆ:

(೧) ವ್ಯಾಸಾದಯೋ ಮಹರ್ಷಯಃ

(೨) ಭೇಲಾದಯಃ ಪರಮರ್ಷಯಃ

(೩) ಕಣ್ವಾದಯೋ ದೇವರ್ಷಯಃ

(೪) ಶುಶ್ರುತಾದಯಃ ಶ್ರುತರ್ಷಯಃ

(೬) ಋತುಪರ್ಣಾದಯೋ ರಾಜರ್ಷಯಃ

(೭) ಜೈಮಿನ್ಯಾದಯಃ ಕಾಂಡರ್ಷಯಃ

ಆಗಮಾನುಸಾರ ಮನ್ವಂತರದಿಂದ ಮನ್ವಂತರಕ್ಕೆ ಸಪ್ತರ್ಷಿಗಳು ಬದಲಾಗುತ್ತಾರೆ.

ಈ ಋಷಿಗಳು ಪದ್ಮಪೀಠಗಳಲ್ಲಿ ಕುಳಿರುತ್ತಾರೆ ಯಾ ನಿಂತಿರುತ್ತಾರೆ. ಇವರಿಗೆ ಗಡ್ಡವಿದೆ. ಇವರು ಜಟಾಮಕುಟಧಾರಿಗಳು, ಉಪವೀತಿಗಳು, ತ್ರಿಪುಂಡ್ರಭಸ್ಮಫಣಾಪಟ್ಟರು, ಕೋಲೂರಿಕೊಂಡು ನಡೆದಾಡುವವರು, ಛತ್ರ ರಕ್ಷಿತರು ಅಥವಾ ಅವರು ತಮ್ಮ ಬಲಗೈಯನ್ನು ಜ್ಞಾನಮುದ್ರೆಯಲ್ಲಿಟ್ಟುಕೊಂಡವರು ಮತ್ತು ಎಡಗೈಗಳನ್ನು ಎಡಮೊಣಕಾಲಿನವರೆಗೆ ಇಳಿಬಿಟ್ಟುಕೊಂಡವರು; ಈ ಮೊಣಕಾಲುಗಳು ಬಾಗಿರುತ್ತವೆ. ಕಟಿಸೂತ್ರಗಳು (ಉಡಿದಾರಗಳು) ಅವರ ಕೆಳನಾರುಮಡಿಯನ್ನು ಬಿಗಿದಿಡುತ್ತವೆ.

### ೧೦. ಗಂಧರ್ವರು:

ಆಗಮಗಳಲ್ಲಿ ಗಂಧರ್ವರ ವರ್ಣನೆ ಇಲ್ಲ.

### ೧೧. ಮರುತ್ತುಗಳು:

ಮರುತ್ತುಗಳ ಹೆಗಲ ಮೇಲೆ ಛರ್ಚಿಗಳಿರುತ್ತವೆ. ಅವರು ಗೆಜ್ಜೆ ಕಟ್ಟಿಕೊಂಡ ಪಾದಸಂಧಿಗಳನ್ನುಳ್ಳವರು; ಬಂಗಾರದ ಆಭರಣಗಳನ್ನೂ ಮುಂಚಾಚಿದ ಯೋಧಶಿರಸ್ತ್ರಾಣಗಳನ್ನೂ ಧರಿಸಿ ಹೊಳೆಹೊಳೆಯುವ ತೇರುಗಳನ್ನೇರಿ ಕೈಯಲ್ಲಿ ಸೂಡಿಗಳನ್ನು ಹಿಡಿದಿರುತ್ತಾರೆ. ಅವರು ಮಧ್ಯಪೀಠಸ್ಥರು, ದ್ವಿಭುಜರು ಅಲ್ಲದೆ ಬೇಕಾದಷ್ಟು ವಿಪುಲ ಸುಂದರ ತಲೆಗೂದಲನ್ನುಳ್ಳವರು.

### ೧೨. ಸಿದ್ಧರು:

ಸಿದ್ಧರು ಕಲ್ಪಾಂತಾಯುಷ್ಯವುಳ್ಳ, ಅಲೌಕಿಕ ಅಷ್ಟಸಿದ್ಧಿಸಂಪನ್ನರಾದ, ಸೂರ್ಯನ ಸುವರ್ಲೋಕದಲ್ಲಿ ಸಪ್ತರ್ಷಿಗಳ ದಕ್ಷಿಣ ದಿಕ್ಕಿನಲ್ಲಿರುತ್ತಾರೆ.

೧೩. ವಿದ್ಯಾಧರರು ಅಪ್ಸರಸ್ಸುಗಳಿಗೆ ಗಂಧರ್ವರಂತೆಯೇ ಸಂಬಂಧಿಸಿದವರು.

೧೪. ಕಿನ್ನರರು<br>
೧೫. ಕಿಂಪುರುಷರು<br>
೧೬. ತುರಂಗವದನರು<br>
೧೭. ಮಯುಗಳು

} ದೇವತೆಗಳ ಸೇವಕರು

## ಕ್ಷೇತ್ರಪಾಲ

ಕ್ಷೇತ್ರಪಾಲನು ನಿರ್ವಾಣವಿಗ್ರಹದಿಂದ ಸಂಕೇತಿತನು; ಎಂದರೆ ರುದ್ರನ ಒಂದು ಅವತಾರದಂತೆ ದಿಗಂಬರನು, ದ್ವಾಪರದ ಬೌದ್ಧನಂತೆ ನಗ್ನನು, ಗೋಮಟೇಶ್ವರನಂತೆ ನಿರ್ವಸ್ತ್ರನು. ಅವನು ತ್ರ್ಯಕ್ಷನು. ೨, ೪, ೬ ಅಥವಾ ೮ ಬಾಹುಗಳನ್ನುಳ್ಳವನು. ಅವನ ವಿಗ್ರಹ ತ್ರಿವಿಧ: ಸಾತ್ವಿಕ, ರಾಜಸ, ತಾಮಸ ಎಂದು.

**ಸಾತ್ವಿಕ:** ತ್ರಿಶೂಲ, ಕಪಾಲ ಅಥವಾ ಖಡ್ಗ, ಘಂಟೆಗಳನ್ನು ಮುಂದಿನೆರಡು ಕೈಗಳಲ್ಲಿ ಹಿಡಿದುದಲ್ಲದೆ, ಬಲ–ಎಡಗೈಗಳ ಮುದ್ರೆಗಳು ವರದ ಮತ್ತು ಅಭಯ.

**ರಾಜಸ:** ಬಲಗೈಗಳಲ್ಲಿ ತ್ರಿಶೂಲ, ಖಡ್ಗ ಮತ್ತು ಘಂಟೆಗಳು.

**ತಾಮಸ:** ಅಧಿಕ ಬಾಹುಮಂತ; ಬಲಗೈಯಲ್ಲಿ ಬಿಲ್ಲು ಮತ್ತು ಎಡಗೈಯಲ್ಲಿ ಅಂಬು.

ನೆಟ್ಟಗೆ ನಿಂತ ಕೂದಲು (ತಲೆತುಂಬ, ಮೈತುಂಬ): ಸಮಭಂಗ ಶರೀರ (ನೆಟ್ಟನೆ); ಪದ್ಮಪೀಠಸ್ಥ, ಸರ್ಪಾಭರಣ ಮತ್ತು ನಗ್ನತೆ ಎಂಬೀ ಲಕ್ಷಣಗಳು ಮೇಲಿನ ಸಾತ್ವಿಕಾದಿ ಕ್ಷೇತ್ರಪಾಲಮೂರ್ತಿಗಳೆಲ್ಲವುಗಳಿಗೂ ಸಾಧಾರಣವಾಗಿವೆ.

ಅಥವಾ

ನಾಗಯಜ್ಞೋಪವೀತ, ತಲೆಬುರುಡೆಗಳ ಹಾರ, ತಲೆಯ ಮೇಲ್ಸುತ್ತು ಹಾಗೂ ದುಂಡಗಿರುವ ಕಣ್ಣುಗಳು; ಬಲಗೈಗಳಲ್ಲಿ ತ್ರಿಶೂಲ, ಖಡ್ಗ ಮತ್ತು ಎಡಗೈಗಳಲ್ಲಿ ಕಪಾಲ, ಖೇಟಕ–೬, ಕೈಗಳಿದ್ದರೆ, ಅಧಿಕವಾದ ಬಲಗೈಯಲ್ಲಿ ಡಮರುವನ್ನೂ ಎಡಗೈಯಲ್ಲಿ ಖಟ್ವಾಂಗವನ್ನೂ ಕ್ಷೇತ್ರಪಾಲ ವಿಗ್ರಹವು ಹಿಡಿದಿರುತ್ತದೆ.

ಅಥವಾ

ಕಪಾಲ, ಶೂಲ, ಘಂಟೆ, ಪಾಶ, ಅಗ್ನಿ, ಟಂಕ, ಖಟ್ವಾಂಗ ಮತ್ತು ಅಭಯ ಹಸ್ತಗಳಿಂದ ವಿಗ್ರಹವು ಅಲಂಕೃತವಾಗಿರುತ್ತದೆ ಮತ್ತು ಅಘೋರ ಶಿವಾಚಾರ್ಯದತ್ತವಾದ ಶ್ವಾನವು ಅದಕ್ಕೆ ವಾಹನವಾಗಿರಬಹುದು.

### ಕ್ಷೇತ್ರಪಾಲನ ಅಪರನಾಮಧೇಯಗಳು:

ಕಂಚುಕ, ಕಾರಿ, ಮುಕ್ತ, ನಿರ್ವಾಣಿ, ಸಿದ್ಧ, ಕಪಾಲಿ, ವಟುಕ ಮತ್ತು ಭೈರವ, ಆದುದರಿಂದ ಕ್ಷೇತ್ರಪಾಲ=ರುದ್ರನ ಹತ್ತುಸಾವಿರ ಅಂಶಗಳಲ್ಲಿ ಒಂದಂಶವನ್ನುಳ್ಳ ಭೈರವನು. ಈ ಭೈರವನು ವಿಶಿಷ್ಟನಲ್ಲದೆ, ಶಿವಾವತಾರನಲ್ಲ; ಇವನು ಶಿವ (ರುದ್ರ) ಅವತಾರನೂ ಅಲ್ಲ, ಪ್ರಥಮ ದರ್ಜೆಯ ರುದ್ರಸೇವಕನೂ ಅಲ್ಲ.

## ರೂಢಿಗತ ವಿಗ್ರಹಗಳು

ಆರ್ಯ ಯಾ ಹರಿಹರಪುತ್ರ ಯಾ ಶಾಸ್ತ್ರ ಯಾ ಅಯ್ಯನಾರ್ (ತಮಿಳು) ಯಾ ಅಯ್ಯಪ್ಪ (ಕನ್ನಡ) ಎಂಬುದು ಮಲೆಯಾಳ ವಿಶಿಷ್ಟ. ಅಯ್ಯನಾರಪ್ಪನ್ ಗ್ರಾಮದೇವತೆ, ಶೂದ್ರಪೂಜಿತ. ಮೋಹಿನೀರೂಪದಲ್ಲಿ ಹರಿ ಬಂದಾಗ ಅವನನ್ನು ಕೂಡಿದ ಹರನಿಂದ ಅಯ್ಯಪ್ಪನ ಜನನ.

ಶಾಸ್ತ=ಶಾತವಾಹನ=ಬುದ್ಧ=ಭೂತ–ಇಷ್ಟಾರ್ಥಗಳು. ಈ ಅಯ್ಯಪ್ಪನಿಗೆ ೪ ಕೈಗಳು, ಮೂರು ಕಣ್ಣುಗಳು, ಪದ್ಮವು ಆಸನ; ಮುಂಗೈಗಳು (ಬಲ–ಎಡ) ಅಭಯ–ವರದ ಹಸ್ತಗಳು. ಹಿಂಗೈಗಳು ಖಡ್ಗ–ಖೇಟಕಧಾರಿಗಳು.

ಅಥವಾ

ಇಗ್ಗೈಗಳು, ಇಕ್ಕಣ್ಣುಗಳು, ಯಜ್ಞೋಪವೀತ, ಬಾಹು–ಚರಣಗಳು ಮಡಿಸಿ–ಕೊಂಡಿರುವುದು; ವಕ್ರವೇತ್ರಾಯುಧ; ಬಲಗೈಯಲ್ಲಿ–ಎಡಗೈಯಲ್ಲಿ ಹಣ್ಣು ಎಳೆಚಿಗುರುಗಳು;

ತಲೆತುಂಬ ಕೂದಲು; ನಾಯಿಗಳೊಡನೆ ಶಾಸ್ತನ ಆಟ; ಇಲ್ಲವಾದರೆ ಕುರಿಗಳು, ಹುಂಜಗಳು ಇವುಗಳೊಡನೆ ಕೊಂಡಾಟ; ಶಾಸ್ತನ ಹೆಂಡಿರಿಬ್ಬರು ಎಡಬಲಗಳಲ್ಲಿ ಕುಳಿತಿರುವರು. ಶಾಸ್ತನೆಡಕ್ಕೆ ದುರ್ಮುಖನಾದ ದಮನಕನಿರುತ್ತಾನೆ. ಅಥವಾ ಬೌದ್ಧಶಾಸ್ತನು ಪೀಠಸ್ಥ, ವಜ್ರದಂಡ, ಬಲಗೈಯಲ್ಲಿ ಅರ್ಥಾತ್ ವಕ್ರನೇತ್ರ; ತಲೆಗೂದಲು ಬಿಚ್ಚಿಹರಡಿಕೊಂಡಿರುತ್ತದೆ. ಆನೆಯು ಎದುರಿರುತ್ತದೆ. ಅದು ಧ್ವಜವೂ ಹೌದು, ವಾಹನವೂ ಹೌದು. ಅವನ ಪಕ್ಕದಲ್ಲೊಬ್ಬ ಅಪ್ಸರೆ. ಬಸವನೂ ಅವನಿಗೆ ವಾಹನವಾಗುವುದುಂಟು. ನಾಲ್ಕು ಕೈಗಳಿರಬಹುದು. ಹುಂಜವು ಅವನ ಧ್ವಜದ ತುದಿಮಣಿಯೆನ್ನಿಸಬಹುದು.

ಯೋಗಿಶಾಸ್ತ, ಬ್ರಹ್ಮಚಾರಿಶಾಸ್ತ ಅಥವಾ ಶಾಸ್ತವಿಗ್ರಹಗಳು ಅನುಕ್ರಮವಾಗಿ ಯೋಗಾಸನ, ವೀರಾಸನ ಅಥವಾ ಸುಖಾಸನದಲ್ಲಿ ಇರಬಹುದು.

## ಗ್ರಾಮದೇವತೆಗಳು

ಮಾರಿ, ಜಟ್ಟಿಗ, ಕರಿಬಂಟ, ಭೂತಪ್ಪ ಮುಂತಾದ ವಿಗ್ರಹಗಳು ಗ್ರಾಮ ಕಾಯುವ, ಗ್ರಾಮದ ಹೊರವಲಯದಲ್ಲಿರುವ ದೇವತೆಗಳು. ಜಟ್ಟಿಗ (ಜಟಿಂಗ) ಯಜಮಾನ ದೇವತೆ. ಕಲ್ಲುಕುಟ್ಟಿಗ, ಬಬ್ಬರ್ಯ, ಹುಲಿರಾಯ, ಹಾಯುಗುಳಿ, ಚೌಡಿ, ಕೊಲೆ, ಕುಂತಿ, ಬ್ರಹ್ಮರಾಕ್ಷಸ ಮುಂತಾದವು ಕೊರಡು ಹಿಡಿದಿರುವ ಜಟ್ಟಿಗ (ಚಟ್ಟಯ್ಯ) ದೇವನ ಸೇವಕರು. ಇವೆಲ್ಲಾ ದಾರುಶಿಲ್ಪಗಳಾಗಿರುವುದೇ ಹೆಚ್ಚು. ಕೋಳಿ, ಕುರಿ, ಕೋಣ ಮುಂತಾದವುಗಳಿವುಗಳಿಗೆ ಬಲಿಗಳು.

## ಶಕ್ತಿದೇವತೆಗಳು

ಇಂದ್ರಾಣಿ, ವೈಷ್ಣವಿ, ಬ್ರಹ್ಮಾಣಿ, ಶಾಂತೆ ಅಥವಾ ಕೌಮಾರಿ, ನಾರಸಿಂಹಿ, ವಾರಾಹಿ, ಮಾಹೇಶ್ವರಿ ಅಥವಾ ಚಾಮುಂಡೆ, ಚಂಡಿಕೆ=೮.

ಅಥವಾ

ವೈಷ್ಣವಿ, ಬ್ರಹ್ಮಾಣಿ, ರೌದ್ರಿ, ಮಾಹೇಶ್ವರಿ, ನಾರಸಿಂಹಿ, ವಾರಾಹಿ, ಇಂದ್ರಾಣಿ, ಕಾರ್ತಿಕಿ, ಪ್ರಧಾನೆ=೯.

---

**ಟಿಪ್ಪಣಿ:** ಎಲ್ಲವ್ವನನ್ನು ರೇಣುಕೆ ಎಂಬುದು ಮೂಢನಂಬಿಗೆ, ರೇಣುಕೆ ಜಮದಗ್ನಿಪತ್ನಿ, ಪರಶುಧರನ ತಾಯಿ. ಅವಳ ದೇವೀತ್ವವು ಪಾರ್ವತೀತ್ವಸದೃಶವಾದುದು. ಅವಳು ಗ್ರಾಮದೇವತೆಯಂತಾದುದು ಎಲ್ಲವ್ವನನ್ನು ಅವಳ ಪರ್ಯಾಯವೆಂದು ಪೂಜಿಸಲಾರಂಭಿಸಿದಾಗ. ದೇವದಾಸ್ಯಾದಿ ವ್ಯವಹಾರಕ್ಕೆ ಎಲ್ಲವ್ವ ಮೂಲ. ಬತ್ತಲೆಯುಡುಗೆಯ, ಸೊಪ್ಪಿನುಡುಗೆಯ ಹರಕೆಗೆ ಚಂದ್ರಗುತ್ತಿಯ ರೇಣುಕೆ ಓಡುತ್ತಾ ಬತ್ತಲಾಗಿ ಶಿಲಾಗುಹಾಂತರ್ಗತೆಯಾದುದು ಕಾರಣ. ಪಿತ್ರಾಜ್ಞೆಯಂತೆ ವಿಷ್ಣುವಿನ ಅವತಾರಿ ಪರಶುರಾಮ ರೇಣುಕಾಮಾತೆಯನ್ನು ತಲೆಗಡಿಯಲು ಬೆನ್ನು ಹತ್ತಿದಾಗ ಅವಳು ಬತ್ತಲೆಯಾಗಿ ಕಲ್ಗುಹೆ ಹೊಕ್ಕಳು. ಅವಳಿಗಿಂದು ನಡೆಯುತ್ತಿರುವುದು ಪೃಷ್ಠ (ಕುಂಡೆ) ಪೂಜೆ. ಇದು ಪುರಾಣಪ್ರಸಿದ್ಧ.

ಅಥವಾ

ನಿಂದ್ಯವಾದ ಶಾಕ್ತಪೂಜಿತ ನಗ್ನಮೂರ್ತಿಗಳು ಯೋನಿಸ್ವರೂಪದವುಗಳು ವಾಮಾಚಾರಾನುಸಾರವಾಗಿ.

ಈ ಶಕ್ತಿಗಳ ಆಯುಧಗಳು ಚಾವಟಿ, ಭರ್ಚಿ, ಈಟಿ, ಶಕ್ತಿ, ಬಾಣ, ಕತ್ತಿ, ಧ್ವಜದಂಡ– ಇವುಗಳು.

ಶಕ್ತ್ಯಾಯುಧವೆಂದರೆ ಚತುಷ್ಕೋನ ಆಕೃತಿಯ ಅಥವಾ ಅಂಡಾಕೃತಿಯ ಲೋಹಕೃತ ಹಾಗೂ ತುದಿಯಲ್ಲಿ ಕಬ್ಬಿಣದ ನೇಗಿಲತ್ತಿಯಂತಿರುವ ಹಾಗೂ ಮರದ ಹಿಡಿಕೆಯುಳ್ಳ ಆಯುಧ.

ಪರಾಶರನ ತಂದೆ ಅಥವಾ ವಸಿಷ್ಠನ ಜ್ಯೇಷ್ಠಸುತನು ಶಕ್ತಿನಾಮಕನು.

ಶಾಕ್ತತಾಂತ್ರಿಕರು ದುರ್ಗಾ (ಶಕ್ತಿಯ)ರಾಧಕರು; ಅವರ ದಕ್ಷಿಣಾಚಾರವು ಗ್ರಾಹ್ಯ ಮತ್ತು ವಾಮಾಚಾರವು ತ್ಯಾಜ್ಯವು.

ದೇವತೆಯ ಕ್ರಿಯಾಶಕ್ತಿಯೇ ಶಕ್ತಿಯು. ಶಕ್ತಿಯನ್ನು ಮೂರ್ತೀಕರಿಸಿದವರು ಆ ದೇವತೆಯನ್ನು ಮೂರೆಂದರು, ಎಂಟೆಂದರು, ಕೆಲವೊಮ್ಮೆ ಒಂಭತ್ತೆಂದರು. ಇನ್ನೂ ಕೆಲವರು ಶಕ್ತಿದೇವತೆಗಳು ೫೦ ಎಂದರು– ವಿಷ್ಣುವಿಗೈವತ್ತು, ಶಿವನಿಗೈವತ್ತು=೧೦೦. ಕೊನೆಗೆ ಎಷ್ಟು ದೇವತೆಗಳಿದ್ದಾರೋ ಅವರೆಲ್ಲರಿಗೂ ಒಬ್ಬಳಿಗಿಂತ ಹೆಚ್ಚು ಶಕ್ತಿಪತ್ನಿಯರಾದರು. ಆದುದರಿಂದ ಪುಂದೇವತೆಗಳಿಗಿಂತ ಸ್ತ್ರೀದೇವತೆಗಳ ಸಂಖ್ಯೆ ಹೆಚ್ಚಾಯಿತು. ಪ್ರತಿಯೊಂದು ಪುಂದೇವತೆಯೂ "ಏಕೋಽಹಂ ಬಹುಪತ್ನೀಕಃ" ಎಂಬಂತಾಯಿತು.

**"ಭೇದಾಃ ಸಹಸ್ರಂ ತವ ದೇವಿ ಸಂತು**
**ತ್ವಂ ಮೂಲಶಕ್ತಿರ್ಮಮ ಮಾತರೇಕಾ।**
**ಸ್ತೋತ್ರಾಣಿ ತೇ ಬುದ್ಧಿಮತಾಂ ವಿಭೂತಿ–**
**ದ್ವಾರಾ ಬಹುನೀವ ವಿಭಾಂತಿ ಲೋಕೇ॥"**

**–'ಪ್ರಚಂಡ ಚಂಡೀತ್ರಿಶತೀ' ಪುಟ – ೨೦**

ನವರಾತ್ರಿಯ ನವದುರ್ಗೆಯರು: ಕುಮಾರಿಕೆ, ತ್ರಿಮೂರ್ತಿ, ಕಲ್ಯಾಣಿ, ರೋಹಿಣಿ, ಕಾಲಿ, ಚಂಡಿಕೆ, ಶಾಂಭವಿ, ದುರ್ಗೆ ಮತ್ತು ಭದ್ರೆ. ಬಗಲಾಮುಖಿ, ಛಿನ್ನಮಸ್ತೆ ಮುಂತಾಗಿ ನವಪರ್ಯಾಯಗಳು ವಂಗೀಯ, ಶಾಕ್ತತಂತ್ರೀಯ.. ವಾಸಿಷ್ಠಗಣಪತಿಮುನಿಗಳು ಛಿನ್ನಮಸ್ತೆಗೆ ಮೂಲಾಧಾರದಿಂದೆದ್ದ ಕುಂಡಲಿನಿ ಸಹಸ್ರಾರಚಕ್ರಕ್ಕೇರಿದಾಗ ಜೀವಾತ್ಮನು ಪರಮಾತ್ಮೈಕ್ಯವನ್ನು ಪಡೆಯುವ ಶಕ್ತಿ ಎಂದು ಪ್ರಾಧಾನ್ಯವನ್ನು ಕೊಟ್ಟಿದ್ದಾರೆ ಎಂಬುದಿಲ್ಲಿ ಗಮನಾರ್ಹವಾದುದು.

## ಪೀಠಪ್ರಕಾರಗಳು

ಪೀಠಗಳು* ಪಿಂಡಿಕೆಗಳು. ಅವುಗಳ ಪ್ರಕಾರಗಳು: (೧) ಸಮಚತುಷ್ಕೋಣ, (೨) ವಿಷಮಚತುಷ್ಕೋಣ; (೩) ಸಮಷಟ್‌ಕೋಣ; (೪) ವಿಷಮ ಷಟ್ಕೋಣ; (೫) ಅಷ್ಟಕೋಣ; (೬) ದೀರ್ಘಾಷ್ಟಕೋಣ, (೭) ಸಮದ್ವಾದಶಕೋಣ; (೮) ವಿಷಮದ್ವಾದಶಕೋಣ; (೯) ಸಮಷೋಡಶಕೋಣ; (೧೪) ವಿಷಮಷೋಡಶಕೋಣ; (೧೧) ಸಾಮಾನ್ಯ ವಿಷಮಕೋಣ, (೧೨) ಸಮವರ್ತುಲಕೋಣ; (೧೩) ವಿಷಮವರ್ತುಲಕೋಣ; (೧೪) ತ್ರಿಕೋಣ; (೧೫) ಅರ್ಧಚಂದ್ರ; (೧೬) ವಿಶಿಷ್ಟ ಅರ್ಧಚಂದ್ರ. ವಿಷಮವೆಂಬುದರಿಂದ ದೀರ್ಘವೃತ್ತಾಕಾರ ಯಾ ಅಂಡಾಕಾರ; ಚತುಷ್ಕೋನಾದಿ ಚತುರ್ಭುಜಗಳಾದರೆ ಎರಡೆರಡು (ಎದುರುಬದುರು) ಭುಜಗಳು ಸಮಾಂತರ ರೇಖೆಯುಳ್ಳವುಗಳಾಗಿರುತ್ತವೆ. ವಿಶಿಷ್ಟವು ಕಚ್ಚುಕಚ್ಚಾದ ಅರ್ಧಚಂದ್ರನ=ಅರ್ಧ ಪರಿಧಿಯುಳ್ಳದ್ದು–ಅದರ ಮೇಲಿನ (ಒಂದು ಬದಿಯ)ರೇಖೆ ಸರಳ.

ಪೀಠಗಳು 'ಯೋನಿ'ಗಳಲ್ಲ, ಆಕರಗಳು; ಲಿಂಗ'ಗಳೆಲ್ಲ ಶಿಶ್ನಚಿಹ್ನೆಗಳಲ್ಲ. ಲಿಂಗವು ನಿರಾಕಾರ ಪರಬ್ರಹ್ಮ ಸಂಕೇತ. ಹಾಗೇ ಸಾಲಗ್ರಾಮವೂ ಅದು ವೃಷಣ ಚಿಹ್ನವಲ್ಲ.

ಒಂದನೆಯದಾದ ಚತುರ್ಭುಜಾಕಾರದ ಪೀಠದ ಪ್ರಕಾರಗಳು ೯; ಅವುಗಳಲ್ಲಿ ಉತ್ತಮೋತ್ತಮವೆಂಬುದರ ಉದ್ದಳತೆಯು ಲಿಂಗದ ಉದ್ದದ ೩/೪ರಷ್ಟಿರುತ್ತದೆ; ಅಧಮಾಧಮ ಎಂಬುದು ಲಿಂಗದ ಉದ್ದಳತೆಯ ಅರ್ಧಷ್ಟಿರುತ್ತದೆ.

ಮಾನಸಾರ ಶಿಲ್ಪಶಾಸ್ತ್ರಾನುಸಾರವಾಗಿ–

೧. ನಾಗರಪೀಠ (ಚತುರ್ಭುಜವುಳ್ಳದ್ದು)

೨. ದ್ರಾವಿಡಪೀಠ (ಅಷ್ಟಭುಜವುಳ್ಳದ್ದು)

೩. ವೇಸರಪೀಠ (ವೃತ್ತಾಕಾರವುಳ್ಳದ್ದು)

೪. ಧಾರಾಪೀಠ (ವೈಶ್ವತ್ರಿಕ)

ಪೀಠದ ಒಂದು ಮಗ್ಗುಲಿನ ಉದ್ದವು ಲಿಂಗದ (ಪೀಠದ ಮೇಲೆ ಇರಿಸಿದ ಮೂರ್ತಿಯ) ವ್ಯಾಸದ ಮೂರು ಪಟ್ಟಿನಷ್ಟಿರುತ್ತದೆ ಅಥವಾ ಲಿಂಗದ ಪೂಜಾ ಭಾಗಕ್ಕೆ ಇಲ್ಲವೆ ಅದರ ವಿಷ್ಣುಭಾಗಕ್ಕೆ ಸರಿಸಮವಾಗಿರುತ್ತದೆ. ಪೀಠದ ಉದ್ದಗಲವು ಲಿಂಗದ ವಿಷ್ಣುಭಾಗದ ಪರಿಧಿಯವರೆಗೆ ಬರಬಹುದು. ಹಾಗೇ ಪೀಠದ ಎತ್ತರವು ವಿಷ್ಣುಭಾಗದ ಮೇಲ್ತುದಿಯ ತನಕ ಬರಬಹುದು; ಅಥವಾ ಅದು ಇಡಿ ಪೂಜಾಭಾಗವನ್ನು ಅಳವಡಿಸಿಕೊಳ್ಳಬಹುದು– ವಿಷ್ಣುಭಾಗದ ಅರ್ಧಕ್ಕೆ ಯಾ ಕಾಲುಭಾಗಕ್ಕೆ ಸರಿದೊರೆಯಾಗಬಹುದು.

---

* ಪೀಠ =ಆಸನ ಅಥವಾ (ಯೋನ್ಯಾದಿ ಪದಸೂಚಕ) ಮೂರ್ತಿ ಯಾ ಲಿಂಗವು ನೆಟ್ಟಿರುವ ನಿಂತಿರುವ, ಕುಳಿತಿರುವ ಯಾ ಮಲಗಿರುವ ಮಣೆ, ವಿಶ್ರಾಮಪದ.

ಪೀಠವು ಒಂದರ ಮೇಲೊಂದರಂತೆ ಇಟ್ಟ ಒಂದು, ಎರಡು ಅಥವಾ ಮೂರು ಕಲ್ಲುಹಲಗೆಗಳಿಂದ ರಚಿತವಾಗಿರಬಹುದು. ಪೀಠಗಳನ್ನು ವಿವಿಧ ಕುಸುರುಗೆಲಸಗಳಿಂದ ಅಲಂಕರಿಸಿರಬಹುದು. ಈ ಸೂಕ್ಷ್ಮ ಅಲಂಕಾರಿಕ ವಕ್ರರೇಖೆಗಳನ್ನು ಸ್ತರಗಳ ಮೇಲೆ ಸ್ತರಗಳಂತೆ ನಿರ್ಮಿಸಲಾಗುತ್ತದೆ. ವಿವಿಧ ರಚನಾವಿಧಾನಾನುಸಾರ ಇವುಗಳ ಆಕೃತಿ ಮತ್ತು ಸಂಖ್ಯೆಗಳಿಗನುಗುಣವಾಗಿ ಅವುಗಳಿಗೆ ಹೆಸರಿಡಲಾಗಿದೆ: ಉದಾ–ಭದ್ರಪೀಠ, ಮಹಾಂಬುಜಪೀಠ, ಶ್ರೀಕರ ಪೀಠ, ವಿಕರಪೀಠ ಮಹಾವಜ್ರಪೀಠ, ಸೌಮ್ಯಕಪೀಠ, ಚಂದ್ರಪೀಠ ಮತ್ತು ವಜ್ರಪೀಠ. ರಚನಾವಿಧಾನದ ವಿವಿಧ ಸಾಮಗ್ರಿಗಳಾವುದೆಂದರೆ–ಉಪಾನ, ಜಗತಿ, ಕುಮುದ, ಪದ್ಮ ಕಂಪ, ಕಂಠ, ಪಟ್ಟಿಕೆ, ನಿಮ್ನ ಮತ್ತು ಘೃತವಾರಿ. ಪೂಜಕನಿಗೆದುರಾದಂತೆ ಪೀಠದ ನಾಲೆಯು (ತೀರ್ಥವಾಹಿಯು) ಲಿಂಗದ ಎಡಕ್ಕೆ ಇರುತ್ತದೆ. ಈ ಜಲವಾಹಕದ ಉದ್ದಳತೆಯೂ ಅಡ್ಡಳತೆಯೂ ಪೀಠದ ಮೂಲಭಾಗವು ಪೀಠದ ಬದಿಯ ಉದ್ದಳತೆಯ ೧/೩ ಯಾ ೧/೪ರಷ್ಟಿರಬೇಕು ಮತ್ತು ತುದಿಯಲ್ಲಿ ಅದರ ಅಗಲವು ಮೂಲಭಾಗದ ಅಗಲದ ೩/೪ರಷ್ಟಿರಬೇಕು. ನಾಲೆಯ ಬದಿನೋಟವು ಆನೆಯ ತುಟಿಯಂತಿರಬೇಕು.

**ಆಸನಗಳು**

(೧) ಅನಂತಾಸನ=ತ್ರಿಕೋಣಾಕೃತಿಯುಳ್ಳದ್ದು.

(೨) ಸಿಂಹಾಸನ=ಸಮ ಚತುರ್ಭುಜಾಕಾರದ ಆಸನ.

(೩) ವಿಮಲಾಸನ=ಷಟ್ಕೋಣ ಅಥವಾ ಷಡ್‌ಭುಜ.

(೪) ಯೋಗಾಸನ=ಅಷ್ಟಕೋಣ ಅಥವಾ ಅಷ್ಟಭುಜ.

(೫) ಪದ್ಮಾಸನ=ವೃತ್ತಾಕಾರದ ಯಾ ದೀರ್ಘ ವೃತ್ತಾಕಾರದ ಆಸನ (ಚಂದ್ರಜ್ಞಾನ)

(೬) ಭದ್ರಪೀಠ=ವೃತ್ತಾಕಾರದ ಯಾ ಸಮಚತುರ್ಭುಜಾಕಾರದ ಆಸನ.

(೭) ಕೂರ್ಮಾಸನ=ಅಂಡಾಕೃತಿಯುಳ್ಳದ್ದು ಯಾ ದೀರ್ಘ ವೃತ್ತಾಕಾರ ಉಳ್ಳದ್ದು.

(೮) ನವಸಿಂಹಾಸನ=ಚತುಷ್ಪಾದಾಸನ; ವೃತ್ತಾಕೃತಿಯುನ್ನು ಅಥವಾ ಸಮಚತುರ್ಭುಜಾಕೃತಿಯನ್ನು ಉಳ್ಳದ್ದು.

# (ಶಿವ) ರುದ್ರಲಿಂಗ ಪ್ರಕಾರಗಳು

**ಏಕಾದಶರುದ್ರರು:**

| ಅಂಶುಮದ್‌ಭೇದಾಗಮದಂತೆ | ವಿಶ್ವಕರ್ಮಶಿಲ್ಪದಂತೆ | ರೂಪಮಂಡನದಂತೆ |
|---|---|---|
| ೧. ಮಹಾದೇವ | ಅಜ | ತತ್‌ಪುರುಷ |
| ೨. ಶಿವ | ಏಕಾಪಾದ | ಅಘೋರ |

| | | |
|---|---|---|
| ೩. ಶಂಕರ | ಅಹಿರ್ಬುಧ್ನ್ಯ | ಈಶಾನ |
| ೪. ನೀಲಲೋಹಿತ | ವಿರೂಪಾಕ್ಷ | ವಾಮದೇವ |
| ೫. ಈಶಾನ | ರೇವತ | ಸದ್ಯೋಜಾತ |
| ೬. ವಿಜಯ | ಹರ | ಮೃತ್ಯುಂಜಯ |
| ೭. ಭೀಮ | ಬಹುರೂಪ | ಕಿರಣಾಕ್ಷ |
| ೮. ದೇವದೇವ | ತ್ರ್ಯಂಬಕ | ಶ್ರೀಕಂಠ |
| ೯. ಭವೋದ್ಭವ | ಸುರೇಶ್ವರ | ಅಹಿರ್ಬುಧ್ನ್ಯ |
| ೧೦. ರುದ್ರ | ಜಯಂತ | ವಿರೂಪಾಕ್ಷ |
| ೧೧. ಕಪಾಲೀಶ | ಅಪರಾಜಿತ | ಬಹುರೂಪ ಯಾ ತ್ರ್ಯಂಬಕ |

ಎಲ್ಲ ಲಿಂಗಗಳೂ 'ಸಿಲಿಂಡ್ರಿಕಲ್' ಆಗಿರುತ್ತವೆ

ನಾಗರಲಿಂಗವು ಮಯಮತದ ಪ್ರಕಾರ ಲಿಂಗದ ಇಡಿ ಉದ್ದದ ಅದೇ ದೇವಾಲಯ (ಗರ್ಭಗೃಹ)ದ ಒಬ್ಬದಿಯನ್ನು ಅನುಸರಿಸಿದ್ದರಿಂದ ಅದರ- ೧೬ ಸಮ ವಿಭಾಗವುಳ್ಳದ್ದಾಗಿರುತ್ತದೆ. ಅದರ ೩ ಯಾ ೪ ಯಾ ೫ ಸಮವಿಭಾಗಗಳಷ್ಟಿರುತ್ತದೆ. ಜಯದ ಲಿಂಗವು ಪಂಚಸಮವಿಭಾಗದಷ್ಟಿದೆ; ಪೌಷ್ಟಿಕ ಲಿಂಗವು ೪ ಸಮವಿಭಾಗದಷ್ಟಿರುತ್ತದೆ; ಸಾರ್ವಕಾಮಿಕಲಿಂಗವು ೩ ಸಮ ವಿಭಾಗದಷ್ಟಿರುತ್ತದೆ.

## ದ್ರಾವಿಡ ಲಿಂಗವು ಹೀಗಿದೆ:

ಲಿಂಗದ ಇಡಿ ಅಳತೆಯನ್ನು ೨೧ ಭಾಗಗಳನ್ನಾಗಿ ವಿಭಜಿಸಬೇಕು. ಇಂಥ ೬ ವಿಭಾಗಸಮಾನವಾದದ್ದು ಜಯದ ಲಿಂಗವು; ಇಂಥ ೫ ವಿಭಾಗ ಸಮಾನವಾದದ್ದು ಪೌಷ್ಟಿಕಲಿಂಗವು; ಈ ಬಗೆಯ ೪ ವಿಭಾಗ ಸಮವಾದದ್ದು ಸಾರ್ವಕಾಮಿಕ.

ವೇಸರಲಿಂಗವು ಈ ಪ್ರಕಾರವಾಗಿದೆ. ಇಡಿಲಿಂಗವನ್ನು ೨೪ ಭಾಗಗಳನ್ನಾಗಿ ಮಾಡಬೇಕು, ಮತ್ತು ಆ ಭಾಗಗಳಲ್ಲಿ ೮ ಭಾಗಗಳಷ್ಟಿರುವುದು ಜಯದವು; ೭ ಭಾಗಗಳಷ್ಟಿರುವುದು ಪೌಷ್ಟಿಕವು ಹಾಗೂ ೬ ಭಾಗಗಳಷ್ಟಿರುವುದು ಸಾರ್ವಕಾಮಿಕವು.

## ಲಿಂಗವರ್ಗಗಳು:

ಲಿಂಗವು ಮೂರ್ತಿವಿದ್ಯೆಯ ಮೂಲ. ಅದರ ವರ್ಗಗಳು ಅನೇಕ. ಅದರ ಮಹಾವಿಭಾಗಗಳೆರಡು; ಚಲ ಯಾ ಜಂಗಮ ಲಿಂಗ ಮತ್ತು ಸ್ಥಾವರ ಯಾ ಅಚಲಲಿಂಗ. ಚಲಲಿಂಗವು ಮೃಣ್ಮಯ, ಲೋಹಜ, ರತ್ನಜ, ದಾರುಜ, ಶೈಲಜ ಮತ್ತು ಕ್ಷಣಿಕ ಎಂದು ಷಡ್ವಿಧವಾಗಿದೆ. ಮೃಣ್ಮಯದಲ್ಲಿ ಪಕ್ವ, ಅಪಕ್ವ ಎಂದು ದ್ವಿವಿಧ. ಲೋಹಜದಲ್ಲಿ ಹೇಮಜ, ರೌಪ್ಯಜ, ತಾಮ್ರಜ, ಕಾಂಸ್ಯಜ, ಲೋಹಜ, ಸೀಸಜ, ಹಿತ್ತಾಳಿಜ ಮತ್ತು ತವರಜ ಎಂದು

ಎಂಟು ವಿಧ. (Of gold, silver copper, bell metal, Iron, lead, lapis calamineries pewter and tuenag). ರೀತಿ; ಅರಕೂಟ= ಹಿತ್ತಾಳಿ, ಲೋಹ=ಕಾಲಾಯಸ, ತವರ=ತ್ರಪು; ಸೀಸ, ರಂಗ, ವಂಗ, ಲೋಹ=ಯಾವುದಾದರೂ ಲೋಹ, ಧಾತು (Base Metal). ರತ್ನಜದಲ್ಲಿ ಮೌಕ್ತಿಕಜ, ಪ್ರವಾಳಜ, ವೈಡೂರ್ಯಜ, ಷಟ್ಕೋನ ಸಿಲಿಕಜ, ಸ್ಫಟಿಕಜ, ಪುಷ್ಯರಾಗಜ, ಮರಕತಜ ಮತ್ತು ನೀಲಜ ಎಂದು ಸಪ್ತವಿಧ. ಪಂಚಲೋಹ–ನವರತ್ನ ಲಿಂಗಗಳು ಕಡಿಮೆ. ಸ್ಫಟಿಕ=ಹರಳು=crystal.

## ಸ್ಥಾವರ ಯಾ ಅಚಲಲಿಂಗಗಳ ವಿವರ:

ಸ್ಥಾವರ: ಸ್ವಾಯಂಭುವ (ಉದ್‌ಭವಲಿಂಗ, ಭಾರತದ ೬೮ ಸ್ಥಳಗಳಲ್ಲಿದೆ), ಪೂರ್ವ ಯಾ ಪುರಾಣ ದೈವತ ಯಾ ದೈವಿಕ, ಗಾಣಪತ್ಯ, ಆಸುರ, ಸೌರ (ಸೂರ್ಯಜ), ಆರ್ಷ, ರಾಕ್ಷಸ; ಮಾನುಷ–ಅತ್ಯಧಿಕ ಸಂಖ್ಯಾತಗಳು ಮನುಷ್ಯಕೃತ ಲಿಂಗಗಳು ಮತ್ತು ಬಾಣ. ಮಾನುಷಕೃತಕ ಸ್ಥಾವರಲಿಂಗವು ದಶವಿಧ–ಅದು ಬ್ರಹ್ಮಭಾಗ, ವಿಷ್ಣುಭಾಗ ಮತ್ತು ರುದ್ರಭಾಗಗಳಿಂದ ಕೂಡಿರುತ್ತದೆ. ಚತುರ್ಭುಜಭಾಗವು ಬ್ರಹ್ಮಭಾಗವು; ಅಷ್ಟಭುಜಭಾಗವು ವಿಷ್ಣು ಭಾಗ; ಮತ್ತು ವೃತ್ತಾಕಾರದ ತುದಿಯು ರುದ್ರಭಾಗವು. ರುದ್ರಭಾಗಕ್ಕೆ ಬ್ರಹ್ಮಸೂತ್ರವಿದೆ ಮತ್ತು ಭಿನ್ನ ಭಿನ್ನ ಶಿರೋವರ್ತನಗಳಿವೆ. ಬ್ರಹ್ಮಭಾಗವು ಪೀಠದಲ್ಲಿ ಕಂತಿಹೋಗಿರುವುದು ಸಹಜವು. ಆದುದರಿಂದ ಪ್ರತಿಯೊಂದು ದೇವಲಯಾಂತರ್ಗತ ಸ್ಥಾವರ ಲಿಂಗವೂ ತ್ರಿಮೂರ್ತಿಗಳಿಗೆ ಸಂಕೇತ. ಅದಕ್ಕೆ ಅಪವಾದವಿಲ್ಲದೆ ಜನಿವಾರವಿರುತ್ತದೆ.

## ಸಾರ್ವದೇಶಿಕ ಲಿಂಗಗಳ ಅಳತೆಗಳು

ಗರ್ಭಗುಡಿಯ (ದೇವಾಲಯದ ಕೇಂದ್ರಸ್ಥಲದ, ಮಧ್ಯಶಾಲೆಯ) ಒಬ್ಬದಿಗೆ ಸಮವಾಗಿರುವುದು ಸಾರ್ವಜನಿಕ ಲಿಂಗವು. ಉತ್ತಮ–ಮಧ್ಯಮ–ಅಧಮ ಲಿಂಗಗಳಲ್ಲದೆ, ಇನ್ನಾರು ಮಾದರಿಯ ಲಿಂಗಗಳಿವೆ: ಗರ್ಭಗುಡಿಯ ಉದ್ದದ ಯಾ ಅಗಲದ ೩/೫, ೫/೯ ಯಾ ೧/೨ ಅನುಪಾತಗಳ ಅಳತೆಯ ಲಿಂಗಗಳು ಅದರ ಉಪಪ್ರಕಾರಗಳು. ಈ ಆರು ಲಿಂಗಭೇದಗಳೂ ಉತ್ತಮಾಧಮ ಮಧ್ಯಮಗಳೆಂದು ತ್ರಿವಿಧ.

ನಾಗರ ಮಾದರಿಯ ದೇಗುಲದ ಅಧಮಾಧಮ ಲಿಂಗವು ಆ ಮಾದರಿಯ ಚತುರ್ಭುಜ ಗರ್ಭಾಗಾರದಲ್ಲಿ ಒಬ್ಬದಿಯ ೫ರಷ್ಟಿರಬಹುದು. ಉತ್ತಮೋತ್ತಮ ಲಿಂಗವು ಗರ್ಭಗುಡಿಯ ಗೋಡೆಯ ಒಬ್ಬದಿಯ ೬ರಷ್ಟು ಎತ್ತರವಾಗಿರಬಹುದು. ಈ ಎರಡು ಅತಿಮಿತಿಗಳ ನಡುವೆ ಬಿನ್ನಭಿನ್ನ ಎತ್ತರದ ಸಪ್ತವಿಧ ಲಿಂಗಗಳಿವೆ: (೧) ಅಧಮ–ಮಧ್ಯಮ; (೨) ಅಧಮೋತ್ತಮ; (೩) ಮಧ್ಯ ಮಾಧಮ; (೪) ಮಧ್ಯಮೋತ್ತಮ; (೫) ಮಧ್ಯಮ–ಮಧ್ಯಮ; (೬) ಉತ್ತಮ–ಮಧ್ಯಮ ಮತ್ತು (೭) ಉತ್ತಮಾಧಮ ಎಂದು. ಉತ್ತಮೋತ್ತಮ ಮತ್ತು ಅಧಮಾಧಮ ಲಿಂಗಗಳ ಉದ್ದಳತೆಗಳ ವ್ಯತ್ಯಾಸಗಳ ಏಳನೆಯ ಒಂದಂಶದಷ್ಟನ್ನು ಸೇರಿಸಿದರೆ ಈ ನಾಗರ ಲಿಂಗಗಳ ವಿವಿಧ ಬಗೆಗಳ ಅಳತೆ ಗೊತ್ತಾಗುತ್ತದೆ.

ದ್ರಾವಿಡ ದೇವಾಲಯಗಳಲ್ಲಿ ಪ್ರತಿಷ್ಠಾಪಿಸಿದ ಉತ್ತಮೋತ್ತಮ ವರ್ಗದ ಲಿಂಗವು ದೇವಾಲಯದ ಕೇಂದ್ರ ಸ್ಥಳದ ಒಬ್ಬದಿಯ ೧೩/೨೧ರಷ್ಟಾಗುತ್ತದೆ. ಅಧಮಾಧಮ ವರ್ಗದ ಲಿಂಗದ ಅಳತೆಯು ಆ ಕೇಂದ್ರದ ಸ್ಥಳದ ಒಬ್ಬದಿಯ ೧೦/೨೧ರಷ್ಟಾಗುತ್ತದೆ ಮತ್ತು ವ್ಯತ್ಯಾಸವು ೩/೨೧ ಯಾ ೧/೭. ಈ ವ್ಯತ್ಯಾಸವನ್ನು ಏಳು ಸಮ ಪಾಲಾಗಿ ವಿಭಜಿಸಿದರೆ ಮತ್ತು ಎರಡನೆಯದರ ೧,೨ ಇತ್ಯಾದಿಗಳನ್ನು ಸೇರಿಸಿದರೆ ಈ ವರ್ಗದ ಲಿಂಗಗಳ ಅಳತೆ ಗೊತ್ತಾಗುತ್ತದೆ; ಈ ಅಧಮಾಧಮಲಿಂಗದ ೭ ಬಗೆಯ ಚಿಕ್ಕ ಮಾಧ್ಯಮಿಕ ಪರಿಮಾಣದ ಅಳತೆ ತಿಳಿದುಬರುತ್ತದೆ.

ವೇಸರ ದೇವಾಲಯಗಳ ಗರ್ಭಗೃಹದ ಉತ್ತಮೋತ್ತಮ ಲಿಂಗದ ಉದ್ದವು ೧೬/೨೫ (ಹಿಂದಿನಂತೆಯೇ ಸೆಂಟ್ರಲ್ ಶ್ರೈನಿನ ಬದಿಯ ೧೬/೨೫ನೆಯ ಭಾಗ). ಅಧಮಾಧಮದ ಉದ್ದವು ೧೩/೨೫ ಮತ್ತು ಉದ್ದಗಳ ವ್ಯತ್ಯಾಸವು ೭ ಸಮ ಭಾಗ ಮಾಡಿ ಅದಕ್ಕೆ ಈ ಚಿಕ್ಕ ಭಾಗಗಳ ಒಂದು, ಎರಡು ಇತ್ಯಾದಿ ಭಾಗಗಳನ್ನು ಸೇರಿಸಿದರೆ ಮಧ್ಯಮ ಮಾಪಿನ ಏಳು ಬಗೆಗಳನ್ನು ತಯಾರಿಸಬಹುದು.

### ಲಿಂಗ ಪ್ರಕಾರಗಳು

ಛತ್ರಾಕಾರ, ತ್ರಪುಷಾಕಾರ, ಕುಕ್ಕುಟಾಂಡಾಕಾರ, ಅರ್ಧ ಚಂದ್ರಾಕಾರ ಮತ್ತು ಬುದ್‌ಬುದಸದೃಶ ಎಂದು ಐದು ಮಾದರಿಗಳಿವೆ (1) the umbrella shaped. (2) cucumber like, (3) ovular (4) crescent shaped and (5) bubble shaped.

## ಬ್ರಹ್ಮಸೂತ್ರಗಳು

ಲಿಂಗವು ತ್ರಿಮೂರ್ತಿಗಳ ಸಂಕೇತ. ಅದರ ತುದಿ ರುದ್ರಭಾಗವು, ಮಧ್ಯವು ವಿಷ್ಣುಭಾಗವು, ಬುಡವು ಬ್ರಹ್ಮಭಾಗವು. ರುದ್ರಭಾಗವು ಪೂಜಾಭಾಗ. ಅದರ ಮೇಲ್ಮೈಯ ಮೇಲೆ ಎರಡು ಉದ್ದನೆಯ ರೇಖೆಗಳನ್ನು ಕೊರೆಯಲಾಗಿರುತ್ತದೆ. ಇವೇ ಲಕ್ಷಣೋದ್ಧಾರಣ ಯಾ ಮಣಿರೇಖೆ ಅಥವಾ ಪಾರ್ಶ್ವಸೂತ್ರ. ಪೂಜಾಭಾಗದ ಉದ್ದವನ್ನು ವಿಭಜಿಸಿ ಮೂರು ಸಮಪಾಲು ಮಾಡಿ ಅವುಗಳಲ್ಲಿ ಎರಡನ್ನು ಕೆಳಗಡೆ ಎಂಟು ಸಮಪಾಲು ಮಾಡಿದರೆ– ಮೇಲೆ ಹೇಳಿದ ಎರಡು ಸಮಾಂತರ ರೇಖೆಗಳಲ್ಲಿ ಒಂದು ಈ ಕೆಳ ಚಿಕ್ಕ ವಿಭಾಗವಾಗುತ್ತದೆ. ಈ ಗೆರೆಗಳ ದಪ್ಪ ಮತ್ತು ಆಳಗಳು ಈ ವಿಭಜನೆಯ ೧/೯ರಷ್ಟಿರುತ್ತವೆ. ಎರಡು ರೇಖೆಗಳನ್ನು ಉದ್ದದ (ಎತ್ತರದ) ಎರಡು ಸಮಾಂತರ ಗೆರೆಗಳಿಂದ ಕೆಳಗಿಳಿಯುತ್ತ ಬಂದರೆ ಪೂಜಾಭಾಗದ ಅತಿ ಚಿಕ್ಕ ಎರಡು ವಿಭಾಗಗಳವರೆಗೆ ಬಂದು ನಿಲ್ಲಬೇಕು. ಪಾರ್ಶ್ವಸೂತ್ರಗಳನ್ನು ಲಿಂಗದ ಅಡ್ಡವಾದ ಸ್ತರದ ಮೇಲೆ ಗುರುತಿಸಬೇಕು–ಅವು ಹಿಂದುಗಡೆ ಕೂಡಿರುತ್ತವೆ. ನಡುವಿನ ಕೇಂದ್ರೀಯ ಸಮಾಂತರ ರೇಖೆಗಳೆರಡೂ ತುದಿಯಲ್ಲಿ ಕೂಡಿರುತ್ತವೆ; ಅಲ್ಲಿ ನಾವು ಒಂದು (curve) ಡೊಂಕನ್ನು ಕಾಣುತ್ತೇವೆ ಈ ಡೊಂಕು ಲಿಂಗದ ಶಿರೋಭಾಗವನ್ನು ಹೋಲುತ್ತದೆ.

# ಮಾನುಷ ಲಿಂಗಗಳು

೧. ಅಷ್ಟೋತ್ತರ ಶತಲಿಂಗ ೧೦೮ ಚಿಕ್ಕ ಲಿಂಗಗಳು; ಇವು ಪೂಜಾಭಾಗದಲ್ಲಿ ಡೊಂಕಾಗಿರುತ್ತವೆ. ಸುರಾಢ್ಯ ಲಿಂಗದ ಪೂಜಾಭಾಗವಿದು. ಮುಖ್ಯ ಲಿಂಗಕ್ಕೆ ಈ ೧೦೮ ಲಿಂಗಗಳು ತಾಗಿಕೊಂಡಿರುತ್ತವೆ.

೨. ಸಹಸ್ರಲಿಂಗ–೧೦೦೦ ಆಢ್ಯಲಿಂಗಕ್ಕೆ ಮೇಲೆ ಹೇಳಿದಂತೆ ಅಂಟಿಕೊಂಡಿರುತ್ತವೆ. ಆಗ ಇದು ಸಹಸ್ರಲಿಂಗ ಎನ್ನಿಸುತ್ತದೆ.

೩. ಧಾರಾಲಿಂಗ–ಸಮಲಿಂಗದ ಮೇಲೆ ಕೊರೆದ ಊರ್ಧ್ವಮುಖವಾದ ೫ ರಿಂದ ೬೪ ಲಿಂಗಗಳುಳ್ಳಂಥದು.

೪. ಶೈವೇಷ್ಟಲಿಂಗ.

೫. ಮುಖಲಿಂಗ–ಲಿಂಗದ ಪೂಜಾಭಾಗದ ಮೇಲೆ ಕೆತ್ತಿದ ಒಂದು ಅಥವಾ ಹಲವು ಮಾನುಷ ಮುಖಗಳಿರುವ ಲಿಂಗವು ಮುಖಲಿಂಗವು.

೬. ಸಾರ್ವದೇಶಿಕ ಲಿಂಗ.

೭. ಸರ್ವತೋಭದ್ರಲಿಂಗ ಅಥವಾ ಸರ್ವಸಮ ಲಿಂಗ.

ಸರ್ವತೋಭದ್ರಲಿಂಗವು ತ್ರಿವಿಧ: ಆಢ್ಯಲಿಂಗ, ವರ್ಧಮಾನ ಯಾ ಸುರಾಢ್ಯಲಿಂಗ ಮತ್ತು ಶೈವಾಧಿಕಲಿಂಗ–ಎಂದು. ಪ್ರಥಮ ಏಳು ಲಿಂಗಗಳೆಲ್ಲವುಗಳ ಅಳತೆಯೂ ಗರ್ಭಗೃಹದ ಅಳತೆಯು ೩/೫, ೫/೯ ಯಾ ೧/೨ ದಷ್ಟಿರುತ್ತದೆ; ಸರ್ವಸಮಲಿಂಗವು (ಸರ್ವತೋಭದ್ರಲಿಂಗ)ಗಳಲ್ಲಿ ತ್ರಿಭಾಗವುಳ್ಳ ಆಢ್ಯಲಿಂಗವು; ಲಿಂಗದ ಇಡಿ ಅಳತೆಯ ೮॥, ೮ ಯಾ ೭॥ಯಷ್ಟಿರುತ್ತದೆ; ಶೈವಾಧಿಕ ಲಿಂಗವು ಯಾ ಸುರಾಢ್ಯಲಿಂಗವು ತನ್ನ ಭಾಗತ್ರಯದಲ್ಲಿ ೭,೭,೮; ೫,೫,೬; ೪,೪,೫; ಅಥವಾ ೩,೩,೪ ರಷ್ಟಿರುತ್ತವೆ. ವರ್ಧಮಾನ ಅಥವಾ ಸುರಾಢ್ಯಲಿಂಗವೂ ಸ್ವಸ್ತಿಕ ಯಾ ಅನಾಢ್ಯಲಿಂಗವೂ ತ್ರೈರಾಶಿಕ ಯಾ ತ್ರೈಭಾಗಿಕ ಲಿಂಗವೂ ಸೇರಿ (ಸಾರ್ವದೇಶಿಕದಿಂದ ತ್ರೈಭಾಗಿಕದವರೆಗೆ) ೯ ಬಗೆಯವುಗಳಾಗುತ್ತದೆ. ಇವುಗಳ ಎತ್ತರ ಯಾ ಉದ್ದವು ಪರಿಧಿಗನುಗುಣವಾಗಿ ಬ್ರಹ್ಮಭಾಗ ೮, ವಿಷ್ಣುಭಾಗ ೭ ಮತ್ತು ರುದ್ರಭಾಗ ೬ ಆಗಿರುತ್ತವೆ.

## ರುದ್ರನ ಸಂಹಾರ ಮೂರ್ತಿಗಳು:

ಕಾಮಾಂತಕಮೂರ್ತಿ, ಗಜಾಸುರಸಂಹಾರಮೂರ್ತಿ, ಕಾಲಾರಿಮೂರ್ತಿ, ತ್ರಿಪುರಾಂತಕಮರ್ತಿ, ಶರಭೇಶಮೂರ್ತಿ, ಬ್ರಹ್ಮಶಿರಶ್ಛೇದಕಮೂರ್ತಿ, ಭೈರವ ಮೂರ್ತಿ, ವೀರಭದ್ರಮೂರ್ತಿ, ಜಲಂಧರಹರಮೂರ್ತಿ, ಮಲ್ಲಾರಿಶಿವಮೂರ್ತಿ, ಅಂಧಕಾಸುರವಧಮೂರ್ತಿ–ಎಂದು ೧೧.

## ಭೈರವನ ಸಾಮಾನ್ಯ ಲಕ್ಷಣಗಳು:

(ವಿಷ್ಣುಧರ್ಮೋತ್ತರಾನುಸಾರ)

ಲಂಬೋದರ, ಉರುಟಾದ ಹಳದಿಗಂಗಳು, ಎಡ ಬಲಬದಿಗಳಲ್ಲಿ ಕೋರೆದಾಡೆಗಳು, ಅಗಲವಾದ ಮೂಗುಹೊಳ್ಳೆಗಳು, ಸರ್ಪಭೂಷಣ, ಗಜ ಚರ್ಮಾಂಬರ, ಆಯುಧ ಹಿಡಿದ ಅನೇಕ ಕೈಗಳು, ಪಾರ್ವತಿಯನ್ನು ಹಾವು ಹಿಡಿದುಕೊಂಡು ಹೆದರಿಸುವ ಭಂಗಿಯಲ್ಲಿ ಇರುವುದು.

೧. ವಟುಕಭೈರವ–ಅಷ್ಟಭುಜ, ಖಟ್ವಾಂಗಧಾರಣ, ಪಾಶ, ಶೂಲ, ಡಮರು, ಕಪಾಲ, ಸರ್ಪಗಳನ್ನೂ ಮಾಂಸದ ಚೂರನ್ನೂ ಹಿಡಿದು ಅಭಯಹಸ್ತನಾಗಿರುವವನು. ಬದಿಯಲ್ಲಿ ನಾಯಿ; ಅಥವಾ ರಕ್ತವರ್ಣಜಟೆ, ನೇತ್ರತ್ರಯ (ರೂಪಮಂಡನಾನುಸಾರ), ಶ್ವವಾಹನ, ಸಂಪೂರ್ಣ ದಿಗಂಬರ ಹಾಗೂ ಭೂತಗಣಪರಿವಾರ.

೨. ಸ್ವರ್ಣಾಕರ್ಷಣ ಭೈರವ–ಚತುರ್ಭುಜ, ನೇತ್ರತ್ರಯ, ಸರ್ವಾಭರಣ ಭೂಷಣ, ಸ್ವರ್ಣ–ನವರತ್ನಪಾತ್ರೆ ಹಿಡಿದ ಕೈ; ಚಾಮರ, ತೋಮರ, ಮಹಾಶೂಲಗಳು ಭುಜದ ಮೇಲಿರಬೇಕು.

೩. ಎಂಟು ವರ್ಗಗಳ ಎಂಟು ಬಗೆಯ ಭೈರವರು ಒಟ್ಟು ೬೪. ಆ ಎಂಟು ವರ್ಗಗಳು ಅಸಿತಾಂಗ, ರುರು, ಚಂಡ, ಕ್ರೋಧ, ಉನ್ಮತ್ತ, ಕಪಾಲ, ಭೀಷಣ ಮತ್ತು ಸಂಹಾರ ಭೈರವರುಗಳು.

### ವೀರಭದ್ರ

ಸಹಸ್ರಬಾಹು, ಸಹಸ್ರಾಕ್ಷ, ಬಲಿಷ್ಠ ತೋಳುಗಳು, ಬದಿಯ ಕೋರೆದಾಡೆಗಳು ಮತ್ತು ಶಂಖ–ಚಕ್ರ–ಧನುರ್ಧಾರಣ. ಹತ್ತು ಕೈಗಳಲ್ಲಿ ಬಾಣ, ಪರಶು, ಖಡ್ಗ, ಧನುಸ್, ಮುಸಲ, ಪಾಶ, ವೃತ್ತಾಕಾರದ ಗುರಾಣಿ, ಖಡ್ಗ–ಇವುಗಳನ್ನು ಹಿಡಿದಿರುತ್ತಾನೆ. ವೀರಭದ್ರನಿಗೆ ಜಟಾಮಕುಟ; ಅವನು ದಕ್ಷ ಪ್ರಜಾಪತಿಯ ತಲೆಯೇರಿ ನಿಂತಿರುತ್ತಾನೆ.

## ಇತರ ರುದ್ರಮೂರ್ತಿಗಳು

ಗಂಗಾಧರಮೂರ್ತಿ, ಅರ್ಧನಾರೀಶ್ವರಮೂರ್ತಿ, ಹರ್ಯರ್ಧಮೂರ್ತಿ ಯಾ ಬಾದಾಮಿಯ ಹರಿಹರಮೂರ್ತಿ, ಪುಣೆಯ ಹರಿಹರಮೂರ್ತಿ, ಕಲ್ಯಾಣಸುಂದರ ಮೂರ್ತಿ, ವೃಷಭಾರೂಢಮೂರ್ತಿ (ಕಂಚಿನದು) ಮತ್ತು ವಿಷಾಪಹಾರಮೂರ್ತಿ.

### ರುದ್ರನ ನೃತ್ತಮೂರ್ತಿಗಳು

ನಟರಾಜ, ನೃತ್ತಮೂರ್ತಿ, ಕಟಿಸಮಮೂರ್ತಿ, ಲಲಿತಮೂರ್ತಿ, ಲಲಾಟ ತಿಲಕಮೂರ್ತಿ, ಚತುರಮೂರ್ತಿ, ತಲಸಂಸ್ಫೋಟಮೂರ್ತಿ.

### ಪ್ರಸಿದ್ಧ ತ್ರಿವಿಧ ದಕ್ಷಿಣಾಮೂರ್ತಿ

(೧) ಜ್ಞಾನದಕ್ಷಿಣಾಮೂರ್ತಿ, (೨) ಯೋಗದಕ್ಷಿಣಾಮೂರ್ತಿ ಮತ್ತು (೩) ವೀಣಾಧರದಕ್ಷಿಣಾಮೂರ್ತಿ, (೪) ಕಂಕಾಲಮೂರ್ತಿ (೫) ಭಿಕ್ಷಾಟನಮೂರ್ತಿಗಳೂ ಸೇರಿದರೆ ಒಟ್ಟು ಐದು ದಕ್ಷಿಣಾಮೂರ್ತಿಗಳಾಗುತ್ತವೆ.

## ರುದ್ರನ ಅನುಗ್ರಹಮೂರ್ತಿ

೧. ಚಂಡೇಶ್ವರಾನುಗ್ರಹಮೂರ್ತಿ

೨. ವಿಷ್ಣ್ವನುಗ್ರಹಮೂರ್ತಿ ಯಾ ಚಕ್ರದಾನಮೂರ್ತಿ.

೩. ನಂದೀಶಾನುಗ್ರಹಮೂರ್ತಿ

೪. ವಿಘ್ನೇಶ್ವರಾನುಗ್ರಹಮೂರ್ತಿ

೫. ಕಿರಾತಾರ್ಜುನಮೂರ್ತಿ ಯಾ ಅರ್ಜುನಾನುಗ್ರಹಮೂರ್ತಿ

೬. ರಾವಣಾನುಗ್ರಹಮೂರ್ತಿ.

## ವಿಶಿಷ್ಟ ಭೈರವಗಣಗಳು

ಒಂದನೆಯ ಗಣ–ಕಾಪಾಲ, ಶಶಿಭೂಷಣ, ಹಸ್ತಿಚರ್ಮಾಂಬರ, ಯೋಗೀಶ, ಬ್ರಹ್ಮರಾಕ್ಷಸ, ಸರ್ವಜ್ಞ, ಸರ್ವದೇವೇಶ ಎಂದು ಎಂಟು ಪೂರ್ವೋಕ್ತಾಯುಧಪಾಣಿಗಳು. ಇವರೆಲ್ಲಾ ಕಪಾಲಭೈರವಗಣದವರು.

ಎರಡನೆಯ ಗಣ–ಭೀಷಣ, ಭಯಹರ, ಸರ್ವಜ್ಞ, ಕಾಲಾಗ್ನಿ, ಮಹಾರೌದ್ರ, ದಕ್ಷಿಣ, ಮುಖರ, ಅಸ್ಥಿರ, ಇವರೆಲ್ಲಾ ಭೀಷ್ಮಭೈರವಗಣದವರು, ಪೂರ್ವೋಕ್ತಾಯುಧಪಾಣಿಗಳು.

ಮೂರನೆಯಗಣ–ಅತಿರಿಕ್ತಾಂಗ, ಕಾಲಾಗ್ನಿ, ಪ್ರಿಯಂಕರ, ಘೋರನಾದ, ವಿಶಾಲಾಕ್ಷ, ಯೋಗೀಶ, ದಕ್ಷಸಮಸ್ಥಿತ– ಇವರೆಲ್ಲಾ ಸಂಹಾರ ಭೈರವಗಣದವರು, ಪೂರ್ವೋಕ್ತಾಯುಧಪಾಣಿಗಳು.

**ನಮೋಸ್ತ್ವನಂತಾಯ ಸಹಸ್ರಮೂರ್ತಯೇ**
**ಸಹಸ್ರಪಾದಾಕ್ಷ ಶಿರೋರುಬಾಹವೇ।**
**ಸಹಸ್ರನಾಮ್ನೇ ಪುರುಷಾಯ ಶಾಶ್ವತೇ**
**ಸಹಸ್ರಕೋಟಿಯುಗಧಾರಿಣೇ ನಮಃ॥**

# ಉಪಸಂಹಾರ

ಗ್ರೀಕ್‌ಕಲೆ ಮತ್ತು ಭಾರತೀಯ ಕಲೆಗಳ ತುಲನಾತ್ಮಕ ಅಭ್ಯಾಸ ಮಾಡಿದವರು ಗ್ರೀಕರಿಗೆ ದೇಹಸೌಷ್ಠವ (ಉಭಯ ಪಾರ್ಶ್ವಸಮಾನತೆ Harmony) ಮುಖ್ಯವೆಂದು ಹೇಳುತ್ತಾರೆ; ಭಾರತೀಯರಿಗೆ ದೇಹವು ತಿರಸ್ಕಾರ್ಯವಲ್ಲದಿದ್ದರೂ ಆ ಅಂಗರಚನೆ ಆಯಾ ವ್ಯಕ್ತಿತತ್ವದ ಆತ್ಮಭಾವ (Mood)ವನ್ನು ಮೂಡಿಸುವಂತಿರುವುದೇ ಮುಖ್ಯವೆನ್ನುತ್ತಾರೆ. ಈ ಆತ್ಮಭಾವವು ಸಾಂದರ್ಭಿಕ. ಕಾಳಿದಾಸನ–

**"ತ್ರೈಗುಣ್ಯೋದ್ಭವಮತ್ರಲೋಕಚರಿತಂ ನಾನಾರಸಂದೃಶ್ಯತೇ"**

ಎಂಬ ಸಾರ್ವಕಾಲಿಕ ಕಲಾನಿಯಮವನ್ನು ನೆನೆಯಬೇಕು. ವ್ಯಕ್ತಿಗಳಲ್ಲಿ– ಅವರು ಶಾಸ್ತ್ರೀಯಾರ್ಥದಲ್ಲಿ ವ್ಯಕ್ತಿಗಳೇ ಆದರೆ ಸತ್ವಪ್ರಾಧಾನ್ಯ, ರಜಃಪ್ರಾಧಾನ್ಯ ಅಥವಾ ತಮಃಪ್ರಾಧಾನ್ಯ ಎಂಬುದು ಹುಟ್ಟಿನಿಂದ ಸಾವಿನವರೆಗೆ ಪ್ರಚ್ಛನ್ನವಾಗಿ ಸ್ಥಿರನಿಯಾಮಕವಾಗಿರುತ್ತದೆ; ಚಾರಿತ್ರನಿರೂಪಕವಾಗಿರುತ್ತದೆ. ಅಧಮ ಮಧ್ಯಮ ಮತ್ತು ಉತ್ತಮವಾಗುತ್ತಾ ಹೋಗುವ ಜೀವನವನ್ನು ನಮ್ಮ ಸಂಸ್ಕೃತಿಯು ಒತ್ತಿ ಹೇಳುತ್ತದೆ. ಜನ್ಮಾಂತರಗಳ ಕಾಲಾವಧಿ ಉಕ್ತ ಪರಿವರ್ತನೆಗೆ ಅವಕಾಶ ಕೊಡುತ್ತದೆ. ಆದುದರಿಂದ ಆಂತ್ಯತಿಕ ದುರಂತತೆ (ಆವಿದ್ಧತೆ) ಇಲ್ಲಿ ಯಾವ ವ್ಯಕ್ತಿಗೂ ಇಲ್ಲ. ದೇವ–ಮಾನವ–ದಾನವ ಮೂರ್ತಿಗಳೆಲ್ಲವುಗಳಿಗೂ ಇದು ಅನ್ವಯಿಸುತ್ತದೆ. ಸಾಲೋಕ್ಯ ಪಾತ್ರತೆಯ ಪೂರ್ವಾವಸ್ಥೆಯು ತ್ರೈಗುಣ್ಯಕ್ರೀಡಾವಧಿಯು. ಕಲೆಯಲ್ಲಿ ಸರ್ವಕಾರಣನಾದ ಈಶ್ವರನ ಪಾತ್ರವೇನು? ಭಾಸನು ಹೇಳುತ್ತಾನೆ:

**"ನಾರಾಯಣಸ್ತ್ರಿಭುವನೈಕ ಪರಾಯಣೋ ವಃ**
**ಪಾಯಾದುಪಾಯಗತಯುಕ್ತಿಕರಃ ಸುರಾಣಾಂ**
**ಲೋಕತ್ರಯಾವಿರತ ನಾಟಕತಂತ್ರವಸ್ತು**
**ಪ್ರಸ್ತಾವನ ಪ್ರತಿಸಮಾಪನ ಸೂತ್ರಧಾರಃ"**

ನಾರಾಯಣ=ಪರಬ್ರಹ್ಮ=ತ್ರಿಗುಣಾತೀತನು. ತನ್ನ ಪುರುಷೋತ್ತಮತ್ವದಲ್ಲಿ ಸೂತ್ರಧಾರ.

**ಮೂಲ ಮತ್ತು ಜನ್ಯ ಕಲಾಭಾವಗಳು (ಅಗ್ನಿಪುರಾಣದಂತೆ)**

೧. ಶೃಂಗಾರದಿಂದ ಹಾಸ್ಯರಸ.

೨. ರೌದ್ರದಿಂದ ಕರುಣರಸ.

೩. ವೀರದಿಂದ ಅದ್ಭುತರಸ

೪. ಬೀಭತ್ಸದಿಂದ ಭಯಾನಕರಸ

ಇವುಗಳಿಗೆ ರಜಸ್ತಮಸ್ಸುಗಳು ಪ್ರೇರಕಗಳು. ಶಮಸ್ಥಾಯಿಯಾದ ಶಾಂತರಸಕ್ಕೆ ಸತ್ವಗುಣವು ಪ್ರೇರಕ.

ವಿಗ್ರಹಗಳ ಮುಖಗಳಲ್ಲಿ ಈ ರಸಗಳ ಸ್ಥಾಯಿಗಳಾದ ರತಿ, ಹಾಸ್ಯ, ಭಯ, ಜುಗುಪ್ಸೆ, ವಿಸ್ಮಯ, ಶೋಕ, ಕ್ರೋಧ, ಉತ್ಸಾಹ, ಶಮಗಳಲ್ಲಿ ಯಾವುದಾದರೊಂದನ್ನು ಮೂಡಿಸುವವನೇ ಚತುರ ಶಿಲ್ಪಿ. ಅವನಿಗೆ

**"ಸರ್ವೇಷು ಗಾತ್ರೇಷು ಶಿರಃ ಪ್ರಧಾನಂ**

**ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ"**

ಎಂಬುದು ಗೊತ್ತಿರುತ್ತದೆ. ವಿಗ್ರಹಗಳ ಇತರ ಅಂಗಗಳ ವಿನ್ಯಾಸಗಳು ಈ ಅಂತ್ಯಸಿದ್ಧಿಗೆ ಅಣಿಯಾಗುವಂತೆ ರಚಿತವಾಗಿರುತ್ತವೆ. ಅಂಗೋಪಾಂಗಗಳ ವಿವಿಧ ವಿನ್ಯಾಸಗಳೆಲ್ಲ ಮುಖ–ನಯನಗಳಲ್ಲಿ ಮೂಡಬೇಕಾದ (Aesthetic Mood) ಸ್ಥಾಯಿಗಳಿಗೆ ಅನುಕೂಲಕರವಾಗಿರಬೇಕು. ಆಗ ಮಾತ್ರ ಉದ್ದೇಶವು ಸಫಲವಾಗುತ್ತದೆ.

ಸ್ಮರನಿಗೆ ಸ್ಮರತ್ವವೇ ಸೌಂದರ್ಯ; ಸ್ಮರಹನಿಗೆ ಸ್ಮರಹರತ್ವವೇ ಸೌಂದರ್ಯ–ಎಂಬುದನ್ನು ಭಾರತೀಯ ಶಿಲ್ಪಿ ಬಲ್ಲನು. ಹಾಗೇ ವಸಿಷ್ಠನಿಗೆ ವಸಿಷ್ಠತ್ವವೇ ಸೌಂದರ್ಯ ಮತ್ತು ಅವನ ಕಾಮಧೇನುವಿಗೆ ಕಾಮಧೇನುತ್ವವೇ ಸೌಂದರ್ಯ. ಕಲೆಯಲ್ಲಿ ಸರ್ವವೂ ಸುಂದರ–ಅದದು ಅದದರಂತಿದ್ದರೇ ಸುಂದರ. ಹೆಣಕ್ಕೆ ಸೌಂದರ್ಯವಿರುವುದು ಹೆಣದಂತಿದ್ದರೇ! ಇದ್ದಲಿಗೆ ಸೌಂದರ್ಯವಿರುವುದು ಇದ್ದಲಾಗಿದ್ದರೇನೇ! ರಸದೃಷ್ಟಿಯ ರಹಸ್ಯ ಇದು.

## ಅಂತೆ ಇರುವುದು

ಶಿಲ್ಪದಲ್ಲಿ 'ಅಂತೆ ಇರುವುದು' ಎಂದರೆ ಉಪಮೆ, ದೃಷ್ಟಾಂತ, ನಿದರ್ಶನ. ಈ ಉಪಮೆಯು Explicit Metaphor ವಿವೃತವಾದ ರೂಪಕ; ಸಂವೃತ ರೂಪಕಾವಯವಗಳು ಉಪಮೆ. ಇಂಥ ಸಂವಾರ–ವಿವಾರ ಕ್ರಿಯೆಗಳಲ್ಲಿ ನಂಬಿಗೆಯನ್ನು ಕೆಡಿಸದಷ್ಟು ಅತಿಶಯ (Hyperbole) ಇರುತ್ತದೆ. ಇದೇ ಜೀವನದ ನೈಜತೆಯನ್ನು ಕಲಾನೈಜತೆಯಿಂದ ಪ್ರತ್ಯೇಕಿಸುವ ಕಾರಕವು. ತತ್ತುಲ್ಯತ್ವೇ ಸತಿ ತದ್ಭಿನ್ನತ್ವಂ ಎಂಬುದು ಸೂತ್ರವು.

ಜೀವನದ ಎಲ್ಲ ಮೂಲ, ಸ್ಥೂಲ ಜ್ಞಾನಗಳೂ ಹೋಲಿಕೆಯು ಮೊದಲನೆಯ ಆಧಾರವು. ಆದರದು ಆತ್ಯಂತಿಕ ನಿಕಷವಲ್ಲ. ಆತ್ಯಂತಿಕವಾದರೆ ಗುರುತಿಸಲಾರದಷ್ಟು ಅದು ಏಕತ್ವ ಜನಕವಾಗುತ್ತದೆ. ಅತಿಶಯಕ್ಕೂ ಇದೇ ಮಾತು ಅನ್ವಯಿಸುತ್ತದೆ. ಈ ಹಾಳತವನ್ನು ಬಲ್ಲವನೇ ಪ್ರತಿಭಾವಂತ ಶಿಲ್ಪಿ.

**ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ**

**ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ॥**

ಎಂಬ ಎರಡು ಉದಾಹರಣೆಗಳು ಸಾಕು. ರಾಮನು ಗಗನೋಪಮನು, ರಾವಣನು ಸಾಗರೋಪಮನು.

ಹಾಗೇ

**"ತಾಂಬೂಲರಾಗವಲಯಂ ಸ್ಫುರದ್ದಶನ ದೀಧಿತಿ**

**ನೀಲೋತ್ಪಲಾಭನಯನಂ ತವೇವವದನಂತವ"**

ನಿನ್ನ ಮುಖವು (ಬಾಯಿಯು)ನಿನ್ನ ಮುಖದಂತೆಯೇ ಇದೆ=ಎಂಬಲ್ಲಿ ಬಿಂಬ–ಪ್ರತಿಬಿಂಬ ಭಾವದ ಮೂಲಕ ಒಬ್ಬಳ ಮುಖವನ್ನು ಕನ್ನಡಿಯಲ್ಲಿ ಪ್ರತಿಬಿಂಬಿಸಿ ಹೋಲಿಸಿದಂತೆ ಹೇಳಲಾಗಿದೆ. ಇಲ್ಲಿ ಅನನ್ಯತೆಯೇ ಅತಿಶಯ.

ಜಗತ್ತು ದೇವರಂತೆ ಇದೆ; ದೇವರೇ ಆಗಿಲ್ಲ. "ಸರ್ವಂ ಖಲ್ವಿದಂ ಬ್ರಹ್ಮ" ಎಂದ ಬಳಿಕ "ತಜ್ಜಲಾನ್" ಎಂದು ಜಗತ್ತನ್ನು ಬ್ರಹ್ಮಜಾತ ಎಂದು ಹೇಳಿದ್ದು ಜನರು ಮೋಸ ಹೋಗಬಾರದೆಂದು. ಚಿತ್ರಗತ ಪ್ರಿಯನ ಕೊರಳಿಗೆ ಜೀವಿಸಿರುವ ಸುಂದರಿ ಹಾರ ಹಾಕಹೋಗುವ ನಿರಾಶಾಂತ್ಯ ಉಂಟಾಗಬಾರದೆಂದು.

ಹಾಗೇ

"ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ, ಕಣ್ಣಿಗೂ ಕಣ್ಣಾಗಿ ಒಳಗಿಹುದು" ಎಂದು ಅಂಬಿಕಾತನಯದತ್ತರು ಹೇಳಿದ್ದಿಲ್ಲಿ ಸ್ಮರಣೀಯ. ಮೋಸಗಾರಿಕೆ ಸಹಾ ಒಂದು "ಕಲೆ"ಯಾದುದರಿಂದ ದೇಹ ಸೌಂದರ್ಯಕ್ಕೆ ಮರುಳಾಗಿ ಯಾರೂ ಆತ್ಮಸೌಂದರ್ಯವನ್ನು ಮರೆಯಬಾರದು; ಒಂದು ಅನಿತ್ಯ, ಇನ್ನೊಂದು ನಿತ್ಯವು. ಆತ್ಮಸ್ವರೂಪಸೂಚಕವಾದ ಕಲೆಯು ತ್ರಿಕರಣಶುದ್ಧತೆಯಿಂದ ಮಾತ್ರ ಸಾಧ್ಯ. ಆತ್ಮಭಾವ ವ್ಯಂಜಕವಲ್ಲದ ಮೂರ್ತಿರಚನೆ ಅಸಫಲ. ಆತ್ಮವೆಂದರಿಲ್ಲಿ ಅಂತರ್ಗತವಾದ ಚಿರಸ್ಥಾಯಿಯಾದ ವ್ಯಕ್ತಿತ್ವ (Personality)ದ ಒಂದು ಸ್ಥಿರ ಮನೋಭಾವ.

ಕಲಾಸೌಂದರ್ಯಕ್ಕೆ

ಶಿಲ್ಪಕಾಯ, ನಾದಕಾಯ, ಶಬ್ದಾರ್ಥಕಾಯ, ವರ್ಣಕಾಯ, ರೇಖಾ ಕಾಯ ಮತ್ತು ಸಂಜ್ಞಾ(ಸಂಕೇತ) ಕಾಯಗಳು ಅಭಿವ್ಯಕ್ತಿಸಾಧನಗಳು. "ಕಲಾ ಸಂಕಲನ ಪ್ರಜ್ಞಾ ವಿದ್ಯಾಶಿಲ್ಪಾದಿ ಕರ್ಮಸು." "ಸಂಕಲನಂ ಸೃಷ್ಟಿಃ, ವ್ಯವಕಲನಂ ವಿನಷ್ಟಿಃ" ಇತಿಭಾಮಹಃ॥

**"ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ**

**ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ"**

॥ಇತ್ಯೋಂ॥

ಶಿರಸಿ, ಉ.ಕ. ಬಿ.ಎಚ್.ಶ್ರೀ.

೧-೩-೧೯೮೮



## ಪೀಠ ಪ್ರಕಾರಗಳು



ತ್ರೈಕೋನಿಕ ಪೀಠ



ತ್ರಿಪಾದ ಚಾಂದ್ರಿಕಪೀಠ



ನಮೂನೆ ೨– ಮಲಬಾರಿನಲ್ಲಿರುವ ಕೂರ್ಮಾಕೃತಿಯ ಪೀಠದ ಪಾರ್ಶ್ವ ದೃಶ್ಯ



ಎಲ್ಲೋರಾದಲ್ಲಿರುವ ಮಕರಾಕೃತಿಯಪೀಠ



ಮಲಬಾರಿನ ಕೂರ್ಮಾಕೃತಿಯ ಆಸನದ (ಪೀಠದ) ತುದಿನೋಟ

## ಹಸ್ತಮುದ್ರೆಗಳು

ನಿಂತಿರುವ ಯಾ ಮಲಗಿರುವ ವಿಷ್ಣು ಮೂರ್ತಿಗೂ ಸ್ತ್ರೀ
ದೇವತೆಗಳಿಗೂ ಸಾಮಾನ್ಯವಾದ ಕಟಕ ಹಸ್ತ ಎಂಬ ಹಸ್ತ ಮುದ್ರೆ.



**ಪೀಠಪ್ರಕಾರಗಳು**



ಎಲ್ಲೋರಾದ ಪದ್ಮಾಕೃತಿಯ ಆಸನ(ಪೀಠ)



ಎಲ್ಲೋರಾದ ಒಂದು ಬಗೆಯ ಕೂರ್ಮಾಸನ (ಕೂರ್ಮಪೀಠ)



ಯಾವಾಗಲೂ ವರ್ತುಲವಾಗಿಯೋ ಅಂಡಾಕೃತಿಯುಳ್ಳದ್ದಾಗಿಯೋ ಇರುವ ಸಾಮಾನ್ಯ ಪದ್ಮಾಸನ (ಪೀಠ)



ಪೆಟ್ಟಿಗೆಯ ಆಕೃತಿಯ ಪೀಠ

## ವಸ್ತ್ರಾದಿ ಪ್ರಸಾಧನಗಳು

ಕೃಷ್ಣಜಿನಾಚ್ಛಾದನವೆಂಬ ಹೊದಿಕೆ



ಕಪಾಲವೆಂಬ ಶಿವಹಸ್ತಾಲಂಕಾರ (ಶಿವಹಸ್ತಾಲಂಕಾರ)



ಕಿರೀಟ (ಮುಕುಟಗಳು)



ಕಿರೀಟ (ಮುಕುಟಗಳು)



ಪದ್ಮಭೂಷಣ



ಬ್ರಹ್ಮನ ವಿಶಿಷ್ಟತೆ ಜಟಾಮಕುಟ (ಶಿರಸ್ತ್ರಾಣ)

## ವಸ್ತ್ರಾದಿ ಪ್ರಸಾಧನಗಳು



ವರ್ತುಲ ಶಿರಶ್ಚಕ್ರವೆಂಬ ಶಿರಸ್ತ್ರಾಣ



ಕಮಲಾಕೃತಿಯ ಶಿರಶ್ಚಕ್ರ (ಒಂದು ಬಗೆಯ ಶಿರಸ್ತ್ರಾಣ)



ಜಟಾವಲಯವೆಂಬ ಕೇಶ ಬಂಧ–೧



ಜಟಾಭಾರವೆಂಬ ಕೇಶಬಂಧ–೨



ಜಟಾಭಾರವೆಂಬ ಕೇಶಬಂಧ–೩

## ಆಭರಣ ಅಲಂಕರಣ



ರುದ್ರನ ವಿಶಿಷ್ಟ ಜಟಾಮಕುಟ (ಶಿರಸ್ತ್ರಾಣ)

ಚಕ್ರವರ್ತಿಗಳೂ ಕೆಲವೊಮ್ಮೆ ಅಧಿರಾಜರೂ ಧರಿಸುವ ಕರಂಡ ಮಕುಟ ಎಂಬ ಶಿರಸ್ತ್ರಾಣ ಇದು ಸಾಮಂತಿಕೆಯ ಕುರುಹು





ಸಾಮಾನ್ಯ ಕರಂಡ ಮಕುಟ (ಶಿರಸ್ತ್ರಾಣ)



ಮನೋನ್ಮನಿ ಎಂಬ ಶಿರಸ್ತ್ರಾಣ

**ತಾಪಸೋಪಕರಣಗಳು**



ಗಿಂಡಿ ಕಮಂಡಲು–೧



ಗಿಂಡಿ ಕಮಂಡಲು–೨



ಕಮಂಡಲು–೧



ಕಮಂಡಲು–೨



ಕನ್ನಡಿ



ಪುಸ್ತಕ

## ಆಭರಣ ಅಲಂಕರಣ

ಬ್ರಹ್ಮ, ಸರಸ್ವತಿ ಮತ್ತು ಶಿವರು ಕೈಯಲ್ಲಿ ಹಿಡಿದಿರುವ ರುದ್ರಾಕ್ಷದ ಯಾ ಕಮಲಾಕ್ಷದ ಮಾಲೆ. ಇದು ಜಪ ಮಾಡಲು ಬಳಸುವ ಧ್ಯಾನಸೂತ್ರ ಸ್ವರೂಪದ ಪೂಜೋಪಕರಣ.





ನೀಲೋತ್ಪಲ



ಪದ್ಮ–೧



ಪದ್ಮ–೨



ಸಾಮಾನ್ಯ ಶಿರಶ್ಚಕ್ರ ಎಂಬ ಶಿರಸ್ತ್ರಾಣ



ಸರಸ್ವತಿಯೂ ಅಧಿರಾಜ ಪತ್ನಿಯರೂ ಧರಿಸುವ ಕೇಶಬಂಧವೆಂಬ ಶಿರಸ್ತ್ರಾಣ



ಸರ್ಪಕುಂಡಲ ಎಂಬ ಕರ್ಣಾಲಂಕಾರ





ಶಂಖಪತ್ರವೆಂಬ ಕುಂಡಲಗಳು (ಕರ್ಣಾಭರಣಗಳು)



ರತ್ನಕುಂಡಲ ಎಂಬ ಕರ್ಣಾಲಂಕಾರ

## ಪೀಠಪ್ರಕಾರಗಳು



ಸಮಷೋಡಶಕೋಣ ಪೀಠ



ವರ್ತುಲ ಪೀಠ



ವಿಷಮ ವಾರ್ತಿಕ ಪೀಠ



ವಿಷಮದ್ವಾದಶಕೋಣ ಪೀಠ



ಅರ್ಧಚಾಂದ್ರಿಕಪೀಠ



ವಿಷಮಷೋಡಶಕೋಣ ಪೀಠ

## ಆಯುಧಗಳು

ಎರಡು ಬಗೆಯ ಉದ್ದವಾದ ಮರದ ಹಿಡಿಯುಳ್ಳ ತ್ರಿಶೂಲಗಳು



ಮೇಲೆ ಮತ್ತು ಕೆಳಗೆ ಪಕ್ಷಿ ನಖತ್ರಯವುಳ್ಳ ನಡುಹಿಡಿಕೆಯುಳ್ಳ ವಜ್ರಾಯುಧ



ಐದು ಬಳುಕುಗಳುಳ್ಳ ಮಧ್ಯಯುಗದ ಧಮಸ್ಸು



ಮೂರು ಬಳುಕುಗಳನ್ನುಳ್ಳ ಮತ್ತು ದೊಡ್ಡದಾದ ನಡುಬಳುಕಿಗಿದಿರಾಗಿ
ತುದಿ–ಬುಡಗಳ ಸಣ್ಣ ಬಳುಕುಗಳನ್ನುಳ್ಳ ಹೆಬ್ಬಿಲ್ಲು

## ಆಯುಧಗಳು



ಚಾಲುಕ್ಯ–ಕದಂಬ–ಹೊಯ್ಸಳ ಶೈಲಿಯ ಸರಿಯಾಗಿ ಕಡಾವು ಹಾಕಿದ, ಮರದ ಹಿಡಿಕೆಯ ಖಟ್ವಾಂಗವೆಂಬ ರುದ್ರಾಯುಧದ ವಿಶಿಷ್ಟ ಮಾದರಿ. ಇದಕ್ಕೆ ಎಲುಬಿನ ಕಾವಿಲ್ಲ.



ಗಜಾಂಕುಶ–೧



ಗಜಾಂಕುಶ–೨



ಮುಂಗೈಯ/ ಯಾ ಮುಂಗಾಲಿನ ಮೂಳೆಗೆ ಮಾನವ ತಲೆ ಬುರುಡೆಯನ್ನು ಸಿಕ್ಕಿಸಿ ಮಾಡಿದ ಖಟ್ವಾಂಗ ಎಂಬ ರುದ್ರಾಯುಧ ಯಾ ಶಿವಗದೆ



ಹಗ್ಗಗಳಿಂದ ಮಾಡಿದ ಕೈ–ಕಾಲ್ ಕಟ್ಟುವ ಇಳುರುಳಿನ ಪಾಶ–೧



ಹಗ್ಗಗಳಿಂದ ಮಾಡಿದ ಕೈ–ಕಾಲ್ ಕಟ್ಟುವ ಒಟ್ಟುರುಳಿನ ಪಾಶ–೨



ಲೋಹಕೃತ ಅಂಡಾಕೃತಿಯ ಮಂಡೆಯುಳ್ಳ ಮರದ ಉದ್ದ ಹಿಡಿಕೆಯ ವಿಶಿಷ್ಟಶಕ್ತ್ಯಾಯುಧ

## ಆಯುಧಗಳು

ಶಕ್ತಿ ಎಂಬ ಭರ್ಜಿಯ ಒಂದು ನಮೂನೆ. ಇದು ಚತುಷ್ಕೋಣಾಕೃತಿಯ ಆಯುಧ; ಇದಕ್ಕೆ ಬುಡದಲ್ಲಿ ತೂತು ಕೊರೆದು ಅದರಲ್ಲಿ ಸಿಕ್ಕಿಸಿದ ಮರದ ಹಿಡಿಕೆ ಇರುತ್ತದೆ ಮತ್ತು ಇದು ಲೋಹಾಯುಧ



ಶಿವನ ಎರಡು ಬಗೆಯ ಅಗ್ನ್ಯಸ್ತ್ರಗಳು (ಆಯುಧಗಳು)



ಉಕ್ಕಿನ ಅಲಗಿನ, ಕಡಾವು ಹಾಕಿದ ಮರದ ಹಿಡಿಕೆಯನ್ನುಳ್ಳ ಉಂಗುರಕ್ಕೆಸಿಕ್ಕಿಸಿದ ಯಾ ಹಿಡಿಯ ತೂತಿನಲ್ಲಿ ಸಿಕ್ಕಿಸಿದ, ಯುದ್ಧದಲ್ಲಿ ಬಳಸುವ ಹೆಗ್ಗೊಡಲಿ–ಗದಾಗ್ರಪರಶು



ಎಡಗೈಯನ್ನು ರುಕ್ಮಿಣಿಯ ಹೆಗಲ ಮೇಲಿಟ್ಟು ಬಲಗೈಯಲ್ಲಿ ಕೃಷ್ಣನು ಹಿಡಿಯುವ ಲೋಹಕೃತವಾದ ವೇತಯಷ್ಟಿ (ಬೆತ್ತದ ಕೋಲು)



ಸರಳವಾದ ಚಕ್ರಾಯುಧ



ಅಲಂಕೃತ ಚಕ್ರಾಯುಧ

## ಆಯುಧಗಳು



ಯುದ್ಧೋಪಯುಕ್ತ ದಾರು ಮುಸಲ (ಮರದ ಒನಕೆ)



ಹಗ್ಗದ ನಾರಿನ ಬದಲು ಕಬ್ಬಿಣದ
ತಂತಿಯನ್ನು ಹೆದೆಯಾಗಿ ಉಳ್ಳ ಧನುಸ್ಸು

ಯುದ್ಧೋಪಯುಕ್ತವಾದ
ಹಲಾಯುಧ (ನೇಗಿಲು)



ಯುದ್ಧದಲ್ಲಿ ಬಳಸುವ ಟಂಕವೆಂಬ (ಅಶ್ಮಶಿಲ್ಪ) ಕಿರಿಯುಳಿ



ಲೋಹದ ಹರಿತವಾದ ಮತ್ತು ಚೂಪಾದ ತುದಿ ಇರುವ ಹಾಗೂ
ಬುಡದಲ್ಲಿ ಹಕ್ಕಿಯ ಪುಕ್ಕಗಳನ್ನು ಸಿಕ್ಕಿಸಿದ ಬಾಣವೆಂಬ ಆಯುಧವು



ಯುದ್ಧದಲ್ಲಿ ಬಳಸುವ ಕೊಡಲಿ

## ಪೀಠಪ್ರಕಾರಗಳು



ಸಮಚತುಷ್ಕೋನ ಪೀಠ



ವಿಷಮ ಚತುಷ್ಕೋನ ಪೀಠ



ಅಷ್ಟಕೋಣಪೀಠ





ದೀರ್ಘಾಷ್ಟಕೋಣ ಪೀಠ



ಷಟ್‌ಕೋಣ ಪೀಠ



ದೀರ್ಘಷಟ್‌ಕೋಣ ಪೀಠ



ಸಮದ್ವಾದಶಕೋನ ಪೀಠ

## ವಾಹನಗಳು




ಸ್ರುವವೆಂಬ ಪೂಜೋಪಕರಣ (ಚಮಚ)



## ಆಭರಣ ಅಲಂಕರಣ



ಮಕರ ಕುಂಡಲವೆಂಬ ಕರ್ಣಾಲಂಕಾರ



ರಾಜರ ಪಾರ್ಷ್ಣಿಕರು (ಸೇನಾಪತಿಗಳು) ಧರಿಸುವ ಶಿರಸ್ತ್ರಕವೆಂಬ ಶಿರಸ್ತ್ರಾಣ



ಪ್ರಭಾಮಂಡಲವನ್ನು ಯಾ ಪ್ರಭಾವಳಿಯನ್ನು ಹೋಲುವ ಶಿರಶ್ಚಕ್ರವೆಂಬ ಶಿರಸ್ತ್ರಾಣ.



ಲಕ್ಷ್ಮಿ ಯಾ ಚಕ್ರವರ್ತಿನಿಯರು ಯಾ ಅಧಿರಾಜಪತ್ನಿಯರು ಮತ್ತು ನರೇಂದ್ರರು ಧರಿಸುವ ಕುಂತಲಾಕೃತಿಯ ಶಿರಸ್ತ್ರಾಣ

## ಆಯುಧಗಳು

ತುದಿಯಲ್ಲಿ ಸಪುರವಾಗುತ್ತಾ ಹೋಗುವ ಮತ್ತು ಬುಡದಲ್ಲಿ ಉಬ್ಬುಳ್ಳ ಗಧೆ





ಗದೆ



ಅಲಂಕೃತ ಗದೆ



ಖಡ್ಗ (ನಮೂನೆ–೧)



ವರ್ತುಲ ಫಲಕ ಯಾ ಢಾಲು, ಗುರಾಣಿ



ಖಡ್ಗ (ನಮೂನೆ–೨)



ಹಿಂಬದಿಯ ಮನುಷ್ಯ ಚಿತ್ರದ ಚತುಷ್ಕೋಣ ಫಲಕ



ಗುಟ್ಟಕ್ಕೆ ಸುತ್ತಿಕೊಳ್ಳುವ ಯಾ ನೆಲಕ್ಕೆ ಅಂಟಿಕೊಳ್ಳುವ ಅಗಲವೂ ಹರಿತವೂ ಆದ ರತ್ನ ಖಚಿತ ಲೋಹಾಂಗುಲೀಯ; ಅದಕ್ಕೆ ಸುತ್ತಿಕೊಂಡ ರತ್ನಖಚಿತ ಪಟ್ಟಿಯಿಂದ ಹಿಡಿದುಕೊಳ್ಳುವುದು

## ಹಸ್ತಮುದ್ರೆಗಳು



# ವಾದ್ಯದ ಬಗೆಗಳು



ಮುರಲಿ, ವೇಣು ಯಾ ಕೊಳಲು ಎಂಬ ಊದುವ ವಾದ್ಯ ಇದು ಬಿದಿರುಗೊಳವೆ; ಇದಕ್ಕೆ ಆರು ಅಥವಾ ಒಂಭತ್ತು ಕಣ್ಣುಗಳು (ತೂತುಗಳು) ಮೈ ಮೇಲೆ ಇರುತ್ತವೆ. ಸರಿಗಮಪದನಿಸಾದಿ ಸ್ವರಗಳೀ ತೂತುಗಳಿಂದ ಹೊರಡುವಂತೆ ಬೆರಳುಗಳಿಂದ ಇದನ್ನು ನುಡಿಸುತ್ತಾರೆ.



ಕೈಯಲ್ಲಿ ಹಿಡಿವ ಸಾದಾ ಶಂಖ



ಇನ್ನೊಂದು ವಿಧದ ಅಲಂಕೃತ ಶಂಖ



ಢಕ್ಕೆ (ಬುಡುಬುಡಿಕೆ)



ಡಮರು



ಮುತ್ತುಗಳಿಂದ ಅಲಂಕೃತವಾದ ಇಬ್ಬದಿಗಳಲ್ಲಿ ನೇಲುತ್ತಿರುವ ಇಳಿವಸ್ತ್ರಗಳನ್ನುಳ್ಳಶಂಖ



ವೀಣೆ–೧



ವೀಣೆ–೨

# ಪ್ರಮಾಣ ಗ್ರಂಥಾವಲಿ


1. ಕಾಮಿಕಾದ್ಯಾಗಮಗಳು – ೧೧
2. ಅಗ್ನಿಪುರಾಣ
3. ವಿಷ್ಣುಧರ್ಮೋತ್ತರ ಪುರಾಣ
4. ಮಾನಸಾರ ಶಿಲ್ಪ
5. ಭರತನಾಟ್ಯ ಶಾಸ್ತ್ರ
6. Indian Sulpture - by Stella Kramser
7. South Indian Iconography - by Gopinatha Rao
8. The Art Heritage of India - by E.B.Havell
9. ಮಯಮತ
10. ಆದಿತ್ಯ ಪುರಾಣ
11. ವಿಷ್ಣುಪುರಾಣ
12. ಪಾಂಚರಾತ್ರಾಗಮ
13. ಬೃಹತ್‌ಸಂಹಿತೆ
14. ಲಲಿತೋಪಾಖ್ಯಾನ
15. ಶಿವತತ್ವರತ್ನಾಕರ
16. ಮಲ್ಲಾರಿ ಮಹಾತ್ಮ್ಯ
17. ಬಟುಕ ಭೈರವ ಕಲ್ಪ
18. ರೂಪಮಂಡನ
19. ಶ್ರೀತತ್ವನಿಧಿ
20. ಸಕಲಾಗಮಸಾರ ಸಂಗ್ರಹ
21. ಶಿಲ್ಪರತ್ನ
22. ಸಿದ್ಧಾಂತ ಸಾರಾವಳಿ
23. ಬೃಹಸ್ಪತಿ ಶಿಲ್ಪಶಾಸ್ತ್ರ
24. ವಿಶ್ವಕರ್ಮಶಿಲ್ಪ
25. ಮತ್ಸ್ಯ ಪುರಾಣ

# ಪ್ರೊ.ಬಿ.ಎಚ್.ಶ್ರೀಧರ : ಜೀವನದ ಮುಖ್ಯ ಘಟನೆಗಳು

| | | |
|---|---|---|
| ಜನನ | : | ೨೪ ಏಪ್ರಿಲ್ ೧೯೧೮ |
| | | ಬಿಜೂರು ಗ್ರಾಮ (ಅವಿಭಜಿತ ದಕ್ಷಿಣ ಕನ್ನಡ)ದ ಬವಲಾಡಿಯಲ್ಲಿ |
| ತಂದೆ | : | ಸೀತಾರಾಮ ಹೆಬ್ಬಾರ |
| ತಾಯಿ | : | ನಾಗಮ್ಮ |
| ತಂಗಿಯರು | : | ರುಕ್ಮಿಣಿ, ಸುಶೀಲ, ರಮ |
| ಶಿಕ್ಷಣ | | |
| ಪ್ರಾಥಮಿಕ: | | ಬಿಜೂರಿನ ಪ್ರಾಥಮಿಕ ಶಾಲೆಯಲ್ಲಿ |
| ಮಾಧ್ಯಮಿಕ | : | ಮಿಡಲ್ ಸ್ಕೂಲ್, ಸೊರಬ (೩ ವರ್ಷ) ಮಿಡಲ್ ಸ್ಕೂಲ್, ಸಾಗರ (೧ ವರ್ಷ) |
| ಪ್ರೌಢ | : | ಮುನಿಸಿಪಲ್ ಹೈಸ್ಕೂಲ್, ಸಾಗರ, ಎಸ್.ಎಸ್.ಎಲ್.ಸಿ. ಶಿವಮೊಗ್ಗ ಕೇಂದ್ರದಲ್ಲಿ |
| ಇಂಟರ್ ಮಿಡಿಯಟ್: | | ಮೈಸೂರಿನ ಯುವರಾಜ ಕಾಲೇಜಿನಲ್ಲಿ |
| ಬಿ.ಎ. (ಆನರ್ಸ್) | : | ಮೈಸೂರಿನ ಮಹಾರಾಜ ಕಾಲೇಜಿನಲ್ಲಿ (೧೯೪೧)ರಲ್ಲಿ ರಾಜ್ಯಕ್ಕೆ ಮೊದಲಿಗನಾಗಿ ಉತ್ತೀರ್ಣ ಪೂರ್ಣ ಕೃಷ್ಣರಾವ್ ಬಂಗಾರದ ಪದಕ ನವೀನಂ ರಾಮಾನುಜಾಚಾರ್ಯ ಬಂಗಾರದ ಪದಕ 'ಕವಿಯೂ ವಿಜ್ಞಾನಿಯೂ' ಪ್ರಬಂಧಕ್ಕೆ ಹೊನ್ನಸೆಟ್ಟಿ ಬಹುಮಾನ |
| ಎಂ.ಎ. ಆನರ್ಸ್ | : | ಮಹಾರಾಜ ಕಾಲೇಜು, ಮೈಸೂರು. |
| ವಿವಾಹ | : | ಮೇ (೧೯೪೬) ರಮಾದೇವಿಯವರೊಡನೆ |

ಮಕ್ಕಳು : ಸುಮಾ, ಪ್ರತಿಭಾ, ವಿಜಯಾ, ರಾಜಶೇಖರ, ರಾಜೇಶ್ವರಿ

ವೃತ್ತಿ : ಪುಣೆಯ ಫೀಲ್ಡ ಕಂಟ್ರೋಲರ್ ಆಫ್ ಮಿಲಿಟರಿ ಎಕೌಂಟ್ಸ್ ಆಫೀಸಿನಲ್ಲಿ ಒಂದು ವರ್ಷ 'ಗುಮಾಸ್ತಗಿರಿ' (೧೯೪೨)

* ಭಟ್ಕಳದ ಇಸ್ಲಾಮಿಯ ಆಂಗ್ಲೋ ಉರ್ದು ಹೈಸ್ಕೂಲಿನಲ್ಲಿ ಸಹ ಶಿಕ್ಷಕರಾಗಿ ೪ ವರ್ಷ ಹಾಗೂ ಹೆಡ್ ಮಾಸ್ಟರ್ ಆಗಿ ಒಂದು ವರ್ಷ

* 'ಕರ್ಮವೀರ' ವಾರಪತ್ರಿಕೆ (ಹುಬ್ಬಳ್ಳಿ)ಯು ಉಪಸಂಪಾದಕರಾಗಿ (೧೯೪೭–೫೧)

* ಕುಮಟದ ಕೆನರಾ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕ (೧೯೫೧–೬೨)ರಾಗಿ

* ಶಿರಸಿಯು ಎಂ.ಎಂ. ಕಲಾ–ವಿಜ್ಞಾನ ಮಹಾವಿದ್ಯಾಲಯದಲ್ಲಿ ಉಪ ಪ್ರಾಚಾರ್ಯರಾಗಿ (೧೯೬೨–೬೯) ಸಂಸ್ಕೃತ ಮತ್ತು ಕನ್ನಡ ಪ್ರಾಧ್ಯಾಪಕರಾಗಿ.

* ಸಿದ್ಧಾಪುರದ ಎಂ.ಜಿ.ಸಿ. ಕಾಲೇಜಿನಲ್ಲಿ ಪ್ರಾಚಾರ್ಯರಾಗಿ (೧೯೬೯–೭೬)

* ಶಿರಸಿಯ ಮಾಡರ್ನ್ ಎಜ್ಯುಕೇಷನ್ ಸೊಸೈಟಿಯ ಆನರರಿ ಮೆನೇಜರ್‌ಗಾಗಿ ೧೫–೬–೧೯೮೨ ರವರೆಗೆ

ನಿಧನ : ಏಪ್ರಿಲ್ ೨೪, ೧೯೯೦

ಪ್ರಕಟಣೆಗಳು : ೧೯ನೇಯ ವಯಸ್ಸಿನಲ್ಲಿ ಇಂಟರ್ ಮೀಡಿಯಟ್ ಓದುತ್ತಿದ್ದಾಗ ಬೆಂಗಳೂರಿನ 'ಸುಬೋಧ' ರಾಮರಾಯರ ಕರೆಯ ಮೇರೆಗೆ ಬರೆದು ಪ್ರಕಟಿಸಿದ ಚಂಪಕಮಾಲಾ ವೃತ್ತದಲ್ಲಿದ್ದ ಕವನ ಮೊದಲ ಪ್ರಕಟಣೆ. ೧೯೯೦ರಲ್ಲಿ ಕೈಗಾ ಅಣು ವಿದ್ಯುತ್ ಸ್ಥಾವರ ಕುರಿತು 'ನಾಗರಿಕ' ಪತ್ರಿಕೆಯಲ್ಲಿ ಕೊನೆಯ ಲೇಖನ. ಈ ಮಧ್ಯದಲ್ಲಿ ೫೦ಕ್ಕೂ ಹೆಚ್ಚು ಪುಸ್ತಕಗಳು, ನೂರಾರು ಲೇಖನಗಳು ಪ್ರಕಟವಾದವು.

**ಪ್ರಶಸ್ತಿ/ಗೌರವಗಳು**

ಕಾವ್ಯಸೂತ್ರ : ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ

ತೀ.ನಂ.ಶ್ರೀ ಸ್ಮಾರಕ ಬಹುಮಾನ

ಮೈಸೂರು ವಿ.ವಿ. ಸುವರ್ಣ ಮಹೋತ್ಸವ ಬಹುಮಾನ

ರಾಷ್ಟ್ರಸೂತ್ರ : ರಾಜ್ಯ ಸರಕಾರ ಅನುದಾನ

ಮೂರು ಸಾವಿರ ಮಠ, ಹುಬ್ಬಳ್ಳಿ, ಬಹುಮಾನ

ಜ್ಞಾನಸೂತ್ರ : ಹುಬ್ಬಳ್ಳಿಯ ಲೋಕ ಶಿಕ್ಷಣ ಟ್ರಸ್ಟ್ ಬಹುಮಾನ

ಮಾನಸ ದರ್ಪಣ : ಮದ್ರಾಸ್ ಕ್ರಿಶ್ಚಿಯನ್ ಟೆಕ್ಸ್ಟ್‌ಬುಕ್ ಕಮಿಟಿ ಬಹುಮಾನ

ನೌಕಾಗೀತ : ಕೇಂದ್ರ ಸರಕಾರದ ಸಂರಕ್ಷಣಾ ಶಾಖೆ ಬಹುಮಾನ

ರಸಯಜ್ಞ : ದೇವರಾಜ ಬಹಾದೂರ ಬಹುಮಾನ

ಮನುಸ್ಮೃತಿ (ರಾಜಧರ್ಮ) : ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಪದವಿ ತರಗತಿ ಪಠ್ಯಪುಸ್ತಕ

೫೫ನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಪತ್ರಿಕಾ ಗೋಷ್ಠಿ ಅಧ್ಯಕ್ಷ ಉ.ಕ. ಜಿಲ್ಲಾ ಮೂರನೆಯ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ (೧೯೭೪)

ಕುಂದಾಪುರದಲ್ಲಿ 'ಜೇಸೀ' ಸನ್ಮಾನ (೧೯೮೦)

ಶಿರಸಿಯ ರೋಟರಿ ಕ್ಲಬ್ ಸನ್ಮಾನ (೧೯೮೭)

ಶಿರಸಿಯ 'ರಂಗ ಸಂಗ' ಕಲಾರಂಗದವರಿಂದ ಪೌರ ಸನ್ಮಾನ (೧೯೮೭)

ಯುಗ ಪುರುಷದ ಬಳಗದಿಂದ ಕಿನ್ನಗೋಳಿಯಲ್ಲಿ ಸನ್ಮಾನ (೧೯೮೮)

# ಬಿ.ಎಚ್.ಶ್ರೀಧರ ಕೃತಿ ಸೂಚಿ

**೧. ಕಾವ್ಯ**

ಮೇಘನಾದ ಸಾಹಿತ್ಯ ಮಂದಿರ, ಮೈಸೂರು ೧೯೪೫
ಕಿನ್ನರಗೀತ ಕಥಾಂಜಲಿ ಗ್ರಂಥಮಾಲೆ, ಬೆಂಗಳೂರು
೧೯೪೭
ಅಮೃತಬಿಂದು ಸಂಯುಕ್ತ ಕರ್ನಾಟಕ ಕಾರ್ಯಾಲಯ, ಹುಬ್ಬಳ್ಳಿ ೧೯೪೯
ಮಂಜುಗೀತ ಲೇಖಕರು, ಕುಮಟ ೧೯೫೮
ರಸಯಜ್ಞ ವಿದ್ಯಾರಣ್ಯ ಪ್ರಕಾಶನ ಸಂಸ್ಥೆ, ಶಿರಸಿ ೧೯೬೪
ಮುತ್ತುರತ್ನ ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೬೮
(ಮ.ಮು. ೧೯೮೭)
ನೌಕಾಗೀತ ಅಪ್ರಕಟಿತ (ಖಾಸಗಿ ಪ್ರಸಾರದಲ್ಲಿ) ೧೯೬೮
ಕದಂಬ ವೈಭವ ಪ್ರಬುದ್ಧ ಕರ್ನಾಟಕದಲ್ಲಿ ೧೯೭೦;
ಸಾಹಿತ್ಯ ಮಂದಿರ ಶಿರಸಿ ೧೯೮೭
ಕಂಟಕಾರಿ ಮಹಾಕಾವ್ಯಂ ದೀನಬಂಧು ಪ್ರಜಾಶನ, ಹೊನ್ನಾವರ ೧೯೮೧
ಜಾತವೇದ ಪಿ.ಎ.ಎನ್. ಪಬ್ಲಿಷರ್ಸ್, ಬೆಂಗಳೂರು ೧೯೮೪
ಅಮೃತಬಿಂದು
(ಶ್ರೀಧರ ಕಾವ್ಯ ವಾಚಿಕೆ) ಸಾಹಿತ್ಯ ಪರಿಷತ್ತು ಬೆಂಗಳೂರು ೨೦೦೭

**೨. ಯಕ್ಷಗಾನ**

ಯಕ್ಷಗಾನ ಪಂಚರಾತ್ರ ವಾರ್ಧಿಕ್ಯ, ಶಿರಸಿಯ 'ಧ್ಯೇಯನಿಷ್ಠ ಪತ್ರಕರ್ತ' ದಿನಪತ್ರಿಕೆಯಲ್ಲಿ ೫–೧೨–೧೯೯೩ ರಿಂದ ೮–೫–೧೯೯೪ರ ವರೆಗೆ ಪ್ರತಿ ಭಾನುವಾರ

**೩. ನಾಟಕ**

ಮಯೂರ ಶರ್ಮ, ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ ೧೯೮೮
ಸೋಮಾರಿಗಳ ಕ್ಲಬ್ (ಅಪ್ರಕಟಿತ) ೧೯೮೭

**೪. ಆತ್ಮಕಥೆ**

ಜೀವಯಾನ, ಬಿ.ಎಚ್.ಶ್ರೀ. ಸಾಹಿತ್ಯ ಪ್ರಶಸ್ತಿ ಸಮಿತಿ, ಶಿರಸಿ ೧೯೯೪

**೫. ವಿನೋದ–ವಿಡಂಬನೆ**

| | | |
|---|---|---|
| ಬೇತಾಳಗಳ ಕುಣಿತ | ಸರ್ವೋದಯ ಸಾಹಿತ್ಯ ಮಾಲೆ, ಹುಬ್ಬಳ್ಳಿ | ೧೯೫೧ |
| ಭಾಷಣಗಳ ಭೈರವರ ಒಡ್ಡೋಲಗ | ಎ.ಎಂ.ಜಿ. ಸಾಹಿತ್ಯ ಪ್ರಕಾಶನ, ಉಡುಪಿ | ೧೯೬೬ |

**೬. ವಿಮರ್ಶೆ**

| | | |
|---|---|---|
| ಬೇಂದ್ರೆ | ಎಂ.ಜಿ.ಎಂ. ಕಾಲೇಜು ಉಡುಪಿ | ೧೯೫೬ |
| ಹೊಸಗನ್ನಡ ಸಾಹಿತ್ಯ ಶೈಲಿ | ಪ್ರತಿಭಾ ಗ್ರಂಥಮಾಲೆ, ಧಾರವಾಡ | ೧೯೫೬ |
| ಕವೀಂದ್ರ ರವೀಂದ್ರ | ಶಶಿ ಪ್ರಕಾಶನ, ಬೆಂಗಳೂರು | ೧೯೫೯ |
| ಕಾವ್ಯಸೂತ್ರ | ವಿದ್ಯಾರಣ್ಯ ಗ್ರಂಥ ಪ್ರಕಾಶನ, ಶಿರಸಿ | ೧೯೬೮ |
| ಪ್ರತಿಭೆ | ರವೀಂದ್ರ ಪ್ರಕಾಶನ, ಕಾರ್ಗಲ್ | ೧೯೭೮ |
| ಸಂಸ್ಕೃತಗಳ ಕನ್ನಡಗಳ ಬಾಂಧವ್ಯ | ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ ಮಂಗಳೂರು | ೧೯೮೧ |
| ಪಸರಿಪ ಕನ್ನಡಕ್ಕೊಡೆಯನೀಗ ದರಾಂಕಿತ ಬೇಂದ್ರೆ | ಶ್ರೀಮಾತಾ ಪ್ರಕಾಶನ ಧಾರವಾಡ | |
| ಜನ್ನ (ಸಂ.ವಿ.ಸಿ) | ಐ.ಬಿ.ಎಚ್.ಪ್ರಕಾಶನ ಬೆಂಗಳೂರು | ೧೯೭೫ |

**೭. ವೈಚಾರಿಕ**

| | | |
|---|---|---|
| ಭಾರತೀಯ ನಾಗರಿಕತೆಗೆ | ಪ್ರಸಾರಾಂಗ | ೧೯೫೯ |
| ಮನುವಿನ ಕೊಡುಗೆ | ಕ.ವಿ.ವಿ. ಧಾರವಾಡ (ಮರುಮುದ್ರಣ) | ೧೯೭೧ |
| ಪಂಚಮುಖಿ | ಅಂತರಂಗ ಕಾರ್ಯಾಲಯ, ಉಡುಪಿ | ೧೯೫೫ |
| ವಿದೇಶದ ತಿಳಿವಳಿಕೆಗಳು | ರಾಮಕೃಷ್ಣ ಪ್ರಿಂಟಿಂಗ್ ವರ್ಕ್ಸ್, ಕುಮಟ | ೧೯೫೯ |
| ಜ್ಞಾನಸೂತ್ರ | ವಿದ್ಯಾರಣ್ಯ ಗ್ರಂಥ ಪ್ರಕಾಶನ, ಶಿರಸಿ | ೧೯೬೯ |
| ಮಾನಸದರ್ಪಣ (ಹನುಮಂತರಾವ್ ಅವರೊಂದಿಗೆ) | ಸಮಾಜ ಪುಸ್ತಕಾಲಯ, ಧಾರವಾಡ | ೧೯೭೩ |
| ರಾಷ್ಟ್ರಸೂತ್ರ | ವಿಶ್ವ ಪ್ರಕಾಶನ, ಹುಬ್ಬಳ್ಳಿ | ೧೯೭೪ |
| ವಿಚಾರ ವಿಜಯ | ರವೀಂದ್ರ ಪುಸ್ತಕಾಲಯ, ಕಾರ್ಗಲ್ | ೧೯೮೧ |
| ಭಾರತೀಯ ಮೂರ್ತಿಶಿಲ್ಪ | ಬಂಡಾಯ ಪ್ರಕಾಶನ, ಅರೆಅಂಗಡಿ | ೨೦೦೯ |

**೮. ಇತಿಹಾಸ**

ಬನವಾಸಿಯ ಕದಂಬರು ಶತಮಾನೋತ್ಸವ ಸಮಿತಿ, ಬನವಾಸಿ ೧೯೬೬
(ಎಲ್.ಟಿ. ಶರ್ಮಾರೊಂದಿಗೆ)
ಬನವಾಸಿಯ ಇತಿಹಾಸ ಸಾಹಿತ್ಯ ಮಂದಿರ, ಶಿರಸಿ ೨೦೦೪

**೯. ಇತರೆ**

ಮಯೂರ ಶರ್ಮ ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ೧೯೭೧
(ಮರುಮುದ್ರಣ ೧೯೭೧)
ಕೌಶಿಕ ರಾಮಾಯಣ ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ೧೯೭೨
ರಮಣ ಮಹರ್ಷಿ ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೬೯
ಉತ್ತರ ಕನ್ನಡ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು (ಉಪಲಬ್ಧವಿಲ್ಲ)
ಬನವಾಸಿಯ ಕೈಪಿಡಿ ೧೯೭೧
ಸಾಹಿತ್ಯ ಚಿಂತನ (ಮಂಜುವಾಣಿಯಲ್ಲಿ ಧಾರಾವಾಹಿಯಾಗಿ)
ಶಿವಪುರಾಣ (ಮಂಜುವಾಣಿಯಲ್ಲಿ ಧಾರವಾಹಿಯಾಗಿ)
ವೇದರಹಸ್ಯಸಾರ ರಾಜಶೇಖರ ಹೆಬ್ಬಾರ, ಶಿರಸಿ ೨೦೦೩

**೧೦. ಅನುವಾದ**

(ಇಂಗ್ಲಿಷಿನಿಂದ)
ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ
(ಆರವಿಂದರ The Foundations of Indian Culture (ಭಾಗ–೧) ಅನುವಾದ)
ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೫೫
ಭಾರತೀಯ ವಾಙ್ಮಯ
(ಅರವಿಂದರ The Foundations of Indian Culture (ಭಾಗ–೨) ಅನುವಾದ)
ಎನ್.ಆರ್.ರಾವ್‌ರೊಂದಿಗೆ ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೫೭
ಟಿ.ಎಸ್.ಈಲಿಯಟ್ (ಎ.ಸಿ.ಬ್ರ್ಯಾಡ್ ಬ್ರೂಕ್‌ರ T.S.Eliot ಅನುವಾದ)
ಎಂ.ಜಿ.ಎಂ. ಕಾಲೇಜು ಉಡುಪಿ. ೧೯೫೭
ಸ್ವಾತಂತ್ರ್ಯ ಮೀಮಾಂಸೆ
(ಜೆ.ಎಸ್. ಮಿಲ್ಲರರ On Liberty ಅನುವಾದ ಎನ್.ಆರ್. ರಾವ್‌ರೊಂದಿಗೆ)
ಕುಮಟ ೧೯೬೧
ಮಾತೃಶ್ರೀ (ಪಶುಪತಿಯವರ On the Mother Divine ಅನುವಾದ)
ಶ್ರೀ ಅರವಿಂದೋ ಸೊಸೈಟಿ, ಶಿವಮೊಗ್ಗ ೧೯೭೫

ವೇದರಹಸ್ಯ (ಅರವಿಂದ The Secret of the Veda ಅನುವಾದ) (ಅಪ್ರಕಟಿತ)
ನೆಹರೂ ಉವಾಚ (ಉಪಲಬ್ಧವಿಲ್ಲ)
ರಮಣ ಮಾರ್ಗ ಭಾಗ ೧ ಮತ್ತು ಭಾಗ –೨
(ಓಂ ಸಾಧು ಅವರ The Path of Ramana Part-1 & Part 2 ಅನುವಾದ)
ಅಪ್ರಕಟಿತ

**ಅನುವಾದ (ಸಂಸ್ಕೃತ)**

ಕಾಳಿದಾನ ಕಾವ್ಯ ಸೌರಭ ರೋಟರಿ ಕ್ಲಬ್, ಕುಮಟ (ಉಪಲಬ್ಧವಿಲ್ಲ) ೧೯೬೨
ಕುಂದಮಾಲೆ (ನಾಟಕ) ಗೀತಾ ಬುಕ್ ಹೌಸ್, ಮೈಸೂರು ೧೯೬೭
ಸಂಸ್ಕೃತ ಸುಭಾಷಿತ ಸಂಗ್ರಹ ಪ್ರಸಾರಾಂಬ, ಕ.ವಿ.ವಿ. ಧಾರವಾಡ ೧೯೭೧
ರಾಜಧರ್ಮ ಪ್ರಸಾರಾಂಗ, ಕ.ವಿ.ವಿ. ಧಾರವಾಡ ೧೯೭೪
(ಮನುಸ್ಮೃತಿ ೭ನೇ ಅಧ್ಯಾಯದ ಅನುವಾದ – ಟಿಪ್ಪಣಿ, ಪೀಠಿಕ ಸಹಿತ ಬಿ.ಆರ್.ಮೋಡಕರೊಂದಿಗೆ)

**೧೧. ಸಂಪಾದಿತ**

ನವರತ್ನ (ಮಿಸಲೆನಿ) ಸುಲಭ ಸಾಹಿತ್ಯ ಪ್ರಕಾಶನ, ಕುಮಟ (ವರ್ಷ ನಮೂದಿಸಿಲ್ಲ)
ಬವವಾಡಿ ಹಿರಿಯಣ್ಣ ಹೆಬ್ಬಾರ್ ವಿರಚಿತ
ಭಾನುಮತಿ ಕಲ್ಯಾಣ (ಯಕ್ಷಗಾನ) ಕಾವ್ಯಾಲಯ ಪ್ರಕಾಶಕರು, ಮೈಸೂರು ೧೯೫೮
ರಸೋ ವೈ ಸಃ (ಹಿರಿಯಣ್ಣ ಹೆಬ್ಬಾರರ ಯಕ್ಷಗಾನ ಮತ್ತು ಭಕ್ತಿ ಸ್ತೋತ್ರಗಳು)
'ಸಾಹಿತ್ಯ ಮಂದಿರ' ಶಿರಸಿ ೧೯೮೭

## ಕೆಲವು ಲೇಖನಗಳು

**೧. ಅಭಿನಂದನ ಗ್ರಂಥಗಳಲ್ಲಿ**

| | | |
|---|---|---|
| ಸಂಸ್ಕೃತ ನಾಟಕ | ಅಭಿನಂದನೆ | ೧೯೫೬ |
| ಕನ್ನಡ ಸಾಹಿತ್ಯಕ್ಕೆ ಮುಗಳಿ | ರಸಿಕರಂಗ ದರ್ಶನ | ೧೯೬೬ ಕೊಡುಗೆ |
| ಸೌಂದರ್ಯ ಮೀಮಾಂಸೆ | ಉಪಾಯನ | ೧೯೬೭ |
| ಯಕ್ಷಗಾನ ಬಯಲಾಟ | ಕಾರಂತ ಪ್ರಪಂಚ | ೧೯೬೯ |

| | | |
|---|---|---|
| ಬೆಂಗಳೂರು ಭಾರ್ಗವ (ಅ.ನ.ಕೃ) | ರಸಚೇತನ | ೧೯೭೦ |
| ಗುರುಗಳಿಗೆ ನಮಸ್ಕಾರ | ಸಮರ್ಪಣೆ | ೧೯೭೦ |
| ಕುವೆಂಪು ಗದ್ಯ | ಸಹ್ಯಾದ್ರಿ | ೧೯೭೪ |
| ಯಕ್ಷಗಾನದ ಸಾಂಸ್ಕೃತಿಕ ಕೊಡುಗೆ | ರಸ ಋಷಿ | ೧೯೭೪ |
| ಬೇಂದ್ರೆ ಕಾವ್ಯ ಸ್ತೋತ್ರ | ಇಳಿದು ಬಾ ತಾಯಿ | ೧೯೭೭ |
| ಕಾವ್ಯಾನುಶಾಸನ | ಬ್ರಹ್ಮಗಿರಿ | ೧೯೭೭ |
| ಅಭಿಜಾತ ಕೃತಿ–ನಲ್ಮೆ | ವಾಙ್ಮಯ ತಪಸ್ವಿ | ೧೯೭೭ |
| ಜ್ಞಾನದ ಪೂರ್ಣಕುಂಭ | ನಮನ | ೧೯೭೮ |
| ಮಿತ್ರಾಭಿನಂದನ | ಪ್ರವೃತ್ತ | ೧೯೭೬ |
| ಆಧುನಿಕ ಸಾಹಿತ್ಯ ಸಮೀಕ್ಷೆ | ಬೆಳ್ವೊಲ | ೧೯೮೧ |

ಇತ್ಯಾದಿ

**೨. ಸಂಸ್ಮರಣ ಸಂಚಿಕೆಗಳಲ್ಲಿ**

| | | |
|---|---|---|
| ಹೈವನಾಡಿನ ಚರಿತ್ರೆ | ಉ.ಕ.ದರ್ಶನ, ಕ.ಸಾ.ಪ. ಬೆಂಗಳೂರು | ೧೯೮೬ |
| ಬನವಾಸಿಯ ಚಕ್ರವರ್ತನ | ಪಡುವಣ (೪೫ನೇಯ ಕನ್ನಡ ಸಾಹಿತ್ಯ ಸಮ್ಮೇಳನ) | |
| ಶಿರಸಿಯ ಚಾರಿತ್ರಿಕ ಹಿನ್ನೆಲೆ | ಶಿರಸಿ ನಗರಸಭಾ ಸಂಚಿಕೆ | ೧೯೬೬ |
| ಹೊನ್ನಾವರ ಚರಿತ್ರೆ | ಹೊನ್ನಾವರ ಭೂ ಅಭಿವೃದ್ಧ ಬ್ಯಾಂಕ್ | ೧೯೭೭ |
| ಸಿದ್ದಾಪುರದ ಚಾರಿತ್ರಿಕ ಹಿನ್ನೆಲೆ | ಅರ್ಬನ್ ಬ್ಯಾಂಕ್, ಸಿದ್ದಾಪುರ | ೧೯೭೯ |
| ಭಾರತದ ಗ್ರಂಥಾಲಯಗಳ ಇತಿಹಾಸ | ಶಿರಸಿ ಪಂಡಿತ್ ಲೈಬ್ರರಿ | ೧೯೭೦ |
| ಕೌಶಿಕ ರಾಮಾಯಣ | ಕದಂಬ (ಸಾಹಿತ್ಯ ಸಮ್ಮೇಳನಾಂಕ) | ೧೯೮೨ |
| ವಿದ್ವತ್ಕವಿ ಪಾಂಡೇಶ್ವರರು | ತಾಂಬೂಲ (ಉ.ಕ.ಸಾಹಿತ್ಯ ಸಮ್ಮೇಳನಾಂಕ) | ೧೯೮೧ |
| ಕನ್ನಡ ಸಾಹಿತ್ಯ ನಡೆದು ಬಂದ ದಾರಿ | ಮೈಸೂರು ದಸರಾ ದರ್ಶಿನಿ | ೧೯೬೪ |

ಇತ್ಯಾದಿ

**೩. ಪತ್ರಿಕೆಗಳು**

| | | |
|---|---|---|
| ಇಂದಿನ ಕನ್ನಡ ಪ್ರಬಂಧಗಳು | ಕನ್ನಡ ಸಾಹಿತ್ಯ ಪರಿಷತ್ಪತ್ರಿಕ | ೪೬ / ೧ |

| | |
|---|---|
| ಔಚಿತ್ಯ | ಜೂನ್ ೧೯೬೭<br>ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ<br>೪೨/೧ ಜೂನ್ ೧೯೪೭ |
| ಕುಂದಗನ್ನಡ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ<br>೪೧, ೪೨, ೪೩ ಜೂನ್ ೧೯೪೬/೫೮ |
| ಹೊಸಗನ್ನಡ ಛಂದೋವಿಕಾಸ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ<br>೪/೧–೨ ಜೂನ್ –ಡಿಸೆಂ. |
| ಕನ್ನಡತ್ರಯ ವಿಭಾಗಯೋಗ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ<br>೬೨/೧ ಜೂನ್ – ಡಿಸೆಂ. ೧೯೭೭ |
| ವಿಮರ್ಶೆ | ಸಾಧನ, ಸಂಪುಟ ೧, ಸಂಚಿಕೆ ೩೧ |
| ಸ್ವಾತಂತ್ರ್ಯ ಮತ್ತು ಭ್ರಮೆ | ಜೀವನ<br>ಜುಲೈ ೧೯೬೮ |
| ರಂಗ ಬಿನ್ನಪ | ಪ್ರಬುದ್ಧ ಕರ್ನಾಟಕ ಚಿನ್ನದ ಸಂಚಿಕೆ<br>೧೯೬೯ |
| ಸಾಹಿತ್ಯ ಚಿಂತನ–ಲೇಖನ ಸರಣಿ | ಮಂಜುವಾಣಿ<br>೧೯೮೧ ರಿಂದ ೧೯೮೩ |
| ಶಿವ ಪುರಾಣ–ಲೇಖನ ಸರಣಿ | ಮಂಜುವಾಣಿ<br>೧೯೮೪ ರಿಂದ ೧೯೮೬ |
| ಜನಜೀವನ ಹಾಗೂ ಜಾನಪದ ಕಲೆಗಳು | ಕಾನಡಾವೃತ್ತ<br>೧೦೮೨ |
| ಯಕ್ಷಗಾನ : ಉಗಮ ಮತ್ತು ಇತಿಹಾಸ | ಸಂಯುಕ್ತ ಕರ್ನಾಟಕ<br>೨೪–೬–೧೯೮೪ |
| ಸಾಹಿತ್ಯ ಮತ್ತು ಮಹಾಕಲ್ಪನೆ | ಜನತಾ<br>೧೨–೮–೧೯೬೩ |
| ಮಾನವ ಸಂಸ್ಕೃತಿ | ಜಯಕರ್ನಾಟಕ<br>ಜುಲೈ ೧೯೫೩ |
| ಕಾವ್ಯದಲ್ಲಿ ಪ್ರಾಸ ಏಕೆ ಬೇಕು? | ಕನ್ನಡ ನುಡಿ<br>೧–೪–೧೯೭೩ |
| ವಿಮರ್ಶಾ ಪರಿಭಾಷೆ | ತಾಯಿ ನುಡಿ ದೀಪಾವಳಿ ಸಂಚಿಕೆ |

* ಮುಂತಾದ ಸಾವಿರಾರು ಲೇಖನಗಳು

೪. ಇಂಗ್ಲಿಷ್ ಲೇಖನಗಳು

| | | |
|---|---|---|
| Manu's Theory of Kingship | JL of K.U.D. YV | 1971 |
| Experience and expression | XVII | 1973 |
| Classical and Modern Plays | The Mysore Orientalist | 1969 |
| Aesthetic Experience | Mysore Oriental Research Institute | 1972 |
| Indian History-A Challenge to some Fundamental Assumptions | JL of Mysore University | 1977 |
| The Hindu View of History | P.B.Desai Fel. Vol Dharwad | |
| etc. | | |

## ಶ್ರೀಧರರ ಕುರಿತು

**೧. ಕಿರುಹೊತ್ತಿಗೆ**

| | | |
|---|---|---|
| ರಾಜಶೇಖರ ಹೆಬ್ಬಾರ ಹಾಗೂ ಕಿರಣ ಭಟ್ಟ | ಪ್ರೊ.ಬಿ.ಎಚ್.ಶ್ರೀಧರ ಬಿ.ಎಚ್.ಶ್ರೀ ಸಾಹಿತ್ಯ ಪ್ರಶಸ್ತಿ ಸಮಿತಿ, ಶಿರಸಿ | ೧೯೯೨ |
| ರಾಜಶೇಖರ ಹೆಬ್ಬಾರ | ಪ್ರೊ.ಬಿ.ಎಚ್.ಶ್ರೀಧರ | ೨೦೦೭ |
| ರಾಜಶೇಖರ ಹೆಬ್ಬಾರ ಡಾ.ಶ್ರೀಪಾದ ಭಟ್ಟ | ಶ್ರೀಧರ ಪ್ರಶಸ್ತಿ | ೨೦೧೦ |

**೨. ಸಂದರ್ಶನ**

| | | |
|---|---|---|
| ಪಾ.ವೆಂ.ಆಚಾರ್ಯ | ಕಸ್ತೂರಿ | ಫೆಬ್ರವರಿ ೧೯೭೪ |
| ಭುವನೇಶ್ವರಿ ಹೆಗಡೆ | ತರಂಗ | ೧೯೮೭ |
| ಭಾಗೀರಥಿ ಹೆಗಡೆ | ಉಷಾವಾಣಿ | ೨೧–೮–೧೯೮೮ |
| ಮೋಹನ ಹೆಗಡೆ | ಸಂಯುಕ್ತ ಕರ್ನಾಟಕ | ೨೬–೪–೧೯೮೭ |
| ಮುಂತಾದವು | | |

**೩. ಸಾಹಿತ್ಯ ವಿಮರ್ಶೆ**

| | |
|---|---|
| ಎಚ್.ಆರ್.ಅಮರನಾಥ–ಪರಂಪರೆಯ ಕಾವಲುಗಾರ: ಬಿ.ಎಚ್.ಶ್ರೀಧರರ ಕಾವ್ಯ ಸಮೀಕ್ಷೆ ಸೃಜನವೇದಿ | ಏಪ್ರಿಲ್ ೧೯೮೭ |
| ಪ್ರೊ.ಬಿ.ಎಚ್.ಶ್ರೀಧರ–ರಾಜಶೇಖರ ಹೆಬ್ಬಾರ | ೨೦೦೭ |

**೪. ಗ್ರಂಥಾವಲೋಕನ**

| | | |
|---|---|---|
| ಮೇಘನಾದ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ–೩೧, ೨ | |
| ಮಂಜುಗೀತ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ–೪೩, ೨ | |
| ಜಾತವೇದ | ಪ್ರಜಾವಾಣಿ | ೫–೧–೧೯೮೬ |
| ಜಾತವೇದ | ನಾಗರಿಕ | ೧೯೮೫ |
| ಜಾತವೇದ | ಸಂಯುಕ್ತ ಕರ್ನಾಟಕ | ೫–೧–೧೯೮೬ |
| ಕಂಟಕಾರೀ ಕಾವ್ಯಂ | ಗ್ರಂಥಲೋಕ | ೧–೪–೧೯೮೨ |
| ಕವೀಂದ್ರ ರವೀಂದ್ರ | ಕರ್ನಾಟಕ ಭಾರತಿ | ೧೯೬೪ |
| ಕಾವ್ಯ ಸೂತ್ರ | ಸಂಯುಕ್ತ ಕರ್ನಾಟಕ | ೧೧–೧೦–೧೯೬೯ |
| ಬೇಂದ್ರೆ | ಶಿರಸಿ ಸಮಾಚಾರ | ೧–೭–೧೯೮೭ |
| ಪ್ರಜ್ಞಾವಾದ | ವನಶ್ರೀ ಉ.ಕ.ಜಿಲ್ಲಾ ಸಾಹಿತ್ಯ ಸಮ್ಮೇಳನ ಯಲ್ಲಾಪುರ | ೧೯೭೪ |
| ಭಾರತೀಯ ಮೂರ್ತಿಶಿಲ್ಪ | The Indian Express | ೧–೮–೧೯೮೮ |

**೫. ಬದುಕು–ಬರೆಹ ಪರಿಚಯದ ಲೇಖನಗಳು**

| | | |
|---|---|---|
| ಮೋಹನ ಹೆಗಡೆ | ಸಂಯುಕ್ತ ಕರ್ನಾಟಕ | ೨೬–೪–೧೯೮೭ |
| ರಾಜಶ್ರೀ ಹೆಗಡೆ | The Indian Express | ೧೧–೫–೧೯೮೭ |
| ಎಂ.ಎ.ಶರ್ಮ ತದ್ದಲಸೆ | ಪ್ರಜಾಮತ | ೨೪–೫–೧೯೮೭ |
| ಹಾ.ಮಾ.ನಾಯಕ | ಪ್ರಜಾವಾಣಿ | ೨೧–೫–೧೯೮೭ |
| ಹಾ.ಮಾ.ನಾಯಕ | ಪ್ರಜಾವಾಣಿ | ೨೦–೫–೧೯೯೦ |
| ಟಿ.ಎಂ.ಸುಬ್ಬರಾಯ | ಉದಯವಾಣಿ | ೬–೫–೧೯೯೦ |
| ಎಚ್ಚೆಸ್ಕೆ | ಸುಧಾ | ೨೪–೫–೧೯೮೭ |
| ಪಾ.ವೆಂ.ಆಚಾರ್ಯ | ಉದಯವಾಣಿ | ೬–೫–೧೯೯೦ |
| ಕಿರಣ ಭಟ್ ಹಾಗೂ ಅಮರನಾಥ | ಪ್ರಜಾವಾಣಿ | ೨೧–೬–೧೯೯೧ |
| ರಾಜೇಶ್ವರಿ ಹೆಬ್ಬಾರ | ಸಂಯುಕ್ತ ಕರ್ನಾಟಕ | ೨೦೦೯ |

* ಮುಂತಾದವು.

**೬. ಶ್ರೀಧರ ಸ್ಮರಣೆ** – ಸಂ. ಡಾ.ಎಂ.ಜಿ.ಹೆಗಡೆ ೧೯೯೯
(ಅಭಿನಂದನ ಗ್ರಂಥ)

**೭. ಶ್ರೀಧರರ ನೆನಪು**

ಶ್ರೀಧರರ ನೆನಪು ಚಿರಂತನವಾಗಿ ಉಳಿಯುವಂತೆ ಮಾಡಲು ಅವರ ಕುಟುಂಬದವರು ಶಿಷ್ಯರು ಹಾಗೂ ಅಭಿಮಾನಿಗಳ ಪರವಾಗಿ ಡಾ.ಟಿ.ನಾರಾಯಣ ಭಟ್, ಎಚ್.ಆರ್.ಅಮರನಾಥ, ಕಿರಣಭಟ್, ವಿಷ್ಣುಹೆಗಡೆ ಹಾಗೂ ರಾಜಶೇಖರ ಹೆಬ್ಬಾರ, ಜಗದೀಶ ಭಂಡಾರಿ, 'ಬಿ.ಎಚ್.ಶ್ರೀಧರ ಸಾಹಿತ್ಯ ಪ್ರಶಸ್ತಿ ಸಮಿತಿಯನ್ನು ರೂಪಿಸಿ ಪ್ರತಿ ವರ್ಷ ಕನ್ನಡದ ಉತ್ತಮ ಸಾಹಿತ್ಯ ಕೃತಿಗೆ ಬಹುಮಾನ ನೀಡುವ ವ್ಯವಸ್ಥೆ ಮಾಡಿದ್ದಾರೆ (೧೯೯೧ ರಿಂದ) –ಸಿ.ಎನ್.ಹೆಗಡೆ, ಸಿ.ಆರ್.ಶಾನಭಾಗ, ಯು.ಎ.ಐತಾಳ, ವಿಠಲ ಭಂಡಾರಿ, ಶ್ರೀಪಾದ ಭಟ್, ಯಶವಂತ ನಾಯಕ ಇವರು ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

# ಬಿ.ಎಚ್.ಶ್ರೀಧರ ಸಾಹಿತ್ಯ ಪ್ರಶಸ್ತಿ ಪುರಸ್ಕೃತರು

| ವರ್ಷ | ಪ್ರಶಸ್ತಿ | ಕೃತಿ | ಅಧ್ಯಕ್ಷತೆ |
|---|---|---|---|
| ೧೯೯೧ | ನಾ.ಮೊಗಸಾಲೆ | ಪ್ರಭವ (ಕಾವ್ಯ) | ಕೀರ್ತಿನಾಥ ಕುರ್ತಕೋಟಿ |
| ೧೯೯೨ | ಗಿರೀಶ ಕಾರ್ನಾಡ | ತಲೆದಂಡ (ನಾಟಕ) | 'ಎನ್ಕೆ' ಕುಲಕರ್ಣಿ |
| ೧೯೯೩ | ಪಿ.ಲಂಕೇಶ ಹಾಗೂ | ಅಕ್ಕ (ಕಾದಂಬರಿ) | |
| | ದು.ನಿಂ.ಬೆಳಗಲಿ | ದೇವದಾಸಿ (ಕಾದಂಬರಿ) | ಶಿವರಾಮ ಕಾರಂತ |
| ೧೯೯೪ | ಪುರುಷೋತ್ತಮ ಬಿಳಿಮಲೆ | ಶಿಷ್ಟ ಪರಿಶಿಷ್ಟ (ವಿಮರ್ಶೆ) | ಕೆ.ವಿ.ಸುಬ್ಬಣ್ಣ |
| ೧೯೯೫ | ಎಚ್.ಎಸ್.ವೆಂಕಟೇಶಮೂರ್ತಿ | ಎಷ್ಟೊಂದು ಮುಗಿಲು (ಕವನ) | ಪಾಟೀಲ ಪುಟ್ಟಪ್ಪ |
| ೧೯೯೬ | ಜಿ.ಎಸ್.ಆಮೂರ | ಕನ್ನಡ ಕಥನ ಸಾಹಿತ್ಯ ಕಾದಂಬರಿ ವಿಮರ್ಶೆ | ಪ್ರಸನ್ನ |
| ೧೯೯೭ | ಜಯಂತ ಕಾಯ್ಕಿಣಿ | ಅಮೃತಬಳ್ಳಿ ಕಷಾಯ (ಕಥಾಸಂಕಲನ) | ವೇಣುಗೋಪಾಲ |
| ೧೯೯೮ | ಸವಿತಾ ನಾಗಭೂಷಣ | ಸ್ತ್ರೀಲೋಕ (ಕಾದಂಬರಿ) | ಸಿ.ಎನ್.ರಾಮಚಂದ್ರನ್ |
| ೧೯೯೯ | ಕೆ.ವಿ.ನಾರಾಯಣ | ಬೇರು–ಕಾಂಡ–ಚಿಗುರು (ವಿಮರ್ಶೆ) | ವಿಷ್ಣುನಾಯ್ಕ |
| ೨೦೦೦ | ಪ್ರತಿಭಾ ನಂದಕುಮಾರ್ | ಕವಡೆ ಆಟ (ಕವನ) | ಗಿರಡ್ಡಿ ಗೋವಿಂದರಾಜ್ |
| ೨೦೦೧ | ಕೆ.ರಾಘವೇಂದ್ರರಾವ್ | Imagining the unimaginable communities | ಟಿ.ನಾ.ಭಟ್ |
| ೨೦೦೨ | ಮೊಗಳ್ಳಿ ಗಣೇಶ | ಭೂಮಿ (ಕಥಾ ಸಂಕಲನ) | ಬರಗೂರು ರಾಮಚಂದ್ರಪ್ಪ |
| ೨೦೦೩ | ಶಿವರಾಮ ಪಡಿಕ್ಕಲ್ | ನಾಡು ನುಡಿಯ ರೂಪಕ (ವಿಮರ್ಶೆ) | ಬಿ.ಎ.ಸನದಿ |
| ೨೦೦೪ | ಚಿಂತಾಮಣಿ ಕೊಡ್ಲೆಕೆರೆ | ತಲೆಮಾರಿನ ಕೊನೆಯ ಕೊಂಡಿ | ಜಯಂತ ಕಾಯ್ಕಿಣಿ |
| ೨೦೦೫ | ಎ.ಎನ್.ಪ್ರಸನ್ನ | ರಥಸಪ್ತಮಿ (ಕಥಾಸಂಕಲನ) | ಜಿ.ಎಸ್.ಆಮೂರ |
| ೨೦೦೬ | ಎಸ್.ದಿವಾಕರ | ನಾಪತ್ತೆಯಾದ ಗ್ರಾಮಾಫೋನ್ ಮತ್ತು ಇತರ ಪ್ರಬಂಧಗಳು (ವೈಚಾರಿಕ ಗದ್ಯ) | ಶಂಭು ಹೆಗಡೆ |
| ೨೦೦೭ | ಎಸ್.ಮಂಜುನಾಥ | ಕಲ್ಲ ಪಾರಿವಾಳಗಳ ಬೇಟ (ಕವನ) | ಚಿಂತಾಮಣಿ ಕೊಡ್ಲೆಕೆರೆ |
| ೨೦೦೮ | ಗಿರಡ್ಡಿ ಗೋವಿಂದರಾಜ್ | ಹಿಡಿಯದ ಹಾದಿ (ಪ್ರಬಂಧ) | ಕಿ.ರಂ.ರಾಮಚಂದ್ರನ್ |
| ೨೦೦೯ | ಅಶೋಕ ಹೆಗಡೆ | ವಾಸನೆ, ಶಬ್ದ, ಬಣ್ಣ ಇತ್ಯಾದಿ (ಕಥಾ ಸಂಕಲನ) | ಸಿ.ಎನ್.ರಾಮಚಂದ್ರನ್ |
| ೨೦೧೦ | ಪ್ರಸನ್ನ ಹೆಗ್ಗೋಡು | ಬಾಲಗೋಪಾಲ (ಕಾದಂಬರಿ) | ಲಕ್ಷ್ಮೀಶ ತೋಳ್ಪಾಡಿ |
| ೨೦೧೧ | ಆರ್.ಪಿ.ಹೆಗಡೆ | ಸಮಗ್ರ ಸಾಧನೆಗೆ | ಜಯಂತ ಕಾಯ್ಕಿಣಿ |
| ೨೦೧೨ | ವಿವೇಕ ಶಾನಭಾಗ | ವಿಶಿಷ್ಟ ಸಾಹಿತ್ಯ | ಗೋಪಾಲಕೃಷ್ಣ ಪೈ |

* ಡಾ.ಟಿ.ಪಿ.ಅಶೋಕ, ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಸುವರ್ಣ, ಗೌರೀಶ ಕಾಯ್ಕಿಣಿ, ಡಾ.ಆರ್.ಪಿ.ಹೆಗಡೆ, ಪ್ರೊ.ಜಿ.ಎಸ್.ಅವಧಾನಿ, ಡಾ.ಆರ್.ವಿ.ಭಂಡಾರಿ, ಡಾ.ಎಂ.ಜಿ.ಹೆಗಡೆ, ಪ್ರೊ.ಎಂ.ರಮೇಶ, ರಾಜಶೇಖರ ಹೆಬ್ಬಾರ, ಡಾ.ಶ್ರೀಪಾದ ಭಟ್ ಇವರೆಲ್ಲ ನಿರ್ಣಾಯಕರಾಗಿ ಕಾರ್ಯನಿರ್ವಹಿಸಿದ್ದಾರೆ.

## ಬಿ.ಎಚ್.ಶ್ರೀಧರ ಶಿಕ್ಷಣ ಪ್ರಶಸ್ತಿ ಪುರಸ್ಕೃತರು

(೧೯೯೫ ರಿಂದ ಕೃಷ್ಣ ಲೋಕರೆಯವರು ನೀಡಿದ ಮೂಲಧನದಿಂದ ಆರಂಭವಾದ ಈ ಪ್ರಶಸ್ತಿಗೆ ಸಿದ್ಧಾಪುರದ ಎಂ.ಜಿ.ಸಿ. ಕಾಲೇಜಿನ ಬಿ.ಎ. ಭಾಗ–೩ ರಲ್ಲಿ ಪ್ರಥಮರಾದ ವಿದ್ಯಾರ್ಥಿಗೆ ಪ್ರತಿವರ್ಷ ನೀಡಲಾಗುತ್ತಿದೆ.)

| | |
|---|---|
| ೨೦೦೫ | ವರದುರ್ಗಾ ಭಟ್ |
| ೨೦೦೬ | ಪ್ರಜ್ಞಾ ಭಟ್ |
| ೨೦೦೭ | ಪ್ರಜ್ಞಾ ಹೆಗಡೆ |
| ೨೦೦೮ | ಗೀತಾ ನಾಯ್ಕ |
| ೨೦೦೯ | ವೆಂಕಟೇಶ ನರಸಿಂಹ ಹೆಗಡೆ |
| ೨೦೧೦ | ಮಧುಲತಾ ಗೌಡರ್ |
| ೨೦೧೧ | ಸಿ.ಆರ್.ರೇಷ್ಮಾ |
| ೨೦೧೨ | ಶ್ರುತಿ ಭಟ್ |

# ಚಿತ್ರಸಂಪುಟ



ಬಿ.ಎಚ್. ಶ್ರೀಧರರು – ನಿಷ್ಕಪಟ ನಗು



ಬಿ.ಎಚ್. ಶ್ರೀಧರರು – ಮಾತಿನ ಓಘದಲ್ಲಿ



(ಎಡದಿಂದ) ಕುಳಿತವರು – ರಮಾದೇವಿ. ಬಿ.ಎಚ್.ಶ್ರೀ, ಮೊಮ್ಮಗ ರಮಣ,
ಟಿ.ಎಮ್. ಸುಬ್ಬರಾಯ, ರಾಜಶೇಖರ ಹೆಬ್ಬಾರ, ಸಾವಿತ್ರಿ (ಸೊಸೆ), ಮೊಮ್ಮಗ ಬ್ರಹ್ಮಾನಂದ




ಕುಂದಾಪುರದಲ್ಲಿ ಕನ್ನಡ ಸಾಹಿತ್ಯೋತ್ಸವ – ಕಾರಂತರೊಂದಿಗೆ ಕಾರ್ಯಕ್ರಮ – 1.11.1988




'ಭಾರತೀಯ ಮೂರ್ತಿಶಿಲ್ಪ' ಪುಸ್ತಕ ಬಿಡುಗಡೆ (1988) ಸಮಾರಂಭದಲ್ಲಿ ಕಲಾವಿದ ಆರ್.ಜಿ. ರಾಯ್ಕರ, ಡಾ. ಟಿ. ನಾರಾಯಣಭಟ್ ಹಾಗೂ ಬಿ.ಎಚ್.ಶ್ರೀಧರ



ಅಭ್ಯಾಸ ನಿರತ ಬಿ.ಎಚ್.ಶ್ರೀಧರರು




ಬಿ.ಎಚ್.ಶ್ರೀಧರರ ಪ್ರಕಟಿತ ಪುಸ್ತಕಗಳ ಚಿತ್ರ



**26.4.1987ರ ಸನ್ಮಾನ – ನಿಂತವರು – ಶ್ರೀ ಎಲ್.ಆರ್. ಭಟ್, ಅವರ ಪತ್ನಿ ನಳಿನಿ (ಭಾರತೀಸುತರ ಮಗಳು), ಕುಳಿತವರು – (ಎಡದಿಂದ) ಶಂತರ ಕಾರಂತ (ಅಳಿಯ), ರಾಜಶೇಖರ ಹೆಬ್ಬಾರ (ಮಗ), ರಮಣ (ಮೊಮ್ಮಗ), ಸಚಿನ್ (ತಂಗಿಯ ಮೊಮ್ಮಗ), ಶ್ರೀಧರರು, ರಮಾದೇವಿ, ಸುಶೀಲೆ (ತಂಗಿ), ವಿಜಯಾ (ಮಗಳು)**



**ಬಿ.ಎಚ್.ಶ್ರೀಧರ, ರಮಾದೇವಿ, ಬ್ರಹ್ಮಾನಂದ (ಮೊಮ್ಮಗ)**



ಮಗಳು ಪ್ರತಿಭಾ ಮತ್ತು ಅಳಿಯ ರಮೇಶ ವೈದ್ಯರೊಂದಿಗೆ ಶ್ರೀಧರ ದಂಪತಿ



ಶಿವರಾಮಕಾರಂತರಿಂದ ಬಿ.ಎಚ್. ಶ್ರೀಧರರಿಗೆ ಸಿದ್ದಾಪುರದಲ್ಲಿ ನಡೆದ
ಸನ್ಮಾನ ಸಮಾರಂಭದಲ್ಲಿ ಮಾತನಾಡುತ್ತಿರುವ ಬಿ.ಎಚ್. ಶ್ರೀ



ಶಿವರಾಮಕಾರಂತರಿಂದ ಶ್ರೀಧರರಿಗೆ ಸನ್ಮಾನ (ಸಿದ್ದಾಪುರ – 1974)



ಸಿದ್ದಾಪುರದ ಎಮ್.ಜಿ.ಸಿ. ಕಾಲೇಜಿನಲ್ಲಿ ನಡೆದ ಕಾರ್ಯಕ್ರಮವೊಂದರಲ್ಲಿ
ಕೆ.ವಿ. ಸುಬ್ಬಣ್ಣನವರೊಂದಿಗೆ ಪ್ರಿನ್ಸಿಪಾಲ್ ಶ್ರೀಧರರು



ಸಿದ್ದಾಪುರದ ಎಮ್.ಜಿ.ಸಿ. ಕಾಲೇಜಿನ ಕಾರ್ಯಕ್ರಮದಲ್ಲಿ
ಚಿತ್ರನಟ ಉದಯಕುಮಾರರೊಂದಿಗೆ ಬಿ.ಎಚ್.ಶ್ರೀಧರ



ಸಿದ್ದಾಪುರದ ಕಾಲೇಜಿನ ಕಾರ್ಯಕ್ರಮವೊಂದರಲ್ಲಿ ಬಿ.ಎಚ್.ಶ್ರೀ,
ರಾಜ್ಯಪಾಲ ಧರ್ಮವೀರ, ಶ್ರೀ ರಾಮಕೃಷ್ಣ ಹೆಗಡೆ ಮತ್ತಿತರು



ಮುಖ್ಯಮಂತ್ರಿ ವೀರೇಂದ್ರ ಪಾಟೀಲರಿಗೆ ಶ್ರೀಧರರಿಂದ ಗೌರವಾರ್ಪಣೆ



ಶಿವರಾಮಕಾರಂತರಿಗೆ ಮಾಲಾರ್ಪಣೆ ಮಾಡುತ್ತಿರುವ ಶ್ರೀಧರರು




ಸಿದ್ದಾಪುರದ ಕಾಲೇಜಿನ ಶಿಲನ್ಯಾಸ ಕಾರ್ಯಕ್ರಮ (ಎಡದಿಂದ) – ಬಿ.ಎಚ್.ಶ್ರೀ,
ರಾಮಕೃಷ್ಣ ಹೆಗಡೆ, ಗಣೇಶ ಹೆಗಡೆ ಮತ್ತಿತರು



ಕವಿ ಬೇಂದ್ರೆ ಮತ್ತಿತರೊಡನೆ ಉಪಹಾರ ಸೇವನೆ



ಶಿವಮೊಗ್ಗದಲ್ಲಿ ಬೇಂದ್ರೆಯವರಿಂದ ಸನ್ಮಾನ



ಗೋಪಾಲಕೃಷ್ಣ ಅಡಿಗರೊಂದಿಗೆ (ನಾಲ್ಕನೆಯವರು) ಕುಮಟೆಯ ಕೆನರಾ ಕಾಲೇಜಿನಲ್ಲಿದ್ದಾಗ




**26.4.1987ರಂದು ಶ್ರೀಧರರ 70ನೇ ಹುಟ್ಟುಹಬ್ಬದಂದು ಶಿರಸಿಯಲ್ಲಿ ನಡೆದ ಸನ್ಮಾನದ ಚಿತ್ರ.**
**(ಎಡದಿಂದ) – ಜಿ.ವಿ. ಭಟ್, ಡಿ.ಎನ್. ಶಾನಭಾಗ, ಬಿ.ಎಚ್.ಶ್ರೀ, ರಮಾದೇವಿ**



**ಬಿ.ಎಚ್.ಶ್ರೀಧರ (1968ರ ಸುಮಾರಿಗೆ)**



ಹುಬ್ಬಳ್ಳಿಯ 'ಕರ್ಮವೀರ' ವಾರಪತ್ರಿಕೆಯ ಉಪಸಂಪಾದಕರಾಗಿದ್ದಾಗಿನ ಬಿ.ಎಚ್.ಶ್ರೀ (1947–51)



ಕುಮಟೆಯಲ್ಲಿ ವಾಸವಿದ್ದ ಮನೆಯೆದುರು (1951–1962)



ಮೈಸೂರಿನ ಮಹಾರಾಜ ಕಾಲೇಜಿನ ದಿಗ್ಗಜ ಪ್ರಾಧ್ಯಾಪಕರೊಂದಿಗೆ ಶಿಷ್ಯ ಶ್ರೀಧರ
(ನಿಂತವರದಲ್ಲಿ (ಬಲಗಡೆಯಿಂದ) ಎರಡನೇ ಸಾಲಿನಲ್ಲಿ ಮೊದಲನೆಯವರು)



ಸಭೆಯೊಂದರಲ್ಲಿ ಬಿ.ಎಚ್. ಶ್ರೀಧರರು ಮಾತನಾಡುತ್ತಿರುವುದು



ಕುಮಟೆಯ ಸಾಹಿತ್ಯ ಸಮ್ಮೇಲನದಲ್ಲಿ – (ನಿಂತವರು) – ಬಿ.ಎಚ್. ಶ್ರೀಧರ, ವೈಎನ್.ಕೆ.
(ಕುಳಿತವರು) – ಗೋಪಾಲಕೃಷ್ಣ ಅಡಿಗ, ತ.ರಾ.ಸು., ರಾಮಚಂದ್ರ ಶರ್ಮ, ಸು.ರಂ. ಎಕ್ಕುಂಡಿ



1. ಅತಿ ದೈವವಾದ, ಅತಿ ಪೌರುಷವಾದಗಳೆರಡೂ ದೈವ–ಪುರುಷರ ಆತ್ಯಂತಿಕ ಐಕಾತ್ಮ್ಯವನ್ನು ಮರೆತದ್ದರಿಂದ ಹುಟ್ಟಿವೆ.
2. ಸ್ವಜಾತಿಯ ಅಥವಾ ಸ್ವಮತಧರ್ಮದ ಉತ್ತಮಾಂಶಗಳನ್ನು ಆಚಾರದಲ್ಲಿ ಪ್ರಕಟಿಸುವುದೊಂದೇ ಈ ದೇಶದಲ್ಲಿ ಜಾತೀಯತೆ–ಮತೀಯತೆಗಳನ್ನು ಹೊಡೆದುಹಾಕಬಲ್ಲುದು.
3. ನಾಗರಿಕತೆಯ ಚಿರಸ್ಥಾಯಿತ್ವಕ್ಕೆ ವ್ಯಕ್ತಿಸಂಸ್ಕರಣವು ಅತ್ಯಂತ ಅನಿವಾರ್ಯವಾದ ಸಾಧನ. ಸಂಸ್ಕೃತ ವ್ಯಕ್ತಿಯು ಕಾರಣಾಂತರದಿಂದ ಅನಾಗರಿಕನಾದರೆ ಅವನನ್ನು ನಾಗರಿಕನನ್ನಾಗಿ ಪರಿವರ್ತಿಸುವುದು ಸುಲಭ; ಅಸಂಸ್ಕೃತನು ಹಾಗಾದರೆ ಅವನನ್ನು ತಿದ್ದುವುದು ಕಷ್ಟ. ಭಾರತದ ಬಹುಸಂಖ್ಯಾತರು ಕಳೆದ 600 ವರ್ಷಗಳಿಂದ ಅಸಂಸ್ಕೃತರಾಗುತ್ತ ಹೋದುದರಿಂದ ಅವರನ್ನು ಸಂಸ್ಕರಿಸುವುದು ಈಗ ಬಹಳ ಕಷ್ಟವಾಗಿಹೋಗಿದೆ. ಅಂಥವರೇ ಪಾಶ್ಚಾತ್ಯ ಅನಾರ್ಯಾಭಿರುಚಿಗೆ ಬಹು ಬೇಗ ಮಾರುಹೋಗುವವರು ಅಥವಾ ದೇಶೀಯ ಅಂಧಾಚಾರನಿಷ್ಠರಾಗುವವರು.
4. ಸಾರ್ವನೈತಿಕ ಸೂತ್ರಗಳಿಗೆ ವಿರುದ್ಧವಾಗಿ ಪರಿಣಮಿಸುವ ಸದಾಚಾರ, ಶಿಷ್ಟಾಚಾರಗಳು ಒಂದು ಧರ್ಮವನ್ನು ಮತದ ಸಂಕುಚಿತತೆಗೆ ಇಳಿಸುತ್ತವೆ.
5. ವಿಜ್ಞಾನವು ಜಗತ್ತಿನ 'ಏಕೆ'ಗೆ ಉತ್ತರ ಕೊಡಲಾರದೆ 'ಹೇಗೆ'ಗೆ ಉತ್ತರ ಕೊಡಹೋದರೂ ಯಶಸ್ವಿಯಾಗಿಲ್ಲ. ಆದುದರಿಂದ ಪಾರಿಶೇಷಿಕ ನ್ಯಾಯದಂತೆ ವಿದಗ್ಧನಿಗುಳಿದದ್ದು ಕಾರ್ಯ–ಕಾರಣಧರ್ಮಕ್ಕೆ ವಿರುದ್ಧವಾದ ಇಚ್ಛಾಶಕ್ತಿಯ ರಕ್ಷಣೆಯೊಂದೇ. ಅದೇ ಆಶಾವಾದದ ಅನಿವಾರ್ಯ ಆಧಾರ. ನಿರಾಶಾಸ್ಥಿತಿಯು, ಜಗತ್ತುಚ್ಛಬುದ್ಧಿಯು, ಭೋಗಜಿಹಾಸೆಯು ಸಾಧಕನ ಸಾಧನದ ಒಂದು ಮುಖ್ಯ ಹಂತ, ಅವಸ್ಥೆ; ಅದು ಸಾಧಕನ ಸರ್ವಾವಸ್ಥೆಗಳಿಗೆ ಸಾಧಾರಣವೂ ಅಲ್ಲ, ಅಂತ್ಯಾವಸ್ಥೆಯೂ ಅಲ್ಲ. ಪೂರ್ಣತ್ವವೇ ಸಿದ್ಧಿ.

– ಬಿ.ಎಚ್.ಶ್ರೀ.

ಬಾಗೂರು ಮಾರ್ಕಾಂಡೇಯ



ತೇಜು ಪಬ್ಲಿಕೇಷನ್ಸ್